ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ ನಂ. ೩೧

# ವಿಶ್ವಪ್ರಭೆ

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಮಹಾಭಿನಂದನ ಗ್ರಂಥ

**ಸಂಪುಟ : ೩**

ಶ್ರೀ ಕಾಶೀ ಜ್ಞಾನ ಸಿಂಹಾಸನದ
ಜ್ಞಾನ ಮಂದಿರಕ್ಕೆ
ಸಮರ್ಪಿಸಿದ್ದು

21-1-1993

ಸಂಪಾದಕರು:
ಪ್ರೊ. ಜಿ. ಎಚ್. ಹನ್ನೆರಡುಮಠ



ಪ್ರಕಾಶಕರು:
ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳಿ
ಮೂರುಸಾವಿರಮಠ, ಹುಬ್ಬಳ್ಳಿ

VISHVAPRABHE: an Anthology of Miscellaneous writings of SHREE MOOJAGAM one of the anthologies in MOOJAGAM MAHABHINANDAN SAMPUT-Vol. 3 Edited By Prof. G. H. Hanneradumath, Published by Shri Jagadguru Gangadhar Dharma Pracharaka Mandali Moorusavirmath Hubli-28.

Pages: 764 + 8

Printed at:
Twaritha Mudranalaya Gangapurpet, Gadag.

ಬೆಲೆ: ೨೫೦ ರೂಪಾಯಿಗಳು

೧೯೯೧

ಸಮಗ್ರ ಮೂರೂ ಸಂಪುಟಗಳಿಗೆ ಒಟ್ಟು ಬೆಲೆ: ಒಂದು ಸಾವಿರ ರೂಪಾಯಿ



ಮುದ್ರಕರು:
ಕುಂಬಾರಗರಡಿ ಹತ್ತಿರ, ಗಂಗಾಪೂರ ಓಣಿ,
ಫ. ಶಿ.ಯವರ ತ್ವರಿತ ಮುದ್ರಣಾಲಯ,
ಗದಗ–೫೮೨ ೧೦೧

ಮುದ್ರಣ ಅವಧಿ
ಒಂದು ತಿಂಗಳು

# ಸಂಪಾದನೆ

ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಷಷ್ಟ್ಯಬ್ದಿ ಸಮಾರಂಭದ ಸಂಸ್ಮರಣೆಯಲ್ಲಿ ಅಚ್ಚಾಗಿ ತಮ್ಮ ಕೈ ಸೇರುತ್ತಿರುವ ಮಹಾಭಿನಂದನದ ಈ ತೃತೀಯ ಸಂಪುಟವು ಸಂಪಾದಕರ ಬಹುದಿನಗಳ ಕನಸಿನ ನನಸಾಗಿದೆ. ಸಮಗ್ರ ವೀರಶೈವ ದರ್ಶನವನ್ನು ಆಯಾ ಭಿನ್ನಾಭಿಪ್ರಾಯಗಳ ಭಿಡೆ, ಮುರವತ್ತುಗಳನ್ನು ಮೀರಿನಿಂತು; ಶುದ್ಧವಾಗಿ ಸೈದ್ಧಾಂತಿಕ ಪ್ರಜ್ಞೆಯಿಂದಲೇ ಸಂಪಾದಿಸುವ ಹಿರಿಯ ಹಂಬಲದಿಂದ ಈ ಕೊನೆಯ ಸಂಪುಟ ಸಿದ್ಧವಾಗಿ ಬಂದಿದೆ. ಇಲ್ಲಿ ಭಾರತದ ಹೆಸರಾಂತ ಲೇಖಕರು ಸಮರ್ಪಣೆಯಿಂದ ಪಾಲ್ಗೊಂಡಿರುವದು ಸಂತೋಷದ ಸಂಗತಿ.

ಪ್ರಥಮದಲ್ಲಿ ಈ ದರ್ಶನ ಸಂಪುಟದ ಸಮಗ್ರ ಯೋಜನೆಯನ್ನು ಸಂಪಾದಕರೇ ಸಿದ್ಧಗೊಳಿಸಿ; ಅದನ್ನು ಪೂಜ್ಯ ಜಗದ್ಗುರುಗಳವರಿಗೂ ಹಾಗೂ ಡಾ. ಆರ್. ಸಿ. ಹಿರೇಮಠ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಪಂಡಿತ ನಾಗಭೂಷಣ ಶಾಸ್ತ್ರಿಗಳು, ಡಾ. ವೃಷಭೇಂದ್ರಸ್ವಾಮಿಗಳು, ಡಾ. ಎಂ. ಎಂ. ಕಲಬುರ್ಗಿ ಮುಂತಾದವರಿಗೆ ತೋರಿಸಿದರು. ಎಲ್ಲರ ಸಕಾಲಿಕ ಸೂಚನೆ ಮತ್ತು ಒಪ್ಪಿಗೆ ದೊರೆತ ಮೇಲೆಯೇ ಪ್ರಸ್ತುತ ಸಂಪಾದಕರು ಈ ದೊಡ್ಡ ಸಾಹಸಕ್ಕೆ ಶ್ರೀಗಳ ಆಶೀರ್ವಾದ ಪಡೆದು ಮುನ್ನುಗ್ಗಿದರು.

ಈ ದರ್ಶನ ಸಂಪುಟದ ಓಲಾಂಗಣದಲ್ಲಿ ತಮಗೆಲ್ಲರಿಗೂ ಪ್ರೀತಿಯ ಸ್ವಾಗತ. ಮುಖ್ಯವಾಗಿ ಈ ಸಂಪುಟಕ್ಕೆ ತುಂಬಾ ಪರಿಶ್ರಮದಿಂದ ಲೇಖನಗಳನ್ನು ಬರೆದು ಕಳಿಸಿದ ಲೇಖಕರನ್ನು ಎಷ್ಟು ನೆನೆಸಿದರೂ ಕಡಿಮೆಯೇ. ಅವರ ಪ್ರಾಮಾಣಿಕ ಪರಿಶ್ರಮದಲ್ಲಿಯೇ ಈ ಮಹಾಗ್ರಂಥದ ಯಶಸ್ಸಿನ ಗುಟ್ಟು ಅಡಗಿದೆ.

ಎಂದಿನಂತೆ ಈ ಮೂರನೆಯ ಸಂಪುಟಕ್ಕೂ ಪೂಜ್ಯ ಜಗದ್ಗುರುಗಳು ಆಧಾರಸ್ತಂಭವಾಗಿ ನಿಂತರು. ಅಲ್ಪಾವಧಿಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಗದುಗಿನ ತ್ವರಿತ ಮುದ್ರಣಾಲಯದ

ಒಡೆಯರಾದ ಶ್ರೀ ಫ. ಶಿ.ಯವರು ಬಹಳ ತನ್ಮಯತೆಯಿಂದ ಮುದ್ರಿಸಿ ಕೊಟ್ಟರು. ಎಲ್ಲರಿಗೂ ಸಂಪಾದಕನ ಶರಣು ಸಮರ್ಪಣೆ. ವಿದ್ವಾಂಸರು ಈ ಗ್ರಂಥದ ಬಗೆಗೆ ತಮ್ಮ ಒಲವು-ನಿಲುವುಗಳನ್ನು ಕಳಿಸಿ ಸಹಕರಿಸಬೇಕಾಗಿ ಕೋರಿಕೆ.

—ಜಿ. ಎಚ್. ಹನ್ನೆರಡುಮಠ

ಯು.ಕೆ.ಪಿ. ಹತ್ತಿರ
ರಾಜಮಾರ್ಗ-೧೩
ಇಲಕಲ್ಲ-೫೮೭ ೧೨೫
೧೬-೭-೧೯೯೨

# ಪರಿವಿಡಿ

# ದರ್ಶನ ಸಂಪುಟ

ಶರಣ ಸಿದ್ಧಾಂತದ
ಪೂರ್ವರಂಗ–ಪುರೋಭಿವೃದ್ಧಿ–ಪ್ರಯೋಗ–ಪ್ರತಿಪಾದನೆ ಹಾಗೂ
ಸರ್ವಧರ್ಮಗಳ ತೌಲನಿಕ ಅಧ್ಯಯನ....

1

# ವೀರಶೈವ: ಅಂದು, ಇಂದು, ಮುಂದು

—ಡಾ. ಎಚ್. ತಿಪ್ಪೇರುದ್ರಸ್ವಾಮಿ

ಈ ಆಧುನಿಕ ಯುಗದ ವೈಜ್ಞಾನಿಕ ಮನೋಧರ್ಮದ ವೈಚಾರಿಕ ಹಿನ್ನೆಲೆಯಲ್ಲಿ ಧಾರ್ಮಿಕ ಸಿದ್ಧಾಂತಗಳೂ ಸಾಂಪ್ರದಾಯಿಕ ಆಚಾರ ವಿಚಾರಗಳೂ ಉಳಿಯಬಲ್ಲುವೇ ಎನ್ನುವ ಸಂದೇಹ ಸಹಜವಾಗಿಯೇ ವಿಚಾರವಂತರ ಮನಸ್ಸಿನಲ್ಲಿ ಮೂಡುತ್ತದೆ. ಮಾನವನ ಇಂದಿನ ಸಾಮಾಜಿಕ ಪರಿಸರ ಹಿಂದಿನ ಅಂಧಶ್ರದ್ಧೆಯ ಧಾರ್ಮಿಕ ನಂಬಿಕೆಗಳನ್ನೆಲ್ಲಾ ಅಂಗೀಕರಿಸಲಾರದು. ಆದರೆ ಪರಿಸರ ಎಷ್ಟೇ ಬದಲಾಗಿದ್ದರೂ ಆತನ ಆಂತರಿಕ ಅಭೀಪ್ಸೆ ಅಂದಿನಂತೆಯೇ ಇಂದೂ ಅದೇ ಆಗಿ ಉಳಿದಿದೆ. ಆನಂದದ ಅನ್ವೇಷಣೆಯ ಆ ಮೂಲ ಭೂತವಾದ ಹೋರಾಟ ಕಾಲಕಾಲಕ್ಕೆ ಬದಲಾಗುತ್ತಾ ಬಂದಂತೆ, ಧಾರ್ಮಿಕ ಪರಿಕಲ್ಪನೆಗಳೂ ಅವುಗಳನ್ನವಲಂಬಿಸಿದ ಆಚರಣೆಯ ಮಾರ್ಗಗಳೂ ಬದಲಾಗುತ್ತಾ ಬಂದಿವೆ. ಆದರೆ ಈ ಬದಲಾವಣೆ ವಿಕಾಸ ಮಾರ್ಗದತ್ತ ಮುನ್ನಡೆಯುವುದು ಅಷ್ಟು ಸುಲಭವಲ್ಲ. ಇದನ್ನು ಇತಿಹಾಸದ ಉದ್ದಕ್ಕೂ ವಿಚಾರವಾದ ಮತ್ತು ಧರ್ಮಗಳ ಸಂಘರ್ಷಣೆಯಲ್ಲಿ ಕಾಣಬಹುದು. ವಾಸ್ತವವಾಗಿ ಈ ಎರಡೂ ಪರಸ್ಪರ ಪೂರಕ ಸತ್ಯಗಳು. ಒಂದಿಲ್ಲದೆ ಇನ್ನೊಂದು ಪೂರ್ಣವಾಗಲಾರದೆಂಬುದನ್ನು ಐನ್‌ಸ್ಟೈನ್‌ನಂತಹ ಮಹಾವಿಜ್ಞಾನಿಗಳೂ ಎತ್ತಿ ಹೇಳಿದ್ದಾರೆ. ವೈಜ್ಞಾನಿಕ ದೃಷ್ಟಿಯಿಲ್ಲದ ಧರ್ಮ ಕುಂಟುತ್ತದೆಂಬ ಆತನ ಮಾತನ್ನು ಮನಗಾಣಬೇಕು. ಎರಡನ್ನೂ ಒಳಗೊಳ್ಳುವ ಪೂರ್ಣದೃಷ್ಟಿಯಿಂದ ಧರ್ಮ ಆಗಾಗ ಹೊಸ ಹೊಳಪನ್ನು ಪಡೆದಿದೆ. ಹಿಂದೂ ಧರ್ಮದ ಹಲವು ಘಟ್ಟಗಳಲ್ಲಿ ಇದನ್ನು ಕಾಣಬಹುದು. ವೀರಶೈವ ಧರ್ಮದ ವಿಕಾಸ ಹೀಗೆ ಎದ್ದುಕಾಣುವಂತಹ ಒಂದು ಪ್ರಮುಖವಾದ ಘಟ್ಟ.

ವೀರಶೈವದ ಮೂಲಬೇರುಗಳು ಹಿಂದೂ ಧರ್ಮದಷ್ಟೇ ಅಥವಾ ಅದಕ್ಕಿಂತ ಹೆಚ್ಚು ಪ್ರಾಚೀನವಾದರೂ ಅದೊಂದು ಪ್ರಬಲ ವೈಚಾರಿಕ ಸಿದ್ಧಾಂತವಾಗಿ ರೂಪುಗೊಂಡದ್ದು ೧೨ನೇ ಶತಮಾನದಲ್ಲಿ, ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮೂಹಿಕ ಆಂದೋಲನದಲ್ಲಿ ಅಂದು ಬಸವಣ್ಣ ರೂಪಿಸಿದ ಆ ಧಾರ್ಮಿಕ ಶಕ್ತಿ, ಕೆಲವು ಶಾಶ್ವತ ಸೂತ್ರಗಳನ್ನು ಸಾಮಾಜಿಕ ಜೀವನದ ವಿವಿಧ ಸ್ತರಗಳಿಗೆ ಅನ್ವಯಿಸಿ ಆಚರಣೆಯಿಂದ ಅವುಗಳನ್ನು ಸಾಧಿಸಿ ತೋರಿಸಿತು. ಯಾವುದೇ ತತ್ವದ ಸತ್ಯವನ್ನು ಅದರ ಪ್ರಾಯೋಗಿಕ ಆಚರಣೆಯ ಯಶಸ್ಸಿನಲ್ಲಿ ನಿರ್ಧರಿಸಬೇಕೆಂಬುದು ವೈಜ್ಞಾನಿಕ ಸೂತ್ರ. ಅದನ್ನು ಧರ್ಮಕ್ಕೂ ಅನ್ವಯಿಸಿದವರು ಬಸವಣ್ಣನವರು. ಧರ್ಮದ ಮೂಲಭೂತ ಪರಿಕಲ್ಪನೆಗಳಾದ ಜೀವ, ಜಗತ್ತು, ಈಶ್ವರ–ಇವುಗಳ ಪರಸ್ಪರ ಸಂಬಂಧ, ಸ್ವರೂಪ ಮೊದಲಾದ ವಿ

ಗಳನ್ನು ಕುರಿತ ಚರ್ಚೆ ಜಿಜ್ಞಾಸೆಗಳು, ಒಂದು ಕಡೆಯಲ್ಲಿ ಕೇವಲ ಅಂಧ ಶ್ರದ್ಧೆಯಾಗಿ, ಇನ್ನೊಂದು ಕಡೆಯಲ್ಲಿ ಕೇವಲ ಬೌದ್ಧಿಕ ಕಸರತ್ತಾಗಿ ಪರಿಣಮಿಸಿ ವಿಫಲಗೊಳ್ಳಬಹುದು. ಈ ಎರಡೂ ಅಪಾಯಗಳಿಂದ ಪಾರಾಗಿ ಅವು ಜೀವನದ ಪೂರ್ಣತೆಗೆ ಕಾರಣವಾಗುವ ಆಚರಣೆಯ ಸಾಧನಗಳಾಗುವಂತೆ ಮಾಡುವುದು ಧರ್ಮದ ಮುಂದಿರುವ ಸಮಸ್ಯೆ. ಇದನ್ನು ಒಂದು ಸವಾಲನ್ನಾಗಿ ಎದುರಿಸಿ ಪೂರ್ಣ ಧರ್ಮವನ್ನು ರೂಪಿಸಿದ ಹಿರಿಮೆ ಬಸವಣ್ಣನವರದು. ಅವರ ಕೈಯ್ಯಲ್ಲಿ ವೀರಶೈವ ಧರ್ಮ ಒಂದು ಹೊಸ ಆಯಾಮ ವನ್ನು ಪಡೆದು ಪರಿಮಿತ ಜಾತಿ ಮತಗಳ ಸೋಂಕನ್ನು ನಿರ್ನಾಮಗೊಳಿಸುವ ತಾರಕಶಕ್ತಿ ಯಾಗಿ ಪರಿಣಮಿಸಿತು.

ಅಂದು ಹಿಂದೂ ಧರ್ಮ ಮತ್ತು ಸಮಾಜದಲ್ಲಿ ಅನೇಕ ದೌರ್ಬಲ್ಯಗಳೂ ದೋಷ ಗಳೂ ಪರಂಪರಾಗತವಾಗಿ ಬೆಳೆದು ಬಂದಿದ್ದುವು. ಧರ್ಮದಲ್ಲಿ ಯಜ್ಞ ಯಾಗಾದಿಗಳು, ಅದನ್ನು ಕೇಂದ್ರವಾಗಿ ಉಳ್ಳ ಪುರೋಹಿತಶಾಹಿ, ದೇವಾಲಯಗಳ ಕರ್ಮಠತನ ಮತ್ತು ಶೋಷಣೆ; ಸಮಾಜದಲ್ಲಿ ವರ್ಣ ವ್ಯವಸ್ಥೆ, ಅದಕ್ಕಂಟಿದ ನೂರಾರು ಜಾತಿಗಳ ಮೇಲು ಕೀಳುಗಳು, ಅಸ್ಪೃಶ್ಯತೆಯ ಅಮಾನವೀಯತೆ–ಈ ಎಲ್ಲವನ್ನೂ ಒಂದೇ ಏಟಿಗೆ ಹೊಡೆ ಯುವಂತಹ ವ್ಯಾಪಕವಾದ ಧಾರ್ಮಿಕ ಶಕ್ತಿಯನ್ನು ಅಂದು ವೀರಶೈವ ಪಡೆಯಿತು. ಈ ಧರ್ಮದಲ್ಲಿ ತಾತ್ವಿಕವಾಗಿ ವಿಕಾಸಗೊಳ್ಳುತ್ತಾ ಬರುತ್ತಿದ್ದ ಇಷ್ಟಲಿಂಗ ಬಸವಣ್ಣನವರ ಗಮನವನ್ನು ಸೆಳೆಯಿತು. ಆ ಒಂದೇ ಕಲ್ಲಿನಿಂದ ಎರಡು ಹಕ್ಕಿಗಳನ್ನು ಹೊಡೆಯುವಂತಹ ಧಾರ್ಮಿಕ ಮತ್ತು ಸಾಮಾಜಿಕ ಆಂದೋಳನದ ಕನಸನ್ನು ಅವರ ದಾರ್ಶನಿಕ ದೃಷ್ಟಿ ಕಂಡಿತು. ಧರ್ಮದಲ್ಲಿ ಎಲ್ಲರೂ ಸಮಾನರು ಎಂಬುದನ್ನು ತಾತ್ವಿಕವಾಗಿ ಹೇಳುವುದು ಮಾತ್ರವಲ್ಲದೆ ಅದನ್ನು ಕಾರ್ಯತಃ ಸಾಧಿಸಿ ತೋರಿಸಬೇಕಾಗಿತ್ತು. ಅದಕ್ಕೆ ಇಷ್ಟಲಿಂಗ ಒಂದು ಪರಿಣಾಮಕಾರಿಯಾದ ಮಾಧ್ಯಮವಾಯಿತು. ಇದರ ಜೊತೆಗೆ ದೇವರಿಗೂ ಭಕ್ತರಿಗೂ ಮಧ್ಯೆ ಇದ್ದ ದಳ್ಳಾಳಿಗಳನ್ನು ಇದು ತೆಗೆದುಹಾಕಿ, ಧಾರ್ಮಿಕ ಶೋಷಣೆಯ ಬುಡವನ್ನೇ ಅಲ್ಲಾಡಿಸಿತು. ಸಾಮಾಜಿಕ, ಸಮಾನತೆ ಮತ್ತು ವೈಯಕ್ತಿಕ ವಿಕಾಸ–ಈ ಎರಡನ್ನೂ ಸಾಧಿಸುವ ಶಕ್ತಿ ಕೇಂದ್ರವನ್ನು ಇಷ್ಟಲಿಂಗದಲ್ಲಿ ಬಸವಣ್ಣನವರು ಗುರುತಿ ಸಿದರು. ಇದರಿಂದ ಧಾರ್ಮಿಕ ಉಪಾಸನೆ ಸಾಮೂಹಿಕ ಪ್ರದರ್ಶನವಾಗುವುದರ ಬದಲು, ವೈಯಕ್ತಿಕ ಅನುಸಂಧಾನವಾಯಿತು. ಮಾರಿ ಮಸಣಿ ಮೊದಲಾದ ನೂರಾರು ದೇವತೆಗಳ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸಾ ಮೂಲವಾದ ಬಲಿ ಮೊದಲಾದವುಗಳ ತಾಮಸಿಕ ಆರಾಧನೆಗೂ ಇದು ಏಟು ಕೊಟ್ಟಿತು. ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಬಸವಣ್ಣ ಧಾರ್ಮಿಕ ಉಪಾಸನೆಯನ್ನು ವೈಯಕ್ತಿಕಗೊಳಿಸಿದ್ದು. ಧರ್ಮದ ಉಪಾಸನೆ ಸಾರ್ವತ್ರಿಕವಾಗಿದ್ದು. ಅದರ ಫಲ ಕೆಲವರಿಗೆ ಮಾತ್ರ ಮೀಸಲಾಗಿದ್ದ ಅಂದಿನ ಸಮಾಜದಲ್ಲಿ ಬಸವಣ್ಣ, ಉಪಾಸನೆಯನ್ನು ವೈಯಕ್ತಿಕಗೊಳಿಸಿ ಅದರ ಫಲವನ್ನು ಸಾರ್ವ ತ್ರಿಕಗೊಳಿಸಿದ್ದು ಇಂದು ನಾವು ಮನಗಾಣಬೇಕಾದ ಮಹತ್ವದ ಅಂಶವಾಗಿದೆ.

ಅಂದು ವೀರಶೈವ ಧರ್ಮ ಕೇವಲ ಸಮಾಜ ಸುಧಾರಣೆಯ ಬಹಿರಂಗ ಸಾಧನ ಮಾತ್ರವಾಗಿ ಉಳಿಯಲಿಲ್ಲ. ತಾತ್ವಿಕ ದರ್ಶನ ಮತ್ತು ಆಧ್ಯಾತ್ಮಿಕ ಸಾಧನೆಗಳಿಂದ ಶ್ರೀಮಂತಗೊಂಡು ಆಂತರಿಕ ವಿಕಾಸದ ಜೀವಂತ ಶಕ್ತಿಯೂ ಆಯಿತು. ಈ ಎರಡನ್ನೂ ಒಳಗೊಂಡ ಪೂರ್ಣ ದೃಷ್ಟಿಯ ಮೇಲೆ ಬಸವಣ್ಣನವರ ಆಂದೋಳನ ಬೆಳೆಯಿತು. ತತ್ವಜಿಜ್ಞಾಸೆಯೇ ಪ್ರಧಾನವಾಗಿ ಅದು ಬೌದ್ಧಿಕ ಚಮತ್ಕಾರವಾದಾಗ ಅದು ಶುಷ್ಕವಾಗುತ್ತದೆ. ಅಂತೆಯೇ ಅದನ್ನು ಸಂಪೂರ್ಣವಾಗಿ ಕೈಬಿಟ್ಟರೆ ಧಾರ್ಮಿಕ ಆಚರಣೆಗಳು ಕೇವಲ ಭಾವುಕವಾಗಿ ಮೂಲ ಆಶಯದಿಂದ ಜಾರಿಹೋಗಬಹುದು. ಬೌದ್ಧ ಧರ್ಮಕ್ಕೆ ಈ ಪರಿಸ್ಥಿತಿ ಒದಗಿತು. ಜೀವ-ಜಗತ್ತು ಈಶ್ವರ-ಅವುಗಳ ಸಂಬಂಧ ಇತ್ಯಾದಿ ವಿಚಾರಗಳನ್ನು ಬುದ್ಧ ಕಡೆಗಣಿಸಿದುದರಿಂದಲೇ ಮುಂದೆ ಆತನ ಧರ್ಮ ಬಹುಶಃ ಆತನ ಆಶಯಕ್ಕೆ ವಿರುದ್ಧವಾಗಿ ಅನಾತ್ಮವಾದದಲ್ಲಿ ಪರ್ಯವಸಾನವಾಯಿತು. ಆದರೆ ವೀರಶೈವ ಇದಕ್ಕೆ ಅವಕಾಶಕೊಡದೆ ಗಟ್ಟಿಯಾದ ತಾತ್ವಿಕ ತಳಹದಿಯ ಮೇಲೆ ಬೆಳೆಯಿತು.

ಶಕ್ತಿತತ್ವವನ್ನು ಅದು ಅಳವಡಿಸಿಕೊಂಡು ಸೃಷ್ಟಿಕ್ರಮವನ್ನು ವಿವೇಚಿಸಿರುವ ರೀತಿ ಅರ್ಥವತ್ತಾಗಿದೆ. ಜೀವ-ಶಿವರ ಸಂಬಂಧವನ್ನು ಮೋಕ್ಷದ ಸ್ವರೂಪವನ್ನೂ ಕುರಿತು ಇದು ತಳೆದಿರುವ ನಿಲವು ಅಷ್ಟೇ ವಿಚಾರಶೀಲವಾಗಿದ್ದು ಅನುಭಾವ ಪ್ರಧಾನವಾಗಿದೆ. ಅತ್ತ ನಡೆಯುವ ಆಚರಣೆಯ ಮಾರ್ಗವನ್ನು "ಷಟ್‌ಸ್ಥಲ ಸಿದ್ಧಾಂತ" ಎಂದು ಇಲ್ಲಿ ಕರೆಯಲಾಗಿದೆ. ಇದು ಸಿದ್ಧಾಂತವೂ ಹೌದು ಆಚರಣೆಯ ಪ್ರಾಯೋಗಿಕ ವಿಧಾನವೂ ಹೌದು. ಶಕ್ತಿ ವಿಶಿಷ್ಟಾದ್ವೈತದ ಜಿಜ್ಞಾಸೆಯಲ್ಲಿ ಕಂಡ ತಾತ್ವಿಕ ದರ್ಶನಕ್ಕೆ ಭೇದಾಭೇದಗಳ ಸಮನ್ವಯ ಇಲ್ಲಿ ರೂಪುಗೊಂಡಿದೆ. ಭಕ್ತಿ ಜ್ಞಾನ ಕರ್ಮಗಳು ಇಲ್ಲಿ ಮುಪ್ಪುರಿಗೊಂಡು ಸಾಮರಸ್ಯಕ್ಕೇರುವ ನಿಚ್ಚಣಿಗೆಗಳನ್ನು ನಿರ್ಮಿಸಿವೆ. ಜೀವವು ದೇವನತ್ತ ಸಾಗುವ ತನ್ನ ಯಾತ್ರೆಯ ಮಾರ್ಗದಲ್ಲಿ ಏರಬೇಕಾದ ಆರು ಮೆಟ್ಟಿಲುಗಳು ಈ ಷಟ್‌ಸ್ಥಲಗಳು ಇವುಗಳ ವಿವರವಾದ ವಿವೇಚನೆ ಇಲ್ಲಿ ಪ್ರಸ್ತುತವಲ್ಲ.[೧]

ಇಲ್ಲಿ ಗಮನಿಸಬೇಕಾದ ಬಹಳ ಮುಖ್ಯವಾದ ಅಂಶವೆಂದರೆ ಸಾಧಕ ಷಟ್‌ಸ್ಥಲಗಳಲ್ಲಿ ಮೇಲೇರುತ್ತಾ ಹೋದಂತೆ, ಉಪಾಸನೆಯ ಲಿಂಗ ಮತ್ತು ಭಕ್ತಿಗಳೆರಡೂ ಬೆಳೆಯುತ್ತ ಬರುತ್ತವೆಂಬುದು. ಭಕ್ತಸ್ಥಲದಲ್ಲಿ ಶ್ರದ್ಧಾಭಕ್ತಿಯಾದದ್ದು ಮುಂದಿನ ಸ್ಥಲಗಳಿಗೆ ಹೋದಂತೆ ಕ್ರಮವಾಗಿ ನೈಷ್ಠಿಕಾಭಕ್ತಿ, ಅವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ ಮತ್ತು ಸಮರಸ ಭಕ್ತಿಯಾಗುತ್ತದೆ. ಅದರ ಜೊತೆಯಲ್ಲಿಯೇ ಇಷ್ಟಲಿಂಗವೂ ಈ ಆರು ಸ್ಥಲಗಳಲ್ಲಿ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು

---

೧ ಇವುಗಳ ವಿವರಗಳಿಗೆ ಇದೇ ಲೇಖಕರ: "ವಚನಗಳಲ್ಲಿ ವೀರಶೈವ ಧರ್ಮ" ಮತ್ತು "ವೀರಶೈವ: ವೈಚಾರಿಕ ಅಧ್ಯಯನ" ಈ ಗ್ರಂಥಗಳನ್ನು ನೋಡಬಹುದು.

ಮಹಾಲಿಂಗವಾಗಿ ವಿಕಾಸಗೊಳ್ಳುತ್ತದೆ. ಇದನ್ನು ಆಶ್ರಯಿಸಿರುವ ಶಕ್ತಿಯೂ ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ ಮತ್ತು ಕೊನೆಯಲ್ಲಿ ಚಿತ್‌ಶಕ್ತಿಯಾಗಿ ಪೂರ್ಣಗೊಳ್ಳುತ್ತದೆ. ಹೀಗೆ ಈ ಷಟ್‌ಸ್ಥಲ ಸಾಧನೆ ಯಾವ ಹಂತದಲ್ಲಿಯೂ ಜಡವಾಗಿ ಉಳಿಯದೆ ನಿರಂತರ ವಿಕಾಸಶೀಲವಾದ ಮಹಾಪರಿವರ್ತನೆಯ ಮಾರ್ಗ–ಎಂಬುದನ್ನು ಅಂಗ ಲಿಂಗಗಳ ಮತ್ತು ಶಕ್ತಿ ಭಕ್ತಿಗಳ ಈ ಊರ್ಧ್ವ ಮುಖ ಬೆಳವಣಿಗೆಯ ಮೂಲಕ ಕಂಡುಕೊಳ್ಳಬಹುದು. ಇದಕ್ಕೆ ಸಹಾಯಕವಾಗಿ ಆಚರಣೆಯ ಕೆಲವು ಪರಿಕರಗಳನ್ನು ಅಷ್ಟಾವರಣ ಪಂಚಾಚಾರಗಳಲ್ಲಿ ಅಳವಡಿಸಲಾಗಿದೆ.

ಇವುಗಳನ್ನು ಒಳಗೊಂಡ ವೀರಶೈವ ಸಿದ್ಧಾಂತದ ಪರಿಚಯ ಇಲ್ಲಿನ ಉದ್ದೇಶವಲ್ಲ. ಇದು ಅಂದು ಸಾಧಿಸಿದ ಧಾರ್ಮಿಕ ಸಾಮಾಜಿಕ ಪ್ರಭಾವಗಳನ್ನು ಮುಂದೆ ಅದು ಈ ಹೊಳಪನ್ನು ಕಳೆದುಕೊಂಡು ಸಂಪ್ರದಾಯಗಳ ಪರಿಮಿತಿಗೆ ಒಳಗಾದುದನ್ನು, ಇಂದು ವೀರಶೈವದ ಅಂದಿನ ಆ ಸಾಧನೆ ಎಷ್ಟು ಪ್ರಸ್ತುತವೆಂಬುದನ್ನೂ ಕುರಿತು ಕೆಲವು ಮಾತುಗಳನ್ನು ಹೇಳಬೇಕಾಗಿದೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮಾತೆಂದರೆ ಬಸವಣ್ಣ ರೂಢಿಸಿದ ಈ ಮಾರ್ಗ ವೈಚಾರಿಕವಾದರೂ ಕೇವಲ ಬುದ್ಧಿಜೀವಿಗಳಿಗೆ ಮಾತ್ರ ಸೀಮಿತವಾಗಲಿಲ್ಲ; ಜನ ಸಾಮಾನ್ಯರನ್ನು ಮುಟ್ಟಿ ತೀರಾ ಕೆಳಸ್ತರದವರನ್ನು ಮೇಲಕ್ಕೆತ್ತಿತು; ಆದರೂ ಲಘುವಾದ ಆಡಂಬರವಾಗಲೀ ಅಂಧಶ್ರದ್ಧೆಯಾಗಲೀ ಆಗಲಿಲ್ಲ. ಇದು ಬಸವಣ್ಣನವರ ಒಂದು ವಿಶಿಷ್ಟ ಸಾಧನೆ. ಪೂರ್ಣ ಧರ್ಮ ಎಲ್ಲರನ್ನೂ, ಅವರ ಸಾಮಾಜಿಕ ಪರಿಸರ, ಆರ್ಥಿಕ ಪರಿಸ್ಥಿತಿ, ಮಾನಸಿಕ ವಿಕಾಸ ಏನೇ ಇದ್ದರೂ, ಆಯಾ ಹಂತದಲ್ಲಿ ಅವರನ್ನು ಜಾಗ್ರತಗೊಳಿಸಿ ಉದ್ಧರಿಸಲು ಸಮರ್ಥವಾಗಬೇಕು. ಹುಟ್ಟಿನಿಂದ ಸಂಸ್ಕಾರ ನಿರ್ಧಾರವಾಗುವುದಿಲ್ಲವಾದುದರಿಂದ ಯಾವ ತಾರತಮ್ಯವೂ ಇಲ್ಲದೆ ಎಲ್ಲರಿಗೂ ಸಮಾನ ಅವಕಾಶಗಳಿರಬೇಕು. –ಇದೆಲ್ಲವನ್ನೂ ಕಾರ್ಯತಃ ಸಾಧಿಸಿ ಬಸವಣ್ಣನವರು ವೀರಶೈವ ಧರ್ಮಕ್ಕೆ ವೈಚಾರಿಕ ತಿರುವನ್ನು ಕೊಟ್ಟರು. ಆ ಪ್ರಯೋಗ ವಿಫಲವಾಗಲಿಲ್ಲ; ನಿರೀಕ್ಷೆಯನ್ನು ಮೀರಿ ಸಫಲವಾಯಿತು. ಅಸ್ಪೃಶ್ಯ ಹರಳಯ್ಯ, ಶಿವನಾಗಮಯ್ಯ, ಧೂಳಯ್ಯ, ಮೊದಲಾದವರೂ ಸಹ ಮಹಾಸಂಸ್ಕಾರವಂತ ಚೇತನಗಳಾಗಿ ಅರಳಿದರು. ಇದು ರಚನಾತ್ಮಕ ಸಾಧನೆಯಿಂದ ಸಾಬೀತುಗೊಳಿಸಿದ ಕ್ರಾಂತಿಕಾರಕ ಮಾರ್ಗ ಬಸವಣ್ಣನವರದು. ಕತ್ತಿ ಹಿಡಿದು ಎಲ್ಲರನ್ನು ತರಿದು ಹಾಕುವುದು ದೊಡ್ಡ ಕ್ರಾಂತಿಯಲ್ಲ; ಉದ್ಧಾರವೇ ಇಲ್ಲವೆಂದು ಸಿದ್ಧಾಂತ ಮಾಡಿದ ಕೆಳವರ್ಗದವರೊಡನೆ ತನ್ನನ್ನು ಏಕೀಭವಿಸಿಕೊಂಡು, ಮಾನವತೆಯ ಅಸಮಾನತೆಯನ್ನು ಹುಟ್ಟಿನಿಂದಲೇ ಸಾಧಿಸುತ್ತಿದ್ದ ಪಟ್ಟಭದ್ರ ಹಿತಾಸಕ್ತಿಗಳ ಪೊಳ್ಳುತನವನ್ನು ಜೀವಂತ ಆಧ್ಯಾತ್ಮಿಕ ಶಿಲ್ಪಗಳ ನಿರ್ಮಾಣದಿಂದ ಕೊಚ್ಚಿಹಾಕಿದ ಬಸವಣ್ಣನವರ ವೈಚಾರಿಕ ಕ್ರಾಂತಿ ಇಂದಿಗೂ ವಿಚಾರಶೀಲರನ್ನು ಸೆರೆಹಿಡಿಯುವಂತಹುದು. ಸರಿಯಾದ ರೀತಿಯಲ್ಲಿ ವಿಚಾರವಂತರ ಗಮನವನ್ನು ಅದರತ್ತ ತಿರುಗಿಸಬೇಕಾಗಿದೆ.

ಆದರೆ ಇಂದಿನ ವೀರಶೈವದ ಪರಿಸ್ಥಿತಿ ಅದನ್ನು ಹೇಳಿಕೊಳ್ಳುವುದಕ್ಕೆ ನಾಚಿಕೆಪಡುವಂತಾಗಿದೆ. ಯಾವ ಸಾಮಾಜಿಕ ತಾರತಮ್ಯಗಳನ್ನು ಹೋಗಲಾಡಿಸಬೇಕೆಂದು; ಅಸ್ಪೃಶ್ಯತೆಯನ್ನು ನಿರ್ನಾಮ ಮಾಡಬೇಕೆಂದು, ಅಂಧಶ್ರದ್ಧೆಯನ್ನು ಅಳಿಸಿಹಾಕಬೇಕೆಂದು ಬಸವಣ್ಣನವರು ನಿರಂತರವಾಗಿ ಹೋರಾಡಿದರೋ ಆ ಎಲ್ಲ ತಾರತಮ್ಯಗಳು, ಅಸ್ಪೃಶ್ಯತೆ, ಅಂಧಶ್ರದ್ಧೆಗಳು ವೀರಶೈವದಲ್ಲಿ ಇಂದು ಪ್ರಬಲವಾಗಿ ಬೇರುಬಿಟ್ಟಿವೆ. ಇದನ್ನು ನೋಡಿದ ಇಂದಿನ ಕೆಲವರು ಬಸವಣ್ಣ ಇನ್ನೊಂದು ಜಾತಿಯನ್ನು ನಿರ್ಮಿಸಿದ ಎನ್ನುವ ತೀರ್ಮಾನಕ್ಕೆ ಸಹಜವಾಗಿಯೇ ಬರುತ್ತಾರೆ. ಒಂದಲ್ಲ ಅದರೊಳಗೆ ಹಲವು ಜಾತಿಗಳಾಗಿರುವುದನ್ನು ಕಂಡು ಈ ಹಿನ್ನೆಲೆಯಲ್ಲಿ ಬಸವಣ್ಣನವರನ್ನು ಅಳೆಯಲು ತೊಡಗುತ್ತಾರೆ. ಇದು ಇಂದಿನ ಗಾಂಧೀ ಅನುಯಾಯಿಗಳನ್ನು ನೋಡಿ ಗಾಂಧೀಜಿಯನ್ನು ಅಳೆದಂತೆ ಆಗುತ್ತದೆ. ಇಂತಹ ಮಹಾಚೇತನವೊಂದು ಬಂದು ಇನ್ನು ಕೆಲವೇ ವರ್ಷಗಳು ಕಳೆದಿವೆ. ಆತನ ಒಡನಾಡಿಗಳಾಗಿದ್ದವರು ಇನ್ನೂ ಅನೇಕರು ಜೀವಂತ ಇದ್ದಾರೆ. ಆದರೆ ಅಷ್ಟರಲ್ಲೇ ಆತನ ತತ್ವಗಳಿಗೆ ಏನು ಗತಿ ಬಂದಿದೆಯೆನ್ನುವುದನ್ನು ನೋಡಿದರೆ ಮಾನವನ ದೌರ್ಬಲ್ಯ ಎಲ್ಲಿದೆ ಎನ್ನುವುದು ಸ್ಪಷ್ಟವಾಗುತ್ತದೆ. ನಾವು ಮಾಡುವ ಮೋಸ ವಂಚನೆ ಸ್ವಾರ್ಥ ಹಿಂಸಾಚಾರಗಳನ್ನೆಲ್ಲಾ ಗಾಂಧೀಜಿಯ ಹೆಸರಿನಲ್ಲಿಯೇ ಮಾಡುತ್ತೇವೆ. ಅವರ ಫೋಟೋದ ಮುಂದೆಯೇ ಮಾಡುತ್ತೇವೆ. ಬೇಕಾದರೆ ಅದಕ್ಕೆ ಮಂಗಳಾರತಿ ಎತ್ತಿ ಆರತಿ ತೆಗೆದುಕೊಳ್ಳುತ್ತೇವೆ. ಇವರು ಗಾಂಧೀಜಿಯ ಅನುಯಾಯಿಗಳಾದರೆ ಅಂತಹ ಗಾಂಧೀಜಿ ನಮಗೆ ಬೇಡ ಎಂದು ಇಂದಿನ ತರುಣ ಪೀಳಿಗೆ ಹೇಳಿದರೆ ಆಶ್ಚರ್ಯವಿಲ್ಲ. ಆದರೆ ಈ ಕೋಟೆಯನ್ನು ಒಡೆದು ಗಾಂಧೀಜಿಯ ನಿಜವಾದ ದರ್ಶನವನ್ನು ಮಾಡಬೇಕಾಗುತ್ತದೆ. ಈ ಮಾತು ಬಸವಣ್ಣನವರಿಗೂ ಅನ್ವಯಿಸುತ್ತದೆ.

ಬಸವಣ್ಣನವರು ಅಂದು ಸಾಧಿಸಿ ತೋರಿಸಿದ ಮಹತ್ಸಾಧನೆ ಬೆಳೆದು ಬಂದಿದ್ದರೆ ಇಂದಿನ ವೀರಶೈವದ ಸ್ವರೂಪ ಮಾತ್ರವೇ ಅಲ್ಲ, ಇಡೀ ಭಾರತದ ಸಾಮಾಜಿಕ ಸ್ವರೂಪವೇ ಬೇರೆಯಾಗಿರುತ್ತಿತ್ತು. ಆದರೆ ಕಲ್ಯಾಣ ಕ್ರಾಂತಿಯಲ್ಲಿ ಅದು ಥಟ್ಟನೆ ಕುಸಿದು ಬಿದ್ದಿತು. ಅಂದಿನ ವರ್ಣ ವ್ಯವಸ್ಥೆ, ಜಾತಿಪದ್ಧತಿ, ಸಾಮಾಜಿಕ ತಾರತಮ್ಯದ ವಿಷಮತೆಯ ಭದ್ರವಾದ ಕೋಟೆ ತನ್ನನ್ನು ಸಮರ್ಥಿಸಿಕೊಂಡಿತು. ವೈಚಾರಿಕತೆಯ ಬೇರಿಗೆ ಬೆನ್ನೀರೆರೆದು ತನ್ನ ವಿಜಯ ಪತಾಕೆಯನ್ನು ಹಾರಿಸಿತು. ಅದರ ಮೂಲ ಸ್ವರೂಪವನ್ನು ಹೊಳಪುಗೊಳಿಸುವ ಅಲ್ಲಲ್ಲಿ ನಡೆದರೂ ಅದು ಪ್ರಭಾವಶಾಲಿಯಾದ ಚಳುವಳಿಯಾಗಲಿಲ್ಲ. ೧೫ನೇ ಶತಮಾನದಲ್ಲಿ ವಿಜಯನಗರದ ಇಮ್ಮಡಿ ಪ್ರೌಢದೇವರಾಯನ ಕಾಲದಲ್ಲಿ ತಕ್ಕಮಟ್ಟಿಗೆ ಸಾಮೂಹಿಕ ಸ್ವರೂಪವನ್ನು ಪಡೆಯಿತು. ಆತನ ಆಶ್ರಯದಲ್ಲಿ ನೂರೊಂದು ವಿರಕ್ತರು ಸಮಾವೇಶಗೊಂಡರು. ಅಲ್ಲಲ್ಲಿ ಹುದುಗಿಸಿಟ್ಟಿದ್ದ ವಚನ ಸಾಹಿತ್ಯ ಬಯಲಿಗೆ ಬಂದು, ಅವುಗಳ ಸಂಪಾದನೆ ವ್ಯವಸ್ಥೆ ವ್ಯಾಖ್ಯಾನ ರಚನೆ ಅವರ ನೇತೃತ್ವದಲ್ಲಿ ನಡೆಯಿತು. ಶರಣರ ಮೇಲೆ ಸ್ವತಂತ್ರ ಕಾವ್ಯಗಳೂ ರಚಿತವಾದುವು. 'ಶೂನ್ಯ ಸಂಪಾದನೆ'ಯಂತಹ

ವಿಶಿಷ್ಟ ಕೃತಿಗಳು ರೂಪುಗೊಂಡುವು. ಈ ಬಹುಮುಖವಾದ ಧರ್ಮಜಾಗ್ರತಿಯ ಕಾರ್ಯಗಳಿಗೆಲ್ಲಾ ಕಳಸವಿಟ್ಟಂತೆ ಅನುಭಾವದ ಚೈತನ್ಯಶಕ್ತಿ ಸ್ವರೂಪವಾಗಿ ತೋಂಟದ ಸಿದ್ಧಲಿಂಗೇಶ್ವರರು ಆವಿರ್ಭವಿಸಿದರು. ಸ್ವತಃ ವಚನಕಾರರೂ ಆಗಿದ್ದ ಅವರು ತಮ್ಮ ನೂರಾರು ಶಿಷ್ಯರೊಡನೆ ಸಂಚರಿಸಿ ಧರ್ಮವನ್ನು ಜೀವಂತಶಕ್ತಿಯಾಗಿಸಿದರು; ತಾವೇ ಒಂದು ಮಹಾಶಕ್ತಿಯಾಗಿ ಪರಿಣಮಿಸಿದರು. ಆ ನೆರಳಿನಲ್ಲಿ ಬೆಳೆದ ಅವರ ಶಿಷ್ಯರನೇಕರು ಧರ್ಮಪೀಠಗಳಲ್ಲಿ ಕುಳಿತು ಧರ್ಮಸೂತ್ರಗಳನ್ನು ಹಿಡಿದರು.

ವೀರಶೈವದ ಇತಿಹಾಸದಲ್ಲಿ ಇದೊಂದು ಮಹತ್ವದ ಘಟ್ಟ. ಇಲ್ಲಿಂದ ಮುಂದೆ ಕರ್ನಾಟಕದಲ್ಲಿ ಇದೊಂದು ಸುಸಂಘಟಿತ ಧರ್ಮವಾಗಿ ಪರಿಣಾಮಿಸಿತು. ನೆರೆಯ ನಾಡುಗಳಲ್ಲಿ ಇದು ಹರಡಿದರೂ ಒಂದು ಪರಿಮಿತವಾದ ವಲಯದಲ್ಲಿ ಉಳಿಯಿತೇ ಹೊರತು ಕರ್ನಾಟಕದಲ್ಲಿರುವಂತೆ ಪ್ರಬಲವಾದ ಧರ್ಮವಾಗಿ ಬೆಳೆಯಲಿಲ್ಲ. ೧೫–೧೬ನೇ ಶತಮಾನಗಳಲ್ಲಿ ನಡೆದ ಪುನರುಜ್ಜೀವನದ ಯುಗದಲ್ಲಿ ಶರಣತತ್ವ ಮತ್ತು ಸಾಹಿತ್ಯಗಳ ವ್ಯವಸ್ಥಿತ ವಿವೇಚನೆ ನಡೆದಂತೆ, ಅವನ್ನು ಜನಮನಕ್ಕೆ ಮುಟ್ಟಿಸುವ ಸಾಮಾಜಿಕ ವ್ಯವಸ್ಥೆಯೂ ರೂಪುಗೊಂಡಿತು. ಅದರ ಅಂಗವಾಗಿ ಊರೂರಿನಲ್ಲಿ ಹಳ್ಳಿಹಳ್ಳಿಗಳಲ್ಲಿ ಮಠಗಳು ತಲೆಯೆತ್ತಿದುವು. ಹಳೆಯ ಮಠಗಳು ನವೀಕರಣಗೊಂಡಂತೆ ಹೊಸ ಮಠಗಳೂ ನಿರ್ಮಾಣಗೊಂಡುವು.

ಈ ಮಠಗಳ ವ್ಯವಸ್ಥೆ ತುಂಬಾ ಹಳೆಯದೆಂಬಂತೆ ತೋರುತ್ತದೆ. ಬಹುಶಃ ಬಸವಣ್ಣನವರಿಗಿಂತ ಹಿಂದೆಯೇ ಕೆಲವು ಮಠಗಳಿದ್ದುವು. ಬಸವಣ್ಣನವರ ಧಾರ್ಮಿಕ ಆಂದೋಳನದ ಪ್ರಭಾವ ಈ ಮಠಗಳ ಮೇಲೂ ಆದಂತೆ ತೋರುತ್ತದೆ. ಅನೇಕ ಮಠಗಳು ಈ ತತ್ವವನ್ನಪ್ಪಿ ಪರಿವರ್ತಿತವಾಗಿರಬೇಕು. ಕಾಳಾಮುಖ ಮಠಗಳು ವೀರಶೈವ ಮಠಗಳಾದುದರ ಸೂಚನೆ ಅನೇಕ ಕಡೆಗಳಲ್ಲಿ ಕಾಣುತ್ತದೆ. ಮಠಗಳ ಗುರುಗಳಂತೆಯೇ ಧರ್ಮದ ಬೆಳಕನ್ನು ಹಿಡಿದು ಸದಾ ಸಂಚರಿಸುವ ಜಂಗಮತ್ವದ ಕಲ್ಪನೆಯನ್ನು ಬಸವಣ್ಣನವರು ಪ್ರಬಲ ಶಕ್ತಿಯನ್ನಾಗಿ ಬಳಸಿಕೊಂಡರು. ಈ ಇಬ್ಬರ ಮಧ್ಯದಲ್ಲಿ ಲಿಂಗವನ್ನು ನಿಹಿತಗೊಳಿಸಿ ಗುರುಲಿಂಗಜಂಗಮಕ್ಕೆ ತನುಮನದನವನ್ನರ್ಪಿಸುವ ತ್ರಿವಿಧ ದಾಸೋಹ, ಸಾಮಾಜಿಕ ಹಿತಕ್ಕೆ ಸಂಜೀವಿನಿಯಾಗಿ ಪರಿಣಮಿಸಿತು.

ಬಸವಣ್ಣನವರ ತ್ರಿವಿಧ ದಾಸೋಹದ ಕಲ್ಪನೆ ತುಂಬಾ ಅರ್ಥವತ್ತಾದುದು. ಗುರುಲಿಂಗಜಂಗಮ ಈ ಮೂರೂ ಜಡವಾಗಿ ನಿಲ್ಲುವಂತಹವುಗಳಲ್ಲ; ಇವೆಲ್ಲಾ ಚಲನಶೀಲವಾದ ತತ್ವಗಳು ಅದನ್ನು ಕಳೆದುಕೊಂಡು ಇವು ವೈಯಕ್ತಿಕವಾದ ಅಥವಾ ಸಂಪ್ರದಾಯದ ಮಿತಿಗೆ ಸೀಮಿತವಾದಾಗ ಜಡವಾಗುತ್ತವೆ. ಆಗ ಧರ್ಮ ಜಂಗಮತ್ವವನ್ನು ಕಳೆದುಕೊಂಡು ಸ್ಥಾವರವಾಗುತ್ತದೆ. ಮಠಗಳಿಂದ ಈ ಅಪಾಯವಿದೆಯೆಂಬುದನ್ನು ಬಸವಣ್ಣನವರು ಕಂಡುಕೊಂಡಿದ್ದರು. ಈ ಅಪಾಯದಿಂದ ಪಾರಾಗುವ ಒಂದು ವ್ಯವಸ್ಥೆ

ಯನ್ನು ಅವರು ರೂಪಿಸಬೇಕಾಗಿತ್ತು; ಧರ್ಮ ಯಾಂತ್ರಿಕವಾಗುವುದನ್ನೂ, ಶೋಷಣೆಯ ಸಾಧನವಾಗುವುದನ್ನು ತಪ್ಪಿಸಬೇಕಾಗಿತ್ತು. ಅದನ್ನು ಸಮಷ್ಟಿ ಹಿತಸಾಧನೆಯ ಅಭಿಜಾತ ಶಕ್ತಿಯನ್ನಾಗಿ ಪರಿವರ್ತಿಸಬೇಕಾಗಿತ್ತು. ಆ ಕಾರಣಕ್ಕಾಗಿಯೇ ಕಾಯಕವನ್ನು ದಾಸೋಹ ದೊಡನೆ ಬೆಸೆದರು ಬಸವಣ್ಣನವರು. ಗುರುಲಿಂಗಜಂಗಮಕ್ಕೂ ಕಾಯಕವನ್ನು ವಿಧಿಸಿದರು. ಯಾವ ಶಕ್ತಿಗೆ ನಮ್ಮನ್ನು ಅರ್ಪಿಸಿಕೊಳ್ಳುತ್ತೇವೆಯೋ ಆ ಲಿಂಗಶಕ್ತಿಯೂ ಕಾಯಕಶೀಲ ವಾದದ್ದು ಎಂಬ ಪರಿಕಲ್ಪನೆ ಅದುವರೆಗಿನ ಧಾರ್ಮಿಕ ವ್ಯವಸ್ಥೆಗೆ ಒಂದು ಹೊಸ ಆಯಾಮವನ್ನು ತಂದುಕೊಟ್ಟಿತು. ಈ ಹಿನ್ನೆಲೆಯಲ್ಲಿ ಮಠಗಳನ್ನು ಅಲ್ಲಿರುವ ಗುರು ಗಳನ್ನೂ ವಿನೂತನ ಶಕ್ತಿ ಕೇಂದ್ರಗಳನ್ನಾಗಿ ಮಾಡಲು ಬಸವಣ್ಣ ಉದ್ದೇಶಿಸಿದಂತೆ ತೋರುತ್ತದೆ. ಆದರೆ ಅದಿನ್ನು ರೂಪುಗೊಳ್ಳುವ ಹಂತದಲ್ಲಿರುವಾಗಲೇ ಕುಸಿದುಬಿದ್ದಿತು.

ಮತ್ತೆ ಅದನ್ನು ಪುನರುಜ್ಜೀವನಗೊಳಿಸುವ ಪ್ರಯತ್ನ ನಡೆದಾಗ ಸಹಜವಾಗಿಯೇ ಮಠಗಳಿಗೆ ಮಹತ್ವ ಲಭಿಸಿತು. ಜಂಗಮರೂ ಪ್ರಾಧಾನ್ಯವನ್ನು ಪಡೆದರು. ಆದರೆ ಬಸವಣ್ಣ ಬಯಸಿದ ಚಲನಶೀಲತೆ ಮರೆಯಾಗಿ ಸ್ಥಾವರತ್ವವನ್ನು ಪಡೆಯಿತು. ವೈದಿಕ ಧರ್ಮದಲ್ಲಿ ಆತ ಯಾವುದನ್ನು ಪ್ರತಿಭಟಿಸಿದ್ದನೋ ಆ ಪುರೋಹಿತ ಶಾಹಿಯ ಮೇಲು ಕೀಳು ಶೋಷಣೆ ಕರ್ಮಠತನಗಳೇ ಬೇರೆ ಬೇರೆ ರೂಪದಲ್ಲಿ ಇಲ್ಲಿಯೂ ಬಂದು ಸೇರಿ ಕೊಂಡುವು. ಮಠಗಳು ಧಾರ್ಮಿಕ ಮತ್ತು ಸಾಮಾಜಿಕ ಸಂಘಟನೆಯ ಕೇಂದ್ರಗಳಾಗಿ ವ್ಯವಸ್ಥಿತ ರೂಪವನ್ನು ಪಡೆದದ್ದು ಸ್ವಾಗತಾರ್ಹವೇ. ೧೫ನೇ ಶತಮಾನಕ್ಕಿಂತ ಹಿಂದೆ ಈ ಪ್ರಮಾಣದಲ್ಲಿ ಮಠಗಳ ಸಂಖ್ಯೆಗಳನ್ನಾಗಲೀ ಅವುಗಳ ಪ್ರಭಾವವನ್ನಾಗಲೀ ಕಾಣುವು ದಿಲ್ಲ. ಈ ಯುಗದಲ್ಲಿ ನೂರಾರು ಮಠಗಳು ಹುಟ್ಟಿಕೊಂಡವು. ಹಿಂದೆ ಇದ್ದ ಅನೇಕ ಮಠಗಳ ಸ್ಪಷ್ಟವಾದ ಸ್ವರೂಪ ಗೋಚರವಾಗುವುದೂ ಸಹ ೧೫ನೇ ಶತಮಾನದಿಂದ ಈಚೆಗೇ. ಮಠಗಳ ಪಾತ್ರ ಇಲ್ಲಿಂದ ಮುಂದೆ ಬೆಳೆಯುತ್ತಲೇ ಬಂದಿತು. ಆದರೆ ಅದರ ಜೊತೆಜೊತೆಯಲ್ಲಿಯೇ ದೌರ್ಬಲ್ಯಗಳೂ ಬೆಳೆದು ಬಂದವು. ಮಠಗಳಲ್ಲಿಯೇ ಬೇರೆ ಬೇರೆ ಗುಂಪುಗಳಾದವು. ಗುರು, ವಿರಕ್ತ ಎನ್ನುವುದು ಪರಸ್ಪರ ಪೂರಕವಾದ ಕಾರ್ಯರಂಗ ಗಳೆನ್ನುವುದು ಮರೆಯಾಗಿ, ಪರಸ್ಪರ ಸ್ಪರ್ಧೆ ಅಧಿಕಾರಗಳ ಹೋರಾಟ ಪ್ರಾರಂಭ ವಾಯಿತು. ಧರ್ಮದ ಹೆಸರಿನಲ್ಲಿ ಪ್ರದರ್ಶನ ಆಡಂಬರಗಳು ವಿಜೃಂಭಿಸಿದವು. ಇಷ್ಟಲಿಂಗ ನಿಷ್ಠೆ ಮರೆಯಾಗಿ ಶೋಷಣೆಗೆ ಕಾರಣವಾಗುವ ಧಾರ್ಮಿಕ ಪ್ರತಿಕ್ರಿಯೆಗಳ ಕೈಮೇಲಾಯಿತು.

ಬಸವಣ್ಣ ತಿರಸ್ಕರಿಸಿದ ಎಲ್ಲ ದೌಷ್ಟ್ಯ ದೌರ್ಬಲ್ಯಗಳೂ ಹಿಂಬಾಗಿಲಿನಿಂದ ಮತ್ತೆ ವೀರಶೈವದೊಳಕ್ಕೆ ಪ್ರವೇಶವನ್ನು ಪಡೆದವು. ಹಿಂದೂ ಧರ್ಮದ ವರ್ಣವ್ಯವಸ್ಥೆಯನ್ನು ಜಾತಿಪದ್ಧತಿಯನ್ನೂ ಶೋಷಣೆಯನ್ನು ಕಟುವಾಗಿ ಖಂಡಿಸಿ ಪ್ರತಿಭಟನೆಯ ಧರ್ಮ ವನ್ನಾಗಿ ಅಂದು ಬಸವಣ್ಣನವರು ವೀರಶೈವವನ್ನು ರೂಪಿಸಿದರು. ಆದರೆ ಅನಂತರದ

ವೀರಶೈವ ಆ ಸತ್ವವನ್ನು ಕಳೆದುಕೊಂಡು ಹೊಂದಾಣಿಕೆಯನ್ನು ಮಾಡಿಕೊಳ್ಳುತ್ತಾ ಆ ದೌರ್ಬಲ್ಯಗಳಿಗೆಲ್ಲಾ ತಾನೇ ಬಲಿಯಾಯಿತು. ಜಾತಿಯನ್ನು ತಿರಸ್ಕರಿಸಿದ ಧರ್ಮ ತಾನೇ ಒಂದು ಜಾತಿಯಾಯಿತು. ಒಂದಲ್ಲ ಹಲವಾರು ಜಾತಿಗಳಾದವು. ಜಾತಿಗಳನ್ನೆಲ್ಲಾ ತೊಡೆದು ಹಾಕಿ, ಸರ್ವಸಮಾನತೆಯನ್ನು ಸಾಧಿಸಬೇಕಾಗಿದ್ದ ಲಿಂಗಧಾರಣೆ ಜಾತಿಗಳ ಸಂಖ್ಯೆಯನ್ನು ಬೆಳೆಸಿದುದು ಒಂದು ವಿಪರ್ಯಾಸ. ವೀರಶೈವರಲ್ಲಿಯೇ ಕೆಲವು ಪುರೋಹಿತ ವರ್ಗಗಳು ಹುಟ್ಟಿಕೊಂಡವು. ಅದರಡಿಯಲ್ಲಿ ಒಂದಲ್ಲ, ಹಲವು ಜಾತಿಗಳನ್ನು ಸೃಷ್ಟಿಸಿ ಕೊಂಡಿತು.

ಇದಕ್ಕೆ ಕಾರಣ ವೈದಿಕ ಧರ್ಮದ ಪ್ರಭಾವ. ಅದನ್ನು ಮೀರಲಾಗದ ಪರಿಸರ ಬಹಳ ಹಿಂದೆಯೇ ಅಚಲವಾದ ಬಂಡೆಯಾಗಿ ಕುಳಿತಿತ್ತು. ಭಗವದ್ಗೀತೆಯು, ಉಪ ನಿಷತ್ತುಗಳು ಮತ್ತು ಇತರ ಆಂದೋಲನಗಳ ಉದಾರ ದೃಷ್ಟಿಗಳನ್ನೆಲ್ಲಾ ಅದು ನುಂಗಿ ನೀರು ಕುಡಿಯಿತು. ಅಂದರೆ ಅವುಗಳ ಪ್ರಭಾವ ಏನೂ ಆಗಲೇ ಇಲ್ಲವೆಂದಲ್ಲ. ಆದರೆ ಅದರ ಜೊತೆಜೊತೆಯಲ್ಲಿಯೇ ಅದನ್ನು ಮೆಟ್ಟಿ ಕರ್ಮಠತನದ ವೈದಿಕ ಪ್ರಭಾವ ಉಳಿದು ಕೊಂಡೇ ಬಂದಿತು. ಜ್ಞಾನಯಜ್ಞವೇ ಶ್ರೇಷ್ಠವೆಂದು ಉಪನಿಷತ್ತುಗಳು ಹೇಳಿದರೂ, ಕರ್ಮ ಯಜ್ಞಗಳು ನಿಲ್ಲಲಿಲ್ಲ. ರಾಜ ಬೆಂಬಲವನ್ನು ಪಡೆದು, ವರ್ಣವ್ಯವಸ್ಥೆಯನ್ನೂ, ಯಜ್ಞ ಯಾಗಾದಿಗಳನ್ನೂ ಶೋಷಣೆಯ ಮಾಧ್ಯಮಗಳಾದ ದೇವಾಲಯಾದಿಗಳನ್ನು ಸಾರೋದ್ಧಾರವಾಗಿ ಬೆಳೆಸಿಕೊಂಡು ಬಂದಿತು. ಇನ್ನೊಂದು ಕಡೆಯಲ್ಲಿ ಕೆಳಗಿನ ಸ್ತರದ ಮಾರಿ ಮಸಣಿಗಳ ಉಗ್ರ ಉಪಾಸನೆಯನ್ನು, ಬೆತ್ತಲೆ ಸೇವೆ, ಉರುಳು ಸೇವೆ, ದೇವದಾಸಿ ಪದ್ಧತಿ ಮೊದಲಾದ ಅಮಾನುಷ ಅಂಧಶ್ರದ್ಧೆಗಳನ್ನೂ ನೂರಾರು ಕುರುಡು ಆಚಾರ ಗಳನ್ನೂ ಉಳಿಸಿಕೊಂಡು, ಶಿಷ್ಟ ಮತ್ತು ಜಾನಪದದ ನಡುವಿನ ಕಂದಕವನ್ನು ಕಾಪಾಡಿ ಕೊಂಡೇ ಬಂದಿತು. ಈ ಆಧುನಿಕ ಯುಗದಲ್ಲಿಯೂ ಇದರ ಪ್ರಭಾವವನ್ನು ನೋಡಿದರೆ, ನಮ್ಮ ಪ್ರತಿಗಾಮಿ ಶಕ್ತಿಗಳ ಸಂಪ್ರದಾಯನಿಷ್ಠೆ ಮತ್ತು ಅದನ್ನು ಉಳಿಸಿಕೊಂಡು ಬರುವ ಜಾಣ್ಮೆ ಎಷ್ಟೆಂಬುದು ಮನದಟ್ಟಾಗುತ್ತದೆ.

ಈಗಲೂ ನಮ್ಮಲ್ಲಿ ಚಂಡಿ ಹೋಮಗಳು, ಮಹಾರುದ್ರ ಅಶ್ವಮೇಧ ಸೋಮಾಧಿ ಯಜ್ಞಯಾಗಗಳು ಲಕ್ಷಾಂತರ ರೂಪಾಯಿಗಳ ಖರ್ಚಿನಲ್ಲಿ ಅದ್ದೂರಿಯಿಂದ ನಡೆಯುತ್ತವೆ. ಇದಕ್ಕೆ ಅಂದು ರಾಜ ಬೆಂಬಲವಿದ್ದರೆ, ಇಂದು ರಾಜಕೀಯದಲ್ಲಿ ಅತ್ಯುನ್ನತ ಅಧಿಕಾರ ದಲ್ಲಿರುವ ಪ್ರತಿಷ್ಠಿತರ ಬೆಂಬಲವನ್ನು ಅವು ಪಡೆಯುತ್ತವೆ. ಸಾಮಾನ್ಯರ ದುರ್ಭರ ಬದುಕಿನಲ್ಲಿ ಒಂದು ಗುಟುಕಿಗೂ ಎಟುಕದಿರುವ ಹಾಲು ತುಪ್ಪ ಬೆಣ್ಣೆಗಳನ್ನು ಧಾರಾಕಾರ ವಾಗಿ ಬೆಂಕಿಗೆ ಸುರಿದು ಸನಾತನ ನಿಷ್ಠೆಯ ಹಿರಿಮೆಯಿಂದ ಬೀಗುತ್ತವೆ, ತೇಗುತ್ತವೆ. ಅವುಗಳನ್ನು ಅಲುಗಿಸಲಾರದಷ್ಟು ಆಳವಾಗಿ ಅವು ಬೇರುಬಿಟ್ಟಿವೆ. ಆಂಗ್ಲರ ಪ್ರಭಾವ ದಿಂದ ನಮ್ಮಲ್ಲಿ ಹೊಸದೃಷ್ಟಿ ಬಂದಿದೆ; ವೈಜ್ಞಾನಿಕತೆ ಬೆಳೆದಿದೆ ಎಂದು ಹೇಳಿ ಕೊಳ್ಳುತ್ತಿದ್ದರೂ ಅವುಗಳ ಹಿಂದೆಯೂ ಸಂಪ್ರದಾಯದ ಕಪಿಮುಷ್ಟಿಯ ಪ್ರಭಾವ ಇಣುಕು

ತ್ತದೆ. ವಿಜ್ಞಾನಕ್ಕೂ ರಾಹುಕಾಲದ ಗಂಟನ್ನು ಹಾಕುತ್ತೇವೆ. ಕಮ್ಯೂನಿಸಂ ಬಂದರೂ, ಕುವೆಂಪು ಅವರು ಹೇಳುವಂತೆ, ಅದಕ್ಕೂ ಮತದ ಮುದ್ರೆ ಒತ್ತುತ್ತೇವೆ.

ಇಂತಹ ಪರಿಸರದಲ್ಲಿ ವೀರಶೈವ ಇದರ ಪ್ರಭಾವದಿಂದ ಹೊರತಾಗುವುದು ಸಾಧ್ಯವಾಗಲಿಲ್ಲ. ತಾನೂ ವೈದಿಕವೆಂದು ಕರೆದುಕೊಳ್ಳುವುದರಲ್ಲಿ ಇದು ಹೆಮ್ಮೆಪಟ್ಟುಕೊಂಡಿತು. ವೈದಿನ ಪೂಜಾವಿಧಾನದ ಆಕರ್ಷಣೆಗೆ ಮಾರುಹೋಗಿ ಆ ಹಕ್ಕನ್ನು ಸ್ಥಾಪಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿತು. ಅದಕ್ಕನುಗುಣವಾಗಿ ಪುರೋಹಿತ ವರ್ಗವನ್ನು ಸೃಷ್ಟಿಸಿಕೊಂಡಿತು; ಮೇಲು–ಕೀಳುಗಳನ್ನು ಬೆಳೆಸಿಕೊಂಡಿತು. ಇದೆಲ್ಲವನ್ನೂ ಗುಡಿಸಿ ಹಾಕಿ ಸರ್ವಸಮಾನತೆಯನ್ನು ಸಾಧಿಸಿದ ಬಸವಣ್ಣ ಧರ್ಮವನ್ನು ಕುಲಗೆಡಿಸಿದನೆಂದು ಹೇಳುವ ಧರ್ಮಗುರುಗಳೂ ಹುಟ್ಟಿಕೊಂಡರು. ಇನ್ನೂ ಕೆಲವರು ಬಸವತತ್ವವನ್ನೇ ಹೇಳುತ್ತಾ ಆ ಹಿನ್ನೆಲೆಯನ್ನು ಉಳ್ಳವರಾದರೂ ಆಚರಣೆಯಲ್ಲಿ ಅದನ್ನು ಕೈಬಿಟ್ಟರು. ಆತನ ತತ್ವಗಳ ಅಬ್ಬರದ ಪ್ರಚಾರ ಮಾಡಿದರು. ಆದರೆ ಅನುಷ್ಠಾನದಲ್ಲಿ ಅವುಗಳಿಗೆ ತಿಲಾಂಜಲಿ ಕೊಟ್ಟರು. ಅತ್ಯಂತ ವಿಜೃಂಭಣೆಯ ಹಲವು ದಿನಗಳ ಸಮಾರಂಭದಲ್ಲಿ ದಿನದಿನವೂ ಬಸವತತ್ವಗಳನ್ನು ಮೊಳಗಿಸಿದ ವೇದಿಕೆಯ ಮೇಲೆ, ಕೊನೆಯ ದಿನ ತಮ್ಮ ಒಳಪಂಗಡದ ಸಮ್ಮೇಳನ ನಡೆಸಿ ಬಸವತತ್ವಗಳ ಸಮಾಧಿ ಮಾಡುವುದನ್ನು ಕಂಡು ನೊಂದಿದ್ದೇನೆ. ಹಾಗೆಯೇ ಕೆಲವು ಶರಣರನ್ನು ತಮ್ಮವರೆಂದು ಗುತ್ತಿಗೆ ಹಿಡಿದು ಕಟ್ಟಿಹಾಕಿದವರೂ ಉಂಟು. ಸಿದ್ಧರಾಮನೂ ಅಂತಹ ಒಳಪಂಗಡವೊಂದಕ್ಕೆ ಸಿಕ್ಕು ಬಿದ್ದಿರುವುದನ್ನು ವರ್ಷ ವರ್ಷವೂ ಆಚರಿಸುವ ಸಮಾರಂಭಗಳಲ್ಲಿ ನೋಡುತ್ತಿದ್ದೇನೆ.

ಬಹುಶಃ ಇವರಲ್ಲಿ ಬೆಳೆದಿರುವ ಒಂದು ರೀತಿಯ ಕೀಳರಿಮೆ (**Inferiority Complex**) ಇದಕ್ಕೆ ಕಾರಣವೆಂದು ತೋರುತ್ತದೆ. ತಾವು ಬ್ರಾಹ್ಮಣರಿಗಿಂತ ಕಡಿಮೆಯಲ್ಲ ಎಂದು ಹೇಳಿಕೊಳ್ಳುವ ಭ್ರಮೆ ಇರುವಂತಿದೆ. ಅದಕ್ಕಾಗಿಯೇ ತಮ್ಮನ್ನು 'ಅಂಗೀ ಬ್ರಾಹ್ಮಣ' ಅಥವಾ 'ವೀರಶೈವ ಬ್ರಾಹ್ಮಣ' ಎಂದು ಕರೆದುಕೊಂಡವರೂ ಉಂಟು. ವೀರಶೈವರಲ್ಲಿಯೇ ಕೆಲವರು ಚತುರ್ವರ್ಣಗಳನ್ನು ಗುರುತಿಸುತ್ತಾರೆ. ಅಲ್ಲಿ ಪುರೋಹಿತ ವರ್ಗವಿದೆ, ಕ್ಷತ್ರಿಯ, ವೈಶ್ಯ, ಶೂದ್ರರೂ ಅದರಲ್ಲಿದ್ದಾರೆ– ಎನ್ನುವ ಅಭಿಪ್ರಾಯ ಅವರದು. ಜಂಗಮರು, ನೊಣಬರು. ಬಣಜಿಗರು, ಸಾದರು– ಹೀಗೆ ಇನ್ನೂ ಅನೇಕರಿದ್ದಾರೆ. ಈ ಪಟ್ಟಿ ದೀರ್ಘವಾಗಿ ಬೆಳೆಯುತ್ತಾ ಹೋಗುತ್ತದೆ. ಇವರಲ್ಲಿ ಶ್ರೇಷ್ಠತೆಗಾಗಿ ಪರಸ್ಪರ ಸ್ಪರ್ಧೆ ಏರ್ಪಡುತ್ತದೆ. ಆದರೆ ಆಶ್ಚರ್ಯವೆಂದರೆ ಈಚೆಗೆ ಹಿಂದುಳಿದವರನ್ನು ಗುರುತಿಸುವ ಆಯೋಗದ ವರದಿಯ ಸಂದರ್ಭದಲ್ಲಿ, ಈ ಪ್ರಮುಖ ಒಳಪಂಗಡಗಳಲ್ಲಿ, ತಾವು ಮಾತ್ರ ಹಿಂದುಳಿದವರೆಂದು ಹೇಳಿಕೊಳ್ಳುವ ಅಸಹ್ಯಕರ ಸ್ಪರ್ಧೆಯೂ ನಡೆಯಿತು. "ಆವ ಕುಲವಾದಡೇನು, ಶಿವಲಿಂಗವಿದ್ದವನೇ ಕುಲಜನು" ಎಂಬ ತನ್ನ ಸೂತ್ರ ವ್ಯರ್ಥವಾಯಿತೇ– ಎಂದು ಇಂತಹ ಲಿಂಗವಂತರನ್ನು ಕಂಡಿದ್ದರೆ ಬಸವಣ್ಣ ಕೊರಗಿ ಕಣ್ಣೀರು ಕರೆಯುತ್ತಿದ್ದನೆಂದು ತೋರುತ್ತದೆ.

ಇಷ್ಟೆಲ್ಲ ಹೇಳಿದ ಮೇಲೆ ಇನ್ನೊಂದು ಮಾತನ್ನೂ ಹೇಳಬೇಕು. ಬಹುಶಃ ಈ ಧರ್ಮಕ್ಕೆ ಕೂಡಿ ಬಾಳದಂತಹ ಒಂದು ಶಾಪವಿರುವಂತೆ ಅದನ್ನು ಮೀರಿದ ಒಂದು ವರವೂ ಇದೆ. ಅದೆಂದರೆ ಬಸವಣ್ಣನವರ ಕ್ರಾಂತಿಕಾರಕ ಸಾಧನೆಯ ಅನುಭಾವಿಕ ಹಿನ್ನೆಲೆ. ಇದು ಈ ಎಲ್ಲ ನಿರಾಶೆಯ ಮಧ್ಯದಲ್ಲಿರುವ ಆಶಾಕಿರಣ. ಇಷ್ಟೆಲ್ಲಾ ದೌರ್ಬಲ್ಯಗಳೂ ಪರಿಮಿತಿಗಳೂ ಪಾಪಾಸುಕಳ್ಳಿಯಂತೆ ಬೆಳೆದು ನಿಂತಿದ್ದರೂ, ಅದರ ಅಂತರ್ಯದಲ್ಲಿರುವ ಧರ್ಮದ ಫಲ ಕೊಳೆತಿಲ್ಲ. ಮರವೇ ಕಾಣದಷ್ಟು ಬಂದಳಿಕೆ ಬೆಳೆದಿರುವುದು ನಿಜ. ಆದರೆ ಆ ಧರ್ಮವೃಕ್ಷವನ್ನು ಹಿಡಿದಿರುವ ತಾಯಿಬೇರಿನ ಸತ್ವ ಇನ್ನೂ ಉಳಿದಿದೆ. ಮೇಲಿನ ಪದರವನ್ನು ಆವರಿಸಿರುವ ಈ ಪರೋಪ ಜೀವಿಯನ್ನು ಕತ್ತರಿಸಿ ಎಸೆದರೆ, ಹಳೆಯ ಕಾಂಡದ ಮೇಲೆ ಹೊಸ ಚಿಗುರು ನಳನಳಿಸಿ ಸುಳಿದೆಗೆದು ಬೆಳೆಯುತ್ತದೆ. ಈ ಆಧುನಿಕ ದೃಷ್ಟಿಯ ತಾತ್ವಿಕ ಹಿನ್ನೆಲೆ ಮತ್ತು ಅದನ್ನು ಕಾರ್ಯಗತಗೊಳಿಸಿ ತೋರಿಸಿದ ಅನುಭಾವಿಕ ಶಕ್ತಿ– ಇವು ಇಂದು ವೀರಶೈವ ಧರ್ಮಕ್ಕಿರುವ ಅಪೂರ್ವ ಸಂಪತ್ತು. ಈ ವರವೇ ಆ ಶಾಪ ವಿಮೋಚನೆಗೆ ಸಂಜೀವಿನಿ.

ಇಂದಿನ ಸಮಾಜವಾದ ಮತ್ತು ಸಮತಾವಾದಗಳ ಕ್ರಾಂತಿಕಾರಕ ಹಿನ್ನೆಲೆಯಲ್ಲಿ ಸಮಾಜವನ್ನು ಪುನರ್ ವ್ಯವಸ್ಥೆಗೊಳಿಸುವ ಪ್ರಯತ್ನಕ್ಕೆ, ವೀರಶೈವ ಧರ್ಮದ ತಾತ್ವಿಕ ಬೆಂಬಲ ಸಂಪೂರ್ಣವಾಗಿದೆ. ಧರ್ಮದ ಇತರ ಶಾಖೆಗಳನ್ನು ಕುರಿತು ಈ ಮಾತನ್ನು ಹೇಳುವುದು ಕಷ್ಟ. ಉದಾಹರಣೆಗೆ ಉಡುಪಿಯ ಪೇಜಾವರಮಠದ ಸ್ವಾಮಿಗಳಾಗಲೀ, ಶೃಂಗೇರಿ ಶಂಕರಮಠದ ಸ್ವಾಮಿಗಳಾಗಲೀ ಅಪಾರವಾದ ಮಾನವೀಯ ಅನುಕಂಪೆಯುಳ್ಳವರೇ ಆದರೂ ಅದನ್ನು ಸರ್ವಸಮಾನತೆಯ ಮಟ್ಟದಲ್ಲಿ ಕಾರ್ಯಗತಗೊಳಿಸಲು ಅವರಿಗೆ ಕಷ್ಟವಾಗುತ್ತದೆ. ಅವರ ಕಾರ್ಯವ್ಯಾಪ್ತಿಗೊಂದು ಮಿತಿಯಿದೆ; ಸಿದ್ಧಾಂತದ ಪ್ರತಿಬಂಧಕವಿದೆ. ಅಸ್ಪೃಶ್ಯತೆಯ ನಿವಾರಣೆಯಲ್ಲಾಗಲೀ ಅಥವಾ ಸರ್ವಸಮಾನತೆಯ ಸಾಮಾಜಿಕ ಮೌಲ್ಯಗಳಲ್ಲಾಗಲೀ ಅವರಿಗೆ ಕಳಕಳಿಯಿದ್ದರೂ ಆ ಮಾರ್ಗದಲ್ಲಿ ಅವರು ಬಹಳದೂರ ಹೋಗಲಾರರು. ಅಸ್ಪೃಶ್ಯರ ಕೇರಿಗೆ ಅವರು ಧೈರ್ಯಮಾಡಿ ಹೋಗಬಹುದು. ಆದರೆ ಅಸ್ಪೃಶ್ಯರನ್ನೇ ಮಠಕ್ಕೆ ಕರೆತಂದು, ಅವರಿಗೆ ಯಜ್ಞೋಪವೀತವನ್ನು ಕೊಟ್ಟು ಧಾರ್ಮಿಕ ಸಮಾನತೆಯನ್ನು ಸಾಧಿಸಿ ಅವರನ್ನು ಪರಿವರ್ತಿಸಲಾರರು. ಅವರು ಕುಳಿತಿರುವ ಪೀಠದ ತಾತ್ವಿಕ ಸಿದ್ಧಾಂತವೇ ಅದಕ್ಕೆ ಅಡ್ಡಿಯಾಗುತ್ತದೆ. ಆದರೆ ವೀರಶೈವ ಸ್ವಾಮಿಗಳಿಗೆ ಈ ಅಡ್ಡಿಯಿಲ್ಲ; ಆತಂಕವಿಲ್ಲ. ಬಹಳ ಹಿಂದೆಯೇ ಸಂಭವಿಸಿದ ಕ್ರಾಂತಿಕಾರಕ ಬದಲಾವಣೆಯಿಂದ ರೂಪಿತವಾದ ಇವರ ಸಿದ್ಧಾಂತ ಹುಟ್ಟನ್ನು ಮೀರಿದ ಧಾರ್ಮಿಕ ಸಮಾನತೆಯನ್ನು ಘೋಷಿಸಿದೆ, ಸಾಧಿಸಿ ತೋರಿಸಿದೆ. ಹರಳಯ್ಯ ಮಧುವರಸರಲ್ಲಿ ಇದು ಸಂಬಂಧವನ್ನು ಏರ್ಪಡಿಸಿದೆ. ಒಬ್ಬ ಅಸ್ಪೃಶ್ಯನನ್ನು ಉರಿಲಿಂಗಪೆದ್ದಿಯನ್ನಾಗಿ ಪರಿವರ್ತಿಸಿ ಮಠಕ್ಕೆ ಸ್ವಾಮಿಯನ್ನಾಗಿ ಮಾಡುವಷ್ಟು ದೂರ ಇದು ಹೋಗಿದೆ. ನಮ್ಮ ಸ್ವಾಮಿಗಳು ಸಿಂಹಾಸನಗಳಿಗಾಗಲೀ ಅವುಗಳ ಎತ್ತರಗಳಿಗಾಗಲೀ ಕಚ್ಚಾಡದೆ, ತಮ್ಮ ಕರ್ತೃತ್ವ ಶಕ್ತಿಯನ್ನು

ಇತ್ತ ತಿರುಗಿಸಿದರೆ, ಇಂದಿನ ಯುಗದ ಅದಮ್ಯ ಅಪೇಕ್ಷೆಯಾದ ಸಾಮಾಜಿಕ ಕ್ರಾಂತಿ ಸದ್ದು ಗದ್ದಲವಿಲ್ಲದೆ ನಡೆದು ಹೋಗುತ್ತದೆ. ಅಂತಹ ಪ್ರಯತ್ನವನ್ನು ಕೆಲವು ಮಠಗಳು ಕೈಗೊಂಡಿವೆ. ಅದಿನ್ನೂ ಬೆಳೆದು ಮಹಾಪೂರವಾಗಿ ಹರಿಯಬೇಕಾಗಿದೆ.

ಆಧುನಿಕ ವೈಚಾರಿಕ ದೃಷ್ಟಿಯು ಘೋಷಿಸಿದ ಎಲ್ಲ ಮಾನವ ಮೌಲ್ಯಗಳನ್ನು ಸರ್ವಸಮಾನತೆಯ ಅಂಶಗಳನ್ನೂ ವೀರಶೈವ ಒಳಗೊಂಡಿದೆ. ಇಂದು ವಿಶ್ವಸಂಸ್ಥೆಯ ಪ್ರಣಾಳಿಕೆಯಲ್ಲಿ ಘೋಷಿತವಾದ ಮಾನವ ಹಕ್ಕು ಬಾಧ್ಯತೆಗಳೆಲ್ಲಾ ಇಲ್ಲಿ ಒಪ್ಪಿತವಾಗಿರುವುದಷ್ಟೇ ಅಲ್ಲದೆ, ಅಂದೇ ಅವುಗಳನ್ನು ಕಾರ್ಯಗತಗೊಳಿಸುವ ಸಾಹಸದಲ್ಲಿಯೂ ವೀರಶೈವ ತನ್ನ ವಿಶಿಷ್ಟತೆಯನ್ನು ಪಡೆದಿದೆ. ಆದರೆ ಆ ಸಾಧನೆಯ ಪರಿಣಾಮ ಮುಂದೆ ಉಳಿದು ಬರಲಿಲ್ಲ. ಹಿಂದೆ ಹೇಳಿದಂತೆ ಸಂಪ್ರದಾಯಗಳ ಉರುಳಿಗೆ ತಲೆಯೊಡ್ಡಿ ತನ್ನ ತತ್ವಗಳನ್ನೆಲ್ಲಾ ಬಲಿ ಕೊಟ್ಟಿತು. ಬಸವಣ್ಣ ನಿರಾಕರಿಸಿದ ಜಾತಿವಾದ, ಮೇಲು–ಕೀಳು, ಮೂರ್ತಿ ಪೂಜೆ, ಶೋಷಣೆ– ಮೊದಲಾದುವೆಲ್ಲಾ ಯಾವ ಅಳುಕು ಇಲ್ಲದೆ ಈ ಧರ್ಮದೊಳಗೆ ನುಗ್ಗಿ ಬಂದುವು; ಇಲ್ಲಿಯೂ ಜಾತಿಗಳ ಗೊಂದಲವನ್ನು ಸೃಷ್ಟಿಸಿದುವು. ಇದು ಬಸವ ಧರ್ಮವಾದರೆ ಅಂತಹ ಬಸವಣ್ಣ ನಮಗೆ ಬೇಡ ಎನ್ನುವಂತಾಯಿತು. ಬಸವಣ್ಣನವರನ್ನು ಬಹಳ ಚಿಕ್ಕವರನ್ನಾಗಿ ಮಾಡಿದೆವು. ಒಂದು ಜಾತಿಯ ಸ್ಥಾಪಕನನ್ನಾಗಿ ಆತನನ್ನು ಮಾಡಿ ಆ ಒಂದು ಗುಂಪಿಗೇ ಆತನನ್ನು ಅಂಟಿಸಿದೆವು.

ಈಗ ಕೆಲವು ವರ್ಷಗಳ ಹಿಂದೆ ನಡೆದ ಒಂದು ಘಟನೆ ನಮ್ಮ ಕಣ್ಣು ತೆರೆಸಬೇಕು. ಯಾರ ಉದ್ಧಾರಕ್ಕಾಗಿ ಬಸವಣ್ಣನವರು ಇಡೀ ಧಾರ್ಮಿಕ ಇತಿಹಾಸದಲ್ಲಿಯೇ ಮೊಟ್ಟ ಮೊದಲ ಬಾರಿಗೆ ಮಹತ್ವಪೂರ್ಣ ಆಂದೋಲನವನ್ನು ಸಂಘಟಿಸಿದರೋ, ಮತ್ತು ಯಾರನ್ನು ಅಪ್ಪಿಕೊಂಡು ಧಾರ್ಮಿಕ ಸಮಾನತೆಯನ್ನು ತಂದುಕೊಟ್ಟರೋ ಅಂತಹ ದಲಿತ ವರ್ಗದವರೇ ಬಸವಣ್ಣನವರ ಭಾವಚಿತ್ರವನ್ನು ಕೆಳಗೆಳೆದು ತುಳಿದು ಹಾಕಿದ ಘಟನೆ ಗುಲ್ಬರ್ಗಾದಲ್ಲಿ ನಡೆಯಿತು. ಅವನ ಕಾರ್ಯಕ್ಷೇತ್ರವಾಗಿ ಕಲ್ಯಾಣವನ್ನು ಒಳಗೊಂಡ ಆ ಭಾಗದಲ್ಲಿ ಒಂದು ವಿಶ್ವವಿದ್ಯಾನಿಲಯ ಪ್ರಾರಂಭವಾದಾಗ ಅದಕ್ಕೆ ಬಸವೇಶ್ವರನ ಹೆಸರಿಡುವುದಕ್ಕೆ ತೀವ್ರವಿರೋಧ ವ್ಯಕ್ತವಾಗಿ ಅದು ಸಾಧ್ಯವಾಗದೇ ಹೋಯಿತು. ಇದು ಬಸವಣ್ಣನನ್ನು ನಾವು ಎಷ್ಟು ಸಣ್ಣವನನ್ನು ಮಾಡಿದ್ದೇವೆ ಎಂಬುದಕ್ಕೆ ಸಾಕ್ಷಿ ಇದರಲ್ಲಿ ತಪ್ಪು, ಬಸವಣ್ಣನ ಫೋಟೋವನ್ನು ಎಳೆದು ಹಾಕಿದ ದಲಿತರದಾಗಲೀ, ಹೆಸರಿಡಲು ವಿರೋಧಿಸಿದವರದಾಗಲೀ ಅಲ್ಲ. ಒಂದು ಕಡೆಯಲ್ಲಿ ಧರ್ಮದ ಹೆಸರನ್ನು ಮುಂದೆ ಮಾಡಿ, ಅಧಿಕಾರಕ್ಕಾಗಿ ನಡೆಯುವ ಸ್ವಾರ್ಥದ ರಾಜಕೀಯ ಕಚ್ಚಾಟ, ಇನ್ನೊಂದು ಕಡೆ ದಲಿತೋದ್ಧಾರದ ಕಾರ್ಯವನ್ನು ಕಾಡಿಗಟ್ಟಿ, ತಮ್ಮ ಸಿಂಹಾಸನದ ಸುತ್ತ ಭಕ್ತರನ್ನು ಕಟ್ಟಿ, ಬಸವನ ಹೆಸರು ಹೇಳುತ್ತಲೇ ಧರ್ಮ ಗುರುಗಳು ನಡೆಸುವ ಧಾರ್ಮಿಕ ರಾಜಕೀಯ; ಅಥವಾ ಇದಾವುದೂ ಇಲ್ಲದ ಕೇವಲ ನಿಷ್ಕ್ರಿಯತೆಯ ಸುಖಲೋಲುಪ್ತಿ ಇವು ಬಸವಣ್ಣನನ್ನು ಚಿಕ್ಕವನನ್ನಾಗಿ ಮಾಡಿವೆ.

ಇಷ್ಟಾದರೂ ತೀರಾ ನಿರಾಶರಾಗುವ ಕಾರಣವಿಲ್ಲ. ಶರಣತತ್ವಗಳು ವಸ್ತು ಸಂಗ್ರಹ ಶಾಲೆಯನ್ನು ಸೇರಿ ಪ್ರದರ್ಶನ ಸಾಮಗ್ರಿಯಾಗಿ ಉಳಿಯುವ ಸ್ಥಿತಿ ಇನ್ನೂ ಬಂದಿಲ್ಲ. ಮಹಾ ಸಾಧಕರೂ ಶಿವಯೋಗಿಗಳೂ ಉದ್ದಕ್ಕೂ ಇದನ್ನೊಂದು ಜೀವಂತ ಧರ್ಮವಾಗಿ ಉಳಿಸಿಕೊಂಡು ಬಂದಿದ್ದಾರೆ; ತಮ್ಮ ಬದುಕಿನಿಂದ ಸಮಾಜವನ್ನು ಬೆಳಗಿದ್ದಾರೆ. ಆದರಿಂದ ಅಂತಸ್ಸತ್ವ ಜ್ವಲಂತವಾಗಿದೆ. ಮೇಲೆ ಸ್ವಲ್ಪ ನಿಟ್ಟಕಟ್ಟಿರಬಹುದು, ಆದರಿಂದ ಜ್ಯೋತಿ ಮಂಕಾಗಿರಬಹುದು. ಅದನ್ನು ಕೊಡವಿಹಾಕಿದರೆ ಜ್ಯೋತಿ ಮತ್ತೆ ಬೆಳಗುವುದು ಕಷ್ಟ ವೇನೂ ಅಲ್ಲ. ಆದನ್ನು ನಮ್ಮ ಕೆಲವು ಮಠಗಳು ಪರಿಣಾಮಕಾರಿಯಾಗಿಯೇ ಮಾಡು ತ್ತಿವೆ. ಆಧುನಿಕ ಪರಿಸರಕ್ಕೆ ಅನುಗುಣವಾಗಿ ಅವು ವಿದ್ಯಾಭ್ಯಾಸಕ್ಕೆ ಹೆಚ್ಚು ಗಮನ ಕೊಟ್ಟಿವೆ. ಒಂದು ದೃಷ್ಟಿಯಿಂದ ಅದು ಅಗತ್ಯವೂ ಹೌದು. ಆದರೆ ಅದೇ ಪರಮ ಪರ್ಯವಸಾಯಿ ಆಗಬಾರದು. ಮಠಗಳೇ ಮಾಡಬೇಕಾದ ಮತ್ತು ಯಾವ ಸರ್ಕಾರವೂ ಮಾಡಲಾಗದ ಕರ್ತವ್ಯವೊಂದುಂಟು. ಅದು ಜನಜೀವನದ ಅಂತರಂಗವನ್ನು ಮುಟ್ಟುವ ರಚನಾತ್ಮಕ ಕಾರ್ಯವಲಯಕ್ಕೆ ಸೇರಿದುದು. ಅದನ್ನು ನಮ್ಮ ಮಠಗಳು ಕೈಗೆತ್ತಿಕೊಳ್ಳ ಬೇಕಾಗಿದೆ.

ಆಧುನಿಕ ಜಗತ್ತಿನ, ಅಷ್ಟೇ ಅಲ್ಲ ಮುಂದೆ ಬರುವ ೨೧ನೇ ಶತಮಾನದ ಎಲ್ಲ ಸವಾಲುಗಳನ್ನು ಎದುರಿಸುವ ಶಕ್ತಿಯನ್ನು ಶರಣತತ್ವ ಪಡೆದಿದೆ. ಅಂದಿಗೆ ಬಸವತತ್ವ ಗಳು ಕ್ರಾಂತಿಕಾರಕವಾಗಿ ಕಂಡುವು. ಜಾತಿ ವರ್ಣಗಳನ್ನು ನಿರಾಕರಿಸಿದ ಆತನ ಸರ್ವಸಮತಾ ದೃಷ್ಟಿ ಅಂದು ಧರ್ಮದ್ರೋಹವಾಗಿ ಕಂಡಿತು. ಅದೇ ಇಂದು ಅತಿ ಪ್ರಿಯವಾದ ಮೌಲ್ಯ ವಾಗಿದೆ. ಅದನ್ನು ಸಾಧಿಸುವಲ್ಲಿ ಇಂದೂ ಪೂರ್ಣ ಯಶಸ್ಸು ಲಭಿಸದೆ ಇರಬಹುದು. ಆದರೆ ಅದನ್ನು ತಾತ್ವಿಕವಾಗಿಯಾದರೂ ಒಪ್ಪಿಕೊಂಡಿದ್ದೇವೆ. ಆ ಮೌಲ್ಯಕ್ಕಾಗಿಯೇ ಅಂದು ಪ್ರಾಣತೆತ್ತ ಬಸವಣ್ಣ ಇಂದು ಮಹೋನ್ನತ ಶಕ್ತಿಯಾಗಿ ಹೊಳೆಯುತ್ತಾನೆ. ಪಟ್ಟಭದ್ರಹಿತಾಸಕ್ತಿಗಳ ಗದಾಪ್ರಹಾರಕ್ಕೆ ಅಂದು ತತ್ವಗಳು ಗುರಿಯಾಗಿ ಕುಸಿದು ಬಿದ್ದಾಗ, ಚೆನ್ನಬಸವಣ್ಣನ ನೇತೃತ್ವದಲ್ಲಿ ಶರಣರು ಆದನ್ನು ಉಳಿಸಲು ಹೋರಾಡಿದರು. ನಾಡಿನ ನಾನಾ ಭಾಗಗಳಿಗೆ ಹರಡಿದರು. ಉಳವಿಯುವರೆಗೂ ಅದನ್ನು ತಂದು ಉಳಿಸಿದರು. ಆದರೆ ಅದು ಉಳವಿಯಲ್ಲಿ ಉಳಿದರೆ ಸಾಲದು; ಜನರ ಮನದಲ್ಲಿ ಜೀವಂತವಾಗಿ ಉಳಿಯು ವಂತಾಗಬೇಕೆಂಬುದು ಅವರ ಆಶಯವಾಗಿತ್ತು. ೧೫-೧೬ನೇ ಶತಮಾನಗಳಲ್ಲಿ ಒಂದು ರೀತಿಯಲ್ಲಿ ಅದು ಸಾಧಿತವಾಯಿತು. ಅದರ ದೌರ್ಬಲ್ಯಗಳೇನೇ ಇದ್ದರೂ ಆ ತತ್ವ ಗಳನ್ನೆಲ್ಲಾ ಕ್ರೋಢೀಕರಿಸಿ ವ್ಯವಸ್ಥೆಗೊಳಿಸಿದ ಹಿರಿಮೆ ಆ ಯುಗದ ಸಾಧಕರಿಗೆ ಸಲ್ಲಬೇಕು.

ಇಂದು ಅದು ಮತ್ತೊಮ್ಮೆ ಹೊಸ ಚೈತನ್ಯವನ್ನು ಪಡೆದು ಮುಂದೆ ನಡೆಯು ಬೇಕಾಗಿದೆ; ಇಂದಿನ ಜಾಗತಿಕ ಪರಿಸರದ ಹಿನ್ನೆಲೆಯಲ್ಲಿ ಕಲ್ಯಾಣ ಕ್ರಾಂತಿಯ ಮಹತ್ವವನ್ನು ಕಂಡುಕೊಳ್ಳಬೇಕಾಗಿದೆ. ಒಂದು ಕಡೆಯಲ್ಲಿ ಮಠಗಳು, ಇನ್ನೊಂದು ಕಡೆಯಲ್ಲಿ ಬಸವ

ಸಮಿತಿಯಂತಹ ಸಂಸ್ಥೆಗಳು ಅಂತೆಯೇ ಬಸವತತ್ವ ಪ್ರಚಾರಕರೂ ಪಂಡಿತರೂ ಲೇಖಕರೂ ವಿಚಾರವಾದಿಗಳೂ ನಿರ್ವಹಿಸಬೇಕಾದ ಪಾತ್ರ ಮಹತ್ತರವಾಗಿದೆ. ಬಸವನ ಹೆಸರಿನಲ್ಲಿ ವ್ಯಕ್ತಿಪ್ರತಿಷ್ಠೆಯನ್ನು ಬೆಳಸಿಕೊಳ್ಳುವ ಬುದ್ಧಿವಂತಿಕೆಯಿಂದ ಯಾವ ಸಾರ್ಥಕ ಕೆಲಸವೂ ಆಗುವುದಿಲ್ಲ. ಬಸವ ಇಂದು ಚಲಾವಣೆಯಲ್ಲಿರುವ ನಾಣ್ಯವಾಗಿರುವುದರಿಂದ ಆತನನ್ನು ಶೋಷಣೆಯ ಮಾಧ್ಯಮವನ್ನಾಗಿ ಬಳಸಿಕೊಳ್ಳುವ ಪ್ರದರ್ಶನ ಅದಾಗಬಹುದು. ಇದರಿಂದ ದೇಶವನ್ನೇ ಹರಾಜು ಹಾಕುವ ರಾಜಕೀಯದ ಜೊತೆಗೆ ಧರ್ಮದ ಮಾರುಕಟ್ಟೆಯೂ ಸೇರಿದಂತಾಗುತ್ತದೆ. ಇಂದು ನಮಗೆ ಬೇಕಾದುದು ಈ ಬಗೆಯ ಅಬ್ಬರದ ಅಹಂಕಾರದ ಪ್ರವಚನ ಪ್ರಚಾರವಲ್ಲ. ಜನತೆಗಾಗಿ ತಮ್ಮನ್ನು ಅರ್ಪಿಸಿಕೊಳ್ಳುವ, ಮನೆ ಮನೆಗಳಿಗೆ ಬೆಳಕನ್ನು ಕೊಂಡೊಯ್ಯುವ ನಿರಹಂಕಾರದ ಸಾಧಕ ಚೇತನಗಳುಬೇಕು. ಅದರಿಂದ ವೀರಶೈವದ ಮುಂದಿನ ಉಳಿವು ನಿರ್ಧಾರವಾಗುತ್ತದೆ.

ಈ ಮಹಾ ಕಾರ್ಯಕ್ಕೆ ಅಗತ್ಯವಾದ ಹಿನ್ನೆಲೆಯ ಎಲ್ಲ ಆಕರಗಳೂ ವೀರಶೈವ ಸಮಾಜದಲ್ಲಿವೆ. ಮಠಗಳ ವ್ಯವಸ್ಥೆ ಈ ಸಮಾಜದ ಒಂದು ಶಕ್ತಿಯೂ ಹೌದು; ದೌರ್ಬಲ್ಯವೂ ಹೌದು. ತ್ರಿವಿಧ ದಾಸೋಹ ಸೂತ್ರದಲ್ಲಿ ಗುರು ಮತ್ತು ಜಂಗಮರು ಲಿಂಗ ನಿಷ್ಠೆಯ ರಕ್ಷಕರಾಗಿ ಇಕ್ಕೆಲಗಳಲ್ಲಿ ನಿಲ್ಲುವುದರಿಂದ ಸಹಜವಾಗಿಯೇ ಈ ಉಪಾಸನೆಯ ಮಾರ್ಗದಲ್ಲಿ ಅವರ ಮಹತ್ವ ಕೇಂದ್ರ ಶಕ್ತಿಯಾಯಿತು. ಆದ್ದರಿಂದ ಊರೂರುಗಳಲ್ಲಿ ಹಳ್ಳಿ ಹಳ್ಳಿಗಳಲ್ಲಿ ಮಠಗಳು ಸ್ಥಾಪಿತವಾದವು. ಕರ್ಮಠವಾದ ಸಂಪ್ರದಾಯಗಳನ್ನು ನಿರಾಕರಿಸಿದ ಈ ಧರ್ಮಕ್ಕೆ ಮಠದ ಗುರುಗಳು ದೈನಂದಿನ ಧಾರ್ಮಿಕ, ಸಾಮಾಜಿಕ ಆಚಾರ ವ್ಯವಹಾರಗಳಲ್ಲಿ ಸರ್ವಸಮಾನತೆಯ ಮಾನವ ಮೌಲ್ಯಗಳನ್ನು ಅಳವಡಿಸುವುದು ಅಗತ್ಯವಾಯಿತು. ಈ ದೃಷ್ಟಿಯಿಂದ ಹಲವು ಹಂತಗಳಲ್ಲಿ ಈ ಮಠಗಳ ಕರ್ತವ್ಯ ನಿರ್ವಹಣೆ ನಿರಂತರವಾಗಿ ನಡೆಯಬೇಕಾಗುತ್ತದೆ. ಸಮಷ್ಟಿ ಜನಶಕ್ತಿಯನ್ನು ಸಂಘಟಿಸಿ ಸತ್‌ಪರವಾದ ಕಾಯಕ ನಿಷ್ಠ ಜೀವನದಿಂದ ಅವರ ಶಕ್ತಿಯ ಪೂರ್ಣವಿಕಾಸಕ್ಕೆ ಮಾರ್ಗ ದರ್ಶಕವಾಗಬೇಕಾದುದು ಈ ಮಠಗಳ ಪ್ರಮುಖ ಕರ್ತವ್ಯ. ಅವು ಸಾರ್ವಜನಿಕ ಹಿತದ ರಚನಾತ್ಮಕ ಕಾರ್ಯದಲ್ಲಿ ತೊಡಗುವ ಸ್ವಯಂ ಸೇವಕರನ್ನು ಧಾರ್ಮಿಕ ತಳಹದಿಯ ಮೇಲೆ ತರಬೇತಿಗೊಳಿಸುವ ಕೇಂದ್ರಗಳಾದಾಗ ಇದು ಸಾಧ್ಯವಾಗುತ್ತದೆ. ಅದಕ್ಕೆ ಬದಲಾಗಿ ಅವು ವ್ಯಕ್ತಿ ಪ್ರತಿಷ್ಠೆಯ ಕಣಗಳಾದಾಗ ಸಮಷ್ಟಿ ಹಿತ ಮರೆಯಾಗುತ್ತದೆ. ಸಮಾಜದ ಒಡಕಿಗೆ ಕಾರಣವಾಗಿ ಸ್ಪರ್ಧೆಯ ಸಾಧನವಾಗುತ್ತದೆ ಅಥವಾ ಇನ್ನೊಂದು ಕಡೆಯಲ್ಲಿ ಕೇವಲ ಸಂಪ್ರದಾಯ ಪಾಲನೆಯಲ್ಲಿ ನಿರತವಾದ ನಿಷ್ಕ್ರಿಯೆಯಲ್ಲಿ ಪರ್ಯವಸಾನವಾಗುತ್ತದೆ. ಬಹುಪಾಲು ವೀರಶೈವ ಮಠಗಳ ಸ್ಥಿತಿ ಹೀಗಾಯಿತು. ಆದರೆ ಇದರ ಪ್ರಮುಖವಾದ ಒಂದು ಅಪೂರ್ವ ಸಾಧನೆಯನ್ನು ನಾವು ಮರೆಯುವಂತಿಲ್ಲ. ವೀರಶೈವದ ತಾತ್ವಿಕ ಆದರ್ಶವಾದ ಲಿಂಗಾಂಗ ಸಾಮರಸ್ಯವನ್ನು ವಾಸ್ತವ ಜೀವನದ ಸತ್ಯ ಅನುಭವನ್ನಾಗಿ ಸಾಧಿಸಿ ತೋರಿಸಿದ ಶಿವಯೋಗಿಗಳು ಆಗಾಗ ಆವಿರ್ಭವಿಸಿ ಈ ಮಠಗಳ ಗೌರವನ್ನು ಎತ್ತಿಹಿಡಿದಿ

ದ್ದಾರೆ; ಧರ್ಮವನ್ನು ಜೀವಂತ ಶಕ್ತಿಯಾಗಿ ಉಳಿಸಿದ್ದಾರೆ. ಇದರ ಜೊತೆಗೆ ಆಧುನಿಕ ಯುಗಕ್ಕೆ ಸಂಗತವಾದ ವಿದ್ಯಾಭ್ಯಾಸದ ಹೊಣೆಯನ್ನು ಹೊತ್ತು ಆ ರಂಗದಲ್ಲಿ ಅದ್ಭುತ ಸಾಧನೆಯನ್ನು ಮಾಡಿರುವ, ಮಾಡುತ್ತಿರುವ ಕೆಲವು ಮಠಗಳನ್ನೂ ಹೆಮ್ಮೆಯಿಂದ ಸ್ಮರಿಸಿ ಕೊಳ್ಳಬೇಕಾಗುತ್ತದೆ.

ಆದರೆ ಮಠಗಳ ಈ ಮಹತ್ಕಾರ್ಯಗಳು ಅಲ್ಲಿ ಇಲ್ಲಿ ಅಪವಾದಾತ್ಮಕವೆಂಬಂತಾಗದೆ ಸಹಜ ಕ್ರಿಯೆಯಾಗಬೇಕು. ಮಾನವ ಸ್ವಭಾವ ದೌರ್ಬಲ್ಯದಿಂದ ಸಂಭವಿಸುವ ಕೆಡುಕು ಗಳು ಅಪವಾದಾತ್ಮಕವಾಗಬೇಕೇ ಹೊರತು, ಒಳ್ಳೆಯ ಕೆಲಸಗಳೇ ಅಪವಾದಾತ್ಮಕವಾಗಿ ಬಿಟ್ಟರೆ ಅದು ಸಮಾಜದ ದುರ್ಗತಿ. ವೀರಶೈವದ ಉದಾತ್ತ ತತ್ವಗಳಿಗೆ ಅಂತಹ ದುರ್ಗತಿ ಇಂದು ಉಂಟಾಗಿದೆ. ಇದನ್ನು ನಿವಾರಿಸುವುದಕ್ಕೆ ಬಸವಣ್ಣನಂತಹ ಯುಗ ಪ್ರವರ್ತಕ ಶಕ್ತಿಯೇ ಮತ್ತೆ ಆಗಮಿಸಬೇಕೆಂದು ನಿರೀಕ್ಷಿಸುತ್ತ ಕುಳಿತುಕೊಳ್ಳುವಂತಿಲ್ಲ. ಅಲ್ಲಲ್ಲಿ ಚೆದುರಿರುವ ಶಕ್ತಿಗಳೆಲ್ಲಾ ಒಟ್ಟಾಗಿ ಸಾಮೂಹಿಕ ನಾಯಕತ್ವವನ್ನು ರೂಪಿಸಿ ಕೊಳ್ಳುವ ಅಗತ್ಯ ಇಂದು ಉಂಟಾಗಿದೆ. ಸಮಾಜದ ವಿವಿಧ ಕಾರ್ಯಗಳಲ್ಲಿ ತೊಡಗಿರುವ ಪ್ರಮುಖವಾದ ಶಕ್ತಿಗಳು, ಸಂಘ–ಸಂಸ್ಥೆಗಳು ತಮ್ಮ ಒಳ ವಿಭೇದಗಳನ್ನು ಮರೆತು ತಮ್ಮ ವೈಯಕ್ತಿಕತೆಯಿಂದ ಹಿಂದೆ ಸರಿದು ತತ್ವವನ್ನು ಮುಂದೆ ಮಾಡಿಕೊಂಡು ಬೆಳಕಿನ ಕಿರಣ ಗಳನ್ನು ಹರಡಬೇಕಾಗಿದೆ.

ಇನ್ನೊಂದು ದುರದೃಷ್ಟಕರವಾದ ಅಂಶವೆಂದರೆ ಐತಿಹಾಸಿಕ ಅಸ್ಪಷ್ಟತೆಯಿಂದ ಉಂಟಾದ ತೀವ್ರ ಭಿನ್ನಾಭಿಪ್ರಾಯಗಳು. ಈ ಧರ್ಮದ ಮಹತ್ಸಾಧನೆಯ ಮುಂದೆ ಅವು ಅಷ್ಟು ಮಹತ್ವದವುಗಳೇನೂ ಅಲ್ಲ. ಈ ಮತದ ಸ್ಥಾಪಕರು ಯಾರು ಎಂಬುದರ ಹೋರಾಟಕ್ಕಿಂತ, ಅದ್ಭುತ ಸಾಧನೆಯ ಹಿನ್ನೆಲೆಯನ್ನುಳ್ಳ ಇದು ಇಂದಿನ ಮತ್ತು ಮುಂದಿನ ಜನಾಂಗಕ್ಕೆ ಮಾರ್ಗದರ್ಶಕವಾಗುವಂತೆ ಮಾಡುವ ಹೋರಾಟ ಹೆಚ್ಚು ಮಹತ್ವದ್ದು. ಆದುದರಿಂದ ಹಿಂದಿನದನ್ನು ಕೆದಕುವುದನ್ನು ಬಿಟ್ಟು ಅದರ ಒಳಿತೆಲ್ಲವನ್ನೂ ಅರಗಿಸಿ ಕೊಳ್ಳುವ ಅಂತರ್ ದೃಷ್ಟಿಯನ್ನು ಪಡೆಯಬೇಕಾದುದು ಇಂದು ಸಮಾಜದ ಮುಂಚೂಣಿ ಯಲ್ಲಿರುವ ನೇತಾರರ್, ಪಂಡಿತರ, ಲೇಖಕರ ಸಂಶೋಧಕರ ಕರ್ತವ್ಯವಾಗಿದೆ. ಅನಗತ್ಯ ವಿವಾದಗಳನ್ನು ಬಡಿದೆಬ್ಬಿಸಿ ಜನಸಾಮಾನ್ಯರ ಮನಸ್ಸಿನಲ್ಲಿ ಗೊಂದಲವನ್ನುಂಟು ಮಾಡಿ ಅವರನ್ನು ಹಾದಿ ತಪ್ಪಿಸುವ ಬುದ್ಧಿವಂತಿಕೆಗಿಂತ ಶುದ್ಧ ಜೀವನದಿಂದ ಅವರ ನಡೆನುಡಿ ಯನ್ನು ತಿದ್ದುವುದು ಸಮಾಜಕ್ಕೆ ಕೊಡುವ ಬಹಳ ದೊಡ್ಡ ಕೊಡುಗೆಯಾಗುತ್ತದೆ. ಹಿಂದಿನದನ್ನು ಕುರಿತ ವಿಚಾರಾತ್ಮಕ ಆಲೋಚನೆಯೇ ಅಸಂಗತವೆಂದು ನಾನು ಹೇಳು ವುದಿಲ್ಲ. ಆದರೆ ಅದು ಸಾಮೂಹಿಕ ಅನ್ವೇಷಣೆಯ ರಚನಾತ್ಮಕ ವಿಧಾನವಾಗಬೇಕೇ ಹೊರತು ಸೋಪಜ್ಞತೆಯ ಗೀಳಿನ ವಿಕೃತಿಯಾಗಬಾರದು.

ಈ ಧರ್ಮದ ಪ್ರಾಚೀನ ಇತಿಹಾಸದಂತೆಯೇ ಇದಕ್ಕೆ ಆಧಾರಭೂತವಾದ ಪ್ರಮಾಣ ಗ್ರಂಥಗಳಾವುವೆಂಬ ವಿಚಾರದಲ್ಲೂ ಏಕಾಭಿಪ್ರಾಯವಿಲ್ಲ. ಆದರೆ ಇದನ್ನು

ಸ್ವಲ್ಪ ತೆರೆದ ಮನಸ್ಸಿನ ವಿಚಾರಶೀಲತೆಯಿಂದ ಪರಿಶೀಲಿಸಿದರೆ ಇದೇನೂ ಅಷ್ಟು ದೊಡ್ಡ ಸಮಸ್ಯೆಯಾಗುವುದಿಲ್ಲ. ತನ್ನ ಆಧ್ಯಾತ್ಮಿಕ ಅನುಭವದ ಪರಮ ಪ್ರಮಾಣವನ್ನು ಯಾವುದೇ ಧರ್ಮಗ್ರಂಥಗಳಲ್ಲಿ ಕಾಣದೆ, ಶರಣರ ಸಾಧನೆಯ ಅಂತರ್‌ದರ್ಶನದಲ್ಲಿ ಕಂಡ ವೀರಶೈವ, ಅನುಭಾವವನ್ನೇ ಪರಮ ಪ್ರಮಾಣವನ್ನಾಗಿ ಗ್ರಹಿಸಿತು. ಆ ತಳಹದಿಯ ಮೇಲೆ ಮೂಡಿದ ಶರಣರ ವಚನ ಸಾಹಿತ್ಯವೇ ವೀರಶೈವದ ಪರಮಾಗಮ. ಹಾಗೆಂದ ಮಾತ್ರಕ್ಕೆ ಅದಕ್ಕೆ ಹಿಂದಿನ ಸಂಸ್ಕೃತ ಆಗಮಗಳನ್ನು ಶೈವಸಾಧನೆಯ ಉದ್ಗ್ರಂಥಗಳನ್ನು ಸಾರಾಸಗಟಾಗಿ ನಿರಾಕರಿಸಬೇಕಾಗಿಲ್ಲ. ಯಾವುದೇ ಸತ್ಯವನ್ನು ಆಯಾ ಹಂತಗಳಲ್ಲಿ ನೋಡುತ್ತ ಯಾವೊಂದಕ್ಕೂ ಕಟ್ಟುಬೀಳದೆ ಮುನ್ನಡೆದ ಬಸವಾದಿ ಶರಣರ ವಿಕಾಸಶೀಲಮಾರ್ಗವನ್ನು ಒಪ್ಪಿದ ವೀರಶೈವ ಆ ನೆಲೆಯ ಮೇಲೆ ನಿಂತು ತನ್ನ ಪರಮ ಪ್ರಮಾಣವನ್ನು ಕಂಡುಕೊಳ್ಳಬೇಕೆಂಬುದನ್ನು ಒಪ್ಪಿಕೊಂಡರೆ ಸಾಕು, ಉಳಿದ ಅನಗತ್ಯ ವಿವಾದಗಳ ಸುಳಿಯಲ್ಲಿ ಸುತ್ತದ. ಸಾರ್ವತ್ರಿಕವಾದ ಸಾರ್ವಕಾಲಿಕವಾದ ಆ ಮಾನವೀಯ ಮೌಲ್ಯಗಳನ್ನು ರೂಢಿಸುವುದಕ್ಕೆ ಅದು ಸಹಾಯಕವಾಗುತ್ತದೆ. ಇದು ವೀರಶೈವದ ಮುಂದಿನ ಹೆಜ್ಜೆಗೆ ಅನಿವಾರ್ಯವಾದ ತುರ್ತು ಅಗತ್ಯವಾಗಿದೆ.

ಇಂದಿನ ವೈಜ್ಞಾನಿಕ ದೃಷ್ಟಿ ಹೆಚ್ಚು ಹೆಚ್ಚಾಗಿ ಬೆಳೆಯುತ್ತಾ ಬಂದಂತೆ ಮುಂದಿನ ಜಗತ್ತಿನಲ್ಲಿ ಧರ್ಮ ಅಂತರ್ಮುಖವಾಗುತ್ತಾ ಹೋಗುವುದು ಅನಿವಾರ್ಯವಾಗುತ್ತದೆ. ಆದರೆ ಇಂದಿನ ಪರಿಸ್ಥಿತಿಯನ್ನು ಕಾಣುತ್ತಿರುವವರಿಗೆ ಈ ವಿಚಾರದಲ್ಲಿ ಒಂದು ರೀತಿಯ ಸಂದೇಹವೂ ಉಂಟಾಗಬಹುದು. ಇಂದೂ ಸಹ ದೇವರನ್ನು ಗುಡಿಗುಂಡಾರಗಳಲ್ಲಿ ಹುಡುಕುವವರ ಸಂಖ್ಯೆ ದಿನದಿನಕ್ಕೆ ಹೆಚ್ಚುತ್ತಲೇ ಇದೆ. ತಿರುಪತಿ ತಿಮ್ಮಪ್ಪ ಹೆಚ್ಚು ಹೆಚ್ಚು ಶ್ರೀಮಂತನಾಗುತ್ತಿದ್ದಾನೆ; ಅವನೊಡನೆ ಸ್ಪರ್ಧಿಸುವ ಅಯ್ಯಪ್ಪನಂತಹ ಹೊಸ ಹೊಸ ದೇವರುಗಳು ಹುಟ್ಟಿ ಜನಪ್ರಿಯವಾಗುತ್ತಲೇ ಇವೆ. ತ್ರಿವೇಣಿ ಸಂಗಮದಲ್ಲಿ ತುಳಿಸಿಕೊಳ್ಳುವ ಪುಣ್ಯ ಸಾಲದೆಂದು ಬೇರೆ ಬೇರೆ ಸಂಗಮಗಳು ಬೆಳೆಯುತ್ತಿವೆ; ಚಂಡಿ ಹೋಮಗಳೂ, ಶಾಂತಿ ಯಾಗಗಳೂ ಹೊಗೆಯನ್ನುಗುಳುತ್ತಲೇ ಇವೆ. ದೇವರಿಗೆ ಚಿನ್ನದ ರಥಗಳೂ ಮಂಚಗಳೂ ಹೆಚ್ಚುತ್ತಿವೆ. ಸಮಾಜದಲ್ಲಿ ತುಂಬಾ ಪ್ರತಿಷ್ಠಿತರೂ ನೇತಾರರು ನಮ್ಮ ವಿಜ್ಞಾನಿಗಳೂ ಸಹ ಇದರಲ್ಲಿ ಉತ್ಸಾಹದಿಂದ ಭಾಗಿಗಳಾಗುತ್ತಿದ್ದಾರೆ. ಇದನ್ನೆಲ್ಲಾ ನೋಡಿದಾಗ ನನ್ನಲ್ಲೇ ನಾನು ದೇವರನ್ನು ಕಾಣುವ ಇಷ್ಟಲಿಂಗ ದೃಷ್ಟಿ ಉಳಿಯಬಲ್ಲುದೇ ಎಂಬ ಸಂದೇಹ ದಟ್ಟವಾಗಬಹುದು. ಆದರೂ ಈ ಹೊರಗಿನ ಅಲೆಗಳ ಆಂತರ್ಯದಲ್ಲಿ ಇಳಿದು ನೋಡಿದಾಗ ಒಟ್ಟು ಸಮಷ್ಟಿದೃಷ್ಟಿ ವೈಚಾರಿಕತೆಯ ಕಡೆಗೇ ಇರುವುದು ಗೋಚರವಾಗುತ್ತದೆ. ವೈಚಾರಿಕತೆ ನಾಸ್ತಿಕತೆಯೋ ವಿಕೃತಿಯೋ ಆದಾಗ ಪರಂಪರೆಯ ಅಂಧ ಶ್ರದ್ಧೆಗಳು ಇನ್ನೂ ಬಲವಾಗುತ್ತದೆ. ಆದರೆ ವೀರಶೈವ ವೈಚಾರಿಕತೆ ಎಲ್ಲವನ್ನೂ ತಿರಸ್ಕರಿಸುವ ನಾಸ್ತಿಕ ದೃಷ್ಟಿಯೂ ಆಗಿದೆ. ಅಂತೆಯೇ ಎಲ್ಲವನ್ನು ಅಪ್ಪಿಕೊಳ್ಳುವ ಅವಿಚಾರವೂ

ಆಗದೆ ಬುದ್ಧಿಭವಗಳ ಪೂರ್ಣ ವಿಕಾಸದ ಪೂರ್ಣ ದೃಷ್ಟಿಯನ್ನು ಕೊಡುತ್ತದೆ.

ಇದನ್ನು ಸಾಧಿಸಿ ತೋರಿಸುವ ಸಾಧಕರ ವೈಯುಕ್ತಿಕ ಸಾಧನೆ ಬೆಳೆದಷ್ಟು ಇದರ ಶಕ್ತಿ ಬೆಳೆಯುತ್ತದೆ. ಅದು ಪ್ರವಚನದಿಂದ ಬೆಳೆಯುವುದಿಲ್ಲ. ಆಚರಣೆಯಿಂದ ಬೆಳೆಯುತ್ತದೆ. ಇಷ್ಟಲಿಂಗದಂತಹ ನಿರಾಕಾರ ಉಪಾಸನೆಯ ಆತ್ಮವಿಶ್ವಾಸದ ಪರಿಕಲ್ಪನೆ; ಕಾಯಕ ದಾಸೋಹಗಳಂತಹ ಸಾಮಾಜಿಕ ಹಿತ ಸಾಧನೆಯ ಪರಿಭಾವನೆ; ಸರ್ವಸಮಾನತೆಯ ಜಾತ್ಯತೀತ ಸಾಧನೆ–ಇವುಗಳನ್ನು ಯಶಸ್ವಿಯಾಗಿ ಪ್ರಯೋಗಿತ ಮಾರ್ಗದಲ್ಲಿ ಎಂಟು ನೂರು ವರ್ಷಗಳ ಹಿಂದೆಯೇ ಸಿದ್ಧಮಾಡಿ ತೋರಿಸಿದ ಈ ಧರ್ಮ, ಆ ಮೌಲ್ಯಗಳಿಗಾಗಿ ಹಾತೊರೆಯುತ್ತಿರುವ ಇಂದಿನ ಜಗತ್ತಿಗೆ ಮಾರ್ಗದರ್ಶಕವಾಗುವ ಶಕ್ತಿಯನ್ನು ಸಹಜವಾಗಿಯೇ ತನ್ನಲ್ಲಿ ಒಳಗೊಂಡಿದೆ. ಅದನ್ನು ಜೀವನದಲ್ಲಿ ಅನುಷ್ಠಾನಗೊಳಿಸುವುದರ ಮೂಲಕ ಆವಿಷ್ಕರಿಸಿ ತೋರಿಸುವುದರ ಮೇಲೆ ಮುಂದಿನ ವೀರಶೈವದ ಮಹತ್ವ ನಿಂತಿದೆ. ಇದರ ಒಳಗೆ ನುಗ್ಗಿ ಕೊರೆಯುತ್ತಿರುವ ಐತಿಹಾಸಿಕ, ತಾತ್ವಿಕ ಸಾಮಾಜಿಕ, ವಿಭೇದಗಳ ಕಪ್ಪು ಕಲೆಯನ್ನು ಈ ಮಹತ್ಸಾಧನೆಯ ಬೆಳಕಿನಲ್ಲಿ ತೊಳೆದು ಹಾಕಿದರೆ, ಬಸವತತ್ವ ಪೋಷಿತವಾದ ಈ ಧರ್ಮಕ್ಕೆ ಮುಂದಿನ ಜಗತ್ತಿನಲ್ಲಿ ಉಜ್ವಲ ಭವಿಷ್ಯವಿದೆ. ಜಗತ್ತಿನ ಹಲವು ಸಮಸ್ಯೆಗಳ ತಾರಕಶಕ್ತಿಯಾಗಿ ಅದು ಪರಿಣಮಿಸುತ್ತದೆ. ಅಂತಹ ಕ್ರಿಯಾತ್ಮಕ ದರ್ಶನದಿಂದ ರಚನಾತ್ಮಕ ಮಾರ್ಗದಲ್ಲಿ ಈ ಧರ್ಮ ನಡೆಯುವಂತಾಗಲಿ ಎಂದು ಹಾರೈಸಬಹುದಾಗಿದೆ.

●

# ಶೈವ ಧರ್ಮದ ಐತಿಹಾಸಿಕ ಸಮೀಕ್ಷೆ

—ಡಾ. ಬಿ. ಸಿ. ಜವಳಿ

[೧]

ಭಾರತದಲ್ಲಿ ಧರ್ಮಗಳನ್ನು, ದೇವತಾರಾಧನೆಯನ್ನು ಕೇಂದ್ರಬಿಂದುವಾಗಿಟ್ಟುಕೊಂಡು ವಿಭಜಿಸುವುದಾದರೆ, ಶಿವೋಪಾಸಕರನ್ನು ಶೈವರೆಂದೂ, ವಿಷ್ಣು ಉಪಾಸಕರನ್ನು ವೈಷ್ಣವರೆಂದೂ, ಗಣಪತಿ ಉಪಾಸಕರನ್ನು ಗಾಣಪತ್ಯರೆಂದೂ, ಸೂರ್ಯನ ಉಪಾಸಕರನ್ನು ಸೌರರೆಂದೂ, ಶಕ್ತಿಯ ಉಪಾಸಕರನ್ನು ಶಾಕ್ತರೆಂದೂ, ಬ್ರಹ್ಮನ ಉಪಾಸಕರನ್ನು ಬ್ರಹ್ಮರೆಂದೂ, ಜಿನ್ನನ ಉಪಾಸಕರನ್ನು ಜೈನರೆಂದೂ, ಬುದ್ಧನ ಉಪಾಸಕರನ್ನು ಬೌದ್ಧರೆಂದೂ ಕರೆಯಲಾಗುತ್ತದೆ. ಪ್ರಾಚೀನ ಕಾಲದಲ್ಲಿ ಧರ್ಮಗಳ ವಿಂಗಡನೆಗೆ ದೇವರ ಉಪಾಸನೆಯೇ ಮುಖ್ಯ ಆಧಾರವಾಗಿದ್ದು, ಹಲವಾರು ದೇವತೆಗಳನ್ನು ಉಪಾಸಿಸುವವರನ್ನು ಈ ದೇಶದಲ್ಲಿ ನಾವು ಕಾಣುತ್ತೇವೆ. ಶೈವವೈಷ್ಣವಶಾಕ್ತ ಸೌರಗಾಣಪತ್ಯರನ್ನೆಲ್ಲ 'ಹಿಂದು' ಧರ್ಮದಲ್ಲಿಯೇ ಸೇರಿಸಿಕೊಳ್ಳುತ್ತೇವೆ; ಜೈನ, ಬೌದ್ಧರನ್ನು ಪ್ರತ್ಯೇಕ ಧರ್ಮಗಳೆಂದು ಪರಿಗಣಿಸಿದ್ದೇವೆ. ಅದರಂತೆ ಭಾರತದಲ್ಲಿಯೇ ಹುಟ್ಟಿ ಬೆಳೆದ ಶೀಖ ಧರ್ಮವನ್ನೂ ಪ್ರತ್ಯೇಕವಾಗಿ ತೆಗದುಕೊಳ್ಳುತ್ತೇವೆ. ಇಸ್ಲಾಂ ಮತ್ತು ಕ್ರೈಸ್ತರನ್ನೂ ಭಾರತದ ಧರ್ಮಗಳಲ್ಲಿ ಇಂದು ಪರಿಗಣಿಸುತ್ತೇವೆ. ಭಾರತದಲ್ಲಿ ಹಲವಾರು ಜನಾಂಗ, ಬುಡಕಟ್ಟು ಹಾಗೂ ಭಾಷೆಗಳಿಗೆ ಸಂಬಂಧಿಸಿದ ಜನರು ವಾಸಿಸುತ್ತಿರುವುದರಿಂದ, ಹಲವಾರು ರೀತಿಯ ಆಚರಣೆಯಲ್ಲಿ ಭಿನ್ನತೆಗಳು ಸ್ವಾಭಾವಿಕವಾಗಿಯೇ ತಲೆದೋರಿವೆ; ಈ ಭಿನ್ನತೆಯಲ್ಲಿಯೇ ಏಕತೆಯನ್ನು ಕಂಡು ಹಿಡಿಯಲು ಪ್ರಯತ್ನಗಳೂ ನಡೆದಿವೆ. ದೇವರ ಆರಾಧನೆಯಲ್ಲೂ ಬಹು ವಿಧಗಳನ್ನು ಈ ದೇಶದಲ್ಲಿ ಕಾಣುತ್ತೇವೆ. ವೃಕ್ಷಗಳ ಆರಾಧನೆ, ಪ್ರಾಣಿಗಳ ಆರಾಧನೆ, ಪ್ರಕೃತಿಯ ಶಕ್ತಿಗಳ ಆರಾಧನೆ ನಡೆದು, ಕೊನೆಗೆ ದೇವರ ಆರಾಧನೆಗೆ ತೊಡಗಿದಂತಿದೆ. ಧರ್ಮವೆನ್ನುವುದು ಆರಾಧನೆಗೇ ಸಂಬಂಧಿಸಿದುದಾಗಿದೆ. ಋಗ್ವೇದದೊಳಗಿನ ಮುಖ್ಯ ದೇವತೆಗಳನ್ನು ಈ ಕೆಳಗಿನ ಮೂರು ಗುಂಪುಗಳಲ್ಲಿ ವಿಂಗಡಿಸುತ್ತಾರೆ:

I. ಪೃಥ್ವಿಸ್ಥಾನದೇವತೆಗಳು: ಅಗ್ನಿ, ಸೋಮ;

II. ಅಂತರಿಕ್ಷಸ್ಥಾನದೇವತೆಗಳು: ಇಂದ್ರ, ಮರುತ್, ರುದ್ರ, ಪರ್ಜನ್ಯ, ವಾಯು, ಋಭು;

III. ದ್ಯೌ: (ಆಕಾಶ) ಸ್ಥಾನದೇವತೆಗಳು: ವಿಷ್ಣು, ಸೂರ್ಯ, ಸವಿತೃ, ಪೂಷನ್, ಅಶ್ವಿನೀ,;ಉಷಸ್, ಅದಿತಿ, ವರುಣ, ಮಿತ್ರ ಮತ್ತು ಆರ್ಯಮನ್;—

ಇವರಲ್ಲದೆ ಇನ್ನೂ ಅನೇಕ ದೇವತೆಗಳಿರುವರು. ನದಿ, ನೀರು, ಪರ್ವತ ಮತ್ತು ಯಾಗದ ಉಪಕರಣಗಳನ್ನು ದೇವತೆಗಳೆಂದು ಕಲ್ಪಿಸಿ ಪ್ರಾರ್ಥಿಸಿದ್ದಾರೆ.೧ ವೇದದಲ್ಲಿ ವಿಷ್ಣುವಿನ ಸ್ಥಾನ ತೀರ ಸಣ್ಣದು. ಐದಾರು ಸೂಕ್ತಗಳಲ್ಲಿ ಈತನ ವರ್ಣನೆ ಇದೆ. ಅತ್ಯಂತ ಮುಖ್ಯ ದೇವತೆಯೆಂದರೆ ಇಂದ್ರ. ಆದುದರಿಂದ ಇವನಿಗೆ ದೇವೇಂದ್ರನೆಂದೂ ಕರೆಯುತ್ತಾರೆ. ಈತನು ಯುದ್ಧದ ಅಧಿದೇವತೆ. ಪ್ರಕಾಶವನ್ನೂ ನೀರನ್ನೂ ಒದಗಿಸತಕ್ಕವನು. ದಸ್ಯುಗಳನ್ನು ಸೋಲಿಸಿ, ಆರ್ಯರಿಗೆ ಜಯವನ್ನುಂಟು ಮಾಡಿದವನು.೨ ಅವನು ಅತಿ ಭೋಗಿಯೂ ಅಹುದು. ಋಗ್ವೇದದಲ್ಲಿ ದೇವತೆಗಳು ಮೂವತ್ತುಮೂರು ಎಂದು ಹೇಳಲಾಗಿದೆ. ಪ್ರಕೃತಿಯ ಶಕ್ತಿಗಳೇ ಆಕಾರವನ್ನು ಹೊಂದಿ, ಋಗ್ವೇದದ ದೇವತೆಗಳಾಗಿರುವರು. ಋಗ್ವೇದದಲ್ಲಿ ಅಷ್ಟು ಮಹತ್ವದ ಸ್ಥಾನ ಪಡೆಯದ ವಿಷ್ಣು ಮತ್ತು ರುದ್ರರು ಅಥರ್ವವೇದದ ಬ್ರಹ್ಮಾವರ್ತದ ಕಾಲಕ್ಕೆ (ಬ್ರಾಹ್ಮಣಗಳ ಕಾಲಕ್ಕೆ, ಹೆಚ್ಚು ಮಹತ್ವದ ಸ್ಥಾನ ಹೊಂದಿದರು. ಕಾಲಾನುಕ್ರಮದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳು ಸೃಷ್ಟಿ, ಸ್ಥಿತಿ, ಲಯವನ್ನು ಮಾಡುವವರೆಂಬ ಕಲ್ಪನೆ ಬೆಳೆದು ಆ ಕಲ್ಪನೆಯೇ ಪ್ರಾಮುಖ್ಯತೆ ಪಡೆಯಿತು. ಬರಬರುತ್ತ ಬ್ರಹ್ಮದೇವನ ವರ್ಚಸ್ಸೂ ಕಡಿಮೆಯಾಗಿ, ವಿಷ್ಣು ಮಹೇಶ್ವರರೇ (ಶಿವನೇ) ಪ್ರಮುಖ ಪಾತ್ರವಹಿಸಿದರು.೩

ಭಾರತ ದೇಶವು ಸಮ್ಮಿಶ್ರ ಸಂಸ್ಕೃತಿಯ ದೇಶವಾಗಿದೆ. ಇಲ್ಲಿಯ ಮೂಲ ನಿವಾಸಿಗಳು ಯಾರು ಎಂಬುದನ್ನು ನಿರ್ಧರಿಸುವುದು ಇಂದು ಕಠಿಣವಾಗಿದೆ. ಇಲ್ಲಿಯ ಭಾಷೆಗಳು ಹಲವು; ಇಲ್ಲಿಯ ಜಾತಿ ಮತ ಪಂಥಗಳು ಹಲವು; ಇಲ್ಲಿಯ ಜನರ ನಂಬಿಕೆಗಳೂ ಪಲವು. ಈ ಕಾರಣಗಳಿಂದಾಗಿ ಭಾರತೀಯರಲ್ಲಿ ಸಾಮರಸ್ಯ ಬರುವುದು ದುಸ್ತರವಾಗಿದೆ. ಇಲ್ಲಿ ನಿಗ್ರೊ (ನಿಗ್ರಿಟೋ) ಜನಾಂಗದ ಸಂತಾನದವರು ವಾಸಿಸುತ್ತಾರೆ; ಮಂಗೋಲಿಯನ್ನರ ಸಂತಾನದವರು ವಾಸಿಸುತ್ತಾರೆ (ಇವರೇ ಕಿರಾತರೆಂದು ಪ್ರಸಿದ್ಧರಾದವರು); ಮುಂಡಾ ವರ್ಗದವರು ವಾಸಿಸುತ್ತಾರೆ (ಇವರನ್ನೇ ನಿಷಾದರೆಂದು ಕರೆಯುತ್ತಾರೆ); ದ್ರಾವಿಡರು ವಾಸಿಸುತ್ತಾರೆ; ಕೊನೆಗೆ ಭಾರತಕ್ಕೆ ವಲಸೆ ಬಂದ ಆರ್ಯರೂ ವಾಸಿಸುತ್ತಾರೆ. ಹೀಗಾಗಿ ಇಲ್ಲಿಯ ಜನರಲ್ಲಿ ಹಲವು ರೀತಿಯ ಭಾವನೆಗಳು ಪ್ರಚಲಿತವಿದ್ದು, ಹಲವಾರು ದೇವತೆಗಳ ಆರಾಧನೆ ಇಂದಿಗೂ ಪ್ರಚಲಿತವಿದೆ. ನಂತರದ ದಿನಮಾನಗಳಲ್ಲಿ, ಇರಾಣಿಯನ್ನರು, ಗ್ರೀಕರು, ಪರ್ಷಿಯನ್ನರು, ಇಂಗ್ಲೀಷರು ಈ ದೇಶಕ್ಕೆ ಬಂದರು. ಅವರೆಲ್ಲರ ಪ್ರಭಾವಗಳೂ

---

೧ ಕನ್ನಡ ನಾಡಿನ ಚರಿತ್ರೆ–ಭಾಗ ೨ ಪುಟ ೧೫೭; ಲೇಖಕರು ಡಾ. ಎಸ್. ಸಿ. ನಂದೀಮಠ (೧೯೫೭); ಈ ಎರಡನೆಯ ಭಾಗವೇ 'ಕರ್ನಾಟಕದ ಧರ್ಮಗಳು' ಎಂಬ ಹೆಸರಿನಿಂದ ಪ್ರಕಟವಾಗಿದೆ.

೨ ಅದೇ ಪುಟ ೧೫೭.

೩ ಅದೇ ಪುಟ ೧೭೨

ಇಲ್ಲಿಯ ಧರ್ಮ, ದೇವತಾರಾಧನೆಗಳ ಮೇಲೆ ಆಗಿದೆ. ಹಲವು ನಂಬಿಕೆಗಳು ಭಾರತೀಯರಲ್ಲಿದ್ದರೂ ಏಕಾಭಿಪ್ರಾಯದತ್ತ ಅವರು ತೆರಳುತ್ತಲಿದ್ದಾರೆ. ವೈವಿಧ್ಯದಲ್ಲಿಯೂ ಏಕತೆಯನ್ನು ಸಾಧಿಸುವ ಗುರಿಯತ್ತ ನಡೆದಿದ್ದಾರೆ. ಇನ್ನೊಬ್ಬರ ವಿಚಾರವನ್ನು ಸ್ವೀಕರಿಸಿ, ಪ್ರಗತಿಪಥದತ್ತ ಸಾಗಿದ್ದಾರೆ. ಈ ರೀತಿ, ಭಾರತೀಯರ ಬದುಕು ವೈವಿಧ್ಯಮಯವಾಗಿದ್ದರೂ ಮೂಲಧರ್ಮ ಬದಲಾಗಿಲ್ಲ ಎಂದರೆ ಪರಿಪೂರ್ಣತೆ, ದೈವೀ ಅನುಗ್ರಹ ಸಂಪಾದನೆ, ಜಡತ್ವದಿಂದ ದೈವತ್ವಕ್ಕೇರುವುದು, ಜಗತ್ತಿನ ಮೂಲ ಚೇತನ, ಜಗದ ಸುಖ–ದುಃಖಾದಿಗಳಿಗೆ ಕಾರಣ ಹುಡುಕುವುದು, ಸತ್ಯ ಇವೇ ಮೊದಲಾದವು ಭಾರತೀಯರ ಧಾರ್ಮಿಕ ಗುರಿಗಳಾಗಿವೆ. ಹಲವಾರು ಬುಡಕಟ್ಟುಗಳ ಜನರು ಒಂದೆಡೆಯಲ್ಲಿ ವಾಸಿಸಿ, ಸೇರಿ ಬದುಕುವುದು ಅನಿವಾರ್ಯವಾದಾಗ, ಕೆಲವು ಕಾಲ ಘರ್ಷಣೆ ನಡೆದು, ಅವೂ ಒಂದಾಗಿ, ಸಾಮರಸ್ಯದ ಬಾಳಿಗಾಗಿ ಇಲ್ಲಿಯ ಜನತೆ ಹಂಬಲಿಸಿದಾಗ, ಅವರ ದೇವರುಗಳನ್ನು ಇವರು, ಇವರ ದೇವರುಗಳನ್ನು ಅವರು ಪೂಜಿಸುವ ಉಪಕ್ರಮ ಇಲ್ಲಿಯ ನಿವಾಸಿಗಳಿಗೆ ಐತಿಹಾಸಿಕ ಕಾಲದಿಂದಲೇ ನಡೆದು ಬಂದಿದೆ. ನಾನಾ ಜನಾಂಗಗಳ ಮಿಶ್ರಣದಿಂದಲೇ ನಾನಾ ಜಾತಿಗಳು, ನಾನಾ ದೇವರುಗಳು, ಅವರುಗಳಲ್ಲಿ ಪೈಪೋಟಿ ನಡೆದು, ಇವುಗಳಿಂದಲೇ ಭಾರತೀಯರಲ್ಲಿ ಮೇಲು–ಕೀಳು ಭಾವನೆ ಬೆಳೆದಿದೆ. ಈ ಭಾವನೆಗಳನ್ನು ಹೊಡೆದೋಡಿಸಿ, ಜನರಲ್ಲಿ ಸಾಮರಸ್ಯ ಮೂಡಿಸುವುದು ವಿವಿಧ ಧರ್ಮಗಳ ಗುರಿಯಾಗಿದೆ. ಭಾರತದಲ್ಲಿ ಇಂದು ದ್ರಾವಿಡ–ಆರ್ಯರ ಸಂಪರ್ಕದಿಂದ ಅನೇಕ ಮತಗಳು, ವಾದಗಳು, ದೇವತಾರಾಧನೆಗಳು ಉದಯವಾದುವು. ಹೀಗಾಗಿ ಶೈವ–ವೈಷ್ಣವ–ಶಾಕ್ತ ಮೊದಲಾದ ಪಂಥಗಳು ಪ್ರಭಾವಶಾಲಿಗಳಾದವು. ಇಲ್ಲಿಯ ಮತೀಯ ದ್ವೇಷಗಳಿಂದಾಗಿ ಭಾರತೀಯರು ಇಸ್ಲಾಂ, ಕ್ರೈಸ್ತ ಮತಗಳಿಗೆ ಮತಾಂತರಗೊಳ್ಳಲು ಪ್ರಾರಂಭಿಸಿದರು. ಇಂತಹ ಕಾಲದಲ್ಲಿ ನಮ್ಮವೇ ಆದ ಶೈವ ಹಾಗೂ ವೈಷ್ಣವ ಪಂಥಗಳು ಪ್ರಭಾವಯುತವಾಗಿ ತಮ್ಮ ತಮ್ಮ ದೇವತಾ ಶಕ್ತಿಯನ್ನು ಹೆಚ್ಚು ಒತ್ತಿನಿಂದ ಪ್ರಸಾರ ಮಾಡತೊಡಗಿದರು. ಭಾರತ ದೇಶದಲ್ಲಿ ಆಸ್ತಿಕ–ನಾಸ್ತಿಕ ಧರ್ಮಗಳೂ ತಲೆದೋರಿದವು. ಅವುಗಳಲ್ಲಿ ಘರ್ಷಣೆಯುಂಟಾದಾಗ ಆಸ್ತಿಕ ಮತಗಳು ನಾಸ್ತಿಕ ಮತಗಳನ್ನು ಖಂಡಿಸಿ, ತಮ್ಮ ಅಸ್ತಿತ್ವವನ್ನು ಭದ್ರಗೊಳಿಸಿಕೊಂಡವು. ಅಂತಹವುಗಳಲ್ಲಿ ಭಾರತದ ಶೈವ ಧರ್ಮವೂ ಒಂದು.

## [೨]

ಭಾರತದಲ್ಲಿ ಶಿವನನ್ನು ಆರಾಧಿಸುವವರಿಗೆ ಶೈವರೆಂದು ಕರೆಯುತ್ತಾರೆ. ಈ ಶಿವನು ದ್ರಾವಿಡರ ದೇವತೆಯೆಂದೂ ನಂತರದ ಕಾಲದಲ್ಲಿ ಆರ್ಯರಿಂದಲೂ ಸ್ವೀಕರಿಸಲ್ಪಟ್ಟನೆಂದೂ ವಿದ್ವಾಂಸರಲ್ಲಿ ಕೆಲವರು ಅಭಿಪ್ರಾಯ ಪಡುತ್ತಾರೆ. 'ಶಿವ' ಶಬ್ದದ ವ್ಯುತ್ಪತ್ತಿಯನ್ನು ತೃಪ್ತಿಕರವಾಗಿ ಹೇಳುವುದು ಸಾಧ್ಯವಿಲ್ಲ. ಕೆಲವರು ಪಂಡಿತರು ತಮಿಳು ಶಿವಪ್ಪು (ಕೆಂಪು)

ಶಬ್ದದಿಂದ ಬಂದಿರಬಹುದೆಂದು ಊಹಿಸುತ್ತಾರೆ.೪ ಲಿಂಗೈಕ್ಯ ಎಸ್. ಎಸ್. ಬಸವನಾಳ ಅವರು 'ವೀರಶೈವ ತತ್ತ್ವ ಪ್ರಕಾಶ'ದ ಪ್ರಸ್ತಾವನೆಯಲ್ಲಿ ಈ ಶಬ್ದದ ಮೂಲವನ್ನು ಕುರಿತು ಹೀಗೆ ಬರೆದಿದ್ದಾರೆ. 'ಶಿವ' ಶಬ್ದವು 'ಸುಖಕರ' ಎಂಬರ್ಥದಲ್ಲಿ ವೇದಗಳಲ್ಲಿ ದೊರಕುವುದಾದರೂ ದೇವರ ಹೆಸರಾಗಿ ಅಲ್ಲೆಲ್ಲಿಯೂ ಪ್ರಯೋಗವಾಗಿಲ್ಲ. 'ಶಿವ' ಎಂಬುದು 'ದೇವರು' ಎಂಬರ್ಥದಲ್ಲಿ ದ್ರಾವಿಡ ಶಬ್ದವಾಗಿರಬೇಕೆಂದೂ* ಶಿವೋಪಾಸನೆಯು ದ್ರಾವಿಡ ಸಂಸ್ಕೃತಿಯಾಗಿರಬೇಕೆಂದೂ ಪಂಡಿತರು ಅಭಿಪ್ರಾಯ ಪಡುತ್ತಾರೆ. ಕನ್ನಡ 'ಕೆಂಪು' ಎಂಬ ಶಬ್ದದ ತಮಿಳು ರೂಪವಾದ 'ಶಿವಪ್ಪು' ಎಂಬ ಶಬ್ದದಿಂದ 'ಶಿವ' ಎಂಬುದು ಬಂದಿದೆ ಎಂದೂ, ವೇದದಲ್ಲಿ ದೊರೆಯುವ 'ರುದ್ರ' ಶಬ್ದದ ಅರ್ಥವು 'ಕೆಂಪು' ಅಥವಾ 'ಹೊಳೆಯುವ' ಎಂದೇ ಆಗುವುದೆಂದೂ ಹಲವರು ಹೇಳುತ್ತಾರೆಂದು ಬರೆದಿದ್ದಾರೆ.೫ ಡಾ. ಎಸ್. ಸಿ. ನಂದೀಮಠ ಅವರು 'ಕರ್ನಾಟಕದ ಧರ್ಮಗಳು' ಎಂಬ ಕೃತಿಯಲ್ಲಿ ಹೀಗೆ ಹೇಳಿದ್ದಾರೆ:

"ಶಿವನು ಮೂಲದಲ್ಲಿ ಆರ್ಯರ ದೇವತೆಯಲ್ಲ; ಮೂಲ ನಿವಾಸಿಗಳ ದೇವತೆಯೆಂದೂ, ಆರ್ಯರು ಮೂಲ ನಿವಾಸಿಗಳ ಅನೇಕ ವಿಷಯಗಳನ್ನು ತೆಗೆದುಕೊಂಡಂತೆ ಅವರ ದೇವರನ್ನೂ ತೆಗೆದುಕೊಂಡು, 'ರುದ್ರ'ನನ್ನಾಗಿ ವೈದಿಕ ದೇವತೆಗಳಲ್ಲಿ ಸಮಾವೇಶ ಮಾಡಿರಬಹುದೆಂದೂ ಕೆಲ ಪಂಡಿತರು ತರ್ಕಿಸುತ್ತಾರೆ. ಆದರೆ ಈ ಅಭಿಪ್ರಾಯ ಸರಿಯಾದುದಲ್ಲವೆಂದು ತಿರಸ್ಕರಿಸಲ್ಪಟ್ಟಿದೆ"–ಎಂದೂ ಬರೆದಿದ್ದಾರೆ.೬ ಡಾ. ಟಿ. ಬರೋ ಎಂಬ ಶ್ರೇಷ್ಠ ಭಾಷಾ ವಿಜ್ಞಾನಿಯು ಸಹ 'ಶಿವ' ಶಬ್ದವು ದ್ರಾವಿಡರದಲ್ಲವೆಂದು ವಾದಿಸಿದ್ದಾನೆ.೭ ದೇವರಿಗೆ ದ್ರಾವಿಡ ಭಾಷೆಗಳಲ್ಲಿ 'ಶಿವ' ಎಂಬ ಶಬ್ದವಲ್ಲದೆ ಬೇರೆ ಪದಗಳೂ ಇವೆ. ಅವುಗಳಲ್ಲಿ ತಮಿಳಿನ 'ಕೋ' ಎಂಬ ಪದ, ಅಲ್ಲದೆ ದ್ರಾವಿಡ ಭಾಷೆಗಳಿಗೆ ಸಾಮಾನ್ಯ ಪದ 'ಅಪ್ಪನ್' (=ತಂದೆ) ಎಂಬ ಪದವು 'ದೇವರು' ಎಂಬರ್ಥದಲ್ಲಿರುವುದರಿಂದ ಆ ಪದವನ್ನೇ ನಾವು ಇಟ್ಟುಕೊಳ್ಳಬಹುದು. 'ಶಿವ' ಪದಕ್ಕೆ ಇದು ಪರ್ಯಾಯ ಪದವೆಂದು ಇಟ್ಟುಕೊಂಡರೆ ಮುಂದೆ 'ಶಿವ' ಪದವನ್ನೇ ಬಳಸಹತ್ತಿದ ಮೇಲೆ ಅಪ್ಪನ್ ಎಂಬ ಮೂಲ ಈ

---

೪ ಕರ್ನಾಟಕದ ಧರ್ಮಗಳು, ಪುಟ ೧೮೦

* ಮೂಲದ್ರಾವಿಡ ಚಿವಪ್ಪು ಶಬ್ದ ಶಿವಪ್ಪು, ಆಗಿರಬೇಕು.
ಮೂಲದ್ರಾವಿಡ * ಚ > ಶ > ಸ
" * ಚ > ಕ ಆಗಿ ಪರಿವರ್ತನೆಯಾಗುತ್ತದೆ.

೫ ವೀರಶೈವ ತತ್ತ್ವಪ್ರಕಾಶ–ಪ್ರಸ್ತಾವನೆ ಪುಟ ೭, ಸಂಪಾದಕರು : ಶಿ. ಶಿ. ಬಸವನಾಳ, ಎಂ. ಎ., (೧೯೭೫ ರ ದ್ವಿತೀಯ ಮುದ್ರಣ)

೬ ಕರ್ನಾಟಕದ ಧರ್ಮಗಳು, ಪುಟ ೧೮೧.

೭ 'Sanskrit Language' by Dr. T. Burrow.

ದ್ರಾವಿಡ ಪದವೇ ಕಣ್ಮರೆಯಾಗಿರಬೇಕು. ಹೀಗೆ ಅನೇಕ ದ್ರಾವಿಡ ಪದಗಳು ಕಣ್ಮರೆಯಾಗಿ ಅವುಗಳ ಸ್ಥಾನದಲ್ಲಿ ಸಂಸ್ಕೃತ ಪದಗಳ ಬಳಕೆಯೇ ದ್ರಾವಿಡ ಭಾಷೆಗಳಲ್ಲಿ ಪ್ರಚಲಿತವಿರುವುದನ್ನು ಇಂದಿಗೂ ಕಾಣುತ್ತೇವೆ.

ಇಂದು ನಾವು ಲಿಂಗರೂಪದಲ್ಲಿ ಪೂಜಿಸುವ ಶಿವಾರಾಧನೆಯು ಭಾರತದಲ್ಲಿ ಆರ್ಯರಿಗಿಂತಲೂ ಪೂರ್ವದಲ್ಲಿಯೇ ಪ್ರಚಲಿತವಿದ್ದುದಕ್ಕೆ ಆರ್ಯ ಸಾಹಿತ್ಯದಲ್ಲಿ ಉದಾಹರಣೆಗಳು ದೊರೆಯುವುದನ್ನು ಕಾಣುತ್ತೇವೆ. ಉದಾಹರಣೆಗೆ ಮಹಾಭಾರತದಲ್ಲಿ (ಕಿರಾತಾರ್ಜುನೀಯ ಪ್ರಸಂಗದಲ್ಲಿ) ಅರ್ಜುನನು ಪಾಶುಪತಾಸ್ತ್ರವನ್ನು ಪಡೆಯಲು 'ಮಳಲ ಲಿಂಗ' ಪೂಜೆ ಮಾಡಿ ಶಿವನನ್ನು ಒಲಿಸಿಕೊಂಡುದನ್ನು ಕಾಣುತ್ತೇವೆ. ಶಿವಾನುಗ್ರಹವೇ ಅರ್ಜುನನ ಗೆಲುಪಿಗೆ ಕಾರಣವಾಗಿದೆ. ಅದರಂತೆಯೇ ರಾಮನು, ರಾಮಾಯಣದಲ್ಲಿ ರಾಮೇಶ್ವರದಲ್ಲಿ ಲಿಂಗಪೂಜೆಯನ್ನು ಮಾಡಿದುದು ಪ್ರಚಲಿತವಿದೆ. ಅಲ್ಲದೆ ರಾಮ ವೈರಿಯಾದ ರಾವಣನು ಲಿಂಗಪೂಜಕನಾಗಿದ್ದು, ಪರಮ ಶಿವಭಕ್ತನಾಗಿದ್ದನೆಂಬ ವಿಷಯವೂ ತಿಳಿದುಬರುತ್ತದೆ. ಶಿವಾನುಗ್ರಹದ ಬಲದಿಂದ ಪಡೆದ ಶಕ್ತಿಯಿಂದ ಮದೋನ್ಮತ್ತನಾದ ರಾವಣನು, ಒಮ್ಮೆ ಕೈಲಾಸವನ್ನೇ ಎತ್ತಲು ಪ್ರಯತ್ನ ಮಾಡಿದಾಗ* ಶಿವನು ತನ್ನ ಅಂಗುಷ್ಠದಿಂದ ಅದನ್ನು ಒತ್ತಲು. ಅವನು ರಸಾತಲಕ್ಕೆ ಹೋದನೆಂದು ವರ್ಣಿಸುವ ಅನೇಕ ಶಿಲ್ಪಚಿತ್ರಗಳೂ೮ ನೋಡಲು ಸಿಗುತ್ತವೆ; ಅಲ್ಲದೆ ಶಿವಪಾದ ಮಹಿಮೆಯ ಪದ್ಯದಲ್ಲಿ ಶ್ರೀ ನಿಜಗುಣ ಶಿವಯೋಗಿಗಳೂ ಇದನ್ನು ವರ್ಣಿಸಿದ್ದಾರೆ.೯ ಅಲ್ಲದೆ ಮೊಹೇಂಜೋದಾರಾದಲ್ಲಿ ಪ್ರಾಚ್ಯ ವಸ್ತು ಸಂಶೋಧನ ಶಾಖೆಯವರು ಭೂಮಿಯನ್ನು ಅಗೆಯುವಾಗ ದೊರೆತ ಅನೇಕ ವಸ್ತುಗಳಲ್ಲಿ ಯೋಗಮುದ್ರೆಯಿಂದ ಕುಳಿತ ವ್ಯಕ್ತಿಯ ಆಕೃತಿಯ ಬಿಲ್ಲೆಗಳು ಇರುತ್ತವೆ. ಇದು ಸಮಾಧಿಯಲ್ಲಿದ್ದ ಶಿವನ ಚಿತ್ರವೆಂದು ಹೇಳುತ್ತಾರೆ.೧೦ ಅಲ್ಲದೆ ಅಲ್ಲಿ ಶೈವಮತದ ಸ್ಪಷ್ಟ ಕುರುಹುಗಳು–ಮೂರು ಮುಖಗಳುಳ್ಳ ಶಿವ, ಸ್ತಂಭಾಕಾರದ ಲಿಂಗ–ಮುಂತಾದವು ಅಲ್ಲಿ ದೊರಕುತ್ತವೆಯೆಂದೂ ಕಂಡು ಬಂದಿದೆ. ಈ ಹರಪ್ಪ–ಮೊಹೇಂಜೋದಾರೋ ಸಂಸ್ಕೃತಿ, ಕ್ರಿ. ಶ. ಪೂ. ೩೦೦೦ ವರುಷಗಳ ಆಚೆ ಊರ್ಜಿತಾವಸ್ಥೆಯಲ್ಲಿದ್ದುದು ಎಂದು ಲಿಂಗೈಕ್ಯ ಶಿ. ಶಿ. ಬಸವನಾಳ ಅವರು ಅಭಿಪ್ರಾಯ ಪಡುತ್ತಾರೆ. ಆ ಕಾಲದಲ್ಲಿಯೇ ಹಲವು ಸಂಗತಿಗಳಲ್ಲಿ ಶ್ರೇಷ್ಠವಾಗಿದ್ದ ಶೈವ ಸಂಪ್ರದಾಯವನ್ನು ಆರ್ಯರು ಅಂಗೀಕರಿಸಿದ

---

* ರಾವಣಾದಿಗಳು ಶಿವೋಪಾಸಕರಾಗಿದ್ದರೆಂಬುದು ಶಿವೋಪಾಸನೆ ಆರ್ಯರದಲ್ಲವೆಂಬುದನ್ನೇ ಹೇಳುತ್ತದೆ.

೮ ಮುಂಬಯಿಯ ಬಳಿ ಇರುವ ಏಳನೆಯ ಶತಮಾನದ 'ಎಲೆಫಂಟಾಕೇವ್'ದಲ್ಲಿರುವ ಭವ್ಯಚಿತ್ರ.

೯ ಕೈವಲ್ಯ ಪದ್ಧತಿಯ ಶಿವಕಾರುಣ್ಯ ಸ್ಥಲದ ಶಿವಪಾದ ಮಹಿಮೆಯ ಪದ್ಯ.

೧೦ ಕರ್ನಾಟಕದ ಧರ್ಮಗಳು ಪುಟ ೧೮೧

ರೆಂಬುದರಲ್ಲಿ ಸಂದೇಹವಿಲ್ಲವೆಂದೂ ಅವರು ಅಭಿಪ್ರಾಯ ಪಟ್ಟಿದ್ದಾರೆ.[೧೧] ಅವರು, ಮುಂದುವರಿದು, ವೇದದ ಭಯಂಕರನಾದ ರುದ್ರನು, ಶಿವನೊಡನೆ ತಾದಾತ್ಮ್ಯ ಹೊಂದಿ, ರುದ್ರ ಶಿವನಾಗಿರಬೇಕು ಎಂದೂ ತಿಳಿಸಿದ್ದಾರೆ.[೧೨] ಆರ್ಯರು ಭಾರತಕ್ಕೆ ವಲಸೆ ಬರುವ ಪೂರ್ವದಲ್ಲಿಯೇ ದ್ರಾವಿಡರು ಸಮಸ್ತ ಭಾರತವನ್ನು ಎಂದರೆ, ಬಲೂಚಿಸ್ತಾನದಿಂದ ಕನ್ಯಾಕುಮಾರಿಯವರೆಗೂ ವ್ಯಾಪಿಸಿದ್ದರೆಂದು ಇತ್ತೀಚಿನ ಸಂಶೋಧನೆಗಳು ತಿಳಿಸುತ್ತವೆ. ಹೀಗಾಗಿ ಹರಪ್ಪ-ಮೊಹೇಂಜೋದಾರೋ ಸಂಸ್ಕೃತಿಯ ಜನರು ದ್ರಾವಿಡರಿರಬಹುದೆಂದು ಹೇಳಬಹುದಾಗಿದೆ. ಆರ್ಯರು ಭಾರತಕ್ಕೆ ಬಂದ ಮೇಲೆ, ಇಲ್ಲಿ ನಡೆದ ಅನೇಕ ಘರ್ಷಣೆಗಳ ತರುವಾಯ, ಹಲವು ಶತಮಾನಗಳ ಕಾಲಾವದಿಯಲ್ಲಿ ಜರುಗಿದ ಮಾರ್ಪಾಟುಗಳ ಪರಿಣಾಮವಾಗಿ, ಸ್ವತಂತ್ರವಾಗಿದ್ದ ಹಲವು ಶೈವ ಪಂಗಡಗಳು ವೈದಿಕ ಧರ್ಮದ ಭಾಗಗಳಾಗಿ ಅಂಗೀಕೃತವಾದಂತೆ ತೋರುತ್ತದೆ. ಅಲ್ಲದೆ ಮೂಲ ಶೈವರು ವೇದ ಪ್ರಾಮಾಣ್ಯವನ್ನು ಒಪ್ಪಿಕೊಂಡಂತೆಯೂ ಕಂಡು ಬರುತ್ತದೆ. ಬ್ರಾಹ್ಮಣರಿಂದ ಶೂದ್ರರವರೆಗೆ ಶಿವೋಪಾಸಕರು ದೊರೆಯುವುದೇ ಇದಕ್ಕೆ ನಿದರ್ಶನ ಈ ಕಲಬೆರಕೆಯಿಂದ ಶೈವದ ಪರಿಶುದ್ಧತೆಗೆ ಕುಂದುಂಟಾಗಿದೆಯೆಂದು ಕೆಲವರಿಗಾದರೂ ಹೊಳೆದಿರಬೇಕು. ಆದುದರಿಂದ ಶೈವವನ್ನು ಮೇಲ್ಮೆಗೆ ಮುಟ್ಟಿಸಬೇಕೆಂದು ಪ್ರಯತ್ನಿಸಿದ ಪಂಥಗಳಲ್ಲಿ ವೀರಶೈವವೂ ಒಂದು. ಆರ್ಯ-ದ್ರಾವಿಡರ ಸಂಪರ್ಕದಿಂದುಂಟಾದ ಪ್ರಭಾವದಿಂದ ಆರ್ಯರು ದ್ರಾವಿಡರ ಶಿವನನ್ನು ಸ್ವೀಕರಿಸಿದುದರ ಪರಿಣಾಮವಾಗಿ, ಆರಂಭದ ಉಪನಿಷತ್ತುಗಳಲ್ಲಿ, ವೇದದಲ್ಲಿ ಕಾಣದ ಶಿವನ ವಿಚಾರವು 'ಶ್ವೇತಾಶ್ವತರ'ದಲ್ಲಿ ಮೊದಲು ತಲೆದೋರುವುದು ಈ ಮಾತಿಗೆ ಆಧಾರವಾಗಿದೆ. ಹೀಗಿರುವುದರಿಂದ ವೇದದ 'ರುದ್ರ'ನೇ ಮುಂದೆ ಶಿವನಾದನೆಂಬುದಕ್ಕೆ ಬಸವಣ್ಣನವರ ಹಲವಾರು ವಚನಗಳನ್ನು ಉದಾಹರಿಸಲಾಗಿದೆ:

ಅ) "ಶಿವನೇ", "ಏಕೋದೇವ ರುದ್ರನ ದ್ವಿತೀಯ"-ನೆಂದು ನಂಬುವುದು (ಬ. ವ. ೫೨೯);

ಆ) "ಏಕೋದೇವ ರುದ್ರನದ್ವಿತೀಯನೆಂದು-
ಏಕೋ ಹಿ ರುದ್ರೋ ನದ್ವಿತೀಯಾಯ ತಸ್ಥುಃ"-ಎಂದು ನಂಬುವುದು
(ಬ. ವ. ೫೩೧);

ಇ) "ರುದ್ರ, ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜ ಜನನವು;
ಇಂದ್ರ, ಪಾದದಲ್ಲಿ, ಚಂದ್ರ ಮನದಲ್ಲಿ;
ಚಕ್ಷುವಿನಲ್ಲಿ, ಸೂರ್ಯ ಜನನವು;
ಮುಖದಲ್ಲಿ ಅಗ್ನಿಯು, ಪ್ರಾಣದಲ್ಲಿ ವಾಯು;

೧೧ ವೀರಶೈವ ತತ್ತ್ವ ಪ್ರಕಾಶ-ಪುಟ ೮
೧೨ ಅದೇ.

ನಾಭಿಯಲ್ಲಿ ಅಂತರಿಕ್ಷವು.
ಸಿರದಲುದಯ ತೆತ್ತೀಸಕೋಟಿ ದೇವತೆಗಳು;
ಪಾದತಳದಲ್ಲಿ ಭೂಮಿ ಜನನವು.
ಶ್ರೋತ್ರದಲ್ಲಿ ದಶದಿಕ್ಕುವೂ;
ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನಗಣಿತನು;
ಸಾಸಿರ ತಲೆ, ಸಾಸಿರ ಕಣ್ಣು, ಸಾಸಿರ ಕೈ ಸಾಸಿರ ಪಾದ,
ಸಾಸಿರ ಸನ್ನಿಹಿತ ನಮ್ಮ ಕೂಡಲ ಸಂಗಯ್ಯ" –(ಬ. ವ. ೫೩೭)

ಈ) "ವಿಶ್ವಾಧಿಕೋರುದ್ರನ ಹೊಗಳುವ ಶ್ರುತಿಗಳು
'ವಿಶ್ವರೂಪಾಯವೈ ನಮಃ
ಪರತತ್ವನೇ ನಮೋ, ಪದಮರೂಪನೇ ನಮೋ
ಆದಿಯಾರೂಢಭಯಂಕರನೇ ನಮೋ.'
ಎಂದು ಶ್ರುತಿಯು ಸಾರುತಿರಲು ಸಂಹಾರ ಕಾರಣನೇ ನಮೋ"
(ಬ. ವ. ೫೩೭)

ಉ) "ಅಜು ಕೋಟಿ ಬ್ರಹ್ಮರು ಮಡಿವಲ್ಲಿ
ನಾರಾಯಣಂಗೆ ಒಂದು ದಿನವಾಯಿತ್ತು;
ನಾರಾಯಣರೊಂದುಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು;
ರುದ್ರಾವತಾರ ಹಲವಳಿದಲ್ಲಿ ನಮ್ಮ ಕೂಡಲಸಂಗಮದೇವನೇನೆಂದೂ
ಅಜಿಯನು" –(ಬ. ವ. ೫೪೧)

ಊ) "ವಿಷ್ಣು ಕರ್ಮಿ, ರುದ್ರ ನಿಷ್ಕರ್ಮಿ:
ಕ್ರಮವನಜಿಯದೆ ನುಡಿವಿರೊ!
ವಾದವ–ಮಾಡುವರೆಲ್ಲಾ ಕೇಳಿ:
ವಿಷ್ಣು ನಾನಾ ಯೋನಿಯಲ್ಲಿ ಬಾರದ ಭವಂಗಳಲ್ಲಿ ಬರುತಿಪ್ಪ:
ರುದ್ರನಾವ ಯೋನಿಯಲ್ಲಿ ಬಂದನೆಂದು ನೀವು ಹೇಳಿರೋ
......................................" (ಬ. ವ. [illegible])

ಇತ್ಯಾದಿ ಹಲವು ವಚನಗಳಲ್ಲಿ, ರುದ್ರನೇ ಶಿವ ರುದ್ರನೇ ಕೂಡಲಸಂಗಮದೇವ; ಅವನೇ ಹರ, ಸಂಹಾರ ಕಾರಣನು; ಅವನೇ ಪರತತ್ವ, ದೇವೋತ್ತಮ–ಎಂಬ ಭಾವ ಬಂದಿರುವುದನ್ನು ಬಸವಣ್ಣನವರು ಹಲವಾರು ವಚನಗಳಲ್ಲಿ ಶಿವಮಹಿಮೆಯೇ ರುದ್ರ ಮಹಿಮೆ ಎಂಬುದನ್ನೂ ಎತ್ತಿತೋರಿಸಿದ್ದಾರೆ; ಆ ರುದ್ರನೇ ವೀರಭದ್ರ; ದಕ್ಷಯಜ್ಞವ ಧ್ವಂಸ ಮಾಡಿದವ–ಎಂದೂ ಎರಡು ವಚನಗಳಲ್ಲಿ (ಬ. ವ. [illegible]) [illegible]

ದಿದ್ದಾರೆ.[೧೩] ಹೀಗೆ ಬಸವಣ್ಣನವರು, ಶಿವಪಾರಮ್ಯವ (ರುದ್ರಪಾರಮ್ಯ) ಸಾರುವಲ್ಲಿ, ಬ್ರಹ್ಮ, ವಿಷ್ಣು, ಇಂದ್ರ, ಅಗ್ನಿ, ವಾಯು, ಮೊದಲಾದವರು ದೇವರಲ್ಲ; ಅಲ್ಲದೆ ಜಾನಪದರಲ್ಲಿ ವಿಶ್ವಾಸವಿದ್ದ ಗಿಡ, ಮರ, ಮಾರಯ್ಯ, ಬೀರಯ್ಯ ಕೇಚರ, ಗಾವಿಲ, ಅಂತರ, ಬೆಂತರ ಇತ್ಯಾದಿಯೆಲ್ಲ ಶ್ರೇಷ್ಠ ದೈವವಲ್ಲವೆಂಬುದನ್ನೂ ಸಾರಿದ್ದಾರೆ. (ಬ. ವ. ೫೫೬, ೫೫೭) ಪ್ರಾಚೀನರಲ್ಲಿ ಅನೇಕರು ಆರ್ಯೇತರರು ಲಿಂಗವನ್ನು ಪೂಜಿಸಿ ಯತಿಗಳಾಗಿದ್ದರು. ಲಿಂಗಾರ್ಚನೆಯಿಂದ ಶ್ರೇಷ್ಠರಾದ ಅನುಭಾವಿಗಳಾದ ಮಾದರ ಚೆನ್ನಯ್ಯ, ಶ್ವಪಚದೇವ ರಂತಹರು ಬಸವಣ್ಣನವರ ಪೂರ್ವದಲ್ಲಿಯೂ ಇದ್ದರು. ಅವನ ಕಾಲಕ್ಕೆ ಇದ್ದರು. ಅವರನ್ನು ಮನ್ನಿಸದ ಬ್ರಾಹ್ಮಣ ಸಮಾಜಕ್ಕೆ, ಅಂತಹರ ಹಿರಿಮೆಯನ್ನು ತೋರಿಸಿದವನೇ ಶಿವಭಕ್ತೋತ್ತಮನಾದ ಬಸವಣ್ಣ (ಶ್ವಪಚನಾದರೇನು ಲಿಂಗವಿದ್ದವನೇ ಪಾವನ........ (ಬ. ವ. ೬೦೭) ದ್ರಾವಿಡರಲ್ಲಿ, ಹಿಂದೂ ಧರ್ಮದಲ್ಲಿರುವ ಮೇಲು-ಕೀಳು ಭಾವನೆ ಇದ್ದುದು ಗೋಚರಿಸುವುದಿಲ್ಲ. ಜಾತಿ ಭೇದದ ವೈಷಮ್ಯಗಳೂ ಆರ್ಯರು ಭಾರತಕ್ಕೆ ಬಂದು ಬಹು ಕಾಲವಾದ ಮೇಲೆ ಬೆಳೆದಂತಿವೆ. ದ್ರಾವಿಡರಲ್ಲಿ ಸ್ತ್ರೀಯರ ಗೌರವವೂ ಅಧಿಕ ವಾಗಿದ್ದಿತು. ಅವರ ಕೌಟುಂಬಿಕ ವ್ಯವಸ್ಥೆ ಮಾತೃಪ್ರಧಾನವೆಂದು ಹೇಳಲಾಗುತ್ತದೆ. ಶಿವಭಕ್ತರಲ್ಲಿ ಜಾತಿ-ಕುಲವೆಂಬುವು ಇಲ್ಲವೆಂಬುದನ್ನು ಬಸವಣ್ಣನವರು ಈ ಶ್ಲೋಕದಲ್ಲಿ ಹೇಳಿದ್ದಾರೆ:

"ಶಿವೇ ಜಾತ ಕುಲೇ ಧರ್ಮ ಪೂರ್ವ ಜನ್ಮವಿವರ್ಜಿತಃ
ಉಮಾ ಮಾತಾ ಪಿತಾ ರುದ್ರೋ ಈಶ್ವರಃ ಕುಲಮೇವಚ"[೧೪]

ಈ ವಚನದಲ್ಲೂ ಉಮಾ-ರುದ್ರ-ಶಿವ-ಈಶ್ವರ ಈ ಪದಗಳು ಬಂದು, ರುದ್ರನಿಗೂ ಉಮೆಗೂ ಸಂಬಂಧ ಕಲ್ಪಿಸಿದುದನ್ನು ಕಾಣುತ್ತೇವೆ. ರುದ್ರನೇ ಶಿವ, ರುದ್ರನೇ ವೀರಭದ್ರನೆಂಬುದನ್ನೂ ವೀರಭದ್ರನೇ ರುದ್ರನೆಂಬುದನ್ನೂ, ಅವನು ಯಜ್ಞವಿರೋಧಿ ಯೆಂಬುದನ್ನೂ ಬಸವಣ್ಣನವರು ತಿಳಿಸಿದ್ದಾರೆ. ಪುರವಂತರ ಒಡಬಿನಲ್ಲಿ ವೀರಭದ್ರನನ್ನು ಹೊಗಳುವಾಗ, 'ಅಹಹ ರುದ್ರ' ಎಂದು ಎನ್ನುವುದೂ ವಾಡಿಕೆಯಾಗಿ ಬಿಟ್ಟಿದೆ. ಶಿವಭಕ್ತ ರಲ್ಲಿ ಇದು ಬಹುಕಾಲದಿಂದಲೂ ನಡೆದು ಬಂದ ಪರಂಪರೆಯಾಗಿದೆ. ಶಿವನನ್ನು ವೀರಭದ್ರನ ರೂಪದಲ್ಲಿಯೂ ರುದ್ರನ ರೂಪದಲ್ಲಿಯೂ ಆರಾಧಿಸುತ್ತೇವೆ. ವೀರಭದ್ರನ ದೇವಾಲಯಗಳೂ ಈ ಕಾರಣಕ್ಕಾಗಿಯೇ ಕರ್ನಾಟಕದ ತುಂಬೆಲ್ಲ ಇರುವುದು ಗಮನಾರ್ಹ ಸಂಗತಿ. ಈ ಎಲ್ಲ ಅಂಶಗಳು ಶಿವಾರಾಧನೆ ವೇದಗಳಿಗಿಂತಲೂ ಪ್ರಾಚೀನವೆಂಬುದನ್ನು ಹೇಳುತ್ತವೆ.

---

೧೩ ಇಲ್ಲಿಯ ಎಲ್ಲ ವಚನಗಳನ್ನು ಲಿಂ. ಶಿ. ಶಿ. ಬಸವನಾಳರು ಸಂಪಾದಿಸಿದ 'ಬಸವಣ್ಣ ನವರ ಷಟ್‌ಸ್ಥಳದ ವಚನಗಳು' (೧೯೫೧) ಎಂಬ ಗ್ರಂಥದಿಂದ ಆಯ್ದುಕೊಳ್ಳ ಲಾಗಿದೆ.

೧೪ ಬ. ವ. ೭೧೬

[೩]

ನಿರಾಕಾರ ಸ್ವರೂಪಿ ದೇವರನ್ನು ಆರಾಧನೆಗೋಸುಗ ಬೇರೆ ಬೇರೆ ರೀತಿಯಲ್ಲಿ ಸೃಷ್ಟಿಸಿಕೊಂಡಿದ್ದೇವೆ. ಆ ಬೇರೆ ಬೇರೆ ಸೃಷ್ಟಿಗಳು ಶೈವಧರ್ಮದ–ಶಿವಪೂಜೆಯ ವಿವಿಧ ಹಂತಗಳನ್ನು ಇಲ್ಲವೆ ವಿಕಾಸವನ್ನು ಸೂಚಿಸುತ್ತವೆ. ಅವುಗಳಲ್ಲಿ ಪ್ರಮುಖವಾದವು ಗಳೆಂದರೆ:

೧ ಶಿವನನ್ನು ಲಿಂಗರೂಪದಲ್ಲಿ ಆರಾಧಿಸುವುದು;

೨ ಶಿವನನ್ನು ಬೇರೆ ಬೇರೆ ಆಕಾರದಲ್ಲಿ ಆರಾಧಿಸುವುದು;

೩ ಶಿವನನ್ನು, ಸ್ಥಾವರಲಿಂಗದ ಪ್ರತೀಕವೆಂದು ಸ್ಥಾವರ ಲಿಂಗಾಕೃತಿಯ ಚಿಕ್ಕ ಲಿಂಗರೂಪದಲ್ಲಿ (ಇಷ್ಟಲಿಂಗ) ಆರಾಧಿಸುವುದು;

೪ ಶಿವನನ್ನು, ಗೋಳಾಕಾರ ರೂಪದಲ್ಲಿ (ಇಷ್ಟಲಿಂಗದಲ್ಲಿ) ಬ್ರಹ್ಮಾಂಡದ ಆಕಾರದಲ್ಲಿ (ಶಿವಸಂಕೇತವಾಗಿ) ಅಥವಾ ಅರಿವಿನ ಕುರುಹೆಂದು ಪೂಜಿಸುವುದು.

ಹೀಗೆ ಶಿವನನ್ನು ಈ ಬೇರೆ ಬೇರೆ ರೀತಿಗಳಲ್ಲಿ ಆರಾಧಿಸುವವರನ್ನು ಭಾರತದಲ್ಲಿ ಕಾಣುತ್ತೇವೆ. ನಿರಾಕಾರ ಸ್ವರೂಪದ ಈಶ್ವರನಿಗೆ ಲಿಂಗವೆಂದು ಕರೆದರೆ ಸಾಕಾರ ಶಿವನಿಗೆ ಜಂಗಮವೆಂದು ಕರೆದಿದ್ದಾರೆ. ಶಿವನಿಗೆ ಎರಡು ರೂಪಗಳಿದ್ದು ಈ ಲಿಂಗ–ಜಂಗಮಗಳಲ್ಲಿ ಭೇದವಿಲ್ಲವೆಂದು ವಚನ ಸಾಹಿತ್ಯದಲ್ಲಿ ಹೇಳಲಾಗಿದೆ. ಈ ಲಿಂಗಪೂಜೆಯು ಭಾರತದಲ್ಲಿ ಮಾತ್ರವಲ್ಲದೆ ಭಾರತದ ಹೊರಗಡೆಗೂ ಪ್ರಸಾರವಾಗಿದ್ದುದಕ್ಕೆ ಉದಾಹರಣೆಗಳಿವೆ.[೧೫] ಭಾರತದಲ್ಲಿ ದಕ್ಷಿಣಭಾರತದಲ್ಲಿ ಮಾತ್ರವಲ್ಲ, ಕಾಶ್ಮೀರ, ಗುಜರಾತ ಮೊದಲಾದ ಪ್ರದೇಶಗಳಲ್ಲೂ ಇದೆ. ಸಂಸ್ಕೃತದ ಸುಪ್ರಸಿದ್ಧ ಕವಿಗಳಾದ: ಕಾಳಿದಾಸ, ಬಾಣ, ಹಲಾಯುಧ, ಮಲ್ಹಣ, ಭೋಜರಾಜ ಮೊದಲಾದವರು ಪರಮಶಿವಭಕ್ತರು. ಭರತ ಖಂಡದಲ್ಲಿ ಯಂತೂ ಲಿಂಗಪೂಜೆಯು ಬಹು ಪ್ರಾಚೀನವಾದುದು. ದ್ವಾದಶ ಜ್ಯೋತಿರ್ಲಿಂಗಗಳು, ಬೇರೆ ಬೇರೆ ಕಡೆಗೆ ಕಂಡು ಬರುವ ಲಿಂಗಗಳೂ (ಶಿವಲಿಂಗ) ಪ್ರಸಿದ್ಧವಾಗಿವೆ. ಬಸವಣ್ಣನವರು ಒಂದು ವಚನದಲ್ಲಿ ಈ ಲಿಂಗಗಳ ಪ್ರಾಚೀನತೆಯನ್ನು ಕುರಿತು ಹೀಗೆ ಹೇಳಿದ್ದಾರೆ:

"ಕೃತಯುಗದಲ್ಲಿ **ಕೇದಾರ**ವೆಂಬ ಮೂಲಸ್ಥಾನ;<br>
ತ್ರೇತಾಯುಗದಲ್ಲಿ **ವಾರಣಾಸಿ**ಯೆಂಬ ಮೂಲಸ್ಥಾನ;<br>
ದ್ವಾಪಾರದಲ್ಲಿ **ವಿರೂಪಾಕ್ಷ**ನೆಂಬ*ಮೂಲಸ್ಥಾನ;<br>
ಕಲಿಯುಗದಲ್ಲಿ **ಪರ್ವತ**ವೆಂಬ ಮೂಲಸ್ಥಾನ;

---

೧೫ ವೀರಶೈವ ತತ್ತ್ವಪ್ರಕಾಶ, ಪುಟ ೯

* ವಿರೂಪಾಕ್ಷ ಎಂದರೆ ಹಂಪೆಯ ವಿರೂಪಾಕ್ಷನಿರುವುದು ಸಾಧ್ಯ. ಕಾಶಿಯ ವಿಶ್ವನಾಥಲಿಂಗವೂ ಅಷ್ಟೇ ಪುರಾತನ

ನಾನಾಸ್ಥಾನಂಗಳ ಮೆಟ್ಟದೆ ಜಂಗಮವೆ ಲಿಂಗವೆಂದು
ನಂಬಿದೆ ಕೂಡಲಸಂಗಮದೇವಾ."೧೬

ಇಲ್ಲಿ ಬಂದಿರುವ 'ಲಿಂಗ' ಮತ್ತು 'ಮೂಲಸ್ಥಾನ' ಶಬ್ದಗಳು ಲಿಂಗದ ಪುರಾತನತೆಗೆ ಸಾಕ್ಷಿಗಳಾಗಿವೆ. ಕೇದಾರ, ಕಾಶಿ ಉತ್ತರ ಹಿಂದುಸ್ಥಾನದಲ್ಲಿದ್ದರೆ ಪರ್ವತ (ಶ್ರೀಶೈಲ, ಶ್ರೀಗಿರಿ) ವಿರೂಪಾಕ್ಷ ದಕ್ಷಿಣ ಹಿಂದುಸ್ಥಾನದಲ್ಲಿವೆ. ಆದುದರಿಂದ ಶೈವಧರ್ಮ ಇಡೀ ಭಾರತದ ತುಂಬೆಲ್ಲಾ ಪ್ರಚಲಿತವಿತ್ತೆಂಬುದಕ್ಕ ಕೃತಯುಗ, ತ್ರೇತಾಯುಗ, ದ್ವಾಪಾರಯುಗ, ಕಲಿಯುಗಗಳು ಅವುಗಳ ಪ್ರಾಚೀನತೆಯನ್ನು ಕಂಡುಹಿಡಿಯಲೂ ಸಾಧಕಗಳಾಗಿವೆಯೆಂಬುದನ್ನೂ ಈ ವಚನವು ಎತ್ತಿ ತೋರಿಸುತ್ತದೆ. ಇದರಂತೆಯೇ ಗೋಕರ್ಣದ ಮಹಾಬಳೇಶ್ವರಲಿಂಗ, ಗುಜರಾತದ ಸೋಮನಾಥಲಿಂಗ ಇವೆಲ್ಲವೂ ಅತಿ ಪ್ರಾಚೀನವಾದವುಗಳಾಗಿವೆ. ಶೈವಾಗಮುಗಳು, ಶಿವಮಹತ್ವವನ್ನು ಸಾರುವ ಸಂಸ್ಕೃತದಲ್ಲಿರುವ ಪ್ರಾಚೀನ ಗ್ರಂಥಗಳಾದರೆ, 'ತಿರುವುಂದಿಯಾರ್', 'ತಿರುಕ್‌ಕಳಿಟ್ರುಪ್ಪಡಿಯಾರ್' ಮೊದಲಾದುವು ತಮಿಳು ಭಾಷೆಯ ಗ್ರಂಥಗಳು.೧೭ ಆರ್ಯರೂ ಶೈವಧರ್ಮವನ್ನು ಸ್ವೀಕರಿಸಿರುವುದು, ಇಲ್ಲವೆ ದ್ರಾವಿಡರು ಆರ್ಯ ಭಾಷೆ ಸಂಸ್ಕೃತವನ್ನು ಸ್ವೀಕರಿಸಿರುವುದು ಶೈವ ಧರ್ಮದ ಗ್ರಂಥಗಳು ಸಂಸ್ಕೃತದಲ್ಲಿರುವುದಕ್ಕೆ ಸಾಕ್ಷಿ. ಶೈವವು ತಮಿಳಿನಲ್ಲಿ, ಕ್ರಿ. ಶ. ಒಂದನೆಯ ಶತಮಾನದಿಂದಲೇ ಬೆಳೆದು, ಚೇರ, ಪಲ್ಲವ, ಚೋಳರಾಜರ ಕಾಲದಲ್ಲಿ ಪ್ರಸಿದ್ಧಿ ಪಡೆಯಿತು. ಒಂದನೆಯ ಶತಮಾನದಲ್ಲಿಯೇ ಪಾಂಡ್ಯ ದೇಶದಲ್ಲಿ 'ನಕ್ಕಿರ್' ಎನ್ನುವ ಭಕ್ತರ ಗೀತೆಗಳು ಸಿಗುತ್ತವೆ. 'ತಿರುಮೂಲರ್' ಕ್ರಿ. ಶ. ೬ನೆಯ ಶತಮಾನಕ್ಕೆ ಹಿಂದೆ ಇದ್ದವರು.೧೮ 'ತೆಲುಗು' ಎಂಬ ಪದದ ಮೂಲವನ್ನು 'ತ್ರಿಲಿಂಗ' ಎಂಬ ಪದದಲ್ಲಿ ಹುಡುಕಿ, ತೆಲುಗುನಾಡು ತ್ರಿಲಿಂಗಗಳು ಪ್ರಚಲಿತವಿರುವ ಕ್ಷೇತ್ರಗಳ ಮಧ್ಯದ ನಾಡು ಎಂದು ಕೆಲವರು ವಿದ್ವಾಂಸರು ಭಾವಿಸುತ್ತಾರೆ. ಇದು ದಕ್ಷಿಣ ದೇಶದಲ್ಲಿ ಲಿಂಗಪೂಜೆಯ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುವ ಅಂಶವಾಗಿದೆ. ಕಾಶ್ಮೀರದಲ್ಲಿಯೂ ಶೈವಧರ್ಮ ಹಾಗೂ ಶಿವಲಿಂಗಪೂಜೆ ಪ್ರಾರಂಭ ಕಾಲದಿಂದಲೇ ಇವೆ. ಅಲ್ಲಿಯ ಶೈವಧರ್ಮ 'ಕಾಶ್ಮೀರ ಶೈವಧರ್ಮ'ವೆಂದೇ ಪ್ರಸಿದ್ಧವಾಗಿದೆ. ದ್ರಾವಿಡರು ಕೇವಲ ಶಿವನನ್ನು ಮಾತ್ರ ಆರಾಧಿಸುತ್ತಿದ್ದಿಲ್ಲ ಶಕ್ತಿದೇವತೆಯನ್ನು ಆರಾಧಿಸುತ್ತಿದ್ದರು.೧೯ ಈ ಶೈವ ಧರ್ಮದಲ್ಲಿ ಆಚಾರ್ಯರೂ,

---

೧೬ ಬ. ವ. ೩೯೪

೧೭ ಈ ಗ್ರಂಥಗಳೂ ಸಂಸ್ಕೃತ ಗ್ರಂಥಗಳ ನಂತರವೇ ಹೊರಹೊಮ್ಮಿವೆ. (ವೀ. ತ. ಪ್ರ. ಪುಟ ೩)

೧೮ ವೀ. ತ. ಪ್ರ. ಪುಟ ೭. ಶ್ರೀ ಪಿ. ಎಂ. ಸೋಮಸುಂದರನ್ ಅವರ ಲೇಖನ

೧೯ ಶಿವನ 'ಅರ್ಧನಾರೀಶ್ವರ' ಮೂರ್ತಿ ತತ್ವವು, 'ಶಕ್ತಿ' (=ಪಾರ್ವತಿ) ಶಿವನ ಸೃಷ್ಟಿಗೆ ಕಾರಣ, (ಈ ಶಕ್ತಿ) ಎಂಬುದನ್ನು ಸೂಚಿಸುತ್ತದೆ. ಹರೀಶ್ವರ ಕವಿಯು ಬರೆದ 'ಗಿರಿಜಾಕಲ್ಯಾಣ'ವು ಈ ಶಕ್ತಿಯ ಸಾಮರ್ಥ್ಯದ ಕುರು ಹಾಗಿದೆ.→

ಸನ್ಯಾಸಿಗಳೂ-ಗೃಹಸ್ಥರೂ ಇದ್ದಿರುವುದರಿಂದ ಇದು ಬಹು ಜನರ ಅಪೇಕ್ಷೆಗಳನ್ನು ಪೂರೈಸುತ್ತದೆ. ಕಾರಣ ಭಾರತದ ಎಲ್ಲೆಡೆಗೂ ವ್ಯಾಪಿಸಲು ಕಾರಣವಾಯಿತು. ಶೈವ ಧರ್ಮದಲ್ಲಿ ಗೃಹಸ್ಥ ಮತ್ತು ಸನ್ಯಾಸಿ ಇವರಿಬ್ಬರಿಗೆಯೂ ಆಧ್ಯಾತ್ಮಿಕ ಪ್ರಗತಿ ಸಾಧ್ಯವಿರುವಂತೆ ಬುದ್ಧಿ ಹಾಗೂ ಹೃದಯಶುದ್ಧಿಗಳ ಪರಿಪಾಕಕ್ಕೂ ಅವಕಾಶವಿದೆ.

ನಿರಾಕಾರ ಶಿವನನ್ನು ಲಿಂಗಪೂಜೆಯ ರೂಪದಲ್ಲಿ ಆರಾಧಿಸುವ ಪರಿಪಾಠವು ಪ್ರಾಚೀನ ಕಾಲದಿಂದ ಇಂದಿನವರೆಗೂ ನಡೆದು ಬಂದಿದೆ. ಅದರಂತೆಯೇ ಶಿವನನ್ನು ಮೂರ್ತಿ ರೂಪದಲ್ಲಿ ಆರಾಧಿಸುವ ಪರಂಪರೆಯೂ ಬಹು ಹಿಂದಿನ ಕಾಲದಿಂದಲೇ ಬೆಳೆದು ಬಂದಿದೆ, ಶಿವನನ್ನು ಪಂಚಮುಖದ ಈಶ್ವರನೆಂದು ಆರಾಧಿಸುತ್ತಾರೆ: ಅರ್ಧನಾರೀಶ್ವರನೆಂದು ಆರಾಧಿಸುತ್ತಾರೆ; ದಕ್ಷಿಣಾಮೂರ್ತಿ, ನಟರಾಜ, ಭೈರವನೆಂದು ಭಿನ್ನ ಭಿನ್ನ ಆಕಾರದಲ್ಲಿ ಮೂರ್ತಿಗಳನ್ನು ಮಾಡಿ ಆರಾಧಿಸುತ್ತಾರೆ. ದೇವರನ್ನು ಈ ರೀತಿ ಮೂರ್ತಿ ರೂಪದಲ್ಲಿ ಆರಾಧಿಸುವ ಪರಂಪರೆ ನಂತರದ ದಿನಮಾನಗಳಲ್ಲಿ ಬೆಳೆದು ಬಂದಂತೆ ತೋರುತ್ತದೆ. ಸಾಮಾನ್ಯವಾಗಿ ಪುರಾಣಗಳ ಕಾಲದಲ್ಲಿ, ಪೌರಾಣಿಕ ಶಿವನ ಮೂರ್ತಿಯ ಚಿತ್ರವು ಈ ರೀತಿ ಇರುತ್ತದೆ.

ನೀಲಕಂಠನೂ, ವ್ಯೋಮಕೇಶನೂ, ಕೃತ್ತಿವಾಸನೂ, ಗಜಚರ್ಮಾಂಬರಧಾರಿಯೂ, ಡಮರುಗ, ತ್ರಿಶೂಲ, ರುಂಡಮಾಲೆ, ಶರೀರದ ಮೇಲೆ ಹಚ್ಚಿದ ಕಾಮದಹನದ ವಿಭೂತಿ, ಸೂರ್ಯ, ಚಂದ್ರ, ಅಗ್ನಿ ನೇತ್ರಗಳುಳ್ಳ (ತ್ರಿನೇತ್ರನೂ, ವಿರೂಪಾಕ್ಷನೂ) ವನೂ, ಸ್ಮಶಾನವಾಸಿಯೂ, ಕೈಲಾಸಪತಿಯೂ, ಭೂತಗಣನಾಯಕನೂ, ಪಂಚವದನ, ದಶಭುಜವುಳ್ಳವನೂ, ನಂದಿವಾಹನನೂ, ಪಾರ್ವತಿ (ದುರ್ಗೆ) ವೀರಭದ್ರ, ಗಣಪತಿ, ಕುಮಾರರೊಡನಿರುವವನೂ, ಸೃಷ್ಟಿ, ಸ್ಥಿತಿ, ಲಯಕರ್ತನೂ ಆಗಿದ್ದಾನೆ. ಅವನು ಶಾಂತನೂ ಅಹುದು, ರುದ್ರನೂ ಅಹುದು; ಯೋಗಿಯೂ ಅಹುದು. ಲೋಕವನ್ನು ಸೃಷ್ಟಿಸಿ, ಸದಾ ಲೋಕ ಕಲ್ಯಾಣದಲ್ಲಿಯೇ ಚಿಂತಿತನಾದವನು-ಎಂಬಿವೇ ಮಾತುಗಳಲ್ಲಿ ಶಿವನ ಚಿತ್ರಣವನ್ನು ಕೊಡಲಾಗುತ್ತದೆ. ಈತನು ಮಂಗಳಕರನಾಗಿರುವುದರಿಂದಲೇ 'ಶಿವ' ನೆಂದೂ, ಹಿತವನ್ನೇ ಮಾಡುವವನಾದುದರಿಂದ 'ಶಂಕರ'ನೆಂದೂ ಕರೆಸಿಕೊಳ್ಳುತ್ತಾನೆ. ಇವನ ಗುಣಾದಿಗಳನ್ನು, ಶಕ್ತಿಯನ್ನು ಕುರಿತು ಕವಿ ಹರಿಹರನು ಹಲವಾರೆಡೆ ತನ್ನ ಕೃತಿ

---

← ಶಿವಶಕ್ತಿಯರು ಬೇರೆಯಲ್ಲ, ಶಿವನ ಒಂದಂಶವೇ ಈ ಶಕ್ತಿ: ಈ ಶಕ್ತಿಯ ಸಹಾಯವಿಲ್ಲದೆ ಸೃಷ್ಟಿ, ಲೋಕಕಲ್ಯಾಣವಾಗದು ಎಂಬ ಭಾವನೆ ಈ ತತ್ವದಲ್ಲಿದೆ. ಈ ಶಕ್ತಿಯ ಆರಾಧಕರೇ 'ಶಾಕ್ತ'ರೆಂದು ಪ್ರಸಿದ್ಧರಾಗಿದ್ದಾರೆ. ಕರ್ನಾಟಕದ 'ಅಮ್ಮ'ನ ಆರಾಧನೆ ಇದರ ಸಂಕೇತವಾಗಿದ್ದು, ನಾನಾ ರೂಪದಲ್ಲಿ ಈ ಶಕ್ತಿ ಪೂಜೆಗೊಳ್ಳುತ್ತಿದ್ದಾಳೆ (ಚಂಡಿ, ಚಾಮುಂಡಿ, ದುರ್ಗಿ, ಮಾರಮ್ಮ, ದುರ್ಗಮ್ಮ, ದ್ಯಾಮವ್ವ ಮೊದಲಾದವು) ಶಾಕ್ತರು ಶೈವದ ಒಂದು ಭಾಗವೇ.

ಗಳಲ್ಲಿ ಹೃದಯಂಗಮವಾಗಿ ಬಣ್ಣಿಸಿದ್ದಾನೆ. ಬಸವಣ್ಣನವರು ಇವರನ್ನು ಕೆಲವು ವಚನಗಳಲ್ಲಿ ಹೀಗೆ ಬಣ್ಣಿಸಿದ್ದಾರೆ.

"ಹೊನ್ನ ಹಾವುಗೆಯ ಮೆಟ್ಟಿದವನ, ಮಿಡಿಮುಟ್ಟಿದ ಕೆಂಜೆಡೆಯವನ,
ಮೈಯಲ್ಲಿ ವಿಭೂತಿಯ ಧರಿಸಿದವನ,
ಕರದಲ್ಲಿ ಕಪಾಲವ ಹಿಡಿದವನ,
ಬಾಣನ ಬಾಗಿಲ ಕಾಯ್ದವನ, ನಂಬಿಗೆ ಕುಂಟಣಿಯಾದವನ,
ಚೋಳಂಗೆ ಹೊನ್ನ ಮಳೆಯ ಕರೆದವನ,
ಎನ್ನ ಮನಕ್ಕೆ ಬಂದವನ, ಸದ್ಭಕ್ತರ ಹೃದಯದಲ್ಲಿಪ್ಪವನ,
ಮಾಡಿದ ಪೂಜೆಯಲೊಪ್ಪುವನ, ಕೂಡಲ ಸಂಗಯ್ಯನೆಂಬವನ"

(ಬ.ವ. ೫೦೩)

ಅವನು 'ಸ್ವಾಮಿ, ಮಹಾದೇವ, ಶಾಶ್ವತ; ಪಶುಪತಿ' (ಇಂತಹನು ಒಬ್ಬನೇ) ಶ್ರುತಿಗಮ್ಯ, ದ್ವಾದಶಾಂತ್ಯನ ಪ್ರತಿಮಹಿಮ, ನಂದಿವಾಹನ; ಸದ್ಯೋಜಾತ; ವಿಶ್ವತೋ ಚಕ್ಷು; ವಿಶ್ವತೋ ಮುಖ; ಸಕಲ ನಿಷ್ಕಲವ ಕೂಡಿಕೊಂಡಿಪ್ಪವ; ಸಕಲ ವಿಸ್ತಾರದ ರೂಪು; ವಿಶ್ವತೋಬಾಹು; ವಿಶ್ವತೋ ಪಾದ; (ಬ್ರಹ್ಮಾಂಡವನ್ನೇ ಉದರದಲ್ಲಿರಿಸಿ ಕೊಂಡವ); ವಿಶ್ವಾಧಿಕ; ಜಗತ್ ಸಂಹಾರಕ;– ಆತನ ಶಕ್ತಿ ಅನುಪಮ.

"ಅದುರಿತು ಪದಾಘಾತದಿಂದ ಧರೆ;
ಬಿದಿರಿದುವು ಮುಕುಟ ತಾಗಿ ತಾರಕೆಗಳು;
ಉದುರಿದವು ಕೈ ತಾಗಿ ಲೋಕಂಗಳೆಲ್ಲಾ;
ಮಹೀಪಾದಾಘಾತಾದ್ ವ್ರಜತಿ ಸಹಸಾ ಸಂಶಯ ಪದಂ;
ಪದಂ ವಿಷ್ಣೋರ್ ಬ್ರಾಮ್ಯಾದ್ ಭುಜಪರಿಘರುಗ್ಣ ಗ್ರಹಗಣಂ
ಮುಹುರ್ ದ್ಯೌರ್ದ್ಯೌಸ್ಥ್ಯಂ ಯಾತ್ಯನಿಭೃತ್ಯಾ ಜಟಾ ತಾಡಿತ ತಟಾ
ಜಗದ್ ರಕ್ಷಾಯೈ ತ್ವಂ ನಟಿಸಿ ನನು ವಾಮೈವ ವಿಭುತಾ
ನಮ್ಮ ಕೂಡಲಸಂಗಮದೇವಾ ನಿಂದು ನಾಟ್ಯವನಾಡೆ" –(ಬ.ವ. ೫೮೦)

ದೇವರುಗಳಲ್ಲಿ ಬ್ರಹ್ಮ, ವಿಷ್ಣು, ರುದ್ರ(ಶಿವ) ಇವರ ಬಣ್ಣಗಳನ್ನು ಹೇಳುವಾಗ ಬಸವಣ್ಣನವರು ಇನ್ನೊಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

"ಒಬ್ಬ **ಕೆಂಚನು**; ಒಬ್ಬ **ಕರಿಕನು**; ಒಬ್ಬ ಶುದ್ಧ **ಧವಳಿತನು**;
ಎಂತಯ್ಯಾ ಲಿಂಗವೇ?
ಒಬ್ಬರಿಗೊಬ್ಬರು ಘನವೆಂಬರು: ಅದೆಂತಯ್ಯಾ?
ಒಬ್ಬರಿಗೊಬ್ಬರು ಹಿರಿದೆಂಬರು, ಎಂತಯ್ಯಾ?

ಬ್ರಹ್ಮಪ್ರಳಯ, ವಿಷ್ಣು ಮರಣ, ಉಂಟು;
ನಮ್ಮ ಕೂಡಲ ಸಂಗಂಗಿಲ್ಲ" –(ಬ.ವ. ೫೪೩)

ಇಲ್ಲಿ ಬ್ರಹ್ಮನ ಬಣ್ಣ ಕೆಂಪು; ವಿಷ್ಣುವಿನ (ಕೃಷ್ಣನ) ಬಣ್ಣ ಕರಿದು; ಶಿವನ ಬಣ್ಣ ಶುದ್ಧ ಬಿಳಿ ಎಂದು ತಿಳಿಸಿದ್ದಾರೆ. ಈ ಶಿವನನ್ನೇ 'ಹರ' (=ಪಾಪ ವಿನಾಶಕ) ಭಕ್ತ ವತ್ಸಲ, ಭಕ್ತರ ಬಂಧು– ಎಂದು ಮೊದಲಾಗಿಯೂ ಕರೆದಿದ್ದಾರೆ. ಇವನೇ 'ದುಷ್ಟ ನಿಗ್ರಹ, ಶಿಷ್ಟ ಪರಿಪಾಲಕ' ಎಂದೂ ಆಡಿದ್ದಾರೆ (ವಚನ ೫೪೮); ಇವನೇ ನಿತ್ಯ,– ಎಂದೂ ಕರಿದಿದ್ದಾರೆ. ಅಂತಹ ಈಶ್ವರನ ಆರಾಧಕರೇ ಶಿವಭಕ್ತರು, ಶೈವರು.

ದೇವತೆಗಳಲ್ಲಿ ಶ್ರೇಷ್ಠನೆಂದು, ಬಸವಣ್ಣನವರು ಶಿವನೊಬ್ಬನನ್ನೇ ದೇವರೆಂದು ವಾದಿಸಿ, ಉಳಿದ ದೇವರುಗಳನ್ನು ತಿರಸ್ಕರಿಸಿದರು. ಅಜ್ಞಾನವನ್ನು ನಾಶಮಾಡಿ' ಆತ್ಮವನ್ನು ಬೆಳಗುವ, ಆತ್ಮಜ್ಞಾನವನ್ನುಂಟು ಮಾಡುವ ಚಿಜ್ಯೋತಿಯಾಗಿದೆ ಈ ಶಿವಲಿಂಗವೆಂದು ಪ್ರತಿಪಾದಿಸಿದರು. ಕಿರುಕುಳ ದೈವವೆಂದು, ಪೂಜಿಸುವ ವಸ್ತುಗಳೆಲ್ಲ ದೇವರಲ್ಲವೆಂದು ತೀರ್ಮಾನಿಸಿದರು. ಈ ಶೈವರ ಶಿವನು ಭಕ್ತರ ಹಿತಕ್ಕಾಗಿ ಚಿಂತಿಸುವವನು; ಭಕ್ತರಿಂದ ನಿರ್ಮಲ ಭಕ್ತಿಯನ್ನಲ್ಲದೆ ಬೇರೆ ಏನನ್ನೂ ಅಪೇಕ್ಷಿಸನು. ಲೋಕದ ಹಿತಕ್ಕಾಗಿ ಹಾಲಾಹಲವನ್ನು ಕುಡಿದ 'ನೀಲಕಂಠ'ನು; ಅತ್ಯಂತ ಸರಳ ಮತ್ತು ನಿರಾಡಂಬರ ವೇಷ ಭೂಷಣವುಳ್ಳವನು; ಉಡುವುದು ಹುಲಿದೊಗಲು; ತೊಡುವುದು ಗಜಚರ್ಮಾಂಬರ; ಕುಳಿತುಕೊಳ್ಳುವುದಕ್ಕೆ ಚಿಗರೆಯ ಚರ್ಮ; ಕೈಯ ತ್ರಿಶೂಲವೇ ಆಯುಧ; ಡಮರುಗವೇ ವಾದ್ಯ; ಹಾವುಗಳೇ ಆಭರಣ; ರುಂಡಮಾಲೆಯೇ ಕೊರಳಹಾರ; ಕಟ್ಟಿದ ಜಡೆ, ಜಡೆಯಲ್ಲಿ ಗಂಗೆ, ಚಂದ್ರವುಳ್ಳವನು; ಸರಳ ನಿರಾಡಂಬರ ದೇವರು; ಬಡವರಿಗೂ ಪ್ರಿಯನಾದವನು; ಅಂತೆಯೇ ಈತ ದೀನ ಬಂಧು; 'ಬಡವರ ಹಿತಕಾರಿ', ಹೀಗಾಗಿ ದೇವತೆಗಳಲ್ಲಿ ಶಿವನ ಸ್ಥಾನ ವಿಶಿಷ್ಟ. ವೈಭವ, ವಿಲಾಸ, ಸಿರಿವಂತಿಕೆಗಳ ಪ್ರತೀಕ ಇವನಲ್ಲ. ಕಾಮಸಂಹಾರಿಯೆಂದು ಕಾಮನನ್ನು ಸುಟ್ಟವ; ಅಸುರರನ್ನು ನಿರ್ಮೂಲನ ಮಾಡುವವ; ಕೆಲವು ಬಾರಿ ಈತನಿಗೆ 'ಬೋಳ್ಯಾ ಶಂಕರ' ಎಂದೂ ಕರೆಯುತ್ತಾರೆ. ಈತನು ಲೀಲಾ ಮೂರ್ತಿ; ಸೃಷ್ಟಿಯೆಲ್ಲ ಆತನ ಲೀಲೆ. ಶಿವ ಪುರಾಣಗಳಲ್ಲಿ ಈತನ ಲೀಲೆಗಳು ಇಪ್ಪತ್ತೈದು ಎಂದು ವರ್ಣಿಸಲಾಗಿದೆ. ಈತನು ಸ್ವಯಂಭು. ಈ ಶಿವನ ಪರಿವಾರವಿದೆಯೆಂದು ಶೈವರು ಹೇಳುತ್ತಾರೆ.

ವೀರಶೈವರು ಗೋಳಾಕಾರದ ಇಷ್ಟಲಿಂಗರೂಪದಲ್ಲಿ ಈ ಶಿವನನ್ನು ಪೂಜಿಸುತ್ತಾರೆ. ಅಂಗದಮೇಲೆ ಸದಾ ಧರಿಸಿ ಕರಸ್ಥಳದಲ್ಲಿಟ್ಟು ಪೂಜಿಸಿದರೆ ಶೈವರು ಜಗುಲಿಯ ಮೇಲೆ, ದೇವಾಲಯದಲ್ಲಿ ಇಲ್ಲವೆ ಎದುರಿಗಿಟ್ಟು ಪೂಜಿಸುತ್ತಾರೆ. ಶೈವ ಧರ್ಮವು ತತ್ವ ಮತ್ತು ಆಚರಣೆಗಳ ವಿಷಯದಲ್ಲಿ 'ಸಾಂಖ್ಯ' ಮತ್ತು 'ಯೋಗ' ದರ್ಶನಗಳನ್ನು ಒಪ್ಪಿಕೊಳ್ಳುತ್ತದೆ.

ಗೌತಮ ಕಣಾದರೂ ಶೈವರೆಂದೇ ತಿಳಿಯಲ್ಪಟ್ಟಿದೆ;೨೦ ದಧೀಚಿ ಮುನಿಯಂತೂ ಪರಮ ಶಿವಭಕ್ತ.

ವೀರಶೈವವು ಶೈವಧರ್ಮದ ಒಂದು ಶಾಖೆ. ಶೈವದ ಅನೇಕ ಸುಧಾರಣಾವಾದಿಗಳ ಅಭಿಪ್ರಾಯಗಳನ್ನೊಳಗೊಂಡು ಪರಿಷ್ಕೃತವಾದ ಧರ್ಮವಿದು. ಇದರಲ್ಲಿ ಶಿವನನ್ನು ಮೂರ್ತಿ ರೂಪದಲ್ಲಿ ಆರಾಧಿಸದೆ ಇಷ್ಟಲಿಂಗದ ರೂಪದಲ್ಲಿ ಆರಾಧಿಸಲಾಗುತ್ತದೆ. ಸತಿ-ಪತಿ ಭಾವದಿಂದ ಈ ಲಿಂಗವೊಂದನ್ನೇ ಆರಾಧಿಸಬೇಕೆಂದು ಕರ್ನಾಟಕದ ಶಿವಶರಣರಮತ. ಶಿವನ ಇತರ ಪರಿವಾರ ದೇವತೆಗಳನ್ನು ಆರಾಧಿಸಬಾರದೆಂದು ಲಿಂಗವಲ್ಲದೆ ಬೇರೆ ಮುದ್ರೆ ಧರಿಸಬಾರದೆಂದೂ ವಚನಕಾರರು ಹೇಳಿದ್ದಾರೆ.೨೧ ಶರೀರದ ಮೇಲೆ ಧರಿಸಿದ ಇಷ್ಟ ಲಿಂಗವು ಶಿವನ ಪ್ರತೀಕವಲ್ಲ; ನಿಷ್ಕಲವಾದ ಶಿವನ ಸಕಲ ರೂಪವು; ಆದುದರಿಂದ ಅದನ್ನೇ ಶಿವನೆಂದು ಅಂಗನು ಆರಾಧಿಸಿ, ಅದರ ಮುಖವಾಗಿಯೇ ಎಲ್ಲ ಅನುಭವವನ್ನು ಪಡೆಯುತ್ತಾನೆ.೨೨ ಶೈವರು ಶಿವನನ್ನು ಮೂರ್ತಿರೂಪದಲ್ಲಿ ಆರಾಧಿಸುವುದಕ್ಕೆ ಮಹತ್ವವಿತ್ತರೆ ವೀರಶೈವರಲ್ಲಿ ಲಿಂಗಪೂಜೆಯ ಜೊತೆಗೆ ಗುರು–ಜಂಗಮಮೂರ್ತಿಗಳ ಆರಾಧನೆ ಮಾಡುವ ಉಪಕ್ರಮವೇರ್ಪಟ್ಟಿದೆ. ಶೈವರ ಮೂರ್ತಿಗಳು ಕಲ್ಲು, ಕಟ್ಟಿಗೆ, ಮಣ್ಣು, ಮೇಣ, ಲೋಹಾದಿಗಳಿಂದ ನಿರ್ಮಿತವಾಗಿದ್ದರೆ, ಇವುಗಳಸ್ಥಳದಲ್ಲಿ ವೀರಶೈವರು ವ್ಯಕ್ತಿಗಳನ್ನೇ ಇರಿಸಿ, ಗುರುಮೂರ್ತಿ, ಜಂಗಮಮೂರ್ತಿ ಎಂದು ಕರೆದಿದ್ದಾರೆ. ಶಿವನನ್ನು ಆರಾಧಿಸಿ, ಶಿವನೇ ತಾನಾದ ವ್ಯಕ್ತಿಯೇ ಜಂಗಮ; ಅವನೇ ಗುರುವಿನಗುರು, ಪರಮಗುರು ಜ್ಞಾನ ಸ್ವರೂಪನು. ಇದರಿಂದಾಗಿ ಮೂರ್ತಿಪೂಜೆ ಹಿಂದೆಬಿದ್ದು ವ್ಯಕ್ತಿ ಗೌರವ ಹೆಚ್ಚಾಯಿತು. ಕಾಣಲಾರದ ಶಿವನನ್ನು ಆರಾಧನೆ ಮಾಡುವುದಕ್ಕಿಂತ ಜ್ಞಾನಿಯಾದ ಶಿವಭಕ್ತನನ್ನು, ಯೋಗಿಯನ್ನು ಆರಾಧಿಸುವುದೇ ಮೇಲಾದುದೆಂದು ವೀರಶೈವ ಶರಣರು ಪ್ರತಿಪಾದಿಸಿದ್ದಾರೆ. ಗುರು-ಜಂಗಮರು ಉಣ್ಣುವ, ಭಕ್ತರು; ಇತ್ತುದನ್ನು ಸ್ವೀಕರಿಸುವ ದೇವರಾದರು. ಇದು, ಶೈವಧರ್ಮದ ವಿಕಾಸದ ಉನ್ನತ ಹಂತವೆಂದು ಹೇಳಬಹುದು. ಗುರುವು ದೀಕ್ಷೆಮಾಡಿ ಲಿಂಗವಿದ್ಯೆಯನ್ನು ಕರುಣಿಸಿರುವುದರಿಂದ, ಜಂಗಮನು ಧರ್ಮಮಾರ್ಗದಲ್ಲಿ ಸದಾ ಎಚ್ಚರಿಸುತ್ತಿರುವವನಾದುದರಿಂದ ಈ ಇಬ್ಬರಿಗೆಯೂ ತನು-ಧನವನ್ನು ಸವೆಸಬೇಕೆಂದಿದ್ದಾರೆ ಬಸವಣ್ಣನವರು.

ಶಿವನನ್ನು ಲಿಂಗರೂಪದಲ್ಲಿ, ಮೂರ್ತಿರೂಪದಲ್ಲಿ ಪೂಜಿಸುವ, ಧ್ಯಾನಿಸುವ ಪದ್ಧತಿಯು ಹೇಗೆ ಬಹು ಪ್ರಾಚೀನಕಾಲದಿಂದ ನಡೆದು ಬಂದಿತ್ತೋ ಹಾಗೆಯೇ ಶೈವರು

---

೨೦ ವೀರಶೈವ ತತ್ತ್ವಪ್ರಕಾಶ, ಪುಟ ೫.

೨೧ ಮಡಿವಾಳ ಮಾಚಿದೇವನ ವಚನ ಮತ್ತು ಚೆನ್ನಬಸವಣ್ಣನ ವಚನಗಳಲ್ಲಿ ಸಾಕಷ್ಟು ಉದಾಹರಣೆಗಳಿವೆ.

೨೨ ವೀರಶೈವ ತತ್ತ್ವಪ್ರಕಾಶ, ಪ್ರಸ್ತಾವನೆ ಪುಟ ೧೯

ಗಳಿಂದಲೂ ಲಿಂಗಧಾರಣವನ್ನು ಮಾಡಿಸಿಕೊಂಡು ಲಿಂಗೋಪಾಸನೆಯನ್ನು ಮಾಡುವ ಸಂಪ್ರದಾಯವೂ ಪ್ರಾಚೀನವಾಗಿರುವುದು. ಈ ವಿಷಯದಲ್ಲಿ ಶಿವಾಗಮಗಳಲ್ಲಿ ಪ್ರಮಾಣಗಳು ದೊರೆಯುವುವಲ್ಲದೆ ವಚನ ವಾಙ್ಮಯದಲ್ಲೂ ದೊರೆಯುತ್ತವೆ. ಇದರಿಂದ ಲಿಂಗಧಾರಣವು ಶೈವಭೇದವಾದ ವೀರಶೈವರಲ್ಲಿಯಲ್ಲದೆ, ಪಾಶುಪತ, ಕಾಳಮುಖ, ಮೊದಲಾದ ಇತರ ಶೈವಭೇದಗಳಲ್ಲಿಯೂ ಇದ್ದಿತೆಂದು ಗೊತ್ತಾಗುವುದು. ಈ ರೀತಿಯಾದ ಲಿಂಗಧಾರಣವು ಮಹಾಭಾರತ ಕಾಲದಲ್ಲಿಯೂ ಇದ್ದಿತೆಂಬುದಕ್ಕೆ ಮಹಾಭಾರತದ ಅನುಶಾಸನ ಪರ್ವದಲ್ಲಿ ಬರುವ 'ಬ್ರಾಹ್ಮಣಂ **ಲಿಂಗಿನಂ** ಚೈವ' –ಎಂದರೆ ತಪಸ್ವಿಯಾಗಿದ್ದಲ್ಲಿ ಬ್ರಾಹ್ಮಣನು, ಲಿಂಗಧಾರಿಯಾಗಲಿ, ಲಿಂಗಧಾರಿಯಾಗದಿರಲಿ, ಉಭಯವಿಧ ಬ್ರಾಹ್ಮಣರೂ ಶ್ರೇಷ್ಠರು ಎಂಬರ್ಥದ ಶ್ಲೋಕಭಾಗವನ್ನು ಲಿಂಗತತ್ತ್ವಜ್ಞರು ಪ್ರಮಾಣವೆಂದು ಹೇಳುತ್ತಿರುವರು ಮತ್ತು ಶಂಕರಾಚಾರ್ಯರ ಕಾಲದಲ್ಲಿಯೂ ಲಿಂಗಧಾರಿಗಳಿದ್ದರೆಂಬುದಕ್ಕೆ 'ಶಂಕರದಿಗ್ವಿಜಯ'ದಲ್ಲಿ ಶಂಕರಾಚಾರ್ಯರು ಲಿಂಗಧಾರಿಗಳಾದ 'ಜಂಗಮ'ರನ್ನು ಸೋಲಿಸಿದರೆಂದು ಹೇಳುವ ಸಂದರ್ಭದಲ್ಲಿ "ಪಾಷಾಣಲಿಂಗಧಾರಿಣಃ ಜಂಗಮಾಃ" ಎಂಬ ವಾಕ್ಯವನ್ನು ಉದಾಹರಿಸುತ್ತಿರುವರು. ಶೈವ ಭೇದಗಳಲ್ಲಿರುವ ಲಿಂಗಧಾರಣ ಸಂಪ್ರದಾಯವು ವರ್ಣಾಶ್ರಮಯುಕ್ತವಾಗಿ ಇದ್ದಿತ್ತೆಂಬುದಕ್ಕೆ ನಿದರ್ಶನಗಳು ದೊರೆಯುತ್ತಿರುವವು. ಆಂಧ್ರದೇಶದಲ್ಲಿರುವ ಆರಾಧ್ಯಬ್ರಾಹ್ಮಣರು ವರ್ಣಸಂಸ್ಕಾರವಾದ ಉಪನಯನವನ್ನು ಮಾಡಿಕೊಂಡು ಯಜ್ಞೋಪವೀತವನ್ನೂ, ಮತ ಸಂಸ್ಕಾರವಾದ ದೀಕ್ಷೆಯನ್ನೂ ಮಾಡಿಕೊಂಡು, ಲಿಂಗವನ್ನೂ ಧರಿಸಿಕೊಳ್ಳುವರು. ಅವರು ತಮ್ಮನ್ನು 'ಲಿಂಗಿ ಬ್ರಾಹ್ಮಣ'; 'ವೀರಶೈವ ಬ್ರಾಹ್ಮಣ' ಎಂದೂ ಕರೆದುಕೊಳ್ಳುವರು.[೨೩] ಅವರು ಇತರ ದ್ವೈತಾದಿ ಮತದವರಂತೆ ವರ್ಣಾಶ್ರಮಗಳೊಡನೆ ಲಿಂಗಧಾರಣ ಮತವನ್ನೂ ಅಂಗೀಕರಿಸಿರುವುದಾಗಿ ತೋರುವುದು. ಲಿಂಗಧಾರಿಗಳಾದ ರಾಜವಂಶದವರು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಂಡಿರುವುದೂ ಧಾರ್ಮಿಕ ಗ್ರಂಥಗಳಿಂದ ಗೊತ್ತಾಗಿರುವುದು. ಇದಕ್ಕೆ ಕ್ಷಾತ್ರತೇಜಸ್ಸಿಲ್ಲದವನು ರಾಜನಾಗಲಾರನೆಂಬ ಶ್ರದ್ಧೆಯೇ ಕಾರಣವೆಂದು ಹೇಳಬಹುದು. ನಗರ್ತರಲ್ಲಿ ಕೆಲವರು 'ವೀರಶೈವ ವೈಶ್ಯ'ರೆಂದು ಕರೆದುಕೊಂಡು ಯಜ್ಞೋಪವೀತವನ್ನೂ ಲಿಂಗವನ್ನು ಧರಿಸುತ್ತಾರೆ. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ– ಈ ಮೂವರೂ ವರ್ಣ ಧರ್ಮದಂತೆ ದ್ವಿಜರಾಗುವದಕ್ಕಾಗಿ, ಯಜ್ಞೋಪವೀತ ಧರಿಸಿಕೊಂಡು ಮತಸಂಸ್ಕಾರದ ಲಿಂಗಧಾರಣ ಮಾಡಿಕೊಳ್ಳುವುದಕ್ಕೆ ಒಪ್ಪಿದಂತೆ ಧಾರ್ಮಿಕ ವಾಙ್ಮಯದಿಂದ ಗೊತ್ತಾಗುವುದು.[೨೪]

---

೨೩ ಬಸವಣ್ಣನ ತಂದೆ ಮಾದರಸನು ಹೀಗೇ ಇದ್ದವನು; ಅವನ ಪೂರ್ವಜರೂ ಹೀಗೆ ಇದ್ದವರು. ಆದರೆ ಬಸವಣ್ಣ ಮಾತ್ರ ಯಜ್ಞೋಪವೀತ ತ್ಯಾಗ ಮಾಡಿದನೆಂದು ಭೀಮ ಕವಿಯ ಬಸವಪುರಾಣವು ತಿಳಿಸುತ್ತದೆ.

೨೪ ಬಸವಣ್ಣನವರ ವೀರಶೈವ ಸಮಾಜ, ಪುಟ ೪–೫; ಲೇ: ಲಿಂ. ಪಂಡಿತ ವಾಯ್. ನಾಗೇಶ ಶಾಸ್ತ್ರಿಗಳು (೧೯೬೨)

ವೀರಶೈವ ಸಂಸ್ಕೃತ ವಾಙ್ಮಯದಲ್ಲಿಯೂ ವರ್ಣಗಳ ವಿಚಾರವು ಬರುತ್ತದೆ. ಆದರೆ ಆ ವರ್ಣಗಳು ಅಪ್ರಾಕೃತ ವರ್ಣಗಳೆಂದು ಉಕ್ತವಾಗಿದೆ–ಎಂದರೆ ವೀರಶೈವರ ಬ್ರಾಹ್ಮಣಾದಿ ವರ್ಣಗಳು ಅಪ್ರಾಕೃತಗಳು. ಇತರ ಬ್ರಾಹ್ಮಣಾದಿ ವರ್ಣಗಳು ಪ್ರಾಕೃತಗಳೆಂದು ತಾತ್ಪರ್ಯ. ವೀರಶೈವರ ಅಪ್ರಾಕೃತ ವರ್ಣಗಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ನಾಲ್ಕೂ ಇರಬೇಕೇ? ಅಪ್ರಾಕೃತ ಬ್ರಾಹ್ಮಣವೊಂದೇ ಸಾಕೇ! ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳುಂಟು. ಕೆಲವರು ನಾಲ್ಕೂ ವರ್ಣಗಳಿರಬೇಕೆಂದು ವಾದಿಸಿದರೆ ಇನ್ನುಳಿದವರು ಬ್ರಾಹ್ಮಣವೊಂದೇ ವೀರಶೈವಕ್ಕೆ ಸಾಕೆಂದು ವಾದಿಸಿರುವರು. ಏಕವರ್ಣವಾದಕ್ಕೆ ಲಿಂಗೈಕ್ಯರಾದ ರಾವ್‌ಸಾಹೇಬ ವಾರದ ಮಲ್ಲಪ್ಪನವರು ಮುದ್ರಿಸಿರುವ 'ಲಿಂಗಿಬ್ರಾಹ್ಮಣ ಗ್ರಂಥಮಾಲೆ'ಯೇ ನಿದರ್ಶನ. ಮೈಸೂರಿನಲ್ಲಿದ್ದ ವೀರಸಂಗಪ್ಪನವರು ಇದೇ ದೃಷ್ಟಿಯಿಂದಲೇ ಗ್ರಂಥಗಳನ್ನು ಮುದ್ರಿಸಿರುವುದು ಕಂಡುಬರುತ್ತದೆ. ಈ ಬಗೆಯ ವರ್ಣವಾದವು ತಲೆಯೆತ್ತುವುದಕ್ಕೆ ಬ್ರಿಟೀಶರ ಕಾಲದಲ್ಲಿದ್ದ 'ಹಿಂದೂ ಲಾ'ದಂತೆ ಕೋರ್ಟುಗಳಲ್ಲಾದ ವರ್ಣಾಶ್ರಮ ಸುಸ್ಕಾರವಿಲ್ಲದವರು ಶೂದ್ರರು; ವರ್ಣಾಶ್ರಮ ರಹಿತರಾದ ವೀರಶೈವರೂ ಶೂದ್ರಪಂಕ್ತಿಯಲ್ಲಿ ಸೇರತಕ್ಕವರೇ–ಎಂಬ ತೀರ್ಮಾನಗಳೇ ಕಾರಣವೆಂದು ವ್ಯಕ್ತವಾಗುತ್ತದೆ. ವರ್ಣವಾದಿಗಳು ಈ ಕಾರಣವನ್ನು ಒಪ್ಪುವುದಿಲ್ಲ. ಅಪ್ರಾಕೃತ ವರ್ಣವನ್ನು ಪ್ರತಿಪಾದಿಸುವ ಗ್ರಂಥಗಳೇ ವರ್ಣವಾದಕ್ಕೆ ಪ್ರಮಾಣವೆಂದು ವಾದಿಸುವರು.[೨೪] ಹೀಗೆ ಲಿಂಗಧಾರಿಗಳಲ್ಲಿಯೂ ಏಕರೂಪತೆ ಇಲ್ಲದೆ, ವರ್ಣಾಶ್ರಮ ಪದ್ಧತಿಯ ಜಾತಿಪಾಲನೆ ಇದ್ದುದೂ ಗೊತ್ತಾಗುತ್ತದೆ. ಜ್ಯೋತಿರ್ಲಿಂಗ, ಕ್ಷೇತ್ರಲಿಂಗ, ದೇವಾಲಯದಲಿಂಗ, ಕುಟುಂಬದವರು ಪೂಜಿಸುತ್ತಿದ್ದ ದೇವರ ಜಗುಲಿಯ ಮೇಲಿನ ಲಿಂಗ ಪೂಜಾಪದ್ಧತಿಗಳು ಬೆಳೆದು ಬಂದು, ವ್ಯಕ್ತಿ ಶರೀರದ ಮೇಲೆ ಧರಿಸುವ ಪದ್ಧತಿಯೂ ಬೆಳೆದು ಬಂದಿತು. ಆ ಪದ್ಧತಿ ಬೆಳೆದು ಬಂದ ಮೇಲೂ ಅಲ್ಲಿಯ ಭಿನ್ನ ಭಿನ್ನ ಅಂಶಗಳನ್ನು ಮೇಲೆ ನೋಡಲಾಯಿತು. ಈ ಅರ್ಥದಲ್ಲಿ ಲಿಂಗಧಾರಣ ಪದ್ಧತಿಯು ಶೈವದಲ್ಲಿ ಹುಟ್ಟಿ, ವರ್ಣಾಶ್ರಮ ಪದ್ಧತಿಯೊಳಗೊಂಡು, ವೀರಶೈವ, ಶೈವ ಪದ್ಧತಿಗಳಲ್ಲಿ ಬೆಳೆದು, ವರ್ಣಾಶ್ರಮ ಪದ್ಧತಿಯನ್ನು ತೊರೆದ ಶಿವಶರಣರ ವೀರಶೈವ (ಲಿಂಗಾಯತ) ಧರ್ಮದಲ್ಲಿ ಪರಿಪೂರ್ಣತೆಯನ್ನು ಪಡೆಯಿತು.[೨೫] ವೀರಶೈವದ ದೀಕ್ಷಾಂಗವಾದ ಲಿಂಗಧಾರಣ ಕ್ರಮಕ್ಕೂ ಇತರ ಶೈವರಲ್ಲಾಗುವ ಲಿಂಗಧಾರಣಕ್ಕೂ ಸಿದ್ಧಾಂತ ದೃಷ್ಟಿಯಿಂದ ವಿಶೇಷ ವ್ಯತ್ಯಾಸವಿದೆ. ವರ್ಣಾಶ್ರಮ ಬದ್ಧ ಶೈವರಲ್ಲಿ 'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂಬುಕ್ತಿಗನುಸರಿಸಿ, ಗುರುಶಿಷ್ಯರಲ್ಲಿ ವರ್ಣಭೇದದಿಂದಲೂ ತಾರತಮ್ಯವು ಅಂಗೀಕೃತವಾಗಿದೆ. ಆದುದರಿಂದಲೇ ವರ್ಣಾಶ್ರಮ ಬದ್ಧರಲ್ಲಾಗುವ ಲಿಂಗ

---

೨೪ ಅದೇ ಪುಟ ೭

೨೫ ಅದೇ ಪುಟ ೭

ಧಾರಣವು, ಲಿಂಗಾಂಗಸಾಮರಸ್ಯ ಸಿದ್ಧಾಂತಕ್ಕೆ ಸಾಧಕವಲ್ಲ. ಆದರೆ ಇವರಲ್ಲಿಯೂ ಲಿಂಗಾಂಗಸಾಮರಸ್ಯ ವಿಚಾರವಿದೆ. ಆ ವಿಚಾರವು ಕೇವಲ ವಿಚಾರಕ್ಕೆಯೇ ಮುಗಿದು ಆಚಾರಕ್ಕೆ ದೂರವಾಗಿದೆ. ಅತಿವರ್ಣಾಶ್ರಮದ ವೀರಶೈವರ ಲಿಂಗಾಂಗಸಾಮರಸ್ಯವು, ಅಷ್ಟಾವರಣ ಪೂರಕವಾಗಿಯೇ ಸಿದ್ಧಿಸುತ್ತದೆ. ಅಷ್ಟಾವರಣದಲ್ಲಿ 'ಅಂಗ'ನೆಂದರೆ ಭಕ್ತನು; ಲಿಂಗವೆಂದರೆ ಗುರು–ಲಿಂಗ–ಜಂಗಮವೆಂಬ ತ್ರಿವಿಧ ರೂಪದ ಲಿಂಗವೆಂದರ್ಥ, ಅಂಗಪದ ವಾಚ್ಯನಾದ ಭಕ್ತನಿಗೂ ಗುರುಲಿಂಗ ಜಂಗಮ ರೂಪವಾದ ಲಿಂಗಕ್ಕೂ ಆಗುವ ಅಭೇದ ರೂಪವಾದ ಸಾಮರಸ್ಯವೇ ಅಷ್ಟಾವರಣಕ್ಕೆ ಒಪ್ಪಿಗೆಯಾದ ಲಿಂಗಾಂಗಸಾಮರಸ್ಯ. ಇದು ಕೇವಲ ಜ್ಞಾನಾತ್ಮಕವಲ್ಲ; ಜ್ಞಾನ. ಕ್ರಿಯಾತ್ಮಕವಾದ ಪಾದೋದಕ–ಪ್ರಸಾದ ಕ್ರಿಯೆಯಲ್ಲಿ ಸಿದ್ಧಿಸತಕ್ಕುದಾಗಿದೆ. ಆದುದರಿಂದಲೇ, ಶಿವಶರಣರು ಜ್ಞಾನಕ್ರಿಯಾತ್ಮಕ ಸಾಮರಸ್ಯ ವಿರೋಧಿಯಾದ ವರ್ಣಾಶ್ರಮ ಧರ್ಮಕ್ಕೆ ಮಿಗಿಲಾದ ಅತಿವರ್ಣಾಶ್ರಮ ಧರ್ಮವನ್ನು ಸ್ವೀಕರಿಸಿರುವರು. ಶರಣರ ಧರ್ಮದ ಸಂಸ್ಕಾರಗಳೆಲ್ಲವೂ ಮತ ಸಂಸ್ಕಾರಗಳೇ. ಅವು ವರ್ಣಾಶ್ರಮ ಧರ್ಮಕ್ಕೆ ಸಂಬಂಧಿಸಿರುವುದಿಲ್ಲ. ಈ ಅತಿವರ್ಣಾಶ್ರಮ ಧರ್ಮಕ್ಕೂ ಶಿವಾಗಮಗಳಲ್ಲಿ ಪ್ರಮಾಣಗಳಿವೆ. ಮತ ಪ್ರಧಾನವಾದಿಗಳಾದ ಶೈವರ ಆಗಮಗಳಲ್ಲ, ವರ್ಣಾಶ್ರಮ ಧರ್ಮದ ಪ್ರವೇಶವಾದುದಕ್ಕಿರುವ ಕಾರಣಗಳಲ್ಲಿ ಹಿಂದೆಯೇ ಆಗಿರುವ ಆರ್ಯ ದ್ರಾವಿಡರ ಮಿಶ್ರಣವೇ ಮುಖ್ಯವಾದುದೆಂದು ಆಗಮತತ್ವಜ್ಞರ ಅಭಿಪ್ರಾಯವಾಗಿದೆ.೨೭ ಲಿಂಗಧಾರಣದಂತೆ ಷಟಸ್ಥಲ, ಅಷ್ಟಾವರಣಗಳ ವಿಚಾರದಲ್ಲೂ ಭಿನ್ನತೆಗಳಿವೆ. ಸಂಸ್ಕೃತದ ಆಗಮೋಕ್ತಿಗಳಿಗೂ, ಕನ್ನಡದ ವಚನಗಳಿಗೂ ಎಷ್ಟೋ ಕಡೆ ಈ ವ್ಯತ್ಯಾಸಗಳಿರುವುದು ವಚನಾಭ್ಯಾಸಿಗಳಿಗೆ ಗೋಚರಿಸುತ್ತದೆ. ಹೀಗಾಗಿ ಕನ್ನಡನಾಡಿನ ವೀರಶೈವ ಶರಣರು ಹೇಳಿದ ವೀರಶೈವ ಧರ್ಮಕ್ಕೂ ಆಗಮಪ್ರಣೀತ ವೇದೋದಿತ ವೀರಶೈವಧರ್ಮಕ್ಕೂ ಆಚರಣೆಯಲ್ಲಿ ಮಹದಂತರವಿದೆ. ಈ ರೀತಿಯಾಗಿ ಶಿವಾರಾಧನೆ ಅಥವಾ ಲಿಂಗಾರಾಧನೆಯು ದ್ರಾವಿಡರಿಂದ ಆರಂಭವಾಗಿ, ಆರ್ಯರಿಂದ ಸ್ವೀಕೃತವಾಗಿ, ಪ್ರಭಾವಗೊಂಡು, ಆರ್ಯ–ದ್ರಾವಿಡರ ಮಿಶ್ರಣದಿಂದ ವಿವಿಧ ರೂಪಹೊಂದಿ–ವಿಕಾಸಹೊಂದಿ, ಕೊನೆಯಲ್ಲಿ ವೀರಶೈವ ವಚನಕಾರರಲ್ಲಿ ಕರ್ನಾಟಕದಲ್ಲಿ ಪರಿಪೂರ್ಣತೆಯತ್ತ ಸಾಗಿ ಮತ್ತೆ ತೆಲುಗುನಾಡು, ತಮಿಳುನಾಡು, ಮಹಾರಾಷ್ಟ್ರಗಳಲ್ಲಿ ಪ್ರಚಾರ ಪಡೆದಿರುವುದನ್ನು ಕಾಣುತ್ತೇವೆ.

## [೪]

ಶೈವ ಧರ್ಮದಲ್ಲಿ ಅನೇಕ ಅವಾಂತರ ಭೇದಗಳಿವೆ. ಶಿವನು ಸರ್ವಪ್ರಾಣಿಗಳಿಗೆ ಒಡೆಯನಾದುದರಿಂದ ಸರ್ವವರ್ಗದ ಜನರೂ ಅವನನ್ನು ತಮ್ಮ ಇಷ್ಟಾನುಸಾರವಾಗಿ ಪೂಜಿಸುತ್ತಾರೆ. ಕೆಲವು ಪಂಥದವರು ಶುದ್ಧ ಹಾಗೂ ಶಿಷ್ಟ ಸಮ್ಮತರಿದ್ದರೆ ಇನ್ನು ಕೆಲವು ಪಂಥದವರು ಘೋರ ಮತ್ತು ಹೇಯ ಆಚರಣೆಗಳುಳ್ಳವರಾಗಿದ್ದಾರೆ. ವೀರಶೈವವು

೨೭ ಅದೇ ಪುಟ ೭

ಅದರಲ್ಲೂ ಕರ್ನಾಟಕದ ಲಿಂಗಾಯತ ಮತವು ಶುದ್ಧ ಹಾಗೂ ಶಿಷ್ಟ ಆಚರಣೆಗಳನ್ನೇ ಆಚರಿಸಲು ಬೋಧಿಸಿದೆ. ಎಲ್ಲ ಶೈವಶಾಖೆಗಳ ಒಳ್ಳೆಯ ಅಂಶಗಳನ್ನು ತನ್ನಲ್ಲಿ ಅಳವಡಿಸಿ ಕೊಂಡು ಪರಿಪೂರ್ಣತೆ ಪಡೆಯಲು ವೀರಶೈವವು ಪ್ರಯತ್ನಿಸಿದುದು, ಕರ್ನಾಟಕದಲ್ಲಿ ಶಿವಶರಣರ ಕಾಲದಲ್ಲಿ. ವೇದಾಗಮಾದಿಗಳ ಪ್ರಭಾವಕ್ಕೊಳಗಾಗಿ ಬೆಳೆದುದು ಒಂದು ವಿಧವಾದರೆ, ಪ್ರಾಚೀನ ಕಾಲದಿಂದ ನಡೆದು ಬಂದ ಪದ್ಧತಿಯನ್ನು ಬೆಳೆಸುತ್ತ ಬಂದುದು ಇನ್ನೊಂದು ವಿಧ. ಒಂದು ಆಗಮಿಕ ಶೈವ; ಇನ್ನೊಂದು ಪಾಶುಪತ ಶೈವ ಎಂದು ಕರೆಯಿಸಿಕೊಂಡಿದೆ.೨೮ ಇವುಗಳ ಬೆಳವಣಿಗೆ, ಮತ್ತೆ ಅನೇಕ ಉಪವಿಭಾಗಗಳಿಗೆ ಕಾರಣ ವಾಗಿದೆ. ಪಾಶುಪತ, ಕಾಪಾಲಿಕ, ನಾಥಪಂಥ, ಗೋರಖನಾಥಪಂಥ, ರಸೇಶ್ವರ–ಈ ಎಲ್ಲವನ್ನೂ ಒಟ್ಟಾರೆ ಪಾಶುಪತ ಎಂಬ ಸಾಮಾನ್ಯ ಹೆಸರಿನಿಂದ ನಿರ್ದೇಶಿಸುವುದು ವಾಡಿಕೆ. ಆಗಮಿಕ ಶೈವ ವಿಭಾಗದಲ್ಲಿ ಸಂಸ್ಕೃತ, ಶೈವ, ಕಾಶ್ಮೀರ ಶೈವ, ತಮಿಳು ಶೈವ ಎಂದು ವಿಭಜಿಸಿದರೆ ಪುರಾಣಗಳಲ್ಲಿ, ವೈದಿಕ ಶೈವ, ತಾಂತ್ರಿಕ ಶೈವ ಮತ್ತು ಮಿಶ್ರ ಶೈವ ಎಂದು ವಿಭಜಿಸಲಾಗಿದೆ. ವೈದಿಕ ಶೈವರಲ್ಲಿ 'ಲಕುಲೀಶ ಪಾಶುಪತ'ವನ್ನು ಹೆಸರಿಸಲಾಗಿದೆ. 'ಕಾಲಾನನ–ಕಾಪಾಲಿಕ' ಮೊದಲಾದುವು ತಾಂತ್ರಿಕ ಶೈವಶಾಖೆಗಳು. ಇವೆಲ್ಲವುಗಳಲ್ಲಿ ಪಾಶುಪತ ಮತವೇ ಬಹಳ ಹಳೆಯದೂ ಮಹತ್ವದ್ದೂ ಆಗಿದೆಯೆಂದು ಮತ್ತು ಈ ಮತವು ಕರ್ನಾಟಕದಲ್ಲಿ ಪ್ರಬಲ ಮತಗಳಲ್ಲಿ ಒಂದಾಗಿತ್ತೆಂದೂ ಡಾ. ಎಸ್.ಸಿ. ನಂದೀಮಠ ಅವರು ಅಭಿಪ್ರಾಯಪಡುತ್ತಾರೆ.೨೯ ಇದು ಕಾಲಕಾಲಕ್ಕೆ ಅನೇಕ ಆಚಾರ್ಯರುಗಳಿಂದ ಬೆಳೆದು ಬಂದಿದೆ. ಪಶು–ಪತಿ–ಪಾಶ ಇವು ಈ ಮತದ ಮುಖ್ಯ ಮೂರು ತತ್ವಗಳು.೩೦ ವೈಶೇಷಿಕ ಸೂತ್ರಗಳ ಭಾಷ್ಯವನ್ನು ಬರೆದ ಪ್ರಶಸ್ತಪಾದ, ನ್ಯಾಯ ಭಾಷ್ಯದಮೇಲೆ ವ್ಯಾಖ್ಯಾನ ಬರೆದ ಭಾರದ್ವಾಜ, ಬಾಣ ಇವರು ಪಾಶುಪತರು. ಹುಯೇನ್‌ತ್ಸಾಂಗನ ಬರವಣಿಗೆಯಲ್ಲಿ ಪಾಶುಪತರ ಉಲ್ಲೇಖವಿದೆ. ಈ ಸಿದ್ಧಾಂತದ ಪ್ರತಿಪಾದಕನು ಶ್ರೀಕಂಠ ನೆಂಬವನು.೩೧ ಪಾಶುಪತ, ಕಾಳಾಮುಖ, ಲಾಕುಳ, ಮಾಹೇಶ್ವರ ಪಂಥಗಳು ಹೆಚ್ಚು ಕಡಿಮೆ ಪ್ರಮಾಣದಿಂದ ಒಂದೇ ಇದ್ದಂತೆ ತೋರುತ್ತವೆ. ಸರ್ವದರ್ಶನ ಸಂಗ್ರಹಕಾರರಾದ ಮಾಧವಾಚಾರ್ಯರು, ನಕುಲೀಶ–ಪಾಶುಪತವೆಂದು ಲಕುಲೀಶ ಮತ್ತು ಪಾಶುಪತಗಳನ್ನು ಒಂದೇ ಹೆಸರಿನಿಂದ ಕರೆದು, ಈ ಪಂಥದ ತತ್ವಗಳನ್ನು ಸಂಗ್ರಹಿಸಿರುತ್ತಾರೆ. ಶಂಕರಾ ಚಾರ್ಯರು ತಮ್ಮ 'ಬ್ರಹ್ಮಸೂತ್ರ'ದ ಶಾರೀರಕ ಭಾಷ್ಯದಲ್ಲಿ ಪಾಶುಪತರಿಗೆ 'ಮಹೇಶ್ವರ'

---

೨೮ ವಚನಗಳಲ್ಲಿ ವೀರಶೈವಧರ್ಮ, ಪು. ೫೮. ಲೇ. ಡಾ. ಎಚ್.ತಿಪ್ಪೇರುದ್ರಸ್ವಾಮಿ, (೧೯೬೯)

೨೯ ಕರ್ನಾಟಕದ ಧರ್ಮಗಳು ಪುಟ ೧೮೫–೧೮೬.

೩೦ ಪಶು=ಜೀವಿ; ಪತಿ=ಈಶ್ವರ; ಪಾಶ=(ಬಂಧನ) ಮಾಯೆ, Cosmic matter.

೩೧ ವಚನಗಳಲ್ಲಿ ವೀರಶೈವಧರ್ಮ, ಪುಟ ೫೯.

ರೆಂದು ಕರೆದಿದ್ದಾರೆ; ಅದರಂತೆಯೇ ಮಾಧವಾಚಾರ್ಯರೂ ನಕುಲೀಶ ಪಾಶುಪತರಿಗೆ 'ಮಾಹೇಶ್ವರ'ರೆಂದೇ ಕರೆದಿದ್ದಾರೆ. ಕಾಳಾಮುಃಖರೂ, ಲಕುಲೀಶರೂ ಒಂದೇ ಎಂದು ಹಲವು ಕನ್ನಡ ಶಿಲಾಶಾಸನಗಳು ಸಾರುತ್ತವೆ. ನಕುಲೀಶ, ಲಕುಲೀಶ, ಲಾಕುಳ, ಲಾಕುಳಾಗಮ ಮೊದಲಾದವು ಲಕುಲೀಶ ಅಥವಾ ಲಗುಡೀಶ ಪಂಥಕ್ಕೆ ಹೆಸರು.[೩೨] ಶಿವನ ಅವತಾರವಾದ ಲಕುಲೀಶನು ಒಂದನೆಯ ಶತಕಕ್ಕೂ ಹಿಂದೆ ಇದ್ದಿರಬೇಕೆಂದು ಪಂಡಿತರ ಅಭಿಪ್ರಾಯ. ಕರ್ನಾಟಕದಲ್ಲಿ ಕಾಳಾಮುಖಾಚಾರ್ಯರು ಒಳ್ಳೆಯ ಪ್ರತಿಭಾಶಾಲಿಗಳೂ ಘನಪಂಡಿತರೂ ಮಹಾತಪಸ್ವಿಗಳೂ ಆಗಿದ್ದು ರಾಜಪೂಜಿತರೂ ಲೋಕಪೂಜಿತರೂ ಆಗಿದ್ದರು. ದಕ್ಷಿಣದಲ್ಲಿ ವಿಶೇಷವಾಗಿ ತಮಿಳು ನಾಡಿನಲ್ಲಿ ಪ್ರಚಾರದಲ್ಲಿದ್ದುದು ಶೈವ ಸಿದ್ಧಾಂತ. ಇದನ್ನು ಹಬ್ಬಿಸಿದವರು ತಮಿಳು ನಾಡಿನ ಅರುವತ್ತುಮೂವರೆಂದು ಪ್ರಸಿದ್ಧರಾದರು. ಅಲ್ಲದೆ ಚೇರ, ಚೋಳ, ಪಲ್ಲವ ದೊರೆಗಳು. ನಾಯನಾರರುಗಳಲ್ಲಿ ಮುಖ್ಯರಾದವರೆಂದರೆ ಅಪ್ಪಾರ್, ತಿರುಜ್ಞಾನ ಸಂಬಂಥರ್, ಸುಂದರರ್ ಮತ್ತು ಮಾಣಿಕ್ಕ ವಾಚಗರ್. ಇವರು ಶಿವಭಕ್ತಿ ಮಾರ್ಗವನ್ನೇ ಅನುಸರಿಸಿದರು. ಶಿವಭಕ್ತಿಯಿಂದ, ಆತ್ಮ ಶುದ್ಧಿ, ದೈವಾನುಗ್ರಹ ಹಾಗೂ ಮನಃಶಾಂತಿಯನ್ನು ಹೇಗೆ ಪಡೆಯಬಹುದೆಂಬುದನ್ನು ತಮ್ಮ ಹಾಡುಗಳಲ್ಲಿ ಪ್ರತಿಪಾದಿಸಿದ್ದಾರೆ. ಈ ಅರುವತ್ತುಮೂವರು ವಿವಿಧಕಾಲ, ವೃತ್ತಿ, ಪ್ರದೇಶ ಹಾಗೂ ಜಾತಿಗಳಿಗೆ ಸೇರಿದವರಾಗಿದ್ದು ಇವರ ಭಕ್ತಿಯ ಹಾಡುಗಳಲ್ಲಿ ಹೃದಯ ಶುದ್ಧಿ ದೈವ ಸಾಕ್ಷಾತ್ಕಾರಕ್ಕೆ ಕಾರಣ ಎಂಬುದನ್ನು ಪ್ರತಿಪಾದಿಸಲಾಗಿದೆ. ಕಾಶ್ಮೀರದಲ್ಲಿ ಬೆಳೆದು ಪ್ರಸಾರಗೊಂಡ ಶೈವ ಧರ್ಮವನ್ನು 'ಕಾಶ್ಮೀರ ಶೈವ'ವೆಂದು ಕರೆಯಲಾಗಿದೆ, ವಸುಗುಪ್ತ, ಅಭಿನವಗುಪ್ತ, ಸೋಮಾನಂದ ಮೊದಲಾದವರು ಈ ಪಂಥವನ್ನು ಪ್ರಚಾರ ಪಡಿಸಿದರು. ಕ್ಷೇಮರಾಜನು ಬರೆದ 'ಶಿವಸೂತ್ರ ವಿಮರ್ಶಿನಿ' ಕಾಶ್ಮೀರ ಶೈವಸಿದ್ಧಾಂತವನ್ನು ಪ್ರತಿಪಾದಿಸಿದೆ. ಕರ್ನಾಟಕದ ವೀರಶೈವ ಧರ್ಮದ ಮೇಲೆ ಈ ಮತದ ಪ್ರಭಾವವೂ ಆಗಿದೆ. ಬಸವಾದಿಗಳ ಕಾಲಕ್ಕೆ ಮೋಳಿಗೆಯ ಮಾರಯ್ಯನವರು ಮತ್ತು ಆತನ ರಾಣಿ ಮಹದೇವಿಯಮ್ಮ ಕಲ್ಯಾಣಕ್ಕೆ ಬಂದುದು ಈ ಕಾಶ್ಮೀರದಿಂದಲೇ. ಮಹಾಕವಿ ಹರಿಹರ ದೇವನು ಕಾಶ್ಮೀರದ ಮಲುಹಣನೆಂಬ ಶಿವಭಕ್ತನ ಕಥೆ ಕನ್ನಡದಲ್ಲಿ ಬರೆದುದು ಈ ಕಾರಣಕ್ಕಾಗಿಯೇ ಇರಬೇಕು. ಆ ಕಾಲಕ್ಕೆ ಕಾಶ್ಮೀರದಲ್ಲಿ ಶೈವಧರ್ಮಕ್ಕೆ ಪುರಸ್ಕಾರವಿಲ್ಲದುದೂ ಅವರು ಕರ್ನಾಟಕಕ್ಕೆ ಬರಲು ಒಂದು ಕಾರಣವಾಗಿದೆ.

[೫]

ಶೈವ ಪಂಗಡಗಳು ಹಲವಾರು ಅಸ್ತಿತ್ವದಲ್ಲಿದ್ದು, ಅವುಗಳೊಳಗಿನ ಭೇದಗಳನ್ನು ಕಂಡುಹಿಡಿಯುವುದು ದುಸ್ತರವಾಗಿದೆ. ಶೈವಾಗಮಗಳು ಕೆಲವೆಡೆ, ಶೈವ, ಪಾಶುಪತ, ಕಾಪಾಲ, ಕಾಳಾಮುಖ ಎಂದು, ಬೇರೆ ಕಡೆ, ಶೈವ, ಪಾಶುಪತ, ಸೋಮ, ಲಾಕುಳ

---

೩೨ ಕರ್ನಾಟಕದ ಧರ್ಮಗಳು—ಪುಟ ೧೮೬.

ಎಂದೂ ಹೇಳುತ್ತಿವೆ. ಶಂಕರಾಚಾರ್ಯರು ಮಹೇಶ್ವರ ಎಂಬುದೊಂದನ್ನೂ ಹೇಳಿದ್ದಾರೆ: ಶಂಕರ ದಿಗ್ವಿಜಯದಲ್ಲಿ ಶೈವ, ರೌದ್ರ, ಉಸ್ರ, (ಉಗ್ರ?) ಭಟ್ಟ, ಜಂಗಮ, ಪಾಶುಪತ, ಕಾಪಾಲಿಕ ಎಂದು ಉಲ್ಲೇಖಿಸಿದ್ದಾರೆ; ಮಾಧವಾಚಾರ್ಯರು ಸರ್ವದರ್ಶನ ಸಂಗ್ರಹದಲ್ಲಿ ಲಕುಲೀಶ, ಪಾಶುಪತ, ಶೈವ ಅಥವಾ ಮಾಹೇಶ್ವರ ಪ್ರತ್ಯಭಿಜ್ಞಾನಪಂಥ, ರಸೇಶ್ವರ ಎಂಬ ವಿವರಗಳನ್ನು ನೀಡಿದ್ದಾರೆ. ಹೀಗೆ ಶೈವದ ಪಂಗಡಗಳು ಬಹಳವಿರುವವೆಂದು ಕಂಡು ಬಂದರೂ ಒಂದೇ ಪಂಗಡಕ್ಕೆ ಮೂರು ಹೆಸರುಗಳೂ ಇದ್ದಂತೆ ತಿಳಿದುಬರುತ್ತದೆ. ಇವುಗಳ ಸಮನ್ವಯ ಮಾಡಿದ ದಿವಂಗತ ಶಿ. ಶಿ. ಬಸವನಾಳ ಅವರು ಶೈವ (ಮಾಹೇಶ್ವರ), ಪಾಶುಪತ, ಕಾಳಾಮುಖ, ಕಾಪಾಲಿಕ (ಸೋಮ) ಎಂದು ಮುಖ್ಯವಾಗಿ ನಾಲ್ಕು ಪಂಗಡಗಳಾಗಿ ಶೈವವನ್ನು ವಿಭಜಿಸಿದ್ದಾರೆ.[೩೩]

**ಶೈವ ಸಿದ್ಧಾಂತ:** ಇದು ಅತ್ಯಂತ ಪುರಾತನವಿದ್ದು ವೇದಗಳಿಗಿಂತಲೂ ಪೂರ್ವದ್ದೆಂದು ಹೇಳಲಾಗುತ್ತದೆ. ಉತ್ತರದಲ್ಲಿ ಕಾಶ್ಮೀರದಲ್ಲಿ ದಕ್ಷಿಣದಲ್ಲಿ ದ್ರಾವಿಡ ದೇಶಗಳಲ್ಲಿ ನೆಲೆಯೂರಿದೆ. ಆಗಮಗಳ ಕಾಲದಲ್ಲಿ ಈ ಎರಡೂ ಶಾಖೆಗಳು ಆಗಮಗಳ ಕಾಲದಲ್ಲಿ ಅವುಗಳ ಸಂಸ್ಕಾರವನ್ನು ಪಡೆದಂತಿವೆ. ಶೈವದಲ್ಲಿ ವಾಮ, ದಕ್ಷಿಣ, ಮಿಶ್ರ ಮತ್ತು ಸಿದ್ಧಾಂತ ಎಂದು ನಾಲ್ಕು ವಿಧಗಳಿದ್ದು ಸಿದ್ಧಾಂತವೇ ಉತ್ತಮವಾದುದೆಂದು ಸುಪ್ರಭೇದಾಗಮದಲ್ಲಿ ಹೇಳಿದೆ. ಸಿದ್ಧಾಂತ ಶಿಖಾಮಣಿಯಲ್ಲಿ ವಾಮ ಪಂಥವು ಶಕ್ತಿಪ್ರಧಾನವೆಂದೂ, ದಕ್ಷಿಣ ಪಂಥವು ಭೈರವಾತ್ಮಕವೆಂದೂ, ಮಿಶ್ರವು ಸಪ್ತಮಾತೃಪರವೆಂದೂ, ಸಿದ್ಧಾಂತವು ವೇದಸಮ್ಮತವೆಂದೂ ಹೇಳಲಾಗಿದೆ. ದಕ್ಷಿಣದಲ್ಲಿದ್ದ ಶೈವಶಾಖೆಗೆ ಶೈವ ಸಿದ್ಧಾಂತವೆಂಬ ಹೆಸರು. ಈ ಸಿದ್ಧಾಂತಕ್ಕೆ ಇಪ್ಪತ್ತೆಂಟು ಆಗಮಗಳೇ ಮೂಲ; ವೇದಾದಿಗಳ ಸಂಸ್ಕಾರವೂ ಇದೆ. ಶೈವ ಸಿದ್ಧಾಂತವು ತಮಿಳುನಾಡಿನ ಶಿವಭಕ್ತರ ಬೋಧನೆಗಳನ್ನೂ ಒಳಗೊಂಡಿದೆ. ಶ್ರೀ ರಾಮಾನುಜರ ದೃಷ್ಟಿಯಂತೆ ಇದು ವಿಶಿಷ್ಟಾದ್ವೈತವೆಂದು ಹೇಳಬಹುದು.[೩೪]

**ಕಾಶ್ಮೀರ ಶೈವ:** ಕಾಶ್ಮೀರ ಶೈವಕ್ಕೆ ಆಗಮಗಳೇ ಪ್ರಮಾಣ; ಇದನ್ನು ಶಂಕರ ಮತದ ಪ್ರಕಾರ ಅದ್ವೈತವೆಂದು ಹೇಳಲಾಗುತ್ತದೆ. ಶೈವಸಿದ್ಧಾಂತದಂತೆ ಇದರಲ್ಲೂ ೩೬ ತತ್ವಗಳಿವೆ; ಪಶು-ಪತಿ-ಪಾಶ್ವರ್ಗಗಳ ವಿಚಾರವಿದೆ. ಈ ಪಂಗಡಕ್ಕೆ 'ತ್ರಿಕ'ವೆಂಬ ಹೆಸರಿದ್ದು, ಈ ಶೈವಕ್ಕೂ ವೀರಶೈವಕ್ಕೂ ಹೆಚ್ಚಾದ ಹೋಲಿಕೆ ಇದೆ.[೩೫]

**ಪಾಶುಪತ:** ಇದು ಅತ್ಯಂತ ಪ್ರಾಚೀನಮತ ಪಶುಪತಿಯೇ ಈ ಮಾರ್ಗವನ್ನು

---

೩೩ ಬಸವನಾಳ ಸ್ಮಾರಕ ಸಂಪುಟ, ಪುಟ ೪೬೦-೪೬೧; ಸಂಪಾದಕರು ಎಚ್. ಎಫ್. ಕಟ್ಟೀಮನಿ ಮತ್ತು ಎಂ. ಜಿ. ವಿರೂಪಾಕ್ಷನ್ (೧೯೫೬)

೩೪ ಬಸವನಾಳ ಸ್ಮಾರಕ ಸಂಪುಟ ಪುಟ ೪೬೨

೩೫ ಅದೇ ಪುಟ ೪೬೩

ಅರುಹಿದನೆಂದು ಹೇಳುವುದುಂಟು. ಇದೇ ನಕುಲೀಶ ಅಥವಾ ಲಕುಲೀಶ ಮತವೆಂದು ಕರೆಯಲ್ಪಟ್ಟಿದೆ. ಪಶು–ಪತಿ–ಪಾಶದ ವಿಚಾರವು ತಲೆದೋರಿದ್ದು ಇಲ್ಲಿಯೇ ಮೊದಲು; ಇಲ್ಲಿಂದ ಅದು ಬೇರೆ ಶಾಖೆಗೂ ಹಬ್ಬಿತು. ಮಾಧವಾಚಾರ್ಯರು ತಮ್ಮ ಸರ್ವದರ್ಶನ ಸಂಗ್ರಹದಲ್ಲಿ ಇದನ್ನು ಹೀಗೆ ವಿವರಿಸಿದ್ದಾರೆ. ಈ ಪಂಥವನ್ನು ಅನುಸರಿಸುವವರು ಸನ್ಯಾಸಿಗಳೆಂದೂ, ಯೋಗಮಾರ್ಗಾವಲಂಬಿಗಳೆಂದೂ ತಿಳಿಯುತ್ತಿದೆ. ತ್ರಿಕಾಲಭಸ್ಮ ಸ್ನಾನಮಾಡುವುದು, ಬೂದಿಯಲ್ಲಿ ಮಲಗುವುದು, ಆಹಾ ಆಹಾ ಎಂದು ಧ್ವನಿ ಮಾಡುವುದು, ಉಚ್ಚಸ್ವರದಲ್ಲಿ ದೇವರ ಸ್ತುತಿಮಾಡುವುದು, ನಮಸ್ಕಾರ ಪ್ರದಕ್ಷಿಣೆ ಹಾಕುವುದು, ಕುಣಿದಾಡುವುದು, ಹೋರಿಗಳಂತೆ ಘುರಿಕಿ ಹಾಕುವುದು, ಶಿವನ ಹೆಸರುಗಳನ್ನುಚ್ಚರಿಸುವುದು, ನಿದ್ರೆ ಹತ್ತಿದವರಂತೆ ನಟಿಸುವುದು, ಭಿಕ್ಷೆ ಬೇಡುವುದು, ಕುಂಟನಂತೆ ನಡೆಯುವುದು, ಸ್ತ್ರೀಯರನ್ನು ಕಾಮುಕರಂತೆ ನೋಡುವುದು, ಅರ್ಥವಿಲ್ಲದ ಧ್ವನಿಗಳನ್ನು ಮಾಡುವುದು, ಹುಚ್ಚರಂತೆ ನಟಿಸುವುದು, ಅಪಮಾನಾದಿಗಳನ್ನು ಗೆಲ್ಲುವುದಕ್ಕೆಂದು ಎರಡನೆಯವರ ಎಂಜಲ ತಿನ್ನುವುದು—ಇವೇ ಮೊದಲಾದುವುಗಳನ್ನು ಪಾಶುಪತರಿಗೆ ವಿಧಿಸಲಾಗಿದೆ.[೩೬]

**ಕಾಳಾಮುಖರು:** ಇದು ಪಾಶುಪತದ ಒಂದು ವಿಭಾಗವಾಗಿರಬಹುದೆಂದು ತೋರುತ್ತದೆ. ಈ ಮತದವರು ಹಣೆಯ ಮೇಲೆ ಕಪ್ಪುಗೆರೆಯನ್ನು ಧರಿಸುತ್ತಿದ್ದುದರಿಂದ ಅವರನ್ನು ಕಾಳಾಮುಖರೆಂದೇ ಕರೆಯುವ ವಾಡಿಕೆ ಬಂದಿದೆ. ಕಾಳಾಮುಖವನ್ನು 'ಲಾಕುಳಶೈವ' ಅಥವಾ ಲಕುಲೀಶಪಾಶುಪತವೆಂದು ಲಿಂಗೈಕ್ಯ ಎಂ. ಪಿ. ಪಾಟೀಲರು ಕರೆದಿದ್ದಾರೆ. ಅವರು ಈ ಕಾಳಾಮುಖ ಶೈವಶಾಖೆಯನ್ನು ಕುರಿತು ಕ್ರಿ. ಶ. ೧೯೭೨ ರಲ್ಲಿ ಒಂದು ೩೦ ಪುಟಗಳ ಸಂಶೋಧನ ಪ್ರಬಂಧವನ್ನು ಪ್ರಕಟಿಸಿದ್ದಾರೆ; ಅದರಲ್ಲಿ ಶ್ರೀಯುತರು ಈ ಪಂಥವು ಹತ್ತನೆಯ ಶತಮಾನದಿಂದ ಹದಿಮೂರನೆಯ ಶತಮಾನದ ವರೆಗೆ ಕರ್ನಾಟಕದ ಪ್ರಮುಖ ಧರ್ಮವಾಗಿತ್ತು; ಈ ಮತದ ಮಠಗಳು ಹಾಗೂ ಶಿವ ದೇವಾಲಯುಗಳು, ಕರ್ನಾಟಕದ ಪ್ರಮುಖ ಪಟ್ಟಣಗಳಲ್ಲದೇ ಸಣ್ಣ ಸಣ್ಣ ಹಳ್ಳಿಗಳಲ್ಲೂ ಸ್ಥಾಪಿತವಾಗಿದ್ದು, ಆಗಿನ ಕಾಲದ ರಾಜರು, ಮನ್ನೆಯರು ಹೇರಳವಾಗಿ ದಾನ–ದತ್ತಿ ಕೊಡುತ್ತಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ೧೩ನೆಯ ಹಾಗೂ ೧೪ನೆಯ ಶತಮಾನದಲ್ಲಿ ಆ ಪಂಥದ ಯಾವತ್ತೂ ಮಠಗಳು ವೀರಶೈವಮಠಗಳಲ್ಲಿ ಪರಿವರ್ತಿಸಲ್ಪಟ್ಟವು; ಹಾಗೂ ಆ ಪಂಥದ ಧರ್ಮ ಗುರುಗಳು ಲಿಂಗಾಯತಧರ್ಮವನ್ನು ಸ್ವೀಕರಿಸಿದರು. ಈ ಪಂಥವು ೧೪ನೆಯ ಶತಮಾನದ ಕೊನೆಗೆ ಲಿಂಗಾಯತಧರ್ಮದಲ್ಲಿ ಸಂಪೂರ್ಣವಾಗಿ ವಿಲೀನಗೊಂಡಿತು. ಈ ಮಠ ಸಂಸ್ಥೆಯ ತಳಹದಿಯನ್ನು ಈ ಕಾಳಾಮುಖಮಠದ ಗುರುಗಳೇ ಹಾಕಿದರೆಂದರೆ ತಪ್ಪಾಗಲಾರದು ಎಂದು ಹೇಳುತ್ತ, ರಾಮಾನುಜ ಮತ್ತು

---

೩೬ ಅದೇ ಪುಟ ೪೬೩

ಮಾಧವಾಚಾರ್ಯರು ಈ ಪಂಥವು ವಾಮಾಚಾರಿಯೂ, ಘೋರ ಕರ್ಮಿಯೂ ಆಗಿತ್ತೆಂದು ಹೇಳುವುದು ಸರಿಯಲ್ಲವೆಂಬ ಅಭಿಪ್ರಾಯ ತಾಳಿದ್ದಾರೆ. ಅವರು ಮುಂದುವರಿದು, ರಾಮಾನುಜರು ಪ್ರಖ್ಯಾತ ವಿದ್ವಾಂಸರು, ಪ್ರಕಾಂಡ ಪಂಡಿತರು; ಆದರೂ ಅವರು ಶೈವಪಂಥಗಳ ವಿರೋಧಿಯಾಗಿದ್ದರು. ತಮಿಳುನಾಡಿನಲ್ಲಿ ಅವರ ಹಾಗೂ ಶೈವರ ನಡುವೆ ಉಂಟಾದ ಮತಭೇದಗಳಿಂದಾಗಿ ಅವರು ಕನ್ನಡನಾಡಿಗೆ ಬಂದು ಹೊಯ್ಸಳ ಬಿಟ್ಟಿದೇವನಲ್ಲಿ ಆಶ್ರಯಪಡೆದರು. ಕಾಳಾಮುಖರು, ಕಾಪಾಲಿಕರು ಮುಂತಾದ ಪಾಶುಪತ ಶೈವ ಪಂಥಗಳು ವೇದ ವಿರೋಧಿಗಳಾದುದರಿಂದ ಅವು ತಿರಸ್ಕರಣೀಯವೆಂದು ಹಾಗೆ ನಮೂದಿಸಿದ್ದಾರೆಂದು ವಿವರಿಸಿದ್ದಾರೆ.[೩೭] ವೇದಗಳನ್ನು ವಿರೋಧಿಸಿದುದರಿಂದಲೇ ವೀರಶೈವರನ್ನು ಶೂದ್ರರೆಂದು ಹಿಂದೂ ಕಾಯಿದೆಯಲ್ಲಿ ಪರಿಗಣಿಸಿದ್ದು, ಇಂತಹವೇ ಕಾರಣಗಳಿಗಾಗಿ ಎಂಬುದು ಸ್ಪಷ್ಟವಿದೆ. ಈ ಕಾಳಾಮುಖಪಂಥದ ಶೈವಮುನಿಗಳು ತಪೋನಿಷ್ಠರೂ, ಪಂಡಿತರೂ, ಜನತೆಯ ಮೇಲೆ ಪ್ರಭಾವವುಳ್ಳವರೂ ಆ ಕಾಲದಲ್ಲಿ ಆಗಿದ್ದರೆಂಬುದಕ್ಕೆ ಹಲವು ಶಾಸನಗಳ ಆಧಾರವು ಸಿಗುತ್ತದೆ. ಇವರ ಆಚಾರಗಳು ಹೇಯವಾಗಿದ್ದರೆ ಅವರು ಸಮಾಜದಲ್ಲಿ ಮನ್ನಣೆ ಪಡೆಯುತ್ತಿರಲೇ ಇಲ್ಲ; ಅಲ್ಲದೇ ರಾಜಪೂಜಿತರೂ ಆಗಿರುತ್ತಿರಲಿಲ್ಲ.*

**ಕಾಪಾಲಿಕ ಅಥವಾ ಮಹಾವ್ರತಧಾರಿ:** ಇದೊಂದು ಪುರಾತನ ಶೈವಪಂಥ; ಇವರನ್ನೇ 'ಸೋಮ' ಎಂದೂ ಕರೆಯಲಾಗುತ್ತದೆ. ಇವರು ಕೊರಳಲ್ಲಿ ಮನುಷ್ಯನ ಎಲುವಿನ ಮಾಲೆ ಧರಿಸುತ್ತಿದ್ದರು. ನರ ಕಪಾಲದಲ್ಲಿ ಊಟ ಮಾಡುತ್ತಿದ್ದರು; ಸ್ಮಶಾನ ವಾಸಿಗಳಾಗಿದ್ದರು; ಸುರಾಪಾನ, ಮಾಂಸ ಭಕ್ಷಣೆ ಮಾಡುತ್ತಿದ್ದರು. ಉಮಾಸಹಿತ ಶಿವನಿರುವಂತೆ ಕಾಂತಾಸಹಿತವಾಗಿ ಸ್ತ್ರೀ ಸಂಭೋಗಾದಿ ಭೋಗಗಳನ್ನು ಅನುಭೋಗಿಸಬೇಕೆಂದು ಹೇಳುತ್ತಿದ್ದರು. ಐಹೊಳೆ, ಪಟ್ಟದಕಲ್ಲು, ಬಳ್ಳಿಗಾವಿ ಇವು ಶೈವರ ಕೇಂದ್ರಗಳಾಗಿದ್ದವು.

ಕಾಲ, ಸಿದ್ಧ ಮೊದಲಾದವು ಈ ಮೇಲಿನ ಪಂಗಡಗಳಲ್ಲಿಯೇ ಸೇರುತ್ತವೆ.[೩೮]

---

೩೭ ಲಾಕುಳಶೈವ ಅಥವಾ ಕಾಳಾಮುಖಶೈವ ಪಂಥದ ನಿಜಸ್ವರೂಪ, ಪುಟ ೨೮, ಲೇ: ಎಂ. ಪಿ. ಪಾಟೀಲ, ಬಿ. ಎ. ಎಲ್.ಎಲ್.ಬಿ. (೧೯೭೨)

* ಎಲ್ಲ ಶೈವ ಪಂಗಡದವರು ತಪಸ್ವಿಗಳೂ ಅಥವಾ ವೈರಾಗಿಗಳೂ ಆಗಿದ್ದರೆಂಬುದು ಹರಿಬದ್ರಸೂರಿಯ ಅಭಿಪ್ರಾಯ: "ಆಧಾರ ಭಸ್ಮಕೌಪೀನ ಜಟಾಯಜ್ಞೋಪವೀತಿನಃ। ಸ್ವಸ್ಯಾಚಾರಾದಿಭೇದೇನ ಚತುರ್ಥಾಃ ಸಪ್ತಸ್ವಿನಃ ಶೈವ ಪಾಶುಪತಾಶ್ಚೈವ ಮಹಾವ್ರತ ಧಾರಾಸ್ತಥಾ। ಸೂರ್ಯಕಾಲಾಮುಖಾ ಮುಖ್ಯಾಭೇದಾವತೇ ತಪಸ್ವಿನಾಂ॥ ಬಸವನಾಳ ಸ್ಮಾರಕ ಸಂಪುಟ ಪುಟ ೪೭೮

೩೮ ಅದೇ, ಪುಟ ೪೭೫, ೪೭೭

ಜೈನರ ವೃಷಭನಾಥನಿಗೂ ಪ್ರಾಚೀನ ಶೈವಧರ್ಮಕ್ಕೂ ಸಂಬಂಧವಿರುವಂತೆ ಅರವತ್ತು ಮೂವರು ಪುರಾತನರಿಗೂ ಅರವತ್ತು ಮೂವರು ಶಲಾಕಾಪುರುಷರಿಗೂ ಸಂಬಂಧವಿರಬೇಕೆಂದೆನಿಸುತ್ತದೆ.

**ವೀರಶೈವ:** ಇದು ಶೈವದ ಒಂದು ಪ್ರಮುಖ ಶಾಖೆಯಾಗಿ ಬೆಳೆದಿದೆ. 'ವೀರಶೈವರ ಪ್ರಾಚೀನ ಇತಿಹಾಸ ಉಪಲಬ್ಧವಿಲ್ಲ; ಕ್ರಿ. ಶ. ೧೧ನೆಯ ಶತಮಾನಕ್ಕೂ ಪೂರ್ವದಲ್ಲಿ ಇದರ ಗುರುತು ದೊರೆಯದೇ ಇರುವುದೇ ಇದಕ್ಕೆ ಕಾರಣ.[೩೯] ಶಿವನಲ್ಲಿ ಇವರೂ ಅತ್ಯಂತ ನಿಷ್ಠಾವಂತರು; ಇಂತಹರು ಪೂರ್ವದ ಶೈವರಲ್ಲೂ ಇದ್ದರು. ಕಾಳಾಮುಖ ಮತಗಳೆಲ್ಲ ವೀರಶೈವಮತಗಳಾಗಿ ಪರಿವರ್ತನೆ ಹೊಂದಿದವು. ಹೀಗಾಗಿ ಈ ಕಾಳಾಮುಖ ಮೊದಲಾದವರನ್ನೇ ವೀರಶೈವ ಅಥವಾ ಲಿಂಗಾಯತರು ಎಂದು ಭಾವಿಸಲಾಗುತ್ತದೆ.

**ಶೈವದ ವಿಭೇದಗಳು:** ಅ) ಇಲ್ಲಿಯವರೆಗೆ ವಿವೇಚಿಸಿದ ಶೈವಪ್ರಭೇದಗಳ ಹೆಸರುಗಳಲ್ಲದೆ ಬೇರೆ ರೀತಿಯ ಹೆಸರುಗಳೂ ದೊರೆಯುತ್ತವೆ.

I ೧) ಶುದ್ಧಶೈವ, ೨) ಮಿಶ್ರಶೈವ, ೩) ಸಂಕೀರ್ಣಶೈವ, ೪) ಪೂರ್ವಶೈವ, ೫) ಮಾರ್ಗಶೈವ, ೬) ವೀರಶೈವ[೪೦]

II ಡಾ. ಫ. ಗು. ಹಳಕಟ್ಟಿಯವರು 'ಶಿವಾನುಭವ ಶಬ್ದಕೋಶ'ದಲ್ಲಿ ಶೈವದ ವಿವಿಧ ಹೆಸರುಗಳನ್ನು ಹೀಗೆ ವಿವರಿಸಿದ್ದಾರೆ:

ಅ) ಶೈವ, ಪಾಶುಪತ, ಸೋಮ, ದಕ್ಷಿಣ, ಕಾಳಾಮುಖ, ಲಾಕುಳ.

ಬ) ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ ಅಂತ್ಯಶೈವ ಹಾಗೂ ಪ್ರವರಶೈವ.

ಬ ವಿಭಾಗದ ಶೈವ ಶಾಖೆಗಳನ್ನು ಕುರಿತು ಅಲ್ಲಿ ಈ ರೀತಿ ವಿವರ ನೀಡಿದ್ದಾರೆ:[೪೧]

**ಆದಿಶೈವರು:** ಇವರು ದ್ವಿಜರು;

**ಮಹಾಶೈವರು:** ದೀಕ್ಷೆ ಹೊಂದಿದ ಶಿವದ್ವಿಜರು;

**ಅನುಶೈವರು:** ನೃಪರಿಗೂ (ಕ್ಷತ್ರಿಯರಿಗೂ) ವೈಶ್ಯರಿಗೂ ದೀಕ್ಷೆಯನ್ನಿತ್ತರೆ ಅವರು ಅನುಶೈವರು;

**ಅವಾಂತರಶೈವರು:** ಶೂದ್ರರಿಗೆ ದೀಕ್ಷೆಯನ್ನಿತ್ತರೆ ಅವರು ಅವಾಂತರ ಶೈವರು;

**ಪ್ರವರಶೈವರು:** ಬ್ರಾಹ್ಮಣನಿಂದ ಶೂದ್ರ ಸ್ತ್ರೀಯಲ್ಲಿ ಜನಿಸಿದವರು ಪ್ರವರ ಶೈವರು;

---

೩೯ ಕರ್ನಾಟಕದ ಧರ್ಮಗಳು, ಪುಟ ೨೦೫

೪೦ ಆದಯ್ಯನ ವಚನಗಳು, ವಚನ ೭೭; ಸಂಪಾದಕರು: ಚ. ಉತ್ತಂಗಿ (೧೯೫೭)

೪೧ ಶಿವಾನುಭವ ಶಬ್ದಕೋಶ (೨ನೆಯ ಮುದ್ರಣ), ಪುಟ ೨೦೭–೨೦೮

**ಅಂತ್ಯಶೈವರು:** ಅಂತ್ಯಜರಿಗೆ ದೀಕ್ಷೆಯನ್ನಿತ್ತರೆ ಅವರು ಅಂತ್ಯಶೈವರು.[೪೨]

III. **ವಾಮ:** ಶಕ್ತಿಪರವಾದುದು ವಾಮ;

**ದಕ್ಷಿಣ:** ಭೈರವಪರವಾದುದು;

**ಮಿಶ್ರಶೈವ:** ಸಪ್ತಮಾತೃಕಾಪರವಾದುದು;

**ಸಿದ್ಧಾಂತ:** ಪರಶಿವಪರವಾದುದು.

IV. **ಸಾಮಾನ್ಯಶೈವ:** ಶಿವನನ್ನು ಪೂಜಿಸುವವರು;

**ಮಿಶ್ರಶೈವರು:** ಶಿವ, ವಿಷ್ಣು, ಬ್ರಹ್ಮ, ಷಣ್ಮುಖ, ಗಣಪತಿ–ಇಂತಹ ದೇವತೆಗಳನ್ನು ಪೂಜಿಸುವವರು;

**ಶುದ್ಧಶೈವ:** ಶಿವನೊಬ್ಬನನ್ನೇ ಪೂಜಿಸುವವರು; ಇವರಿಗೆ ಲಿಂಗಧಾರಣವಿದೆ.

**ವೀರಶೈವ:** ಸಂಕಲ್ಪ, ವಿಕಲ್ಪಗಳನ್ನು ದೂರಮಾಡಿ ಆತ್ಮತತ್ವದ ವಿಚಾರ ಮಾಡುವವರೇ ವೀರಶೈವರು.

ಶಿವಶರಣರ ವೀರಶೈವದಲ್ಲಿ 'ಭವಿ', 'ಭಕ್ತ'ರೆಂಬ ಭೇದವಲ್ಲದೆ ಯಾವುದೇ ರೀತಿಯ ಜಾತಿಭೇದ, ವೃತ್ತಿಭೇದ, ಕುಲಭೇದಗಳನ್ನು ನೋಡುವುದಿಲ್ಲ. ಶಿವನನ್ನಲ್ಲದೆ ಬೇರೆ ಶಿವನ ಪರಿವಾರ ದೇವತೆಗಳನ್ನೂ ಪೂಜಿಸಬಾರದೆಂದು ವಚನಕಾರರ ಮತ.

[೬]

**ವಚನಸಾಹಿತ್ಯದಲ್ಲಿ ಉಕ್ತವಾದ ಶೈವಪ್ರಭೇದಗಳು:**[೪೩]

ಕರ್ನಾಟಕದಲ್ಲಿ ಶಿವಶರಣರು ವೀರಶೈವವನ್ನು ಪರಿಪೂರ್ಣಾವಸ್ಥೆಗೆ ತರಲು ಪ್ರಯತ್ನಿಸಿದುದನ್ನು ನಾವು ವಚನ ಸಾಹಿತ್ಯದಲ್ಲಿ ಕಾಣುತ್ತೇವೆ. ಶೈವದ ಅನೇಕ ಶಾಖೆಗಳ ಒಳ್ಳೆಯ ಅಂಶಗಳನ್ನು ಮೈಗೂಡಿಸಿಕೊಂಡು, ಶುದ್ಧ ಹಾಗೂ ಸಾತ್ವಿಕ ಧರ್ಮವಾಗಿ ಬೆಳೆದುದೇ ವೀರಶೈವ. ಈ ಶೈವದ ಶಾಖೆಗಳಲ್ಲಿ ಪರಸ್ಪರ ಹೋಲಿಕೆಗಳು ಕಂಡುಬರುವುದು ತೀರ ಸಾಮಾನ್ಯ.

ಶೈವವು ಮೂಲತಃ ಅವೈದಿಕವಾಗಿದ್ದರೂ ತದನಂತರ ವೈದಿಕರ ಸಂಪರ್ಕದಿಂದ ವೈದಿಕ ಪದ್ಧತಿಗಳನ್ನು ಅಳವಡಿಸಿಕೊಂಡುದರಿಂದ ಆಗಮ, ವೇದ ಮಾರ್ಗಗಳೆರಡೂ ಶೈವದಲ್ಲಿ ಮಿಳಿತಗೊಂಡವು. ವೈದಿಕರ ಜಾತಿಪದ್ಧತಿ, ಯಜ್ಞ ಯಾಗ, ಮೇಲುಕೀಳು

---

೪೨ ಶೈವಧರ್ಮದಲ್ಲಿ ಮತಾಂತರವಿದ್ದು, ಮತಾಂತರವಾದವರ ಪೂರ್ವಮತದ ಅಂಶಗಳನ್ನು ಈ ವಿಭಾಗದಲ್ಲಿ ಉಳಿಸಿಕೊಂಡಿರುವುದು ಗಮನಾರ್ಹ.

೪೩ ಈ ಪ್ರಭೇದಗಳ ವಿವರಣೆ ಅರಿತುಕೊಳ್ಳಲು ಇದೇ ಲೇಖನ 'ಲಿಂಗಾಯತ ಧರ್ಮ ಸಂಸ್ಥಾಪಕರಾರು?' ಗ್ರಂಥದ ೩ನೆಯ ಅಧ್ಯಾಯ: 'ವಚನ ವಾಙ್ಮಯದಲ್ಲಿ ನಿರೂಪಿತವಾದ ಶೈವ–ವೀರಶೈವಗಳ ಸಂಬಂಧ' ಎಂಬ ದೀರ್ಘಲೇಖನ ನೋಡಬೇಕು. (೧೯೭೩)

ವಿಚಾರ ಮೊದಲಾದುವೂ ಶೈವಧರ್ಮದಲ್ಲಿ ಸಮಾವೇಶಗೊಂಡವು. ಇಲ್ಲಿ ಗೃಹಸ್ಥನಿಗೂ, ಸನ್ಯಾಸಿಗೂ ಅವಕಾಶವಿದೆ; ದ್ವೈತ, ಅದ್ವೈತಗಳಿವೆ. ಕೆಲವು ಶೈವಪಂಥಗಳಲ್ಲಿ ಕಂಡು ಬರುವ ವಾಮಾಚಾರಗಳು ಆದಿಮಾನವನ ಧಾರ್ಮಿಕ ಭಾವನೆಗಳ ಕುರುಹುಗಳಾಗಿ ಉಳಿದು ಕೊಂಡಿರಬಹುದು. ತಾತ್ವಿಕ ಸಿದ್ಧಾಂತಗಳು ಎಷ್ಟೇ ಉನ್ನತವಾಗಿದ್ದರೂ ಯಾವ ಯಾವುವೋ ಪ್ರಭಾವದಿಂದ ತತ್ವಸಮ್ಮತವಲ್ಲದ ಆಚರಣೆಗಳು ಶೈವದ ಕೆಲವು ಶಾಖೆ ಗಳಲ್ಲಿ ಕಂಡುಬರಬಹುದು. ಆದರೆ ಕಾಲಾನುಕ್ರಮದಲ್ಲಿ ಶೈವಶಾಖೆಗಳವರ ವಿಚಾರಗಳು ವಿಕಸನಶೀಲವೂ, ಪ್ರಗತಿಪರವೂ ಆಗಿವೆಯೆಂಬುದನ್ನು ಶೈವಧರ್ಮದ ಇತಿಹಾಸ ಹಾಗೂ ವಿಕಾಸದಲ್ಲಿ ಕಾಣುತ್ತೇವೆ. (ಲಿಂಗಪೂಜೆ) ಶಿವಪೂಜೆಯ ಬೆಳವಣಿಗೆಯಲ್ಲಿ, ಮೂರ್ತಿ ಪೂಜೆಯಲ್ಲಿ, ಏಕೋದೇವೋಪಾಸನೆಯಲ್ಲಿ, ಗುರು-ಜಂಗಮರ ಆರಾಧನೆಯಲ್ಲಿ ನಾವು ವಿಕಾಸಶೀಲವೂ, ಪ್ರಗತಿಪರವೂ ಆದ ಧೋರಣೆಯನ್ನೇ ಕಾಣುತ್ತೇವೆ.

ವಚನಕಾರರಲ್ಲಿ ಕಂಡುಬರುವ ಶೈವಶಾಖೆಗಳೆಂದರೆ: ಶೈವ, ಶುದ್ಧಶೈವ, ಪಾಶು ಪತಶೈವ, ಕಾಪಾಲಿಕಶೈವ-ಇವೇ ವಚನಕಾರರಲ್ಲಿ ಕಂಡುಬರುವ ಪ್ರಮುಖ ಶೈವಪಂಥ ಗಳು. ಕಪ್ಪಡಿ ಸಂಗಮದೇವಾಲಯ, ಬಸವಣ್ಣ ಶುದ್ಧಶೈವಕ್ಕೆ ಸೇರಿದವರು. ಗೊರವರೂ ಈ ಪಂಥಕ್ಕೆ ಸೇರಿದವರಿರಬೇಕು; ಶುದ್ಧಶೈವರ ಅನೇಕ ಆಚರಣೆಗಳು ವೀರಶೈವರಿಗೆ ಅತಿ ಹತ್ತಿರವಾದವುಗಳಾಗಿವೆ. ಕರ್ಮಮಾರ್ಗ ವೀರಶೈವರಿಗಿಲ್ಲ. ಭಕ್ತಿ-ಅದರಲ್ಲೂ ನಿರ್ಮಳಭಕ್ತಿ ವೀರಶೈವರದು. ಶುದ್ಧಶೈವವೇ ಪಾಶುಪತವಿರಬಹುದು. ಶೈವಗುರುವಿನ ಕೈಯಲ್ಲಿ ಲಿಂಗದೀಕ್ಷೆಯನ್ನು ಯಾವುದೇ ವೀರಶೈವನು ಪಡೆಯಬಾರದು ಎಂದಿದ್ದಾನೆ ಚೆನ್ನಬಸವಣ್ಣ. ಅಲ್ಲದೆ ಶೈವ ಸ್ವೈರನಾದ ಪಾಶುಪತಿ ಪಥವರಿಯ; ಕಾಳಾಮುಖಿ ಕಂಗೆಟ್ಟ; ಮಹಾವ್ರತಿ ಮದವೇರಿದ; ಸನ್ಯಾಸಿ ಪಾಷಂಡಿಯಾದ; ಕಾಪಾಲಿ ಮರುಳಾಗಿ ತಿರುಗಿದ; ಈ ಆರು ಭಕ್ತಿ ಪಥಕ್ಕೆ ಸಲ್ಲವು-ಎಂದೂ ಆಡಿದ್ದಾನೆ.[೪೪] ಶೈವದೀಕ್ಷೆ, ವೀರ ಶೈವದೀಕ್ಷೆ, ಪಾದೋದಕ-ಪ್ರಸಾದಾದಿ ಕ್ರಮಗಳಲ್ಲೂ ಶೈವ-ವೀರಶೈವರಿಗಿರುವ ವ್ಯತ್ಯಾಸ ಗಳನ್ನು ವಚನಕಾರರು ಎತ್ತಿತೋರಿಸಿದ್ದಾರೆ. ವೀರಶೈವರಿಗೆ ಷಡ್ದರ್ಶನಗಳು ಮಾನ್ಯವಲ್ಲ. ಶಿವದರುಶನವೇ ಅವರ ದರುಶನ. ವೀರಶೈವರಿಗೆ ವಿಪ್ರನು ಗುರುವಲ್ಲ, ವಿಪ್ರನ ಆಧಿಕ್ಯವೂ ಮಾನ್ಯವಲ್ಲ. ಶೈವಶಾಖೆಗಳನ್ನು ನಾಲ್ಕರಿಂದ ಏಳರವರೆಗೆ ಹೇಳಲಾಗಿದೆ. ಕಾಲಕಾಲದಲ್ಲಿ ಬೇರೆ ಬೇರೆಯಾಗಿ ವಿದ್ವಾಂಸರು ಕರೆದಿದ್ದಾರೆ. ಈ ಧರ್ಮವು ಭಾರತದ ತುಂಬೆಲ್ಲ ವ್ಯಾಪಿಸಿ, ಬಹಳ ಪ್ರಭಾವಶಾಲಿಯಾಗಿ ಬೆಳೆದು ಇಂದು ವೀರಶೈವದಲ್ಲಿ ತನ್ನೆಲ್ಲ ಪ್ರಗತಿಯ ಲಕ್ಷಣಗಳನ್ನು ತೋರಿಸುತ್ತದೆ.

---

೪೪ ಚೆನ್ನಬಸವಣ್ಣನವರ ವಚನ, ೫೪೫; ಸಂಪಾದಕರು: ಡಾ. ಆರ್. ಸಿ. ಹಿರೇಮಠ (೧೯೬೫)

# ೧೨ನೆಯ ಶತಮಾನ ಪೂರ್ವದ ಶೈವಧರ್ಮದಲ್ಲಿ ವೀರಶೈವ ಕುರುಹುಗಳು

—ಡಾ. ವಿ. ಶಿವಾನಂದ

**ಸಮಸ್ಯೆಯ ಯಥಾರ್ಥತೆ: ಪ್ರಾಸ್ತಾವಿಕ ಮಾತುಗಳು**
**ವೀರಶೈವ ಮತಸ್ಥಾಪಕರು:**

ಶೈವಧರ್ಮ ಎಷ್ಟೇ ಪ್ರಾಚೀನವಾಗಿದ್ದಿರಲಿ, ಎಷ್ಟೇ ಶಾಖೋಪಶಾಖೆಗಳಲ್ಲಿ ಪ್ರಸಾರಗೊಂಡಿದ್ದಿರಲಿ, ಆ ಸನಾತನ ಶೈವ ವೃಕ್ಷದ ಬೇರುಗಳು ಎಷ್ಟೇ ಆಳಕ್ಕಿಳಿದಿರಲಿ ಅದಕ್ಕೆ ಸಾರವತ್ತಾದ ಹಾಗೂ ಆಚಾರ–ವಿಚಾರ ಸಮಾವಿಷ್ಟವಾದ 'ವೀರಶೈವ'ವೆಂಬ ಕುಸುಮ ಅರಳಿ ಮಗಮಗಿಸುವಂತಾದುದು ಇಂದಿಗೂ ಆ ಧರ್ಮವನ್ನು ಅನುಸರಿಸಿರುವ ಬಹುಸಂಖ್ಯಾತ ಜನರಿರುವ ಕರ್ನಾಟಕದಲ್ಲಿ ಹಾಗೂ ನೆರೆನಾಡಾದ ಆಂಧ್ರದಲ್ಲಿ ಎಂಬುದು ಅಷ್ಟೇ ಸತ್ಯ. ಇದನ್ನು ಗಟ್ಟಿಗೊಳಿಸಲು ನಡೆದ ೧೨ನೆಯ ಶತಮಾನದ ಶರಣಕ್ರಾಂತಿ, ಅದನ್ನು ಸಂಘಟಿಸಲು ಕಾರಣನಾದ ಬಸವೇಶ್ವರ, ಈ ಕಾಲ–ವ್ಯಕ್ತಿ, ವಿಷಯ ಪರವಾದ ಸಂಗತಿಗಳು ಜನತೆಯಲ್ಲಿ ಎಷ್ಟು ಭದ್ರವಾಗಿ, ಬೇರೂರಿವೆಯೆಂದರೆ, ಇದಕ್ಕೆ ಬಾಧಕವಾದ ಯಾವ ಮಾತನ್ನಾಡಿದರೂ ಜನತೆಯ ಭಾವನೆ ಕೆರಳುವಷ್ಟು ೧೨ನೆಯ ಶತಮಾನದ ಧಾರ್ಮಿಕ ಕ್ರಾಂತಿ ಇಂದಿಗೂ ಜಾಗೃತ ಪ್ರಜ್ಞೆಯನ್ನು ಪಡಿಮೂಡಿಸಿವೆ. 'ಕೊನೆಗೆ ನಿಲ್ಲುವುದು ಅಭಿಮಾನವಲ್ಲ ಸತ್ಯ' ಎಂಬ ಹೇಳಿಕೆ (ಬಿ.ಎಂ.ಶ್ರೀ.) ಸತ್ಯಪೂರ್ಣ ಹೌದು. ಆದರೆ ಅಹಂಕಾರ ರಹಿತವಾದ ಆತ್ಮ ಪ್ರತ್ಯಾಯದಂತಹ ಅಭಿಮಾನ–ಗೌರವಗಳು ಸತ್ಯದಿಂದ ದೂರವಾಗಿ ನಿಲ್ಲದೆ ಸತ್ಯ ಸಾಕ್ಷಾತ್ಕಾರ ರೂಪಿಯಾದ ದೇಗುಲಕ್ಕೆ ಸುವರ್ಣದ ಕಳಸದಂತೆ ಶೋಭಿಸುತ್ತವೆ. ಇಂತಹ ಸಾಪೇಕ್ಷಭಾವನೆಯಿಲ್ಲದೆ ಹೋದರೆ, ಶೈವ–ವೀರ ಶೈವಗಳೆರಡೂ ಇತ್ತಂಡದವಾದಗಳಾಗುತ್ತವೆ. ಆದರೆ ಎಲ್ಲ ವಾದ–ವಿವಾದಗಳಿಂದ ಅತೀತವಾದ ನಿರ್ದ್ವಂದ್ವವಾದ ಸಮನ್ವಯೀಕರಣವನ್ನು ವೀರಶೈವವು ಬೋಧಿಸುವುದರಿಂದ ಇಲ್ಲಿ ವೀರಶೈವದ ಕುರುಹುಗಳು ಎಷ್ಟು ಪ್ರಾಚೀನವಾಗಿ ಶೈವಧರ್ಮದಲ್ಲಿ ದೊರಕಬಲ್ಲವು ಎಂಬುದರ ಬಗೆಗೆ ವಿವೇಚಿಸಲು ಯತ್ನಿಸಿದೆ. ಈ ಧರ್ಮದ ಪ್ರಾಚೀನತ್ವವನ್ನು ಅಭಿಮಾನ ಮತ್ತು ಸತ್ಯ ಇವೆರಡೂ ನೆಲೆಯಲ್ಲಿ ಅವಲೋಕಿಸಿರುವ ಪ್ರಮುಖ ಆಲೋಚಕ, ವಿದ್ವಾಂಸರ ಅಭಿಮತಗಳನ್ನಿಲ್ಲಿ ಮೊದಲಿಗೆ ಕೊಟ್ಟಿದೆ.

**ಪಂ. ಗೋಪಿನಾಥ ಕವಿರಾಜರ ಹೇಳಿಕೆ:**

The sect had its origin about the middle of the 12th

century A. D. being founded by a Brahmin named Basava, who had been the Prime Minister of the Kalachuri King Bijjala. Of cource there are differences of opinion. But it is beyond doubt that Basava was a very important figure and it he was not the actual founder, he was atleast the reformer of the sect, what Goutama had been to 'Buddhism' and Mahavira to Jainisum. (According to traditions) Basava was to this Saiva faith. According to tradition, the Sect originated from five ascetics who become the first heads of five original monasteries, the names of there pontiffs are; Ekorama, Panditaradhya, Revana, Marula and Vishwaradhya. They appeared in a miraculous way from the following Lingas respectively viz: Sri Mallikarjuna in Dhatukunda, Ramanath in Draksharama, Someshwar in Kollipaki, Siddesha in Vatakshetra and Vishweshwar in Banaras.[೧]

ಡಾ. ಎಸ್: ಸಿ. ನಂದೀಮಠ

ಈ ಮತದ ಅನುಯಾಯಿಗಳು ವಿಶೇಷವಾಗಿ ಕರ್ನಾಟಕದಲ್ಲಿ ಇರುವರು ಎಂಬುದನ್ನು ಒಪ್ಪುವ ಡಾ. ನಂದೀಮಠರು ಈ ಧರ್ಮದ ಉಗಮದ ಬಗೆಗೆ ಹೇಳುವುದೇನೆಂದರೆ,

ಈಗ ನಮಗೆ ದೊರೆತ ಆಧಾರಗಳಿಂದ ಈ ಧರ್ಮದ ಉಗಮವನ್ನು ಕಂಡು ಹಿಡಿಯಲು ಸಾಧ್ಯವಿಲ್ಲ. ವೀರಶೈವ ಧರ್ಮದ ಕೆಲವು ಗ್ರಂಥಗಳಲ್ಲಿ ಇದರ ಉಗಮವಿದ್ದು, ಆಚಾರ್ಯರಿಗೆ ಅನ್ವಯಿಸಿವೆ ಎಂದು ಉಲ್ಲೇಖಿಸಿದೆ. ಇವರು ಪರಮೇಶ್ವರನ ಪಂಚ ಮುಖಗಳಿಂದ ಉದ್ಭವಿಸಿದ ಪಂಚಗಣಾಧೀಶ್ವರರೆಂದೂ, ಯುಗ ಯುಗಾಂತರಗಳಲ್ಲಿ ಬೇರೆ ಬೇರೆ ನಾಮಗಳಿಂದ ಭೂಮಿಗೆ ಅವತರಿಸಿ, ವೀರಶೈವ ಮಾರ್ಗವನ್ನು ಸ್ಥಾಪಿಸಿದರೆಂದೂ ಪ್ರತೀತಿಯಿದೆ. ಈ ಆಚಾರ್ಯರ ಕಥೆಗಳು ಪೌರಾಣಿಕ ಕಥೆಗಳಂತೆ ಕಂಡರೂ, ಇವರು ಇತಿಹಾಸ ಪುರುಷರಾಗಿರಬೇಕೆಂದು ಊಹಿಸಲು ಅವಕಾಶವಿದೆ." ಮುಂದುವರೆದು ಹೇಳುವ ಇನ್ನೊಂದು ಮಾತೇಂದರೆ, "ಕ್ರಿ. ಶ. ೧೧-೧೨ನೆಯ ಶತಮಾನಗಳಲ್ಲಿ ಇದ್ದಿರಬಹುದಾದ ರೇವಣಸಿದ್ಧ, ಪಂಡಿತಾರಾಧ್ಯ, ಏಕೋರಾಮ ಮೊದಲಾದವರು ವೀರಶೈವ ಧರ್ಮದ ಪ್ರಗತಿಗೆ ಬಹಳವಾಗಿ ದುಡಿದಿರುವರು. ಇವರೇ ಪಂಚಾಚಾರ್ಯರೋ, ಕದ್ದಿನ್ನರೋ ನಿಶ್ಚಯವಾಗಿ ಹೇಳುವುದು ಸಾಧ್ಯವಿಲ್ಲ. ಒಂದು ವೇಳೆ ಇವರೇ ಪಂಚಾಚಾರ್ಯರೆಂದು ಸಿದ್ಧವಾದರೆ, ಪಂಚಾಚಾರ್ಯರ ಕಾಲ ಕ್ರಿ. ಶ. ೧೧-೧೨ನೆಯ ಶತಮಾನಗಳಾಗುವುದು" ಮತ್ತೂ ಹೇಳುವುದೇನೆಂದರೆ, 'ಬಸವಣ್ಣನವರಿಂದಲೇ ವೀರಶೈವ ಮತ ಸ್ಥಾಪಿತವಾಯಿತೆಂದು ಕೆಲವರ ಗ್ರಹಿಕೆ--ಇದು ಸರಿಯಲ್ಲ.' ಇದಕ್ಕೆ ಅವರು ಕೊಡುವ ಕಾರಣಗಳು ಇವು.

೧ Gopinath Kaviraj (1987)

೧) ಬಸವಣ್ಣನವರ ಚರಿತ್ರೆಯನ್ನು ವಿವರಿಸುವ ಗ್ರಂಥಗಳ ಮೇಲಿಂದ, ಅವರು ಮತಸ್ಥಾಪಕರಿದ್ದಂತೆ ತೋರುವುದಿಲ್ಲ.

೨) ಎಲ್ಲ ಶರಣರಿಗೆ ಬಸವಣ್ಣನವರು ಗುರುಗಳಾಗಿರಲಿಲ್ಲ. ತಿರುಗಿ ಬಸವಣ್ಣನವರೇ ಅವರೆಲ್ಲರನ್ನು ಪೂಜಿಸುತ್ತಿದ್ದರು.

ಆದುದರಿಂದ ೧೨ನೆಯ ಶತಮಾನದಲ್ಲಿ ಇದು ಉದಯಿಸಿರಲಾರದು. ಆದರೂ ೧೨ನೆಯ ಶತಮಾನದಲ್ಲಿ ಇದರಲ್ಲಿ ಬಹುವಾಗಿ ಮಾರ್ಪಾಡುಗಳು ಆಗಿರಬೇಕು.[೨] ಖ್ಯಾತ ಇತಿಹಾಸಜ್ಞ ಕೆ. ಎ. ನೀಲಕಂಠ ಶಾಸ್ತ್ರಿಗಳ ಹೇಳಿಕೆ ಇಂತಿದೆ.

ನೀಲಕಂಠ ಶಾಸ್ತ್ರಿ ಕೆ.

The other developments of saivism (based on 28 Saiva Agamas) was the growth of 'vira saivism' or the 'Lingayat cult' in karnataka and the Talugu country, Basava the prime minister of Kaluchuri Bijjala king at kalyani (1156) in usually regarded as the founder of the sect. Lingayat tradition overs that the Sect is very old and was founded by ascetics Ekorama; Panditaradhya, Revana, marula and vishwaradhya who were held to have sprung from five.

head of siva. Basava they say was the Reviver of the faith, but we know for a fact that The five asectics were all contem Poraries of Basava same order same younger, the early history of virashaivism in therefore still some what uncertain.[೩]

ಮೇಲಿನ ಮೂವರಲ್ಲಿ ಗೋಪಿನಾಥ ಕವಿರಾಜರದು ಅಭಿಮಾನ ಪೂರ್ವವಾದ, ಪ್ರಗತಿಶೀಲ ಧೋರಣೆಯ ಬಿಚ್ಚುನುಡಿ, ಕೆಚ್ಚುನುಡಿ, ಪ್ರಾಂಜಲ ಹೇಳಿಕೆ, ಉಳಿದವರು ಅಭಿಮಾನ ಹಾಗೂ ಚಾರಿತ್ರಿಕ ಸತ್ಯ ಎರಡನ್ನೂ ಸಂಕೀರ್ಣಗೊಳಿಸಿ ಹೇಳ ಹೊರಟರೂ, ಯತಾರ್ಥತೆಯನ್ನು ಮರೆಮಾಡಿದವರಲ್ಲ. ಪೌರಾಣಿಕವಾಗಿ ನಂಬಲಾದಂತೆ ಪಂಚಾಚಾರ್ಯರು ವೀರಶೈವ ಮತಸ್ಥಾಪಕರು ನಿಜ, ಐತಿಹಾಸಿಕವಾಗಿ ಬಸವಣ್ಣನವರು ಸ್ಥಾಪಕರು- ಅಷ್ಟೇ ನಿಜ. ಆದರೆ ಮತೀಯ ಆಚರಣೆ ಪ್ರಣಾಲಿಕೆಗಳ ಮೇಲಿಂದ ಮತೋದ್ಧಾರಕರು ಆದರೆ ಮತಸ್ಥಾಪಕರಲ್ಲವೆಂಬುದನ್ನು ನಂದೀಮಠರು ಹೇಳುತ್ತಾರೆ. ನೀಲಕಂಠ ಶಾಸ್ತ್ರಿಗಳು ಈ ಸೂಕ್ಷ್ಮ ಭೇದವನ್ನರಿತಿದ್ದರೂ ಕೂಡ ಬಸವೇಶ್ವರರು ವೀರಶೈವ ಅಥವಾ ಲಿಂಗಾಯತದ ಮತಸ್ಥಾಪಕರೆಂದು ಹೇಳಲು ಹಿಂಜರಿಯುವುದಿಲ್ಲ. ಪಂಚಾಚಾರ್ಯರಿಗೆ

---

೨ ಡಾ: ನಂದೀಮಠ ಎಸ್. ಸಿ. (೧೯೮೪)

೩ Neelakantha Shastri K. A. (1966)

ಆ ಸ್ಥಾನವನ್ನು ಬಿಟ್ಟುಕೊಡಬಹುದಾದರೂ, ಅವರೂ ಸಹ ಬಸವೇಶ್ವರರಿಗೆ ತುಸು ಹಿಂದೆ-ಮುಂದೆ ಬದುಕಿದ್ದ ಐತಿಹಾಸಿಕ ವ್ಯಕ್ತಿಗಳೇ ಎಂಬುದನ್ನು ದೃಢಪಡಿಸುತ್ತಾರೆ. ನಮ್ಮ ಸಮಾಜದ ತಿಳುವಳಿಕೆಯಲ್ಲಿ ಕಂಡುಬರುವ ಒಂದೇ ಒಂದು ದೌರ್ಬಲ್ಯವೆಂದರೆ, ಪುರಾಣವನ್ನು ಎಷ್ಟು ಶ್ರದ್ಧೆ ನಿಷ್ಠೆಗಳಿಂದ, ಭಕ್ತಿ ಭಾವುಕತೆಗಳಿಂದ ಪರಿಗ್ರಹಿಸುತ್ತೇವೆಯೋ ಅಷ್ಟೇ ಶ್ರದ್ಧೆ ನಿಷ್ಠೆಗಳಿಂದ ಸತ್ಯ ಸಂಗತಿಗಳನ್ನು, ಐತಿಹಾಸಿಕ ಸಂಗತಿಗಳನ್ನು ಅಲಕ್ಷಿಸುವುದು ಅಥವಾ ಸಂದಿಗ್ಧವಾಗಿಟ್ಟು ಸಾಮಾನ್ಯ ಜನತೆಯ ಕುತೂಹಲವನ್ನು ಕೆರಳಿಸುವಂತೆ ಮಾಡುವುದೂ ಆಗಿದೆ. ಬಸವಣ್ಣನವರು ವೀರಶೈವ ಸ್ಥಾಪಕರಲ್ಲ ಎಂದು, ಹೇಳುವ ಪಕ್ಷದವರು ರೇಣುಕ ಮೊದಲಾದವರು ಐತಿಹಾಸಿಕವಾಗಿ ಬದುಕಿದ್ದ ವ್ಯಕ್ತಿಗಳೇ ಆಗಿದ್ದರೆಂದು ಹೇಳಿರುವ ಪಂಡಿತರ ಅಭಿಮತಗಳನ್ನು ಒಪ್ಪಿ ಅವರ ಕಾಲವನ್ನು ಏಕೆ ನಿರ್ಧಾರ ಪಡಿಸುವದಿಲ್ಲ? ಬಸವಣ್ಣನವರಿಗಿಂತ ಹಿರಿಯ ಇಲ್ಲವೆ ಕಿರಿಯ ಸಮಕಾಲೀನರಾಗಿ ಇದ್ದಿರಬಹುದಾದ ಪಂಚಾಚಾರ್ಯರ ಕಾಲವನ್ನು ಡಾ॥ ನಂದೀಮಠರು ಹೇಳುವಂತೆ ಕ್ರಿ.ಶ. ೧೧-೧೨ನೆಯ ಶತಮಾನಗಳಾಗಬಹುದು. ಇದನ್ನೊಪ್ಪಿಕೊಂಡರೆ ವೀರಶೈವ ಧರ್ಮದ ಸ್ಥಾಪನಾಚಾರ್ಯರ ವಿಷಯಗಳಿಗಾಗಲಿ, ಕಾಲಕ್ಕಾಗಲಿ ಸಂಬಂಧಿಸಿದಂತೆ ಯಾವ ತೊಡಕೂ ಇಲ್ಲ. ತೊಡಕುಗಳಿರಬಹುದಾದರೆ, ಕೇವಲ ವಾದವನ್ನು ವಾದಕ್ಕಾಗಿ ಮಾಡುವ ವಾದಿಗಳಿರುವಲ್ಲಿ ಮಾತ್ರವೆಂದು ಹೇಳಬಹುದು.

**ವಿಭಿನ್ನ ನೆಲೆಗಳಲ್ಲಿ ಧರ್ಮದ ಮೂಲ ಹಾಗೂ ಬೆಳವಣಿಗೆ :**

ಮತಸ್ಥಾಪಕರ ಸಂದಿಗ್ಧ ವಿಚಾರಗಳನ್ನು ಬಿಟ್ಟು, ಒಂದು ಮತಧರ್ಮದ ಪ್ರಾಚೀನ ನೆಲೆಗಟ್ಟನ್ನು ಬೋಧಿಸುವ ಇಲ್ಲವೆ ಪರಿವೀಕ್ಷಿಸುವ ಧೋರಣೆಗಳು ಇನ್ನೂ ಹಲವಿರಬಹುದು. ಧಾರ್ಮಿಕ ಇಲ್ಲವೆ ಆಧ್ಯಾತ್ಮಿಕ ಪರಿವೇಶದಲ್ಲಿ ಸಾಂಸಾರಿಕ ಜೀವನದಲ್ಲಿ ಆತ್ಮ ಸಾಕ್ಷಾತ್ಕಾರ ಅಥವಾ ಬಿಡುಗಡೆಯನ್ನು ಮಾಡಲೆಂದು ಮೂಡಿಬಂದ ಧರ್ಮಗಳಲ್ಲಿ, ಜೀವ-ಜಗತ್ತು-ಈಶ್ವರ ತತ್ವ ಪರಿಕಲ್ಪನೆ ಎಲ್ಲಕ್ಕಿಂತಲೂ ಸನಾತನ ಎಂದು ಹೇಳಬಹುದು. ಈ ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ವೀರಶೈವದ ಉಗಮವನ್ನು ಶೋಧಿಸುವ ದೃಷ್ಟಿ ಹಲವರದು.[೪] ಸೈದ್ಧಾಂತಿಕ ತಾತ್ವಿಕ ನೆಲೆಗಟ್ಟಿನಲ್ಲಿ ಅನಾದಿ ಶಿವವೇ ಲಿಂಗ ಸ್ವರೂಪಿಯಾದ ದೈವವಾಗಿ ಅದರಲ್ಲಿ ತೋರುವ ಅಚಲನಿಷ್ಠೆ ಸರ್ವಾರ್ಪಣ ಹಾಗೂ ಲಿಂಗಭಕ್ತಿಯನ್ನು ಮೆರೆಯುವಲ್ಲಿನ ಛಲ-ವೀರತ್ವದ ಭಾವನೆಗಳ ಮೂಲ ಎಲ್ಲಿಯೋ, ಅದುವೇ ವೀರಶೈವದ ಮೂಲವೆಂದು ಕೆಲವರ ಪ್ರತಿಪಾದನೆ.[೫] 'ಲಿಂಗಾಯತ' ಹಿಂದೂ ಧರ್ಮ ಹೌದೋ-ಅಲ್ಲವೋ ಎಂದರೆ, ಅವೈದಿಕವೋ-ವೈದಿಕವೋ, ವರ್ಣಾಶ್ರಮ

---

೪ ಧಾರ್ಮಿಕ ಮೂಲದ ವಿಭಿನ್ನ ನೆಲೆಗಳು Max webber Bhandarkar (1913)

೫ ಸುರೇಂದ್ರನಾಥ ದಾಸಗುಪ್ತ (೧೯೭೫)

ಮೂಲವೋ ಅಥವಾ ಅತಿವರ್ಣಾಶ್ರಮವೋ–ಈ ಬಗೆಗೆ ಇತ್ಯಾರ್ಥವಾಗಿ ಹೇಳಲಾಗ ದಿದ್ದರೂ ಪಾಶ್ಚಾತ ಜರ್ಮನ್ ಪಂಡಿತರ ಮಾದರಿ ಬರಹಗಳಲ್ಲೂ ಹಾಗೂ ಆ ಪರಿಸರ ದಲ್ಲಿಯೇ ಲಿಂಗಾಯತರನ್ನು ಹಿಂದೂಗಳಲ್ಲಿ ಸೇರಿಸಲು ಯೋಚಿಸಿರುವ ಕೆಲವು ಆಧುನಿಕ ಅಂತರ್‌ರಾಷ್ಟ್ರೀಯ ಲೇಖಕರಲ್ಲೂ 'ಲಿಂಗಾಯತರೆಂದರೆ ಹಿಂದುಗಳು' ಎಂಬ ದೃಷ್ಟಿ ಬೆಳೆದುಬಂದಿದೆ. ಅವರು ಹೇಳುವುದೆಂದರೆ, ಶೈವವು ಹಿಂದೂ ಧರ್ಮಗಳಲ್ಲಿ ಒಂದು. ರಾಮಕೃಷ್ಣರಂತೆ 'ಶಿವನೂ ಒಬ್ಬ ಹಿಂದೂ ದೇವತೆ, ಶಿವೋಪಾಸನೆಯ ಕಾಲಕ್ರಮಿತ ವಿಕಾಸ ರೂಪದಲ್ಲಿ ವೀರಶೈವ ಕಾಣಿಸಿಕೊಳ್ಳುವುದರಿಂದ ಇದು ಮೂಲ ಶೈವದಿಂದ ಅಷ್ಟೇನೂ ಭಿನ್ನವಲ್ಲವೆಂಬ ಅಭಿಮತ ಅವರವಾಗಿದೆ.[೬] ಇದಕ್ಕೆ ಭಿನ್ನವಾಗಿ ಲಿಂಗಾಯತ ಧರ್ಮದ ಉಗಮಕ್ಕೆ ಮೂಲಕಾರಣ ಧರ್ಮ ಮತ್ತು ತಾತ್ವಿಕ ಪ್ರತಿಪಾದನೆ ಗಳು–ಇದಾವದೂ ಅಲ್ಲ. 'ವರ್ಗ ಕುಹಕದಿಂದುಂಟಾದ ೧೨ನೆಯ ಶತಮಾನದ ಸಾಮಾಜಿಕ ಧಾರ್ಮಿಕ ಹಾಗೂ ಆರ್ಥಿಕ ತುಡಿತಗಳು ಬಹುಮಟ್ಟಿಗೆ ಕಾರಣ'ವೆಂದು ಆಧುನಿಕರ ಆಲೋಚನೆಯಾಗಿದೆ.[೭] ಇದೇ ಧೋರಣೆಯನ್ನು ನಮ್ಮಲ್ಲಿನ ವಿಚಾರವಾದಿ ಗ್ರಂಥಕರ್ತರಲ್ಲಿ ಕೆಲವರು ಉಳಿಸಿಕೊಂಡಿದ್ದಾರೆ.[೮]

ನಿಜಸಂಗತಿಯೇನೆಂದರೆ, ಸನಾತನವಾದ ಹಿಂದೂಧರ್ಮದಲ್ಲಿ ಒಳಸೇರಿರುವ ಆಸ್ತಿಕ ಪಂಥಗಳಲ್ಲಿ ಶೈವ ಅಥವಾ ವೀರಶೈವ ಒಂದಾದರೂ ಸಹ ಅದು ಜಡಗಟ್ಟಿ ನಿಲ್ಲದೆ, ವಿಕಾಸಶೀಲವಾಗಿ ಬೆಳೆಯುತ್ತ ಜೂಜ್ವಾರ್ತನವನ್ನು ಹಿಂದಿಕ್ಕಿ, ಮತಿಯ ಕಂದಾಚಾರ ಗಳನ್ನೂ, ಮೌಢ್ಯಗಳನ್ನೂ ಕಿತ್ತೊಗೆದು, ಮುಖ್ಯವಾಗಿ ಹಿಂದೂಧರ್ಮದ ವರ್ಣಾಶ್ರಮ, ಜಾತಿಪದ್ಧತಿ, ಮಾಟ, ಮಂತ್ರ, ಪೌರೋಹಿತ್ಯ ಪಂಚಸೂತಕ ಪುನರ್ಜನ್ಮ, ಕರ್ಮ, ಮೋಕ್ಷಗಾಮಿಯಾದ ಶಿವಲೋಕ ಪ್ರಾಪ್ತಿ, ಇವೇ ಮೊದಲಾದವುಗಳನ್ನು ನಿರಾಕರಿಸಿ, ಕ್ರಿಯಾಶೀಲವಾಗಿ ಬೆಳೆದು ನಿಂತುದರಿಂದ ಶೈವದ ನೂತನ ಆವಿಷ್ಕರಣ ರೂಪವೇ ವೀರಶೈವವೆಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಈ ಧರ್ಮ ಎಷ್ಟು ಪ್ರಾಚೀನ ಎಂದು ಕೇಳುವುದಕ್ಕಿಂತ ಎಷ್ಟು ಅರ್ವಾಚೀನ, ಎಷ್ಟು ಆಧುನಿಕವೆಂದು ತಿಳಯುವುದು ಸಮಂಜಸವಾಗಬಲ್ಲದು. ಹೀಗೆಂದರೆ, ಈ ಧರ್ಮಕ್ಕೆ ಹಳಿಮೆಯಿಲ್ಲವೆಂದೇನೂ ಅರ್ಥ ವಲ್ಲ. ವೀರಶೈವ ಧರ್ಮದಲ್ಲಿ ಹಳತು–ಹೊಸತು ಎರಡೂ ಸಂಯೋಜಿತಗೊಂಡಿರುವು ದನ್ನು ಮರೆಯುವಂತಿಲ್ಲ. ಈ ಸಂಯೋಜನ ಪರಸ್ಪರ ವಿರೋಧಿ ತತ್ತ್ವದ್ದಾಗಿರದೆ ಸಾಪೇಕ್ಷಿತ ರೂಪದಲ್ಲಿ ಕಾಣಿಸಿಕೊಂಡಿದೆ. ಆಗಮೋಕ್ತ ಪರಂಪರೆಯಲ್ಲಿ ಬೆಳೆದು ಬಂದ

೬ ವಿಲಿಯಂ ಮೆಕಾರ್ಮಿಕ್‌ರ ಲೇಖನ ಎ. ಕೆ. ರಾಮಾನುಜಸಾರ 'Speaking of siva' ದಲ್ಲಿ (Penguin pub. 1973)

೭ ರಮೇಂದ್ರನಾಥ್ನನಂದಿ origin of veerashiva movement to IHR New Delhi (1925)

೮ ಡಾ. ಕೆ. ಈಶ್ವರನ್ (೧೯೮೧) ಡಾ. ಎಸ್. ಶೆಟ್ಟರ್ (೧೯೭೮)

ವೀರಶೈವ ಧರ್ಮದ ವಿಕಾಸವನ್ನು ಯಾರಾದರೂ ಒಪ್ಪಲೇಬೇಕು. ಈಗ ಮಾನ್ಯ ವಾಗಿರುವ ಪಂಚಪೀಠಗಳು ಪಂಚಾಚಾರ್ಯರು ಗೌರವಾನ್ವಿತರಾದಂತೆ, ೧೨ನೆಯ ಶತಮಾನದ ಶರಣಧರ್ಮವೂ ಸಹ ವೀರಶೈವ ಧರ್ಮದ ಮೇಲ್ಮೆಯನ್ನೇ ಎತ್ತಿ ಹೇಳುವು ದಾಗಿದೆ. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳು–ಶಿವಾಚಾರ್ಯರಿಗಾಗಲಿ, ಶಿವಶರಣರಿಗಾಗಲಿ ಬೇರೆ ಬೇರೆಯಾಗಿಲ್ಲ. 'ಗುರು–ಲಿಂಗ–ಜಂಗಮ' ಈ ತ್ರಿವಿಧ ಏಕ ಮೂರ್ತಿಯಾದ 'ಸದಾಶಿವ ತತ್ವ'ದಲ್ಲಿ ಉಂಟಾದ ಆಂತರಿಕ ಭೇದಗಳೇ ಹೊರತು ಭಿನ್ನ ಘಟಕಗಳಲ್ಲ. ಮೇಲಾಗಿ ಈ ವರ್ಗ ತಾರತಮ್ಯಗಳು ಬೆಳೆದು ಬಂದ ಹಿನ್ನೆಲೆಗೆ ಹೆಚ್ಚಿನ ಇತಿಹಾಸವೇನೂ ಇಲ್ಲ. ಆದುದರಿಂದ ನಿರ್ದಿಷ್ಟವಾದ ರೀತಿಯಲ್ಲಿ ವೀರಶೈವದ ಪ್ರಾಚೀನ ನೆಲೆಗಟ್ಟನ್ನು ಬೋಧಿಸುವ ಬೌದ್ಧಿಕ ಪ್ರಯತ್ನಕ್ಕೂ, ಮತೀಯ ಪೂರ್ವಾಗ್ರಹ ಪೀಡಿತ ಭಾವನೆಗಳಿಗೂ, ಯಾವ ಸಂಬಂಧಗಳೂ ಇಲ್ಲ. ರೋಮದಲ್ಲಿ ಬೇರೂರಿ ನಿಂತ 'ಕೆಥೊಲಿಕ್ ಧರ್ಮ' ಜಿಡ್ಡುಗಟ್ಟಿ, ಕರ್ಮಠ ಸಂಪ್ರದಾಯಗಳನ್ನು ಹೆಚ್ಚಿಸಿಕೊಂಡು ಪೋಪ್‌ರಂತಹ ಮತಿಯ ಹಿಡುವಳಿಗಾರರನ್ನು ಮೇಲಕ್ಕೇರಿಸಿ, ಪೌರೋಹಿತ್ಯ ದಬ್ಬಾಳಿಕೆ ಯಿಂದ, ಸ್ವಾಮಿ-ಭೃತ್ಯಾ ಸಂಬಂಧಗಳಿಂದ ಧರ್ಮವು ಶೋಷಣೆಯ ಮಾಧ್ಯಮವಾದಾಗ, ಅದನ್ನು ಪ್ರತಿಭಟಿಸಿ ಪಶ್ಚಿಮ ಯುರೋಪ್‌ನಲ್ಲಿ ಪ್ರಾಟಿಸ್ಟಂಟ್ ಧರ್ಮ ಬೆಳೆದು ಬಂದಂತೆ ನಮ್ಮ ಸನಾತನ ಧಾರ್ಮಿಕ ವಟವೃಕ್ಷವಾದ ಹಿಂದುವಿನ ಹಳೆಯ ಬೇರುಗಳನ್ನು ಕಸಿಗೊಳಿಸಿ, ಅದರಲ್ಲಿ ಹೊಸ ಜೀವದ್ರವ್ಯವನ್ನೂ ಪೋಷಕಾಂಶಗಳನ್ನೂ ಒದಗಿಸಿ, ಹೊಸ ಗಾಳಿ ಬೆಳಕಿನಲ್ಲಿ ಅವರವರ ಆಂತರಿಕ ಸಾಧನೆಗೆ ಮುಕ್ತ ಅವಕಾಶವನ್ನು ಸ್ವಾತಂತ್ರ್ಯ–ಸಮಾನತೆಗಳನ್ನೂ, ಮತಾಚಾರದ ಚೌಕಟ್ಟನ್ನು ಮೀರಿ ಬೆಳೆಯಬಹುದಾದ ನೂರಾರು ಚೇತನಗಳನ್ನು ಈ ನೆಲದ ಮಧ್ಯದಲ್ಲಿಂದಲೇ ಉದಯಿಸಿ ಬರುವಂತೆ ಮಾಡಿ ನಿಂತ ನೆಲವನ್ನೇ ಸ್ವರ್ಗವಾಗಿಸಿದ ಶ್ರೇಯಸ್ಸು ವೀರಶೈವ ಧರ್ಮಕ್ಕಿದೆ. ಆದರೆ ಇದು ಒಂದು ಕಾಲದಲ್ಲಿ ನಡೆದ ವಿಕ್ಷಿಪ್ತ ಕ್ರಾಂತಿಯಲ್ಲ. ಬಂಡಾಯವೂ ಅಲ್ಲ. ವ್ಯಕ್ತಿಯ ಅಸ್ತಿತ್ವ ವಾದದ ನೆಲೆಗೆ ಯಾವ ಬೆಲೆಯಿದೆಯೋ ಅದಕ್ಕಿಂತ ಮಿಗಿಲಾದ 'ಮಾನವತಾವಾದ' ವಿಶ್ವಮಾನವ–ತತ್ವಕ್ಕೆ ಬಾಳಿನ ಆಶಯಗಳನ್ನು ಬದ್ಧವಾಗಿಸಿ ಅದನ್ನು ಕರ್ಷಣ ಕೇಂದ್ರ ವಾಗಿಸಿ ಐಹಿಕ–ಪಾರಮಾರ್ಥಿಕ ಎರಡನ್ನು ಅಷ್ಟೇ ಕ್ರಿಯಾಶೀಲವಾಗಿಸಿ (Positive) ತೋರಿರುವ ಧರ್ಮ ವೀರಶೈವ ಧರ್ಮ, ವೀರಶೈವ ಧರ್ಮದ ತಾತ್ವಿಕ ಮನೋಭೂಮಿ ಕೆಯಲ್ಲಿಯೇ ಈ ಗತಿಶೀಲತೆ (Dynamics) ವಿಕಾಸವಾದ (Evolution)ಗಳು ಸ್ಫುರಿ ಸಿವೆ. ಆದುದರಿಂದ ಇಲ್ಲಿನ ಸಂಸ್ಕಾರಗಳ ಘನತೆಗೆ ಬಾಹ್ಯ ಕ್ರಾಂತಿಗಿಂತ ಆಂತರಿಕ ಸಾಧನೆ ಹಾಗೂ ಸಮಷ್ಟಿ ಪ್ರಜ್ಞೆಗಳು ಮುಖ್ಯವಾಗುತ್ತವೆ. ಬಹುಶಃ ಈ 'ಶಿವತತ್ವ'ದ ಆವಿರ್ಭಾವ ಹಾಗೂ ವಿಕಾಸದ ಮೂಲವನ್ನೇ ನಾವು ವೀರಶೈವದ ಮೂಲವೆಂದು ತಿಳಿಯಲಡ್ಡಿಯಿಲ್ಲ. ಎಂದರೆ ಮತೀಯ ಮೂಲಗಳನ್ನು ಹುಡುಕುವುದಕ್ಕಿಂತ ಮತ

ಧರ್ಮದ ರಹಸ್ಯವನ್ನು ಭೇದಿಸುವ ಅಂತರಂಗ ದೃಷ್ಟಿ. ಅದನ್ನು ಆಧ್ಯಾತ್ಮಿಕ ಚಿಂತನೆ ಎನ್ನಬಹುದು. ವೀರಶೈವದ ಮೂಲವನ್ನು ಈ ಆಧ್ಯಾತ್ಮ ಚಿಂತನೆಯ ವಿಕಾಸದ ಒಂದೊಂದು ಘಟ್ಟಗಳಲ್ಲಿ ನಾವು ಕಾಣುತ್ತೇವೆ. ಹೀಗಾಗಿ ಇಲ್ಲಿನ ಪರಿವೀಕ್ಷಣೆ 'ಕುರುಹು' 'ಅರುಹು' ಹಾಗೂ 'ಆಚರಣೆ' ಎಲ್ಲದಕ್ಕೂ ಸಂಬಂಧಿಸಿದುದಾಗಿದೆ.

ತೋಂಟದ ಸಿದ್ಧಲಿಂಗರ ಒಂದು ವಚನ ಇಂದಿನ ವಿದ್ವಾಂಸರ ವಿಚಾರ ಲಹರಿಯಲ್ಲಿ ಹೇಗೆ ನುಸುಳಿದಂತಿದ್ದರೂ[೯] ಇಲ್ಲಿ ನಮಗೆ ಅದು ಪ್ರಸ್ತುತವೆನ್ನಿಸಿರುವುದು ರೇಣುಕರು-ಇಲ್ಲವೆ ರೇವಣ ಸಿದ್ಧೇಶ್ವರರು ಭಿನ್ನರೋ ಅಥವಾ ಏಕಾಭಿನ್ನರೋ ಎಂಬುದರ ನಿರ್ಣಯಕ್ಕಲ್ಲ. ಉಭಯ ವ್ಯಕ್ತಿತ್ವದ ಹಿಂದೆ ಅಡಕವಾಗಿರುವ ಏಕೈಕ 'ಲಿಂಗ ತತ್ವ' ಹಾಗೂ ಆ ಲಿಂಗತತ್ವದ ಉದಯಕ್ಕೆ ಕಾರಣವಾದ 'ಅನಾದಿ ಶಿವತತ್ವ' ಇದು ಶಿವ ಜೀವೈಕ್ಯ ಭಾವದ ಆತ್ಯಂತಿಕ ನಿಲುಗಡೆ ಇದನ್ನು ಹೀಗೆ ವಿಶ್ಲೇಷಿಸಬಹುದು.

ಶಿವ
|
ಅನಾದಿ ತತ್ತ್ವ
|
ಶಿವತತ್ವ→ರೇಣುಕ=ಆದಿಶಿವ→ರೇವಣ→ಅವಾಂತರ

ಇಲ್ಲಿನ 'ಶಿವಲಿಂಗ' ಎಂಬಲ್ಲಿನ ಅವಧಾರಣತ್ವವನ್ನು ಗಮನಿಸಬೇಕು. ಆದುದರಿಂದ ವಚನಕಾರರು ಹೇಳುವಂತೆ 'ಶಿವತತ್ವ'ದಲ್ಲಿ ಕಾಣಿಸಿರುವ ವ್ಯಕ್ತಿಯೇ ಶಿವಲಿಂಗದಲ್ಲಿ ಕಾಣಿಸಿದ್ದಾನೆ. ಎಂದರೆ ಶಿವನಲ್ಲಿಯೇ ಹುಟ್ಟಿ, ಶಿವನಲ್ಲಿಯೇ ಲಯವಾಗುವುದಕ್ಕೆ ಅರ್ಹನಾದ ಜೀವಾತ್ಮನಾಗಿದ್ದಾನೆ. ಜೀವಾತ್ಮ-ಪರಮಾತ್ಮಗಳೆರಡಕ್ಕೂ, ಅಖಂಡ ಪರಶಿವಲಿಂಗ ಮೂಲವಾಗಿದೆ. ಇಲ್ಲಿ ತೋಂಟದ ಸಿದ್ಧಲಿಂಗೇಶ್ವರರು ವ್ಯಕ್ತಿಗಳ ಚಾರಿತ್ರಿಕ ಜೀವನ ಸಂಗತಿಗಳಿಗಿಂತ ಅವರ ಹಿಂದಿರುವ ತಾತ್ವಿಕ ಅರ್ಥಕ್ಕೆ ಮಹತ್ವವಿತ್ತಿದ್ದಾರೆ. ಈ 'ವಚನ' ವೀರಶೈವ ಧರ್ಮವ ರಹಸ್ಯವನ್ನೇ ಭೇದಿಸುವ ವಚನವಾಗಿದೆಯೆಂದು ನಮಗನ್ನಿಸುತ್ತದೆ. 'ಆದಿಸ್ಥಳ-ಕುಳವ ಅನಾದಿ ಶರಣ ಬಲ್ಲ' ಎಂಬುಕ್ತಿ ಷಣ್ಮುಖ ಶಿವಯೋಗಿಗಳದಾಗಿದೆ. ಇವು ವೀರಶೈವದ ತಾತ್ತ್ವಿಕ ಮೂಲವನ್ನು ಹೇಳುವ ವಾಕ್ಯಗಳಾಗುತ್ತವೆ.

ಇದಕ್ಕಿಂತ ಹೆಚ್ಚಿನ ವಿವರಣೆ ಇಲ್ಲಿ ಅನಗತ್ಯ. ಪ್ರಸ್ತುತ ಉದ್ದೇಶ ಎಂದರೆ, ವೀರಶೈವ ಧರ್ಮದ ಕುರುಹುಗಳು ಯಾವ ಯಾವ ಹಂತಗಳಲ್ಲಿ ಹಾಗೂ ಯಾವ ಯಾವ ಮೂಲಗಳಲ್ಲಿ ಹಾಗೂ ತತ್ವ ಸಂಕೇತಗಳಲ್ಲಿ ಎಷ್ಟು ಕಾಲದಿಂದ ಹಿಂದೆ ಬೆಳೆದು ಬಂದವುಗಳಾಗಿವೆ ಎಂಬುದರ ಪರಿಶೀಲನೆ. ಇದನ್ನು ಅಧ್ಯಯನಕ್ಕೆ ಅನುಕೂಲವಾಗುವಂತೆ ಈ ಕೆಳಗಿನ ಘಟ್ಟಗಳಲ್ಲಿ ವಿಭಾಗಿಸಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

---

೯ ಡಾ|| ಜ.ಚ.ನಿ. ವಿಭೂತಿ ಪು. ೧೬೨

i) ಪ್ರಾಕ್ತನ ವೀರಶೈವ ಕಾಲ (ವೇದ ಪೂರ್ವ ಕಾಲ) (ಹರಪ್ಪ-ಮೊಹೆಂಜೋದಾರೊ)

ii) ವೇದ ಕಾಲ –(ಆರ್ಯ–ದ್ರಾವಿಡ ಸಂಘರ್ಷಗಳು)

iii) ಋಗ್ವೇದ–ಉಪನಿಷತ್ ಕಾಲ (ಪುರಾಣ ಕಾಲ) (ಮಹಾಭಾರತ ಹಾಗೂ ಇತರ ಶೈವ ಪುರಾಣಗಳು)

iv) ದರ್ಶನ ಕಾಲ (ಆಗಮ ತಂತ್ರ ಕಾಲ)

v) ವಿಭಿನ್ನ ಶೈವ ಶಾಖೆಗಳು

ಪಾಶುಪತ–ಕಾಪಾಲಿಕ–ಕಾಳಾಮುಖ ಕಾಶ್ಮೀರ–ಗುಜರಾತ್–ತಮಿಳು ಶೈವಗಳು ಪ್ರಾಚೀನ ವೀರಶೈವ ಮಠಗಳು–ವೀರಶೈವ ಜನಾಂಗ–ಸಂಸ್ಕೃತಿಯ ಕುರುಹುಗಳು.

**೧. ಪ್ರಾಕ್ತನ ಯುಗ ಅಥವಾ ವೇದ ಪೂರ್ವ ಕಾಲ:**

ಭಾರತಕ್ಕೆ ಆರ್ಯರು ಬರುವ ಪೂರ್ವದಲ್ಲಿ ನೆಲಸಿದ್ದ ಜನಾಂಗ ದ್ರಾವಿಡರದು. ಇವರು ವಾಯುವ್ಯದ ಸಿಂಧೂ ನದಿ ಕೊಳ್ಳದಲ್ಲಿದ್ದು ಜಗತ್ತಿನ ಉಚ್ಚ ಸಂಸ್ಕೃತಿ–ನಾಗರೀಕತೆಗಳನ್ನು ನಿರ್ಮಿಸಿದ ಜನಾಂಗಗಳಲ್ಲಿ ಒಂದಾಗಿ ಪರಿಗಣಿತರಾಗಿದ್ದಾರೆ. ಈ ಆರ್ಯ–ದ್ರಾವಿಡ ಸಂಘರ್ಷಗಳು ಹೆಚ್ಚಿ, ಆರ್ಯರು ಪ್ರಬಲರಾಗಿ ನಿಂತಾಗ ದ್ರಾವಿಡರು ದಕ್ಷಿಣಕ್ಕೆ ಸರಿದರು. ದಕ್ಷಿಣ ಹಿಂದೂಸ್ಥಾನವೇ ಈಗ ಸಾಮಾನ್ಯವಾಗಿ ಇವರ ನೆಲೆವೀಡಾಗಿದೆ.

ಆದರೆ ಸಿಂಧೂ ಕೊಳ್ಳದ ಅವಶೇಷಗಳಲ್ಲಿ ಈ ಜನಾಂಗ ಕೇವಲ ಭೌತಿಕ ನಾಗರೀಕತೆಯನ್ನಷ್ಟೇ ಅಲ್ಲದೆ ಧರ್ಮ, ದೇವರು, ಉಪಾಸನಾ ವಿಧಾನ, ಯೋಗ–ಆಧ್ಯಾತ್ಮ ವಿಚಾರಗಳಲ್ಲೂ ಸಹ ಮುಂದುವರೆದವರಾಗಿದ್ದರು. ಇವರು ಶಿವೋಪಾಸಕರಾಗಿದ್ದರು. ಇಲ್ಲಿ ದೊರಕಿರುವ ಕೆಲವು ಅವಶೇಷಗಳನ್ನಿಲ್ಲಿ ವಿವರಿಸಲಾಗಿದೆ.

**೨. ಪ್ರಾಕ್ತನ ಅವಶೇಷಗಳು:**

ಪೀಠಿಕೆ ಸಮೇತವಾದ ಶಿವಲಿಂಗಗಳು ಚಾಕ್ಷುಷ ಇಂದ್ರಿಯಕ್ಕೆ ಹೆಚ್ಚು ಪ್ರಾಧಾನ್ಯವಿತ್ತು ಕೆತ್ತಲಾದ ವಿಗ್ರಹಗಳು ಸಿಂಧೂ ಸಂಸ್ಕೃತಿಯಲ್ಲಿ ದೊರಕಿವೆ. ಶಿವನು 'ತ್ರಿಣೇತ್ರ' ನಾಗಿರುವುದರ ಸಂಕೇತ ಸೂಚಕವಾಗಿ ಇವು ಕೋರುತ್ತವೆ. 'ಕಣ್ಣರ್' ಎಂಬ ಜನಾಂಗವೇ ಇಂದಿನ ಕನ್ನಡಿಗರು ಎಂದು ಹೇಳುವ ಫಾದರ್ ಹೆರಾಸ್ ಕನ್ನಡದ ಪ್ರಾಚೀನತ್ವವನ್ನು ಹರಪ್ಪ ಮೊಹೆಂಜೋದಾರೋಗಳ ಮೂಲಕ್ಕೆ ಒಯ್ದಿರುವಲ್ಲಿ ಈ ತಥ್ಯ ಎದ್ದು ಕಾಣುತ್ತವೆ. ಅಚ್ಚ ದ್ರಾವಿಡ ಶಬ್ದವಾದ ಈ 'ಕಣ್ಣು' > ಕಣ್ಣರ್. ಈ ಪ್ರಾಚೀನ ಲಿಂಗಾರಾಧಕ ಜನಾಂಗವೆಂಬುದು ಇದರಿಂದ ಸ್ಪಷ್ಟ. ಆದರೆ ಇದನ್ನು ಶಂ. ಬಾ. ಜೋಶಿ[೧೦]

---

೧೦ ಜೋಶಿ ಶಂ.ಬಾ–ಋಗ್ವೇದ ಸಾರನಾಗ ಪ್ರತಿಮಾ ಪುಟ ೪೫೨

ಅವರು ಕೃಷ್ಣ>ಕಣ್ಣ>ಕಣ್ಣ>ಕಲ್ಲ-ಕಳ್ಳ (=ಹಾಲು) ಎಂಬಂತೆ ಅಸಾಮಂಜಸ್ಯ ಹಾಗೂ ದೂರಾನ್ವಯದಿಂದ ನಿಷ್ಪತ್ತಿಗೆ ತೊಡಗಿದ್ದು ಕಂಡು ಬರುತ್ತದೆ 'ಕೃಷ್ಣಪ್ಪ' ಎಷ್ಟೇ ರೂಪ ಕೆಟ್ಟರೂ 'ಕಿಟ್ಟಪ್ಪ' ಆಗಿರುವುದನ್ನು ಕಾಣುತ್ತೇವೆ. ಕೃಷ್ಣಪ್ಪ ಕಾನಾ ಆಗುವುದೂ ಉಂಟು. ಆದುದರಿಂದ ಕಣ್ಣು ಪ್ರಧಾನವಾದ ಶಿವಲಿಂಗಗಳು ಸೈಂಧವ ಸಂಸ್ಕೃತಿಯ 'ತ್ರಿಣೇತ್ರ' ಅಥವಾ 'ಬಾಳಾಕ್ಷ' ಶಿವಸೂಚಕಗಳೇ ಹೊರತು ಕೃಷ್ಣ cult ದಿಂದ ಸಂಭವಿಸಿ ದವುಗಳಲ್ಲ ಹಾಗಿದ್ದರೆ ಅವುಗಳಲ್ಲಿ ಕಪ್ಪು ಕಲೆ ಸಂಕೇತವಾಗಿದ್ದು ಕಣ್ಣಿನ ಸಂಕೇತಕ್ಕೆ ಮಹತ್ವವೇ ಇರುತ್ತಿರಲಿಲ್ಲ.

### ೩. ಸಾಂಕೇತಿಕ ಪ್ರತಿಮೆಗಳು:

ಚತುಷ್ಕೋನಾಕೃತಿಯ ಬಿಲ್ಲೆಗಳ ಮೇಲೆ 'ಅಕ್ಷಿ' ಸಾಂಕೇತಿಕ ಪ್ರತಿಮೆಗಳು ಇದೇ ಸಿಂಧೂ ಕೊಳ್ಳದಲ್ಲಿ ದೊರಕಿವೆ. ಒಂದೊಂದು ಬಿಲ್ಲೆಯ ಮೇಲೆ ೩ ಇಲ್ಲವೆ ೬ ರಂತೆ ಅಕ್ಷಿಗಳ ಚಿಹ್ನೆಗಳು ಇದರಲ್ಲಿವೆ.

### ಭಾಳಾಕ್ಷ ಶಿವ ಅಥವಾ ಮುನೀಶ್ವರ ಸಾಧನ ಪ್ರತಿಮೆಗಳು:

ಸಿಂಧೂ ಸಂಸ್ಕೃತಿಯ ಉತ್ಕೃಷ್ಟ ಪ್ರತಿಮೆಗಳಲ್ಲಿ ಹಣೆಗಣ್ಣಿನ ಮುದ್ರೆಯಲ್ಲಿ ಸಿಕ್ಕುವ ಮಾನವ ವಿಗ್ರಹಗಳು ಸಮಾವೇಶವಾಗುತ್ತವೆ. ಅಂಗ ವಸ್ತ್ರವನ್ನು ಭುಜದ ಹಿಂದೆ ಹೊದ್ದುಕೊಂಡಿರುವುದು, ಅರೆಮುಚ್ಚಿದ ಉಭಯ ನೇತ್ರಗಳು, ನಾಸಿಕದ ಮೇಲೆ ದೃಷ್ಟಿ ಯನ್ನು ಕೇಂದ್ರೀಕರಿಸಿರುವ ವಿನ್ಯಾಸ, ಧ್ಯಾನ ಪೂರ್ಣ ಭಾವ ಭಂಗಿ, ಇದೇ ಭ್ರೂಮಧ್ಯೆ ದೃಷ್ಟಿ ಸಾಧನೆ ಈ ಮಾದರಿಗಳಲ್ಲಿ ಈ ವಿಗ್ರಹಗಳು ಕಾಣುತ್ತವೆ.

ಹಣೆಯಲ್ಲಿ ಕಣ್ಣಿರುವುದೇ ಇವುಗಳ ಒಂದು ವೈಶಿಷ್ಟ್ಯ. ತ್ರಿಣೇತ್ರ ಆರಾಧಕರ ಮುನಿಗಳ ವಿಗ್ರಹಗಳನ್ನು ಆ ಚಿಹ್ನೆಗಳಿಂದ ಕಲಾವಿದರು ಇಲ್ಲಿ ಸೂಚಿಸಿದಂತಿದೆ. ಇವನ್ನು 'ಭಾಳಾಕ್ಷ ಸಿದ್ಧಿಯ ಸಾಧಕ ಮುನೀಶ್ವರ' ಎಂದು ಡಾ॥ ಶಂ.ಬಾ. ಊಹಿಸಿರುವಲ್ಲಿ ಔಚಿತ್ಯವಿದೆ. ಅಲ್ಲದೆ ಅವರು ಇವನ್ನು 'ಸಿಂಧೂ ಸಂಸ್ಕೃತಿಯ ಜೀವನಾದರ್ಶ ಸೂಚಕ ಪ್ರತಿಮೆ'ಗಳೆಂದೂ ಸಹ ಪ್ರಶಂಸಿಸಿದ್ದಾರೆ. (ಚಿತ್ರ. ಭಾಳಾಕ್ಷ ಸಾಧಕರು ೧, ೨)

### ೪. ಮಹಾಯೋಗಿ ಅಥವಾ ಪಶುಪತಿ ಆಕೃತಿಗಳು:

ಇದನ್ನು 'ಸೈಂಧವ ಸಂಸ್ಕೃತಿಯ ಮುಖ ಮುದ್ರೆ' ಎಂದು ಕರೆಯಬಹುದು. 'ವಿಶ್ವಾಧಿಪತಿಯಾದ 'ಪಶು-ಪತಿ'ಯ ಪ್ರತಿಮಾ ಸಂಕೇತ ಇಲ್ಲಿದೆ. ತತ್ಕಾಲೀನ ಇಜಿಪ್ತ, ಸುಮೇರು ಸಂಸ್ಕೃತಿಯ ಅವಶೇಷಗಳಿಂದಲೂ ಈ ಅವಶೇಷಗಳು ದೊರಕಿದ್ದರೂ 'ತ್ರಿಶೂಲ' ಸಂಕೇತವು ಇಲ್ಲಿ ಸ್ಪಷ್ಟವಾಗಿರುವಂತೆ ಅಲ್ಲಿ ಕಾಣುವುದಿಲ್ಲ. ಅವಕ್ಕೂ ಇವಕ್ಕೂ ಇರುವ ಮುಖ್ಯ ವ್ಯತ್ಯಾಸ ಈ ತ್ರಿಶೂಲ. ಮೂಲ ಕಲ್ಪನೆಗೆ ತ್ರಿಶೃಂಗವೇ ಆಧಾರ, ಇವುಗಳ ಅತ್ಯಂತ ಸಾಂಕೇತಿಕ. ತ್ರಿಪುರ, ತ್ರಿನೇತ್ರ, ತ್ರಿಶಿಖರ, ತ್ರಿದಲ, ತ್ರಿಗುಣ,

ತ್ರಿಶೂಲ ಇವೆಲ್ಲಕ್ಕೂ 'ತ್ರಿ' ಸಂಕೇತವಾಗಬಲ್ಲುದು. ಋಗ್ವೇದ ಪೂರ್ವದ ರುದ್ರ-ಶಿವ, ಮಹಾಯೋಗೇಶ್ವರ, ಭಗವದ್ಗೀತೆಯ ಕೃಷ್ಣನಲ್ಲಿ 'ಯೋಗೇಶ್ವರ' ಎಂದು ಸಂಬೋಧಿಸಲಾಗಿದ್ದರೂ, ಕೃಷ್ಣ, ವಿಷ್ಣು, ದೈವಗಳಿಗಿಂತ ಶಿವನು 'ಮಹಾಯೋಗಿ'ಯಾದ ಅಧಿದೇವತೆ. ಯೋಗೀಶ್ವರ ನಿಲುವಿನಲ್ಲಿ ಶಿವನ ವಿಗ್ರಹಗಳು ಸಿಕ್ಕುವಂತೆ ನಮಗೆ ಇನ್ನುಳಿದ ದೇವತೆಗಳ ವಿಗ್ರಹಗಳು ದೊರೆಯುವುದಿಲ್ಲ. ಪದ್ಮಾಸನಬದ್ಧವಾಗಿ, ತಪೋನಿಷ್ಟನಾಗಿ ಕುಳಿತ ತ್ರಿಶೃಂಗಧಾರಿಯಾದ 'ಶಿವ' ಸೈಂಧವ ಸಂಸ್ಕೃತಿಯ ಉಪಾಸ್ಯ ಮೂರ್ತಿಯೂ ಉಪಾಸಕನೂ ತಾನಾದ ಉಭಯವ್ಯಕ್ತಿತ್ವವುಳ್ಳ 'ಮಹಾವ್ರತಿ'ಯಾಗಿದ್ದಾನೆ. 'ಮಹೇಶ್ವರ' ನಾಗಿದ್ದಾನೆ.

**ವೃಷಭಃ** (ಚಿತ್ರ ೧೫ ಬ):

ವೃಷಭ ಅಥವಾ ವೃಷನ್ ಮಾದರಿಯ ಅವಶೇಷಗಳು ಸೈಂಧವ ಸಂಸ್ಕೃತಿಯಲ್ಲಿ ಶಿವಾರಾಧನೆಯ ಇನ್ನೊಂದು ಸಾಮಗ್ರಿಯಾಗಿವೆ. 'ವೃಷಭ'-'ಆದಿ ಪುರುಷ' ಸಂಕೇತ. ಇಜಿಪ್ಟಿಯನ್ ಸಂಸ್ಕೃತಿಯಲ್ಲಿ ಇದು 'ಗೋವಿ'ಗೆ ದೊರೆತಿದೆ. ಅಲ್ಲಿ ಅದು ಆದಿ ಮಾತೆ ಸ್ವರೂಪದ ಪ್ರತೀಕ. ಆರ್ಯ ಜನಾಂಗ ಅನಂತರದಲ್ಲಿ ವೃಷಭಕ್ಕಿಂತ ಗೋವು ಪೂಜೆಗೆ ಮಹತ್ವವಿತ್ತರೆ, ದ್ರಾವಿಡರು ಮೂಲದಿಂದಲೂ ನಂದೀ ಉಪಾಸಕರಾಗಿದ್ದಾರೆ, ಸೈಂಧವ ಸಂಸ್ಕೃತಿ ಇದನ್ನು ಎತ್ತಿ ಹಿಡಿದಿದೆ. ವೃಷಭ ಶೃಂಗ ಸಮೇತವಾದುದರಿಂದ ವೃಷಭ ಪೂಜೆ ಶೃಂಗ ದೇವತಾರಾಧನೆಯ ಸಂಕೇತವೂ ಹೌದು. ಸೃಷ್ಟಿಗೆ ಕಾರಣವಾದ ಆದಿ ದೈವವೇ ಈ ವೃಷಭ. ಮಾರ್ಷಲ್ ಅವರ ವಿವರಣೆಗಳ ಪ್ರಕಾರ 'ಕೋಡು' ವಿಶಿಷ್ಟವಾದ ದೇವತಾರ್ಚನೆಯ ಸಂಕೇತ. **There can be little doubt that horns have a special Sacred Significance (Jhon Marshell P. 54)** ಆದರೆ ಈ ಶೃಂಗವು 'ಯಜ್ಞ ಪಶು'ವಿನ ಸಂಕೇತವೆಂದು ಐರೋಪ್ಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ತಿಳಿಯಲಾಗಿದೆ. ಇದು ಶೃಂಗ ಪಶು=ಹಿರಣ್ಯ, ಶೃಂಗ=ಅಶ್ವವೆಂದು ಭಾರತೀಯರೂ ಸಹ ಅರ್ಥೈಸುತ್ತಾರೆ. ಆದರೆ ದ್ರಾವಿಡರಲ್ಲಿ ಯಜ್ಞ ಯಾಗಾದಿಗಳ ಮನ್ನಣೆಯಿಲ್ಲ. ವ್ಯತಿರಿಕ್ತವಾಗಿ 'ವೃಷಭ' ಶಿವನ ವಾಹನವಾದುದರಿಂದ ಶಿವೋಪಾಸಕರಾದ ಈ ಜನಾಂಗ ದಲ್ಲಿ 'ಶೃಂಗ ದೇವತೆ' 'ಯಜ್ಞ ಪಶು'ವಲ್ಲವೆಂಬುದು ಅತ್ಯಂತ ಸ್ಪಷ್ಟ. ಈ ಹಿನ್ನೆಲೆಯಲ್ಲಿ Martimer wheeler ಅವರ ಉಲ್ಲೇಖ ಶೈವದ ಪ್ರಾಚೀನತೆಯ ಇತಿಹಾಸದಲ್ಲಿ ಮಹತ್ವದ್ದಾಗಿದೆ.

**The likely hood that both Siva and Cinga worship have been inherited by the Hindus from Harappans is perhaps reinforced by the Probable of the bull or bulllike animals among the seal Symbols (Wheelar Mortimer)**

**ಲಿಂಗ ಮುದ್ರಿಕೆ: ▷◁**

ಮೊಹೆಂಜೊದಾರೊ 'ಲಿಪಿ' ವರ್ಣ-ಸಂಜ್ಞಾ ಲಿಪಿಯಾಗಿರದೆ ಚಿತ್ರಲಿಪಿಯಾಗಿದ್ದು, ಅದನ್ನು ವಿವಿಧ ರೀತಿಯಲ್ಲಿ ಓದಲಾಗುತ್ತದೆ. ಅಲ್ಲಿನ ಒಂದು ಚಿತ್ರಲಿಪಿ ವೀರಶೈವ ಉಪಾಸನಾ ಸಂಕೇತವಾದ ಶಿವಲಿಂಗವನ್ನು ಹೋಲುವದಾಗಿದೆ. ಮೇಲಿನ ಚಿಹ್ನೆಯು ಕೂಡುವಿಕೆಯ ಸಂಕೇತ. ಶಿವ-ಶಕ್ತಿ ಇಲ್ಲವೆ ಶಿವ-ಜೀವ ಇವುಗಳ ಐಕ್ಯದ ಪ್ರತೀಕ. ಈ ಚಿಹ್ನೆಯನ್ನು ಬೇರೆ ಆಕೃತಿಯಲ್ಲಿಟ್ಟುಕೊಂಡಾಗಲೂ, ಇದು ಅಂದಿನ ಜನಾಂಗ ವೀರಶೈವವಾಗಿದ್ದು, ಅವರು ತಮ್ಮದೇ ಆದ ಲಿಪಿಯನ್ನು ಬಳಸಿದರೆಂದು ನಾವು ತಿಳಿಯ ಬಹುದಾಗಿದೆ. ಈ ಬಗೆಗೆ ಎಂ. ಆರ್. ಸಾಖರೆ ಹೇಳಿರುವುದು ಉಲ್ಲೇಖನೀಯ.

The Sign is often found in the inscription of Mahenjodaro and Harappa, it reads ku:du and means union. The sign very likely refers to the union of male-female Principles which is so Prominent in religious tenets of the veerasaiva sect.[೧೧]

**ಸೈಂಧವ ಸಂಸ್ಕೃತಿಯಲ್ಲಿ ವೀರಶೈವ ಕುರುಹುಗಳು-ಶಿವಯೋಗ:**

ಸರ್. ಜಾನ್ ಮಾರ್ಷಲ್ ಮೊಹೆಂಜೊದಾರೊ ಸಂಸ್ಕೃತಿಯ ಹಾಗೂ ಅಲ್ಲಿನವರ ಉಪಾಸನಾ ಪದ್ಧತಿ ಕುರಿತು, ಇಂದಿನ ಲಿಂಗಾಯತ ಸಂಸ್ಕೃತಿಯ ಕುರುಹುಗಳನ್ನು ಹೋಲು ವುದಾಗಿ ಅಭಿಪ್ರಾಯ ತಳೆದಿದ್ದಾರೆ.

Carried on the person just as miniature lingas are Commonly carried by Saivates to day (Sir Jhon Marshell)

ಕೀಫ್ ಮತ್ತು ಫ್ರೀಲಸ್ಕಿಯವರು ಲಿಂಗ ಪೂಜಾ ಪದ್ಧತಿಗಳು ಸಿಂಧೂ ಸಂಸ್ಕೃತಿಯ ಗಡಿಗಳನ್ನು (ವಲಯಗಳನ್ನೂ) ದಾಟಿ, ಮೆಡಿಟರೇನಿಯನ್‌ದವರೆಗೂ ಪ್ರಸಾರಗೊಂಡಿ ದ್ದವು ಎಂದು ಹೇಳುತ್ತಾರೆ. ಬಹುಶಃ ವ್ಯಾಪಾರ-ವಣಿಕ್ ಸಂಬಂಧಗಳು, ಪರಸ್ಪರ ಸಂಸ್ಕೃತಿ ಗಳ ಪ್ರಸಾರ-ಪ್ರಭಾವಕ್ಕೆ ಕಾರಣವಾಗಿರುವುದರಿಂದ ಈ ವ್ಯಾಪ್ತಿ ಅಸಂಭವವೇನೂ ಆಗಿ ತೋರುವುದಿಲ್ಲ. ಋಗ್ವೇದದಲ್ಲಿನ 'ಫಣಿಗಣರು' ದ್ರಾವಿಡ ಸೂಚಕವಾಗಿದ್ದು, ಇವರು ವಣಿಕ್ ಜನರಾಗಿದ್ದು, ಲಿಂಗಾಯತ ಸಂಸ್ಕೃತಿಯ ಪ್ರಸರಣಕ್ಕೆ ಕಾರಣರಾಗಿರಲೂಬಹುದು. ಆದರೆ, ಮುಖ್ಯವಾಗಿ ತ್ರಿಣೇತ್ರ, ತ್ರಿಶೂಲ, ಪಶುಪತಿ, ಮಹಾಯೋಗಿ, ಯೋಗೀಶ್ವರ, ಊರ್ಧ್ವ ಕೇತು, ಅರ್ಧನಾರೀಶ್ವರ-ಇವೇ ಮುಂತಾದ ಸಂಕೇತಗಳ ವಿಗ್ರಹಗಳನ್ನು ಫಾದರ್ ಹೆರಾಸ್‌ರು "the joined life of the three great Gods the devine Triad" ಎಂಬ ಬರಹದಲ್ಲಿ ವಿಶ್ಲೇಷಿಸಿದ್ದಾರೆ. ಈ ಆಧ್ಯಾತ್ಮಿಕ ಕಲ್ಪನೆ ಶಿವ-ಶಕ್ತಿ, ಶಿವ-ಜೀವಗಳಲ್ಲಿನ ಅದ್ವೈತ ಭಾವದ ಸೂಚಕ. ಇವರ ವಿಕಾಸವನ್ನು

---

೧೧ Sakhare M. R. (1978)

ಉಪನಿಷತ್ತುಗಳಲ್ಲಿ ನಾವು ಮುಂದೆ ಕಾಣುತ್ತೇವೆ. ವೀರಶೈವ ಶಿವಾಚಾರ್ಯರು ಹಾಗೂ ಶಿವಶರಣರು ಶಿವಯೋಗಕ್ಕೆ ಹೆಚ್ಚಿನ ಮಹತ್ವವಿತ್ತಿದ್ದಾರೆ. ಇದನ್ನು ಸಿಂಧೂ ಸಂಸ್ಕೃತಿ ಸಭ್ಯತೆಗಳಲ್ಲಿ ಮೊದಲಿಗೆ ಕಾಣುತ್ತೇವೆ. 'ಅಲೆಸಾ' ಮತ್ತು 'ಆ ಸಾವಿಸಾ' ಎಂಬ ಲೇಖಕರು Vedic Age ಗ್ರಂಥದಲ್ಲಿ; "ನಾಸಿಕಾಗ್ರದಲ್ಲಿ ಲಕ್ಷ್ಯವಿಟ್ಟ ಧ್ಯಾನಾಸಕ್ತಯೋಗಿ ಅಥವಾ ಯೋಗೀಶ್ವರ ಆರ್ಯರಿಗಿಂತ ಮೊದಲಿದ್ದ ಜನಾಂಗದವರ ಆರಾಧ್ಯ ದೈವ ಉಪಾಸನ ಮೂರ್ತಿ"ಯೆಂದು ಹೇಳಿರುವುದು ಇಲ್ಲಿ ಗಮನಾರ್ಹವಾಗಿದೆ. ಇದೇ ಅಭಿಪ್ರಾಯ 'ಪ್ರೋ' ಅವರದೂ ಆಗಿದೆ. (Indian culture) ಮುಂದೆ ಬಂದ ಪಾತಂಜಲಿ ಕೂಡ ಶಿವೋಪಾಸಕನಾಗಿದ್ದರಿಂದ ಸಾಮಾನ್ಯವಾಗಿ ತನ್ನ 'ಯೋಗ ಸೂತ್ರ'ದಲ್ಲಿ ಇದಕ್ಕೆ ಮಹತ್ವ ವೀಯುತ್ತಾನೆ. ಶಿವಶರಣರು ತಮ್ಮ ಆಧ್ಯಾತ್ಮ ಮಾರ್ಗದಲ್ಲಿ ಷಟ್‌ಸ್ಥಲ ಆಚರಣೆಯನ್ನು ಶಿವಯೋಗ ಸಾಧನೆಯಿಂದಲೇ ಸಾಧಿಸಿದ್ದಾರೆ. ಷಟ್‌ಸ್ಥಲಗಳಿಗೆ ಮೂಲ ಷಟ್‌ಚಕ್ರಗಳು, ನವಚಕ್ರಗಳು ನವಲಿಂಗ ಸಕೀಲ ಎಲ್ಲದಕ್ಕೂ ಶಿವಯೋಗವೇ ತಳಹದಿಯಾಗಿರುವ ಮೂಲ ವನ್ನು ನಾವು ಮೊಹೆಂಜೊದಾರೊ ಸಂಸ್ಕೃತಿಯಲ್ಲಿ ಕಾಣುತ್ತೇವೆ. ಇಲ್ಲಿನ ಪೂಜೆ, ಉಪಾಸನೆಗಳೇ ದ್ರಾವಿಡ ಸಂಸ್ಕೃತಿಯ ಕುರುಹುಗಳಾಗಿವೆ. ದ್ರಾವಿಡರು ಆರ್ಯರಂತೆ ಹೊರಗಿನ ನೈಸರ್ಗಿಕ ವಸ್ತುಗಳನ್ನು ಆರಾಧಿಸದೆ, ಹೆಚ್ಚಾಗಿ ಅಂತರ್ಮುಖಿಗಳಾಗಿ ಪೂಜೆ ಗೈಯ್ಯುತ್ತಿದ್ದುದು ಕಂಡು ಬರುತ್ತದೆ. 'ದರ್ಶನ' (seeing) 'ಮನನ' (thinking) ಹಾಗೂ 'ಧ್ಯಾನ' (Meditation)-ಇವು ದ್ರಾವಿಡರ ಉಪಾಸನಾ ವೈಶಿಷ್ಟ್ಯಗಳಾಗಿವೆ.

**ವೀರಾಃ-ಸಿಂಧು ಪುತ್ರಾಃ ಹಾಗೂ ಅಸುರರಲ್ಲಿ ಲಿಂಗಧಾರಿಗಳ ವಿಚಾರ:**

ಋಗ್ವೇದದಲ್ಲಿ 'ವೀರಾಃ ಸಿಂಧು ಪುತ್ರಾಃ' ಎಂದಿದೆ. ಇದರರ್ಥ ಸಿಂಧು ಪುತ್ರರು. ವೀರರು. ಇಲ್ಲಿನ ಪದ ಸೈಂಧವ ಸಂಸ್ಕೃತಿಯ ನಿರ್ಮಾಣಕ್ಕೆ ಕಾರಣರಾದ ಜನಾಂಗದ ವಿಶೇಷಣ ವಾಚಿ. ಇಲ್ಲಿನ 'ವೀರ' ಪದ 'ವೀರಶೈವ'ದ ನಿಷ್ಪತ್ತಿಗೆ ಸಹಾಯಕವಾಗಲೂ ಬಹುದೆಂದು ಕೆಲವರು ಊಹಿಸಿದ್ದಾರೆ. (ಡಿ. ಎನ್. ಯಲ್ಲಪ್ಪ-ನಿವೃತ್ತ ನ್ಯಾಯಾ ಧೀಶರು) ಹೇಳುವಂತೆ ಋಗ್ವೇದದಲ್ಲಿ 'ರುದ್ರಸ್ಯ ಮರ್ಯಾಃ ಅಸುರಃ' ಎಂಬ ಇನ್ನೊಂದ್ಯು ವಾಕ್ಯವಿದೆ. ಈ ಉಕ್ತಿಗಳ ಮೇಲಿಂದ 'ವೀರ' ಪದ ವಾಚ್ಯರಾದ ಮರುದ್ಗಣ ವೀರಶೈವ ಪದದಲ್ಲಿರುವ 'ವೀರ' ಪದಕ್ಕೆ ಕಾರಣವಾಗಿರಬೇಕು ಎಂದಿದ್ದಾರೆ. ರುದ್ರ ಪುತ್ರ ಮರುದ್ಗಣ ಹಾಗೂ ರುದ್ರ ಪುತ್ರ ವೀರಭದ್ರರ ಮೂಲ ನಿವಾಸಿಗಳು ಸಿಂಧೂ ತೀರದ ಜನಾಂಗ. ಇದು ಡಾ|| ಜ. ಚ. ನಿ. ಅವರ ತರ್ಕ ಕೂಡ ಆಗಿದೆ. (ಡಾ|| ಜ. ಚ. ನಿ. ವೀರಶೈವ- ೧೯೬೧)

**ಆರ್ಯ-ದ್ರಾವಿಡ ದೈವಗಳು, ರುದ್ರ-ವೀರಭದ್ರರು, ಸಂಘರ್ಷ-ಸಮನ್ವಯ:**

ವೈದಿಕ ಧರ್ಮದ ದೈವಾನುದೈವತರೆಲ್ಲರೂ ಆರ್ಯ ಜನಾಂಗದ ದೈವಗಳು, ಋಗ್ವೇದದಲ್ಲಿ ಆದಿ ದೈವಗಳಲ್ಲ ಎಲ್ಲಕ್ಕಿಂತ ಹೆಚ್ಚಿನ ಪ್ರಾಶಸ್ತ್ಯ ಇಂದ್ರನಿಗೆ. ಅವರನ್ನು

ಸ್ತುತಿಸುವ ಸೂಕ್ತ ಸಂಖ್ಯಾನುಕ್ರಮಣಿಕೆ ಮೇಲಿಂದ ಹೇಳುವುದಾದರೆ ಅಗ್ನಿಗೆ–೨೦೦, ಸೋಮನಿಗೆ–೧೨೦, ಅಶ್ವಿನೀ ಕುಮಾರರಿಗೆ–೫೦, ಮರುಕ್ ದೇವತೆಗಳಿಗೆ–೪೦, ಉಷೆಗೆ–೨೫, ವರುಣನಿಗೆ–೧೨, ಸವಿಕೃ ಹಾಗೂ ಬೃಹಸ್ಪತಿಗಳಿಗೆ–೧೧, ಸೂರ್ಯನಿಗೆ–೧೦, ವಿಷ್ಣುವಿಗೆ–೬, ಕಟ್ಟಕಡೆಯದಾಗಿ ರುದ್ರನಿಗೆ–೩. ಇದರ ಮೇಲಿಂದಲೇ ರುದ್ರನು ಆರ್ಯರ ದೇವತೆ ಆಗಿಲ್ಲದಿರುವುದು ಸ್ಪಷ್ಟ. ರುದ್ರನಿಗೆ ಅಪ್ರಾಶಸ್ತ್ಯವಿತ್ತಿರುವ ವಾಕ್ಯಗಳೂ ಸಹ ಉಂಟು. ವೈದಿಕ ಧರ್ಮದಲ್ಲಿ ರುದ್ರನ ಆಚರಣೆ ಕುರಿತಾದ ಆರ್ಯರ ಪಕ್ಷಪಾತ ಮನೋಧರ್ಮವನ್ನು, ಕುರಿತು ಇತಿಹಾಸಜ್ಞರು ಚರ್ಚಿಸಿದ್ದಾರೆ.

The position of 'Pasu Pata' or 'Rudra' is rather strange in vedic Religion. In the ritual text; all other Gods are asked to came to the place of Sacrifice, but 'Rudra' and his followers 'Rudriyas' are asked to go away. The very name 'Rudra' was a taboo.[೧೨] ಈ ಧೋರಣೆ ಋಗ್ವೇದದಲ್ಲಿರುವಂತೆ ಐತರೇಯ ಬ್ರಾಹ್ಮಣದಲ್ಲೂ ಇದೆ. (Iy. bo. III. 3, 9, 10) ಅನಾರ್ಯ ಜನಾಂಗದ ದೇವರಾದ ರುದ್ರನನ್ನು ಆರ್ಯರು ಅನಂತರ ಸ್ವೀಕರಿಸಿದ್ದು ಕಂಡು ಬರುತ್ತದೆ. ಅದಕ್ಕಾಗಿ ವೈದಿಕ ಧರ್ಮದ 'ರುದ್ರ'–ಗ್ರೀಕ್ ಧರ್ಮದಲ್ಲಿನ 'ಥಿಯೋ ಅಪೊ ಪೊಂಪೇಮಿಯೋ'ನಂತೆ 'ಪರಕೀಯ ದೈವ' ಎಂದು ಉಲ್ಲೇಖಿಸಿದ್ದುಂಟು.[೧೩] ಆದರೂ ದ್ರಾವಿಡರ ದೇವತೆಯಾದ ರುದ್ರನನ್ನು ಆರ್ಯರು ಕೈ ಬಿಡಲಿಲ್ಲ. ಋಗ್ವೇದದಲ್ಲಿ ಅವನನ್ನು ವೇದ ಋಷಿಗಳು ಸ್ತುತಿಸಿದ್ದಾರೆ. ಆ ದೈವತ್ವದ ಬಗೆಗೆ ಮುಂದೆ ಅವರು ರಾಜಿ ಮಾಡಿಕೊಂಡಿದ್ದಾರೆ. ಅದಕ್ಕೆ 'ಅವನು'– ಎಂದರೆ, ರುದ್ರನು ಭಯಂಕರ, ಪ್ರಳಯಾಗ್ನಿ ರುದ್ರ. ಅವನ ಒಲುಮೆಯಿಲ್ಲದೆ 'ಬದುಕು ಅಸಾಧ್ಯ' ಎಂಬ ಭಾವನೆಗಳು ಕಾರಣವಾಗಿದೆ.

**ಋಕ್ ಮಂತ್ರಗಳಲ್ಲಿ ರುದ್ರಸ್ತವನ:**

೧) ಯೋ ರುದ್ರೋ ಆಗ್ನೆಯೋ ಅಪ್ಸುಯು ಓಷ ದೀಷಯೋ
ವಿಶ್ವ ಭುವನಾ ವಿವೇಶ ತಸ್ಮೈ ರುದ್ರಾಯ ನಮೋ ರುದ್ರೋ ಅಸ್ತು||
–ಪಂಚ ಭೂತಗಳಲ್ಲಿ, ಪ್ರಕೃತಿಯ ತರುಗಳಲ್ಲಿ (ಋಗ) ಲತೆಯಲ್ಲಿ ವ್ಯಾಪಿಸಿ ರುವ ವಿಶ್ವಾಧಿಕವಾದ ರುದ್ರನಿಗೆ ನಮಿಸುತ್ತೇವೆ.

೨) ತೇಜ ಸಾ ರುದ್ರೋಪಿ ಪರಿ ರಕ್ಷಿಕಾ (ಪ್ರಶ್ನೋಪನಿಷತ್ತು)
ತೇಜೋನ್ವಿತವಾದ ರುದ್ರನು ಸೃಷ್ಟಿಯ ಸಂರಕ್ಷಕನಾಗಿದ್ದಾನೆ.

---

೧೨ The cultural Heritage of India: Pub: The Ramakrishna mission of culture calcutta.

೧೩ Greek Religion–page 204 Nilson.

ಇ) ತ್ವೇಷ ವಯಂ ರುದ್ರಂ ಯಜ್ಞ ಸಾಥಂ ವಂಕುಂ
ಕವಿಯುವಸೇ ನಿಹ್ವಯಾಮಹೇ (ಋಗ್)-
-ತೇಜೋ ಮೂರ್ತಿ, ಕವಿ, ಯಜ್ಞ ಸಾಧಕನಾದ ಅಧಿ ದೈವವೇ ರುದ್ರ.

ಈ) ತ್ರ್ಯಂಬಕಂ ಯಜಾಮಹೇ ಸುಗಂಧಿ ತ್ರುಷ್ಟಿ ವರ್ಧನಂ
ಉರ್ವಾರು ಕಮಿವ ಬಂಧನಾನ್ಮೃತ್ಯೋ ರ್ಮುಕ್ಷೀಯ ಮಾಮೃತಾತ್ ||

**ಏಕಾದಶರುದ್ರರು: ವೀರಶೈವ ಗೋತ್ರಪುರುಷರು:**

ಬಾಹ್ಯ ಪ್ರಕೃತಿ ತತ್ವಗಳನ್ನು ಪ್ರೀತಿಸುತ್ತಿದ್ದ ಆರ್ಯರಿಗೆ ಮಹಾಯೋಗರೂಢನೂ ತ್ರಿಣೇತ್ರನೂ ಆದ ರುದ್ರ ಅವರ ಉಪಾಸ್ಯ ಮೂರ್ತಿಯಾಗಿರುವುದು ಇಲ್ಲಿ ಗಮನಾರ್ಹ. ಇದರಂತೆಯೇ ರುದ್ರಪುತ್ರರಾದ ಏಕಾದಶರುದ್ರರು ಹಾಗೂ ವೀರಶೈವ ಗೋತ್ರಪುರುಷರು ಅರ್ಥಾತ್ ಮರುದ್ಗಣರು-ಇವರಲ್ಲಿ ವೀರ, ನಂದಿ, ವೃಷಭ, ಭೃಂಗಿ, ಸ್ಕಂದ-ಇವರು ಶೈವರಷ್ಟೇ ಅಲ್ಲ ವೀರಶೈವರೇ ಆಗಿದ್ದರೆಂದು ಶಿವಾಗಮಗಳು ವರ್ಣಿಸುತ್ತವೆ.

ವೀರನಂದಿ ವೃಷಶ್ಚೈವ ಭೃಂಗಿ ಸ್ಕಂದಸ್ತ ಥೈವ ಚ
ಅತಿವರ್ಣಾಶ್ರಮೋಪೇತಾ ಮದೂರ್ಧ್ವಮುಖವಿಶ್ರುತಾಃ
ಗೋತ್ರ ರೂಪಾಶ್ಚ ಪಂಚೈತೇ ವಿಶಿಷ್ಟಾದ್ವೈತ ವಾದಿನಃ
ಆತಪವ್ರೋಕ್ತಮಾಃ ಪ್ರೋಕ್ತಾಃ ಅತಿವರ್ಣಾಶ್ರಮಸ್ತಥಾ |

(ಸುಪ್ರಭೇದಾಗಮ)

ಮೇಲಿನ ಐವರು ವೀರಶೈವ ಗೋತ್ರ ಪುರುಷರು. ಅದರಲ್ಲೂ ವೀರಭದ್ರ ಪ್ರಥಮ ಪ್ರಮಥಾ ಗ್ರೇಸರನಾದ ಗಣವರ- "ರುದ್ರೇಣ ಕಥಿತಾಃ ಶಿವಧರ್ಮ ಸನಾತನಾಃ ವೀರ ಭದ್ರೋಯಥಾ ರುದ್ರಸ್ತ್ವನ್ಯೇಚ ಗುರುವಃ ಸ್ಮೃತಾಃ | ಗುರೋರ್ಜಾತಾಶ್ಚ ಗುರುವೋ ವಿಖ್ಯಾತಾ ಭುವನತ್ರಯೇ ||" ಎಂದು ಸ್ಕಂದ ಪುರಾಣ ವರ್ಣಿಸುತ್ತದೆ. (ಸ್ಕಂದ ಪುರಾಣ) ವೀರಭದ್ರನನ್ನು ಕುರಿತು ವೀರಶೈವ ಸಂಸ್ಕೃತಿ-ಆಚರಣೆಗಳು ಬೆಳೆದು ಬಂದಂತೆ, ಇತರ ಗಣವರರ ಬಗೆಗೆ ಹೆಚ್ಚಿನ ಆಚರಣೆಗಳು ಕಂಡುಬರುವುದಿಲ್ಲ. ಇವರೆಲ್ಲರೂ ಆರ್ಯ-ದ್ರಾವಿಡ ಸಂಘರ್ಷದಲ್ಲಿ ಪಾಲ್ಗೊಂಡು ಕೆಲವರು ಕಣ್ಮರೆಯಾಗಿ, ವೀರಭದ್ರ ಒಬ್ಬ ಅನಂತರದಲ್ಲಿ ಉಳಿದು ಈ ಉಭಯ ಸಂಸ್ಕೃತಿಯ ಸಮನ್ವಯಕ್ಕೆ ಕಾರಣನಾದಂತೆ ತೋರುತ್ತದೆ.

ವೈದಿಕ ಗ್ರಂಥಗಳು ಉಲ್ಲೇಖಿಸುವಂತೆ, ವೈದಿಕರಾದ ಆರ್ಯರಲ್ಲೇ 'ದೈತ್ಯೇಯ' 'ಆದಿಕೇಯ' ಎಂಬ ಎರಡು ವರ್ಗಗಳಿದ್ದು ಯಜ್ಞ-ಯಾಗ-ಹಿಂಸಾಚಾರಗಳನ್ನು ಕಂಡು ಹಲವರು ಬೇಸರಿಸುವರು. "ಅಯ ಜ್ಞಾನಃ ಸ್ವಯಂ ಯಾಗರಹಿತಾಃ ಪ್ರತ್ಯುತ ಯಜ್ಞಭಿಃ ಸಹಸ್ಪರ್ಧಮಾನಾಃ" (ಸಾಯಣ ಭಾಷ್ಯ) ಎಂದರೆ, ಯಜ್ಞ ಮಾಡುವವರೊಡನೆ ಸ್ಪರ್ಧಿಸಿದವರು ಆಯಜ್ಞಾನಃ ಎಂದರೆ 'ದೈತ್ರ್ಯರು' ಎನ್ನಿಸಿಕೊಂಡರು. ಮುಂದೆ ಇಂದ್ರನ ಶತ್ರು

ಗಳಾಗಿ ಅವನನ್ನು ಕೊಲ್ಲಲು ದಿತಿಯಲ್ಲಿ ಜನಿಸಿದ್ದರಿಂದ ದೈತ್ಯರಾದರು–ಎಂದು ಕಲ್ಪಿತವಾಗಿದೆ. ಆದರೆ ಇವರು ದ್ರಾವಿಡರ ಹೇಳಿಕೆಯಂತೆ 'ಅವೈದಿಕ' ಹಾಗೂ ಆಶಿವರ್ಣಾಶ್ರಮಗಳಾದ ರುದ್ರಪುತ್ರರು–ಇವರೇ ಏಕಾದಶ ರುದ್ರರು–ವೀರಶೈವರಲ್ಲಿ ಇಂದಿಗೂ ಏಕಾದಶ ಮಂಟಪ ಪೂಜೆ ಆಚರಣೆಗಳಿಗೆ ಅಧಿದೈವರಾದವರು. ಈ ಮರುದ್ಗಣದಲ್ಲಿ ರುದ್ರಗಣ ಹಾಗೂ ವೀರಗಣವೆಂದು ಎರಡು ಬಗೆ. ನಂದಿ, ಸ್ಕಂದ, ಪ್ರಮಥ, ವೃಷಭ ಈ ವೀರ ಗಣರಿಗಿಂತ ರುದ್ರಗಣ ಪ್ರಾಚೀನವಾದುದು. ರುದ್ರಗಣ ದಶವಾಯು ಹಾಗೂ ಹೃದಯ ಈ ಹನ್ನೊಂದು ತತ್ವಗಳಿಂದ ಸಂಭೂತವಾದುದು. ಇದೇ ಏಕಾದಶ ರುದ್ರ ಗಣವೆಂಬ ತಾತ್ವಿಕ ಅರ್ಥವೂ ಇದಕ್ಕಿದೆ.

## ವೀರಭದ್ರ ಪ್ರಾಶಸ್ತ್ಯ:

ವೀರಶೈವ ಗೋತ್ರಗಳಲ್ಲಿ ವೀರಗೋತ್ರಕ್ಕೆ ಅಧಿದೈವವಾದವನೇ ವೀರಭದ್ರ. ಅವನಿಂದ ಜನಿಸಿದ ವೀರಗಣವೇ ವೀರಶೈವದ ಬುನಾದಿಗಣ ಎಂದು ಡಾ|| ಜಚನಿ ಅವರು ಸಂಭಾವಿಸಿದ್ದಾರೆ. ಅವರು ವೀರಭದ್ರ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ನಮ್ಮ ದೃಷ್ಟಿಯಲ್ಲಿ ವೀರಭದ್ರ ಆರ್ಯ–ದ್ರಾವಿಡ ಜನಾಂಗಗಳ ಸಮನ್ವಯ ದೇವರು. ಸಂಸ್ಕೃತದಲ್ಲಿ ಋಗ್, ಯಜುರ್‌ಗಳಲ್ಲದೆ ಭಾರತ, ಕೂರ್ಮ, ಭಾಗವತಗಳಿಂದ ಆರಂಭಿಸಿ ಸ್ಕಂದ, ಶಿವ, ಲಿಂಗಪುರಾಣಗಳಲ್ಲಿ ಹಾಗೂ ವಾಯುವೀಯ ಸಂಹಿತೆಯಲ್ಲಿ ವೀರಭದ್ರನ ಪ್ರಸ್ತಾಪವಿದೆ. ಮಹಾಭಾರತ ಬ್ರಹ್ಮ, ವಿಷ್ಣು ಪುರಾಣಗಳಲ್ಲಿ ದಕ್ಷಯಾಗದ ಆಖ್ಯಾಯಿತೆಯಿದೆ. ಈ ಆಖ್ಯಾಯಿತೆ ಕೂಡ ಡಾ|| ರಾಧಾಕೃಷ್ಣನ್‌ರ ಅಭಿಪ್ರಾಯದಂತೆ ಆರ್ಯ–ದ್ರಾವಿಡರ ಪ್ರಾಬಲ್ಯ ಹಾಗೂ ದಮನಗಳ ಪ್ರತೀಕವಾಗಿದೆ. ಯಜ್ಞ ಕರ್ಮದಲ್ಲಿ ನಿರತನಾದ ದಕ್ಷನು ಶಿವನೊಡನೆ ಕುಪಿತಗೊಂಡಾಗ ಅವನ ಮಗಳು ದಾಕ್ಷಾಯಿಣಿ ಶಿವನೊಡನೆ ವಿವಾಹವಾಗಿದ್ದುದು ಆರ್ಯ–ದ್ರಾವಿಡ ಜನಾಂಗಗಳೆರಡರ ಅಥವಾ ವೈದಿಕ ಮತ್ತು ಶೈವ ಧರ್ಮಗಳೆರಡರ ಮೈತ್ರಿಯ ಸಂಕೇತವಾಗಿದೆಯೆಂದು ಅವರು ಉಲ್ಲೇಖಿಸುತ್ತಾರೆ.[೧೪]

## ವೀರಭದ್ರ ಸಂಸ್ಕೃತಿ:

ಶ್ರೇಷ್ಠ ಸಾಂಸ್ಕೃತಿಕ ಮಾನವ ಶಾಸ್ತ್ರಜ್ಞನಾದ E. Thurston (ಇ. ಥರ್ಸ್ಟನ್) ಮಹಾಶಯನು 'Casses and Tribes of Southern-India' ಸಂಪುಟದಲ್ಲಿ 'ಲಿಂಗಾಯತ' ಧರ್ಮದ ಬಗೆಗೆ ಪ್ರಸ್ತಾಪಿಸುತ್ತ (ಪು. ೨೫೨) ವೀರಭದ್ರ ಸಂಪ್ರದಾಯವನ್ನು ಪ್ರತ್ಯಕ್ಷವಾಗಿ ತಾನು ನೋಡಿದ ದಾಖಲೆಗಳಿಂದ ನಿರೂಪಿಸಿದ್ದಾನೆ. ಇದರಲ್ಲಿ ಅವನು ಸಂದರ್ಶಿಸಿದ ಮೈಸೂರು ಸೀಮೆಯ ಕೆಲವು ಪುರವಂತರ ವೇಷ ಭೂಷಣಗಳ ವಿವರಣೆ ಕೊಡುತ್ತಾನೆ. ಉತ್ತರ ಕರ್ನಾಟಕದಲ್ಲಿ ಇವರು ವಿಶ್ವಕರ್ಮ ಸಮಾಜದ

೧೪ Dr. Radhkrishna. S. Hindu view of life.

ಪುರವಂತರೇ ಆಗಿದ್ದರು. 'ಥರ್ಸ್ಟನ್'ನು ಅವರನ್ನು ವೀರಭದ್ರ ಕಾಯಕದವರೆಂದು, 'ಕಾಶೀಲಿಂಗದ ವೀರ'ರೆಂದು ಉಲ್ಲೇಖಿಸಿದ್ದಾನೆ. 'ಕೊರಳಲ್ಲಿ ೩೨ ಲಿಂಗಗಳ ಸರಮಾಲೆ, ೪ ರುದ್ರಾಕ್ಷಿ ಮಾಲೆ, ಕೈಯಲ್ಲಿ ಝಳಪಿಸುವ ಖಡ್ಗ (ಇದರಿಂದಲೇ ಖಡೆ>ಖಡುವ ಶಬ್ದಗಳು ನಿಷ್ಪತ್ತಿಯಾದಂತಿವೆ) ದಕ್ಷಬ್ರಹ್ಮನ ಹೋಳಾದ ತಲೆಗಳ ಶಿರೋಮಾಲೆ ಹಾಗೂ ಶಿರುಗಂಟೆಗಳನ್ನು ಕಟ್ಟಿದ ಪುರವಂತರ ವೇಷದಿಂದ ಅವನು ಆಶ್ಚರ್ಯಗೊಂಡುದಾಗಿ ಈ ಸಂಪ್ರದಾಯದ ಬಗೆಗೆ ಬರೆದಿದ್ದಾನೆ.[೧೫]

'ವೀರಭದ್ರನ ಕಾಯಕ' ಅಥವಾ ವೀರಪುರವಂತಿಕೆ (ವೀರ ಪೌರೋಹಿತ್ಯ)ಯು ಕೇವಲ ಧಾರ್ಮಿಕ ಮಹತ್ವವನ್ನಷ್ಟೇ ಪಡೆದಿರದೆ, ಸಾಮಾಜಿಕ ಜೀವನದ ಕ್ಷೇಮಪಾಲನೆಯಿಂದಲೂ ಈ ವೃತ್ತಿ ಮಹತ್ವ ಪಡೆದುದಾಗಿ ಶಾಸನಗಳಿಂದ ತಿಳಿದುಬರುತ್ತದೆ. ೧೨ನೆಯ ಶತಮಾನದ ಆಂಧ್ರನಾಡಿನ ಒಂದು ಶಾಸನದಲ್ಲಿ ಹತ್ತುಹಳ್ಳಿಯ ಸಂರಕ್ಷಕ ದಳಕ್ಕೆ 'ವೀರಭದ್ರರು' ಎಂದು ಕರೆದಿರುವುದು ಈ ವಿಷಯದ ಮೇಲೆ ಹೆಚ್ಚಿನ ಬೆಳಕು ಚೆಲ್ಲುತ್ತದೆ. ಈ ವೀರಭದ್ರರು ಚೋಳದೇಶದಿಂದ ಬಂದವರೆಂದು ಅಲ್ಲಿ ಹೇಳಿದೆ. ಇದನ್ನು ಆ ನಾಡಿನ ಸಂಸ್ಕೃತಿಯ ವಾಹಕ ದಳವೆಂತಲೂ ನಾವಿಲ್ಲಿ ಕರೆಯಬಹುದಾಗಿದೆ. ತೆಲುಗು ಶಾಸನದಲ್ಲಿ ಹೇಳಿದ 'ವೀರಭದ್ರರ' ವರ್ಣನೆಯ ಸಾರಾಂಶವಿಂತಿದೆ.

**'The Veerabhadra's were even ready for Safeguarding the interests of the village Perform such vialent acts as cutting their own heads.[೧೬]**

ಹಳ್ಳಿಯ ಕ್ಷೇಮ ಹಾಗೂ ಶಾಂತಿ ರಕ್ಷಣೆಗಾಗಿ ವೀರಭದ್ರನು ತಮ್ಮ ಕೈಗಳನ್ನು ಕೂಡ ಕತ್ತರಿಸಿಡಲು ಹೆದರುತ್ತಿರಲಿಲ್ಲವೆಂಬುದಾಗಿ ಹೇಳಿದೆ. ವೀರಭದ್ರನ ಪರಂಪರೆಯನ್ನು ಪುರವಂತರು ವೀರಾವೇಶದಿಂದ ವೀರಶೈವ ವಿವಾಹ ಹಾಗೂ ಜಾತ್ರಾ ಸಮಾರಂಭಗಳಲ್ಲಿ ಈಗಲೂ ಶಸ್ತ್ರಧಾರಿಗಳಾಗಿ ಶಿವಾಧಿಕ್ಯವನ್ನು 'ಒಡಬು'ಗಳ ರೂಪದಲ್ಲಿ ಉದ್ಧರಿಸುವದನ್ನು ನಾವು ಹಳ್ಳಿಗಳಲ್ಲಿ ಕಾಣಬಹುದು. ವೀರಶೈವನಾದ ವೀರಭದ್ರನ ಕಾಯಕದ ಇಂದಿನ ವಿಶ್ವಕರ್ಮ ಅಥವಾ ಅಕ್ಕಸಾಲಿಗದವರು ಲಿಂಗಧಾರಣೆಯನ್ನು ಬಿಟ್ಟು ಜನಿವಾರಗಳನ್ನು ಧರಿಸಿರುತ್ತಾರೆ. ಪ್ರಾಯಶಃ ಇದು ಆ ತರುವಾಯದ ವೈದಿಕ ಆಚಾರ ನೇಮಗಳ ಪ್ರಾಬಲ್ಯದಿಂದ ಎಂದು ಹೇಳಬಹುದು. ಅಥವಾ ವೀರಶೈವರಲ್ಲಿ ಜನಿವಾರ ಲಿಂಗಗಳೆರಡನ್ನು ಧರಿಸಿದವರಿದ್ದಾರೆ. ಪಾರಮೇಶ್ವರಾಗಮದಲ್ಲಿ ವೀರಶೈವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ನಾಲ್ಕು ವರ್ಣದವರೂ ಇರಬಹುದೆಂದಿದೆ. ಅವರನ್ನು 'ಅಲಿಂಗಿ' ವೀರಶೈವ, 'ಸಲಿಂಗಿ' ವೀರಶೈವರೆಂದು ಅಲ್ಲಿ ವಿಂಗಡಿಸಿ ಹೇಳಿದೆ. ಮುಖ್ಯವಾಗಿ ವೀರಭದ್ರನ ಸಂಪ್ರದಾಯಸ್ಥರಾದ ವೀರಶೈವರೇ ಇರಲಿ, ಇಂದು ಜನಿವಾರ ಧರಿಸಿ

---

೧೫ **Thurstion E. Castes & Tribes....**
೧೬ **Cul. H. Religions vol. iv P. 72.**

ಪುರವಂತ ವೃತ್ತಿಯಲ್ಲಿರುವ ಜನತೆಯೇ ಆಗಿರಲಿ, ತತ್ತ್ವತಃ ವೀರಶೈವ ಧರ್ಮದಲ್ಲಿ ವೀರಭದ್ರನ ಸಂಸ್ಕೃತಿ ಹಾಗೂ ಸಂಪ್ರದಾಯದ ನಿಜ ಮೌಲ್ಯಗಳನ್ನು ಕಾಪಾಡಿಕೊಂಡು ಬಂದವರಾಗಿದ್ದಾರೆ. ಆ ಸಾಂಸ್ಕೃತಿಕ ಮೌಲ್ಯಗಳಲ್ಲಿ ಇವು ಮುಖ್ಯವಾದವು. (ವಿಶೇಷಕ್ಕೆ:)[೧೭]

೧. ಅಷ್ಟಾವರಣಗಳ ಅನುಸರಣೆ.
೨. ಕಾಯಕ ತತ್ತ್ವ.
೩. ಹೋಮವಿಲ್ಲದೆ ಶಿವನ ಆರಾಧನೆ.
೪. ವೇದಗಳ ನಿರಾಕರಣೆ.
೫. ಮಡಿವಂತಿಕೆ.
೬. ವೀರ ಮಾಹೇಶ್ವರ ಅಥವಾ ಗಣಾಚಾರ ವೃತ್ತಿ.

ವೀರಭದ್ರದೇವರ ಕಲ್ಪನೆಯ ಮೂಲ ಹಾಗೂ ಬೆಳವಣಿಗೆ, ವೇದವಾಙ್ಮಯದಲ್ಲಿ ಅವನ ಉಲ್ಲೇಖ, ಕನ್ನಡ ಸಾಹಿತ್ಯದಲ್ಲಿ ವೀರಭದ್ರನ ಐತಿಹ್ಯ ಹಾಗೂ ವೀರಭದ್ರ ಸಂಸ್ಕೃತಿಯ ಮೌಲ್ಯ ಪ್ರಸಾರದೊಂದಿಗೆ ಇಲ್ಲಿ ವಿಷಯವನ್ನು ಮುಗಿಸಬಹುದು.

### ವೇದೋಪನಿಷತ್ತುಗಳಲ್ಲಿ ವೀರಶೈವ ದರ್ಶನ:

ಯಾವುದೊಂದು ಮತೀಯ ಆಚರಣೆಗಳಿಗಿಂತ ಅತ್ಯಂತ ಮೌಲಿಕವಾದ ಭಾಗ ವೆಂದರೆ, ಅಲ್ಲಿನ ದರ್ಶನ, ಮತ ಮತಗಳು ಬೇರಾದರೂ ಮತಗಳ ಸಾರ ಒಂದೇ ಎಂದು ಹೇಳುವಲ್ಲಿ ಈ ಅರ್ಥ ಹುದುಗಿದೆ. ಶಿವಶರಣರು ವೇದಗಳನ್ನು ಮನ್ನಿಸಿಲ್ಲ ಎಂಬ ಭಾವನೆ ಸಹಜವಾಗಿದೆ. "ವೇದಾಗಮಂಗಳು ಜಡ್ಡುಗೊಜಡೆಂದು ಅವಬಿಟ್ಟು........" ಎಂದು ಕಲ್ಲುಮಠದ ಪ್ರಭುದೇವ ಹೇಳುತ್ತಾನೆ. ಆದರೆ ಇದು ವೈದಿಕ ದರ್ಶನವನ್ನು ತಿರಸ್ಕರಿಸಿ ಹೇಳಿದ್ದಲ್ಲ. ವೇದಗಳ ಹೆಸರಲ್ಲಿ ನಡೆದ ಯಜ್ಞ ಯಾಗಾದಿಗಳು, ಕರ್ಮಠತನ, ಪೌರೋಹಿತ್ಯಶಾಹಿ–ಇವನ್ನು ಪ್ರತಿಭಟಿಸಿ ಹೇಳಿದ್ದು. ವೀರಶೈವ ದರ್ಶನದ ಮೂಲ ಆಶಯಗಳು, ವೈದಿಕ ದರ್ಶನದಲ್ಲಿ ಸಾರಭೂತವಾಗಿ ಅಂಶಗಳು ನಮಗೆ ದೊರೆಯುತ್ತವೆ.

ವೇದಪೂರ್ವದ ಸಿಂಧೂಕೊಳ್ಳದ ಶಿವ ಮೊದಲಿಗೆ ವೀರಶೈವರ ರುದ್ರ. ಅನಂತರ ಶಿವನಾಗಿ ವೈದಿಕ ದೇವ–ದೇವತೆಗಳಲ್ಲಿ ಸಮನ್ವಯಗೊಂಡದ್ದು ಇಲ್ಲಿ ಗಮನಾರ್ಹ, ಇದರಿಂದಾಗಿ ವೀರಶೈವರ 'ಅಧಿದೈವ'ವಾದ ಶಿವನನ್ನು ವೈದಿಕ ಧರ್ಮ ಮನ್ನಿಸಿತೆಂದೇ ಹೇಳಬೇಕು. ಶಿವತತ್ವದ ತಾತ್ತ್ವಿಕ ಮನೋಭೂಮಿಕೆಗೆ ಅಲ್ಲಿಂದಲೇ ಆರಂಭ. ಶಿವನು ಸೃಷ್ಟಿ ಆರಂಭದಲ್ಲಿದ್ದ ವಿರಾಟ್ ಏಕೈಕ ಪುರುಷ. ಅವನ ಸಂಕಲ್ಪ ಶಕ್ತಿಯಿಂದ ಸೃಷ್ಟಿಯ ವಿಕಾಸಕ್ಕೆ ಮೊದಲಾಯಿತು–ಎಂಬ ಭಾವವುಳ್ಳ ಋಗ್ವೇದ ಮಂತ್ರ ಇಂತಿದೆ.

---

೧೭ ಡಾ॥ ಜ.ಚ.ನಿ. ಡಾ॥ ಶಿವಾನಂದ. ಅಣಿವೀರಭದ್ರೇಶ್ವರ ಪುರಾಣ (ಸಂ).

ಯ ಇಮಾ ವಿಶ್ವ ಭುವನಾನಿ ಜುಹ್ವದೃಷ್ಟಿ ರ್ಹೋತಿನ್ಯಸಿದತ್ಪಿತಾನಃ
ಸ ಆಶಿಷಾ ದ್ರವಿಧಾ ಮಿಚ್ಛಮಾನಃ ಪ್ರಥಮೆಚ್ಛದವರಾಂ ಆ ವಿವೇಶ ||
(ಋಗ್-೧೦-೮೧-೧)

'ವಿಶ್ವರಚಕನಾದ ಅಧಿದೇವತೆ ಸಕಲ ಲೋಕಗಳನ್ನು ತನ್ನಲ್ಲಿ ಅಡಗಿಸಿ ಕೊಂಡಿದ್ದಾನೆ. ಅವನಲ್ಲಿಯೇ ಮತ್ತೆ ಲೋಕವನ್ನು ಸೃಷ್ಟಿಸಬೇಕೆಂಬ ಬಯಕೆ ಬೆಳೆಯಿತು ಅವ್ಯಾಕೃತವಾದ ಅವನು ತಾನು ಸೃಷ್ಟಿಸಿದ ಸಚರಾಚರಗಳಲ್ಲಿ ಸೇರಿ ಸಕಲ ಸೃಷ್ಟಿಯನ್ನು ತನ್ನಂಶೀಭೂತವಾಗಿಸಿದನು.'

ವೇದ ವಾಙ್ಮಯ ಅಪಾರವಾಗಿದೆ. ಇದರಲ್ಲಿ 'ಸಂಹಿಕೆಗಳು', ಬ್ರಾಹ್ಮಣಗಳು, ಆರಣ್ಯಕ ಹಾಗೂ ಉಪನಿಷತ್ತು- ಇವು ಒಂದೊಂದು ವೇದಗಳಿಗೆ ಪ್ರತ್ಯೇಕವಾಗಿದ್ದು, ಆ ಸಾಹಿತ್ಯ ವೈದಿಕ ಜಗತ್ತಿನ ಅದ್ಭುತ ಕೊಡುಗೆಯಾಗಿದೆ. ಆದರೆ ಇವೆಲ್ಲವುಗಳಲ್ಲಿ ಕರ್ಮಕಾಂಡ (Rituals) ಭಾಗಗಳನ್ನು ಬಿಟ್ಟುಳಿದವು ವೀರಶೈವ ಧರ್ಮದಲ್ಲಿಯೂ ಸಹ ಚಿಂತನೆಯ ವಿಷಯುಗಳಾಗುತ್ತವೆ. ಮುಖ್ಯವಾಗಿ ವಚನಕಾರರನ್ನು ಉಪನಿಷತ್ ದೃಷ್ಟಾರರಿಗೆ ಹೋಲಿಸುವದು. ವಚನಗಳನ್ನು 'ಕನ್ನಡದ ಉಪನಿಷತ್ತು'ಗಳೆಂದು ಹೇಳುವದು ಈ ದೃಷ್ಟಿಯಿಂದ ಔಚಿತ್ಯದ್ದಾಗಿದೆ. ಇಲ್ಲಿನ ತಾತ್ವಿಕ, ಅನುಭಾವಿಕ ಮನೋಭೂಮಿಕೆಯಲ್ಲಿ ಉಪನಿಷತ್ ಮಂತ್ರಗಳಿಗೂ (Mystic Hymns) ಹಾಗೂ ಕನ್ನಡದ ಅನುಭಾವ ವಚನಗಳಿಗೂ ನೆಲಗಟ್ಟು ಒಂದೇ ಆಗಿರುವುದಕ್ಕೆ ಇಲ್ಲಿ ನಿದರ್ಶನಗಳನ್ನು ಕೊಡಬಹುದು.

೧) 'ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚಿನ
ಮಿಷತ್, ಸಈಕ್ಷತ್. ಲೋಕಾನ್ನು ಪ್ರಜಾ ಇತಿ"
ನಾಸದೀಯ ಸೂಕ್ತ(ಋಗ್)

೨) ನಿಃಕಲ ಶಿವತತ್ತ್ವ ತಾನೊಂದೇ ತನ್ನ ಶಕ್ತಿಯ
ಚಲನೆ ಮಾತ್ರದಿಂದ ಒಂದೆರಡಾಯಿತ್ತು ನೋಡಾ

೩) 'ಸಚರಾಚರಗಳೆಲ್ಲ ರಚನೆಗೆ ಬಾರದುದು ಗುಹೇಶ್ವರ ನೀನೊಬ್ಬನಿದ್ದೆಯಲ್ಲ
ಇಲ್ಲದಂತೆ

ಸೃಷ್ಟಿಯ ಎಲ್ಲ ವಿಕಾಸ (Evolution)ಕ್ಕೂ ಮೂಲವಾಗಿದ್ದುದು ಒಂದೇ ಒಂದು ಚೈತನ್ಯ. ಅದನ್ನು 'ಆತ್ಮ'ವೆಂದು ವೇದವಾಙ್ಮಯ ಹೇಳಿದ್ದರೆ, 'ನಿಃಕಲ ಶಿವತತ್ತ್ವ ಅಥವ ಸ್ಥೂಲವಾದಿಯೂದ ಪರಬ್ರಹ್ಮನೆನ್ನುತ್ತದೆ. ವೀರಶೈವ ಈ ಹಿನ್ನೆಲೆಯಲ್ಲಿ ಸೃಷ್ಟಿ-ಕರ್ತನ ಸ್ವರೂಪ ಕುರಿತಾದ ವೈಚಾರಿಕ ಹಿನ್ನೆಲೆಗೆ ಒಂದೇ ಮನೋಭೂಮಿಕೆ ಕಾಣಿಸಿಕೊಳ್ಳುವುದು ಇವೆರಡರಲ್ಲೂ ಸ್ಪಷ್ಟವಾಗುತ್ತದೆ.

ಜಗತ್ತಿನ ಉತ್ಪತ್ತಿ 'ನಿಃಕಲ ಪರಬ್ರಹ್ಮ'ನಿಂದ ಮೊದಲಾಯಿತೆಂದು ಋಗ್ವೇದದಲ್ಲಿ

ಹೇಳಿದೆ. ಆಸತಃ ಸದ್‌ಜಾಯತೆ (ಋಗ್: ೧೦-ಸೂಕ್ತ-೭೨) ಉಪನಿಷತ್ತುಗಳಲ್ಲಿ ಇದೇ ವಿಚಾರವಿದೆ. (ಛಾಂದೋಗ್ಯ-ಶ್ವೇತಕೇತು ಸಂವಾದ) ಚನ್ನಬಸವಣ್ಣನವರ ಕರಣ ಹಸುಗೆ, ಹಾಗೂ ಶಿವಾನುಭವ ತತ್ವ ಗ್ರಂಥಗಳಲ್ಲಿನ ವಿಚಾರಸರಣಿ ಇದೇ ರೀತಿಯಲ್ಲಿರುವುದು ಇವುಗಳ ಸಾಮ್ಯತೆಗೆ ನಿದರ್ಶನವಾಗಿದೆ.

ವಿರಾಟ ಪುರುಷ ಅಥವ ಆದಿಪುರುಷನ ಅಭಿವ್ಯಕ್ತಿಯಿಂದ ವಿರಾಟ್ ಸೃಷ್ಟಿ-ಬ್ರಹ್ಮಾಂಡ ಹಾಗೂ ಅನಂತರ ಪಂಚ ಭೌತಿಕ ಜಗತ್ತು, ಭೂಮಿ, ಗಗನಗಳೆಲ್ಲ ಹುಟ್ಟಿದುವೆಂದು ಹೇಳುವ ವಿಕಾಸವಾದ (Evolution Theory)ದ ಒಂದು ಮಂತ್ರ ವೇದಗಳಲ್ಲಿ ಹೀಗಿದೆ.

ತಸ್ಮಾತ್ ದ್ವಿರಾಳ ಜಾಯತ ವಿರಾಜೋ ಆದಿಪುರುಷಃ
ಸಜಾತೋ ಅತ್ಯರಿಚ್ಚತ ಪ್ರಶ್ಚಾದ್ಭೂಮಿ ಮಥೋಪುರಃ||

-ಪುರುಷ ಸೂಕ್ತ (ಋಗ್-ಮಂ-೧೦-೪೧-೫)

ಇದನ್ನೇ ಅನಂತರದ ಶಿವಾಗಮಗಳು, ಸಿದ್ಧಾಂತ ಶಿಖಾಮಣಿ ಹಾಗೂ ವಚನಕಾರರು ಪರಮಾತ್ಮನು ತನ್ನ ವಿನೋದಕ್ಕಾಗಿ,ಲೀಲೆಗಾಗಿ ಈ ಸೃಷ್ಟಿಯನ್ನು ನಿರ್ಮಿಸಿದನೆಂದೂ ಅದಕ್ಕೆ ಅವನಲ್ಲಿನ ವಿಮರ್ಶನ ಶಕ್ತಿ ಸ್ಫುರಣದಿಂದ ಇದು ಸಾಧ್ಯವಾಯಿತೆಂದೂ ವರ್ಣಿಸುತ್ತವೆ.

ಸಮಸ್ತ ಜಗದಂಡಾನಂ ಸ್ವರ್ಗ ಸ್ಥಿತ್ಯಂತ ಕಾರಣಂ
ಭಾಸತೇಯತ್ರ ತದ್ಭಾಜನ ಮಿ ಹೋ ಚ್ಯತೇ||

ಸಿದ್ಧಾಂತ ಶಿಖಾಮಣಿ.

ಮತ್ತೊಬ್ಬ ಶರಣ ಇದನ್ನು ಹೀಗೆ ವರ್ಣಿಸಿದ್ದಾನೆ.

"ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ ಸ್ವತಂತ್ರ ಸಿದ್ಧಲಿಂಗೇಶ್ವರ". ಹೀಗೆ ತಾತ್ವಿಕ ನಿಟ್ಟಿನಲ್ಲಿ ಮೂಲಭೂತವಾದ ಆಧ್ಯಾತ್ಮಿಕ ಅನುಭವಗಳ ಜಿಜ್ಞಾಸೆ ವೀರಶೈವದಲ್ಲಿ ಕಾಣಿಸಿಕೊಂಡಿದ್ದರೆ, ಅದಕ್ಕೆ ಹಿಂದಿರುವ ವೇದೋಪನಿಷತ್ತುಗಳ ಹಿನ್ನೆಲೆಯನ್ನು ನಾವು ನಿರ್ಲಕ್ಷಿಸುವಂತಿಲ್ಲ. ಆದರೆ ವೀರಶೈವದಲ್ಲಿ ಈ ದರ್ಶನ ಅದರ ಅನುಕರಣೆಯಾಗಿ ಮಾತ್ರ ತೋರದೆ ತನ್ನದೇ ಆದ ಸಿದ್ಧಾಂತವನ್ನು ಅನಂತರದಲ್ಲಿ ಕಟ್ಟಿಕೊಂಡಿವೆ.

ಮೇಲೆ ಹೇಳಿರುವ ದಾರ್ಶನಿಕ ಜಿಜ್ಞಾಸೆಯನ್ನು ಪ್ರಧಾನವಾಗಿಟ್ಟುಕೊಂಡು ಯೋಚಿಸಿದಾಗ ಋಗ್ವೇದದಲ್ಲಿ ಶಿಶ್ನಾದೇವಾಃ (ಋಗ್ ಸಂಹಿತೆ ೭-೨೦, ೫-೧೦ ೯೩-೩) ಎಂಬುದಕ್ಕೆ ಇಂದ್ರಿಯ ಪರವಾದ ಅಪಾರ್ಥ ಲಿಂಗೋಪಾಸನೆಗೆ ಕಲ್ಪಿಸುವದು ಸೂಕ್ತವಾಗಿ ಕಾಣಬರುವುದಿಲ್ಲ. ಇದನ್ನು ಸರ್. ಚಾರ್ಲಸ್ ಇಲಿಯೆಟ್ ಸಹ ಒಪ್ಪಿಕೊಂಡಿಲ್ಲ.೧೮

---

೧೮ **Sir. Charles. Eliot-Hinduism and Buddism,**

ಅವರ ಅಭಿಪ್ರಾಯದಲ್ಲಿ ಅಲ್ಲಿನ 'ಶಿಶ್ನದೇವಾ' ಎಂಬುದು ಯಾರನ್ನು ಕುರಿತು ಹೇಳಿದ್ದು ಸ್ಪಷ್ಟವಾಗುವದಿಲ್ಲ. (It is not certain if the Sisnadeva; whom (Indra is asked to destroy in Rgveda VII-21.5 and X 9.3. are demons or worshiper of the Phallus (I, II vol. Hinduism and Buddism vol. II p. 143) ಈ ಶಿವೋಪಾಸನೆ ಲಿಂಗರೂಪಿಯಾದ ಅರ್ಚನ ವಿಧಾನವಾಗಿ ಯಾವಾಗ ಬೆಳೆದು ಬಂದಿತೆಂಬುದಕ್ಕೆ ನಮಗೆ ಸ್ಪಷ್ಟವಾದ ಆಧಾರಗಳಿಲ್ಲ. ಏಕೆಂದರೆ, ಮೂಲತಃ ಶೈವಾಗಮಗಳು ಹೇಳುವಂತೆ ನಿಷ್ಕಲ ಶಿವತತ್ತ್ವ ಅಥವಾ ನಿಷ್ಕಲ ಲಿಂಗ ಪೂಜೆ ಪ್ರಧಾನವಾಗಿದ್ದು ಕಾಲಕ್ರಮದಲ್ಲಿ ಬೌದ್ಧರು ಕಟ್ಟಿಕೊಂಡ ಸ್ತೂಪ. ಆಕೃತಿಗಳ ಅನುಕರಣೆ ಯಿಂದ ಸಾಕಾರರೂಪಿಯಾದ 'ಸಕಲ ಲಿಂಗ' 'ಅರ್ಚನ' ವಿಧಾನಗಳು ಹುಟ್ಟಿಕೊಂಡಿರ ಬಹುದಾಗಿ ವಿದ್ವಾಂಸರು ತರ್ಕಿಸಿದ್ದಾರೆ೯ ಆದರೆ. ಅತ್ಯಂತ ಪ್ರಾಚೀನ ಶೈವಧರ್ಮವೇ ಬೌದ್ಧ ಧರ್ಮದ ಮೇಲೆ ಪ್ರಭಾವ ಏಕೆ ಬೀರಿರಬಾರದೆಂದು ಸಹ ಊಹಿಸಲವಕಾಶವಿದೆ. ಇದಕ್ಕೆ ನಮಗೆ ಶಿವಲಿಂಗ ವಿಗ್ರಹಗಳು ಅವುಗಳ ನಮೂನೆಗಳು ಅವುಗಳ ಸಾಂಕೇತಿಕತೆ ಹಾಗೂ ಪ್ರಾಗೈತಿಹಾಸಿಕದಿಂದ ಐತಿಹಾಸಿಕ ಕಾಲದವರೆಗೆ ಬೆಳೆದು ಬಂದ ಲಿಂಗಾಕೃತಿಗಳನ್ನು ಒಟ್ಟಾರೆ ಅಧ್ಯಯನ ಮಾಡಬೇಕಾಗುತ್ತದೆ.

**ಶಿವಲಿಂಗ ವಿಗ್ರಹಗಳು ಅವುಗಳಲ್ಲಿನ ವೈವಿಧ್ಯತೆ ಹಾಗೂ ವೀರಶೈವ ವಿಗ್ರಹ ಮಾದರಿಗಳು:**

ಶಿವಲಿಂಗ ವಿಗ್ರಹಗಳನ್ನು 'ಶಿಲಾ ವಿನ್ಯಸ್ತ ವಿಗ್ರಹಗಳು' ಹಾಗೂ 'ಮೂರ್ತಿ ವಿನ್ಯಸ್ತ ವಿಗ್ರಹಗಳು'– ಎಂದು ಎರಡು ಬಗೆಯಾಗಿ ವರ್ಗೀಕರಿಸಬಹುದು. ಶಿಲಾವಿನ್ಯಸ್ತ ವಿಗ್ರಹಗಳೆಂದರೆ, ಕೇವಲ ಲಿಂಗರೂಪದಲ್ಲಿ ವಿಗ್ರಹಗಳು. ಶೈವ ಧರ್ಮದ ವಿಕಾಸವ ನ್ನನುಸರಿಸಿ ಈ ಲಿಂಗ ವಿಗ್ರಹಗಳಲ್ಲಿ ವೈವಿಧ್ಯ ಹೆಚ್ಚಿದಂತಿವೆ. ಇವನ್ನು ಹೀಗೆ ವಿಭಾಗಿಸಬಹುದು.

| | | | |
|---|---|---|---|
| ಶೈವ | -ವೈದಿಕ | = | ಕೇವಲ ಶಿವ ಏಕೈಕ ಉಪಾಸನೆ |
| | -ತಾಂತ್ರಿಕ | = | ಶಿವ + ಶಕ್ತಿ ಉಭಯೋಪಾಸನೆ. |
| | -ಮಿಶ್ರ | = | ಶಿವ + ಶಕ್ತಿ + ಇತರ ದೇವಾನುದೇವತೆಗಳ ಉಪಾಸನೆ. |

**ಶಿಲಾವಿನ್ಯಸ್ತ ವಿಗ್ರಹಗಳು:**

ಮೊದಲು ಶಿವನೊಬ್ಬನನ್ನೇ ಲಿಂಗರೂಪದಲ್ಲಿ ಪೂಜಿಸುವ ಪರಿಪಾಠವಿದ್ದು ಒಂದೇ ಶಿವಲಿಂಗವನ್ನು ಬ್ರಹ್ಮ-ವಿಷ್ಣು-ರುದ್ರ-ಈ 'ತ್ರಿಮೂರ್ತಿ' ವಿನ್ಯಾಸದಲ್ಲೂ ಅನಂತರ

೯ ನಂದೀಮಠ ಎಸ್. ಸಿ. ಕರ್ನಾಟಕ ಧರ್ಮಗಳು.

ಚತುರ್ಮುಖ ವಿನ್ಯಾಸದಲ್ಲೂ ಕೆತ್ತಿರುವುದು ಕಂಡು ಬರುತ್ತವೆ. ಒಟ್ಟು ಲಿಂಗ ವಿಗ್ರಹದ ನಮೂನೆಗಳನ್ನು ೧) ಭಿಲಾಲಿಂಗ ೨) **ಮುಖಲಿಂಗ** ಗಳೆಂದು ಎರಡು ಬಗೆಯಾಗಿ ಆರ್. ಸಿ. ಬೇನರ್ಜಿ ವರ್ಗೀಕರಿಸಿದ್ದು, ಇವು ಕ್ರಿ.ಶ. ೧೦೦ ರಷ್ಟು ಪ್ರಾಚೀನವೆಂದಿದ್ದಾರೆ. ಗೋಪಿನಾಥರಾವ್ ಅವರು ಅದಕ್ಕಿಂತ ಮೊದಲಿಗೆ ಎನ್ನುತ್ತಾರೆ. ಆಂಧ್ರದ 'ಗುಡಿ ಮಲ್ಲಂ' ದಲ್ಲಿನ ಪರಶುರಾಮೇಶ್ವರ ಲಿಂಗ ಕ್ರಿ.ಶ. ೨ನೆಯ ಶತಮಾನದಷ್ಟು ಪ್ರಾಚೀನವಾಗಿದ್ದು, ಶೈವ ಧರ್ಮದ ಮೇಲೆ ಹೊಸ ಬೆಳಕು ಚೆಲ್ಲುತ್ತದೆ. ಈ ಲಿಂಗವೇ ದಕ್ಷಿಣ ಹಿಂದೂಸ್ಥಾನದ 'ಪ್ರಾಚೀನ ಶೈವ ವಿಗ್ರಹ'ವೆಂದು ಹೇಳಲಾಗುತ್ತವೆ. ಇದು ಶಾತವಾಹನರ ಆಳಿಕೆಯ ಆರಂಭ ಕಾಲದ್ದಾಗಿದ್ದು, ವೈದಿಕ ಶಿವೋಪಾಸನೆಯ ಪ್ರತೀಕವೆಂದು ತಿಳಿಯಲಾಗಿದೆ. ''This image represents the vedic features of Siva as youth Kapardin hunter and as associated with yoga and agni (Sharma I K)೨೦ ಶಿವಮೊಗ್ಗ ಜಿಲ್ಲೆಯ ಸ್ಥಾನಕುಂದ್ರವ ಶಾಸನದಲ್ಲಿ ಬರುವ 'ಶಾತಕರ್ಣಿ' ಲಿಂಗಾರಾಧಕನಾಗಿದ್ದನೆಂಬುದನ್ನು ಹೇಳುತ್ತದೆ. ಆಂಧ್ರದಲ್ಲಿ ಸಿಕ್ಕ 'ಬಾಣಲಿಂಗ' ವಿಗ್ರಹಗಳು ಒಂದು ನಿವೇಶನದ ನಾಲ್ಕು ದಿಕ್ಕಿನಲ್ಲಿ ನೆಡಿಸಿ ನಿಲ್ಲಿಸಿದ ಲಿಂಗ ವಿಗ್ರಹಗಳಾಗಿವೆ. ತೀರಿ ಹೋದ ಹಿರಿಯರ ಸ್ಮಾರಕವಾಗಿ ಲಿಂಗಗಳನ್ನು ನೆಡುತ್ತಿದ್ದ ಆಚರಣೆ ಬಹು ಹಿಂದಿನಿಂದಲೂ ರೂಢವಾಗಿತ್ತೆಂಬುದಕ್ಕೆ ಕೆಲವೊಂದು 'ಲಿಂಗಾವಳಿ' ವಿಗ್ರಹಗಳು ಆಧಾರವಾಗುತ್ತವೆ. ಶೈವ ಧರ್ಮದ ಪ್ರಸಾರ ಎಲ್ಲಿಂದ ಎಲ್ಲಿಯುವರೆಗೆ ವ್ಯಾಪಿಸಿತ್ತೋ, ಅಲ್ಲಿನವರೆಗೂ ಲಿಂಗ ಪ್ರತಿಷ್ಠಾಪನೆ ಶೈವ ಸಂಸ್ಕೃತಿಯ ಕುರುಹಾಗಿ ಪ್ರಸರಣಗೊಂಡಿತ್ತೆಂದು ಹೇಳಬಹುದು. ಕಾಂಬೋಜ (ಕ್ರಿ.ಶ. ೫೫೦)ದವರೆಗೂ ಶಿವಲಿಂಗ ವಿಗ್ರಹಗಳು ಹರಡಿದ್ದನ್ನು ನಾವು ಕಾಣುತ್ತೇವೆ. **'ನೈರ್ಮಲ್ಯ ರತ್ನಾಕರ'** ಎಂಬ ಗ್ರಂಥವು ಜಗತ್ತಿನ ಅನ್ಯತ್ರ ಭಾಗಗಳಲ್ಲಿ ಎಲ್ಲೆಲ್ಲಿ ಶಿವಲಿಂಗಗಳಿರುವ ಬಗೆಗಿನ ಕುರುಹುಗಳನ್ನು ತಿಳಿಸುತ್ತವೆ. ಇವನ್ನು ಒಬ್ಬ ಫ್ರೆಂಚ ಲೇಖಕು **'ಲುಯಿ'** ಎಂಬವನು ಪತ್ತೆ ಮಾಡಿ ಉಲ್ಲೇಖಿಸಿರುವ ವಿಷಯು ಗಮನಾರ್ಹವಾಗಿದೆ.೨೧

**ಲಿಂಗಧಾರಿ ಅಥವ ಮೂರ್ತಿ ವಿನ್ಯಸ್ತ ವಿಗ್ರಹಗಳು:**

'ಸ್ಥಾವರ' ಲಿಂಗಗಳನ್ನು ಬಿಟ್ಟು ವೀರಶೈವಕ್ಕೆ ಹತ್ತಿರವಾದ ರೀತಿಯಲ್ಲೆ, ಅಂಗದ ಮೇಲೆ ಲಿಂಗ ಧರಿಸುವ ಪದ್ಧತಿ ಕ್ರಿ. ಶ. ೫ನೆಯ ಶತಮಾನದಷ್ಟು ಹೊತ್ತಿಗೆ ಅಥವ ಅದಕ್ಕೂ ಮೊದಲಿಗೆ ಆರಂಭವಾದ ಬಗೆಗೆ ನಮಗೆ ಕೆಲವೊಂದು ಮೂರ್ತಿ ವಿನ್ಯಸ್ತ ವಿಗ್ರಹ

---

೨೦ Seminar Papers on Saivism. workshop. (Telugu University Sirsailam)

೨೧ ಕಾಶೀನಾಥಶಾಸ್ತ್ರಿ, ನಾಗನೂರ ಮಠ 'ವೀರಶೈವ ಧರ್ಮ', (ಮರಾಠಿ)

ಗಳು ಹಾಗೂ ಶಿಲಾಶಾಸನೋಕ್ತಿಗಳು ಆಧಾರವನ್ನೊದಗಿಸುತ್ತವೆ. ಇಲ್ಲಿ 'ಭಾರ ಶಿವಲಿಂಗ' ವಿಗ್ರಹದ ಬಗೆಗೆ ನಾವು ಪ್ರಸ್ತಾಪಿಸಬಹುದಾಗಿದೆ.

**ಭಾರ ಶಿವಲಿಂಗ ಹಾಗೂ ವೀರಶೈವ:**

ಸ್ಥಾವರ ಲಿಂಗವು ಇಂದಿನ ಇಷ್ಟಲಿಂಗವಾಗಿ ಪರಿವರ್ತನೆಗೊಳ್ಳುವ ಮೊದಮೊದಲಿನ ಉಪಕ್ರಮಗಳಲ್ಲಿ ಶಿರೋವ್ರತ ಲಿಂಗಧಾರಣವೂ ಒಂದು. ಲಿಂಗವನ್ನು ಭುಜದಲ್ಲಿ ಧರಿಸು ವಂತೆ ಶಿರದ ಮೇಲೂ ಧರಿಸಬಹುದೆಂದು ಉಪನಿಷತ್ತು ಆಗಮಗಳು ವರ್ಣಿಸುತ್ತವೆ. ಕಾರಣ-ಮಕುಟ-ಲಿಂಗಪುರಾಣ, ಮುಂಡಕೋಪನಿಷತ್ತು ಅನಂತರ ಬಂದ ವಾತುಲೋತ್ತರ ಹಾಗೂ ಸಿದ್ಧಾಂತ ಶಿವಮಣಿಗಳಲ್ಲಿಯೂ ಇದರ ಉಲ್ಲೇಖವಿದೆ. "ಬ್ರಹ್ಮವಿದ್ಯಾವದೇತ್ ಶಿರೋವ್ರತಂ ವಿಧಿವದ್ವೈಸ್ತು ಜೀರ್ಣಮ್ (ಮುಂಡಕ)-ಬ್ರಹ್ಮವಿದ್ಯೆಯನ್ನರಸಲು ಶಿರೋ ವ್ರತವನ್ನು ಪಾಲಿಸಬೇಕೆಂದು ಇಲ್ಲಿ ಹೇಳಿದೆ.

ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ | ಎಂಬ ಉಕ್ತಿಯು ಗೌತಮ ಶ್ರುತಿಯಲ್ಲಿದೆ. 'ಧಾರಯಂತಿ ಸದಾಲಿಂಗಂ ಉತ್ತಮಾಂಗೇ ವಿಶೇಷತಃ, ಉತ್ತಮಾಂಗದಲ್ಲಿ ಲಿಂಗಧರಿಸುವುದು ಒಂದು ವಿಶೇಷ'ವೆನ್ನುತ್ತದೆ ಲಿಂಗಪುರಾಣ, ಒಟ್ಟು ಲಿಂಗವನ್ನು ಶರೀರದ ಯಾವ ಯಾವ ಭಾಗಗಳಲ್ಲಿ ಧರಿಸಬಹುದೆಂಬುದನ್ನು ವಾತುಲವು ವರ್ಣಿಸುತ್ತದೆ. "ಉತ್ತಮಾಂಗಗಳ ಬಾಹು, ಹೃದಯು, ವಕ್ಷಸ್ಥಳಗಳು" ಪ್ರಶಸ್ತವೆನ್ನು ತ್ತವೆ. ಈ ವೀರಶೈವ ಲಿಂಗಾನು ಸಂದರ್ಭದಲ್ಲಿ 'ಹಸ್ತ-ಮಸ್ತಕ' ಸಂಯೋಗಕ್ಕೆ ಹೆಚ್ಚಿನ ಮಹತ್ವವಿದೆ. ಇಲ್ಲಿ ಇದನ್ನು 'ವೇಧಾದೀಕ್ಷೆ'ಯಿಂದ ಗುರುವು ತನ್ನ ಚಿತ್ಕಳೆಯನ್ನು ಶಿಷ್ಯನ ಮಸ್ತಕದಲ್ಲಿ ಸ್ಥಾಪಿಸುತ್ತಾನೆ. ಈ ಅರ್ಥದಲ್ಲಿಯೂ 'ಶಿರೋವ್ರತ' ಲಿಂಗಧಾರಣೆ ಹೆಚ್ಚು ಅರ್ಥವತ್ತಾಗಿ ಕಾಣುತ್ತದೆ.

ಐತಿಹಾಸಿಕವಾಗಿ ಶಿರದಲ್ಲಿ ಲಿಂಗ ಧರಿಸಿದ ಪ್ರಾಚೀನ ವಿಗ್ರಹಗಳು, ಮೂರ್ತಿಗಳು ನಮಗಿಂದು ದೊರಕಿವೆ. ಗುಪ್ತರ ಕಾಲಕ್ಕಿಂತ ಹಿಂದಿನಿಂದಲೂ 'ಶಿರೋವ್ರತ' ಲಿಂಗಧಾರಿ ಗಳಿದ್ದರು ಎಂಬುದಕ್ಕೆ ಇದು ನಿದರ್ಶನ. ಕಾರಣೋತ್ತರ ತಂತ್ರವು ಹೇಳುವಂತೆ 'ಶಿರೋವ್ರತ'ವು 'ಅತ್ಯಾಶ್ರಮ ವ್ರತ', 'ಪಾಶುಪತ ವ್ರತ', 'ಶಾಂಭವೀ ವ್ರತ'ಗಳೆಂದು ಪರ್ಯಾಯ ಹೆಸರನ್ನು ಸೂಚಿಸುವುದರಿಂದ ಇದು ಪಾಶುಪತದಷ್ಟೇ ಹಿಂದಿನದಿದ್ದು, ವೀರಶೈವರ ಲಿಂಗಧಾರಣೆಗೆ ಹೆಚ್ಚು ನಿಕಟವಾಗಿ ಕಾಣುತ್ತದೆ. ಶ್ರೀಶೈಲ ದೇವಸ್ಥಾನದ ಪ್ರಾಕಾರ ವಿಗ್ರಹಗಳಲ್ಲಿ ದೊಡ್ಡ ಪ್ರಮಾಣದ ಲಿಂಗವನ್ನು ತಲೆಯಲ್ಲಿಟ್ಟುಕೊಂಡ ವಿಗ್ರಹ ಗಳನ್ನು 'ಪರ್ವತಲಿಂಗ'ವೆಂದು ಸೂಚಿಸಲಾಗಿದೆ. ಇದೂ ಸಹ ಶಿರೋವ್ರತ ಲಿಂಗದ ಒಂದು ಭೇದವಾಗಿ ಆ ಆ ಕಡೆಗಳಲ್ಲಿ ಪ್ರಸಾರವಾಗಿರಬೇಕು. ಶ್ರೀಶೈಲವು ಹಿಂದಿನಿಂದಲೂ ಕಾಳಾಮುಖ ಆಚಾರ್ಯರ ಹಾಗೂ ಪಾಶುಪತರ ಕೇಂದ್ರವಾಗಿತ್ತೆಂಬುದಕ್ಕೆ ಇದು ಸಂಕೇತ

ವಾಗುತ್ತದೆ. ಈ ಬಾಹ್ಯಾವಸ್ಥೆಗಳನ್ನು ನೀಗಿ "ಜಗದಗಲ ಮಿಗಿಲಗಲವಾದ" ಪರಮಾತ್ಮ ನನ್ನು ತಮ್ಮ 'ಉರಸ್ಥಳ'ದಲ್ಲೂ, ಅನಂತರದಲ್ಲಿ 'ಕರಸ್ಥಳ'ದಲ್ಲಿ ತಂದುಕೊಂಡುದು ಧಾರ್ಮಿಕರಂಗದ ಆಚರಣೆಗಳಲ್ಲಿ ಒಂದು ಉತ್ಕ್ರಾಂತಿಯೆನ್ನಬೇಕು. ದೂರದಲ್ಲಿನ ಶಿವ ಲಿಂಗಕ್ಕೆ ಕೈಮುಟ್ಟಿ ಪೂಜಿಸುವುದು, ಅನಂತರ ಆ ಶಿವಲಿಂಗವನ್ನು ಸಾಂಕೇತಿಕವಾಗಿ ಕೈಯಲ್ಲಿಟ್ಟು ಆರಾಧಿಸುವುದು. ಈ ಹಂತಹಂತದ ಲಿಂಗಾರ್ಚನಾ ಪದ್ಧತಿಗೆ ಸಂಬಂಧಿಸಿ, ನಮಗೆ ದೊರಕಿದ ವಿಗ್ರಹಗಳು ವೀರಶೈವರ ಐತಿಹಾಸಿಕ ಆಧ್ಯಾತ್ಮಿಕ ಬೆಳವಣಿಗೆಯ ಒಂದೊಂದು ಘಟ್ಟದ ಮೇಲೂ ಬೆಳಕು ಚೆಲ್ಲುತ್ತದೆ. ಹೀಗೆ ಕರಸ್ಥಲದ ಲಿಂಗೋಪಾಸನೆಯ ವ್ಯಕ್ತಿ ಸಾಂಕೇತಿಕ ವಿಗ್ರಹಗಳೇ ಮೂರ್ತಿ ವಿನ್ಯಸ್ತ ವಿಗ್ರಹಗಳೆಂದು ಇಲ್ಲಿ ಸೂಚಿಸಲಾಗಿದೆ.

### ಪುರಾಣಗಳಲ್ಲಿ ವೀರಶೈವ ಕುರುಹುಗಳು:

ದೇವಾಸುರರ ಕಥೆಗಳಲ್ಲಿ ನಮ್ಮ ಪುರಾಣಕಾರರ ಕಲ್ಪನೆ ಸಂಕೇತಗಳೆಷ್ಟಿದ್ದರೂ, ಅವು ಒಮ್ಮೊಮ್ಮೆ ಇತಿಹಾಸದ ಪಳೆಯುಳಿಕೆ (Fossil) ಗಳೂ ಸಹ ಆಗುತ್ತವೆ. ಮೂಲ ನಿವಾಸಿಗಳಾದವರ ಮೇಲೆ, ಹೆಚ್ಚು ಬಲಶಾಲಿಯಾದ ಜನಾಂಗವೊಂದು ಧಾಳಿಮಾಡಿ, ಅದು ಜಯಶಾಲಿಯಾದಾಗ, ತನ್ನವರ ಮೇಲ್ಮೆಯನ್ನು ಬಣ್ಣಿಸಲು ವಿರೋಧಿ ಪಕ್ಷವನ್ನು 'ಅನಾರ್ಯ', ದಸ್ಯು, 'ರಾಕ್ಷಸ'ರೆಂದು ಕೆಳದರ್ಜೆಯಲ್ಲಿ ವರ್ಣಿಸುತ್ತದೆ. ಈ ಪರಿಸ್ಥಿತಿ ಲಿಂಗಧಾರಿಗಳಾದ ಇಲ್ಲವೆ ಶಿವೋಪಾಸಕರಾದ ಕೆಲವು ದೈತ್ಯರಿಗೂ ಒದಗಿದೆ. ಜಲಂಧರಾಸುರ. ತ್ರಿಪುರ, ಮಹಿಷಾಸುರ, ಭಸ್ಮಾಸುರ ಅಲ್ಲದೆ ರಾವಣ ಮುಂ. ಇವ ರೆಲ್ಲರೂ ಲಿಂಗಧಾರಿಗಳು ಆದರೆ ದೌರ್ಜನ್ಯ, ದುಷ್ಟ, ಅಹಂಕಾರಗಳಿಂದ, ಪಾಶವೀಕೃತ್ಯ ಕ್ಕಿಳಿದಾಗ ಸ್ವತಃ ಶಿವನೇ ಇವರನ್ನು ಧ್ವಂಸ ಮಾಡಬೇಕಾಯಿತು. ದುಷ್ಟ ಶಿಕ್ಷೆ–ಶಿಷ್ಟ ರಕ್ಷೆಯನ್ನು ಯಾವ ದೇವರಾದರೂ ನಿರ್ವಹಿಸಲೇಬೇಕು. ಮಹಿಷಾಸುರನು ಜಗನ್ಮಾತೆ ಯಾದ ಗೌರಿಯನ್ನು ಮೋಹಿಸ ಬಂದಾಗ, ಮೊದಲು ಆಕೆ ಅವನ ಕೊರಳಲ್ಲಿದ್ದ ಲಿಂಗ ವನ್ನು ಕಿತ್ತುಕೊಳ್ಳುತ್ತಾಳೆ. ಅನಂತರ ಅವನನ್ನು ವಧೆ ಮಾಡುವಳು. 'ಅದತ್ತ ಸಹಸಾ ಗೌರೀ ಲಿಂಗಂ ತಸ್ಯಗಳೇ ಸ್ಥಿತಂ'. (ಸ್ಕಂದ–ಮಾಹೇಶ್ವರನ ಖಂಡ) ಎಂಬ ಉಕ್ತಿ ಇದಕ್ಕೆ ಆಧಾರವಾಗಿದೆ. ಇನ್ನು ಕೆಲವೆಡೆ ಬರುವ ಪ್ರಸಂಗಗಳು. ತಥಾ ಲಿಂಗಂ ರಾಕ್ಷಸಾಃ ಕೇಚಿದುತ್ತಮವಾಃ (ಪದ್ಮ ಪುರಾಣ–ಪಾತಾಳ ಖಂಡ) ಮುಂತಾದವು ಪುರಾಣಕಾಲೀನ ವೀರಶೈವದ ಮಾಹಿತಿಯನ್ನೊದಗಿಸುತ್ತವೆ.

### ಮಹಾಭಾರತದಲ್ಲಿ ವೀರಶೈವ:

ವೀರಶೈವ ಧರ್ಮದ ಪ್ರಪ್ರಾಚೀನ ರೂಪವಾದ 'ಪಾಶುಪತ' ಧರ್ಮವಷ್ಟೇ ಅಲ್ಲದೆ, ಲಿಂಗಧಾರಿಗಳಾದ ವೀರಶೈವರ ಅಸ್ತಿತ್ವದ ಬಗೆಗೂ ಮಹಾಭಾರತ ಬೆಳಕು ಚೆಲ್ಲು ತ್ತದೆ. (ಅನು–ಶಾಂತಿ) ಅನುಶಾಸನ ಪರ್ವದಲ್ಲಿ ಬರುವ ಒಂದು ಶ್ಲೋಕವನ್ನಿಲ್ಲಿ ಕೆಳಗೆ ಉದ್ಧರಿಸಿದೆ.

ಕಿಮಾಹುರ್ಭರತ ಶ್ರೇಷ್ಠ ವಿಪ್ರಃ ಪಾತ್ರ ಸನಾತನಂ
ಲಿಂಗಿನಂ ಬ್ರಾಹ್ಮಣ ಚಾಪ್ಯ ಲಿಂಗಿನಂ ।
ಸದ್ವೃಸ್ತಿಮಪಿ ವಿಜ್ಞಾಯ ಲಿಂಗಿನೇ ಚೇತರಾಯು ಚ
ದೇಯಮಾಹುರ್ಮಾಹರಾಜ ಉಭಾ ನೇತೌ ತಾಪಸ್ವಿನೌ ॥

(ವ. ಭಾ. ಅನು)

ಸತ್ಕರಿಸಲು ಪಾತ್ರರಾದ ಬ್ರಾಹ್ಮಣರಲ್ಲಿ 'ಲಿಂಗಿ ಬ್ರಾಹ್ಮಣ'ರನ್ನು ಸತ್ಕರಿಸುವುದೋ 'ಅಲಿಂಗಿ ಬ್ರಾಹ್ಮಣ'ರನ್ನೋ, ಎಂದಾಗ ಸದ್ವೃತ್ತಿಗಳೂ, ಜ್ಞಾನಮೂರ್ತಿಗಳೂ ಆದ 'ಲಿಂಗಿ ಬ್ರಾಹ್ಮಣ'ರನ್ನು ಕರೆಯಬೇಕೆಂದು ಇಲ್ಲಿ ಆದೇಶ ನೀಡಲಾಗಿದೆ. 'ಬ್ರಾಹ್ಮಣ' ಎಂಬ ಪದ ಲಿಂಗಾಯತರಿಗೆ ಈಗಲೂ ಅನ್ವಯವಾಗಿರುವುದನ್ನು ಆಂಧ್ರದ 'ಆರಾಧ್ಯ ವೀರಶೈವ' ಬ್ರಾಹ್ಮಣರಲ್ಲಿ ನೋಡುತ್ತೇವೆ. "ಅಸಂಖ್ಯಾತಾ ಭವಿಷ್ಯಂತಿ ಭಿಕ್ಷವೋ ಲಿಂಗಿನ ಸ್ತಥಾ ಆಕ್ರಮಾಣಾಂ ವಿಕಲ್ಪಾಶ್ಚ ವೃತ್ತೇಸ್ಮಿಸ್ ವೈಕೃತೇ ಯುಗೆ"–ಎಂದು ಶಾಂತಿಪರ್ವ ದಲ್ಲಿ ಬರುವ ಉಲ್ಲೇಖದಿಂದಲೂ, ಅಂದು ಲಿಂಗ ಆರಾಧಕರು ಮಾತ್ರವಲ್ಲದೆ ಲಿಂಗಧಾರ ಕರೂ ಸಹ ಇದ್ದರೆಂಬುದು ವಿದಿತವಾಗುತ್ತದೆ.

ವೀರಶೈವ ತತ್ತ್ವಜ್ಞಾನದ ಸಕೀಲವನ್ನು ಬೋಧಿಸುವ 'ಕರಣಹಸುಗೆ' ಪಂಚ ಮಹಾಭೂತಗಳಿಂದ ಮೊದಲ್ಗೊಂಡು ಉಳಿದ ಕರ್ಮ/ಜ್ಞಾನ ಇಂದ್ರಿಯಗಳು (೫+೫) ೫ ತನ್ಮಾತ್ರೆಗಳು, ೫ ಪ್ರಾಣವಾಯುಗಳು, ೫ ಅಂತಃಕರಣಗಳು ಒಟ್ಟಿಗೆ=೨೫ ತತ್ವಗಳು ಹುಟ್ಟಿದುವೆಂದು ಹೇಳಿರುವುದಕ್ಕೆ ಮೂಲ ಮಹಾಭಾರತವೇ ಆಧಾರವಾಗುತ್ತದೆ. (ಪರ್ವ–೧೨, ಅಧ್ಯಾಯ–೩೧೪, ಶ್ಲೋಕ–೪, ೧೪) ಮಹಾಭಾರತದಲ್ಲಿ ಇನ್ನೊಂದೆಡೆ ಅಂದಿನ ಪಾಶುಪತರ ಆಚರಣೆಗಳನ್ನು ವಿವರಿಸಲಾಗಿದೆ. ಇವು ಇಂದಿಗೂ ವೀರಶೈವರಲ್ಲಿ ವಿಶೇಷವಾಗಿ ಬಸವೋತ್ತರ ಯುಗದ ಕರ್ನಾಟಕ ವೀರಶೈವರಲ್ಲಿ ಇಂದಿಗೂ ವೈಚಾರಿಕ ಮಟ್ಟದಲ್ಲಿ ಮಾತ್ರವಲ್ಲದೆ ಆಚರಣೆಗಳಲ್ಲೂ ಸಹ ಉಳಿದು ಬಂದವುಗಳಾಗಿವೆ.

"ನಾನೇ ರುದ್ರನು. ಸರ್ವ ವ್ಯಾಪಿಯಾದ ಸರ್ವರಿಗೂ ಹಿತಕಾರಿಯಾದ, ಗೂಢವಾದ ಪಾಶುಪತ ಧರ್ಮವನ್ನು ಹುಡುಕಿ ತೆಗೆದನು." ಇದು ವರ್ಣ ವ್ಯವಸ್ಥೆಗೂ ಮತ್ತು ಶಾಸ್ತ್ರ ಗಳ ನಿಯಮಗಳಿಗೂ ವಿರುದ್ಧವಾಗಿದೆಯೆಂದು ತಿಳಿಗೇಡಿಗಳಿಂದ ತಿರಸ್ಕರಿಸಲ್ಪಟ್ಟರೂ, ಬಲ್ಲವರು ಇದನ್ನು ಬಣ್ಣಿಸುವರು. ಇದು ನಿಜವಾಗಿಯೂ ವರ್ಣವ್ಯವಸ್ಥೆಯುಳ್ಳ ಧರ್ಮ ಕ್ಕಿಂತ ಮಿಗಿಲಾದುದು." (ಉಲ್ಲೇಖ: ಡಾ॥ ನಂದೀಮಠ)–ಇಲ್ಲಿನ ವಿಚಾರಗಳು ಬೌದ್ಧ, ಜೈನ, ವೈಷ್ಣವ ಮೊದಲಾದವರಿಗೆ ಸಂಬಂಧಿಸಿದ್ದುವಾಗಿರದೆ, ಶೈವಮತದಲ್ಲಿನ ಪಾಶುಪತ ಆಚರಣೆಗೆ ಸಂಬಂಧಿಸಿದ್ದಾಗಿದೆಯೆಂಬುದನ್ನು ಡಾ॥ ಹಾಪ್‌ಕಿನ್ಸ್ ದೃಢಪಡಿಸಿದ್ದಾರೆ. (Dr. Hopkins Great Epic of India (Ed. III) ಮಹಾಭಾರತವು ಪ್ರತಿ

ಪಾದಿಸಿರುವ ಹಲವಾರು ಮತ ಸಿದ್ಧಾಂತಗಳಲ್ಲಿ ಅಲ್ಲಿ ಬರುವ ಪಾಶುಪತ ಮತಸಿದ್ಧಾಂತ ವಿಚಾರಗಳು ವೀರಶೈವ ಸಿದ್ಧಾಂತಕ್ಕೆ ತೀರ ಹತ್ತಿರವಾದವುಗಳೆಂದು ತಿಳಿದುಬರುತ್ತದೆ.[೨೨]

**ಇತರ ಪುರಾಣ ಮೂಲಗಳಲ್ಲಿ:**

ವಚನಕಾರರು ವೀರಶೈವ ಮತಾಧಿಕ್ಯವನ್ನು ಹೇಳಲು ಅನೇಕ ಪುರಾಣಗಳಿಂದ ಪ್ರಮಾಣಗಳನ್ನು ಒದಗಿಸಿದ್ದಾರೆ. ಮುಖ್ಯವಾಗಿ ೧೮ ಪುರಾಣಗಳಲ್ಲಿ ಮಾರ್ಕಂಡೇಯ, ಲಿಂಗ ವರಾಹ, ಸ್ಕಂದ, ಮತ್ಸ್ಯ, ಕೂರ್ಮ, ವಾಮನ, ಬ್ರಹ್ಮಾಂಡ–ಈ ಹತ್ತು (೧೦) ಪುರಾಣಗಳು ಶೈವ ಪುರಾಣಗಳಾಗಿದ್ದು, ಇವುಗಳ ಕಾಲ ಸು. ಕ್ರಿ. ಶ. ೩೦೦ ರಿಂದ ೭೫೦ ಎಂದು ಅಂದಾಜು ಮಾಡಲಾಗಿದೆ. ವೀರಶೈವ ಬೆಳವಣಿಗೆಯನ್ನು ತಿಳಿಯಲು ಇಲ್ಲಿ ನಮಗೆ ಎಷ್ಟೋ ಅಂಶಗಳು ಪೂರಕವಾಗುತ್ತವೆ. ಶೈವ ಪುರಾಣಗಳಲ್ಲದೆ ಅನ್ಯತ್ರವಾದ ಕೆಲವು ಉಪ ಪುರಾಣ ಹಾಗೂ ಸ್ಮೃತಿ ಗ್ರಂಥಗಳಲ್ಲೂ ಸಹ ವೀರಶೈವ ಪಾರಿಭಾಷಿಕ ಪದಗಳು ಅಲ್ಲಲ್ಲಿ ಬಳಕೆಗೊಂಡುದು ಕಂಡುಬರುತ್ತದೆ. ಇಲ್ಲಿ ಮುಖ್ಯವಾದುವನ್ನು ಮಾತ್ರ ಹೇಳಿದೆ.

**ಉಪಬೃಂಹಣ ವಾಕ್ಯಗಳು:**

ವೇದ ಮಂತ್ರಗಳಿಗೆ ವೀರಶೈವ ಅಥವಾ ಲಿಂಗಧಾರಣ ಪರವಾದ ಅರ್ಥವುಳ್ಳ ಪುರಾಣ ವಾಕ್ಯಗಳೇ ಉಪಬೃಂಹಣ ವಾಕ್ಯಗಳೆನ್ನಿಸುತ್ತವೆ.

ಯರ್ಜ ಪ್ಯಾಹ ಸರ್ವಂ ವೈಲಿಂಗಂ ಸ್ಥಾಪಯತೀತಿ ಚ
ಯಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತ್ರಿ ಮಂತ್ರತಃ ||
(ಲಿಂಗಪುರಾಣ ಉತ್ತರ ಭಾಗ–೨೧)

ಇಲ್ಲಿ 'ಪಾಣಿಮಂತ್ರ' ಎಂಬುದನ್ನು "ಮನನಾತ್ ಪೂಜನಾತ್ ತ್ರಾಯತೇ ಇತಿ ಮಂತ್ರಂ ಪ್ರಾಣೌ ಮಂತ್ರಂ ಪಾಣಿ ಮಂತ್ರಂ" ಎಂದು ಲಿಂಗಧಾರಣ ಚಂದ್ರಿಕೆಯಲ್ಲಿ ನಂದಿಕೇಶ್ವರನು ವಿಗ್ರಹಿಸಿ ಹೇಳಿದ್ದಾನೆ. ಹಸ್ತಾಬ್ಜದಲ್ಲಿ ಧರಿಸಿ, ಮನನ–ಧ್ಯಾನಗಳಿಂದ ಅರ್ಚಿಸುವ 'ಲಿಂಗ'ವೆಂದು ಇಲ್ಲಿನ ಅರ್ಥ.[೨೩]

'ಶಿವಧರ್ಮ'ದ ಕೆಳಗಿನ ಶ್ಲೋಕವು 'ಪಾಣಿಮಂತ್ರ' ಎಂಬುದು ಇಷ್ಟಲಿಂಗ ಸೂಚಕವೇ ಆಗಿದೆಯೆಂಬುದಕ್ಕೆ ಸಬಲವಾದ ಆಧಾರವನ್ನೊದಗಿಸುತ್ತದೆ.

ಲಿಂಗಸ್ಯ ದರ್ಶನಂ ಪುಣ್ಯಂ ದರ್ಶನಾತ್ ಸ್ಪರ್ಶನಾಂ ಶುಭು
ಶಿವಲಿಂಗಂ ಮಹಾಪುಣ್ಯಂ ಸರ್ವದೇವ ನಮಸ್ಕೃತಂ
ಯಃ ಸ್ಪಶೇದಪಿ ಪಾಣಿಭ್ಯಾಂ ನಸಪಾಪೈಃ ಪರಿಲಿಪ್ಯತೇ ||

ಮೇಲಿನ ಶ್ಲೋಕವು ಅಖಂಡೇಶ್ವರ ವಚನದಲ್ಲಿ ಉದ್ಧೃತಗೊಂಡಿದ್ದು ಅಂಗದ

---

೨೨ ಡಾ|| ಎಂ. ಚಿದಾನಂದಮೂರ್ತಿ. ಕ.ಶಾ.ಸಾಂ.ಅ. (ದ್ವಿ. ಮು. ೧೯೭೯)
೨೩ ಬೀಜ ವಲ್ಲಭ ತ್ರಿಪಾಠಿ (ಸಂ) ಲಿಂಗಧಾರಣ ಚಂದ್ರಿಕೆ–ನಂದಿಕೇಶ್ವರ.

ಮೇಲಿನ ಲಿಂಗಧಾರಿಗಿಂತ ಕರಸ್ಥಲದಲ್ಲಿ ಅದನ್ನು ಸ್ಪರ್ಶಿಸಿ ಪೂಜೆ ಮಾಡುವವನು ಸರ್ವರಲ್ಲಿಯೂ ಶ್ರೇಷ್ಠ ಎಂಬ ಪ್ರತಿಪಾದನೆಗೆ ಸಾಕ್ಷಿಯಾಗುತ್ತದೆ.

ವೀರಶೈವರ ಅಷ್ಟಾವರಣಗಳಲ್ಲಿ ವಿಭೂತಿ ಮಹಾತ್ಮೆಯನ್ನು ಕೊಂಡಾಡಲು ಇದೇ ವಚನಕಾರ ಷಣ್ಮುಖ ಶಿವಯೋಗಿ ಗರುಡ, ಮತ್ಸ್ಯ, ಬೋಧಾಯನ ಸ್ಮೃತಿ ಹಾಗೂ ಜಾ ಬಾಲೋಪೋಪನಿಷತ್ತುಗಳಲ್ಲಿನ ಉಕ್ತಿಗಳನ್ನು ಉದ್ಧರಿಸುತ್ತಾರೆ. ರುದ್ರಾಕ್ಷಿಗೆ ಪರಮ ರಹಸ್ಯ, ಸ್ಕಂದ ಪದ್ಮ, ಶಿವ ಧರ್ಮಗಳು ಆಧಾರವಾಗಿವೆ. ವೀರಶೈವ ಸಿದ್ಧಾಂತದ ಆತ್ಮವನ್ನಿಸಿರುವ ಷಟ್ ಸ್ಥಲ ವಿವೇಚನೆಗೂ ಸಹ ನಾವಿಲ್ಲಿ ಪೂರ್ವ ಸಾಮಗ್ರಿಯಾಗಿ ಕೆಲವೊಂದು ಪುರಾಣೋಕ್ತಿಗಳನ್ನು ಉದಾಹರಿಸಬಹುದಾಗಿದೆ:

**ಭಕ್ತ ಸ್ಥಲ:** ಲಿಂಗ ಪುರಾಣ (ಹಾಗೂ ಸ್ಕಂದ)

ಚಾಂಡಾಲ ವಾಟಿಕಾಯಾಂ ಶಿವಭಕ್ತಃ
ತದ್ಭೂಮಿ ಶಿವಲೋಕಸ್ತುತದ್ಗೃಹಂ ಶಿವಮಂದಿರಮ್ ॥ (ಲಿಂಗ ಪುರಾಣ)

**ಮಹೇಶ್ವರ ಸ್ಥಲ:** ಬ್ರಹ್ಮಾಂಡ ಪುರಾಣ (ಹಾಗೂ ಪರಮ ರಹಸ್ಯ, ವೀರಶೈವ ಸಂಗ್ರಹ, ವೀರ ಮಾಹೇಶ್ವರ ಸಂಗ್ರಹಗಳು.)

ನ ಪ್ರದೋಷೀ ಹರಿಂ ಪಶ್ಯೇತ್ ಮದಿ ಪಶ್ಯೇತ್ ಪ್ರಮೋದಿತಂ
ಚತ್ವಾರಿ ತಸ್ಸಿನ್‌ಶ್ಯಂತಿ ಆಯುಃ ಪ್ರಜ್ಞಾಯಶೋಬಲವಶ್ ॥

**ಪ್ರಸಾದಿ ಸ್ಥಲ:** ಶಿವ ರಹಸ್ಸ

ಪ್ರಸಾದ ಗಿರಿಜಾದೇವೀ ಸಿದ್ಧ ಕಿನ್ನರ ಗುಹ್ಯಕಂ
ಪ್ರಮುಖ ದೇವಾನಾಮಗ್ರಗಣ್ಯಮ ಗೋಚರಂ ॥

**ಪ್ರಾಣಲಿಂಗಿ ಸ್ಥಲ:** (ಅನುಕ್ತ)

ವಾಯು ಪ್ರಾಣ ಗುಣೇ ಲಿಂಗೇ ಲಿಂಗ ಪ್ರಾಣೇ ಸಮಾಹಿತಃ
ಸುಖ ದುಃಖೇ ಭಯಂ ನಾಸ್ತಿ ಪ್ರಾಣಲಿಂಗಿ ಸ್ಥಲಂ ಭವೇತ್ ॥

**ಶರಣ ಸ್ಥಲ:** (ಅನುಕ್ತ) ಅಲ್ಲದೆ ಇತರ ಮೂಲಗಳಲ್ಲಿ ಭೀಮಾಗಮ, ಸಿದ್ಧಾಂತ ಶಿಖಾಮಣಿ

ಪತಿರ್ಲಿಂಗ ಸತೀ ಚಾಹಂ ಹೃದಿಯುಕ್ತಃ ಸ್ವಯಂ ಪ್ರಭುಃ
ಪಂಚೇಂದ್ರಿಯ ಸುಖ ನಾಸ್ತಿ ಶರಣ ಸ್ಥಲ ಮುಕ್ತಮಂ ।

**ಐಕ್ಯ ಸ್ಥಲ:** ಷಡೂರ್ಮಯಶ್ಚ ಷಡ್ವರ್ಗೋ ನಾಸ್ತಿ ಚಾಷ್ಟ ವಿಧಾರ್ಚನಂ
ನಿರ್ಧಾರಂ ನಿಜ ಲಿಂಗೈಕ್ಯಂ ಶಿಖಿ ಕರ್ಪುರ ಯೋಗವತ್ ॥

ಸ್ಕಂದ ಪುರಾಣದಲ್ಲಿ 'ವೀರ ಮಹೇಶ್ವರ' ಎಂಬ ಒಂದು ಪ್ರಕರಣವಿದ್ದು, ಷಟ್ ಸ್ಥಲಗಳಲ್ಲಿ ಬರುವ ಮಾಹೇಶ್ವರ ಸ್ಥಲದ ನಡೆವಳಿಗಳನ್ನು ವಿಶ್ಲೇಷಿಸಲಾಗಿದೆ.

ಧೃತಲಿಂಗಂ ಸದಾಚಾರ ನಿರತಂ ದ್ವಿಜ ಪುಂಗ ವಪಿ
ವೀರ ಮಾಹೇಶ್ವರಂ ಸಮ್ಯಕ್ ಪೂಜ ವಿರೊದ ಭಕ್ತಿ ಮಾನ್ನರ.

ಇದಲ್ಲದೆ ಸ್ಕಂದ ಪುರಾಣದಲ್ಲಿ ಓರ್ವ ಜಗದ್ಗುರು 'ಸದಾನಂದ ಶಿವಯೋಗಿ ಶಿವಾಚಾರ್ಯ'ರ ವರ್ಣನೆಯನ್ನು, ಅವನನ್ನು 'ಪಾಶು ಪತೋತ್ತಮ' ಎಂದು ಅಭಿವರ್ಣಿಸಲಾಗಿದೆ. ಇಂದಿನ ಶ್ರೀ ಶೈಲ ಪೀಠದ ಗುರು ವಂಶ ಸೂತ್ರದ ಮೇಲೆ ಈ ಪ್ರಕರಣವು ಬೆಳಕು ಚೆಲ್ಲುತ್ತದೆ. ಆದುದರಿಂದ ಇದು ಮೂಲತಃ ವ್ಯಾಸೋಕ್ತ ಭಾಗವೋ ಅಥವಾ ಅನಂತರದ ಪ್ರಕ್ಷಿಪ್ತ ಪ್ರಕರಣವೋ ಎಂಬುದು ಇತ್ಯರ್ಥಗೊಳ್ಳಬೇಕು. ಆದರೆ ಸ್ಕಂದ ಪುರಾಣದ ಇನ್ನೆಷ್ಟೋ ಭಾಗಗಳಲ್ಲಿ ಪ್ರಾಚೀನ ವೀರಶೈವ ಸಂಬಂಧಿಯಾದ ಅಂಶ ಗಳು ನುಸುಳಿರುವುದನ್ನು ನಾವು ಅಲಕ್ಷಿಸುವಂತಿಲ್ಲ. ಮುಖ್ಯವಾಗಿ ಆ ಪುರಾಣದಲ್ಲಿನ ಶ್ವೇತ ಹಾಗೂ ಅವನ ಮಗ ಪಿಂಗಳ. ಈ ಕಥೆ ಎಲ್ಲಕ್ಕಿಂತ ಪ್ರಾಚೀನ. ಪಿಂಗಳನು ಪಾತಾಳಗಂಗೆಯಲ್ಲಿ ಸ್ನಾನ ಮಾಡಿ, ತನ್ನ ರೋಗ ನಿವಾರಣೆಗೊಳಿಸಿಕೊಂಡ ಬಳಿಕ ಸಂತುಷ್ಟನಾದ ತಂದೆ ಶ್ವೇತ ಶ್ರೀ ಶೈಲದ ಶಿವ ಭಕ್ತರಿಗೆ ಧನ ಧಾನ್ಯ ಕನಕಗಳನ್ನು ದಾನ ಮಾಡುತ್ತಾನೆ. ಆ ವರ್ಣನೆ ವೀರಶೈವರ ಅಂದಿನ ಅಸ್ತಿತ್ವವನ್ನು ಭದ್ರಪಡಿಸುತ್ತದೆ.

ಲಿಂಗ ಭ್ಯ ಸಶ್ಶಿವ ಭಕ್ತೇಭ್ಯಃ ಪುತ್ರ ಭಾರ್ಯಾದಿಭಿ ಸ್ಸಃ ।
ದದಾತು ತತ್ರಧನಂ ಧಾನ್ಯಂ ತೈಲ ಮನ್ನಾಂಚಗಮ್ಮಹಿಮ್ ॥
(ಸ್ಕಂದ ಪುರಾಣ ವೀ. ಮಾ. ಪ್ರ)

ಶಿರೋವ್ರತಧಾರಿಗಳಾದ ಲಿಂಗವಂತರಿದ್ದರೆಂಬುದಕ್ಕೆ ಶಿವ ಮಹಾ ಪುರಾಣದಲ್ಲಿನ 'ಕಲ್ಲಿಂಗಂ ಶಿರ ಸಾಧಾರಯೇತ್' ಎಂಬ ಉಕ್ತಿ ಪುಷ್ಟೀಕರಿಸುತ್ತದೆ. ಶಿವ ಮಹಾ ಪುರಾಣ ಉಲ್ಲೇಖಿಸುವಂತೆ ಉತ್ತಮಾಂಗದಲ್ಲಿ ದೇವಾನುದೇವತರಿಗೂ ಸಹ ಲಿಂಗವಿತ್ತೆಂದು ತಿಳಿದು ಬರುತ್ತದೆ.

ಮೇಲಿನ ಪುರಾಣೋಕ್ತ ಶ್ಲೋಕಗಳು ವೀರಶೈವ ಸಿದ್ಧಾಂತ ಹಾಗೂ ಆಚರಣೆಗಳ ದೃಷ್ಟಿಯಿಂದ ಲಿಂಗಾಂಗ ಸಾಮರಸ್ಯ ಹಾಗೂ ಶಿವಯೋಗಗಳಿಗೆ ನಿಕಟವಾದಂತೆ ತೋರು ತ್ತವೆ. ಆದರೆ ಅವನ್ನು ಅನುಸಂಧಾನಕ್ಕೆ ತಂದವರು ಪುರಾಣೋಕ್ತ ವ್ಯಕ್ತಿಗಳಾಗದೆ ಚಾರಿತ್ರಿಕ ವ್ಯಕ್ತಿಗಳಾಗುತ್ತಾರೆ. ಈ ದೃಷ್ಟಿಯಿಂದ ಅಲ್ಲಿ ಪ್ರಕ್ಷಿಪ್ತತೆ ಭಾಗವೂ ಸೇರಿ ಕೊಂಡಿದೆ.

**ಆಗಮಗಳಲ್ಲಿ ವೀರಶೈವ:**

ವೇದೋಪನಿಷತ್ತು, ಆರಣ್ಯಕ, ಬ್ರಾಹ್ಮಣ, ಸ್ಮೃತಿ ಹಾಗೂ ಪುರಾಣಗಳಲ್ಲಿ ಅದೆಷ್ಟೋ ಭಾಗ ಶೈವಪರವಾಗಿದ್ದರೂ, ಶಿವ ಧರ್ಮ, ಶಿವ ತತ್ವ ಹಾಗೂ ಶಿವ ದರ್ಶನ ಗಳಿಗೆ ಆಗಮಗಳು ಅಧಿಕೃತ ಮೂಲಗಳೆಂದು ವಿದ್ವಾಂಸರು ಬಹುತೇಕವಾಗಿ ಒಪ್ಪಿಕೊಂಡಿ ದ್ದಾರೆ. ಶೈವ ಧರ್ಮಕ್ಕೆ ಅಷ್ಟೇ ಅಲ್ಲದೆ, ಅದರ ಪರಿಷ್ಕೃತ ರೂಪವಾದ ಇಂದಿನ

ವೀರಶೈವವೂ ಸಹ ಆಗಮ ಪ್ರಣೀತವಾದವೆಂಬುದೇ ಈಗಿನ ತರ್ಕವಾಗಿದೆ. 'ಗಮ' ಧಾತುವಿನಿಂದ 'ಆಗಮ' ಎಂದರೆ, ಆಗಮಿಸಿದ್ದು ಎಂಬುದು ಶ್ಲೋಕ ದೃಷ್ಟಿಯಿಂದ ಸರಿಯಾದರೂ, ಪರಶಿವನು ಪಾರ್ವತಿಗೆ ಬೋಧಿಸಿದ್ದು, ತನ್ಮೂಲಕವಾಗಿ ಆಗಮಿಸಿದ ಸಾಹಿತ್ಯವೇ ಆಗಮ ಸಾಹಿತ್ಯ ಎಂದು ನಂಬಲಾಗಿದೆ.* ಶಿವ-ಶಕ್ತಿ ಹಾಗೂ ವಿಷ್ಣು ಈ ಅಧಿ ದೇವತೆಗಳನ್ನು ಪ್ರತ್ಯೇಕವಾಗಿ ಒಪ್ಪಿಕೊಂಡಿರುವುದರಿಂದ ಆಗಮಗಳಲ್ಲಿ ಶೈವಾಗಮ, ಶಾಕ್ತಾಗಮ ಹಾಗೂ ವಿಷ್ಣುವಾಗಮಗಳೆಂಬ ಮೂರು ಭೇದಗಳಿವೆ. ಶಿವ ಸರ್ವೋತ್ತಮತ್ವವನ್ನು ಎತ್ತಿ ಹಿಡಿದಿರುವ ಆಗಮಗಳೇ ಶೈವಾಗಮಗಳು. ಇದರಲ್ಲಿ ಕೆಲವು ತಾಂತ್ರಿಕ ಆಚರಣೆಗಳಾದ ದೇವತಾ ಪ್ರತಿಷ್ಠೆ, ಪೂಜಾ ವಿಧಾನ, ದೇವಸ್ಥಾನ ನಿರ್ಮಾಣ-ಇವೇ ಮುಂತಾದ ಸಂಗತಿಗಳೂ ಸಹ ಸೇರಿದ್ದರಿಂದ ಆಗಮಗಳನ್ನು 'ತಂತ್ರ'ಗಳೆಂದೂ ಸಹ ಕರೆಯಲಾಗಿದೆ. ವೇದ ವಾಙ್ಮಯದಂತೆ ಆಗಮ ಸಾಹಿತ್ಯವೂ ಅಪಾರ, ಅನ್ಯಾದೃಶವಾಗಿದೆ. ಆಗಮಗಳು ಪ್ರಮುಖವಾಗಿ ೨೮ ಆದರೂ, ಒಂದೊಂದು ಆಗಮಕ್ಕೆ ಉಪಾಗಮಗಳಿವೆ. ಈಗ ಉಪಾಗಮಗಳ ಸಂಖ್ಯೆ ೨೦೭ ಎಂದು ಗೊತ್ತಾಗಿದೆ. ಪ್ರಮುಖವಾದ ೨೮ ಶಿವಾಗಮಗಳಲ್ಲಿ ಮೊದಲಿನ ೧೦ ಆಗಮಗಳು 'ಶಿವ ಭೇದಾಗಮ'ಗಳೆಂದೂ, ಉಳಿದ ೧೮ ರುದ್ರ ಭೇದಾಗಮಗಳೆಂದೂ ವರ್ಣಿಸಲಾಗುತ್ತದೆ.

**೧. ಶಿವ ಭೇದಾಗಮಗಳು:**

೧) ಕಾಮಿಕ ೨) ಯೋಗಜ ೩) ಚಿಂತ್ಯ ೪) ಕಾರಣ ೫) ಅಜಿತ ೬) ದೀಪ ೭) ಸಹಸ್ರ ೮) ಅಂಶುಮದ್ ೯) ಸುಪ್ರಭೇದ.

**೨. ರುದ್ರ ಭೇದಾಗಮಗಳು:**

೧) ವಿಜಯ ೨) ನಿಶ್ವಾಸ ೩) ಸ್ವಾಯಂಭು ೪) ಅನಲ ೫) ವೀರ ೬) ರೌರವ ೭) ಮಕುಟ ೮) ವಿಮಲ ೯) ಚಂದ್ರಜ್ಞಾನ ೧೦) ಮುಖಬಿಂಬ ೧೧) ಪ್ರೋದ್ಗೀತ ೧೨) ಲಲಿತ ೧೩) ಸಿದ್ಧ ೧೪) ಸಂತಾನ ೧೫) ಸರ್ವೋಕ್ತ ೧೬) ಪಾರಮೇಶ್ವರ ೧೭) ಕಿರಣ ೧೮) ವಾತುಲ ಇದೇ ಆಗಮಗಳನ್ನು ತಾತ್ವಿಕ ದೃಷ್ಟಿಯಿಂದ-೧) ಪರಾಗಮ ಸಂಹಿತೆ ೨) ಅಪರಾಗಮ ಸಂಹಿತೆಗಳೆಂದೂ ಸಹ ವರ್ಗೀಕರಿಸುವ ಪರಿಕ್ರಮವಿದೆ. ಶಿವಾಗಮಗಳನ್ನು ಶ್ರೌತ-ಅಶ್ರೌತ ಎಂದು ವಿಭಾಗಿಸಲಾಗಿದ್ದರೂ, ಇದನ್ನು ವೀರಶೈವರು ಒಪ್ಪಿಕೊಳ್ಳುವುದಿಲ್ಲ. ಇದು 'ವೇದ' ಪ್ರಾಬಲ್ಯವನ್ನು

---

* ಆಗತಮ ಶಿವ ವಕ್ತ್ರೇಭ್ಯಃ । ಗತಮ್‌ಕು ಗಿರಿಜಾ ಶ್ರುತೇ । ಮತಂಚೆ ಶಿವಭಕ್ತಾನಾಂ ತಸ್ಮಾದಾಗಮ ಮುಚ್ಯತೇ ॥ ಇದರಲ್ಲಿ ಆಗಮಕ್ಕೆ ಪಾಶುಪತಮತಾಗಮ ದೃಷ್ಟಿಯಿಂದಲೂ ಸಹ. ಆ=ಪಾಶ, ಗ=ಪಶು, ಮ=ಪತಿ ಎಂದು ನಿರ್ವಚನ ಮಾಡಲಾಗಿದೆ.

'ಆಗಮ'ದ ಮೇಲೆ ಹೊರಿಸುವುದಕ್ಕೆ ಮಾಡಿದ ವಿಭಜನೆ ಮಾತ್ರ. 'ಸಿದ್ಧಾಂತ' ಶಿಖಾಮಣಿ ಮೊದಲಾದ ವೀರಶೈವ ಧರ್ಮದ ಆಧಾರ ಗ್ರಂಥಗಳಲ್ಲಿ ಆಗಮಗಳನ್ನನುಸರಿಸಿಯೇ ವೀರಶೈವ ತತ್ವ ಪ್ರತಿಪಾದನೆ ಮಾಡಿರುವುದುಂಟು. ಈ ಎಲ್ಲ ಆಗಮಗಳಲ್ಲಿ ಕಡೆಯನಾದ ವಾತುಲೋತ್ತರದಲ್ಲಿ ಪರಮೋತ್ಕೃಷ್ಟವಾದ ವೀರಶೈವವು ಬೋಧಿಸಲ್ಪಟ್ಟಿದ್ದಿದೆ ಎಂದೂ, ಅದನ್ನನುಸರಿಸಿ ತಾವು ವೀರಶೈವ ಧರ್ಮ ವಿಶ್ಲೇಷಣೆ ಮಾಡಿರುವುದಾಗಿಯೂ ಅನೇಕ ಶಿವಾಚಾರ್ಯರು ಹೇಳಿಕೊಂಡಿದ್ದಾರೆ. ಇದರಲ್ಲಿ ಸಿದ್ಧಾಂತ ಶಿಖಾಮಣಿಕಾರನಾದ ಶಿವಯೋಗಿ ಶಿವಾಚಾರ್ಯ ಸಹ ಸೇರಿದ್ದಾನೆ.

ಆಲೋಕ್ಯ ಶೈವ ತಂತ್ರಾಣಿ ಕಾಮಿಕಾದ್ಯಾನಿ ಸಾದರಮ್
ವಾತುಲಾಂ ತಾನಿ ಶೈವಾನಿ ಪುರಾಣಾದ್ಯಖಿಲಾನಿ ತು ||

ಶಿವಯೋಗಿ ಶಿವಾಚಾರ್ಯ (ಸಿದ್ಧಾಂತ ಶಿಖಾಮಣಿ): ೧–೨೫

ವಾತುಲಾಖ್ಯೇ ಮಹಾತಂತ್ರೇ ಪೂರ್ವೋತ್ತರ ವಿಭೇದತಃ
ತೇಷು ವಾತುಲ ಸಂಜ್ಞೋಯಂ ಸರ್ವೋತ್ಕೃಷ್ಟ ಮಹಾಗಮಃ ||

ಮಗ್ಗೆಯ ಮಾಯಿದೇವ (ಶಿವಾನುಭವ ಸೂತ್ರ)

ವೀರಶೈವ ಸಿದ್ಧಾಂತದಲ್ಲಿ ಪರಶಿವನು ಶಕ್ತಿ ಸಮೇತನಾಗಿದ್ದು, ಅವನಲ್ಲಿನ ಆ ಶಕ್ತಿಯ ಸಂಸ್ಫುರಣ ಮಾತ್ರದಿಂದ ಅಂಗ–ಲಿಂಗಗಳು ಬೇರಾಗಿ ವೀರಶೈವ ಭಕ್ತಿ ಮಾರ್ಗಕ್ಕೆ ಅನುವು ದೊರೆಯುತ್ತದೆ. ಇದನ್ನು ಉತ್ತರ ವಾತುಳದಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ.

ಆದ್ಯಂತ ಶೂನ್ಯಮಮಲಂ ಪರಿಪೂರ್ಣ ಮೇಕಂ
ಸೂಕ್ಷ್ಮಂ ಪರಾತ್ಪರಮನಾಮಯಮ ಪ್ರಮೇಯಂ
ಭಾವೈಕ್ಯಗಮ್ಯ ಜಡಂ ಶಿವತತ್ವ ಮಾಹುಃ
ಚಿಚ್ಛಕ್ತಿ ಸಂಸ್ಫುರಣ ರೂಢ ಮಹಾತ್ಮ ಲಿಂಗಂ ||

—ಉತ್ತರ ವಾತುಲ.

ವೀರಶೈವರ ಪ್ರಕಾರ ಶಿವನು ಸೃಷ್ಟಿ ಮತ್ತು ಲಯ ಎರಡೂ ಶಕ್ತಿಗಳನ್ನು ಹೊಂದಿರುವನೆಂಬ ತಾತ್ವಿಕ ತಿಳುವಳಿಕೆಗೂ ಸಹ ಆಗಮಗಳೇ ಮೂಲವಾಗಿವೆ. ಅಲ್ಲದೆ ಆಗಮಗಳಲ್ಲಿ ವೀಆಶೈವ ಪಾರಿಭಾಷಿಕ ಪದಗಳ ಸಂಖ್ಯೆಯಂತೂ ಹೆಚ್ಚುತ್ತ ಬಂದಿದೆ. ನಿದರ್ಶನಕ್ಕೆ:

'ಸೃಷ್ಟಿ ಸ್ಥಿತಿ ಲಯ' (ವಾತುಲ ಶುದ್ಧಾಖ್ಯ–ಕ. ೨೨)
'ವೀರಶೈವ' (ಪಾರಮೇಶ್ವರಾಗಮ, ಭೀಮಾಗಮ)
'ಇಷ್ಟಲಿಂಗ' –(ಚಂದ್ರ ಜ್ಞಾನಾಗಮ+ಹಸ್ತಲಿಂಗ+ಭೀಮಾಗಮ)
'ದೀಕ್ಷಾ' –(ಶರಣಾಗಮ)
'ಸರ್ವಾಕ್ಷ ಧಾರಕ ಲಿಂಗ' (ವಾತುಲ)

'ಬಾಹ್ಯ-ಆಭ್ಯಂತರಲಿಂಗ' (ಉತ್ತರ ವಾತುಲ)

'ಭಾವ ಪ್ರಾಣ-ಶರೀರ ಅಂಗಗಳು' (ವೀರಾಗಮ)

'ಪಾದೋದಕ'-'ಪ್ರಸಾದ', ಜಂಗಮ-ಮಾಹೇಶ್ವರ-(ವಾತುಲಾಗಮ)

'ಷಟ್‌ಸ್ಥಾನ ಲಿಂಗಗಳು'-ಸೂಕ್ಷ್ಮಾಗಮ.

ಆದರೆ ಇವಾವ ಆಗಮಗಳೂ ಏಕಕಾಲದಲ್ಲಿ ರಚಿತವಾಗಿರದೆ ಕಾಲಾನುಕ್ರಮದಲ್ಲಿ ಬೆಳೆದು ಬಂದುವಾಗಿರುವುದರಿಂದ ವೀರಶೈವ ಧರ್ಮದ ಪ್ರಾಚೀನತೆಯನ್ನು ನಿರ್ಣಯಿಸು ವಲ್ಲಿ ನಾವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಹೇಗಿದ್ದರೂ, ಇವು ಕ್ರಿ. ಶ. ೧೦-೧೧ ನೆಯ ಶತಮಾನಕ್ಕಿಂತ ಹಿಂದಿನವುಗಳಾಗಿದ್ದರಿಂದ ಬಸವ ಪೂರ್ವ ಕಾಲದ ವೀರಶೈವ ಘಟ್ಟವನ್ನು ನಾವು ಆಗಮಗಳ ಕಾಲದವರೆಗೂ ಹಿಂದೆ ಸರಿಸಬೇಕಾಗುತ್ತದೆ.

ಶೈವಾಚಾರ್ಯರ ಅಭಿಪ್ರಾಯದಂತೆ ಶೈವ ಧರ್ಮದ ಮೂಲವೆಂದರೆ ಆಗಮ ಗಳು. ಆದರೆ ಇದು 'ಶುದ್ಧಶೈವ'. ಶೈವಧರ್ಮವು ಒಪ್ಪಿಕೊಳ್ಳುವ ಕೆಲವು ಸಾಮಾನ್ಯ ತತ್ವಗಳಾದ ಸ್ಥಾವರ, ನಿರ್ಮಾಣ, ಮೂರ್ತಿಪೂಜೆ, ಯೋಗಸಿದ್ಧಿ, ಪಶು-ಪಾಶ-ಪತಿತ್ರಯ ಗಳ ಆಧಾರದ ಮೇಲೆ 'ಜೀವ-ಜಗತ್ತು-ಈಶ್ವರ'ಗಳ ಸಂಬಂಧ ಇದೆಲ್ಲವನ್ನೂ ಶೈವಾಗಮ ಗಳು, ಕ್ರಿಯಾಚರ್ಯಾ, ಯೋಗ ಮತ್ತು ಜ್ಞಾನ ಪಾದಗಳೆಂಬ ಪ್ರಕರಣದಲ್ಲಿ ಚರ್ಚಿಸು ತ್ತವೆ. ಆದರೆ ಇದರಲ್ಲಿನ ಕ್ರಿಯಾಚರ್ಯಾ ಭಾಗದ ಆಚರಣೆ ಕೇವಲ ಶೈವದಲ್ಲೇ ಉಳಿದುಕೊಂಡಿದ್ದು, ಮುಂದಿನ ಎರಡನ್ನು-ಎಂದರೆ, ಯೋಗ-ಜ್ಞಾನ ಭಾಗವನ್ನು ಪರಿಷ್ಕೃತ ರೂಪವಾದ ವೀರಶೈವವು ಒಪ್ಪಿಕೊಂಡಿದೆ. ವೀರಶೈವ ಸಿದ್ಧಾಂತವನ್ನು 'ಪಾಶು ಪತ', 'ಮಹಾವ್ರತ' ಎಂದು ಹೇಳುವುದೂ ಉಂಟು.

ಈ ಮೂರರ ವಿವೇಚನೆ ಶೈವಾಗಮಗಳಲ್ಲಿನ 'ಜ್ಞಾನಪಾದ'ದಲ್ಲಿ ಬರುತ್ತವೆ. ಶೈವಾಗಮಗಳನ್ನು ಬೋಧಿಸುವ ಆಚಾರ್ಯರಲ್ಲಿ ಸದ್ಯೋಜ್ಯೋತಿಭೋಜ ಪ್ರಾಚೀನನಾಗಿ ದ್ದಾನೆ. ಇವನು ರೌರವಾಗಮವೃತ್ತಿ, ತತ್ತ್ವತ್ರಯ ನಿರ್ಣಯಗಳನ್ನು ರಚಿಸಿದ್ದಾನೆ. 'ತತ್ತ್ವತ್ರಯ ನಿರ್ಣಯ'ದಲ್ಲಿನ ೩೬ ತತ್ತ್ವಗಳ ವಿವೇಚನೆಗೆ ಈತನು 'ಸ್ವಾಯಂಭು ವಾಗಮ'ವನ್ನು ಆಧರಿಸಿರಬಹುದೆಂದು ಅಘೋರ ಶಿವ ಹೇಳಿದ್ದಾನೆ. ಅಘೋರ ಶಿವನ ಕಾಲ ಕ್ರಿ. ಶ. ೬೦೦-೬೨೫ ಆಗಿರುವುದರಿಂದ ಅದಕ್ಕೂ ಮುಂಚೆ ಶೈವಾಗಮ ಬೋಧಕ ವಾದ ಸದ್ಯೋಜ್ಯೋತಿ ಇದ್ದಿರಬೇಕೆಂಬುದು ಸ್ಪಷ್ಟವಾಗುತ್ತದೆ. ಕರ್ನಾಟಕದ ವಚನ ಕಾರರು ಸಂಸ್ಕರಿತ ಆಗಮೋಕ್ತ ವಿಚಾರಗಳನ್ನು ಸುಲಭವಾದ ಕನ್ನಡದ ವಚನಗಳಲ್ಲಿ ಹೇಳಿದಂತೆ ತಮಿಳುನಾಡಿನ ಏಳುಜನ ಆಚಾರ್ಯರೂ ಸಹ ಸಂಸ್ಕೃತ ಶಿವಾಗಮಗಳ ಮಹತ್ವವನ್ನು ದೇಶಭಾಷೆಯಾದ ತಮಿಳಿನಲ್ಲಿ ಪ್ರಚುರಪಡಿಸಿದ್ದಾರೆ. ಇವರಲ್ಲಿ ತಿರುವಿಯು ಲೂರು ಉಯ್ಯವಂದರ್, ಮೆಮ್ ಕಂಡದೇವರ್, ಅರುಳನಂದಿ ಶಿವಾಚಾರ್ಯ, ಮನ ವಾಸಗಂ ಕಡಂದಾರ್ ಮುಖ್ಯರಾಗಿದ್ದಾರೆ. ಇವರೆಲ್ಲರನ್ನು 'ಸಕಲಾಗಮ ಪಂಡಿತ'ರೆಂದು

ಹೇಳಲಾಗಿದೆ. ಒಟ್ಟಿನಲ್ಲಿ ತಮಿಳುನಾಡಿನ ಶೈವ ಸಿದ್ಧಾಂತ ಹಾಗೂ ಕರ್ನಾಟಕದ ವೀರಶೈವಕ್ಕೆ ಹಿನ್ನೆಲೆಯಾಗಿ ಆಗಮಗಳು ತಾತ್ತ್ವಿಕ ಮತ್ತು ತಾಂತ್ರಿಕ ಇವೆರಡೂ ಆಚರಣೆಗಳ ದೃಷ್ಟಿಯಿಂದ ಹಿನ್ನೆಲೆಯನ್ನೊದಗಿಸುತ್ತವೆ. ವೀರಶೈವ ಪಾರಿಭಾಷಿಕ ಪದಗಳಂತೂ ಆಗಮಗಳಲ್ಲಿ ಅಸಂಖ್ಯಾತವಾಗಿ ಸಿಕ್ಕುತ್ತವೆ. ಮಹತ್ವದ ಕೆಲವೊಂದು ಪದಗಳಿಗೆ ಇಲ್ಲಿ ಆಗಮಗಳ ಮೂಲವನ್ನು ಹಿಂದೆ ತಿಳಿಸಿದೆ. ವಚನಕಾರರಲ್ಲಿ ವೀರಶೈವ ಸಿದ್ಧಾಂತವನ್ನೇ ಪ್ರಧಾನ ಲಕ್ಷ್ಯವಾಗಿರಿಸಿಕೊಂಡ ಚೆನ್ನಬಸವಣ್ಣ, ಉರಿಲಿಂಗಪೆದ್ದಿ, ಷಣ್ಮುಖ ಶಿವಯೋಗಿಗಳಂತೂ ಆಗಮಗಳನ್ನು ಅನೇಕ ಕಡೆಗಳಲ್ಲಿ ಪ್ರಮಾಣ ವಾಕ್ಯಗಳಾಗಿ ಉದ್ಧರಿಸುವುದರ ಮೇಲಿನಿಂದಲೂ, ಇವುಗಳ ಪ್ರಾಚೀನತೆಯನ್ನು ಹಾಗೂ ಪ್ರಾಮಾಣ್ಯವನ್ನು ಒಪ್ಪಿ ನಾವು 'ವೀರಶೈವದ ಪೂರ್ವಘಟ್ಟ'ವೆಂದು ನಿರ್ಣಯಿಸುವುದು ಸೂಕ್ತವಾಗಿ ತೋರುತ್ತದೆ.

**ವಿಭಿನ್ನ ದರ್ಶನಗಳಲ್ಲಿ ವೀರಶೈವ :**

ವೀರಶೈವವು ಭಾರತೀಯ ಷಡ್ದರ್ಶನಗಳಲ್ಲಿ ಮುಖ್ಯವಾಗಿ ಸಾಂಖ್ಯ, ನ್ಯಾಯ, ಯೋಗ ಹಾಗೂ ಉತ್ತರ ಮೀಮಾಂಸೆಗಳಲ್ಲಿನ ವಿಚಾರಗಳಲ್ಲಿ ಕೆಲವೊಂದನ್ನು ಪರಿಷ್ಕರಣ ರೂಪದಲ್ಲಿ ಸ್ವೀಕರಿಸಿದೆ. ವೀರಶೈವರ ೩೬ ತತ್ವಗಳಿಗೆ ಸಾಂಖ್ಯವು ಒಪ್ಪಿಕೊಂಡಿರುವ ೨೫ ತತ್ವಗಳು ಹಾಗೂ ಸಾಂಖ್ಯವು ಒಪ್ಪಿಕೊಳ್ಳಲಾರದೆ ಇರುವ-ಆದರೆ, ಯೋಗದರ್ಶನವು ಸಮ್ಮತಿಸಿದ 'ಆತ್ಮ'ತತ್ವವನ್ನು ಸಮಾಗಮತ್ವಗೊಳಿಸಿಕೊಂಡಿದೆ. ಉತ್ತರ ಮೀಮಾಂಸೆಗೆ ವೇದಗಳಿಗಿಂತ ಮುಖ್ಯವಾಗಿ ವೇದಾಂತ-ಎಂದರೆ, ಉಪನಿಷತ್ತು ಬ್ರಹ್ಮಸೂತ್ರ ಹಾಗೂ 'ಗೀತೆ'ಗಳಲ್ಲಿನ ವಿಚಾರಗಳು ಹಿನ್ನೆಲೆಯಾಗುವುದರಿಂದ ಇಲ್ಲಿನ ಜೀವ-ಬ್ರಹ್ಮಗಳ ಸಾಮರಸ್ಯ ವಿವೇಚನೆ ವೀರಶೈವ ದರ್ಶನದಲ್ಲೂ ಸಹ ಮುಖ್ಯವಾಗುತ್ತದೆ. ಯೋಗವು ಅಷ್ಟಾಂಗ ಯೋಗಕ್ಕೆ ಕೊಟ್ಟಿರುವ ಮಹತ್ವವನ್ನೇ ನಾವು ಅದಕ್ಕಿಂತ ಮುಂದಿನ ಮೆಟ್ಟಿಲಾದ 'ಶಿವಯೋಗ' ಪ್ರತಿಪಾದನೆಯಲ್ಲಿ ವೀರಶೈವವು ಮುಂದುವರೆಸಿರುವುದನ್ನು ಕಾಣುತ್ತೇವೆ. ಇದೇ ರೀತಿಯಾಗಿ ದ್ವೈತಾದ್ವೈತಗಳೆರಡನ್ನು ಸಹ ವೀರಶೈವವು ಸಮನ್ವಯೀಕರಿಸಿಕೊಂಡಿದೆ.

ಸೈದ್ಧಾಂತಿಕವಾಗಿ ಹೇಳಬಹುದಾದರೆ, ಸಿದ್ಧಾಂತ ಶಿಖಾಮಣಿ, ಕರಣಹಸಿಗೆ, ಶೂನ್ಯ ಸಂಪಾದನೆ ಹಾಗೂ ಏಕೋತ್ತರ ಶತಸ್ಥಲಗಳಲ್ಲಿ ಅವುಗಳ ಆತ್ಯಂತಿಕ ದರ್ಶನದಲ್ಲಿ ಯಾವ ಭಿನ್ನತೆಯೂ ಇಲ್ಲ. ವ್ಯತ್ಯಾಸವೇನಿದ್ದರೂ ತತ್ವಗಳ ಹೊಂದಾಣಿಕೆಯಲ್ಲಿ ಆದರೆ ತತ್ತ್ವಗಳ ನಿರಾಕರಣೆಯಲ್ಲಲ್ಲ. ನಿದರ್ಶನಕ್ಕೆ ಸಾಂಖ್ಯರಲ್ಲಿ ೨೫ ತತ್ವಗಳಲ್ಲಿ ಪಂಚ ಮಹಾಭೂತಗಳು ಕೊನೆಯವಾದರೆ ವೀರಶೈವದಲ್ಲಿ ಅವು ಮೊದಲಾಗುತ್ತವೆ. ಸಾಂಖ್ಯರು 'ಪುರುಷ' ತತ್ತ್ವವನ್ನು ಒಪ್ಪಿಕೊಂಡಿದ್ದರೂ, ಅವನು ಪ್ರಕೃತಿಯ ಬಂಧನಕ್ಕೆ ಒಳಗಾದವನು. ಆದರೆ ವೀರಶೈವದಲ್ಲಿ ಪುರುಷ ಪ್ರಕೃತಿ-ಏಕೋಭಿನ್ನವಾದ ಮಹಾಲಿಂಗದ ಅಥವಾ ಪರಶಿವ-ಶಕ್ತಿಯಿಂದ ಬೇರಾವ ಎರಡು ಶಕ್ತಿಗಳು, ಯೋಗ, ಯಾವುದನ್ನು ಮಹತ್ ಎಂದು ೨೬ನೆಯ ತತ್ತ್ವವನ್ನು ಒಪ್ಪಿಕೊಳ್ಳುವುದೋ ಅದು ವೀರಶೈವದಲ್ಲಿ

'ಚಿತ್' ಆಗಿದೆ. ಒಟ್ಟಾರೆ ಭಾರತೀಯ ಷಡ್ದರ್ಶನಗಳಲ್ಲಿ ಮುಖ್ಯವೆನ್ನಿಸಿರುವ ತತ್ತ್ವಗಳನ್ನು ಸ್ವೀಕರಿಸಿದ್ದಲ್ಲದೆ ಅವನ್ನೇ ಲಿಂಗಾಂಗ ಸಾಮರಸ್ಯಕ್ಕೂ ನೆಲೆಯಾಗಿರಿಸಿ, ಕೊಂಡಿರುವುದು ಇಲ್ಲಿ ಮಹತ್ವದ್ದಾಗಿದೆ. ಒಂದು ದೃಷ್ಟಿಯಿಂದ ಷಡ್ದರ್ಶನಗಳ ವಿನೂತನ ವಿಶ್ಲೇಷಣೆಯೇ ವೀರಶೈವದ ವೈಶಿಷ್ಟ್ಯವಾಗಿದೆ. ಅಂಗತತ್ತ್ವ ಇಪ್ಪತ್ತೈದು ವಿದ್ಯಾತತ್ತ್ವ ಹತ್ತು, ಶಿವತತ್ತ್ವ ಒಂದು-ಎಂದಾಗಿಯೂ ಮತ್ತೆ ಕೆಲವೆಡೆಗಳಲ್ಲಿ ಅಂಗತತ್ತ್ವ ಇಪ್ಪತ್ತೈದು ಲಿಂಗತತ್ತ್ವ ಹನ್ನೊಂದು ಉಭಯ ಮುವತ್ತಾರು ಇದೆಲ್ಲದರ ಸಾಮರಸ್ಯಕ್ಕೆ ಶಿವತತ್ತ್ವವೇ ಆದಿಯಾದುದು ಇದರಿಂದ ಅನಾದಿ, ಶೂನ್ಯ, ಸರ್ವ ಶೂನ್ಯ ನಿರಾಲಂಬ, ಮಹಾಲಿಂಗ ಇವೆಲ್ಲದರ ಪ್ರಾದುರ್ಭಾವ ಇದೆಲ್ಲವೂ 'ಶಿವತತ್ತ್ವ' ಒಂದರಲ್ಲಿ ಎಂದು ಪ್ರತಿಪಾದಿಸುವುದೇ ವೀರಶೈವದ ಗುರಿಯಾಗಿದೆ. ಇದನ್ನು ವೀರಶೈವ ಶಿವಾಚಾರ್ಯರು ಹಾಗೂ ವಚನಕಾರರು ತಮ್ಮ ಸಿದ್ಧಾಂತ ಗ್ರಂಥಗಳಲ್ಲಿ ಹಾಗೂ ವಚನಗಳಲ್ಲಿ ಸಮಸಮವಾಗಿ ನಿರೂಪಿಸಿದ್ದಾರೆ. (ವಿಶೇಷಕ್ಕೆ) [೨೪]

**ಬೌದ್ಧ-ಜೈನ ಹಾಗೂ ವೀರಶೈವ:**

ವೀರಶೈವರ ಲಿಂಗಸ್ಥಾಪನೆ, ಪೂಜನೆಗಳಿಗೆ ಬೌದ್ಧ ಸ್ತೂಪಗಳು ಆಧಾರವಾಗಿರಬಹುದೆಂದು ಹಿಂದೆ ಉಲ್ಲೇಖಿಸಲಾಗಿದೆ. ಲಿಂಗಾಕೃತಿ ಹಾಗೂ ಸ್ತೂಪಾಕೃತಿಗಳಲ್ಲಿನ ಸಾಮ್ಯತೆ ಈ ಅಂಶವನ್ನು ಪುಷ್ಟೀಕರಿಸುತ್ತದೆಯಾದರೂ ಬೌದ್ಧಕ್ಕಿಂತ ಪೂರ್ವದಲ್ಲಿಯೇ ನಿಷ್ಕಲ ಲಿಂಗಪೂಜೆ ಹಾಗೂ ಲಿಂಗತತ್ತ್ವಗಳು ವಿಕಾಸಗೊಂಡಿದ್ದವು. ಅದನ್ನು ಇಂದಿಗೂ ಕರ್ನಾಟಕ ವೀರಶೈವವು ಮೂರ್ತಿಪೂಜೆಯೆಂದು ಮನ್ನಿಸದೆ 'ಇಷ್ಟಲಿಂಗೋಪಾಸನೆ' ಎಂದು ಒಪ್ಪಿಕೊಂಡಿರುವ ರೀತಿಯನ್ನು ನೋಡಿದರೆ, ದೊಡ್ಡ ದೊಡ್ಡ, ವಾಸ್ತುಶಿಲ್ಪ ವಿನ್ಯಾಸದಿಂದ ಕೂಡಿದ ಸ್ತೂಪಗಳಿಗೂ ಲಿಂಗತತ್ತ್ವಕ್ಕೂ ಪರಸ್ಪರ ಹೋಲಿಸುವುದು ನಿರಾಧಾರವಾಗಿ ತೋರುತ್ತದೆ ಅಲ್ಲದೆ ಲಿಂಗಗಳ ಪ್ರತಿಷ್ಠೆ, ಅವುಗಳ ಶಿಲ್ಪ ವಿನ್ಯಾಸವೂ ಕೂಡ ಭಿನ್ನ ಭಿನ್ನವಾಗಿರುವುದರಿಂದ ಇದನ್ನು ಪೂರ್ತಿಯಾಗಿ ಒಪ್ಪಿಕೊಳ್ಳಲು ಬರುವಂತಿಲ್ಲ. ಆದರೆ ಬೌದ್ಧ ಧರ್ಮಾಚರಣೆ, ಹಾಗೂ ದರ್ಶನ ವಿಚಾರಗಳಲ್ಲಿ, ಅತಿಮುಖ್ಯವಾದ 'ಅಷ್ಟಾಂಗ ಮಾರ್ಗ' ಹಾಗೂ ವೀರಶೈವರ 'ಷಟ್‌ಸ್ಥಲ ಸಾಧನ ಮಾರ್ಗ'ಗಳಲ್ಲಿ ಆಂತರಿಕ ಸಾಮ್ಯಗಳು ಕಂಡುಬರುತ್ತವೆ. ಎ. ಬೆರಿಡೇತ್ ಕ್ರೀಥ್ ಹೇಳುವಂತೆ 'ಅಭಿಭಾಯತನ' ಎನಿಸಿಕೊಳ್ಳುವ ಬದ್ಧಜೀವಿಗೆ ಶುದ್ಧಾತ್ಮ ದೀಕ್ಷೆಯನ್ನಿತ್ತು, ನಿರ್ವಾಣದ ಪದವಿಗೆ ಕರೆದೊಯ್ಯುವ ಎಂಟು ಪಾವಟಿಗೆಗಳೇ ಅಷ್ಟಾಂಗ ಮಾರ್ಗ. ಲಿಂಗಾಂಗ ಸಾಮರಸ್ಯದ ಅನುಸಂಧಾನದಲ್ಲಿ ಷಟ್‌ಸ್ಥಲವು ವೀರಶೈವ ಸಾಧಕನನ್ನು ಅಣಿಗೊಳಿಸುವ ರೀತಿಯೂ ಸಹ ಇದೇ ಬಗೆಯಾದುದರಿಂದ ಬೌದ್ಧ-ವೀರಶೈವಗಳ ನೆಲೆಗಟ್ಟಿನಲ್ಲಿ ತಾತ್ವಿಕ ಸಾಮರಸ್ಯವಿರುವುದು ಗಮನಾರ್ಹ. ಇದೇ ಬಗೆಯಾಗಿ ಜೈನರು ಹೇಳುವ 'ಚತುರ್ದಶಗುಣ ಸ್ಥಾನ'ಗಳಿಗೂ

---

೨೪ ಡಾ. ತಿಪ್ಪೇರುದ್ರಸ್ವಾಮಿ (೧೯೬೭, ೧೯೮೨)


ಚತುರ್ವಿಧ ಶೈವ (ವಾತುಲ ಆಧಾರಿತ)
ಸಾಮಾನ್ಯ
ಮಿಶ್ರ
ಶುದ್ಧ
ವೀರ
ವೀರಶೈವ
ಷಡ್ವಿಧ ಶೈವ (ವೀರಶೈವ ವಿಜಯ ಆಧಾರಿತ)
ವೀರಶೈವ
ಅನಾದಿ
ಆದಿ
ವಿಶುದ್ಧ
ಕೇವಲ
ಮಿಶ್ರ
ವೀರಶೈವ
ಸಪ್ತವಿಧ ಶೈವ (ಸೂಕ್ಷ್ಮಾಗಮ ಆಧಾರಿತ)
ವೀರಶೈವ
ಅನಾದಿ
ಆದಿ
ಮಹಾ
ಅನು
ಅವಾಂತರ
ಪ್ರವರ
ಅಂತ್ಯ
ಅನುಶೈವ
ವೀರಶೈವ
ದಶವಿಧ ಶೈವ (ಕಾರಣಾಗಮ ಆಧಾರಿತ)
ವೀರಶೈವ
ಸಾಮಾನ್ಯ
ಪೂರ್ವ
ಮಿಶ್ರ
ಶುದ್ಧ
ಶ್ರೌತ
ಮಾರ್ಗ
ವೀರಶೈವ
ಸಾಮಾನ್ಯ
ವಿಶೇಷ
ನಿರಾಭಾರಿ

ಹಾಗೂ ಷಟ್‌ಸ್ಥಲಗಳಿಗೂ ಸಂಬಂಧ ಕಲ್ಪಿಸಲಾಗಿದೆ. ಆದರೆ, ಚತುರ್ದಶ ಗುಣ ಸ್ಥಾನಗಳಲ್ಲಿ ಜೀವನು ಕನ್ನ ಕರ್ಮಾನುಬಂಧನದಿಂದ ಮೇಲೇರಬಹುದು ಅಷ್ಟೇ ತಿರ್ಯಕ್ ನರಕಗಳಲ್ಲಿ ಹಲವು ಹತ್ತು ಭವಗಳಲ್ಲಿ ಮತ್ತೆ ಮತ್ತೆ ಜನಿಸಬಹುದು. ಆದರೆ ಷಟ್‌ಸ್ಥಲ ಗಳಲ್ಲಿನ ವಿಕಾಸಕ್ರಮದಲ್ಲಿ ಜೀವಾತ್ಮನು ಶುದ್ಧಾತ್ಮನೆನಿಸಿಕೊಂಡೇ ಆರೋಹಣಗೈಯುವನು, ಅಲ್ಲಿನ ಕ್ರಮ ವಿಪರ್ಯಾಯವಿದ್ದರೆ, ಇಲ್ಲಿ ಕ್ರಮ ಸಮುಚ್ಚಯ ಹಾಗೂ ಸಮಸಮುಚ್ಚಯ ಗಳು ಮುಖ್ಯವಾಗಿವೆ.

## ಶೈವ ಪ್ರಭೇದಗಳು-ವೀರಶೈವ:

ಶೈವ ಧರ್ಮವು ಅನೇಕ ಘಟ್ಟಗಳಲ್ಲಿ ದೇಶ-ಕಾಲ-ಪರಿಸರಗಳಲ್ಲಿ ಅನೇಕ ಆಚರಣ ಪದ್ಧತಿ, ಸಂಪ್ರದಾಯ, ಸಿದ್ಧಾಂತಗಳನ್ನು ರೂಪಿಸಿಕೊಂಡು ಬಂದುದರಿಂದ ಇವುಗಳಲ್ಲಿ ಇಂದಿನ ವೀರಶೈವಕ್ಕೆ ಪೂರ್ವಾಧಾರವಾಗಿ ನಿಲ್ಲಬಲ್ಲ ಶೈವ ಶಾಖೆ ಯಾವುದು? ವೀರಶೈವ ದಿಂದ ಭಿನ್ನವಾಗುವ ಶಾಖೆಗಳಾವುವು? ಎಂಬುದನ್ನು ಪರ್ಯಾಲೋಚಿಸಬೇಕಾಗುತ್ತದೆ. ಇಲ್ಲಿ ಎಲ್ಲದಕ್ಕೂ ವಿಸ್ತರಣೆಯಾಗಲಿ, ವಿಶ್ಲೇಷಣೆಯಾಗಲಿ ಸಾಧ್ಯವಾಗಿಲ್ಲ. ಕೇವಲ ಶೈವ ಭೇದಗಳನ್ನು ಹಾಗೂ ವೀರಶೈವ ಪರವಾದ ಶೈವ ಶಾಖೆಗಳನ್ನು ಕುರಿತು ಮಾತ್ರ ಪರ್ಯಾಲೋಚಿಸಲಾಗಿದೆ. ಇವುಗಳ ವರ್ಗೀಕರಣವನ್ನಿಲ್ಲಿ ತೋರಿಸಿದ್ದಲ್ಲದೆ, ವೀರಶೈವದ ಪ್ರತ್ಯೇಕ ಬೆಳವಣಿಗೆಯುನ್ನು ಅಲ್ಲಿ ಸೂಚಿಸಲಾಗಿದೆ.

ಅನಾದಿಕಾಲದಿಂದಲೂ ವೀರಶೈವ ಇತ್ತೆಂದೂ, ಶೈವ ಭೇದವಾದ ವೀರಶೈವಕ್ಕೆ ಈ ಅನಾದಿತ್ವ ಅತ್ಯಂತ ಸಹಜವೆಂದೂ ಡಾ. ಜ. ಚ. ನಿ. ಅಭಿಪ್ರಾಯಪಡುತ್ತಾರೆ. (ವಿಭೂತಿ-ಅನಾದಿ-ಆದಿ-ಆಧುನಿಕ ವೀರಶೈವ-ವೀರಶೈವ ಪುಟ-೧೪೦) ಇಲ್ಲಿನ ಪ್ರಾಚೀನತ್ವವನ್ನು ಒಪ್ಪಿಕೊಳ್ಳಬಹುದಾದರೂ, 'ಅನಾದಿ ಕಾಲ' ಎಂಬುದು ಐತಿಹಾಸಿಕ ಪ್ರಮಾಣ ಎನ್ನಿಸಲಾರದು. ಶೈವ ಭೇದಗಳಲ್ಲಿನ ವೀರಶೈವ ಎಂದರೆ, ವೀರಶೈವವೂ ಸಹ ಶೈವವೆಂದೇ ಅವರು ಸಹಮತಿಸಿರುವುದು ಇಲ್ಲಿ ವಿರೋಧಾಭಾಸವಾಗಿ ತೋರುತ್ತದೆ. ಆದುದರಿಂದ ಇಲ್ಲಿನ ಪೃಥಃಕರಣದ ಉದ್ದೇಶ ಶೈವದೊಡನೆ ವೀರಶೈವವನ್ನು ಏಕೀಭವಿಸಿ ಶೈವವನ್ನೇ ವೀರಶೈವವೆಂದು ಒಪ್ಪಿಕೊಳ್ಳುವುದಲ್ಲ. ಆದರೆ ಶೈವದಲ್ಲಿ ಯಾವ ಮಾರ್ಗ ವೀರಶೈವವಾಗಬಲ್ಲುದು ಎಂಬುದನ್ನು ಜಾಗರೂಕವಾಗಿ ತಿಳಿಯುವ ಜಿಜ್ಞಾಸೆ ಇಲ್ಲಿನ ನಮ್ಮ ಉದ್ದೇಶವಾಗಿದೆ. ಇದಕ್ಕೆ ಕೆಳಗಿನ ವರ್ಗೀಕರಣ ವಿಧಾನಗಳನ್ನು ಅನುಸರಿಸ ಲಾಗಿದೆ.

ಮೇಲಿನ ಸಂಖ್ಯೆ ಇನ್ನೂ ಹೆಚ್ಚಿ ೧೫೦ರ ವರೆಗೆ ಶೈವ ಪ್ರಭೇದಗಳನ್ನು ಹೇಳಲಾಗು ತ್ತದೆ. ಆದರೆ ಇಲ್ಲಿ ಕೊಟ್ಟಿರುವುದರ ಮೇಲಿಂದ ಶೈವ ಧರ್ಮದ ಮೂಲವನ್ನು ಒಂದು ಪ್ರಾದಿಮ ರೂಪ (Proto Form)ವೆನ್ನುವುದಾದರೆ ಅಲ್ಲಿಂದ ಕವಲೊಡೆದು ಬಂದವುಗಳು ಅದರ ಪ್ರರೂಪಗಳು (Offshoots) ಆ ಈ ಪ್ರರೂಪ ಇಲ್ಲವೆ ಶಾಖೆ-ಉಪಶಾಖೆ

ಗಳಿಂದ ಪ್ರತ್ಯೇಕಗೊಂಡು ಬೆಳೆದ ಒಂದು ಪರಿಷ್ಕೃತ ರೂಪವೇ ವೀರಶೈವ, ಎಲ್ಲ ಮೇಲಿನ ಶಾಖೆಗಳಲ್ಲಿ ವೀರಶೈವವು ಕೊನೆಯಲ್ಲಿ ಬರುತ್ತಿರುವುದು ಇಲ್ಲಿ ಅದರ ವಿಶೇಷತೆಯನ್ನೂ, ಅನನ್ಯಸಾಧಾರಣ ಲಕ್ಷಣವನ್ನೂ ಪ್ರತ್ಯೇಕತೆಯನ್ನೂ ಎತ್ತಿ ಹೇಳುತ್ತದೆ. ಇದರಿಂದಾಗಿ ಶೈವದಿಂದ ಹುಟ್ಟಿದ್ದು ವೀರಶೈವವಲ್ಲ. ಶೈವದ ಕೊನೆಯ ಶಾಖೆಗಳಿಂದ ಪ್ರತ್ಯೇಕವಾಗಿ ಬೆಳೆದು ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಿರುವುದನ್ನು ವೀರಶೈವವೆಂದು ಇಲ್ಲಿ ಇತ್ಯರ್ಥ ಮಾಡಬಹುದು. ಇದರಿಂದ ಎಲ್ಲ ಶೈವ ಶಾಖೆಗಳಲ್ಲಿರುವಂತೆ ವೀರಶೈವವೂ ಸಹ ಶೈವದ ಒಂದು ಶಾಖೆಯೆಂದು ಸಾಮಾನ್ಯವಾಗಿ ಗ್ರಹಿಸಿ, ಅದನ್ನು ಅನಾದಿ ಕಾಲಕ್ಕೆ ತಳ್ಳಿ, ಐತಿಹಾಸಿಕ, ಸಾಂಸ್ಕೃತಿಕ ಹಾಗೂ ಆಚರಣೆಗಳಿಂದಲೂ ವಿನೂತನ ಹಾಗೂ ವಿಕಾಸವಾದದ ಪಂಥವನ್ನು ಕಟ್ಟಿಕೊಂಡ ಕ್ರಾಂತಿಕಾರಿಯಾದ ವೀರಶೈವ ಮಾರ್ಗವನ್ನು ಸಾಮಾನ್ಯ ಸಾಂಪ್ರದಾಯ ವರ್ಗದಲ್ಲಿ ಸಮೀಕರಿಸುವುದು ಸಮಂಜಸವಾಗಿ ತೋರುವುದಿಲ್ಲ. ಈ ನಿಟ್ಟಿನಿಂದ ವೀರಶೈವಕ್ಕೆ ಐತಿಹಾಸಿಕವಾಗಿ ನಿಕಟವಾಗಿ ನಿಲ್ಲುವ ಕೆಲವು ಶೈವ ಪಂಥಗಳನ್ನು ನಾವು ಲಕ್ಷಿಸುವುದು ಇಲ್ಲಿ ಸೂಕ್ತವಾಗುತ್ತದೆ.

**ಐತಿಹಾಸಿಕ ವೀರಶೈವ ಪಂಥಗಳು:**

ಶೈವ ಧರ್ಮವು ೭–೧೨ನೆಯ ಶತಮಾನಗಳ ಮಧ್ಯಂತರ ಕಾಲದಲ್ಲಿ ಉತ್ತರ ಹಿಂದೂಸ್ಥಾನ ಹಾಗೂ ದಕ್ಷಿಣ ಹಿಂದೂಸ್ಥಾನಗಳನ್ನೆಲ್ಲ ಆವರಿಸಿತ್ತೆಂಬುದಕ್ಕೆ ಆಧಾರಗಳಿವೆ. ಗುಜರಾತ್, ಮಧ್ಯಪ್ರದೇಶ, ಬಿಹಾರ, ಬಂಗಾಲ, ನೇಪಾಲ ಹಾಗೂ ಕಾಶ್ಮೀರಗಳಲ್ಲಿ ಕ್ರಮವಾಗಿ ಲಾಕುಲೀಶ, ಪಾಶುಪತ ರಸೇಶ್ವರ. ಕಾಶ್ಮೀರ ಶೈವಗಳು ಉತ್ತರದಲ್ಲಿಯೂ ಕಾಳಾಮುಖ ತಮಿಳುಶೈವ ಹಾಗೂ ವೀರಶೈವಗಳು ದಕ್ಷಿಣದಲ್ಲಿಯೂ ಪ್ರಸಾರ ಪಡೆದಿದ್ದವು. ಇವುಗಳಲ್ಲಿ ಕೆಲವು ವೇದ ಪ್ರಾಮಣ್ಯವನ್ನೊಪ್ಪಿಕೊಂಡಂತೆ ಕೆಲವೊಂದು ಆಗಮ



ಗಳನ್ನು ಒಪ್ಪಿಕೊಂಡಿವೆ. ಆದರೆ ಇವೆರಡನ್ನೂ ಮನ್ನಿಸದೆ ವೇದಪೂರ್ವಕ್ಕಿಂತ ಮುಂಚಿನ ಕಾಲದಲ್ಲಿದ್ದ ಅತ್ಯಂತ ಪ್ರಾಚೀನ ಶಾಖೆಯೆಂದರೆ ಪಾಶುಪತ ಶೈವವೆಂಬುದಕ್ಕೆ ನಮಗೆ ಸಾಕ್ಷ್ಯಾಧಾರಗಳಿವೆ. ಐತಿಹಾಸಿಕ ಶೈವಶಾಖೆಗಳ ಬೆಳವಣಿಗೆಯನ್ನಿಲ್ಲಿ ಹೀಗೆ ವಿಭಾಗಿಸಿದೆ.

ಮೇಲಿನ ಪಂಥಗಳನ್ನು ಉಲ್ಲೇಖಿಸುವಲ್ಲಿ ಅತ್ಯಂತ ಪ್ರಾಚೀನ ಆಕರ ಎಂದರೆ ಮಹಾಭಾರತವಾಗಿದೆ. ಶಾಂತಿಪರ್ವದಲ್ಲಿ "ಸಾಂಖ್ಯಂ ಯೋಗಂ ಪಾಂಚರಾತ್ರಂ ವೇದಾಃ ಪಾಶುಪತಸ್ತಥಾ".ಇಲ್ಲಿ ಬರುವ 'ಪಾಶುಪತ' ಇಡೀ ಶೈವಶಾಖೆಗಳಲ್ಲೇ ಪ್ರಾಚೀನವಾದುದು. ಈ ಆಧಾರದಿಂದ ಇದನ್ನು ವೇದಪೂರ್ವ ಕಾಲದವರೆಗೂ ಸಹ ಕೊಂಡೊಯ್ಯಬಹುದು. ಸೈಂಧವ ಸಂಸ್ಕೃತಿಯ ಶಿವನು ಪಾಶುಪತ ಧರ್ಮದ ಮೂಲ ತತ್ವವಾದ 'ಪಶುಪತಿ'. ಈ ಕಾರಣದಿಂದ ಇದನ್ನು 'ಪ್ರಾಗೈತಿಹಾಸಿಕ' ಎನ್ನಲಾಗಿದೆ. ಲಕುಲೀಶನಿಂದ ಹುಟ್ಟಿದ ಪಾಶುಪತ್ರವು ಐತಿಹಾಸಿಕ ಕಾಲದಲ್ಲಿ ಅನಂತರ ಬರುವ ಘಟ್ಟವಾಗಿದೆ. ಇದಲ್ಲದೆ 'ಸೂಕ್ತ ಸಂಹಿತೆ'ಯಲ್ಲಿ ಕಾಪಾಲಿಕ, ಲಾಕುಲ, ಪಾಶುಪತ, ಸೋಮ, ಭೈರವ ಇವೇ ಮುಂತಾದ ಶೈವ ಧರ್ಮದ ಭೇದಗಳನ್ನು ಹೆಸರಿಸಲಾಗಿದೆ. ಇವುಗಳ ಸಂಖ್ಯೆ ೧೧-೧೨ನೆಯ ಶತದಲ್ಲಿ ಕರ್ನಾಟಕ ಹಾಗೂ ಆಂಧ್ರ ನಾಡಿನ ಶಾಸನಗಳಲ್ಲಿ ಉಲ್ಲೇಖಿಸಿರುವಂತೆ ೧೦-೧೫ ಕ್ಕಿಂತ ಹೆಚ್ಚಾಗುತ್ತದೆ. ಕರ್ನಾಟಕದ ವೀರಶೈವ ಧರ್ಮ ಇಷ್ಟೆಲ್ಲ ಭೇದಗಳನ್ನು ತೊಡೆದು ಹಾಕಿ ಕೆಲವೊಂದು ಸೌಮ್ಯತತ್ತ್ವಗಳನ್ನು ತನ್ನ ಸಿದ್ಧಾಂತದಲ್ಲಿ ಸಮನ್ವಯೀಕರಿಸಿಕೊಂಡುದು ಒಂದು ದೊಡ್ಡ ಸಾಹಸವೆನ್ನಬಹುದು. ಚನ್ನಬಸವಣ್ಣನವರ ವಚನದಲ್ಲಿ 'ಶೈವ ಸೈವೆಟಿ ಗಾದ, ಪಾಶುಪತಿ ಪಥವನಜಿೊಯ ಕಾಳಾಮುಖಿ ಕಂಗೆಟ್ಟ' ಎಂಬಲ್ಲಿನ ತತ್ಪೂರ್ವದ ಆಚರಣೆಗಳಲ್ಲಿನ ವಿಪರ್ಯಾಸವನ್ನೂ, ವಾಮಾಚಾರಗಳನ್ನೂ ಖಂಡಿಸಲಾಗಿದೆ. ಒಟ್ಟಾರೆ ಇಂಥ ಶೈವಶಾಖೆಗಳ ಸಂಖ್ಯೆ, ಆಚಾರ-ಸಂಪ್ರದಾಯಗಳ ಮೇಲಿಂದ ಹೆಚ್ಚುತ್ತ ನಡೆದಿತ್ತೆಂಬುದನ್ನು ಪ್ರಾಚೀನ ಶಾಸನಗಳು ಸ್ಪಷ್ಟಪಡಿಸುತ್ತವೆ. ಇವುಗಳ ಸಂಖ್ಯೆಯನ್ನು ಕೆಳಗೆ ಕೊಟ್ಟಿದೆ. ಆಂಧ್ರ ನಾಡಿನ ಶಾಸನಗಳಲ್ಲಿ ಇವನ್ನು ಹೀಗೆ ಹೆಸರಿಸಲಾಗಿದೆ.

| ಮಲ್ಕಾಪುರ ಶಾಸನ(ಕ್ರಿ.ಶ.೧೨೬೧) | ತ್ರಿಪುರಾಂತಕ ಶಾಸನ(ಕ್ರಿ.ಶ.೧೨೪೦) |
|---|---|
| ೧) ಪಾಶುಪತ | ೧) ವೀರವ್ರತ |
| ೨) ಶಾಲನಲ | ೨) ಮಹೇಶ್ವರ |
| ೩) ಶಿವಶಾಸನ | ೩) ಶೈವ |
| ೪) ಶೈವ | ೪) ಪಾಶುಪತ |
| | ೫) ಮಹಾವ್ರತ |
| | ೬) ಕಾಳಾಮುಖ |
| | ೭) ವಿಮಲ |
| | ೮) ಭೈರವ |
| | ೯) ಕಾಪಾಲಿಕ. |

**ಕಾಳಾಮುಖ ಪಾಶುಪತ ಲಕುಲೀಶ ಹಾಗೂ ವೀರಶೈವ ಸಮನ್ವಯೀಕರಣ:**

ಕರ್ನಾಟಕ ಶಾಸನ ಹಾಗೂ ಸಾಹಿತ್ಯ ಪ್ರಮಾಣಗಳ ಮೇಲಿಂದ ಒಂದು ಕಾಲಕ್ಕೆ ಪ್ರಮುಖವಾಗಿದ್ದ ಕಾಳಾಮುಖವು ವೀರಶೈವದಲ್ಲಿ ೧೪–೧೫ನೆಯ ಶತಮಾನಗಳ ಹೊತ್ತಿಗೆ ಸಂಲಗ್ನವಾಗಿ ಹೋಗಿ ಅನಂತರ ಪೂರ್ತಿಯಾಗಿ ನಶಿಸಿಹೋಯಿತು. ಆದರೆ ೧೫ನೆಯ ಶತಮಾನದ ಸಂಗಮವಂಶದ ಪ್ರೌಢದೇವರಾಯನ ಪೂರ್ವಕರಿಗೆಲ್ಲ ರಾಜಗುರುಗಳಾಗಿ ಇದ್ದವರು ಕಾಳಾಮುಖ ಆಚಾರ್ಯರಾದ ಕ್ರಿಯಾಶಕ್ತಿ ಆಚಾರ್ಯರು. ಅಲ್ಲದೆ ಲಕ್ಕಣ್ಣ ದಂಡೇಶ ತನ್ನ ಗುರುವಾದ ಮಲ್ಲಿಕಾರ್ಜುನನನ್ನು 'ಪಾಶುಪತ ಸದ್ವ್ರುತ ಗುಣಾಗ್ರಣ್ಣಿ ಎಂದಿರುವುದಕ್ಕೆ ಏನು ಕಾರಣ? ಪ್ರೌಢದೇವರಾಯನಾಗಲಿ, ಅವನ ಮಹಾಮಂತ್ರಿ ಲಕ್ಕಣ್ಣ ದಂಡೀಶನೇ ಆಗಲಿ ಪರಿಪೂರ್ಣವಾಗಿ ವೀರಶೈವರಾಗಿದ್ದರಷ್ಟೇ ಅಲ್ಲ ೧೨ನೆಯ ಶತಮಾನದ ವೀರಶೈವ ಧರ್ಮ ಸಂಘಟನೆ ಹಾಗೂ ವೈಚಾರಿಕ ಕ್ರಾಂತಿಕಾರರಾಗಿ ಹಿಂದಿನ ಕಾಳಾಮುಖ ಪಾಶುಪತ ಆಚರಣೆಗಳೆಲ್ಲವೂ ವೀರಶೈವದಲ್ಲೇ ಸೇರಿಹೋಗಿ ಇವಾವುದರಲ್ಲೂ ತಾರತಮ' ಇಲ್ಲದೇ ಹೋದುದರಿಂದ ಇವನ್ನಿಲ್ಲಿ ಹೀಗೆ ಉಲ್ಲೇಖಿಸಿರಬಹುದೆಂದು ನಾವು ತರ್ಕಿಸಬಹ' ದಾಗಿದೆ. ಈ ಅಂಶವನ್ನು ಈಗಾಗಲೆ ಇತಿಹಾಸಜ್ಞರು ಗುರುತಿಸಿದ್ದುಂಟು. ಸಿ. ಹಯವದನ ರಾವ್ ಅವರು ವಿಜಯನಗರ ಕಾಲದ ವೀರಶೈವದ ಬಗೆಗೆ ಸಂದಿಗ್ಧವಾಗಿ ಪ್ರಸ್ತಾಪಿಸು ತ್ತಾರಾದರೂ ಪಾಶುಪತ ಲಕುಲೀಶಗಳು ಈ ಕಾಲದಲ್ಲಿ ವೀರಶೈವದಲ್ಲಿ ಒಂದಾಗಿದ್ದವೆಂಬು ದನ್ನು ದೃಢಪಡಿಸಿದ್ದಾರೆ.

The exact relationship of the Pasupata (or Lakuleesam) school to which Kriyasakti and his disciples seems to have belonged to the Veerashaiva is not yet clearly made out but there seems to be no doubt that the Veerashaivas built on the foundation of the Pasupata's and later aborbed them.[೨೪]

ಇದೇ ವಿಚಾರವನ್ನು ಎಂ. ರಾಮರಾವ್ ಕಾಳಾಮುಖ ವೀರಶೈವ ಸಮನ್ವಯೀಕರಣ ಕುರಿತು ಪ್ರಕಟಿಸಿದ್ದಾರೆ.

After 1410 A. d. we have very little of the 'Kalamukha' Priests. It is possible that the Democratic Lingayat Sect aborbed the Kalamukhas and then practically disappeared from the history.[೨೫]

ವೀರಶೈವ ಸಮುದ್ಧರಣ ಹಾಗೂ ಸಂಘಟನೆ ಹಾಗೂ ವಿವಿಧ ಶೈವಗಳ ಏಕೀಕರಣ ಕಾಲದಲ್ಲಿ ಸ್ವತಃ ಬಸವಣ್ಣನವರನ್ನು ಸಹ 'ಶೈವಪಾಷಂಡಿ'ಯೆಂದು ಓರ್ವ ಮೀಮಾಂಸಕನು

---

೨೪ Hayavadan Rao C. Mysore Gazzetteer Vol. II Part III

೨೫ Ramarao M. Vijayanagar Sex Centenary Vol. P. 614.

ವಿಡಂಬಿಸಿ ನುಡಿದ ಪ್ರಸ್ತಾಪ ಶಿವತತ್ತ್ವ ಚಿಂತಾಮಣಿಯಲ್ಲಿ ಬರುತ್ತದೆ. ಆದರೆ ವೀರಶೈವದಲ್ಲಿ 'ಪೂರ್ವ ಮೀಮಾಂಸೆ' ಹಾಗೂ 'ಉತ್ತರ ಮೀಮಾಂಸೆ'ಗಳಿಗೆ ಮಹತ್ತ್ವ ವಿತ್ತಿರವೆ ಷಡ್ದರ್ಶನಗಳಲ್ಲಿ ನ್ಯಾಯ ಹಾಗೂ ವೈಶೇಷಿಕವನ್ನು ಅನುಸರಿಸಿರುವ ಶೈವಕ್ಕೆ ಹೆಚ್ಚಿಗೆ ಮನ್ನಣೆಯಿತ್ತುದಾಗಿ ಅಲ್ಲಿ ಪುನರ್‌ಸಮರ್ಥನೆ ನಡೆಯುತ್ತದೆ. ಇದರಿಂದ ಇಂಥ ಸಂಕ್ರಮಣಯುಗದಲ್ಲಿ ಮತೀಯ ತೊಡಕು, ಸೈದ್ಧಾಂತಿಕ ಅಸಹನೆ ಹಾಗೂ ಆಚಾರಣೆ ಗಳಲ್ಲಿನ ವಿಭಿನ್ನತೆ ಎಷ್ಟು ಉಲ್ಬಣಗೊಂಡಿತ್ತೆಂಬುದನ್ನು ನಾವು ತಿಳಿಯಬಹುದು.

**ಪಾಶುಪತ ವೀರಶೈವ:**

ಶೈವ ಭೇದಗಳನ್ನು ನಿರಾಕರಿಸಿ, ಕಾಳಾಮುಖರ ಸ್ಥಾವರೋಪಾಸನೆ, ಕ್ರಿಯಾ ಕರ್ಮಕಾಂಡಗಳ ಆಚರಣೆಯನ್ನು ನಿಗ್ರಹಿಸಿ, ಅವನ್ನು ಪಾಶುಪತ ಸದ್ವೃತಿಯಿಂದ ಮಾನ್ಯ ಗೊಳಿಸಿ, ಪುರಾತನವಾದ ಪಾಶುಪತವನ್ನು ವೀರಶೈವವು ಎತ್ತಿಹಿಡಿದಿರುವದರಿಂದ ಆಧುನಿಕ ವೀರಶೈವವು ಪಾಶುಪತದಷ್ಟೇ ಪ್ರಾಚೀನ ಎಂದು ಇಲ್ಲಿ ಉಲ್ಲೇಖಿಸಬಹು ದಾಗಿದೆ. ಪಾಶುಪತರಿಗೂ, ವೀರಶೈವಕ್ಕೂ ಇರುವ ಸಂಬಂಧ ಅನ್ಯೋನ್ಯವಾದುದು. 'ಸರ್ವದರ್ಶನಕಾರ'ರಾದ ಮಾಧವಾಚಾರ್ಯರ ದೃಷ್ಟಿಯಲ್ಲಿ ಲಕುಲೀಶ ಪಾಶುಪತಗಳೆರಡೂ ಒಂದೇ ಆಗಿದ್ದವು. ಶಂಕರಾಚಾರ್ಯರು ಬ್ರಹ್ಮಸೂತ್ರ ಭಾಷ್ಯದಲ್ಲಿ ಪಾಶುಪತರನ್ನು 'ಮಹೇಶ್ವರ' ಎಂದಿದ್ದಾರೆ.ಲಕುಲೀಶ-ಪಾಶುಪತ ಎರಡನ್ನೂ ಒಟ್ಟಿಗೆ 'ಮಹೇಶ್ವರ'ಎಂದಾಗಿ ಮಾಧವಾಚಾರ್ಯರು ಉಲ್ಲೇಖಿಸಿರುವರು ಕರ್ನಾಟಕದ ಶಾಸನಗಳಲ್ಲಿ ಕೆಲವೆಡೆ ಕಾಳಾಮುಖ ಹಾಗೂ ಲಕುಲೀಶರು ಒಂದೇ ಎಂದಾಗಿ ಹೇಳಿರುವುದರಿಂದ (EC. 12, Sira 28 SK. 107, 44, 114, 316) ಇವರೆಲ್ಲರನ್ನು ಒಟ್ಟಾರೆ 'ಮಹೇಶ್ವರ' ಎನ್ನಬಹುದು. ನಿಟ್ಟೂರು ನಂಜಣಾರ್ಯ (ಕ್ರಿ.ಶ. ೧೭೨೫) ವೀರಶೈವರನ್ನು 'ಮಹಾಪಾಶುಪತ'ರೆಂದು ಕರೆದಿರುವಲ್ಲಿ ಈ ಸಮನ್ವಯ ಕಲ್ಪನೆಗೆ ಇನ್ನೂ ಹೆಚ್ಚಿನ ಮಹತ್ವ ಒದಗುತ್ತದೆ. ಮಹಾಭಾರತದಲ್ಲಿ ಬರುವ ಪಾಶುಪತರ ವರ್ಣನೆಯ ವಿವರಗಳು ಇಂದಿನ ವೀರಶೈವ ಆಚರಣೆಯನ್ನು ಬಹು ಮಟ್ಟಿಗೆ ಸದೃಶವಾಗಿಸುತ್ತವೆ ಎಂಬುದಾಗಿ ಡಾ|| ನಂದೀಮಠ ಅಭಿಪ್ರಾಯ ಪಡುತ್ತಾರೆ.

"ನಾನೇ ರುದ್ರ ಸರ್ವಾಂತರ್ಯಾಮಿ," "ವೇದಗಳನ್ನು ತ್ಯಜಿಸಿ ಮುಖ-ತಲೆ ಗೂದಲನ್ನು ಕತ್ತರಿಸಿ ಕಾಷಾಯ ವಸ್ತ್ರಧರಿಸಿ ತಿರುಗುವಂಥವರು" ಪರಲೋಕ ಭಯ, ಮರಣಾನಂತರದ ಭೀತಿಯಿಲ್ಲದೆ ರೂಢವೂ ಹಿತಕರವೂ ಆದ ಪಾಶುಪತ ಧರ್ಮವನ್ನು ಮೊದಲಿಗೆ ಹುಡುಕಿ ತೆಗೆದೆನು "ಇದು ವರ್ಣವ್ಯವಸ್ಥೆ ಹಾಗೂ ಶಾಸ್ತ್ರದ ಕಟ್ಟಳೆಗೆ ಮೀರಿರುವದರಿಂದ ತಿಳಿಗೇಡಿಗಳು ಇದನ್ನು ತಿರಸ್ಕರಿಸಿದರೂ ಸಹ ವಿವೇಕಿಗಳು ಪ್ರಶಂಸಿಸು ವರು." ಈಗಲೂ ವೀರಶೈವದಲ್ಲಿ ವರ್ಣವ್ಯವಸ್ಥೆಯಿಲ್ಲದಿರುವದು ಜನ್ಮಾಂತರ ಹಾಗೂ ಕರ್ಮ-ಮೋಕ್ಷಗಳ ವಿಚಾರಗಳಿಲ್ಲದಿರುವದು ಈ ಪ್ರಾಚೀನ ಪಾಶುಪತದೊಡನಿರುವ ವಿಚಾರ ಸಾಮ್ಯವನ್ನು ಎತ್ತಿ ಹೇಳುತ್ತದೆ. ಪಾಶುಪತದಂತೆಯೇ ವೀರಶೈವಕ್ಕೆ ನಿಕಟ

ವಾಗಿರುವ ಇನ್ನೆರಡು ಪ್ರಮುಖ ಮಾರ್ಗಗಳ ಸಂಕ್ಷಿಪ್ತ ವಿವರಣೆಯನ್ನಿಲ್ಲಿ ಒದಗಿಸಬಹುದು ಅವೆಂದರೆ:

೧. ಕಾಶ್ಮೀರ ಶೈವ.

೨. ತಮಿಳು ಶೈವ.

**ಕಾಶ್ಮೀರ ಶೈವ**:

ಶೈವ ಮತಾವಲಂಬಿಗಳಾದ ಕವಿ, ಅಲಂಕಾರಿತರಿಂದಲೂ ಶೈವ ಸಿದ್ಧಾಂತ ವಿವೇಚಕರಿಂದಲೂ ಕಾಶ್ಮೀರವು ಕರ್ನಾಟಕದ ವೀರಶೈವದೊಡನೆ ಘನಿಷ್ಠ ಸಂಬಂಧವನ್ನು ಸ್ಥಾಪಿಸಿದೆ. ೧೨ನೆಯ ಶತಮಾನದ ಶರಣರ ಆಂದೋಲನದ ಕಾಲದಲ್ಲಿ ಕಾಶ್ಮೀರದಿಂದ ಬಂದರೆನ್ನಲಾದ ಶರಣರನ್ನು ಸಹ ನಾವಿಲ್ಲಿ ನೆನೆಯಬಹುದಾಗಿದೆ. ಆದರೆ ಇಲ್ಲಿ ಅತಿ ಮುಖ್ಯವಾಗಿ ಹೇಳಬೇಕಾಗಿರುವದು 'ಕಾಶ್ಮೀರ ಶೈವದರ್ಶನ ಹಾಗೂ ವೀರಶೈವ ಸಿದ್ಧಾಂತಗಳ ಪರಸ್ಪರ ಬಾಂಧವ್ಯ ಕುರಿತು, ಕಾಶ್ಮೀರ ಶೈವದರ್ಶನದ ಒಟ್ಟು ಸಾರವೆಂದರೆ ಪತಿ-ಪಶು ಮತ್ತು ಪಾಶ ಇವುಗಳ ತ್ರಿಕದರ್ಶನದಲ್ಲಿ ಅಡಕವಾಗುತ್ತದೆ. ಇದರಲ್ಲಿ ಎರಡು ಸಂಪ್ರದಾಯಗಳಿವೆ. ೧) ವಸುಗುಪ್ತನ ಶಿವಸೂತ್ರ ಸಂಪ್ರದಾಯ, ೨) ಸೋಮಾನಂದನ 'ಪ್ರತ್ಯಭಿಜ್ಞಾ' ಅಥವ 'ಕಾಶ್ಮೀರ ಶಿವಾದ್ವೈತ ಸಂಪ್ರದಾಯ' (ಕಾಲ ಕ್ರಿ.ಶ. ೮೨೫-೮೫೦), ಇವೆರಡಕ್ಕೂ ಆಗಮ ಹಾಗೂ ಶಿವಸೂತ್ರಗಳು ಮೂಲವಾದರೂ ಒಂದು ದ್ವೈತಪರದರ್ಶನವಾದರೆ ಇನ್ನೊಂದು ಶಿವಾದ್ವೈತ ಆದುದರಿಂದ ಎರಡನೆಯದು ವೀರಶೈವ ದರ್ಶನಕ್ಕೆ ಹೆಚ್ಚು ನಿಕಟ. 'ಪ್ರತ್ಯಭಿಜ್ಞಾ' ಎಂದರೆ ಮರೆತು ಹೋದ ಸ್ವಸ್ವರೂಪ ಜ್ಞಾನವನ್ನು ಗ್ರಹಿಸುವದು. "ಗ್ರಹಣ ಸ್ಮರಣಯೋಃ ಐಕ್ಯಂ ಪ್ರತ್ಯಭಿಜ್ಞಾ" ಎಂದರೆ ಪರಮಾತ್ಮನು ಜೀವಾತ್ಮನಿಂದ ಅಭಿನ್ನನಾಗಿದ್ದಾಗಲೂ ಜೀವನು 'ಪಶು'ವಾಗಿ ಅಜ್ಞಾನ ಜಡನಾಗಿ 'ಪಾಶ' ಎಂದರೆ 'ಸಂಸಾರ ಬಂಧದಲ್ಲಿ ಸಿಲುಕಿ ಸ್ವಸ್ವರೂಪವನ್ನು ಅರಿಯಲು ಅಶಕ್ಯನಾಗಿದ್ದಾನೆ. ಆ ಜ್ಞಾನವನ್ನು ಪುನರ್-ಗ್ರಹಿಸುವದೇ 'ಪ್ರತ್ಯಭಿಜ್ಞಾ' ಇದು ವೀರಶೈವರ ಪಿಂಡ-ಪಿಂಡಜ್ಞಾನ ಹಾಗೂ ಸಂಸಾರ ಹೇಯಸ್ಥಲಗಳಲ್ಲಿನ ವಿವೇಚನೆಗೆ ಹತ್ತಿರವಾಗುತ್ತದೆ. ವೀರಶೈವದಲ್ಲಿ ಶಿವನು ತನ್ನ ಇಚ್ಛಾಮಾತ್ರದಿಂದ ಲೋಕವನ್ನು ಸ್ವಲೀಲೆಗಾಗಿ ಸೃಷ್ಟಿಸಿದನೆಂದು ಹೇಳಲಾಗುವ ವಿಚಾರಕ್ಕೆ ಕಾಶ್ಮೀರ ಶೈವ ದರ್ಶನ ನಮಗೆ ಹಿನ್ನೆಲೆಯಾಗಿದೆ.

'ಚಿದಾತ್ಮೈವಹಿ ದೇವೋತ ಸ್ಥಿತಮಿಚ್ಛಾವಶಾದ್ಬಹಿಃ
ಯೋಗೀವ ನಿರುಪಾದಾನ ಅರ್ಥಜಾತಂ ಪ್ರಕಾಶಯೇತ್॥

ಈಶ್ವರ ಪ್ರತ್ಯ್ರಾಭಿಜ್ಞಾ'

ಶಿವನು ಶಕ್ತಿ ಸಮೇತನಾಗಿರುವದರ ಪರಿಕಲ್ಪನೆಗೂ ಸಹ ಕಾಶ್ಮೀರ ಶೈವವು ಆಧಾರವಾಗಿದೆ.

ನ ಶಿವಃ ಶಕ್ತಿರಹಿತೋ ಶಿವವರ್ಜಿತಾ
ತಾದಾತ್ಮ್ಯಮನಯೋರ್ನಿತ್ಯಾಂ ವಹ್ನಿದಾಹಕಯೋರಿವ|

ಅದ್ವೈತಿಗಳ ಮಾಯಾವಾದವು ಜಗತ್ತು ಮಿಥ್ಯೆಯೆನ್ನುತ್ತದೆ ಆದರೆ ಕಾಶ್ಮೀರ ಶಿವಾದ್ವೈತದ ಪ್ರಕಾರ 'ಆಭಾಸವಾದ'ದಲ್ಲಿ ಬರುವ 'ಆಭಾಸ' ಕೇವಲ ಮಾಯಾ ಅಥವ ಮಿಥ್ಯೆಯಲ್ಲ 'ಭಾ' ಧಾತುವಿನಿಂದ ಬೆಳಗು, ಪ್ರಕಾಶ. ಇದು ನಮ್ಮ ಸ್ವಜ್ಞಾನ ಅಂತರ್‌ಜ್ಞಾನ ಈ ಒಳಗಿನ ಪ್ರಕಾಶದಿಂದ ನಾವು ಹೊರಗೆ ಗ್ರಹಿಸುವ ಜ್ಞಾನ ಬಾಹ್ಯಜ್ಞಾನ ಆದರೆ ಇದು ಅಂತರ್ ಜ್ಞಾನದಚಿದಂಶವೇ ಹೊರತು ಅದರಿಂದ ಭಿನ್ನವಾದ ಜ್ಞಾನವಲ್ಲ, ಇದರಿಂದಾಗಿ ಶಿವನೂ ಸತ್ಯ, ಜಗತ್ತು ಸಹ ತದಂಶೀಭೂತವಾದ ಸತ್ಯ. ಅತಿ ಮುಖ್ಯವಾದ ಇನ್ನೊಂದು ವಿಚಾರವೆಂದರೆ ಕಾಶ್ಮೀರ ಶೈವವು ಒಪ್ಪಿರುವ ೩೬ ತತ್ವಗಳನ್ನೇ ವೀರಶೈವವು ಸಹ ಒಪ್ಪಿ ಕೊಂಡಿರುವದು. ವೀರಶೈವ ಸಿದ್ಧಾಂತ ಪ್ರತಿಪಾದಕನಾದ ಶ್ರೀಪತಿ ಪಂಡಿತನ 'ಶ್ರೀಕರ ಭಾಷ್ಯ'ದಲ್ಲಿ ಹಾಗೂ 'ಶಿವಾದ್ವೈತ ಮಂಜರಿ' ಮುಂತಾದ ಗ್ರಂಥಗಳಲ್ಲಿ ಇವೆರಡರ ಪರಸ್ಪರ ತಾತ್ತ್ವಿಕ ಮೌಲ್ಯಗಳನ್ನು ಚರ್ಚಿಸಿರುವದು ಈ ದೃಷ್ಟಿಯಿಂದ ಮಹತ್ವದ್ದಾಗಿದೆ. ೧೨ನೆಯ ಶತಮಾನದ ವೀರಶೈವ ಸಿದ್ಧಾಂತಕ್ಕೆ ಅದಕ್ಕಿಂತ ೨೦೦-೩೦೦ ವರ್ಷ ಪ್ರಾಚೀನವಾದ ಕಾಶ್ಮೀರ ಶೈವದರ್ಶನ, ನೇರವಾದ ಪ್ರಭಾವ ಹಾಗೂ ಪರಸ್ಪರ ಸಾಮರಸ್ಯಗಳಿಗೆ ಕಾರಣ ವಾಗಿರಲೂಬಹುದೆಂಬ ವಿದ್ವಾಂಸರ ತರ್ಕವನ್ನಿಲ್ಲಿ (ಜೆ. ರುದ್ರಪ್ಪ- ಶೈವದರ್ಶನ)[೨೬] ನಾವು ಲಕ್ಷಿಸಬೇಕು. (ಆದರೆ ಇದನ್ನು ಆಕ್ಷೇಪಿಸುವವರೂ ಇಲ್ಲದಿಲ್ಲ, ಎಂ. ಜಿ. ನಂಜುಂಡಾರಾಧ್ಯ ೧೯೮೧)

## ತಮಿಳು ಶೈವಸಿದ್ಧಾಂತ ೬೩ ಪುರಾತನರು ವೀರಶೈವ:

ಉತ್ತರದಲ್ಲಿ ಕಾಶ್ಮೀರ ಶೈವ ಪ್ರಚುರವಾಗಿದ ಕಾಲದಲ್ಲಿಯೇ ದಕ್ಷಿಣದಲ್ಲಿ ತಮಿಳು ಶೈವ ಸಿದ್ಧಾಂತ ಪ್ರಭಾವ ಬೀರಿದ್ದು ಕಂಡು ಬರುತ್ತದೆ. ತಾತ್ತ್ವಿಕ ಪ್ರಣಾಲಿಕೆಯಲ್ಲಿ ೩೬ ತತ್ತ್ವಗಳ ಸ್ವೀಕರಣೆ, ಪತಿ-ಪಶು-ಪಾಶಗಳ ಪರಿಕಲ್ಪನೆ ಇವುಗಳ ಸಾಮ್ಯತೆ ಎರಡೂ ದರ್ಶನಗಳಲ್ಲಿರುವದರಿಂದ ಕಾಶ್ಮೀರ ಶೈವವು ತಮಿಳು-ಶೈವದ ಮೇಲೆ ಮೊದಲು ಪ್ರಭಾವ ಬೀರಿ ಅನಂತರದಲ್ಲಿ ತಮಿಳು ಶೈವದ ಪ್ರಭಾವ ಕರ್ನಾಟಕದ ವೀರಶೈವ ದರ್ಶನದ ಮೇಲೆ ಉಂಟಾಗಿರುವ ಸಾಧ್ಯತೆಯಿದೆ. ಈ ಸಿದ್ಧಾಂತದ ಜೊತೆಗೆ ವೀರಶೈವ ಭಕ್ತಿ ಮಾರ್ಗಕ್ಕೆ ಮಾರ್ಗವೇತ್ತರಾದ ತಮಿಳುನಾಡಿನ '೬೩ ನಯನ್ಮಾರರು' ಅರ್ಥಾತ್ ಪುರಾತನ ಭಕ್ತರು ತೋರಿದ ಭಕ್ತಿಮಾರ್ಗ ಕರ್ನಾಟಕದ ವೀರಶೈವ ಶರಣ ಚರಿತ್ರೆಯಲ್ಲಿ ಸಂಸ್ಮರಣೀಯವಾದು ದಾಗಿದೆ. ಪುರಾತನರು ಹೆಚ್ಚಾಗಿ 'ಶೈವ' ಶರಣರೇ ಆಗಿದ್ದರೆಂದು ಗೊತ್ತಾಗಿದ್ದರೂ ಅವರಲ್ಲಿ ಅತಿ ಮುಖ್ಯರಾದ ಮೂವರು ಶರಣರಲ್ಲಿ (ಅಪ್ಪಾರ್, ಸುಂದರಮೂರ್ತಿ ನಯನಾರ್ ಹಾಗೂ ಮಾಣಿಕ್ಯವಾಚಕರ್) ಕೊನೆಯವರಾದ ಮಾಣಿಕ್ಯವಾಚಕರ್

---

೨೬ ರುದ್ರಪ್ಪ ಜೆ. ಕಾಶ್ಮೀರ ಶೈವದರ್ಶನ.

'ವೀರಶೈವ'ರಾಗಿದ್ದರೆಂದು ಆರ್. ಎಸ್. ವೇದಾಚಲಂ ಹೇಳುತ್ತಾರೆ. (ವೇದಾಚಲಂ **Tamil Autiguity**) ಬಸವಣ್ಣನವರು ತಮ್ಮ ವಚನಗಳಲ್ಲಿ ಸ್ಮರಿಸುವ ಸಿಂಧು ಬಲ್ಲಾಳ ಸಿರಿಯಾಳ–ಚಂಗಳೆ, ನಂಬಿಯಣ್ಣ ಮುಂತಾದವರಲ್ಲದೆ ಮಾದಾರ ಚೆನ್ನಯ್ಯ ಇವರೆಲ್ಲರೂ ತಮಿಳುನಾಡಿನ ಶರಣರಾಗಿದ್ದಾರೆ. ಹರಿಹರನ ಕವಿಯ ಪುರಾತನರ ರಗಳೆಗಳಲ್ಲಿ ಅವರ ಭಕ್ತಿಯ ವಿವಿಧ ಸಾಧನ ಕ್ರಮಗಳ ನಿರೂಪಣೆ ಬಂದಿದೆ. ಇದಕ್ಕೆ ಈ ಕವಿಗೆ ಹಿನ್ನೆಲೆಯಾಗಿ ಶೆಕ್ಕಿಳಾರ್ ವಿರಚಿತ 'ಪೆರಿಯ ಪುರಾಣಮ್'ದಲ್ಲಿ ಈ ಪುರಾತನರ ಚರಿತ್ರ ಕಥನ ನಿರೂಪಿತವಾಗಿದೆ. ಹರಿಹರನಿಗೆ ಇದು ಆಧಾರವಾಗಿರದೆ ಅವನು ತಮಿಳುನಾಡಿನ ಹಲವಾರು ಶೈವ ದೇವಾಲಯಗಳನ್ನು ನೇರವಾಗಿ ಸಂದರ್ಶಿಸಿ ಚರಿತ್ರ ಸಂಗ್ರಹ ಮಾಡಿರಬಹುದೆಂದು ಇತ್ತೀಚೆಗೆ ಅಭಿಪ್ರಾಯ ವ್ಯಕ್ತವಾಗಿದ್ದರೂ (ಡಾ॥ ಎಸ್. ವಿದ್ಯಾಶಂಕರ) ೨೭ ಹರಿಹರನ ರಗಳೆಗಳಿಗೆ ಈ ಪ್ರತ್ಯಕ್ಷ ಮಾಹಿತಿ ಅಷ್ಟೇ ಆಧಾರವಾಗಿರದೆ, ತನಗಿಂತ ಹಿಂದೆ ಪ್ರಚರಿತವಾಗಿದ್ದಿರಬಹುದಾದ ಪೌರಾಣಿಕ ಕಥೆಗಳು, 'ತೇವಾರಂ' ಹಾಡುಗಳು, ಶಿಷ್ಟ ಜನಪದ ರೂಪದಲ್ಲಿ ಬೆಳೆದುಬಂದ ಇನ್ನೂ ಹಲವು ಪ್ರಕಾರದ ಸಾಹಿತ್ಯ ಹಾಗೂ ಶಿಷ್ಟ ಕೃತಿಯಾದ 'ಪೆರಿಯ ಪುರಾಣಂ' ಮೌಖಿಕ ಪ್ರಸಾರದ ಸಾಹಿತ್ಯ ಇವನ ಕಥೆಗಳಿಗೆ ಪ್ರೇರಕವಾಗಿರಬಹುದೆಂದು ನಾವು ನಂಬುತ್ತೇವೆ. ಒಟ್ಟಾರೆ ಕರ್ನಾಟಕದ ಶರಣ ಸಾಹಿತ್ಯ–ಭಕ್ತಿ ಮಾರ್ಗ, ಜೀವನ ಸಂಸ್ಕೃತಿ ಹಾಗೂ ಮೌಲ್ಯ ಪ್ರಸಾರದಲ್ಲಿ ೬೩ ಪುರಾತನರು ಆದ್ಯರು ಅಗ್ರವರೇಣ್ಯರೂ ಆಗಿದ್ದಾರೆ. ಇವರನ್ನು ಆರಾಧಿಸುವದಕ್ಕೆಂದೇ ಈಗಲೂ ವೀರಶೈವ ಧಾರ್ಮಿಕ ಸಮಾರಂಭಗಳಲ್ಲಿ ೬೩ ಪುರಾತನರ 'ಮಂಟಪ ಪೂಜೆ'ಗಳನ್ನು ಹಮ್ಮಿಕೊಳ್ಳಲಾಗುತ್ತದೆ. ೧೨ನೆಯ ಶತಮಾನಕ್ಕೆ ಹಿಂದಿದ್ದ ಈ ಶರಣರ ಪ್ರಭಾವ ಎಷ್ಟು ಗಾಢವಾದುದೆಂಬುದಕ್ಕೆ ನಮಗೆ ಎಷ್ಟೇ ಶಾಸನಗಳು ಪ್ರಮಾಣಗಳನ್ನೊದಗಿಸುತ್ತವೆ, 'ಪುರಾತನ ನೂತನರೆನಿಸಿದ ಅಸಂಖ್ಯಾತ ಗಣಂಗಳು (**SII. XV No. 56** ತಾಳಿಕೋಟೆ ಕ್ರಿ. ಶ. 1184) ಇದೇ ವಾಕ್ಯ ಅಬ್ಬಲೂರು ಶಾಸನದಲ್ಲಿ ಇದೆ. (**E. I. V** ಕ್ರಿ.ಶ. 1200) ಬಸವಣ್ಣನವರ ಪೂರ್ವಜರ ಮೇಲೆ ಬೆಳಕು ಚೆಲ್ಲುವ ಮಹತ್ವದ ಶಾಸನವಾದ ಅರ್ಜುನವಾಡ ಶಿಲಾಶಾಸನದಲ್ಲಿ 'ಪುರಾತನ ಜಂಗಮ ಲಿಂಗೈಕ್ಯ ಭಕ್ತಿ ನಿರ್ಭರಲೀಲಾ ಸಂಗನಬಸವ' ಎಂಬ ವಾಕ್ಯ ಹಾಗೂ 'ತೇಸಠ್ಠಿ ಪುರಾತನ ಪಾದಾರ್ಚಕರುಂ' ಎಂಬುಕ್ತಿಗಳು ಪುರಾತನ ಶರಣರ ದಿವ್ಯ ಪ್ರಭಾವವನ್ನು ಸೂಚಿಸುತ್ತವೆ. ಕರ್ನಾಟಕದ ಶಾಸನಗಳಲ್ಲಿ ಸ್ತುತಿಸಲ್ಪಟ್ಟ ಒಟ್ಟು ಪುರಾತನರ ಹೆಸರುಗಳನ್ನಿಲ್ಲಿ ಕೆಳಗೆ ಕೊಟ್ಟಿದೆ.

೧. ಚೋಳ
೨. ಚೇರ
೩. ಸಿರಿಯಾಳ
೪. ಸಿಂಧುಬಲ್ಲಾಳ
೫. ಸೌಂದರನಂಬಿ
೬. ಕಡವಲನಂಬಿ

---

೨೭ ಡಾ॥ ವಿದ್ಯಾಶಂಕರ ಎಸ್. ನಂಬಿಯಣ್ಣ ಒಂದು ವಿಶೇಷ ಅಧ್ಯಯನ (ಕ.ಸಾ.ಪ.)

೭. ಮಾದಾರ ಚೆನ್ನ ೯. ಬೇಡರ ಕಣ್ಣಪ್ಪ

೮. ಕಾರಿಕಾಲಮ್ಮೆ

(ಶಾಸನಗಳಲ್ಲಿನ ಶರಣರ ಮಾಹಿತಿಗೆ ಡಾ|| ಎಂ. ಎಂ. ಕಲಬುರ್ಗಿ),೨೮ ೬೩ 'ಪುರಾತನ' ಎಂಬ ಶಬ್ದ ರೂಢವಾಗಿದ್ದರೂ ಕರ್ನಾಟಕದ ಕಲ್ಯಾಣ ಕ್ರಾಂತಿಯ ಪ್ರಭಾವಲಯದಲ್ಲಿ ಹೆಚ್ಚು ಶಾಸನಗಳು ರಚಿಸಲ್ಪಟ್ಟಿರುವದರಿಂದ ಇವರನ್ನು ಶಿವಶರಣ ಪರಿಭಾಷೆಯಿಂದ ಸಂಬೋಧಿಸಿರುವದೂ ಉಂಟು. ನಿದರ್ಶನಕ್ಕೆ 'ಅರವತ್ತುಮೂವರು ಮಹಾಗಣಂಗಳು', (M.A.R. ಅರಕಲಗೂಡು ಕ್ರಿ.ಶ. 1362 ಕಲ್ಲೇದೇವಪ್ಪರ ಕ್ರಿ.ಶ. 1279) 'ಅರವತ್ತು ಮೂವರು ಮಹಾಜನಂಗಳು'ಪ್ರಮಥರ್ಕಳ್ (ದಾವಣಗೆರೆ 155 ಕಬ್ಬೂರು, ಕ್ರಿ.ಶ. 1114) (ಕುಡಿತಿನಿ SII. XVII ಕ್ರಿ.ಶ. ೧೨೧೦) (ಮರಡೀಪುರ EC. III–I ಮಂಡ್ಯ ೮೩. ಕ್ರಿ.ಶ. ೧೨೮೦.) ('ಸರಣರು'=ಶರಣರು) ಇಂಗಳಗಿ ಕಲಬುರ್ಗಿ ಜಿಲ್ಲೆ ಕ್ರಿ.ಶ. ೧೨೦೯ ಈ ಶಬ್ದಗಳನ್ನು ಪ್ರಾದೇಶಿಕ ದೃಷ್ಟಿಯಿಂದ ಹೇಳುವದಾದರೆ ತಮಿಳು ನಾಡಿನ ಹತ್ತಿರದ ಸೀಮೆಗಳಲ್ಲಿ 'ಪುರಾತನ' ಪ್ರಯೋಗವೂ, ಮಧ್ಯ ಕರ್ನಾಟಕದ ದಾವಣಗೆರೆ ಕಡೆಯಲ್ಲಿ 'ಪ್ರಮಥರು' ಎಂಬುದೂ ಕಲ್ಯಾಣ ಸೀಮೆಗೆ ಹತ್ತಿರವಾದ ಕಲಬುರ್ಗಿ ಪ್ರದೇಶದಲ್ಲಿ ಸರಣ(=ಶರಣ) ಪ್ರಯೋಗವೂ ಪ್ರಸಾರಗೊಂಡಂತೆ ತೋರುತ್ತದೆ. ಶಿವಶರಣರ ಪಾರಿಭಾಷಿಕ ಪದಗಳ ಪ್ರಾದೇಶಿಕ-ಹಾಗೂ ಕಾಲಕ್ರಮಿತ ಹಂಚಿಕೆ-ಪ್ರಸಾರ ಹಾಗೂ ಸೀಮಾರೇಖೆಗಳನ್ನು ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಅಗತ್ಯವಿದೆ. ಒಟ್ಟಿನಲ್ಲಿ ೬೩ ಪುರಾತನರ ಶೈವ ಭಕ್ತಿಯನ್ನು ಕರ್ನಾಟಕ ಶರಣ ಪಂಥವು ತನ್ನಲ್ಲಿ ಸಮನ್ವಯೀಕರಣಗೊಳಿಸಿಕೊಂಡಿರುವ ಅಂಶ ಇಲ್ಲಿ ಮುಖ್ಯವಾಗಿದೆ. ಕೇವಲ ಶಾಸನಗಳು ಮಾತ್ರವಲ್ಲದೆ ೬೩ ಪುರಾತನರನ್ನು ಕುರಿತ ವೀರಶೈವ ಸಾಹಿತ್ಯ ಅಪಾರ, ಅನ್ಯಾದೃಶವಾಗಿದೆ. ಇದಲ್ಲದೆ ಚಿತ್ರ, ಶಿಲ್ಪ ಗಳಲ್ಲೂ ಸಹ ಇವರನ್ನು ಮೂರ್ತಗೊಳಿಸಿ ಅರ್ಚನೆ,–ಪೂಜೆ ಹಾಗೂ ಉತ್ಸವಾದಿಗಳನ್ನು ಸಹ ನೆರವೇರಿಸಲಾಗುತ್ತಿದೆ. ವೀರಶೈವ ಭಕ್ತಿ ಮಾರ್ಗ ಭಾವುಕತೆ, ಶ್ರದ್ಧೆ, ನಿಷ್ಠೆಗಳಿಗಿಂತ ವೈಚಾರಿಕವಾಗಿ ಸಾಧಕನು ಅಂತರಂಗದ ವಿಕಾಸಕ್ಕೆ ಮುಖ್ಯವಾಗಿ ಗಮನವಿತ್ತು ಆದರಲ್ಲಿ ತಾನು ಪಡೆಯುವ ಸಿದ್ಧಿ, ಸಾಮರಸ್ಯಗಳ ಪಾಶಸ್ತ್ಯವನ್ನು ಎತ್ತಿ ಹೇಳುತ್ತಿದ್ದರೂ ಆರಂಭಿಕ ಅವಸ್ಥೆಯಲ್ಲಿ ಭಕ್ತಿಯ ಬೆಳವಣಿಗೆಗೆ ಪುರಾತನರು ತೋರಿದ ಭಕ್ತಿ ಶ್ರದ್ಧೆ, ವಿಶ್ವಾಸ, ಛಲ–ನಿಷ್ಠೆಗಳು ಅತ್ಯಗತ್ಯವೆಂದು ಸ್ವತಃ ಬಸವಣ್ಣನವರೇ ಹೇಳಿರುವದನ್ನು ಅವರ ವಚನಗಳಿಂದ ನಾವು ತಿಳಿಯಬಹುದಾಗಿದೆ.

## ಬಸವ ಪೂರ್ವಕಾಲೀನ ಶರಣರು–ವೀರಶೈವ ಧರ್ಮ:

ಕಲ್ಯಾಣ ಕ್ರಾಂತಿ ಬಸವಣ್ಣನವರ ಕಾಲಕ್ಕೆ ಹುರಿಗೊಂಡಿದ್ದರೂ, ಆ ಕ್ರಾಂತಿಗೆ ಬೇಕಾದ ಧಾರ್ಮಿಕ ಮನೋರಂಗದ ಪೂರ್ವಭಾವೀ ಸಿದ್ಧತೆಗಳು, ಹಳೆಯುದನ್ನು ಹತ್ತಿಕ್ಕಿ

---

೨೮ ಡಾ|| ಕಲಬುರ್ಗಿ ಎಂ. ಎಂ. ಶಾಸನಗಳಲ್ಲಿ ಶಿವಶರಣರು

ಹೊಸ ಧಾರ್ಮಿಕ ವ್ಯವಸ್ಥೆಯನ್ನು ನೆಲೆಗೊಳಿಸುವ ಹುಮ್ಮಸ್ಸು ತಿಕ್ಕಾಟ–ಸಂಘರ್ಷಗಳು ಬಸವಣ್ಣನವರಿಗಿಂತ ಹಿಂದೆ ಕನಿಷ್ಠ ಒಂದು-ಒಂದುವರೆನೂರು ವರುಷದಷ್ಟಾದರೂ ಮೊದಲಿಗೆ ಬದುಕಿದ್ದ ಕೆಲವು ಶರಣರಿಂದ ಆರಂಭಗೊಂಡಿರುವದಕ್ಕೆ ಆಧಾರಗಳಿವೆ. ಈ ಘಟ್ಟವನ್ನು ನಾವು, ವೀರಶೈವ ಧರ್ಮದ ಸಂಘರ್ಷದ ಮೊದಲ ಘಟ್ಟವೆಂತಲೂ ಇಲ್ಲಿನ ಧೋರಣೆಗಳನ್ನು ಸಂಕ್ರಮಣ ಯುಗದ ಧೋರಣೆಗಳೆಂದೂ ನಾವು ಪರಿಭಾವಿಸ ಬಹುದಾಗಿದೆ. ಅದುವರೆಗೆ ಪ್ರಭಾವಿತಗೊಂಡು ಈ ಕಾಲಕ್ಕೆ ಇಳಿಮುಖಗೊಂಡಿದ್ದರೂ ತಮ್ಮ ಅಸ್ತಿತ್ವಕ್ಕೆ ಹೆಣಗುತ್ತಿದ್ದ ಜೈನ–ಬೌದ್ಧ–ವೈಷ್ಣವಗಳನ್ನು ಬಹಿರಂಗವಾಗಿ ಪ್ರತಿ ಭಟಿಸಿ ಅದರಲ್ಲಿ ಉಗ್ರಕ್ರಾಂತಿ ಮೂರ್ತಿಗಳಾಗಿ ಹೋರಾಟ ಮಾಡಿದ ಹಲವಾರು ಶರಣರನ್ನಿಲ್ಲಿ ನಾವು ಉಲ್ಲೇಖಿಸಬೇಕಾಗುತ್ತದೆ. ಇವರು ನಿಜಕ್ಕೂ 'ವೀರಶೈವ' ಎಂಬುದನ್ನು ಜ್ವಲಂತವಾದ ಹೋರಾಟದ ಸಂದರ್ಭದಲ್ಲಿ ನೆಲೆಗೊಳಿಸಿದ್ದು ವೀರ ಶೂರ, ಪ್ರತಿಭಟನಾತ್ಮಕ, ಅರ್ಥಬರುವಂತೆ (**Militant form of Shaivism**) ಮಾಡಿ ದ್ದಾರೆ. ಆಗಮಗಳಲ್ಲಿ 'ವೀರ' ಪದಕ್ಕೆ ಧಾರ್ಮಿಕ, ತಾತ್ವಿಕ, ಹಿನ್ನೆಲೆಯಲ್ಲಿ ಅಲಂಕಾರಿಕ ಅರ್ಥವಿದ್ದರೂ ಈ ಯುಗದ ವಾಸ್ತವಿಕ, ಐತಿಹಾಸಿಕ ಹೋರಾಟಕ್ಕೆ 'ವೀರ ಧೀರ' ಪದವು ಹೆಚ್ಚು ಅನ್ವರ್ಥಕವನ್ನಿಸಿದೆ. ಈ ಸಂಘರ್ಷದಲ್ಲಿ ಮುಂಚೂಣಿಯಾಗಿ ನಿಂತ ಶರಣ–ಶರಣೆಯರಲ್ಲಿ ಕೆಲವರನ್ನು 'ಷೋಡಶಗಣ' ಹಾಗೂ ಇನ್ನೂ ಕೆಲವರನ್ನು 'ತೇರಸ'ಗಣದ ಶರಣರೆಂದು ಕರೆಯಲಾಗುತ್ತದೆ. ಅವರಲ್ಲಿ ಮುಖ್ಯರಾದವರ ಹೆಸರುಗಳೆಂದರೆ:

**ಷೋಡಶಗಣ**: ಗುಡ್ಡವ್ವೆ, ಮಾರುಡಿಗೆ ನಾಚಯ್ಯ.

**ದಶಗಣ**: ದಶಗಣದ ಸಿಂಗಿದೇವ.

ಈ ಮೇಲಿನ ಶರಣರು ನಡೆಸಿದ ಹೋರಾಟಗಳನ್ನು ಹಲವಾರು ಶಾಸನಗಳು (ಇಂಗಳಗಿ, ಬಿಜಾಪುರ, ತಾಳೀಕೋಟೆ) ಅಲ್ಲದೆ ಅನೇಕ ಕಾವ್ಯ, ಪುರಾಣಗಳು ವರ್ಣಿಸು ತ್ತವೆ. ಪರಮತೀಯರು ಶಿವಲಿಂಗ ದೇವಾಲಯಗಳನ್ನು ಕಿತ್ತಾಡಿದಾಗ ಅವರನ್ನು ಧರ್ಮಯುದ್ಧದಲ್ಲಿ ಸೋಲಿಸಿ ಸ್ವಮತದ ಕುರುಹುಗಳನ್ನು ಪುನರ್–ಪ್ರತಿಷ್ಠೆಗೊಳಿಸಿರು ವಲ್ಲಿ ಇವರು ತೋರಿದ ಧೀರ–ವೀರ ಕಾರ್ಯಗಳನ್ನು ಅಂದಿನ ಆಳರಸರು ಮೆಚ್ಚಿ ಇವರಿಗೆ ಪ್ರೋತ್ಸಾಹಿಸಿದ್ದು ಹಾಗೂ ಶಿವಾಲಯಗಳಿಗೆ ದತ್ತಿ ಬಿಟ್ಟು ಕೊಟ್ಟಿರುವದು ಇಲ್ಲಿ ಮುಖ್ಯವಾಗಿದೆ: ಇದಕ್ಕೆ ಸ್ಥಾವರ ನಿಷ್ಠೆ ಪೂಜೆಗಳಿಗೆ ಪಾರಂಪರಿಕವಾಗಿ ದೊರಕಿದ್ದ ಮೌಲ್ಯಕ್ಕಿಂತ ಹೆಚ್ಚಾಗಿ ಈ ಶಿವಶರಣರ ಧ್ಯೇಯಾದರ್ಶಗಳು, ಉನ್ನತ ವ್ಯಕ್ತಿತ್ವ ಆಚರಣೆಗಳು–ಹೆಚ್ಚು ಪ್ರಭಾವಕಾರಿಯಾಗಿರುವದು ವಿಶಿಷ್ಟವಾಗಿದೆ: ಇವರನ್ನು ನಾವು 'ಶೈವಧೋರಣೆಯ ವೀರಶೈವರು ಎಂದು ಕರೆಯುವದಕ್ಕಿಂತ (ಡಾ|| ಎಂ. ಎಂ. ಕಲಬುರ್ಗಿ ಅವರ ವಿಚಾರಗಳು, ಮಾಹೇಶ್ವರ ನಿಷ್ಠೆಯ ವೀರಶೈವರೆಂದೇ ನಾವು

ಕರೆಯುತ್ತೇವೆ. ಈ ಮಾತು ಅಂದಿನ ಯುಗ ಧರ್ಮಕ್ಕೆ ಹೆಚ್ಚು ಉಚಿತವಾಗಿ ತೋರುತ್ತದೆ.

**ಬಸವೇಶ್ವರ ಹಿರಿಯ ಕಾಲೀನ ಶರಣರು ಹಾಗೂ ವೀರಶೈವ:**

ಷೋಡಶ, ತೇರಸ ಈ ಗುಂಪಿಗೆ ಸೇರದೆ, ವೀರಶೈವ ಶರಣರೆಂದೇ ಮಾನ್ಯವಾದ ಹಲವಾರು ಶರಣರು ಬಸವಣ್ಣನವರಿಗಿಂತ ಕಾಲಮಾನದಲ್ಲಿ ಹಿರಿಯರಾಗಿ ಬಾಳಿ ವೀರಶೈವ ಧರ್ಮದ ಪ್ರಸಾರ ಹಾಗೂ ಅದರ ಸುಸ್ಥಿರತೆಗೆ ಕಾರಣರಾಗಿದ್ದಾರೆ. ಅವರಲ್ಲಿ ಕೆಲವರ ಚರಿತ್ರೆಗಳಂತೂ ಐತಿಹಾಸಿಕವಾಗಿ ಅತ್ಯಂತ ಮಹತ್ವದ್ದಾಗಿವೆ. ಅವರಲ್ಲಿ ಮುಖ್ಯ ರಾದವರನ್ನಿಲ್ಲಿ ಉಲ್ಲೇಖಿಸಿದೆ.

**ಜೇಡರ ದಾಸಿಮಯ್ಯ:** (ಕ್ರಿ. ಶ. ೧೦೪೦) ಗೊಬ್ಬೂರು ಶಾಸನ. (ಕ್ರಿ. ಶ. ೧೧೪೮) (ಚಾಳುಕ್ಯ ಜಯಸಿಂಹನಕಾಲ) ಚಿಕ್ಕಮುದೇನೂರು (ಕ್ರಿ.ಶ. ೧೧೬೭) ಕರಿಯಿಂಡಿ (ಕ್ರಿ.ಶ. ೧೧೯೭) ಗೀಜಗನಹಳ್ಳಿ (೧೨೦೧) ಬಿದರೆ (೧೧೬೫) ಅಬ್ಬಲೂರು (೧೨೦೦)

**ಕೊಂಡಗುಳಿಕೇಶಿರಾಜ:**
(ಚಾಳುಕ್ಯ ಪೆರ್ಮಾಡಿ.
೭ ನೆಯ ವಿಕ್ರಮಾದಿತ್ಯನ ಕಾಲ)

ಕೊಂಡಗುಳಿ ಶಾಸನ SII. XX. ನಂ.
೬೯: EI. ೨೪೫. ಅಬ್ಬಲೂರು
E ಮಂಡ್ಯ ೮೨
ಮರಡೀಪುರ.

ಮೇಲಿನ ಉಭಯ ಶರಣರ ನೆಲೆ ಕಲೆಗಳಿಂದ ವಚನಕಾರರಲ್ಲಿ 'ಆದ್ಯರು' ಎಂದು ಮಾನ್ಯರಾದ ಹಲವರ ಅಸ್ತಿತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ವೀರಶೈವ ಧರ್ಮದ ಆಚರಣೆ, ಅನುಸಂಧಾನ ಹಾಗೂ ವಿಶಿಷ್ಟವಾದ ವೀರಶೈವ ಸಾಹಿತ್ಯ ಹಾಗೂ ಅವರದೇ ಆದ ಸಾಹಿತ್ಯ ಪ್ರಕಾರವಾದ ವಚನ ಈ ಎಲ್ಲದಕ್ಕೂ ಇವರು ಬಸವೇಶ್ವರ ಹಿರಿಯ ಕಾಲೀನರಾಗಿ ನಿಂತು ವೀರಶೈವಧರ್ಮಕ್ಕೆ ನಾಂದಿ ಹಾಡಿದ್ದಾರೆ. ಅವರ ಹೆಸರುಗಳನ್ನಿಲ್ಲಿ ಕೆಳಗೆ ಕೊಡಲಾಗಿದೆ.

**ಆದ್ಯ ವಚನಕಾರರು:**

ದಾಸಿಮಯ್ಯ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ತೆಲುಗ ಜೊಮ್ಮಯ್ಯ, ಶಂಕರ ದಾಸಿಮಯ್ಯ, ಡಕ್ಕೆಯ ಬೊಮ್ಮಣ್ಣ, ಸಕಲೇಶ ಮಾದರಸ, ಮಲ್ಲರಸ, ಕೆಂಭಾವಿ ಭೋಗಣ್ಣ ಏಕಾಂತ ರಾಮಯ್ಯನು ಬಾಹೂರು ಬೊಮ್ಮಯ್ಯ, ಕೋವೂರು ಬೊಮ್ಮಯ್ಯ ಮಾರುಡಿಗೆ ನಾಚಯ್ಯ ಇತರರು: ವೈಜಕ್ಕವ್ವೆ, ಚಂದಿಮರಸ,

**ಶಿವಾಚಾರ್ಯರು: ವೀರಶೈವ ಮತಮಾನ್ಯಗಳು: ಹಾಗೂ ವೀರಶೈವ**

ಕರ್ನಾಟಕದ ವೀರಶೈವ ಧರ್ಮಕ್ಕೆ ಶಿವಾಗಮೋಕ್ತವಾದ ಹಿನ್ನೆಲೆಯಲ್ಲಿ ಗಟ್ಟಿಯಾಗಿ ನಿಂತು ಅದರ ಪ್ರಸಾರಕ್ಕೆ ಕಾರಣರಾದವರಲ್ಲಿ ಪಂಚಾಚಾರ್ಯರನ್ನು ಹಾಗೂ ಅವರು ಸ್ಥಾಪಿಸಿದ ಪಂಚಪೀಠ ಹಾಗೂ ವೀರಶೈವ ಧರ್ಮದ ಪಾರಂಪರಿಕ ಆಚರಣೆಗಳನ್ನು

ನಾವು ಲಕ್ಷಿಸಬೇಕಾಗುತ್ತದೆ. ಇದರಲ್ಲಿ ರೇವಣಸಿದ್ಧೇಶ್ವರರು ಶಾಸನೋಕ್ತ ಪ್ರಮಾಣಗಳ ಮೇಲಿಂದ (ಸಿರಿವಾಳ ಶಾಸನ) ಬಸವೇಶ್ವರರಿಗೆ ಹಿರಿಯ ಕಾಲೀನರೆನ್ನಿಸುತ್ತಾರೆ. ಇವರ ತರುವಾಯದಲ್ಲಿ ಪಂಡಿತಾರಾಧ್ಯ ಮರುಳಾರಾಧ್ಯ, ಏಕೋರಾಮಾರಾಧ್ಯ ಹಾಗೂ ವಿಶ್ವಾರಾಧ್ಯರು ಬರುತ್ತಾರೆ. ಇವರಲ್ಲಿ ಪಂಡಿತ, ಮರುಳ, ಹಾಗೂ ಏಕೋರಾಮರು ಬಸವೇಶ್ವರರ ಕಲ್ಯಾಣ ಕ್ರಾಂತಿಗೆ ನಿಕಟವಾಗಿದ್ದು ಕೆಲವರು ವಚನಕಾರರಾಗಿಯೂ ಕಾಣಸುತ್ತಾರೆ. (ವಿಶೇಷಕ್ಕೆ ಕವಿಚರಿತೆ ಭಾಗ ೧) ಆದರೆ ಪುರಾಣ, ಆಗಮಗಳಲ್ಲಿ ಇವರು ಯುಗ-ಯುಗದಲ್ಲಿ ಬಾಳಿ ಅಂದಂದಿನ ವೀರಶೈವ ಧರ್ಮದ ಹುಟ್ಟು ಬೆಳವಣಿಗೆಗೆ ಕಾರಣವಾಗಿದ್ದಾರೆಂದು ನಂಬಲಾಗಿದೆ. ಐತಿಹಾಸಿಕ ಪ್ರಮಾಣಗಳ ಅಭಾವ ಅಸಂಖ್ಯಾತ ಪವಾಡಗಳು-ಹಾಗೂ ಪೌರಾಣಿಕ ಸಂಗತಿಗಳ ಮೇಲಿಂದ ಧಾರ್ಮಿಕವಾಗಿ ನಂಬಲಾದ ಕೆಲವೊಂದು ಸಂಗತಿಗಳನ್ನು ಎಲ್ಲರೂ ಒಪ್ಪಲಿಕ್ಕಿಲ್ಲ, ಆದರೆ ಜನ-ಮನದಲ್ಲಿ ಶ್ರದ್ಧೆ-ನಿಷ್ಠೆಗಳು ಬಲಿತು ಬೇರೂರಿದಾಗ ಎಷ್ಟೋ ಪೌರಾಣಿಕ ಸತ್ಯಗಳು ಒಂದು- ಜನಾಂಗದ ಸಂಸ್ಕೃತಿಯಲ್ಲಿ ಸೇರಿದ ಅಂಶಗಳಾಗುತ್ತವೆ. ಆ ಹಿನ್ನೆಲೆಯಲ್ಲಿ ಇಂಥವರ ಚರಿತ್ರಗಳನ್ನು ಪುನರ್ ರಚಿಸುವ ವಿಧಾಯಕ ಪ್ರಯತ್ನಗಳನ್ನೂ ನಾವಿನ್ನೂ ಮಾಡಬೇಕಾಗಿದೆ. ರೇಣುಕರು ಹಾಗೂ ರೇವಣರು ಭಿನ್ನರೋ- ಅಭಿನ್ನರೋ ರೇಣುಕ-ಅಗಸ್ತ್ಯರ ಕಾಲ ಕ್ರಿ.ಶ. ೩೩೦೦ ವರ್ಷ ಎಂಬುದು ಎಷ್ಟು ಖಚಿತ? ಅಗಸ್ತ್ಯ ಮುನಿ, ರಾವಣನ ಲಂಕೆ ಹಾಗೂ ಶಂಕರಾಚಾರ್ಯರ ಚಂದ್ರಮೌಳೀಶ್ವರ ಲಿಂಗಾನುಗ್ರಹ ಈ ಘಟನೆಗಳಲ್ಲಿ ಕಾಲಮಾನದ ಔಚಿತ್ಯ ಎಷ್ಟಿದೆ? ಅದರಂತೆಯೇ ಏಕೋ ರಾಮೇಶ್ವರ ಹಾಗೂ ದ್ರಾಕ್ಷಾರಾಮ ಕ್ಷೇತ್ರ (ಮುದನೂರು)ದ ಈ ಏಕೋರಾಮಾರಾಧ್ಯರು ಏಕಾಂತ ರಾಮಯ್ಯಾದಿಗಳು ಅಭಿನ್ನರೋ ಭಿನ್ನರೋ ಇವೆಲ್ಲ ಸಂಗತಿಗಳನ್ನು ನಾವು ಪರಿಶೀಲಿಸಬೇಕಾಗುತ್ತದೆ. ಆದರೂ ಆಗಮಗಳಲ್ಲಿ ಅದರಲ್ಲೂ ಮುಖ್ಯವಾಗಿ 'ಸುಪ್ರಭೇದಾಗಮ'ದಲ್ಲಿ ಇವರ ವಿಶೇಷಗಳನ್ನು ಎತ್ತಿ ಹೇಳಲಾಗಿದೆ. ರೇಣುಕರಿಗೆ ಕಾಮಿಕಾಗಮ, ಮರುಳಾರಾಧ್ಯರಿಗೆ ದೀಪ್ತಾಗಮ, ಏಕೋರಾಮಾರಾಧ್ಯರಿಗೆ 'ವಿಜಯಾಗಳು' ಪಂಡಿತಾರಾಧ್ಯರಿಗೆ ವಾತುಲಾಗಮ ಹಾಗೂ ವಿಶ್ವಾರಾಧ್ಯರಿಗೆ ಪ್ರೋದ್ಗೀತಾಗಮಗಳು, ಅಲ್ಲದೆ ಒಬ್ಬೊಬ್ಬರಿಗೆ ಕ್ರಮವಾಗಿ ಋಗ್, ಯಜುರ್, ಸಾಮ, ಅಥರ್ವಣ ಹಾಗೂ ಅಜಪವೇದಗಳು ಮಾನ್ಯವಾಗಿವೆ.

ವೀರೋ ನಂದೀ ತಥಾ ಭೃಂಗೀ ವೃಷಭಃ ಸ್ಕಂದ ಏವಚ
ಮತ್ಸ್ವರೂಪಾಸ್ಸಮುತ್ಪನ್ನಾಃ ಪಂಚಗೋತ್ರಾಧಿಕಾರಿಣಃ॥

ಎಂಬುಕ್ತಿಯಿಂದ (ಸುಪ್ರ) ಈ ಮೇಲಿನವರು ವೀರಶೈವ ದ್ವಿಜರಿಗೆ ಗೋತ್ರ ಪುರುಷರೆಂದು ಸಹ ಪರಿಗಣಿತರಾಗಿದ್ದಾರೆ. ಈ ಆಗಮ, ಪುರಾಣಗಳನ್ನುಳಿದರೆ ಪಂಚಪೀಠಾಧಿಪತಿಗಳಲ್ಲಿ ಕೆಲವರ ಪೀಠಗಳು ಐತಿಹಾಸಿಕವಾಗಿ ೧೨ ನೆಯ ಶತಮಾನಕ್ಕೆ ಹಿಂದಿದ್ದಿರಬಹುದಾದ ಸಂಭಾವ್ಯಗಳನ್ನು ನಮಗೆ ಕಾಣಿಸುವಂತಿವೆ. ಮುಖ್ಯವಾಗಿ ಕಾಶಿಯು ಜಂಗಮವಾಡೀಮಠದ ಇತಿಹಾಸಕ್ಕೆ ಜಯನಂದನದೇವನೆಂಬವನು ಕ್ರಿ.ಶ. ೬ ನೆಯ ಶತಮಾನದಲ್ಲಿದ್ದು ತತ್ಕಾಲೀನ

ಮಲ್ಲಿಕಾರ್ಜುನ ಜಂಗಮ ಗೋಸಾಯಿಗೆ ದತ್ತಿ ಬಿಟ್ಟ ಕೊಟ್ಟ ಶಿಲಾಶಾಸನ ತಾಮ್ರ ಶಾಸನಗಳು ವೀರಶೈವಧರ್ಮದ ಪ್ರಾಚೀನತೆಗೆ ಇನ್ನೊಂದು ದೃಷ್ಟಿಯಿಂದ ನೆರವಾಗುತ್ತವೆ. ಕೇದಾರ ಪೀಠಕ್ಕೂ ಸಹ ಕೆಲವು ಶಾಸನಗಳು ಪ್ರಾಚೀನತೆಯ ಕುರುಹುಗಳನ್ನು ಒದಗಿಸುತ್ತವೆ. ಒಟ್ಟಾರೆ ವೀರಶೈವ ಮಠಗಳು ೧೨ನೆಯ ಶತಮಾನಕ್ಕಿಂತ ಹಿಂದೆ ಕಾಳಾ ಮುಖ ಪಾಶುಪಾತ ಆಚರಣೆಯ ಕೇಂದ್ರಗಳಾಗಿದ್ದು ೧೨ ನೆಯ ಶತಮಾನದಿಂದೀಚೆಗೆ ವೀರಶೈವ ಮಠ ಪೀಠಗಳಾಗಿ ಮಾರ್ಪಟ್ಟುದ್ದನ್ನು ಈಗ ಒಪ್ಪಿಕೊಳ್ಳಲಾಗಿದೆ.

**ಸಾರ ಸಂಗ್ರಹ:** ಸಮಗ್ರಾವಲೋಕನ:

ಈ ಸುದೀರ್ಘ ಲೇಖನದ ಒಟ್ಟು ಆಶಯಗಳನ್ನಿಲ್ಲಿ ಕೆಳಗೆ ವ್ಯಕ್ತಪಡಿಸಲಾಗಿದೆ.

೧. ವೀರಶೈವ ಧರ್ಮವು ಹರಪ್ಪ ಮಹೆಂಜೋದಾರೋ ಕಾಲದಿಂದಲೂ ದ್ರಾವಿಡ ಸಂಸ್ಕೃತಿಯ ಲಕ್ಷಣಗಳಲ್ಲಿ ಪಡಿಮೂಡಿ ಬಂದಿದ್ದು ವಿಭಿನ್ನ ಶಿವಲಾಂಛನ, ತತ್ತ್ವ ಸಂಕೇತಗಳಲ್ಲಿ ಪ್ರಪ್ರಥಮವಾಗಿ ಕಾಣಿಸಿಕೊಳ್ಳುತ್ತದೆ.

೨. ಮಹಾಭಾರತ ಕಾಲದಿಂದಲೂ ಮೊದಲಾಗಿ ಐತಿಹಾಸಿಕ ಯುಗದಲ್ಲಿ ಪಾಶುಪತ ಆಚರಣೆಗಳಿಂದ ವೀರಶೈವದ ವಿಕಾಸಕ್ಕೆ ಸಾಧ್ಯವಾಗಿದೆ.

೩. ವೇದ, ಉಪನಿಷತ್ತು, ದರ್ಶನ ಮೀಮಾಂಸೆಗಳಲ್ಲಿ ತಾತ್ತ್ವಿಕ, ಆಧ್ಯಾತ್ಮಿಕವಾದಕ್ಕೆ ಮಹತ್ವವಿತ್ತು. ಕರ್ಮಕಾಂಡ, ಜಾತಿ ವ್ಯವಸ್ಥೆಗಳ ನಿರಾಕರಣವನ್ನು ಎತ್ತಿ ಹಿಡಿದಿದೆ.

೪. ಆಗಮ ಯುಗದಲ್ಲಿ ಶೈವದ ಹಲವು ಪ್ರಭೇದಗಳಲ್ಲಿ ವೀರಶೈವವೂ ಸಹ ಒಂದು ಸಾಂಪ್ರದಾಯಿಕ ಪ್ರಭೇದವೆಂಬುದನ್ನು ನಾವು ಒಪ್ಪಿಕೊಳ್ಳಲು ಬರುವಂತಿಲ್ಲ. ಈ ಲೇಖನದಲ್ಲಿ ಶೈವದ ವಂಶವೃಕ್ಷವನ್ನು ನಾವು ಇದುವರೆಗೆ ಕೊಡಲಾದ ಪದ್ಧತಿಗಿಂತ ಭಿನ್ನವಾಗಿ ಶೈವದ ನೂರೆಂಟು ಪ್ರಭೇದಗಳಲ್ಲಿ ಇದೂ ಒಂದು ಪ್ರಭೇದವೆಂದು ಸಾಂಪ್ರದಾಯಿಕವಾಗಿ ತೋರಿಸಿರದೆ ಹೊಸ ರೀತಿಯಲ್ಲಿ ಅದನ್ನು ಸೂಚಿಸಿ ಶೈವ ಪ್ರಭೇದಗಳಿಂದ ಭಿನ್ನವಾಗಿಸಿಡಿದು ಅದು ಹೇಗೆ ತನ್ನ ಪ್ರತ್ಯೇಕತೆಯನ್ನು ಸ್ಥಾಪಿಸಿಕೊಂಡಿದೆ ಎಂಬುದನ್ನು ಎತ್ತಿ ಹೇಳಲು ಪ್ರಯತ್ನಿಸಿದೆ: ಆದುದರಿಂದ 'ವೀರಶೈವ' ಎಂಬ ಪರಿಭಾಷೆ ಶೈವಕ್ಕಿಂತ ಬೇರಾದ ನೂತನ ಆವಿಷ್ಕರಣ ಪಂಥ ಎಂದು ಇಲ್ಲಿ ಪರಿಭಾವಿಸಲಾಗಿದೆ. ಈ ಧೋರಣೆಗಳ ಹಿನ್ನೆಲೆಯಲ್ಲಿ ಔಚಿತ್ಯವೆನಿಸುವ ಸಂಗತಿಗಳ ಕಡೆಗೆ ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

೫. ಪಂಚಾಚಾರ್ಯರನ್ನು ಕುರಿತ ಸಂಗತಿಗಳು ಪೌರಾಣಿಕ ಹಾಗೂ ಧಾರ್ಮಿಕವಾದ ನೆಲೆಯಲ್ಲಿ ಮಾತ್ರ ಸುಸಂಗತವಾಗಿ ತೋರಿದರೂ ಚಾರಿತ್ರಿಕ ಹಿನ್ನೆಲೆಯಲ್ಲಿ ಅನೇಕ ವಿಸಂಗತಿಗಳನ್ನು ಕಾಣಿಸುತ್ತವೆ.

೬. ೧೨ನೆಯ ಶತಮಾನದ ಬಸವಣ್ಣನವರಿಗಿಂತ ಹಿಂದಿದ್ದ ಶರಣರು ನೂತನ ವೀರಶೈವದ ಯುಗಾರಂಭಕ್ಕೆ ಅಸ್ತಿಭಾರು ಹಾಕಿದ ವಿವರಗಳನ್ನು ಎತ್ತಿಹಿಡಿಯಲಾಗಿದೆ.

೭. ಕೊನೆಯದಾಗಿ ಹೇಳುವದಾದರೆ, ಐತಿಹಾಸಿಕವಾಗಿ ಅಷ್ಟೇ, ಅಲ್ಲದೆ ವೈಚಾರಿಕ ನೆಲಗಟ್ಟಿನಲ್ಲಿ ವೀರಶೈವ ಧರ್ಮ ಒಂದು 'ಕ್ರಾಂತಿ'ಯನ್ನುಂಟುಮಾಡಿ ಅದರಲ್ಲಿ ಅದೆಷ್ಟೋ ಜಡಸಾಂಪ್ರದಾಯಿಕವಾಗಿದ್ದ ಶೈವಶಾಖೆಗಳಿಗೆ ಹೊಸ ಚೇತನ, ಸಂಸ್ಕಾರಗಳನ್ನು ನೀಡಿ 'ಸಮಗ್ರ ವೀರಶೈವ'ದ ಉತ್ಕರ್ಷಕ್ಕೆ ಮಹತ್ವ ದೊರಕಿದ ಕಾಲ ೧೨ನೆಯ ಶತಮಾನ ಎಂಬ ಪ್ರಗತಿಪರ ಸತ್ಯವನ್ನು ಇಲ್ಲಿ ಪುನರ್ ಸ್ಥಾಪಿಸಲಾಗಿದೆ.

**ವಿಶೇಷ ಟಿಪ್ಪಣಿ:**

(ಯಾರು ವೀರಶೈವ ಸ್ಥಾಪಕರು? ವೀರಶೈವರ ಪ್ರಮುಖ ಧರ್ಮಗ್ರಂಥ ಯಾವುದು? ಎಂಬಿವೇ ಮೊದಲಾದ ಭಾವನಾತ್ಮಕ ಹಾಗೂ ವಾದಗ್ರಸ್ತ ಸಂಗತಿಗಳನ್ನು ಹರಹುವುದು ಇಲ್ಲಿನ ಉದ್ದೇಶವಾಗಿಲ್ಲ. ವಸ್ತುನಿಷ್ಠವಾಗಿ ವೀರಶೈವವು ಒಂದು ವೈಚಾರಿಕ ಧರ್ಮ ಪಂಥವಾಗಿ ವಿಕಾಸ ಶೀಲವಾಗಿ, ಪ್ರಗತಿಪರವಾಗಿ ಬೆಳೆದು ಬಂದ ಹೆಜ್ಜೆ-ಗುರುತುಗಳನ್ನು ಮಾತ್ರ ಇಲ್ಲಿ ಕಾಣಿಸಲಾಗಿದೆ.)

## ಸಂದರ್ಭ ಸೂಚಿ

**English:**

1. Gopinath Kaviraj — Notes on Religion and Philosophy VIII Chapter. Some Aspects of Veerashaiva Philosophy. Pub: Sampurnand Sanskrit University, Varanasi (1987)

2. Neelakantha Shastri K.N. — A History of South India, Pub: Oxford University Press 1966

3. Sakhare M. R. — History and philosophy of Lingayat Religion K.U.D. 1978

4. Ramendranath Nandi — Origin of Veerashaiva Movement I.H.R. New Delhi 1925

5. McCar Mack William — on 'Lingayat CV Hore' (in Ramanuja) A K's Speeking of Siva (Penguin) Pub: 1973

6. Marshell Jhon — on Indus Valley Civilization the Cultural Heritage of India. Pub: Ramakrishna Mission of culture Calcatta.

7. Radhakrishan R. — Hindu View of life.

8. Thurston E. — Castes and Tribes of South India.

9. Sir Charles Eliot — Hinduism and Buddism.

10. Sharma — Seminor Papers on Saivism Telugu University Srisailam PG Centre and Surya Simhasan Peetum Srisailam.

11. Hayavadana Rao C. — Mysore Gazetteer Vol. II Part III.

12. Ramarao M. — Vijayanagar Sexcentenary Vol.

ಕನ್ನಡ:

೧೩.. ನಂದೀಮಠ ಎಸ್. ಸಿ. — ಕರ್ನಾಟಕ ಧರ್ಮಗಳು ಭಾ. ೨ (ಕ.ಸಾ.ಪ.)

೧೪. ಡಾ. ಕೆ. ಈಶ್ವರನ್ — ಲಿಂಗಾಯತ ಧರ್ಮ, ಸಂಸ್ಕೃತಿ(ಮೈ.ವಿ.ವಿ.)

೧೫. ಡಾ. ಜ.ಚ.ನಿ. — ವಿಭೂತಿ (ಸಂ.)

೧೬. ಡಾ. ಶಂ. ಬಾ. ಜೋಶಿ — ಋಗ್ವೇದಸಾರ ನಾಗಪ್ರತಿಮಾ

೧೭. ಕಾಶೀನಾಥಶಾಸ್ತ್ರಿ, ನಾಗನೂರಮಠ — ವೀರಶೈವ ಧರ್ಮ (ಮರಾಠಿ ಮೂಲ) ಪ್ರ. ಜಂಗಮವಾಡಿಮಠ ವಾರಣಾಸಿ.

೧೮. ಬ್ರಿಜವಲ್ಲಭ ತ್ರಿಪಾಠಿ (ಸಂ.) — ಲಿಂಗಧಾರಣ ಚಂದ್ರಿಕೆ: ನಂದಿಕೇಶ್ವರ ರಚಿತ ಪ್ರ. ಜಂಗಮವಾಡಿಮಠ ವಾರಣಾಸಿ.

೧೯. ಡಾ. ಚಿದಾನಂದಮೂರ್ತಿ ಎ. — ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಮೈ. ವಿ. ವಿ. ೧೯೭೯)

೨೦. ಡಾ. ತಿಪ್ಪೇರುದ್ರಸ್ವಾಮಿ ಎಚ್. — ವಚನಗಳಲ್ಲಿ ವೀರಶೈವ ಧರ್ಮ ಪ್ರ: ಡಿ.ವಿ.ಕೆ. ಮೂರ್ತಿ, ಮೈಸೂರು

| | | |
|---|---|---|
| ೨೧. | ರುದ್ರಪ್ಪ ಜೆ. | ಕಾಶ್ಮೀರಶೈವ ದರ್ಶನ (ಮೈ.ವಿ.ವಿ.) |
| ೨೨. | ಡಾ. ವಿದ್ಯಾಶಂಕರ ಎಸ್. | ನಂಬಿಯಣ್ಣ ಒಂದು ಅಧ್ಯಯನ |
| ೨೩. | ಡಾ. ಕುಲಬುರ್ಗಿ ಎಂ.ಎಂ. | ಶಾಸನಗಳಲ್ಲಿ ಶಿವಶರಣರು ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ–ಗದಗ. ಬಸವಮಾರ್ಗ ಕುಲಬುರ್ಗಿ ಎಂ.ಎಂ. (ಸಂ.) ಕ.ವಿ.ವಿ. ಧಾರವಾಡ. |
| ೨೪. | ಡಾ. ವಿ. ಶಿವಾನಂದ | ಅಣಿವೀರಭದ್ರೇಶ್ವರ ಪುರಾಣ (ಸಂ.) ೧೯೭೬. |
| ೨೫. | ಆರ್. ನರಸಿಂಹಾಚಾರ್ | ಕಪಿಚರಿತೆ ಭಾಗ–I ಕ. ಸಾ. ಪ. ಬೆಂಗಳೂರು. |

# ಶೈವಧರ್ಮ: ದರ್ಶನ ಸಮೀಕ್ಷೆ

—ಟಿ. ಜಿ. ಸಿದ್ಧಪ್ಪಾರಾಧ್ಯ

ಶಿವನನ್ನು ಲಿಂಗರೂಪದಿಂದ ಪೂಜಿಸುವವರೇ ಶೈವರು. ಲಿಂಗವೆಂದರೆ ವಿಶ್ವವನ್ನು ತನ್ನೊಳಗೆ ಅಡಗಿಸಿಕೊಂಡಿರುವ ದಿವ್ಯ ತೇಜಸ್ಸಂದರ್ಭ. ಇಂತಹ ಶಿವನನ್ನು ಪೂಜಿಸುವದು ವಿಹಿತವೇ ಆಗಿದೆ. ಹೀಗೆ ಶಿವನನ್ನು ಪೂಜಿಸುವುದರಿಂದ ಶೈವರು ತಮ್ಮ ಜನ್ಮ ಸಾರ್ಥಕತೆಯನ್ನು ಪಡೆಯುತ್ತಿದ್ದುದು ಸ್ವಾಭಾವಿಕವಾಗಿಯೇ ಇದೆ. ತ್ರಿಮೂರ್ತ್ಯಂತರ್ಗತನಾದ ವಿಷ್ಣುವನ್ನು ಪರಮಾತ್ಮನೆಂಮು ಪೂಜಿಸುವವರೇ ವೈಷ್ಣವರು. ಮನ ಇಂದ್ರಿಯ ಕರ್ಮಗಳನ್ನು ಜಯಿಸಿದವರೇ ಜಿನರು. ಜಿನರನ್ನು ಪರಮಾತ್ಮನೆಂದು ಭಾವಿಸಿ ಅರ್ಚಿಸುವವರೇ ಜೈನರು. ಬುದ್ಧನನ್ನು ಪರಮಾತ್ಮನೆಂದು ಭಾವಿಸಿ ಪೂಜಿಸುವವರೇ ಬೌದ್ಧರು. ಕ್ರಿಸ್ತನನ್ನು ದೇವರೆಂದು ಪೂಜಿಸುವವರೇ ಕ್ರೈಸ್ತರು. ನಿರಾಕಾರ ಪರಮಾತ್ಮನನ್ನು ಧ್ಯಾನಿಸಿ ಅರ್ಚಿಸುವವರೇ ಮುಸಲ್ಮಾನರು. ಮುಸಲ್ ಎಂದರೆ ಭಕ್ತಿ. ಇಂತಹ ಭಕ್ತಿಯುಳ್ಳವರು ನಿರಾಕಾರ ತತ್ತ್ವದಲ್ಲಿ ವಿಶ್ವಾಸವಿಟ್ಟು ಪ್ರತಿದಿನವೂ ಪ್ರಾರ್ಥಿಸುವವರು. ಹೀಗೆ ತಮ್ಮ ಹುಟ್ಟನ್ನು ಸಾರ್ಥಕಪಡಿಸಲು ಪ್ರತಿಯೊಬ್ಬರೂ ಪರಮಾತ್ಮನನ್ನು ಬೇರೆ ಬೇರೆ ಮಾರ್ಗದಲ್ಲಿ ಅರ್ಚಿಸಲೇಬೇಕು.

ಇದರಲ್ಲಿ ಶೈವದರ್ಶನವೆಂದರೆ ಶೈವರು ಶಿವನನ್ನು ತಿಳಿಯುವ ಬಗೆಯನ್ನು ಕಾಣಬಹುದು. ವೈಷ್ಣವರು ವಿಷ್ಣುವನ್ನು ಕಾಣುವ ಬಗೆಯನ್ನೂ ಅದಕ್ಕೆ ಅನುಕೂಲವಾದ ಸಾಧನ ಮಾರ್ಗವನ್ನೂ ವೈಷ್ಣವ ದರ್ಶನದಲ್ಲಿ ತಿಳಿಸುತ್ತಾರೆ. ವಿಷ್ಣು ಸಾಕಾರ ಮೂರ್ತಿಯೂ ದಿವ್ಯಮಂಗಳ ವಿಗ್ರಹನೂ ಆಗಿರುವುದರಿಂದ ಅವನನ್ನು ಕಾಣುವ ಉಪಾಯವನ್ನು ಆ ದರ್ಶನವು ತಿಳಿಸುತ್ತದೆ. ಆದರೆ ಶೈವದರ್ಶನದಲ್ಲಿ ಶಿವನು ನಿರಾಕಾರನಾದ್ದರಿಂದಲೂ ಅವನೇ ಭಕ್ತರ ಉದ್ಧಾರಕ್ಕಾಗಿ ಸಾಕಾರ ದಿವ್ಯಮೂರ್ತಿಯಾಗುವ ಸಂಭವವಿರುವುದರಿಂದಲೂ ಅವನನ್ನು ಸಂದರ್ಶನ ಮಾಡಲು ಭಕ್ತರಿಗೆ ಶ್ರಮ ಸಾಧ್ಯವಾದ ಪ್ರಯತ್ನವು ಅವಶ್ಯಕವೆನಿಸಿತು. ಈ ಬಗೆಯ ಪ್ರಯತ್ನವು ಯಾವಾಗಿನಿಂದ ಯಾವ ರೀತಿಯಲ್ಲಿ, ನಡೆಯಿತೆಂಬುದನ್ನು ಇಲ್ಲಿ ಯಥಾಮತಿ ಪರಾಮರ್ಶಿಸಲಾಗುವುದು.

ಶೈವಮತದಲ್ಲಿ ನಕುಲೀಶ, ದಾಕ್ಷಿಣಾತ್ಯ, ಕಾಶ್ಮೀರ ಶೈವ ಮೊದಲಾದ ಭೇದದಿಂದ ಅನೇಕ ವಿಭಾಗಗಳು ಕಾಣುತ್ತವೆ. ದರ್ಶನ ತತ್ತ್ವ ವಿಷಯದಲ್ಲಿ ಯಾವ ಬಗೆಯ ಸಿದ್ಧಾಂತಗಳು ಸಂಭವಿಸಿವೆಯೋ ಅವೆಲ್ಲವೂ ಈ ಶೈವದರ್ಶನದಲ್ಲಿ ಕಂಡು ಬರುತ್ತವೆ. ಆಗಮದ ಆಧಾರದ ಮೇಲೆ ಪ್ರವರ್ತಿಸಿದ ಶೈವಮತಗಳಿಗೆ ಸಾಮ್ಯ

ವೈಷಮ್ಯಗಳನ್ನು ಈಗ ಪರಿಶೀಲಿಸಬೇಕಾಗಿದೆ. ಈ ವಿಚಾರವನ್ನು ನಿರೂಪಿಸುವಾಗಲೇ ಶೈವದರ್ಶನದ ಉತ್ಪತ್ತಿ, ಚಾರಿತ್ರಿಕ ಇತಿಹಾಸಗಳು ಸಹಜವಾಗಿ ತಿಳಿದುಬರುತ್ತವೆ. ಭೇದವಾದ, ಅಭೇದವಾದ, ಭೇದಾಭೇದವಾದ, ವಿಶಿಷ್ಟಾದ್ವೈತವಾದ ಹೀಗೆ ನಾಲ್ಕು ಬಗೆಯ ವಾದಗಳು ಶೈವದರ್ಶನದಲ್ಲಿ ಇವೆ. ಅದರಲ್ಲೂ ನಕುಲೀಶ ಮತದಲ್ಲಿ ಜೀವರ ಕರ್ಮಗಳನ್ನು ಅಪೇಕ್ಷಿಸದೆಯೇ ಪರಮಾತ್ಮನು ಸ್ವಾತಂತ್ರ್ಯದಿಂದಲೇ ವಿಷಮವಾದ ಈ ಪ್ರಪಂಚವನ್ನು ಸೃಷ್ಟಿಸುತ್ತಾನೆ. ಮುಕ್ತಿಯಲ್ಲೂ ಜೀವೇಶ್ವರರಿಗೆ ಭೇದವೇ ಇರುತ್ತದೆ; 'ಮುಕ್ತಃ ಶಿವಸಮೋ ಭವೇತ್' ಎಂಬಂತೆ ಶಿವಸಮಾನ ರೂಪವನ್ನು ಪಡೆಯುವದೇ ಈ ಮತದಲ್ಲಿ ಮುಕ್ತಿಯೆನಿಸುವುದು. ಹೀಗೆ ನಕುಲೀಶ ಮತದ ಸ್ವರೂಪವನ್ನು ಸರ್ವದರ್ಶನ ಸಂಗ್ರಹವು ನಿರೂಪಿಸುತ್ತದೆ.

ಪಾಶುಪತ ದರ್ಶನವಾದರೋ ಭೇದಾಭೇದವಾದ ಮತವೆನಿಸಿದೆ. ಪಶು–ಪತಿ–ಪಾಶ ಭೇದದಿಂದ ತತ್ತ್ವವೂ ಮೂರು ಬಗೆಯಾಗಿ ಅಂಗೀಕೃತವಾಗಿದೆ. ಆದುದರಿಂದಲೇ ಇದನ್ನು ತ್ರಿಕಸಿದ್ಧಾಂತವೆಂದು ಕರೆಯುತ್ತಾರೆ. ವೀರಶೈವ ಸಿದ್ಧಾಂತದಲ್ಲಾದರೋ ಶಕ್ತಿ ವಿಶಿಷ್ಟ ಪರಮಾತ್ಮನೊಬ್ಬನೇ ಮೂಲವಸ್ತುವಾಗಿರುವನು. ಪಾಶುಪತಮತದಲ್ಲಿ ಮುಕ್ತಿಯಲ್ಲೂ ಜೀವನಿಗೆ ಪರಮಾತ್ಮನೊಡನೆ ಭೇದವೂ ಅಭೇದವೂ ಇರುತ್ತವೆ. ಆದರೆ ಪೂರ್ಣ ಅಭೇದ ಇರುವುದಿಲ್ಲ. ಶೈವ ಪರಿಭಾಷೆಯಲ್ಲಿ ಕೊನೆಯ ಮುಕ್ತಿ ಪ್ರಕರಣದಲ್ಲಿ ಈಷದ್ಭೇದ ಗರ್ಭಿತವಾದ ಅಭೇದವೇ ಐಕ್ಯವೆಂದು ಸ್ಪಷ್ಟವಾಗಿ ಹೇಳಿದೆ. ಹೀಗೆಯೇ ತತ್ತ್ವ ಪ್ರಕಾಶದಲ್ಲಿ ಮುಕ್ತಾತ್ಮಾನೋಪಿ ಶಿವಾಏವ, ಕಿಂತ್ವೇತೇ ತತ್ಪ್ರಸಾದತೋ ಮುಕ್ತಾಃ ಸೋಽನಾದಿ ಮುಕ್ತ ಏಕಃ' ಎಂದು ಹೇಳಿರುವುದರಿಂದ ಮುಕ್ತರೂ ಶಿವನೇ ಆದರೂ ಅವನ ಪ್ರಸಾದದಿಂದ ಮುಕ್ತರಾಗಿರುವರೆಂದೂ ಅನಾದಿಕಾಲದಿಂದಲೂ ಮುಕ್ತನಾದ ಶಿವನೊಬ್ಬನು ಬೇರೆ ಇರುವನೆಂದೂ ಹೇಳಿದೆ. ಹೀಗೆ ಶಿವನಿಗೂ ಮುಕ್ತರಿಗೂ ಭೇದಾಭೇದವೇ ಅಂಗೀಕೃತವಾಗಿದ್ದು, ಪೂರ್ಣ ಅಭೇದವು ಸಂಭವಿಸುವುದಿಲ್ಲ.

ಶ್ರೀ ಕಂಠಾಚಾರ್ಯರು ವಿಶಿಷ್ಟಾದ್ವೈತಿಗಳೇ ಆಗಿದ್ದಾರೆ. ಮುಕ್ತ್ಯಾವಸ್ಥೆಯಲ್ಲಿ ಜೀವಬ್ರಹ್ಮರಿಗೆ ಪೂರ್ಣ ಅಭೇದವನ್ನು ಹೇಳುವುದೇ ವೀರಶೈವ ಸಿದ್ಧಾಂತಕ್ಕೆ ಸಮ್ಮತವೆನಿಸಿದೆ. ವಿವರ್ತವಾದವಂತೂ ಶೈವಮತದಲ್ಲಿ ಯಾರಿಂದಲೂ ಅಂಗೀಕೃತವಾಗಿಲ್ಲವೆಂಬುದು ವಿಸ್ಮಯವೆನಿಸಿದೆ. ಕಾಶ್ಮೀರ ಶೈವಮತವೂ ಸಹ ಮುಕ್ತಿಯಲ್ಲಿ ಅಭೇದವನ್ನು ಅಂಗೀಕರಿಸುತ್ತದೆ. ತತ್ತ್ವಸ್ವರೂಪವನ್ನು ನಿರೂಪಿಸುವ ವಿಷಯದಲ್ಲಿ ಎರಡು ಮತಗಳಿಗೂ ಸಾಮಾನ್ಯವಾಗಿ ಸಾಮ್ಯವಿದೆ. ಕಾಶ್ಮೀರಶೈವಮತವೂ ೩೬ ತತ್ತ್ವಗಳನ್ನು ಒಪ್ಪುತ್ತದೆ. ಜಗತ್ ಸೃಷ್ಟಿಗೆ ಶಿವನು ನಿಮಿತ್ತ ಕಾರಣನಾದರೆ ಶಕ್ತಿ ಉಪಾದಾನ ಕಾರಣವೆಂಬ ನಿಷ್ಕರ್ಷೆಯಿದೆ. ಅದ್ವೈತ ವೇದಾಂತದಂತೆ ಕಾಶ್ಮೀರಶೈವಮತದಲ್ಲೂ ಜ್ಞಾನದಿಂದಲೇ ಮುಕ್ತಿ ನಿಶ್ಚಿತವೆನಿಸಿದೆ. ೩೬ ತತ್ತ್ವಗಳಲ್ಲಿ ಮೊದಲನೆಯದಾದ ಶಿವತತ್ತ್ವವೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ ಜೀವನೆನಿಸಿರುವುದರಿಂದ ಜೀವನು ಶಿವೋಽ

ಹಂಭಾವವನ್ನು ನಿತ್ಯವೂ ಸ್ಮರಣ ಮಾಡುತ್ತಿರಬೇಕು. ಈ ಬಗೆಯ ಪ್ರತ್ಯಭಿಜ್ಞಾಬಲದಿಂದ ಶಿವಜ್ಞಾನವನ್ನು ಪಡೆದು ಜೀವನು ಶಿವಾಭೇದವನ್ನು ಹೊಂದುವನೆಂದು ಕಾಶ್ಮೀರ ಶೈವಮತವು ಬೋಧಿಸುವುದು. ಆದುದರಿಂದಲೇ ಇದನ್ನು ಪ್ರತ್ಯಭಿಜ್ಞಾದರ್ಶನವೆಂದು ಕರೆಯುವರು. ಶೈವ ದರ್ಶನದಿಂದ ವಿಸ್ತಾರಗೊಂಡ ವೀರಶೈವ ದರ್ಶನದಲ್ಲಿ ಸಚ್ಚಿದಾನಂದ ಸ್ವರೂಪನೂ ಮೂರ್ತಾಮೂರ್ತಸ್ವರೂಪನೂ ಆದ ಪರಮಾತ್ಮನೊಬ್ಬನೇ ಪರಮಾರ್ಥನೆನಿಸಿರುವನು. ಅವನಲ್ಲಿ ಶಕ್ತಿಯು ಸಚ್ಚಿದಾನಂದ ಅನುಭವ ರೂಪವಾಗಿ ನೆಲಸಿರುವುದು. ಇದನ್ನು ಚಿಚ್ಛಕ್ತಿಯೆಂದೂ ಸತ್ಯಜ್ಞಾನಾನಂದಗಳ ವಿಮರ್ಶಾತ್ಮಕವಾದ ವಿಮರ್ಶ ಶಕ್ತಿಯೆಂದೂ ಅನುಭವಿಗಳು ಹೇಳುತ್ತಾರೆ. ಇದು ಅವನ ಪ್ರಾಣ ಸ್ವರೂಪವಾದ್ದರಿಂದ ಸಹಜ ಧರ್ಮವೆನಿಸಿದೆ. ಈ ಶಕ್ತಿಯ ಒಂದಂಶವು ಅವನ ಇಚ್ಛೆಯಂತೆ ಅವನ ವಿನೋದಕ್ಕಾಗಿ ಜಡರೂಪದಿಂದ ಹೊರಪಡುವುದು. ಪೂಜ್ಯ ಪೂಜಕ ಲೀಲೆಯ ವಿನೋದಕ್ಕಾಗಿ ಪರಮಾತ್ಮನು ಈ ಜಡಶಕ್ತಿಯಲ್ಲಿ ಪ್ರವೇಶಿಸಿ ೩೬ ತತ್ತ್ವಗಳಾಗಿ ಪರಿಣಮಿಸುವನು. ಆದ್ದರಿಂದ ವೀರಶೈವ ಸಿದ್ಧಾಂತದಲ್ಲಿ ಕೇವಲ ಶಿವನಿಗಾಗಲಿ ಕೇವಲ ಶಕ್ತಿಗಾಗಲಿ ಜಗದ್ವ್ಯಾಪಾರನಿರ್ವಾಹವು ಸಂಬಂಧಿಸದೆ ಶಕ್ತಿ ವಿಶಿಷ್ಟ ಪರಮಾತ್ಮನಿಗೇ ಅದು ಸಂಬಂಧಿಸಿದೆ. ಪರಮಾತ್ಮನು ಮೂರ್ತ ಸ್ಥಿತಿಯಲ್ಲೂ ಅಮೂರ್ತ ಸ್ಥಿತಿಯಲ್ಲೂ ಉಭಯ ರೂಪದಲ್ಲೂ ಇರುವನೆಂಬುದು ಇಲ್ಲಿ ಒಪ್ಪುತ್ತದೆ. ಅಮೂರ್ತ ಸ್ಥಿತಿಯಲ್ಲಿ ಅವನು ಸ್ವಯಂಭುವಾಗಿದ್ದು ತನ್ನ ಶಕ್ತ್ಯಂಶದಿಂದ ದಿವ್ಯ ಮೂರ್ತ ಸ್ಥಿತಿಯನ್ನು ಹೊಂದಿ ಲೀಲಾವಿಭೂತಿಯನ್ನು ನಡೆಸುತ್ತಿರುವನು. ಅಮೂರ್ತನಾಗಿದ್ದರೂ ಪರಮಾತ್ಮನು ಜಗದ್ವ್ಯಾಪಾರ ಲೀಲೆಯ ನಿರ್ವಾಹಕ್ಕಾಗಿ ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧ ವಿದ್ಯೆ ಎಂಬ ಐದು ದಿವ್ಯ ಅಪ್ರಾಕೃತ ರೂಪಗಳನ್ನು ಧರಿಸಿ ಅವರ ಕಡೆಯಿಂದ ಅನುಗ್ರಹ, ತಿರೋಧಾನ, ಪ್ರಳಯ, ಸ್ಥಿತಿ, ಸೃಷ್ಟಿ ಎಂಬ ಕಾರ್ಯಗಳನ್ನು ನಿರ್ವಹಿಸುತ್ತಿರುವನು. ಕಾಶ್ಮೀರ ಶೈವ ಮತದಲ್ಲಿ ಉಪಾದಾನ ಕಾರಣವಾದ ಶಕ್ತಿಗೆ ಹೆಚ್ಚು ಪ್ರಾಶಸ್ತ್ಯ ಪುರಸ್ಕಾರಗಳು ದೊರೆತಿವೆ. ಈ ಶಕ್ತಿಯ ಪ್ರಭಾವದಿಂದಲೇ ನಿಮಿತ್ತಕಾರಣನಾದ ಶಿವನಿಗೆ ಪೂಜ್ಯತೆ ಗೌರವಗಳು ಸಂಭವಿಸುತ್ತವೆ. ಇದರಿಂದ ಶಾಕ್ತ ಮತದ ಛಾಯೆ ಕಾಶ್ಮೀರ ಶೈವ ಮತವನ್ನು ವ್ಯಾಪಿಸಿರುವಂತೆ ಕಾಣುತ್ತದೆ.

ಜೀವರು ಸಹಜವಾಗಿ ಮಾಯಾರೂಪವಾದ ಮಲದ ಪ್ರಭಾವಕ್ಕೆ ವಶರಾಗಿರುವುದರಿಂದ ಕೇವಲ ಪ್ರತ್ಯಭಿಜ್ಞೆಯಿಂದಲೇ ಅವರು ತಮ್ಮ ಸ್ವರೂಪವನ್ನು ಗಮನಿಸಲಾರರು ಎಂದು ವೀರಶೈವ ಸಿದ್ಧಾಂತವು ತಿಳಿಸುತ್ತದೆ. ತಾವು ಶಿವಸ್ವರೂಪರೇ ಇರುವೆವೆಂಬ ಪ್ರತ್ಯಭಿಜ್ಞೆ ಅಥವಾ ಸ್ವಸ್ವರೂಪದ ಸ್ಮರಣವು ಜೀವರಿಗೆ ಆವಶ್ಯಕವೆಂದು ಕಾಶ್ಮೀರಶೈವ ಮತವು ಒತ್ತಾಯಪಡಿಸುವುದು. ಸತೀಪತಿಗಳು ಸಂಸಾರವನ್ನು ನಿರ್ವಹಿಸುತ್ತಿದ್ದರೂ ಸಂಸಾರದಲ್ಲಿ ಅವರಿಗೆ ಪರಸ್ಪರ ಹೊಂದಿಕೆಯುಂಟಾಗಬೇಕಾಗಿದ್ದರೆ ನಾನು ಇಂಥವನಿಗೆ ಸತಿಯಾಗಿರುವೆನೆಂಬ ಸ್ಮರಣವು ಹೆಂಗಸಿಗೂ, ತಾನು ಇಂಥವಳಿಗೆ ಪತಿಯಾಗಿರುವೆನೆಂಬ

ಸ್ಮರಣವು ಗಂಡಸಿಗೂ ನಿಯತವಾಗಿರಲೇಬೇಕು. ಇದರಿಂದಲೇ ಅವರು ಒಬ್ಬರನ್ನೊಬ್ಬರು ಸಮರಸವಾಗಿ ಹೊಂದಿಕೊಂಡು ಬಾಳುವರು. ಹಾಗೆ ಜೀವನು ಶಿವನೇ ಆದರೂ ಮಲಾವ್ರತನಾಗಿರುವುದರಿಂದ ಶಿವೋಽಹಂಭಾವದ ಸ್ಮರಣೆಯಿಂದಲೇ ತನ್ನ ಮಲವನ್ನು ಕಳೆದುಕೊಳ್ಳಬಲ್ಲನು. ಈ ರೀತಿಯಾಗಿ ಜೀವನಿಗೆ ಶಿವವಿಷಯಕವಾದ ನಿತ್ಯಸ್ಮರಣವೇ ಮೋಕ್ಷದ ಪರಮಸಾಧನವೆಂದು ಕಾಶ್ಮೀರ ಶೈವ ಮತವು ತಿಳಿಸುತ್ತದೆ. ಜೀವನಿಗೆ ತಾನು ವಾಸ್ತವವಾಗಿ ಶಿವನೇ ಆಗಿರುವನೆಂಬ ಸ್ಮರಣವೂ ತಾನು ಪಶುವಲ್ಲವೆಂಬ ವಿವೇಕವೇ ಆಗಿರುವುದರಿಂದ ಈ ಪ್ರತ್ಯಭಿಜ್ಞಾರೂಪವಾದ ಸ್ವರೂಪ ಸ್ಮರಣವೂ ಜ್ಞಾನದಲ್ಲಿಯೇ ಸೇರುವುದರಿಂದ ಜ್ಞಾನದಿಂದಲೇ ಮುಕ್ತಿಯೆಂದು ಕಾಶ್ಮೀರ ಶೈವ ಮತವು ಅಂಗೀಕರಿಸಿದೆ. ಹೀಗೆ ಜೀವನು ಸ್ವಸ್ವರೂಪದ ಸ್ಮರಣದಿಂದಲೇ ಪಾಶ ವಿಮುಕ್ತನಾಗಿ ಶಿವಸ್ವಭಾವವನ್ನು ಪಡೆಯುವನೆಂದು ಕಾಶ್ಮೀರ ಶೈವವು ಬೋಧಿಸುತ್ತದೆ. ವೀರಶೈವ ಸಿದ್ಧಾಂತದಲ್ಲಿ ಕೇವಲ ಸ್ಮರಣದಿಂದಲೇ ಜೀವರಿಗೆ ಮಲಾವರಣವು ನಿವಾರಣವಾಗಲಾರದು. ಪರಮಾತ್ಮ ಶಕ್ತಿಯೇ ಸಹಜವಾಗಿ ಜೀವರಿಗೆ ಭೇದಭಾವನೆಯನ್ನು ಹುಟ್ಟಿಸಿರುವುದರಿಂದ ಈ ಬಗೆಯ ಅಣುತ್ವಾವರಣವೂ, ಶಕ್ತಿ ಸಂಕೋಚವೂ ಕೇವಲ ಸ್ಮರಣೆಯೊಂದರಿಂದಲೇ ಸಾಧ್ಯವಾಗದು. ಆದ್ದರಿಂದ ವೀರಶೈವ ಮತವು ಶಿವಾನುಗ್ರಹ ರೂಪವಾದ ಭಕ್ತಿಯನ್ನೇ ಮೋಕ್ಷ ಸಾಧನವೆಂದು ಪ್ರತಿಪಾದಿಸುತ್ತದೆ. ಈ ಭಕ್ತಿಯು ಆಚರಣೆಯಿಂದ ಜೀವನಿಗೆ ಒಳಗೂ ಹೊರಗೂ ಶಿವನ ನಿರಂತರ ಸಂಬಂಧವು ಸಂಭವಿಸುವದು.

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗ ಕ್ಷೇಮಂ ವಹಾಮ್ಯಹಮ್॥

ಎಂದು ಪರಮಾತ್ಮನೇ ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಜೀವನಿಗೆ ಈ ಬಗೆಯ ಶಿವನ ನಿತ್ಯಾಭಿಯೋಗವನ್ನು ವೀರಶೈವ ದರ್ಶನವು ಏರ್ಪಡಿಸಿದೆ. ಹೃದಯದೊಳಗೆ ಶೋಭಿಸುವ ಮಹಾಪ್ರಕಾಶವನ್ನು ದೇಹದ ಹೊರಗೂ ಸಮಾವೇಶಗೊಳಿಸುವುದೇ ನಿತ್ಯಾಭಿಯೋಗವೆನಿಸುವುದು. ಇದನ್ನು ಗುರುವು ದೀಕ್ಷಾಪ್ರಧಾನದಿಂದ ನಿರ್ವಹಿಸುವನು. ಶಿಷ್ಯನಲ್ಲಿರುವ ಶಿವನ ಚಿತ್ಕಳೆಯನ್ನು ಶಿವಲಿಂಗವೊಂದರಲ್ಲಿ ಸಮಾವೇಶಗೊಳಿಸಿ ಅದನ್ನು ದೇಹಕ್ಕೆ ಸಂಯೋಜಿಸಿ ಅದರ ನಿತ್ಯಾರಾಧನರೂಪವಾದ ಯಜ್ಞದಲ್ಲಿ ನಿರತನಾಗುವಂತೆ ಶಿಷ್ಯನಿಗೆ ನೇಮಕ ಮಾಡುವನು. ಈ ಬಗ್ಗೆ ಜೀವನಿಗೆ ಶಿವನು ನಿತ್ಯ ಸಹಾಯಕನಾಗಿರುವುದನ್ನು ಪರಮಾತ್ಮನೇ ಸ್ಪಷ್ಟವಾಗಿ ಹೇಳಿದ್ದಾನೆ. "ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ಅರ್ಜುನ ತಿಷ್ಠತಿ".

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ।
ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಯಸಿ ಶಾಶ್ವತಮ್॥

ಎಂಬ ಗೀತಾ ವಚನವು ಈ ದೀಕ್ಷೆಗೆ ಪರಮ ಪ್ರಮಾಣವಾಗಿದೆ. ಹೀಗೆ ಶಿವನ ನಿರಂತರ

ಧಾರಣ, ಸ್ಮರಣ, ಧ್ಯಾನ ಮತ್ತು ಉಪಾಸನಗಳಿಂದ ಜೀವನು ಶಿವನ ನಿತ್ಯಾಭಿಯೋಗವನ್ನು ಪಡೆದು ತನ್ಮೂಲಕವಾಗಿ ಶಿವಪ್ರಕಾಶವನ್ನು ಅನುಭವಿಸಿ ಅದರೊಳಗೆ ಸಮರಸವಾಗಿ ಐಕ್ಯನಾಗುವನು. ಈ ಬಗೆಯ ಮುಕ್ತಿ ಸಾಧನವನ್ನೂ, ಶಿವಜೀವೈಕ್ಯ ರೂಪವಾದ ಸಾಮರಸ್ಯವನ್ನೂ ಕಾಶ್ಮೀರ ಶೈವ ಮತದ ಮೋಕ್ಷದಲ್ಲಿ ನಾವು ಕಾಣಲಾರೆವು. ಅಲ್ಪ ಶಕ್ತನಾದ ಜೀವನು ಕೇವಲ ಸ್ಮರಣೆಯಿಂದಾಗಲಿ, ಜ್ಞಾನದಿಂದಾಗಲಿ ಮಲಾವರಣವನ್ನು ಕಳೆದುಕೊಂಡ ನಿರ್ಮಲನಾಗಲಾರನು. ಭಕ್ತಿಯ ಪ್ರಭಾವದಿಂದಲೇ ಶಿವೈಕ್ಯ ಸ್ಥಿತಿಯಲ್ಲಿ ಮುಕ್ತನು ಪೂರ್ಣ ಶಕ್ತಿ ವಿಶಿಷ್ಟನೂ ಸ್ವತಂತ್ರನೂ ಆಗುವುದರಿಂದ ವೀರಶೈವ ಮತವು ಕಾಶ್ಮೀರ ಶೈವ ಮತಕ್ಕಿಂತಲೂ ವಿಲಕ್ಷಣವೆನಿಸಿದೆ.

ಸಾಮಾನ್ಯವಾಗಿ ಶೈವ ದರ್ಶನದಲ್ಲಿ ದಾಕ್ಷಿಣಾತ್ಯ ಶೈವ, ಕಾಶ್ಮೀರ ಶೈವ ಎಂಬ ಎರಡು ಬಗೆಯ ಮತಗಳನ್ನು ಈಗ ನಾವು ಕಾಣುತ್ತೇವೆ. ಉಳಿದ ಶೈವ ಮತಗಳು ಇವುಗಳಲ್ಲಿ ಯಾವುದಾದರೊಂದರ ಛಾಯೆಯನ್ನು ಅನುಸರಿಸಿಕೊಂಡೇ ಬರುವುವು. ಅದರಲ್ಲಿ ದಾಕ್ಷಿಣಾತ್ಯ ಶೈವವು ಸಾಮಾನ್ಯವಾಗಿ ಪಾಶುಪತವೆಂದೂ, ಕಾಶ್ಮೀರ ಶೈವವು ಪ್ರತ್ಯಭಿಜ್ಞಾದರ್ಶನವೆಂದೂ ಕರೆಯಲ್ಪಡುತ್ತಿರುವುವು. ನಾನು ಶಿವನೇ ಇರುವೆನೆಂಬ ಪ್ರತ್ಯಭಿಜ್ಞೆಯೇ ಶಿವಭಾವವನ್ನು ಹೊಂದಲು ಜೀವನಿಗೆ ಮುಖ್ಯ ಕಾರಣವೆಂದು ಅಂಗೀಕರಿಸಿರುವುದರಿಂದ ಕಾಶ್ಮೀರ ಶೈವ ಮತಕ್ಕೆ ಈ ಹೆಸರು ಬಂದಿದೆ. ತತ್ತ್ವ ನಿರೂಪಣ ಪ್ರಕ್ರಿಯೆಯಲ್ಲಿ ಕಾಶ್ಮೀರ ಶೈವಕ್ಕೂ ವೀರಶೈವ ಮತಕ್ಕೂ ಹೆಚ್ಚು ಭೇದವಿರದಿದ್ದರೂ ಸಾಧನ ಮಾರ್ಗದಲ್ಲಿ ವೀರಶೈವ ಮತವು ಕಾಶ್ಮೀರ ಶೈವ ಮತದಿಂದ ಪೂರ್ಣ ಭಿನ್ನವಾಗಿ ತನ್ನದೇ ಆದ ಷಟ್‌ಸ್ಥಲೋಪಾಸನವೆಂಬ ಸ್ವತಂತ್ರ ಮಾರ್ಗವನ್ನವಲಂಬಿಸಿದೆ. ಕೇವಲ ಸ್ಮರಣದಿಂದಲೇ ಜೀವ ಭಾವವೂ, ಮಲಾವರಣವೂ ಹೋಗಲಾರವೆಂದು ವೀರಶೈವ ದರ್ಶನವು ದೃಢಕರವೂ ವೀರ್ಯವತ್ತರವೂ ಆದ ಸಾಧನ ಮಾರ್ಗವನ್ನು ಅವಲಂಬಿಸಿದೆ. ಮಲವು ಪರಮಾತ್ಮನ ಸಂಕುಚಿತ ಶಕ್ತಿಯೇ ಆದ್ದರಿಂದ ಅಂತಹ ಪ್ರಬಲ ಪಾಶವನ್ನು ಪರಿಹರಿಸಲು ಅದರಷ್ಟೇ ಪ್ರಬಲವೆನಿಸಿದ ಭಕ್ತಿರೂಪವಾದ ಸಾಧನವನ್ನು ಭಕ್ತನು ಪರಮಾತ್ಮನಿಂದಲೇ ಅನುಗ್ರಹ ರೂಪವಾಗಿ ಪಡೆಯುವನು. ಹೀಗೆ ವೀರಶೈವ ದರ್ಶನದಲ್ಲಿ ಭಕ್ತಿಯೂ, ತತ್ತ್ವಯುಕ್ತವಾದ ಉಪಾಸನವೂ ಪ್ರಧಾನ ಸ್ಥಾನವನ್ನು ಒಳಗೊಂಡಿವೆ.

ಶಕ್ತಿ ಜೀವನನ್ನು ಪ್ರಪಂಚದ ಕಡೆಗೆ ಪ್ರವರ್ತಿಸಿದರೆ ಭಕ್ತಿ ಅವನನ್ನು ನಿವೃತ್ತಿ ಮಾರ್ಗದಿಂದ ಶಿವನ ಕಡೆಗೆ ಒಯ್ಯುವುದು. ಹೀಗೆ ವೀರಶೈವ ದರ್ಶನದಲ್ಲಿ ದಕ್ಷಿಣಾತ್ಯ ಶೈವದಂತೆಯೇ ಭಕ್ತಿಗೆ ಪ್ರಾಧಾನ್ಯವು ಸಂಭವಿಸುತ್ತದೆ. ಆದರೂ ಭಕ್ತಿಯ ಬೆಳವಣಿಗೆಯ ಕ್ರಮದಲ್ಲಿ ಮಾತ್ರ ದಾಕ್ಷಿಣಾತ್ಯ ಶೈವಕ್ಕೂ ವೀರಶೈವ ದರ್ಶನಕ್ಕೂ ಪೂರ್ಣ ಭೇದವಿದೆ. ವೀರಶೈವ ಮತದ ಭಕ್ತಿ ಮಾರ್ಗದಲ್ಲಿ ಜೀವನು ಕ್ರಮಕ್ರಮವಾಗಿ ತನ್ನ ಸಹಜವಾದ ಭೇದ

ದೃಷ್ಟಿಯನ್ನು ತೊರೆದು ಕೊನೆಯಂತಸ್ತಿನಲ್ಲಿ ತನ್ನ ಅರಿವಿಲ್ಲದೆ ಅಭೇದಾನಂದವನ್ನು ಅನುಭವಿಸುತ್ತಾನೆ. ಜೀವನು ಮಲಗಳ ತೀವ್ರ ಬಾಧೆಯನ್ನು ಕ್ರಮವಾಗಿ ಪರಿಹರಿಸಿ ಕೊಂಡು ನಿರ್ಮಲನಾಗುವನು. ಅವನು ಭಕ್ತ ಸ್ಥಲದಿಂದ ಆರಂಭಿಸಿ ಪ್ರಾಣಲಿಂಗಿ ಸ್ಥಲದ ವೇಳೆಗೆ ಭೇದವನ್ನು ಕಡಿಮೆ ಮಾಡಿಕೊಂಡು ಪ್ರಾಣಲಿಂಗದ ಅನುಭವವನ್ನು ಪಡೆದು ಶರಣ ಸ್ಥಿತಿಯಲ್ಲಿ ಆನಂದದಲ್ಲಿ ಬೆರೆಯುವನು. ಇಂಥ ಸ್ಥಿತಿಯಲ್ಲಿ ಆತ್ಮಾರ್ಪಣಪೂರ್ವಕ ವಾಗಿ ಆನಂದಾನುಭವದಲ್ಲಿ ಮಗ್ನನಾಗಿ ಜೀವನು ಭೇದವಿದ್ದರೂ ತಿಳಿಯದಿರುವನು. ಐಕ್ಯಸ್ಥಿತಿಯಲ್ಲಿ ಆ ಬಗೆಯ ಭೇದ ಜ್ಞಾನವೂ ಇಲ್ಲದಂತಾಗಿ ಅವನು ಜೀವಭಾವದ ಬದಲಾಗಿ ಶಿವಭಾವದಲ್ಲಿ ನಿಂತು ದಗ್ಧಪಟದಂತೆ ನಿರಂಜನನೆನಿಸುವನು. ಈ ಬಗೆಯ ಮಲ ನಿವೃತ್ತಿ ಕ್ರಮವನ್ನೂ, ಜೀವನಲ್ಲಿ ಜೀವಭಾವ ಹೋಗಿ ಶಿವಭಾವ ನೆಲಸುವುದನ್ನೂ ದಾಕ್ಷಿಣಾತ್ಯ ಶೈವ ಮತದಲ್ಲಿ ನಾವು ಕಾಣಲಾರೆವು. ಅಲ್ಲಿಯೂ ಭಕ್ತಿಯ ಪ್ರಭಾವವೇನೋ ಇರುತ್ತದೆ. ಆದರೂ ಅದರ ವಿಕಾಸ ಕ್ರಮವೂ ನಿತ್ಯ ಯಜ್ಞದಲ್ಲಿ ಅದರ ಅನುಷ್ಠಾನ ಕ್ರಮವೂ ದಾಕ್ಷಿಣಾತ್ಯ ಶೈವದಲ್ಲಿ ಕಾಣಬರುವುದಿಲ್ಲ. ಜೀವನು ಸ್ವಸ್ವರೂಪವನ್ನು ಸಮಾಧಿ ಯಲ್ಲಿ ಮಾತ್ರ ಅನುಭವಿಸಿದ್ದರೂ ಅನಂತರ ಅವನು ಶಿವನ ನಿತ್ಯಸಂಪರ್ಕವಿಲ್ಲದಿದ್ದರೆ ಮಲದ ಪ್ರಭಾವಕ್ಕೆ ಪುನಃ ವಶನಾಗುವನು. ದೇಹಕ್ಕೆ ಶಿವನ ನಿತ್ಯಸಂಬಂಧವೂ ಮನಸ್ಸಿಗೆ ನಿತ್ಯ ಸ್ಮರಣವೂ ಆಗದೆ ಮಲಪಾಶವು ಪೂರ್ಣವಾಗಿ ಹರಿಯದು. ಪಾಶವಾದರೋ ಆಸೆಯ ರೂಪದಲ್ಲಿ ಶಿವಪ್ರಕಾಶವನ್ನು ಮುಚ್ಚಿರುವುದು. ಶಿವನು ಜ್ಞಾನಪ್ರಕಾಶನಾದುದ ರಿಂದ ಆ ಪ್ರಕಾಶದ ಸಂಪರ್ಕವಿಲ್ಲದೆ ಮನದ ಮುಂದಣ ವ್ಯಾಮೋಹವೆಂಬ ಆಶಾಪಾಶವು ನಾಶವಾಗದು. ವ್ಯಾಮೋಹಾಭಿಮಾನ ರೂಪವಾದ ಆಶೆಯೇ ನಮಗೆ ಪಾಶವಾಗಿರು ವುದು. ಪರಮಾತ್ಮನ ಕಡೆಗೆ ನಮ್ಮ ಆಶೆ ನಿಯತವಾಗಿ ತಿರುಗಿದಾಗಲೇ ಎಲ್ಲೆಲ್ಲೂ ಅವನೇ ಕಾಣತೊಡಗುವನು. ಈ ಬಗೆಯ ಭಾವನೆ ನಮ್ಮಲ್ಲಿ ಹುಟ್ಟಲಿಕ್ಕೂ ಬೆಳೆಯಲಿಕ್ಕೂ ಶಿವನ ನಿತ್ಯಾಭಿಯೋಗರೂಪವಾದ ಲಿಂಗಧಾರಣವನ್ನು ವೀರಶೈವ ಮತವು ಜೀವನಿಗೆ ಅವಶ್ಯೋಪಾದೇಯವೆಂದು ಭಾವಿಸಿದೆ. ಇದರಿಂದ ತನ್ನಲ್ಲೂ, ಇತರರಲ್ಲೂ ಕೇವಲ ಶಿವದೃಷ್ಟಿಯೇ ಬೆಳೆಯಲಿಕ್ಕೆ ಅವಕಾಶವಾಗುತ್ತದೆ.

ಶೈವ ಮತದಲ್ಲೂ ಈ ಬಗೆಯ ಶಿವಸಂಬಂಧವಿದ್ದರೂ ಅದು ಶಾಶ್ವತವಾಗಿರುವು ದಿಲ್ಲ. ಸ್ಥಾವರಲಿಂಗಗಳನ್ನು ಶೈವರು ಅರ್ಚನೆ ಮಾಡಿದರೂ ಅದರಿಂದ ಶಿವ ಪ್ರಕಾಶದ ನಿತ್ಯಾಭಿಯೋಗವು ಅವರಿಗೆ ದೊರೆಯುವುದಿಲ್ಲ. ಶಿವನ ನಿತ್ಯಚಿಂತನ ಸ್ಮರಣ ಧ್ಯಾನ ಗಳಲ್ಲಿಯೇ ಅವರು ಜೀವನವನ್ನು ಕಳೆದು ಕೈಲಾಸದಲ್ಲಿ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ವೆಂಬ ದಿವ್ಯಲೀಲಾ ವಿಭೂತಿಗಳನ್ನು ಕ್ರಮವಾಗಿ ಅನುಭವಿಸಬೇಕಾಗುವುದು. ಕೈಲಾಸ ದಲ್ಲಿಯೂ ಶಿವನ ಕೈವಲ್ಯ ಸ್ಥಿತಿಯ ಧ್ಯಾನದಲ್ಲಿ ಇರುತ್ತಲೇ ಕೊನೆಗೆ ಸಾಯುಜ್ಯ ರೂಪ ವಾದ ಕೈವಲ್ಯ ವಿಭೂತಿಯನ್ನು ಪಡೆಯುವರು. ಆದ್ದರಿಂದ ಶೈವಮತದ ಪ್ರಕಾರ ಮುಕ್ತರಿಗೆ ಆನಂದಾನುಭವವಿದ್ದರೂ ವಿಶಿಷ್ಟಾದ್ವೈತಮತದಂತೆ ಆಗಲೂ ಅವರು ಶಿವನ

ಕೇವಲಾನಂದ ಸ್ವರೂಪವನ್ನು ಧ್ಯಾನಿಸುತ್ತ ಶಿವೋಪಾಸನದಲ್ಲಿ ನಿರತರಾಗಿರುವರು. ಆದರೆ ನಿಷ್ಕಲ ಶಿವನೊಡನೆ ಸಮರಸವಾಗಿ ಬೆರೆತು ಕೈವಲ್ಯ ವಿಭೂತಿಯನ್ನು ಅನುಭವಿಸುವ ವರೆಗೂ ಜೀವಾತ್ಮನ ಆಶೆ ಪೂರ್ಣವಾಗಿ ಈಡೇರಿದಂತಾಗುವುದಿಲ್ಲ. ಶಿವಲೋಕದಲ್ಲಿ ಶಿವನಂತೆ ದಿವ್ಯರೂಪದಲ್ಲೂ, ಅವನ ಸಮೀಪದಲ್ಲೂ, ವಾಸಮಾಡಿದ ಮಾತ್ರಕ್ಕೆ ಶಿವಾನಂದದ ಪೂರ್ಣ ಅನುಭವವಾಗುವುದಿಲ್ಲ. ಶಿವನ ಅಖಂಡಾನಂದಾನುಭವವೂ ಸಾಮರಸ್ಯರೂಪವಾದ ಐಕ್ಯವೊಂದರಿಂದಲೇ ಸಾಧ್ಯವಾಗುವುದು. ವೀರಶೈವ ಮತದಲ್ಲಿ ಮುಕ್ತನು ಸಾಮರಸ್ಯರೂಪವಾದ ಅಖಂಡಾನಂದವನ್ನು ಅನುಭವಿಸುವನಾದ್ದರಿಂದ ಅವನು ಪೂರ್ಣಕಾಮನೂ ಸ್ವತಂತ್ರನೂ ಪರಿಪೂರ್ಣನೂ ಆಗುವನು. ಆದ್ದರಿಂದ ಶೈವಮತದಂತೆ ವೀರಶೈವ ಮತದಲ್ಲೂ ಭಕ್ತಿಯ ಪ್ರಾಮುಖ್ಯತೆಯಿದ್ದರೂ ಇಲ್ಲಿಯ ಭಕ್ತಿಯ ವಿಕಾಸ ಕ್ರಮವೇ ಬೇರೆಯಾಗಿದೆ. ಭಕ್ತಿಯ ಆಚರಣೆಯಿಂದ ಭಕ್ತನು ಇಲ್ಲಿ ಪಡೆಯುವ ಫಲವೇ ಬೇರೆಯಾಗಿದೆ. ಶೈವಮತದಲ್ಲಿ ಮುಕ್ತನು ಕೈಲಾಸದಲ್ಲಿ ಲೀಲಾವಿಭೂತಿಯನ್ನು ಪಡೆದರೆ ಇಲ್ಲಿ ಮುಕ್ತನು ಕೈವಲ್ಯವಿಭೂತಿಯನ್ನು ಈ ದೇಹದಲ್ಲಿಯೇ ಈ ಇಂದ್ರಿಯಗಳ ಮೂಲಕವೇ ಪಡೆದು ಅನುಭವಿಸಿ ನಿತ್ಯ ತೃಪ್ತನೂ ನಿರ್ಲಿಪ್ತನೂ ಆಗುವನು.

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇऽಸ್ಯ ಹೃದಿಸ್ಥಿತಾಃ।
ಅಥಮರ್ತ್ಯೋ ಅಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ॥

ಎಂಬ ಶ್ರುತಿಯು ವೀರಶೈವ ಮತಕ್ಕೆ ಅನುಗುಣವಾಗಿದೆ. ಹಾಗೆಯೇ

"ಇಹ ಚೇದವೇದೀದಥ ಸತ್ಯಮಸ್ತಿ ।
ನ ಚೇದಿಹಾ ವೇದೀನ್ಮಹತೀ ವಿನಷ್ಟಿಃ"

ಎಂಬ ಶ್ರುತಿಯೂ ಈ ಮತಕ್ಕೆ ಅನುಗುಣವಾಗಿದೆ ಹೀಗೆ ದಾಕ್ಷಿಣಾತ್ಯ ಶೈವ, ಕಾಶ್ಮೀರ ಶೈವ, ವೀರಶೈವ ಈ ಮೂರು ಮತಗಳಲ್ಲಿಯೂ ಪರಮಾತ್ಮನನ್ನು ಶಿವನೆಂಬ ಹೆಸರಿನಿಂದ ಕರೆದಿರುವುದೊಂದೇ ಇವಕ್ಕಿರುವ ಸಾಮ್ಯವೆನಿಸಿದ್ದರೂ ಸಾಧನ ಮಾರ್ಗದಲ್ಲೂ, ಭಕ್ತಿಯ ಆಚರಣೆಯಲ್ಲೂ ವೀರಶೈವ ಮತವು ತನ್ನದೇ ಆದ ಸ್ವತಂತ್ರ ಪ್ರಭಾವದಿಂದ ಬೆಳೆದು ಇತರ ಶೈವಮತಗಳಿಗಿಂತ ಭಿನ್ನವಾಗಿದೆ.

ಹೀಗೆ ಶೈವಮತದಂತೆ ವೀರಶೈವ ಮತವೂ ಪ್ರಾಚೀನ ಕಾಲದಿಂದಲೂ ಸ್ವಾವಲಂಬಿ ಯಾಗಿ ಬೆಳೆದುಬಂದಿರುವುದರಿಂದ ದಾಕ್ಷಿಣಾತ್ಯ ಶೈವದಿಂದಲೇ ವೀರಶೈವ ಮತವು ಭಕ್ತಿಮಾರ್ಗವನ್ನು ಪಡೆಯಿತೋ ಅಥವಾ ವೀರಶೈವ ಮತದಿಂದಲೇ ದಾಕ್ಷಿಣಾತ್ಯ ಶೈವ ಮತವು ಇದನ್ನು ಪಡೆಯಿತೋ ಎಂಬುದನ್ನು ನಿಷ್ಕರ್ಷಿಸುವುದು ಸಾಹಸದ ಕೆಲಸ. ವೀರಶೈವ ಮತದಲ್ಲಿ ಭಕ್ತಿಯ ವಿಕಾಸವನ್ನು ನಾವು ಕಾಣುವೆವಾದ್ದರಿಂದ ಶೈವ ಮತದ ಭಕ್ತಿಪಂಥವನ್ನು ವೀರಶೈವ ಮತವು ಬೆಳಕಿಗೆ ತಂದಿರುವ ಹಾಗೆ ಕಾಣುತ್ತದೆ. ಹೀಗೆ ದಾಕ್ಷಿಣಾತ್ಯಶೈವದ ಭಕ್ತಿಪಂಥವನ್ನೂ, ಕಾಶ್ಮೀರ ಶೈವದ ಶಿವೋऽಹಂಭಾವವನ್ನೂ, ವೀರ

ಶೈವ ದರ್ಶನವು ತನ್ನಲ್ಲಿ ಹೊಂದಿಸಿಕೊಂಡು ತನ್ನದೇ ಆದ ಸ್ವತಂತ್ರವಾದ ಷಟ್‌ಸ್ಥಲೋಪಾಸನಮಾರ್ಗದಿಂದ ವಿರಾಜಿಸುತ್ತಿರುವುದು. ಕಾಶ್ಮೀರ ಶೈವದಲ್ಲಿ ಶಿವೋsಹಂಭಾವನೆಯನ್ನು 'ಪ್ರತ್ಯಭಿಜ್ಞೆ'ಯೆಂದು ಕರೆದಿದ್ದರೆ ವೀರಶೈವ ಮತದಲ್ಲಿ ಇದನ್ನು 'ಭಾವ'ವೆಂದು ಕರೆಯಲಾಗಿದೆ. ಇಲ್ಲಿ, ಕರ್ಮ, ಭಾವ, ಜ್ಞಾನ ಈ ಮೂರನ್ನೂ ಮೋಕ್ಷಸಾಧನಗಳೆಂದು ಹೇಳಲಾಗಿದೆ. ಹೀಗೆ ಭಾರತ ದೇಶದ ಮಧ್ಯ ಭಾಗದಲ್ಲಿ ಪ್ರವರ್ತಿಸಿದ ಈ ಮತವು ಉತ್ತರದ ಕಾಶ್ಮೀರ ಶೈವ ಮತದಿಂದಲೂ, ದಕ್ಷಿಣದ ಪಾಶುಪತ ಶೈವದಿಂದಲೂ ಉತ್ತಮಾಂಶಗಳನ್ನು ಸಂಗ್ರಹಿಸಿಕೊಂಡು ಸ್ವಶಕ್ತಿಯಿಂದಲೂ, ಸ್ವವೈಶಿಷ್ಟ್ಯದಿಂದಲೂ ಸ್ವತಂತ್ರ ವಾತಾವರಣದಲ್ಲಿ ಬೆಳೆದುಬಂದಿದೆ.

ಶೈವ ದರ್ಶನದ ಪ್ರಭೇದಗಳ ಪರಿಶೀಲನೆಯ ಸಂದರ್ಭದಲ್ಲಿ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ವೀರಶೈವ ದರ್ಶನದ ವೈಲಕ್ಷಣ್ಯವನ್ನು ಹೀಗೆ ತಿಳಿಸಿದ್ದಾರೆ: "ಮೂರು ಶೈವಮತಗಳೂ ಪ್ರಕೃತಿ ಪುರುಷ ಪರಬ್ರಹ್ಮವೆಂಬ ಮೂರು ತತ್ತ್ವಗಳನ್ನು ಒಪ್ಪಿವೆ. ಆದರೆ ಪರಮಾತ್ಮನಲ್ಲಿರುವ ಪರಾಶಕ್ತಿಯನ್ನು ಯಾವ ಮತಗಳೂ ಪ್ರಾಮುಖ್ಯತೆಯಿಂದ ಪರಿಗಣಿಸಿಲ್ಲ. ಈ ಎಲ್ಲಾ ಮತಗಳೂ ಶಕ್ತಿಯಲ್ಲಿ ಪೂರ್ಣ ವಿಶ್ವಾಸವುಳ್ಳವಾದರೂ ಶಕ್ತಿಯನ್ನು ಬೆಳಕಿಗೆ ತಂದಿಲ್ಲ. ಶಾಕ್ತಾಗಮಗಳಲ್ಲಿ ಶಕ್ತಿಯು ಪ್ರಧಾನ ಪಾತ್ರ ವಹಿಸುವುದನ್ನು ನಾವು ಕಾಣುತ್ತೇವೆ. ಆದರೆ ಅಲ್ಲಿ ಶಿವನು ಅಪ್ರಧಾನನಾಗಿದ್ದು ಶಕ್ತಿಯು ಶಿವನ ಮೇಲೆ ಅಧಿಕಾರವನ್ನು ನಡೆಸುತ್ತದೆ. ಪರಾಶಕ್ತಿಯು ಪರಮಾತ್ಮನ ಪ್ರಾಣಸ್ವರೂಪಿಣಿಯೆಂದು ತಿಳಿಸುವುದರಿಂದ ವೀರಶೈವ ಸಿದ್ಧಾಂತವು ಶಿವಶಕ್ತಿಯರಿಗೆ ಪರಿಪೂರ್ಣವಾದ ಸಾಮರಸ್ಯವನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ವೀರಶೈವ ಸಿದ್ಧಾಂತವು ಪ್ರಕೃತಿ, ಪುರುಷ ಪರಾಪ್ರಕೃತಿ ಮತ್ತು ಪರಬ್ರಹ್ಮ ಎಂಬ ನಾಲ್ಕು ತತ್ತ್ವಗಳನ್ನು ಒಪ್ಪುತ್ತದೆ."

ಹೀಗೆ ಶೈವ ದರ್ಶನಗಳಿಂದ ಉತ್ತಮಾಂಶಗಳನ್ನು ಸ್ವೀಕರಿಸಿ ಬೆಳೆದರೂ ವೀರಶೈವ ದರ್ಶನವು ಬಹಳ ಪ್ರಾಚೀನ ಕಾಲದಲ್ಲಿಯೇ ಶಿವಶಕ್ತಿಯರ ಸಾಮರಸ್ಯವನ್ನು ಸಿದ್ಧಾಂತ ಸ್ವರೂಪವೆಂದು ಸ್ಥಾಪಿಸಿದ್ದಿತಾಗಿ ತಿಳಿಯಬರುತ್ತದೆ. ಶಕ್ತಿವಿಕಾಸರೂಪವಾದ ಶಿವಸಾಮರಸ್ಯವನ್ನು ಈ ಜನ್ಮದಲ್ಲಿಯೇ ಪಡೆದು ಅನುಭವಿಸುವ ವೀರವ್ರತವನ್ನು ಈ ದರ್ಶನವು ಬೋಧಿಸುವುದರಿಂದಲೂ ಮುಕ್ತನು ಕೇವಲ ಶಿವನೇ ಆಗುವುದರಿಂದಲೂ ಈ ದರ್ಶನಕ್ಕೆ ವೀರಶೈವ ದರ್ಶನವೆಂದು ಹೆಸರಿದೆ. ಶಿವನ ನಿತ್ಯಾಭಿಯೋಗದಿಂದ 'ಏಕೇನ ಜನ್ಮನಾ ಮುಕ್ತಿಃ ವೀರಾಣಾಂತು ಮಹೇಶ್ವರೀ' ಎಂಬ ಆಗಮದ ವಚನದಂತೆ ಒಂದೇ ಜನ್ಮದಲ್ಲಿ ಪರಶಿವ ಸಾಮರಸ್ಯ ರೂಪವಾದ ಮುಕ್ತಿ ದೊರೆಯಲಿರುವುದರಿಂದ ಈ ದರ್ಶನಕ್ಕೆ ವೀರಶೈವ ದರ್ಶನವೆಂಬ ಹೆಸರು ಸಮುಚಿತವೆನಿಸಿದೆ. ಈ ವೀರಶೈವ ದರ್ಶನವೂ ಶೈವ ದರ್ಶನಗಳಿಂದಲೇ ಐತಿಹಾಸಿಕವಾಗಿ ಪ್ರಗತಿಯನ್ನು ಹೊಂದಿ ಬೆಳೆದು ನಿರ್ದಿಷ್ಟವಾದ ರೂಪವನ್ನು ಹೊಂದಿರುವುದಾಗಿಯೂ ನಮಗೆ ತಿಳಿದುಬರುತ್ತದೆ. ಇದರ ಐತಿಹಾಸಿಕ ವಿಕಾಸದ ಬಗ್ಗೆ ಕುಮಾರಸ್ವಾಮಿಗಳು ಹೀಗೆ ಅಭಿಪ್ರಾಯಪಟ್ಟಿದ್ದಾರೆ:

"ಐತಿಹಾಸಿಕವಾಗಿ ವಿಚಾರ ಮಾಡಿದರೆ ವೀರಶೈವವು ಶೈವವೃಕ್ಷದ ಸುಂದರವೂ ವಿಕಸಿತವೂ ಆದ ಪುಷ್ಪವೆನಿಸಿದೆ. ಶಿವಧರ್ಮವು ಕ್ರಿಸ್ತಪೂರ್ವ ಮೂರುಸಾವಿರ ವರ್ಷಗಳಷ್ಟು ಪುರಾತನವಾದುದೆಂದು ತಿಳಿಯಬರುವಂತೆ ಹರಪ್ಪ ಮೊಹೆಂಜದಾರೊ ಶಾಸನಗಳು ಆಶ್ಚರ್ಯಜನಕವಾದ ಸತ್ಯವನ್ನು ಬೆಳಕಿಗೆ ತಂದಿವೆ." ಸರ್ ಜಾನ್ ಮಾರ್ಷಲ್ಲರ ಮಾತಿನಲ್ಲಿ "ಶೈವ ಧರ್ಮವು ಪ್ರಪಂಚದಲ್ಲಿಯೇ ಅತ್ಯಂತ ಪುರಾತನವಾದ ಜೀವಂತ ಧರ್ಮವೆಂದು ತಿಳಿಸುವ ಸಂಶೋಧನೆಗಿಂತಲೂ ಆಶ್ಚರ್ಯಕರವಾದ ಬೇರೆ ಹೆಚ್ಚಿನ ಯಾವ ಸಂಶೋಧನೆಯನ್ನೂ ನಾವು ಹರಪ್ಪಮೊಹೆಂಜೊದಾರೊ ಸಂಶೋಧನೆಗಳ ಪ್ರಕಟಣೆಗಳಲ್ಲಿ ಕಾಣಲಾರೆವು." ಪ್ರಾಣನಾಥರ ಹೇಳಿಕೆಯನ್ನು ಉಲ್ಲೇಖಿಸುವುದಾದರೆ "ಪರಮಾತ್ಮ ಮತ್ತು ಪರಾಶಕ್ತಿಗಳ ಉಪಾಸನಗಳು ಬಹಳ ಹಿಂದಿನ ಕಾಲಗಳಿಂದಲೂ ರೂಢಿಯಲ್ಲಿ ಇರುವಂತೆ ಕಂಡುಬಂದಿವೆ. ಕ್ರಿ. ಪೂ. ಮೂರುಸಾವಿರ ವರ್ಷಗಳಷ್ಟು ಹಿಂದೆಯೇ ಇದನ್ನು ನಾವು ಕಾಣುವುದು ಬಹಳ ಗಮನಾರ್ಹವಾದ ಮಾತು.

ಇದರಿಂದ ಶೈವ ದರ್ಶನವು ಭಾರತದಲ್ಲಿ ಅನಾದಿ ಕಾಲದಿಂದಲೂ ಆಚರಣೆಯಲ್ಲಿ ಇದ್ದಿತೆಂದು ತೋರುತ್ತದೆ. ಮೊಹೆಂಜದಾರೊ ಸಂಶೋಧನೆಗಳಲ್ಲಿ ಶಿವಪ್ರತಿಮೆಗಳೂ ಶಿವಲಿಂಗಗಳೂ ಅನೇಕವಾಗಿ ದೊರೆತಿರುವುದರಿಂದ ಸುಮಾರು ಐದು ಸಾವಿರ ವರ್ಷಗಳ ಹಿಂದೆಯೇ ಶೈವ ದರ್ಶನವು ಇದ್ದಿರಬಹುದೆಂದು ಊಹಿಸಬಹುದಾಗಿದೆ. ಹೀಗೆ ಶೈವ ದರ್ಶನವು ಸಾಮಾನ್ಯವಾಗಿ ಶಿವಲಿಂಗದ ಆರಾಧನವನ್ನು ಅವಲಂಬಿಸಿದ್ದರೂ ಆಗ ಅದರ ಸ್ವರೂಪ ಹೀಗೆಯೇ ಇದ್ದಿತೆಂದು ತಿಳಿಯಲಿಕ್ಕೆ ಸಾಕಷ್ಟು ಪ್ರಮಾಣಗಳು ಕಂಡುಬಂದಿಲ್ಲ. ಪ್ರಾಯಶಃ ಎಲ್ಲಾ ಶೈವದರ್ಶನಗಳೂ ಆಗಮಗಳನ್ನವಲಂಬಿಸಿಯೇ ಹೊರಟವೆಂದು ತಿಳಿಯುತ್ತದೆ. ಶಂಕರಾಚಾರ್ಯರ ಅನಂತರ ವೈದಿಕವಾದದ ವ್ಯಾಪ್ತಿ ಬಹಳವಾಯಿತು. ಆ ಸಮಯದಲ್ಲಿ ಯಾವುದನ್ನಾದರೂ ವೇದೋಕ್ತವಾಗಿದ್ದರೇಯೆ ನಂಬಬಹುದೆಂದೂ, ಇಲ್ಲವಾದರೆ ತ್ಯಜಿಸಬೇಕೆಂದೂ ವಾದಿಸುವ ಸ್ಥಿತಿ ಇದ್ದಂತೆ ಕಾಣುತ್ತದೆ. ಆದ್ದರಿಂದ ಆಗಮ ಮೂಲಕವಾಗಿ ಪ್ರವರ್ತಿಸಿದ ಶೈವ ದರ್ಶನಗಳು ಶ್ರುತಿಯನ್ನು ಕ್ರೋಡೀಕರಿಸಿಕೊಂಡು ನಿಗಮಾಗಮಗಳೆರಡರ ಅವಲಂಬನದ ಮೇಲೆ ಎರಡಕ್ಕೂ ಸಮನ್ವಯವಾಗುವಂತೆ ಪ್ರವರ್ತಿಸಿರಬೇಕು. ಬ್ರಹ್ಮಸೂತ್ರಗಳಲ್ಲಿ ತರ್ಕಪಾದದಲ್ಲಿ 'ಪತ್ಯುರಸಾಮಂಜಸ್ಯಾತ್' ಎಂಬ ಅಧಿಕರಣವು ಕೇವಲ ಆಗಮ ಮೂಲಕವಾದ ವಾದವನ್ನು ನಿರಸನ ಮಾಡಲಿಕ್ಕಾಗಿಯೇ ಹೊರಟಿದೆ. ಬ್ರಹ ವು ಜಗತ್ ಸೃಷ್ಟ್ಯಾದಿ ವ್ಯಾಪಾರಗಳಿಗೆ ನಿಮಿತ್ತ ಕಾರಣವೆಂಬ ವಾದವು ಶೈವಾಗಮಗಳ ಆಧಾರದ ಮೇಲೆ ಹೊರಟಿದೆ. ಇದು ಶೈವದರ್ಶನದಲ್ಲಿ ಬಳಕೆಯಲ್ಲಿದೆ. ಈ ವಿಷಯವು ಶ್ರೀಕರಭಾಷ್ಯ, ಕ್ರಿಯಾಸಾರ, ಶ್ರೀಕಂಠಭಾಷ್ಯಗಳಲ್ಲಿ ವರ್ಣಿತವಾಗಿದೆ. ಪರಮಾತ್ಮನನ್ನು ಕೇವಲ ನಿಮಿತ್ತ ಕಾರಣನೆಂದು ಪ್ರತಿಪಾದಿಸಿದ ಶೈವಮತದಲ್ಲ ಅರುಚಿಯುಂಟಾದ್ದರಿಂದಲೂ, ಅವನು ನಿಮಿತ್ತನೂ ಉಪಾದಾನನೂ ಆಗಿರುವನೆಂದು ಶ್ರುತಿಯಲ್ಲಿ ಹೇಳಿರುವ ಆಶಯವನ್ನನುಸರಿಸಿ ಅಭಿನ್ನನಿಮಿತ್ತೋಪಾದಾನಕಾರಣವಾದವು

ವೀರಶೈವ ಧರ್ಮದಲ್ಲಿ ಪ್ರಸರಿಸಿತೆಂದು ತಿಳಿದುಬರುತ್ತದೆ. ಶೈವ ದರ್ಶನವು ಬ್ರಹ್ಮನಿಮಿತ್ತ ಕಾರಣ ವಾದವನ್ನು ಪ್ರತಿಪಾದಿಸುತ್ತದೆ. ಆದರೆ ಶ್ರುತಿಯಲ್ಲಿ ಬ್ರಹ್ಮಕ್ಕೆ ಉಭಯ ಕಾರಣ ವನ್ನು ಹೇಳಿದೆ. ಅದಕ್ಕಾಗಿ ಶೈವದರ್ಶನದಲ್ಲಿ ಅಭಿಪ್ರಾಯ ವಿಕಾಸವುಂಟಾಗಿ ಬ್ರಹ್ಮಕ್ಕೇ ಉಭಯ ಕಾರಣವನ್ನು ಒಪ್ಪುವ ವಾದವು ವ್ಯಾಪಿಸಿ ವೀರಶೈವ ದರ್ಶನವೆನ್ನಿಸಿ ಕೊಂಡಿತ್ತು.

ವೀರಶೈವರಾದರೋ ಶ್ರುತಿಗಿಂತಲೂ ಆಗಮಗಳಿಗೇ ಪ್ರಾಮಾಣ್ಯವನ್ನು ಅಂಗೀಕರಿಸಿ ದ್ದರಿಂದ ಶ್ರುತಿಗಳಿಗೇ ಆಗಮಾನುಸಾರವಾಗಿ ಅರ್ಥವನ್ನು ವರ್ಣಿಸಿ ಆಗಮೋಕ್ತವಾದ ಮೋಕ್ಷ ಚಾತುರ್ವಿಧ್ಯ ಪಕ್ಷವನ್ನೂ, ಸಾಯುಜ್ಯ ಮುಕ್ತಿಯಲ್ಲಿ ಅತ್ಯಂತಾ ಭೇದವಾದ ವನ್ನೂ ಹಾಗೆಯೇ ಸಂರಕ್ಷಿಸಿಕೊಂಡು ಬಂದಿರುವರೆಂಬುದು ಗಮನಾರ್ಹವಾದ ವೈಶಿಷ್ಟ್ಯ ವೆನಿಸಿದೆ. ಹೀಗೆ ಆಗಮಾನುಸಾರವಾಗಿ ಪ್ರವರ್ತಿಸಿದ ಈ ದರ್ಶನದ ಆರಂಭಕಾಲ ಯಾವುದೆಂಬುದನ್ನು ಸ್ಪಷ್ಟವಾಗಿ ನಿರ್ಣಯಿಸುವುದೂ ಸುಲಭವಲ್ಲ. ವೀರಶೈವ ಮತವನ್ನು ಉದ್ಧಾರ ಮಾಡಿದವರೆಂದು ಪ್ರಸಿದ್ಧರಾಗಿರುವ ಬಸವಾದಿ ಪ್ರಮಥರ ಕಾಲದಿಂದಲೂ ಈ ಮತವು ವಿಶೇಷವಾಗಿ ಪ್ರಚಾರಕ್ಕೆ ಬಂದರೂ ಅದಕ್ಕೆ ಮೊದಲೂ ಈ ಮತವನ್ನು ಅನುಸರಿ ಸಿದವರು ಇದ್ದರೆಂಬುದು ಸ್ಪಷ್ಟವಾಗಿ ತಿಳಿದುಬಂದಿದೆ. ಬಸವಣ್ಣನವರ ವಚನಗಳಲ್ಲಿಯೇ ದೇವರದಾಸಿಮಯ್ಯನೇ ಮೊದಲಾದ ವೀರಶೈವರ ಉಲ್ಲೇಖದಿಂದ ಬಸವಣ್ಣನವರಿಗಿಂತಲೂ ದಾಸಿಮಾರ್ಯರು ಬಹಳ ಪ್ರಾಚೀನರೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಮಹಾಭಾರತ ದಲ್ಲಿ ಅನುಶಾಸನಿಕ ಪರ್ವದಲ್ಲಿ ಭೀಷ್ಮನಿಗೂ ಯುಧಿಷ್ಠಿರನಿಗೂ ನಡೆದ ಸಂಭಾಷಣೆಯಲ್ಲಿ ಆಗಲೇ ಲಿಂಗಧಾರಿ ಬ್ರಾಹ್ಮಣರು ಇದ್ದರೆಂಬುದು ಸ್ಪಷ್ಟಪಡುತ್ತದೆ.

"ಕಿಮಾಹುರ್ಭಾರತಶ್ರೇಷ್ಠ ಪಾತ್ರಂ ವಿಪ್ರಾಸ್ಸನಾತನಂ
ಲಿಂಗಿನಂ ಬ್ರಾಹ್ಮಣಂ ಚಾಪಿ ಬ್ರಾಹ್ಮಣಂ ಚಾಪ್ಯಲಿಂಗಿನಂ"

ಎಂದು ಯುಧಿಷ್ಠಿರನು ಪ್ರಶ್ನಿಸುತ್ತಾನೆ. ದಾನಕ್ಕೆ ಯಾರು ಅರ್ಹರು? ಲಿಂಗಿ ಬ್ರಾಹ್ಮಣನೇ ಅಲಿಂಗಿ ಬ್ರಾಹ್ಮನೆ? ಇಬ್ಬರೂ ಸನಾತನರೇ ಆಗಿದ್ದಾರೆ. ಇವರಿಬ್ಬರಲ್ಲಿ ಯಾರು ಅರ್ಹ ರೆಂದು ಜ್ಞಾನಿಗಳು ಹೇಳುತ್ತಾರೆ ಎಂದು ಅವನ ಪ್ರಶ್ನೆ. ಇದಕ್ಕೆ ಭೀಷ್ಮನು ಕೊಡುವ ಉತ್ತರ ಹೀಗಿದೆ:

ಸದ್ವೃತ್ತಿಮಪಿ ವಿಜ್ಞಾಯ ಲಿಂಗಿನೇ ಚೇತರಾಯ ಚ !
ದೇಯಮಾಹುರ್ಮಹಾರಾಜ ಉಭಾವತಿ ತಪಸ್ವಿನೌ ||

ಇದರ ಪ್ರಕಾರ ಲಿಂಗಿಬ್ರಾಹ್ಮಣ, ಅಲಿಂಗಿಬ್ರಾಹ್ಮಣ ಇವರಿಬ್ಬರೂ ತಪಶ್ಶಕ್ತಿಯುಳ್ಳ ವರೂ, ಸದ್ವರ್ತನಶೀಲರೂ ಆದ್ದರಿಂದ ಇಬ್ಬರೂ ದಾನಾರ್ಹರು ಎಂದು ತಿಳಿದುಬರುತ್ತದ. ಸೌಜನ್ಯ ಸೌಶೀಲ್ಯ ತಪಶ್ಚರ್ಯಗಳ ಆಧಾರದ ಮೇಲೆ ಲಿಂಗಿಗಳೂ ಅಲಿಂಗಿಗಳೂ ಇಬ್ಬರೂ ದಾನಾರ್ಹರೆನಿಸಿರುವರು. ಲಿಂಗಿಯೆಂದರೆ ಲಿಂಗಧಾರಿ ಬ್ರಾಹ್ಮಣ ಎಂದು ಅರ್ಥ

ವಾಗುತ್ತದೆ. ಎಲ್ಲರಿಗೂ ಹೃದಯದಲ್ಲಿ ಅಂಗುಷ್ಠ ಪರಿಮಿತವಾದ ಪ್ರಾಣಲಿಂಗವಿದ್ದೇ ಇರುವುದು. ಅದರ ಅನುಭವವನ್ನು ಪಡೆಯಲಿಕ್ಕಾಗಿ ಅದೇ ಪ್ರಕಾಶವನ್ನು ಹೊರಗೆ ಅಂಗುಷ್ಠ ಪರಿಮಿತವಾದ ಶಿವಲಿಂಗದಲ್ಲಿ ಗುರುವಿನಿಂದ ಸಮಾವೇಶಗೊಳಿಸಿಕೊಂಡು, ಅದು ತನ್ನ ಇಷ್ಟಾರ್ಥವನ್ನು ನೆರವೇರಿಸುವುದರಿಂದ ಅದನ್ನು ಇಷ್ಟಲಿಂಗವೆಂದು ಭಾವಿಸಿ ದೇಹದಲ್ಲಿ ಧರಿಸಿ ನಿತ್ಯವೂ ಅದನ್ನು ಸ್ಮರಿಸುತ್ತಲೂ, ಅರ್ಚಿಸುತ್ತಲೂ ನಿತ್ಯ ಯಜ್ಞವನ್ನು ಆಚರಿಸುತ್ತಿರುವವನು ಲಿಂಗಿ ಬ್ರಾಹ್ಮಣನೆನಿಸುವನು. ಇವನಿಗೆ ನಿವಾರ್ಚನೆಯೇ ನಿತ್ಯಯಜ್ಞರೂಪವಾದ ತಪಸ್ಸೆನಿಸಿರುವುದು. ಇವನೂ ಅಲಿಂಗಿ ಬ್ರಾಹ್ಮಣನಂತೆಯೇ ಸಚ್ಚರಿತನಾದ್ದರಿಂದ ದಾನಾರ್ಹನೆಂದೂ, ಮಹಾಭಾರತ ಕಾಲಕ್ಕೆ ಹಿಂದೆಯೇ ಇಂತಹ ಲಿಂಗಾಂಗಿಗಳು ಅಧಿಕವಾಗಿದ್ದಿರಬೇಕೆಂದೂ ಇದರಿಂದ ತಿಳಿದು ಬರುತ್ತದೆ. ಲಿಂಗಿಬ್ರಾಹ್ಮಣರು ಆಗ ಇಲ್ಲದೆ ಇದ್ದ ಪಕ್ಷದಲ್ಲಿ ಯುಧಿಷ್ಠಿರ ಭೀಷ್ಮರಿಗೆ ಈ ವಿಧವಾದ ಪ್ರಶ್ನೋತ್ತರಗಳು ನಡೆಯಲಿಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಆಗ ಇದ್ದವರ ಬಗ್ಗೆ ಯೋಗ್ಯತೆಯನ್ನು ತಿಳಿಯುವ ಸದುದ್ದೇಶದಿಂದಲೇ ಯುಧಿಷ್ಠಿರನು ಪ್ರಶ್ನಿಸಿದ್ದಾನೆ.

ಕ್ರಿಯಾಸಾರದಲ್ಲಿ ಪ್ರಥಮೋಪದೇಶದಲ್ಲಿ ನೀಲಕಂಠ ಶಿವಾಚಾರ್ಯರು ವೀರಶೈವರೆನಿಸಿದ ಅನೇಕ ಮಹರ್ಷಿಗಳನ್ನು ಸೂಚಿಸಿದ್ದಾರೆ. (ಪುಟ ೧೨).

"ಅಗಸ್ತ್ಯೋ ಜೈಮಿನಿಶ್ಚೈವ ವಿಶ್ವಾಮಿತ್ರೋಽಥ ಕಾಶ್ಯಪಃ
ಭಾರದ್ವಾಜೋಂಗಿರಾತ್ರಿಃ ವಶಿಷ್ಠೋ ರೋಮಹರ್ಷಣಃ
ಏಕೇ ಸರ್ವೇ ಮಹಾಭಾಗಾಃ ಅತಿವರ್ಣಾಶ್ರಮೇ ರತಾಃ
ವೀರಶೈವಾಃ ಸಮಾಖ್ಯಾತಾಃ ಜೀವನ್ಮುಕ್ತಾ ನ ಸಂಶಯಃ ||" (೧. ೧೪.)

ಅಗಸ್ತ್ಯ, ಜೈಮಿನಿ, ವಿಶ್ವಾಮಿತ್ರ, ಕಾಶ್ಯಪ, ಭಾರದ್ವಾಜ, ಅಂಗೀರಸ್, ಅತ್ರಿ, ವಶಿಷ್ಠ, ರೋಮಹರ್ಷಣ ಎಂಬ ಅನೇಕ ಮಹರ್ಷಿಗಳು ಅತಿವರ್ಣಾಶ್ರಮಿಗಳೂ, ವೀರಶೈವರೂ ಆಗಿದ್ದರೆಂದು ಇದರಿಂದ ತಿಳಿದುಬರುತ್ತದೆ. ಸಮುದ್ರಮಥನ ಕಾಲದಲ್ಲಿ ವೀರಶೈವರಿದ್ದರೆಂದು ನೀಲಕಂಠ ದೀಕ್ಷಿತರು ನೀಲಕಂಠ ವಿಜಯ ಚಂಪುವಿನಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ:

ವೀರಭದ್ರ ಇವ ಕ್ರುದ್ಧೇ ವೀರಮಾಹೇಶ್ವರೇ ಮುನೌ |
ಇತಿ ಕರ್ತವ್ಯತಾ ಮೂಢಂ ಇಂದ್ರಮೈಕ್ಷಂತ ದೇವತಾಃ || (೧. ೨೩)

ದೂರ್ವಾಸ ಋಷಿಗಳು ಪರಮ ಶಿವಭಕ್ತರು. ಅವರು ಅನುಗ್ರಹಿಸಿದ ದೇವಿಯ ಪ್ರಸಾದ ಮಾಲಿಕೆಯನ್ನು ಇಂದ್ರನು ತಿರಸ್ಕರಿಸಿ ಆನೆಯ ಸೊಂಡಲಿನ ಮೇಲೆ ಎಸೆದಾಗ ಅವರಿಗೆ ಶಿವಪ್ರಸಾದ ಮಾಲಿಕೆಗೆ ಆದ ಅಪಮಾನವನ್ನು ಸಹಿಸಲಾರದಷ್ಟು ಉಗ್ರ ಕೋಪವುಂಟಾಗುವುದು. ವೀರಶೈವನಾದ ದೂರ್ವಾಸ ಮಹಾಮುನಿಯು ವೀರಭದ್ರನಂತೆ ಕುಪಿತನಾಗಲು ಇಂದ್ರನು ಚಕಿತನೂ, ಭಯಗ್ರಸ್ತನೂ ಆಗಿ ಮುಂದೇನು ಮಾಡಬೇಕೆಂಬುದನ್ನು ಅರಿಯದವನಾದನು. ದೂರ್ವಾಸರ ಶಾಪದಿಂದಲೇ ಇಂದ್ರನ ವೈಭವವೆಲ್ಲವೂ ಸಮುದ್ರದಲ್ಲಿ ನೀರಿನ ಪಾಲಾಯಿತು. ಮುಂದ ಸಮುದ್ರಮಥನ ಕಾಲದಲ್ಲಿ ದೂರ್ವಾಸರ ಅನುಗ್ರಹ

ದಿಂದಲೇ ಇಂದ್ರನು ತನ್ನ ಗತವೈಭವವೆಲ್ಲವನ್ನೂ ಹಿಂದಕ್ಕೆ ಪಡೆಯುವನು. ಹೀಗೆ ದೂರ್ವಾಸ, ಉಪಮನ್ಯು ಮೊದಲಾದ ಅನೇಕ ಮಹರ್ಷಿಗಳು ವೀರಶೈವರೆನಿಸಿ ಜೀವನ್ಮುಕ್ತರಾಗಿ ಇಂದಿಗೂ ಪರಮಾತ್ಮನಂತೆ ನಿತ್ಯಜೀವಿಗಳಾಗಿದ್ದಾರೆ. ವೀರಶೈವರೆಂದರೆ ಲಿಂಗಧಾರಣರೂಪವಾದ ನಿತ್ಯಾಭಿಯೋಗವನ್ನು ಹೊಂದಿ ಲಿಂಗದ ಧ್ಯಾನೋಪಾಸನಗಳನ್ನು ನಿತ್ಯವ್ರತವಾಗಿ ಆಚರಿಸುತ್ತಿರುವವರೆಂದರ್ಥ. ಇಂಥ ಅನೇಕ ವೀರಶೈವರು ಬಹಳ ಹಿಂದಿನ ಕಾಲದಲ್ಲಿಯೇ ಇದ್ದರೆಂಬುದು ಇದರಿಂದ ಖಚಿತವಾಗುತ್ತದೆ. ಅಗಸ್ತ್ಯ ಮಹರ್ಷಿಗಳು ರೇಣುಕಾಚಾರ್ಯರಿಂದ ವೀರಶೈವ ಧರ್ಮವನ್ನು ತಿಳಿದಿದ್ದರೆಂದೂ, ಶಿವದೀಕ್ಷೆಯನ್ನು ಪಡೆದಿದ್ದರೆಂದೂ ಸಿದ್ಧಾಂತ ಶಿಖಾಮಣಿಯಿಂದ ತಿಳಿದುಬರುತ್ತದೆ.

ಯದಾ ಯದಾ ಹಿ ಧರ್ಮಸ್ಯ ಹಾನಿಃ ಶೈವಸ್ಯ ಜಾಯತೇ ।
ತದಾ ತದಾ ಅವತಾರೋಽಯಂ ಗಣೇಶಾನಾಂ ಮಹಿತಲೇ ॥

(ವೀ. ಚಂದ್ರಿಕಾ ೩.೩.೨)

'ಶೈವಧರ್ಮದ ಪ್ರಸಾರಕ್ಕೆ ಯಾವಾಗ ಹಾನಿಯು ಸಂಭವಿಸುವುದೋ ಆಯಾ ಕಾಲಗಳಲ್ಲಿ ಪ್ರಮಥ ಗಣರ ಅವತಾರವಾಗುವುದು' ಎಂದು ಶಂಕರ ಸಂಹಿತೆಯು ಧರ್ಮೋದ್ಧಾರಕ್ಕಾಗಿ ಪ್ರಮಥರು ಆಗಾಗ ಅವತರಿಸುವರೆಂದು ಸ್ಪಷ್ಟವಾಗಿ ತಿಳಿಸುತ್ತದೆ. ಹಾಗೆ ಅವತರಿಸಿದ ಮಹಾಪುರುಷರೇ ರೇಣುಕಾದ್ಯಾದಿ ಆಚಾರ್ಯರೆಂದೂ, ಬಸವಾದಿ ಪ್ರಮಥರೆಂದೂ ವಿಶ್ರುತರಾಗಿರುವರು.

ಕೈಲಾಸದಲ್ಲಿ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಮುಕ್ತಿಯನ್ನು ಪಡೆದು ಪರಮಾತ್ಮನ ನಿರಾಕಾರ ಸ್ಥಿತಿಯನ್ನು ಧ್ಯಾನಿಸುತ್ತಿರುವವರನ್ನು ಪ್ರಮಥಗಣಗಳೆಂದು ಶಿವಾಗಮಗಳು ತಿಳಿಸುತ್ತವೆ. ಅಂಥವರನ್ನು ಭೂಲೋಕದಲ್ಲಿ ಧರ್ಮವನ್ನು ಬೋಧಿಸಲಿಕ್ಕಾಗಿ ಪರಮಾತ್ಮನು ಅನುಗ್ರಹಿಸಿ ಕಳಿಸುವನು. ಹಾಗೆ ಬಂದವರೇ ಅವತಾರ ಪುರುಷರೆಂದೂ, ಕಾರಣ ಪುರುಷರೆಂದೂ ವ್ಯವಹರಿಸಲ್ಪಡುವರು. ಇವರು ಶಿವನಂತೆಯೇ ಪೂರ್ಣವಾದ ಜ್ಞಾನ, ಶಕ್ತಿ ಮತ್ತು ಪ್ರಕಾಶಗಳುಳ್ಳವರಾಗಿ ಶಿವಯೋಗಿಗಳು. ಜಂಗಮರು ಎನಿಸಿಕೊಂಡು ಸನಾತನ ಧರ್ಮವನ್ನು ಉದ್ಧರಿಸುತ್ತಿರುವರು.

'ಪುರಾದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ' ಎಂದು ಸಿದ್ಧಾಂತ ಶಿಖಾಮಣಿಯು ವೀರಶೈವಧರ್ಮವನ್ನು ಬಹಳ ಪ್ರಾಚೀನ ಕಾಲದಲ್ಲಿಯೇ ಪರಮೇಶ್ವರನು ಕೈಲಾಸದಲ್ಲಿ ತನ್ನ ಭಾರ್ಯೆಯಾದ ಭವಾನಿಗೂ, ಮಗನಾದ ಷಣ್ಮುಖನಿಗೂ ಬೋಧಿಸಿದನೆಂದೂ, ಅದೇ ತತ್ತ್ವವನ್ನು ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗೆ ಉಪದೇಶಿಸಿದರೆಂದೂ ತಿಳಿಸುತ್ತದೆ. ಇವರು ಬೋಧಿಸಿದ ಉಪದೇಶಾಮೃತವನ್ನು ಸಿದ್ಧಾಂತ ಶಿಖಾಮಣಿ ಎಂಬ ಗ್ರಂಥದಲ್ಲಿ ಶಿವಯೋಗಿ ಶಿವಾಚಾರ್ಯನು ಪ್ರಕಟಿಸಿರುವನು. ಮಹಾಭಾರತ ಯುದ್ಧಕಾಲದಲ್ಲಿ ಕೃಷ್ಣನು ಅರ್ಜುನನಿಗೆ ಮಾಡಿದ ದಿವ್ಯೋಪದೇಶವನ್ನು ವ್ಯಾಸ

ಮಹರ್ಷಿಯು ಈಚೆಗೆ ಮಹಾಭಾರತದಲ್ಲಿ ಅಡಕ ಮಾಡಿರುವಂತೆ ಶಿವಯೋಗಿ ಶಿವಾಚಾರ್ಯನು ರೇಣುಕೋಪದೇಶವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಸಂಗ್ರಹಿಸಿರುವನು. ಇದು ಭಗವದ್ಗೀತೆಯಂತೆಯೇ ಪೂಜ್ಯವೂ, ಆದರಣೀಯವೂ ಆಗಿ ರೇಣುಕ ಗೀತೆ ಯೆನಿಸಿರುವುದು. ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಸಮಸ್ತ ಗ್ರಂಥಗಳಿಗೂ ಇದು ಶಿಖಾಮಣಿಯಂತೆ ಶ್ರೇಷ್ಠವೆನಿಸಿರುವುದು. ಶ್ರೀಪತಿ ಪಂಡಿತಾರಾಧ್ಯರು 'ಪತ್ಯುರಸಾ ಮಂಜಸ್ಯಾತ್' ಎಂಬ ಸೂತ್ರ ಭಾಷ್ಯದಲ್ಲಿ ಸಿದ್ಧಾಂತ ಶಿಖಾಮಣಿಯನ್ನು ಸಿದ್ಧಾಂತಾಗಮ ವೆಂದು ಪ್ರಮಾಣವಾಗಿ ಉದಾಹರಿಸಿದ್ದಾರೆ. 'ಅಥಾತೋ ಬ್ರಹ್ಮ ಜಿಜ್ಞಾಸಾ' ಎಂಬ ಸೂತ್ರಕ್ಕೆ ಭಾಷ್ಯವನ್ನು ಬರೆಯುವಾಗ 'ಪವಿತ್ರಂತೇ ಇತಿ ಋಗ್ವೇದ ಮಂತ್ರಸ್ಯ ಸಿದ್ಧಾಂತ ಶಿಖಾಮಣೌಹಿ ಶ್ರೀ ರೇಣುಕಾಚಾರ್ಯೇಣ ಲಿಂಗಧಾರಣ ಪರತ್ವೇನ ನಿರ್ದೇಶಾತ್' ಹೀಗೆ ರೇಣುಕಾಚಾರ್ಯರನ್ನು ಶ್ರೀಪತಿ ಪಂಡಿತಾರಾಧ್ಯರು ಗೌರವದಿಂದ ಪುರಸ್ಕರಿಸಿದ್ದಾರೆ. ಶ್ರೀಪತಿ ಪಂಡಿತರು ಕ್ರಿ. ಶ. ೧೧ರಲ್ಲಿ ಇದ್ದರೆಂದು ಈಗ ತಿಳಿದು ಬಂದಿದೆ. ಆದುದರಿಂದ ಶ್ರೀಪತಿ ಪಂಡಿತಾರಾಧ್ಯರಿಗಿಂತಲೂ ಸಿದ್ಧಾಂತ ಶಿಖಾಮಣಿಯು ಹಿಂದಿನದೆಂದು ತಿಳಿದು ಬರುತ್ತದೆ.

ಬಸವಣ್ಣನು ಕ್ರಿ. ಶ. ೧೨ನೆ ಶತಮಾನದಲ್ಲಿ ಧರ್ಮೋದ್ಧಾರಕ್ಕಾಗಿ ಅವತರಿಸಿದ ಮಹನೀಯ. ಅವನು ನಂದೀಶ್ವರನ ಅವತಾರನೆಂದು ಪುರಾಣಗಳು ಹೇಳುತ್ತವೆ. ಇವ ನಂತೆಯೇ ರೇಣುಕಾದ್ಯಾಚಾರ್ಯರು ಬಹಳ ಹಿಂದೆಯೇ ಅವತರಿಸಿ ಭಾರತದ ಅನೇಕ ಕಡೆ ಗಳಲ್ಲಿ ನೆಲಸಿ ಧರ್ಮವನ್ನು ಬೋಧಿಸಿರುವರು. ಅವರು ಸ್ಥಾಪಿಸಿದ ಮಠಗಳು ಈಗಲೂ ಭಕ್ತವೃಂದಕ್ಕೆ ಆದರ್ಶವೂ, ಮಾರ್ಗದರ್ಶಕವೂ ಆಗಿ ಶೋಭಿಸುತ್ತಲಿವೆ. ಶ್ರೀ ನಂದೀಮಠ ಮಹಾಶಯರು ಕನ್ನಡನಾಡಿನ ಚರಿತ್ರೆಯಲ್ಲಿ ಕ್ರಿ. ಶ. ೧೧ನೆ ಶತಮಾನದಲ್ಲಿ 'ರೇವಣಸಿದ್ಧ ಮೊದಲಾದವರು ವೀರಶೈವ ಮತವನ್ನು ಪ್ರಕಾಶಗೊಳಿಸಿದರು. ಇವರೇ ಪಂಚಾಚಾರ್ಯ ಕೋಟಿ ಪ್ರವಿಷ್ಟರೇ ಅಲ್ಲವೇ ಎಂದು ನಿರ್ಣಯಿಸಲಾಗುವುದಿಲ್ಲ. ಇವರೇ ಪಂಚಾಚಾರ್ಯ ರಾಗಿದ್ದರೆ ಐತಿಹಾಸಿಕ ದೃಷ್ಟಿಯಿಂದ ಈ ಮತದ ವಿಕಾಸವು ಕ್ರಿ ಶ. ೧೧–೧೨ನೆ ಶತಮಾನ ಗಳಲ್ಲಾಗಿರಬೇಕು' ಎಂದು ಅಭಿಪ್ರಾಯ ಪಡುತ್ತಾರೆ (ಪುಟ ೨೦೮). ಆದರೂ ಅದೇ ಮಹಾಶಯರು 'ಮಹಾಭಾರತದಲ್ಲಿ ಕೆಲವು ಶೈವರಲ್ಲಿ ಹೇಳಿರುವ ಧರ್ಮಗಳು ಈಗಲೂ ಈ ಮತದಲ್ಲಿ ಕಾಣಬರುತ್ತವೆ. ವೀರಶೈವರು ಹೇಳುವ ತತ್ತ್ವಗಳೂ ಮಹಾಭಾರತದಲ್ಲಿ ಹೇಳಿರುವ ತತ್ತ್ವಗಳಿಗನುಗುಣವಾಗಿವೆ. ಆದ್ದರಿಂದ ಈ ಮತದ ಮೂಲ ಮಹಾಭಾರತ ಕಾಲವೇ ಆಗಿರಬೇಕೆಂದು ಹೇಳಲು ಸಾಧ್ಯವಿದೆ. ಆದರೆ ಈಗ ಯಾವ ರೂಪದಲ್ಲಿದೆಯೋ ಅದೇ ರೂಪದಲ್ಲಿ ಆಗಲೂ ಇತ್ತೋ ಇಲ್ಲವೋ ತಿಳಿಯದು. ಎಲ್ಲಾ ಮತಗಳೂ ಆರಂಭ ಕಾಲದಲ್ಲಿ ಸಾಮಾನ್ಯವಾಗಿ ಪ್ರವರ್ತಿಸಿ ಕಾಲಕ್ರಮದಿಂದ ಪುಷ್ಟಿಯನ್ನೂ ಬಲವನ್ನೂ ಪ್ರಚಾರವನ್ನೂ ವ್ಯಾಪ್ತಿಯನ್ನೂ ಪಡೆಯುತ್ತವ. ಹಾಗೆಯೇ ಈ ಮತವೂ ಆಗಿರಬೇಕು' ಎಂದು ಅಭಿಪ್ರಾಯಪಟ್ಟಿದ್ದಾರೆ. ವೀರಶೈವ ಮತವು ಮಹಾಭಾರತ ಕಾಲದಲ್ಲಿ ಇದ್ದುದ

ರಿಂದಲೇ ಲಿಂಗಧಾರಿಗಳನ್ನು ದಾನಾರ್ಹರೆಂದೂ, ನಿತ್ಯ ಯಜ್ಞರೂಪವಾದ ತಪಸ್ಸನ್ನಾ ಚರಿಸುವವರೆಂದೂ ಭೀಷ್ಮನು ಸೂಚಿಸಿದ್ದಾನೆ. ಹೀಗೆಯೇ ರಾಮಾಯಣ ಕಾಲದಲ್ಲೂ ಲಿಂಗಪೂಜೆ ಇದ್ದುದರಿಂದ ಈ ಮತದ ಪ್ರಾಚೀನತ್ವವು ಸ್ಪಷ್ಟವಾಗಿ ಉಪಪಾದಿತವಾಗಿದೆ.

ಸಿಲೋನ್‌ನಲ್ಲಿ ಭೂಗರ್ಭ ಶೋಧನೆಯಿಂದ ಸಿಕ್ಕಿರುವ ಲಿಂಗಗಳು ಹಿಂದೆ ರೇಣುಕರು ಪ್ರತಿಷ್ಠಿಸಿದ ಲಿಂಗಗಳೇ ಆಗಿರಬೇಕೆಂದು ಊಹಿಸಬಹುದಾಗಿದೆ. ಒಟ್ಟಿನಲ್ಲಿ ಆಚಾರ್ಯರು ವೀರಶೈವ ಧರ್ಮವನ್ನು ಭೂಲೋಕದಲ್ಲಿ ಮೊದಲಿಗೆ ಬೋಧಿಸಿದರೆಂಬ ಬಗ್ಗೆ ಯಾವ ಸಂದೇಹಕ್ಕೂ ಎಡೆಯಿಲ್ಲ. ಈ ಬಗ್ಗೆ ನಂದೀಮಠರು ಹೀಗೆ ಹೇಳುತ್ತಾರೆ: 'ಸಂಕ್ಷೇಪ ವಾಗಿ ಹೇಳುವುದಾದರೆ ಈ ಐದು ಜನ ಆರಾಧ್ಯರು ವೀರಶೈವ ಧರ್ಮವನ್ನು ಮೊದಲು ಬೋಧಿಸಿದರೆಂದು ನಂಬಲಾಗಿದೆ. ಅಂದರೆ ಅವರು ಸಂಪ್ರದಾಯಾನುಸಾರವಾಗಿ ವೀರಶೈವ ಧರ್ಮವನ್ನು ಬೋಧಿಸಿದ ಮೂಲಪುರುಷರಾಗಿರುವರು.' ಇವರು ಸಂಸ್ಕೃತದಲ್ಲಿ ಬೋಧಿಸಿದ ಧರ್ಮವನ್ನು ಬಸವಾದಿ ಶರಣರು ನಾಡಿನ ಭಾಷೆಯಲ್ಲಿ ವಿಶೇಷವಾಗಿ ಪ್ರಚಾರ ಮಾಡಿದ್ದಾರೆ. ಹೀಗೆ ಇಂತಹ ಮಹಾಪುರುಷರು ಆಚರಿಸಿ ತೋರಿಸಿದ ಕಾಲದಿಂದಲೇ ಒಂದು ಮತವು ಪ್ರಚಾರಕ್ಕೆ ಬಂದಿತೆಂದು ನಾವು ಭಾವಿಸಲಾಗುವುದಿಲ್ಲ. ಇದಕ್ಕೂ ಹಿಂದೆಯೇ ಶಿವಾಗಮಗಳಲ್ಲಿ ಈ ಧರ್ಮವು ವಿಶೇಷವಾಗಿ ಬೋಧಿತವಾಗಿದೆ. ಪರಮೇಶ್ವರನೇ ಪಾರ್ವತಿಗೂ, ಷಣ್ಮುಖನಿಗೂ ಈ ಧರ್ಮವನ್ನು ಬೋಧಿಸಿರುವುದಾಗಿ ಆಗಮಗಳು ತಿಳಿಸುತ್ತವೆ. ಶಂಕರಾಚಾರ್ಯರು ಅದ್ವೈತ ಮತವನ್ನು ಬೋಧಿಸಿದರೆಂದರೆ ಅದಕ್ಕೆ ಮೊದಲು ಅದ್ವೈತ ಮತವೇ ಇರಲಿಲ್ಲವೆಂದು ಯಾರೂ ಭಾವಿಸಲಾಗುವುದಿಲ್ಲ. ಉಪ ನಿಷತ್ಕಾಲದಲ್ಲಿಯೇ ಅದ್ವೈತ ದ್ವೈತಾದಿ ಮತಗಳು ಹರಡಿದ್ದವು. ಬಾದರಾಯಣರು ಬ್ರಹ್ಮಸೂತ್ರಗಳಲ್ಲಿಯೇ ತಮಗಿಂತ ಹಿಂದೆಯೇ ಜೀವಬ್ರಹ್ಮರಿಗೆ ಭೇದವನ್ನೂ, ಅಭೇದ ವನ್ನೂ ಪ್ರತಿಪಾದಿಸುತ್ತಿದ್ದ ಆಚಾರ್ಯರ ಹೆಸರುಗಳನ್ನು ತಿಳಿಸುತ್ತಾರೆ. ಜೀವನೂ ಪರಮಾತ್ಮನಂತೆಯೇ ಸನಾತನನೆಂದು ಪ್ರಸ್ಥಾನ ತ್ರಯಗಳು ಮುಕ್ತಕಂಠದಿಂದ ಹೇಳುತ್ತವೆ. ಹಿಂದಿನ ಆ ಕಾಲದಿಂದಲೂ ಅದ್ವೈತವೂ ದ್ವೈತವೂ ಆಯಾಯ ಕಾಲದ ವಿದ್ವಾಂಸರ ಅಭಿರುಚಿ ಭಾವನೆಗಳಿಗೆ ಅನುಗುಣವಾಗಿ ಪ್ರತಿಪಾದಿಸಲ್ಪಟ್ಟಿವೆ. ಒಂದು ಮತ ಇಂತಹ ಕಾಲದಲ್ಲಿಯೇ ಹುಟ್ಟಿತೆಂದು ಖಚಿತವಾಗಿ ಹೇಳಲು ಯಾರಿಗೂ ಸಾಧ್ಯವಿಲ್ಲ. ಜೀವನು ಪರಮಾತ್ಮನ ಅನುಭವ ಸಾಕ್ಷಾತ್ಕಾರಗಳನ್ನು ಪಡೆಯಲಿಕ್ಕಾಗಿ ಮಹಾತ್ಮರು ಮೂರು ಮಾರ್ಗಗಳನ್ನು ರಚಿಸಿದ್ದಾರೆ. ಉಪನಿಷತ್ತು, ಬ್ರಹ್ಮಸೂತ್ರ, ಗೀತ ಇವೇ ಈ ಮೂರು ಪ್ರಸ್ಥಾನಗಳು—ಇವು ಮೂರರಲ್ಲಿಯೂ ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾ ದ್ವೈತ ಮತಗಳ ಪ್ರಕ್ರಿಯೆಗಳು ಪ್ರತಿಪಾದಿತವಾಗಿವೆ.

ಶಂಕರಾಚಾರ್ಯರು ಈ ಪ್ರಸ್ಥಾನಗಳಿಗೆ ಅದ್ವೈತಪರವಾಗಿ ಅರ್ಥಮಾಡಿದ್ದಾರೆ. ಮಧ್ವಾಚಾರ್ಯರು ದ್ವೈತಪರವಾಗಿಯೂ, ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಪರವಾಗಿಯೂ, ಶ್ರೀಪತಿ ಪಂಡಿತಾರಾಧ್ಯರು ಶಕ್ತಿವಿಶಿಷ್ಟಾದ್ವೈತಪರವಾಗಿಯೂ ಅರ್ಥ

ಮಾಡಿದ್ದಾರೆ. ಶ್ರೀಪತಿ ಪಂಡಿತಾರಾಧ್ಯರು ಉಪನಿಷತ್ತಿನಲ್ಲಿ ಬರುವ ಎರಡು ಬಗೆಯ ಶ್ರುತಿಗಳಿಗೂ ಸಮನ್ವಯವಾಗುವಂತೆ ದ್ವೈತಾದ್ವೈತಗಳೆರಡನ್ನೂ ಶಿವಜೀವರಿಗೆ ಬೇರೆ ಬೇರೆ ಕಾಲಗಳಲ್ಲಿ ಅನ್ವಯಿಸುವಂತೆ ತತ್ತ್ವಗಳನ್ನು ಪ್ರತಿಪಾದಿಸಿದ್ದಾರೆ.

ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಕೇ ।
ವೀರಶೈವೈಕಧರ್ಮೇऽಸ್ಮಿನ್ ಸರ್ವಶ್ರುತಿ ಸಮನ್ವಯಃ ॥ ಎಂದು

ಹೇಳಿದ್ದಾರೆ. ಇವರೇ ತಮ್ಮ ಭಾಷ್ಯದ ಅಂಶಾಧಿಕರಣದಲ್ಲಿ

ಜೀವಸ್ಸತ್ಯಂ ಜಗತ್ಸತ್ಯಂ ಶಿವಃ ಸತ್ಯಂ ಸ್ವಭಾವತಃ ।
ತಯೋರಭೇದಃ ಸತ್ಯಂ ವಾ ಕ್ರಿಮಿಭ್ರಮರಯೋರಿವ ॥
ಮಾನವಃ ಶಿವಯೋಗೇನ ಶಿವೋಭವತಿ ನಾನ್ಯಥಾ ।
ಭ್ರಮದ್ಭ್ರಮರಚಿಂತಾಯಾಂ ಕೀಟೋऽಪಿ ಭ್ರಮರಾಯತೇ ॥

ಎಂದು ಜೀವನ ಸತ್ಯತ್ವವನ್ನೂ ಅವನ ನಿವೃತ್ತಿಯನ್ನೂ ವಾಸ್ತವಿಕ ಶಿವಭಾವ ಪ್ರಾಪ್ತಿಯನ್ನೂ ಈ ರೀತಿಯಲ್ಲಿ ಅವರು ಆಗಮಾನುಸಾರವಾಗಿ ತಿಳಿಸಿದ್ದಾರೆ. ಇದರಿಂದ ಜೀವ, ಜಗತ್ತು, ಶಿವ ಇವರ ಸತ್ಯತೆಯೂ ಇವರ ಅಭೇದದ ಸತ್ಯತೆಯೂ ನಮಗೆ ಸಹಜವಾಗಿ ತಿಳಿದು ಬರುತ್ತದೆ. ಕ್ರಿಮಿಯು ಭ್ರಮರಸಂಪರ್ಕದಿಂದ ಹೇಗೆ ಭ್ರಮರವೇ ಆಗುವದೋ ಹಾಗೆ ಜೀವನು ಶಿವಧ್ಯಾನ ಧಾರಣಾದಿ ನಿತ್ಯಾಭಿಯೋಗದಿಂದ ಶಿವನೇ ಆಗುವನು. ಶಿವನ ಚಿಂತನಸ್ಮರಣಧಾರಣಾದಿ ನಿತ್ಯಸಂಬಂಧದಿಂದ ಜೀವನು ಶಿವನಲ್ಲದೆ ಬೇರೆ ಏನೂ ಆಗಲು ಸಾಧ್ಯವೇ ಇಲ್ಲ. ಏಕೆಂದರೆ ಮನಸ್ಸು ಯಾವ ವಸ್ತುವಿನಲ್ಲಿ ತನ್ನ ವಿಶಿಷ್ಟ ಶಕ್ತಿಯನ್ನು ಕೇಂದ್ರೀಕರಿಸುವುದೋ ಅದು ಅದರ ಆಕಾರವರ್ತನೆಗಳನ್ನು ಹೊಂದುವುದು ಸಹಜ. ಜೀವನು ನಿತ್ಯಾರ್ಚನೆಯಲ್ಲಿ ನಿರತನಾಗಿ ಸಕಲ ವ್ಯವಹಾರಗಳನ್ನು ಪರಮಾತ್ಮನ ಸೇವೆಯೆಂದು ಮಾಡತೊಡಗಿದರೆ ಮನಸ್ಸು ನಿಯತವಾಗಿ ಪರಮಾತ್ಮನ ಸ್ಮರಣೆಯಲ್ಲಿಯೇ ವಿಲೀನವಾಗುವುದು. ಈ ಬಗೆಯ ನಿತ್ಯ ಯಜ್ಞದಿಂದ ಮಾನವನು ಶಿವನಾಗುವುದರಲ್ಲಿ ಯಾವ ಸಂಶಯವೂ ಇಲ್ಲವೆಂದು ಶ್ರೀಪತಿ ಪಂಡಿತಾರಾಧ್ಯರು ಆಗಮಾನುಸಾರವಾಗಿ ಪ್ರತಿಪಾದಿಸಿರುವರು.

ವೀರಶೈವದರ್ಶನದ ಸಿದ್ಧಾಂತ ಭಾಗಕ್ಕೂ ಸಂಪ್ರದಾಯಭಾಗಕ್ಕೂ ಶ್ರೀಕರಭಾಷ್ಯವು ಸಮರಸವಾಗಿ ಹೊಂದುತ್ತದೆ. ಅವರು ಬರೆದಿರುವ ಭಾಷ್ಯವು ಸರ್ವರಿಗೂ ಮಾನ್ಯವಾಗಿದೆ. ಅದರಂತೆ ಸಿದ್ಧಾಂತ ಶಿಖಾಮಣಿಯೂ ಪ್ರಮಾಣಗ್ರಂಥವೆನಿಸಿದೆ. ಶ್ರೀಕರ ಭಾಷ್ಯದಲ್ಲಿ ಶ್ರೀಪತಿಪಂಡಿತಾರಾಧ್ಯರು ಅನೇಕ ವಿವಾದಾಂಶಗಳ ನಿರ್ಣಯಕ್ಕಾಗಿ ರೇಣುಕಾಚಾರ್ಯ, ಮರುಳಾರಾಧ್ಯ ವಿಶ್ವಾರಾಧ್ಯ, ಏಕೋರಾಮಾರಾಧ್ಯ ಇವರ ಭಾಷ್ಯಗಳನ್ನು ಸೂಚಿಸಿದ್ದಾರೆ. ಆ ಗ್ರಂಥಗಳು ಇನ್ನೂ ಬೆಳಕಿಗೆ ಬಾರದಿರುವುದು ಮಾನವಸಮಾಜದ ದೌರ್ಭಾಗ್ಯವೆನಿಸಿದೆ. ಬಹಳ ಹಿಂದೆಯೇ ನೀಲಕಂಠ ಶಿವಾಚಾರ್ಯರು ಬ್ರಹ್ಮಸೂತ್ರಗಳಿಗೆ

ವೀರಶೈವ ಮತದ ಪರವಾಗಿ ಭಾಷ್ಯವನ್ನು ಬರೆದಿರುವರೆಂದು ಕ್ರಿಯಾಸಾರದಲ್ಲಿ ಹೇಳಿದೆ. ಆ ಭಾಷ್ಯ ಈಗ ಸಿಕ್ಕಿಸಿರುವ ಶ್ರೀಕಂಠ ಭಾಷ್ಯಕ್ಕಿಂತಲೂ ಬೇರೆಯಾದುದು. ಶ್ರೀಕಂಠ ಭಾಷ್ಯವು ಪಾಶುಪತ ಮತಾನುಸಾರಿಯಾದುದು. ಆದರೆ ವೀರಶೈವ ಮತಾನುಸಾರಿಯಾದುದಲ್ಲವೆಂದು ನಮಗೆ ತಿಳಿದುಬಂದಿದೆ. ಕ್ರಿಯಾಸಾರದಲ್ಲಿ ಹೇಳಿರುವ ನೀಲಕಂಠಾಚಾರ್ಯರು ಯಾರು, ಯಾವಾಗ ಎಲ್ಲಿದ್ದರು ಎಂಬುದು ದೊಡ್ಡ ಸಮಸ್ಯೆಯಾಗಿದೆ. ಶಂಕರ ದಿಗ್ವಿಜಯದಿಂದ 'ಶಂಕರಾಚಾರ್ಯರ ಕಾಲಕ್ಕೆ ನೀಲಕಂಠಾಚಾರ್ಯರೆಂಬುವರೊಬ್ಬರಿದ್ದರು. ಅವರು ಬ್ರಹ್ಮಸೂತ್ರಗಳಿಗೆ ಶೈವಮತಪರವಾಗಿ ಭಾಷ್ಯವನ್ನು ಬರೆದಿದ್ದರು.' ಎಂದು ತಿಳಿದುಬರುತ್ತದೆ. ಅಲ್ಲಿ 'ಶೈವಮತಪರವಾದ ಭಾಷ್ಯ' ಎಂದು ಸಾಮಾನ್ಯವಾಗಿ ಹೇಳಿದ್ದರೂ ಕ್ರಿಯಾಸಾರದಲ್ಲಿ ನೀಲಕಂಠಭಾಷ್ಯಕ್ಕೆ 'ವೀರಶೈವ ಮತಾನುಸಾರಿ' ಎಂದು ಹೇಳಿರುವುದರಿಂದ ಶಂಕರ ದಿಗ್ವಿಜಯದಲ್ಲಿ ಬರುವ ಶೈವ ಪದವು ವೀರಶೈವ ಪರವೆಂಬುದರಲ್ಲಿ ಯಾವ ಸಂಶಯವೂ ಇರದು. ಅಲ್ಲಿಗೆ ಶಂಕರಾಚಾರ್ಯರ ಸಮಕಾಲೀನರಾದ ನೀಲಕಂಠ ಶಿವಾಚಾರ್ಯರು ವೀರಶೈವ ಭಾಷ್ಯವನ್ನು ಶಂಕರಾಚಾರ್ಯರ ಕಾಲಕ್ಕೆ ಹಿಂದೆಯೇ ಬರೆದಿದ್ದರೆಂದೂ ಆಗಲೇ ಈ ಮತವು ಪೂರ್ಣ ಪ್ರಚಾರವನ್ನು ಹೊಂದಿತ್ತೆಂದೂ ಐತಿಹಾಸಿಕವಾಗಿ ತಿಳಿದುಬರುತ್ತದೆ.

ಐತಿಹಾಸಿಕ ದೃಷ್ಟಿಯಿಂದ ಹನ್ನೊಂದನೆಯ ಶತಮಾನದಿಂದೀಚೆಗೆ ಈ ಮತವು ಹರಡಿತ್ತೆಂದು ನಂದೀಮತರು ಹೇಳಿದ್ದಾರೆ. ಆದರೂ ಐದು-ಆರನೆ ಶತಮಾನದಲ್ಲಿದ್ದ ೬೩ ಪುರಾತನರಲ್ಲಿ ವೀರಶೈವರೂ ಇದ್ದರೆಂದು ತಿಳಿದುಬಂದಿದೆ. ಅವರಲ್ಲಿ ಶೈವ ಮತಾನುಯಾಯಿಗಳು ಯಾರು ವೀರಶೈವ ಮತಾನುಯಾಯಿಗಳು ಯಾರು ಎಂದು ವಿಭಾಗಿಸಿ ಹೇಳಲು ಸಾಧ್ಯವಾಗಿಲ್ಲ. ಆದರೂ ಅವರ ಚರಿತ್ರೆಯ ಸಂಗ್ರಹರೂಪವಾಗಿರುವ 'ಪೆರಿಯಪುರಾಣ' ಗ್ರಂಥದಲ್ಲಿ ಅವರನ್ನು ಪ್ರತಿಷ್ಠಿತ ಲಿಂಗಾರ್ಚಕರೆಂದು ಹೇಳಿದೆ. ಅವರು ಸಾಮಾನ್ಯ ಶೈವರಾದರೂ ವೀರಶೈವರಿಗೂ ಮಾನ್ಯತಮರೆಂದೂ ಅಂಗೀಕೃತರಾಗಿದ್ದಾರೆ. ಇದರಿಂದ ಪ್ರಾಚೀನಕಾಲದಲ್ಲಿ ಶೈವ ವೀರಶೈವಗಳ ಭೇದ ಅಷ್ಟು ಪ್ರಧಾನವಾಗಿರಲಿಲ್ಲವೆಂದು ಕಂಡುಬರುತ್ತದೆ. ಯಾರು ಶೈವಮತಸಂರಕ್ಷಣೆಗಾಗಿ ತಮ್ಮ ಪ್ರಾಣವನ್ನೂ ಸಹ ಅರ್ಪಿಸಲು ಮುಂದ ನುಗ್ಗಿದ್ದರೋ ಅವರು ಶಿವನ ನಿತ್ಯಸಂಪರ್ಕದಿಂದ ಶಿವಭಕ್ತರೆನಿಸಿ ಶಿವಯಜ್ಞವನ್ನಾಚರಿಸತೊಡಗಿದರೆಂದು ವೀರಪದದಿಂದ ತಿಳಿಯಬರುತ್ತದೆ. ವೀರಶೈವ ಮತವು ಅಹಿಂಸೆಯನ್ನು ಪ್ರಧಾನವಾಗಿ ವಿರೋಧಿಸಿದೆ. ಆದರೂ ಶಿವಲಿಂಗಕ್ಕೂ ಶಿವಯೋಗಿಗೂ ದುಷ್ಟರಿಂದ ಹಿಂಸೆಯೊದಗಿದಾಗ ನಪುಂಸಕರಾಗಬಾರದೆಂದು ತಮ್ಮ ಶಕ್ತಿಮೀರಿ ದುಷ್ಟರನ್ನು ನಿಗ್ರಹಿಸಬೇಕೆಂಬ ವೀರವ್ರತದಿಂದ ಶಿವಭಕ್ತನಿಗೆ ವೀರಶೈವನೆಂಬ ಹೆಸರು ಬಂದಿರಬೇಕೆಂದು ನಾವು ಭಾವಿಸಬಹುದಾಗಿದೆ. ಇವರು ಲಿಂಗಕ್ಕೆ ಅಧೀನರಾಗಿ ನಿತ್ಯವ್ಯವಹಾರವನ್ನು ಲಿಂಗಪ್ರೀತ್ಯರ್ಥವಾಗಿಯೇ ನಡೆಸುತ್ತ ಇವರ ಚಿತ್ತ, ಮನ, ಪ್ರಾಣಗಳೆಲ್ಲವೂ ಲಿಂಗಕ್ಕೇ ಅಂಟಿಕೊಂಡಿದ್ದುದರಿಂದ ಇವರಿಗೆ ಲಿಂಗಾಯತರೆಂಬ

ಹೆಸರಿದೆ. ಪ್ರಾಚೀನ ಕಾಲದಲ್ಲೂ ಲಿಂಗಧಾರಿಗಳಾದ ಶೈವರಿದ್ದರೆಂದು ಶಿಲಾಶಾಸನ ಗಳಿಂದ ತಿಳಿದುಬರುತ್ತದೆ. ಆದರೂ ಸಾಮೂಹಿಕ ರೀತಿಯಲ್ಲಿ ಲಿಂಗಧಾರಣ ನಡೆದ ಬಗ್ಗೆ ಅಷ್ಟಾಗಿ ಪ್ರಮಾಣಗಳು ಸಿಕ್ಕಿಲ್ಲವೆಂದೂ ವೈಯಕ್ತಿಕವಾಗಿ ನಡೆಯುತ್ತಿದ್ದ ಲಿಂಗ ಧಾರಣವು ಬಸವಣ್ಣನ ಕಾಲದಲ್ಲಿ ಸಾಮೂಹಿಕವಾಗಿ ನಡೆದು ಹೆಚ್ಚು ಪ್ರಚಾರವಾಗಿರ ಬೇಕೆಂದೂ ಸ್ಪಷ್ಟ ಪಡುತ್ತದೆ. ವೀರಶೈವ ಸಂಪ್ರದಾಯದಲ್ಲಿ ಲಿಂಗಸಂಬಂಧವಿಲ್ಲದವ ರೊಡನೆ ಕೊಡುವುದು ತೆಗೆದುಕೊಳ್ಳುವುದು ಮೊದಲಾದ ವ್ಯವಹಾರವನ್ನು ಮಾಡಬಾರ ದೆಂಬ ನಿಯಮವಿದೆ. ಅದಕ್ಕಾಗಿ ೧೨ನೆಯ ಶತಮಾನದಲ್ಲಿ ಲಿಂಗಧಾರಣ ನಿಯಮವು ಕಡ್ಡಾಯವಾಗಿ ಆಚರಣೆಗೆ ಬಂದಿರಬೇಕು. ಆದರೂ ಈ ವೀರಶೈವಮತವು ದರ್ಶನ ಸರಣಿಯಲ್ಲಿ ಪ್ರಸ್ಥಾನತ್ರಯಕ್ಕೆ ಸಮುಚಿತವಾಗಿ ಅನ್ವಯಿಸುವುದೆಂಬುದನ್ನು ತೋರಿಸಿ ಕೊಟ್ಟವರಲ್ಲಿ ಶ್ರೀಪತಿ ಪಂಡಿತಾರಾಧ್ಯರು ಈಗ್ಗೆ ಮೊದಲನೆಯವರಾಗಿದ್ದಾರೆ. ಶೈವ ಮತವೇ ವೀರಶೈವ ಮತವಾಗಿ ಪರಿಣಮಿಸಿತೆಂಬ ಅಭಿಪ್ರಾಯವಿದ್ದರೂ, ಇವೆರಡು ಮತಗಳಿಗೂ ಬಹಳ ವೈಲಕ್ಷಣ್ಯವಿದೆಯೆಂದು ಈವರೆವಿಗೂ ತಿಳಿಸಲಾಗಿದೆ. ಶೈವಮತವು ಪ್ರತಿಷ್ಠಿತ ಲಿಂಗಾರ್ಚನವನ್ನು ವಿಧಿಸಿದೆ. ಇದರಿಂದ ದೇಹಕ್ಕೆ ಶಿವನ ನಿತ್ಯಸಂಪರ್ಕವುಂಟಾಗ ಲಾರದೆಂದು ವೀರಶೈವಮತವು ಗುರ್ವನುಗೃಹೀತವೂ, ಷಟ್‌ಸ್ಥಲಾತ್ಮಕವೂ, ಪ್ರಾಣ ರೂಪವೂ ಆದ ಇಷ್ಟಲಿಂಗದ ಅರ್ಚನೆಯು ವಿನಹಾ ಬೇರೆ ಯಾವ ಮೂರ್ತಿಪೂಜೆಯು ನ್ನಾಗಲಿ, ಪ್ರತಿಷ್ಠಿತಲಿಂಗದ ಅರ್ಚನವನ್ನಾಗಲಿ ಮಾಡಬಾರದೆಂದು ವಿಧಾನ ಮಾಡಿದೆ. ಇದನ್ನು ಶ್ರೀನಂದೀಮಠರು ಹೀಗೆ ತಿಳಿಸಿದ್ದಾರೆ:

"ವೀರಶೈವದರ್ಶನವು ವೀರಶೈವಸಿದ್ಧಾಂತ ಅಥವಾ ಷಟ್‌ಸ್ಥಲ ಸಿದ್ಧಾಂತವೆನಿಸಿ ಶೈವಸಿದ್ಧಾಂತದಿಂದ ಭಿನ್ನವೆನಿಸಿದೆ, ವೀರಶೈವ ದರ್ಶನವು ವಿಗ್ರಹಾರಾಧನವನ್ನು ಬಲ ವತ್ತರವಾಗಿ ನಿಷೇಧಿಸಿದೆ. ವೀರಶೈವನು ದೀಕ್ಷಾಕಾಲದಲ್ಲಿ ಗುರುವಿನಿಂದ ಪಡೆದ ತನ್ನ ಇಷ್ಟಲಿಂಗದಲ್ಲಿಯೇ ಪರಮಾತ್ಮನನ್ನು ಆರಾಧಿಸಬೇಕೆಂದು ಅದು ಪ್ರತಿಪಾದಿಸುತ್ತದೆ. ದೇವಾಲಯಗಳಲ್ಲಿ ಪ್ರತಿಷ್ಠಿತವಾದ ಸ್ಥಾವರಲಿಂಗಗಳ ಆರಾಧನವನ್ನು ಅದು ಸಮ್ಮತಿ ಸುವುದಿಲ್ಲ." ವೀರಶೈವರಿಗೆ ಲಿಂಗವೆಂದರೆ ಶಿವನೇ ಆಗಿರುವನಲ್ಲದೆ ಲಿಂಗವು ಶಿವನ ಕೇವಲ ವಿಗ್ರಹವೆಂದಲ್ಲ. ಪರಮಾತ್ಮನು ದೇಹದಲ್ಲಿ ಚೈತನ್ಯರೂಪದಲ್ಲಿ ವಾಸವಾಗಿದ್ದಾನೆ. ಅವನನ್ನು ಗುರುವು ತನ್ನ ಆತ್ಮಶಕ್ತಿಯ ಪ್ರಭಾವದಿಂದ ಲಿಂಗರೂಪದಲ್ಲಿ ಹೊರಗೆ ತಂದು ಶಿಷ್ಯನ ಕೈಗೆ ಅರ್ಚನೆಗಾಗಿ ಕೊಡುವನು. ಆ ಲಿಂಗವು ಶಿಷ್ಯನ ಕೈಯಲ್ಲಿ ಅವನ ಕಣ್ಮನ ಭಾವಗಳೆದುರಿಗೆ ಒಂದು ದಿವ್ಯ ತೇಜೋನಿಧಿಯಾಗಿ ಕಂಗೊಳಿಸುತ್ತಿರುವುದು. ಅದು ಯಾವ ಕಾರಣದಿಂದಲೂ ದೇಹದಿಂದ ವಿಮುಕ್ತವಾಗಬಾರದು. ಅದರ ವಿಯೋಗವು ಆತ್ಮಶಕ್ತಿಯ ವಿನಾಶಕ್ಕೆ ಸಮವೆನಿಸುವುದು, ಗುರುವಿನಿಂದ ಪಡೆದ ಈ ಲಿಂಗದ ವಿನಹ ಬೇರೆ ಯಾವ ಆಕಾರದಲ್ಲೂ ಶಿವನ ಅರ್ಚನೆಯನ್ನು ವೀರಶೈವಮತವು ಒಪ್ಪುವುದಿಲ್ಲ. ಶಿವನಿಗೆ ಬೇರೆ ರೀತಿಯಲ್ಲಿ ಮಾಡುವ ಪೂಜೆಯೆಲ್ಲವೂ ನಿಷೇಧಿಸಲ್ಪಟ್ಟಿದೆ.

ಈ ಬಗೆಯ ಲಿಂಗನಿಷ್ಠೆಯನ್ನು ಯಾವಜ್ಜೀವವೂ ಆಚರಿಸುವುದೇ ವೀರವ್ರತ ವೆನಿಸಿತು. ಅಸಿಧಾರಾವ್ರತದಂತೆ ಗಹನವಾದ ಈ ವ್ರತವು ಬಹುಕಾಲದಿಂದಲೂ ಆಚರಿಸ ಲ್ಪಡುತ್ತಿದೆ. ಷಟ್‌ಸ್ಥಲಾತ್ಮಕವಾದ ಇಷ್ಟಲಿಂಗದ ಆರಾಧನವೂ ತನ್ಮೂಲಕವಾಗಿ ಇಲ್ಲಿಯೇ ಈ ದೇಹದಲ್ಲಿಯೇ ನಿರ್ಮಲವಾದ ಮನಸ್ಸಿನಲ್ಲಿ ಶಿವಾನಂದವನ್ನು ಅನುಭವಿ ಸುತ್ತಾ ಶಿವೈಕ್ಯನೂ, ನಿರಂಜನನೂ, ನಿರಾಮಯನೂ ಆಗಿ ಶಾಂತಿಯಿಂದ ಆಳುವುದು ವೀರಶೈವ ದರ್ಶನದ ವೈಶಿಷ್ಟ್ಯವೆನಿಸಿದೆ. ಜೀವನು ಶಕ್ತಿಸಂಕೋಚರೂಪವಾದ ಮಲ ಸಂಬಂಧವನ್ನು ಕಳೆದುಕೊಂಡು ಪೂರ್ಣ ಶಕ್ತಿಕನೂ, ಮಹಾಪ್ರಕಾಶನೂ, ನಿರ್ಮಲನೂ ಆಗಿ ಶಕ್ತಿ ವಿಶಿಷ್ಟನೂ. ಅದ್ವೈತನೂ ಆದ ಪರಶಿವನೇ ಆಗುವುದರಿಂದ ಇಂತಹ ಸ್ಥಿತಿ ಯನ್ನು ದೊರಕಿಸುವ ವೀರಶೈವದರ್ಶನವು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವೆಂದು ವ್ಯವಹೃತವಾಗಿದೆ. ಈ ದೇಹದಲ್ಲಿಯೇ ಇಂದ್ರಿಯಗಳೊಡನೆ ಬಾಳುವಾಗಲೇ ಇಂತಹ ಅದ್ವೈತಾನಂದವನ್ನು ಪಡೆದು ಅನುಭವಿಸುವ ಸ್ಥಿತಿಗೆ ಶಿವಜೀವೈಕ್ಯವೆಂದೂ, ಲಿಂಗಾಂಗ ಸಾಮರಸ್ಯವೆಂದೂ ಅನುಭವಿಗಳು ಹೇಳುತ್ತಾರೆ. ಈ ಸ್ಥಿತಿಯನ್ನು ದೊರಕಿಸುವ ಸಾಧನಮಾರ್ಗವನ್ನು ಷಟ್‌ಸ್ಥಲ ಸಂಪ್ರದಾಯವೆಂದು ಹೇಳಲಾಗಿದೆ.

ಹೀಗೆ ವೀರಶೈವದರ್ಶನವು ಬಹಳ ಪ್ರಾಚೀನಕಾಲದಿಂದಲೂ ವೈಯಕ್ತಿಕವಾಗಿ ಆಚರಣೆಗೆ ಬಂದು ರೇಣುಕಾದ್ಯಾಚಾರ್ಯರ ದಿವ್ಯೋಪದೇಶದಿಂದ ಪ್ರಚಾರಗೊಂಡು ಬಸವಾದಿ ಪ್ರಮ ಥರ ನಿತ್ಯಾಚರಣೆಯಿಂದ ವಿಶೇಷ ವ್ಯಾಪ್ತಿಯನ್ನು ಪಡೆದು ಸ್ವತಂತ್ರ ಶಕ್ತಿಯಿಂದ ಬೆಳೆದು ಬಂದು ಈಗಲೂ ಸದ್ಭಕ್ತರಿಗೆ ಶಿವೈಕ್ಯಸುಖವನ್ನು ನೀಡುತ್ತಲಿರುವುದು. ಈ ಧರ್ಮದಲ್ಲಿ ದೇಹವೆಂಬ ದೇಗುಲದಲ್ಲಿಯೇ ಪರಮಾತ್ಮನ ಅರ್ಚನೆ ಹೇಗೆ ನಡೆಯಲಿರುವುದೆಂಬುದನ್ನು ವಚನಕಾರರು ಹೃದಯಂಗಮವಾಗಿ ತಿಳಿಸಿದ್ದಾರೆ. "ದೇಹವೇ ದೇಗುಲವಾಗಿರಲು ಮತ್ತೆ ಬೇರೆ ದೇಗುಲವೇಕಯ್ಯ? ಪ್ರಾಣವೇ ಲಿಂಗವಾಗಿರಲು ಬೇರೆ ಮತ್ತೆ ಲಿಂಗವೇಕಯ್ಯಾ? ಹೇಳಲಿಲ್ಲ ಕೇಳಲಿಲ್ಲ ಗುಹೇಶ್ವರಾ ನೀನು ಕಲ್ಲಾದರೆ ನಾನೇನಪ್ಪೆನಯ್ಯ? ಎನ್ನ ಕರಮನಭಾವ ಕಂಗಳ ಕೊನೆಯಲ್ಲಿ ಬೆಳಗುವ ಪರಂಜ್ಯೋತಿಮೂರ್ತಿ ಕೇಳಾ, ಅಂಗದ ಮೇಲೆ ಪರಶಿವಲಿಂಗ ವಿರ್ದು ಸ್ಥಾವರಲಿಂಗಕ್ಕೆ ಶರಣೆನಲಾಗದು." ಹೀಗೆ ಹೃದಯದಲ್ಲಿ ನೆಲೆಸಿರುವ ಈಶ್ವರನು ದೇಹದ ಆರು ಇಂದ್ರಿಯಗಳಲ್ಲೂ ವ್ಯಾಪಿಸಿ ಲೋಕದಲ್ಲಿ ವ್ಯವಹರಿಸುತ್ತ ಆರು ವಿಷಯ ಗಳನ್ನು ನಿರ್ಲಿಪ್ತತೆಯಿಂದ ಭೋಗಿಸುತ್ತಿರುವನೆಂದು ತಿಳಿಸುವ ಷಟ್‌ಸ್ಥಲ ಸಿದ್ಧಾಂತವನ್ನು ಮೊದಲಿಗೆ ರೇಣುಕಾದ್ಯಾಚಾರ್ಯರು ಬೋಧಿಸಿರುವುದರಿಂದ ಸುಮಾರು ಐದು ಸಾವಿರವರ್ಷ ಗಳ ಹಿಂದೆಯೇ ಈ ಸಿದ್ಧಾಂತವು ವೈಯಕ್ತಿಕ ಆಚರಣೆಯಲ್ಲಿತ್ತೆಂದೂ, ಅಸಿಧಾರಾವ್ರತದಂತೆ ಈ ಗಹನವಾದ ತತ್ತ್ವವು ಪಂಚಾಚಾರ್ಯರ ಮತ್ತು ಶರಣರ ಬೋಧಾಚರಣೆಗಳಿಂದ ಉತ್ತಮಾಧಿಕಾರಿಗಳಿಗೆ ಅನುಭವ ಗೋಚರವಾಗಿತ್ತೆಂದೂ, ಈಚೆಗೆ ಬಸವಾದಿ ಪ್ರಮಥರು ಅದನ್ನು ದೈನಂದಿನ ಆಚರಣೆಯಿಂದ ಹೆಚ್ಚು ಪ್ರಚಾರ ಮಾಡಿ, ಸಾಮೂಹಿಕ ಆಚರಣೆಗೆ ಅನುಕೂಲ ಪಡಿಸಿದರೆಂದೂ ಐತಿಹಾಸಿಕವಾಗಿ ತಿಳಿದು ಬರುತ್ತದೆ. ಇದರಿಂದ ವೀರಶೈವ

ದರ್ಶನವು ಪ್ರಾಚೀನ ಕಾಲದಿಂದಲೂ ಜನಜೀವನವನ್ನು ಸುಧಾರಿಸುತ್ತ ಬಂದಿರುವು ದೆಂಬುದು ಸ್ಪಷ್ಟವಾಗಿದೆ.

ವೀರಶೈವ ದರ್ಶನವು ತಾತ್ತ್ವಿಕವಾಗಿ ಎಲ್ಲಾ ಮತಗಳಿಗಿಂತಲೂ ವಿಲಕ್ಷಣವಾಗಿದೆ. ಶಂಕರ ಸಮ್ಮತವಾದ ಕೇವಲಾದ್ವೈತ ಮತಕ್ಕಿಂತಲೂ, ಆನಂದ ತೀರ್ಥ ಸಮ್ಮತವಾದ ಕೇವಲ ದ್ವೈತ ಮತಕ್ಕಿಂತಲೂ, ರಾಮಾನುಜ ಸಮ್ಮತವಾದ ವಿಶಿಷ್ಟಾದ್ವೈತಕ್ಕಿಂತಲೂ ಭಾಸ್ಕರ ಯಾದವ ಪ್ರಕಾಶರಿಗೆ ಸಮ್ಮತವಾದ ಭೇದಾಭೇದ ಮತಕ್ಕಿಂತಲೂ ವಿಲಕ್ಷಣವಾದ ಈ ದರ್ಶನದ ವೈಶಿಷ್ಟ್ಯವನ್ನು ಎಷ್ಟು ಹೇಳಿದರೂ ತೀರದಾಗಿದೆ. ಶ್ರೀ ಕಂಠ ಭಾಷ್ಯದ ವ್ಯಾಖ್ಯಾನಕಾರರಾದ ಅಪ್ಪಯ್ಯ ದೀಕ್ಷಿತರು ಶ್ರೀ ಕಂಠ ಮತವೂ ಶಾಂಕರ ಮತವೂ ಒಂದೇ ಎಂದು ಹೇಳಿರುವರು. ಶಾಂಕರ ಮತದಲ್ಲಿ ಜಗತ್ತು ಮಿಥ್ಯ, ಬ್ರಹ್ಮ ನಿರ್ವಿಶೇಷ, ಜ್ಞಾನ ದಿಂದಲೇ ಮುಕ್ತಿ, ಜೀವನೇ ಬ್ರಹ್ಮ ಎಂದು ಹೇಳಿದೆ. ಇದು ಶಾಂಕರ ಸಿದ್ಧಾಂತದ ಸಾರ ಸಂಗ್ರಹ. "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಽಪರಃ" ಎಂಬ ಅವರ ಹೇಳಿಕೆ ಎಲ್ಲರಿಗೂ ತುಂಬ ಪರಿಚಿತವಾಗಿದೆ. ವೀರಶೈವ ಸಿದ್ಧಾಂತದಲ್ಲಾದರೋ ಜಗತ್ತು ಸತ್ಯ. ಬ್ರಹ್ಮ ಸವಿಶೇಷ, ಆದರೆ ಸಾಕಾರನೂ ನಿರಾಕಾರನೂ, ಸಗುಣನೂ ನಿರ್ಗುಣನೂ ಇರುವನು. ಭಕ್ತಿಯೇ ಮುಕ್ತಿಗೆ ಸಾಧನ. ಜೀವನು ಪರಬ್ರಹ್ಮನ ಅಂಶ ಎಂಬುದು ಸ್ಪಷ್ಟವಾಗಿದೆ. ಇದರಿಂದ ಈ ಮತವು ಶಾಂಕರ ಮತದಿಂದಲೂ ವಿಲಕ್ಷಣ ನೆಂಬುದು ನಿರ್ವಿವಾದವೆನಿಸಿದೆ. ಶ್ರೀ ಕಂಠ ಶಿವಾಚಾರ್ಯರು ಪರಬ್ರಹ್ಮವನ್ನು ಶಿವನೆಂದು ಕರೆದಿರುವುದರಿಂದ ಶಿವಪಾರಮ್ಯ ವಾದಿಗಳಾದ ಅಪ್ಪಯ್ಯ ದೀಕ್ಷಿತರೂ ಶ್ರೀ ಕಂಠ ಮತವನ್ನು ಶಿವಾದ್ವೈತವೆಂದು ಕರೆದಿದ್ದರೂ ಅದು ಬ್ರಹ್ಮಾದ್ವೈತದಲ್ಲಿಯೇ ಪರ್ಯವಸಾನ ವಾಗುವುದರಿಂದ ಈ ಬಗೆಯು ಶಿವಾದ್ವೈತದಿಂದಲೂ ವೀರಶೈವ ದರ್ಶನವು ಚರಿತಾರ್ಥ ವಾಗುವುದಿಲ್ಲವೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಹೀಗೆ ಉಳಿದ ಎಲ್ಲಾ ಆಸ್ತಿಕ ದರ್ಶನ ಗಳಿಗಿಂತಲೂ ವೀರಶೈವ ದರ್ಶನವು ತನ್ನದೇ ಆದ ವೈಯಕ್ತಿಕ ಪ್ರಭೆಯಿಂದ ಸ್ವತಂತ್ರವೂ ವಿಲಕ್ಷಣವೂ ಆಗಿ ಶೋಭಿಸುತ್ತಿರುವುದು.

**ವೀರಶೈವ ಧರ್ಮದ ವೈಶಿಷ್ಟ್ಯ:**

ಇಷ್ಟು ಬರವಣಿಗೆಯಿಂದ ವೀರಶೈವ ಧರ್ಮವು ಶೈವ ಧರ್ಮದಿಂದಲೂ, ಇತರ ಮತಗಳಿಂದಲೂ ಬೇರೆಯಾಗಿ ತನ್ನದೇ ಆದ ವೈಶಿಷ್ಟ್ಯದಿಂದ ಶೋಭಿಸುತ್ತಿರುವುದನ್ನು ತಿಳಿಸಲಾಯಿತು. ಇದರಲ್ಲಿ ಮುಖ್ಯವಾಗಿ ಸಾಧಕನು ಗಮನಿಸಬೇಕಾದ ಅಂಶವಿಷ್ಟು: ಅರಿಯಬೇಕು, ಅರಿತೊಡನೆ ಮಾಡಬೇಕು ಎಂಬ ನೇಮವನ್ನನುಸರಿಸಿ ಜ್ಞಾನ ಕ್ರಿಯಾ ಸಮನ್ವಯಾತ್ಮಕವಾದ ಈ ವೀರಶೈವ ಧರ್ಮವು ತನ್ನದೇ ಆದ ಸೊಬಗಿನಿಂದ ಶೋಭಿಸು ತ್ತಲಿರುವುದು. ಪರಮಾತ್ಮ ಸ್ವರೂಪವನ್ನು ಅರಿತು ಅವನ ಇಚ್ಛೆಯಂತೆ ಕಾರ್ಯವೆಸಗ

ದವನಿಗೆ ಈ ಧರ್ಮವು ಸಿದ್ಧಿಸುವುದಿಲ್ಲ. ಮಹಾದೇವನನ್ನರಿಯದೆ ಕಾರ್ಯವನ್ನೆಸಗು ವವನಿಗೂ ಈ ಧರ್ಮವು ಫಲಪ್ರದವಾಗುವುದಿಲ್ಲ. ಎಷ್ಟೋ ಜನರು ಶೈವ ಧರ್ಮಾನು ಯಾಯಿಗಳಾಗಿದ್ದು ವೀರಶೈವ ಧರ್ಮದ ಆಚರಣೆಯಲ್ಲಿ ಹಿಂದೆ ಬಿದ್ದರು. ಜನ ಸಮು ದಾಯದಲ್ಲಿ ಯಾರು ಶಿವನನ್ನು ಅನನ್ಯ ಭಾವದಿಂದ ದೃಢವಾಗಿ ನಂಬಿ ಆರಾಧಿಸಿದರೋ ಅವರಿಗೆ ವೀರಶೈವ ಧರ್ಮವು ಆಶ್ರಯ ನೀಡಿ ಶಾಂತಿ ಸುಖಗಳನ್ನು ಕರುಣಿಸಿತು. ಸರ್ವೇಂದ್ರಿಯಗಳಿಗೂ ಶಿವನನ್ನೇ ವಿಷಯವನ್ನಾಗಿ ಮಾಡಿಕೊಂಡು ಶಿವನಿಗಾಗಿಯೇ ಸಕಲ ವ್ಯವಹಾರಗಳನ್ನು ನಡೆಸುತ್ತ ಪ್ರತಿ ಕ್ಷಣದಲ್ಲೂ ಶಿವನನ್ನು ನೋಡುತ್ತಲೂ ಮುಟ್ಟುತ್ತಲೂ, ಕೇಳುತ್ತಲೂ ಇದ್ದವರಿಗೆ ಮಾತ್ರ ಶಿವನು ದೊರೆತನು. ಶೈವರು ಪ್ರತಿಷ್ಠಿತ ಲಿಂಗವನ್ನು ಅರ್ಚಿಸುತ್ತಲಿದ್ದು ಪ್ರತಿದಿನವೂ ಶಿವನ ದರ್ಶನಕ್ಕಾಗಿ ಹಾತೊರೆಯು ತ್ತಿದ್ದರೂ ಕೆಲವಾರು ದಿನಗಳ ಪ್ರವಾಸದಲ್ಲಿ ಶಿವನನ್ನು ಕಾಣದೆ, ಶಿವನಿಗೆ ತನ್ನ ಭೋಜ್ಯ ವಸ್ತುಗಳನ್ನು ಅರ್ಪಿಸದೆ ಇರಬೇಕಾದ ಪರಿಸ್ಥಿತಿ ಉಂಟಾಯಿತು. ಅಂತಹವರು ಶಿವ ದೀಕ್ಷೆಯಿಂದ ತಮ್ಮ ಹೃದಯದಲ್ಲಿರುವ ಪ್ರಾಣ ಜ್ಯೋತಿಯನ್ನು ಹೊರಗೆ ಪಡೆದು ದೇಹದ ಮೇಲೆ ಧಾರಣೆ ಮಾಡಬೇಕಾಯಿತು. ಪ್ರಮಾಣ ಕಾಲದಲ್ಲೂ, ತಮ್ಮ ಪ್ರವಾಸ ಕಾಲದಲ್ಲೂ ಶಿವನ ದರ್ಶನಕ್ಕೆ ಇದು ಬಹಳ ಸೌಕರ್ಯವನ್ನುಂಟು ಮಾಡಿತು. ಗುಡಿ ಯಲ್ಲಿರುವ ಶಿವನನ್ನು ನೋಡಿ ತೃಪ್ತಿ ಹೊಂದಲಿಕ್ಕೂ ಆಗದಂತಾಯಿತು. ಮಧ್ಯಾಹ್ನದ ವೇಳೆಗೆ ಗುಡಿಯ ಬಾಗಿಲು ಮುಚ್ಚಿ ಬೀಗ ಹಾಕಿರುವುದರಿಂದಲೂ ಅವರಿಗೆ ಶಿವನ ದರ್ಶನಾವಕಾಶ ತಪ್ಪುವಂತಾಯಿತು. ಅಂಥವರು ಮಾತ್ರ ತಮ್ಮ ಉತ್ಕಟೇಚ್ಛೆಯಿಂದ ವೀರಶೈವರಾಗಬೇಕಾಯಿತು. ಉಳಿದವರು ಶೈವರಾಗಿಯೇ ಉಳಿಯಬೇಕಾಯಿತು.

ಯಾರು ಶಿವನ ನಿರಂತರ ಸಂಪರ್ಕವನ್ನು ಇಚ್ಛಿಸಿದರೋ ಅವರು ಮಾತ್ರ ದೇಹದ ಮೇಲೆ ಲಿಂಗವನ್ನು ಧರಿಸಿ, ಲಿಂಗಕ್ಕಾಗಿಯೇ ತಮ್ಮ ಪ್ರಾಣವನ್ನು ಉಳಿಸಿಕೊಂಡು ವೀರಶೈವರಾದರು. ಹೀಗೆ ಸರ್ವರೂ ಲಿಂಗಧಾರಿಗಳಾಗದೆ ಉಳಿದು ಅವಕಾಶ ಸಿಕ್ಕಿದಾಗ ಮಾತ್ರ ಲಿಂಗದ ದರ್ಶನ ಭಾಗ್ಯವನ್ನು ಪಡೆಯುವಂತಾಯಿತು. ಯಾರಿಗೆ ಶಿವಯೋಗದ ಇಚ್ಛೆ ಪ್ರಬಲವಾಗಿರುವುದೋ ಅವರು ಮಾತ್ರ ಶಿವನಿಗಾಗಿ ಬಾಳುತ್ತಾ ವೀರಶೈವರಾಗ ಬೇಕಾಯಿತು.

ತನ್ನಿಷ್ಠಾಸ್ತದ್ಗತ ಪ್ರಾಣಾಃ ಬೋಧಯಂತಃ ಪರಸ್ಪರಮ್ ।
ಕಥಯಂತಶ್ಚ ತಂ ನಿತ್ಯಂ ಕುಷ್ಯಂತಿ ಚ ರಮಂತಿ ಚ ॥

ಹೀಗೆ ಗೀತೆಯಲ್ಲಿ ಪರಮಾತ್ಮನು ಬೋಧಿಸಿರುವುದನ್ನು ಸಾಧಕರೆಲ್ಲರೂ ಅವಶ್ಯವಾಗಿ ಗಮನಿಸಬೇಕು. ತಮ್ಮ ಚಿತ್ತ ಪ್ರಾಣಗಳನ್ನು ಶಿವನಿಗೆ ಭಕ್ತಿಯಿಂದ ಸಮರ್ಪಿಸಿ ಸಕಲ ವ್ಯವಹಾರಗಳನ್ನೂ ಹಿತವಾಗಿಯೂ, ಮಿತವಾಗಿಯೂ, ಕಾಲಕ್ಕೆ ತಕ್ಕಂತೆಯೂ ನಡೆಸುತ್ತ,

ಶಿವನ ವಿಷಯುವನ್ನೇ ಹೇಳುತ್ತಲೂ, ಕೇಳುತ್ತಲೂ ಸಂತೋಷಗೊಂಡರೋ ಅವರು ಮಾತ್ರ ವೀರಶೈವರಾದರು. ಉಳಿದವರು ಶೈವರಾಗಿಯೇ ಉಳಿಯುವ ಪರಿಸ್ಥಿತಿವುಂಟಾಯಿತು ಹೀಗೆ ಜ್ಞಾನ ಕ್ರಿಯಾ ಸಮನ್ವಯ ಮಾರ್ಗವನ್ನು ಕೆಲವರು ಮಾತ್ರ ಆಚರಿಸುತ್ತ ವೀರಶೈವ ಸ್ಥಿತಿಗೆ ಏರಿದರು. ಉಳಿದವರು ಶೈವರಾಗಿಯೇ ಉಳಿಯಬೇಕಾಯಿತು. ಯಾರು ತಮ್ಮ ಜೊತೆಯವರನ್ನೂ, ನೆರೆ ಹೊರೆಯವರನ್ನೂ ಕಂಡೊಡನೆ ಅವರಲ್ಲಿರುವ ಶಿವನನ್ನು ಗಮನಿಸಿ ಅವರನ್ನು ಗೌರವಿಸುವರೋ ಅವರಿಗೆ ಶಿವನೇ ರಕ್ಷಕನಾಗಿ ನಿಂತು ಅವರನ್ನು ಕಾಪಾಡುತ್ತಿರುವನು.

ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ –ಎಂದು

ಪರಮಾತ್ಮನೇ ಹೇಳಿರುವುದರಿಂದ ಯಾರು ಎಲ್ಲರಲ್ಲೂ ಶಿವನನ್ನೇ ಕಾಣುವರೋ, ಶಿವನಲ್ಲಿಯೇ ಎಲ್ಲರೂ ಇರುವರೆಂದು ಮನಗಾಣುವರೋ ಅಂಥವನು ಎಂದಿಗೂ ನಶಿಸುವುದಿಲ್ಲ. ಅವನ ಯೋಗಕ್ಷೇಮವನ್ನು ಶಿವನೇ ವಹಿಸಿಕೊಳ್ಳುವನು. ಶಿವನನ್ನು ದೃಢವಾಗಿ ಮನಸಾರೆ ಯಾರು ನಂಬುವರೋ ಅವರನ್ನು ಶಿವನು ಖಚಿತವಾಗಿ ಕೈಬಿಡದೆ ರಕ್ಷಿಸುವನು. ಎಲ್ಲರ ಹೃದಯದಲ್ಲೂ ಶಿವನಿರುವುದು ಖಚಿತ. ಅವನು ಅವರವರ ನಂಬಿಕೆಗೆ ತಕ್ಕಂತೆ ಅವರನ್ನು ಕಾಪಾಡುತ್ತಿರುವನು. ಅವನ ಅನುಗ್ರಹದಿಂದಲೇ ಅವರಿಗೆ ಶಾಂತಿ ಸಮಾಧಾನಗಳು ದೊರೆಯುತ್ತಿರುವುವು.

ಹೀಗೆ ತಿಳಿವು, ಉತ್ಕಟೇಚ್ಛೆ ಮತ್ತು ಕ್ರಿಯೆಗಳು ಯಾರಲ್ಲಿ ಅಧಿಕವಾಗಿ ಬೆಳೆದಿರುವುವೋ ಅವರು ಶಿವಾನುಗ್ರಹದಿಂದ ನಿತ್ಯ ಸುಖಿಗಳೂ ಶಾಂತರೂ ಆಗಿ ಬಾಳುವರು. ಇಂತಹ ಸುಖ ಶಾಂತಿ ಸಮಾಧಾನಗಳು ಗುರುಗಳ ಅನುಗ್ರಹದಿಂದ ಸಾಧಕರೆಲ್ಲರಿಗೂ ದೊರೆಯಲೆಂದು ಹಾರೈಸಲಾಗಿದೆ. ಯಾರು ಶಿವನಿಗಾಗಿ ಬಾಳುತ್ತಿರುವರೋ ಅವರಿಗೆ ಶಿವನು ಇದ್ದೇ ತೀರುವನು. ಯಾರು ಕೀರ್ತಿ ಪ್ರತಿಷ್ಠೆಗಾಗಿ ಶಿವನ ಹೆಸರನ್ನು ಉಚ್ಚರಿಸುತ್ತ ತಮ್ಮ ಇಷ್ಟ ಬಂದಂತೆ ರಾಗ ದ್ವೇಷಗಳ ಸುಳಿಗೆ ಸಿಲುಕಿರುವರೋ ಅವರಿಗೆ ಜೀವನವೇ ದುಃಖದ ತವರು ಮನೆಯಾಗಿ ಅನಂತ ಯಾತನೆಗಳಿಗೆ ಸಿಲುಕುವುದು. ಈ ರೀತಿಯಾಗಿ ಮಾಡದೆ ಸರ್ವವನ್ನೂ ಶಿವವೆಂದು ನಂಬಿ ಕರ್ತವ್ಯ ದೃಷ್ಟಿಯಿಂದ ಫಲವನ್ನು ಅಪೇಕ್ಷೆ ಮಾಡದೆ ತಮ್ಮ ಪಾಲಿನ ಕೆಲಸವನ್ನು ಮಾಡಿ ಮುಗಿಸುವರೋ ಅಂಥವರು ಶಿವನ ಪ್ರಸನ್ನತೆಯುನ್ನು ಪಡೆದು ನಿತ್ಯ ಸುಖಿಗಳಾಗುವರು. ಯಾರು ಮನದಲ್ಲಿ ಶಿವನನ್ನು ಚಿಂತಿಸುತ್ತಲೂ ಹೊರಗಡೆ ಶಿವನನ್ನು ಅರ್ಚಿಸುತ್ತಲೂ ಕಾಲವನ್ನು ಕಳೆಯುವರೋ ಅಂಥವರು ಇಲ್ಲಿಯೇ ಈ ಪವಿತ್ರ ದೇಹದಲ್ಲಿ ಶಿವಯೋಗಾನಂದವನ್ನು ಅನುಭವಿಸುವರು. ಇದಕ್ಕಾಗಿಯೇ ಮಾನವನು ಈ ದೇಹಕ್ಕೆ ಬಂದಿರುವನು. ಇಲ್ಲಿ ತಿಳಿದು ಅನುಭವಿಸು

ವವನೇ ದುಃಖದಿಂದ ಪಾರಾಗುವವನು. ಇಲ್ಲಿ ತಿಳಿಯದೆ ವ್ಯರ್ಥವಾಗಿ ಕಾಲ ಕಳೆಯುವವನು ಭವ ಬಾಧೆಗೆ ಸಿಲುಕುವವನು. ಇಂಥ ಭವ ಪಾಶದಿಂದ ದೃಢ ವಿಶ್ವಾಸಿಗಳೆಲ್ಲರೂ ಪಾರಾಗುವರೆಂದು ಭಾವಿಸಲಾಗಿದೆ. ಜಗದ್ಗುರುಗಳ ದಿವ್ಯ ಪ್ರಭೆಯಿಂದಲೂ, ಅವರ ಪೂರ್ಣ ಪ್ರಜ್ಞೆಯಿಂದಲೂ, ಶಿವಯೋಗ ನಿಷ್ಠೆಯಿಂದಲೂ ಸಾಧಕರೆಲ್ಲರೂ ಎಚ್ಚೆತ್ತು ತಮ್ಮ ಹೃದಯದ ದಿವ್ಯ ಪ್ರಭೆಯನ್ನು ಮನಗಂಡು ಶಾಂತ ಚಿತ್ತರಾಗಿ ಬಾಳಲೆಂದು ಈ ಮೂಲಕವಾಗಿ ಆಶಿಸಲಾಗಿದೆ.

# ಶೈವ ಹಾಗೂ ವೀರಶೈವ ದರ್ಶನಗಳ ತೌಲನಿಕ ಅಧ್ಯಯನ

—ಡಾ ವ್ಹಿ. ಎಸ್. ಕಂಬಿ

ಪ್ರವೇಶ– ಆಕರ ಸಾಹಿತ್ಯ–ಶಿವಾಗಮ ಪ್ರಭೇದಗಳು–ಶಿವಾಗಮಗಳಲ್ಲಿಯ ಶೈವ ಪ್ರಭೇದಗಳು–ತೌಲನಿಕ ಹಸಿಗೆ–ಪರವಸ್ತು, ದೇವತಾ ಸಿದ್ಧಾಂತ, ಇಷ್ಟದೇವತಾ ಅಥವಾ ಅಂಗ ಹಸಿಗೆ–ಮುಕ್ತಿ–ಕರ್ಮಗಳು–ಸಮುಚ್ಚಯ ವಿಚಾರ–ಮುಕ್ತಾಯ.

**ಶೈವಂ ಚ ವೀರಶೈವಂ ಚ ದ್ವಿವಿಧಂ ಶೈವಮೀರಿತಮ್|**–ವೀರಶೈವ ಪ್ರಕಾಶಿಕೆ

**ಪ್ರವೇಶ:**

ಪುರಾಣ ಹಿಂದೂ ಧರ್ಮದ ಪ್ರಾಚೀನ ಸ್ವರೂಪ ಸಂಶೋಧನೆಯಲ್ಲಿ ತೊಡಗಿದ ಪ್ರಾಚ್ಯ ವಿಜ್ಞಾನ ಕೋವಿದರು (Indologists) 'ಬ್ರಾಹ್ಮಣ ಧರ್ಮ' ಎಂದು ಅದನ್ನು ಹೆಸರಿಸಿದ್ದಾರೆ. ಬ್ರಾಹ್ಮಣ ಧರ್ಮವು ವರ್ಣಾಶ್ರಮ ಧರ್ಮದ ಆದಿಯಾವಸ್ಥೆ. ಪುರಾಣ-ಹಿಂದೂಧರ್ಮದ ವರ್ಣಾಶ್ರಮಗಳಿಗಿಂತಲೂ ಬ್ರಾಹ್ಮಣ ಧರ್ಮವು ಹೆಚ್ಚು ಶುದ್ಧ. ಬ್ರಾಹ್ಮಣಧರ್ಮದ ಮೇಲೆ ಬೌದ್ಧಧರ್ಮ, ಜೈನಧರ್ಮ, ವಿದೇಶಿಯರ ಭಾರತದ ಮೇಲಿನ ದಾಳಿಗಳು, ವಿದೇಶೀ ಧರ್ಮಗಳು, ವಿದೇಶಿಯರ ಆರ್ಥಿಕ ನೀತಿ ಹಾಗೂ ಸಾಮಾಜಿಕ ಪ್ರಭಾವಗಳು ಪ್ರಭಾವ ಬೀರಿದವು. ಅದರಲ್ಲಿ ಸಾಂಸ್ಕೃತಿಕ ಘರ್ಷಣೆ ಹುಟ್ಟಿಕೊಂಡಿತು. ತನ್ನ ತನವನ್ನು ಉಳಿಸಿಕೊಳ್ಳಲು ಪ್ರಬಲ ಪುರಾತನ ವರ್ಣಾಶ್ರಮ ಶೈವಧರ್ಮವು ವೈಷ್ಣ ಧರ್ಮವು ಹೊಸ ಪ್ರತಿಕ್ರಿಯೆಗಳನ್ನು ತೋರಿಸತೊಡಗಲು ಪುರಾಣ-ಹಿಂದೂ ಧರ್ಮವು ಸ್ಪಷ್ಟವಾದ ಹೊಸ ಹುಟ್ಟು ಪಡೆಯಿತು. ಈ ಹೋರಾಟದಲ್ಲಿ ಶೈವವು ಪ್ರಬಲ ಹಾಗೂ ಕ್ರಾಂತಿಕಾರೀ ಮನೋಧರ್ಮವನ್ನು ತೋರತೊಡಗಿತು. ಪುರಾಣ-ಹಿಂದೂ ಧರ್ಮವು ಹೊಸ ಸನ್ನಿವೇಶಕ್ಕೆ ಪ್ರತಿಸ್ಪಂದಿಸುವಲ್ಲಿ ಶೈವಧರ್ಮದ ಸಾಮಾಜಿಕ; ಧಾರ್ಮಿಕ, ತಾತ್ವಿಕ ದೃಷ್ಟಿಕೋನಗಳ ಪಾತ್ರತುಂಬಾ ಹಿರಿದು. ಇದನ್ನು ಆಗಮ ಸಾಹಿತ್ಯದ ಅಧ್ಯಯನ ದಿಂದ ಗುರುತಿಸಬಹುದು. ಶೈವ ಧರ್ಮವು ಪುರಾಣ ಹಿಂದೂ ಧರ್ಮಕ್ಕೆ ಕಾಲಕ್ಕೆತಕ್ಕಂತೆ ಹೊಸ ತಿರುವು ಕೊಡುತ್ತ ಬಂದಿದೆ. ಶೈವ ಧರ್ಮದ ಪ್ರಮುಖ ಪ್ರಭೇದಗಳು ಬೌದ್ಧ, ಜೈನ, ಮತ್ತು ವಿದೇಶೀ ಧರ್ಮಗಳ ಆಕ್ರಮಣವನ್ನು ತಡೆಯಲು ವರ್ಣಾಶ್ರಮ ಧರ್ಮದಲ್ಲಿ ಮಾಡಿ ಕೊಂಡುದರ ಪರಿಣಾಮ. ಆ ಧರ್ಮದಲ್ಲಿ ಹೊಸಚೈತನ್ಯ ತುಂಬಿವೆ ಇದರಿಂದ ಈ ಶೈವದ

ಎರಡು ಭೇದಗಳು ಮುಖ್ಯವಾದವುಗಳು; ಅವೆಂದರೆ ಶೈವ ಮತ್ತು ವೀರಶೈವ. ಈ ಪ್ರಬಂಧವು ಇವುಗಳ ತೌಲನಿಕ ಅಧ್ಯಯನಕ್ಕೆ ಸೀಮಿತ ಗೊಂಡಿದೆ.

**ಆಕರ ಸಾಹಿತ್ಯ:**

ಈ ಪ್ರಭೇದಗಳ ಆಕರ ಸಾಹಿತ್ಯವು ಶಿವಾಗಮಗಳು, ಶೈವ ಪುರಾಣಗಳು, ಪ್ರಕರಣ ಗ್ರಂಥಗಳು, ಸೂತ್ರಗಳ ಭಾಷ್ಯಗಳು ಮತ್ತು ಪ್ರಾದೇಶಿಕ ಅನುಭಾವ ಸಾಹಿತ್ಯ ಕೃತಿಗಳು. ಇವಲ್ಲದೆ ಆಧುನಿಕ ವಿದ್ವಾಂಸರು ಕೈಕೊಂಡ ಸಂಶೋಧನ ಕೃತಿಗಳು. ಇವು ಅಧ್ಯಯನದ ವಸ್ತುಗಳು. ಈ ಅಧ್ಯಯನಕ್ಕೆ ಪ್ರಸ್ತುತ ಲೇಖಕರು ಆಗಮಗಳನ್ನೇ ವಿಶೇಷ ವಾಗಿ ಬಳಸಿಕೊಂಡಿದ್ದಾರೆ.

ಈ ಆಕರ ಸಾಹಿತ್ಯದಲ್ಲಿ ಚಿತ್ರಿತವಾದ ಶೈವ, ವೀರಶೈವಗಳ ನಿರೂಪಣೆಯನ್ನು, ನಂತರ ತೌಲನಿಕ ಹಸಿಗೆಯನ್ನು ಮಾಡುವದನ್ನು ನೋಡಬಹುದು. ಶಿವಾಗಮಗಳ ಕಾಲನಿರ್ಣಯ ಈ ಪ್ರಬಂಧದ ಕೆಲಸವಲ್ಲ. ಈ ಕಾರ್ಯವನ್ನು ಕೇವಲ ಪ್ರಾಚೀನ ಸಂಸ್ಕೃತ ಧಾರ್ಮಿಕ ಸಾಹಿತ್ಯ ವಿದ್ವಾಂಸರು ಮಾಡಲು ಸಮರ್ಥರು. ಇಂಥವರು ಆಗಮಗಳ ಬಗ್ಗೆ ಬರೆದುದನ್ನು ನೋಡಲಾಗಿದೆ. ಇವರಲ್ಲಿ ಕೆಲವರೆಂದರೆ ಡಾ. ಎಸ್. ಸಿ. ನಂದಿಮಠ, ಸಿದ್ಧರಾಮಪ್ಪ ಪಾವಟೆ, ಪ್ರೊ. ಎಂ. ಆರ್. ಸಾಖರೆ, ಡಾ. ಪಿ. ಜಿ. ಹಳಕಟ್ಟಿ ಮತ್ತು ಶಂಭುಲಿಂಗ ಶಿವಾಚಾರ್ಯರು ಪ್ರಮುಖರು. ೮ನೆಯ ಶತಮಾನದ ಕಂಚಿಯ ಶಾಸನವು ೨೮ ಆಗಮಗಳನ್ನು ಹೆಸರಿಸಿದೆ ಎಂದು ನಂದಿಮಠರು ಹೇಳಿದರೆ, ಶಂಭುಲಿಂಗ ಶಿವಾಚಾರ್ಯರು, ಸಿದ್ಧರಾಮಪ್ಪ ಪಾವಟೆ ಹಾಗೂ ಸಾಖರೆಯವರು ಮಹಾಭಾರತದಲ್ಲಿ ಆಗಮಗಳ ಉಲ್ಲೇಖ ತಿಳಿಸುವರು. ಶಂಭುಲಿಂಗ ಶಿವಾಚಾರ್ಯರರು ಮಹಾಭಾರತದ ಅನುಶಾಸನ ಪರ್ವ ೧೪೪ ಹಾಗೂ ೨೦೭ ಅಧ್ಯಾಯ ಉಲ್ಲೇಖಿಸಿದ್ದಾರೆ; ಅಲ್ಲಿಯ ಶ್ಲೋಕ ಉದ್ಧರಿಸಿದ್ದಾರೆ- ಯಾನೀಹಾಗಮ ಶಾಸ್ತ್ರಾಣಿ ಯಾಶ್ಚಕಶ್ಚಿತ್ ಪ್ರವೃತ್ತ ಯಃ। ತಾನಿ ವೇದಂ ಪುರಸ್ಕೃತ್ಯ ಪ್ರವೃತ್ತಾನಿ ಯಥಾಕ್ರಮಂ।.... ತತ್ರಗತ್ವಾವಿಧಿಂ ಜ್ಞಾತ್ವಾದೀಕ್ಷಾಂ ಕುರ್ಯಾದ್ಯಥಾಗಮಂ। ಇವುಗಳ ಪ್ರಭೇದಗಳ ಅಲ್ಲಿಯ ಶೈವಪ್ರಭೇದಗಳ ಅವಲೋಕನ ಮಾಡುವಾ.

**ಶಿವಾಗಮ ಪ್ರಭೇದಗಳು:**

ಆಸ್ತಿಕ ಮತ್ತು ನಾಸ್ತಿಕ ಧಾರ್ಮಿಕ ಸಾಹಿತ್ಯದಲ್ಲಿ ಪ್ರಭೇದಗಳಿರುವುದು ಸರ್ವೇ ಸಾಮಾನ್ಯ. ಆಸ್ತಿಕ ಸಾಹಿತ್ಯವಾದ ವೇದದಲ್ಲಿ ಕರ್ಮಕಾಂಡ (ವೇದ) ಮತ್ತು ಜ್ಞಾನ ಕಾಂಡ (ವೇದಾಂತ)ವೆಂದು ಒಂದು ಬಗೆಯ ಪ್ರಭೇದ ಕಂಡು ಬರುವುದು. ಇವುಗಳನ್ನಾ ಧರಿಸಿಯೇ ಅನುಕ್ರಮವಾಗಿ ಜೈಮಿನೀಯ ಧರ್ಮಸೂತ್ರಗಳು (ಕರ್ಮಸೂತ್ರಗಳು) ಮತ್ತು ಬಾದರಾಯಣನ ಬ್ರಹ್ಮಸೂತ್ರಗಳು (ಶಾರೀರಿಕ ಸೂತ್ರಗಳು) ರೂಪುಗೊಂಡವು. ಇದು

ಕರ್ಮ ಮತ್ತು ಜ್ಞಾನಗಳ ವ್ಯವಸ್ಥೀಕರಣ. ಇವುಗಳೇ ಅನುಕ್ರಮವಾಗಿ ಪ್ರವೃತ್ತಿ ಸಾಹಿತ್ಯ ಮತ್ತು ನಿವೃತ್ತಿ ಸಾಹಿತ್ಯಗಳೆಂದು ಅಥವ ಸಗುಣ ಸಾಹಿತ್ಯ ಮತ್ತು ನಿರ್ಗುಣ ಸಾಹಿತ್ಯಗಳೆಂದೂ ಪ್ರಸಿದ್ಧಿಯನ್ನು ಪಡೆದಿವೆ. ಮೊದಲನೆಯದು ಗೃಹಸ್ಥ ಧರ್ಮದ ಸಾಹಿತ್ಯವಾದರೆ ಎರಡನೆಯದು ಸನ್ಯಾಸ ಧರ್ಮದ ಸಾಹಿತ್ಯವಾಗಿದೆ- ಸನ್ಯಾಸ ಸಾಹಿತ್ಯವೆಂದು ಹೆಸರಿದೆ ಇದಕ್ಕೆ ಸಮಾಧಿ ಸಾಹಿತ್ಯವೆಂದು ಹೆಸರಿರುವಂತೆ ವೈದಿಕ ಸಾಹಿತ್ಯವು ಕರ್ಮ ಕ್ರಿಯಾ ಸಾಹಿತ್ಯವಾಗಿ ಬಹುವಿಪುಲವಾಗಿದೆ. ವೇದಾಂತ ಸಾಹಿತ್ಯವು ಇವುಗಳನ್ನುಳಿದ ತತ್ತ್ವಗಳ ಪ್ರತಿಪಾದನೆಯ ಸಾಹಿತ್ಯವಾಗಿದೆ. ಆದರೆ ಇವೆರಡೂ ಅನುಕ್ರಮವಾಗಿ ಮಾನವನ ಪೂರ್ಣತೆಗೆ ಅವಶ್ಯವೆಂದು ಈ ಭೇದದ ಬಗ್ಗೆ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ. ಈ ದೃಷ್ಟಿಯಿಂದ ಕೂಡ ನೋಡಿದ್ದುಂಟು. ವೇದಸಾಹಿತ್ಯದ ಇನ್ನೊಂದು ಬಗೆಯ ವರ್ಗೀಕರಣವೆಂದರೆ- ೧) ಮಂತ್ರ ಸಾಹಿತ್ಯ, ೨) ಬ್ರಾಹ್ಮಣ ಸಾಹಿತ್ಯ, ೩) ಆರಣ್ಯಕ ಸಾಹಿತ್ಯ ಮತ್ತು ೪) ಉಪನಿಷತ್ ಸಾಹಿತ್ಯ. ಈ ನಾಲ್ಕು ಪ್ರಭೇದಗಳು ಅಥವ ಅವಾಂತರ ಭೇದಗಳು ಅನುಕ್ರಮವಾಗಿ ೧) ಬ್ರಹ್ಮಚರ್ಯ, ೨) ಗ್ರಹಸ್ಥ, ೩) ವಾನಪ್ರಸ್ಥ ಮತ್ತು ೪) ಸನ್ಯಾಸಾಶ್ರಮಗಳಿಗನುಗುಣವಾಗಿ ಮಾಡಿದಂಥವುಗಳು ಎಂದು ಡಾ. ಎಸ್. ರಾಧಾಕೃಷ್ಣನ್ ತಿಳಿಸುತ್ತಾರೆ. ಪ್ರಥಮದ ಮೂರು ಆಶ್ರಮಗಳ ಸಾಹಿತ್ಯ ಪ್ರಕಾರಗಳು ಸಗುಣೋಪಾಸನ ಸಾಹಿತ್ಯವಾದರೆ, ಕೊನೆಯ ಸಾಹಿತ್ಯ ಪ್ರಕಾರವು ನಿರ್ಗುಣೋಪಾಸನ ಸಾಹಿತ್ಯ.

ಅ) ಶೈವಾಗಮ ಸಾಹಿತ್ಯವನ್ನು ಕೂಡ ಅನೇಕ ವಿಧವಾಗಿ ವರ್ಗೀಕರಿಸಿದ್ದಾರೆ- ೧) ಆಗಮ ಸಾಹಿತ್ಯ ಮತ್ತು ೨) ಆಗಮಾಂತ ಸಾಹಿತ್ಯ. ಇದು ವೇದ ಸಾಹಿತ್ಯ ಮತ್ತು ವೇದಾಂತ ಸಾಹಿತ್ಯಗಳೆಂಬ ಭೇದಗಳನ್ನು ಸ್ಮರಣೆಗೆ ತರುತ್ತದೆ. ಆಗಮ ಸಾಹಿತ್ಯವು ಪ್ರವೃತ್ತಿ ಸಾಹಿತ್ಯ. ಆಗಮಾಂತ ಸಾಹಿತ್ಯವು ನಿವೃತ್ತಿ ಸಾಹಿತ್ಯವು. ಈ ಸಾಹಿತ್ಯದಲ್ಲಿ ಬೇರೊಂದು ಬಗೆಯ ಭೇದವಿದೆ: ೧) ಶಿವಾಗಮಗಳು, ೨) ರುದ್ರಾಗಮಗಳು. "ಕಾಮಿಕಾದಿ ಸುಪ್ರಭೇದಾಂತ ಮಾದ ಹತ್ತಾಗಮಂಗಳೇ ಶಿವಭೇದವೆನಿಸಿಕೊಂಬವು. ಮಿಕ್ಕ ವಿಜಯಾದಿ ವಾತುಲಾಂತ ಮಾದ ಹದಿನೆಂಟಾಗಮಂಗಳೇ ರುದ್ರಭೇದವೆನಿಸಿಕೊಳ್ಳುತ್ತಿರ್ಕುಂ" ಎಂದು ನಿಜಗುಣ ಶಿವಯೋಗಿಗಳು ತಿಳಿಸುತ್ತಾರೆ. ಅಭಿನವ ಗುಪ್ತನೆಂಬ ಕಾಶ್ಮೀರ ಶೈವಾಚಾರ್ಯನು ಇದೇ ಬಗೆಯ ಭೇದಗಳನ್ನು ತಿಳಿಸುವನು. ಇವುಗಳಲ್ಲದೆ ಬೇರೆ ೬೪ ಆಗಮಗಳಿರುವದನ್ನು ಅವನು ಗುರುತಿಸಿದ್ದು ಅವುಗಳು ಭೈರವಭೇದವನ್ನುವನು. ಈ ರೀತಿಯ ಭೇದಗಳ ಬಗ್ಗೆ 'ಆಗಮ ಪರಿಜ್ಞಾನ'ವೆಂಬ ಗ್ರಂಥದಲ್ಲಿ ಶ್ರೀಶಂಬುಲಿಂಗ ಶಿವಾಚಾರ್ಯರು ಹೀಗೆ ಬರೆಯುತ್ತಾರೆ: 'ಕಾಮಿಕಾದಿ ಸುಪ್ರಭೇದಾಂತಗಳಾದ ಹತ್ತು ಸಂಹಿತೆಗಳು ಪ್ರಣವನೇ ಮೊದಲಾದ ದಶಶಿವರಿಗೆ ಉಪದೇಶಿಸಲ್ಪಟ್ಟವುಗಳಾದ್ದರಿಂದ ಆ ಹತ್ತು ಸಂಹಿತೆಗಳಿಗೆ ಶಿವಸಂಹಿತೆಗಳೆಂದೂ, ವಿಜಯಾದಿ ವಾತುಲಾಂತಗಳಿಂದ ಹದಿನೆಂಟು

ಸುಹಿತೆಗಳು ಅನಾದಿ ರುದ್ರನೇ ಮೊದಲಾದ ಹದಿನೆಂಟು ಜನ ರುದ್ರರಿಗೆ ಬೋಧಿಸಲ್ಪಟ್ಟವು ಗಳಾದ್ದರಿಂದ ರುದ್ರ ಸಂಹಿತೆಗಳೆಂದೂ ಪ್ರಸಿದ್ಧವಿರುವದರಿಂದ ಆ ೨೮ ಸಂಹಿತೆಗಳೇ ಹತ್ತು ಶಿವಭೇದಗಳೂ, ಹದಿನೆಂಟು ರುದ್ರ ಭೇದಗಳೂ ಎಂದು ಹೇಳಿಸಿಕೊಳ್ಳಲ್ಪಡುವವು." ಇದು ಮಹೌಘಕ್ರಮ ಮತ್ತು ಪ್ರತಿ ಸಂಹಿತಾ ಕ್ರಮ ಉಪದೇಶ ಮೂಲ ವರ್ಗೀಕರಣ.

(ಬ) ಆಗಮಗಳಲ್ಲಿ ಮತ್ತೆ ಬೇರೆ ರೀತಿಯ ವರ್ಗೀಕರಣವಿರುವುದು ಕಂಡು ಬರುತ್ತದೆ. "ವೇದಾಗಮ ಮತ್ತು ಶೈವ ಧರ್ಮದ ಸಂಬಂಧವನ್ನು ಕುರಿತು 'ಕೂರ್ಮ ಪುರಾಣದ ಉತ್ತರ ಭಾಗದಲ್ಲಿ (ಅಧ್ಯಾಯ ೩೮), 'ಮೋಕ್ಷಾರ್ಥವಾಗಿ ಮೊದಲು ನನ್ನಿಂದ ಶ್ರೌತ ಪಾಶುಪತವು ಸ್ಥಾಪಿಸಲ್ಪಟ್ಟಿತು. ವೇದ ಪಾರಾಯಣರು ಇದನ್ನಾಚರಿಸಬೇಕು........ಸನತ್ ಕುಮಾರ ಸಂಹಿತೆಯಲ್ಲಿ–ಶ್ರೌತಾಶ್ರೌತ ವಿಭೇದೇನ ದ್ವಿವಿಧಾಸ್ತು ಶಿವಾಗಮಃ ಎಂದು ವಚನವಿರುವುದು. ವಾಯು ಸಂಹಿತೆಯ ೨೮ನೆಯ ಅಧ್ಯಾಯದಲ್ಲಿಯೂ

"ಶೈವಾಗಮೋಽಪಿ ದ್ವಿವಿಧಃ ಶ್ರೌತೋ ಅಶ್ರೌತಶ್ಚ ಸಂಸ್ಕೃತಃ।
ಶ್ರುತಿಸಾರಮಯಃ ಶ್ರೌತಃ ಸ್ವತಂತ್ರಸ್ತ್ವಿತರೋ ಮತಃ॥"

ಚಂದ್ರ ಜ್ಞಾನಾಗಮ

ಶೈವಾಗಮಗಳ ಭೇದವು ಇಲ್ಲಿ ಶ್ರುತಿಯನ್ನು ಒಪ್ಪುವ ಮತ್ತು ಶ್ರುತಿಯಿಂದನ್ಯವಾದ ಎಂಬ ವಿಚಾರಾಧಾರಿತ. ಈ ಭೇದದಿಂದ ಬೇರೆ ಕಾಣುವ ಆದರೆ ಉದ್ದೇಶವು ಇದನ್ನೇ ಆಧರಿಸಿರುವಂಥದನ್ನು ವಾಯು ಸಂಹಿತೆಯು ತಿಳಿಸುವುದು. ಇದು ಗಮನೀಯ ವಿಚಾರ. ಅದರ ಪ್ರಕಾರ ಆಗಮಗಳು ಶ್ರೌತ ಮತ್ತು ಸ್ವತಂತ್ರ ಎಂದು ಎರಡು ಭೇದಗಳು. ಇದರಲ್ಲಿ ಅಶ್ರೌತ ಪದದ ಬದಲು ಸ್ವತಂತ್ರವೆಂಬ ಪದಪ್ರಯೋಗ ಕಂಡು ಬರುತ್ತದೆ. ಶ್ರೌತ ಮತ್ತು ಸ್ವತಂತ್ರ ಎಂಬ ಪದಗಳ ಸರಿಯಾದ ಅರ್ಥವಾಗಲು ಚಂದ್ರ ಜ್ಞಾನಾಗಮವು ಏನು ಹೇಳು ವದು ಎಂಬುದನ್ನು ನೋಡಬೇಕು. ಈ ಮಾತು ತಿಳಿದುಕೊಳ್ಳುವ ಮೊದಲು ಶ್ರೌತ ಮತ್ತು ಅಶ್ರೌತ ಅಂದರೆ ವೈದಿಕ ಹಾಗೂ ಅವೈದಿಕಗಳ ಬಗ್ಗೆ ಅರಿತುಕೊಳ್ಳುವುದು ಅವಶ್ಯವಿದೆ. ಶ್ರೌತ ಅಂದರೆ ವೈದಿಕ, ಅಶ್ರೌತ ಅಂದರೆ ಅವೈದಿಕವೆಂಬುದನ್ನೇ ಆಚಾರದ ದೃಷ್ಟಿಯಿಂದ ಅರ್ಥೈಸಿದ್ದೂ ಉಂಟು. ಆಗ ಈ ಆಗಮಗಳು ಅನುಕ್ರಮವಾಗಿ ದಕ್ಷಿಣಾ ಚಾರ ಮತ್ತು ವಾಮಾಚಾರದವೆಂದು ಹೆಸರು ಪಡೆದಿವೆ. ವಾಮ ಮಾರ್ಗವೆಂದರೆ ಪಂಚ ಮಕಾರಗಳ ಆಚಾರವೆಂದೇ ಪ್ರಸಿದ್ಧ. ಇದೆಲ್ಲ ಹಿಂಸಾಮಯ ಪೂಜೆಯ ಶಾಸ್ತ್ರ. ಆದರೆ ಚಂದ್ರ ಜ್ಞಾನಾಗಮದ ವಿವರಣೆಯ ಪ್ರಕಾರ ಈ ಅರ್ಥವೇನಾಗುವದಿಲ್ಲ. ಅಶ್ರೌತ ಅಥವ ಸ್ವತಂತ್ರಾಗಮವೆಂದರೆ ಅತ್ಯಾಶ್ರಮ ಆಗಮವೆಂದು ಅರ್ಥ. ಶ್ರೌತಾಗಮಿಕರು ತಿಳಿಸುವ ಅತ್ಯಾಶ್ರಮವೇ ಬೇರೆ, ಅಶ್ರೌತ ಅಥವಾ ಸ್ವತಂತ್ರಾಗಮಿಕರು ತಿಳಿಸುವ ಅತ್ಯಾಶ್ರಮದರ್ಥವೇ ಬೇರೆ. ಈ ಎರಡೂ ಅರ್ಥಗಳು ಶ್ವೇತಾಶ್ವತರೋಪನಿಷತ್ತಿನಷ್ಟು ಪುರಾತನ. ಅಲ್ಲಿ 'ಅತ್ಯಾಶ್ರಮ' ಎಂಬ ಪದದ ಪ್ರಯೋಗವಿದೆ. ಅದರ ವಿವರಣೆ,

ಚಂದ್ರ ಜ್ಞಾನಾಗಮ ಕೊಡುವ ಅದರ (ಅತ್ಯಾಶ್ರಮದ) ವಿವರಣೆ ಒಂದೇ ಬಗೆಯದು. ಆಶ್ರಮ ಧರ್ಮದ ಚೌಕಟ್ಟನ್ನರಿತು ಅದನ್ನು ಬಿಟ್ಟುಕೊಟ್ಟುದೇ ಅತ್ಯಾಶ್ರಮ. ಈ ವಿವರಣೆ ಎ. ಬಿ. ಕೀಥ್ ಕೂಡ ಕೊಟ್ಟಿದ್ದಾನೆ ಅತ್ಯಾಶ್ರಮ ಪದಕ್ಕೆ. ವೀರಶೈವರೂ ಇದೇ ಅರ್ಥವನ್ನು ಕೊಟ್ಟಿದ್ದಾರೆ. ಇವರು ಶ್ರೌತಾಗಮಿಕ ವೀರಶೈವರಾಗಿರದೇ ಅಶ್ರೌತ ಅಥವಾ ಸ್ವತಂತ್ರಾಗಮಿಕ ವೀರಶೈವರು. ಇದಕ್ಕೆ ಪೂರಕ ವಿಚಾರವೊಂದನ್ನಿಲ್ಲಿ ನೋಡಬಹುದು. ವೇದವೆಂದರೆ ಋಗ್ವೇದವೆಂದೇ ಪಾರಂಪರಿಕ ಗ್ರಹಿಕೆ. ಋಗ್ವೇದವಲ್ಲಿಯೇ ವೇದ ವಿರೋಧಿ ಪ್ರಣಾಲಿಯೂ ಇದೆ ವೇದಪರ ಪ್ರಣಾಲಿಯಿರುವಂತೆ. ಇದನ್ನು ಪ್ರೊ. ಎಂ. ಹಿರಿಯಣ್ಣ ಎತ್ತಿ ತೋರಿಸಿದ್ದಾರೆ. ವೇದ ಖಂಡನೆಯ ಧೋರಣೆಯು ಉಪನಿಷತ್ತುಗಳಲ್ಲಿ ವ್ಯವಸ್ಥಿತವಾಗಿ ಪ್ರತಿಪಾದಿತವಾಗಿದೆ. ಸಾಮಾನ್ಯವಾಗಿ ಉಪನಿಷತ್ ಪ್ರಣಾಲಿಯು ತುಂಬಾ ಸ್ವತಂತ್ರ, ಉದಾರ, ಪ್ರಗತಿಪರ. ಕರ್ಮಕಾಂಡದ (ಬ್ರಾಹ್ಮಣಗಳ) ಯಜ್ಞ ಪ್ರಣಾಲಿಯನ್ನು ಉಪನಿಷತ್ತುಗಳು ಟೀಕಿಸಿ ಅದಕ್ಕೆ ಬದಲಿಯ ಉಪಾಸನಾ ವ್ಯವಸ್ಥೆಯನ್ನು ಪ್ರತಿಪಾದಿಸಿವೆ. ವೇದದಿಂದ ಬ್ರಹ್ಮಜ್ಞಾನವಿಲ್ಲವೆಂದು ಹೇಳಿವೆ. ಅದೇ ರೀತಿ ವರ್ಣ, ಲಿಂಗ ಭೇದಾತೀತ ಉಪನಿಷತ್ ಬೋಧೆ. ಇದು ಅವೈದಿಕ ಪ್ರಣಾಲಿ, ಅಶ್ರೌತ ಪ್ರಣಾಲಿ. ಈ ಕಾರಣದಿಂದಲೇ ಮುನಿಸಂಸ್ಕೃತಿಯಿದು. ಈ ಪ್ರಣಾಲಿಯನ್ನುದ್ದೇಶಿಸಿಯೇ ಮೈತ್ರೀ ಉಪನಿಷತ್ತು ಇದು ಇನ್ನೊಂದು ವೇದವೆಂದು ಹೇಳಿದೆ:

ಭ್ರಾಮ್ಯಂಲ್ಲೋಕೋ ನ ಜಾನಾತಿ ವೇದ ವಿದ್ಯಾಂತರಂ ತು ಯತ್।

ಇಲ್ಲಿರುವ ವಿಚಾರವನ್ನು ಎರಡು ಬಗೆಯಿಂದ ಮಾಡಬಹುದು. (೧) ವೇದದಲ್ಲಿ ಎರಡು ವಿದ್ಯೆಗಳಿವೆ. ಭ್ರಮೆಗೊಂಡವರು ಈ ಎರಡು ವಿದ್ಯೆಗಳಲ್ಲಿರುವ ಅಂತರವನ್ನು ತಿಳಿದುಕೊಳ್ಳಲಾರರು. (೨) ವೇದಗಳು ಎರಡು ಇರುತ್ತವೆ. ಭ್ರಮೆಗೊಂಡವರು ವೇದ ಮತ್ತು ವೇದಾಂತವೆಂದು ಹೆಸರಿಸಿ ಆ ಎರಡು ವೇದಗಳಲ್ಲಿರುವ ಅಂತರದರ್ಥವನ್ನರಿಯರು. ಇದರ ಪ್ರಕಾರ ಈಗ ವೇದವೆಂದು ಹೇಳುವ ಶಾಸ್ತ್ರವು ಎರಡು ಪ್ರಭೇದಗಳುಳ್ಳುದು. ಈ ಎರಡು ಬೋಧ ಪ್ರಣಾಲಿಗಳು ಎರಡು ವೇದ ರೂಪವಾಗಿದ್ದು ಒಂದು ಕಾಲದಲ್ಲಿ ಒಂದು ವೇದವು ಅಂದರೆ ವಿದ್ಯಾ ಇಲ್ಲವೆ ಬೋಧ ಪ್ರಣಾಲಿಯು ಪ್ರಧಾನವಾಗಿದ್ದರೆ, ಇನ್ನೊಂದು ಕಾಲದಲ್ಲಿ ಮತ್ತೊಂದು ಪ್ರಣಾಲಿಯು ಪ್ರಧಾನವಾಗಿ ಜನಜೀವನವನ್ನು ರೂಪಿಸುತ್ತ ಬಂದಿವೆ. ಒಂದು ವರ್ಣ ಪದ್ಧತಿಬದ್ಧ ಮತ್ತೊಂದು ವರ್ಣ ಪದ್ಧತಿ ಮುಕ್ತ. ವರ್ಣಪದ್ಧತಿ; ಯಜ್ಞ ಯಾಗಗಳನ್ನು ತಿರಸ್ಕರಿಸಿದ್ದೇ ವರ್ಣ ಪದ್ಧತಿ ಮುಕ್ತ. ಇದು ಅಹಿಂಸಾ ಮಾರ್ಗ ಪ್ರತಿಪಾದಕ; ಉಪಾಸನಾ ವಿದ್ಯೆ ಬೋಧಕ ಸ್ವತಂತ್ರ ವೇದ. ಒಂದು ಬದ್ಧ ವೇದ ವರ್ಣ ಪದ್ಧತಿ ಆಶ್ರಮ ಪದ್ಧತಿ=ಯಜ್ಞ ಪದ್ಧತಿಗಳಿಗೆ ಬದ್ಧ ವೇದವೆಂಬರ್ಥದಲ್ಲಿ. ಇವೆಲ್ಲವುಗಳಿಂದ ಮುಕ್ತವಾಗಿ ಬೇರೆ ವಿದ್ಯೆ ಮತ್ತು ಆಚಾರವುಳ್ಳುದು ಈ ಅರ್ಥದಲ್ಲಿ ಸ್ವತಂತ್ರ ವೇದ. ಇದು ಋಗ್ವೇದದ ರುದ್ರ, ಕೇಶಿ ಮತ್ತು ಮುನಿಗಳ ವೇದ. ಇದೇ ಮಾರ್ಗದವರು ಉಪನಿಷತ್ ಋಷಿಗಳು. ಇದು ಯೋಗ ವಿದ್ಯಾ ಅನುಷ್ಠಾನ ಪರ.

ಇದರ ಪಠ್ಯ ಋಗ್ವೇದದ X ೧೩೬ ಹತ್ತನೆಯ ಮಂಡಲದ ಒಂದನೂರಾ ಮೂವತ್ತಾರನೆಯ ಮಂತ್ರವೆಂದು ಕೀಥ್, ಡಾ|| ಆರ್. ಡಿ ರಾನಡೆ, ಸ್ವೀರ್ಯರ್ ಮೊದಲಾದವರು ತಿಳಿಸಿದ್ದಾರೆ. ಇದು ರುದ್ರ ಮತ್ತು ಕೇಶಿಗಳ ಕುರಿತಿರುವ ಮಂತ್ರ. ಉಪನಿಷತ್ ಯುಗವು ಮನಮುಕ್ತ ಬದುಕಿನ ಸಂಸ್ಕೃತಿಯ ಯುಗವು. ಇದು ವೇದದಲ್ಲಿಯ ವೇದಗಳ ವಿಚಾರ. ಒಂದು ವೇದ ಮತ್ತು ಇನ್ನೊಂದು ವೇದವು ಇಲ್ಲಿ ಘರ್ಷಣೆಯಲ್ಲಿದ್ದರೂ ಅವು ವೇದ ವಿರೋಧವಲ್ಲ. ವೇದದಲ್ಲಿದ್ದುಕೊಂಡೇ ವೇದ ವಿರೋಧವಾಗಿದೆ. ವೇದದ ಕಕ್ಷೆಯಿಂದ ಸಿಡಿದು ಹೋಗುವ ವಿಷಯವಿಲ್ಲಿಲ್ಲ. ಇದು ವೇದ ಕಾಲದಿಂದ ಇಲ್ಲಿಯವರೆಗಿನ ಈ ಸನಾತನ ಸಂಸ್ಕೃತಿಯ ಪ್ರಮುಖ ಲಕ್ಷಣ, ಸಜೀವತೆಯ, ಪ್ರಗತಿಯ ದ್ಯೋತಕ. ಈ ವೇದ ಪ್ರಣಾಲಿಗಳು-ಬದ್ಧ ಮತ್ತು ಸ್ವತಂತ್ರ ವೇದಗಳು ಕೂಡ ಶಿವನಿಂದಲೇ ಸೃಷ್ಟಿಗೊಂಡ ಶೈವಾಗಮಗಳಲ್ಲಿಯೂ ಕೂಡ ಮುಂದುವರೆದದ್ದು ಕಂಡು ಬರುತ್ತದೆ. ಉಪನಿಷತ್ತಿನಂಥ ವಿರೋಧವು ಸ್ವತಂತ್ರಾಗಮದಲ್ಲಿ ಕಂಡು ಬರುತ್ತದೆ. ಇದೇ ಅಶ್ರೌತಾಗಮ ಅಥವಾ ಎರಡನೆಯ ವೇದ ಮೈತ್ರಿ ಉಪನಿಷತ್ತಿನ ಮಾತಿನಲ್ಲಿ. ಈ ವಿವರಣೆಯ ಹಿನ್ನೆಲೆಯಲ್ಲಿ ಚಂದ್ರ ಜ್ಞಾನಾಗಮದ ಮಾತು ಅರ್ಥಪೂರ್ಣ. ಈ ಮಾತು ಆಗಮಗಳಂತೆ, ವೀರಶೈವಕ್ಕೂ ಅನ್ವಯಿಸುತ್ತದೆ.

> ವೀರಶೈವಂ ಪ್ರವಕ್ಷ್ಯಾಮಿ ವಿದಿತಂ ಶ್ರುತಿ ತಂತ್ರಯೋಃ|
> ಶ್ರೌತಂ ಸ್ವತಂತ್ರಮಿತಿ ಚ ದ್ವಿವಿಧಂ ಪರಿಕೀರ್ತಿತಂ
> ವರ್ಣಾಶ್ರಮೀಂತು ಧರ್ಮಾಢ್ಯಂ ಶ್ರೌತಮಿತ್ಯಭಿಧೀಯತೇ|
> ತದೀಯ ಧರ್ಮ ರಹಿತಂ ಸ್ವತಂತ್ರಮಿತಿ ಕಥ್ಯತೇ

ಚಂದ್ರ ಜ್ಞಾನಾಗಮವು ಆಗಮಗಳಲ್ಲಿರುವ ಶ್ರೌತ, ಅಶ್ರೌತಗಳನ್ನೇ ಶ್ರೌತ ಮತ್ತು ಸ್ವತಂತ್ರವೆಂದು ಹೆಸರಿಸಿದೆ. ಈ ಮೂಲಕ ಅದು ಶ್ರೌತವೆಂದರೆ ವರ್ಣಾಶ್ರಮಬದ್ಧ ಆಗಮಧರ್ಮವೆಂದೂ, ಅಶ್ರೌತವೆಂದರೆ ವರ್ಣಾಶ್ರಮ ಮುಕ್ತ ಆಗಮ ಧರ್ಮವೆಂದೂ ಸ್ಪಷ್ಟಪಡಿಸಿದೆ. ಈ ಮಾತು ವೀರಶೈವ ಧರ್ಮವು ವರ್ಣಾಶ್ರಮಯುಕ್ತವೆಂದೂ ವರ್ಣಾಶ್ರಮ ಮುಕ್ತವೆಂದೂ ತಿಳಿಸಿದರೂ ಈ ಆಗಮ ಭೇದವು ಇಡೀ ಆಗಮ ಸಮೂಹ ಭೇದಕ್ಕೂ ಅನ್ವಯಿಸುವುದು. ಆಗಮಶೈವವು ಜಾತಿ ಆಧಾರವಾಗಿಟ್ಟುಕೊಂಡು ಭೇದವಾಗಿರುವುದನ್ನು ಇದೇ ಮಾತಿಗೆ ಪುಷ್ಟಿ ಕೊಡುತ್ತದೆ ಹಾಗೂ ಆಗಮಗಳ ಒಂದು ಬಗೆಯ ವರ್ಗೀಕರಣವು ಇದನ್ನೇ ಸಮರ್ಥಿಸುತ್ತದೆ. ಪುರಾಣ ಹಿಂದೂ ಧರ್ಮದ ಪೂರ್ವದಲ್ಲಿ ಬೆಳೆದು ಬಂದ ವರ್ಣಾಶ್ರಮ ಧರ್ಮವು ಬುದ್ಧ, ಮಹಾವೀರರ ಪ್ರತಿರೋಧವನ್ನು ಎದುರಿಸುತ್ತ ಬಂದು ಈ ಪ್ರತಿರೋಧದ ಮಧ್ಯದಲ್ಲಿಯೇ ಪುರಾಣ-ಹಿಂದೂ ಧರ್ಮವಾಗಿ ಹುಟ್ಟು ಪಡೆಯಿತು. ಪುರಾಣ-ಹಿಂದೂ ಧರ್ಮವು ಬುದ್ಧ, ಮಹಾವೀರರಿಂದ ಮತಾಂತರಗೊಂಡವರನ್ನು ಮತಾಂತರಿಸುತ್ತ ಬಂದರೂ ವರ್ಣಾಶ್ರಮ ಧರ್ಮವು ಶ್ರೌತ

ಮತ್ತು ಅಶ್ರೌತವೆಂಬ ಭೇದವನ್ನು ಉಳಿಸಿಕೊಂಡೇ ಬಂದಿತು. ಪ್ರರಾಣ ಹಿಂದೂ ಧರ್ಮದ ಮಹಾಶಾಖೆಯಾದ ಶೈವ ಧರ್ಮವೇ ಇದಕ್ಕೆ ಸಾಕ್ಷಿ, ಆಗಮ ಭೇದಗಳು ಇದನ್ನು ದೃಢಪಡಿಸುತ್ತವೆ. ಶ್ರೌತ ಧರ್ಮ ಅಥವಾ ಆಗಮವೆಂದರೂ ಪುರಾಣ ಹಿಂದೂ ಧರ್ಮದ ಆಕರ ಗ್ರಂಥಗಳೆ ಎಂಬುದನ್ನಿಲ್ಲಿ ಗಮನಿಸಬೇಕಾದ ಅಂಶ. ಶ್ರೌತ ಆಗಮ ವರ್ಣಾಶ್ರಮ ಶೈವಾಗಮ. ಅಶ್ರೌತ ಅಥವಾ ಸ್ವತಂತ್ರಾಗಮವೆಂದರೆ ವರ್ಣಾಶ್ರಮರಹಿತ ಶೈವಾಗಮ. ಚಂದ್ರಜ್ಞಾನಾಗಮದ ವಿವರಣೆಯ ಪ್ರಕಾರ ವೀರಶೈವರು ವರ್ಣಾಶ್ರಮಿಗಳೂ, ಅತಿ ವರ್ಣಾಶ್ರಮಿಗಳೂ ಎಂಬ ಅರ್ಥವಾಗುತ್ತದೆ. ಅಶ್ರೌತವೆಂದಾಗ ನರಮೇಧ, ಪ್ರಾಣಿ ಮೇಧ ಮಾಡುವದೆಂದೇನಲ್ಲ. ಇದು ವಾಮಾಚಾರಪರ ವಿವರಣೆಯಲ್ಲ. ಇದು ಗಮನಾರ್ಹ ವಿಚಾರ. ಈ ಹೊಸ ಅರ್ಥಚ್ಛಾಯೆಯು ಸನಾತನ ಹಿಂದೂ ಧರ್ಮದಲ್ಲಿಯ ಪ್ರಗತಿಪರ, ಸ್ವತಂತ್ರ, ಸುಧಾರಣಾ ವಿಚಾರ ಪ್ರಣಾಲಿಯಾಗಿದೆ. ಇದು ಹಿಂದೂ ಧರ್ಮಕ್ಕೆ, ಹಿಂದೂ ಸಂಸ್ಕೃತಿಗೆ ಚಿರಂಜೀವತ್ವವನ್ನುಂಟು ಮಾಡಿದೆ. ಸ್ವತಂತ್ರಾಗಮ ವೀರಶೈವವು ಇಂಥ ಪ್ರಗತಿಪರ ಧೋರಣೆಯ ನಿತ್ಯ ನವೀನ ಮನೋಧರ್ಮದ ಧರ್ಮವಾಗಿದೆ. ಇದನ್ನು ಕರ್ನಾಟಕದ ವೀರಶೈವವು ಪ್ರತಿನಿಧಿಸಿದಂತೆ, ಶ್ರೌತಾಗಮ ವೀರಶೈವದ ಆಚಾರವನ್ನು ಆಂಧ್ರದ ಆರಾಧ್ಯರಲ್ಲಿ ಕಾಣುತ್ತೇವೆ.

ಆಗಮಗಳ ವರ್ಗೀಕರಣದಲ್ಲಿ ಹಲವಾರು ಮೂಲಭೂತ ವಿಚಾರಗಳು ಅಡಕ ವಾಗಿರುವುದು ಇಲ್ಲಿಯವರೆಗಿನ ವಿಶ್ಲೇಷಣೆಯಿಂದ ಗೊತ್ತಾಗುತ್ತದೆ. ಇಲ್ಲಿಗೆ ವರ್ಗೀಕರಣ ದಲ್ಲಿಯ ಒಂದು ಹಂತದ ಮಹತ್ವದ ವಿಶ್ಲೇಷಣೆಯು ಮುಕ್ತಾಯ. ಆಗಮಗಳ ವರ್ಗೀಕರಣದ ಹೊಸ ವಿಚಾರವೊಂದರ ವಿಶ್ಲೇಷಣೆ ಇನ್ನು ಮೇಲೆ ಪ್ರಾರಂಭ.

ಆಸ್ತಿಕ ಧಾರ್ಮಿಕ ಸಾಹಿತ್ಯವನ್ನು ಇನ್ನೊಂದು ಬಗೆಯಿಂದ ವರ್ಗೀಕರಿಸಿದ್ದು ಉಂಟು. –ಇದರ ಪ್ರಕಾರ ಈ ಸಾಹಿತ್ಯದಲ್ಲಿ ಪಾದಗಳು, ಸ್ಥಲಗಳು, ಯೋಗಗಳಿವೆ. ಸೂತ್ರ ಸಾಹಿತ್ಯವನ್ನು ಪಾದಗಳಲ್ಲಿ ವರ್ಗೀಕರಿಸಿದ್ದು ಕಂಡುಬರುತ್ತದೆ. ಆಗಮ ಸಾಹಿತ್ಯವನ್ನು ಪಾದಗಳಲ್ಲಿ ವರ್ಗೀಕರಿಸಲಾಗಿದೆ ಕರ್ನಾಟಕದ ವೀರಶೈವ ವಚನ ಸಾಹಿತ್ಯವನ್ನು, ಒಂದೆರಡು ಕಾವ್ಯಗಳನ್ನು ಸ್ಥಲಗಳಲ್ಲಿ ವರ್ಗೀಕರಿಸಿದ್ದುಂಟು. ಗೀತೆಯನ್ನು ಯೋಗಗಳಲ್ಲಿ ವರ್ಗೀಕರಿಸಿದ್ದುಂಟು. ಇಲ್ಲಿ ನೋಡಬೇಕಾದದ್ದು ಆಗಮ ಸಾಹಿತ್ಯದ ವರ್ಗೀಕರಣವನ್ನು ಆಗಮಗಳನ್ನು ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಮತ್ತು ಜ್ಞಾನಪಾದಗಳಲ್ಲಿ ವರ್ಗೀಕರಿಸಲಾಗಿದೆ. ಆದ್ದರಿಂದ ಈ ಸಾಹಿತ್ಯವು ಚತುಷ್ಪಾದ ಸಾಹಿತ್ಯವೆಂದು ಪ್ರಸಿದ್ಧಿ ಪಡೆದಿದೆ.

"ಮತಂಗಪಾರಮೇಶ್ವರಾಗಮದ ಮೊದಲನೆಯ ಪಟಲದಲ್ಲಿಯ
ಚತುಷ್ಪಾದಮಿದಂ ಶಾಸ್ತ್ರಮಾಯಾತಮಮೃತಾತ್ಮಕಂ।...."

ಈ ಸಾಲು ಪ್ರಮಾಣವಾಗಿದೆ. ಈ ಚತುಷ್ಪಾದಗಳ ಹೆಸರುಗಳು ಸ್ವವಿವರಣಾತ್ಮಕವಾಗಿವೆ.

೧) ಡಾ. ಎಸ್. ಸಿ. ನಂದಿಮಠರು ಹೀಗೆ ಬರೆಯುತ್ತಾರೆ—

i) **Kriyapada** dealing with making of objects required for worship. It comprises everything connected with the construction and consecration of temples and images.

ii) **Caryapada,** dealing with the observance of religious' rules and practices such as daily rites, rules of Varnasrama dharma etc;

iii) **Yogapada,** dealing with breath control, method of concentration etc., and

iv) **Jnanapada,** deal ng with the philosophy.

೨) ನಿಜಗುಣರು ಆದಿಯಾಗಿ ಇಲ್ಲಿಯವರೆಗಿನ ಆಗಮ ಸಾಹಿತ್ಯ ವಿದ್ವಾಂಸರೆಲ್ಲರು ಡಾ. ನಂದಿಮಠರು ತಿಳಿಸಿದ ವಿಷಯವನ್ನೇ ಪ್ರತಿಪಾದಿಸಿದ್ದಾರೆ. ಆದರೆ T. M. P. Mahadevan ಹಾಗೂ ತೇವಾರಂ ಪುರಾಣದ ತತ್ತ್ವ ಮತ್ತು ಧರ್ಮಗಳ ಅಧ್ಯಯನವನ್ನು ಮಾಡಿದ ರಂಗಸ್ವಾಮಿ ಪಿಳ್ಳೈ ಅವರು ಮಾಡಿದ ಪಾದಗಳ ವಿವರಣೆ ಆ ಗ್ರಂಥವನ್ನಾಧರಿಸಿದ್ದು, ಮಹತ್ವದ ಹೊಸ ಪ್ರಕಾಶವನ್ನು ಚತುಷ್ಪಾದಗಳ ಮೇಲೆ ಚೆಲ್ಲುತ್ತವೆ.

T.M. P. Mahadevan ಅವರು Saints of India ಎಂಬ ಗ್ರಂಥದಲ್ಲಿ ಹೀಗೆ ಬರೆಯುತ್ತಾರೆ.

i) Charya which consists of external acts of worship like cleaning the temples, gathering flowers for the Deity etc. this is the path of servant **(dasamarga),** which leads to residence in the realm of God **(salokya);** (2) **Kriyapada** which is characterised by acts of intimate service to God, such as those that a son may render to his sire; hence this is called the path of son **(satputramarga),** whose goal is to be attaining the nearness of God **(samipya);** (3) **Yogapada** which stands for contemplation and internal worship; this is the path of friend **(sakhamarga),** whose aim is gaining the form of God **(sarupya)** and (4) **Jnanamarga,** which means knowledge or wisdom, the path of supreme good **(sanmarga),** whose fruit is the ultimate end which is the final union with God **(sayujya).**

ಈ ವಿವರಣೆಯು ಮಹತ್ವದ ವಿಚಾರವನ್ನು ಅರಿಯುವದರ ಜೊತೆಗೆ ಇದರಿಂದ ತುಸು ಭಿನ್ನವಾದ ಇನ್ನೊಂದು ಗಮನಾರ್ಹ ವಿಚಾರವನ್ನು ದೊರೆಯು ರಂಗಸ್ವಾಮಿ

ಪಿಳ್ಳೈ ತಿಳಿಸುವರು. ಇವೆರಡು ಒಂದರಿಂದೊಂದು ಹೇಗೆ ಭಿನ್ನ, ಏಕೆ ಭಿನ್ನವೆಂಬುದನ್ನರಿಯುವುದು ಮಹತ್ವದ ವಿಚಾರ. ಪಿಳ್ಳೈ ಹೀಗೆ ತಿಳಿಸುವರು:

It is important to note that in every one of these four, there are four further stages making in all sixteen—carya in carya, kriya in carya, yoga in carya and jnana in carya.... ಅವರು ಈ ಸಂದರ್ಭದಲ್ಲಿ ಇನ್ನೂ ಹೇಳುವುದೇನೆಂದರೆ—These are described as the rising rungs of ladder. Carya, kriya and yoga are included under the head of sadhana ritual. ಈ ವಿಚಾರಗಳು Religion and Philosophy of Tewaram ಗ್ರಂಥದ ೧೧೨೨ನೇ ಪಟದಲ್ಲಿ ಬರೆಯಲ್ಪಟ್ಟಿವೆ. ಇದು ಆಗಮ ಪಾದಗಳ ಸಮುಚ್ಚಯೀಕರಣಗಳಲ್ಲಿ ಒಂದು ಪ್ರಕಾರವಾಗಿದೆ. T. M. P. Mahadevan ಅವರ ಪ್ರಕಾರ ಪ್ರತಿಯೊಂದು ಪಾದವು ಒಂದು ಬಗೆಯ ಮುಕ್ತಿಯ ಶಾಸ್ತ್ರವಾಗಿದೆ.

ಆಧುನಿಕ ವಿದ್ವಾಂಸರೂ ಪುರಾತನರಂತೆ ನಿಗಮಾಗಳ ಸಂಬಂಧವನ್ನು ತೋರಿಸಿದ್ದಾರೆ. ಆಧುನಿಕ ಘನವಿದ್ವಾಂಸರಲ್ಲಿ ಒಬ್ಬರಾದ ಶ್ರೀ ಶಂಭುಲಿಂಗ ಶಿವಾಚಾರ್ಯರು ಈ ಕಾರ್ಯ ಮಾಡಿದವರಲ್ಲಿ ಒಬ್ಬರು. ಆಗಮ ಪರಿಜ್ಞಾನ ಗ್ರಂಥದಲ್ಲಿ ಹೀಗೆ ಬರೆಯುತ್ತಾರೆ:

ವೈದಿಕೀಶ್ರುತಿಯು ವರ್ಣಾಶ್ರಮಗಳ ಆಚಾರ ಕ್ರಮವನ್ನು ವಿಧಿಸುವಂತೆ, ತಾಂತ್ರಿಕೀ ಶ್ರುತಿಯೆನಿಸುವ ಸಿದ್ಧಾಂತಾಗಮ ವೃಂದವಾದರೂ ವಿಧಿಸುವುದು. ಶ್ರೀ ಮೃಗೇಂದ್ರಾಗಮದ ವಿದ್ಯಾಪಾದದ ಆರಂಭ ಶ್ಲೋಕದ ವೃತ್ತಿಯ ದೀಪಿಕೆಯಲ್ಲಿ ಅಘೋರ ಶಿವಾಚಾರ್ಯರಿಂದ ಉದ್ಧೃತವಾದ—

ಇತಿ ವರ್ಣಾಶ್ರಮಾಚಾರಾನ್ ಮನಸಾಪಿನ ಲಂಘಯೇತ್।
ಯೋ ಯಸ್ಮಿನ್ನಾಶ್ರಮೇ ತಿಷ್ಠನ್ ಪ್ರಾಪ್ತೋದೀಕ್ಷಾಂ ಶಿವಾತ್ಮಿಕಮ್॥
ಸ ತಸ್ಮಿನ್ ಏವ ಸನ್ತಿಷ್ಠೇತ್ ಶಿವಧರ್ಮಂ ಚ ಪಾಲಯೇತ್॥

ಎಂಬ ಶ್ರೀ ಮದ್ಭಾರ್ಗವ (ಭರ್ಗಶಿಖೆಯೆಂಬ ಆಗಮಶಾಖೆಯ) ವಾಕ್ಯಾನುಸಾರವಾಗಿ ಶಿವಾಗಮಗಳಲ್ಲಿ ವರ್ಣಾಶ್ರಮಾಚಾರ ಕ್ರಮವು ಬೋಧಿಸಲ್ಪಡುವವೆಂದೇ ಸಿದ್ಧವಾಗುವುದು ಹಾಗೂ ದಿವ್ಯಾಗಮ ರಹಸ್ಯಾರ್ಥ ಬೋಧಕರಲ್ಲಿ ಮುಂದಾಳುಗಳಾದ ಶ್ರೀಸದ್ಯೋಜ್ಯೋತಿ ಶಿವಾಚಾರ್ಯರು ಮೋಕ್ಷಕಾರಿಕೆಯಲ್ಲಿ—

ನ ಚ ಸ್ವರ್ಗೋಽಚರೇ ತಾಸಾಂ ಬಾಧತೇ ತತ್ಪ್ರಮಾಣವತ್।
ತಾಸು ವರ್ಣಾಶ್ರಮಾಚಾರಾನಭ್ಯನು ಜ್ಞಾತವಚ್ಚ ತತ್ ॥ ೧೪೩ ॥

ನ ಚಾನ್ಯೇನ ಪ್ರಮಾಣೇನ ಸಂರುದ್ಧಸ್ತಸ್ಯ ಗೋಚರಃ।
ಶ್ರೋತ್ರಿಯೈರಪ್ಯತೋಗ್ರಾಹ್ಯಂ ತತ್ಫಲಾಧಿಕ ಸಾಧನಂ ॥೧೪೭॥

ಎಂಬೀ ವಾಕ್ಯಗಳಿಂದ ವೈದಿಕೀ ಶ್ರುತಿಗಳಲ್ಲಿ ವರ್ಣಾಶ್ರಮಾಚಾರ ಕ್ರಮವು ವಿಧಿಸಲ್ಪಡು ವಂತೆ ತಾಂತ್ರಿಕೀ ಶ್ರುತಿಗಳಲ್ಲಿಯೂ ವರ್ಣಾಶ್ರಮಾಚಾರದ ಕಟ್ಟಳೆಯಿರುವ ಕಾರಣ, ವೇದಗಳಂತೆ ಆಗಮಗಳಾದರೂ ಅಬಾಧಿತ ಪ್ರಮಾಣ ರೂಪಗಳಾಗಿರುವುದರಿಂದ ಶಿವಾಗಮ ಸಮುದಾಯ ರೂಪ ಸಿದ್ಧಾಂತವು ಶ್ರೋತ್ರೀಯರಿಂದ ಗ್ರಹಿಸಲ್ಪಡತಕ್ಕದಾಗಿ ರುವುದೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ....ಅದು ಕಾರಣವೇ ಪ್ರಾಚೀನಾಚಾರ್ಯರು, ಆಸ್ತಿಕರಿಗೆ ವೇದಗಳಲ್ಲಿಯೂ ದಿವ್ಯಾಗಮಗಳಲ್ಲಿಯೂ ಸಮಾನವಾದ ಪ್ರಮಾಣ ಬುದ್ಧಿ ಯನ್ನೂ, ಆದರ ಭಾವವನ್ನೂ ನೆಲೆಗೊಳಿಸುವ ಉದ್ದೇಶದಿಂದ ಆ ವಿಷಯವಾಗಿ ತಾವು ಶಿಷ್ಯರಿಗೆ ಸಾಕ್ಷಾತ್ತಾಗಿ ಬೋಧಿಸುವ ಪ್ರಸಂಗದಲ್ಲಿಯೂ ಘಂಟಾಘೋಷವಾಗಿ ಹೇಳಿ ದ್ದಾರೆ." ಸಮಾನ ವಿಷಯ ಪ್ರತಿಪಾದಿಸುವ ಆಗಮಗಳು ವೇದದಂತೇ ಪ್ರಮಾಣಗ್ರಂಥ ಗಳೆಂದು ಸಿದ್ಧಮಾಡಿದ್ದಾರೆ.

ಶ್ರೀ ಶಂಭುಲಿಂಗ ಶಿವಾಚಾರ್ಯರು, ಸಿದ್ಧರಾಮಪ್ಪ ಪಾವಟೆಯವರು, ಡಾ. ಎಸ್. ಸಿ. ನಂದಿಮಠರು ಆಗಮಗಳು ವರ್ಣಾಶ್ರಮಧರ್ಮ ಬೋಧಿಸುವವು ಎಂಬುದನ್ನು ಪಾರಮೇಶ್ವ ರಾಗಮದ ಶ್ಲೋಕಗಳು ಸಮರ್ಥಿಸುವವು:

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ|
ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮ ಸಮಾಶ್ರಿತಾಃ||
ಶಿವಾಚಾರರತಾ ನಿತ್ಯಂ ಲಿಂಗಪೂಜಾ ಪರಾಯಣಾಃ|
ಶಿವಾರಾಧ್ಯಾಃ ಸದಾ ದೇವೀ ಮಮಾತಿ ಪ್ರಿಯಕಾರಿಣಃ||
ಶುದ್ಧಶೈವಾಃ ಸಮಾಖ್ಯಾತಾಃ ಗೃಹಸ್ಥಾ ಗೃಹಿಣೀಯುತಾಃ|

ಈ ಶ್ಲೋಕಗಳು ಶೈವ, ವೀರಶೈವಗಳು ಶ್ರೌತಾಗಮಧರ್ಮ ಅಂದರೆ ವರ್ಣಾಶ್ರಮ ಧರ್ಮಗಳು ಎಂಬುದನ್ನು ತಿಳಿಸುತ್ತವೆ. ಈ ಮೊದಲು ತಿಳಿದುಕೊಂಡಂತೆ ಶ್ರೌತ ಆಗಮ ಮತ್ತು ಅಶ್ರೌತ ಅಂದರೆ ಸ್ವತಂತ್ರಾಗಮಗಳು ಎಂಬ ಎರಡು ಆಗಮ ಭೇದಗಳನ್ನು ತಿಳಿದುಕೊಂಡಿದ್ದೇವೆ. ಆ ಮಾತುಗಳು ವೀರಶೈವವು ಶ್ರೌತಾಗಮ ಪ್ರತಿಪಾದಿತವೆಂಬು ದನ್ನಿದು ತಿಳಿಸಿ ವರ್ಣಾಶ್ರಮ ಪರವಾದ ವೀರಶೈವವೆಂಬುದಿಲ್ಲ ಗೊತ್ತಾಗುತ್ತದೆ. ಸ್ವತಂತ್ರಾ ಗಮದ ವೀರಶೈವವು ವರ್ಣಾಶ್ರಮ ವಿರೋಧವಾದುದೆಂಬುದು ಇಲ್ಲಿ ಇಲ್ಲ. ಒಂದೇ ಬಗೆಯ ವೀರಶೈವದ ಚಿತ್ರಣವಿಲ್ಲಿದೆ. ಇದರ ಪ್ರಕಾರ ವೀರಶೈವ ಬ್ರಾಹ್ಮಣನು ಶಿಖಾ ಮತ್ತು ಯಜ್ಞೋಪವೀತಗಳುಳ್ಳವನು. ಈತನು ಯಜ್ಞೋಪವೀತ ಧರಿಸುವದರ ಜೊತೆ ಲಿಂಗಧಾರಿಯೂ ಅಹುದು. ಕರ್ಮಲತೆಯಂತಿದ್ದ ಈ ಉಪವೀತವನ್ನು ಹರಿದು ಲಿಂಗ ವನ್ನಷ್ಟೆ ಉಳಿಸಿಕೊಂಡುದಿಲ್ಲಿ ಸ್ಮರಣೀಯವಾಗಿದೆ. ಟಿ. ಎನ್. ಮಲ್ಲಪ್ಪ ಅವರು ಕ್ರಿಯಾಶಕ್ತಿ ವಿದ್ಯಾರಣ್ಯವೆಂಬ ಗ್ರಂಥದಲ್ಲಿ 'Kereya Padmarasa who is referred to, by Virupax Pandita as a good Brahmin Veerasaiva'

ಎಂಬುದು ಕರ್ನಾಟಕದಲ್ಲಿ ವರ್ಣಾಶ್ರಮ ಧರ್ಮಪರ ವೀರಶೈವವು ಇದ್ದಿತೆಂಬುದನು ದೃಢ ಪಡಿಸುತ್ತದೆ ಬಸವಣ್ಣನವರು ಪ್ರತಿಷ್ಠಾಪಿಸಿದ ವೀರಶೈವದ ಜೊತೆಯಲ್ಲಿ. ಇದೇ ಮಾತನ್ನು ಡಾ. ಎಸ್. ರಾಧಾಕೃಷ್ಣನ್ ಹೀಗೆ ಹೇಳುತ್ತಾರೆ. **''Basava gave to Veerasaivism a prophetic turn and a popular appeal''.**

ವರ್ಣಾಶ್ರಮಪರ ವೀರಶೈವವು ಆಂಧ್ರದ ಆರಾಧ್ಯರಲ್ಲಿ ನೋಡಲು ದೊರೆವುದು. ವರ್ಣಾಶ್ರಮ ವಿರೋಧಿ ವೀರಶೈವವು ನಿಜಾಮ ಕರ್ನಾಟಕ ಮತ್ತು ಮುಂಬೈ ಕರ್ನಾಟಕ ಗಳಲ್ಲಿ ಸುಪ್ರಸಿದ್ಧ ಜನಪ್ರಿಯ ಧರ್ಮ. ವೇದ ಕರ್ಮವನ್ನು ಬಸವಣ್ಣನವರು ಬೋಧಿಸಿದ ವೀರಶೈವವು ಖಂಡಿಸುತ್ತದೆ. ಇದೇ ವೇಳೆಗೆ ಉಪನಿಷದ್ರೂಪವಾದ ವೇದವನ್ನು ಪ್ರಮಾಣವೆಂದು ಅಥವಾ ಆಪ್ತವಾಕ್ಯವೆಂದು ಬಗೆದಿದೆ. ಬಸವಣ್ಣನವರ ವಚನಗಳಲ್ಲಿ ಎರಡು ವಿಚಾರಗಳನ್ನು ನೋಡಬಹುದು. (೧) 'ವೇದದ ಮೂಗು ಕೊಯ್ಯುವೆ, ಆಗಮಕ್ಕೆ ನಿಗಳವನಿಕ್ಕುವೆ', 'ವೇದವನೋದಿದವರ ಮುಂದೆ ಅಳು ಕಂಡೆಯಾ ಹೋತೆ', 'ವೇದವೆಂಬುದು ಹೋತಿಂಗೆ ಮಾರಿ'. (೨) "ಸ್ವಾಮಿ ನೀನು ಶಾಶ್ವತ ನೀನು"; ಎತ್ತಿದೆ ಬಿರುದ ಜಗವೆಲ್ಲರಿಯಲು. "ಮಹಾದೇವ ಮಹಾದೇವಃ" ಇಲ್ಲಿಂದ ಮೇಲೆ ಶಬ್ದವಿಲ್ಲ! ಪಶುಪತಿ ಜಗಕ್ಕೆ ಏಕೋದೇವಃ ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೆ ದೇವ ಕೂಡಲ ಸಂಗಮದೇವ. ಶ್ರುತಿಗಗವ್ಯ, ದ್ವಾದಶಾಂತ್ಯನಪ್ರತಿಮ ಮಹಿಮಂಗೆ ಪ್ರತಿಯುಂಟೆ? "ಸೋಮಃ ಪವತೇ" ಎಂಬ ಶ್ರುತಿಯನರಿತು, ಶಿವ, 'ನೇಕೋದೇವ, ರುದ್ರನದ್ವಿತೀಯ ನೆ'ಂದು ನಂಬುವುದು ಕಾಣೆರಣ್ಣಾ. ಅದೇ ರೀತಿ 'ಕೂಡಲಸಂಗಮನಲ್ಲದೆ ಇಲ್ಲ'ವೆಂದೆತ್ತಿದೆ ಬಿರುದ ಜಗವೆಲ್ಲರಿಯಲು. ಉಪ್ಪರಗುಡಿ, ನಂದಿವಾಹನ, ಸದ್ಯೋಜಾತನ ಬಾಗಿಲ ಮುಂದೆ ಸಾರುತ್ತೈದಾವೆ, ನೋಡಾ, ಶ್ರುತಿಗಳೂ ನಾಲ್ಕು ವೇದವೂ ಹುಸಿಯದೆ 'ಭರ್ಗೋದೇವಸ್ಯ ಧೀಮಹಿ' ಎಂದುದಾಗಿ—ಕೂಡಲಸಂಗಮನಲ್ಲದಿಲ್ಲೆಂದಿತ್ತು ವೇದ. 'ವೇದ ಸ್ವಯಂಭು'ವೆಂಬ ವಾದಿ ನೀ ಕೇಳೆಲವೋಃ 'ಏಕೋದೇವ ರುದ್ರನದ್ವಿತೀಯ'ನೆಂದು ನಂಬುವುದು ಕಾಣೆರಣ್ಣಾ....ಜಗದಕರ್ತ ಕೂಡಲಸಂಗಮದೇವನೊಬ್ಬನೇ, ಕಾಣೆರಣ್ಣಾ. ಶ್ರುತಿತಲೆಯ ಶಿರದ ಮೇಲೆ 'ಅತ್ಯತಿಷ್ಠದ್ದಶಾಂಗುಲ'ನ ನಾನೇನೆಂಬೆನಯ್ಯಾ,....'ಅಣೋ ರಣೀಯಾನ್ ಮಹತೋ ಮಹೀಯಾನ್' ಮಹಾದಾನಿ ಕೂಡಲಸಂಗಮ....ವಿಶ್ವತಸ್ ಚಕ್ಷು ನೀನೇ, ದೇವಾ; ವಿಶ್ವತೋಮುಖ ನೀನೆ, ದೇವಾ; ವಿಶ್ವತಃ ಪಾದ ನೀನೇ, ದೇವಾ; ಕೂಡಲಸಂಗಮದೇವಾ. ಇಬ್ಬರು, ಮೂವರು ದೇವರೆಂದು ಉಬ್ಬಿ ಮಾತಾಡಬೇಡ; ಒಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿ ನೋಡಾ! ಕೂಡಲಸಂಗಮದೇವನಲ್ಲದೆ ಇಲ್ಲೆಂದಿತ್ತು ವೇದ. ಈ ಎಲ್ಲ ವಚನಗಳು ಬಸವಣ್ಣನವರು ಬೋಧಿಸಿದ ವೀರಶೈವ ಧರ್ಮವು ವರ್ಣಾಶ್ರಮ ಕರ್ಮ ಧರ್ಮದಿಂದಭಿನವಾದುದೆಂದು ತೋರಿಸುವುದು—(ಅಶ್ರೌತ ಧರ್ಮ). ಇದೇ ಕಾಲಕ್ಕೆ ಅದು ವೇದತತ್ತ್ವಜ್ಞಾನವನ್ನು ಮನ್ನಿಸಿದೆ, ಉಪನಿಷತ್ತು ಗಳನ್ನು ಆಪ್ತವಾಕ್ಯವೆಂದು ಸ್ವೀಕರಿಸಿದೆ. ಈ ಧರ್ಮವು ವೇದಾಂತ ಅಥವಾ ಉಪನಿಷತ್ತಿನ

ಅತ್ಯಾಶ್ರಮ ಅಥವಾ ಅತಿವರ್ಣಾಶ್ರಮ ಧರ್ಮವು. ಸಿದ್ಧರಾಮಪ್ಪ ಪಾವಟೆಯವರು ವೇದವು ಹೇಳಿದ ತತ್ತ್ವಗಳನ್ನು ಅನುಭವಕ್ಕೆ ತಂದುಕೊಡಲು ಬೇಕಾಗಿರುವ ಆಚಾರ ವಿಚಾರಗಳನ್ನೂ ಸಾಧನಗಳನ್ನೂ ಶಿವಾಗಮವು ಬೋಧಿಸುತ್ತದೆ. ಡಾ. ಪಿ. ಜಿ. ಹಳಕಟ್ಟಿ ಯವರು ವಚನಶಾಸ್ತ್ರಸಾರ ಭಾಗ ೧ ಮೊದಲನೇ ಆವೃತ್ತಿಯ ಪ್ರಸ್ತಾವನೆಯಲ್ಲಿ ಅನ್ನುವ ದೇನೆಂದರೆ, "....ಇವುಗಳಲ್ಲಿ ವೇದೋಪನಿಷತ್ತುಗಳಲ್ಲಿಯ ಮಹತ್ವದ ತತ್ತ್ವಗಳೇ ಅಡಕ ವಾಗಿವೆ....ಆಗಮ ಗ್ರಂಥಗಳಿಗೂ ವಚನಕಾರರ ತತ್ತ್ವಗಳಿಗೂ ಪ್ರತ್ಯಕ್ಷ ಸಂಬಂಧವುಂಟು, ಆಗಮಗಳಲ್ಲಿಯೇ ಷಟ್‌ಸ್ಥಲದ ವಿವರಣೆ ಇರುತ್ತದೆ....ಅವರ ತತ್ವಗಳೆಲ್ಲ ವೇದಾಗಮೋಪ ನಿಷತ್ತುಗಳೊಳಗಿಂದಲೇ ತೆಗೆದುಕೊಂಡಿರುತ್ತವೆ ಮತ್ತು ಅವರ ವಚನಗಳಲ್ಲಿ ಅವುಗಳಲ್ಲಿಯ ಅವತರಣಗಳು ತುಂಬಿಹೋಗಿರುತ್ತವೆ." ಆಗಮಗಳಲ್ಲಿ ವರ್ಣಾಶ್ರಮ ಧರ್ಮದ ಪ್ರತಿಪಾದನೆ ಯಿದೆ. ಅದೇ ರೀತಿ ಆಗಮಗಳಲ್ಲಿ ಉಪನಿಷತ್ತುಗಳು ತಿಳಿಸುವ ಲಿಂಗವಿಲ್ಲದವನಿಗೆ ಮೋಕ್ಷವಿಲ್ಲ, ಅತ್ಯಾಶ್ರಮಿಗೆ ಮೋಕ್ಷವಿದೆ, ತಾನು ಹಾಗೂ ದೇವರು ಬೇರೆ ಬೇರೆ ಎಂದು ಯಜಿಸುವವನು ದೇವರಿಗೆ ಬಲಿಪಶುವಾಗುವನು, ಭರ್ಗನೇ ಮಹಾದೇವ ಮೊದಲಾದ ವಿಚಾರಾಚಾರಗಳೂ ಕೂಡ ಉಂಟು. ಸೂಕ್ಷ್ಮಾಗಮಪಟಲ ೩. ಶ್ಲೋಕ ೧೦೫; ಪಾರಮೇ ಶ್ವರಾಗಮ ಪಟಲ ೧೧. ಶ್ಲೋಕ ೪; ಸೂಕ್ಷ್ಮ ಆಗಮ ಪಟಲ ೩. ಶ್ಲೋಕ ೧೧೨; ಅದೇ ಆಗ ಮದ ಪಟಲ ೩. ಶ್ಲೋಕ ೯ಗಳು ವೇದಾಗಮಗಳ ಸಂಬಂಧ ತೋರಿಸುವವು. ಪಂ. ವೈ. ನಾಗೇಶ ಶಾಸ್ತ್ರಿಗಳು–"ವೇದಾಗಮಗಳಿಗೆ ಶಿವೈಕ್ಯ ಕರ್ತೃತ್ವವಿರುವುದರಿಂದ ಅವುಗಳಿಗೆ ಪರಸ್ಪರ ವಿರೋಧವಿಲ್ಲದೆ ಏಕತ್ತ್ವವೇ ಸಿದ್ಧವಾಗುವುದು. ವೇದವು ಶಿವನ ವಿಶ್ವಾಸಜನ್ಯವು, ಆಗಮವು ಶಿವ ಮುಖೋಧಿತವಾಗಿದೆ." ಇದೆಲ್ಲ ದ್ವಿವಿಧ ವೇದ ಪ್ರತಿಪಾದಿತ ವಿಷಯ ಹಾಗೂ ಆಗಮಗಳಿಗಿರುವ ಸಂಬಂಧವನ್ನು ತಿಳಿಸುವದು; ಅದೇ ರೀತಿ ಸ್ವತಂತ್ರಾಗಮ ಹಾಗೂ ಅಶ್ರೌತಾಗಮಗಳ ಹೊಸ ಅರ್ಥವು ಪ್ರಮಾಣಪೂರ್ವಕ ಎತ್ತಿತೋರಿಸುತ್ತದ.

**ಶೈವಾಗಮಗಳಲ್ಲಿಯ ಶೈವ ಪ್ರಭೇದಗಳು:**

ಶಿವಾಗಮಗಳಲ್ಲಿ, ಸ್ಕಂದಪುರಾಣ, ಲಿಂಗಪುರಾಣ, ಶಿವಧರ್ಮೋತ್ತರ, ಶಿವತತ್ತ್ವ ಪ್ರಕಾಶಿಕೆ ಹಾಗೂ ವೀರಶೈವ ಸದಾಚಾರ ಸಂಗ್ರಹದಂಥ ಪ್ರಕರಣ ಗ್ರಂಥಗಳಲ್ಲಿ ಶೈವ ಪ್ರಭೇದಗಳು ಚಿತ್ರಿಸಲ್ಪಟ್ಟಿವೆ. ಶಿವಶರಣರ ವಚನಗಳಲ್ಲಿಯೂ ಶೈವಭೇದಗಳ ಉಲ್ಲೇಖ ವಿದೆ. ವಚನಗಳು ಶೈವಪ್ರಭೇದಗಳನ್ನು ಉಲ್ಲೇಖಿಸುವ ಉದ್ದೇಶ, ಸಂದರ್ಭಗಳೇ ಬೇರೆ. ಆಗಮಗಳು ತಿಳಿಸುವ ರೀತಿಯೇ ಬೇರೆ. ಶೈವಗಳಲ್ಲಿ ಸಾತ್ವಿಕ ಮತ್ತು ತಾಮಸ ಪೂಜೆ ಗಳೆಂಬ ಭೇದಗಳು ಇರುತ್ತವೆ ಉಪಾಸನೆಯನ್ನು ಕುರಿತು. ವೇದಗಳಲ್ಲಿಯ ಹಿಂಸಾತ್ಮಕ ಯಜ್ಞಗಳು, ಶೈವಗಳಲ್ಲಿಯ ಹಿಂಸಾತ್ಮಕ ಉಪಾಸನೆಗಳು ಒಂದನ್ನೊಂದು ಹೋಲುತ್ತವೆ. ಉಪನಿಷತ್ತುಗಳು ಬೋಧಿಸುವ ಸಾತ್ವಿಕ ಅಥವಾ ಅಹಿಂಸಾತ್ಮಕ ಉಪಾಸನಗಳಂತೆ ಆಗಮಗಳಲ್ಲಿ ಸಾತ್ವಿಕ ಅಥವಾ ಅಹಿಂಸಾತ್ಮಕ ಉಪಾಸನೆಗಳು ಇವೆ. ಸಪ್ತಶೈವಗಳು ಮತ್ತು ವೀರಶೈವವು ಉಪನಿಷತ್ತುಗಳ ಉಪಾಸನೆಯಂಥ ಅಹಿಂಸಾತ್ಮಕ ಉಪಾಸನ

ಪರವಿದೆ. ಪ್ರಸ್ತುತ ಪ್ರಬಂಧದಲ್ಲಿ ಸಾತ್ವಿಕಾಚಾರದ ಶೈವಗಳ ಅಧ್ಯಯನವಿದೆ.

ವೀರಶೈವ ಸದಾಚಾರ ಸಂಗ್ರಹ ಎಂಬ ಗ್ರಂಥವು ಉದ್ಧರಿಸಿರುವ ಹಲವಾರು ಪ್ರಾಚೀನ ಗ್ರಂಥಗಳಲ್ಲಿ ವೀರಶೈವ ಪ್ರಕಾಶಿಕೆ ಒಂದು. ವೀರಶೈವ ಪ್ರಕಾಶಿಕೆಯು ಶೈವದಲ್ಲಿ ಪ್ರಮುಖ ಎರಡು ಭೇದಗಳನ್ನು ತಿಳಿಸುತ್ತದೆ, ಅದನ್ನೀಗ ನೋಡುವ.

ಶೈವಂ ಚ ವೀರಶೈವಂ ಚ ದ್ವಿವಿಧಂ ಶೈವಮೀರಿತಮ್|
ಶೈವಂ ಸಪ್ತವಿಧಂ ಜ್ಞೇಯಂ ವೀರಶೈವ ಚತುರ್ವಿಧಮ್||

ಪ್ರಕರಣ ೮. ಶ್ಲೋ. ೨.

ಶೈವವು ಎರಡು ಪ್ರಕಾರವಾಗಿದೆ– (೧) ಶೈವ, (೨) ವೀರಶೈವ. ಶೈವವು ಏಳು ಪ್ರಕಾರವಾಗಿದೆ. ವೀರಶೈವವು ನಾಲ್ಕು ಪ್ರಕಾರವಾಗಿದೆ. ವೀರಶೈವ ಸದಾಚಾರ ಸಂಗ್ರಹ ದಂತೆ ಸೂಕ್ಷ್ಮಾಗಮವೂ ಸಪ್ತ ಶೈವದ ವಿವರಣೆ ಕೊಡುತ್ತದೆ. ಅದು ಹೀಗೆ:

ಶೈವಂ ಸಪ್ತವಿಧಾಜ್ಞೇಯಾಸ್ತೇಷಾಂ ಭೇದಾನ್ ಶ್ರುಣುಕ್ರಮಾತ್
ಅನಾದಿ ಶೈವಃ ಪ್ರಥಮ ಆದಿಶೈವಸ್ತತಃ ಪರಮ್|
ಮಹಾಶೈವಸ್ತತೋಜ್ಞೇಯಸ್ತ್ವನು ಶೈವಸ್ತತಃ ಪರಮ್
ಅವಾಂತರಸ್ತತೋಜ್ಞೇಯಃ ಪ್ರವರಸ್ತದನಂತರಮ್|
ಅಂತ್ಯ ಶೈವಸ್ತತೋಜ್ಞೇಯಸ್ತೇಷಾಂ ಲಕ್ಷಣಮುಚ್ಯತೇ

೧) ಅನಾದಿಶೈವ–ಶಿವನೇ ಅನಾದಿಶೈವನು, ಇವನೇ ಶೈವದ ಮೂಲಪುರುಷ. ತನಗೆ ತಾನೇ ನಿಮಿತ್ತ ಮತ್ತು ಉಪಾದಾನ ಕಾರಣ–ತನ್ನಿಂದ ತಾನದವನು, ನಿರಾಲಂಬನು, ಆದ್ದರಿಂದೀತ ಅನಾದಿ ತನ್ನನ್ನು ತಾನೇ ಅರ್ಚಿಸಿಕೊಂಬನಾಗಿ ತನ್ನಿಂದನ್ಯ ಪೂಜ್ಯ ವಸ್ತುವಿಲ್ಲ ಪ್ರಥಮ ಗುರು ಪ್ರಥಮ ಶಿಷ್ಯ ಮತ್ತು ಪೂಜವಸ್ತು, ಇದು ಅನಾದಿ, ಜಗತ್ಕಾರ್ಯಕ್ಕೆ ಕಾರಣವಾಗಿ ಅನಾದಿ ಆದರೆ ಸಾಂಖ್ಯರ ಅನಾದಿ ಅಲ್ಲ. ಈತನೊಬ್ಬನೇ ಆದಿಶೈವನೆಂದು ಮುಂದಿನವರು ಗ್ರಹಿಸಿದರು.

೨) ಆದಿಶೈವ–ಶಿವನಿಂದ ದೀಕ್ಷಿತರು ಶಿವನಿಂದಾದ ಸಂಸ್ಕಾರ ಶಿವಸಂಸ್ಕಾರ. ಇದನ್ನು ಪಡೆದವರಾಗಿ ಇವರು ಗಣತಿಯಲ್ಲಿ ಶಿಷ್ಯಕೋಟಿಗೆ ಆದಿ. ಇವರೈವರು: ಕೌಶಿಕ, ಕಶ್ಯಪ, ಭರದ್ವಾಜ, ಅತ್ರಿ ಮತ್ತು ಗೌತಮ, ಈ ಐವರು ಶಿವನ ಐದು ಮುಖಗಳಿಂದ ದೀಕ್ಷಿತರು. ಇವರೈವರು ಶಿವನ ಉಪಾಸಕರಲ್ಲಿ ಪ್ರಥಮರು ಆದ್ದರಿಂದ ಆದಿ ಶೈವರು.

೩) ಮಹಾಶೈವ–ಶಿವೋಪಾಸಕರಾದ ಪ್ರಥಮ ಐದು ಶೈವರ್ಷಿಗಳು (ಆದಿಶೈವರು) ಶಿವದೀಕ್ಷಾಕ್ರಮವನ್ನು ಪ್ರಾರಂಭಿಸಿದರು. ಅನೇಕ ಜನ ಬ್ರಾಹ್ಮಣರನ್ನು ತಮ್ಮ ಅನುಯಾಯಿಗಳನ್ನಾಗಿ ಪರಿವರ್ತಿಸಿಕೊಂಡರು. ಹೀಗೆ ದೀಕ್ಷಿತರಾದ ಬ್ರಾಹ್ಮಣ ಜನಸಮುದಾಯವೇ ಮಹಾಶೈವವು. ಇವರನ್ನು ಮಹಂತರೆಂದೂ, ಜನವಂದ್ಯ

ರೆಂದೂ ಪರಿಗಣಿಸಿದ್ದರು. ಬ್ರಾಹ್ಮಣ ಸಮಾಜದವರು ಪಂಚಶೈವರ್ಷಿಗಳಿಂದ ಶಿವದೀಕ್ಷಿತರಾದವರೋ ಮಹಾಶೈವರು.

೪) ಅನುಶೈವ-ಮಹಂತರೂ, ಜನವಂದ್ಯರೂ ಆದ ಮಹಾಶೈವರ ಮಹಿಮೆಗೆ ಮೆಚ್ಚಿ ಕೊಂಡು, ಇವರಿಂದ ಶಿವದೀಕ್ಷೆಯನ್ನು ಪಡೆಯುವ ಬಯಕೆಯುಳ್ಳ ಅರಸರಿಗೆ ಮತ್ತು ವೈಶ್ಯರಿಗೆ ಮಹಾಶೈವರು ಶಿವದೀಕ್ಷೆ ಕೊಡುತ್ತಿದ್ದರು. ಹೀಗೆ ಶೈವರಾದ ಅರಸರನ್ನು, ವೈಶ್ಯರನ್ನು ಅನುಶೈವರೆಂದು ಹೇಳಲಾಯಿತು. ಅನುಶೈವರೆಂದರೆ ದೀಕ್ಷಿತರಾದ ಕ್ಷತ್ರಿಯರು ಮತ್ತು ವೈಶ್ಯರು.

೫) ಅವಾಂತರಶೈವರು-ಮಹಾಂತರಿಂದ ಪ್ರಭಾವಿತರಾಗಿ ಕ್ಷತ್ರಿಯರು, ವೈಶ್ಯರು ಶಿವ ದೀಕ್ಷೆಪಡೆದಂತೆ; ಶೂದ್ರರೂ ಮಹಾಂತರಿಂದ ಪ್ರಭಾವಿತರಾಗಿ ಶಿವದೀಕ್ಷಾ ಇಚ್ಛು ಗಳಾದರು. ಹೀಗೆ ಮಹಾಂತರಿಂದ ಶಿವದೀಕ್ಷಿತ ಶೂದ್ರರು ಅವಾಂತರಶೈವರಾದರು.

೬) ಪ್ರವರಶೈವರು-ಕುಂಬಾರರು, ಕಂಬಾರರು ಮೊದಲಾದ ಕೈಕಸಬಿನವರು ಮಹಾ ಶೈವರಿಂದ ಶಿವದೀಕ್ಷೆ ಪಡೆದ ಇಚ್ಛೆಯುಳ್ಳವರಾದರು. ಶಿವದೀಕ್ಷೆ ಪಡೆದ ಇವರು ಪ್ರವರಶೈವರಾದರು. ಅಥರ್ವಣವೇದ, ಋಗ್ವೇದಗಳಲ್ಲಿ ರುದ್ರನ ಅನುಯಾಯಿ ಗಳು ಇವರು ಮತ್ತು ಕಳ್ಳಕಾಕರಾದಿಗಳು ಎಂಬುದಿಲ್ಲಿ ಸಂಸ್ಮರಣೀಯ.

೭) ಅಂತ್ಯಶೈವ-ಶಿವದೀಕ್ಷೆ ಪಡದ ಚತುರ್ವರಣದವರು ಶಿವರಾದರು. ಉಳಿದವರು ಅತಿಶೂದ್ರರು. ಶಿವದೀಕ್ಷೆಯನ್ನು ಇವರೂ ಪಡೆದರು. ಕೈಕಸಬುದಾರರಲ್ಲಿ ಇವರು ಅಂತ್ಯರು. ಶೂದ್ರವರ್ಣದಲ್ಲಿ ಇವರು ಸೇರಿಲ್ಲ. ಇಂಥವರೂ ಶೈವರಾದರು.

ಈ ವಿವರಣೆಯಿಂದ ತಿಳಿಯುವದೇನೆಂದರೆ ಪುರಾಣ-ಹಿಂದೂ ಧರ್ಮದಲ್ಲಿ ಒಳಧರ್ಮಾಂತರ ಪ್ರಚಲಿತವಿತ್ತು. ಇದು ಈ ಧರ್ಮದ ಚರಿತ್ರೆಯಲ್ಲಿ ಪ್ರಥಮ ಹಂತ. ಇದರ ಎರಡನೆ ಹಂತವೆಂದರೆ ಬೌದ್ಧ, ಜೈನಧರ್ಮಾಂತರಗೊಂಡವರನ್ನು ಮರಳಿ ಹಿಂದೂಧರ್ಮಕ್ಕೆ ಸೇರಿಸಿ ಕೊಂಡದ್ದು. ಈ ಕಾರ್ಯವು ಶೈವರಿಂದ ನಡೆದಿದೆ.

ಈ ತೆರದ ಸಪ್ತಶೈವರು ಜಾತಿಯಿಂದ ಆದವರೆಂದು ಆಗಮಗಳು ತಿಳಿಸುತ್ತವೆ. ಇನ್ನು ಆಚಾರಭೇದದಿಂದ ಶೈವದಲ್ಲಿ ಭೇದಗಳಾಗಿವೆ. ಇದನ್ನು ಕೂಡ ತಿಳಿದುಕೊಳ್ಳ ಲಾಗುವುದು. ಶಿವದೀಕ್ಷೆ ಪಡೆದಕೂಡಲೆ ವರ್ಣಾಶ್ರಮಭೇದವಿಲ್ಲದಾಗುವದೆಂಬುದು ಆಗಮದ ಮತ. ಬ್ರಾಹ್ಮಣರಾದಿಯಾಗಿ ಹೊಲೆ ಹದಿನೆಂಟು ಜಾತಿಗಳೆಲ್ಲವು ಶಿವದೀಕ್ಷೆಗೆ ಅರ್ಹರು ಎಂಬುದರೊಡನೆ, ಶಿವದೀಕ್ಷಿತರೆಲ್ಲರೂ ಮುಕ್ತಿಗೂ ಅರ್ಹರು ಎಂಬುದು ಆಗಮ ನಿರ್ಣಯ. ಇದರಿಂದ ಕರ್ಮಸ್ವಾತಂತ್ರ್ಯವೂ ದೊರೆತಿದೆ. ಆಸ್ತಿಕ ಧರ್ಮದಲ್ಲಾದ ಅತ್ಯಂತ ಕ್ರಾಂತಿಕಾರಕ ಬದಲಾವಣೆಯಿದು. ಕರ್ತವ್ಯಕರ್ಮಗಳು ಎಂಥವೇ ಇರಲಿ ಅವೆಲ್ಲ ಮುಕ್ತಿಗೆ ಸಾಧನವೆಂಬ ಮಾತೂ ಇಲ್ಲಿ ಸ್ವೀಕೃತ. ಇದು ವರ್ಣಾಶ್ರಮ ಸಿದ್ಧಾಂತದಿಂದ ಭಿನ್ನ ನಿಲವು: ಸೂಕ್ಷ್ಮಾಗಮ ಮತ್ತು ಮನುಸ್ಮೃತಿಗಳಲ್ಲಿ ಉಲ್ಲೇಖಿಸಲಾದ ವರ್ಣಾಶ್ರಮ

ಗಳ ಬಗ್ಗೆ ಪರಾಮರ್ಶೆಗೆ ಇಲ್ಲಿ ಅವಕಾಶವಿದೆ. ಮನುಸ್ಮೃತಿಯು ಪ್ರಕಾರ ಶೂದ್ರರಲ್ಲಿ ಕೃಷಿಕರು ಮತ್ತು ಇತರೇ ಕೈಕಸಬಿನವರು ಸೇರುತ್ತಾರೆ. ಆದರೆ ಸೂಕ್ಷ್ಮಾಗಮವು ಕೃಷಿಕ ರಷ್ಟೇ ಶೂದ್ರರೆಂದು ಹೇಳುತ್ತದೆ. ಕೈಕಸಬುದಾರರೇ ಒಂದು ಗುಂಪು ಎಂದು ಬಗೆ ದಂತಿದೆ. ಈ ಆಗಮದ ಪ್ರಕಾರ ಶೂದ್ರರು ದೀಕ್ಷಿತರಾದರೆ ಅವಾಂತರ ಶೈವರೆಂಬ ಒಂದು ಶೈವ ಪ್ರಕಾರವೇ ಆಗಿರುತ್ತದೆ. ಉಳಿದ ಕೈ ಕಸಬಿನವರು ಶಿವದೀಕ್ಷಿತರಾದರೆ ಪ್ರವರ ಶೈವವೆಂಬ ಒಂದು ಸ್ವತಂತ್ರ ಪ್ರಭೇದ, ಸೂಕ್ಷ್ಮಾಗಮವು ಕೃಷಿಕರನ್ನೂ, ಕೈಕಸಬು ದಾರರನ್ನು ಬೇರೆ ಬೇರೆ ಎಂದು ಪರಿಗಣಿಸಿದ್ದು ಅದು ಮಾಡಿದ ಅವಾಂತರಶೈವ, ಪ್ರವರ ಶೈವವೆಂಬ ಭೇದದಿಂದ ದೃಢಪಡುತ್ತದೆ. ಇದು ಪುರಾಣ-ಹಿಂದೂಧರ್ಮದಲ್ಲಿಯ ಒಂದು ಹೊಸ ಬೆಳವಣಿಗೆ, ಇಂಥ ಬೆಳವಣಿಗೆಗಳನ್ನರಿಯಬೇಕಾದರೆ ಶೈವಾಗಮಗಳ ಅಧ್ಯಯನ ಅನಿವಾರ್ಯ, ಆದರೆ ಭಾರತೀಯ ಸಾಂಸ್ಕೃತಿಕ ಚರಿತ್ರಕಾರರು, ಸಾಹಿತ್ಯಚರಿತ್ರಕಾರರು ಈ ಕಡೆಗೆ ಗಮನ ಹರಿಸದ್ದರಿಂದ ಭಾರತದ ಚರಿತ್ರೆ ಅಪೂರ್ಣವಾಗಿದೆ. ಪುರಾಣ-ಹಿಂದೂ ಧರ್ಮದಲ್ಲಿ ಕಾಲದೇಶಗಳಲ್ಲಿ ಆಗಾಗ ಉದ್ಭವಿಸಿದ ಹೊಸ ಹೊಸ ಸಾಮಾಜಿಕ, ಧಾರ್ಮಿಕ ಸಮಸ್ಯೆಯಿಂದ ನಿರ್ಮಾಣಗೊಂಡ ನವ್ಯ ತಿರುವನ್ನು ಶೈವಧರ್ಮ ಪ್ರಜ್ಞೆ ಕೊಟ್ಟಿದೆ. ಶೈವಧರ್ಮವು ಸುಧಾರಣಾವಾದದ ಆಧ್ವರ್ಯು ಎಂಬುದು ಇದರಿಂದರಿಂದ ಗೊತ್ತಾಗುತ್ತದೆ. ಆಗಮಗಳ ಕಾಲದನಂತರ ವಚನಗಳ ಕಾಲದಲ್ಲಿ ಪುರಾಣ-ಹಿಂದೂ ಧರ್ಮಕ್ಕೆ ಹೊಸ ತಿರುವು ಕೊಟ್ಟುದನ್ನು ನೋಡುತ್ತೇವೆ. ಹನ್ನೆರಡನೆಯ ಶತಮಾನದ ಪೂರ್ವದಲ್ಲಿ ಅಂದರೆ ಶಂಕರನ ಪೂರ್ವದಲ್ಲಿ ಶೈವವು ಮಾಡಿದ ಸಾಂಸ್ಕೃತಿಕ ಪುನರುತ್ಥಾನದ ಹಿನ್ನೆಲೆಯಲ್ಲಿ ೧೨ನೆಯ ಶತಮಾನದ ಸಾಂಸ್ಕೃತಿಕ ಕ್ರಾಂತಿಯು ಅಧ್ಯಯನ ಆಗಬೇಕಿದೆ. ಸುಧಾರಣಾ ವಾದಿಯಾದ ಅಂದರೆ ಸ್ವತಂತ್ರಾಗಮ ಶೈವವು ಬೀರಿದ ಪ್ರಭಾವದ ವಳಯದ ಹೊರಗಿದ್ದ ಶ್ರೌತಾಗಮ ಅಂದರೆ ವರ್ಣಾಶ್ರಮ ಪರವಾದ ಶೈವದಲ್ಲಿ ಜನಿಸಿದ ಶಂಕರಾಚಾರ್ಯರು ಕೈಕೊಂಡ ಕಾರ್ಯವು ಸ್ವತಂತ್ರ ಶೈವಾಗಮ ಪ್ರವಾಹವನ್ನು ಕಣ್ಮರೆಗೊಳಿಸುವ ಕಾರ್ಯದಲ್ಲಿ ತೊಡಗಿರುವುದನ್ನು ಅನೇಕರು ಗುರುತಿಸಿದಂತಿಲ್ಲ. ಬೌದ್ಧಧರ್ಮವನ್ನು ಭಾರತದಿಂದ ಹೊರಹಾಕಿದ ಶಂಕರಾಚಾರ್ಯರು ಶೈವಾಗಮದ ಪ್ರಗತಿಪರ ಧೋರಣೆಯನ್ನು ಮಸುಕು ಗೊಳಿಸುವುದು ಅವರ ಕಾರ್ಯಗಳಲ್ಲಿ ಒಂದು. ಈ ಕಾರ್ಯದಲ್ಲಿ ಒಂದಿಷ್ಟು ಯಶಪಡೆದರೂ ಅದರ ಹುಟ್ಟಡಗಿಸುವಲ್ಲಿ ಅವರು ಯಶಸ್ವಿ ಆಗಲಿಲ್ಲ. ಈ ಸ್ವತಂತ್ರಾಗಮವು ಗುಪ್ತ ಗಾಮಿನಿಯಾಗಿ ಹರಿಯಿತು. ಈ ಬಗ್ಗೆ ಸಿದ್ಧರಾಮಪ್ಪ ಪಾವಟೆಯವರು ಹೇಳುವುದು ಸ್ವಾರಸ್ಯಕರವಿದೆ, ಗಮನೀಯವಾಗಿದೆ. ಅವರು ಹೀಗೆ ತಿಳಿಸುವರು-A devotee of shiva being invested with the Linga, would no longer remain a Brahmin or shudra but rise higher than any caste. So for the acquisition of knowledge a shudra was not rendered

unfit. The theory of smritis, on the other hand, was that a shudra was never fit for knowledge and could not study the Vedas........So there was an opposition between the smritis and Agamas in regard to these Varnas and as to the accessibility of the sacred learning to the shudras. The controversy grew so keen as time went on that the Smriti writers began to preach that shaivagamas were meant only for those who were fallen from the teachings of the Vedas and mainly intended to misguide the wicked, who if they turn to Vedic Lore, would abuse the same and should be prevented from having accets to it. Though in ancient times, the Agamas appear to have been studied as a part of sacred learning, we find that shankar acarya maintaining that the Agamic literature was not authoritative.

ಆಗಮಗಳನ್ನು ಕತ್ತಲೆಯ ಗರ್ಭಕ್ಕೆ ಶಂಕರಾಚಾರ್ಯಾದಿಗಳು ತಳ್ಳಲಿಕ್ಕೆ ಕಾರಣರಾದರು. ಅವು ಕೆಲಕಾಲ ಕತ್ತಲೆಯ ಗರ್ಭದಲ್ಲಿ ಉಳಿದವು. ಬಹುಭಾಗವು ಅಳಿದೂ ಹೋಯಿತು. ಒಂದಾನೊಂದು ಕಾಲದಲ್ಲಿ ಕತ್ತಲೆಯ ಗರ್ಭಕ್ಕೆ ತಳ್ಳಿದ ವೇದವನ್ನು ಪುನಾ ಬೆಳಕಿಗೆ ತರಲು ಮಹಾಪ್ರಯತ್ನವು ನಡೆದಂತೆ, ಆಗಮಸಾಹಿತ್ಯವನ್ನು ಪುನಾ ಬೆಳಕಿಗೆ ತರುವ ಮಹಾಕಾರ ವು ಆಯಿತು. ಈ ಕಾರ್ಯನಡೆದದ್ದು ೧೨ನೆಯ ಶತಮಾನದಲ್ಲಿ, ಇದರ ಆಧ್ವರ್ಯು ಮಹಾತ್ಮಾ ಬಸವಣ್ಣನವರು ಎಂಬುದನ್ನು ಸಿದ್ಧರಾಮಪ್ಪ ಪಾವಟೆಯವರು ತಿಳಿಸುತ್ತಾರೆ-The influence of the Brahmanic Teaching was so great, that the Agamic literature was Lost to the world. The great Basava then preached the doctrine of the Agamas and thus there was their revival in the Karnataka. ಇದು ಆಗಮಪ್ರತಿಷ್ಠಾಪನೆ. ೧೨ನೆಯ ಶತಮಾನದಲ್ಲಿ ಸ್ವತಂತ್ರಾಗಮದ, ಸ್ವತಂತ್ರ ವಿಚಾರದ ಆವಿರ್ಭಾವ ಇದರ ಅಂದರೇ ಬಸವಣ್ಣನವರ ಕಾರ್ಯದ ಪರಿಣಾಮ. ವರ್ಣಾಶ್ರಮ ಮತ್ತು ಅವುಗಳ ಕರ್ಮಪದ್ಧತಿಯಿಂದಾಗುವ ಅನಾಹುತದ ವಿರುದ್ಧ ಕಾರ್ಯ ಸ್ವತಂತ್ರಾಗಮದ್ದು. ಶ್ರೌತಾಗಮವು ಕರ್ಮಕಾಂಡವನ್ನು ಮೈಗೂಡಿಸಿಕೊಂಡಿದೆ. ಸ್ವತಂತ್ರಾಗಮವು ವರ್ಣಾಶ್ರಮ ಕರ್ಮಪದ್ಧತಿಗಳನ್ನು ಉಪನಿಷತ್ತುಗಳಂತೆ ಖಂಡಿಸಿದೆ. ಅನುಲೋಮ ಪ್ರತಿಲೋಮ ವಿವಾಹಗಳಿಂದ ಮತ್ತು ಕರ್ಮಸಂಕರದಿಂದಾದ ಅಸಮಾನ್ಯತೆಯನ್ನು ಹೊಡೆದು ಹಾಕುವ ಕಾರ್ಯ ಸ್ವತಂತ್ರಾಗಮ ಮಾಡಿದೆ. ಬಹುದೇವತಾವಾದವನ್ನು ಹೊಡೆದು ಹಾಕಿ ಏಕೇಶ್ವರ ವಾದವನ್ನು ಪ್ರತಿಷ್ಠಾಪಿಸಿದೆ. ಇದೆಲ್ಲ ನಡೆಯಲು ಸ್ವತಂತ್ರಾ

ಗಮದ ಮೂಲಧೋರಣೆ ಸತ್ಯ. ಇದು ಅನಾದಿಕಾಲದಿಂದಲೂ ಒಮ್ಮೆ ಪ್ರಬಲವಾಗಿ, ಇನ್ನೊಮ್ಮೆ ಗೌಣವಾಗಿ ಅವನಾಶಿಯಾಗಿ ಬಂದಿದೆ. ಈ ಬೆಳವಣಿಗೆಯನ್ನು ಆಗಮ ಸಾಹಿತ್ಯವನ್ನು, ಅದರ ಉಪಸಾಹಿತ್ಯವನ್ನು ಅಧ್ಯಯನ ಮಾಡದವರು ಗುರುತಿಸಲಾರರು.

ಈಗ ಚಂದ್ರಜ್ಞಾನಾಗಮದ ಶೈವಪ್ರಭೇದಗಳನ್ನರಿತುಕೊಂಡು, ತೌಲನಿಕ ಅಧ್ಯಯನಕ್ಕಾಗಿ ಬಳಸಿಕೊಳ್ಳುವಾ.

೧) ಅನಾದಿ ಶೈವ–ಶಿವನು ಮತ್ತು ಶಿವಗಣರು ಅನಾದಿಶೈವ.

೨) ಆದಿಶೈವ–ಮಹೇಶನ ಪಂಚಮುಖಗಳಲ್ಲಿ ದೀಕ್ಷಿತರಾದ ಕೌಶಿಕ, ಕಸ್ಯಪ, ಭರದ್ವಾಜ, ಅತ್ರಿ ಮತ್ತು ಗೌತಮರು ಆದಿಶೈವರು. ಇವರಲ್ಲದೆ ಗುರುಮುಖದಿಂದ ದೀಕ್ಷಿತ ರಾದವರು, ಗುರುಗೋತ್ರದವರು, ಅನ್ಯಗೋತ್ರದವರು ಮತ್ತು ಆಗಮೋಕ್ತ ವಿಧಿಯಿಂದ ಶಾಂಭವ ವ್ರತಧಾರಿಗಳು ಸಹ ಆದಿಶೈವರು. ಆದಿಶೈವರ ಬಗ್ಗೆ ಇನ್ನೂ ವಿಶೇಷ ಮಾಹಿತಿಯನ್ನು ಈ ಆಗಮ ಕೊಡುತ್ತದೆ. ಇದು ಗಮನೀಯ ಆದಿಶೈವರು ವೇಧಾ, ಮಂತ್ರ, ಕ್ರಿಯಾದೀಕ್ಷಾ ಮಾತ್ರದಿಂದ ಅಂಗತ್ರಯದಲ್ಲಿ ಲಿಂಗತ್ರಯಧಾರಿಗಳು. ಇವರಲ್ಲಿ ಹಲವರು ಮಹೇಶ ಪ್ರತಿಷ್ಠೆಯನ್ನು ಮಾಡಿಸಿ ಆಚಾರ್ಯ ಸ್ಥಾನದಲ್ಲಿ ಇರುವರು.

೩) ಪೂರ್ವಶೈವರು–ಇವರಲ್ಲಿ ಎರಡು ಪ್ರಕಾರಗಳಿವೆ. ೧) ಕಾನೀನರು, ೨) ಅದೀಕ್ಷಿತರು. ಕಾನೀನರು ಎಂದರೆ ಮದುವೆಯಾದ ಕನ್ನೆಯರಲ್ಲಿ ಹುಟ್ಟಿದ ವರು. ಇವರು **ದೀಕ್ಷಿತರು** ಪೂರ್ವಕಾಂಡ ಉಕ್ತರೀತ್ಯಾ ದೀಕ್ಷಿತರಾದ ಇವರು ಶಿವದ್ವಿಜರು. ಶಿವಸಂಸ್ಕಾರ ಪಡೆದವರಾದರೂ ಅಲಿಂಗಿಗಳು. ಇವರು ತಮ ಗಾಗಿಯೂ ಬೇರೆಯವರಿಗಾಗಿಯೂ ಪೂಜ್ಯಾಕಾರ್ಯದಲ್ಲಿ ನಿಯೋಜಿತರು. ಅರ್ಚ ಕರಾಗಿ ಕಿಂಕರತ್ವವುಳ್ಳವರು. ಆಚಾರ್ಯರಾಗಲಿವರಿಗೆ ಹಕ್ಕಿಲ್ಲ, ದೀಕ್ಷಿತರಾದರೂ ಇವರು ಕಾನೀನರಾಗಿದ್ದ ಕಾರಣ ಅಧಿಕಾರದ ಹಕ್ಕಿಲ್ಲ. ೨) **ಅಧೀಕ್ಷಿತ**ರಾದ ಪೂರ್ವಶೈವರು ಪರರಿಗಾಗಿ ಮಾತ್ರ ಪೂಜಾರಿಗಳು. ಬೇರೆ ಎಲ್ಲ ಕರ್ಮಗಳಿಗೆ ಅನರ್ಹರು, ಗರ್ಹಿತರು. ಶಿವಾಲಯದ ಹೊರಗಿದ್ದಾಗ ಇವರ ಸ್ಪರ್ಶವು ದೋಷ ಕಾರಕವು. ಶಿವಾರ್ಚಕರಾಗಿರುವುದರಿಂದ ಇವರಿಗೆ ಶೈವತ್ವವಿದೆ. **ಇವರು ಮಲ ವಂತರು** ಯಾಕೆಂದರೆ ಇವರಿಗೆ ಶಿವದೀಕ್ಷೆ ಇಲ್ಲ; ಶಿವದ್ರವ್ಯನ್ನು ಇವರು ಭಕ್ಷಿಸುವರು; ಶಿವಕೈಂಕರ್ಯದಲ್ಲಿವರಿಗೆ ಶ್ರದ್ಧೆ ಇಲ್ಲ. ಇದು ಸರ್ವಶಾಸ್ತ್ರಗಳ ಅಭಿಪ್ರಾಯ.

೪) ಮಿಶ್ರಶೈವ–ಮಿಶ್ರಶೈವರು ಆದಿತ್ಯ, ಅಂಬಿಕೆ, ವಿಷ್ಣು, ಗಣೇಶ, ಶಿವ ಈ ಐವರನ್ನು ಒಂದೇ ಪೀಠದಲ್ಲಿರಿಸಿ ಮಿಶ್ರಮಾಡಿ ಪೂಜಿಸುವರು. ಆದ್ದರಿಂದಿವರು ಮಿಶ್ರಶೈವರು. "ಕೂರ್ಮ ಪುರಾಣದಲ್ಲಿ ಮಿಶ್ರಪಾಶುಪತರ ಲಕ್ಷಣವು ಹೀಗಿಯೇ ಇದೆ. ರವಿಂ ಶಂಭುಂ ತಥಾಶಕ್ತಿ, ವಿಘ್ನೇಶಂ ಚ ಜನಾರ್ಧನಂ। ಯಜಂತಿ ಸಮಭಾವೇನ

ಮಿಶ್ರಂ ಪಾಶುಪತಂ ಹಿ ತತ್‌|| 'ವೀರಶೈವ ಸದಾಚಾರ ಸಂಗ್ರಹ'ವು ಈ ಈ ಮಾತುಗಳಲ್ಲದೆ, ಒಂದು ಹೆಚ್ಚಿನ ಮಾತನ್ನು ತಿಳಿಸುವುದು. "ಈ ಐದು ದೇವತೆಗಳನ್ನು ಸಮಭಾವದಿಂದ ಕಾಣದೆ ಶಿವಾಧಿಕ್ಯಭಾವದಿಂದ ಕಾಣಲಾಗುವುದು." **ದೇವತಾ ಸಿದ್ಧಾಂತದ** ದೃಷ್ಟಿಯಿಂದ ಈ ಮಾತು ಅತ್ಯಂತ ಮಹತ್ವದ್ದು. ಮ್ಯಾಕ್ಸಮುಲ್ಲರನ ಮಾತುಗಳಲ್ಲಿ **ಹಿನೋಥಿಯಿಜಂ** ಎಂದು ಒಂದು ಸಿದ್ಧಾಂತದ ಮೂಲ ವಿಚಾರ ಇದರಲ್ಲಿದೆ. ಚಂದ್ರಜ್ಞಾನಾಗಮದ ಪ್ರಕಾರ ಮಿಶ್ರಶೈವವು **ಅನೇಕದೇವತಾವಾದ**ವಾಗಿದೆ. **ಇಷ್ಟದೇವತಾ ಉತ್ತಮವಾದ**ವು ಅನೇಕ ದೇವತಾವಾದ ಹಾಗೂ **ಏಕೇಶ್ವರವಾದ**ಗಳನು ಜೋಡಿಸುವ ಕೊಂಡಿಯಾಗಿದೆ. ಋಗ್ವೇದದಲ್ಲಿ ಈ ಮೂರೂ ಸಿದ್ಧಾಂತಗಳಿವೆಯೆಂದು ಗುರುತಿಸಿದ್ದಾರೆ. ಅದೇ ರೀತಿ ಆಗಮಗಳಲ್ಲೂ ಈ ಮೂರು ಸಿದ್ಧಾಂತಗಳಿವೆ. ಇದು ವೇದಾಗಮಗಳ ಅವಿರಳ ಸಂಬಂಧ ತೋರಿಸುತ್ತದೆ. ಶೈವದ ಈ ಒಂದು ಪ್ರಭೇದ ಕುರಿತು ಎರಡು ಆಕರಗಳು ಹೇಳುವಲ್ಲಿರುವ ಸೂಕ್ಷ್ಮ ಸೈದ್ಧಾಂತಿಕ ಭೇದವನ್ನು ಇಲ್ಲಿ ಗುರುತಿಸಲಾಗಿದೆ.

೫) ಶುದ್ಧ ಶೈವ–ಭಸ್ಮ ರುದ್ರಾಕ್ಷ ಧಾರಾಣಾತ್ಮಕವಾದ ಪೌರಾಣ ದೀಕ್ಷೆಯನ್ನು ಪಡೆದವರು, ಶೈವಲಿಂಗೈಕ ಪೂಜೆಯಲ್ಲಿ ತತ್ಪರಚಿತ್ತರು ಶಿವಪಾರಮ್ಯದಲ್ಲಿ ವಿಶ್ವಾಸವುಳ್ಳವರು, ***ಶಿವಭಾವಾನುಭಾವಿಗಳು** ಶುದ್ಧಶೈವರೆಂದೆನಿಸಿಕೊಳ್ಳುವರು. ಶುದ್ಧಶೈವ ಕುರಿತು ಬೇರೆ ಆಗಮಗಳೂ ಇವೆ, ವಚನಗಳೂ ಇವೆ. ಸಚ್ಚಿದಾನಂದ ಸ್ವರೂಪನಾದ ಉಮಾಸಹಿತ ಶಿವನೊಬ್ಬನೇ ಮುಖ್ಯ ದೇವರು; ಇವನಿಂದನ್ಯ ದೇವರುಗಳೆಲ್ಲ ಇವನ ಭಕ್ತರು; ಇವನನ್ನಾಶ್ರಯಿಸಿರುವಂಥವರು; ಲಿಂಗ ಪೂಜಾಕಾಲದಲ್ಲಿ ಇತರ ದೇವತೆಗಳನ್ನು ಆವರಣ ರೂಪದಿಂದ ಪೂಜಿಸುವರಲ್ಲದೆ ಮುಖ್ಯತ್ವದಿಂದ ಪೂಜಿಸುವದಿಲ್ಲ; ಅಥವಾ ಗುರುಕೊಟ್ಟಲಿಂಗವನ್ನು ಕರಪೀಠದಲ್ಲಿ ಪೂಜಿಸುವವರು ಶುದ್ಧಶೈವರು. ಗುರುವಿನುಪದೇಶವನ್ನು ಎಚ್ಚರಿಕೆಯಿಂದ ಆಚರಿಸಬೇಕು. ಅವಧಾನತಪ್ಪಿ ಲಿಂಗ ಕೆಳಗೆ ಬಿದ್ದರೆ, ನಷ್ಟವಾದರೆ, ಸುಡಲ್ಪಟ್ಟರೆ, ಅನ್ಯರಿಂದಪಹರಿಸಲ್ಪಟ್ಟರೆ, ಬೇರಾವುದೇಕಾರಣದಿಂದ ಲಿಂಗ ದೂಷಿತವಾದರೆ ಗುರುಪಾದ ಸ್ಮರಿಸಿ ಗುರುವಿನಾಜ್ಞೆಯಂತೆ ಅಘೋರಮಂತ್ರವನ್ನು ಜಪಿಸಿ ಅದೇ ಲಿಂಗವನ್ನು ಅಥವ ಬೇರೆ ಲಿಂಗವನ್ನು ಧರಿಸುವದು ಹಾಗೂ ಪೂಜಿಸುವುದು, ಹೀಗೆ ಮಾಡುವುದು ಪ್ರಾಶ್ಚಿತ್ತವೆನಿಸುವುದು.

೬) ಮಾರ್ಗಶೈವ–

ವೇದಾಗಮಾಂತ ಗದಿತ ದೀಕ್ಷಾತ್ರಯ ಪರಿಗ್ರಹಃ||
ಧರ್ಮೋऽಯಂ ಮಾರ್ಗಶೈವಾನಾಮೀಶ್ವರೇಣ ಪ್ರಕೀರ್ತಿತಃ||

---

* ಶಿವಭಾವ ಅನುಭಾವ ಎಂಬ ಪದದ ಪ್ರಾಚೀನತೆಯು ಇಲ್ಲಿ ಗಮನೀಯ.

ಷಟ್‌ಸ್ಥಲಜ್ಞಾನ ಸಂಪತ್ತಿಃ ಷಟ್‌ಕಾಲ ಶಿವಪೂಜನಂ।
ಆದಿಶೈವೇನ ತೌಲೇಽಪಿ ದೀಕ್ಷಾದಿನಾಂ ಪರಿಗ್ರಹೇ।
ಏಕವಿಂಶತಿ ಸಾಹಸ್ರಯುತ ಷಟ್‌ಛತಿ ಸಂಖ್ಯಯಾ॥
ವಿಶಿಷ್ಟಾನಾಂ ಹಿ ಧರ್ಮಾಣಾಂ ಶೀಘ್ರಮುಕ್ತಿಪ್ರದಾಯಿ ನಾಂ॥
ಷಡಕ್ಷರೀ ಜಪೋನಿತ್ಯಂ ಲಿಂಗಾಂಗೈಕ್ಯ ವಿಭಾವನಂ।
ನಿರಂತರಾನುಷ್ಠಾನಂ ಯನ್ಮಾರ್ಗಶೈವೇ ವಿಶಿಷ್ಯತೇ।

ವೇದಾಗಮಾಂತಗಳಲ್ಲಿ ಉಕ್ತವಾದ ತ್ರಿವಿಧ ದೀಕ್ಷೆಯುಳ್ಳುದು, ಷಟ್‌ಸ್ಥಲಜ್ಞಾನ ಸಂಪತ್ತಿಯುಳ್ಳುದು, ದಿನಕ್ಕೆ ಆರುವೇಳೆ ಶಿವಪೂಜೆಯುಳ್ಳುದು ಮಾರ್ಗಶೈವವೆನಿಸು ವುದು ಈ ಧರ್ಮವು ಶಿವೋಕ್ತವಾದುದು.

೭) ಸಾಮಾನ್ಯ ಶೈವ–

ಶಾಕ್ತ ಸೌರ ಗಾಣಪತ್ಯ ವೈರಭದ್ರಸ್ಯಾಂದ ಈ ಮತ ಪಂಚಕರ್ತನವುಳ್ಳವರು ಷಡಧ್ವನ ಸಂಸ್ಕಾರವುಳ್ಳವರು ಗಾಯಂತ್ರೀಮಂತ್ರವನ್ನು ಜಪಿಸುವವರು ಸಾಮಾನ್ಯಶೈವರೆನಿಸುವರು. ವೀರಶೈವ ಸದಾಚಾರ ಸಂಗ್ರಹದ ವಿವರಣೆ ಇಂತಿದೆ: "ಪರಬ್ರಹ್ಮನಾದ ಶಿವನ ಪೂಜಾದಿ ಗಳನ್ನು ಗೈವುದು, ಎಲ್ಲ ಕಡೆಯಲ್ಲಿ ಶಿವನ ಭಾವನೆಯನ್ನಿಡುವುದು, ಶಿವಲಿಂಗ ದರ್ಶನವಾದ ಸಮಯದಲ್ಲಿ ಶಿವಲಿಂಗಪೂಜೆ, ಪ್ರದಕ್ಷಿಣೆ, ನಮಸ್ಕಾರಗಳನ್ನು ಮಾಡುವುದು, ಪೂಜೆ ಮಾಡಿಕೊಳ್ಳಲು ಅನುಕೂಲವಿಲ್ಲದಿದ್ದರೆ ದರ್ಶನ ಮಾಡಿಕೊಳ್ಳುವುದು. ಶಿವನ ಚಿನ್ಹ ಗಳಾದ ಭಸ್ಮರುದ್ರಾಕ್ಷಿಗಳಲ್ಲಿ, ಶಿವಭಕ್ತರಲ್ಲಿ, ಶಿವನ ಸಂಬಂಧವಾದ ಕಾರ್ಯಗಳಲ್ಲಿ ಮನಸಾ, ಕಾಯಾ ಮತ್ತು ಆಚರಣೆಯಿಂದ ಯಾವಾಗಲೂ ಭಕ್ತಿಯನ್ನಿಡುವುದು. ಇವೆಲ್ಲ ಸಾಮಾನ್ಯ ಶೈವನ ಲಕ್ಷಣ."

ವೀರಶೈವ ಸದಾಚಾರ ಸಂಗ್ರಹದ ೬ನೇ ಪ್ರಕರಣದಲ್ಲಿ ಉದ್ಧರಿಸಲಾದ ವೀರಶೈವ ಪ್ರಕಾಶಿಕೆಯು ಸಪ್ತಶೈವ ವಿವರಿಸಿದ್ದು ಇಂತಿದೆ–

ಶೈವಂ ಚ ವೀರಶೈವಂ ಚ ದ್ವಿವಿಧಂ ಶೈವಮೀರಿತಮ್।
ಶೈವಂ ಸಪ್ತವಿಧಂ ಜ್ಞೇಯಂ ವೀರಶೈವ ಚತುರ್ವಿಧಮ್

ಶೈವವು ಎರಡು ವಿಧವಾಗಿರುತ್ತದೆ. ೧) ಶೈವ, ೨) ವೀರಶೈವ ಶೈವದಲ್ಲಿ ಮತ್ತೆ ಸಪ್ತ ಭೇದಗಳಿವೆ. ವೀರಶೈವದಲ್ಲಿ ನಾಲ್ಕು ಭೇದಗಳಿವೆ. ಶೈವದ ಸಪ್ತ ಭೇದಗಳಿಂತಿವೆ–

೧) ಅನಾದಿಶೈವ–ನಾನೇ (ಶಿವನೇ) ಪರಬ್ರಹ್ಮ ಶಿವನಿಗಿಂತಲೂ ಶ್ರೇಷ್ಠವಾದ ಮತ್ತೊಂದು ವಸ್ತು ಇರುವದಿಲ್ಲ. ಹೀಗೆ ದೃಢವಾದ ನಂಬಿಕೆಯುಳ್ಳವರು ಯಾರೋ ಅವರು ಅನಾದಿಶೈವರು.

೨) ಆದಿಶೈವ–ಪಂಚಾಕ್ಷರಿ ಮಂತ್ರದ ದೀಕ್ಷೆ ಪಡೆದವನು ಆದಿಶೈವನು.

೩) ಮಹಾಶೈವ ಶಿವನ ಪಂಚಮುಖಗಳ ಸ್ವರೂಪವನ್ನು ಮನದಲ್ಲಿ ಧ್ಯಾನಿಸುತ್ತಾ ಪೂಜಿಪನು ಮಹಾಶೈವನು.

೪) ಅನುಶೈವ-ಪರಮಾತ್ಮನ ಸ್ವರೂಪವಾದ ಲಿಂಗವನ್ನು ಪ್ರತಿದಿವಸ ಪೂಜಿಸುವವನು ಅನುಶೈವನು.

೫) ಅನಂತರಶೈವ-ಪರಮಾತ್ಮನ ಸ್ವರೂಪದಲ್ಲಿ ಭೇದಾಭೇದ ರಹಿತನಾಗಿ ನಿತ್ಯಾ ಪೂಜಿಪನೇ ಅನಂತರಶೈವನು.

೬) ಪ್ರವರಶೈವ-ಪರಶಿವ ಮುಕ್ತಿಯನ್ನು ಆಹ್ವಾನದಿಂದ ವಿಸರ್ಜನವರೆಗೆ ವಿಧಾನೋಕ್ತ ವಾಗಿ ಪೂಜಿಪನಿವನು. ಇವನು ಸರ್ವತಂತ್ರಗಳಲ್ಲಿ ಪ್ರಸಿದ್ಧನು.

೭) ಅಂತ್ಯಶೈವ-ಪರಮಾತ್ಮನ ಚಿನ್ಹ ಕಂಡು ನಮಸ್ಕರಿಸಿ ನಿಶ್ಚಿಂತನಾಗಿರುವವನು ಅಂತ್ಯ ಶೈವ.

ಈ ಭೇದದಲ್ಲಿ ಭಕ್ತಿ, ಭಕ್ತಿಯ ಆಚರಣೆ, ಧ್ಯಾನಗಳನ್ನಾಧರಿಸಿರುವುದು ಕಂಡು ಬರುತ್ತದೆ. ಇನ್ನು ಆಚಾರ ಭೇದದಿಂದಾದ ಚತುರ್ವಿಡವಾದ ಶೈವವನ್ನೂ ಹೇಳಲಾಗಿದೆ. ಒಂದೇ ಶೈವವು ಜಾತಿಯಿಂದ ಸಪ್ತವಾಗುವದು. ಇಲ್ಲಿ ಕ್ರಿಶ್ಚನ್ ಧರ್ಮದ ಸ್ಮರಣೆ ಆಗು ವುದು. ಹಿಂದೂ ವರ್ಣದವರು ಕ್ರೈಸಲಾಗಲು ಬ್ರಾಹ್ಮಣ ಕ್ರಿಶ್ಚನ್, ಮಾದಿಗಕ್ರಿಶ್ಚನ್, ಒಡ್ಡರಕ್ರಿಶ್ಚನ್ ಎಂಬುದು ಬೇಧಗಳಾಗಿವೆ. ಅದೇ ರೀತಿ ಸ್ವತಂತ್ರಾಗಮ ಶೈವವು ಚತುರ್ವರ್ಣದವರನ್ನು ದೀಕ್ಷೆಮಾಡಿ ಶೈವರನ್ನು ಮಾಡಿಕೊಳ್ಳಲು ಸಪ್ತಶೈವಗಳಾಗಿವೆ. ಇದು ಅಧ್ಯಯನದ ದೃಷ್ಟಿಯಿಂದ ನೋಡಬೇಕಾದದ್ದು.

**ಇನ್ನು ವೀರಶೈವ ಪ್ರಭೇದಗಳ ನಿರೂಪಣೆ:**

ವೀರಶೈವ ಪ್ರಕಾಶಿಕೆಯು ವೀರಶೈವದಲ್ಲಿ ೧) ಸಾಮಾನ್ಯ ವೀರಶೈವ, ೨) ವೀರಶೈವ, ೩) ವಿಶೇಷ ವೀರಶೈವ ಮತ್ತು ೪) ನಿರಾಭಾರಿ ವೀರಶೈವ ಎಂದು ನಾಲ್ಕು ಪ್ರಭೇದಗಳು ಇವು ಆಚಾರ ಮೂಲ ಚಂದ್ರಜ್ಞಾನಾಗಮ ವೀರಶೈವ ಪ್ರಭೇದ!

ವೀರಶೈವ ಪ್ರವಕ್ಷ್ಯಾಮಿ ವಿದಿತಂ ಶ್ರುತಿ ತಂತ್ರಯೋಃ।
ಶ್ರೌತ ತಂತ್ರಮಿತಿ ಚ ದ್ವಿವಿಧಂ ಪರಿಕೀರ್ತಿತಮ್ ॥೩೦॥
ವರ್ಣಾಶ್ರಮೀಯ ಧರ್ಮಾಢ್ಯಂ ಶ್ರೌತಮಿತ್ಯಭಿಧೀಯತೇ।
ತದೀಯ ಧರ್ಮರಹಿತಂ ಸ್ವತಂತ್ರಮಿತಿ ಕಥ್ಯತೇ ॥೩೧॥
ಆಗಮೋತ್ತರ ಕಾಂಡೋಕ್ತ ದೀಕ್ಷಾಣಾಂ ಯಃ ಪರಿಗ್ರಹಃ।
ಸಮಾನ ಆದಿಶೈವೇನ ವಿಶೇಷಮಿಹ ಸಂಶೃಣು ॥೩೨॥

"ಶ್ರುತಿ ತಂತ್ರಗಳನ್ನು ಅನುಸರಿಸುವ ಶ್ರೌತರು, ಸ್ವತಂತ್ರರು ಎಂದು ವೀರಶೈವವು ಎರಡು ಬಗೆಯಾಗಿದೆ. ವರ್ಣಾಶ್ರಮ ಧರ್ಮಾನುಯಾಯಿಗಳು ಶ್ರೌತರು. ಇವುಗಳನ್ನು

ಅನುಸರಿಸದವರು ಸ್ವತಂತ್ರರು. ಇವರು ಆಗಮಿಕರು. ಆಗಮೋತ್ತರಕಾಂಡೋಕ್ತ ದೀಕ್ಷಾ ಸಂಸ್ಕಾರವುಳ್ಳವರು. ಇವರು ಆದಿಶೈವ ಸಮಾನರು. ಇಷ್ಟಲಿಂಗ ವಿಯೋಗವಾದರೆ, ವ್ರತಚ್ಯುತಿಯಾದರೆ ಹುಲುಕಡ್ಡಿಯಂತೆ ಹರಣವನ್ನು ಬಿಡುವ ವೀರವ್ರತವುಳ್ಳವರು ವೀರ ಶೈವರು ಮತ್ತು ಭಕ್ತಿಯ ಉತ್ಸಾಹ ವಿಶೇಷವೇ ವೀರತ್ವವೆನಿಸುತ್ತದೆ." ಅಲ್ಲದೆ ವೀರವ್ರತ ಗಳನ್ನು ಕೈಕೊಳ್ಳುವುದರಿಂದಲೂ ವೀರಶೈವೆನಿಸುತ್ತದೆ. ಇದು ಗುಣಕ್ರಿಯಾತ್ಮಕ ವಿವರಣೆ.

ಈ ವೀರಶೈವದಲ್ಲಿ ಮತ್ತೆ ಮೂರು ಭಾಗಗಳಿವೆ. ಅಂದರೆ ಅತಿವರ್ಣಾಶ್ರಮ ವೀರ ಶೈವದಲ್ಲಿ ಮೂರು ಭೇದಗಳಿವೆ. ಅಂದರೆ ವರ್ಣಾಶ್ರಮ ಧರ್ಮದ ವೀರಶೈವದಲ್ಲಿ ಹಾಗೂ ಅತಿವರ್ಣಾಶ್ರಮ ವೀರಶೈವದಲ್ಲಿ ಪ್ರಭೇದಗಳು ಇವೆಯೆಂದಂತಾಯಿತು. ೧) ಸಾಮಾನ್ಯ ವೀರಶೈವ, ೨) ವಿಶೇಷ ವೀರಶೈವ ಮತ್ತು ೩) ನಿರಾಭಾರಿ ವೀರಶೈವ ವೀರಶೈವ ಸದಾಚಾರ ಸಂಗ್ರಹದ ೭ನೆ ಪ್ರಕರಣದಲ್ಲಿ ವೀರಶೈವದ ವಿವರಣೆ ಇಂತಿದೆ–

........ಸರ್ವೇಷಾಮಪಿ ಶೈವಾನಾಂ ವೀರಶೈವಂ ಮಹತ್ತರಮ್ ।೪೭।
ಸುಲಭಾದೇವಪೂಜಾಚ ಸುಲಭಂ ಚ ಕ್ರಿಯಾವಹಮ್।
ಅಲ್ಪಕ್ರಿಯಂ ಬಹುಫಲಂ ವೀರಶೈವಂ ಮಹೇಶ್ವರೀ ।೪೮।

ಶೈವಗಳಲ್ಲಿ ವೀರಶೈವವು ಅತ್ಯಂತ ಶ್ರೇಷ್ಠವು. ಇದರಲ್ಲಿ ದೇವರಪೂಜೆ ಬಹಳ ಸುಲಭ ವಾದುದು. ಈ ಧರ್ಮದ ಕಾರ್ಯಕಲಾಪವು ಸುಲಭವಾದುದು. ವೀರಶೈವವು ಸ್ವಲ್ಪಕ್ರಿಯೆ ಯುಳ್ಳದ್ದಾದರೂ ಬಹುಫಲವನ್ನು ಕೊಡತಕ್ಕದಾಗಿದೆ. ವೀರಶೈವ ಧರ್ಮಾತಿರಿಕ್ತ ಶೈವ ಧರ್ಮದವರಿಗೆ ಮೂರು ಜನ್ಮದಲ್ಲಿ ಮುಕ್ತಿಯಾಗುತ್ತದೆ. ವೀರಶೈವರಿಗೆ ಮಾತ್ರ ಒಂದೇ ಜನ್ಮದಲ್ಲಿ ಮುಕ್ತಿಯಾಗುತ್ತದೆ. ವೀರಶೈವನು "ಬಾಹ್ಯಕ್ರಿಯಾ ಸಂಕುಲ ನಿಸ್ಪೃಹತಾ" ಎಂದರೆ ಬಾಹ್ಯಕರ್ಮಗಳಲ್ಲಿ ಆಸಕ್ತನಾಗದಿರುವುದು ವೀರಶೈವನ ವಿಶಿಷ್ಟ ಆಚಾರ.ಆದರೆ ಶೈವನು ಬಾಹ್ಯಕ್ರಿಯಾ ಪ್ರಿಯನು, ಆತ್ಮಶುದ್ಧಿ, ಸ್ಥಾನಸುದ್ಧಿ, ದ್ರವ್ಯಶುದ್ಧಿ, ಲಿಂಗಶುದ್ಧಿ ಶೋಷಣ–ದಾಹನ–ಪ್ಲಾವನ–ಅಂಗನ್ಯಾಸ, ಆಹ್ವಾನ, ವಿಸರ್ಜನ, ನಾಸಿಕಾಗ್ರಹಣ, ರೇಚಕ, ಪೂರಕ, ಕುಂಭಕ, ಪ್ರಾಣಾಯಾಮ, ಜಠರಾಕುಂಚನ, ಪ್ರಾಚೀವೀಕ್ಷಣ, ಮೌನಮುದ್ರಾ ದೃಗುನ್ಮೀಲನ ಮೊದಲಾದವುಗಳು. ಈ ಯಾವತ್ತೂ ಕ್ರಿಯೆಗಳಲ್ಲಿ ನಿಸ್ಪೃಹತಾವೇ ಚಿತ್ತ ನಿವೃತ್ತಿ ವೀರಶೈವನಿಗೆ ವಾಯವೀಯ ಸಂಹತೆ ಇದನ್ನೇ ಹೀಗೆ ಹೇಳಿದೆ.

ನಿರುದ್ಧ ವೃತ್ಯಾಂತರಸ್ಯ ನಿಶ್ಚಲಾ।
ಯಾವೃತ್ತಿಃ ಸಾ ಸಮಾಯೋಗಃ।। –ವಾ. ಸಂ.(ಉ.ಭಾ.)ಅಧ್ಯಾಯ ೩೭ ಶ್ಲೋ. ೩. ಹೀಗೆ ಶೈವ, ವೀರಶೈವಗಳು ಬಾಹ್ಯಪೂಜೆ ಮತ್ತು ಅಂತರ ಪೂಜೆಗಳು, ಅವುಗಳ ಗುಣ ವಿಶೇಷಗಳಾಗಿವೆ.

**ತೌಲನಿಕ ಹಸಿಗೆ:**

ಶೈವ, ವೀರಶೈವಗಳ ತೌಲನಿಕ ಅಧ್ಯಯನವು ಈ ನಿರೂಪಣೆಯಿಂದ ಅಧಿಕೃತವಾಗಿ

ಮಾಡಲು ಸಾಧ್ಯ. ಇಲ್ಲಿ ತೌಲನಿಕ ಅಧ್ಯಯನದ ವಸ್ತುವೆಂದರೆ ಪರವಸ್ತು, ದೇವತಾ ಸಿದ್ಧಾಂತ, ಧಾರ್ಮಿಕ ಕ್ರಿಯೆಗಳು–ಬಹುಕರ್ಮ ಅಲ್ಪಕರ್ಮ, ಭಕ್ತಿ, ಯೋಗ, ಮುಕ್ತಿ ವಿಚಾರ ಮೊದಲಾದವುಗಳು.

೧) ಪರವಸ್ತು

ಪರವಸ್ತು ಅಂದರೆ ಪರಬ್ರಹ್ಮ. ಪರಬ್ರಹ್ಮ ಅಂದರೆ ದೇವರ ಅಥವ ಈಶ್ವರ ಎಂದು ಪಾಶ್ಚಿಮಾತ್ಯದಾರ್ಶನಿಕರು ಬಗೆಯುವದಿಲ್ಲ. ಇದು ಸೈದ್ಧಾಂತಿಕ ದೃಷ್ಟಿಕೋನವಲ್ಲ ಒಂದು ವೇಳೆ ಪ್ರರಬ್ರಹ್ಮ ಮತ್ತು ದೇವರು ಎಂದು ಬಗೆದರೆ ಈ ರೀತಿ ಅವರು ತತ್ತ್ವಜ್ಞಾನ ಮತ್ತು ಮತಧರ್ಮ ತತ್ತ್ವಜ್ಞಾನಗಳಲ್ಲಿ ಭೇದಮಾಡುವರು. ಶಂಕರಾದ್ವೈವವನ್ನು ಳಿದು ರಾಮಾನುಜರ ವಿಶಿಷ್ಟಾದ್ವೈತ, ದ್ವೈತ, ಶಕ್ತಿ ವಿಶಿಷ್ಟಾದ್ವೈತಗಳೆಲ್ಲ ಅವರ ದೃಷ್ಟಿಯಲ್ಲಿ ಮತಧಾರ್ಮಿಕ ತತ್ತ್ವಜ್ಞಾನ ವೆನ್ನುವರು. ಇವರದು ಹಾಗಿರಬಹುದು. ಆದರೆ ಭಾರತೀಯರು ಹಾಗೆ ಭಾವಿಸಿಲ್ಲ. ಭಾರತೀಯ ದಾರ್ಶನಿಕರು ತತ್ತ್ವಜ್ಞಾನ ಮತ್ತು ಮತ ಧರ್ಮ ತತ್ತ್ವ ಜ್ಞಾನ ಗಳನ್ನು ಬೇರೆ ಬೇರೆ ಎಂದು ಬಗೆದಿಲ್ಲ. ಭಾರತೀಯ ಆಸ್ತಿಕ ದರ್ಶನಗಳೆಲ್ಲವುಗಳ ಅಧ್ಯಯನವನ್ನು ಇದೇ ರೀತಿಯಿಂದ ಮಾಡಬೇಕಾದುದು ಅನಿವಾರ್ಯ. ಭಾರತೀಯರಿಗೆ ಪರಬ್ರಹ್ಮ ಮತ್ತು ದೇವರಲ್ಲಿ ಭೇದವಿಲ್ಲ. ಶಿವ, ವಿಷ್ಣು ಮತ್ತು ಶಕ್ತಿಗಳು ಪರಬ್ರಹ್ಮ ಎಂದು ಪ್ರತಿಪಾದಿಸುವುದು ಅತ್ಯಂತ ಜನಪ್ರಿಯ ಅಭಿಪ್ರಾಯ. ಶೈವ ಪ್ರಕಾರಗಳಿಗೆಲ್ಲಕ್ಕೂ ಶಿವನೇ ಪರಮದೈವ ಅಥವಾ ಪರಬ್ರಹ್ಮ. ಇದು ಸಗುಣ, ನಿರ್ಗುಣವೆಂದು ಹೇಳಲಾಗುತ್ತದೆ. ನಿರ್ಗುಣವನ್ನೇ ಬಯಲು, ಶೂನ್ಯ ಮೊದಲಾಗಿ ಹೆಸರಿಸಲಾಗಿದೆ. ಇದು ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ ಮತ್ತು ಘನ ಮೊದಲಾಗಿ ಗುಣಗಳುಳ್ಳದು ಎಂದು ಶೈವ ಪ್ರಕಾರಗಳಲ್ಲಿ ಒಂದಾದ ವೀರಶೈವವು ಪ್ರತಿಪಾದಿಸುತ್ತದೆ. ಉಳಿದ ಶೈವಗಳು ಅತ್ಯಂತ ಕಡಿಮೆ ಗುಣಗಳನ್ನು ಈ ಪರವಸ್ತುವನ್ನು ಕುರಿತು ಹೇಳುವದೆಂದರೆ ಅದು ಸತ್, ಚಿತ್, ಆನಂದ ರೂಪ ಎಂದು ಬಗೆಯುವರು. ವೀರಾಗಮವು ಅದನ್ನು ಇಂತು ವರ್ಣಿಸುತ್ತದೆ—

"ಆದ್ಯಂತ ಶೂನ್ಯ ಮಮಲಂ ಪರಿಪೂರ್ಣಮೇಕಂ ।
ಸೂಕ್ಷ್ಮಂ ಪರಾತ್ಪರ ಮನಾಮಯಮ ಪ್ರಮೇಯಂ ।
ಭಾವೈಕ್ಯ ಗಮ್ಯ ಮಜಡಂ ಶಿವತತ್ತ್ವಮಾಹುಃ ।"

ಜಗತ್ ಸೃಷ್ಟಿ ವಿಚಾರವು ದೇವರಿಂದ ಎಂದು ಶೈವಗಳು ಬಗೆಯುವಂತೆ, ಬಯಲಿನಿಂದ ಸೃಷ್ಟಿಯ ವಿಚಾರ ಎಂಬ ವಾದವನ್ನುವೀರಶೈವ ಪ್ರತಿಪಾದಿಸುವುದು. ಇದು ಪರವಸ್ತು ವಿಚಾರಕ್ಕೂ ಅತ್ಯಂತ ನಿಕಟ ಸಂಬಂಧವಿರುವ ವಿಚಾರ. ಈ ಸಂದರ್ಭದಲ್ಲಿ ಸೃಷ್ಟಿಕರ್ತ ದೇವರು ಎಂದು ಪ್ರತಿಪಾದಿಸುವುದು ಉಂಟು. ಇದು ಶಿವನಿಗೆ ಕರ್ತೃತ್ವ ಆರೋಪದ ಸಿದ್ಧಾಂತ. ಇದು ವೇದದಲ್ಲಿರುವ ವಿಚಾರ ಅಥವಾ ಸಿದ್ಧಾಂತ

ಗಳಲ್ಲಿಯೂ ಇದೆ. ಈ ಶಿವನು ಸಕಲ ಎಂದು ಕೆಲವು ಶೈವಗಳು ಎಂದರೆ, ಬೇರೆ ಶೈವಗಳಲ್ಲಿ ಒಂದಾದ ವೀರಶೈವವು ಈ ಶಿವನು ನಿಷ್ಕಲ ಎಂದು ತಿಳಿಸುತ್ತದೆ. ಈ ಬಯಲು ಶಕ್ತಿ ವಿಶಿಷ್ಟ ಎಂದು ವೀರಶೈವದ ಸಿದ್ಧಾಂತ. ಈ ಎಲ್ಲ ಸಿದ್ಧಾಂತ ಗಳೂ ಒಟ್ಟು ತತ್ತ್ವಗಳು (ಕರಣಗಳು) ೩೬ ಎಂದು ಹೇಳುತ್ತವೆ. ಇದು ಕೂಡ ಅನೇಕ ದೃಷ್ಟಿಯಿಂದ ಅಧ್ಯಯನೀಯ ವಿಷಯವೇ ಆಗಿದೆ. ಸಿದ್ಧಾಂತ ಶಿಖಾಮಣಿಯು ಸಾಂಖ್ಯ, ನ್ಯಾಯ, ಪೂರ್ವ ಮೀಮಾಂಸಗಳು ಪೂರ್ವ ಪಕ್ಷವೆಂದೇ ಹೇಳುತ್ತದೆ. ವಸ್ತು ಸಿದ್ಧಾಂತ ಮತ್ತು ಪ್ರಮಾಣ ಸಿದ್ಧಾಂತಗಳು ಸಿದ್ಧಾಂತ ಶಿಖಾಮಣಿಯು ವಿಚಾರವನ್ನು ಸಮರ್ಥಿಸು ತ್ತವೆ. ಪೀರಶೈವ ಸಿದ್ಧಾಂತವನ್ನು ಹೋಲುವ ಕಾಶ್ಮೀರ ಶೈವವು ತನ್ನದೇ ಆದ ವಸ್ತು ಸಿದ್ಧಾಂತ ಪ್ರತಿಪಾದಿಸಿದೆ. ಎರಡೂ ಸಿದ್ಧಾಂತಗಳೂ ೩೬ ತತ್ತ್ವಗಳನ್ನೇ ಹೇಳುವವು. ಆದರೂ ಅವೆರಡರುಗಳು ಸೈದ್ಧಾಂತಿಕ ದೃಷ್ಟಿಕೋನಗಳು ಭಿನ್ನ ಭಿನ್ನವಾಗಿ ಪಡೆದುದರಿಂದ ಭಿನ್ನ ಭಿನ್ನ. **Dr. K. C. Pandey writes: Sure's Varacarya, a fapil of Sankara, in his Manasollasa distrinctly refers to the thirty six Saiva cotegories; ........"Evam sattrimsattattvani yani saiva game prasiddhani" It may be pointed out here that these thirty six cotegories are slightly different from those admitted by the Kashmir Saivas. They may be stated as follows:—**

**Five vital airs, five elements, fourteen Indriyas, Mahan, Kala, pradhana, Maya, Vidya, Parusa, Bindu, Nada, sakti, Siva santa and Atita.**

ಶೈವಸಿದ್ಧಾಂತವು (ಆಗಮೋಕ್ತ ಶೈವತತ್ತ್ವ ಜ್ಞಾನವು) ಅಂದರೆ ಶೈವ (ಸಪ್ತ ಶೈವ) ಮತ್ತು ವೀರಶೈವ ಸಿದ್ಧಾಂತಗಳು ಕಾಶ್ಮೀರ ಶೈವದಂತೆ ಆಭಾಸವಾಗಿರದೆ ಪರಿಣಾಮವಾಗಿದೆ. ಇದು ಮೇಲೆ ಡಾ|| ಕೆ. ಸಿ. ಪಾಂಡೆಯವರು ಹೇಳುವ ಅಭ್ಯಂತರ ವನ್ನು ಒಂದೇ ಮಾತಿನಲ್ಲಿ ತಿಳಿಸುತ್ತದೆ. ಇನ್ನು ಸಪ್ತ ಶೈವಗಳೆಲ್ಲ ಪರಿಣಾಮವಾದ ವೆಂದಾಗ ಕೂಡ ವೀರಶೈವವು ಉಳಿದ ಶೈವಗಳಿಂದ ತೀರ ಭಿನ್ನವಾದವಾಗಿದೆ. ಇದು ಗಮನಾರ್ಹವಾದ ಅಂತರ. ಇವೆಲ್ಲ ದ್ವೈತವಾದಗಳಾಗಿವೆ. ಆದರೆ ವೀರಶೈವವು ಅದ್ವೈತವಾದವಾಗಿದೆ. ಅದ್ವೈತವಾದವೆಂದರೆ ಅವಶ್ಯವಾಗಿ ಶಾಂಕರದ್ವೈತವೆಂದೇನು ತಿಳಿಯಬೇಕಿಲ್ಲ. ಇದು ಶಕ್ತಿ ವಿಶಿಷ್ಟಾದ್ವೈತವೆಂಬ ಅದ್ವೈತ ಪ್ರಕಾರವಾಗಿದೆ. ಬಡಿಗ ಚಕ್ಕಡಿ ಯನ್ನು ಮಾಡುವಂತೆ ದೇವರು ಸೃಷ್ಟಿಯನ್ನು ಮಾಡಿದ್ದಾನೆ ಎಂಬಂಥ ಸಿದ್ಧಾಂತ ವೀರಶೈವ ದ್ದಲ್ಲ. ವೀರಶೈವದ ಈ ಸಿದ್ಧಾಂತದ ಪ್ರಕಾರ ಬಯಲೇ ನಿಮಿತ್ತ ಕಾರಣ, ಉಪಾದಾನ ಕಾರಣ ಮತ್ತು ಸಹಕಾರೀ ಕಾರಣವೆಂದು ಬಹು ಸ್ಥೂಲವಾಗಿ ಹೇಳಬಹುದು. ಈ ದೃಷ್ಟಿಯಿಂದ–ಸೃಷ್ಟಿ ಸಿದ್ಧಾಂತದ ದೃಷ್ಟಿಯಿಂದ–ಇದು ಉಳಿದ ಶೈವಗಳಿಂದ ಭಿನ್ನವಾಗಿದೆ. ಈ ಅದ್ವೈತತತ್ತ್ವ–ಬಯಲುತತ್ತ್ವ ಅಥವಾ ಶೂನ್ಯತತ್ತ್ವವು ಶಕ್ತಿಯುತವಾಗಿದೆ.

ಶಕ್ತಿಯು ಅವಿನಾಭಾವದಿಂದ ಬಯಲಿನಲ್ಲಿದೆ. ಪಂ. ವೈ. ನಾಗೇಶ ಶಾಸ್ತ್ರಿಗಳು "ಷಟ್ ಸ್ಥಲ ತತ್ತ್ವದರ್ಪಣ" ಎಂಬ ಗ್ರಂಥದಲ್ಲಿ ಹೀಗೆ ಬರೆಯುತ್ತಾರೆ-ಶೈವ ಸಿದ್ಧಾಂತದಂತೆ ವೀರಶೈವ ಸಿದ್ಧಾಂತವೂ ೩೬ ತತ್ತ್ವಗಳನ್ನು ಅಂಗೀಕರಿಸುವುದು. ಆದರೆ ಶೈವಸಿದ್ಧಾಂತ ದಲ್ಲಿ ವರ್ಣ, ಪದ, ಮಂತ್ರ, ಭುವನ, ತತ್ತ್ವ, ಕಲೆ ಎಂಬ ಷಡಧ್ವಮಾರ್ಗಕ್ಕನುಸರಿಸಿ ತತ್ತ್ವ ವಿವೇಚನೆಯು ಇರುವುದು. ವೀರಶೈವರು ಷಡಧ್ವಗಳನ್ನು ಒಪ್ಪಿದರೂ ಇವರ ತತ್ತ್ವ ವಿವೇಚನವು ಷಟ್‌ಸ್ಥಲ ಮಾರ್ಗಕ್ಕನುಗುಣವಾಗಿರುವುದು. ಈ ೩೬ ತತ್ತ್ವಗಳನ್ನು ಮೊದಲು ೧೧ ಲಿಂಗತತ್ತ್ವಗಳು ೨೫ ಅಂಗತತ್ತ್ವಗಳು ಎಂದು ದ್ವಿಭಾಗವಾಗಿ ವಿಂಗಡಿಸಿರುವರು.

**ದೇವತಾ ಸಿದ್ಧಾಂತ:** ಏಕೇಶ್ವರವಾದ ಮತ್ತು ಅದ್ವೈತವಾದಗಳೆರಡೂ ಒಂದೇ ಎಂದು ತೋರಿಕೆಗೆ ತೋರುವವು. ಆದರೆ ಇದು ಒಂದರಿಂದೊಂದು ಭಿನ್ನವಾಗಿರುತ್ತವೆ. ಆಗಲೆ ತಿಳಿಸಿದಂತೆ ದೇವತಾ ಸಿದ್ಧಾಂತ ಮತ್ತು ಪರತತ್ತ್ವ ಸಿದ್ಧಾಂತಗಳು ಭಿನ್ನ ಭಿನ್ನ. ದೇವತಾ ಸಿದ್ಧಾಂತವನ್ನು ಮತ್ತು ಪರತತ್ತ್ವ ಸಿದ್ಧಾಂತವನ್ನು ಒಂದೇ ಎಂದು ಬಗೆದಿದ್ದಾರೆ. ಶೈವದಲ್ಲಿರುವ ಅನೇಕ ಅಥವಾ ಬಹುದೇವತಾವಾದ, ಇಷ್ಟ ದೇವತಾ ಸರ್ವೋತ್ತಮತಾ ವಾದಗಳು ಅರ್ಥಹೀನವಾಗುತ್ತವೆ. ಆಗ ಶೈವ ಪ್ರಭೇದಗಳು ಕೂಡ ನಿರ್ಲಕ್ಷಿಸಲ್ಪಡ ಬೇಕಾಗುತ್ತದೆ. ಆದರೆ ಇದು ಶೈವ ಧಾರ್ಮಿಕ ಸಾಹಿತ್ಯ ಮತ್ತು ಅನುಯಾಯಿಗಳು ಪಡೆದ, ಪಡೆಯುವ ಮುಕ್ತಿಗಳಿಗೂ ಪದವಿಗಳಿಗೂ ಮಾರಕವಾಗಿ ಶೈವದ ವಿವಿಧ ದೇವತಾ ವಾದವೇ ಕುಸಿದು ಹೋಗುತ್ತದೆ. ಇದು ತೌಲನಿಕ ಅಧ್ಯಯನದ ದೃಷ್ಟಿಕೋನವಾಗದೆ ಏಕೇಶ್ವರವಾದದ ಸರ್ವೋನ್ನತೆಯನ್ನು ಪ್ರತಿಪಾದಿಸುವ ವಿಚಾರ ಪ್ರತಿಪಾದನೆಯಾಗುತ್ತದೆ. ದ್ವೈತವನ್ನು ಅಂದರೆ ಶಿವ ಜೀವರಲ್ಲಿರುವ ಭೇದವನ್ನು ತಿಳಿಸುವ ಶೈವಗಳಿಗೆ ವ್ಯತಿರಿಕ್ತ ವಾದ ನಿಲುವು ಆಗುತ್ತದೆ. ಹೀಗೆ ಮಾಡಿದಾಗ ಮೂಲ ಉದ್ದೇಶಕ್ಕೆ ಮಾರಕವಾಗಿ ಬಿಡುತ್ತದೆ. ಆದ್ದರಿಂದ ಏಕೇಶ್ವರವಾದವೂ ಅದ್ವೈತವಾದವೂ ಒಂದೇ ಎಂಬುದು ಬೇರೆ ಬೇರೆ ದೃಷ್ಟಿಕೋನಗಳ ಪ್ರತಿಫಲ. ಏಕೇಶ್ವರವಾದದಲ್ಲಿ ದೇವ ಭಕ್ತರ ಸಂಬಂಧದ ವಿಚಾರದ ರೀತಿ, ಅದ್ವೈತವಾದದಲ್ಲಿಯ ತತ್ತ್ವಗಳ ಸಂಬಂಧದ ವಿಚಾರ ರೀತಿ ತೀರ ಭಿನ್ನ ಭಿನ್ನ. ಏಕೇಶ್ವರವಾದವು ಅದ್ವೈತವಾದದಲ್ಲಿ ಕೊನೆಯ ತತ್ತ್ವವಾಗಿ ಉಳಿಯಲಾರದು. ಆದ್ದರಿಂದಲೇ ಶಂಕರಾಚಾರ್ಯರ ಅದ್ವೈತದಲ್ಲಿ ಅದೊಂದು ಪರಬ್ರಹ್ಮರಲ್ಲಿಯ ತೋರಿಕೆ, ಮಾಯೆ. ಅದ್ವೈತವಾದ ಏಕೇಶ್ವರವಾದಗಳು ಒಂದೇ ಅಲ್ಲ ಎಂಬುದನ್ನು ತೋರಿಸಲು ವಿದ್ವಾಂಸರು ಈ ಪ್ರಣಾಲಿಯನ್ನು ಉದ್ಧರಿಸುತ್ತಾರೆ. ಆದರೆ ಧಾರ್ಮಿಕ ಸಾಹಿತ್ಯದಲ್ಲಿ ಏಕೇಶ್ವರವಾದವೇ ಮೂಲ ತತ್ತ್ವ. ಇದೇ ಎಲ್ಲವುಗಳ ಆಶ್ರಯ ಸ್ಥಾನ. ಶೈವದ ದ್ವೈತ ವಾದವು, ವೀರಶೈವದ ಶಕ್ತಿ ವಿಶಿಷ್ಟಾದ್ವೈತವು, ಈ ದೃಷ್ಟಿಯಿಂದ ನೋಡಿದಾಗ, ಮತ ಧಾರ್ಮಿಕ ತತ್ವದಲ್ಲಿ ಎರಡೂ ಏಕೇಶ್ವರವಾದಗಳಾದುದು ಸ್ಪಷ್ಟ. ಆದರೆ ದಾರ್ಶನಿಕ ದೃಷ್ಟಿ ಯಿಂದ ಮಾತ್ರ ಅವು ಭಿನ್ನ ಭಿನ್ನ.

ದೇವತಾವಾದದಲ್ಲಿ ಎರಡು ಪ್ರಣಾಲಿಗಳಿವೆ. ಒಂದು ಸಗುಣ ದೇವತಾವಾದ

ಒಂದು ನಿರ್ಗುಣ ದೇವತಾವಾದ. ಶೈವ ಮತ್ತು ವೀರಶೈವಗಳ ದೇವತಾವಾದದಲ್ಲಿ ಇದನ್ನು ನೋಡುತ್ತೇವೆ. ಸಗುಣ ದೇವತಾವಾದವನ್ನು ಎಲ್ಲ ಶೈವಾಂಗಗಳೂ ಒಪ್ಪಿ ಕೊಳ್ಳುವವು. ಈ ಸಗುಣದೇವತಾವಾದವೂ, ಅನೇಕ ದೇವತಾವಾದವೂ ಸಾಮಾನ್ಯ ಅರ್ಥ ದಲ್ಲಿ ಭಿನ್ನ ಭಿನ್ನವೇನಲ್ಲ. ಸಗುಣ ದೇವತಾವಾದವೇ ಅನೇಕ ದೇವತಾವಾದದ ಮೂಲ ವಾಗಿದೆ. ಸಪ್ತಾಂಗ ಶೈವದಲ್ಲಿ ತಿಳಿಸಿದ ದೇವರ ಪೂಜೆಯಲ್ಲಿ ಇದನ್ನು ಬಹು ಸ್ಪಷ್ಟವಾಗಿ ಗುರುತಿಸಬಹುದು. ವೀರಶೈವವು ಸಗುಣ ದೇವತಾವಾದವನ್ನು ಒಪ್ಪುವದಾದರೂ ಅದು ನಿರ್ಗುಣ ದೇವತಾವಾದದ ಮೂಲ ತಾತ್ತ್ವಿಕ ತಳಹದಿಗನುಸರಿಸಿ ಇರುವದು. ಶೈವ ಸಗುಣವು ಫಲಪದಗಳ ಗುರಿಯುಳ್ಳದಾಗಿ ದ್ವೈತವಾದರೆ, ವೀರಶೈವವು ಸಾಮರಸ್ಯ ಬೋಧಕವಾಗಿ ಚಂದ್ರ ಚಂದ್ರಿಕೆಗಳಂತೆ ಅಭಿನ್ನವಾಗಿ ಅವಿನಾಭಾವ ಸಂಬಂಧದ ಭಕ್ತ ಬ್ರಹ್ಮ. ಏಕೇಶ್ವರ ವಾದದ ವೀರಶೈವದ ಪ್ರಕಾರ ದೇವತೆಗಳು, ಮಾನವರೂ ಉಳಿದ ಪ್ರಪಂಚವೆಲ್ಲ ಪಶುವರ್ಗ. ಈ ವಿಚಾರ ಬಹುದೇವತಾವಾದದ ಶೈವ, ಇಷ್ಟದೇವತಾ ಸರ್ವೋತ್ತಮತಾವಾದದ ಶೈವಗಳಲ್ಲಿ ಇರುವದಿಲ್ಲ. ಲಿಂಗವೇ ತನ್ನನ್ನು ತಾನು ಪೂಜಿಸಿಕೊಳ್ಳಲು ಈ ಬ್ರಹ್ಮಾಂಡ ವಾಯಿತೆಂದು-ಅಂಗವಾಯಿತೆಂದು-ವೀರಶೈವವು ತಿಳಿಸಿ ಶೈವದ ಏಕೇಶ್ವರವಾದ ಹಾಗೂ ವೀರಶೈವದ ಏಕೇಶ್ವರವಾದದಲ್ಲಿ ಕೂಡ ಭೇದವಿದೆ ಎಂಬುದನ್ನು ಸ್ಪಷ್ಟಗೊಳಿಸಿದೆ.

ಇದು ಪರತತ್ತ್ವವಾದ, ಏಕೇಶ್ವರವಾದ, ಬ್ರಹ್ಮೈರೇಶ್ವರವಾದ, ಬಹುದೇವತಾ ವಾದಗಳ ಬೋಧಿಸುವ ಶೈವ, ವೀರಶೈವಗಳ ತೌಲನಿಕ ಪರಾಮರ್ಶೆ.

**೨. ಇಷ್ಟದೇವತಾ ಅಥವ ಲಿಂಗ ಹಸಿಗೆ:**

ಶೈವ, ವೀರಶೈವಗಳಲ್ಲಿ ಲಿಂಗ ಹಸಿಗೆಯು ಕೂಡ ತುಂಬ ಮಹತ್ವದ ವಿಚಾರ. ಶೈವ ಪ್ರಭೇದಗಳಲ್ಲಿ ಲಿಂಗ ಪೂಜೆಯು ಒಂದು ಧಾರ್ಮಿಕ ಆಚಾರ. ಲೋಕೇ ಹಿ ಬಹುಧಾ ಪ್ರೋಕ್ತಾ ನಾನಾ ಲಾಂಛನ ಧಾರಿಣಃ । ತೇಷು ಶ್ರೇಷ್ಠಾ ಮಹಾ ದೇವಿ ಶಿವಲಾಂಛನ ಸಂಯುತಾಃ ॥ ತೇಷು ಲಿಂಗಾಂಗಿನಃ ಶ್ರೇಷ್ಠಾ ವೀರಶೈವ ಪರಾಯಣಾಃ । ಸೂ. ತಂ. ೯.೩೬-೩೭ ಲೋಕದಲ್ಲಿ ಲಾಂಛನ ಧಾರಿಗಳು ಸಾಕಷ್ಟು ಜನರಿದ್ದಾರೆ. ಅವರಲ್ಲಿ ಶಿವಲಾಂಛನ ಧಾರಿಗಳು ಶ್ರೇಷ್ಠರು. ಅವರಲ್ಲಿ ವೀರಶೈವ ಪರಾಯಣರಾದ ಲಿಂಗಾಂಗಿಗಳು ಶ್ರೇಷ್ಠರು. ಲಿಂಗ ಪೂಜಕರಲ್ಲಿ ಸ್ಥೂಲವಾಗಿ ಎರಡು ಪ್ರಕಾರಗಳುಂಟು. ಒಂದು ಗುರು ಕೊಟ್ಟ ಲಿಂಗ, ಗ್ರಾಮದಲ್ಲಿ ಸ್ಥಾಪನೆಗೊಂಡ ಲಿಂಗ. ಇವೆರಡರ ಪೂಜೆಗಳೂ ಭಿನ್ನ ಭಿನ್ನ. ಗುರು ಕೊಟ್ಟ ಲಿಂಗವು ಧಾರಣ ಮಾಡುವಂತೆ, ಧಾರಣ ಮಾಡಿ ಹಸ್ತದಲ್ಲಿ ಪೂಜೆಗೈವುದು ಆಗಿದೆ, ಸ್ಥಂಡಿಲದಲ್ಲಿಟ್ಟು ಪೂಜಿಸುವದು ಆಗಿದೆ. ಸ್ಥಾವರ ಲಿಂಗ ಬಾಹ್ಯ ಪೂಜೆ, ಸಾಮೂಹಿಕ ಪೂಜೆ ಗುರು ಕೊಟ್ಟ ಲಿಂಗದಲ್ಲಿ ಕೂಡ ಎರಡು ಪ್ರಕಾರಗಳು. ಸ್ವಾರ್ಥ ಪೂಜೆ, ಪರಾರ್ಥ ಪೂಜೆ. ಗುರು ಕೊಟ್ಟ ಲಿಂಗ ಪೂಜಕರು ಶುದ್ಧಶೈವರು ಮತ್ತು ವೀರಶೈವರು. ಅಂದರೆ ಲಿಂಗವು ಸ್ಥಾವರವೆಂದೂ, ಇಷ್ಟವೆಂದೂ ಎರಡು

ಒಗೆಯಾಗಿದೆ. ಇವೆರಡೂ ಶಿವಲಾಂಛನಗಳೇ ಆದರೂ ಅವುಗಳು ಮೂಲತತ್ತ್ವಗಳಾದ ದ್ವೈತ, ಅದ್ವೈತಗಳನ್ನು ಸೂಚಿಸುತ್ತವೆ. ಶೈವರು ಪೂಜಿಸುವ ಸ್ಥಾವರಲಿಂಗವು ದ್ವೈತ ಭಾವ ಪ್ರಣಾಲಿ ಸೂಚಿಸಿದಂತೆ, ಶುದ್ಧ ಶೈವರು ಪೂಜಿಸುವ ಇಷ್ಟಲಿಂಗವೂ ದ್ವೈತ ಭಾವ ಪ್ರಣಾಲಿ ಸೂಚಿಸುತ್ತದೆ. ವೀರಶೈವರು ಪೂಜಿಸುವ ಇಷ್ಟಲಿಂಗವು ಲಿಂಗ ಮತ್ತು ಅಂಗಗಳು ಬೇರೆ ಬೇರೆ ಅಲ್ಲ ಅಂದರೆ ದ್ವೈತವಿಲ್ಲಿಲ್ಲವೆಂದು ತಿಳಿಸುವದರ ಜೊತೆಯಲ್ಲಿ ಅನ್ಯ ಪೂಜೆಯಾಗಿರದೆ ತನ್ನ ತಾನರ್ಜಿಸಿಕೊಳ್ಳುವದಾಗಿದೆ. ಹೀಗೆ ಸೈದ್ಧಾಂತಿಕ, ಅದಕ್ಕನುಗುಣವಾದ ಧಾರ್ಮಿಕ ಆಚಾರದ ವಿಚಾರಗಳಿಗನುಗುಣವಾಗಿ ಲಿಂಗಕಲ್ಪನೆಗಳು ಬೇರೆ ಬೇರೆ ಆಗಿವೆ. ಇದು ಲಿಂಗ ಹಸಿಗೆ; ತೌಲನಿಕ ವಿವರಣೆ.

## ೩. ಮುಕ್ತಿ:

ಮುಕ್ತಿಯು ಎಂಬುದು ಬಹು ಮಹತ್ವದ ಮಾತು. ಭಕ್ತಿಯು ಸಾಧನವು ಅಹುದು; ಅದೇ ರೀತಿ ಅದು ಸಿದ್ಧಿಯೂ ಅಹುದು. ಮುಕ್ತಿಯು ಪಂಚಮ ಪುರುಷಾರ್ಥವೆಂದು ಶೈವ, ಶಾಕ್ತಾದಿ ಆಸ್ತಿಕ ದರ್ಶನಗಳು ಅಥವಾ ಧರ್ಮಗಳು ಪ್ರತಿಪಾದಿಸಿವೆ. ದುಃಖದಿಂದ ಮುಕ್ತಿಯನ್ನು ಪಡೆಯುವುದು ಸರ್ವ ಧರ್ಮಗಳ ಗುರಿ, ಇದನ್ನು ಸಾಧಿಸುವ ಸಾಧನಗಳು ಅನೇಕ ಜ್ಞಾನ, ಕರ್ಮ, ಯೋಗ ಹಾಗೂ ಭಕ್ತಿ. ಮೊದಲಿನವೆರಡು ಕೆಲವೇ ಜನರಿಗೆ ಲಬ್ಧ. ಭಕ್ತಿಯು ಜಾತಿ ಮತ ಪಂಥ ಸ್ತ್ರೀ ಪುರುಷ ಭೇದ ಮೀರಿರುವ ಸಾಧನವಾಗಿ ಸರ್ವರಿಗೂ ಉಪಲಬ್ಧ. ಇದು ಭಕ್ತಿಯು ಮೇಲ್ಮೆ. ಶೈವರು, ವೈಷ್ಣವರು ಮತ್ತು ಶಾಕ್ತರು ಭಕ್ತಿಯು ಜ್ಞಾನೋತ್ತರವೆಂದು ಹೇಳಿದರೆ; ಬಸವಣ್ಣನಂಥವರು ಆಗಮ (ಶಾಸ್ತ್ರ ಜ್ಞಾನ)ವೇಕೆ ಡಿಂಗರಿಗಂಗೆ? ಎಂದು ಕೇಳಿದರೆ, ಅಜ್ಞಾನಿಗಳನೇಕ ಭಕ್ತರು ದೇವ ಸಾಕ್ಷಾತ್ಕಾರ ಮಾಡಿಕೊಂಡಿದ್ದಾರೆ ಅನಾದಿ ಕಾಲದಿಂದ.

ಭಕ್ತಿಯು ಪ್ರೀತಿಯು; ದೇವರಲ್ಲಿರುವ ಪ್ರೀತಿಯು. ಈ ಸಾಧನೆಯಿಂದ ದುಃಖದಿಂದ ಬಿಡುಗಡೆಯಾಗಿರುವುದೇ ಮುಕ್ತಿಯು. ಈ ಮುಕ್ತಿಯು ದೇವರಲ್ಲಿ ಒಂದಾಗುವದು. ದೇವರಲ್ಲಿ ಒಂದಾಗುವಂಥ ಮುಕ್ತಿಗಳು ನಾಲ್ಕು ಪ್ರಕಾರವಾಗಿರುವವು. ೧) ದಾಸನಾಗಿರುವ ಭಕ್ತಿಯಿಂದ ದೊರೆವ ಮುಕ್ತಿಯು ಸಾಲೋಕ್ಯ ಮುಕ್ತಿಯು. ೨) ಸತ್ಪುತ್ರ ಮಾರ್ಗ ಭಕ್ತಿಯಿಂದ ದೊರೆವ ಮುಕ್ತಿಯು ಸಾಮೀಪ್ಯ ಮುಕ್ತಿಯು. ೩) ಸಖಾಮಾರ್ಗದ ಅಂತರಂಗ ಭಕ್ತಿಯಿಂದ ದೊರೆವ ಮುಕ್ತಿಯು ಸಾರೂಪ್ಯ ಮುಕ್ತಿಯು. ೪) ಸನ್ಮಾರ್ಗದಿಂದ ದೊರೆಯುವ ಮುಕ್ತಿಯು ಸಾಯುಜ್ಯ ಮುಕ್ತಿಯು. ಈ ಬಗೆಯ ಮುಕ್ತಿಗಳು ಆಗಮೋಕ್ತವಾದವುಗಳು. ಈ ಎಲ್ಲ ಮುಕ್ತಿಗಳನ್ನು ಶ್ರೌತಾಗಮಗಳು ಬೋಧಿಸುತ್ತವೆ. ಸ್ವತಂತ್ರಾಗಮವು ಇದನ್ನು ಪುರಸ್ಕರಿಸುವದಿಲ್ಲ. ಸ್ವತಂತ್ರಾಗಮವು ತಿಳಿಸುವ ಮುಕ್ತಿಯು ಲಿಂಗಾಂಗ ಸಾಮರಸ್ಯವಾಗಿದೆ. ನದಿಯೊಳಗೆ ನದಿ ಬೆರೆದಂತೆ, ಹಾಲಿನಲ್ಲಿ ಹಾಲು ಬೆರೆದಂತೆ ಆಗುವುದೇ ಸಾಮರಸ್ಯ. ಶ್ರೌತಾಗಮದ ಸಾಯುಜ್ಯವು ಇದರಿಂದನ್ಯವಾದುದು.

ಸಾಯುಜ್ಯವೆಂದರೆ ಹಾಲಿನಲ್ಲಿ ನೀರು ಬೆರೆದಂತೆ ಎಂದು ಹೇಳಿ ಅದರ ಹಾಗೂ ಸಾಮರಸ್ಯದ ಭೇದವನ್ನು ಎತ್ತಿ ತೋರಿಸುವರು. ಇದು ಶೈವ ಮತ್ತು ವೀರಶೈವ ಸಿದ್ಧಾಂತಗಳ ಮುಕ್ತಿಯ ಹಸಿಗೆ.

### ೪. ಕರ್ಮ (ಧಾರ್ಮಿಕ ಕ್ರಿಯೆ):

'ಕರ್ಮ' ಎಂಬ ಪದದ ಪ್ರಯೋಗವು ಶೈವಾಗಮಗಳಲ್ಲಿ ಇದೆ. ಇದು ಧಾರ್ಮಿಕ ಕ್ರಿಯೆಯೆಂದೇ ಸುಪ್ರಸಿದ್ಧ. ವಿಧಿನಿಷೇಧಗಳ ಮಾತುಗಳನ್ನು ಇಲ್ಲಿ ಪರಿಗಣಿಸುವದೂ ಉಂಟು. ಧಾರ್ಮಿಕ ಕ್ರಿಯೆಯೆಂದರೆ ಪೂಜೆ. ಈ ಪೂಜೆಗಳಲ್ಲಿ ಫಲಾಪೇಕ್ಷೆಯನ್ನವಲಂಬಿಸಿ ಭೇದಗಳೂ ಉಂಟು. ಆಗಮಾಗಳಲ್ಲಿ ನಿತ್ಯಕರ್ಮ, ನೈಮಿತ್ತಿಕ ಕರ್ಮ, ಕಾಮ್ಯಕರ್ಮಗಳೆಂಬ ಭೇದವೂ ಕಂಡುಬರುತ್ತದೆ. ಇದಲ್ಲದೆ ಬಾಹ್ಯಕರ್ಮ ಮತ್ತು ಅಂತರಂಗದ ಕರ್ಮಗಳೆಂಬ ಭೇದವೂ ಒಂದು ಉಂಟು. ಇವೆಲ್ಲ ಆಗಮೋಕ್ತ ಕರ್ಮಗಳೆ. ಈ ಕರ್ಮಗಳಲ್ಲಿ ಶೈವ ಕರ್ಮಗಳೂ ಇವೆ; ವೀರಶೈವ ಕರ್ಮಗಳೂ ಇವೆ. ಕರ್ಮ ಎಂಬುದನ್ನು ಇದೇ ಅರ್ಥದಲ್ಲಿ ಸ್ವತಂತ್ರಾಗಮ ವೀರಶೈವವೂ ಪ್ರಯೋಗಿಸಿದೆ.

ಇದೂ ಅಲ್ಲದೆ ವರ್ಣಾಶ್ರಮಗಳ ವರ್ಣಧರ್ಮವೂ ಕರ್ಮವೇ ಎಂದು ಶ್ರೌತಾಗಮದ ಪ್ರತಿಪಾದನೆ; ಪುರಾಣ ಹಿಂದೂ ಧರ್ಮದ ಸ್ಮೃತಿಗಳ ಪ್ರತಿಪಾದನೆ. ಪ್ರಥಮ ಮೂರು ವರ್ಣಗಳು ಮುಕ್ತಿಗೆ ಅರ್ಹ. ಶೂದ್ರವರ್ಣವು, ಅತಿ ಶೂದ್ರರು ಅರ್ಹರಲ್ಲ ಎಂಬ ವಾದ ಸ್ಮೃತಿಗಳಲ್ಲಿದೆ. ಆದರೆ ಆಗಮಗಳಲ್ಲಿಯ ಸ್ವತಂತ್ರಾಗಮ ಅಥವಾ ಅಶ್ರೌತಾಗಮವು ಈ ವಾದವನ್ನು ಒಪ್ಪುವದಿಲ್ಲ. ಇದರ ಪ್ರಕಾರ ವರ್ಣಗಳೆಂಬುವೇ ಇಲ್ಲ. ಇದು ಕಾಲ್ಪನಿಕ ಅಂದರೆ ಕೃತ್ರಿಮ ಎಂದು ಇದರ ಅರ್ಥ. ವರ್ಣ ಕರ್ಮಗಳೂ ಕೃತ್ರಿಮ. ವರ್ಣರಹಿತ ವಾದ ಶೈವ, ವೀರಶೈವಗಳು ಕರ್ಮ ಸ್ವಾತಂತ್ರ್ಯವನ್ನು ಪ್ರತಿಪಾದಿಸುತ್ತವೆ. ಶಿವಭಕ್ತನು ಯಾವುದೇ ಕರ್ಮ ಮಾಡಲಿ, ಅದು ಶಿವನಿಗೆ ಪ್ರಿಯವು. ಅಲ್ಲಿ ಕರ್ಮಸಂಕರವಿಲ್ಲ. ಪ್ರತಿಯೊಂದು ಕರ್ಮ ಅಂದರೆ ಜ್ಞಾನಿ ಅಜ್ಞಾನಿಗಳ ಕರ್ಮ ಅಥವಾ ಬೌದ್ಧಿಕ ಮತ್ತು ಶಾರೀರಿಕ ಕರ್ಮಗಳಾಗಲೀ ಇವುಗಳಲ್ಲಿ ಕೀಳು ಮೇಲುಗಳಿಲ್ಲ ಭಕ್ತಿಭಾವದವರಿಗೆ. ಅವು ಕರ್ತೃವಿಗೆ ಮುಕ್ತಿಯ ಸಾಧನಗಳು. ಆದ್ದರಿಂದ ಇವು ಕರ್ಮಯೋಗವೆಂದು ಸಂಬೋಧಿಸಲ್ಪಡಲು ಯೋಗ್ಯ. ಶಿವಾರ್ಪಣ ಬುದ್ಧಿಯಿಂದ ಮಾಡಿದ ಯಾವ ಕರ್ಮವೂ ಮುಕ್ತಿದಾಯಕವು. ಶೈವ ವೀರಶೈವಗಳೆರಡೂ ಈ ಮಾತನೊಪ್ಪುವವೆಂಬುದಕ್ಕೆ ಅರವತ್ತು ಮೂರುಮಂದಿ ಪುರಾತನರ ಜೀವನ ಸಾಕ್ಷಿ. ಅದೇ ರೀತಿ ಡೋಹಾರ ಕಕ್ಕಯ್ಯ, ಮಡಿವಾಳ ಮಾಚಯ್ಯ, ಮೋಳಿಗೆ ಮಾರಯ್ಯ, ಗಾಣದ ಕಣ್ಣ ಮೊದಲಾದವರಾದಿಯಾಗಿ ಬಸವಣ್ಣನವರೇ ಕಡೆಯಾಗಿ ಮಾಡುವ ನಿಷ್ಕಾಮಕರ್ಮ, ಸಹಜಕರ್ಮಗಳು ಮುಕ್ತಿಯ ಸಾಧನಗಳು. ಇಲ್ಲಿ ಮುಕ್ತಿಯ ಪರಿಕಲ್ಪನೆಯಲ್ಲಿರುವ ಭೇದಗಳು ಮುಖ್ಯವಲ್ಲ. ಹೀಗೆ ಎಲ್ಲ ಶೈವಗಳು ಅದರಲ್ಲೂ ಸ್ವತಂತ್ರಾಗಮ ಅಥವಾ ಅಶ್ರೌತಾಗಮ ಶೈವಗಳು ಕರ್ಮದ ಬಗ್ಗೆ ತಳೆದ ಆಧ್ಯಾತ್ಮಿಕ ನಿಲವು ಒಂದೆ.

ಆದರೆ ಶೈವ, ವೀರಶೈವಗಳಲ್ಲಿಯ ಕರ್ಮಗಳು ಭಿನ್ನ ಭಿನ್ನ. ಪೂಜಾರೂಪದ ಕರ್ಮವು ಶೈವದಲ್ಲಿ ಹಾಗೂ ವೀರಶೈವದಲ್ಲಿ ಭಿನ್ನ ಭಿನ್ನವೆಂದು ಹೇಳಿ ಆಗಿದೆ. ಬಹು ಕರ್ಮ ಶೈವರದಾದರೆ, ಅಲ್ಪಕರ್ಮ ವೀರಶೈವರದು ಹೇಗೆ ಎಂಬುದನ್ನೂ ತಿಳಿದುಕೊಳ್ಳ ಲಾಗಿದೆ. ಇವುಗಳಿಂದ ದೊರೆವ ಮುಕ್ತಿಗಳೂ ಶೈವ, ವೀರಶೈವಗಳಲ್ಲಿ ಬೇರೆ ಬೇರೆ. ಆದರೆ ಈ ಪೂಜಾ ಕರ್ಮದಲ್ಲಿ ಕೂಡ ಬಾಹ್ಯ ಪೂಜೆಗಿಂತ, ಅಭ್ಯಂತರ ಪೂಜೆ ಹೇಗೆ ಶ್ರೇಷ್ಠವೆಂಬುದನ್ನೂ ಪರಿಗಣಿಸಲಾಗಿದೆ. ಆದರೆ ವೀರಶೈವರಲ್ಲಿ ಕೂಡ ನಾವು ತಿಳಿದು ಕೊಳ್ಳುವ ಉದ್ಯೋಗಗಳು ಬಾಹ್ಯಪೂಜೆ ಎಂದು ತಿಳಿಯಲ್ಪಟ್ಟದು. ಅದಕ್ಕೆ ಸರಿದೊರೆ, ಅದೇಕೆ ಅದಕ್ಕಿಂತಲೂ ಉತ್ತಮವಾದ ಅಂತರಂಗಪೂಜೆ ಶ್ರೇಷ್ಠವೆಂಬುದು ಗೊಗ್ಗಯ್ಯ ಮತ್ತು ಪ್ರಭುದೇವರ ಪ್ರಸಂಗವು ಪೂರ್ವ ಮೀಮಾಂಸಕನ ಯಜ್ಞವನ್ನು ಕಂಡ ಗೌತಮ ಬುದ್ಧನು ಹೇಳಿದ ಮಾತು ಸ್ಮರಣೆಗೆ ತರುತ್ತದೆ. ಗೊಗ್ಗಯ್ಯನ ಬಹಿರಂಗದ ಕೃಷಿಗೆ ಪ್ರತಿ ಯಾಗಿ ಅಂತರಂಗದ ಕೃಷಿಯನ್ನು ಪ್ರಭುವು ಹೇಳಿದ್ದು ವಿವರವಾದ ಪರಿಶೀಲನಾರ್ಹ ವಿಚಾರವಾಗಿದೆ. ಇಲ್ಲಿ ಅದು ಈಗ ಅಪ್ರಸ್ತುತ. ಆದರೂ ವೀರಶೈವರಲ್ಲಿ ಬಾಹ್ಯಕೃಷಿ, ಅಂತರಂಗ ಕೃಷಿಗಳ ಕಲ್ಪನೆ, ಒಂದರಿಂದೊಂದು ಉತ್ಕೃಷ್ಟವೆಂಬ ತೀರ್ಮಾನಗಳನ್ನು ಜಿಜ್ಞಾಸು ಗಳ ಮುಂದಿಟ್ಟು ಹೆಚ್ಚಿನ ವಿಚಾರಕ್ಕೆ ಹಚ್ಚುವದು ಸಾಕು.

ಕರ್ಮದ ಇನ್ನೊಂದು ಸ್ವರೂಪವೂ ಇದೆ, ಇದು ಫಲರೂಪವಾದುದು, ಫಲವೂ ಕರ್ಮವೆಂಬ ವಿಚಾರವು ಶೈವ, ವೀರಶೈವಗಳಲ್ಲಿದೆ. ಅದು ಕೂಡ ಗಮನೀಯ, ವಿಚಾರಾರ್ಹ ವಿಚಾರ. 'ಪ್ರಥಮ ಗುರುದರ್ಶನಕೆ ಕರ್ಮಂಗಳು ಬೆಚ್ಚಿ ಬೆದರುವವು' ಎಂದು ಶರಣ ಸಾಹಿತ್ಯದಲ್ಲಿ ಬರುವ ಮಾತು ಒಂದು ಉಂಟು. 'ಕರ್ಮ ಫಲ ಬೋಧಿಸಿ ದಲ್ಲದೆ ಮಾಣದು' ಎಂಬ ಬಸವಣ್ಣನವರ ಮಾತು ಸ್ಮರಣೆಗೆ ಇಲ್ಲಿ ಬರುತ್ತದೆ. ಕರ್ಮ ಒಂದು ಮಲವೆಂದು ಶೈವ ವೀರಶೈವಗಳು ಒಪ್ಪುವವು. ದುಷ್ಕರ್ಮವೇ ಆಗಲಿ ಸತ್ಕರ್ಮವೇ ಆಗಲಿ ಅದರ ಫಲವು ಬಂಧನಕಾರಿ ಎಂದು ತಿಳಿದು ಅದನ್ನು ನಿರ್ಬೀಜಗೊಳಿಸುವ ವಿಧಾನವೂ ಒಂದು ಇದು ವೀರಶೈವದಲ್ಲಿದೆ. ಶೈವದಲ್ಲಿ ಫಲಗಳನ್ನು, ಪದವಿಗಳನ್ನು ಸ್ವೀಕರಿಸಿದ್ದು ಸತ್ಕರ್ಮವು ಸುಖಕ್ಕಾಗಿ ಬೇಕು ಎಂಬುದನ್ನು ಒಪ್ಪಿಕೊಂಡುದು ಉಂಟು ಎಂಬುದಕ್ಕೆ ಸಾಕ್ಷಿ. ಆಣವ ಮಲವು ಎಲ್ಲಿಯವರೆಗೆ ಶಾಶ್ವತವೆಂಬ ವಿಚಾರ ವಿದೆಯೋ ಅಲ್ಲಿಯವರೆಗೆ ಸುಖ ದುಃಖದ ವಿಚಾರ ಅದರ ಜೊತೆಯಲ್ಲಿ ಇದ್ದೇ ಇದೆ. ಆಣವ ಮಲದ ನಿರಸನವಿಲ್ಲವೆಂಬುದು ದ್ವೈತದ ಒಂದು ವಿಚಾರವೆ. ಇದು ಕರ್ಮ ಮೂಲ ಹೀಗೆ ಕರ್ಮವು ಮತ್ತು ಆಣವ ಮಲವು ಒಂದಕ್ಕೊಂದು ನಿಕಟ ಸಂಬಂಧವುಳ್ಳವು. ವೀರಶೈವವು ಆಣವ ಮಲದ ನಿರಸನ ಮಾಡುವ ಸಿದ್ಧಾಂತವಾಗಿ ಕರ್ಮ ನಿರ್ಮೂಲ ತತ್ತ್ವವನ್ನು ಅದು ಪ್ರತಿಪಾದಿಸುತ್ತದೆ. ಇದು ಶಕ್ತಿ ವಿಶಿಷ್ಟಾದ್ವೈತದ ಮೇಲ್ಮೆಗೆ ಕಾರಣ.

**ಸಮುಚ್ಚಯ ವಿಚಾರ:**

ಸಮುಚ್ಚಯ ವಿಚಾರವು ಭಾರತೀಯ ದಾರ್ಶನಿಕ ಸಾಹಿತ್ಯದಲ್ಲಿ ನಡೆದ ಬಹು

ಪುರಾತನ ಕೃಷಿ. ಉಪನಿಷತ್ತುಗಳಲ್ಲಿ ಈ ಬಗ್ಗೆ ತೀವ್ರ ಚಟುವಟಿಕೆಗಳು ಕಂಡುಬಂದು ದನ್ನು ಈಶಾವಾಶೋಪನಿಷತ್ತಿನಲ್ಲಿ ಸ್ಪಷ್ಟವಾಗಿ ನೋಡಬಹುದು. ದರ್ಶನ ಸಾಹಿತ್ಯದಲ್ಲಿಯು ಸಮುಚ್ಚಯವೆಂದರೆ ಧಾರ್ಮಿಕ ಕ್ರಿಯೆಗಳ ಮತ್ತು ಜ್ಞಾನದ ಸಮುಚ್ಚಯವೆಂದು ಅರ್ಥ. ಈ ಪ್ರಣಾಲಿಯ ಸುಪ್ರಸಿದ್ಧ ಹೋರಾಟವನ್ನು ಬ್ರಹ್ಮಸೂತ್ರ ಭಾಷ್ಯಗಳಲ್ಲಿ ನಾನಾ ಬಗೆಯಾಗಿ ನಡೆದಿದೆ. ಇದರಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳು, ಒಂದು ಕ್ರಮಸಮುಚ್ಚಯ, ಇನ್ನೊಂದು ಸಮಸಮುಚ್ಚಯ. ಸಮುಚ್ಚಯವೇ ಬೇಡವೆಂದು ಅಥವಾ ಕರ್ಮಜ್ಞಾನಗಳ ಸಮುಚ್ಚಯದ ಕಾರ್ಯ ಅನಪೇಕ್ಷಿತವೆಂದು ಒಂದು ವಾದ ಕೂಡ ಉಂಟು. ಇದೇ ರೀತಿ ಪ್ರಮಾಣ ಸಮುಚ್ಚಯದ ಮಾತೂ ಸುಪ್ರಸಿದ್ಧ. ಹೀಗೆ ಪ್ರಮಾಣ ಸಮುಚ್ಚಯ ಹಾಗೂ ಕರ್ಮಜ್ಞಾನ ಸಮುಚ್ಚಯದಂತೆ ಬಹಿರಂಗಪೂಜೆ ಹಾಗೂ ಅಂತರಂಗಪೂಜಾ ಸಮುಚ್ಚಯ ಕೂಡ ಉಂಟು. ಇಂಥ ಸಮುಚ್ಚಯದ ಆವಶ್ಯಕತೆ ಇರುವದಿಲ್ಲವೆಂಬ ವಾದವೂ ಪೂಜಾ ಸಮುಚ್ಚಯದ ವಿಚಾರದಲ್ಲಿ ಆದುದುಂಟು. ಶಾಸ್ತ್ರ ಸಾಹಿತ್ಯ ಸಮುಚ್ಚಯವೂ ಇದೆ. ಈಗ ಶೈವ, ವೀರಶೈವಗಳ ತೌಲನಿಕ ಹಸಿಗೆಯ ದೃಷ್ಟಿಯಿಂದ ಇದನ್ನು ಕೈಕೊಳ್ಳಬೇಕು.

ಶಾಸ್ತ್ರ ಸಾಹಿತ್ಯ ಸಮುಚ್ಚಯ ಶಾಸ್ತ್ರ ಸಾಹಿತ್ಯ ಸಮುಚ್ಚಯದ ವಿಚಾರವು ಶಿವಾಗಮಗಳಿಗೆ ಮಾತ್ರ ಸೀಮಿತ. ಆಗಮಗಳಲ್ಲಿ ಒಟ್ಟು ನಾಲ್ಕು ಪಾದಗಳಿರುತ್ತವೆ. ಈ ಮಾತನ್ನು ಪ್ರಾರಂಭದಲ್ಲಿಯೇ ನೋಡಿದ್ದೇವೆ. ಅವಾವವೆಂದರೆ ಕ್ರಿಯಾಪಾದ, ಚರ್ಯಾ ಪಾದ, ಯೋಗಪಾದ ಮತ್ತು ಜ್ಞಾನಪಾದ. ಈ ಪಾದಗಳ ಸಮುಚ್ಚಯವೆಂದರೇನು ಎಂದು ಸಹಜವಾಗಿ ವಿಚಾರಿಸುವ ಇಚ್ಛೆ ತಲೆದೋರುತ್ತದೆ. ಕಾರಣ ಅದನ್ನು ಹೇಗೆ ಮಾಡಿದ್ದಾರೆಂಬುದನೀಗ ನೋಡುವಾ. ಕ್ರಿಯಾಪಾದವು ಪ್ರಥಮ ಪಾದ. ಈ ಪಾದದಲ್ಲಿ ಪುನಾ ಕ್ರಿಯಾಪಾದ ಆದರೆ ಕ್ರಿಯಾಪಾದದ ಕ್ರಿಯಾಪಾದ, ಕ್ರಿಯಾಪಾದದ ಚರ್ಯಾಪಾದ, ಕ್ರಿಯಾಪಾದದ ಯೋಗಪಾದ, ಕ್ರಿಯಾಪಾದದ ಜ್ಞಾನಪಾದವೆಂದು ಭೇದವನ್ನು ಗುರುತಿಸಿ ದ್ದಾರೆ. ಕ್ರಿಯಾಪಾದದಲ್ಲಿ ನಾಲ್ಕು ಪಾದಗಳೂ ಇರುವವೆಂದು ಇದರಿಂದ ತಿಳಿದುಬರು ತ್ತದೆ. ಅದೇ ರೀತಿ ಚರ್ಯಾಪಾದದಲ್ಲಿ ಕೂಡ ಚರ್ಯಾಪಾದದ ಚರ್ಯಾಪಾದ, ಚರ್ಯಾಪಾದದ ಕ್ರಿಯಾಪಾದ, ಚರ್ಯಾಪಾದದ ಯೋಗಪಾದ, ಚರ್ಯಾಪಾದದ ಜ್ಞಾನಪಾದ. ಹೀಗೆ ಇನ್ನುಳಿದ ಎರಡು ಪಾದಗಳಲ್ಲೂ ಉಳಿದೆಲ್ಲ ಪಾದಗಳಿರುವವೆಂದು ತಿಳಿಸುತ್ತಾರೆ. ಇದು ಸಮ ಸಮುಚ್ಚಯ ಆಗಮ ಪಾದಗಳ ಇನ್ನು ಈ ಪಾದಗಳ ಕ್ರಮಸಮುಚ್ಚಯವಂತೀ ವಿವರಿಸಲೇಬೇಕಾಗಿಲ್ಲ. ಯಾಕಂದರೆ ಆಗಮಗಳಲ್ಲಿ ಒಂದ ಪಾದ ಆದ ಮೇಲೆ ಒಂದು ಪಾದವನ್ನು ಕ್ರಮವಾಗಿ ಹೇಳಿಯೇ ಬಿಡಲಾಗಿದೆ. ಇನ್ನು ಇವುಗಳು ಅಂದರೆ ಪ್ರತಿ ಯೊಂದು ಪಾದವೂ ಪೂರ್ಣವಿದೆ, ಸ್ವತಂತ್ರವಿದೆಯೆಂಬುದು ಒಂದು ಅಭಿಪ್ರಾಯವಿರಲು ಸಾಕು. ಯಾಕಂದರೆ ಕ್ರಿಯಾಪಾದದ ದಾಸ ಮಾರ್ಗವು ಸಾಲೋಕ್ಯ ಮುಕ್ತಿಯನ್ನು ಕೊಡುವದು. ಇದನ್ನು ಆಚರಿಸಲು ಸಮರ್ಥವಿದ್ದರೆ ಸಾಕು. ಅವನಿಗೆ ಮುಕ್ತಿ ಇದೆ, ಮುಕ್ತಿಯೇ ಪರಮ ಪುರುಷಾರ್ಥವಾದ ಕಾರಣ ಈ ಒಂದು ಪ್ರಕಾರದ ಮುಕ್ತಿಯಿಂದ

ಸಂತೃಪ್ತರು ಇಷ್ಟನ್ನೇ ಆಚರಿಸಿದರೆ ಸಾಕು ಎಂದು ಬಗೆವರು, ಆದ್ದರಿಂದ ಇದು ಪೂರ್ಣ ಮತ್ತು ಸ್ವತಂತ್ರ ಪಾದವಾಗಿದೆ. ಹೀಗೆ ಪ್ರತಿಯೊಂದು ಪಾದವು ಒಂದು ಸ್ವತಂತ್ರ, ಮುಕ್ತಿ ಪ್ರದವಾದ, ಪೂರ್ಣ ಶಾಸ್ತ್ರವಾಗಿದೆ ಎಂಬುದು ಇಲ್ಲಿಯ ವಾದ ಶೈವವೆಲ್ಲವು ಇದನ್ನು ಸ್ವೀಕರಿಸುತ್ತವೆ. ಇದು ಆಗಮ ಶಾಸ್ತ್ರ ಸಾಹಿತ್ಯದ ಸಮುಚ್ಚಯ ಪ್ರಕಾರಗಳು.

ಇನ್ನು ವೀರಶೈವ ಆಗಮ ಅಂದರೆ ಆಗಮಾಂತದಲ್ಲಿ ಅಥವಾ ಷಟ್‌ಸ್ಥಲ ಶಾಸ್ತ್ರ ದಲ್ಲಿ ಈ ಬಗ್ಗೆ ಇರುವ ವಿಚಾರಗಳೇನೆಂಬುದನ್ನು ನೋಡಬೇಕು. ಶೈವಾಗಮಗಳು ವೀರಶೈವದ ಪ್ರಾಚೀನ ಆಕರ ಗ್ರಂಥಗಳು. ವಚನಾಗಮವು ವೀರಶೈವರ ಮಧ್ಯ ಯುಗದ ಗ್ರಂಥಗಳು. ಆಗಮಗಳು ಸಂಸ್ಕೃತದಲ್ಲಿದ್ದರೆ, ವಚನಗಳು ಕನ್ನಡದಲ್ಲಿವೆ. ಭಾಷೆ ಬದಲಾದರೂ ವಸ್ತುವು ಒಂದೇ ಆಗಿರುವುದರಿಂದ, ಆಗಮಗಳಲ್ಲಿಯ ಸಮುಚ್ಚಯ ವಿಧಾನವು ವಚನಸಾಹಿತ್ಯದಲ್ಲಿಯೂ ಇರುವದನ್ನು ಗುರುತಿಸಿ ತೋರಿಸುವದು ಸಾಧ್ಯವಿದೆ, ಇಲ್ಲಿಯೂ ಅಂದರೆ ಶೈವದಂತೆ ಹಲವಾರು ಬಗೆಯ ವಿಚಾರಗಳಿವೆ. ವೀರಶೈವ ಸಾಹಿತ್ಯವು ಷಟ್‌ಸ್ಥಲ ಸಾಹಿತ್ಯ. ವೀರಶೈವ ಆಕರ ಸಾಹಿತ್ಯದ ಸಮುಚ್ಚಯವೆಂದರೆ ಷಟ್‌ಸ್ಥಲ ಸಾಹಿತ್ಯದ ಸಮುಚ್ಚಯ. ಆಗಮ ಸಾಹಿತ್ಯವು ಚತುಷ್ಪಾದ ಸಾಹಿತ್ಯವಾಗಿರುವಂತೆ ಆಗಮಾಂತ ಸಾಹಿತ್ಯವು ಷಟ್‌ಸ್ಥಲ ಸಾಹಿತ್ಯವಾಗಿದೆ. ಚತುಷ್ಪಾದ ಸಾಹಿತ್ಯದಲ್ಲಿಯಂತೆ ಷಟ್‌ಸ್ಥಲ ಸಾಹಿತ್ಯದಲ್ಲಿ ಕ್ರಮ ಸಮುಚ್ಚಯ, ಸಮ ಸಮುಚ್ಚಯಗಳಿರುವಂತೆ ಇನ್ನೂ ಒಂದು ಸಮುಚ್ಚಯವಿದೆ. ಇದು ವಿಕಲ್ಪ ಸಮುಚ್ಚಯ. ಕ್ರಮ ಸಮುಚ್ಚಯವೆಂದರೆ ಒಂದು ಸ್ಥಲದ ನಂತರ ಒಂದು ಸ್ಥಲವು ಬರುವುದು. ಉದಾ: ಭಕ್ತಸ್ಥಲ, ಮಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ ಮತ್ತು ಐಕ್ಯಸ್ಥಲ. ಇನ್ನು ಸಮಸಮುಚ್ಚಯ ವೆಂದರೆ ಒಂದರಲ್ಲಿ ಇನ್ನೊಂದು ಸಮರಸವಾಗಿರುವುದು ಚತುಷ್ಪಾದ ಸಾಹಿತ್ಯದಂತೆ ಷಟ್‌ಸ್ಥಲ ಸಾಹಿತ್ಯವೂ ಭಕ್ತನ ಭಕ್ತಸ್ಥಲ, ಭಕ್ತನ ಮಹೇಶ್ವರಸ್ಥಲ, ಭಕ್ತನ ಪ್ರಸಾದಿಸ್ಥಲ, ಭಕ್ತನ ಪ್ರಾಣಲಿಂಗಿಸ್ಥಲ, ಭಕ್ತನ ಶರಣಸ್ಥಲ ಮತ್ತು ಭಕ್ತನ ಐಕ್ಯಸ್ಥಲ. ಇದು ಕರಣಗಳ (categories) ಸಮುಚ್ಚಯವೂ ಆಗಿದೆ. ಭಕ್ತಸ್ಥಲವೆಂದರೆ ಪ್ರಥಿವೀತತ್ತ್ವ ಮಹೇಶ್ವರ ಸ್ಥಲವೆಂದರೆ ಆಪ್‌ತತ್ತ್ವವು. ಪ್ರಸಾದಿಸ್ಥಲವೆಂದರೆ ತೇಜ ತತ್ತ್ವವು. ಪ್ರಾಣಲಿಂಗಿ ಸ್ಥಲ ವೆಂದರೆ ವಾಯುತತ್ತ್ವವು. ಶರಣ ಸ್ಥಲವೆಂದರೆ ಆಕಾಶ ತತ್ತ್ವವು ಐಕ್ಯಸ್ಥಲವೆಂದರೆ ಆತ್ಮತತ್ತ್ವವು. ಇವುಗಳ ಸಮಸಮುಚ್ಚಯವು ಈ ತತ್ತ್ವಜ್ಞಾನದಲ್ಲಿದೆ. ಇಲ್ಲಿ ಕರ್ಮ ಜ್ಞಾನ ಸಮುಚ್ಚಯವೆಂದೂ ಹೇಳುವರು ಆಗಮಗಳಂತೆ. ಕ್ರಿಯಾ, ಚರ್ಯಾ, ಯೋಗ ಪಾದಗಳು ಕರ್ಮಬೋಧಕ ಪಾದಗಳು. ಜ್ಞಾನಪಾದವು ಜ್ಞಾನಬೋಧಕ ಪಾದವು. ಇವುಗಳ ಕ್ರಮ ಸಮುಚ್ಚಯ ಸಮಸಮುಚ್ಚಯ ಹೇಳಲಾಗುವುದು. ಅದೇ ರೀತಿ ಭಕ್ತ ಸ್ಥಲ, ಮಹೇಶ್ವರಸ್ಥಲ, ಪ್ರಸಾದಿಸ್ಥಲಗಳು ಮಾರ್ಗ ಕ್ರಿಯಾಸ್ಥಲಗಳು ಅಥವಾ ಕ್ರಿಯಾ ಸ್ಥಲಗಳು. ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲಗಳು ಮೀರಿದ ಕ್ರಿಯಾಸ್ಥಲಗಳು

ಅಥವಾ ಜ್ಞಾನಸ್ಥಲಗಳು ಇವುಗಳ ಸಮನ್ವಯವೆ ಕರ್ಮಜ್ಞಾನ ಸಮಸಮುಚ್ಚಯವಾಗಿದೆ. ಷಡ್ ಭಕ್ತಿ ಸಮಸಮುಚ್ಚಯ ಹಾಗೂ ಕ್ರಮಸಮುಚ್ಚಯಗಳೂ ಇಲ್ಲಿ ಆಗುವವು. ಹೀಗೆ ಈ ಸಮುಚ್ಚಯ ಸಿದ್ಧಾಂತವು ಶೈವ ವೀರಶೈವಗಳಲ್ಲಿ ಉಂಟು. ಇನ್ನೊಂದು ಮಾತು ಇಲ್ಲಿ ಹೇಳಬೇಕಾದುದೆಂದರೆ–ಮುಕ್ತಿಯ ವಿಚಾರವು. ಆಗಮಗಳಲ್ಲಿ ನಾಲ್ಕು ಬಗೆಯ ಮುಕ್ತಿಗಳನ್ನು ಹೇಳಲಾಗಿದೆ. ಇಲ್ಲಿ ಆ ರೀತಿ ಭೇದಗಳಿಲ್ಲ. ಒಂದೇ ಬಗೆಯ ಮುಕ್ತಿ ಇಲ್ಲಿದೆ. ಆದ್ದರಿಂದ ಅಲ್ಲಿ ಉದ್ಭವಿಸಿದ ವಿಚಾರ ಇಲ್ಲಿ ಆಗುವದಿಲ್ಲ. ವಿಕಲ್ಪ ಸಮುಚ್ಚಯದ ಬಗ್ಗೆ ವಚನ ಸಾಹಿತ್ಯದ ಸಮುಚ್ಚಯ ವಿಚಾರ ಮಾಡಿದವರ ಲಕ್ಷವು ಹರಿದಿಲ್ಲ. ಈ ಮೊದಲೆ ಅಂದರೆ ಸುಮಾರು ಹದಿನೇಳು ವರ್ಷಗಳ ಹಿಂದೆಯೇ ಪ್ರಸ್ತುತ ಲೇಖಕರು ಗುರುತಿಸಿ ತೋರಿಸಿದ್ದಾರೆ. ಇವರ ಪ್ರಕಾರ ಭಕ್ತಸ್ಥಲದಿಂದ ಮಧ್ಯದ ಸ್ಥಲಗಳನ್ನು ಗಣನೆಗೆ ತೆಗೆದುಕೊಳ್ಳದೆ ಐಕ್ಯಸ್ಥಲವನ್ನು ಆಚರಿಸಬಹುದು. ಇದು ವಿಕಲ್ಪವಾದ ರೀತಿ. ಇದನ್ನು ಸಿದ್ಧರಾಮನು ಪ್ರತಿಪಾದಿಸಿದ್ದಾನೆ. ಸಮಸಮುಚ್ಚಯವನ್ನು ಚನ್ನಬಸವಣ್ಣನು ಪ್ರತಿಪಾದಿಸಿದಂತೆ. ಆಗಮಗಳ ಸಮುಚ್ಚಯಗಳಲ್ಲಿ ಮತ್ತು ವಚನಸಾಹಿತ್ಯದ ಸಮುಚ್ಚಯ ಗಳಲ್ಲಿ ಇರುವ ಸಮುಚ್ಚಯಗಳು ಆಚಾರ, ವಿಚಾರಗಳ ಸ್ವಾತಂತ್ರ್ಯವು ಶ್ರೌತಧರ್ಮದಲ್ಲಿಯ ಆಶ್ರಮಗಳ ಸಮುಚ್ಚಯಗಳಿಗಿಂತ ಧಾರಾಳತೆಯನ್ನು ವ್ಯಕ್ತಗೊಳಿಸುತ್ತದೆ. ಆಗಮಗಳಲ್ಲಿಯ ಹಾಗೂ ವಚನಗಳಲ್ಲಿಯ ಸಮುಚ್ಚಯಗಳನ್ನು ನೋಡಿದರೆ ವಚನಗಳಲ್ಲಿಯ ಸಮುಚ್ಚಯದ ಒಂದು ಭೇದವಾದ ವಿಕಲ್ಪ ಸಮುಚ್ಚಯವು ಇನ್ನೂ ಹೆಚ್ಚು ಸ್ವಾತಂತ್ರ್ಯವನ್ನು ಪ್ರತಿಪಾದಿ ಸುತ್ತದೆ ಎಂಬುದು ಗಮನಾರ್ಹ ಹಾಗೂ ಹಿರಿಮೆಯ ಪ್ರತೀಕ.

**ಮುಕ್ತಾಯ:**

ಇಲ್ಲಿ ನಡೆದ ತೌಲನಿಕ ಹಸಿಗೆಯಿಂದ ಆಗಮ ಪ್ರಭೇದಗಳ ರಹಸ್ಯವು ಗೊತ್ತಾಗಿದೆ. ಶ್ರೌತಾಗಮ ವೀರಶೈವ, ಶೈವಧರ್ಮ, ಸ್ವತಂತ್ರಾಗಮ ಅಥವಾ ಅಶ್ರೌತಾಗಮ ಶೈವ ವೀರಶೈವ ಧರ್ಮಗಳ ವಿಶಿಷ್ಟ ಲಕ್ಷಣಗಳು ಪ್ರಪ್ರಥಮವಾಗಿ ಗುರುತಿಸಲ್ಪಟ್ಟಿವೆ. ದೇವತಾ ಸಿದ್ಧಾಂತದ ಬೆಳವಣಿಗೆ, ವರ್ಣಾಶ್ರಮ ಧರ್ಮಗಳು ಹಾಗೂ ಅವುಗಳು ಅಶ್ರೌತಾಗಮ ಶೈವಕ್ಕೆ ಪರಿವರ್ತನಗೊಂಡಾಗ ಆದ ಬದಲಾವಣೆಗಳ, ಇವೆರಡರಲ್ಲಿಯ ಧಾರ್ಮಿಕ ಆಚರಣೆ ಗಳಲ್ಲಿರುವ ಭೇದಗಳ, ಪರತತ್ತ್ವದ ಲಕ್ಷಣಗಳ ಮುಂತಾದವುಗಳ ಹಸಿಗೆಯು ಸ್ಪಷ್ಟ ವಾದ ಚಿತ್ರಣ ದೊರೆಯುವಂತೆ ಸಾಧ್ಯಗೊಳಿಸಿದೆ. ಈ ಹಸಿಗೆಯಿಂದ ಮತಧಾರ್ಮಿಕ ಸಮಾಜದಲ್ಲಾದ ಬದಲಾವಣೆಗಳು ಗೊತ್ತಾಗಿವೆ. ಶೈವ ಧರ್ಮದಲ್ಲಿಯ ಪ್ರಭೇದಗಳು ಯಾವ ತತ್ತ್ವವನ್ನಾಧರಗೊಂಡಾಗಿವೆ ಎಂಬುದರ ಸ್ಪಷ್ಟ ಕಲ್ಪನೆಯುನ್ನು ಇಲ್ಲಿ ಕೊಡ ಲಾಗಿದೆ. ಇಲ್ಲಿಯ ಹಲವಾರು ವಿಚಾರಗಳು ಕೇವಲ ಆಕರ ಗ್ರಂಥಗಳನ್ನಾಧರಿಸಿ ಮಾಡ ಲಾಗಿದ್ದು ಅನಾವಶ್ಯಕ ಊಹೆಗಳು ಅವು ಆಗಿಲ್ಲವೆಂಬುದು ಇಲ್ಲಿ ಎದ್ದು ಕಾಣುವದು. ಇಲ್ಲಿಯ ಆಕರ ಗ್ರಂಥಗಳ ಕಾಲ ನಿರ್ಣಯವನ್ನು ಮಾಡದೆ ಆಗಲೆ ಕೈಕೊಂಡ ನಿರ್ಣಯ

ಗಳಿಂದ ಸಾಮಾಜಿಕ ಸ್ಥಿತ್ಯಂತರಗಳ ಚಾರಿತ್ರಿಕ ಘಟ್ಟವನ್ನು ಗುರುತಿಸಲಾಗಿದೆ. ಆಗಮಗಳು ಲಪ್ತವಾಗಿ ಕೆಲ ಕಾಲ ಉಳಿಯಲು ಯಾರು ಕಾರಣರು ಎಂಬುದನ್ನು, ಆಮೇಲೆ ಪುನಾ ಅವುಗಳು ಬೆಳಕು ಕಾಣಲಿಕ್ಕೆ ಕಾರಣರು ಯಾರು ಎಂಬುದನ್ನು ಆಗಮ ಸಾಹಿತ್ಯ ಹಾಗೂ ಆಗಮ ಸಾಹಿತ್ಯ ಧರ್ಮಗಳ ವಿದ್ವಾಂಸರು ತೋರಿಸಿದ್ದನ್ನಿಲ್ಲಿ ಉದ್ಧರಿಸಲಾಗಿದೆ. ಪುರಾಣ ಹಿಂದೂ ಧರ್ಮಕ್ಕೆ ಹೊಸ ತಿರುವನ್ನು ಯುಗಯುಗಗಳಲ್ಲಿ ಕೊಟ್ಟುದು ಶೈವ ಧರ್ಮವೆಂದು ತೋರಿಸಲಾಗಿದೆ.

●

# ಶಕ್ತಿವಿಶಿಷ್ಟಾದ್ವೈತ ದರ್ಶನ

(ಒಂದು ಸೈದ್ಧಾಂತಿಕ ವಿಮರ್ಶನ)

—ಎಂ. ಶಿವಕುಮಾರಸ್ವಾಮಿ

ಈ ಲೋಕದಲ್ಲಿ ಮಾನವನ ಆವಿರ್ಭಾವವಾದಾಗಿನಿಂದ ಜಗದ್ರಹಸ್ಯದ ಬಗೆಗೆ ಅವನ ಕುತೂಹಲ ಕೊನರಿ ಚಿಂತನದ ಸ್ವರ್ಗಂಗೆಯು ನಾನಾ ಪಥಗಳಲ್ಲಿ ಹರಿದಿದೆ. ವಿಶ್ವದ ನಾನಾ ದೇಶಗಳಲ್ಲಿ ಈ ರೀತಿಯಾದ ಚಿಂತನ ಪ್ರಭಾವಗಳು ಕಂಡುಬಂದರೂ ಮುಖ್ಯವಾಗಿ ಎರಡು ಆಲೋಚನಾ ಸರಣಿಗಳನ್ನು ತತ್ವವಿದರು ಗುರುತಿಸಬಹುದು. 'ಒಂದು ಸರಣಿ' ಪ್ರಧಾನವಾಗಿ ಗ್ರೀಸ್ ದೇಶದ ದಾರ್ಶನಿಕರ ಪ್ರತಿಭೆಯ ಉನ್ಮೇಷದ ಫಲವಾಗಿದ್ದು ಪಾಶ್ಚಾತ್ಯ ತತ್ವಶಾಸ್ತ್ರವೆನಿಸಿಕೊಳ್ಳುತ್ತದೆ. 'ಎರಡನೇ ಸರಣಿಯು' ಭಾರತದ ಪವಿತ್ರ ಭೂಮಿಯ ಅಣುಗರಾಗಿದ್ದ ಮಹರ್ಷಿಗಳ ದಿವ್ಯಾನುಭಾವದ ಫಲವಾಗಿದ್ದು ಭಾರತೀಯ ತತ್ವಶಾಸ್ತ್ರ ಎನಿಸಿದೆ. ಇದರಲ್ಲಿ ಮುಂದೆ ಬರುವ ಎಲ್ಲ ವಿಷಯಗಳೂ ಸೂತ್ರ ರೂಪದಲ್ಲಿ ಮಹರ್ಷಿಗಳ ವಾಣಿಯಾದ ವೇದಾಗಮಗಳಲ್ಲಿ ಕಂಡುಬರುತ್ತಿದ್ದು, ಇದೇ ಚಿಂತನೆಯ ಅನೇಕ ಪ್ರಕಾರವಾದ ಪಲ್ಲವಪುಷ್ಪ-ಫಲಗಳು ನಾನಾ ದಾರ್ಶನಿಕ ಗ್ರಂಥಗಳಲ್ಲಿ ಕಂಡುಬರುತ್ತದೆ. ಈ ಕಾರಣಗಳಿಂದ "ಭಾರತೀಯ ತತ್ವಶಾಸ್ತ್ರ ಅಥವಾ ದರ್ಶನ" ಅಸಂಖ್ಯವಾದ ಅಭಿಪ್ರಾಯಗಳಿಗೂ ಮತಗಳಿಗೂ ಆಶ್ರಯವಾಗಿದೆ. ಎದುರಿಗೆ ಕಾಣುವ ಭೌತಿಕ ಜಗತ್ತು ಮಾತ್ರ ಸತ್ಯ, ಉಳಿದುದೆಲ್ಲ ಕಲ್ಪನಾ ಮಾತ್ರ ಎನ್ನುವ ಚಾರ್ವಾಕವಾದದಿಂದ ಆರಂಭಿಸಿ ಎದುರಿಗೆ ಕಾಣುವ ಜಗತ್ತೆಲ್ಲ ಮಿಥ್ಯೆ, ಬ್ರಹ್ಮ ಮಾತ್ರ ಸತ್ಯ ಎನ್ನುವ ಅದ್ವೈತದವರೆವಿಗೆ ಲೆಕ್ಕವಿಲ್ಲದಷ್ಟು ಪರಸ್ಪರ ಭೇದಗಳಿಂದ ನಾನಾ ದರ್ಶನಗಳು ಈ ಸರಣಿಯಲ್ಲಿ ಅಳವಡಿಸಲ್ಪಟ್ಟಿವೆ.

'ದರ್ಶನ' ಎಂಬ ಶಬ್ದವು 'ದೃಶಿರ್'-'ಪ್ರೇಕ್ಷಣೆ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಇದಕ್ಕೆ ವಸ್ತುವಿನ ಯಥಾರ್ಥ ಸ್ವರೂಪವನ್ನು ನೋಡುವುದು, ತಿಳಿಯುವುದು ಮನನ ಮಾಡಿಕೊಳ್ಳುವುದು ಇತ್ಯಾದಿ ಅರ್ಥಗಳಾಗುತ್ತದೆ. ಒಂದೇ ವಸ್ತು ನೋಡುವವರ ದೃಷ್ಟಿಭೇದದಿಂದ ನಾನಾ ಪ್ರಕಾರವಾಗಿ ಕಾಣುವುದು ಅನುಭವಸಿದ್ಧವಾದುದರಿಂದ ದರ್ಶನಗಳಲ್ಲಿ ಪರಸ್ಪರ ಅನೇಕ ಭೇದಗಳು ಮೂಡಿರುವುದು ಸಹಜವಾದುದೇ ಆಗಿದೆ. ಅನುಭವದ ನಾನಾ ಸ್ತರಗಳಲ್ಲಿ ನಿಂತಾಗ ಬೇರೆಬೇರೆಯ ರೀತಿಯಲ್ಲಿ ಸತ್ಯದರ್ಶನವಾಗಿರುವುದು ದರ್ಶನಗಳ ಭೇದಕ್ಕೆ ಕಾರಣವಾಗಿರಬಹುದೆಂದು ಊಹಿಸಬಹುದು.

ಭಾರತೀಯ ದರ್ಶನಗಳಿಗೆಲ್ಲಾ ಸತ್ಯದ ದರ್ಶನವೇ ಮುಖ್ಯೋದ್ದೇಶವಾದರೂ

ಅವು ಜಗತ್ತನ್ನು ವಿಶ್ಲೇಷಿಸಿದ ರೀತಿಗಳು ಭಿನ್ನಭಿನ್ನವಾಗಿವೆ. ಪಾರಿಭಾಷಿಕ ದೃಷ್ಟಿಯಿಂದ ಭಾರತೀಯ ದರ್ಶನಗಳನ್ನು 'ನಾಸ್ತಿಕ-ಆಸ್ತಿಕ' ಎಂದು ಎರಡು ವಿಧಗಳಾಗಿ ವಿಂಗಡಿಸ ಬಹುದು. ಚಾರ್ವಾಕ, ಬೌದ್ಧ, ಜೈನ ಸಿದ್ಧಾಂತಗಳನ್ನು ನಾಸ್ತಿಕ ದರ್ಶನಗಳ ಗುಂಪಿನಲ್ಲಿ ಸೇರಿಸಿದ್ದಾರೆ. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸಾ ಮತ್ತು ವೇದಾಂತ ದರ್ಶನಗಳನ್ನು ಆಸ್ತಿಕ ದರ್ಶನಗಳು ಎಂದು ಕರೆಯುತ್ತಾರೆ. ಮೊದಲೇ ತಿಳಿಸಿರುವಂತೆ ಈ ಈ ವಿಂಗಡಣೆ ಕೇವಲ ಪಾರಿಭಾಷಿಕ.

ಆಸ್ತಿಕ ದರ್ಶನಗಳಲ್ಲೆಲ್ಲಾ 'ವೇದಾಂತ ದರ್ಶನವು' ಅತ್ಯಂತ ಪ್ರಚಲಿತ ಹಾಗೂ ಹೆಚ್ಚು ಸಂಖ್ಯೆಯ ಅನುಯಾಯಿಗಳನ್ನು ಇಂದಿಗೂ ಹೊಂದಿದ್ದು, ಜೀವಂತವಾಗಿರುವ ದರ್ಶನವಾಗಿದೆ. 'ವೇದಾಂತ' ಎಂದರೆ 'ವೇದಗಳ ಕೊನೆಯ ಭಾಗ', ವೇದಗಳಲ್ಲಿ ಸಂಹಿತೆ, ಬ್ರಾಹ್ಮಣ, ಅರಣ್ಯಕ ಉಪನಿಷತ್ತುಗಳೆಂಬ ಭಾಗಗಳಿರುವುದರಿಂದ ವೇದಾಂತ ಎಂಬ ಶಬ್ದಕ್ಕೆ ಉಪನಿಷತ್ತು ಎಂದು ಅರ್ಥವಾಗುತ್ತದೆ. ಉಪನಿಷತ್ತುಗಳಲ್ಲಿ ಜಗತ್ತತ್ವದ ಬಗೆಗೆ ಹಾಗೂ ಆತ್ಮ, ಪರಮಾತ್ಮರ ಬಗೆಗೆ ಲೋಕೋತ್ತರವಾದ ವಿಷಯಗಳಿರುವುದ ರಿಂದ ಅವುಗಳ ಆಧಾರದ ಮೇಲೆ ನಿಂತಿರುವ ದರ್ಶನವೇ "ವೇದಾಂತ ದರ್ಶನ", ಉಪ ನಿಷತ್ತುಗಳು. ಎಲ್ಲಾ ಉಪನಿಷತ್ತುಗಳ ಸಾರಸಂಗ್ರಹವಾಗಿರುವ ಭಗವದ್ಗೀತೆ ಉಪನಿಷ ದ್ವಿಚಾರಗಳ ತಾರ್ಕಿಕ ನಿರೂಪಣೆಯನ್ನು ಮಾಡಿಕೊಟ್ಟಿರುವ ಬ್ರಹ್ಮ ಸೂತ್ರಗಳು ಈ ಮೂರು ಒಟ್ಟಿಗೆ 'ಪ್ರಸ್ಥಾನತ್ರಯ' ಎನಿಸಿಕೊಳ್ಳುತ್ತವೆ. ಹೀಗಿದ್ದರೂ ಕೂಡ ಉಪ ನಿಷತ್ತುಗಳನ್ನು ಅರ್ಥೈಸುವಲ್ಲಿ, ಗೀತೆಯ ಸಂದೇಶವನ್ನು ನಿರೂಪಿಸುವಲ್ಲಿ, ಬ್ರಹ್ಮ ಸೂತ್ರ ಗಳ ತಾತ್ಪರ್ಯವನ್ನು ಮಂಡಿಸುವಲ್ಲಿ ಮುಂದಿನ ದಾರ್ಶನಿಕರು ನಾನಾ ಪಂಥಗಳನ್ನು ಆಶ್ರಯಿಸಿ ಬೇರೆ ಬೇರೆ ದರ್ಶನಗಳಿಗೆ ಎಡೆಮಾಡಿಕೊಟ್ಟಿದ್ದಾರೆ. ವೇದಾಂತ ದರ್ಶನ ಪ್ರತಿಪಾದಿಸುವುದು 'ಪರಬ್ರಹ್ಮದ ಸತ್ಯತ್ವವನ್ನು' ಆತ್ಮ-ಪರಮಾತ್ಮರ ಭೇದವನ್ನು ವೇದಾಂತ ದರ್ಶನ ಎತ್ತಿ ಹಿಡಿದಿದೆ ಎಂದು ದ್ವೈತಿಗಳು ಘಂಟಾಘೋಷವಾಗಿ ಸಾರುತ್ತಾರೆ. ಜೀವ-ಜಗತ್ತುಗಳು ನಾರಾಯಣ ಎಂಬ ಪರಮಾತ್ಮನ ಶರೀರ ಭೂತವಾದವುಗಳು, ಅವು ಗಳಿಂದ ವಿಶಿಷ್ಟನಾದ ಪರಮಾತ್ಮನು ಒಬ್ಬನೇ ಆದುದರಿಂದ ವಿಶಿಷ್ಟಾದ್ವೈತವೇ ವೇದಾಂತ ದರ್ಶನದ ಪರಮಗುರಿ ಎಂದು ವಿಶಿಷ್ಟಾದ್ವೈತಿಗಳು ವಾದಿಸುತ್ತಾರೆ.

ಸಕಲ ವೇದಗಳ, ಆಗಮಗಳ, ಉಪನಿಷತ್ತುಗಳ ಪರಮ ತಾತ್ಪರ್ಯ 'ಪರಶಿವನು'. ಅವನು ಶಕ್ತಿ ವಿಶಿಷ್ಟನಾಗಿದ್ದು ಅದ್ವೈತ ಸ್ವರೂಪನಾಗಿದ್ದಾನೆ. ಅವನ ಸೃಷ್ಟಿಯಾದ ಈ ಜಗತ್ತು ಮಿಥ್ಯೆಯಲ್ಲ. ಸಾಧನಾವಸ್ಥೆಯಲ್ಲಿ ಆತ್ಮನು ಪರಮಾತ್ಮನಿಂದ ಭಿನ್ನವಾದರೂ ಮುಕ್ತಿಯಲ್ಲಿ ಆತ್ಮನು ಪರಶಿವನಲ್ಲಿ ಲೀನನಾಗುವುದರಿಂದ ಆತ್ಮ ಪರಮಾತ್ಮರ ಐಕ್ಯಾವಸ್ಥೆ ಯಲ್ಲಿ ಅದ್ವೈತವನ್ನು ಅನುಭವಗೋಚರವಾಗಿ ಶರಣನು ಕಂಡುಕೊಳ್ಳುತ್ತಾನೆ ಎಂಬ ತಾತ್ವಿಕ ಹಿನ್ನಲೆಯಲ್ಲಿ ಶಕ್ತಿವಿಶಿಷ್ಟಾದ್ವೈತವು ರೂಪುಗೊಂಡಿದೆ.

ತತ್ವಬುಭುತ್ಸುಗಳು ನಡೆಸುವ ವಾದದಲ್ಲಿ ಪಕ್ಷ-ಪ್ರತಿಪಕ್ಷಗಳನ್ನು ವಿಚಕ್ಷಣತೆಯಿಂದ ಪರೀಕ್ಷಿಸಿ ಮಾಡುವ ನಿರ್ಣಯಕ್ಕೆ 'ಸಿದ್ಧಾಂತ' ಎಂದು ಹೆಸರು. ಅಂತೇ-ಸಿದ್ಧಃ-ಸಿದ್ಧಾಂತಃ ಎಂಬ ನಿರ್ವಚನದ ಪ್ರಕಾರ ಚಿಂತನೆಯ ಕೊನೆಯಲ್ಲಿ ನಿರ್ವಿವಾದವಾಗಿ ಸಿದ್ಧವಾಗುವ ತತ್ವವನ್ನು ಸಿದ್ಧಾಂತವೆಂದು ಕರೆಯಬಹುದು. ಸಿದ್ಧಾಂತದಲ್ಲಿ ಏಕದೇಶ ಸಿದ್ಧಾಂತ, ಅಭ್ಯುಪಗಮ ಸಿದ್ಧಾಂತ ಮುಂತಾದ ಭೇದಗಳು ಇದ್ದರೂ ಅವು ಇಲ್ಲಿ ವಿವಕ್ಷಿತವಲ್ಲ. ಶಕ್ತಿ ವಿಶಿಷ್ಟಾದ್ವೈತ ಸಂಪ್ರದಾಯದಲ್ಲಿ ಪ್ರಮಾಣಗಳೆಂದು ಪರಿಗಣಿತವಾದ ಸಕಲ ಗ್ರಂಥಗಳಿಗೂ, ಅನುಭವಕ್ಕೂ ವಿರುದ್ಧವಾಗದ ರೀತಿಯಲ್ಲಿ ಉಪಪನ್ನವಾಗುವಂತೆ ನಿರ್ಣೀತವಾದ ತತ್ವಗಳ ಸಮುದಾಯವೇ 'ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ'ವೆಂದು ಇಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಇದೇ ಸಿದ್ಧಾಂತವನ್ನು 'ಶಿವಾದ್ವೈತ' ಎಂದೂ ಕರೆಯಬಹುದು.

ಇತರ ದರ್ಶನಗಳಿಗಿಂತ ಈ ದರ್ಶನದಲ್ಲಿ ಕಂಡುಬರುವ ವೈಶಿಷ್ಟ್ಯವೆಂದರೆ ಪ್ರಾಚೀನವಾದ ವೇದಾಗಮಗಳಂತೆ ಶರಣರ ಅನುಭವಾಮೃತಭರಿತವಾದ ವಚನಾಗಮಗಳಿಗೂ ಇಲ್ಲಿ ಪ್ರಾಮಾಣ್ಯ ಉಂಟು. ಶಕ್ತಿವಿಶಿಷ್ಟಾದ್ವೈತ ಎಂಬ ಪದಕ್ಕೆ ವಿಗ್ರಹವು ಈ ರೀತಿ ಇದೆ.

ಶಕ್ತಿಶ್ಚ-ಶಕ್ತಿಶ್ಚ-ಶಕ್ತೀ; ತಾಭ್ಯಾಂ
ವಿಶಿಷ್ಟೌ-ಶಕ್ತಿವಿಶಿಷ್ಟೌ-ಜೀವೇಶೌ-ತಯೋಃ
ಅದ್ವೈತಂ-ಶಕ್ತಿ ವಿಶಿಷ್ಟಾದ್ವೈತಂ.

ಈ ನಿರ್ವಚನಕ್ಕೆ ಅನುಗುಣವಾಗಿ ಜೀವನೂ ಶಕ್ತಿಯಿಂದ ಕೂಡಿದವನು. ಈ ಶಕ್ತಿ ಭಕ್ತಿ ರೂಪವಾಗಿರುತ್ತದೆ. ಈಶನಲ್ಲಿ ಶಕ್ತಿ ಜಗನ್ನಿರ್ಮಾಣಪಾಲನಸಂಹಾರಾದಿಕಾರಿಣಿಯೂ, ಜೀವನಿಗೆ ಮುಕ್ತಿಪ್ರದಾಯಿನಿಯೂ ಆಗಿದೆ. ಶಕ್ತಿವಿಶಿಷ್ಟನಾದಾಗಲೇ ಶಿವನು ಸೃಷ್ಟಿ ಮುಂತಾದ ಕಾರ್ಯಗಳಲ್ಲಿ ತೊಡಗುತ್ತಾನೆ. ಆಚಾರ್ಯ ಶಂಕರರು ಹೇಳುವಂತೆ-

ಶಿವಃ ಶಕ್ತ್ಯಾಯುಕ್ತೋಯದಿ ಭವತಿ ಶಕ್ತಃ ಪ್ರಭವಿತುಂ
ನ ಚೇದೇವಂ ದೇವೋ ನಖಲು ಕುಶಲಃ ಸ್ಪಂದಿತುಮಪಿ
(ಸೌಂದರ್ಯಲಹರೀ-೧)

ಈ ರೀತಿಯಾಗಿ ಶಕ್ತಿವಿಶಿಷ್ಟಾದ್ವೈತವೆಂಬ ಹೆಸರು ಸಿದ್ಧವಾಗುವುದಾದರೂ ಇದು ಅತ್ಯಂತ ಪ್ರಾಚೀನವೆಂದು ನಾವು ಹೇಳುವಂತಿಲ್ಲ, ಏಕೆಂದರೆ ಈ ದರ್ಶನದ ಆಧಾರ ಗ್ರಂಥಗಳೆನಿಸಿದ ಪುರಾತನ ಕೃತಿಗಳಲ್ಲಿ ಈ ಹೆಸರಿಲ್ಲ. ಶ್ರೀಕರ ಭಾಷ್ಯದಲ್ಲಿ ವಿಶಿಷ್ಟಾದ್ವೈತ ಎಂಬ ಹೆಸರನ್ನು ಪ್ರಯೋಗಿಸಲಾಗಿದೆ. ವಿಃ ಎಂದರೆ ಪರಮಾತ್ಮ (ವಿಃ ಪಕ್ಷಿಪರಮಾತ್ಮನೋಃ) ಶೇಷ ಎಂದರೆ ಅವನ ಅಧೀನದಲ್ಲಿರುವ 'ಜೀವ' ಇವರಿಬ್ಬರ ಅದ್ವೈತ ಎಂಬುದು ಶ್ರೀಕರ ಭಾಷ್ಯಕಾರರಾದ ಶ್ರೀಪತಿ ಪಂಡಿತಾರಾಧ್ಯರು ವಿವರಿಸಿದ್ದಾರೆ. ಮತ್ತೆ

ಕೆಲವರು 'ಶಿವಾದ್ವೈತ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಆದರೆ ಶಕ್ತಿತತ್ವಕ್ಕೆ ಈ ದರ್ಶನದಲ್ಲಿ ಹೆಚ್ಚಿನ ಪ್ರಾಧಾನ್ಯವಿದೆ. ಶ್ರೀಕರಭಾಷ್ಯದ ಜಿಜ್ಞಾಸಾಧಿಕರಣದಲ್ಲಿ 'ಸಕಲ ಚಿದಚಿದ್ ಪ್ರಪಂಚಾಕಾರ ಪರಮಶಕ್ತಿ ವಿಶಿಷ್ಟಾದ್ವಿತೀಯ ವೈಭವಸ್ಯ' ಎಂಬ ಪ್ರಯೋಗವಿದೆ. ಶ್ರೀಕಂಠಭಾಷ್ಯಕಾರರಾದ ಶ್ರೀಕಂಠ ಶಿವಾಚಾರ್ಯರು ಶಕ್ತಿ ವಿಶಿಷ್ಟಾದ್ವೈತ ಪದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಶಕ್ತಿವಿಶಿಷ್ಟಾದ್ವೈತ ಎಂಬ ಹೆಸರೇ ಈ ದರ್ಶನಕ್ಕೆ ಯೋಗ್ಯವಾದ ನಾಮಧೇಯವೆಂದು ತೀರ್ಮಾನಿಸುವುದು ಯುಕ್ತವೆನಿಸುತ್ತದೆ.

ಶೈವಧರ್ಮ ಜಗತ್ತಿನ ಅತ್ಯಂತ ಪ್ರಾಚೀನ ಧರ್ಮಗಳಲ್ಲೊಂದು. ಭಾರತದ ಮೂಲ ನಿವಾಸಿಗಳು ಶಿವಾರಾಧಕರು ಆಗಿದ್ದರು ಎಂಬುದನ್ನು ನಂಬಲು ಸಾಕಷ್ಟು ಐತಿಹಾಸಿಕ ಪುರಾವೆಗಳು ಇವೆ. ಕ್ರಿ. ಪೂ. ೩ ಸಹಸ್ರ ವರ್ಷಗಳಿಗಿಂತ ಹಿಂದಿನದಾದ ಹರಪ್ಪ ಮಹೆಂಜೋದಾರೋ ನಾಗರೀಕತೆ(ಅಥವಾ ಸಿಂಧೂ ಕಣಿವೆಯ ನಾಗರೀಕತೆ)ಯ ಪ್ರಾಚೀನಾವಶೇಷಗಳು ಪ್ರಮಾಣೀಕರಿಸುವಂತೆ ಅಲ್ಲಿನ ಜನರು ಶಿವಾರಾಧಕರು ಆಗಿದ್ದರೆಂಬುದು ಅನೇಕ ವಿದ್ವಾಂಸರ ಸಿದ್ಧಾಂತವಾಗಿದೆ. ಅಲ್ಲಿ ಸಿಕ್ಕಿದ ಪ್ರಾಚೀನ ಮುದ್ರೆಗಳಲ್ಲಿ 'ಪಶುಪತಿ ಎನಿಸುವ ಶಿವನ ಚಿಹ್ನೆಯು' ಕಂಡುಬಂದಿದೆ. ವೇದಗಳ ಕಾಲದಲ್ಲಿ ಆರ್ಯರ ಆಗಮನದ ನಂತರವೂ ಶಿವ, ಈಶಾನ, ರುದ್ರ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ದೇವತೆಯಾಗಿ ಶಿವನು ಆರಾಧಿಸಲ್ಪಟ್ಟನು. ಯಜುರ್ವೇದದ ಮಧ್ಯದಲ್ಲಿ ಬರುವ ರುದ್ರಾಧ್ಯಾಯವು ಇದಕ್ಕೆ ಮುಖ್ಯ ಪ್ರಮಾಣವಾಗಿದೆ. ಈ ರುದ್ರಾಧ್ಯಾಯದಲ್ಲಿಯೇ 'ನಮಃ ಶಿವಾಯ' ಎಂಬ ಪಂಚಾಕ್ಷರಿ ಮಂತ್ರವು ಅಡಕವಾಗಿದ್ದು ಇಂದಿಗೂ ಎಲ್ಲ ಶಿವಭಕ್ತರಿಗೆ ಪರಮಪವಿತ್ರವಾದ ಮಂತ್ರವಾಗಿದೆ.

ಪ್ರತಿಯೊಂದು ದರ್ಶನವೂ ಪ್ರಮಾಣ-ಪ್ರಮೇಯ ಎಂದು ಎರಡು ವಿಧವಾಗಿ ಪ್ರವರ್ತಿಸುತ್ತದೆ. "ಮಾನಾಧೀನಾಮೇಯಸಿದ್ಧಿಃ" ಎಂಬ ಉಕ್ತಿಗೆ ಅನುಗುಣವಾಗಿ ಮೊದಲು ಪ್ರಮಾಣಗಳನ್ನು ಎಲ್ಲ ದರ್ಶನಗಳೂ ವಿವರಿಸಬೇಕು. ಏಕೆಂದರೆ ಮೊದಲು ಪ್ರಮಾಣದ ನಿಷ್ಕರ್ಷೆಯಾಗದೆ ಪ್ರಮೇಯದ ಸ್ವರೂಪವೇ ಸಿದ್ಧಿಸುವುದಿಲ್ಲ. ಯಥಾರ್ಥಜ್ಞಾನವನ್ನು ನಿಷ್ಕೃಷ್ಟವಾಗಿ ಕೊಡುವ ಸಾಧನವೇ ಪ್ರಮಾಣ. ಶಕ್ತಿವಿಶಿಷ್ಟಾದ್ವೈತ ದರ್ಶನದಲ್ಲಿ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು ಒಪ್ಪಿದ್ದಾರೆ. ಇಂದ್ರಿಯಾರ್ಥ ಸನ್ನಿಕರ್ಷಜನ್ಯವಾದ, ವ್ಯಭಿಚಾರ ದೋಷರಹಿತವಾದ ಜ್ಞಾನವು ಪ್ರತ್ಯಕ್ಷವೆನಿಸುತ್ತದೆ. ವ್ಯಾಪ್ತಿಜ್ಞಾನದಿಂದ ಉಂಟಾಗುವ ಪರೋಕ್ಷ ವಸ್ತುವಿನ ಜ್ಞಾನ ಅನುಮಾನ. ಆಪ್ತವಾಕ್ಯದಿಂದ ಜನ್ಯವಾದ ಜ್ಞಾನ ಶಬ್ದ ಪ್ರಮಾಣದ ವಿಷಯ. ಈ ಲಕ್ಷಣಗಳಲ್ಲಿ ನ್ಯಾಯಾದಿಶಾಸ್ತ್ರಗಳು ಹೇಳುವುದನ್ನು ಶಕ್ತಿ ವಿಶಿಷ್ಟಾದ್ವೈತ ದರ್ಶನದಲ್ಲಿಯೂ ಒಪ್ಪಿಕೊಳ್ಳಲಾಗಿದೆ. ಆದರೆ ಶಬ್ದ ಪ್ರಮಾಣದ ವಿಷಯದಲ್ಲಿ ಸ್ವಲ್ಪ ವೈಶಿಷ್ಟ್ಯವು ಕಂಡುಬರುತ್ತದೆ. ಆಪ್ತವಾಕ್ಯವಾದ ಶಬ್ದವೆಂದರೆ ವೇದಗಳಂತೆ ಆಗಮಗಳೂ ಕೂಡ ಪ್ರಮಾಣ ಎಂಬುದು ಈ ಸಿದ್ಧಾಂತವು ಎತ್ತಿಹಿಡಿಯುವ ವಿಚಾರವಾಗಿದೆ.

ವೇದಗಳು ಪರಮಾತ್ಮನ ನಿಶ್ವಸಿತ ರೂಪವಾದದ್ದು (ಯಸ್ಯನಿಶ್ವಸಿತಂ ವೇದಾಃ) ಇವುಗಳಿಗೆ ಅನೇಕ ಭಾರತೀಯ ದರ್ಶನಗಳು ಪ್ರಾಮಾಣ್ಯವನ್ನು ಘೋಷಿಸಿವೆ. ಹೀಗೆಯೇ ಆಗಮ ಗಳಿಗೂ ಸಮಪ್ರಾಮಾಣ್ಯವನ್ನು ಶಕ್ತಿವಿಶಿಷ್ಟಾದ್ವೈತವು ಒಪ್ಪಿಕೊಳ್ಳುತ್ತದೆ.

ಆಗತಂ ಶಿವವಕ್ತ್ರಾತ್ತು ಗತಂಚ ಗಿರಿಜಾನನೇ।
ಮತಂಚ ವಾಸುದೇವಸ್ಯ ತಸ್ಮಾದಾಗಮಮುಚ್ಯತೇ॥

ಎಂಬ ನಿರ್ವಚನದಿಂದ ಆಗಮಗಳು ಶಿವನಿಂದ ಬುದ್ಧಿಪೂರ್ವಕವಾಗಿ ಉಪದೇಶಿಸ ಲ್ಪಟ್ಟವು ಎಂದು ತಿಳಿದು ಬರುತ್ತದೆ. ಕೇವಲ ನಿಶ್ವಾಸದಂತೆ ಪರಮಾತ್ಮನಿಂದ ಹೊರ ಹೊಮ್ಮಿದ ವೇದಗಳಿಗಿಂತಲೂ ಭಕ್ತರನ್ನು ಉದ್ಧಾರಮಾಡುವ ಪರಮೋದ್ದೇಶದಿಂದ ಶಿವನು ಬುದ್ಧಿಪೂರ್ವಕವಾಗಿ ಉಚ್ಚರಿಸಿದ ಆಗಮಗಳಿಗೆ ಹೆಚ್ಚಿನ ಪ್ರಾಮಾಣ್ಯವನ್ನು ಕೊಡುವುದು ಯುಕ್ತಿಯುಕ್ತವಾಗಿದೆ. ಅಲ್ಲದೆ ಶಿವಸಾಕ್ಷಾತ್ಕಾರವನ್ನು ಪಡೆದು ಜ್ಞಾನಿ ಗಳಾಗಿದ್ದ ಶರಣರ ವಚನಗಳಿಗೂ ಅಷ್ಟೇ ಪ್ರಾಮಾಣ್ಯವನ್ನು ಕೊಡಬಹುದು.

ಮಾನವನ ಅಂತಃಕರಣದಲ್ಲಿ ನಿತ್ಯಗೂಢವಾಗಿರುವ ಧರ್ಮಾರ್ಥ-ಕಾಮ-ಮೋಕ್ಷಗ ಳೆಂದು ಪ್ರಸಿದ್ಧವಾದ ನಾಲ್ಕು ವಿಧ ಪುರುಷಾರ್ಥಗಳಲ್ಲಿ ದುಃಖ ಸಂಪರ್ಕವಿಲ್ಲದ ನಿರಂತರ ನಿರತಿಶಯ ದಿವ್ಯ ಸುಖಾನುಭವ ರೂಪವು ಸುಖದ ಆಕಾಂಕ್ಷೆಯನ್ನು ಪೂರೈಸುವ ಸಾಮರ್ಥ್ಯವಿರುವುದರಿಂದ ಮೋಕ್ಷವೇ ಮುಖ್ಯವಾದ ಪುರುಷಾರ್ಥವೆಂದು ಪರಿಗಣಿಸಲ್ಪಟ್ಟಿದೆ. ಆಯಾ ಧರ್ಮಗಳು ಅಥವಾ ಪಂಥಗಳು ಕೈಗೊಂಡ ಭಕ್ತಿ, ಜ್ಞಾನ, ವೈರಾಗ್ಯ ಕರ್ಮಾದಿ ಸಾಧನಗಳಲ್ಲಿ ಎಷ್ಟೇ ವಿವಿಧತೆ ಕಂಡರೂ ಆಯಾ ಧರ್ಮಗಳು ಈ ಸಾಧನಗಳಲ್ಲಿ ಕೆಲವು ವಿಶಿಷ್ಟ ಸಾಧನೆಗಳನ್ನು ಒತ್ತಿ ಹೇಳಿದ್ದರೂ 'ತಮೇವ ವಿದಿತ್ವಾತಿ ಮೃತ್ಯುಮೇತಿ ನಾನ್ಯಃ ಪಂಥಾವಿದ್ಯತೆ ಯನಾಯ' ಇವೇ ಮುಂತಾದ ಪ್ರಮಾಣಗಳಿಂದ ಮೋಕ್ಷಕ್ಕೆ ಪರಬ್ರಹ್ಮ ಜ್ಞಾನವೇ ಕಾರಣವೆಂದು ತಿಳಿದುಬರುತ್ತದೆ.

ಮೋಕ್ಷ ಸುಖವೇ ಅಖಿಲ ಮಾನವ ವರ್ಗದ ಧ್ಯೇಯವಾಗಿರುವುದರಿಂದ ಇದನ್ನು ಪಡೆಯುವುದಕ್ಕಾಗಿ ಬೇರೆ ಬೇರೆ ಮಾರ್ಗಗಳು ಪರಿಶೋಧಿಸಲ್ಪಟ್ಟಿವೆ. 'ಶಕ್ತಿವಿಶಿಷ್ಟಾ ದ್ವೈತ ದರ್ಶನ' ಜಾತಿ, ಕುಲ, ಭೇದಗಳನ್ನು ಬದಿಗೊತ್ತಿ ಸ್ವತಂತ್ರವಾದ ಅನುಭವದಿಂದ ಪರಮಾತ್ಮನ ಸಾಯುಜ್ಯವನ್ನು ಕಾಯಕದಿಂದ ಪಡೆದು ಧನ್ಯರಾಗಬೇಕು ಎಂದು ಪ್ರಪಂಚಕ್ಕೆ ಬೋಧಿಸಿದ ಶಿವಶರಣರಿಗೆ ಗೌರವ ಪ್ರೀತ್ಯಾದರಗಳನ್ನು ತೋರಿಸುವ ಮೂಲಕ ಗುರುತಿಸಬಹುದಾಗಿದೆ. ಶುದ್ಧವಿದ್ಯಾತತ್ವರೂಪವಾಗಿ ಪರಿಣಮಿಸಿರುವ ಶಕ್ತಿ ತತ್ವವು, ಮಯೂರಾಂಡರಸನ್ಯಾಯದಂತೆ ತನ್ನಲ್ಲಡಕವಾಗಿರುವ ಪ್ರಪಂಚ ನಿರ್ಮಾಣ ಕಾರಣೀಭೂತ ಸೂಕ್ಷ್ಮ ಪದಾರ್ಥಗಳಲ್ಲಿ ಅನ್ಯೋನ್ಯಭಾವರೂಪ, ಭೇದ ಬುದ್ಧಿ ಪ್ರಾಧಾನ್ಯದಿಂದ 'ಮಾಯಾತತ್ವ'ವೆನಿಸಿಕೊಳ್ಳುವುದು. ವಿಶ್ವವಸ್ತುಗಳನ್ನು ಬೆಳಗಿಸುವ ಚಂದ್ರಿಕೆ ಚಂದ್ರನಲ್ಲಿ ಹೇಗೆ ಸ್ಥಿರವಾಗಿ ನೆಲಸಿರುವುದೋ ಹಾಗೆ ಪ್ರಕಾಶರೂಪವಾದ ಪರಮಾರ್ಥನಲ್ಲಿ ಸತ್ಯ,

ಜ್ಞಾನ, ಆನಂದಗಳ ವಿಮರ್ಶಾತ್ಮಕವೂ ಅನುಭವ ರೂಪವೂ ಆದ ಶಕ್ತಿಯು ಎಂದೆಂದೂ ಅಗಲದಂತೆ ಅವನ ಸ್ವಭಾವವಾಗಿ ಅವನಲ್ಲಿ ನೆಲಸಿರುವುದು. ಪರಮಾತ್ಮ ಶಕ್ತಿಗಳಿಗೆ ಚಂದ್ರ ಚಂದ್ರಿಕೆಯರಂತೆ ನಿತ್ಯತ್ವವು ಅವಿನಾಭಾವ ಸಾಹಚರ್ಯವು ಸಿದ್ಧವಾಗಿರುವುದನ್ನು ಕಂಡು ಕೊಳ್ಳಬಹುದು. ಭಗವದ್ಗೀತೆಯಲ್ಲಿ–

"ಯದ್ವದ್ವಿಭೂತಿ ಮತ್ಸತ್ವಂ–ಶ್ರೀಮದೂರ್ಜಿತ ಮೇವವಾ।
ತತ್ತದೇವಾವ ಗಚ್ಛಿತ್ವಂ ಮಮತೇಜೋಂಶ ಸಂಭವಂ॥" (೧೦–೪೧)

ಅಂದ ಮೇಲೆ ಶಕ್ತಿ ಮತ್ತು ತೇಜಸ್ಸು ಎಂದೂ ಪರಮಾತ್ಮನ ದಿವ್ಯ ಪ್ರಕಾಶವನ್ನು ತಿಳಿಸುವ ಪದಗಳೆಂದು ಅರ್ಥವಾಗುವುದಲ್ಲದೇ, ಪರಮಾತ್ಮನ ಸಾನ್ನಿಧ್ಯವಿಲ್ಲದೆ ಈ ತೇಜಸ್ಸು ಒಂದು ಘಳಿಗೆಯೂ ಪ್ರತ್ಯಕ್ಷವಾಗಿ ಸ್ವತಂತ್ರಿಸಿ ಪರಿವರ್ತಿಸಲಾರದು ಎಂಬ ಮಾತು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಈ ಜಗತ್ತನ್ನು ನಾವು ಅಭ್ಯಸಿಸಿ ಕೊಂಡಾಗ ವಿಶ್ವದ ನೈಜಸ್ವರೂಪ ಬೇರೊಂದು ರೀತಿಯಲ್ಲಿ ನಮಗೆ ಕಾಣುವುದಲ್ಲದೇ ಕೇವಲ ವೈರಾಗ್ಯದ ಹೆಸರಿನಲ್ಲಿ ಬದುಕಿನಿಂದ ವಿಮುಖವಾಗುವುದು ಶಕ್ತಿವಿಶಿಷ್ಟಾದ್ವೈತಕ್ಕೆ ಸಮ್ಮತ ವಾಗಲಾರದು ಎಂಬ ಮಾತು ಸ್ಪಷ್ಟವಾಗುತ್ತದೆ.

ಪರಶಿವನು ತನ್ನ ಲೀಲಾವಿನೋದದಿಂದ ತನ್ನ ಶಕ್ತಿಯ ಮುಖಾಂತರ ಮಾಡಿದ ವಿಶ್ವದಲ್ಲಿ ಜೀವ ಎಂಬುದೊಂದು ಚೈತನ್ಯಸಾಗರದ ಹನಿಯಾಗಿರುವುದನ್ನು ನಾವು ಗಮನಿಸ ಬಹುದಾಗಿದೆ. ತತ್ವಶಃ ಶಿವನು ಈ ವಿಶ್ವದಲ್ಲಿ ಎಲ್ಲೆಲ್ಲಿಯೂ ವ್ಯಾಪ್ತನಿದ್ದರೂ ಜಡಕ್ಕಿಂತ ಚೇತನದಲ್ಲಿ, ಚೇತನಕ್ಕಿಂತ ಜೀವದಲ್ಲಿ, ಸಾಮಾನ್ಯ ಜೀವಕ್ಕಿಂತ ಬುದ್ಧಿಯುಕ್ತ ಜೀವಗಳಲ್ಲಿ ಕೇವಲ ಬುದ್ಧಿಯುಕ್ತ ಜೀವಗಳಿಗಿಂತ ಮನುಷ್ಯ ಮಾತ್ರನಲ್ಲಿ, ಎಲ್ಲಕ್ಕಿಂತ ಮಿಗಿಲಾಗಿ ಮನುಷ್ಯರಿಗಿಂತ ತತ್ವಶೀಲ ಭಕ್ತನಲ್ಲಿ ಅಥವಾ ಜ್ಞಾನಿಯಲ್ಲಿ ಅವನ ಅವಿರ್ಭಾವವು ಹೆಚ್ಚಾಗಿ ಕಾಣುವುದರಿಂದಲೇ ಪರಮಾತ್ಮ ಸ್ವರೂಪವು ಭಕ್ತನಿಗೆ ಅಥವಾ ಜ್ಞಾನಿಗೆ ತಿಳಿಯುವುದು ಸುಲಭವಾದಂತೆ ಅನ್ಯರಿಗೆ ಸಾಧ್ಯವಾಗಲಾರದು. ಉಳಿದವರು ಮಾಯಾಮೋಹದಿಂದ ಮುಸುಕಿ ಅಜ್ಞಾನಕ್ಕೆ ಒಳಗಾಗಿ ದ್ವಂದ್ವಗಳಲ್ಲಿ ಸಿಕ್ಕಿ ಅಹಂಕಾರ, ಅಭಿಮಾನ, ಹೊನ್ನು, ಹೆಣ್ಣು ಮೊದಲಾದ ಲೋಭಗಳ ಕರ್ಮಬಂಧನಕ್ಕೆ ಗುರಿಯಾಗುತ್ತಾರೆ. ಇದನ್ನು ಅಜ್ಞಾನ ಅಥವಾ ಅವಿದ್ಯೆ ಎಂಬುದಾಗಿ ಕರೆಯುತ್ತಾರೆ. ಜೀವನು ತತ್ವಶಃ ಪರಮಾತ್ಮನ ಅಂಶವಾದರೂ ಸೃಷ್ಟಿಯ ಉತ್ಪತ್ತಿಗೆ ಮುಖ್ಯ ಸಹಾಯಕ ವಾದ ಮಾಯಾಶಕ್ತಿಯ ಮೂಲಕ ತನ್ನ ನಿಜರೂಪವನ್ನು ಮರೆತು ದುಃಖದಲ್ಲಿ ತೊಳಲಾಡುವನು. ಅಹಂಕಾರವೆಂಬುದು ಮಾಯೆಯ ಅಥವಾ ಅಜ್ಞಾನದ ದೊಡ್ಡ ಆಯುಧ. ಅದು ತಲೆದೋರಿತೆಂದರೆ ಕಲ್ಪನೆ ಎಂಬ ಬಿರುಗಾಳಿಯಲ್ಲಿ ಮನುಷ್ಯನು ಹಾಳಾಗುತ್ತಾನೆ. ಸೃಷ್ಟಿಯಲ್ಲಿ ಪ್ರತಿಯೊಂದು ಜೀವವೆಂಬುದು ಒಂದು ವ್ಯಕ್ತಿಯಾಗಿ ಬಿಡಿಬಿಡಿಯಾಗಿರುವಂತ ತೋರಿದರೂ ಅದು ಸಕಲ ಜೀವಗಳೊಡನೆ ಹಾಗೂ ಚರಾಚರ ವಸ್ತುಗಳೊಡನೆ ನಿಕಟವಾದ ಸಂಬಂಧವನ್ನು ಉಳ್ಳದ್ದು ಎಂಬುದನ್ನು ಅಲ್ಲಗಳೆಯಲಾಗದು.

ಸದಸದ್ವಿವೇಕ ಬುದ್ಧಿಯು ಒಮ್ಮೆ ಜಾಗ್ರತವಾದ ಬಳಿಕ ಅವನಲ್ಲಿ ವಿಷಯ ಸುಖ ಮತ್ತು ಆತ್ಮಸುಖ ಇವುಗಳ ಬಗ್ಗೆ ತಾರತಮ್ಯ ಬುದ್ಧಿಯು ಹುಟ್ಟುವುದು. ಮೊದಲನೆಯದನ್ನು ಬಿಟ್ಟು ಎರಡನೆಯದನ್ನು ಅನುಸರಿಸುವುದೇ ತನಗೆ ಹಿತಕರವೆಂಬ ನಿರ್ಣಯವನ್ನು ಅವನು ಮಾಡಿಕೊಂಡಾಗ, ಈ ನಿರ್ಣಯದ ಪ್ರಕಾರ ವಿಷಯ ಸುಖದಲ್ಲಿ ಅವನು ಹೇಯಭಾವ ವನ್ನು ತಾಳಿದಲ್ಲಿ, ಅವನಲ್ಲಿ ಮುಕ್ತಿಯ ಬಯಕೆಯು ಚಿಗುರುವುದನ್ನು ನಾವು ಕಾಣ ಬಹುದು. ಈ ನಿರೂಪಣೆಯಲ್ಲಿ ಸಾಧಾರಣವಾಗಿ ಎಲ್ಲ ಸಿದ್ಧಾಂತಗಳ ಉದ್ದೇಶ ಹಿನ್ನೆಲೆ ಒಂದೇ ಎನ್ನುವುದನ್ನು ನಾವು ಅರ್ಥೈಸಿಕೊಳ್ಳಬಹುದಾದರೂ ಮೋಕ್ಷಸಾಧನೆಯತ್ತ ನಡೆದ ಸಾಧಕನ ನಿಲುವುಗಳನ್ನು ಹೇಳುವಲ್ಲಿ ಕಂಡುಬಂದ ಸಾದೃಶ್ಯವನ್ನು ಮಾತ್ರ ಇಲ್ಲಿ ಗುರುತಿಸ ಬಹುದಾಗಿದೆ. ಶ್ರೀ ಕರಭಾಷ್ಯದಲ್ಲಿ ಪರಶಿವ ಕೈಲಾಸವಾಸಿಗಳಾದ ನಿತ್ಯಮುಕ್ತರಿಗೆ ಸ್ವೇಚ್ಛೆ ಯಿಂದ ಸಂಚರಿಸುವುದನ್ನು ಶರೀರಾಭಿಮಾನರಹಿತರಾಗಿ ಇಚ್ಛಾಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿ ವ್ಯಾಪಾರವುಳ್ಳ ನಿಷ್ಕಾಮರಿಗೆ ನಿತ್ಯವೈಭವ ಪರಮಾನಂದಕಂದ ಸ್ವಪ್ರಕಾಶ ವಿಭೂತಿಮಯ ಶಿವಸಾಮರಸ್ಯಾತ್ಮಕ ಸಾರೂಪ್ಯ–ರಸೈಕ ಪ್ರಪಂಚ–ರಸಾವಗಾಹಿಗಳಾದವರಿಗೆ ಪರಿಪೂರ್ಣ–ಸರ್ವ–ಶಿವಾತ್ಮಕಭಾವ ಪ್ರಕಟನವನ್ನು ಶೃತಿಯು ಸೂಚಿಸಿದೆ. 'ಅಹಮನ್ನ ಮಹಮನ್ನ ಮಹಮನ್ನ' ಇತ್ಯಾದಿಗಳಿಂದ ಶ್ರುತಿಯು ಮುಕ್ತ ಅನುಭವವನ್ನು ಸ್ಪಷ್ಟಪಡಿಸಿದೆ ಯಲ್ಲದೆ, ಆಕಾಶದಂತೆ ಸರ್ವವ್ಯಾಪಕ– ಶಿವತತ್ವಾನಂದಾನುಭವವುಳ್ಳ ಶಿವಯೋಗ ಸಮಾಧಿನಿಷ್ಠರಾದ ಜೀವನ್ಮುಕ್ತ ಶಿವಯೋಗಿಗಳು ಸ್ವಯಂ ದೃಢಶಿವಸಾರೂಪ್ಯಧಾರಿಗಳಾ ದರೂ ಕೂಡ ಅವರಿಗೆ ಜಗದ್ವ್ಯಾಪಾರದ ಬಯಕೆಯಿರುವುದಿಲ್ಲ. ಅದರಂತೆ ಮುಕ್ತಾತ್ಮರು ಸಹ ಭಾವಿಜೀವಿಗಳಂತೆ ಪುನಃ ಪುನಃ ಜನನ ಮರಣಗಳಿಗೆ ಬಲಿಯಾಗದೆ ಕಡಲಿನ ತತ್ತ್ವಳ ಜಲದಂತೆ ಜಗದ್ವ್ಯಾಪಾರದ ಜಂಜಾಟವಿಲ್ಲದೆ ಕೇವಲ ಆನಂದಾತ್ಮಕ ವಿಭಾಗದಲ್ಲಿ ನಿತ್ಯ ಸುಖವನ್ನು ಅನುಭವಿಸುತ್ತಾರೆ. ಪ್ರಯುಕ್ತ ಜಗದ್ವ್ಯಾಪಾರದ ಹೊಣೆ ಪರಮಾತ್ಮನದು. ಆದುದರಿಂದಲೇ ಅವನಿಗೆ ಶಕ್ತಿಯ ನೆರವು ಅಗತ್ಯ.

ಅಷ್ಟಾದಶಪುರಾಣಾನಾಂ ಕರ್ತಸತ್ಯವತಿ ಸುತಃ।
ಕಾಮಿಕಾದಿ ಪ್ರಭೇದಾನಂ ಕರ್ತಾಽದೆವೋ ಮಹೇಶ್ವರಃ॥

ಎಂಬೀ ಸೂತಸಂಹಿತಾವಚನವನ್ನು ಅವಲೋಕಿಸಿದಾಗ ವೇದಗಳಿಗೂ ಶೈವಾಗಮ ಗಳಿಗೂ ಶಿವನೊಬ್ಬನೆ ಕರ್ತೃವಾಗಿರುವುದರಿಂದಲೂ ಪಂಚಬ್ರಹ್ಮ ಪ್ರಣವ ಪಂಚಾಕ್ಷರೀ ಮೊದಲಾದ ಮಂತ್ರಗಳು, ಲಿಂಗಾರ್ಚನಾ ಭಸ್ಮಧಾರಣಾದಿ ಧರ್ಮಗಳು ವೇದದಲ್ಲಿಯೂ, ಶೈವಾಗಮಗಳಲ್ಲಿಯೂ ಪ್ರತಿಪಾದಿತವಾಗಿರುವುದರಿಂದಲೂ ವೇದಗಳು ಶೈವಾಗಮಗಳು ಸಮಪ್ರಮಾಣವಾಗಿವೆಯೆಂದು ಶ್ರೀಕಂಠಾಚಾರ್ಯರು ಪ್ರತಿಪಾದಿಸಿರುವ ಅಂಶವನ್ನು ನಾವು ಗಮನಿಸಬಹುದಾಗಿದೆ. ಶ್ರೀಪತಿಪಂಡಿತರು ಸಹ ತಮ್ಮ ಭಾಷ್ಯದಲ್ಲಿ 'ಸದ್ಯೋಜಾತೇನ ಋಗ್ವೇದಂ ವಾಮದೇವೇನ ಯಾಜುಷಂ, ಎಂದು ಸ್ಮೃತಿಯಲ್ಲಿ ಪರಮೇಶ್ವರ ಒಂದೊಂದು

ಮುಖದಿಂದ ಒಂದೊಂದು ವೇದಗಳ ನಿರ್ಮಾಣವನ್ನು ಹೇಳುವುದರ ಮೂಲಕ ಸ್ಪಷ್ಟ ಪಡಿಸಿದ್ದಾರೆ.

ಶಕ್ತಿವಿಶಿಷ್ಟ ಪರಮಾತ್ಮನು ಪೂರ್ಣಾಂಶದಲ್ಲಿ ಸ್ವಸ್ಥನಾಗಿದ್ದುಕೊಂಡು ತನ್ನ ಅತ್ಯಲ್ಪಾಂಶದಿಂದ ಅನಂತ ವಿಚಿತ್ರಾಕಾರವಾಗಿ ಶೋಭಿಸುತ್ತಿರುವುದನ್ನು ಗಮನಿಸಿದಾಗ ಜಗತ್ತು ಶಿವಾತ್ಮಕ ಎಂಬುದು ಸ್ಪಷ್ಟವಾಗುತ್ತದೆ. ವಚನಕಾರರು ಪರಮಾತ್ಮ ಸ್ವರೂಪ ವನ್ನು ಈ ರೀತಿ ತಿಳಿಸಿದ್ದಾರೆ.

'ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ
ಲಿಂಗವೆಂಬುದು ಪರಶಕ್ತಿಯುತ ಘನತೇಜ
ಲಿಂಗವೆಂಬುದು ಪರಶಕ್ತಿಯುತ ನಿರತಿಶಯಾನಂದ ಸುಖವು
ಲಿಂಗವೆಂಬುದು ಪರಶಕ್ತಿಯುತ ಪರಮಜ್ಞಾನ'.................

ಇಂತಹ ಅದ್ಭುತ ಶಕ್ತಿವಿಶಿಷ್ಟನು ಮಹಾಪ್ರಕಾಶನೂ ಆದ ಮಹಾಲಿಂಗದ ಲೀಲಾ ವಿನೋದ ಭೂಮಿಯೇ ಈ ಪ್ರಪಂಚ. ಹೀಗೆ ಸರ್ವಾಧಿಷ್ಠಾನನಾದ ಪರಮಾತ್ಮನು ಭಕ್ತಾನು ಗ್ರಹಕ್ಕಾಗಿ ಸಾಕಾರನಾಗಿ ನಿರಾಕಾರನಾಗಿ ಶೋಭಿಸುತ್ತಿದ್ದಾನೆ. 'ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನಚಾನ್ಯಥಾ' ಎಂಬ ಶಂಕರಸಂಹಿತೆಯಲ್ಲಿ ಬರುವ ಭಕ್ತಿಯ ಮಹತ್ವವನ್ನು ಗಮನಿಸಿದಾಗ ನಿರಾಕಾರ ವಸ್ತುವನ್ನು ಅನುಗ್ರಹ ಮೂರ್ತಿಯನ್ನಾಗಿ ಮಾಡುವ ಅದ್ಭುತ ಶಕ್ತಿ ಈ ಭಕ್ತಿಯಲ್ಲಿ ಅಡಗಿದೆ. "ಭಕ್ತಿಯೇ ಮುಕ್ತಿಗೆ ಹೇತು" ಎಂಬ ಬಗ್ಗೆ ಯಾರಲ್ಲೂ ಭಿನ್ನಾಭಿಪ್ರಾಯವಿಲ್ಲ. ಆದ್ದರಿಂದ ಪೂಜ್ಯನಾದ ಪರಮಾತ್ಮನ ಬಗ್ಗೆ ಮತ್ತು ಅವನ ಅನುಭವವನ್ನು ಪಡೆದ ಭಕ್ತರ ಮತ್ತು ಶರಣರ ಬಗ್ಗೆ ಮಾಡುವ ಪ್ರೀತಿಯೇ ಭಕ್ತಿಯೆನಿ ಸುತ್ತದೆ. ಪರಮಾತ್ಮನ ಮೇಲೆ ನಮಗೆ ಭಕ್ತಿಹುಟ್ಟಬೇಕಾದರೆ ಅವನು ಮಹನೀಯನು ಎಂಬ ಜ್ಞಾನ ನಮಗೆ ಮೊದಲು ಉಂಟಾಗಬೇಕು. ಅವನು ಅಮೂರ್ತನಾಗಿದ್ದರೂ ನಮ್ಮನ್ನು ಅನುಗ್ರಹಿಸಲಿಕ್ಕಾಗಿ ದಿವ್ಯಮಂಗಳ ವಿಗ್ರಹನಾಗಿದ್ದಾನೆ ಎಂಬ ನಿಲುವು ನಮಗೆ ಬರಬೇಕು. ನಮ್ಮಲ್ಲಿ ಭಕ್ತಿಯನ್ನು ಹುಟ್ಟಿಸಿ ಬಳಸಲಿಕ್ಕಾಗಿಯೇ ಅವನು ದಿವ್ಯವಾದ ಆಕಾರವನ್ನು ಧರಿಸಿ ಶಿವನೆನಿಸಿ ಲೋಕಕಲ್ಯಾಣಕ್ಕಾಗಿ ಭಕ್ತರ ಶೋಕ, ಮೋಹಗಳ ನಿವಾರಣೆಗಾಗಿ ಸಕಲ ಕಲ್ಯಾಣಗುಣಾಕರನಾಗಿ ಶಕ್ತಿಪ್ರಕಾಶಗಳ ಪೂರ್ಣವಿಕಾಸದಿಂದ ಅನುಗ್ರಹಮೂರ್ತಿ ಭಕ್ತರ ಎದುರಿಗೆ ಅವರ ಉಪಾಸನೆಗೆ ಯಥೋಚಿತವಾದ ಫಲವನ್ನು ಅನುಗ್ರಹಿಸಲು ಕಾಣಿಸಿಕೊಳ್ಳುವ ದಿವ್ಯಮೂರ್ತಿಯೇ ಶಿವನೆನಿಸಿರುವನು.

ಸಚ್ಚಿದಾನಂದ ಸ್ವರೂಪನು ಮೋಕ್ಷಕ್ಕೆ ಪರಮಾಶ್ರಯನೂ, ಯಾವ ವಿಧವಾದ ವಿಕಲ್ಪ ಮತ್ತು ಅಸದ್ಭಾವನೆಗಳಿಲ್ಲದವನೂ, ನಿರಾಕಾರನೂ, ಸರ್ವಜ್ಞನೂ, ಸರ್ವ ವ್ಯಾಪಕನೂ ನಾನಾ ವಿಧವಾದ ಶಕ್ತಿಗಳೊಡಗೂಡಿದವನೂ ಆದ ನಿರಾಕಾರ ಪರಮಾತ್ಮ ನನ್ನು ಸಿದ್ಧಾಂತ ಶಿಖಾಮಣಿಯಲ್ಲಿ–

ಅಸ್ತಿಸಚ್ಚಿತ್ಸುಖಾಕಾರಂ ಅಲಕ್ಷಣಪದಾಸ್ಪದಂ।
ನಿರ್ವಿಕಲ್ಪಂ ನಿರಾಕಾರಂ॥ (೨–೩) ಎಂದು ಬಣ್ಣಿಸಲಾಗಿದೆ.

ಅಂದಮೇಲೆ ಪರಶಿವನು ಸಚ್ಚಿದಾನಂದ ಸ್ವರೂಪನಾಗಿ, ಅದ್ವಿತೀಯನಾಗಿ ಪರಮ ತೇಜೋಮಯನಾಗಿರುವ ಪರಬ್ರಹ್ಮ. ಅವನು ವಿಶ್ವಾಕಾರನೂ ಅಹುದು, ವಿಶ್ವಾಧಿಕನೂ ಅಹುದು. ಸಕಲ ಸದ್ಗುಣ ಪರಿಪೂರ್ಣನಾದ ಪರಶಿವನು ಚೇತನಾ ಚೇತನಾತ್ಮಕವಾದ ಈ ಪ್ರಪಂಚ ಅವನ ಇಚ್ಛಾಶಕ್ತಿಯಿಂದ ಪರಿಣಾಮಗೊಂಡು ವಿಕಾಸವಾದರೂ ಅದರಿಂದ ಅವನು ಸ್ವಲ್ಪವೂ ಪ್ರಭಾವಿತನಾಗುವುದಿಲ್ಲ. ಸನಾತನ ಅದ್ವಿತೀಯ ಪರವಸ್ತು ಒಂದು ಎಲ್ಲಾ ಕಾಲಗಳಲ್ಲಿಯೂ ಪ್ರಕಾಶಿಸುತ್ತಿರುವುದು ಸೃಷ್ಟಿ ಪ್ರಳಯಗಳೆರಡು ಸಮಯಗಳಲ್ಲೂ ಹೇಗೆ ಪರಮಾತ್ಮನು ಸ್ವೀಯ ಶಕ್ತಿಯೊಡನೆ ಆನಂದಿಸುತ್ತಾ, ಆತ್ಮಾರಾಮನಾಗಿರುವನು. 'ತತ್ರಲೀನಮಭೂತ್ ಪೂರ್ವಂ ಚೇತನಾ ಚೇತನಂ ಜಗತ್' (ಸ. ಶಿ. ೨–೭) ಇಂತಹ ಪರತತ್ವವಾದ ಪರಶಿವನಿಗೆ ವೀರಶೈವದಲ್ಲಿ ಸ್ಥಲವೆಂದು ಹೆಸರು. ಇದರ ಅರ್ಥ ಶಿವನೇ ಎಲ್ಲ ಜೀವಿಗಳಿಗೆ ಆಶ್ರಯ, ಅವನಲ್ಲಿ ಎಲ್ಲವೂ ನೆಲಸಿವೆಯಲ್ಲದೆ ಶಿವನಲ್ಲಿಗೇ ಎಲ್ಲವೂ ಕೊನೆಯಲ್ಲಿ ಸೇರುವುದಲ್ಲದೆ, ಅವನ ಇಚ್ಛೆಯಿಂದಲೇ ಈ ಸ್ಥಲವು ತನ್ನ ಶಕ್ತಿ ಸ್ಫುರಣದಿಂದ ಲಿಂಗ–ಅಂಗಗಳಾಗಿ ಭಾಗವಾಗುತ್ತದೆ. ಲಿಂಗವೇ ಶಿವಪೂಜ್ಯವಸ್ತು. ಅಂಗ ಅದರ ಭಾಗ ಜೀವ–ಪೂಜಕ. ಶಕ್ತಿಯೂ ಕಲಾ ಮತ್ತು ಭಕ್ತಿಯೆನಿಸಿ, ಕಲೆಯು ಶಿವನಲ್ಲಿಯೂ ಭಕ್ತಿಯು ಅಂಗದಲ್ಲಿಯೂ ಸೇರುತ್ತದೆ. ಶಿವನಿಂದ ಪ್ರಪಂಚವು ಪರಿಣಾಮವಾಗುವುದಕ್ಕೆ ಹೇಗೆ ಕಲೆ ಕಾರಣವಾಗುವುದೋ ಹಾಗೆ ಭಕ್ತಿ ಸಂಸಾರ ಬಂಧನದಿಂದ ಅಂತ್ಯ ಮೋಕ್ಷದ ಕಡೆಗೆ ಜೀವವನ್ನು ಸೆಳೆಯುವುದು. ಈ ಕಾರ್ಯವೇ ಲಿಂಗಾಂಗಗಳಲ್ಲಿ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಮೆಟ್ಟಿಲುಗಳಲ್ಲಿ ಸಾಧ್ಯವಾಗುವುದಲ್ಲದೆ, ಆದ್ದರಿಂದಲೇ ಇದಕ್ಕೆ 'ಷಟ್‌ಸ್ಥಲ ಸಿದ್ಧಾಂತ'ವೆಂಬ ಹೆಸರು ಬಂದಿರುವುದನ್ನು ಮನಗಾಣಬಹುದಾಗಿದೆ. ಈ ಸಾಧನೆಗೆ ಅಷ್ಟಾವರಣ ಮತ್ತು ಪಂಚಾಚಾರಗಳು ಸಹಾಯಕವಾಗಿರುವುದು ಸ್ಪಷ್ಟವಾಗಿದೆ.

ಹೀಗೆ ಲೋಕದಲ್ಲಿ ಎಲ್ಲೆಲ್ಲಿಯೂ ಪರಮಾತ್ಮನಿದ್ದರೂ ಯಾವುದಕ್ಕೂ ಅಂಟದೇ ಲೋಕದ ವರ್ತನೆಯಿಂದ ದೂರನೂ, ನಿರಂಜನನೂ ಆಗಿ ಸ್ವಪ್ರಕಾಶದಿಂದ ಶೋಭಿಸುತ್ತಿರುವನು. ಲೋಕಧರ್ಮವೆನಿಸಿದ ಮಾನ, ಅಭಿಮಾನ, ಅಮಾನಗಳಿಗೆ ಅಂಟಿಕೊಳ್ಳದವನಾದ ಪರಮಾತ್ಮನನ್ನು ಕುರಿತು ಸಿದ್ಧಾಂತ ಶಿಖಾಮಣಿಯಲ್ಲಿನ ಈ ಮಾತುಗಳು ಮನನೀಯವಾಗಿದೆ.

ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ।
ಕುಟೀಭಾವಾದ್ಯಥಾಭಾತಿಪಟಃ ಸ್ವಸ್ಯಪ್ರಸಾರಣಾತ್॥ (೧೦–೬೫)
ಪತ್ರಶಾಖಾದಿರೂಪೇಣ ಯಥಾತಿಷ್ಠತಿ ಪಾದಪಃ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ॥ (೧೦–೬೭)

ಮುಖ್ಯವಾಗಿ ನಾವು ಗಮನಿಸಬೇಕಾದ ಅಂಶವೆಂದರೆ ಶಕ್ತಿವಿಶಿಷ್ಟಾದ್ವೈತ ದರ್ಶನವು ದರ್ಶನ ಶಬ್ದದ ನಿಜವಾದ ಅರ್ಥದಲ್ಲಿ ಶ್ರೇಷ್ಠ ದರ್ಶನವಾಗಿದೆ. ಸತ್ಯದ ಅನ್ವೇಷಣೆಯೇ ದರ್ಶನದ ಮುಖ್ಯ ಉದ್ದೇಶವಾದುದರಿಂದ ಪ್ರಪಂಚದ ಸೃಷ್ಟಿಯ ನಿಗೂಢ ರಹಸ್ಯದ ಸತ್ಯವನ್ನು ಕಾಣಲು ಶರಣರು ಏಕಾಗ್ರತೆಯಿಂದ ಪಡೆದ ಅನುಭವದ ಪರಿಪಾಕವೇ ಈ ದರ್ಶನವಾಗಿ ಫಲಿಸಿದೆ. ಋಗ್ವೇದದ ಋಷಿಗಳು ಹೇಳುವಂತೆ-

"ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ|
ತತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ||"

ಸತ್ಯದ ಸಾಕ್ಷಾತ್ಕಾರ ಸರ್ವಸುಲಭವಲ್ಲ, ಆ ಸಾಕ್ಷಾತ್ಕಾರವನ್ನು ಪಡೆದುಕೊಂಡವರು ಇತರರಿಗೆ ಅದನ್ನು ತಿಳಿಸುವುದು ಮತ್ತು ಅನುಭವಗೋಚರ ಮಾಡುವುದು ಇನ್ನೂ ಹೆಚ್ಚು ಕಷ್ಟವಾದ ವಿಷಯ. ೧೨ನೇ ಶತಮಾನದಲ್ಲಿ ಕರ್ನಾಟಕದ ಶರಣರು ಈ ಅದ್ವೈತವನ್ನು ಸಾಧಿಸಿದರು. ದರ್ಶನ ಎಂಬುದು ಶಾಸ್ತ್ರಗಳ ಜಟಿಲ ಪರಿಷ್ಕಾರವುಳ್ಳ ಸಂಸ್ಕೃತ ಗ್ರಂಥಗಳಲ್ಲಿ ಮಾತ್ರ ದೊರೆಯುತ್ತದೆ ಎಂಬ ಭ್ರಾಂತಿಯನ್ನು ಹೋಗಲಾಡಿಸಿ ಜನಸಾಮಾನ್ಯರ ದಿನ ನಿತ್ಯದ ಭಾಷೆಯಲ್ಲೂ ದರ್ಶನದ ಶ್ರೇಷ್ಠತಮ ವಿಚಾರ ಲಹರಿಗಳು ಒಡಮೂಡಲು ಸಾಧ್ಯ ಎಂದು ಸಪ್ರಮಾಣವಾಗಿ ನಿರೂಪಿಸಿದರು. ಇವರು ನಿರೂಪಿಸಿದ ತತ್ವಗಳು ವೇದಾಗಮ ಗಳಿಗೂ ಅವಿರುದ್ಧ, ಶಾಸ್ತ್ರೀಯವಾಗಿಯೂ ಈ ತತ್ವಗಳನ್ನು ಪ್ರತಿಪಾದಿಸಲು ಶಕ್ಯ ಎಂಬುದನ್ನು ಇತರ ದಾರ್ಶನಿಕ ವಿದ್ವಾಂಸರು ಸಂಸ್ಕೃತ ಗ್ರಂಥಗಳ ಮೂಲಕ ಜಗತ್ತಿಗೆ ತಿಳಿಯಪಡಿಸಿದರು. ಆದ್ದರಿಂದ ವೀರಶೈವರಲ್ಲಿ ಕೇವಲ ಶರಣರ ವಚನಗಳನ್ನು ಮಾತ್ರ ಆಶ್ರಯಿಸಿ, ಈ ದರ್ಶನವನ್ನು ನಿರೂಪಿಸುವುದರಲ್ಲಿಯೂ, ಬ್ರಹ್ಮಸೂತ್ರಭಾಷ್ಯಾದಿ ಸಂಸ್ಕೃತ ಗ್ರಂಥಗಳ ಮೂಲಕ ಈ ದರ್ಶನವನ್ನು ಅರಿತುಕೊಳ್ಳುವುದರಲ್ಲಿಯೂ ಪರಸ್ಪರ ವಿರೋಧ ಇರುವುದಿಲ್ಲ. ಇದೇ ರೀತಿಯಾಗಿ ಈ ದರ್ಶನಕ್ಕೆ ಇತರ ದರ್ಶನಗಳೊಡನೆ ಅಥವಾ ಇತರ ಮತಗಳೊಡನೆ ವಿರೋಧವಿಲ್ಲ. ಸತ್ಯವನ್ನು ಕಾಣುವ ಮಾರ್ಗಗಳು ಅನೇಕ ಆದುದರಿಂದ ನೋಟಗಳೂ ಅನೇಕ. ಒಂದು ಮತವನ್ನು ಎತ್ತಿಹಿಡಿಯುವಾಗ ಮತ್ತೊಂದು ಮತವನ್ನು ಹೇಯವೆಂದು, ತುಚ್ಛವೆಂದು, ಸುಳ್ಳೆಂದು ಹೇಳುವ ಸಣ್ಣತನ ಇಲ್ಲಿಲ್ಲ. ಅಶೋಕನ ಶಾಸನ ಗಳಲ್ಲಿ ಬರುವ ಒಂದು ವಿಶ್ವಸಂದೇಶವನ್ನು ಡಾ|| ಎಸ್. ರಾಧಕೃಷ್ಣನ್‌ರವರು ಈ ರೀತಿ ಅನುವಾದಿಸಿದ್ದಾರೆ.

"He who does reverence to his own sect, while disparaging the sects of others, wholly from attachment to his own, with intent to enhance the glory of his own sect, in reality, by such conduct, inflicts the severest injury on his own sect. Concord, therefore, is meritorious, to wit, hearkening and

hearkening willingly to the law of piety as accepted by other people." **P. 240 Occasional Speeches and writings**

—**Dr. S. RadhaKrishan**

ಆಶೋಕನ ಈ ಸಂದೇಶ ಶರಣರ ವಚನಗಳಲ್ಲಿ ಪ್ರತಿಧ್ವನಿಸಿದ್ದು ಇಂದಿಗೂ ಆದರಣೀಯವಾಗಿದೆ. ೨೦ನೇ ಶತಮಾನದಲ್ಲಿ ಮಾನವನ ಆಲೋಚನೆಗಳು ೧೨ನೇ ಶತಮಾನದ ಆಲೋಚನೆಗಳಿಗಿಂತ ಭಿನ್ನವಾಗಿವೆ. ನಮಗೆ ಜಗತ್ತಿನ ನಾನಾ ಧರ್ಮಗಳ ಪರಿಚಯವಾಗಿದೆ. ಎಲ್ಲ ಧರ್ಮಗಳಲ್ಲೂ ಇರುವ ಸಾಮಾನ್ಯ ಅಂಶಗಳ ಅರಿವಿದೆ. ಇದರಿಂದ ಯಾವುದೇ ಧರ್ಮದ ಅನುಯಾಯಿಯು ತನ್ನ ಧರ್ಮ ಮಾತ್ರ ಸತ್ಯ, ಉಳಿದುದೆಲ್ಲ ಧರ್ಮಗಳು ಕೇವಲ ಮಿಥ್ಯೆ ಎಂಬ ಹುಚ್ಚು ಘೋಷಣೆಯನ್ನು ಮಾಡಲಾರ. ಡಾ|| ರಾಧಾಕೃಷ್ಣನ್‌ರವರು ಹೇಳುವ ಮಾತನ್ನು ಇಲ್ಲಿ ಗಮನಿಸಬಹುದು.

"If there are similarities in the religious experience of mankind, it only means that a common humanity reacts in more or less Similar ways to man's encounter with the Divine. The Common points to be found in the different manifestations of religion should not lead us to thing that they are organized in each religion in the same way. The manner in which these beliefs are Correlated varies from one religion to another. Each religion is a living organization of doctrine, worship and practice, has an uniqueness and individuality of its own and charges as a whole in response to the needs of the age. While therefore we indicate the area of agreement, the distinctive arrangement of the basic presuppositions gives the quality to different religions. For our present purpose, it is not necessary to stress the differences which are important and fundamental in some points. Even though each sect of a religion claims to be the true representative of its specific religious message, yet all the followes of all the sects feel that they are bound together in a unity. As we are trying to overcome the conflict within each religion where every organized group claims to possess the truth by the recognition of the unity of religion, even so conflicts among religions require to be reconciled, if religion it self is not to be defeated.

(Occasional Speeches and writings)

ಮತಧರ್ಮಗಳು ಪರಸ್ಪರ ಖಂಡನೆಯಲ್ಲಿ ಅನ್ಯೋನ್ಯ ನಿಂದನೆಯಲ್ಲಿ ತೊಡಗಿದರೆ

ಎಲ್ಲ ಧರ್ಮಗಳು ಹೇಳಹೆಸರಿಲ್ಲದಂತೆ ನಾಶವಾಗುವ ಸ್ಥಿತಿ ಬಂದೀತು. ಆದುದರಿಂದ ಇಂದಿನ ಅವಶ್ಯಕತೆ ವಿಶ್ವಧರ್ಮ, ಆ ಧರ್ಮ–ಈ ಧರ್ಮ ಅಲ್ಲ. ವೀರಶೈವ ಧರ್ಮವು ಹೀಗೆ ರೂಪಿತವಾಗುವ ವಿಶ್ವಧರ್ಮಕ್ಕೆ ಸರ್ವಸಮಾನತೆ, ವಿಶ್ವಭ್ರಾತೃತ್ವ, ಮಾನವೀಯತೆ ಇತ್ಯಾದಿಗಳ ಮೂಲಕ ಬಹಳ ಹೆಚ್ಚಿನ ಕೊಡುಗೆಯನ್ನು ಕೊಡಬಲ್ಲುದು. ತಿರುಳನ್ನು ಬಿಟ್ಟು ಹೊಟ್ಟಿಗಾಗಿ ಗುದ್ದಾಡುವ ಮೌಢ್ಯ ತೊಲಗಬೇಕು. ವಿಚಾರವನ್ನು ಬಿಟ್ಟು ಆಚಾರವನ್ನೇ ಪರಮಾರ್ಥವೆಂದು ಭಾವಿಸುವ ಮೂರ್ಖತೆ ದೂರಾಗಬೇಕು. ಹೀಗಾದಾಗ ಎಲ್ಲ ಧರ್ಮಗಳ ಸಾರ ಒಟ್ಟಾಗಿ ವಿಶ್ವಧರ್ಮ ಉದಯಿಸಬಲ್ಲುದು.

ಒಟ್ಟಿನಲ್ಲಿ 'ಶಕ್ತಿವಿಶಿಷ್ಟಾದ್ವೈತ ದರ್ಶನ' ಕೇವಲ ಉಕ್ತಿಯನ್ನಾಗಲಿ, ಕೇವಲ ಯುಕ್ತಿಯನ್ನಾಗಲಿ ಅವಲಂಬಿಸಿಲ್ಲ. ಮುಕ್ತಿಗಾಗಿ ಭಕ್ತಿಯಿಂದ ಯತ್ನಿಸುವ ಮಾನವ ವಿಷಯಾಸಕ್ತಿಯನ್ನು ತ್ಯಜಿಸಿ ಸತ್ಯದಲ್ಲಿನ ಅನುರಕ್ತಿಯಿಂದ ಶುಕ್ತಿರಜತದಂತಿರುವ ಐಹಿಕ ಸುಖಗಳನ್ನು ಮರೆತು ಶಕ್ತಿವಿಶಿಷ್ಟನಾದ ಪರಮೇಶ್ವರನನ್ನು ಆಶ್ರಯಿಸಿ, ವ್ಯಕ್ತಿತ್ವವನ್ನು ಅನಂತದಲ್ಲಿ ಲೀನವಾಗಿಸಿ ಬಯಲಾಗುವುದು ಈ ಮತದ ರಹಸ್ಯ. ವಿಮರ್ಶನವಿಲ್ಲದ ದರ್ಶನ ಕೇವಲ ಅಂಧ ಪರಾಮರ್ಶನವಾದೀತು. ಸವಿಮರ್ಶವಾಗಿ ಸತ್ಯದ ದರ್ಶನ ಸಾಕ್ಷಾತ್ ಸ್ಪರ್ಶನದಂತೆ ಅನುಭವವನ್ನು ಅನುಭಾವದ ಮಟ್ಟಕ್ಕೆ ಏರಿಸುತ್ತದೆ. ವಿಶಿಷ್ಟವಾದುದು ಶಿಷ್ಟಸಮ್ಮತವಾಗಿ ಎಲ್ಲರಿಗೂ ಇಷ್ಟವಾಗಿ ಅನಿಷ್ಟಪರಿಹಾರಕವಾಗಿ ಚಿಂತನಾಶೀಲರಿಗೆ ಸ್ಪಷ್ಟವಾಗಿ ತೋರಿದಾಗಲೇ ಪ್ರತ್ಯಕ್ಷ ದೃಷ್ಟವಾಗುತ್ತದೆ. ಅದ್ವೈತ ಎಂಬುದು ಕೇವಲ ವಾಗದ್ವೈತವಾಗದೆ ಕ್ರಿಯಾದ್ವೈತವಾದಾಗ ಮನುಷ್ಯರಲ್ಲಿನ ದ್ವೈತಭಾವನೆಗಳು ತೊಲಗಿ ಪರಸ್ಪರ ಸಾಮರಸ್ಯಗಳು ಉದಯಿಸಿ ವೈರಸ್ಯ ಮಾಯವಾದೀತು. ಸಿದ್ಧಾಂತ ತರ್ಕಬದ್ಧವಾದ ವಾದದಿಂದ ಸಿದ್ಧವಾಗಿ ಸುಖಾಂತವಾಗಬೇಕು. ಸಿದ್ಧಾಂತ ಮತ್ತು ರಾದ್ಧಾಂತಗಳು ಅಮರಕೋಶದಲ್ಲಿ ಪರ್ಯಾಯಪದಗಳು. ಸಿದ್ಧಾಂತ ಈಗ ಕನ್ನಡದಲ್ಲಿ ಬಳಸಲ್ಪಡುತ್ತಿರುವ ರಾದ್ಧಾಂತವಾಗಬಾರದು.

ಇತರರು ಸಾವಿರ ಹೇಳಿದರೇನು? ವಿಮರ್ಶನ ಪಥದಲ್ಲಿ ಸಾಗುವ ಜಿಜ್ಞಾಸುವಿಗೆ ತನ್ನ ಸಾಧನೆಯಿಂದ ಹಸ್ತಗತವಾಗುವ ಸಾಕ್ಷಾತ್ಕಾರವೇ ಅನುಭವದ ಒರೆಗಲ್ಲು. ಈ ಬಗೆಗೆ ಕನ್ನಡನಾಡಿನ ದಾರ್ಶನಿಕ ಕವಿ ಡಿ.ವಿ.ಜಿ. ಯವರು ಹೇಳಿರುವ ಮಾತಿನಿಂದ ಈ ಲೇಖನವನ್ನು ಮುಗಿಸೋಣ–

"ವೇದಗಳು ಶಾಸ್ತ್ರಗಳು ಲೋಕನೀತಿಗಳೆಲ್ಲ
ನಿಶೆಯುಳುರಿಯುವ ಪಂಜುಗಳು
ಸೌಧವೇರಿದವಂಗೆ ನಭವಸೇರಿದವಂಗೆ
ಬೀದಿಬೆಳಕಿಂದೇನೋ ಮಂಕುತಿಮ್ಮ"

## ಆಕರ ಗ್ರಂಥಗಳು

೧) ಸಿದ್ಧಾಂತ ಶಿಖಾಮಣಿ
೨) ಶಕ್ತಿ ವಿಶಿಷ್ಟಾದ್ವೈತ ದರ್ಶನ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩) ವಚನಶಾಸ್ತ್ರ ರಹಸ್ಯ—ರಂ. ರಾ. ದಿವಾಕರ
೪) Occasional Speeches and Writings
—Dr, S. Radhakrishnan
೫) ಶ್ರೀಕರಭಾಷ್ಯ ಪ್ರಶಸ್ತಿ—ಎಂ. ಜಿ. ನಂಜುಂಡಾರಾಧ್ಯ
೬) ಸಾಹಿತ್ಯ ಭಾರತೀ—ಪ್ರೊ. ಎನ್. ಅನಂತರಂಗಾಚಾರ್
೭) ಭಗವದ್ಗೀತೆ

# ಷಟ್‌ಸ್ಥಲ ಸಿದ್ಧಾಂತ : ದರ್ಶನ ಸಮೀಕ್ಷೆ

(ಮಿಡಿನುಡಿಯಲ್ಲಿ ಇಡಿನೋಟ)

---

—ಡಾ. ಜ. ಚ. ನಿ.

ಷಟ್‌ಸ್ಥಲ ಜೀವನದ ಪರಿಪೂರ್ಣ ಸಾಧನ ಸಂಪತ್ತಿಯನ್ನೊಳಗೊಂಡ ಮಹಂತ ಸಿದ್ಧಾಂತ! ಭಾರತೀಯ ಸಿದ್ಧಾಂತಗಳಲ್ಲಿ ಮೌಲಿಕ ಸಿದ್ಧಾಂತ! ಸರ್ವ ಸಮನ್ವಯ ಸಿದ್ಧಾಂತ! ಜೀವನದ ಅತ್ಯಂತ ಎತ್ತರವಾದ ಪ್ರಗತಿಯನ್ನು ಸಾಧಿಸಲು ಬೇಕಾದ ನೂರೊಂದು ಹಂತ ಗಳುಳ್ಳ ಆರು ನಿಲ್ದಾಣಗಳುಳ್ಳ, ಸೊಬಗಿನ ಸಿದ್ಧಾಂತ! ಜೀವ ವಿಶುದ್ಧಿಗೆ-ವಿಕಾಸಕ್ಕೆ, ತತ್ತ್ವ ವಿವೇಚನಕ್ಕೆ-ವಿಚಾರಾಚಾರಕ್ಕೆ ಷಟ್‌ಸ್ಥಲಕ್ಕೆ ಸಮಾನವಾದ ಸಮಗ್ರ ದರ್ಶನ ಸೂಕ್ತ ದರ್ಶನ ಮತ್ತೊಂದಿಲ್ಲವೆಂದರೆ ಮಿಂಚಿ ಹೋಗುವ ಮಾತಲ್ಲ. ವ್ಯಷ್ಟಿ-ಸಮಷ್ಟಿ ತತ್ತ್ವ(ಸ್ಥಲ)ಗಳನ್ನೆಲ್ಲ ಅತ್ಯಂತ ಸೂಕ್ಷ್ಮವಾಗಿ ಸವಿಸ್ತಾರವಾಗಿ ಸಮಗ್ರವಾಗಿ ಸಮೀಕ್ಷಿಸಿದ ದರ್ಶನ ಷಟ್‌ಸ್ಥಲ. ನಿಶ್ಶೇಷವಾಗಿ ಪರಿಶೀಲಿಸಿ ಪರಿಶೋಧಿಸಿ ಪರಿಣಾಮಕಾರಿಯಾಗಿ ನಿರ್ಣಯಿಸಿದ ಸಿದ್ಧಾಂತ ಷಟ್‌ಸ್ಥಲ. ಷಟ್‌ಸ್ಥಲದ ವಿಸ್ತಾರ ಏಕೋತ್ತರ ಶತಸ್ಥಲ. '೧೦೧' ಈ ನೂರೊಂದರಲ್ಲಿ ಭಾವ ಪೂರ್ಣ ಧ್ವನಿಯಿದೆ. ಅಂಗ-ಲಿಂಗರು ಷಟ್‌ಸ್ಥಲದ ಜೀವಾಳರು. ಅಂಗ ಒಂದು, ಲಿಂಗ ಒಂದು; ಇವೆರಡರ ನಟ್ಟ ನಡುವೆ ಶೂನ್ಯ ಸೇರಿದೆ. ಅಂತೆಯೇ ೧೦೧ರಲ್ಲಿಯೂ ಸೇರಿದೆ. ಇದನ್ನು ಸಮೀಕ್ಷಿಸಿದರೆ ತೋರುವುದೇನೆಂದರೆ ಶೂನ್ಯ ಬಿಟ್ಟು ಅಂಗವಿಲ್ಲ; ಲಿಂಗವಿಲ್ಲ. ಶಕ್ತಿ ಸ್ಪಂದನದಿಂದ ಅಂಗ-ಲಿಂಗವೆರಡೂ ಶೂನ್ಯ ದಿಂದೊದಗಿವೆ; ಶೂನ್ಯವೆ ವಿಭಾಗವಾಗಿದೆ. ಆಗಿಯೂ ಆಗದೆ ತಾನು (ಶೂನ್ಯ) ನಡುವೆ ನೆಲಸಿದೆ. ಅಗಲಿಯೂ ಅಗಲದಂತಿವೆ. ಒಂದು ಇನ್ನೊಂದರಲ್ಲಿ ಸೇರಿದರೆ ಅಂದರೆ ಸಮರಸವಾದರೆ ಮತ್ತೆ ಮೂಲ ಶೂನ್ಯ (ಪೂರ್ಣ)ವೇ ಆಗುತ್ತದೆ. ಐಕ್ಯ ಅಥವಾ ಸಾಮರಸ್ಯವೆಂದರೆ ಶೂನ್ಯವಾಗುವಿಕೆ! ಇಂತಾಗುವಿಕೆಯೇ (ಶೂನ್ಯ ಸಂಪಾದನೆ! ಇದುವೇ ಪೂರ್ಣಾ ಖಂಡ ದರ್ಶನ ಅಥವಾ ಷಟ್‌ಸ್ಥಲ ಸಿದ್ಧಾಂತ! ಆರಡುಗಿ ಮೂರಾಗಿ, ಮೂರಡಗಿ ಎರಡಾಗಿ, ಎರಡಡಗಿ ಒಂದಾಗಿ, ಒಂದಡಗಿ ಶೂನ್ಯಸ್ಥಲವಾಗುವ ನಿರ್ಣಯ (ತತ್ತ್ವ)ವೇ ಸಿದ್ಧಾಂತ! ಶೂನ್ಯಸ್ಥಲವೆಂದರೆ ಯಾವ ಕೊರತೆಯಿಲ್ಲದ ಅಂದರೆ ಭಾವಾಭಾವರಹಿತ ಚಿದಂಬರ! ಇದು ಅಂಗಭಾವ, ಅದು ಲಿಂಗಭಾವ ಎಂದು ನಿರ್ದೇಶಿಸಲು ಬಾರದಿರುವಿಕೆ! ಅದು ಚರ, ಇದು ಅಚರ, ಅದು ಪರ, ಇದು ಅಪರ ಎಂದು ಪ್ರಮಾಣಿಸಲು ಪ್ರತಿಪತ್ತಿ ಯಿಲ್ಲದಿರುವಿಕೆ!

"ಶೂನ್ಯೇ ಚಿದಂಬರೇ ಸ್ಥಾನೇ ದೂರೇ ವಾಙ್ಮನ ಸಾಧನಃ|
ವಿಲೀನಾತ್ಮಾ ಮಹಾಯೋಗೀ ಕೇನ ಕಿಂ ವಾಽಪಿ ಭಾವಯೇತ್||
ಅಪರಿಚ್ಛೇದ್ಯಮಾತ್ಮಾನಂ ಚಿದಂಬರಮಿತಿ ಸ್ಮರನ್|
ದೇಹಯೋಗೇಽಪಿ ದೇಹಸ್ಥೈರ್ವಿಕಾರೈರ್ನ ವಿಲಿಪ್ಯತೇ||
ಅಖಂಡ ಸಂವಿದಾಕಾರಮ ದ್ವಿತೀಯಂ ಸುಖಾತ್ಮಕಂ|
ಪರಮಾಕಾಶಮಾತ್ಮಾನಂ ಮನ್ವಾನಃ ಕುತ್ರಮುಹ್ಯತಿ?||
ಅಹಂ ಬ್ರಹ್ಮೇತಿ ಭಾವಸ್ಯ ವಸ್ತುದ್ವಯ ಸಮಾಶ್ರಯಃ|
ಏಕೀಭೂತಸ್ಯ ಚಿದ್ವ್ಯೋಮ್ನಿ ತದಭಾವೋ ವಿನಿಶ್ಚಿತಃ||
ಅಕರ್ತ್ತಾಹಮವೇತ್ತಾಽಹಮದೇಹೋಂ ನಿರಂಜನಃ|
ಇತಿ ಚಿಂತಯತಃ ಸಾಕ್ಷಾತ್ ಸಂವಿದೇವ ಪ್ರಕಾಶತೇ||" —ರೇ. ಗೀತೆ

'ಶೂನ್ಯ'ವೆಂದರೆ ಇನ್ನೇನಲ್ಲ; ಅದು ಆ ಚಿದಂಬರಸ್ಥಲ. ಅದು ಮಾತು ಮನಗಳಿಗೆ ನಿಲುಕದ ನೆಲೆ; ನಿಲುಕದ ಕಳೆ. ಆದರೂ ಅದನ್ನು ಮಹಾಯೋಗಿ ಆದವನು ಅಂದರೆ ನಿರ್ದೇಹಿ ನಿರ್ಭಾವಿಯಾದವನು ನಿಲುಕಿಸಿ ನೆರೆದೇಕನಾಗುತ್ತಾನೆ. ಪೂರ್ಣದಲ್ಲಿ ಪೂರ್ಣನಾದವನು ಯಾವುದರಿಂದ ಯಾವುದನ್ನು ಭಾವಿಸಬಲ್ಲನು? ತಾನೇ ತಾನಾಗಿ ಅವಿರಳವಾದಾತನಿಗೆ ಭಾವಿಸಲು ಭಾವವಿಲ್ಲ. ಕಾಣಲು ಕಣ್ಣಿಲ್ಲ; ಕೇಳಲು ಕಿವಿಯಿಲ್ಲ; ಹೇಳಲು ನಾಲಿಗೆಯಿಲ್ಲ; ಸೋಂಕಲು ಕೈಯಿಲ್ಲ; ನೆನೆಯಲು ಮನವಿಲ್ಲ; ಅರಿಯಲು ಮತಿಯಿಲ್ಲ. ಎಲ್ಲವೂ ಅದೇ ಆದಾಗ ಅಂದರೆ ಅವಿಭಾಜ್ಯವಾದಾಗ ಭಿನ್ನತೆಗೆ ಅವಕಾಶವೆಲ್ಲಿ? ಚಿದಂಬರ ಶೂನ್ಯ ಸ್ಥಲಿಯು ಜೀವನ್ಮುಕ್ತನು. ಆತನಿಗೆ ದೇಹವಿದ್ದರೂ ದೇಹ ವಿಕಾರಗಳಿರುವುದಿಲ್ಲ. ಅಖಂಡ ಸಂವಿದಾಕಾರನಾಗಿ ಅದ್ವಿತೀಯನಾಗಿ ಆನಂದಾತ್ಮನಾಗಿ ಪರಮಾಕಾಶ ಸ್ವರೂಪನಾಗಿ ಇರುತ್ತಾನೆ. ಮತ್ತೊಂದಿಲ್ಲವಾಗಿ ಮೋಹವೆಂಬುದೇನು? ಎಲ್ಲಿ?

'ಅಹಂಬ್ರಹ್ಮ' ನಾನು ಬ್ರಹ್ಮ ಎಂದು ಭಾವಿಸುವಲ್ಲಿ ವಸ್ತುದ್ವಯದ ಆಶ್ರಯವಿರುತ್ತದೆ. ಇದು ವೇದಾಂತ ದರ್ಶನ. ಇದು ಸರಿಯಲ್ಲ. ಅದೇ ಚಿದಾಕಾಶ ಏಕೀಭವಿಸಿರುವಾಗ 'ಅಹಂಬ್ರಹ್ಮ' ಭಿನ್ನಭಾವವೇ ಇರದೆಂದು ಚನ್ನಾಗಿ ನಿಶ್ಚಿತವಾಗಿರುವುದೇ ಸಿದ್ಧಾಂತ ದರ್ಶನ ಅಥವಾ ಶಿವಾದ್ವೈತ ದರ್ಶನ. ನಾನು ಕರ್ತೃವಲ್ಲ, ಜ್ಞಾತೃವಲ್ಲ, ದೇಹಿಯಲ್ಲ; ನಿರಂಜನ ಸ್ವರೂಪನು. ಅಂದರೆ ಪರಿಶುದ್ಧನು ಎಂದಿರುವ ಷಟ್‌ಸ್ಥಲಿಗೆ ಸಾಕ್ಷಾತ್ ಸಂವಿತ್ ಸ್ವರೂಪವೇ ಪ್ರಕಾಶಿಸುತ್ತದೆ. ಅಂದರೆ ಪ್ರದರ್ಶಿತವಾಗುತ್ತದೆ. ಇದು ಇದು ಸೈದ್ಧಾಂತಿಕ ದರ್ಶನ.

ಶೂನ್ಯದ ಸಮ್ಯಕ್ ದರ್ಶನವಾಗುವಂತೆ ಸಿದ್ಧಾಂತ ಶಿಖಾಮಣಿ ಶೂನ್ಯದ ಸಲ್ಲಕ್ಷಣವನ್ನು ಅಸಾಧಾರಣವಾಗಿ ಅಳವಡಿಸಿದೆ. ಆದರಿಂದ ಅದು 'ಶ್ರೀ ಷಟ್‌ಸ್ಥಲೋದ್ಯನ್ಮಣಿ'

ಯೆಂದು 'ಶ್ರೀಗೋಪ್ಯ ಚಿಂತಾಮಣಿ'ಯೆಂದು ಹೆಸರಾಂತಿದೆ. ಷಟ್‌ಸ್ಥಲ ಸಮಗ್ರ ಸಿದ್ಧಾಂತಕ್ಕೆ ಅದನ್ನುಳಿದರೆ ಇನ್ನೊಂದು ಕೃತಿಯಿಲ್ಲ.

**ಆರ್ನೆಲೆಯ ಹಿನ್ನೆಲೆ:**

ಇದು ಇತ್ತೀಚೆಗೆ ವಿವಾದವಸ್ತುವಾಗಿರುವುದು ದುರದೃಷ್ಟಕರವೆಂದೇ ದಿಟ್ಟತನದಿಂದ ಹೇಳಬಹುದಾಗಿದೆ. ಆದರೆ ಈ ವಿವಾದ ವಿದ್ವಾಂಸರಲ್ಲಿ ಶಿವಾಗಮ ವಾಙ್ಮಯ ಪರಿಶ್ರಮ ವಿರುವವರಲ್ಲಿ ಪ್ರಾಮಾಣಿಕವಾಗಿ ಇಲ್ಲೆಂಬುದು ಸಮಾಧಾನಕ್ಕೆ ಆಧಾರವಾಗಿರುವುದೊಂದು ಆಶಾದಾಯಕ ವಿಷಯುವಾಗಿದೆ.

ದಿಟವಾಗಿ ಹೇಳಬೇಕೆಂದರೆ ಷಟ್‌ಸ್ಥಲ ಸಿದ್ಧಾಂತದ ಆಕರ ಆಗಮ ವಾಙ್ಮಯ ಇಪ್ಪತ್ತೆಂಟು ಆಗಮುಗಳ ಕಾಲ ಸು. ಎರಡುಸಾವಿರ ವರುಷಗಳಿಂದಾಚೆಯದು. ಇದಕ್ಕೆ ಆಧಾರ ಕಂಚಿ ದೇವಸ್ಥಾನದಲ್ಲಿರುವ ಕ್ರಿ. ಶ. ಪೂರ್ವ ಒಂದನೆಯ ಶತಮಾನದ ಶಿಲಾ ಶಾಸನ! ಅದರಲ್ಲಿ ೨೮ ಆಗಮುಗಳ ನಾಮ ನಿರ್ದೇಶವಿದೆ. "ವೀರಶಿವಾಗಮೋಕ್ತ ಚಿಹ್ನಾಂಕಿತರಾದವರ್ಗೆ ಮಣಿವಂತುಟಿ ಭಕ್ತಿಪದಂ ಶಿವಾಧವಾ" ಎಂದು ಮಗ್ಗೆಯ ಮಾಯಿ ದೇವ ಶಿವಾಚಾರ್ಯನು ಭಕ್ತಾದಿ ಷಟ್‌ಸ್ಥಲ 'ವೀರಶಿವಾಗಮೋಕ್ತ'ವೆಂದು ಹೇಳಿದ್ದಾನೆ. ಕ್ರಿ.ಶ. ೮ನೆಯ ಶತಮಾನದ ಶಿವಯೋಗಿ ಶಿವಾಚಾರ್ಯನು 'ಸಿದ್ಧಾಂತ ಶಿಖಾಮಣಿ'ಯಲ್ಲಿ

"ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ॥
ವೀರಶೈವಾಸ್ತು ಷಡ್ಭೇದಾ ಸ್ಥಲಧರ್ಮವಿಭೇದತಃ।
ಭಕ್ತಾದಿ ವ್ಯವಹಾರೇಣ ಪ್ರೋಚ್ಯಂತಿಶಾಸ್ತ್ರ ಪಾರಗೈಃ॥

ವೀರಾಗಮ, ಕಾರಣಾಗಮ, ಸೂಕ್ಷ್ಮಾಗಮ, ಪಾರಮೇಶ್ವರಾಗಮಾದಿಗಳಲ್ಲಿ ಷಟ್‌ಸ್ಥಲ ವಿಶೇಷ ವಿವರವಾಗಿ ಉಲ್ಲಿಖಿತವಾಗಿದೆ. ಇದಲ್ಲದೆ ಆರ್ನೆಲೆಗಳ ಹಿನ್ನೆಲೆ ಮುನ್ನೆಲೆಗಳನ್ನು ಆಳವಾಗಿ ಅಧ್ಯಯನಿಸಿ ಪರಿಶೋಧಿಸಿ, ಡಾ॥ ಆರ್. ಸಿ. ಹಿರೇಮಠ, ಎಂ. ಎ.; ಪಿ.ಹೆಚ್.ಡಿ ನಿವೃತ್ತ ಕರ್ನಾಟಕ ವಿಶ್ವವಿದ್ಯಾಲಯ ಉಪಕುಲಪತಿಗಳವರು ತಾವು ಬರೆದು ೧೯೬೭ರಲ್ಲಿ ಪ್ರಕಟಿಸಿದ "ಷಟ್‌ಸ್ಥಲ ಪ್ರಭೆ" ಗ್ರಂಥದ ೩೪೪–೩೪೫ ಪುಟ ಗಳಲ್ಲಿ ಹೀಗೆ ಉಲ್ಲೇಖಿಸಿದ್ದಾರೆ.

"ಶಿವಾಗಮುಗಳು ಹಿಂದೂ ಧರ್ಮದ ತಾತ್ತ್ವಿಕ ಯುಗಕ್ಕೆ ಸಂಬಂಧಪಟ್ಟವು. ಈ ಯುಗವು ಪುರಾಣ ಯುಗಕ್ಕಿಂತ ಪೂರ್ವವಾದದ್ದೆಂಬುದರಲ್ಲಿ ಆವ ಸಂದೇಹವಿಲ್ಲ. ಪ್ರಸಿದ್ಧ ವಾದ ಸ್ಕಾಂದಾದಿ ಪುರಾಣಗಳಲ್ಲಿ ಶಿವಾಗಮುಗಳ ಉಲ್ಲೇಖ ವಿಪುಲವಾಗಿ ದೊರೆಯುತ್ತದೆ.... ಶಿವಾಗಮುಗಳು ಕ್ರಿಸ್ತ ಪೂರ್ವಯುಗಕ್ಕೆ ಸೇರಿರುವಲ್ಲಿ ಯಾವ ಸಂದೇಹವೂ ಇಲ್ಲ. ಆಗಮು ಗಳ ಕರ್ತೃ ಅರಿವರ್ (ಸತ್ಯದರ್ಶಿಗಳು) ಎಂದು ನಚ್ಚಿತಾರ್ಕಿನಿಯರರೆಂಬ ತಮಿಳು ಭಾಷ್ಯ ಕಾರರು ಹೇಳಿರುವರು. ಈ ಅರಿವರ್ ಅವರ ವಿಷದವಾದ ಉಲ್ಲೇಖ ತೊಳ್ಕಾಪ್ಪಿಯರ

(ಕ್ರಿ. ಪೂ. ೧ ನೆಯ ಶತಮಾನ) ಎಂಬ ತಮಿಳು ವ್ಯಾಕರಣ ಗ್ರಂಥದಲ್ಲಿದೆ. ಶಿವಾಗಮ ಗಳು ಕ್ರಿ. ಪೂ. ಯುಗದಲ್ಲಿ ರಚಿತವಾಗಿರಬಹುದೆಂಬುದಕ್ಕೆ ಇದೂ ಒಂದು ಆಧಾರವಾಗ ಬಲ್ಲುದು.

"ಶಿವಾಗಮಗಳ ಸಾರವನ್ನು ಭಗವದ್ಗೀತೆ ತನ್ನಲ್ಲಿ ಅಳವಡಿಸಿಕೊಂಡಿದ್ದರೆ ಅದು ಸೋಜಿಗವಲ್ಲ. ಆದುದರಿಂದ ೨೮ ಶಿವಾಗಮಗಳು ಭಗವದ್ಗೀತೆಯ ಪೂರ್ವದಲ್ಲಿ ಅಂದರೆ ಉಪನಿಷತ್ ಕಾಲಕ್ಕೆ ಸರಿದೊರೆಯಾಗುತ್ತದೆಂದು ಊಹಿಸಿದರೆ ತಪ್ಪಾಗದು."

ಉಪನಿಷತ್ಕಾಲದವೆಂದು ಹೇಳುವುದು ಮಾತ್ರವಲ್ಲ, ಅವುಗಳಿಗಿಂತ ಪೂರ್ವದಲ್ಲಿರುವ ವೇದಗಳಿಗಿಂತಲೂ ಆಗಮಗಳು ಪೂರ್ವದವೆಂದು ಪರಿಶೋಧಕರ ಅಭಿಪ್ರಾಯವಿದೆ. "ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದಃ ಶಿವ ಸಮೋ ಭವೇತ್ । ಶಿವಾಚಾರ ರಹಸ್ಯ ಸ್ಯ ಪಾತ್ರತಾಂ ಪ್ರಥಮಂ ಗತಃ ॥" ಎಂಬೀ ಸ್ಕಾಂದೋಕ್ತಿಯನ್ನು ಚನ್ನಬಸವಣ್ಣನು ತನ್ನೊಂದು ವಚನದಲ್ಲಿ ಎತ್ತಿ ಉದ್ಧರಿಸಿದ್ದಾನೆ. (ಕ. ವಿ. ವಿ. ಧಾರವಾಡ ಪ್ರಕಟನೆಯ ಪು. ೭೫, ವಚನ ೧೬೮ ನೋಡಿ) ಹಾಗೆಯೇ ೪೪೬ ನೆಯ ವಚನ ಪುರಾತನತೆಗೆ ಸತ್ಯ ಸಾಕ್ಷಿಯಾಗಿದೆ. ಆಗಮಾನುಯಾಯಿಯಾದ ಚನ್ನಬಸವಣ್ಣನು ಆಗಮ ಪ್ರಮಾಣಗಳನ್ನು ಸಾಕಷ್ಟು ಉದಾಹರಿಸಿದ್ದಾನೆ. "ಭವಿಗೆ ಹುಟ್ಟಿದ ಭಕ್ತ, ಭಕ್ತಂಗೆ ಹುಟ್ಟಿದ ಪ್ರಸಾದ; ಪ್ರಸಾದಕ್ಕೆ ಹುಟ್ಟಿದ ಅರ್ಪಿತ, ಅರ್ಪಿತಕ್ಕೆ ಹುಟ್ಟಿದ ಆರೂಢ, ಆರೂಢಕ್ಕೆ ಹುಟ್ಟಿದ ಆಚಾರ, ಆಚಾರಕ್ಕೆ ಹುಟ್ಟಿದ ಆಗಮ ಕ್ರಿಯಾ ಜ್ಞಾನ ಸಂಪಾದನೆಯ ಕೂ. ಚ. ಸಂಗಾ, ನಿಮ್ಮ ಶರಣ ಬಲ್ಲ "

ಭಕ್ತ, ಪ್ರಸಾದ, ಅರ್ಪಿತ, ಆರೂಢತೆಗೆ ಕಾರಣಗಳು ಪರಸ್ಪರ; ಆರೂಢತೆಗೆ ಅಂದರೆ ಎತ್ತರಕ್ಕೆ ಏರುವ ಪ್ರಗತಿ ಪಥಕ್ಕೆ ಆಧಾರ ಆಚಾರ; ಅಂತಹ ಆ ಆಚಾರಕ್ಕೆ ಆಧಾರ ಆಗಮ ಕ್ರಿಯಾ-ಜ್ಞಾನ ಸಂಪಾದನೆ! ಇದರಿಂದ ಕ್ರಿಯಾ ಜ್ಞಾನ ಪ್ರಧಾನವಾದ ಷಟ್‌ಸ್ಥಲಾನುಷ್ಠಾನಕ್ಕೆ ಮೂಲಾಧಾರ ಆಗಮವೆಂಬುದು ಅನುಮಾನವಿಲ್ಲದೆ ವಿವಾದವಿಲ್ಲದೆ ಅರಿಕೆಯಾಗುತ್ತದೆ. ವೀರಶೈವ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳಿಗೆ ಹಿನ್ನೆಲೆ ಅಂದರೆ ಆಕರ ಆಗಮವೆಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕಿಲ್ಲ. ಕ್ರಿಯಾಗಮ, ಜ್ಞಾನಾಗಮ, ಭಾವಾಗಮ ಇವೇ ಸತ್ಯವಾದ ಸಂಪಾದನೆ. ಆಗಮಕ್ರಿಯೆ, ಆಗಮ ಜ್ಞಾನ, ಆಗಮಾನುಭವಗಳೇ ಸತ್ಯ ಸಂಪಾದನೆ. ಆ ಸಂಪಾದನೆಯ ಮಾಡಿದಾತ ಶಿವಶರಣ.

**ಸ್ಥಲ-ಲಿಂಗ:**

ಇವೆರಡು ಸ್ಥೂಲವಾಗಿ ಒಂದೇ ಎಂದೆನಿಸಿದರೂ ಇವೆರಡರಲ್ಲಿ ಸೂಕ್ಷ್ಮವಾದ ತಾರತಮ್ಯವಿದೆಯೆಂಬುದು ಸಮೀಕ್ಷೆಯಲ್ಲಿ ಸಂವಿದಿತವಾಗುತ್ತದೆ. ಶಬ್ದಾರ್ಥಗಳಲ್ಲಿ ಒಂದೇ ಆದರೂ ಭಾವ ಸತ್ತೆಯಲ್ಲಿ ಸ್ವರೂಪ ಸತ್ತೆಯಲ್ಲಿ ಸಮಸತ್ತೆ ಇಲ್ಲ. ಸ್ಥಲ ಮೂಲ ವಸ್ತು;

ಕಾರಣ ವಸ್ತು–ಲಿಂಗಕ್ಕೂ ಸಹ! ನಿರುಪಾಧಿಕ ವಸ್ತು. ಅಂಗವಿಡಿದು ಲಿಂಗವಾಗುವಂತೆ ಆಗುವ ಉಪಾಧಿ ಅದಕ್ಕಿಲ್ಲ. ಅದು ಅನನ್ಯ. ಆ ಮೂಲ ಸ್ಥಲದಿಂದ ಅಂಗ–ಲಿಂಗ ಗಳಾಗುತ್ತವೆ. ಇದನ್ನು ಕಂಡು ಹಿಡಿದು ಕಾಣಿಸುವವರು ಪರಾಕಾಶ ಶಿವಾನುಭಾವಿಗಳಾದ ಶಿವಾಚಾರ್ಯರು.

"ಏಕಮೇವ ಪರಂಬ್ರಹ್ಮ ಸಚ್ಚಿದಾನಂದ ಲಕ್ಷಣಃ ।
ಶಿವತತ್ತ್ವಂ ಶಿವಾಚಾರ್ಯಾಃ ಸ್ಥಲಮಿತ್ಯಾಹುರಾದರಾತ್ ॥"

—ಶಿವಾನುಭವ ಸೂತ್ರ

ಮಗ್ಗೆಯ ಮಾಯಿದೇವ ಶಿವಾಚಾರ್ಯರ ಸ್ಥಲ ತತ್ತ್ವದ ತಾತ್ತ್ವಿಕ ನಿರೂಪಣೆಯಿದು: ಅದ್ವಿತೀಯವಾದ ಸಚ್ಚಿದಾನಂದ ಸ್ವರೂಪ ಲಕ್ಷಣವುಳ್ಳ ಪರಬ್ರಹ್ಮವೆಂದೆನಿಸಿದ ಶಿವತತ್ತ್ವ ವನ್ನು ಸ್ಥಲವೆಂದು ನಿರೂಪಿಸಿರುವವರು ಶಿವಾಚಾರ್ಯರು ತಮ್ಮದೇ ಆದ ಆದರ ಭಾವದಿಂದ ಹಾಗೂ ಗೌರವಾತ್ಮಕ ಹೃದಯದಿಂದ! ಮತ್ತು ಸರ್ವರೂ ಮನ್ನಿಸುವಂತೆ! ಅವರು ಮುಂದು ವರಿದು ಅದೇ ಅವರ ಶಿವಾನುಭವ ಸೂತ್ರದಲ್ಲಿ ಸ್ಥಲ ವ್ಯಾಪ್ತತ್ವವನ್ನು ವಿಶ್ವ ವಿಭುತ್ವವನ್ನು ಇಂತು ವಿನ್ಯಸಿಸಿದ್ದಾರೆ.

**ಸ್ಥಲ ನಿರ್ವಚನ:**

"ಸರ್ವೇಷಾಂ ಸ್ಥಾನಭೂತತ್ವಾಲ್ಲಯ ಭೂತತ್ವತಸ್ತತಃ ॥
ತತ್ತ್ವಾನಾಂ ಮಹದಾದೀನಾಂ ಸ್ಥಲಮಿತ್ಯ ಭಿಧೀಯತೇ ॥
ಯತ್ರಾದೌ ಸ್ಥೀಯತೇ ವಿಶ್ವಂ ಪ್ರಾಕೃತಂ ಪೌರುಷಂ ಯತಃ ।
ಲೀಯತೇ ಪುನರಂತೇ ತು ಸ್ಥಲಂ ತತ್ ಪ್ರೋಚ್ಯತೇ ತತಃ ॥
ಸ್ಥಕಾರಃ ಸ್ಥಾನವಾಚೀಸ್ಯಾಲ್ಲಕಾರೋ ಲಯ ವಾಚಕಃ ।
ತಯೋಃ ಕಾರಣಭೂತಂ ಯತ್ ತದೇವ ಸ್ಥಲ ಮುಚ್ಯತೇ ॥"

ಪರಶಿವ ತತ್ತ್ವವಾದ ಸ್ಥಲ, ಮಹದಾದಿ ಸರ್ವ ತತ್ತ್ವಗಳಿಗೆ ಸ್ಥಾನಭೂತವೂ ಲಯಭೂತವೂ ಆಗಿರುವುದರಿಂದ ಅಂದರೆ ಇರುವಿಕೆ–ಬೆರೆಯುವಿಕೆಗಳಿಗೆ ಆಶ್ರಯವಾಗಿರು ವುದರಿಂದ 'ಸ್ಥಲ'ವೆಂದೆನ್ನಲಾಗಿದೆ. ಪ್ರಕೃತಿ ಪುರುಷ ಸಂಬಂಧವುಳ್ಳ ವಿಶ್ವವು ಆದಿಯಲ್ಲಿ ಸ್ಥಿತಿಯನ್ನು ಅಂತ್ಯದಲ್ಲಿ ಲಯವನ್ನು ಪಡೆಯುವುದಾಗಿ 'ಸ್ಥಲ' ವಾಚ್ಯವಾಗಿದೆ. ಅಲ್ಲದೆ ನಿರ್ವಚನ ದೃಷ್ಟಿಯಿಂದಲೂ 'ಸ್ಥಲ'ದೊಳಗಿನ ಸ್ಥಕಾರ. ಸ್ಥಾನ ವಾಚಕವಾಗಿ, ಲ ಕಾರ ಲಯವಾಚಕವಾಗಿ ಸ್ಥಿತಿ ಮತ್ತು ಲಯಗಳಿಗೆ ಕಾರಣೀಭೂತವಾಗಿ, ಅದುವೇ ಸ್ಥಲವೆಂದೆ ನಿರೂಪಿತವಾಗಿದೆ.

"ಅಧಿಷ್ಠಾನಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ ।
ಜಗತೋ ಯದ್ಭವೇತ್ತತ್ತ್ವಂ ತದ್ಧಿ ವೈ ಸ್ಥಲ ಮುಚ್ಯತೇ ॥

"ಆಧಾರಂ ಸರ್ವ ಶಕ್ತೀನಾಂ ಜ್ಯೋತಿಷಾ ಮಖಿಲಾತ್ಮನಾಂ ।
ಯತ್ತತ್ತ್ವಂ ಭವತಿ ಪ್ರಾಜ್ಞೈಃ ಸ್ಥಲಂ ತತ್ ಪರಿಗೀಯತೇ ॥
ಆಲಯಂ ಸರ್ವ ಭೂತಾನಾಂ ಲೋಕಾನಾಂ ಸರ್ವ ಸಂಪದಾಂ ।
ಯದ್ಭವೇತ್ ಪರಮಂ ಬ್ರಹ್ಮ ಸ್ಥಲಂ ತತ್ ಪ್ರಾಹು ರಕ್ಷರಂ ॥"

—ಶಿವಾನುಭವ ಸೂತ್ರ.

ಸರ್ವಸ್ವವಾದ ಪರಶಿವ ಬ್ರಹ್ಮ ಸ್ವರೂಪವಾದ 'ಸ್ಥಲ' ನಿರ್ವಚನವನ್ನು ಮಗ್ಗೆಯ ಮಾಯಿದೇವ ಶಿವಾಚಾರ್ಯನು ಪರಿಪರಿಯಾಗಿ ಪರಿಪೂರ್ಣ ಭಾವದಲ್ಲಿ ಬಗೆದುಂಬಿ ಬಿತ್ತರಿಸಿದ್ದಾನೆ. ಚರಾಚರ ಜಗತ್ತಿಗೆ ಅಧಿಷ್ಠಾನ ಸ್ಥಲ; ಸರ್ವ ಶಕ್ತಿಗಳಿಗೆ ಜ್ಯೋತಿಗಳಿಗೆ ಆಧಾರ ಸ್ಥಲ. ಸರ್ವ ಮಹಾಭೂತಗಳಿಗೆ ಸರ್ವ ಲೋಕಗಳಿಗೆ ಸರ್ವ ಸಂಪತ್ತುಗಳಿಗೆ ಆಶ್ರಯವಾಗಿ ಪರಶಿವ ಬ್ರಹ್ಮವಾಗಿ ಅಕ್ಷರವಾಗಿ ಇರುವುದು ಸ್ಥಲ. ಏನೆಲ್ಲವೂ ಸ್ಥಲ; ಪರಬ್ರಹ್ಮ ಸ್ಥಲ. ಚರಾಚರ, ಪರಾಪರ, ಶಕ್ತಿ ಜ್ಯೋತಿ ಚೈತನ್ಯ ಸರ್ವ ಭೂತ ಸರ್ವ ಲೋಕ ಸರ್ವ ಸಂಪತ್ತು ಇವೆಲ್ಲವೂ ಏನೆಲ್ಲವೊಬುವುದರಲ್ಲಿ ಒಳಗೊಳ್ಳುವ ವಸ್ತುಗಳು. ಪರಮ ಚೇತನವೂ ಆಗಿ ಅಕ್ಷರವಾಗಿದೆ; ಎಂದು ಅನ್ವೇಷಿಸಿ ಅನುಸಂಧಾನಿಸಿ ನಿರತಿಶಯವಾಗಿ ನಿರ್ವಚಿಸಿದವರು ಶಿವಾಚಾರ್ಯರು. ಸ್ಥಲ ತತ್ತ್ವಾನುಭಾವಿಗಳು ಶಿವಾಚಾರ್ಯರು; ಅಂತೆಯೇ ಅವರು ಷಟ್‌ಸ್ಥಲ ಬ್ರಹ್ಮಿಗಳು; ಷಟ್‌ಸ್ಥಲ ಚಕ್ರವರ್ತಿಗಳು. ಅಂತೆಯೇ "ಶಿವತತ್ತ್ವಂ ಶಿವಾಚಾರ್ಯಾಃ ಸ್ಥಲ ಮಿತ್ಯಾಹು ರಾದರಾತ್ ॥ ಎಂದು ಮಗ್ಗೆಯ ಮಾಯಿದೇವ ಶಿವಾಚಾರ್ಯರು ನೈಜವನ್ನೇ ನಿರೂಪಿಸಿರುವರು.

**ಲಿಂಗ ನಿರ್ವಚನ:**

"ಸ್ವ ಶಕ್ತಿ ಕ್ಷೋಭ ಮಾತ್ರೇಣ ಸ್ಥಲಂ ತತ್ ದ್ವಿವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತ ಮನ್ಯದಂಗ ಸ್ಥಲಂ ಸ್ಮೃತಂ ॥"

—ಮಿಶ್ರಾರ್ಪಣ

ಸರ್ವಾಧಿಷ್ಠಾನವಾದ ಶೂನ್ಯ ಸ್ವರೂಪವಾದ ಸ್ಥಲ ತನ್ನೊಳಗಿನ ವಿಮರ್ಶಾ ಶಕ್ತಿಯ ಸ್ಪಂದನದಿಂದ ಲಿಂಗ-ಅಂಗ ಎಂದು ಎರಡು ಬಗೆಯಾಗುವುದು. ಉಪಾಸ್ಯ-ಉಪಾಸಕ ಭಾವವನ್ನು ತಳೆವುದು. ಲಿಂಗಾಂಗ ಸಂಬಂಧ ವಿಜ್ಞಾನವೆಂದು ಶಿವಾಚಾರ್ಯರು ನಿರೂಪಿಸಿದ್ದಾರೆ:

"ಲಯಂ ಗಚ್ಛತಿ ಯತ್ರೈವ ಜಗದೇತತ್ ಚರಾಚರಂ ।
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮ ಶಾಶ್ವತಂ ॥
ತಸ್ಮಾಲ್ಲಿಂಗ ಮಿತಿ ಖ್ಯಾತಂ........ಬೃಹತ್ವಾತ್ ಬೃಂಹಣತ್ವಾತ್ ಚ
ಬ್ರಹ್ಮ ಶಬ್ದಾಭಿ ಧೇಯಕಂ ।

—ಸಿದ್ಧಾಂತ ಶಿಖಾಮಣಿ

"ಲೀನಂ ಪ್ರಪಂಚರೂಪಂ ಹಿ ಸರ್ವಮೇತಚ್ಚರಾಚರಂ ।
ಸರ್ಗಾದೌ ಗಮ್ಯತೇ ಭೂಯಸ್ತಸ್ಮಾಲಿಂಗ ಮುದೀರಿತಂ ॥

—ಸೂಕ್ಷ್ಮಾಗಮ

ಲಿಕಾರೋ ಲಯ ಬುದ್ಧಿ ಸ್ಥೋ ಬಿಂದುನಾ ಸ್ಥಿತಿ ರುಚ್ಯತೇ ।
ಗಕಾರಾತ್ ಸೃಷ್ಟಿರಿತ್ಯುಕ್ತಾ ಲಿಂಗಂ ಸೃಷ್ಟ್ಯಾದಿ ಕಾರಣಂ ॥
ಲಿಂಗಂ ಶೈವಮಿದಂ ಸಾಕ್ಷಾಚ್ಛಿವ ಶಕ್ತ್ಯುಭಯಾತ್ಮಕಂ ।
ಧ್ಯಾತವ್ಯಮರ್ಚನೀಯಂ ಚ ಭುಕ್ತಿ ಮುಕ್ತಿ ಫಲೇಚ್ಛುನಾ ॥
ನಾದರೂಪಃ ಶಿವಃ ಸಾಕ್ಷಾಲ್ಲಿಂಗ ಮಿತ್ಯಭಿಧೀಯತೇ ।
ತತ್ಪೀಠಿಕಾ ಮಹಾಶಕ್ತಿಃ ಸಾ ಚ ವೈ ಬಿಂದು ರೂಪಿಣೀ ।
ತಯೋಃ ಸಮ್ಮೇಲನಾದ್ದೇವಿ ಕಲಾ ತತ್ರ ಪ್ರತಿಷ್ಠಿತಾ ॥

—ಸೂಕ್ಷ್ಮಾಗಮ

ಲಯ ಸ್ಥಿತಿಗಳಿಗೆ ಕಾರಣ ಲಿಂಗ; ಬೃಹತ್ತಾದುದು ಬಿತ್ತರವಾದುದು ಆಗಿ ಲಿಂಗ ಬ್ರಹ್ಮವೆನಿಸಿದೆ; ಎಂದು ಶಿವಯೋಗಿ ಶಿವಾಚಾರ್ಯರು ಲಿಂಗ ಪದದರ್ಥವನ್ನು ಪ್ರತಿಪಾದಿಸಿದರು. ಇದನ್ನೆ ಸೂಕ್ಷ್ಮಾಗಮವು ಇನ್ನೂ ಮುಂದುವರಿದು ಲಿಂಗ ಪದದೊಳಗಿನ ಲಿಕಾರ ಲಯ, ಂಶೂನ್ಯ ಸ್ಥಿತಿ, ಗಕಾರ ಸೃಷ್ಟಿಯೆಂದು ನಿರ್ವಚಿಸಿದ್ದಲ್ಲದೆ, ಪರಿವಿಡಿದು ನಾದ–ಬಿಂದು–ಕಲಾತ್ಮಕಗಳಾಗಿವೆ; ನಾದರೂಪನೆ ಶಿವ, ಬಿಂದು ರೂಪವೆ ಶಕ್ತಿ, ಇವರಡರ ಸಮ್ಮೇಳನವೆ ಕಲೆ ಎಂದು ಹೇಳಿ ಶಿವ ಶಕ್ತ್ಯಾತ್ಮಕ ಲಿಂಗೋಪಾಸನೆಯಿಂದ ಭೋಗ–ಮೋಕ್ಷಗಳೆರೆಡೂ ಲಭಿಸುವವೆಂದು ಲಿಂಗತತ್ತ್ವದ ಸಂಪೂರ್ಣ ಲಕ್ಷಣವನ್ನು ಸೂತ್ರ ಪ್ರಾಯವಾಗಿ ಸಮರ್ಪಕವಾಗಿ ಸಮರ್ಥಿಸಿದ್ದಾರೆ.

ಒಟ್ಟಾರೆ ಸ್ಥಲ ಕಳೆ; ಲಿಂಗ ಕಲೆ. ಇವೆರಡಕ್ಕೂ ಬೀಜಾಂಕುರ ನ್ಯಾಯ! ಬೀಜ ಸ್ಥಲ; ಅಂಕುರ (ವೃಕ್ಷ) ಲಿಂಗ. ಬೀಜದಲ್ಲಿ ವೃಕ್ಷವಿರುವಂತೆ ಲಿಂಗವಿದೆ; ವೃಕ್ಷದಲ್ಲಿ ಬೀಜವಿರುವಂತೆ ಸ್ಥಲವಿದೆ. ವೃಕ್ಷದ ಅಂಗಾಂಗಗಳಲ್ಲಿ ಸ್ಥಲವಿದೆ; ಆದರೆ ಅಂಗಾಂಗಗಳ ನಾಮರೂಪಗಳಿಲ್ಲ. ನಿದರ್ಶನಕ್ಕಾಗಿ ಎಲೆ (ಪತ್ರ) ಯಲ್ಲಿ ಬೀಜವಿದೆ; ಆದರೆ ಬೀಜ ಎಲೆಯೆನಿಸುವುದಿಲ್ಲ. ಅಂತೆಯೆ ಹೂವು ಮೊದಲಾದವುಗಳಲ್ಲಿ! ಬೀಜದಲ್ಲಿ ಎಲೆ ಹೂವುಗಳಿವೆಯಾದರೂ ಬೀಜ ಎಲೆ ಹೂವೆಂದೆನಿಸುವುದಿಲ್ಲ. ಕಾರ್ಯ ಭಾವವನ್ನು ತಳೆದಿರುವುದಿಲ್ಲ. ಸ್ಥಲ–ಲಿಂಗಗಳಿಗೆ ಸ್ವರ್ಣಾಭರಣಗಳಂತೆ ಕಾರಣ–ಕಾರ್ಯ ಭಾವಗಳಿರುತ್ತವೆ. ಕಾರಣದಲ್ಲಿ ಕಾರ್ಯ ದೃಶ್ಯವಲ್ಲ; ಕಾರ್ಯದಲ್ಲಿ ಕಾರಣ ದೃಶ್ಯವಲ್ಲ. ಇದು ಸ್ಥಲ–ಲಿಂಗಗಳೆರಡರ ಸೂಕ್ಷ್ಮದರ್ಶನ ಸಮೀಕ್ಷೆ! ಸ್ಥಲ ನಿಷ್ಠ ಶಕ್ತಿ ವಿಕಾಸದ ಮೊದಲ ಹೆಜ್ಜೆ ಲಿಂಗ; ಎರಡನೆಯ ಹೆಜ್ಜೆ ಅಂಗ! ಸ್ಥಳ ಕಳೆ ಲಿಂಗಾಂಗ ಕಲೆಯಾಗಿ ವಿಕಾಸವಾಗುತ್ತದೆ. ಸಕಲ ಕಲೆಯಾಗಿ ಮುಂದುವರಿಯುತ್ತದೆ. ಶಿವಾಚಾರ್ಯರ ಸಿದ್ಧಾಂತದ ಪ್ರಕಾರ ಐಕ್ಯ ಸ್ಥಲದ ಸಮರಸ ಸಮನಿಸಿದ

ಬಳಿಕ ಲಿಂಗಭಾವ, ಅಂಗಭಾವಗಳು, ಮಹಾಸ್ಥಲದಲ್ಲಿ ಕರಿಗೊಂಡು ಅವಿರಳವಾಗುತ್ತವೆ. ನಾಮ ಸೀಮೆಯು ಮೀರಿರುತ್ತವೆ.

**ವೇದಾಂತ-ಸಿದ್ಧಾಂತ:**

ಇವೆರಡನ್ನು ಪರಿವಿಡಿದು ನಿಗಮಾಂತ-ಆಗಮಾಂತ ಎಂತಲೂ ಹೇಳಲಾಗುತ್ತದೆ. ಹೇಗೆ ಹೇಳಿದರೂ ಒಂದೇ ಅರ್ಥ; ಒಂದೇ ಆಶಯ. ವೇದ+ಅಂತ-ವೇದಾಂತ; ಸಿದ್ಧ+ಅಂತ-ಸಿದ್ಧಾಂತ. ವೇದಾಂತವೆಂದರೆ ವೇದದ ಕೊನೆಯ ಭಾಗ; ಸಿದ್ಧಾಂತವೆಂದರೆ ಸಿದ್ಧವಾದುದರ ಕೊನೆಯ ಭಾಗ. ವೇದವೆಂದರೆ ಜ್ಞಾನ; ಮತ್ತು ನಾಲ್ಕು ನಿಗಮ. ಸಿದ್ಧವೆಂದರೆ ನಿರ್ಣಯ, ಸಾಮರ್ಥ್ಯ ಅಥವಾ ಸಮರ್ಥ, ಮತ್ತು ಸಿದ್ಧಾಗಮ. ವೇದಾಂತ ಜೀವನ ವೃಕ್ಷದ ಪುಷ್ಪ; ಸಿದ್ಧಾಂತ ಫಲ. ಅರಿಯುವಿಕೆ ಮುಗಿದ ಬಳಿಕ ನಿರ್ಣಯ. ಇದರಿಂದಾಗಿ ವೇದಾಂತದ ಮುಂದೆ ಸಿದ್ಧಾಂತವಿದೆ; ಸಿದ್ಧಾಂತದ ಮುಂದೆ ವೇದಾಂತವಿಲ್ಲ, ಏನೂ ಇಲ್ಲ. ಎಲೆಯ ಮುಂದೆ ಹೂವುಂಟು, ಹೂವಿನ ಮುಂದೆ ಹಣ್ಣುಂಟು; ಹಣ್ಣಿನ ಮುಂದೆ ಇನ್ನೇನಿಲ್ಲ. ಅದೇ ಕೊನೆ, ಅದೇ ಮೊದಲು. ಇಲ್ಲಿ ಎಲೆ ಅಂದರೆ ಕ್ರಿಯೆ, ಹೂವೆಂದರೆ ಜ್ಞಾನ; ಹಣ್ಣೆಂದರೆ ಅನುಭವ! ಅನುಭವ ಆನಂದದಲ್ಲಿ ಪರ್ಯವಸಾನವಾಗುತ್ತದೆ. ಅಂದರೆ ಪರವಶವಾಗುತ್ತದೆ. ಅದೇ ಸಮರಸ. ಅದೇ ಫಲರಸ.

ವೇದಾಂತವೆಂದರೆ ಪೂರ್ಣಪ್ರಜ್ಞೆ, ಸಿದ್ಧಾಂತವೆಂದರೆ ಆ ಪೂರ್ಣಪ್ರಜ್ಞೆಯ ಮೇಲೆ ಮೂಡಿಬಂದ ಪೂರ್ಣಾಖಂಡಾನುಭೂತಿ! ಸ್ವಯಂಜ್ಯೋತಿ!! ಅಣಿಮಾಡಲು ಬೇಕಾದ ಪೂರ್ಣಜ್ಞಾನ ವೇದಾಂತ; ಅಣಿಯಾದ ಸ್ವರೂಪಾನುಭೂತಿ! ಸ್ವರೂಪಾನುಭೂತಿಯಿಂದಾದ ಚರಮ ಪರಿಣಾಮ. ಅದು ಅಪ್ರತಿಮ; ಅಸೀಮ. ಸಿದ್ಧಾಂತದಾಚೆ ಸಾಧಿಸಬೇಕಾದುದೇನೂ ಇಲ್ಲ. ಸಿದ್ಧಾಂತವೆಂದರೆ ಸಿದ್ಧವಸ್ತು; ಸತ್ಯವಸ್ತು; ಅದೇ ಪರಶಿವ ವಸ್ತು. ಅದುವೇ ತತ್! ಅದರಿಂದಾದುದೆಲ್ಲ ತತ್ತ್ವ!!

ವೇದವೆಂದರೆ ನಿಗಮ; ನಿಗಮವೆಂದರೆ ಪಥ. ಆ ಪಥದಲ್ಲಿ ಮುಂದುವರಿವ ಕ್ರಿಯೆ ಚರ್ಯೆ- ಯೋಗಗಳನ್ನೊಳಗೊಂಡುದೆ ಆಗಮ. ಆಗಮನದ ಪ್ರೇರಕ ಶಕ್ತಿ! ಮಾನವೀಯ ಸರ್ವಾಂಗೀಣ ವಿಧಿವಿಧಾನಗಳನ್ನು ಘನವಾಗಿ ಗಮನಿಸಿ ಪ್ರಬೋಧಿಸುವುದೇ ಆಗಮ; ಅದೊಂದು ಶಾಸ್ತ್ರ; ಸಂಹಿತೆ! ಆ ಆಗಮನವನ್ನು ಚಾಚೂ ತಪ್ಪದೆ ನಡೆಸಿಕೊಂಡು ಆಗಮನ ಮಾಡುವಾತನೆ ಆಗಮಿಕ; ಆತನೆ ಸತ್ಯ ಸಿದ್ಧಾಂತಿ! ಕೇವಲ ಜ್ಞಾನಾರ್ಜನೆಗಾಗಿ ವೇದಾಂತವನ್ನು ಅಧ್ಯಯನ ಮಾಡುವಾತನೆ ವೇದಾಂತಿ! ಸಿದ್ಧಾಂತಿಗೂ ವೇದಾಂತಿಗೂ ಅದೆಷ್ಟು ಅಂತರ! ಅಂತೆಯೇ ವೇದಾಂತಕ್ಕೂ ಸಿದ್ಧಾಂತಕ್ಕೂ ಸಹ ಅದೆಷ್ಟು ಅಂತರ? ಪರಮಾನುಭಾವಿಗಳು ಪರಾಮರ್ಶಿಸಬೇಕು. ವೇದಾಂತಿ ತತ್ತ್ವಜ್ಞಾನಿ; ಸಿದ್ಧಾಂತಿ ತತ್ತ್ವಾನುಭಾವಿ! ತತ್ತ್ವಜ್ಞಾನಿ ತತ್ತ್ವವನ್ನು ಬರೀ ತಿಳಿಯಬಲ್ಲ; ತತ್ತ್ವಾನುಭಾವಿ ತತ್ತ್ವದಲ್ಲಿ ತಲ್ಲೀನನಾಗಬಲ್ಲ; ಬಳಿಕ ಅವಿರಳವೂ ಆಗಬಲ್ಲ; ಆಗುತ್ತಾನೆ.

**ಶಿವತತ್ತ್ವ–ಬ್ರಹ್ಮತತ್ತ್ವ:**

"ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇ ನಮಃ।" –ರೇಣುಕ ಗೀತೆ. ಶಿವ, ಬ್ರಹ್ಮ ವಸ್ತು ಒಂದೇ; ನಾಮ ಭಿನ್ನ. ಸಚ್ಚಿದಾನಂದ ಸ್ವರೂಪ ಲಕ್ಷಣ ಲಕ್ಷಿತ ಶಿವನೇ ಬ್ರಹ್ಮ. ಅಂತಹ ಶಿವಸ್ವರೂಪ ಬ್ರಹ್ಮಚೈತನ್ಯಕ್ಕೆ ನಮಸ್ಕಾರ!

"ಬ್ರಹ್ಮೇತಿ ವ್ಯಪದೇಶಸ್ಯ ವಿಷಯಂ ಯಂ ಪ್ರಚಕ್ಷತೇ।
ವೇದಾಂತಿನೋ ಜಗನ್ಮೂಲಂ ತಂ ನಮಾಮಿ ಪರಂ ಶಿವಂ॥"

ವಾಸ್ತವವಾಗಿ ಶಿವ–ಬ್ರಹ್ಮ ಒಂದೇ ಆಗಿದ್ದರು, ವೇದಾಂತಿಗಳ ದೃಷ್ಟಿಯಲ್ಲಿ ನಿರೂಪಣೆಯಲ್ಲಿ ಬ್ರಹ್ಮ ಶಿವ ತತ್ತ್ವಕ್ಕೆ ಭಿನ್ನನಾಗಿದ್ದಾನೆ. ಅಲ್ಲದೆ ಬ್ರಹ್ಮವಸ್ತುವನ್ನು ವೇದಾಂತಿಗಳು ನೆಪಮಾತ್ರಕ್ಕೆ ವಿಷಯುವನ್ನಾಗಿ ಹೇಳುತ್ತಾರೆ. ಜ್ಞಾನ ವಸ್ತುವನ್ನಾಗಿ ಧ್ಯೇಯ–ಜ್ಞೇಯ ವಸ್ತುವನ್ನಾಗಿ ಇಟ್ಟುಕೊಂಡಿದ್ದಾರೆ. ಅದು ಅವರಿಗೆ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬೀ ಬ್ರಹ್ಮಸೂತ್ರದಂತೆ ಜಿಜ್ಞಾಸ್ಯ ವಸ್ತುವಾಗಿದೆ. ಆದರೆ ಅದೇ ಶಿವಾದ್ವೈತಿಗಳಾದ ಸಿದ್ಧಾಂತಿಗಳಿಗೆ ಉಪಾಸ್ಯವಸ್ತುವಾಗಿದೆ ಮತ್ತು ಜಗನ್ಮೂಲವಾಗಿದೆ. "ಶಿವಾಭಿಧಂ ಪರಂಬ್ರಹ್ಮ ಜಗನ್ನಿರ್ಮಾತುಮಿಚ್ಛಯಾ। ಸ್ವರೂಪಮಾದಧೇ ಕಿಂಚಿತ್ ಸುಖ ಸ್ಫೂರ್ತಿ ವಿಜೃಂಭಿತಂ॥" ಶಿವಾದ್ವೈತಿಗಳ ಸಮ್ಯಕ್‌ದೃಷ್ಟಿಯಲ್ಲಿ ಆ ಪರಶಿವಬ್ರಹ್ಮವು ಈ ಜಗನ್ನಿರ್ಮಾಣ ಮಾಡಲು ಬಯಸಿ, ಅತ್ಯಲ್ಪ ಸುಖಸ್ಫೂರ್ತಿಯಿಂದ ವಿಶ್ವಾಕಾರವಾಗಿ ವಿಜೃಂಭಿಸಿದೆ. ವಿಜೃಂಭಿಸಿದರೂ ಅದು ಸ್ವಸ್ವರೂಪಕ್ಕೆ ಕೊರತೆ ಬಾರದಂತಿದೆ. ಎಂದು ಪರಾಕಾಶ ಶಿವಾನುಭಾವಿಯಾದ ಶಿವಯೋಗಿ ಶಿವಾಚಾರ್ಯರು ನಿರೂಪಿಸಿದ್ದಾರೆ.

"ತದೀಯಾ ಪರಮಾಶಕ್ತಿಃ ಸಚ್ಚಿದಾನಂದಲಕ್ಷಣಾ।
ಸಮಸ್ತಲೋಕ ನಿರ್ಮಾಣ ಸಮವಾಯಸ್ವರೂಪಿಣೀ।
ತದಿಚ್ಛಯಾಭವತ್ ಸಾಕ್ಷಾತ್ ತತ್ಸ್ವರೂಪಾನುಕಾರಿಣೀ॥" –ರೇ. ಗೀತೆ.

ಶಿವಾದ್ವೈತ ಸಿದ್ಧಾಂತದಲ್ಲಿ ಪರಶಿವಬ್ರಹ್ಮವು ಶಕ್ತಿವಿಶಿಷ್ಟವಾದುದು. ಆ ಶಕ್ತಿ ಪರಾಶಕ್ತಿ; ಶಿವಬ್ರಹ್ಮನಿಗೆ ಸಮವಾದ ಸಚ್ಚಿದಾನಂದ ಲಕ್ಷಣವುಳ್ಳದು. ಬ್ರಹ್ಮಾಂಡ ನಿರ್ಮಾಣ ಕ್ರಿಯೆಯಲ್ಲಿ ಸಮವಾಯ ಸ್ವರೂಪಳು. ಸಂಹಿತ–ಸನ್ನಿಹಿತ ಸ್ವರೂಪಳು. ಆ ಪರಶಿವಸ್ವರೂಪ ಬ್ರಹ್ಮದಿಚ್ಛೆಯಂತೆ ಸಾಕ್ಷಾತ್ತಾಗಿ ಆ ಸ್ವರೂಪವನ್ನು ಅನುಕರಿಸತಕ್ಕವಳು. ಇದರಿಂದಾಗಿ ಜಗನ್ನಿರ್ಮಾಣಕಾರ್ಯದಲ್ಲಿ ಅಭಿನ್ನ ನಿಮಿತ್ತೋಪಾದಾನ ಕಾರಣವನ್ನು ಶಿವ ಬ್ರಹ್ಮನಿಗೆ ಶಿವಾದ್ವೈತಿಗಳು ಸಿದ್ಧಾಂತಿಸಿದ್ದಾರೆ. ಶಕ್ತಿ ಶಿವನಲ್ಲಿ ಅವಿರಳವಾಗಿರುವುದರಿಂದ ಅಭಿನ್ನ ನಿಮಿತ್ತೋಪಾದಾನ ಕಾರಣತ್ವ ಸಹಜವಾಗಿ ಸಿದ್ಧಿಸುತ್ತದೆ ಮತ್ತು ಅವಿಕೃತ ಪರಿಣಾಮವನ್ನು ಜಗತ್ತಿಗೆ ನಿರೂಪಿಸಲಾಗಿದೆ ಶಿವಾದ್ವೈತ ಸಿದ್ಧಾಂತದಲ್ಲಿ! ಪರಶಿವನು ನಿರವಯವಿಯಾದರೂ ಶಕ್ತಿಸಂಪನ್ನನಾಗಿರುವುದರಿಂದ ಆಂಶಿಕವಾಗಿ ಸ್ವಯವಾಗಿ ಅವಿಕೃತ ವಾಗಿ ಶಿವಶಕ್ತಿ ಪರಿಣಮಿಸುತ್ತದೆ ವಿಶ್ವರೂಪದಲ್ಲಿ! ಕೇವಲಾದ್ವೈತದಲ್ಲಿ ಅವಿದ್ಯೆಯಿಂದ

ಜಗತ್ತಿಗೆ ವಿವರ್ತವಾದವನ್ನು ಹೇಳಲಾಗಿದೆ. ವಿವರ್ತವಾದದಲ್ಲಿ ಮೂಲ ವಸ್ತುಸ್ವರೂಪ ವಿರುವುದಿಲ್ಲ. ಹಾಲು ಕೆಟ್ಟು ಮೊಸರಾಗುವಿಕೆಯೇ ವಿವರ್ತವಾದದ ಲಕ್ಷಣ! ಸುವರ್ಣ–ಆಭರಣವಾದಂತೆ ಅವಿಕೃತ ಪರಿಣಾಮವಾದ ಲಕ್ಷಣ! ಇಲ್ಲಿ ಸುವರ್ಣತ್ವಕ್ಕೆ ಚ್ಯುತಿಯಿಲ್ಲ. ಬ್ರಹ್ಮಾದ್ವೈತದಲ್ಲಿ ಬ್ರಹ್ಮ ಕೆಟ್ಟು ಅಂದರೆ ಸ್ವರೂಪವಳಿದು ಅನ್ಯಥಾಭಾವವಾಗಿರುವ ದೋಷವಿರುತ್ತದೆ. ಅಸಲು ಜಗತ್ತನ್ನೆ ಒಪ್ಪದವರು ವಿವರ್ತವಾದವನ್ನೇಕೆ ಮುಂದೆ ಮಾಡುವರೋ ತಿಳಿಯದಾಗಿದೆ. ಇದರಿಂದ ಅವರು ಬ್ರಹ್ಮಹಾನಿಯನ್ನು ಒಪ್ಪಿಕೊಂಡಂತಾಗುವುದಿಲ್ಲವೆ? ಕಾರಣ ಬ್ರಹ್ಮ ವಿವರ್ತಿಸುತ್ತದೆ; ಅವಿದ್ಯೆ ಪರಿಣಮಿಸುತ್ತದೆ ಎಂದು ಹೇಳುವ ಬ್ರಹ್ಮಾದ್ವೈತಿಗಳ ವಾದ ವಾಸ್ತವವಾದುದಲ್ಲ. ಅಂತೆಯೇ ದ್ವೈತಿ ಹೇಳುವ ಕೇವಲ ಕರ್ಮ ವಾದವನ್ನು ಷಟ್‌ಸ್ಥಲ ಸಿದ್ಧಾಂತ ಒಪ್ಪುವುದಿಲ್ಲ; ಕ್ರಿಯೆ ಜ್ಞಾನಗಳೆರಡನ್ನೂ ಒಪ್ಪುತ್ತದೆ. ಜೊತೆಗೆ ಕ್ರಿಯೆಗೂ ಜ್ಞಾನಕ್ಕೂ ಕ್ರಮಸಮುಚ್ಚಯವನ್ನು ಒಪ್ಪದೆ ಸಮಸಮುಚ್ಚಯ ನಿರ್ಣಯವನ್ನು ಒಪ್ಪಿದೆ. ಸಾಂಖ್ಯ ಸಿದ್ಧಾಂತ ೨೫ ತತ್ತ್ವಗಳನ್ನು ಒಪ್ಪಿದರೆ, ಅದಕ್ಕೆ ಮುಂದುವರಿದು ೩೬ ತತ್ತ್ವಗಳನ್ನು ಷಟ್‌ಸ್ಥಲ ಸಿದ್ಧಾಂತ ಒಪ್ಪಿ ತತ್ತ್ವಪೂರ್ಣತೆಯನ್ನು ಸಾಧಿಸಿದೆ. ಸಾಂಖ್ಯ ಸಿದ್ಧಾಂತದಲ್ಲಿ ಪ್ರಕೃತಿ ಪುರುಷರ ವಿಯೋಗವೇ ಮೋಕ್ಷವೆಂದು ಪ್ರತಿಪಾದಿಸಿದರೆ, ಷಟ್‌ಸ್ಥಲ ಸಿದ್ಧಾಂತದಲ್ಲಿ ಸಂಯೋಗ ಅಂದರೆ ಸಮರಸವೇ ಮೋಕ್ಷವೆಂದು ಪ್ರತಿಪಾದಿಸಿದೆ. ಯೋಗಶಾಸ್ತ್ರವು ಅಷ್ಟಾಂಗ ಯೋಗವನ್ನು ನಿರೂಪಿಸಿದರೆ, ಜೊತೆಗೆ ಇಷ್ಟಲಿಂಗ (ಶಿವಯೋಗ) ಯೋಗವನ್ನು ಪ್ರತಿಪಾದಿಸಿದೆ. ಬರೀ ಯೋಗಕ್ಕಿಂತ ಶಿವಯೋಗ ದೊಡ್ಡದು; ಪೂರ್ಣ ಪರಿಣಾಮಕಾರಿಯಾದುದು. ಅಂತೆಯೇ ಶಿವಯೋಗವನ್ನು 'ಯೋಗರಾಜ' ಎಂದು ಉಕ್ತವಾಗಿದೆ. ಇದು ಅರವಿಂದರ ಪೂರ್ಣ ಯೋಗಕ್ಕಿಂತ ಮುಂದೆ ಹೋಗಿ 'ಅಖಂಡಯೋಗ' ಎಂದೆನಿಸಿದೆ. ಅಖಂಡ ಶಿವಯೋಗಕ್ಕಿಂತ ಶ್ರೇಷ್ಠಯೋಗ ಬೇರೆ ಯಾವುದಿಲ್ಲ. ರಾಜಯೋಗದಲ್ಲಿ ಭ್ರಾಂತಿ ನಿರಸನ ಮತ್ತು ಜೀವಶುದ್ಧಿ ಮಾತ್ರ ನಿರೂಪಿತವಾಗಿದೆಯಲ್ಲದೆ ಶಿವಯೋಗದ ಸಾಮರಸ್ಯ ನಿರೂಪಿತವಾಗಿಲ್ಲ. ಉಳಿದೆಲ್ಲ ದಾರ್ಶನಗಳಲ್ಲಿ ನೇತಿವಾದವಿದ್ದು ಒಂದಿಲ್ಲೊಂದು ಕೊರತೆಯಿಂದ ಕೂಡಿವೆ. ಆದರೆ ಷಟ್‌ಸ್ಥಲ ದರ್ಶನದಲ್ಲಿ ನೇತಿವಾದಕ್ಕೆ ನಸು ಇಂಬಿಲ್ಲ. ಜೀವ–ಜಗತ್ತು–ಈಶ್ವರ ಈ ಮುಖ್ಯ ಮೂರು ತತ್ತ್ವಗಳಿಗೂ ಇಂಬಿದೆ. ಯಾವುದನ್ನೂ ನಿರಾಕರಿಸುವ ಮಾತಿಲ್ಲ. ಎಲ್ಲವನ್ನೂ ಸಾಂಸ್ಕಾರಿಕವಾಗಿ ಶುದ್ಧಿಮಾಡಿ ಪ್ರಸಾದ ಭಾವದಿಂದ ಉಪಯೋಗಿಸಿಕೊಳ್ಳುವುದೇ ಷಟ್‌ಸ್ಥಲ ಸಿದ್ಧಾಂತ ಧ್ಯೇಯ.

**ಷಟ್‌ಸ್ಥಲ ಸಿದ್ಧಾಂತ:**

ಷಟ್‌ಸ್ಥಲ ಸಿದ್ಧಾಂತ ನಿನ್ನೆ-ಮೊನ್ನೆಯದಲ್ಲ; ಕೇವಲ ನೂರು-ಸಾವಿರ ವರುಷಗಳಿಂದ ಬಂದುದಲ್ಲ. ಅದು ಸನಾತನ ಸಿದ್ಧಾಂತ; ಶಿವಾಗಮ ಶಿವಪುರಾಣಗಳಿಗಿಂತ ಪುರಾತನ ಸಿದ್ಧಾಂತ. ಷಟ್‌ಸ್ಥಲ ನಿರ್ಣಯ ಸನಾತನ ಶಿವಾಚಾರ್ಯರಿಂದಾಗಿದೆ. ಆದ್ಯರಾದ

ಶ್ರೀ ರೇಣುಕಾದಿ ಶಿವಾಚಾರ್ಯರು ಷಟ್‌ಸ್ಥಲಾಚರಣೆಯನ್ನಿರಿಸಿಕೊಂಡುದರಿಂದ ಶಿವಾಚಾರ್ಯರಿಗೆಲ್ಲ ಷಟ್ ಸ್ಥಲಬ್ರಹ್ಮಿ, ಷಟ್‌ಸ್ಥಲ ಚಕ್ರವರ್ತಿ-ಎಂಬೀ ವಿಶೇಷಣಗಳು ಶಿವಾಚಾರ್ಯ ಸಂತತಿಗೆ ಮೀಸಲಾದವು. ಆದ್ಯ ಶಿವಾಚಾರ್ಯರು ಷಟ್‌ಸ್ಥಲ ಸಿದ್ಧಾಂತವನ್ನು ಆಚಾರ ವಿಚಾರಾನುಭವಗಳಿಂದ ಜೀವನ ಪ್ರಗತಿಗೆ ಬೇಕಾದುದೆಂದು ವಿಶ್ಲೇಷಿಸಿ ವಿವರಿಸಿದರು; ಸಿದ್ಧಾಂತಿಸಿದರು. ಶಿವಾದ್ವೈತ ಸಿದ್ಧಾಂತ ಸಂಸ್ಥಾಪಕರಾದ ಜಗದ್ಗುರು ಆದಿ ರೇಣುಕರ ಷಟ್‌ಸ್ಥಲ ನಿರ್ಣಯಕ್ಕೆ ಉಳಿದೆಲ್ಲ ವೀರಶೈವರು ಒಪ್ಪಿಕೊಂಡಿರುವರು. ವಿಶ್ವಮಾನವ ಜೀವನೋಪಯೋಗಿ ಷಟ್‌ಸ್ಥಲ ಸಿದ್ಧಾಂತದ ನಿಚ್ಚಳ ನಿಲವನ್ನು ಸಮಗ್ರ ಸ್ವರೂಪವನ್ನು ತೋರಿಸಿ ಕೊಟ್ಟವರೇ ಆದಿ ಜಗದ್ಗುರು ರೇಣುಕ ಭಗವತ್ಪಾದರು. ಅಂತೆಯೇ ಷಟ್‌ಸ್ಥಲದ ಉಗಮ-ನಿಗಮಗಳ ಬಗೆಗೆ,

"ಶೈವಾಗಮೇಷು ಸರ್ವೇಷು ಪುರಾಣೇಷ್ವಖಿಲೇಷು ಚ|
ಪುರಾದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ||
ತತ್ಸಂಪ್ರದಾಯ ಸಿದ್ಧೇನ ರೇಣುಕೇನ ಮಹಾತ್ಮನಾ|
ಗಣೇಶ್ವರೇಣ ಕಥಿತಮಗಸ್ತ್ಯಾಯ ಪುನಃ ಕ್ಷಿತೌ||"

ಎಂಟನೆಯ ಶತಮಾನದ ರೇಣುಕ ಗೀತೆಯ ಕರ್ತೃ ಶಿವಯೋಗಿ ಶಿವಾಚಾರ್ಯರು ಹೀಗೆ ಹೇಳಿದ್ದಾರೆ. ಷಟ್‌ಸ್ಥಲ ಸಿದ್ಧಾಂತ ಶಿವಾಗಮಗಳಷ್ಟು ಪುರಾತನದ್ದು. ಶಿವೋಕ್ತವಾದದ್ದು. ಪುರಾಣಗಳಲ್ಲಿಯೂ ಪ್ರತಿಪಾದಿತವಾಗಿದೆ. ಮೂರುಸಾವಿರ ವರುಷಗಳ ಹಿಂದೆ ಶಿವಸಂಪ್ರದಾಯದಲ್ಲಿ ಸಿದ್ಧರೂ ಮಹಾತ್ಮರೂ ಗಣೇಶ್ವರರೂ. ಆದ ಆದಿ ರೇಣುಕ ಭಗವತ್ಪಾದರು ಅದನ್ನೆ ಮರಳಿ ಅಗಸ್ತ್ಯ ಮಹಾಮುನಿಗೆ ಈ ಲೋಕದಲ್ಲಿ ಪ್ರಬೋಧಿಸಿರುವರು. ಅಗಸ್ತ್ಯಮುನಿ ನಿಮಿತ್ತ ಮಾತ್ರ. ಇಡೀ ಲೋಕಾನುಗ್ರಹಕ್ಕಾಗಿ ತಮ್ಮ ಪ್ರಾಸಾದಿಕವಾಣಿಯಿಂದ ಪ್ರಬೋಧಿಸಿರುವರು. ಆದಿ ರೇಣುಕರು 'ಶಿವಾದ್ವೈತ ಪರಿಜ್ಞಾನ ಪರಮಾನಂದ ತುಂದಿಲರು;' ವೀರಶೈವ ಸಿದ್ಧಾಂತ ನಿರ್ರೂಪದಲ್ಲಿ ಕೃತಪಟ್ಟ ನಿಬಂಧನರು. ಸಿದ್ಧ ಸಂತಾನ ನಾಯಕರು. ಶಿವಾದ್ವೈತ ಸಿದ್ಧಾಂತಪಾಲಕರು, ವೀರಶೈವ ಷಟ್‌ಸ್ಥಲವನ್ನು ದಾರ್ಶನಿಕವಾಗಿ ಪ್ರತಿಭಾನ್ವಿತವಾಗಿ ಪ್ರಾಯೋಗಿಕವಾಗಿ ಸಂಸ್ಥಾಪಿಸಿದವರು. ಅವರು ಸಂಸ್ಥಾಪಿಸಿದ ಷಟ್‌ಸ್ಥಲ ಸಿದ್ಧಾಂತವು ಸದ್ಯದಲ್ಲಿಯೇ ಸಿದ್ಧಿದಾಯಕವಾದುದು; ಸರ್ವಾರ್ಥ ಸಾಧಕವಾದುದು. ಸರ್ವರ ಸರ್ವಾಂಗೀಣ ಜೀವನ ಉದ್ದೀಪನಕಾರಿಯಾದುದು. ಸರ್ವಾಚಾರ ವಿಚಾರಾನುಭೂತಿಗಳಿಂದ ಸಂಯುಕ್ತವಾದುದು.

**ಷಟ್‌ಸ್ಥಲ ವಿಭಾಗ ತಾಂತ್ರಿಕ ಮತ್ತು ತಾತ್ತ್ವಿಕ:**

ಷಟ್‌ಸ್ಥಲ ವಿಭಾಗ ಪ್ರಧಾನವಾಗಿ ಕ್ರಿಯೆಗಳನ್ನು ಅವಲಂಬಿಸಿದೆ. ಶಿವಾಚಾರ್ಯರು ಒಟ್ಟಾಗಿ ಕ್ರಿಯೆಗಳನ್ನು ಮಾರ್ಗಕ್ರಿಯೆ, ಮೀರಿದ ಕ್ರಿಯೆಗಳೆಂದು ಸಿದ್ಧಮಾಡಿದ್ದಾರೆ. ಮಾರ್ಗ ಕ್ರಿಯೆಗಳಿಂದ ಭಕ್ತ, ಮಾಹೇಶ, ಪ್ರಸಾದಿ ಎಂಬೀ ತ್ರಿವಿಧ ಸ್ಥಲಗಳು, ಮೀರಿದ

ಕ್ರಿಯೆಗಳಿಂದ ಪ್ರಾಣಲಿಂಗಿ, ಶರಣ, ಐಕ್ಯ ಎಂಬೀ ತ್ರಿವಿಧ ಸ್ಥಲಗಳು ವಿಭಾಗವಾಗಿ ವಿನ್ಯಾಸ ಗೊಂಡಿವೆ ಮತ್ತು ಆ ಆ ಗುಣ ಕ್ರಿಯೆಗಳಿಂದ ನಿರ್ದಿಷ್ಟವಾಗಿವೆ. ವಿಭಾಗ ವಿನ್ಯಾಸದಲ್ಲಿ ಶಿವಾಚಾರ್ಯರದು ವಿಶಿಷ್ಟ ಜೀವನ ಚಿಂತನ ಶಕ್ತಿ ವ್ಯಕ್ತವಾಗಿದೆ. ಶಿವಾಗಮಗಳಲ್ಲಿಯೇ ವಿನ್ಯಾಸಗೊಳಿಸಿದ್ದನ್ನು ಕಾಣಬೇಕಲ್ಲದೆ ಬೇರೆ ಕಾಣಲಾಗದು. ಪಾರಮೇಶ್ವರಾಗಮದಲ್ಲಿ ಪರಿವಿಡಿದು ಹೀಗೆ ನಿರ್ದಿಷ್ಟವಾಗಿದೆ:

"ಸರ್ವಜ್ಞತಾ, ತೃಪ್ತಿರನಾದಿ ಬೋಧಃ,
ಸ್ವತಂತ್ರತಾ, ನಿತ್ಯಮಲುಪ್ತ ಶಕ್ತಿಃ।
ಅನಂತಶಕ್ತಿಶ್ಚ, ವಿಭೋರ್ವಿಧಿಜ್ಞಾ,
ಷಡಾಹುರಂಗಾನ್ಯಥ ಷಟ್‌ಸ್ಥಲಾನಿ||"

ಓ ಅದೆಷ್ಟು ವಿಶಿಷ್ಟ ವಿಭಾಗವಿದು; ವಿಚಾರಪೂರ್ಣ ವಿಭಾಗವಿದು; ವಿಭಾವ್ಯವಿದು. ಪರಶಿವನ ಆ ಷಡ್ಗುಣೈಶ್ವರ್ಯಗಳನ್ನು ಪರಿವಿಡಿದು ಸಾಧಿಸುವುದೇ ಷಟ್‌ಸ್ಥಲ ವಿಭಾಗ! ಈ ವಿಭಾಗದಲ್ಲಿ ವಿಂಗಡಣೆಯ ಭಾವವಿಲ್ಲ; ವಿಶಿಷ್ಟ ಭಾಗದ ವಿನ್ಯಾಸವಿದೆ. ಸಾಧನೆಯೊಡನೆ ಸಂಬಂಧವನ್ನು ಸಂಪನ್ನತೆಯನ್ನು ಸೂಚಿಸುವ ವಿಭಕ್ತಿತ್ವವಿದೆ. ವಿಭಾವ್ಯತ್ವವಿದೆ.

ತನ್ನ ಧ್ಯೇಯ ವಸ್ತುವಿನ, ಭಜಿಸಿ ಅಳವಡಿಸಿಕೊಳ್ಳುವ ಪೂರ್ಣಪ್ರಜ್ಞೆಯುಳ್ಳಾತನೆ ಭಕ್ತ. ಅಲ್ಪ ಪ್ರಜ್ಞೆಯಲ್ಲಿರುವುದು ಭಕ್ತನ ಪೂರ್ಣ ಲಕ್ಷಣವಲ್ಲ. ತನ್ನ ಪಿಂಡಾಂಡದ ಮತ್ತು ಅಷ್ಟಾವರಣದ ಎಲ್ಲ ಅರಿವನ್ನು ಅಳವಡಿಸಿಕೊಂಡು ಅರ್ಚಿಸಿ ಅರ್ಪಿಸಿ ಅನುಭವಿಸು ವಾತನೆ ಭಕ್ತ. ಭಕ್ತನಾಗುವುದು ಸಾಮಾನ್ಯವಲ್ಲ. ಪರಶಿವನ ಸರ್ವಜ್ಞತ್ವ ಸಮನಿಸಿದಲ್ಲಿ ಭಕ್ತತ್ವವುಂಟಾಗುತ್ತದೆ.

ಸಂವಿತ್‌ಸಂತುಷ್ಟನಾಗಿರುವಾತನೆ ಮಾಹೇಶ್ವರ. ಸಂತುಷ್ಟನಾಗಿರಬೇಕಾದರೆ ಚಿದಾನಂದ (ಆತ್ಮಾನಂದ)ದಲ್ಲಿ ಸ್ಥಿತಸತ್ತೆಯುಳ್ಳವನಾಗಿರಬೇಕು. ಔಪಾಧಿಕ ತೃಪ್ತಿಗೆಳಸಬಾರದು. ನಿರು ಪಾಧಿಕ ತೃಪ್ತಿ ಪ್ರಾಪ್ತಿಯುಳ್ಳವನಾಗಿರಬೇಕು.

ಅನಾದಿಬೋಧ ಅಚ್ಚಪ್ರಸಾದ. ಅದುಳ್ಳವನು ಪ್ರಸಾದಿ. ಆದಿಯಿಂದಾಚೆಯ ಪರಶಿವ ಪರಂಜ್ಯೋತಿಯ ಪ್ರಸನ್ನ ಪ್ರಭಾವಕ್ಕೊಳಗಾದಾತನೆ ಪ್ರಸಾದಿ. ಆ ಪರಮ ಪರಿ ಣಾಮರೂಪ ಪ್ರಸಾದವೆ ಅನಾದಿ ಬೋಧ.

ಸ್ವತಂತ್ರತೆಯಿಂದಿರುವಾತನೆ ಪ್ರಾಣಲಿಂಗಿ. ಪರತಂತ್ರತೆ ಪ್ರಾಣಲಿಂಗಿಗೆ ಸಲ್ಲದು. ಆ ಅನಾದಿಬೋಧದ ಪರಿಪಕ್ವ ಪರಿಣಾಮವೆ ಸ್ವ-ತಂತ್ರತೆ! ಅಲ್ಲಿರುವಾತನಿಗೆ ಅಂದರೆ ಪ್ರಾಣಲಿಂಗಿಗೆ ಮಾರ್ಗಕ್ರಿಯೆಯ ಹಂಗಿರದು. ತ್ಯಾಗಾಂಗದೊಡನೆ ಭೋಗಾಂಗದ ಹಂಗೂ ಹರಿದಿರುತ್ತದೆ ಪ್ರಾಣಲಿಂಗಿಗೆ!

ನಿತ್ಯ ಅಲುಪ್ತಶಕ್ತಿ ಸಂಪನ್ನನೇ ಶರಣ. ಶರಣ ಕ್ಷೀಣಿಸಬಾರದು. ಶರಣಶಕ್ತಿ ಸದಾ

ಅಭಿವ್ಯಕ್ತವಾಗಿಯೇ ಇರಬೇಕು. ವೀರ ಧೀರನಾಗಿ ಪ್ರತಿಭಾನ್ವಿತನಾಗಿ ಇರಬೇಕು. ಭೌತಿಕಕ್ಕೆ ಬಾಯ್ನೀರು ಕರೆದರೆ ಅದು ಲುಪ್ತಶಕ್ತಿಯ ಚಿಹ್ನೆ!

ಅನಂತ ಶಕ್ತಿಶಾಲಿಯೇ ಐಕ್ಯ. ಬಾಳಿಗೆ ಬದುಕಿಗೆ ಕೊನೆಯಿಲ್ಲದಂತೆ ಮಾಡುವ ಆ ಮಹಾಚೇತನಶಾಲಿಯಾಗುವಿಕೆ ಐಕ್ಯತೆ! ಅಥವಾ ಸಮರಸತೆ!! ಮದ-ಮತ್ಸರ, ಶೋಕ-ಮೋಹ, ಸ್ವಾರ್ಥ-ಸಂಕುಚಿತ ಮೊದಲಾದವುಗಳನು ಮೀರಿ ಆಗಸಕ್ಕಿಂತ ಅಗಲಾದ ಆಳವಾದ ಜೀವನವನ್ನು ರೂಪಿಸಿಕೊಳ್ಳುವಿಕೆ ಐಕ್ಯನ ಮುಖ್ಯ ಮನೀಷೆ! ಜೀವನದಲ್ಲಿ ನಿತ್ಯ ಪೂರ್ಣಾಖಂಡ ಪರಿಭಾವದಿಂದ ಪ್ರವರ್ತಿಸುವಿಕೆ!

ಈ ಷಟ್‌ಸ್ಥಲ ವಿವೇಚನೆ ತಾಂತ್ರಿಕ! ಅದೆಷ್ಟು ಗಂಭೀರ!! ಷಡ್ಗುಣೈಶ್ವರ್ಯಗಳನ್ನು ಸಂಪಾದಿಸುವುದೇ ಶಿವಾಚಾರ್ಯರ ಮತ್ತು ಶಿವಾಗಮಗಳ ನೀಳ್ಗುರಿ; ಪರಮ ಪರಿ. ಈ ವಿಭುತ್ವದ ವಿಧಿವಿಧಾನಗಳನ್ನು ಬಲ್ಲಿದರಾದ ಶಿವಾಗಮಿಕರು ಇವನ್ನು ಮಾನವೀಯ ಜೀವ ನಾಂಗಗಳಾದ ಷಟ್‌ಸ್ಥಲಗಳೆಂದು ಸಿದ್ಧಾಂತಿಸಿದರು ದಿವ್ಯದಾರ್ಶನಿಕರಾಗಿ! ಈ ಸರ್ವಜ್ಞತ್ವಾದಿ ಷಡ್ಗುಣಗಳೇ ಜೀವನದ ನೈಜ ಸಂಪತ್ತು; ಮೌಲ್ಯ ಸಂಪತ್ತು. ಮಾನವತೆಗೆ ಪೂರ್ಣತ್ವ ವನ್ನು ತರುವ ಸಾರಾಯ ಸಂಪತ್ತು; ವಿಡಾಯ ಸಂಪತ್ತು. ಇಲ್ಲಿದೆ ಆರರ ಗುಣ್ಪು; ಆರರ ಸೊಂಪು.

ಇನ್ನು ತಾತ್ತ್ವಿಕ ವಿಭಾಗಕ್ಕೆ ಬಂದರೆ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಆರಕ್ಕೆ ಪರಿವಿಡಿದು ಪೃಥ್ವಿ, ಅಪ್, ತೇಜ, ವಾಯು, ಆಕಾಶ, ಆತ್ಮಗಳು ಸಮಷ್ಟಿ ಅಂಗಗಳಾಗಿವೆ. ಇವು ಬ್ರಹ್ಮಾಂಡ ಭರಿತಗಳು. ಇವು ವ್ಯಷ್ಟಿಯಾಗಿ ಪಿಂಡಾಂಡ ಗಳಲ್ಲಿಯೂ ಇವೆ. ಪಾರ್ಥಿವ ತತ್ತ್ವವನ್ನು ಪರಿಪೂರ್ಣವಾಗಿ ಅಳವಡಿಸಿಕೊಂಡಾತ ಭಕ್ತ. ಸಾಲೀಲ ತತ್ತ್ವವನ್ನು ಸಂಪೂರ್ಣವಾಗಿ ಸಮನಿಸಿಕೊಂಡಾತ ಮಾಹೇಶ. ಆಗ್ನೇಯ ತತ್ತ್ವವನ್ನು ಅಖಂಡವಾಗಿ ಅರ್ಜಿಸಿದಾತ ಪ್ರಸಾದಿ; ವಾಯವೀಯ ತತ್ತ್ವವನ್ನು ನಿಶ್ಶೇಷ ವಾಗಿ ನೆರವೇರಿಸಿಕೊಂಡಾತ ಪ್ರಾಣಲಿಂಗಿ. ವ್ಯೋಮೀಯ ತತ್ತ್ವವನ್ನು ನಿಚ್ಚಳವಾಗಿ ಮಿಗಿಲಾಗಿ ಮೈಗೂಡಿಸಿಕೊಂಡಾತ ಶರಣ. ಆತ್ಮತತ್ತ್ವವನ್ನು ಅಖಂಡವಾಗಿ ಅಳವಡಿಸಿ ಕೊಂಡಾತ ಅಚ್ಚ ಐಕ್ಯ! ಮತ್ತು ೩೬ ತತ್ತ್ವಗಳನ್ನು ಶುದ್ಧಿಸಿ ವೃದ್ಧಿಸಿ ವಿಕಾಸಗೊಳಿಸಿ ಕೊಳ್ಳುವಿಕೆಯೆ ಷಟ್‌ಸ್ಥಲ ಧ್ಯೇಯ; ಷಟ್‌ಸ್ಥಲ ತತ್ತ್ವ ನಿರ್ಣಯ.

**ಷಟ್‌ಸ್ಥಲೋದಯ-ನಿರ್ಣಯ:**

ಈ ವಿಷಯ ಸಮಸ್ಯೆಯಲ್ಲದಿದ್ದರೂ ಇಂದು ಸಮಸ್ಯೆಯಾಗಿ ನಿಂತಿದೆ. ಕಾರಣ, ಇಂದಿನ ವಿದ್ವಾಂಸರು. ಇವರಿಗೆ ಹೆಚ್ಚಾಗಿ ಹನ್ನೆರಡನೆಯ ಶತಮಾನವೇ ಕಣ್ಮನಗಳಲ್ಲಿ ಕುಳಿತಿದೆ. ಅದಕ್ಕೆ ಹಿಂದೆ ಹೋಗುವ ಶಕ್ತಿಯಿಲ್ಲ. ಇದ್ದರೂ ಮೋಹ, ಮತ್ಸರ, ದುರಭಿ ಮಾನ, ಅದೂರದರ್ಶನಗಳು ಅಡ್ಡಿ ಆತಂಕವಾಗಿ ಕುಳಿತಿವೆ. ಮನೆ ಬಾವಿಯೇ ಬೃಹತ್ಸಾಗರ ಎಂದೆನ್ನುವ ಮನೋಭಾವದವರಿವರು. ಮನೆಯಿಂದಾಚೆ ಯಾವ ಜಲಾಶಯವಿದ್ದರೂ ಒಪ್ಪರು; ಒಕ್ಕುಡಿತವನ್ನೂ ಕುಡಿಯರು.

ಇವರು ಯಾರಿಗಾದರೂ ಷಟ್‌ಸ್ಥಲ ಮೂರ್ತಿ–ಚಕ್ರವರ್ತಿ–ಬ್ರಹ್ಮ ಎಂದು ಸಂಕೇತಿಸಿದರೆ ಅವರೇ ಷಟ್‌ಸ್ಥಲ ಸ್ಥಾಪಕರೆಂದು ಭ್ರಾಂತಿಸುವರು. ಇಂದಿಗೂ ಸರ್ವ ಶಿವಾಚಾರ್ಯರನ್ನು ಈ ವಿಶೇಷಣಗಳಿಂದ ಕರೆವ ರೂಢಿಯಿದೆ. ಇಷ್ಟು ಮಾತ್ರದಿಂದ ಷಟ್‌ಸ್ಥಲೋದಯ–ನಿರ್ಣಯ ಇಂದಾಯಿತೆಂದು ಹೇಳಿದರೆ ಇದು ಸರಿಯಲ್ಲ; ಸಪ್ರಮಾಣವೂ ಅಲ್ಲ; ಸತ್ ಪ್ರಮೇಯವೂ ಅಲ್ಲ.

ಷಟ್‌ಸ್ಥಲ ಸಿದ್ಧಾಂತದ ಬಗೆಗೆ ಸಿದ್ಧಾಂತ ಸಾಹಿತ್ಯವೆಂದು ದಿಗಂತ ವಿಶ್ರುತವಾಗಿರುವ ಶಿವ ರುದ್ರಾಗಮಗಳಲ್ಲಿ ಸಾಕಷ್ಟು ಪ್ರಮಾಣಗಳು ಪ್ರಾಪ್ತವಾಗುತ್ತಿವೆ. ಷಟ್‌ಸ್ಥಲ ಸಿದ್ಧಾಂತದ ಉದಯ ಶಿವನಿಂದಾಗಿದೆಯೆಂಬುದನ್ನು ಈಗಾಗಲೇ 'ಷಟ್‌ಸ್ಥಲ ಸಿದ್ಧಾಂತ' ಎಂಬೀ ವಿಭಾಗದಲ್ಲಿ ಉಲ್ಲೇಖಿಸಲಾಗಿದೆ. ಇನ್ನು ಷಟ್‌ಸ್ಥಲ ಸಿದ್ಧಾಂತ ನಿರ್ಣಯ ಜಗದ್ಗುರು ಆದಿ ರೇಣುಕ ಭಗವತ್ಪಾದರಿಂದ ಆದುದನ್ನು ವೀರಾಗಮ ಮತ್ತು ೮ ನೆಯ ಶತಮಾನದ ಸಿದ್ಧಾಂತ ಶಿಖಾಮಣಿಗಳು ಉದಂತವಾಗಿ ಉಗ್ಗಡಿಸಿವೆ. ಈ ದಿಶೆಯಲ್ಲಿ ಶಿವಯೋಗಿ ಶಿವಾಚಾರ್ಯರು ಅಗ್ರಗಣ್ಯರು. ಅವರ ನಿಲವು ನೀಳಾದುದು. ಅವರು ವೀರಶೈವ ಧರ್ಮ ಷಟ್‌ಸ್ಥಲ ಸಿದ್ಧಾಂತದ ಉತ್ಪಾದಕರು; ಉನ್ನತೋನ್ನತರು. ಷಟ್‌ಸ್ಥಲ ಸಿದ್ಧಾಂತದ ಸಮಗ್ರ ಸ್ವರೂಪವನ್ನು ಮುಮ್ಮೊದಲು ರೂಪಿಸಿದವರು; ಚಾರಿತ್ರವನ್ನು ಚಿತ್ರಿಸಿದವರು. ಷಟ್‌ಸ್ಥಲ ಸಿದ್ಧಾಂತದ ಮೂಲ ಯಾರು? ಮುಂದುವರಿದುದು ಯಾರಿಂದ? ಸ್ಥಲೋಪಸ್ಥಲಗಳೆಷ್ಟು? ಸಕೀಲ ಸಂಬಂಧವೇನು, ಯಾರಿಂದ? ಶಕ್ತಿಭಕ್ತಿಗಳಿಗೆ, ಅಂಗ–ಲಿಂಗಗಳಿಗೆ, ಹಸ್ತ ಮುಖಗಳಿಗೆ, ಪದಾರ್ಥ ಪ್ರಸಾದಗಳೆಷ್ಟು? ಅವುಗಳ ನೆಲೆ ಬೆಲೆ ಕಲೆ ಕಳೆಗಳೇನು? ಇವುಗಳಿಗೆಲ್ಲ ಮಾರ್ನುಡಿ ಸಿಕ್ಕುವುದು ಶಿವಾಗಮಗಳಲ್ಲಿ ಮತ್ತು ಸಿದ್ಧಾಂತ ಶಿಖಾಮಣಿಯಲ್ಲಿ! ಇವುಗಳ ಅನುಕರಣವನ್ನು ಈಚಿನ ಚನ್ನಬಸವಣ್ಣ ಮತ್ತು ತೋಂಟದ ಸಿದ್ಧಲಿಂಗ ಯತಿಗಳು ವಿಶೇಷವಾಗಿ ಮಾಡಿರುವವರಾದರೂ ಇವರಲ್ಲಿಯೂ ಪರಿಪೂರ್ಣತೆಯನ್ನು ಪಡೆಯಲಿಲ್ಲ. ತುಂಬು ನೋಟಕ್ಕೆ ಅಂದರೆ ಪೂರ್ಣ ದಾರ್ಶನಿಕತೆಗೆ ಶಿವಾಗಮ ಸಂಹಿತೆ ಸಿದ್ಧಾಂತ ಶಿಖಾಮಣಿಗಳನ್ನೆ ಮೊರೆ ಹೋಗಬೇಕಾಗುತ್ತದೆ. ಈ ದಿಶೆಯಲ್ಲಿ ಶಿವರುದ್ರಾಗಮ ಪ್ರಾಮಾಣಿಕ ಕ್ರಾಂತಿ ಸರ್ವಾದರ್ಶವಾದುದು; ಸಿದ್ಧಾಂತ ಶಿಖಾಮಣಿ 'ಶ್ರೀ ಷಟ್‌ಸ್ಥಲೋಧ್ಯನ್ಮಣಿ ಮತ್ತು ಶ್ರೀ ಗೋಪ್ಯ ಚಿಂತಾಮಣಿ' ಎಂದು ಎಡೆದೆರಹಿಲ್ಲದೆ ಉಗ್ಗಡಿಸಿದೆ. ಜಾಗತಿಕಾಕಾಶದಲ್ಲಿ ದಿನಮಣಿಯೊಬ್ಬನೇ ದೀಪ್ತಿಗೊಳ್ಳುವಂತೆ, ವೀರಶೈವ ಷಟ್‌ಸ್ಥಲಾಗಸದಲ್ಲಿ ಸಿದ್ಧಾಂತ ಶಿಖಾಮಣಿಯೊಂದೆ ಇಂದಿಗೂ ದೀಪ್ತಿಗೊಂಡಿದೆ. ಶಿವಾಚಾರ್ಯರ ಷಟ್‌ಸ್ಥಲ ಸಂಸ್ಕೃತಿಯನ್ನು ಭುವನದಲ್ಲಿ ಬೆಳಗುತ್ತಿದೆ. ಹೀಗೆ ಅನನ್ಯವಾಗಿ ಬೆಳಗಿಸುವ ದೀಪ್ತ ಶಕ್ತಿ ಶಿವಯೋಗಿ ಶಿವಾಚಾರ್ಯನಿಗೆ ಆತನ ಹಿಂದಿದ್ದ ಶಿವಾಚಾರ್ಯರ ಸತ್ ಸಂತತಿಯಿಂದ ಮೈವೆತ್ತು ಬಂದಿದೆ. "ಶೈವಾಗಮೇಷು ಸರ್ವೇಷು ಪುರಾಣೇಷ್ವಖಿಲೇಷು ಚ । ಪುರಾ ದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ ॥ ತತ್ಸಂ ಪ್ರದಾಯ ಸಿದ್ಧೇನ ರೇಣುಕೇನ ಮಹಾತ್ಮನಾ । ಗಣೇಶ್ವರೇಣ ಕಥಿತ ಮಗಸ್ತ್ಯಾಯ ಪುನಃ ಕ್ಷಿತೌ ॥

ವೀರಶೈವ ಮಹಾ ತಂತ್ರಮೇಕೋತ್ತರ ಶತಸ್ಥಲಂ । ಅನುಗ್ರಹಾಯ ಲೋಕಾನಾ ಮಭ್ಯ ಧಾತ್ ಸುಧಿಯಾಂ ವರಃ ||" —ರೇಣುಕಗೀತೆ!

ಈ ಪ್ರಮಾಣದಿಂದ ಶಿವನಿಂದ ಉದಯುವಾದರೂ ಶ್ರೀ ರೇಣುಕ ಶಿವಾಚಾರ್ಯರಿಂದ ನಿರ್ಣಯುವಾಗಿದೆ. ಇನ್ನೊಂದು ಬಗೆಯಲ್ಲಿ ಬಿತ್ತರಿಸುವದಾದರೆ, ಷಟ್‌ಸ್ಥಲ ಸೌಧದ ಅಡಿಗಲ್ಲು ಶಿವಾಚಾರ್ಯರ ಶಿವದೀಕ್ಷಾ ಸಂಸ್ಕಾರ! ಈ ಸಂಸ್ಕಾರದಿಂದ ಷಟ್‌ಸ್ಥಲಕ್ಕೆ ಮುಖ್ಯ ವಾಗಿ ಬೇಕಾದ ಅಂಗ-ಲಿಂಗಗಳ ಉದಯ. ಅಂಗ ಮೂರಾಗಿ ಆರಾಗುತ್ತದೆ.. ಲಿಂಗವೂ ಮೂರಾಗಿ ಆರಾಗುತ್ತದೆ. ಶ್ರೀ ಗುರು ದೇವನ ಘನವಾದ ಯೌಗಿಕ ಮತ್ತು ಸಾಂಸ್ಕಾರಿಕ ದೀಪ್ತಿ ಶಕ್ತಿಗಳಿಂದ! ಶ್ರೀ ಗುರುದೇವನ ಕಳಾಮಯ ಕಲಾಮಯ ಶಕ್ತಿ ದ್ವಯದಿಂದ ಅಷ್ಟಾವರಣ-ಷಟ್‌ಸ್ಥಲಗಳ ಅತ್ಯೂರ್ಜಿತ ಆವಿಷ್ಕಾರ! ಅತ್ಯೂರ್ಜಿತ ಪರಿಷ್ಕಾರ!! ಶಿವಾಚಾರ್ಯ ಕಾರುಣ್ಯದಿಂದ ಉಂಟಾದ ಅಂಗ-ಲಿಂಗಗಳ ಆಧಾರದ ಮೇಲೆ ಅಂಗ ಷಟ್‌ಸ್ಥಲ-ಲಿಂಗ ಷಟ್‌ಸ್ಥಲಗಳ ಕರುಮಾಡಗಳು. ಇಲ್ಲವಾದರೆ ಇಲ್ಲ. ಚಾರಿತ್ರಿಕವಾಗಿ ಮತ್ತು ತಾತ್ವಿಕ ವಾಗಿ ಶಿವಾಚಾರ್ಯರಿಂದಲೇ ಷಟ್‌ಸ್ಥಲೋದಯ ಮತ್ತು ಷಟ್‌ಸ್ಥಲ ನಿರ್ಣಯ. ಇದಕ್ಕಾ ಗಿಯೇ ಜಗದ್ಗುರು ಆದಿ ರೇಣುಕ ಶಿವಾಚಾರ್ಯರ ಅವತಾರ! ಅಗಸ್ತ್ಯ ಮಹಾ ಮುನಿಗೆ ಷಟ್‌ಸ್ಥಲ ಸಿದ್ಧಾಂತೋಪದೇಶ! ಸರ್ವ ಸಮಗ್ರೋಪದೇಶ!! ಮಾನವ ಜೀವನ ನಿರ್ಣಯದ ನಿಜ ಸಂದೇಶ! ಜೀವನದ ಸರ್ವಾಂಗೀಣ ಭಾಗ-ವಿಭಾಗಗಳಲ್ಲಿ ಹಾಸು ಹೊಕ್ಕಾಗುವಂತೆ ಪರಿಶೋಧಿಸಿ ಪರಷ್ಕರಿಸಿ ಕಳೆ-ಕಲೆಗಳನ್ನು ಕರುಣಿಸಿದ ಆದೇಶ-ನಿರ್ದೇಶ! ಪೂರ್ಣ ನಿರ್ಣಯದ ಕಾರುಣ್ಯ! ನಿರುಪಮ ನಿರ್ದೇಶ ದರ್ಶನ! ಪಿಂಡಾಂಡದ ಪಾರ್ಥಿವಾಂಶ ಗಳನ್ನೆಲ್ಲ ಪರಿಶೋಧಿಸಿ ಪರಿಷ್ಕರಿಸಿ ಅನುಗ್ರಹಿಸಿದುದೆ ಭಕ್ತಾಂಗ; ಅದೇ ಪಾರ್ಥಿವ ತತ್ತ್ವವಚ್ಛಿನ್ನ ಆತ್ಮವನ್ನು ಪರಿಶೋಧಿಸಿ ಪರಿಷ್ಕರಿಸಿ ಅನುಗ್ರಹಿಸಿದುದೆ ಆಚಾರಲಿಂಗ. ಪಿಂಡಾಂಡದ ಸಾಲೀಲಾಂಶಗಳನ್ನೆಲ್ಲ ಪರಿಶೋಧಿಸಿ-ಪರಿಷ್ಕರಿಸಿ ಅನುಗ್ರಹಿಸಿದುದೆ ಮಾಹೇ ಶಾಂಗ; ಅದೇ ಸಾಲೀಲ ತತ್ವಾವಚ್ಛಿನ್ನ ಆತ್ಮವನ್ನು ಪರಿಶೋಧಿಸಿ ಪರಿಷ್ಕರಿಸಿ ಅನುಗ್ರಹಿಸಿ ದುದೆ ಗುರುಲಿಂಗ. ಪಿಂಡಾಂಡದ ಭೌತಾಗ್ನೇಯಾಂಶಗಳನ್ನೆಲ್ಲ ಪರಿಶೋಧಿಸಿ ಪರಿಷ್ಕರಿಸಿ ದುದೆ ಪ್ರಸಾದ್ಯಂಗ; ಅದೇ ಭೌತಾಗ್ನೇಯಾವಚ್ಛಿನ್ನ ಆತ್ಮ ಷರಿಶೋಧಿಸಿ ಪರಷ್ಕರಿಸಿದುದೆ ಶಿವಲಿಂಗ. ಶಿಷ್ಯನ ಪಿಂಡಾಂಡದ ಭೌತ ವಾಯ್ವಂಶಗಳನ್ನೆಲ್ಲ ಪರಿಶೋಧಿಸಿ ಪರಿಷ್ಕರಿಸಿ ಚೇತನಿಸ ಹಚ್ಚಿದುದೆ ಪ್ರಾಣಲಿಂಗ್ಯಂಗ; ಅದೇ ಪ್ರಾಣಲಿಂಗ್ಯ ಗಾವಚ್ಛಿನ್ನಾತ್ಮವನ್ನು ಪರಿಶೋಧಿಸಿ ಪರಿಷ್ಕರಿಸಿದುದೆ ಚರಲಿಂಗ! ಶಿಷ್ಯನ ಭೌತ ವ್ಯೋಮಾಂಶಗಳನ್ನು ಪರಿಶೋಧಿಸಿ ಪರಿಷ್ಕರಿಸಿದ ಪದವೆ ಶರಣಾಂಗ; ಅದೇ ಭೌತವ್ಯೋಮಾಂಗಾವಚ್ಛಿನ್ನಾತ್ಮವನ್ನು ಪರಿಶೋಧಿಸಿ ಪರಿಷ್ಕರಿಸಿ ಅರ್ಥವತ್ತತೆಯನ್ನುಂಟುವ ಗುರುಕಾರುಣ್ಯವೆ ಪ್ರಸಾದಲಿಂಗ. ಶಿಷ್ಯನ ಭೌತಾತ್ಮವನ್ನು ಪರಿಶೋದಿಸಿ ಪರಿಷ್ಕರಿಸಿದ ಪರಿಭಾವವೇ ಐಕ್ಯಾಂಗ; ಅದೇ ಭಾವಾತ್ಮಾವಷ್ಟಂಭಿಸಿರುವ ಅಂತರಾತ್ಮವನ್ನು ಪರಿಶೋಧಿಸಿ ವಿಸ್ತಾರ (ವಿಕಾಸ) ಗೊಳಿಸಿ ದುದೆ ಮಹಾಲಿಂಗ ಅಥವಾ ಪರಮಾತ್ಮ! ಅದುವೆ ಶಿಷ್ಯಾಂಗ-ಶ್ರೀ ಗುರುಲಿಂಗ

ಸಾಮರಸ್ಯವೆ ಶಿವಯೋಗ; ಮಹಾಚೇತನ(ಲಿಂಗ) ಯೋಗ. ಅದುವೆ ಪೂರ್ಣಾಖಂಡ ಯೋಗ. ಇದು ಷಟ್‌ಸ್ಥಲ ಸಿದ್ಧಾಂತದ ಸಮ್ಯಕ್ ದರ್ಶನ. ಸ್ವಯ ಸಮ್ಯಕ್ ಸಮೀಕ್ಷಣ.

ವೀರಶೈವ ಸಿದ್ಧಾಂತದಂತೆ ಶ್ರೀಗುರುದೇವನ ಶಿವದೀಕ್ಷಾ ಸಂಸ್ಕಾರವಿಲ್ಲದೆ ಭವಿತನ ಕಳೆಯದು; ಭಕ್ತತನಬಾರದು. ಭಕ್ತತ್ವಬಾರದೆ, ಷಟ್‌ಸ್ಥಲ ಸಮನಿಸದು. ಪರಿಶೀಲಿಸಿ ಪರಿಕ್ಷಿಸಿದರೆ, ಆಚಾರ, ವಿಚಾರ, ಎಚ್ಚರ ಇವು ಪರಿವಿಡಿದು ಭಕ್ತ ಮಾಹೇಶ ಪ್ರಸಾದಿ ಸ್ಥಲ ಸಂಕೇತಗಳು ಮತ್ತು ಈ ಮೂರು ಮಾರ್ಗಕ್ರಿಯೆಗಳು; ಅನುಭವ, ಆನಂದ, ಅವಿರಳ ಇವು ಪರಿವಿಡಿದು ಪ್ರಾಣಲಿಂಗಿ, ಶರಣ ಐಕ್ಯಸ್ಥಲ ಸಂಕೇತಗಳು. ಇವು ಮೀರಿದ ಕ್ರಿಯೆಗಳು. ಪ್ರಾಮಾಣಿಕ ಜೀವನ ಪ್ರಕ್ರಿಯೆಗಳು. ಪರಮಾರ್ಥ ಪ್ರದಾಯಕಗಳು ಅಂಗ ಲಿಂಗೈಕ್ಯ ಪ್ರವರ್ತಕಗಳು. ಲೋಕ ಕಲ್ಯಾಣ ಕಾರಕಗಳು.

## ಶ್ರೀಗುರು ಸ್ರಷ್ಟಾರ ಮತ್ತು ದ್ರಷ್ಟಾರ!

ಅಂಗ ಷಟ್‌ಸ್ಥಲ ಸ್ರಷ್ಟಾರ ಶ್ರೀಗುರು, ಲಿಂಗಷಟ್‌ಸ್ಥಲ ದ್ರಷ್ಟಾರ ಶ್ರೀಗುರು. ಅಂತೆಯೇ ಶ್ರೀಗುರು ಷಟ್‌ಸ್ಥಲ ಬ್ರಹ್ಮ ಮತ್ತು ಚಕ್ರವರ್ತಿ! ಭಕ್ತ ಮಾಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಈ ಆರು ಅಂಗಸ್ಥಲಗಳನ್ನು ತನ್ನ ಸಾಂಸ್ಕಾರಿಕ ಸಾಮರ್ಥ್ಯ ದಿಂದ, ಸೃಷ್ಟಿಸಿ ಶ್ರೀಗುರು ಬ್ರಹ್ಮಯೆನಿಸಿದರೆ, ಆಚಾರ ಗುರು, ಶಿವ, ಚರ, ಪ್ರಸಾದಃ ಮಹಾಲಿಂಗ ಸ್ಥಲಗಳನ್ನು ಸಮೀಕ್ಷಿಸಿ ಆವಿಷ್ಕರಿಸಿದ ನಿಮಿತ್ತವಾಗಿ ಶ್ರೀಗುರು ಚಕ್ರವರ್ತಿ ಯೆನಿಸಿರುವನು. ಇದರಿಂದಾಗಿ ಶ್ರೀಗುರುವಿಗೆ ಬ್ರಹ್ಮ-ಚಕ್ರವರ್ತಿ ಇವೆರಡು ವಿಶೇಷಣ ಗಳು ಅಥವಾ ಪ್ರಶಸ್ತಿಗಳು ಔಚಿತ್ಯಪೂರ್ಣವಾಗಿವೆ. ಅನಾದಿ ಸಂಸಿದ್ಧವೂ ಪ್ರಸಿದ್ಧವೂ ಆಗಿವೆ.

ಷಟ್‌ಸ್ಥಲಾರಾಧನೆಗೆ ಅಷ್ಟ ಸಕೀಲಗಳನ್ನು ಶ್ರೀಗುರು ನಿರ್ಣಯಿಸಿ ಆರ್ನೆಲೆ ಕಲೆ ಗಳಿಗೂ ಸರಿಯಾಗಿ ನಿಯೋಜಿಸಿ ದರ್ಶನ ಶಕ್ತಿಯನ್ನು ಪ್ರದರ್ಶಿಸಿದ್ದಾನೆ—ಶ್ರೀಗುರು ಅಂಗ-ಲಿಂಗ, ಭಕ್ತಿ-ಶಕ್ತಿ, ಹಸ್ತ-ಮುಖ, ಪದಾರ್ಥ-ಪ್ರಸಾದ ಇವು ಎಂಟು ಸಕೀಲಗಳು. ಇವುಗಳಲ್ಲಿ ಭಕ್ತಿ-ಹಸ್ತ-ಪದಾರ್ಥಗಳು ಅಂಗನಿಷ್ಠ ಸಕೀಲಗಳು; ಶಕ್ತಿ-ಮುಖ-ಪ್ರಸಾದ ಗಳು ಲಿಂಗನಿಷ್ಠ ಸಕೀಲಗಳು.

"ಏವಮಂಗಂ ಚ ಲಿಂಗಂ ಚ ಭಕ್ತಿಂ ಚ ಶಕ್ತಿಂ ಚ ತಥಾ।
ಮುಖಂ ಹಸ್ತಂ ಪದಾರ್ಥಂ ಚ ಪ್ರಸಾದಂ ಜ್ಞಾತ್ವಾಽಭ್ಯರ್ಚಯೇತ್॥"

—ಕಾರಣಾಗಮ

ಅಂಗ-ಲಿಂಗಗಳಂತೆ ಉಳಿದ ಭಕ್ತಿ-ಶಕ್ತಿ ಹಸ್ತ-ಮುಖ ಪದಾರ್ಥ-ಪ್ರಸಾದಗಳು ಪ್ರತಿ ಯೊಂದು ಆರಾರು ಬಗೆಯಾಗಿವೆ. ಶ್ರದ್ಧೆ, ನಿಷ್ಠೆ ಅವಧಾನ ಅನುಭವ ಆನಂದ, ಸಮರಸ ಇವು ಷಡ್ಭಕ್ತಿಗಳು, ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ,

ಚಿಚ್ಛಕ್ತಿ—ಇವಾರು ಶಕ್ತಿಗಳು. ಚಿತ್ತ, ಬುದ್ಧಿ, ಅಹಂಕಾರ, ಮನ, ಜ್ಞಾನ, ಭಾವ-ಇವು ಆರು ಹಸ್ತಗಳು. ಮೂಗು, ನಾಲಿಗೆ, ಕಣ್ಣು, ತೊವಲು, ಕಿವಿ, ಹೃದಯ—ಇವಾರು ಮುಖಗಳು. ಗಂಧ, ರಸ, ರೂಪು, ಸ್ಪರ್ಷ, ಶಬ್ದ, ತೃಪ್ತಿ-ಇವಾರು ಪದಾರ್ಥಗಳು. ಸುಗಂಧ, ಸುರಸ, ಸುರೂಪು, ಸುಸ್ಪರ್ಶ, ಸಶಬ್ದ, ಸುತೃಪ್ತಿ-ಇವಾರು ಪ್ರಸಾದಗಳು, ಕ್ರಿಯಾಶಕ್ತಿಯುಕ್ತ ಆಚಾಗಲಿಂಗದಲ್ಲಿ ಶ್ರದ್ಧೆ, ಜ್ಞಾನಶಕ್ತಿಯುಕ್ತ ಗುರುಲಿಂಗದಲ್ಲಿ ನಿಷ್ಠೆ, ಇಚ್ಛಾಶಕ್ತಿಯುಕ್ತ ಶಿವಲಿಂಗದಲ್ಲಿ ಅವಧಾನ, ಆದಿಶಕ್ತಿಯುಕ್ತ ಚರಲಿಂಗದಲ್ಲಿ ಅನುಭವ, ಪರಾಶಕ್ತಿಯುಕ್ತ ಪ್ರಸಾದಲಿಂಗದಲ್ಲಿ ಆನಂದ, ಚಿಚ್ಛಕ್ತಿಯುಕ್ತ ಮಹಾಲಿಂಗದಲ್ಲಿ ಸಮರಸ ಭಕ್ತಿಗಳನ್ನು ಪರಿವಿಡಿದು ಆರಂಗರು ಇರಿಸಿಕೊಳ್ಳಬೇಕು.

## ಷಡ್ಲಿಂಗಾರ್ಪಣ ಸದ್ಭಾವ ವಿಧಾನ

ಇದನ್ನು ಶಿವಾಗಮಿಕ ಶಿವಾಚಾರ್ಯರು ಕಂಡುಹಿಡಿದ ವಿಶೇಷ ದರ್ಶನ. ಷಟ್‌ಸ್ಥಲಾತ್ಮಕ ಅರ್ಚನ ವಿಧಾನ ಮುಗಿದ ಬಳಿಕ ಷಡ್ಲಿಂಗಗಳಿಗೆ ಸಮರ್ಪಣ ವಿಧಾನ ಷಟ್ಪ್ರಕಾರವಾಗಿರುತ್ತದೆ. ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳಿಗೆ ಪರಿವಿಡಿದು ಪದಾರ್ಥದ ರೂಪು-ರುಚಿ-ತೃಪ್ತಿಗಳ ತ್ರಿವಿಧಾರ್ಪಣ ಒಂದು ಬಗೆ! ಇದು ಪರಿವಿಡಿದು ಕ್ರಿಯಾರ್ಪಣ, ಜ್ಞಾನಾರ್ಪಣ, ಭಾವಾರ್ಪಣ ರೂಪದಲ್ಲಿ ವಿನ್ಯಾಸಗೊಳ್ಳುತ್ತದೆ. ಅರ್ಚನ ಮಾರ್ಗದಲ್ಲಿ ಅರ್ಪಣವಿರುತ್ತದೆಯಾದರೂ ಸಾಮಾನ್ಯವಾಗಿರುತ್ತದೆ. ಅರ್ಚನ ಪ್ರಧಾನವಾಗಿರುತ್ತದೆ. ಅರ್ಪಣ ಮಾರ್ಗ್ಗದಲ್ಲಿನ ಅರ್ಪಣ ವಿಶೇಷವಾಗಿದ್ದು, ಅರ್ಪಣವೇ ಪ್ರಧಾನವಾಗಿರುತ್ತದೆ. ತ್ರಿವಿಧಾರ್ಪಣ ತ್ರಿವಿಧ ಲಿಂಗಗಳಿಗೆ ರೂಪು-ರುಚಿ ತೃಪ್ತಿಗಳ ಅರ್ಪಣ ಮಾತ್ರವಿರುತ್ತದೆ. ಷಡ್ಲಿಂಗಗಳಿಗೆ ಷಟ್‌ಪದಾರ್ಥಾರ್ಪಣವಿರುತ್ತದೆ. ಅದಿಂತಿದೆ ಕಾರಣಾಗಮದಲ್ಲಿ:

"ಭಕ್ತಸ್ಥಲೇ ಕ್ರಿಯಾಶಕ್ತಿಯುತೇ ವೈ ನಾಸಿಕಾಂಗಗೇ
ಆಚಾರಲಿಂಗ ಸಂಜ್ಞೇಽಸ್ಮಿನ್ ಸದ್ಯೋಜಾತ ಮುಖಾತ್ಮಕೇ।
ಗಂಧಪ್ರಸಾದಂ ಸದ್ಭಕ್ತ್ಯಾ ಚಿತ್ತಹಸ್ತೇನ ಚಾರ್ಪಯೇತ್॥"

ಭಕ್ತಸ್ಥಲದಲ್ಲಿ ನಾಸಿಕಾಂಗನು ಕ್ರಿಯಾಶಕ್ತಿಯಿಂದ ಕೂಡಿದ ಆಚಾರಲಿಂಗದ ಸದ್ಯೋಜಾತ ಮುಖದಲ್ಲಿ ಗಂಧ ಪದಾರ್ಥವನ್ನು ಚಿತ್ತಹಸ್ತದಿಂದ ಸದ್ಭಕ್ತಿ (ಶ್ರದ್ಧೆ)ಯಿಂದ ಅರ್ಪಿಸುತ್ತಾನೆ; ಆಗ ಅದು 'ಸುಗಂಧ' ಪ್ರಸಾದವಾಗುತ್ತದೆ.

"ಮಾಹೇಶ್ವರಸ್ಥಲೇ ಜ್ಞಾನಶಕ್ತಿಕೇ ರಸನಾಂಗಗೇ
ಗುರುಲಿಂಗಾಭಿಧೇ ವಾಮದೇವವಕ್ತ್ರೇ ವಿಶೇಷತಃ।
ಬುದ್ಧಿ ಹಸ್ತೇನ ತು ರುಚಿಂ ನಿಷ್ಠಾಭಕ್ತ್ಯಾ ಸಮರ್ಪಯೇತ್॥"

ಮಾಹೇಶ್ವರ ಸ್ಥಲದಲ್ಲಿ ರಸನಾಂಗನು ಜ್ಞಾನಶಕ್ತಿಯುಕ್ತ ಗುರುಲಿಂಗದ ವಾಮದೇವ ಮುಖದಲ್ಲಿ ರುಚಿ(ರಸ) ಪದಾರ್ಥವನ್ನು ಬುದ್ಧಿಹಸ್ತದಿಂದ ನಿಷ್ಠಾಭಕ್ತಿಯುಕ್ತನಾಗಿ ಸಮರ್ಪಿಸುತ್ತಾನೆ. ಆಗ ಅದು ಸುರುಚಿ ಅಥವಾ ಸುರಸ ಪ್ರಸಾದವಾಗುತ್ತದೆ.

"ಸ್ಥಿತೀ ಪ್ರಸಾದಿಸಂಜ್ಞೇಽಸ್ಮಿನ್ನಿಚ್ಛಾಶಕ್ತಿ ಸಮನ್ವಿತೇ!
ದೃಗಂಗಕೇಽ ಘೋರಮುಖೇ ಶಿವಲಿಂಗಾಭಿದೇ ಪುನಃ|
ಭಕ್ತ್ಯಾಽವಧಾನಯಾ ರೂಪಯು ಹಂಕಾರೇಣ ಚಾರ್ಪಯೇತ್||"

ಪ್ರಸಾದಿಸ್ಥಲದಲ್ಲಿ ನೇತ್ರಾಂಗನು ಇಚ್ಛಾಶಕ್ತಿ ಸಮನ್ವಿತ ಶಿವಲಿಂಗದ ಅಘೋರ ಮುಖಕ್ಕೆ ರೂಪ ಪದಾರ್ಥವನ್ನು ಅವಧಾನ ಭಕ್ತಿಭರಿತನಾಗಿ ಅರ್ಪಿಸುತ್ತಾನೆ. ಆಗ ಅದು ಸುರೂಪ ಪ್ರಸಾದವಾಗುತ್ತದೆ.

"ಪ್ರಾಣಲಿಂಗಿಸ್ಥಲೇ ತ್ವಾದಿಶಕ್ತಿಯುಕ್ತೇ ತ್ವಗಂಗಗೇ|
ಚರಲಿಂಗಾಭಿಧೇ ತತ್ಪುರುಷವಕ್ತ್ರೇ ದೃಢವ್ರತಃ|
ಭಕ್ತ್ಯಾಽನುಭವಯಾ ಮನೋಹಸ್ತೇನ ಸ್ಪರ್ಶಮರ್ಪಯೇತ್||"

ಪ್ರಾಣಲಿಂಗಿಸ್ಥಲದಲ್ಲಿ ತ್ವಗಂಗನು ಆದಿಶಕ್ತಿಯುಳ್ಳ ಚರಲಿಂಗದ ತತ್ಪುರುಷಮುಖಕ್ಕೆ ಸ್ಪರ್ಶ ಪದಾರ್ಥವನ್ನು ದೃಢವ್ರತನಾಗಿ ಅನುಭವ ಭಕ್ತಿಯಿಂದ ಅರ್ಪಿಸುತ್ತಾನೆ. ಅರ್ಪಿಸಿದ ಬಳಿಕ ಸ್ಪರ್ಶ ಪದಾರ್ಥ ಸುಸ್ಪರ್ಶ ಪ್ರಸಾದವಾಗುತ್ತದೆ.

"ಶರಣಸ್ಥಲೇ ತು ಪರಯಾ ಶಕ್ತ್ಯಾಯುಕ್ತೇ ಶ್ರವೋಂಗಗೇ|
ಪ್ರಸಾದಲಿಂಗೇ ತ್ವೀಶಾನಮುಖೇ ಶಬ್ದ ಪ್ರಸಾದಕಂ|
ಆನಂದಭಕ್ತ್ಯಾ ಸುಜ್ಞಾನ ಹಸ್ತೇನೈವ ಸಮರ್ಪಯೇತ್||"

ಶರಣಸ್ಥಲದಲ್ಲಿ ಶ್ರೋತ್ರಾಂಗನು ಪರಾಶಕ್ತಿಯುಕ್ತ ಪ್ರಸಾದ ಲಿಂಗದ ಈಶಾನ ಮುಖಕ್ಕೆ ಶಬ್ದ ಪದಾರ್ಥವನ್ನು ಆನಂದ ಭಕ್ತಿಯಿಂದ ಅರ್ಪಿಸುತ್ತಾನೆ. ಅರ್ಪಿಸಿದ ಶಬ್ದ ಪದಾರ್ಥವು ಸುಶಬ್ದ ಪ್ರಸಾದವಾಗುತ್ತದೆ.

"ಐಕ್ಯಸ್ಥಲೇ ತು ಚಿಚ್ಛಕ್ತಿಯುತೇ ವೈ ಮಾನಸಾಂಗಗೇ|
ಮಹಾಲಿಂಗೇ ಪರಶಿವಮುಖೇ ಸಂಕಲ್ಪ ಮರ್ಪಯೇತ್|
ಸದ್ಭಾವಾಭಿಖ್ಯೆ ಹಸ್ತೇನ ಭಕ್ತ್ಯಾ ಸಮರಸಾಖ್ಯಯಾ||"

ಐಕ್ಯಸ್ಥಲದಲ್ಲಿ ಮಾನಸಾಂಗನು ಚಿಚ್ಛಕ್ತಿಯುಕ್ತ ಮಹಾಲಿಂಗದ ಪರಶಿವಮುಖಕ್ಕೆ ಸಂಕಲ್ಪ ಪದಾರ್ಥವನ್ನು ಸಮರಸ ಭಕ್ತಿಯಿಂದ ಸಮರ್ಪಿಸುತ್ತಾನೆ. ಅರ್ಪಿಸಿದ ಸಂಕಲ್ಪ ಪದಾರ್ಥವು ಸುಸಂಕಲ್ಪ ಪ್ರಸಾದವಾಗುತ್ತದೆ. ಅರ್ಚನದಲ್ಲಿ ಅರ್ಪಣವಿದೆ; ಅರ್ಪಣದಲ್ಲಿ ಅರ್ಚನವಿದೆ. ಅರ್ಚನ ಪ್ರಧಾನ ಅರ್ಪಣದಲ್ಲಿ ಅರಿವು ಕರಿಗೊಂಡಿರುತ್ತದೆ; ಅರ್ಪಣಪ್ರಧಾನ ಅರ್ಚನದಲ್ಲಿ ಅನುಭವ ಕರಿಗೊಂಡಿರುತ್ತದೆ. ಅರ್ಚನಾರ್ಪಣ ಕ್ರಿಯೆಯಲ್ಲಿ ದ್ವೈತ, ಅರ್ಪಣಾರ್ಚನ ದೃಕ್ಕ್ರಿಯೆಯಲ್ಲಿ ದ್ವೈತಾದ್ವೈತ; ಅರ್ಚನಾರ್ಪಣ ದೃಕ್ರಿಯಾನುಭೂತಿ ನಿಷ್ಪತ್ತಿಗೊಂಡಲ್ಲಿ ಶಿವಾದ್ವೈತ— ಇವುಂಟಾಗುತ್ತವೆ. ಪರಿವಿಡಿದು ಅರ್ಚನಭಾವ, ಅರ್ಪಣ ವಿಭಾವ, ಇವೆರಡರಿಂದುಂಟಾದ ಪರಿಣಾಮ ಅನುಭವ! ಆ ಪರಿಣಾಮ ಪರಿಭಾಷೆಯಲ್ಲಿ

ಹೊರಹೊಮ್ಮಿದಲ್ಲಿ ಅದೇ ಅನುಭಾವ! ಈ ಅಭಿವ್ಯಕ್ತಿಯಲ್ಲಿ ಸ್ವಾನುಭೂತಿಯಿದೆ. ಇದುವೆ ಶಿವಾಗಮ ಸಂಪ್ರೋಕ್ತ ಮಹಾರ್ಚನ, ಇದುವೆ ಮಹಾರ್ಪಣ; ಇದುವೆ ಮಹಾನುಭವ; ಇದುವೆ ಮಹತೋ ಮಹೀಯಾನ್! ಇದುವೇ ಷಟ್‌ಸ್ಥಲ ಸಿದ್ಧಾಂತದ ದರ್ಶನ ಸಮೀಕ್ಷೆ! ಇದರಿಂದ ಪುನರ್ಜನ್ಮವುಂಟಾಗದು. ಉಂಟಾಗದಿರುವಿಕೆಯೆ ಮಹಾ ಫಲ. ಈ ಮಹಾಫಲವನ್ನೊದವಿಸುತ್ತದೆ. ಶಿವರುದ್ರಾಗಮ ಸುರದ್ರುಮ!

"ಏವಂ ಮಹಾರ್ಚನಂ ಪ್ರೋಕ್ತಂ ಮಹಾದೇವಿ ಮಹಾಫಲಂ।
ವಿಧಿನಾಽನೇನ ಸಂಪೂಜ್ಯ ನ ಪುನರ್ಜನ್ಮಭಾಗ್ಭವೇತ್॥
ದೇವೇಶಿ ಗುರುಪೂಜಾಯಾಂ ವಿಶೇಷಃ ಕಥ್ಯತೇ ಶೃಣು।"

—ಕಾರಣಾಗಮ

ಷಟ್‌ಸ್ಥಲ ಸಿದ್ಧಾಂತದ ಸಾಧನ ಸಿದ್ಧಿಗಳಿಗೆ ಗುರುಕಾರುಣ್ಯವೇ ಮೂಲವೆಂದು ಬೇರೆ ಬಿತ್ತರಿಸಬೇಕಿಲ್ಲ. ಗುರುಕಾರುಣ್ಯವಿಲ್ಲವಾದರೆ ಅಸಲು ಭಕ್ತಸ್ಥಲವೇಬಾರದು. ಅಂದ ಬಳಿಕ ಮುಂದಿನ ಅಯ್ದು ಸ್ಥಲಗಳ ಮಾತೆಲ್ಲಿ? ಅಂತೆಯೆ ಆಗಮ ಸಂಹಿತೆ ನಿರೂಪಿಸಿದೆ ಲಿಂಗಪೂಜೆಯು ಷಟ್‌ಸ್ಥಲಕ್ಕಿಂತ ಗುರುಪೂಜೆಯು ಷಟ್‌ಸ್ಥಲದಲ್ಲಿ ವಿಶೇಷವಿದೆಯೆಂಬುದಾಗಿ! ಅಂತೆಯೇ ಷಡಂಗಸ್ರಷ್ಟಾರ ಶ್ರೀಗುರು, ಷಡ್ಲಿಂಗದ್ರಷ್ಟಾರ ಶ್ರೀಗುರು. ಜೊತೆಗೆ ಷಟ್‌ಸ್ಥಲ ರೂಪ ಷಡಂಗ ಷಡ್ಲಿಂಗಗಳ ಅರ್ಚನಾರ್ಪಣಗಳ ದಷ್ಟಾರನೂ ಅಹುದು.

## ಸಮಗ್ರ ಷಡ್ವಿದಾರ್ಚನಾರ್ಪಣಾನುಭವ!

ಷಡ್ವಿಧಾರ್ಚನಾರ್ಪಣಗಳಿಗೆ ಮೂಲ ಅಂಗ–ಲಿಂಗ, ಭಕ್ತಿ–ಶಕ್ತಿ, ಹಸ್ತ–ಮುಖ, ಪದಾರ್ಥ–ಪ್ರಸಾದ ಈ ಅಷ್ಟ ಸಕೀಲಗಳು. ಇವಿಲ್ಲದೆ ಅರ್ಚನ–ಅರ್ಪಣಗಳು ಅಳವಡವು. ಇವೆಲ್ಲದರ ಅನುಭವವೇ ಸಮಗ್ರ ಅನುಭವ! ಅಷ್ಟ ಸಕೀಲಗಳಲ್ಲಿ ಏನೆಲ್ಲವೂ ಇದೆ. ವ್ಯಷ್ಟಿ ಸಮಷ್ಟಿ ಸೃಷ್ಟಿ ತತ್ತ್ವಗಳೆಲ್ಲವೂ ಇವೆ. ಸಕಲ–ಸಕಲ ನಿಷ್ಕಲ–ನಿಷ್ಕಲ ಚೈತನ್ಯಗಳೂ ಇವೆ. ಷಡ್ವಿಧಾರ್ಚನಾರ್ಪಣ ವಿಧಾನದಲ್ಲಿ ಷಡಂಗ–ಷಡ್ಲಿಂಗ, ಷಡ್ಭಕ್ತಿ–ಷಟ್‌ಶಕ್ತಿ, ಷಡ್‌ಹಸ್ತ–ಷಣ್ಮುಖ, ಷಟ್‌ಪದಾರ್ಥ–ಷಟ್‌ಪ್ರಸಾದಗಳ (೪೮) ಸ್ವಯಾನುಭವ ಸಮನಿಸುತ್ತದೆ. ಇಷ್ಟರ ಮೇಲೆ ಇನ್ನು ಬೇರೆ ಅನುಭವವಿಲ್ಲ. ಅನುಭಾವ್ಯವಸ್ತುವೂ ಇಲ್ಲ. ಚಿದಂಬರ ಶೂನ್ಯದಲ್ಲಿ ಅವಿಕೃತವಾಗಿ ಪರಿಣಾಮಗೊಂಡಿರುವವೇ ಈ ವ್ಯಷ್ಟಿ–ಸಮಷ್ಟಿ ಅಷ್ಟ ಸಕೀಲಗಳು. ಶೂನ್ಯವೇ ಬೀಜ; ಶೂನ್ಯದಿಂದೊಗೆದ ಅಷ್ಟ ಸಕೀಲಗಳೇ ಬೃಹದ್ಬೀಜ! ಬೀಜ ಬಿಟ್ಟು ಮರವಿಲ್ಲ; ಮರ ಬಿಟ್ಟು ಬೀಜವಿಲ್ಲ. ಪರಸ್ಪರತೆಯಿದೆ ಷಡ್ವಿಧಾರ್ಚನಾರ್ಪಣಾಂತ್ಯದಲ್ಲಿ ಭಾವ ನಿರ್ಭಾವವಾಗಿ ಪೂರ್ಣಾಖಂಡಾನುಭೂತಿಯೊದಗುತ್ತದೆ. ಅದುವೆ ಅಪರೋಕ್ಷಾನುಭೂತಿ, ಅದುವೆ ಪರಮ ಪರಿಣಾಮ ಪ್ರಪತ್ತಿ; ನಿರಾಳ ನಿಷ್ಪತ್ತಿ. ಅದುವೇ ಏನೆಲ್ಲವನ್ನೊಳಗೊಂಡ ಶೂನ್ಯ ಸಂಪತ್ತಿ; ಜೀವನ್ಮುಕ್ತಿ.

"ಶೂನ್ಯೇ ಚಿದಂಬರೇ ಸ್ಥಾನೇ ದೂರೇ ವಾಙ್ಮನ ಸಾಧ್ವನಃ।
ವಿಲೀನಾತ್ಮಾ ಮಹಾಯೋಗಿ ಕೇನಕಿಂ ವಾಽಪಿ ಭಾವಯೇತ್ ॥"

—ರೇಣುಕಾ ಗೀತೆ

ನಿರ್ಭಾವದ ನಿಲವಿಗೇರಿ ಅಪರೋಕ್ಷಾನುಭವಿಯಾಗಿ ಪರಮ ಪರಿಣಾಮದೊಳಗಿರುವ ಜೀವನ್ಮುಕ್ತನು ಪರಿಪೂರ್ಣ ಶೂನ್ಯಾತ್ಮಕ ಚಿದಂಬರ ಮಹಾಸ್ಥಲ (ಅದೇ ನಿಃಸ್ಥಲ) ದಲ್ಲಿರುವವನಾಗಿ ತಾನೇ ತಾನಾಗಿರುವನು. ಸಮದರ್ಶಿ ಸಮವೃತ್ತಿಯುಳ್ಳವನಾಗಿ ಬೇರೆ ಭಾವಿಸಬೇಕಾದುದೇನೂ ಇರುವುದಿಲ್ಲ. ತಾನೇ ಧ್ಯೇಯವಾಗಿ ಧ್ಯಾನಿಸಬೇಕಾದುದಿರುವುದಿಲ್ಲ. ಷಡೂರ್ಮಿಗಳ ಬಾಧೆಗೆ ಒಳಗಾಗಿರುವುದಿಲ್ಲ.

"ನ ಬಿಭೇತಿ ಜರಾಮೃತ್ಯೋರ್ನ ಕ್ಷುಧಾಯಾ ವಶಂ ವ್ರಜೇತ್ ।
ಪರಿಪೂರ್ಣ ನಿಜಾನಂದಸಮಾಸ್ವಾದಾನ್ಮಹಾಸುಖೀ ॥"

—ರೇಣುಕ ಗೀತೆ

ಮುಪ್ಪು ಮೃತ್ಯು, ಹಸಿವು ತೃಷೆ, ಶೋಕ–ಮೋಹ ಇವು ಸಂಸಾರ ಸಾಗರದ ಷಡೂರ್ಮಿ (ಅಲೆತೆರೆ)ಗಳು. ಪರಿಪೂರ್ಣ ನಿಜಾನಂದವನ್ನು ಆಸ್ವಾದಿಸಿ ಮಹಾಸುಖೀಯಾದ ಜೀವನ್ಮುಕ್ತನು ಷಡೂರ್ಮಿಗಳಿಗೆ ಸಿಲುಕಿ ಬಳುಕಿ ಅಳುಕಿ ಬಾಳುವುದಿಲ್ಲ. ಅಲ್ಪಭಾವ ಅನ್ಯಭಾವ ಅಕಿಂಚನಭಾವಾದಿ ಭ್ರಾಂತಿಗಳ ಬಲೆಗೆ ಬೀಳುವುದಿಲ್ಲ.

"ಮಹಾಸತ್ತಾ ಮಹಾಸಂವಿದ್ವಿಶ್ವರೂಪಾ ಪ್ರಕಾಶತೇ ।
ತದ್ವಿನಾ ನಾಸ್ತಿ ವಸ್ತ್ವೇಕಂ ಭೇದಬುದ್ಧಿಂ ವಿಮುಂಚತಃ ॥
ನಕಿಂಚಿದಪಿ ಮುಕ್ತಸ್ಯ ದೃಶ್ಯಂ ಕರ್ತವ್ಯಮೇವ ವಾ ।
ಸುಖಸ್ಫೂರ್ತಿ ಸ್ವರೂಪಸ್ಯ ನಿಶ್ಚಲಾ ಸ್ಥಿತಿರುಚ್ಯತೇ ॥
ಶಿವಾದ್ವೈತ ಪರಿಜ್ಞಾನ ಶಿಥಿಲಾಽಶೇಷವಸ್ತುನಃ ।
ಕೇವಲಂ ಸಂವಿದುಲ್ಲಾಸದರ್ಶಿನಃ ಕೇನ ಕಿಂಭವೇತ್ ॥
ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥"

—ರೇಣುಕ ಗೀತೆ

ಷಟ್‌ಸ್ಥಲ ಸಿದ್ಧಾಂತಾತ್ಮನು ಮಹಾಚೈತನ್ಯಾತ್ಮನು. ಆತನು ಆ ಮಹಾಸತ್ತೆಯನ್ನಾಗಿ ಮಹಾಸಂವಿತ್ತೆಯನ್ನಾಗಿ ವಿಶ್ವರೂಪವನ್ನು ಕಂಡು ಕಾಣಿಸುತ್ತಾನೆ. ಆ ಮಹಾಸತ್ತಾ ಸ್ವರೂಪದ ಹೊರತು ಬೇರೊಂದು ವಸ್ತು ವಿಶ್ವದಲ್ಲಿಯೆ ಇರುವುದಿಲ್ಲ. ಈ ವೈವಿಧ್ಯಮಯ ವಸ್ತು ಭೇದಗಳಿರುವುದಿಲ್ಲ. ಪೂರ್ಣತ್ವದ ಪೂರ್ಣಪ್ರಜ್ಞಾವಂತನಾಗಿರುತ್ತಾನೆ. ದೃಗ್ ದೃಶ್ಯ ದರ್ಶನೀಯ ಎಂಬೀ ತ್ರಿಪುಟ ಭಾವವಿರದು. ರೂಪವೆಲ್ಲ ಸ್ವರೂಪವಾಗಿ ಪರಿಣಮಿಸಿರುವಾಗ ಕಿಂಚಿತ್ ದೃಶ್ಯವೂ ಈ ವಿಶ್ವದಲ್ಲಿರದು. ಕರ್ತವ್ಯವೂ ಇರದು. ಕ್ರಿಯಾನಿಷ್ಪತ್ತಿ

ಗೊಂಡಿರುವುದು."ವೃತ್ತಿಶ್ಚೈತನ್ಯರೂಪಿಣೀ" ಕಾಯ ಕಾಯಕ ಕಳಾಚೈತನ್ಯ ಸ್ವರೂಪವಾಗಿರುತ್ತದೆ. ಸುಖ ಸ್ಫೂರ್ತಿ ಸ್ವರೂಪನಾದವನಿಗೆ ನಿಶ್ಚಲತೆ ನೆಲಸಿರುತ್ತದೆ. ಅಂದರೆ ಶಿವಾದ್ವೈತ ಪರಿಜ್ಞಾನ ಕರಿಗೊಂಡಿರುತ್ತದೆ. ವಿಶ್ವಾತ್ಮನಾಗಿ ವಿಶ್ವವಸ್ತು ವಾಂಛೆಯುಂಟಾಗದು. ನಿತ್ಯ ತೃಪ್ತನಾಗಿ! ಕೇವಲ ಸ್ವರೂಪುಲ್ಲಾಸಮಯನಾಗಿರುವಾಗ ಆತನಿಗೆ ಯಾವುದರಿಂದ ಏನಾಗಬೇಕಾಗಿದೆ? ಏನೆಲ್ಲವೂ ಆ ಮಹಾ ಚೇತನಕ್ಕೆ ಕಿಂಚಿತ್! ಆ ಪರಮಾಮೃತಾತ್ಮನಿಗೆ ಇನ್ನಾವ ಸ್ಪೃಹೆ ಇದ್ದೀತು! ನೀರು ನೀರಿನಲ್ಲಿ, ಉರಿ ಉರಿಯಲ್ಲಿ ಬೆರೆದಂತೆ ಆ ಪರಬ್ರಹ್ಮದಲ್ಲಿ ಬೆರೆದು ಸಮರಸವಾದ ಬಳಿಕ ಭಿನ್ನವಾಗಿ ತೋರುವುದೆಂದರೇನು? ಅಂದರೆ ಪರಶಿವಬ್ರಹ್ಮ ಸ್ವರೂಪನೇ ಆಗಿರುತ್ತಾನೆ ಎಂಬಾಶಯ! ಇಂತಿದು ಷಟ್‌ಸ್ಥಲ ಸಿದ್ಧಾಂತ ದರ್ಶನ ಸಮೀಕ್ಷೆ!

# ಸ್ಥಲಕಟ್ಟು ಸಾಹಿತ್ಯ ಮೀಮಾಂಸೆ

—ಡಾ. ವ್ಹಿ. ಎಸ್. ಕಂಬಿ

**ಪ್ರವೇಶ :**

ವೀರಶೈವ ಸಾಹಿತ್ಯವು ಅನೇಕ ದೃಷ್ಟಿಯಿಂದ ವೈಶಿಷ್ಟ್ಯಪೂರ್ಣವಾಗಿದೆ. ಕಾವ್ಯ ಪ್ರಭೇದಗಳು, ಹೊಸ ಹೊಸ ಛಂದಸ್ಸುಗಳ ಪ್ರಯೋಗಗಳು ಕನ್ನಡ ಸಾಹಿತ್ಯ ಚರಿತ್ರೆಗೆ ಹೊಸ ತಿರುವನ್ನೆ ಕೊಟ್ಟಿದೆ. ಇಲ್ಲಿ ಕಂಡು ಬರುವ ಕ್ರಾಂತಿಕಾರಕ ವೈಚಾರಿಕಸಿದ್ಧಾಂತ, ತತ್ತ್ವಸಿದ್ಧಾಂತ, ಅನುಭಾವಸಿದ್ಧಾಂತ, ಕಾವ್ಯಸಿದ್ಧಾಂತಗಳು ಅಭೂತಪೂರ್ವವಾದವುಗಳು. ಭಾರತೀಯ ಕಾವ್ಯಸಿದ್ಧಾಂತ ಅಥವ ಕಾವ್ಯಮೀಮಾಂಸಾ ಶಾಸ್ತ್ರಕ್ಕೆ ಕಾಶ್ಮೀರ ಶೈವದ ಕಾಣಿಕೆ ಅಪ್ರತಿಮ. ಈ ಮಾತು ಷಡ್ದರ್ಶನ ಸೂತ್ರಗಳನ್ನು ನೋಡಿದಾಗ, ಈ ಸೂತ್ರಕಾರರೆಲ್ಲ ಶೈವಮುನಿಗಳೆಂಬುದು ಗೊತ್ತಾದಾಗ ಶೈವಸಂಪ್ರದಾಯಕ್ಕೂ ಅನ್ವಯಿಸುತ್ತದೆ. ಭಾರತೀಯ ಕಾವ್ಯಮೀಮಾಂಸೆಗೆ ವೀರಶೈವ ಸಾಹಿತ್ಯದ ಕೊಡುಗೆ ವಿಶಿಷ್ಟವಾಗಿದೆ. ವಚನಕಾರರ **ನಿರಂಗವಚ ಪ್ರಣಾಲಿ**[೧] [ನಿರ್ಮನ ಕಾವ್ಯಪ್ರಣಾಲಿ] ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಇದು **ಅಮನಸ್ಕ ಕಾವ್ಯ ಸಿದ್ಧಾಂತ** ಇದೇ ರೀತಿ ವೀರಶೈವ ಸಾಹಿತಿಗಳು ಭಾರತೀಯ ಶಾಸ್ತ್ರಸಾಹಿತ್ಯಕ್ಕೆ ನೀಡಿದ[೨] ಕಾಣಿಕೆಯು ಅತ್ಯಮೂಲ್ಯವಾದುದಾಗಿದೆ. ಭಾರತೀಯ ತತ್ತ್ವಚರಿತ್ರೆಯಲ್ಲಿ ವೀರಶೈವ ಸಿದ್ಧಾಂತಕ್ಕೆ ವಿಶಿಷ್ಟಸ್ಥಾನವಿದೆ. ಅದ್ವೈತವಾದ ಮತ್ತು ಶಬ್ದಬ್ರಹ್ಮಾದ್ವೈತವಾದಗಳು ಭಾರತೀಯ ತತ್ತ್ವಜ್ಞಾನ ಚರಿತ್ರೆ (History of Indian Philosophy ಯಲ್ಲಿಯ ಎರಡು ಮಹತ್ವದ ಪ್ರಣಾಲಿಗಳು. ಇವೆರಡರ ಮೂಲವು ಋಗ್ವೇದ. ಶಂಕರ ಮತ್ತು ಭರ್ತೃಹರಿಗಳು ಅನುಕ್ರಮವಾಗಿ ಬ್ರಹ್ಮಾದ್ವೈತ ಮತ್ತು ಶಬ್ದಾದ್ವೈತಗಳನ್ನು ಪ್ರಬಲವಾಗಿ ಪ್ರಸಿದ್ಧಪಡಿಸಿದರು. ಇವರೀರ್ವರೂ ಈ ಪ್ರಣಾಲಿಗಳ ಮಹಾ ಆಚಾರ್ಯರು. ಈ ಎರಡೂ ಪ್ರಣಾಲಿಗಳ ಸಮನ್ವಯವನ್ನು ಮಂಡನಮಿಶ್ರನು ಮಾಡಿದ್ದು ಸುಪ್ರಸಿದ್ಧ. ಇವನ ನಂತರ

---

೧ ಇದರ ಪರಿಚಯಕ್ಕೆ ಡಾ. ವ್ಹಿ. ಎಸ್. ಕಂಬಿ ಅವರ 'ಚಾಮರಸನ ಅಮನಸ್ಕ ಕಾವ್ಯ' ಪುಸ್ತಿಕೆ ನೋಡಿರಿ.

೨ ಇದರ ಪರಿಚಯಕ್ಕಾಗಿ ಡಾ. ವ್ಹಿ. ಎಸ್. ಕಂಬಿ ಅವರ **Forms of Indian Philosophical Literature and other Papers** ಎಂಬ ಗ್ರಂಥ ನೋಡಿರಿ.

ವಚನಕಾರರಲ್ಲಿ ಸಮನ್ವಯ ವಿಚಾರಧಾರೆಯನ್ನು ನೋಡಬಹುದು. ನಿರ್ಗುಣಬ್ರಹ್ಮ ಮತ್ತು ನಿರ್ಗುಣ ಶಬ್ದಗಳ ಸಮನ್ವಯ ಇಲ್ಲಿಯದು. ವಚನಕಾರರಲ್ಲಿಯದು ಶಕ್ತಿ ವಿಶಿಷ್ಟ ಬ್ರಹ್ಮ, ಶಕ್ತಿ ವಿಶಿಷ್ಟ ಶಬ್ದಗಳ ಸಮನ್ವಯವು. ಇದು ಭಾರತೀಯ ದರ್ಶನದಲ್ಲಿ ಮಹತ್ವದ ಘಟನೆ. ಇದಲ್ಲದೆ ಪ್ರಮಾಣಶಾಸ್ತ್ರ, ಅನುಭಾವಶಾಸ್ತ್ರಗಳ ಬೆಳವಣಿಗೆಯ ದೃಷ್ಟಿಯಿಂದ ಹಾಗೂ ಆಸ್ತಿಕ ನಾಸ್ತಿಕ ದರ್ಶನಗಳ ಮಧ್ಯದ ಕೂಡಲಸಾಧ್ಯಕಂದರವನ್ನು ಕೂಡಿಸಿದ೩ ದೃಷ್ಟಿಯಿಂದ ವೀರಶೈವ ದರ್ಶನ ಸಾಹಿತ್ಯದ ಅಧ್ಯಯನವು ಅತ್ಯಂತ ಮಹತ್ವದ್ದಾಗಿದೆ.

ಸಂಸ್ಕೃತ ಸಾಹಿತ್ಯ ಚರಿತ್ರಕಾರರು ಚತುಷ್ಪಾದ ಸಾಹಿತ್ಯವನ್ನು ಮತ್ತು ಷಟ್‌ಸ್ಥಲ ಸಾಹಿತ್ಯವನ್ನು ಪರಿಗಣಿಸದೆ ಇದ್ದುದರಿಂದ ಭಾರತೀಯ ಸಾಹಿತ್ಯಚರಿತ್ರೆ, ಅದೇ ರೀತಿ ಶಾಸ್ತ್ರ ಮತ್ತು ಸಂಸ್ಕೃತಿಗಳ ಚರಿತ್ರೆಗಳು ದರಿದ್ರವಾಗಿವೆ; ಅಪೂರ್ಣವಾಗಿವೆ; ದೋಷ ಪೂರ್ಣವಾಗಿವೆ. ಚತುಷ್ಪಾದ ಸಾಹಿತ್ಯ ಮತ್ತು ಷಟ್‌ಸ್ಥಲಸಾಹಿತ್ಯಗಳು ಭಾರತೀಯತೆಗೆ ಅಪೂರ್ವವಾದ ಕಾಣಿಕೆ ಇತ್ತಿವೆ.

ಪ್ರಸ್ತುತ ಪ್ರಬಂಧದಲ್ಲಿ ಸ್ಥಲಕಟ್ಟಿನ ವಚನಕೃತಿಗಳ, ವಚನ ಸಂಕಲನಗಳ ಸಮೀಕ್ಷೆಯನ್ನು ಮಾಡಲಾಗುವುದು, ಇಲ್ಲಿ ಪ್ರಯೋಗಿಸಲಾದ 'ವಚನಕೃತಿಗಳ' ಮತ್ತು 'ವಚನ ಸಂಕಲನ ಗಳ' ಎಂಬ ಪದ ಪ್ರಯೋಗಗಳ ಮೀಮಾಂಸೆ ಅಥವ ಹಸಿಗೆಯನ್ನು ಕೂಡ ಮಾಡಲಾಗು ವುದು. ಸ್ಥಲಕಟ್ಟು ಸಾಹಿತ್ಯ ಸಮೀಕ್ಷೆಯು ಶಾಸ್ತ್ರಸಾಹಿತ್ಯ ಸಮೀಕ್ಷೆಯಾಗಿದೆ. ಮುಖ್ಯ ವಾಗಿ. ಈ ಸಂಕಲನಗಳನ್ನು, ಕೃತಿಗಳನ್ನು ಸಾಹಿತ್ಯದ ದೃಷ್ಟಿಯಿಂದ ಸಮೀಕ್ಷಿಸುವುದು ಗೌಣಸಮೀಕ್ಷೆಯಾಗಿದೆ.

**'ಸ್ಥಲಕಟ್ಟು' ಪದದ ಹಸಿಗೆ:**

'ಸ್ಥಲಕಟ್ಟು' ಎಂಬ ಪದದಲ್ಲಿಯ 'ಸ್ಥಲ' ಎಂಬುದು ಸಂಸ್ಕೃತ ಪದವಾದರೆ 'ಕಟ್ಟು' ಎಂಬುದು ಕನ್ನಡ ಪದವು. ಕಟ್ಟು ಶಬ್ದಕ್ಕೆ ಅನೇಕ ಅರ್ಥಗಳಿದ್ದು ಅವುಗಳಲ್ಲಿ ಒಂದು 'ಬಂಧ' ಎಂಬುದು. ಕಟ್ಟು ಅಂದರೆ ಪೆಂಡಿ ಎಂದು ಅರ್ಥ: ದನಗಳನ್ನು ಕಟ್ಟಿಹಾಕುವ ಹಗ್ಗ, ಹಿಡಿಯಲ್ಲಿ ಕಟ್ಟುವ ಸೂತ್ರ ಹೀಗೆ ಹಲವಾರು ಅರ್ಥಗಳುಂಟು. ಇದು ಕ್ರಿಯಾ ಪದವು ಮತ್ತು ಕ್ರಿನ್ನಾಮವು ಹೌದು. ಹಗ್ಗ ಮತ್ತು ಸೂತ್ರ ಅಥವಾ ದಾರ ಎಂದೂ ಅರ್ಥಗಳಿವೆ. ಸ್ಥಲ ಎಂದರೆ ಸ್ಥಳ, ನಿಲ್ದಾಣ, ವಿಷಯ, ಗತಿ ಎಂಬರ್ಥಗಳಿವೆ. ಹಸ್ತ

---

೩ ಈ ಮಾತು ಡಾ. ಕೆ. ಕೃಷ್ಣಮೂರ್ತಿ ಅವರು ಡಾ. ವ್ಹಿ. ಎಸ್. ಕಂಬಿಯವರ ವೀರಶೈವ ದರ್ಶನ ಮೀಮಾಂಸೆ ಸಂ. ೧ ಇದರ ವಿಮರ್ಶೆ ಮಾಡುತ್ತ ಹೇಳಿದ ಮಾತು. ಈ ಸಂಪುಟವಲ್ಲದೆ ಇನ್ನುಳಿದ ೨, ೩, ೪ ಸಂಪುಟಗಳನ್ನು ನೋಡ ಬಹುದು.

ಪ್ರತಿ ಭಂಡಾರಕ್ಕೆ ಹೋಗಿ ಗ್ರಂಥ ಭಂಡಾರಿಯನ್ನು ತಾಳೆಗರಿಯ ಹಸ್ತಪ್ರತಿಯೊಂದನ್ನು ಕೇಳಿದರೆ ಅವನು ಇಷ್ಟನೇ ನಂಬರ ಕಟ್ಟಿನಲ್ಲಿದೆ ಎಂದು ಹೇಳುವನು. ಇಲ್ಲಿ ಕಟ್ಟು ಅಂದರೆ ಪೆಂಡಿ. ಅವನು ಈ ಗ್ರಂಥಾಲಯದಲ್ಲಿ ತಾಳೆಗರಿಯ ಕಟ್ಟುಗಳು ಇಷ್ಟು ಇವೆಯೆಂದು ಹೇಳುವನು. ಒಂದು ಕಟ್ಟಿನಲ್ಲಿ ಅಂದರೆ ಒಂದು ಪೆಂಡೆಯಲ್ಲಿ ಒಂದು ಕೃತಿ ಇರಬಹುದು, ಒಂದಕ್ಕಿಂತಲೂ ಹೆಚ್ಚು ಕೃತಿಗಳೂ ಇರಬಹುದು. ಒಂದು ಕಟ್ಟು ಅಂದರೆ ಒಂದೇ ಗ್ರಂಥ ಎಂದು ಅರ್ಥವಾಗಬೇಕಿಲ್ಲ. ಈ ಪದವು ತಾಳೆಗರಿಯ ಹಸ್ತಪ್ರತಿಗಳ ಭಾಂಡಾರವು ಕೊಟ್ಟ ಕಾಣಿಕೆ ಸಾರಸ್ವತ ಲೋಕಕ್ಕೆ ಕೃಷಿ ಪ್ರಪಂಚದಲ್ಲಿ ಕಟ್ಟು ಎಂಬುದು ಅತ್ಯಂತ ಪರಿಚಿತಪದ. ಇಲ್ಲಿ ಹಗ್ಗ, ಪೆಂಡಿ ಎಂಬರ್ಥಗಳುಂಟು. ವಚನ ಸಾಹಿತ್ಯದ ಬಗ್ಗೆ ಮಾತ ನಾಡುವಾಗ, ಬರೆಯುವಾಗ ಮತ್ತು ಸಂಪಾದನೆಯ ಕಾರ್ಯವನ್ನು ವಿವರಿಸುವಾಗ ಕಟ್ಟು, ಸ್ಥಲಕಟ್ಟು ಪದಗಳು ಬಳಸಿರುವದು ಕಂಡುಬರುತ್ತದೆ.

ಅ) ೧. "ಸರ್ವಪುರಾತನರ **ಕಟ್ಟಿ**ನಲ್ಲಿ ಬಂದ ಒಂದು ವಚನ.......

೨. ಇವೆರಡೂ **ಷಟ್‌ಸ್ಥಲದ** ಕಟ್ಟುಗಳಲ್ಲಿಯೇ ದೊರೆಯುತ್ತವೆ.

೩. ........**ಷಟ್‌ಸ್ಥಲ** ಕಟ್ಟಿಗೆ ಪ್ರಾಧಾನ್ಯಕೊಡದೆ....

೪. **ಈ ಕಟ್ಟು**ಗಳಲ್ಲದೆ ಏಕೋತ್ತರ ಶತಸ್ಥಲ, ಶೂನ್ಯ ಸಂಪಾದನೆಗಳು........

೫. ಷಟ್‌ಸ್ಥಲದ ವಚನಗಳೆಂಬ ಅಭಿಧಾನದಲ್ಲಿಶರಣರ ವಚನಗಳ **ಕಟ್ಟು**ಗಳು"[೪]

೬. "... ೧೨ನೆಯ ಶತಮಾನದಲ್ಲಿ ಸಂಗ್ರಹಿಸಿಟ್ಟ ಒಂದೂ **ಕಟ್ಟು** ಇಂದು ಲಭ್ಯವಿಲ್ಲ"[೫]

ಒಂದನೆಯ ವಾಕ್ಯದಲ್ಲಿ ಸರ್ವಪುರಾತನರ **ಕಟ್ಟಿ**ನಲ್ಲಿ ಎಂಬ ಪ್ರಯೋಗವಿದೆ. ಈ ಸಂದರ್ಭದಲ್ಲಿ **ಕಟ್ಟು** ಎಂದರೆ ಪೆಂಡಿ ಎಂದು ಅರ್ಥವಾಗುತ್ತದೆ. **ಎರಡನೆಯ** ವಾಕ್ಯದಲ್ಲಿ **ಷಟ್‌ಸ್ಥಲದ ಕಟ್ಟು** ಎಂಬುದನ್ನು **ಷಟ್‌ಸ್ಥಲಕಟ್ಟು** ಎಂದು ಸಮಸ್ತಪದವಾಗಿ ಬರೆಯ ಬಹುದು. ಇಲ್ಲಿ ಷಟ್‌ಸ್ಥಲಸೂತ್ರ ಎಂಬುದಾಗಿಯೂ ಬರೆಯಲು ಬರುತ್ತದೆ. ಷಟ್‌ಸ್ಥಲ ಕಟ್ಟು ಎಂಬುದರಲ್ಲಿಯ ಕಟ್ಟು ಎಂದರೆ ಸೂತ್ರ ಎಂಬರ್ಥ ಕೊಡುತ್ತದೆ. ಕಟ್ಟು ಎಂಬುದು ಷಟ್‌ಸ್ಥಲದೊಡನೆ ಬಂದಾಗ ಷಟ್‌ಸ್ಥಲ ವ್ಯವಸ್ಥೆ ಎಂದೂ ಆಗುವುದು. **ಕಟ್ಟು** ಒಂದು ವ್ಯವಸ್ಥೆಗೆ ವಸ್ತುವನ್ನು ಒಳಪಡಿಸುತ್ತದೆ. **ಮೂರನೆಯ** ವಾಕ್ಯದಲ್ಲಿ **ಷಟ್‌ಸ್ಥಲ ಕಟ್ಟಿಗೆ** ಎಂಬ ಪದ ಪ್ರಯೋಗಗೊಂಡಿದೆ. ಇಲ್ಲಿ ಕಟ್ಟು ಎಂದರೆ ಷಟ್‌ಸ್ಥಲದಲ್ಲಿ ವ್ಯವಸ್ಥೆ ಗೊಳಿಸಿದುದಕ್ಕೆ ಪ್ರಾಧಾನ್ಯಕೊಡದೆ ಪೆಂಡಿ ಎಂಬರ್ಥವನ್ನು ಕೊಡುತ್ತದೆ. **ನಾಲ್ಕನೆಯ**

---

೪. ಡಾ. ಆರ್. ಸಿ. ಹಿರೇಮಠ (ಸಂ) ಚನ್ನಬಸವಣ್ಣನವರ ವಚನಗಳು, PP. ೨೦, ೨೧, ೨೬ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೬೪)

೫. ಡಾ. ಫ. ಬಿ. ರಾಜೂರ (ಸಂ), ಎಲ್ಲ ಪುರಾತರ ಸ್ತೋತ್ರದ ವಚನಗಳು, P. VII. ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ ೧೯೮೮

ವಾಕ್ಯದಲ್ಲಿಯ ಈ **ಕಟ್ಟು**ಗಳಲ್ಲದೆ ಎಂಬುದು ಈ ಷಟ್‌ಸ್ಥಲ ವ್ಯವಸ್ಥೆಯಿಂದ ಭಿನ್ನವಾದ ಎಂಬರ್ಥ ಕೊಡುತ್ತದೆ. **ಐದನೆಯ** ವಾಕ್ಯದಲ್ಲಿಯ **ಕಟ್ಟು**ಗಳು ಎಂಬುದು ಪೆಂಡಿಗಳು ಎಂಬರ್ಥ ಕೊಡುತ್ತದೆ. **ಆರನೆಯ** ವಾಕ್ಯದಲ್ಲಿಯ **ಕಟ್ಟು**ಗಳು ಎಂಬ ಪದವು ಪೆಂಡಿಗಳು ಎಂಬರ್ಥ ಕೊಡುತ್ತದೆ. ಹೀಗೆ **ಕಟ್ಟು** ಎಂಬ ಪದವು ವಚನಶಾಸ್ತ್ರ ಸಾಹಿತ್ಯದಲ್ಲಿ ವಿವಿಧಾರ್ಥಗಳನ್ನು ಕೊಡುವುದು.

ಬ) 'ಅ'ದಲ್ಲಿ ವಿವರಿಸಿದ ಎರಡನೆಯ ಮತ್ತು ಮೂರನೆಯ ವಾಕ್ಯದಲ್ಲಿ ಪ್ರಯೋಗಗೊಂಡ **ಕಟ್ಟು** ಪದದ ವಿವರಣೆಯನ್ನು ಇಲ್ಲಿ ಸಮರ್ಥಿಸಲಾಗುವದು.

೧) **ಸ್ಥಲಕಟ್ಟಿನ** ವಚನಗಳು ೨) **ಷಟ್‌ಸ್ಥಲಕಟ್ಟಿನ** ವಚನಗಳು ಎಂಬ ಪ್ರಯೋಗಕ್ಕೆ ಉದಾಹರಣೆ: ಇಲ್ಲಿಯ ಸ್ಥಲಕಟ್ಟು, ಷಟ್‌ಸ್ಥಲಕಟ್ಟು ಪದಗಳ ಹಸಿಗೆ–

೧) "ಈಚೆಗೆ ಚೆನ್ನಬಸವಣ್ಣನವರ ಹೆಸರಿನಲ್ಲಿ 'ವಚನೈಕೋತ್ತರ ಶತಸ್ಥಲ'ಎಂಬ ಒಂದು **ಸ್ಥಲಕಟ್ಟಿನ** ಕೃತಿ ದೊರೆತಿದೆ.

೨) ಇಂದು ನಮ್ಮ ಮುಂದಿರುವ **ಸ್ಥಲಕಟ್ಟಿನ** ಸಾಹಿತ್ಯವನ್ನು ಗಮನಿಸಿ ಹೇಳಬೇಕಾದರೆ

೩) ಶಿವಗಣ ಪ್ರಸಾದಿ ಮಹಾದೇವಯ್ಯ, ಹಲಗೆದೇವ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರ ಸಿದ್ಧವೀರಣ್ಣೊಡೆಯರು ರಚಿಸಿದ ಶೂನ್ಯ ಸಂಪಾದನೆಗಳು ಬೇರೊಂದು ಮಾದರಿಯ **ಸ್ಥಲಕಟ್ಟಿನ** ಸಂಪಾದನಾ ಕೃತಿಗಳಾಗಿ ನಿಲ್ಲುತ್ತವೆ.

೪) ಈ ಎಲ್ಲ ಅಂಶಗಳನ್ನು ಗಮನಿಸಿದರೆ ಪ್ರಥಮವಾಗಿ **ಕಟ್ಟಿನ** 'ಸಕಲ ಪುರಾತನರ ವಚನಗಳ' **ಕಟ್ಟು** ಇದಾಗಿರಬೇಕೆನಿಸುತ್ತದೆ.[೬]

೧ನೆಯ ವಾಕ್ಯದಲ್ಲಿರುವ **ಸ್ಥಲಕಟ್ಟಿನ** ಕೃತಿ ಎಂಬಲ್ಲಿಯ **ಸ್ಥಲಕಟ್ಟಿನ** ಎಂದರೆ ಸ್ಥಲವ್ಯವಸ್ಥೆ, ತತ್ವ ವ್ಯವಸ್ಥೆಗೊಳಿಸಿದ ಕೃತಿ ಎಂದರ್ಥವಾಗುತ್ತದೆ. ೨ನೆಯ ವಾಕ್ಯದಲ್ಲಿಯ **ಸ್ಥಲಕಟ್ಟಿನ** ಅಂದರೆ ಸ್ಥಲದರ್ಶನ ಎಂದು ಅರ್ಥವಾಗುತ್ತದೆ. ೩ನೆಯ ವಾಕ್ಯದಲ್ಲಿಯ **ಸ್ಥಲಕಟ್ಟಿನ** ಸಂಪಾದನಾ ಅಂದರೆ ಸ್ಥಲಸಿದ್ಧಾಂತದ ಚರ್ಚಾ ಅಥವಾ ಕಥಾ ಎಂಬರ್ಥವಾಗುತ್ತದೆ. ೪ನೆಯ ವಾಕ್ಯದಲ್ಲಿಯ **ಕಟ್ಟಿದ** ಹಾಗೂ **ಕಟ್ಟು** ಎಂಬ ಪದಗಳು ಅನುಕ್ರಮವಾಗಿ ವ್ಯಕ್ತಿ ನಿಷ್ಠೆಯುಕ್ತ ವಿಚಾರದಂತೆ ವ್ಯವಸ್ಥೆಗೊಳಿಸದ [ಪೆಂಡಿ ಎಂದು ಅರ್ಥಗಳಾಗುತ್ತವೆ. ಸ್ಥಲಕಟ್ಟು [ಸ್ಥಲಶಾಸ್ತ್ರ] ಸಾಹಿತ್ಯ ವಿವರಣೆಗೆ ಈಗ ಈ ಹಸಿಗೆ ಹೊಸ ವಿವರಣೆಗೆ ಅವಕಾಶವನ್ನೊದಗಿಸಿದೆ.

## ಸ್ಥಲಕಟ್ಟು [ಸ್ಥಲಶಾಸ್ತ್ರ] ಸಾಹಿತ್ಯ ವೈವಿಧ್ಯತೆ:

ಸ್ಥಲಕಟ್ಟು ಸಾಹಿತ್ಯವೆಂದರೆ ವಚನಸಾಹಿತ್ಯ. ಇದು ಶಾಸ್ತ್ರ ಸಾಹಿತ್ಯವೇ ವಿನಾ ಕೇವಲ ಸಾಹಿತ್ಯವೇನಲ್ಲ. ಸಾಹಿತ್ಯದಲ್ಲಿ ಕಾವ್ಯ, ಕಥೆ, ಕಾದಂಬರಿ, ನಾಟಕ, ಜೀವನಚರಿತ್ರೆ, ಪತ್ರ

---

೬. ಡಾ. ವ್ಹಿ. ಬಿ. ರಾಜೂರ, ಅದೇ ಪು. VIII, X.

ಸಾಹಿತ್ಯ,ಪ್ರವಾಸಸಾಹಿತ್ಯ ಹೀಗೆ ಪ್ರಕಾರಗಳು ಉಂಟು. ವಚನ ಸಾಹಿತ್ಯದಲ್ಲಿ ಅಥವ ಸ್ಥಲ ಕಟ್ಟು ಸಾಹಿತ್ಯದಲ್ಲಿ ಸಾಹಿತ್ಯದ ಈ ಪ್ರಕಾರಗಳು ಇರುವದಿಲ್ಲ.ಸ್ಥಲಕಟ್ಟು ಸಾಹಿತ್ಯವು ಕೇವಲ ಕನ್ನಡ ಭಾಷೆಯಲ್ಲಿದೆಯೆಂದೇನು ಬಗೆಯಬೇಕಾಗಿಲ್ಲ. ಅದು ಸಂಸ್ಕೃತ ಭಾಷೆಯಲ್ಲಿಯೂ ಉಂಟು. ಅದೇ ರೀತಿ ಬೇರೆ ಬೇರೆ ಭಾಷೆಗಳಲ್ಲಿಯ ಸ್ಥಲಕಟ್ಟು ಸಾಹಿತ್ಯದಲ್ಲಿ ನಾನಾ ಪ್ರಕಾರಗಳಿವೆ. ಇವು ಸಾಹಿತ್ಯ ಪ್ರಕಾರಗಳಿಂದ ಭಿನ್ನ ಇರುತ್ತವೆ. ಆಗಮಗಳಲ್ಲಿ ಸ್ಥಲ ಶಾಸ್ತ್ರ ವಿವರಣೆ ಇರುತ್ತದೆ. ಇದು ಅಲ್ಲದೆ ಬ್ರಹ್ಮಸೂತ್ರಗಳನ್ನು ಕುರಿತು ಬರೆದ ಭಾಷ್ಯ ಹಾಗೂ ವೃತ್ತಿಗಳು, ವಾರ್ತಿಕ, ಪ್ರಕರಣ, ವ್ಯಾಖ್ಯೆ, ದೀಪಿಕೆ, ಕಾಶಿಕೆ, ಕಾರಿಕೆ ಎಂಬ ವಿವಿಧ ಪ್ರಕಾರಗಳಿವೆ.[೭] ಬ್ರಹ್ಮಸೂತ್ರಗಳಿಗೆ ಬರೆದ ಶ್ರೀಕರ ಭಾಷ್ಯ, ವೃತ್ತಿಗಳು ಅನುಕ್ರಮವಾಗಿ ಶ್ರೀಪತಿ ಪಂಡಿತ, ದೂರ್ವಾಸರಿಂದ ಬರೆಯಲ್ಪಟ್ಟ ಷಟ್‌ಸ್ಥಲ ಸಿದ್ಧಾಂತ ಕೃತಿಗಳು. ಮಾಯಿದೇವನ ಶಿವಾನುಭವಸೂತ್ರ ಮತ್ತು ವಿಶೇಷಾರ್ಥ ಪ್ರಕಾಶಿಕೆಗಳು ಷಟ್‌ಸ್ಥಲ ಶಾಸ್ತ್ರ ಕೃತಿಗಳೇ ಆಗಿವೆ. ಇವು ಸಂಸ್ಕೃತದಲ್ಲಿಯ ಶಾಸ್ತ್ರಸಾಹಿತ್ಯ ಪ್ರಕಾರಗಳೂ ಆಗಿವೆ ಅವುಗಳ ಹೆಸರೆ ಸೂಚಿಸುವಂತೆ ಲಿಂಗಧಾರಣ ಚಂದ್ರಿಕೆ, ವೀರಶೈವಾನಂದ ಚಂದ್ರಿಕೆವಾದ ಕಾಂಡ ವೇದಾಂತಸಾರ ವೀರಶೈವ ಚಿಂತಾಮಣಿ ಮುಂತಾದವುಗಳು ಷಟ್‌ಸ್ಥಲ ಸಾಹಿತ್ಯ ಕೃತಿಗಳು, ಇದೇ ಪ್ರಕಾರ ವಚನ ಸಾಹಿತ್ಯದಲ್ಲಿಯ ಷಟ್‌ಸ್ಥಲಕಟ್ಟು, ಶೂನ್ಯ ಸಂಪಾದನೆ, ವಿಶೇಷಾನು ಭವಷಟ್‌ಸ್ಥಲ, ಲಿಂಗಲೀಲಾ ವಿಲಾಸಚಾರಿತ್ರ, ಏಕೋತ್ತರ ಶತಸ್ಥಲ, ಪ್ರಸಾದಿಸ್ಥಲದ ವಚನಗಳು, ಪ್ರಾಣಲಿಂಗ ಜ್ಞಾನಚಾರಿತ್ರ, ಹೀಗೆ ಹಲವಾರು ಕೃತಿಗಳು ಷಟ್‌ಸ್ಥಲ ಸಾಹಿತ್ಯ ಕೃತಿಗಳು. ಸಂಸ್ಕೃತದಲ್ಲಿಯ ವೀರಶೈವ ಶಾಸ್ತ್ರ ಕೃತಿಗಳು ಭಾರತೀಯ ಸಂಸ್ಕೃತ ಶಾಸ್ತ್ರ ಸಾಹಿತ್ಯ ಪ್ರಕಾರಗಳನ್ನು ಅನುಕರಣ ಮಾಡಿದರೆ, ವಚನಸಾಹಿತ್ಯ ಕೃತಿಗಳು ಭಾರತೀಯ ಶಾಸ್ತ್ರ ಸಾಹಿತ್ಯ ಪ್ರಕಾರಗಳ ಭಂಡಾರಕ್ಕೆ ನೂತನ ಕೊಡುಗೆಗಳಾಗಿವೆ. ಇವುಗಳಲ್ಲಿಯ ಸ್ಥಲಕಟ್ಟು ಎಂಬುದು ಬ್ರಹ್ಮಸೂತ್ರದಂತಿರುವ ಕೃತಿಯಾಗಿದೆ.

---

೭. i ಡಾ. ವ್ಹಿ. ಎಸ್. ಕಂಬಿ. **forms of Indian Philosophical literature and their Papers.**

ii ಶೀವಿಶುದ್ಧ ಪ್ರಕರಣಂಗಳನೆಸಗಿ ವೇದ
ಶೈವ ತಂತ್ರಾವಳಿಗೆ ಭಾಷ್ಯಮಂ ದೀಪಿಕೆಯ
ನಾವೃತ್ತಿಯಂ ವ್ಯಾಖ್ಯೇಯಮಂ ಬರೆದ ಬೋಧನಾಯನೂರು ಶಂಕರಾರ್ಯಂ।
ವೊವ್ಹೋ ಹರದತ್ತರ ತ್ರಿಲೋಚನಾ ಘೋರಶಿವ
ದೇವ ಗುಣನಿಲಯ ಸರ್ವಾತ್ಮ ಶಂಭುಗಳಾನ
ತಾವನರ್ ಭೂತಿಕಂಠಾದಿ ಪೂರ್ವಾಚಾರ್ಯರೀವುದೆಮ
ನಮಲ ಮತಿಯುವು॥

ಪದ್ಮರಾಜ ಪುರಾಣ, ಪು. ೪. ಪದ್ಯ ೧೧.

**ಸ್ಥಲಕಟ್ಟು ಮೀಮಾಂಸೆ:**

'ಬ್ರಹ್ಮದ ನಾನಾ ವಿಚಾರ ಕುರಿತಿರುವ ಉಪನಿಷನ್ಮಂತ್ರ ವಿಚಾರವನ್ನು ಮಾಲೆ ಮಾಲೆಯಾಗಿ ಸೂತ್ರಕಾರನು ರಚಿಸಿದ್ದಾನೆ ಬ್ರಹ್ಮಸೂತ್ರಗಳನ್ನು' ಎಂದು ಶಂಕರಾಚಾರ್ಯರು ಹೇಳಿದ್ದಾರೆ. ಈ ಮಾತು 'ಸ್ಥಲಕಟ್ಟು' ಕೃತಿಗಳಿಗೂ ಅನ್ವಯಿಸುತ್ತದೆ. ವಚನಕಾರನು ಅಥವ ಶಾಸ್ತ್ರಕಾರನು 'ಸ್ಥಲ'ದ ನಾನಾ ವಿಚಾರಗಳನ್ನು ಕುರಿತು ತರ್ಕಬದ್ಧವಾಗಿ, ಸುವ್ಯವಸ್ಥಿತ ವಾಗಿ ಇಟ್ಟುದೇ 'ಸ್ಥಲಕಟ್ಟು', 'ಸ್ಥಲಕಟ್ಟು' ಶಬ್ದದಲ್ಲಿಯ 'ಸ್ಥಲ'ವೆಂಬ ಪದವನ್ನು ವೀರಶೈವ ಶಾಸ್ತ್ರದಲ್ಲಿ ವಿಶೇಷಾರ್ಥದಲ್ಲಿ ಬಳಸಿದ್ದಾರೆ. ಅದನ್ನೀಗ ನೋಡೋಣ.

ಪಾರಮೇಶ್ವರಾಗಮ (ಪಟಲ. ೬. ಶ್ಲೋಕ. ೭)

ಅಹಮೇವ ಜಗತ್ ಸೃಷ್ಟ್ವಾ ಪುನರ್‌ಮಯ್ಯೇವ ಲೀಯತೇ।
ಅಹಮೇವ ಸ್ಥಲಂ ವಿದ್ಧಿ ಷಡ್ವಿಧಂ ಮಮರೂಪಕಮ್॥

[ಪ್ರಪಂಚದ ಸೃಷ್ಟಿ ಮತ್ತು ಅದರ ನಿವೃತ್ತಿಗಳು ನನ್ನಿಂದ, ನಾನೇ ಸ್ಥಲ (ಬ್ರಹ್ಮ)ವೆಂದು ತಿಳಿ ನನ್ನದು ಷಡ್ವಿಧರೂಪು]

**ಷಟ್‌ಸ್ಥಲ ಕೌಮುದಿ**[೮] ಎಂಬ ಗ್ರಂಥವು ಬೇರೆ ಬೇರೆ ಆಕರಗಳಿಂದ ಸ್ಥಲವನ್ನು ವ್ಯಾಖ್ಯಾನಿಸುವ ಶ್ಲೋಕಗಳನ್ನು ಬಳಸಿಕೊಂಡಿದೆ. ಅವುಗಳು ಇಂತಿವೆ:

ಸ್ಥೀಯತೇ ಲೀಯತೇ ಯಸ್ಮಿನ್ ಮುಕ್ತಿಂ ಸಂಸಾರಪದ್ಧತೇಃ।
ತದೇವ ಸ್ಥಲಮಿತ್ಯುಕ್ತಂ ಸ್ಥಲತತ್ತ್ವವಿಶಾರದೈಃ॥

[ಯಾವ ಪರಬ್ರಹ್ಮ ಶಿವನಲ್ಲಿ ಮುಕ್ತಿಯು ಇರುತ್ತಿಹುದೋ, ಸ್ಥಳವೆಂದು ಸ್ಥಳತತ್ತ್ವ ಬಲ್ಲ ವರಿಂ ನುಡಿಯಲ್ಪಟ್ಟಿತು.]

ಸ್ಥಲಶಬ್ದಕ್ಕೆ ಮತ್ತೊಂದು ಪ್ರಕಾರವಾಗಿ ನಿರ್ವಚನವು ಹೇಳಲ್ಪಡುವುದೆಂತೆನೆ–

ಸ್ಥಾಣೌ ಸರ್ವಾಶ್ರಯೋಽನನ್ತೇ ಸಚ್ಚಿದಾನಂದ ರೂಪಿಣಿ।
ಯಸ್ಮಿನ್ ಬ್ರಹ್ಮಣಿ ಲೀಯೇತ ಪ್ರಪಂಚಸ್ತತ್ಸ್ಥಲಂ ಸ್ಮೃತಮ್॥

[ಯಾವ ಕಾರಣದಿಂದ ಸಮಸ್ತ ತತ್ತ್ವಂಗಳಿಗೆ ಆಶ್ರಯವೂ,ಕಡೆಯಿಲ್ಲದುದೂ, ಸಚ್ಚಿದಾನಂದ ಸ್ವರೂಪವೂ ಪರಬ್ರಹ್ಮವೂ, ಮೂಲಸ್ತಂಭವೂ, ಸ್ಥಾಣುವೆಂಬ ನಾಮವುಳ್ಳುದೂ ಆದು ಯಾವ ಶಿವತತ್ತ್ವದಲ್ಲಿ ಜಗದ್ವಿಸ್ತಾರವು ಅಡಂಗಿತೋ, ಆ ಕಾರಣದಿಂದ ಅದು ಸ್ಥಲ ವೆಂದು ಹೇಳಲ್ಪಟ್ಟಿತು.]

ಶ್ರೀ ಮಾಯಿದೇವನು ಸ್ಥಲದ ನಿರ್ವಚನವನ್ನು ಮಾಡಿದ್ದು ಹೀಗಿದೆ:

ಏಕಮೇವ ಪರಂಬ್ರಹ್ಮ ಸಚ್ಚಿದಾನಂದ ಲಕ್ಷಣಮ್।
ಶಿವತತ್ತ್ವಂ ಶಿವಾಚಾರ್ಯಾಃ ಸ್ಥಲಮಿತ್ಯಾಹುರಾತ್॥

["ಏಕಮೇವಾದ್ವಿತೀಯಂ ಬ್ರಹ್ಮ" ಎಂಬುದಾದಿಯಾದ ಶ್ರುತಿ ಪ್ರಮಾಣದಿಂದ ತನ್ನಂತೆ ಅನ್ಯವಿಲ್ಲದೇ ತಾನೊಂದೇ ಒಂದಾದುದೂ ಪರಬ್ರಹ್ಮವೆಂದು ಕರೆಯಿಸಿಕೊಳ್ಳುವುದೂ, ಸಚ್ಚಿದಾನಂದ ಲಕ್ಷಣದಿಂದ ಕೂಡಿದುದೂ ಆದ ಯಾವ ಶಿವತತ್ತ್ವವಿರುವುದೋ ಅದನ್ನೇ

---

೮. ಶ್ರೀ ಬಸವಲಿಂಗ ಸ್ವಾಮಿಗಳು, ಷಟ್‌ಸ್ಥಲ ಕೌಮುದಿ ಮೈಸೂರು (೧೯೩೭)

ಆದರದಿಂದ ಶಿವಾಚಾರ್ಯರು ಸ್ಥಲವೆಂದು ಹೇಳಿರುವರು.] ಇಲ್ಲಿ ಉದ್ಧರಿಸಿದ ಶಬ್ದ ಪ್ರಮಾಣವು 'ಸ್ಥಲ'ಪದದ ಜ್ಞಾನವನ್ನು ಒದಗಿಸಿತು. ಇನ್ನು ಉಳಿದದ್ದು 'ಕಟ್ಟು' ಎಂಬ ಪದವು. 'ಕಟ್ಟು' ಎಂದರೆ ಕಟ್ಟುವ ಸಾಧನ–ಹಗ್ಗ ಅಥವಾ ದಾರ. ಇದೇ ಸೂತ್ರ. ಸ್ಥಲ ಅಂದರೆ ಬ್ರಹ್ಮ. ಅದರ ಸೂತ್ರ ಅಂದರೆ ಕಟ್ಟು. ಬ್ರಹ್ಮ ಬಹಳವಾದುದು–ದೊಡ್ಡದು. ಈ ಬ್ರಹ್ಮವನ್ನು ಸ್ವಲ್ಪದರಲ್ಲಿ ಅಥವ ಸ್ವಲ್ಪಕ್ಕೆ ತಂದು ಕೊಟ್ಟುದು ಇಲ್ಲವೇ ಕಟ್ಟಿದುದು ಕಟ್ಟು. ಬ್ರಹ್ಮದ ವ್ಯವಸ್ಥಿತ ಪ್ರತಿಪಾದನೆ ಸ್ವಲ್ಪದರಲ್ಲಿ ಹಿಡಿದಿಟ್ಟುದೇ ಕಟ್ಟು, ಸೂತ್ರ–ಶಬ್ದ. ಕಟ್ಟು ಅಥವ ಸೂತ್ರದ ಅರ್ಥವು ಹೀಗಿದೆ:

ಲಘೂನಿ ಸೂಚಿತಾರ್ಥಾನಿ ಸ್ವಲ್ಪಾಕ್ಷರ ಪದಾನಿ ಚ।
ಸರ್ವತಃ ಸಾರಭೂತಾನಿ ಸೂತ್ರಾಣ್ಯಾಹುರ್ಮನೀಷಿಣಃ॥

[ಸಂಕ್ಷಿಪ್ತವಾಗಿರುವ ಅರ್ಥವನ್ನು ಸೂಚಿಸುವ,ಮಿತವಾದ ಅಕ್ಷರಗಳಿಂದಲೂ ಪದಗಳಿಂದಲೂ ರಚಿಸಲ್ಪಟ್ಟಿರುವ ಚಿಕ್ಕಪದ ಅಥವ ಪದಪುಂಜವು ಎಂದು ಮನೀಷಿಗಳು ಹೇಳುತ್ತಾರೆ.]

ಗೌತಮನ ನ್ಯಾಯಸೂತ್ರ, ಕಣಾದನ ವೈಶೇಷಿಕ ಸೂತ್ರ, ಪಾತಂಜಲಿಯ ಯೋಗಸೂತ್ರ, ಜೈಮಿನಿಯ ಧರ್ಮ ಸೂತ್ರಗಳಂತೆ ಶಿವಾನುಭವ ಸೂತ್ರಗಳಿವೆ; ಅದೇ ರೀತಿ ವಚನಗಳೂ ಇವೆ. ಬ್ರಹ್ಮವನ್ನು ಅಥವ ಸ್ಥಲ ಇಲ್ಲವೆ ಷಟ್‌ಸ್ಥಲವನ್ನು ವಚನಗಳು ಮಿತವಾದ ಪದಗಳಿಂದ ಸಂಕ್ಷಿಪ್ತವಾಗಿರುವ ಅರ್ಥದೊಂದಿಗೆ ಬಹಳವಾದ ಬ್ರಹ್ಮ (ಸ್ಥಲ, ಷಟ್‌ಸ್ಥಲ)ವನ್ನು ಸೂಚಿಸುವಂತೆ; ಅದರ ವಿಕಾಸವು ಯಥಾವತ್ತಾಗಿ ಆಗುವಂತೆ ನಿಯಮಿಸುತ್ತದ. ಇಲ್ಲವೆ ನಿಯಂತ್ರಿಸುತ್ತದೆ. ಆದ್ದರಿಂದ ಇದು ಒಂದು ಅರ್ಥದಲ್ಲಿ ನಿಯಂತ್ರಕ ಶಕ್ತಿ ಅದರ ಪ್ರವೃತ್ತಿ ಮತ್ತು ನಿವೃತ್ತಿಗಳನ್ನು ವಿಕಾಸನಿಯಮವೇ ಕಟ್ಟು. ಈ ಶಬ್ದಮಯವಾದ ಕಟ್ಟು (ಸೂತ್ರ) ಮಹತ್ವದ ಪಾತ್ರವನ್ನು ಸ್ಥಲಚರಿತ್ರೆಯಲ್ಲಿ ನಿರ್ವಹಿಸುತ್ತದೆ.

**ಸ್ಥಲವಿಕಾಸ ಮತ್ತು ಸ್ಥಲಶಾಸ್ತ್ರ ವಿಕಾಸ:**

ಸ್ಥಲವಿಕಾಸವು ಸ್ಥಲಶಾಸ್ತ್ರವಿಕಾಸವಾಗಿದೆ. 'ಬಯಲು ಬಲಿದು ಒಂದು ಬಿಂದು' ವಾಯಿತೆಂಬ ಅಲ್ಲಮಪ್ರಭುವಿನ ಮಾತಿನಲ್ಲಿ ಬಯಲು ಬಯಲಾಗಿ ಉಳಿಯಬಾರದೆಂದು ಸರ್ವ ಮೂಲಾಹಂಕಾರವಾಯಿತ್ತು ಎಂಬ ಚನ್ನಬಸವಣ್ಣನ ವಿಚಾರದಲ್ಲಿ ಬಯಲು 'ಓಂ'ಕಾರ ವಾಗಿತ್ತು ಎಂಬ ಅಥವ ಬಯಲು ಸಾದಾಖ್ಯವಾಯಿತ್ತೆಂಬ ಅರ್ಥವಿದ. ಬಯಲ ಶಕ್ತಿಯೇ ಜ್ಞಾನ, ಪ್ರಜ್ಞೆ ಎಂಬ ಶಬ್ದ. ಈ ಶಬ್ದವೇ ಮೂಲಚಿತ್ತು. ಹೀಗೆ ವಿಕಾಸಾ ವಸ್ಥೆಯ ಪ್ರಾರಂಭವು ಶಬ್ದರೂಪವಾಗಿರುವುದು. ಇದೇ ಮಹಾಲಿಂಗ. ಮಹಾಲಿಂಗ ವಿಕಾಸವು, ಶಬ್ದವಿಕಾಸವು ಅಥವ 'ಓಂ'ಕಾರ ವಿಕಾಸವು. ಆದ್ದರಿಂದ ಇದು ಅಕ್ಷರ ಎಂದು ಉಪನಿಷತ್ತುಗಳು ಈ ವಿರಾಡ್‌ಪುರುಷ (ಮಹಾಲಿಂಗವ)ನನ್ನು ಹೆಸರಿಸಿದ್ದುಂಟು. ಈ ವಿಚಾರ ಋಗ್ವೇದ ಮತ್ತು ಬ್ರಾಹ್ಮಣಗಳಷ್ಟು ಪುರಾತನ. ವಾಕ್ಯಪದೀಯಕ್ಕೆ ಮುನ್ನುಡಿ ಬರೆಯುತ್ತ ಅಯ್ಯರ ಹೀಗೆ ತಿಳಿಸುತ್ತಾರೆ: Some of them certainly contain

the idea that Brahman is the ultimate source of everything. while others convey the idea that vak is the origin of everything. After that it is but one step to identify Brahman with vak; as Ait. Br. IV. 21.1 does.........In Rgveda X.125. vak which manifests itself as everything. ಇದನ್ನು ಭರ್ತೃಹರಿಯು ಹೀಗೆ ಸೂತ್ರೀಕರಿಸಿದ್ದಾನೆ.

ಅನಾದಿ ನಿಧನಂ ಬ್ರಹ್ಮ ಶಬ್ದತತ್ತ್ವಂ ಯುದಕ್ಷರಮ್।
ವಿವರ್ತತೇಽರ್ಥಭಾವೇನ ಪ್ರಕ್ರಿಯಾ ಜಗತೋ ಯತಃ॥ ವಾಕ್ಯಪದೀಯ೧.೧.

[ಅನಾದಿ-ಅನಂತವಾದ ಪರಮಾರ್ಥ ಸೃಷ್ಟಿತತ್ತ್ವವೇ 'ಶಬ್ದ'. ಅದೊಂದೇ ನಿಜ. ಅದರನಂತ ಪರಿಣಾಮಾಭಾಸಗಳೇ ಅರ್ಥಗಳು. ಲೋಕವ್ಯವಹಾರವೆಲ್ಲ ಆದರ ಆಧಾರದಿಂದಲೇ ಸಾಗಿದೆ.]

We find that all the manifestations of Brahaman are intertwined with the word and so it is concluded that their root cause, Brahman, must be of the nature of the word. That is it must be **Shabdatattva.** ಶಬ್ದತತ್ತ್ವ ಮತ್ತು ರುದ್ರಸ್ವರೂಪದ ಶಿವಬ್ರಹ್ಮತತ್ತ್ವಗಳಿಗೆ ಇರುವ ನಿಕಟ ಸಂಬಂಧವು ಕೂಡ ಋಗ್ವೇದದಷ್ಟು ಪುರಾತನ. ಋಗ್ವೇದದಲ್ಲಿರುವ ದೇವೀ ಸೂಕ್ತವು ಈ ಸಂಬಂಧವನ್ನು ತೋರಿಸುವ ಪ್ರಥಮ ಪತ್ಯವಾಗಿರುತ್ತದೆ. ದೇವಿಯು ರುದ್ರನ ಅತ್ಯಂತ ಬಲಿಷ್ಠ, ಅವನಿಗೆ ರಕ್ಷಿಸುವ ಸಾಮರ್ಥ್ಯವಿದೆಯೆಂದು ಖಚಿತವಿರುತ್ತದೆ. ಅವಳು 'ವಾಕ್' ರಕ್ಷಣೆಯ ಹೊಣೆಯನ್ನು ರುದ್ರನಿಗೆ ಒಪ್ಪಿಸುತ್ತಾಳೆ: ನೀನು ಬಲಿಷ್ಠನಿರುವಿ. ವಾಕ್‌ನ್ನು ರಕ್ಷಿಸಬಲ್ಲೆ. ವಾಕ್ ರಕ್ಷಣೆಯನು ನೀನು ಮಾಡು ಎಂದು ಅವನಿಗೆ ವಾಕ್ ಒಪ್ಪಿಸುತ್ತಾಳೆ. ಶ್ವೇತಾಶ್ವತರ ಉಪನಿಷತ್ತು ಕೂಡ ರುದ್ರ-ಶಿವನೇ ವೇದವನ್ನು ಬ್ರಹ್ಮನಿಗೆ ಪ್ರಕಾಶಪಡಿಸುವನೆಂಬ ವಿಚಾರವನ್ನು ತಿಳಿಸುತ್ತದೆ.

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈವೇದಾಂಶ್ಚ
ಪ್ರಹಿಣೋತಿ ತಸ್ಮೈ।
ತಂ ಹ ದೇವ ಮಾತ್ಮ ಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ
ಪ್ರಪದ್ಯೇ। ೬.೧೮

[ಯಾವನು ಸೃಷ್ಟಿಗೆ ಮೊದಲು ಬ್ರಹ್ಮನನ್ನು ಉತ್ಪನ್ನ ಮಾಡಿದನೋ ಮತ್ತು ಅವನಿಗೆ ವೇದಗಳನ್ನು ಪ್ರಕಾಶಪಡಿಸಿದನೋ ಅಂಥ ಆತ್ಮಬುದ್ಧಿ ಪ್ರಕಾಶನಾದ ದೇವನನ್ನು ಮುಮುಕ್ಷುವೇ ಆಗಿರುವ ನಾನು ಶರಣು ಹೊಂದುತ್ತೇನೆ.] ಆಗಮಗಳಿಗೂ ಪ್ರಾಚೀನವಾದ ಈ ಪ್ರಣಾಲಿಯು, ಆಗಮಗಳಲ್ಲಿ ಪರಿಪೂರ್ಣಗೊಂಡಿದೆ. ಶಬ್ದವು

[ಜ್ಞಾನ, ವೇದ] ಜೀವನವನ್ನು ಪ್ರಕಾಶಪಡಿಸುವುದು. ಶಬ್ದವು ರಹಸ್ಯವೂ ಅಹುದು ಪ್ರಕಟಿತವೂ ಅಹುದು. ಪ್ರಕಟಗೊಳ್ಳದಾಗ ಅಂದರೆ ರಹಸ್ಯವಾಗಿದ್ದಾಗ ಪ್ರಪಂಚ ಬೋಧವೇ ಇಲ್ಲ. ಶಬ್ದವು ಪ್ರಕಟಗೊಂಡಾಗ ಪ್ರಪಂಚವು ಪ್ರಕಟಗೊಳ್ಳುತ್ತದೆ. ಶಬ್ದವು ಪ್ರಪಂಚ ಮತ್ತು ಅದರ ಬೋಧವೆರಡೂ ಆಗಿದೆ. ಶಬ್ದವು ವಿದ್ಯೆ ಮತ್ತು ಅವಿದ್ಯೆಗಳೆಂದು ತಿಳಿಸುವವು ನಿಗಮಾಗಮಗಳು. ಇವುಗಳನ್ನು ಆಗಮಗಳಲ್ಲಿ ಭಕ್ತಿಶಕ್ತಿ, ಕಲಾಶಕ್ತಿ ಎಂದು ಹೆಸರಿಸಿದೆ. ಶಬ್ದದ ಎರಡು ರೂಪುಗಳು ವಿದ್ಯಾ ಅವಿದ್ಯೆಗಳನ್ನು ಭಕ್ತಿ ಶಕ್ತಿ, ಕಲಾಶಕ್ತಿ ಎಂದು ಅರಿತಾಗ ಶಬ್ದವೇ ಶಕ್ತಿ ಎಂಬ ಮೂಲ ವಿಚಾರದ ಪರಿಚಯವಾಗುತ್ತದೆ. ಅದು ಆತ್ಮನಲ್ಲಿ ಆತ್ಮಬುದ್ಧಿಶಕ್ತಿ ಎಂದು ಕರೆಯಿಸಿಕೊಂಡು, ಆತ್ಮಕ್ಕೂ ಶಬ್ದಕ್ಕೂ ಇರುವ ಅವಿನಾಭಾವ ಸಂಬಂಧವನ್ನು ತಿಳಿಸುತ್ತದೆ. ಇದೇ ವಿಚಾರವನ್ನು ಅಂದರೆ ಶಬ್ದವು ಆತ್ಮನಲ್ಲಿ ಮೊದಲು ಅವ್ಯಕ್ತರೂಪದಲ್ಲಿತ್ತು, ಬಿಚ್ಚಿಬೇರುಮಾಡಲಾಗದಂತಿತ್ತು ಎಂದಾಗ ಆತ್ಮ ಬೇರೆ, ಆತ್ಮಶಕ್ತಿ ಬೇರೆ ಎಂದರ್ಥವಲ್ಲ. ಸೂರ್ಯ ಮತ್ತು ಸೂರ್ಯ ಪ್ರಕಾಶಗಳು ಒಂದೇ ಆಗಿರುವಂತೆ ಆತ್ಮ ಮತ್ತು ಶಬ್ದ ಬೇರೆ ಬೇರೆ ಅಲ್ಲ. ಅರಿತುಕೊಳ್ಳಲು ಅಥವ ತಿಳಿಸಲು ಈ ಭೇದವು ಅನಿವಾರ್ಯವಾಗಿದೆ. ಇದೇ ವಿಚಾರವನ್ನು ಬೈಬಲ್ಲು ಕೂಡ ಪ್ರತಿಪಾದಿಸುತ್ತದೆ. **Word was with God and Word was God.** ಶಿವಾಗಮಗಳಲ್ಲಿ ಚಿತ್ತೇ ಸೃಷ್ಟಿಯಾಗಿದೆ. ಚಿತ್ತೇ ಓಂ. ಚಿತ್ತೆಂದರೆ ಜ್ಞಾನ. ಜ್ಞಾನವೆಂಬುದೇ ಬ್ರಹ್ಮ. ಓಂ ಎಂಬುದೇ ಬ್ರಹ್ಮ. ಇದು ಆಗಮ ಪ್ರಣೀತ; ವಚನಾಗಮ ಪ್ರಣೀತ. ಪಾರಮೇಶ್ವರಾಗಮ (ಪಟಲ. VII. ಶ್ಲೋ. ೧೦೧)ವು ಹೀಗೆ ಹೇಳುತ್ತದೆ.

ಪಂಚಾಕ್ಷರ ಮಯಂ ಲಿಂಗಂ ಲಿಂಗಂ ಪಂಚಾಕ್ಷರ ಮಹತ್।

ಲಿಂಗವು ಮಂತ್ರಮಯವೆಂದೂ, ಲಿಂಗವೇ ಪಂಚಾಕ್ಷರವೆಂದೂ ಹೇಳುವಾಗ, ಮಂತ್ರಮಯವೆಂದರೆ ಮಂತ್ರವೇ ಎಂದು ಸ್ಪಷ್ಟಿಕರಿಸಿದೆ, ಈ ಮಂತ್ರ.

ನಾಮರೂಪ (ಶಬ್ದ ಮತ್ತು ಅರ್ಥ)ಗಳು ಹಾಗೂ ಕ್ರಿಯಾಯುಕ್ತವಾದ ಇವು ಶಿವ ಪರಬ್ರಹ್ಮನ ಶರೀರವಾಗಿದೆ ಎಂದು ಇದರಿಂದ ಗೊತ್ತಾಗುತ್ತದೆ. ಇದಕ್ಕೂ ಮನೋಹರವಾಗಿ ಜೇಡರ ದಾಸಿಮಾದ್ಯರು ಶಬ್ದ ಸಂಪಾದನೆ, ಬ್ರಹ್ಮ ಸಂಪಾದನೆ ಎಂದು ತಿಳಿಸಿ ಶಬ್ದಬ್ರಹ್ಮಗಳ ಅಭೇದ ಪ್ರಣಾಲಿ ಪ್ರತಿಪಾದಿಸುತ್ತಾರೆ:– "ಶರಣರ ಸೂಳ್ನುಡಿಯನು ಒಂದರಗಳಿಗೆ ಇತ್ತಡೆ, ನಿನ್ನನಿತ್ತೆ ಕಾಣಾ ರಾಮನಾಥಾ". ಅಲ್ಲಮ ಪ್ರಭುಗಳು ಈ ಅಭೇದವನ್ನು ಹೇಳಿದ್ದು ಇನ್ನೂ ಸ್ಪಷ್ಟವಾಗಿದೆ:– "ಮಾತೆಂಬುದು ಜ್ಯೋತಿರ್ಲಿಂಗ". ಶಬ್ದ ಬ್ರಹ್ಮಸಂಪಾದನೆಯ ಪ್ರಮಾಣ ಅಥವ ಕರಣ ಕೂಡ ಶಬ್ದವೇ ಆಗಿದೆ. "ಶಬ್ದ ಸೋಪಾನ ಕಟ್ಟಿ ನಡಿಸಿದರು ಪುರಾತನರು" ಎಂಬ ಚೆನ್ನಬಸವಣ್ಣನವರ ಮಾತು ಈ ವಿಚಾರವನ್ನು ತಿಳಿಸುತ್ತದೆ. ಬ್ರಹ್ಮವಾಗಿ ಬ್ರಹ್ಮವನ್ನು ತಿಳಿ; ಬ್ರಹ್ಮವಾಗದೇ ಬ್ರಹ್ಮ ವೇದ್ಯವಾಗದು ಎಂಬ ಮಾತುಗಳೂ ಕೂಡ ಇದೇ ಪ್ರಣಾಲಿಗೆ ಸೇರಿದವು. ಯಾಕೆಂದರೆ 'ಪ್ರಜ್ಞಾನಂ ಬ್ರಹ್ಮ, ಪಾರಮೇಶ್ವರಾಗಮ (X. 7೮)ವು ಈ ಎಲ್ಲ ವಿಚಾರಗಳನ್ನು ಹೀಗೆ ತಿಳಿಸುತ್ತದೆ:

ಜಗತ್ ಸರ್ವಮಹಂ ದೇವಿಯಚ್ಚ ಕಿಂಚಿಚ್ಚರಾಚರಮ್।
ಮಚ್ಛರೀರಮಿದಂ ವಿದ್ಧಿ ನಾಮರೂಪ ಕ್ರಿಯಾತ್ಮಕಮ್॥

ಶಬ್ದದ ನಾನಾ ರೂಪವೇ ಈ ಪ್ರಪಂಚದ ವೈವಿಧ್ಯಮಯವಾದ ಸ್ವರೂಪವಾಗಿದೆ. ವಾತುಲಾಗಮದ ಒಂದನೆಯ ಪಟಲದ ಏಳನೆಯ ಹಾಗೂ ಎಂಟನೆಯ ಶ್ಲೋಕಗಳು ಇದರ ವಿಕಾಸವನ್ನು ಚಿತ್ರಿಸುತ್ತವೆ:

ಶಿವತತ್ತ್ವೇ ಪರೇಸೂಕ್ಷ್ಮೇ ಬಿಂದು ರೂಪಂತು ಜಾಯತೇ।
ಬಿಂದೋರ್ನಾದಃ ಸಮುತ್ಪನ್ನೋ ನಾದಾಚ್ಛಕ್ತಿರಜಾಯತ॥
ಶಕ್ತೇಸ್ತು ಜಾಯತೇ ಶಬ್ದಾಜ್ಞಾ ತಂತು ವಾಗ್ಭವಮ್।

ಶಿವತತ್ತ್ವವು ವಿವಿಧ ರೂಪಗಳಾಗಿರುವುದನ್ನು ಚಿತ್ರಿಸುವ ಈ ಶ್ಲೋಕವು ಶಕ್ತಿಯಿಂದಲೇ ಶಬ್ದೋತ್ಪತ್ತಿ ಎಂದು ತಿಳಿಸುತ್ತದೆ. ಶಬ್ದ ಅಂದರೇ ವೇದ. ಅದು ಕರ್ಮ ಪ್ರಬೋಧಕ. ವೇದವೇ ಕರ್ಮ. ಶಬ್ದವೇ ಜ್ಞಾನ ಜ್ಯೋತಿ. ಅದೇ ಉಪನಿಷತ್ತು. ಇವೇ ಅನುಕ್ರಮವಾಗಿ ಆಗಮ ಮತ್ತು ಆಗಮಾಂತಗಳು. ಮಾತು ನಿತ್ತಂದೇ ಪ್ರಪಂಚವು ನಿಲ್ಲುವುದು. ಮಾತೇ ಪ್ರಪಂಚವೆಂಬುದನ್ನು ಶರಣರು 'ಶಬ್ದ ಸಂದಳಿ'ಎಂದು ಕರೆದಿರುವರು. ಶಬ್ದಸಂದಣಿ ಮನೋವೃತ್ತಿಗಳು ಪಿಂಡಾಂಡದಲ್ಲಿ. ಅದೇ ಮನೋಪ್ರಪಂಚ. ಮನ ಮತ್ತು ಮನೋವೃತ್ತಿಗಳು ಬೇರೆ ಬೇರೆ ಆಗಿರದಂತೆ ಅದರ ವೈವಿಧ್ಯಮಯವಾದ ಪ್ರಪಂಚ ಬೇರೆ ಬೇರೆ ಅಲ್ಲ. ಶಬ್ದಕ್ಕೊಂದು ಅರ್ಥವಿದೆ. ಅರ್ಥಕ್ಕೊಂದು ಶಬ್ದವಿದೆ. ಅವೆರಡು ಬಿಚ್ಚಿ ಬೇರೆಮಾಡಲಿಕ್ಕಾಗದು. ಇದೇ ಶಬ್ದಬ್ರಹ್ಮವಾದ; ಶಕ್ತಿ ವಿಶಿಷ್ಟ ಶಬ್ದ ಬ್ರಹ್ಮವಾದ. ವಾತುಲಾಗಮದ ಮಾತು ಇನ್ನೂ ಸ್ಪಷ್ಟವಾಗಿದೆ, ಖಚಿತವಾಗಿದೆ: ವಾತುಲಾಗಮದ ಮಂತ್ರಭೇದ ಪಟಲ:

ಮಂತ್ರಸ್ತು ದೇವತಾ ರೂಪಮಿದಂ ಜಗತ್।

ಮಂತ್ರದಿಂದ ಅಭಿನ್ನ ಜಗತ್ತು. ಮಂತ್ರೇ ಜಗತ್ತು; ಜಗತ್ತೇ ಮಂತ್ರ. ಮಂತ್ರವು ದೇವತಾ ರೂಪವಾಗಿದೆ. ಇದು ಮಂತ್ರ ದೇವತಾ ಜಗತ್ ಅದ್ವೈತವಾದ ಭರ್ತೃಹರಿಯು ಇದನ್ನೆ ಹೀಗೆ ಹೇಳಿದ್ದಾನೆ ವಾಕ್ಯ ಪದೀಯದಲ್ಲಿಯ ಪ್ರಥಮ ಶ್ಲೋಕದಲ್ಲಿ: ಅನಾದಿ ಅನಂತ ಪರಮಾರ್ಥವೆಂಬುದೇ ಸೃಷ್ಟಿತತ್ತ್ವ. ಅದೇ 'ಶಬ್ದ'. ಕ್ಷಯರಹಿತವಾದುದು. ಅಂದರೆ ವ್ಯಕ್ತಾವ್ಯಕ್ತ ರೂಪದಿಂದ ಇರುವದರಿಂದ ಕ್ಷಯವೆಂಬುದಿದಕ್ಕಿಲ್ಲ. ಸೃಷ್ಟಿ ಅನಾದಿ ಎಂಬರ್ಥಕ್ಕೆ ಇದು ತಾತ್ವಿಕ ಮೂಲ. ವ್ಯಕ್ತವಾದಾಗ ವಾಕ್ ಮತ್ತು ಅರ್ಥವೆಂದೆರಡಾದ ಜಗತ್ತು ಆಗಿದೆ. ಈ ಎರಡಾದ ಜಗತ್ತು ಶಬ್ದರೂಪದಿಂದ ಪರಮಾರ್ಥದಲ್ಲಿ ಲೀನವಾಗಿರುತ್ತದೆ. ಆಗ ಅದು ಅವ್ಯಕ್ತ. ಶಬ್ದ ಮತ್ತು ಅರ್ಥಗಳು ಬೇರೆ ಬೇರೆಯೆಂದೆರಡಿಲ್ಲವೆಂಬುದೇ ಅದ್ವಯಾನುಭವ. ವಿಕೃತವಾದವಾಗಿರದ ಇದು ಅವಿಕೃತವಾದವಾಗಿದೆ. ಇವನ್ನು ಬಾದರಾಯಣರ ಪರಿಭಾಷೆಯಲ್ಲಿ ಹೇಳಬೇಕೆಂದರೆ– ಪರಮ ಮುಖ್ಯವೃತ್ತಿಯಿಂದ ಅಥವ

ವಿದ್ವದ್ ರೂಢಿಯಿಂದ ಯೋಗಿಗಳು ವ್ಯವಹಾರ ನಡೆಸುವರು- ಎಲ್ಲ ಲೌಕಿಕ ಮತ್ತು ವೈದಿಕ ಶಬ್ದಗಳನ್ನೂ ಪರಮಾತ್ಮನಲ್ಲಿಯೇ ಸಮನ್ವಯ ಮಾಡುತ್ತಾರೆ ಪ್ರಾಜ್ಞರು "ತತ್ತು ಸಮನ್ವಯಾತ್" ಎಂಬ ಸೂತ್ರ ವಿವರಣೆಯಿದು. ನುಡಿಯೊಳಗಾಗಿ ನಡೆಯುವದೆಂದರೆ ಪರಮಾರ್ಥವೆಂದನ್ಯವಾಗಿ ವ್ಯವಹಾರ ಇರಬಾರದೆಂಬುದೇ ಈ ಸಮನ್ವಯ ವಿಚಾರ ಬಸವಣ್ಣನವರಲ್ಲಿದೆ. 'ನುಡಿದರೆ ಲಿಂಗಮೆಚ್ಚಿ ಅಹುದೆನ್ನಬೇಕು' ಎಂಬುದು ಕೂಡ ವ್ಯವಹಾರ ವಾಚ್ಯವಾದುದು ಪರಮಾರ್ಥ ಪ್ರವೃತ್ತಿಯನ್ನೇ ಇಟ್ಟು ಕೊಂಡಿರಬೇಕೆಂದು ಸೂಚಿಸುತ್ತದೆ. ವಾತುಲಾಗಮದ ಮಂತ್ರಭೇದ ಪಟಲದ ಏಳನೆಯ ಶ್ಲೋಕದಲ್ಲಿ ಇದರ ಸಾರ ಸೂಸಿದೆ:

ಮನನಂ ಸರ್ವಪಕ್ಷೇಷು ತ್ರಾಣಂ ಸಂಸಾರ ಸಾಗರಾತ್।
ಮನನ ತ್ರಾಣಾಧರ್ಮಾತ್ವಾತ್ ಮನ್ತ್ರ ಇತ್ಯಭಿಧೀಯತೇ॥

ಮನನ ಮತ್ತು ತ್ರಾಣಧರ್ಮವುಳ್ಳ ಮಂತ್ರವು-ಅಂದರೆ ಸಂಸಾರ ಸಾಗರವನ್ನು ದಾಟಿಸುವ ಬೈತ್ರವು ಮಂತ್ರವು ಬ್ರಹ್ಮವಾಗಿದೆ, ಸಂಸಾರವಾಗಿದೆ, ಸಂಸಾರದಿಂದ ದಾಟಿಸುವ ಉಪಾಯವೂ ಆಗಿದೆ. ಇದು ಅದ್ವೈತಾನುಭವ. ಇದು ನಡೆಯು ನಡಿಯೊಳಗಾದರೀತಿ. ಆಚಾರವು ವಿಚಾರ ಅಥವ ಶಬ್ದವಾದ ರೀತಿ ಇಲ್ಲವೆ ನಾದಲಿಂಗವಾದ ರೀತಿ. ಓಂಕಾರವು ಜಗವಾಗಲು ಬಲ್ಲದು, ಜಗವಾಗದಿರಬಲ್ಲದು- ಶಿವ ಜಗವಾಗಲು ಬಲ್ಲ ಜಗವಾಗದಿರಲು ಬಲ್ಲ. ಇದೇ ವೇದ, ಇದೇ ಉಪನಿಷತ್ತು, ಇದೇ ವಚನ* (ಮಂತ್ರ). ಶಬ್ದಾದ್ವೈತಿ ಭರ್ತೃ ಹರಿ ಆಗಮಗಳ ಆಳವಾದ ಪ್ರಭಾವಕ್ಕೊಳಗಾದವನು. ಅವನು ಹೀಗೆ ಬರೆಯುವನು. ಇವನ ಕಾಲ ಕ್ರಿ.ಶ.

**1) The ultimate Reality, Brahaman, which is without beginning or end, is of the nature of the word (Shabdatattva), and from it are manifested all the objec s and the whole Cosmoss.**

**2) The ultimate Reality is One, but it manifests itself as many because of its many powers. It does so, however, without losing its Oneness. It is not different from its powers but appears to be different.**

---

* ಅಥರ್ವವೇದದಲ್ಲಿ, ಮನುಶಾಸ್ತ್ರದಲ್ಲಿ ಸಾವಿತ್ರೀ ವಚನ ಎಂಬ ಪ್ರಯೋಗವು ವಚನ ಅಂದರೆ ಮಂತ್ರವೆಂಬರ್ಥವನ್ನೇ ಕೊಡುವುದು-ನೋಡಿ Dr.S. Radha-Krishnan Religion And Society ಮತ್ತು ರಾಮಕೃಷ್ಣಮಿಶನ್‌ನವರು ಪ್ರಕಟಿಸಿದ ಶಾರದಾಮಾತೆಯ ಚರಿತ್ರೆ.

3) Of its many powers, Time is the most important. It is One, but divisions are super imposed on it. On it depend all different kinds of change (Shabdabhava vikarah) which bring multiplicity in Being.

4) The ultimate, which is One, contains the seeds of all multiplicity. It manifests itself as the experiencer, the experienced and the experience itself.

ಇಲ್ಲಿ ಬರುವ ಶಕ್ತಿಗಳ, ಶಬ್ದದ ವಿವಿಧ ರೂಪ್ರಗಳ ಮಾತುಗಳಿಗೆ ಶಿವಾಗಮಗಳೇ ಆಕರಗಳಾಗಿವೆ. ಶಿವಶಕ್ತಿಯರನ್ನು ಕುರಿತಿರುವ ಬರ್ತೃಹರಿಯ ಶಬ್ದವಿಕಾಸ ಮೊದಲಾದ ವಿಚಾರಗಳು ಶಿವಾಗಮೋಕ್ತವೆ. ಆಗಮುಗಳ ನಿಕಟ ಪರಿಚಯವಿತ್ತು ಭರ್ತೃಹರಿಗೆ ಆತನು ಬರೆದ ವೃತ್ತಿಯಲ್ಲಿ ಹನ್ನೆರಡು ಆಗಮಶ್ಲೋಕಗಳನ್ನು ಸಂಶೋಧಿಸಿ ಹೇಳಬೇಕಿಲ್ಲ, ಆತನೇ ಹೇಳುತ್ತಾನೆ ಎಂದು ಭರ್ತೃಹರಿಯ ವಿಶೇಷ ಅಧ್ಯಯನ ಮಾಡಿದ ಅಯ್ಯರ ಹೀಗೆ ಬರೆಯುತ್ತಾರೆ: The Vrtti quotes twelve slokas which it calls **agamas** and which are yet traced and they are supposed to explain the ideas contained in **Vak** I. I. The last verse is important because it gives reasons the 'Shabdatattva is Brahaman. It says that this universe is Brahman who creates all objects and phenomena in the form of words Just because all that Brahman creates has the form of the word. The fact that Brahman is called **aksara** (phenomes) is also an indication of its being the word-principle (**shabdatattva**). As every thing else, the phenomes also emerge out of Brahman. They exist potentially within the individual, as one with the self, without any sequence.

ಭರ್ತೃಹರಿಯ ವಿಚಾರವು ಆಗಮೋಕ್ತವೆ. ಅಂದರೆ ವಾಕ್ ವಿವರಣೆಗಾಗಿ ಅವನು ಆಗಮ ಬಳಸಿದ್ದು ಆ ಉದ್ದೇಶ ಸಫಲವೆಂದು ಅಥವಾ ಸಪ್ರಮಾಣವೆಂದು ತೋರಿಸಲು. ಈ ವಿಚಾರಗಳನ್ನು ವಾತುಲಾಗಮದಲ್ಲಿ ನೋಡುತ್ತೇ, ವರ್ಣಭೇದ ಪಟಲವು ತಿಳಿಸುವುದು ಇಂತಿದೆ–ಈ ಪಟಲವು ವರ್ಗಭೇದ ಹೇಳುತ್ತಾ ಸ್ಥಿತಿವರ್ಗ ಪ್ರಥಮ, ಸೃಷ್ಟಿವರ್ಗ ದ್ವಿತೀಯ, ಸಂಹಾರವರ್ಗ ತೃತೀಯವೆನ್ನುವುದು. ಇವುಗಳಲ್ಲಿ ಪುನಾ ಅನುಕ್ರಮವಾಗಿ ತ್ರಿವರ್ಗ, ಅಷ್ಟವರ್ಗ, ಪಂಚವರ್ಗವೆಂದು ಹಲವು ಉಪವರ್ಗಗಳಿರುವವೆನ್ನುವುದು. ವರ್ಗಗಳ ಗುಣಗಳನ್ನು ಗುರುತಿಸುತ್ತದೆ: ಪ್ರಥಮವರ್ಗ ಸಾತ್ವಿಕ, ದ್ವಿತೀಯವರ್ಗ ರಾಜಸಿಕ, ತೃತೀಯವರ್ಗ ತಾಮಸಿಕ ಎಂದು. ಸಕಾರ ಹಿಡಿದು ಯಕಾರಾದಿಗಳು ನಾದ

ಬಿಂದು ಶಕ್ತಿ ಬೀಜ ಧಾತು ಮಜ್ಜಾ ಮೇದ ಮೊದಲಾದವುಗಳೆಂದು ವಿವರಿಸುವುದು. ಇದೇ ಆಗಮದ ಮಂತ್ರಭೇದ ಪಟಲವು ಇನ್ನೂ ಹೆಚ್ಚಿನ ವಿಷಯವನ್ನು ಪ್ರತಿಪಾದಿಸಿದೆ:

ಪ್ರಾಶಬ್ದಃ ಸ್ಯಾಚ್ಛಿವೋ ಜ್ಞೇಯಂ ಸಾಶಬ್ದಃ ಶಕ್ತಿರುಚ್ಯತೇ। ತತ್ಸ್ವರೂಪಂ ತು ದಃಶಬ್ದಸ್ತ್ರಿವರ್ಣ ಮಭಿಧೀಯತೇ.... ಶುದ್ಧಃ ಶಿವ ಇತಿ ಪ್ರೋಕ್ತಸ್ತಸ್ಮಾಚ್ಛೃದಃ ಪ್ರಕೀರ್ತಿತಃ। ಸಾದಾಖ್ಯಂ ಯತ್ಪರಂ ಬೀಜಂ ಆದಿಸ್ವರಸಮನ್ವಿತಮ್॥ ಹ=ಇತಿ ಹೀಗೆ ಶಿವನ ಸ್ಥೂಲ ಸೂಕ್ಷ್ಮ ಕಾರಣ ಸ್ವರೂಪಗಳು ಮಂತ್ರರೂಪವೆಂದು ತಿಳಿಸುವುದು.

ಆಗಮ ಸಾಹಿತ್ಯವು ಜೀವನ ವಿಕಾಸದ ವಿಕಾಸವಾಗಿರುವುದರಿಂದ ಅದು ಚತುಷ್ಪಾದ ಸಾಹಿತ್ಯವೆಂದು ಪ್ರಸಿದ್ಧಿ ಪಡೆದಿದೆ. ಚತುರ್ವಿಧವಾದ ಅನುಭಾವ ಬದುಕನ್ನು ಬೋಧಿಸುವದೇ ಇದರ ವಿಕಾಸದ ಮತ್ತು ವ್ಯವಸ್ಥೆಯ ಕಾರಣವಾಗಿದೆ. ಆಗಮಗಳಲ್ಲಿಯ ತತ್ತ್ವಗಳು ವೈಶೇಷಿಕಶಾಸ್ತ್ರ ಬೋಧನೆಯ ವಸ್ತುಗಳಾಗಿವೆ. ಆಗಮಗಳಲ್ಲಿ ಬರುವ ದ್ರವ್ಯ ಗುಣ ಕ್ರಿಯಾ ಕಾಲ ನಿಯತಿ ಮೊದಲಾದವುಗಳು ಆಗಮ ಪ್ರಣೀತ. ವೈಯ್ಯಾಕರಣಿ ಭರ್ತೃಹರಿಯು ಪೂರ್ವದಲ್ಲಿಯೇ ಜನಪ್ರಿಯವಾದ ಆಗಮಗಳಿಂದ ಪ್ರಭಾವಿತನಾಗಿದ್ದಾನೆಂಬುದಕ್ಕೆ ಈ ಎಲ್ಲ ತತ್ತ್ವಗಳನ್ನೂ ಆತನು ವಾಕ್‌ಪದೀಯದಲ್ಲಿ ಪ್ರತಿಪಾದಿಸಿರುವುದೇ ಸಾಕ್ಷಿ. ಕ್ರಿ. ಶ. ಐದನೆಯ ಶತಮಾನದ ಕಂಚೀಶಾಸನವು ೨೮ ದಿವ್ಯಾಗಮಗಳನ್ನು ಉಲ್ಲೇಖಿಸಿದೆ. ಅರಸರು ಅವುಗಳನ್ನು ಆಚರಿಸಲು ಸೂಕ್ತ ಶಾಸ್ತ್ರಗಳೆಂದು ಬಗೆದಿದ್ದರೆಂಬುದು ಗೊತ್ತಾಗುತ್ತದೆ. ಕ್ರಿ. ಶ. ಪೂರ್ವದಲ್ಲಿಯೇ ಇದ್ದವೆಂದು ಕೂಡ ವಿದ್ವಾಂಸರ ಅಭಿಪ್ರಾಯವಿದೆ. ಆದ್ದರಿಂದ ಆಗಮಗಳಲ್ಲಿ ಬರುವ ತತ್ತ್ವಗಳನ್ನು ಅನೇಕ ದರ್ಶನಗಳು ಉಪಯೋಗಿಸಿಕೊಂಡಂತೆ ಕಾಣುತ್ತದೆ.

ವೈಯ್ಯಾಕರಣಿಗಳ ಶಾಸ್ತ್ರ ಪ್ರಭಾವವು ವೈಶೇಷಿಕರ ಮೇಲಾಗಿದೆಯೆಂದು ವಿದ್ವಾಂಸರ ಅಭಿಪ್ರಾಯ: It has been suggested by some scholars that the system of Vaisesika categories of substance, quality and action was much influenced by gramatical categories of samskrit language.[೯] ಆದರೆ ಸ್ವತಃ ಭರ್ತೃಹರಿಯು ಆಗಮಕ್ಕೆ ಋಣಿಯಾಗಿರುವದನ್ನು ಅವನು ಬರೆದ ವೃತ್ತಿಯಲ್ಲಿ ಆಗಮ ಶ್ಲೋಕಗಳನ್ನುದ್ಧರಿಸಿರುವದನ್ನು ಹೇಳಿದ್ದರಿಂದ, ವೈಶೇಷಿಕವು ವೈಯ್ಯಾಕರಣಿಗಳ ದರ್ಶನದಿಂದ ಪ್ರಭಾವಿತವಾಗಿದ್ದರೂ ಕೂಡ ಅದು ಅಪ್ರತ್ಯಕ್ಷವಾಗಿ ಆಗಮದಿಂದ ಪ್ರಭಾವಿತವೆ ಎಂದು ದರ್ಶನ ಸಾಹಿತ್ಯದ ದೃಷ್ಟಿಯಿಂದ ಒಪ್ಪಬೇಕಾಗುವದು. ವೇದದಲ್ಲಿ ಸೂಕ್ಷ್ಮವಾಗಿ ಪ್ರಕಟವಾದ ವ್ಯಾಕರಣ ದರ್ಶನ ತತ್ತ್ವ

---

೯ Prof. B. K. Motilal, Logic Language and Reality. P. 378 Motilal Banarsidas (1985)

ಗಳು ಆಗಮದಿಂದ ವಿಸ್ತೃತವಾಗಿ ಪ್ರತಿಪಾದಿತವಾಗಿರುವಂತೆ, ವ್ಯಾಕರಣ ದರ್ಶನದಲ್ಲಿ, ವೈಶೇಷಿಕದಲ್ಲಿ ದಾರ್ಶನಿಕ ದೃಷ್ಟಿಯಿಂದ ಪ್ರತಿಪಾದನೆಗೊಂಡಿವೆ ಆಗಮಪ್ರಣೀತ ತತ್ತ್ವಗಳೆನ್ನಬಹುದು. ಅದೇ ರೀತಿ ಆಗಮೋಕ್ತ ವೀರಶೈವವು ಆಗಮದಿಂದ ನೇರವಾಗಿ ತತ್ತ್ವಗಳನ್ನು ತೆಗೆದುಕೊಂಡಿದೆ. ತನ್ನ ದಾರ್ಶನಿಕ ದೃಷ್ಟಿಕೋನದಿಂದ ಅವುಗಳ ಪ್ರತಿಪಾದನೆ ಮಾಡಿದೆ. ಆದರೆ ಕೆಲವು ವೀರಶೈವ ವಿದ್ವಾಂಸರು ತಿಳಿಸಿದಂತೆ ವೈಶೇಷಿಕದ ಪ್ರಭಾವಕ್ಕೆ ಒಳಗಾಗಿಲ್ಲ. ಆದರದೇ ಆದ ಷಟ್‌ಸ್ಥಲ ಸಾಹಿತ್ಯವು ರೂಪುಗೊಂಡಿದೆ ಅದರ ಷಡ್ವಿಧ ತತ್ತ್ವಗಳಿಗೆ, ಷಡ್ವಿಧ ಜೀವನ ಕ್ರಮಗಳಿಗೆ ಅನುಸರಿಸಿ. ಈ ಸ್ಥಲವಿಕಾಸವೇ ಸ್ಥಲಸಾಹಿತ್ಯ ವಿಕಾಸವೆಂದು ಪ್ರತಿಪಾದಿಸುವ ಈ ಸಂದರ್ಭದಲ್ಲಿ ಈ ಎರಡುಮಾತುಗಳನ್ನಿಲ್ಲಿ ವಿವರಿಸ ಬೇಕಾಗಿಬಂತು.

## ತತ್ತ್ವಜ್ಞಾನಕ್ಕನುಸರಿಸಿ ಆ ಶಾಸ್ತ್ರ ಭಾಷೆಯ ಸ್ವರೂಪಸಿದ್ಧಿ:

ಭಾರತೀಯ ದರ್ಶನಗಳಲ್ಲಿ ಬಳಸಲಾದ ಪಂಚಮಹಾಭೂತಗಳ ಹೆಸರುಗಳು, ಅಂತಿಮ ತತ್ತ್ವದ ಅಥವಾ ತತ್ತ್ವಗಳ ಹೆಸರುಗಳು ಒಂದೇ ಅವೆ. ಉದಾಹರಣೆಗೆ ವೇದಾಂತ ದರ್ಶನಗಳಲ್ಲಿ 'ಬ್ರಹ್ಮ' ಎಂಬ ಪದವು 'ಆತ್ಮ' ಎಂಬ ಪದವು; ಅದೇ ರೀತಿ ಸಾಂಖ್ಯಯೋಗದಲ್ಲಿ ವೇದಾಂತ ದರ್ಶನಗಳಲ್ಲಿ ಬಳಸಲಾದ 'ಪ್ರಕೃತಿ', 'ಪುರುಷ', 'ಅನಾದಿ' ಎಂಬ ಪದಗಳು. ವೇದಾಂತ ದರ್ಶನಗಳಲ್ಲಿ ಒಂದು ಶಕ್ತಿವಿಶಿಷ್ಟಾದ್ವೈತ ದರ್ಶನವೆಂದು ಶ್ರೀಪತಿ ಪಂಡಿತನು ಹೇಳಿದರೆ, ಆಗಮ ಮತ್ತು ವಚನಗಳಲ್ಲಿ ಷಟ್‌ಸ್ಥಲ ತತ್ತ್ವ ಸಿದ್ಧಾಂತವೆಂದು ಅಥವಾ ಷಟ್‌ಸ್ಥಲ ಸಿದ್ಧಾಂತವೆಂದು ಪ್ರಯೋಗಿಸಲಾಗಿದೆ. ಈ ದರ್ಶನದಲ್ಲಿ ಕೂಡ ಪ್ರಕೃತಿ, ಪುರುಷ, ಮಾಯೆ, ಜೀವ ಎಂಬ ಪದಗಳು ಆಸ್ತಿಕ ದರ್ಶನ ಗಳಲ್ಲಿದ್ದುದು ಉಂಟು ಇದು ಅಲ್ಲದೆ ಅಂಗ, ಲಿಂಗ, ಷಟ್‌ಸ್ಥಲ, ಸಂಪಾದನೆ ಮುಂತಾದ ಹೊಸ ಪದಗಳು ದೊರೆಯುವದುಂಟು ಈ ಸಾಹಿತ್ಯದಲ್ಲಿ. ಶೂನ್ಯ, ಬಯಲು, ನಿರ್ವಾಣ, ಏಕೋತ್ತರ (ಅಂಗುತ್ತರ), ಐಕ್ಯ, ಅಷ್ಟಾಂಗ ಮತ್ತು ಷಡಂಗಯೋಗ ಎಂಬ ಪದಗಳೂ ನಾಸ್ತಿಕ ದರ್ಶನವಾದ ಬೌದ್ಧಸಾಹಿತ್ಯದಲ್ಲಿ ಹಾಗೂ ಆಸ್ತಿಕ ದರ್ಶನವಾದ ವೀರಶೈವ ಇಲ್ಲವೆ ಷಟ್‌ಸ್ಥಲ ಸಾಹಿತ್ಯದಲ್ಲಿ ಉಂಟು. ಆದರೆ ಇವು ಆದರ್ಶನದಲ್ಲಿ ಮತ್ತು ಷಟ್‌ಸ್ಥಲ ದರ್ಶನದಲ್ಲಿ ಒಂದೇ ಅರ್ಥವನ್ನು ಕೊಡುವದಿಲ್ಲ. ಇಲ್ಲಿ ವೇದ೧೧ದಲ್ಲಿ 'ವಾಕ್' ಕುರಿತಿರುವ ಮಾತು ಅತ್ಯಂತ ಸಮಂಜಸವಾಗಿ ಕಾಣುತ್ತದೆ. ವಾಕ್ ಎಂಬ ಗೋವು ಬೇರೆ ಬೇರೆ ಹುಲ್ಲುಗಾವಲುಗಳಲ್ಲಿ, ಬೇರೆ ಬೇರೆ ಝರಿಗಳಲ್ಲಿ ಹುಲ್ಲನ್ನು ಮೇದು, ನೀರನ್ನು

೧೧ ಸಯವಸಾ ಭಗವತೀ ಹಿ ಭೂಯಾ ಅಥೋವಯಂ ಭಗವತಃ ಸ್ಯಾಮ।
ಅದ್ಧಿ ತೃಣಮಧ್ಯೇ ವಿಶ್ವದಾನೀಂ ಪಿಬ ಶುದ್ಧಮುದಕಮಾರ್ಚಂತಿ॥
ನೋಡಿ ಪು. ೭ 'ಭಾರತೀಯ ಶಬ್ದವ್ಯುತ್ಪತ್ತಿಯಲ್ಲಿ ಸ್ಫೋಟದ ಸ್ಥಾನ' ಲೇಖಕ: ಗುರುರಾಜ ಭೀ. ಜೋಶಿ, ಮನ್ವಂತರ ಪ್ರಕಾಶನ ಧಾರವಾಡ ೧೯೭೩.

ಕುಡಿದು ಸೊಕ್ಕಿ ಯಥೇಚ್ಛವಾಗಿ ಹಾಲನ್ನು ಕೊಡುತ್ತದೆ. ಅಂದರೆ ಬೇರೆ ಬೇರೆ ದರ್ಶನಗಳಲ್ಲಿ ಬಳಕೆಗೊಂಡ ಶಬ್ದಗಳು ಅರ್ಥವೈವಿಧ್ಯಸಮೃದ್ಧಿ ಹೊಂದಿದೆಯೆಂಬರ್ಥ. ಒಂದೇ ಶಬ್ದವನ್ನು ಅದ್ವೈತಿಗಳು, ವಿಶಿಷ್ಟಾದ್ವೈತಿಗಳು, ಶಕ್ತಿ ವಿಶಿಷ್ಟಾದ್ವೈತಿಗಳು, ನ್ಯಾಯವೈಶೇಷಿಕರು, ಸಾಂಖ್ಯಯೋಗದವರು ಬಳಸಿದ್ದನ್ನು ನೋಡಬಹುದು-ಪ್ರತ್ಯಕ್ಷ. ಇದನ್ನು ಆಸ್ತಿಕ ಮತ್ತು ನಾಸ್ತಿಕ ದರ್ಶನಗಳೆಲ್ಲ ಬಳಸಿದ್ದುಂಟು. ಆದರೆ ಪ್ರತಿಯೊಂದು ದರ್ಶನವೂ ಇದನ್ನು ತನ್ನದೇ ಆದ ರೀತಿಯಲ್ಲಿ ವ್ಯಾಖ್ಯಾನಿಸಿದ್ದುಂಟು. ನ್ಯಾಯವೈಶೇಷಿಕರ ಪ್ರತ್ಯಕ್ಷ ಪದದ ವಿವರಣೆ, ಸಾಂಖ್ಯಯೋಗದವರಿಂದ ಭಿನ್ನವಿದೆ; ಸಾಂಖ್ಯಯೋಗದವರಿಂದ ವೇದಾಂತದ ವಿವರಣೆ ಬೇರೆ. ಅದೇ ರೀತಿ ನ್ಯಾಯದ ಪ್ರತ್ಯಕ್ಷದಿಂದ ಬೌದ್ಧರ ಪ್ರತ್ಯಕ್ಷ ಶಬ್ದದ ವಾಖ್ಯೆ ಭಿನ್ನ. ಪ್ರತಿಯೊಂದು ದರ್ಶನ ಈ ಪದವನ್ನು ಬಳಸಿದಂತೆ ವೀರಶೈವವೂ ಬಳಸಿದೆ. ಅದೇ ರೀತಿ 'ಶಬ್ದ'ವೆಂಬ ಪದವನ್ನೂ ಬಳಸಿದೆ. ಈ ಪದದ ಅರ್ಥವೂ ಒಂದೇ ಆಗಿಲ್ಲ ಎಲ್ಲ ದರ್ಶನಗಳಲ್ಲಿ. ಈ ಮಾತು ದರ್ಶನದ ವಿದ್ಯಾರ್ಥಿಗಳಿಗೆ ಹೊಸದಲ್ಲ. ಆದರೆ ಷಟ್‌ಸ್ಥಲ ದರ್ಶನವನ್ನು ಕುರಿತು ಸಾಹಿತ್ಯ-ಕನ್ನಡ ಸಾಹಿತ್ಯದ ವಿದ್ವಾಂಸ*ರು ಬರೆಯುವಾಗ ಅವರಿಗೆ ಈ ಭೇದವು ಗೊತ್ತಿಲ್ಲವಾದ್ದರಿಂದ ಇಲ್ಲಿ ಇದನ್ನು ಪ್ರಸ್ತಾಪಿಸಿ, ಶಬ್ದವು ಅರ್ಥ ಬಹುತ್ವವುಳ್ಳುದಾಗಿದೆ ದರ್ಶನ ಸಾಹಿತ್ಯದಲ್ಲಿ ಎಂಬುದನ್ನು ಗಮನಿಸುವದವಶ್ಯವಿದೆ ಎಂದು ಸೂಚಿಸಲಾಗಿದೆ. ಸ್ಥಲಕಟ್ಟು ಸಾಹಿತ್ಯದ ಸಮೃದ್ಧತೆ ಕುರಿತಾದ ವಿಚಾರ ಇದು.

### ವಚನಸಾಹಿತ್ಯದಲ್ಲಿಯ ಶಬ್ದ ಮತ್ತು ಲಿಂಗ ಮೀಮಾಂಸೆ:

ಚನ್ನಬಸವಣ್ಣನವರ 'ನಮಃಶಿವಾಯ ಲಿಂಗ'[೧೨] ಎಂಬ ಮಾತಿನಲ್ಲಿ 'ಮಂತ್ರವೇ ಲಿಂಗ'ವೆಂದು ಹೇಳಲಾಗಿದೆ. ಲಿಂಗವೇ ಅಂಗ ಅಂದರೆ ಶಿವನೇ ಶಕ್ತಿ. ಅಂಗವೇ ಜಗತ್ತು-ಶಕ್ತಿಯೇ ಜಗತ್ತು, ಲಿಂಗವೇ ಜಗತ್ತು. ಅದೇ ಮಹಾಲಿಂಗ-ಕರ್ಮಸಾದಾಖ್ಯ. ಈ ಮಹಾಲಿಂಗವೇ ಓಂಕಾರ. ಓಂಕಾರ, ಮಹಾಲಿಂಗ, ಕರ್ಮಸಾದಾಖ್ಯ, ಜಗತ್ತು ಒಂದೇ ಅರ್ಥಬೋಧಕ ಪದಗಳು. ಮಂತ್ರವೇ ದೇವ, ಮಂತ್ರವೇ ಜಗತ್ತು ಎಂಬ ಆಗಮದ ಮಾತು, ಶಬ್ದವೇ ಜಗತ್ತು ಎಂಬ ವಾಕ್ಯಪದೀಯ ಮಾತು ಒಂದೇ. ಆದರೆ ಅದರ ಅರ್ಥ ಛಾಯೆ ಮಾತ್ರ ಆಯಾ ದರ್ಶನದಂತೆ. ಷಟ್‌ಸ್ಥಲ ಸಾಹಿತ್ಯದಲ್ಲಿ ಪರಿಣಾಮಾರ್ಥವಾದರೆ, ವಾಕ್ಯಪದೀಯದಲ್ಲಿ ವಿವರ್ತವಾದ. "ಓಂಕಾರದಿಂದತ್ತತ್ತ....ಆವ ವರ್ಣವಿಲ್ಲ

---

* ಈ ವಿಷಯ ವಿವರಣೆಗೆ 'ಸಿದ್ಧಗಂಗಾ ಶ್ರೀ' ಗ್ರಂಥದಲ್ಲಿ ಡಾ. ವ್ಹಿ. ಎಸ್. ಕಂಬಿಯವರ ಲೇಖನ ನೋಡಿರಿ.

೧೨ ಡಾ. ಆರ್. ಸಿ. ಹಿರೇಮಠ (ಸಂ), ಚನ್ನಬಸವಣ್ಣನವರ ವಚನಗಳು, ಪು. ೬೪, ವ. ೧೮೦.

ದೆಂದು ಓಂ ನಮಃಶಿವಾಯ ಎನುತಿರ್ದೆನು"೧೩ ಎಂದು ಮತ್ತೊಂದೆಡೆಯಲ್ಲಿ ಚನ್ನಬಸವಣ್ಣನವರು ಹೇಳುತ್ತಾರೆ. ಬಸವಣ್ಣನವರು ಕೂಡ "ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ" ಎಂದು ಹೇಳುವಾಗ 'ಪರಬ್ರಹ್ಮ' ಮೀರಿ ಬೇರೊಂದು ಶಬ್ದವಿಲ್ಲ, ಮಹಾದೇವವೇ 'ಶಬ್ದ' ಅಂದರೆ ಪರಾತ್ಪರ ತತ್ತ್ವವೆಂದೇ ವ್ಯಕ್ತಗೊಳಿಸಿದ್ದಾರೆ." ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು, ನುಡಿದ ನುಡಿಯೊಳಗೆ ಷಡುಸ್ಥಲ ಬಂದು ಎನ್ನ ಮನವನಿಂಬುಗೊಳ್ಳದಿರೆ" ಎಂದು ಹೇಳುವುದು ಶಬ್ದವೇ ಲಿಂಗ ಅಥವಾ ಶಬ್ದವಿದ್ದಲ್ಲಿ ಲಿಂಗವಿದೆ, ಲಿಂಗವಿದ್ದಲ್ಲಿ ಶಬ್ದವಿದೆ ಎಂಬರ್ಥಕೊಡುವುದು. ಇಲ್ಲಿ ಪುನಾ ಭರ್ತೃಹರಿಯು ವಾಕ್ಯಪದೀಯದಲ್ಲಿ ಹೇಳಿದ ಮಾತು ಸ್ಮರಣೆಗೆ ಬರುತ್ತದೆ–ಏಕಸ್ಯೈವಾತ್ಮನೋ ಭೇದೌ ಶಬ್ದಾರ್ಥಾವಪೃಥಕ್‌ಸ್ಥಿತೌ II.೩೧. [ಹೊರಗಿನ ಪದಾರ್ಥ, ಒಳಗಿನ ಬುದ್ಧಿವೇದ್ಯಾನುಭವ–ಎರಡನ್ನೂ ಸಮಾನವಾಗಿ ಶಬ್ದ ಒಳಗೊಳ್ಳುತ್ತದೆ.] ಅನುಭಾವಿ, ಮಹಾನುಭಾವಿಗಳಾದ ಚೆನ್ನಬಸವಣ್ಣ ಮತ್ತು ಬಸವಣ್ಣನವರ ಶಬ್ದತತ್ತ್ವಾಲೋಚನೆ; ಶಬ್ದತತ್ತ್ವಬೋಧೆಯಿದು. ಇದು 'ಸ್ಥಲಕಟ್ಟು' ಸಾಹಿತ್ಯದ ಒಳನೋಟ; ಅದರ ಭದ್ರ ಬುನಾದಿ. ಶಬ್ದವು ತತ್ತ್ವ ಅದರ ನಾನಾಸ್ವರೂಪವು ಸಾಹಿತ್ಯ ಸ್ವರೂಪದ ವೈವಿಧ್ಯತೆ.

ಚೆನ್ನಬಸವಣ್ಣನವರು ಶಬ್ದವೇ ತತ್ತ್ವ ಪಿಂಡಾಂಡದಲ್ಲಿ ಎಂದು ಹೀಗೆ ತಿಳಿಸುತ್ತಾರೆ:

ಓಂ ಎಂಬ ಅಕ್ಷರವೆ ರಸ,
ನ ಎಂಬಕ್ಷರವೆ ರುಧಿರ,
ಮ ಎಂಬಕ್ಷರವೆ ಮಾಂಸ,
ಶಿ ಎಂಬಕ್ಷರವೆ ಮೇಧಸ್ಸು,
ವಾ ಎಂಬಕ್ಷರವೆ ಅಸ್ಥಿ,
ಯ ಎಂಬಕ್ಷರವೆ ಮಜ್ಜ,
ಷಡಕ್ಷರದಿಂದ ಶುಕ್ಲ ಶೋಣಿತ.

ಇಂತೀ ಸರ್ವೇಂದ್ರಿಯಗಳುತ್ಪತ್ತಿ ಕೂಡಲಚೆನ್ನಸಂಗಮದೇವಾ.

ಈ ಮಾತನ್ನು ಅಂದರೆ ವಾಕ್ ತತ್ತ್ವಗಳ ಅಭೇದವನ್ನು ಋಗ್ವೇದ ಕೂಡ ತಿಳಿಸುವದೆಂದು ಕಂಡುಬರುತ್ತದೆ. In Rugveda X 125. Vak identifies herself with every thing in the Universe, implying that it is Vak which manifests itself as every thing. ಚೆನ್ನಬಸವಣ್ಣನವರು ಪಿಂಡಾಂಡದ ಹಸಿಗೆಯಲ್ಲಿ ಹೇಳಿದ್ದು ಬ್ರಹ್ಮಾಂಡದ ವಿಷಯದಲ್ಲಿಯು ಅದೇ ಮಾತು ವಾಸ್ತವವಾಗಿದೆ.

## ಸ್ಥಲಸಾಹಿತ್ಯದ ವೈವಿಧ್ಯ ವಿಕಾಸ:

ಇಲ್ಲಿಯುವರೆಗೆ ಸ್ಥಲಕಟ್ಟು, ಸ್ಥಲ, ಸ್ಥಲತತ್ತ್ವ ಮತ್ತು ಶಬ್ದತತ್ತ್ವ ಮೀಮಾಂಸೆ

---

೩ ಡಾ. ಆರ್. ಸಿ. ಹಿರೇಮಠ (ಸಂ) ಅದೇ.

ಆಗಿದ್ದು, ಅದರ ಹಿನ್ನೆಲೆಯಲ್ಲಿ ಸ್ಥಲ ಸಾಹಿತ್ಯದ ವಿಕಾಸಕ್ರಮದ ಪರಿಚಯವು 'ಸ್ಥಲಕಟ್ಟು ಸಾಹಿತ್ಯದ' ವಿಕಾಸದೊಡನೆ ಸಮಸಮವಾಗಿ ನಡೆದಂತೆ ಎಂದು ಗೊತ್ತಾಗುವುದು. ಸ್ಥಲ ಸಾಹಿತ್ಯದ ವಿಕಾಸ ಕ್ರಮವೆಂದರೆ ಸ್ಥಲ ಮತ್ತು ಶಬ್ದ ವಿಕಾಸ ಕ್ರಮ ವೆಂದರ್ಥ. ವಾಕ್ ತತ್ತ್ವದಲ್ಲಿ ಚತುರ್ವಿಧ ವಿಕಾಸ–ಪರಾ, ಪಶ್ಯಂತಿ, ಮಧ್ಯಮಾ ಮತ್ತು ವೈಖರಿ. ಅದೇ ರೀತಿ ಅದು ಪರಾಸಾಹಿತ್ಯ, ಪಶ್ಯಂತಿ–ಸಾಹಿತ್ಯ, ಮಧ್ಯಮಾಸಾಹಿತ್ಯ ಮತ್ತು ವೈಖರಿ ಸಾಹಿತ್ಯ–ವಾಕ್ ಎಂದು ಚತುರ್ವಿಧವಾದ ಸಾಹಿತ್ಯ ಸ್ಥಲದಲ್ಲಿ ಕೂಡ ಬಯಲು, ನಿಷ್ಕಲ, ಸಕಲ ನಿಷ್ಕಲ ಮತ್ತು ನಿಷ್ಕಲ ವೆಂದು ಚತುರ್ವಿಧ ತತ್ತ್ವ ವಿಕಾಸ. ಈ ಚತುರ್ವಿಧವೇ ಚತುರ್ವಿಧ ಸಾಹಿತ್ಯ ಆಗಮ ಪರಿಭಾಷೆಯಲ್ಲಿ. ಇದು ಚತುರ್ವಿಧ ಜೀವನ ವಿಕಾಸ ಪಿಂಡಾಂಡದಲ್ಲಿ ಬ್ರಹ್ಮಾಂಡದಂತೆ. ಇದು ಷಟ್‌ಸ್ಥಲವೆಂದು ಹೆಸರುಗೊಂಡಾಗ ಆಗಮ ಗಳು ಹೇಳುವಂತೆ ಷಟ್‌ಸ್ಥಲವೆಂಬುದು ಷಡ್ವಿಧವಾಗಿ ರೂಪು ಪಡೆದಿದೆ: 'ಷಡ್ವಿಧಂ ಮಮರೂಪಕಂ'. ತತ್ತ್ವವು ಷಡ್ವಿಧವಾಗಲು ಷಡ್ವಿಧ ತತ್ತ್ವಗಳಾಗಿ ಪ್ರಪಂಚವಾಯಿತು. ಷಡ್ವಿಧ ಜೀವನಕ್ರಮವಾಗಿ ಷಟ್‌ಸ್ಥಲವಾಯಿತು. ಪಿಂಡ ಅಥವಾ ಅಂಗನಲ್ಲಿ. ಇದನ್ನೇ ಷಡಾಶ್ರಯವೆಂದು ಮಾಯಿದೇವ ಶಿವಾನುಭವ ಸೂತ್ರದಲ್ಲಿ ಹೆಸರಿಸಿದ್ದು. ಷಡ್ವಿಧ ತತ್ತ್ವಗಳನ್ನು ಕುರಿತು ಉಂಟಾದ ಸಾಹಿತ್ಯವು ಷಟ್‌ಸ್ಥಲ ತತ್ತ್ವಸಾಹಿತ್ಯ. ಷಡ್ವಿಧ ಜೀವನಕ್ರಮವು ಪರಿಚಯ ಮಾಡಿಕೊಡುವ ಅಥವಾ ಬೋಧಿಸುವ ಸಾಹಿತ್ಯವು ಷಟ್‌ಸ್ಥಲ ಸಾಹಿತ್ಯ. ಒಂದು ತತ್ತ್ವಸಾಹಿತ್ಯ ಕೇವಲ. ಇನ್ನೊಂದು ಅನುಭಾವ, ಆಚಾರಗಳ ಸಾಹಿತ್ಯ. ಪರಬ್ರಹ್ಮನು ಪ್ರವೃತ್ತಿ ಮುಖಿನಾಗಲು ಐಕ್ಯ, ಶರಣ, ಪ್ರಾಣಲಿಂಗಿ, ಪ್ರಸಾದಿ, ಮಹೇಶ ಮತ್ತು ಭಕ್ತಸ್ಥಲಗಳು ಆದವು. ಇದೇ ರೀತಿ ನಿವೃತ್ತಿ ಅಂದರೆ ಪ್ರಪಂಚ (ಸೃಷ್ಟಿ) ಮುಖವು ಪುನಾ 'ಸ್ವಯಂಭು' ತ್ವದೆಡೆ ಪಯಣ ಪ್ರಾರಂಭವಾದೊಡನೆ ಭಕ್ತ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯವೆಂದು ಷಟ್‌ಸ್ಥಲಗಳಾದವು. ಮೊದಲನೆಯದು ಅಧೋಮುಖ, ಎರಡನೆಯದು ಊರ್ಧ್ವಮುಖ. ಮೊದಲನೆಯ ಆರು ಸ್ಥಲಗಳನ್ನು–ಐಕ್ಯಾದಿ ಭಕ್ತಾಂತ ಸ್ಥಲಗಳನ್ನು ಪ್ರಾಕೃತಸ್ಥಲಗಳೆಂದು ಕರೆಯುವರು; ಎರಡನೆಯ ಆರು ಸ್ಥಲಗಳನ್ನು ಭಕ್ತಾದಿ ಐಕ್ಯಾಂತ ಸ್ಥಲಗಳನ್ನು ಅಪ್ರಾಕೃತ ಸ್ಥಲಗಳೆಂದು ಕರೆಯುವರು. ಷಟ್‌ಸ್ಥಲ ತತ್ತ್ವಹಸಿಗೆ, ಷಟ್‌ಸ್ಥಲ ಅನುಭಾವಹಸಿಗೆ ಷಟ್‌ಸ್ಥಲಾಚಾರ ಹಸಿಗೆ ಈ ಸ್ಥಲಗಳಲ್ಲಿ ನಡೆಯುವುದು. ಬಯಲು ಬಲಿದು ಒಂದು ಬಿಂದುವಾಗುವದು, ಅದರಲ್ಲಿಯ ತತ್ತ್ವಗಳ ಸಮಸಮುಚ್ಚಯ ವಿಕಾಸದಿಂದ ಲಿಂಗಸ್ಥಲ ಮತ್ತು ಅಂಗಸ್ಥಲ ಗಳಲ್ಲಿ ರೂಪುಗೊಳ್ಳುವುದು ಸಮಸಮುಚ್ಚಯ ಷಟ್‌ಸ್ಥಲವೆಂದು ಪ್ರಸಿದ್ಧ. ಈ ಸಮ ಸಮುಚ್ಚಯ ಪ್ರತಿಪಾದಿಸುವ ಸಾಹಿತ್ಯ ಷಟ್‌ಸ್ಥಲ ಸಮಸಮುಚ್ಚಯ ಸಾಹಿತ್ಯವು. ಪಿಂಡಾಂಡ ವಿಕಾಸದಲ್ಲಿ ಮನುಜಗೆ ಮಗು ತಂದ ಎಂದಂತೆ ತಂದೆ ಮಗುವಿನಲ್ಲಿಯೇ ಇದ್ದಾನೆ. ಮಗು ಅಂದರೆ ಅಪಕ್ವತೆ, ತಂದೆಯಂದರೆ ಪಕ್ವತೆ ಎಂಬ ಅರ್ಥ. ವೃಕ್ಷವಿಲ್ಲದ ಬೀಜವಿಲ್ಲ; ಬೀಜವಿಲ್ಲದ ವೃಕ್ಷವಿಲ್ಲವೆಂಬ ನ್ಯಾಯವನ್ನಿಲ್ಲಿ ಕಾಣುತ್ತೇವೆ. ಇದು ಸತ್ಕಾರ್ಯ

ವಾದ ಷಟ್‌ಸ್ಥಲ ಸಾಹಿತ್ಯವು ಸತ್ಕಾರ್ಯವಾದದ ಸಾಹಿತ್ಯ. ಆತ್ಮದಲ್ಲಿ ಆಕಾಶಾದಿ ಪಂಚ ಮಹಾಭೂತಗಳಿರುವಂತೆ, ಪೃಥ್ವಿ ತತ್ತ್ವದಲ್ಲಿ ಉಳಿದ ನಾಲ್ಕು ಮಹಾಭೂತಗಳೂ ಆತ್ಮವೂ ಉಂಟು. ಇದು ತತ್ತ್ವ ಸಮಸಮುಚ್ಚಯ. ಒಂದರಲ್ಲಿ ಎಲ್ಲವೂ, ಎಲ್ಲದರಲ್ಲಿ ಒಂದೂ ಇರುವದನ್ನು ಒಪ್ಪುವದು ಈ ಷಟ್‌ಸ್ಥಲದ ವೈಶಿಷ್ಟ್ಯ. ಪಿಂಡಾಂಡ ವಿಚಾರ ದಲ್ಲೂ ಅಷ್ಟೇ. 'ಆದಿಯಲ್ಲಿ ಶಿವ ಬೀಜವಿಲ್ಲದಿರೆ ಶಿವಜ್ಞಾನವಾಗುವ ಪರಿಯೆಂತೋ' ಎಂದು ಬಸವಣ್ಣನವರು ಕೇಳುವ ಪ್ರಶ್ನೆ, ಶಿವತತ್ತ್ವವಾಗಿ ಪಿಂಡವು ಪರಿಣಾಮಗೊಳ್ಳ ಬೇಕಾದರೆ ಪಿಂಡದ ಕಾರಣವಾಗಿ ಪಿಂಡದಲ್ಲಿ ಶಿವತತ್ತ್ವ ಇದೆ ಎಂಬ ವಿಚಾರವನ್ನೇ ಸೂಚಿಸುತ್ತದೆ. ಷಟ್‌ಸ್ಥಲಕಟ್ಟು ಇಂಥ ತಾತ್ತ್ವಿಕ ವಿಚಾರ–ಆಚಾರಗಳ ಸಮನ್ವಯ ಸಾಹಿತ್ಯ. ಆದ್ದರಿಂದ ಸ್ಥಲಕಟ್ಟು ಸಾಹಿತ್ಯದಲ್ಲಿ ಸಮಸಮುಚ್ಚಯ ಷಟ್‌ಸ್ಥಲ ಸಾಹಿತ್ಯ ವೆಂಬ ಸ್ವತಂತ್ರವಾದ ಒಂದು ಸಾಹಿತ್ಯ ಪ್ರಕಾರವಿರುವುದು. ಇದನ್ನುಳಿದು ಇನ್ನೊಂದು ಬಗೆಯು ಷಟ್‌ಸ್ಥಲ ಸಾಹಿತ್ಯವಿದೆ. ಅದೇ ಕ್ರಮಸಮುಚ್ಚಯ ಸಾಹಿತ್ಯ. ಇದರ ಪ್ರಕಾರ ಒಂದಾದ ಮೇಲೆ ಒಂದು ಸ್ಥಲಸಿದ್ಧಿ. ಈ ಸಾಹಿತ್ಯ ಕೃತಿಗಳೂ ಇವೆ. ಗಂಧ, ರಸ, ರೂಪು, ಸ್ಪರ್ಶ, ಶಬ್ದ ತತ್ತ್ವಗಳನ್ನು ಒಂದೊಂದಾಗಿ ಅರಿತುಕೊಳ್ಳುವುದು. ಒಂದರಿಂದ ಒಂದು ಭಿನ್ನ ಮತ್ತು ಒಂದರಿಂದೊಂದು ಉಪರಿ ಈ ಕ್ರಮದಲ್ಲಿ. ಭಕ್ತನಾದ ಮೇಲೆ ಮಹೇಶ; ಮಹೇಶನಾದ ಮೇಲೆ ಪ್ರಸಾದಿ; ಪ್ರಸಾದಿಯಾದ ಮೇಲೆ ಪ್ರಾಣಲಿಂಗಿ;ಪ್ರಾಣ ಲಿಂಗಿಯಾದ ಮೇಲೆ ಶರಣ: ಶರಣನಾದ ಮೇಲೆ ಐಕ್ಯ. ಇದು ಷಟ್‌ಸ್ಥಲ ಕ್ರಮ ಸಮುಚ್ಚಯ. ಷಟ್‌ಸ್ಥಲ ಸಮಸಮುಚ್ಚಯ ಸಾಹಿತ್ಯದ ಉದಾಹರಣೆಗೆ ಪ್ರೊ. ಎಸ್. ಎಸ್. ಬಸವನಾಳರು ಸಂಪಾದಿಸಿ ಎಲ್. ಇ. ಅಸೋಸಿಯೇಶನ್ ಧಾರವಾಡ ಇವರಿಂದ ಪ್ರಕಟಿಸಿದ 'ಬಸವಣ್ಣನವರ ವಚನಗಳು' ಎಂಬ ಕೃತಿ ಹೆಸರಿಸಬಹುದು. ಇನ್ನು ಕ್ರಮ ಸಮುಚ್ಚಯ ಅಂದರೆ ಷಟ್‌ಸ್ಥಲ ಕ್ರಮಸಮುಚ್ಚಯ ಸಾಹಿತ್ಯದ ಉದಾಹರಣೆಗೆ ಎನ್. ಆರ್. ಕರಿಬಸವ ಶಾಸ್ತ್ರಿಗಳು ಸಂಪಾದಿಸಿದ 'ಸಿದ್ಧಾಂತ ಶಿಖಾಮಣಿ' ಎಂಬ ಗ್ರಂಥವನ್ನು, ಇಲ್ಲವೆ ಪ್ರೊ. ಎಸ್. ಎಸ್. ಭೂಸನೂರಮಠರು ಸಂಪಾದಿಸಿದ ಶ್ರೀ. ನಿ. ಪ್ರ. ಸ್ವ. ಶಿವಬಸವ ಮಹಾಸ್ವಾಮಿಗಳು ರುದ್ರಾಕ್ಷಿಮಠ ಬೆಳಗಾವಿ ಶ್ರೀ ಬಸವೇಶ್ವರ ಗ್ರಂಥಮಾಲೆಯಿಂದ ಪ್ರಕಟವಾದ ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ ಗ್ರಂಥವನ್ನು ಹೆಸರಿಸಬಹುದು. ಮೊದಲನೆಯದು ಸಂಸ್ಕೃತದಲ್ಲಿಯ ಸ್ಥಲಕಟ್ಟು ಸಾಹಿತ್ಯ, ಎರಡನೆಯದು ಕನ್ನಡದಲ್ಲಿಯ ವಚನಗಳ ಸ್ಥಲಕಟ್ಟು ಸಾಹಿತ್ಯ. ಸ್ಥಲವಿಕಾಸಕ್ರಮ ವ್ಯವಸ್ಥೆಗೊಳಿಸಿದ ಸಾಹಿತ್ಯವಾಗಿ ಈ ಇತ್ತೆರ ಸ್ಥಲಕಟ್ಟು ಸಾಹಿತ್ಯ ಅಸ್ತಿತ್ವಕ್ಕೆ ಬಂದುದು ಗೊತ್ತಾಗುತ್ತದೆ. ಈ ಷಟ್‌ಸ್ಥಲ ಸಾಹಿತ್ಯವನ್ನು ಆಚಾರಸ್ಥಲದ ಸಾಹಿತ್ಯ ಮತ್ತು ಅನುಭಾವಸ್ಥಲದ ಸಾಹಿತ್ಯವೆಂದು ಹೇಳುವಾಗ, ಅದು ಮಾರ್ಗಕ್ರಿಯಾ ಮತ್ತು ಮೀರಿದ ಕ್ರಿಯಾಸ್ಥಲಗಳ ಸಾಹಿತ್ಯವೇ ಆಗಿದೆ. ಇದು ಕ್ರಮಸಮುಚ್ಚಯ ಪ್ರಾಧಾನ್ಯತೆಯುಳ್ಳದು ಎಂದು ಹಸರೇ ಸೂಚಿಸುತ್ತದೆ. ಕ್ರಿಯಾ ಮತ್ತು ಜ್ಞಾನಸಮುಚ್ಚಯವನ್ನು ಷಟ್‌ಸ್ಥಲ

ಸಿದ್ಧಾಂತವು ಪ್ರತಿಪಾದಿಸಿದಾಗ ಷಟ್‌ಸ್ಥಲ ಸಮಸಮುಚ್ಚಯ ಅಂದರೆ ಮಾರ್ಗಕ್ರಿಯಾ (ಆಚಾರ) ಸ್ಥಲ ಮತ್ತು ಮೀರಿದ ಕ್ರಿಯಾ (ಅನುಭಾವ) ಸ್ಥಲಗಳ ಸಮಸಮುಚ್ಚಯ ವಾಗಿದೆ. ಇದು ಸ್ಥಲಕಟ್ಟು ಸಾಹಿತ್ಯ--ಅಂದರೆ ತತ್ತ್ವ ಮತ್ತು ಆ ತತ್ತ್ವದ ಶಬ್ದಗಳ ವಿಕಾಸ ಸಾಹಿತ್ಯವಾಗಿರುವದೆಂದು ಪ್ರಾಜ್ಞರು ತಿಳಿಯದಿರಲಾರರು.

'ಷಟ್‌ಸ್ಥಲ' ಅಂದರೆ ತತ್ತ್ವವೆಂದು, ಅದರ ಅಂದರೆ ಸ್ಥಲದ ಸ್ವರೂಪಾದಿಗಳಿಗನು ಗುಣವಾದ ರೀತಿಯಲ್ಲಿ ಅದೆಲ್ಲ ಅರ್ಥವಾಗಿ, ಅದರ ಶಬ್ದವೇ ಆ ಸ್ಥಲತತ್ತ್ವಶಾಸ್ತ್ರವಾಗಿ ವಿಕಾಸಗೊಂಡುದನ್ನು ಪರಿಗಣಿಸಲಾಯಿತು. 'ಷಟ್‌ಸ್ಥಲ'ವೆಂದರೆ ವೀರಶೈವ ಸಮಾಜ, ವೀರಶೈವ ಧರ್ಮವೆಂಬರ್ಥದ ಪ್ರಕಾರ ಆ ಶಾಸ್ತ್ರ ಸಾಹಿತ್ಯ ರೂಪುಗೊಂಡಿದೆ. ಇದನ್ನು ತಿಳಿದುಕೊಳ್ಳಬೇಕು.

> ವೀರಶೈವಾಸ್ತು ಷಡ್ಭೇದಾ ಸ್ಥಳ ಧರ್ಮ ವಿಭೇದತಃ।
> ಭಕ್ತಾದಿ ವ್ಯವಹಾರೇಣಪ್ರೋಚ್ಯಂತೇ ಶಾಸ್ತ್ರ ಪಾರಗೈಃ॥
> ಶಾಸ್ತ್ರಂತು ವೀರಶೈವಾನಾಂ ಷಡ್ವಿಧಂ ಸ್ಥಳಭೇದತಃ।
> ಧರ್ಮಭೇದ ಸಮಾಯೋಗಾದಧಿಕಾರ ವಿಭೇದತಃ॥

ಸಿದ್ಧಾಂತ ಶಿಖಾಮಣಿ V ೨೨, ೨೩.

(ಪೂರ್ವೋಕ್ತ ರೀತಿಯಿಂದ ವೀರಮಾಹೇಶ್ವರರೆಂದು ಪ್ರಸಿದ್ಧರಾದ ಆ ಆರು ವೀರಶೈವರೇ ಪಿಂಡಸ್ಥಲ ಮೊದಲ್ಗೊಂಡು ಜ್ಞಾನಶೂನ್ಯವೇ ಕಡೆಯಾಗುಳ್ಳ ೧೦೧ ಸ್ಥಲ ಗಳಿಗೆ ಪ್ರೋಕ್ತವಾದ ಆಚಾರಗಳನ್ನು ನಡೆಯಿಸುವ ವೈಲಕ್ಷಣ್ಯದಿಂದ ಭಕ್ತಾದಿ ಐಕ್ಯಾಂತವಾದ ಹೆಸರುಗಳಿಂದ ಆರು ಪ್ರಕಾರವಾದವರುಗಳೆಂದು ಶಾಸ್ತ್ರಜ್ಞರಿಂದ ಹೇಳಲ್ಪಡುವರು ॥೨೨॥ ಈ ವೀರಶೈವರ ಶಾಸ್ತ್ರವಾದರೋ ಭಕ್ತಾದಿ ಷಟ್‌ಸ್ಥಲ ಭೇದದಿಂದಲೂ, ಆ ಆ ಸ್ಥಲಗಳಿಗೆ ಪ್ರೋಕ್ತವಾದ ಸದಾಚಾರಗಳನ್ನುನವರ್ತಿಸುವದರಿಂದಲೂ ಆ ಆ ಸ್ಥಲನಿಷ್ಠರಾದ ಭಕ್ತ ಮಾಹೇಶ್ವರಾದ್ಯಧಿಕಾರಿಗಳ ಭೇದದಿಂದಲೂ ಸಹ ಆರು ಪ್ರಕಾರವಾಗಿರುವುದು ॥೨೩॥ ಇದನ್ನು ಸಮರ್ಥಿಸುವಂತೆ ಒಂದು ವೀರಶೈವವೇ....ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯನೆಂದು ಆರು ತೆರನಾಯಿತೆಂದು ಹೇಳಿದ್ದು ಗಮನಾರ್ಹ ವಾಗಿದೆ. ಸ್ಥಲದ ವಿಕಾಸಕ್ಕನುಗುಣವಾಗಿ ಸ್ಥಲಸಾಹಿತ್ಯವು ರೂಪುಗೊಳ್ಳುವದೆಂದು ಮನ ದಟ್ಟವಾಗುತ್ತದೆ. ಇಲ್ಲಿಯ ಹಸಿಗೆಯಿಂದ.

ಈ ಸ್ಥಲವಿಕಾಸ ಶಿಲ್ಪವನ್ನು ಮೀರಿ ಶಬ್ದವಿಲ್ಲ. ಇದು ಸ್ಥಲದ ಸ್ವಭಾವದ ಪರಿಣಾಮ. ಈ ಸಾಹಿತ್ಯ ಸೃಷ್ಟಿಯನ್ನು ಕುರಿತು ಗಣಭಾಷಿತ ರತ್ನಮಾಲೆಯು ಹೇಳುವುದು ಹೀಗಿದೆ: ಹರಭಕ್ತಿ ಮಾರ್ಗಮಂ ಸ್ಥಲವಿಟ್ಟು ನುಡಿದ ವಚನಂಗಳಂ ವರಗುರುನಾಥ ನಾಜ್ಞೆಯಿಂ....ಷಟ್‌ಸ್ಥಲಮಾರ್ಗದ ಕರುವನು ಪರಮ ಲಿಂಗಾಂಗ ಸಂಬಂಧದ ಸಿರಿಯು ಹರನೊಳೆರವಳಿಯದಿಪ್ಪುದಕ್ಕೆ ಪರಮಚಾರಿತ್ರವೆನಿಸುವ' ಗಣಭಾಷಿತ ರತ್ನಮಾಲೆಯನ್ನು ರಚಿಸಿದನು. ಶರಣರು ವಚನಗಳನ್ನು ಸ್ಥಲವಿಟ್ಟು ನುಡಿದ ವಿಚಾರವನ್ನು ಗಣಭಾಷಿತ

ರತ್ನಮಾಲೆಗಾರನಂತೆ ಹರಿಹರದೇವನೂ ಹೇಳಿದ್ದುಂಟು. ಈ ಸ್ಥಲಕಟ್ಟು ಸ್ಥಲತತ್ತ್ವ ವಿಚಾರದೊಡನೆ ಅಸ್ತಿತ್ವಕ್ಕೆ ಬಂದುದುಂಟು. ಇದಕ್ಕೆ ಇಲ್ಲಿಯವರೆಗೆ ಶಾಸ್ತ್ರಾಧಾರಪೂರ್ವಕ ಮಾಡಿದ ಪ್ರತಿಪಾದನೆ ಆಧಾರವಾಗಿದೆ.

ಶೂನ್ಯ ಸಂಪಾದನೆಗಳು; ಲಿಂಗ ಲೀಲಾವಿಲಾಸ, ಪ್ರಸಾದಿಸ್ಥಲದ ವಚನಗಳು, ವಿಶೇಷಾನುಭವ ಷಟ್‌ಸ್ಥಲ, ಪರಮಮೂಲಜ್ಞಾನ ಷಟ್‌ಸ್ಥಲ ಮುಂತಾದ ಅನೇಕ ಕೃತಿಗಳು ಸೃಷ್ಟಿಗೊಂಡಿವೆ. ಬಸವಣ್ಣನವರ ವಚನಗಳು, ಚನ್ನಬಸವಣ್ಣನವರ ವಚನಗಳು, ಅಲ್ಲಮಪ್ರಭುವಿನ ವಚನ ಚಂದ್ರಿಕೆ ಮೊದಲಾದವುಗಳನ್ನು ಅವಲೋಕಿಸಿದಾಗ ಇವೆಲ್ಲ ಷಟ್‌ಸ್ಥಲಕಟ್ಟಿನ ಅಥವಾ ಸ್ಥಲಕಟ್ಟಿನ ವಚನ ಕೃತಿಗಳೇ ಆಗಿವೆ. ಇದೇ ಪ್ರಕಾರ ಲಿಂಗ ಲೀಲಾವಿಲಾಸ ಚಾರಿತ್ರ್ಯ, ಪ್ರಸಾದಿಸ್ಥಲದ ವಚನಗಳು ಮುಂತಾದವುಗಳು ಕೂಡ ಷಟ್‌ಸ್ಥಲ ಪ್ರತಿಪಾದಿಸುವ ವಚನ ಕೃತಿಗಳು. ಈ ಕೃತಿಗಳಲ್ಲಿ ಅನೇಕ ಜನ ವಚನಕಾರರ ವಚನಗಳನ್ನು ಪಯೋಗಿಸಿಕೊಂಡು ಸ್ಥಲಕಟ್ಟಿಗನುಗುಣವಾಗಿ ಅವುಗಳನ್ನು ಬಳಸಿಕೊಂಡಿದ್ದಾರೆ. ಇಲ್ಲಿ ಸ್ಥಲಕಟ್ಟಿನ ಭಕ್ತ್ಯಾದಿ ಐಕ್ಯಾಂತವಾದ ಕ್ರಮಗಳನ್ನು ಕಡೆಗಣಿಸಿದ್ದೇನೂ ಕಂಡುಬರುವದಿಲ್ಲ. ಉದಾಹರಣೆಗೆ ಲಿಂಗಲೀಲಾ ವಿಲಾಸ ಚಾರಿತ್ರ್ಯವನ್ನು ತೆಗೆದುಕೊಳ್ಳಬಹುದು. ಲಿಂಗ ವಿಲಾಸ ಚಾರಿತ್ರ್ಯದ ಅನುಕ್ರಮಣಿಕೆಯನ್ನು ತೆರೆದರೆ ೧೬ ಸ್ಥಲಗಳು. ಅಂದರೆ ಲಿಂಗದ ೧೬ ಅವಸ್ಥೆಗಳು. ಮೊದಲಿನ ೫೦ ಸ್ಥಲಗಳು ಲಿಂಗದ ಪ್ರಪಂಚರೂಪು ಸಿದ್ಧತೆಯಾಗಿವೆ. ನಂತರ ಸ್ಥಲ ೬ ರಿಂದ ೯ರ ವರೆಗೆ ಅಂದರೆ ಪಿಂಡಸ್ಥಲದಿಂದ ಗುರು ಕರುಣಸ್ಥಲದವರೆಗೆ ಜಿಜ್ಞಾಸು ಶುದ್ಧ ಅಂತಃಕರಣವುಳ್ಳ ಭಕ್ತನು ತನ್ನನ್ನು ತಾನು ಪೂಜಿಸಿಕೊಳ್ಳುವ ಸಂಸ್ಕಾರದಿಂದ ಸಿದ್ಧನಾಗಿ ಷಟ್‌ಸ್ಥಲಗಳಿಂದ ಭಕ್ತ್ಯಾದಿ ಐಕ್ಯಾಂತವಾದವುಗಳನ್ನು ಆಚರಿಸುವಲ್ಲಿ ನಿರತನಾಗಿರುವುದುಂಟು. ಇವು ೧೦ನೆಯ ಸ್ಥಲದಿಂದ ೧೫ನೆಯ ಸ್ಥಲದ ವರೆಗಿರುವವು. ೧೬ ನೆಯ ಅಂದರೆ ಕೊನೆಯ ಸ್ಥಲವು ಸ್ವಲೀಲಾನಂದ ಭಕ್ತಸ್ಥಲವಾಗಿರುತ್ತದೆ.

**ಮೀಮಾಂಸೆ; ಲಿಂಗವಿಲಾಸ ಚಾರಿತ್ರ್ಯದಲ್ಲಿಯ ಸ್ಥಲಗಳ ಮೀಮಾಂಸೆ ಬಸವಣ್ಣನವರು, ಪ್ರಭು ಹಾಗೂ ಚನ್ನಬಸವಣ್ಣನವರ ವಚನಗಳಲ್ಲಿಯ ಷಟ್‌ಸ್ಥಲದ ಹಿನ್ನೆಲೆಯಲ್ಲಿ—**

೧೨ನೆಯ ಶತಮಾನದ ಶಿವಶರಣ ಪ್ರಮುಖರಾದ ಬಸವಣ್ಣನವರ ವಚನಗಳ ಸ್ಥಲಕಟ್ಟು ಒಂದು ಆದರ್ಶ ಪದ್ಧತಿಯೆಂದು ಇಟ್ಟುಕೊಳ್ಳೋಣ. ಸಂಸ್ಕೃತ ಕೃತಿಯಾದ ಸಿದ್ಧಾಂತ ಶಿಖಾಮಣಿಯನ್ನು ಸಂಸ್ಕೃತ ಸಾಹಿತ್ಯದ ಸ್ಥಲಕಟ್ಟಿನ ಒಂದು ಆದರ್ಶ ಗ್ರಂಥವೆಂದು ಇಟ್ಟುಕೊಳ್ಳೋಣ. ಇಲ್ಲಿ ನಡೆದುದು ಕೂಡ ಲಿಂಗಲೀಲಾವಿಲಾಸವೇ ಲಿಂಗಲೀಲಾ ವಿಲಾಸ ಚರಿತ್ರದಲ್ಲಿಯಂತೆ. ಈ ಬಗ್ಗೆ ಎರಡು ವಿಚಾರವನ್ನು ವ್ಯಕ್ತಗೊಳಿಸಲಿಕ್ಕೆ ಬರುವುದಿಲ್ಲ. ಇದು ಒಂದು ವಿಜ್ಞಾನಕ್ಕನುಸರಿಸಿ ನೀಡಿದ ಸೈದ್ಧಾಂತಿಕ ನಿರ್ಣಯ. ಬಸವಣ್ಣನವರ ವಚನಗಳಲ್ಲಿಯ ಷಟ್‌ಸ್ಥಲ ಪ್ರಾರಂಭವಾಗುವುದು. ಹೀಗೆ ೧. ಭಕ್ತಸ್ಥಲ

ಇದರ ಉಪಾಂಗಸ್ಥಲಗಳು **ಪಿಂಡಸ್ಥಲ, ಪಿಂಡಜ್ಞಾನಸ್ಥಲ,** ೩. **ಸಂಸಾರ ಹೇಯಸ್ಥಲ,** ೪. **ಗುರುಕರುಣಸ್ಥಲ,** ೫. **ವಿಭೂತಿಸ್ಥಲ,** ೬. **ಪಂಚಾಕ್ಷರಿಸ್ಥಲ,** ೭. **ಲಿಂಗಧಾರಣಸ್ಥಲ,** ೮. ತಾಮಸ ನಿರಸನಸ್ಥಲ, ೯. ಭಕ್ತಜ್ಞಾನಿಸ್ಥಲ, ೧೦. ಭಕ್ತಿಸ್ಥಲ, ೧೧. ಭಕ್ತನ ಮಹೇಶಸ್ಥಲ, ೧೨. ಭಕ್ತನ ಪ್ರಸಾದಿಸ್ಥಲ, ೧೩. ಭಕ್ತನ ಪ್ರಾಣಲಿಂಗಿಸ್ಥಲ, ೧೪. ಭಕ್ತನ ಶರಣಸ್ಥಲ, ೧೫. ಭಕ್ತನೈಕ್ಯಸ್ಥಲ.

ಇನ್ನು ಸಿದ್ಧಾಂತ ಶಿಖಾಮಣಿಯ ಸ್ಥಲಕಟ್ಟು ನೋಡೋಣ-ಷಟ್‌ಸ್ಥಲ ಮತ್ತು ಅದರ ಉಪಾಂಗ ನೂರೊಂದು ಸ್ಥಲಗಳು ಇಲ್ಲಿವೆ. ಇಲ್ಲಿ ಷಟ್‌ಸ್ಥಲ ಪ್ರಾರಂಭ ಭಕ್ತಸ್ಥಲದಿಂದ ಬಸವಣ್ಣನ ವಚನಗಳಲ್ಲಿಯ ಷಟ್‌ಸ್ಥಲ ಪ್ರಾರಂಭವಾಗುವಂತೆ. ೧. ಭಕ್ತಸ್ಥಲ–ಇದರ ಉಪಾಂಗಸ್ಥಲಗಳು **ಪಿಂಡಸ್ಥಲ, ಪಿಂಡಜ್ಞಾನಸ್ಥಲ,** ೩. **ಸಂಸಾರ ಹೇಯಸ್ಥಲ,** ೪. **ಗುರುಕಾರುಣ್ಯಸ್ಥಲ,** ೫. **ಲಿಂಗಧಾರಣಸ್ಥಲ,** ೬. **ವಿಭೂತಿಧಾರಣಸ್ಥಲ,** ೭. ರುದ್ರಾಕ್ಷಧಾರಣಸ್ಥಲ, ೮. **ಪಂಚಾಕ್ಷರೀ ಜಪಸ್ಥಲ,** ೯. ಭಕ್ತಮಾರ್ಗಕ್ರಿಯಾ ಸ್ಥಲ....

ಈ ಎರಡೂ ಗ್ರಂಥಗಳಲ್ಲಿ ಭಕ್ತಸ್ಥಲದ ಉಪಾಂಗಗಳಾಗಿ ೧. ಪಿಂಡಸ್ಥಲ, ೨. ಪಿಂಡ ಜ್ಞಾನಸ್ಥಲ, ೩. ಸಂಸಾರ ಹೇಯಸ್ಥಲ, ೪. ಗುರುಕರುಣಸ್ಥಲ, ೫. ವಿಭೂತಿಸ್ಥಲ, ೬. ಪಂಚಾಕ್ಷರಿಯಸ್ಥಲ ಮತ್ತು ೭. ಲಿಂಗಧಾರಣಸ್ಥಲ ಎಂದು ಇರುತ್ತವೆ. ಏಕೋತ್ತರ ಶತಸ್ಥಲದ ಗ್ರಂಥ ಸಿದ್ಧಾಂತ ಶಿಖಾಮಣಿಯಲ್ಲಿ ಬಸವಣ್ಣನವರ ವಚನಗಳಲ್ಲಿ ಉಲ್ಲೇಖ ವಾಗದ ರುದ್ರಾಕ್ಷಧಾರಣಸ್ಥಲ ಉಂಟು. ಕನ್ನಡ ಏಕೋತ್ತರ ಶತಸ್ಥಲ ಮಹಾಲಿಂಗ ದೇವರು ನಿರೂಪಿಸಿದ್ದರಲ್ಲಿ ಸಿದ್ಧಾಂತ ಶಿಖಾಮಣಿಯಂತೆ ೮ ಸ್ಥಲಗಳಿದ್ದು ಬಸವಣ್ಣನವರ ವಚನದಲ್ಲಿಯ ಭಕ್ತಸ್ಥಲದಲ್ಲಿ ಇಲ್ಲದ ರುದ್ರಾಕ್ಷಧಾರಣಸ್ಥಲವು ಇಲ್ಲಿಯೂ ಇದೆ. ಈ ವಿಶೇಷದೊಡನೆ, ಇನ್ನೊಂದು ಹೇಳಬೇಕಾದ ಮಾತೆಂದರೆ ಭಕ್ತಸ್ಥಲದ ಪ್ರಾರಂಭದ ಈ ಉಪಾಂಗಸ್ಥಲಗಳು ಬಸವಣ್ಣನವರ ಮತ್ತು ಸಿದ್ಧಾಂತ ಶಿಖಾಮಣಿಯ, ಇಲ್ಲವೆ ಮಹಾ ಲಿಂಗದೇವರ ಏಕೋತ್ತರ ಶತಸ್ಥಲದ ಭಕ್ತಸ್ಥಲದ ಪ್ರಾರಂಭದ ಈ ಉಪಾಂಗ ಸ್ಥಲಗಳಲ್ಲಿ ಸ್ಥಾನಪಲ್ಲಟವಿದೆ.

ಈ ಎರಡು ಗ್ರಂಥಗಳಲ್ಲಿರುವ ಭಕ್ತಸ್ಥಲದ ಉಪಾಂಗಸ್ಥಲಗಳಲ್ಲಿಯ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರ ಹೇಯಸ್ಥಲ, ಗುರುಕರುಣಸ್ಥಲಗಳು ಲಿಂಗಲೀಲಾವಿಲಾಸ ಚಾರಿತ್ರ ಗ್ರಂಥದಲ್ಲಿ ಭಕ್ತಿಸ್ಥಲದ ಉಪಾಂಗಗಳಾಗಿರುವದಿಲ್ಲ. ಅವು ಭಕ್ತಸ್ಥಲದ ಪ್ರಾರಂಭ ಕ್ಕಿಂತಲೂ ಪೂರ್ವದಲ್ಲಿರುವ ಒಂಬತ್ತು ಸ್ಥಲಗಳಲ್ಲಿ ಕೊನೆಯ ನಾಲ್ಕು ಸ್ಥಲಗಳಾಗಿವೆ. ಇವುಗಳ ಪೂರ್ವದ ೮ ಸ್ಥಲಗಳು ಇಂತು ಪ್ರಾರಂಭವಾಗುತ್ತವೆ. ೧. ನಿಷ್ಕಲಲಿಂಗಸ್ಥಲ, ೨. ಮಹಾಲಿಂಗಸ್ಥಲ, ೩. ಲಿಂಗಮೂರ್ತಿಸ್ಥಲ, ೪. ಅಂಗಸ್ಥಲ, ೫. ಸಂಸಾರ ಸಂಬಂಧ ಸ್ಥಲ ಇವು ಐದು ಸ್ಥಲಗಳು ಶಿವಶರಣರ ಸ್ಥಲಕಟ್ಟಿನ ವಚನಗಳ ಸ್ಥಲಕಟ್ಟುಗಳಲ್ಲಿ ಇಲ್ಲವಾಗಿ ಇವುಗಳು ಹೊಸಸ್ಥಲಗಳೆಂದೂ, ಕಲ್ಮಠದ ಪ್ರಭುದೇವರು ಕಲ್ಪಿಸಿದ ಸ್ಥಲ

ಗಳಿಂದೂ ಹೇಳಬೇಕಾಗುತ್ತದೆ. ಯಾಕಂದರೆ ಈ ಸ್ಥಲಗಳನ್ನು ಈ ಕ್ರಮದಲ್ಲಿ ಪ್ರಯೋಗಿಸಿದ ಪ್ರಾಚೀನ ಗ್ರಂಥ ಒಂದೂ ಲಭ್ಯವಿರುವದಿಲ್ಲ. ಮೂಲ ಸ್ಥಲಗಳು ಇವುಗಳ ಜೊತೆಯಲ್ಲಿ ಸೇರಿಸಲಾಗಿರುವುದರಿಂದ ಡಾ. ವೀರಣ್ಣ ರಾಜೂರ ಅವರು ಈ ರೀತಿಯ ಹೊಸಸ್ಥಲಗಳು ಪಾರಂಪರಿಕ ಸ್ಥಲಗಳ ಜೊತೆ ಸೇರಿಸಲಾದ ಸ್ಥಲಕಟ್ಟುಗಳಿಗೆ "ಸಂಕೀರ್ಣ ಸ್ಥಲಗಳನ್ನು ಅಳವಡಿಸಿಕೊಂಡ ಕೃತಿಗಳಾಗಿವೆ" ಎಂದು ಎಲ್ಲ ಪುರಾತರ ಸ್ತೋತ್ರದ ವಚನಗಳು ಎಂಬುದರ ಮುನ್ನುಡಿಯಲ್ಲಿ ಬರೆದಿದ್ದಾರೆ. ಅವರು ಸ್ಥೂಲವಾಗಿ ವಚನ ಸಾಹಿತ್ಯ ಕೃತಿಗಳನ್ನು ಕೇವಲ **ಸಂಗ್ರಹಗಳು** ಮತ್ತು **ತಾತ್ತ್ವಿಕ ಸ್ಥಲಕಟ್ಟುಗಳು** ಎಂದು ಎರಡು ಗುಂಪುಗಳಾಗಿ ವರ್ಗೀಕರಿಸಿದ್ದು **ಸ್ಥಲಕಟ್ಟು** ಕೃತಿಗಳಲ್ಲಿಯ ಒಳಭೇದಗಳಲ್ಲಿ ಒಂದು **ಸಂಕೀರ್ಣ ಸ್ಥಲಗಳ** ಕೃತಿಗಳು ಎಂಬ ವರ್ಗವು. ಸ್ಥಲಕಟ್ಟಿನಲ್ಲಿ ೧. ಷಟ್‌ಸ್ಥಲ, ೨. ಏಕೋತ್ತರಸ್ಥಲ, ೩. ಮೂವತ್ತಾರುಸ್ಥಲ, ೪. ಇನ್ನೂರುಹದಿನಾರು ಸ್ಥಲ ಮತ್ತು ೫. ಸಂಕೀರ್ಣಸ್ಥಲ ಕೃತಿಗಳೆಂದು. ಈ ವರ್ಗೀಕರಣದ ಮೊದಲ ಪ್ರಕಾರವಾದ ಷಟ್‌ಸ್ಥಲದ ಕೃತಿ ಎಂಬುದರ ಕ್ರಮ ಸಮುಚ್ಚಯ ಮತ್ತು ಸಮಸಮುಚ್ಚಗಳಿಗನುಸರಿಸಿ ನೂರೊಂದು ಅಥವಾ ಏಕೋತ್ತರ ಶತಸ್ಥಲಗಳ ಕೃತಿ ಮತ್ತು ಮೂವತ್ತಾರುಸ್ಥಲ, ಇನ್ನೂರಹದಿನಾರು ಸ್ಥಲ ಕೃತಿಗಳಾಗಿವೆ. ಅಂದರೆ ಷಟ್‌ಸ್ಥಲ ಕಟ್ಟಿನಲ್ಲಿ ಎರಡು ಮೂಲ ವರ್ಗಗಳು: ಒಂದು ಸ್ಥಲ ಕ್ರಮಸಮುಚ್ಚಯ ಕಟ್ಟು, ಇನ್ನೊಂದು ಸ್ಥಲಸಮಸಮುಚ್ಚಯ ಕಟ್ಟು. ಎರಡನೆಯ ವರ್ಗದಲ್ಲಿ ೩೬ ಸ್ಥಲಸಮಸಮುಚ್ಚಯ ಕಟ್ಟು, ೨೧೬ ಸ್ಥಲಸಮ ಸಮುಚ್ಚಯಕಟ್ಟು ಎಂದು ತಾತ್ತ್ವಿಕ ವಿಧಾನಪರ ಭೇದಗಳು ಇವೆ. ಇನ್ನು ಮಿಶ್ರ ಸ್ಥಲಕಟ್ಟು ಎಂಬುದು ಈ ಕ್ರಮಸಮುಚ್ಚಯ ಅಥವಾ ಸಮಸಮುಚ್ಚಯಗಳಿಂದ ಭಿನ್ನವಾದುದೆ? ಸ್ಥಲಕಟ್ಟು ಸಾಹಿತ್ಯ ಕೋಷ್ಟಕದಲ್ಲಿ ಇದನ್ನು ಹೀಗೆ ತೋರಿಸಬಹುದು.




ಈ ಎರಡು ಭೇದಗಳು ಷಟ್‌ಸ್ಥಲ ಆಚರಣಾಭೇದಗಳಾಗಿವೆ. ಇದು ಗಮನಾರ್ಹ ಸಂಗತಿ.

ಡಾ. ವೀರಣ್ಣ ರಾಜೂರ ತಾತ್ತ್ವಿಕವಾಗಿ ವಿಚಾರ ಮಾಡುವುದಕ್ಕೆ ಅವರು ಪಡೆದ ಆಸ್ತಿಕ, ನಾಸ್ತಿಕ ದರ್ಶನಗಳ ಪ್ರಾಥಮಿಕ ಪರಿಚಯದ ತರಬೇತಿ ಪಡೆದುದೇ ಕಾರಣ. ಅವರು ವಚನ ಸಾಹಿತ್ಯವನ್ನು **ಕೇವಲ ಸಂಗ್ರಹಗಳು** ಮತ್ತು **ತಾತ್ತ್ವಿಕ ಸ್ಥಲಕಟ್ಟು**ಗಳು ಎಂದು ಮಾಡಿದರೇನೋ ನಿಜ. ಆದರೆ ಅವರು **ಕೇವಲ ಸಂಗ್ರಹಗಳ** ಗುಂಪಿಗೆ ಸೇರಿದ ಸಕಲ ಪುರಾತನರ ವಚನಗಳ ಕಟ್ಟನ್ನು ಸಂಗ್ರಹವೆಂದು ಹೆಸರಿಸಿ ಕೈಬಿಡಲಿಲ್ಲ. ಅವುಗಳ ಒಳಹೊಕ್ಕು ನೋಡಿ, ಅಲ್ಲಿ ತಾತ್ತ್ವಿಕ ರೀತಿಯಲ್ಲಿ ವಚನಗಳ ಸಂಗ್ರಹ ನಡೆದಿರು

ವುದನ್ನು ಎತ್ತಿತೋರಿಸಿದ್ದಾರೆ: "ಒಟ್ಟಾರೆ ವೀರಶೈವದ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ, ಶಿವಯೋಗ, ಲಿಂಗಾಂಗಸಾಮರಸ್ಯ ಇತ್ಯಾದಿ ತತ್ತ್ವಗಳನ್ನು ಅಳವಡಿಸಿ ಕೊಂಡ ಈ ಕಟ್ಟುಗಳು ತೋರಿಕೆಗೆ ಕೇವಲ ಸಂಗ್ರಹಗಳೆನಿಸಿದರೂ ಒಳಗೆ ಸೂಕ್ಷ್ಮ ತಾತ್ತ್ವಿಕ ವ್ಯವಸ್ಥೆ ಕಂಡುಬರುವುದರಿಂದ ಇವುಗಳನ್ನು ತಾತ್ತ್ವಿಕ ಸಂಕಲನಗಳ ಗುಂಪಿಗೆ ಸೇರಿಸುವುದು ಸೂಕ್ತವೆನಿಸುತ್ತದೆ" ಎಂಬ ಸರಿಯಾದ ನಿರ್ಣಯವನ್ನು ಕೈಕೊಂಡುದು ಶ್ಲಾಘನೀಯ. ಈ ನಿರ್ಣಯವು ಅವರು ಈ ಮೊದಲು ಕೈಕೊಂಡ "ಈ ವಿಭಜನೆಯಲ್ಲಿ 'ಸಕಲಪುರಾತನರ ವಚನಗಳು' ಕೇವಲ ಸಂಗ್ರಹಗಳ ಗುಂಪಿಗೆ ಸೇರುತ್ತವೆ" ಎಂದು ಕೈಕೊಂಡ ನಿರ್ಣಯವನ್ನು ಕೈಬಿಟ್ಟುದು ಗಮನಿಸಬೇಕಾದಂಥದು. "ಅವು ಕೇವಲ ಸಂಗ್ರಹಗಳ ಗುಂಪಿಗೇ ಸೇರುತ್ತವೆ" ಎಂಬ ನಿರ್ಣಯವನ್ನು ಸಮರ್ಥಿಸಿಕೊಳ್ಳಲು ವೀರಶೈವ ಸಮನ್ವಯ ೧-೩ ಜೂನ್ ೧೯೮೭ ಪು. ೬ ರಲ್ಲಿಯ ಲೇಖನ-ವಚನ ಸಾಹಿತ್ಯ. ಸಂಪಾದನೆಯ ವಿಧಾನ-ಇತಿಹಾಸ ಎಂಬುದನ್ನು ಉದ್ಧರಿಸಿದ್ದನ್ನು ಮೀರಿ ಹೊಸ[೧೩] ನಿರ್ಣಯವನ್ನು 'ಸಕಲಪುರಾತನರ ವಚನಗಳು' ಎಂಬ ಕಟ್ಟಿನ ಆಂತರಿಕ ಅಂಶಗಳ ಅಧ್ಯಯನದ ಆಧಾರದಿಂದಲೂ, ಬೇರೆ ಬೇರೆ ವಚನಗಳ ಕಟ್ಟುಗಳಲ್ಲಿ-ಮೂರುಸಾವಿರದ ಕಟ್ಟಿನಲ್ಲಿ 'ಸಂಪಾದನೆಯ ವಚನಗಳು' ಮತ್ತು ಸಾವಿರದ ಕಟ್ಟಿನಲ್ಲಿ 'ಶೀಲಸಂಪಾದನೆಯ ವಚನಗಳು' ಎಂಬ ಶೀರ್ಷಿಕೆಗಳಿರುವು ದನ್ನು ಉದ್ಧರಿಸುವದರಿಂದಲೂ ಕೈಕೊಂಡುದು ವೈಜ್ಞಾನಿಕವಾಗಿದೆ. ಇದೇ ಲೇಖಕರು 'ಎಲ್ಲ ಪುರಾತರ ಸ್ತೋತ್ರದ ವಚನಗಳು' ಎಂಬ ಕೃತಿಯ ಹೆಸರನ್ನು ಪರಾಮರ್ಶಿಸುತ್ತ "ಇಲ್ಲಿನ ವಚನಗಳಲ್ಲಿ ವೀರಶೈವ ಷಟ್‌ಸ್ಥಲತತ್ತ್ವದ, ಲಿಂಗಾಂಗ ಸಾಮರಸ್ಯ ತತ್ತ್ವದ, ಅವಕ್ಕೆ ಮೂಲವಾದ ಪರವಸ್ತುವಿನ (ಶಿವನ) ಕುರಿತ ಚಿಂತನೆ-ಚರ್ಚೆ ಅಡಕವಾಗಿದೆ. ಪರವಸ್ತುವಿನ ತತ್ತ್ವವನ್ನು ಕುರಿತು ವಿಚಾರಿಸುವ-ವಿವರಿಸುವ ವಚನಗಳು ಎನ್ನುವ ಅರ್ಥ ದಲ್ಲಿ 'ಸ್ತೋತ್ರದ ವಚನಗಳು' ಎಂದು ಇವಕ್ಕೆ ಕರೆದಿರಬಹುದೆ?" ಎಂದು ಪ್ರಶ್ನೆಯನ್ನು ಹಾಕಿಕೊಂಡು, ತಮ್ಮ ಪ್ರಶ್ನೆಗೆ ಕಾರಣವನ್ನು ಹುಡುಕಲು ಯತ್ನಿಸಿದ್ದಾರೆ.

ಡಾ. ವ್ಹಿ. ಬಿ. ರಾಜೂರವರ ಈ ಕಾರ್ಯವು ಕೇವಲ ನಾಮಸಾದೃಶ್ಯದಿಂದ ವಚನ ಸಾಹಿತ್ಯದ ವರ್ಗೀಕರಿಸುವುದು ಸುರಕ್ಷಿತವಲ್ಲ ಅಥವಾ ದೋಷಯುಕ್ತ ಎಂಬ ಎಚ್ಚರಿಕೆ ಯನ್ನು ಕೊಟ್ಟಿದೆ ಎಂದು ಹೇಳದಿರಲಿಕ್ಕಾಗದು. ಒಟ್ಟಿನ ಮೇಲೆ ವಚನ ಸಾಹಿತ್ಯದ ಉಗಮ, ಬೆಳವಣಿಗೆಯು ತಾತ್ತ್ವಿಕ, ಧಾರ್ಮಿಕ, ನೈತಿಕ, ಯೌಗಿಕ, ಅನುಭಾವಿಕ ಮೂಲ ದ್ದಾಗಿರುವುದನ್ನು ನೋಡಿದರೆ ಅದು ಶಾಸ್ತ್ರ ಸಾಹಿತ್ಯವೆಂದು ಒಂದೇ ಮಾತಿನಲ್ಲಿ ಹೇಳಿ ಶಾಸ್ತ್ರ ರೀತಿಯಲ್ಲಿ ಆ ಸಾಹಿತ್ಯವನ್ನು ವರ್ಗೀಕರಿಸುವುದು ಸಾಧುವಾದ ಕಾರ್ಯವೆಂದು ಹೇಳ ಬೇಕಾಗುತ್ತದೆ ಅಥವಾ ಸಾಧುವಾದ ರೀತಿ ಎಂದು ಹೇಳಬೇಕಾಗುತ್ತದೆ. ಈ ಶಾಸ್ತ್ರ

---

೧೩ ಡಾ. ವ್ಹಿ. ಬಿ. ರಾಜೂರ, ಎಲ್ಲ ಪುರಾತರ ಸ್ತೋತ್ರದ ವಚನಗಳು, ಪು. VI-X. ವೀರಶೈವ ಅಧ್ಯಯನ ಸಂಸ್ಥೆ, ಗದಗ (೧೯೮೮).

ಸಾಹಿತ್ಯವು ಷಟ್‌ಸ್ಥಲಸಾಹಿತ್ಯ. ಇದು ಸ್ಥಲಕಟ್ಟು ಸಾಹಿತ್ಯವಾಗಿದೆ. ಇದನ್ನು ಕುರಿತಾದ ಶಾಸ್ತ್ರ ಸಾಹಿತ್ಯ ಪ್ರಕಾರಗಳು ಉಂಟು. ಸಂಸ್ಕೃತ ಭಾಷೆಯಲ್ಲಿಯು ಷಟ್‌ಸ್ಥಲಶಾಸ್ತ್ರ ಸಾಹಿತ್ಯದ ಪ್ರಕಾರಗಳು ವೃತ್ತಿಗಳು, ಸೂತ್ರಗಳು, ಕಾರಿಕೆ, ಕಾಶಿಕೆ, ಪ್ರಕರಣ, ವಾರ್ತಿಕ, ಭಾಷ್ಯಗಳು ಮುಂತಾದವುಗಳಾದರೆ ಕನ್ನಡ ಭಾಷೆಯಲ್ಲಿ ಕೂಡ ಉಂಟು. ಅವುಗಳಿ ಸಂಪಾದನೆಗಳು, ನವ್ಯ ಸ್ಥಲಕಟ್ಟಿನ ಕೃತಿಗಳು, ಭಾಷ್ಯಗಳು ಷಟ್‌ಸ್ಥಲದ ವಚನಗಳು, ಕ್ರಮಸಮುಚ್ಚಯು ಷಟ್‌ಸ್ಥಲದ ಕಟ್ಟುಗಳು, ಸಮುಸಮುಚ್ಚಯುದ ಷಟ್‌ಸ್ಥಲದ ಕಟ್ಟುಗಳು ಎಂದು ಹೆಸರಿಸಬೇಕಾಗುತ್ತದೆ. **ಸಂಕೀರ್ಣ** ಸ್ಥಲಕಟ್ಟು ಎಂಬುದರ ಸಾಧುತ್ವವು ಪರಾ ಮರ್ಶಿಸಬೇಕಾದುದು. ಅದನ್ನು ಕೈಕೊಳ್ಳುವಾ.

**ಸಂಕೀರ್ಣ ಸ್ಥಲಕಟ್ಟಿನ ವಿಚಾರ ಹಸಿಗೆ:**

ಈಗ ನಾವು 'ಸಂಕೀರ್ಣ ಸ್ಥಲಕಟ್ಟಿ'ನ ಉದಾಹರಣೆಗೆಂದು ಎತ್ತಿಕೊಂಡ 'ಲಿಂಗ ಲೀಲಾವಿಲಾಸ ಚಾರಿತ್ರ' ಕೃತಿಕಾರ ಕಲ್ಮಠದ ಪ್ರಭುದೇವರು ತಮ್ಮ ಕೃತಿಯಲ್ಲಿ ಸ್ಥಲಗಳ ಬಗ್ಗೆ ಕೊಟ್ಟ ವಿವರಣೆಯತ್ತ ಹೊರಳಬೇಕು. ಈ ವಿಷಯ ಮೀಮಾಂಸೆಯು **ಸಂಕೀರ್ಣ** ಸ್ಥಲ ಸೃಷ್ಟಿಗೆ ಕಾರಣವನ್ನು ಗುರುತಿಸುವದು ಸಾಧ್ಯವಿದೆ. ಈ ಗ್ರಂಥ ಪೀಠಿಕೆಯಲ್ಲಿ ಕಲ್ಮಠದ ಪ್ರಭುದೇವರು ಹೀಗೆ ಹೇಳುತ್ತಾರೆ: "ಆ ಷಟ್‌ಸ್ಥಲ ಮಾರ್ಗವೇ ಲಿಂಗಲೀಲಾ ವಿಲಾಸ ಚಾರಿತ್ರ" ಎಂದು. ಹೀಗೆ ಅವರು ಹೇಳುವಾಗ ತಮ್ಮ ಕೃತಿಯ ಅರ್ಥವಿವರಣೆ ಕೊಟ್ಟಿದ್ದಾರೆ. 'ಷಟ್‌ಸ್ಥಲಮಾರ್ಗ' ಎಂಬ ಪದವು ಸಮಸ್ತಪದ. ಷಟ್‌ಸ್ಥಲದ ಮತ್ತು ಮಾರ್ಗ ಎಂಬ ಪದಗಳಿಂದ ಷಟ್‌ಸ್ಥಲಮಾರ್ಗವೆಂಬ ಸಮಸ್ತಪದವಾಗಿದೆ. ಷಟ್‌ಸ್ಥಲದ ಮಾರ್ಗ*ವು ಅಧೋಮುಖವಾಗಿ ಪ್ರವೃತ್ತಿಮಾರ್ಗ, ಊರ್ಧ್ವ ಮುಖವಾಗಿ ನಿವೃತ್ತಿ ಮಾರ್ಗ. ಈ ಎರಡೂ ಕಾರ್ಯಗಳಿಗೆ ಅಂದರೆ ಪ್ರವೃತ್ತಿ ಮತ್ತು ನಿವೃತ್ತಿ ಕಾರ್ಯಗಳಿಗೆ 'ಮಾರ್ಗ' ಎಂದು ಹೆಸರು ಬಂದಿದೆ. ಪ್ರವೃತ್ತಿಯಲ್ಲಿ ಷಟ್‌ಸ್ಥಲವಿರಲು ಸೃಷ್ಟಿ-ಮಹಾ ಸಾದಾಖ್ಯ(ಮಹಾಲಿಂಗ)ವಾದರೆ, ನಿವೃತ್ತಿಯಲ್ಲಿದ್ದಾಗ ಬಯಲು ಅಥವಾ ಶೂನ್ಯ ಇಲ್ಲವೆ ನಿಷ್ಕಲಲಿಂಗ ಅವಸ್ಥೆ-ಇದೇ ಸ್ವಯಂಭು ಅವಸ್ಥೆ. ಈ ಕಾರ್ಯ ಉನ್ಮುಖವಾಗಿ ಪೂರ್ತಿ ಯಾದಾಗ ಮಹಾಲಿಂಗವು ಬಯಲು ಅಥವಾ ನಿಷ್ಕಲಲಿಂಗವಾಗಿ ಅದಕ್ಕೆ ಸಮುದ್ರದಲ್ಲಿ ಬಿದ್ದ ಆಲಿಕಲ್ಲಿನ ಅವಸ್ಥೆ ಉಂಟಾಗುತ್ತದೆ. 'ಮಾರ್ಗ' ಪದವು ಈ ಎರಡೂ ಕಾರ್ಯಗಳನ್ನು ತಿಳಿಸುತ್ತದೆ. ಇದು ಸಾಧು ವಿಚಾರ ಎಂಬುದಕ್ಕೆ ಲಿಂಗ (ಷಟ್‌ಸ್ಥಲ) ಸ್ವರೂಪದ (ವಿವಿಧ ಸ್ಥಲಗಳ) ಪ್ರತಿಪಾದನೆ ಇಲ್ಲಿದೆ. ಒಟ್ಟು ಹದಿನಾರು ಸ್ಥಲಗಳಲ್ಲಿಯ ವಸ್ತು

* ಷಟ್‌ಸ್ಥಲ ಪ್ರವೃತ್ತಿಮಾರ್ಗ ಮತ್ತು ನಿವೃತ್ತಿ ಮಾರ್ಗಗಳಂತೆ ಗ್ರೀಕ ತತ್ತ್ವ ಜ್ಞಾನಿ ಹೆರಾಕ್ಲಿಟಸ್ ತಾನು ಪ್ರತಿಪಾದಿಸಿದ ಮೂಲತತ್ತ್ವ ಕೂಡ down ward way and upward way ಎಂಬ ಮಾರ್ಗಗಳುಳ್ಳದು ಎಂದು ಹೇಳಿದ್ದು ಗಮನೀಯ ವಿಚಾರ.

ಲಕ್ಷಣ ಪ್ರತಿಪಾದಿಸುವದನ್ನು ನೋಡುವಾ. ೧೬ ಸ್ಥಲಗಳೇ ಲಿಂಗಲೀಲಾವಿಲಾಸಚಾರಿತ್ರ ಅಥವಾ ಷಟ್‌ಸ್ಥಲ ವಿಲಾಸಚಾರಿತ್ರ.

A) ೧. ನಿಷ್ಕಲಲಿಂಗಸ್ಥಲ : ಇದರ ಲಕ್ಷಣ ವಿವರಣೆ–ಇದು ವಾಙ್ಮನಕ್ಕೆ ಬಾರದು. ಅಖಂಡಾದ್ವಯವು. ನಿತ್ಯವು, ನಿರವಯವು, ಪರಿಪೂರ್ಣವು. ಚೈತನ್ಯವು. ಜ್ಞಾನಪ್ರಭೆಯುಳ್ಳುದು.

೨. ಮಹಾಲಿಂಗಸ್ಥಲ : ಮಹಾಲಿಂಗವು ಸತ್, ಚಿತ್, ಆನಂದಮಯವಾಗಿದೆ. ಇಲ್ಲಿ **ಸತು** ಎಂದರೆ ಅಖಂಡ, ನಿರವಯ, ಪರಿಪೂರ್ಣ, ಚೈತನ್ಯ, ಜ್ಞಾನಗಳು, ಇದೇ ಲಿಂಗ, ಇಲ್ಲಿಯ ಚಿತ್ತು ಎಂದರೆ ಆ ಚೈತನ್ಯ ಜ್ಞಾನ ಪ್ರಭಾಸಾಮರ್ಥ್ಯದ ಬೆಳಗು, ಇದೇ ಶಕ್ತಿ, ಇವುಗಳ ಲೀಲೆಯು ಆನಂದ.

೩. ಲಿಂಗಮೂರ್ತಿ ಸ್ಥಲ: ಮಹಾಲಿಂಗವು ತನ್ನ ಚಿದ್ವಿಲಾಸ ಲೀಲೆಯಿಂದ ಪಂಚಮುಖದ ಪಂಚಲಿಂಗ ಮತ್ತು ಮಹಾಲಿಂಗ ಒಂದು ಹೀಗೆ ಷಡ್ವಿಧ ಲಿಂಗವಾಯಿತು. ಇದೇ ಲಿಂಗಮೂರ್ತಿಸ್ಥಲ.

B) ೪. ಅಂಗಸ್ಥಲ : ಮಹಾಲಿಂಗದ ಚಿಚ್ಛಕ್ತಿ ಎಂಬ ಕಲಾಶಕ್ತಿಯು ಆರಾಯಿತು. ಮಹಾಲಿಂಗವು ತನ್ನ ತಾನರ್ಚಿಸಿ ಪೂಜಿಸಿಕೊಂಬ ಲೀಲೆಗಾಗಿ ತನ್ನ ಖಂಡ ಚಿಚ್ಚೈತನ್ಯ ಶಕ್ತಿಯ ಸಹಸ್ರಾಂಶದೊಳಗಿನ ಒಂದಂಶವನ್ನು ಬೇರ್ಪಡಿಸುವ ಮೂಲಕ ಆತ್ಮವಾಯಿತ್ತು. ಈ ಆತ್ಮವೇ ಅಂಗ.

೫. ಸಂಸಾರಸಂಬಂಧಸ್ಥಲ: ಲಿಂಗ ಅಂಗ ಎರಡು ಆದಮೇಲೆ ತನ್ನ ಪಂಚಸಾದಾಖ್ಯ ಮುಖಗಳಲ್ಲಿ ಪಂಚತತ್ತ್ವವ ಪುಟ್ಟಿಸಿ, ಈ ಪಂಚತತ್ತ್ವಂ-ಗಳಿಂದ ಪಂಚವಿಂಶತಿ ತತ್ತ್ವಗಳನ್ನು ಹುಟ್ಟಿಸಿ ಈ ೨೫ ತತ್ತ್ವಗಳ ದೇಹವನ್ನು ಆತ್ಮಂಗೆ ಸಂಬಂಧಿಸಿದ. ಈ ದೇಹ ಕರಣಗಳಲ್ಲಿ ಮಲತ್ರಯವನ್ನು ಪುಟ್ಟಿಸಿ ಪಾಶಬದ್ಧಮಾಡಿ ದುದೇ ಸಂಸಾರ ಸಂಬಂಧಸ್ಥಲ.

೬. ಪಿಂಡಸ್ಥಲ : ಆತ್ಮನು ಜೀವಾವಸ್ಥೆಯಲ್ಲಿ ತನ್ನ ನಿಜ ಪಿಂಡವಾದ ಶಿವತತ್ತ್ವ ಮರೆದು, ತಾನು ಪ್ರಕೃತಿ ಪಿಂಡರೂಪಿ ಎಂದು ಅದೇ ತಾನಾದುದೇ ಪಿಂಡಸ್ಥಲ.

೭. ಪಿಂಡಜ್ಞಾನಸ್ಥಲ : ಇಂಥ ಪ್ರಕೃತಿ ಪಿಂಡಕ್ಕೆ ಶಿವಕೃಪೆಯಾಗಲು ಆ ಪಿಂಡವು ತಾನು ಶಿವಪಿಂಡವೆಂಬ ಭಾವಜಾಗ್ರತವಾಗಲು, ಅದೇ ಪಿಂಡ ಜ್ಞಾನಸ್ಥಲ.

೮. ಸಂಸಾರ ಹೇಯಸ್ಥಲ : ತಾನು ಶಿವನೆಂದರಿದು ತನ್ನಿಂದನ್ಯವಾದ ಸಂಸಾರಭ್ರಾಂತಿ ಭಾವವನ್ನು ನಿವೃತಿ ಮಾಡುವುದೇ ಸಂಸಾರ ಹೇಯಸ್ಥಲ.

೯. ಗುರುಕರುಣಸ್ಥಲ : ಸಂಸಾರ ಭಾವನೆತಿಮಾಡಿ, ಶಿವಾಪೇಕ್ಷೆಯುಳ್ಳವನಾಗಿ ಗುರುವನ್ನಪೇಕ್ಷಿಸಲು, ಆ ಗುರು ಮಹಾಘನಲಿಂಗವನ್ನು ಅದ್ವೈತಭಾವಬೋಧೆಯುಕ್ತವಾಗಿ ಕೊಟ್ಟುದು ಗುರು ಗುರುಕರುಣಸ್ಥಲ.

೧೦. ಭಕ್ತಿಸ್ಥಲ : ಕರಸ್ಥಲವೆ ಗುರುಲಿಂಗಜಂಗಮವೆಂದರಿದು ದಾಸೋಹಿಯಾಗಿ ರುವುದೆ ಭಕ್ತಿಸ್ಥಲ.

೧೧. ಮಾಹೇಶ್ವರಸ್ಥಲ : ಲಿಂಗಾಂಗ ಭೇದವಳಿದು, ಲಿಂಗಾಂಗಸಂಗಸುಖದ ಅವಿರಳ ಜ್ಞಾನ ನಿರ್ಧಾರವಾಗಿ ನಿಂದ ನೈಷ್ಠಿಕಾಭಕ್ತಿಯಿಂದ ಜಾತಿ ವರ್ಣ ಆಶ್ರಮ ಅಭಿಮಾನ ತೊರೆದು ಲಿಂಗಾಭಿಮಾನಿಯಾ ಗಿರುವುದೇ ಮಾಹೇಶ್ವರಸ್ಥಲ.

೧೨. ಪ್ರಸಾದಿಸ್ಥಲ : ನೈಷ್ಠಿಕಾ ಭಕ್ತಿಯಿಂದ ಲಿಂಗಾಭಿಮಾನಿಯಾದ ಮಾಹೇಶ್ವರನು ಗುರುಲಿಂಗಜಂಗಮದ ಪ್ರಸಾದವು-ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವು-ಪರಶಿವಸ್ವರೂಪವೆಂದರಿದು ಸಾವಧಾನಭಕ್ತಿ ಯಿಂದ ಲಿಂಗಾರ್ಪಿತವಮಾಡಿ ಭೋಗಿಸುವಾತನೆ ಪ್ರಸಾದಿ.

೧೩. ಪ್ರಾಣಲಿಂಗಿಸ್ಥಲ : ಲಿಂಗಭೋಗೋಪಭೋಗಿಯಾದ ಪ್ರಸಾದಿಯು ತನು ಮನ ಪ್ರಾಣಗಳೇ ಗುರುಲಿಂಗ ಜಂಗಮ ಸ್ವರೂಪವೆಂದರಿದು; ಇಷ್ಟವೇ ಪ್ರಾಣವೆಂದರಿದು; ಅನುಭಾವ ಭಕ್ತಿಯಿಂದ ಇಷ್ಟ ಪ್ರಾಣಭೇದವಳಿದು ಅನುಭಾವ ಭಕ್ತಿಯಿಂದ ಪ್ರಾಣಲಿಂಗಾ ರ್ಚನೆಯೆ ಪ್ರಾಣಲಿಂಗಿಸ್ಥಲ.

೧೪. ಶರಣಸ್ಥಲ : ಇಂಥ ಪ್ರಾಣಲಿಂಗಿಗೆ ಸರ್ವವೂ ಲಿಂಗಮಯವೆಂದು ಕಾಣುವ ಚಿದ್‌ದೃಕ್ಕನುಳ್ಳವ ಶರಣ. ಅವನೇ ಚಿತ್‌ಸ್ವರೂಪು. ಹೀಗೆ ಲಿಂಗದ ಅಭಿನ್ನ ಚಿಚ್ಛಕ್ತಿಸ್ವರೂಪವೇ ಶರಣನಾದ ಕಾರಣ ಶರಣ ಸತಿ(ಚಿಚ್ಛಕ್ತಿ), ಲಿಂಗವೇ ಪತಿ. ಆದ್ದರಿಂದ ಲಿಂಗಕ್ಕೂ ಚಿಚ್ಛಕ್ತಿ ಸ್ವರೂಪ ಶರಣನಿಗೂ ವಿಯೋಗವಿಲ್ಲ. **ಶರಣ ತಾನೇ ಲಿಂಗವೆಂದು** ಅದ್ವಯಜ್ಞಾನದಿಂದಿಪ್ಪುದೇ ಆನಂದಭಕ್ತಿ, ಇದು ಶರಣಸ್ಥಲ.

೧೫. ಐಕ್ಯಸ್ಥಲ : ಮಹಾಘನಲಿಂಗವೇ ತಾನೆಂದರಿದ ನಿಜಸುಖದ ಶರಣನಲ್ಲಿ ಬಯಸುವ ಬಯಕೆ ಇಲ್ಲವಾಗಿ, ಅಂದರೆ ಆ ಅರಿವು ಲಿಂಗದ ಲಡಗಿದ್ದಾದ ಕಾರಣ ಸಮರಸಭಕ್ತಿ. ಈ ಸಮರಸ ಭಕ್ತಿ ಯೆಂಬುದೇ ಲಿಂಗೈಕ್ಯ. ಇದು ಐಕ್ಯಸ್ಥಲ.

೧೬. ಸ್ವಲೀಲಾನಂದ ಭಕ್ತಿಸ್ಥಲ: ಅಂಗ ಲಿಂಗವೆಂಬ ಭೇದವಳಿದವ ಐಕ್ಯನು. ಇವನೇ ಲಿಂಗನು. ಲಿಂಗ ತಾನೆಂಬ ಅರಿವಿನ ಹಮ್ಮಿಲ್ಲ. ತನ್ನ ನಿಜ ಮರೆಯ. ಬೇರೊಂದು ಬಯಿಸ. ಲಿಂಗವಾದ ಐಕ್ಯನು ಕ್ರೀ-ಯಲ್ಲಿ ವಿಶ್ರಯಿಸಿ ತನ್ನ ತಾನರ್ಚಿಸಿ ಪೂಜಿಸಿಕೊಳ್ಳತಿರುವನಾಗಿ ಸ್ವಲೀಲಾನಂದ ಭಕ್ತಿಯೆಂದು ಹೇಳಲಾಯಿತು.

**ಶಿವಲೀಲಾನಂದ ಭಕ್ತಿಯ ವ್ಯಾಖ್ಯೆ :**

ಮಹಾಘನವಸ್ತು ತನ್ನ ಸ್ವಲೀಲೆಯಿಂದ ಲಿಂಗಾಂಗವೆರಡಾಗಿ ಪೂಜ್ಯ ಪೂಜಕನಾಗಿ ಆಚರಿಸುವ ಸ್ವೇಚ್ಛಾಚಾರವೇ ಸ್ವಲೀಲಾನಂದ ಭಕ್ತಿಯೆನಿಸಿತ್ತು. ಲಿಂಗವಿಲಾಸಚಾರಿತ್ರ ಮತ್ತು ಇದರ ಜೊತೆಯಲ್ಲಿಯ ಕೃತಿಗಳು ಸಂಕೀರ್ಣಸ್ಥಲ ಕಟ್ಟಿನ ಕೃತಿಗಳೆಂದು ಕರೆಯಲು ವಿಷಯಾನುಕ್ರಮಣಿಕೆ ನೋಡಿದೊಡನೆ ಕಂಡು ಬರುತ್ತದೆ. ಅದು ತೋರಿಕೆಯದು. ಯಾಕಂದರೆ ವಿಷಯಾನುಕ್ರಮಣಿಕೆಯಲ್ಲಿ ೧೦, ೧೧, ೧೨, ೧೩, ೧೪, ೧೫ ಸ್ಥಲಗಳು ಭಕ್ತಾದಿ ಐಕ್ಯಾಂತ ಸ್ಥಲಗಳಾಗಿವೆ. ೧೬ನೆಯದು ಹೊಸ ಸ್ಥಲವಾಗಿ ಕಂಡು ಬರುವದು. ಅದೇ ರೀತಿ ಪ್ರಥಮ ಐದು ಸ್ಥಲಗಳು-ನಿಷ್ಕಲಲಿಂಗಸ್ಥಲ, ಮಹಾಲಿಂಗಸ್ಥಲ, ಅಂಗಸ್ಥಲ ಹಾಗೂ ಸಂಸಾರ ಸಂಬಂಧ ಸ್ಥಲಗಳು ಪಾರಂಪರಿಕ ಷಟ್‌ಸ್ಥಲಗಳಲ್ಲಿ ಸ್ವತಂತ್ರವಾಗಿರುವುದಿಲ್ಲ. ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ ಮತ್ತು ಗುರುಕರುಣ ಸ್ಥಲಗಳು ಭಕ್ತಸ್ಥಲದ ಉಪಾಂಗಸ್ಥಲಗಳಾಗಿರುತ್ತವೆ. ಲಿಂಗಲೀಲಾವಿಲಾಸಚಾರಿತ್ರದ ವಿಷಯಾನುಕ್ರಮಣಿಕೆ ನೋಡಿದಾಗ ಕೆಲವು ಸ್ಥಲಗಳ ಸ್ಥಾನಪಲ್ಲಟವಾಗಿದ್ದರೆ, ಇನ್ನು ಕೆಲವು ಸ್ಥಲಗಳು ಹೊಸವಿರುತ್ತವೆ. ಈ ಎಲ್ಲ ಕಾರಣಗಳಿಂದಾಗಿ ಈ ಕೃತಿಯನ್ನು, ಇಂಥ ಸ್ಥಲಗಳ ಇನ್ನುಳಿದ ಕೃತಿಗಳನ್ನು ಡಾ. ವಿ. ಬಿ. ರಾಜೂರ ಅವರು ಸಂಕೀರ್ಣಸ್ಥಲಗಳ ಕೃತಿಗಳೆಂಬ ಒಂದು ಹೊಸ ವರ್ಗವನ್ನೇ ಸ್ಥಲಕಟ್ಟು ಸಾಹಿತ್ಯದಲ್ಲಿ ಸೃಷ್ಟಿಸಿದ್ದುಂಟು. ಡಾ. ರಾಜೂರವರ ಈ ವಿಚಾರವು ಸಾಧುವಾದುದೆಂದೇ ಅನ್ನಿಸದಿರದು. ಆದರೆ ಕಲ್ಲಮಠದ ಪ್ರಭುದೇವರು ತಮ್ಮ ಕೃತಿ **ಲಿಂಗಲೀಲಾ ವಿಲಾಸ ಚಾರಿತ್ರವೆಂದರೆ ಷಟ್‌ಸ್ಥಲ ಮಾರ್ಗ** ಎಂದು ಕರೆದಿದ್ದಾರೆ. ಇದು ಡಾ. ರಾಜೂರ ಅವರ ವಿಚಾರಕ್ಕೆ ವ್ಯತಿರಿಕ್ತವಾಗಿದೆ, ಹಾಗಾದರೆ 'ಷಟ್‌ಸ್ಥಲ' ಮತ್ತು ಗ್ರಂಥ ವಿಷಯಾನುಕ್ರಮಣಿಯಲ್ಲಿ ಬರುವ 'ಭಕ್ತ್ಯಾದಿ ಐಕ್ಯಾಂತವೆಂಬ ಷಟ್‌ಸ್ಥಲ' ಇವುಗಳು ಬೇರೆ ಬೇರೆಯೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಯಾಕಂದರೆ ಲಿಂಗಲೀಲಾವಿಲಾಸಚಾರಿತ್ರದ ಪ್ರಕಾರ ಷಟ್‌ಸ್ಥಲವೆಂದರೆ ಇದರಲ್ಲಿ ಬಂದಿರುವ ಹದಿನಾರು ಸ್ಥಲಗಳ ಒಟ್ಟು ಎಂದರ್ಥವಾಗುತ್ತದೆ. ಅವರು ಹೇಳಿದ-ಆ ಷಟ್‌ಸ್ಥಲ ಮಾರ್ಗವೇ ಲಿಂಗಲೀಲಾವಿಲಾಸಚಾರಿತ್ರವೆಂದು....... ವಚನಂಗಳ ತಕ್ಕೊಂಡು ಷೋಡಶಸ್ಥಲ ಪರಿಕ್ರಮದಿಂದ ಸೇರಿಸಿ ಅರ್ಥೈಸಿದ ವಚನಾಗಮವಿದು- ಎಂಬ ಮಾತು ವಿಚಾರಕ್ಕೆ ಪ್ರೇರಣೆಯಾಗುತ್ತದೆ ಮತ್ತು ಹೊಸದಾಗಿ ಸೃಷ್ಟಿ

ಗೊಂಡ ಸಮಸ್ಯೆಯನ್ನು ಪರಿಹರಿಸಲು ಸಹಾಯಮಾಡುತ್ತದೆ. 'ಷಟ್‌ಸ್ಥಲ' ಎಂಬ ಪದವು ಅಂಗಷಟ್‌ಸ್ಥಲಗಳೆಂದು ಸುಪ್ರಸಿದ್ಧವಾಗಿ ಪರಿಚಿತವಾದ ಭಕ್ತ್ಯಾದಿ ಐಕ್ಯಾಂತ ಸ್ಥಲಗಳೆಂದು ಸಹಜವಾಗಿ ಅರ್ಥಕೊಡುತ್ತದೆ. ಆದರೆ ಇಲ್ಲಿ ಪ್ರಯೋಗಗೊಂಡ 'ಷಟ್‌ಸ್ಥಲ' ಪದವು ಈ ಷಡಂಗಸ್ಥಲಗಳ ಅಥವ ಅಂಗ ಸ್ಥಲದ ವ್ಯಾಪ್ತಿಗೆ ಸೀಮಿತವಾಗಿಲ್ಲ. ಅದು ಲಿಂಗ ಷಟ್‌ಸ್ಥಲ ಅಥವ ಲಿಂಗಸ್ಥಲವೆಂಬುದನ್ನೂ ಬೋಧಿಸುತ್ತದೆ. ಇವಲ್ಲದೆ. ಲಿಂಗಸ್ಥಲ ಮತ್ತು ಅಂಗಸ್ಥಲವಲ್ಲದೆ–ಶಿವಸ್ಥಲವನ್ನೂ ಸೂಚಿಸುತ್ತದೆ ಅಥವ ಬಯಲನ್ನು ಸೂಚಿಸುತ್ತದೆ. ಈ ಮಾತುಗಳನ್ನು ಈ ಗ್ರಂಥದಲ್ಲಿಯೇ ನೋಡಬಹುದು. ಷಟ್‌ಸ್ಥಲ ವಿಕಾಸ–ಪರಬ್ರಹ್ಮವಿಕಾಸ, ಬಯಲು ಬಲಿಯುವಿಕೆ–ಕ್ರಮದಲ್ಲಿ ಆದಿಮೂಲ ಬ್ರಹ್ಮವು ಮೂಲ ಷಟ್‌ಸ್ಥಲ. ಅದು ವಾಚಾತೀತ ಅಥವಾ ನಿಶ್ಶಬ್ದ, ಅಖಂಡ, ಪರಿಪೂರ್ಣ, ಚೈತನ್ಯ. ಇದು ಪ್ರಥಮಾವಸ್ಥೆ. ಇದು ಲೀಲಾರಹಿತ ಇದರಲ್ಲಿ ತನ್ನ ತಾನರ್ಚಿಸಿ ಪೂಜಿಸಿತೆಂಬ ಇಚ್ಛೆಲೀಲೆ ಮೈದೋರಲು ಸತ್, ಚಿತ್, ಆನಂದಗಳು ಕಂಡುಕೊಂಡವು. ಸದ್ಭಾವಾವಸ್ಥೆ ಇಲ್ಲಿಂದ ಪ್ರಾರಂಭ. ಆದ್ದರಿಂದ ಇದು ಮಹಾಸಾದಾಖ್ಯ, ಅಥವ ಮಹಾಲಿಂಗವೆಂಬ ಪರ್ಯಾಯ ನಾಮಗಳಿಂದ ಕರೆಯಲ್ಪಟ್ಟಿದೆ. ಸಾದಾಖ್ಯದ ನಿರ್ವಚನವು ಇದನ್ನು ಸಮರ್ಥಿಸುತ್ತದೆ. ಸೃಷ್ಟಿಯ ಆರಂಭವಿದು. ಪ್ರಭುದೇವರು ಹೇಳುವ ಬಯಲಬಿಂದುವಿದು–ಮಹಾಲಿಂಗ ಅಥವ ಮಹಾಸಾದಾಖ್ಯ. ಇದು **ಪ್ರಥಮ ಸೃಷ್ಟಿ.** ಇಲ್ಲಿ ಅಂದರೆ ಮಹಾಲಿಂಗ ಅಥವ ಮಹಾಸಾದಾಖ್ಯದಲ್ಲಿ ಲಿಂಗಮೂರ್ತಿಯು ಆಯಿತ್ತು. ಈ ಲಿಂಗಮೂರ್ತಿಯೆಂಬುದು ಆರು ಲಿಂಗಗಳ ಏಕರೂಪು. ಇದೇ **ದ್ವಿತೀಯ ಸೃಷ್ಟಿ.** ಮಹಾಲಿಂಗವು ತನ್ನ ತಾನರ್ಚಿಸಿ ಪೂಜಿಸಿಕೊಂಬ ಲೀಲೆಗಾಗಿ ತನ್ನ ಖಂಡಚೈತನ್ಯ ಶಕ್ತಿಯ ಸಹಸ್ರಾಂಶದೊಳಗಿನ ಒಂದಂಶ ಬೇರ್ಪಡಿಸುವ ಮೂಲಕ ಆತ್ಮವಾಯಿತ್ತು. ಇದೇ ಅಂಗಸ್ಥಲ. ಇದೇ **ತೃತೀಯ ಸೃಷ್ಟಿ.** ಹೀಗೆ **ಲಿಂಗ** ಮತ್ತು **ಅಂಗ**ಗಳಾದವು. ಈ ಅಂಗನಿಂದ ಪಂಚತತ್ತ್ವಗಳುತ್ಪತ್ತಿಯಾಗಿ ಇವುಗಳೇ ಪಂಚವಿಂಶತಿಗಳಾಗಿ, ದೇಹಕರಣಂಗಳಲಿ ಮಲೋತ್ಪತ್ತಿಯುಂಟಾಗಲು ಆತ್ಮನು ಜೀವನಾದನು ಆ ಪಾಶಬದ್ಧತೆಯಿಂದ, ಇದೇ ಸಂಸಾರ, ಹೀಗೆ ಷಟ್‌ಸ್ಥಲವು ಪ್ರವೃತ್ತಿಯಿಂದ ಪ್ರಪಂಚವಾಯಿತು. ಈ ಪ್ರಾಪಂಚಿಕ ಆತ್ಮನು ಅಂದರೆ ಜೀವನು ತಾನು ಮತ್ತು ತನ್ನನ್ನು ಬಂಧಿಸಿದ ಪ್ರಪಂಚ–(ಸಂಸಾರ)ವನ್ನು ಯಾರೆಂದು, ಏನೆಂದು ಅರಿವ ಬಯಕೆ ತಲೆದೋರಲು ನಿವೃತ್ತಿ ಮಾರ್ಗವು ಪ್ರಾರಂಭವಾಯಿತು. ನಿವೃತ್ತಿಯೆಂಬುದೇ ಭಕ್ತಿ ಶಕ್ತಿ. ಅಂಗನು ತಾನೇ ಲಿಂಗ, ತನ್ನ ಪೂಜೆ ಲಿಂಗಪೂಜೆಯಾಗಿ ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ, ಸಮರಸ ಭಕ್ತಿಯಾಗಿ ರೂಪುಗೊಂಡು, ನಾಮ ರೂಪ ಕ್ರಿಯಾ ಭೇದವಳಿದು, ಪರಬ್ರಹ್ಮ ಅಂದರೆ ಷಟ್‌ಸ್ಥಲ, ಬಯಲು ಆಗುವದು. ಹೀಗೆ ಅದ್ವೈತ ಭಕ್ತಿಯಾಚರಿಸಿದುದೇ ಲಿಂಗಲೀಲಾವಿಲಾಸಚಾರಿತ್ರ. ಇಲ್ಲಿಯುವರೆಗಿನ ಪರಿಶೀಲನೆಯಿಂದ ಪ್ರವೃತ್ತಿಯ ಸೃಷ್ಟಿಕ್ರಮ ಮತ್ತು ನಿವೃತ್ತಿಯ ಭಕ್ತಿಕ್ರಮಗಳೆರಡೂ ಷಟ್‌ಸ್ಥಲಮಾರ್ಗ. ಇದೇ ಲಿಂಗಚರಿತ್ರ. ಆದ್ದರಿಂದ ಇಲ್ಲಿಯ ಲೀಲೆ

ಷಟ್‌ಸ್ಥಲದ ಲೀಲೆ. ಈ ಲೀಲಾಕ್ರಮದಲ್ಲಿ ೩೬ ತತ್ತ್ವಗಳೂ, ಅವುಗಳು ಮಹಲಿಂಗದಲ್ಲಿ ಲಯವಾಗಿ, ಕೊನೆಗೆ ಬಯಲಾಗುವದೂ ಕಂಡುಬರುತ್ತದೆ. ಇದು ಷಟ್‌ಸ್ಥಲಕಟು ಅಂದರೆ ಷಟ್‌ಸ್ಥಲ ವ್ಯವಸ್ಥೆ. ಈ ಕ್ರಮಗಳೆರಡರ ಸಾಹಿತ್ಯವೇ ಸ್ಥಲಕಟ್ಟು ಸಾಹಿತ್ಯ. ಆದ್ದರಿಂದ ಕಲ್ಲುಮಠದ ಪ್ರಭುದೇವರು ಪ್ರತಿಪಾದಿಸಿದ ಸ್ಥಲಗಳು ಷಟ್‌ಸ್ಥಲ ವ್ಯವಸ್ಥೆ ಗೊಳಗಳಾಗಿರುವಂಥವೆ. ಇಲ್ಲಿರುವ ಸ್ಥಲನಾಮ ನಿರ್ದೇಶಗಳು ಭಕ್ತ್ಯಾದಿ ಐಕ್ಯಾಂತಸ್ಥಲ ಗಳ ಪರಿವಿಡಿಯ ವ್ಯವಸ್ಥೆಗೆ ಅಂದರೆ ಸ್ಥಲಕಟ್ಟಿನ ವಚನಗಳಲ್ಲಿ–ಬಸವಣ್ಣನವರ, ಚೆಣ್ಣಬಸವಣ್ಣನವರ, ಪ್ರಭುದೇವರ ಸ್ಥಲಕಟ್ಟಿನ ವಚನಗಳಲ್ಲಿ–ಇರುವಂತೆ ಇಲ್ಲಿ ಇಲ್ಲದ ಕಾರಣ **ಸಂಕೀರ್ಣ** ಸ್ಥಲಗಳೆಂದು ಹೆಸರಿಡಲು ಪ್ರೇರಣೆ ಆಗಿರುವುದು ಸಹಜ. ಆದರೆ ಲಿಂಗಲೀಲಾವಿಲಾಸ ಚಾರಿತ್ರ ಕೃತಿಕಾರರ ಅಭಿಪ್ರಾಯದಲ್ಲಿ ಷಟ್‌ಸ್ಥಲ ಮಾರ್ಗವನ್ನು ಷೋಡಶಸ್ಥಲ ಪರಿಕ್ರಮದಿಂದ ಹೇಳಿರುವಂಥವಾಗಿರುವುದರಿಂದ ಷಟ್‌ಸ್ಥಲದ ಸ್ಥಲಗಳೇ ಆಗಿ ಈ ಕೃತಿಯೂ ಕೂಡ ಷಟ್‌ಸ್ಥಲಕಟ್ಟಿನ ಅಥವಾ ಷಟ್‌ಸ್ಥಲ ವ್ಯವಸ್ಥೆಯ ಸ್ಥಲಕಟ್ಟು ಸಾಹಿತ್ಯ ಕೃತಿ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಈ ವಿಚಾರದ ಹಿನ್ನೆಲೆಯಲ್ಲಿ ಸಂಕೀರ್ಣ ಸ್ಥಲ ಕಟ್ಟಿನ ಇನ್ನುಳಿದ ಕೃತಿಗಳ ಕುರಿತು ಮರುಪರಿಶೀಲನೆ ಅವಶ್ಯವೆಂದು ತೋರುತ್ತದೆ.

**ಹಾಗಾದರೆ ಅಂಗಸ್ಥಲ, ಲಿಂಗಮೂರ್ತಿಸ್ಥಲ, ಸಂಸಾರ ಸಂಬಂಧಸ್ಥಲ ಇತ್ಯಾದಿಗಳ ಪ್ರಸ್ತುತತೆ ಏನು?**

ಇಲ್ಲಿ ಕೂಡ ನಾವು **ಲಿಂಗಲೀಲಾವಿಲಾಸ ಚಾರಿತ್ರ** ಗ್ರಂಥವನ್ನೇ ನೋಡಿ ಅವುಗಳ ಪ್ರಸ್ತುತತೆಯನ್ನು ತಿಳಿದುಕೊಳ್ಳಬೇಕು. ಇಲ್ಲಿ ಈ ಪ್ರಶ್ನೆಗೆ ಉತ್ತರವು ಲಭ್ಯ ವಿದೆ. ಅದೇ ರೀತಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರ ಹೇಯಸ್ಥಲ, ಗುರುಕರುಣ ಸ್ಥಲಗಳನ್ನೇಕೆ ಸ್ಥಾನಪಲ್ಲಟನಮಾಡಲಾಗಿದೆ ಅಥವಾ ಭಕ್ತಸ್ಥಲದ ಪ್ರಾರಂಭದಲ್ಲಿ ಅವೇಕೆ ಬಂದಿಲ್ಲ? ಎಂಬ ಪ್ರಶ್ನೆಗೂ ಅಲ್ಲಿಯೇ ಉತ್ತರವಿದೆ.

ಈಗ, ಸ್ಥಲಸಾಹಿತ್ಯವನ್ನು ಸ್ಥಲವಿಡಿದು ಅರ್ಥೈಸಿಕೊಳ್ಳುವ ವಿಧಿಯಂತೆ, ಲಿಂಗ ಲೀಲಾವಿಲಾಸ ಚಾರಿತ್ರವನ್ನು ಅಲ್ಲಿಯ ಸ್ಥಳವಿಡಿದು ಅರ್ಥೈಸಿಕೊಳ್ಳುವಾ. ಶಬ್ದಾತೀತ, ಮನೋತೀತ, ನಿರವಯ, ಶೂನ್ಯವಾದ ಅಥವಾ 'ವೇದಾತೀತ ಷಡುವರ್ಣರಹಿತ ಅಷ್ಟತ್ರಿಂಶತ್ಕಳಾತೀತ ವ್ಯೋಮಾತೀತ'ವಾದ ಕೂಡಲ ಸಂಗಮದೇವ **ಬಯಲು** ನಿಷ್ಕಲ ಲಿಂಗ ಸ್ಥಲ. ಈ ಬಯಲು ಸ್ವರೂಪಗೊಂಡುದೇ ಅಥವಾ ಬಯಲು ಬಲಿಯುಲಾಗಿ ಆದ ಬಿಂದುವೇ ಮಹಲಿಂಗಸ್ಥಲ. ಈ ಮಹಾಲಿಂಗವು ತನ್ನನ್ನು ತಾನು ಅರ್ಚಿಸಿ ಪೂಜಿಸಿ ಕೊಂಬ ಲೀಲಾವಿಲಾಸದಿಂದು ಮಹಾಲಿಂಗವು ಎರಡಾಯಿತ್ತು. ಈ ಎರಡರಲ್ಲಿಯ ಒಂದು ಪಂಚಸಾದಾಖ್ಯವೆಂಬ ಲಿಂಗಮೂರ್ತಿಯಾಯಿತು. ಇದುವೇ ಲಿಂಗಮೂರ್ತಿಸ್ಥಲ. ಮಹಾ ಲಿಂಗದ ಪ್ರಭಾಶಕ್ತಿಯ ಸಹಸ್ರಾಂಶವೇ ಆತ್ಮವಾಗಿ ಲಿಂಗಕ್ಕೆ ಅಂಗವಾಯಿತ್ತಾಗಿ ಅಂಗಸ್ಥಲ

ವಾಗಿತ್ತು. ಲಿಂಗವೇ ಪೂಜ್ಯ. ಅಂಗನೇ ಪೂಜಕ. ಪಂಚಸಾದಾಖ್ಯ ಮುಖಿಂಗಳೈದರಿಂದ ಪಂಚತತ್ತ್ವಗಳು ಹುಟ್ಟಿದವು. ಇವುಗಳ ಪಂಚೀಕರಣದಿಂದ ೨೫ ತತ್ತ್ವಗಳ ದೇಹವು ಹುಟ್ಟಿತು. ಈ ದೇಹವು ಆತ್ಮಂಗೆ ಸಂಬಂಧಿಸಲಾಯಿತು. ಈ ದೇಹ ಕರಣಗಳಲ್ಲಿ ಅಹಂ ಮಮತೆ (ಅಜ್ಞಾನ) ಹುಟ್ಟಿದ್ದರಿಂದ ಆತ್ಮ ಜೀವನಾದ. ಈತನಿಗೆ ಕರ್ಮಪಾಶ ಬಂಧನವಾಯಿತು. ಸುಖ, ದುಃಖಗಳೆಂಬ ಭೋಗವಾಯಿತು. ಇದರಿಂದ ಜನನಮರಣ ವೆಂಬ ಭವವುಂಟಾಯಿತು. ಇದು (ದೇಹ) ಸಂಸಾರಸಂಬಂಧಸ್ಥಲ. ಆತ್ಮನು ದೇಹ ಸಂಬಂಧಿಯಾಗಲು ದೇಹದಲ್ಲಿಯ ಅಹಂ ಮಮತೆಗಳೆ ಅಜ್ಞಾನವಾಗಿ ದೇಹೋಹಂ ಭಾವ ಉಂಟಾಯಿತು. ಇದೇ ಶಿವಪಿಂಡವಲ್ಲದ ಪ್ರಕೃತಿಪಿಂಡ. ಕಾರಣ ಇದು ಪಿಂಡ ಸ್ಥಲ. ಪ್ರಕೃತಿ ಪಿಂಡಕ್ಕೆ ಶಿವಕೃಪೆಯಾಗಲು ತಾನು ಶಿವಪಿಂಡವೆಂಬ ಅರಿವಾಗಲು

ನಿಷ್ಕಲಲಿಂಗ (ಬಯಲು) → ಮಹಲಿಂಗಸ್ಥಲ —
- ಲಿಂಗಮೂರ್ತಿಸ್ಥಲ (ಪಂಚಸಾದಾಖ್ಯ ಲಿಂಗಮೂರ್ತಿ → ಪಂಚತತ್ತ್ವ → ೨೫ ತತ್ತ್ವಗಳಾದವು.
- ಅಂಗಸ್ಥಲ (ಮಹಾಲಿಂಗದ ಪ್ರಭಾ ಶಕ್ತಿಯ ಸಹಸ್ರಾಂಶವೇ ಆತ್ಮ. ಇದು ಲಿಂಗನಿಗಂಗವಾಗಿ ಅಂಗಸ್ಥಲ)

ಅದೇ ಪಿಂಡಜ್ಞಾನಸ್ಥಲ ಇಲ್ಲಿ ಶಿವಕೃಪೆ ಷಟ್‌ಸ್ಥಲ ಪ್ರವೃತ್ತಿಯು ಷಟ್‌ಸ್ಥಲ ನಿವೃತ್ತಿ ಯಾಗಿ ಪರಿವರ್ತನೆಗೊಳಿಸಿದೆ. ಪ್ರಪಂಚವು ಪಾರಮಾರ್ಥವಾಯಿತು. ಶಿವಕೃಪೆಯಿಂದ ಪ್ರಕೃತಿಪಿಂಡವು ಅಹಂಮಮತೆಗಳನ್ನು ಕಳೆದುಕೊಂಡು ಶಿವಪಿಂಡವಾಗಿ ರೂಪುಗೊಳ್ಳು ವುದೇ ಸಂಸಾರ ಹೇಯಸ್ಥಲ. ಅಹಂ ಮಮಮಾಮಯು ಸಂಸಾರದಿಂದ ಬಿಡುಗಡೆ, ಪರಶಿವರತಿ ಉಂಟಾಗಿ ಗುರು ಉಪದೇಶಕ್ಕಾಗಿ ಗುರುವಿನಾಶ್ರಯಿಸಲು, ಆತನು ಕರುಣೆ ಯಿಂದ ಮಲತ್ರಯವ ಕಳೆದು ಅಮಲ ಚಿತ್ಕಳೆಯನು ಮಸ್ತಕದಿಂದ ತೆಗೆದು ಶಿಷ್ಯನ ಕರಸ್ಥಲ ದಲ್ಲಿಟ್ಟು, ಇದು ನಿನ್ನ ಪ್ರಾಣಲಿಂಗವೆಂದು ಹೇಳಿ, ಅದ್ವೈತವನು ತಿಳುಹಿ, ಷಡ್ವಿಧ ಭಕ್ತಿ ಯಿಂದ ಷಡ್ವಿಧ ಲಿಂಗವನ್ನು ಅರ್ಚಿಸಿ, ಲಿಂಗವನಾಶ್ರಯಿಸಿ, ಲಿಂಗವಾಗುವ ಕಲೆಯನ್ನು ಅಂ ರೆ ಕ್ರಿಯಾಕೌಶಲವನ್ನು ಕರುಣೆಯಿಂದ ಬರೆದುದರಿಂದ ಗುರುಕರುಣಸ್ಥಲವೆನಿಸಿ ಕೊಂಡಿತು.

ಕಲ್ಲುಮಠದ ಪ್ರಭುದೇವರು 'ಲಿಂಗಲೀಲಾವಿಲಾಸ ಚಾರಿತ್ರ'ದಲ್ಲಿ ಷಟ್‌ಸ್ಥಲವು ಜಗತ್ತಾಗುವುದನ್ನು ತಾತ್ತ್ವಿಕವಾಗಿ ಪ್ರತಿಪಾದಿಸುವುದು ಕಂಡುಬರುತ್ತದೆ. ಬ್ರಹ್ಮಾಂಡ ಪಿಂಡಾಂಡಗಳು ಒಂದೆ. ಬ್ರಹ್ಮಾಂಡದಲ್ಲಿಯ ತಾನು (ಮನುಷ್ಯನು) ಎಷ್ಟು ತತ್ತ್ವ ಗಳಿಂದಾಗಿದ್ದಾನೆ ಎಂಬುದನ್ನು ಗುರುತಿಸಿಕೊಂಡುದುಂಟು ಇಲ್ಲಿ. ತಾನು ಅಂದರೆ ಆತ್ಮ ಮತ್ತು ದೇಹ ಅಥವಾ ಸಂಸಾರಿ ಜೀವಿ. ಇದನ್ನು ಅರಿಯುವಲ್ಲಿ ಮಹಲಿಂಗದ ಪಂಚ ಮುಖ ಸಾದಾಖ್ಯಗಳು ಲಿಂಗಮೂರ್ತಿಯಾಗಿ, ಅದರಿಂದ ಪಂಚತತ್ತ್ವಗಳುತ್ಪತ್ತಿಯಾಗಿ,

ಅವು ಪಂಚೀಕರಣದಿಂದ ೨೫ ತತ್ತ್ವಗಳಾಗಿ ದೇಹ ಸಿದ್ಧವಾಯಿತೆಂದು ಗೊತ್ತಾಯಿತು. ಇದೇ ಷಟ್‌ಸ್ಥಲ ಸೃಷ್ಟಿಕ್ರಮ. ಎರಡನೆಯದಾಗಿ ಅದೇ ಮಹಾಲಿಂಗದ ಪ್ರಭಾಶಕ್ತಿಯ ಸಹಸ್ರಾಂಶವು ಆತ್ಮವಾಯಿತು. ಈ ಆತ್ಮಕ್ಕೆ ಮತ್ತು ದೇಹಕ್ಕೆ ಸಂಬಂಧವುಂಟಾಯಿತು ಎಂದು ಕ್ರಮವಿಡಿದು ಹೇಳುವಾಗ, ಆ ಆ ಕ್ರಿಯೆಗಳು ಅಥವಾ ತತ್ತ್ವಾವಸ್ಥೆಯು ಆಯಾ ಹೆಸರುಗಳನ್ನು ಪಡೆದುದು ಅಥವಾ ಕೊಟ್ಟುದು ತುಂಬಾ ತರ್ಕಶುದ್ಧ ಪದ್ಧತಿಯಾಗಿದೆ. ಇಲ್ಲಿಯ ಕ್ರಮದಲ್ಲಿಯೂ ತಾತ್ತ್ವಿಕ ವ್ಯವಸ್ಥೆ ಇರುತ್ತದೆ. ಆದ್ದರಿಂದ ಇಲ್ಲಿಯ ಸ್ಥಲಗಳು **ಸಂಕೀರ್ಣ** ಅಂದರೆ ಸ್ಥಾನಪಲ್ಲಟಗೊಂಡ ಇಲ್ಲವೆ ಅವ್ಯವಸ್ಥಿತವಾಗಿ ಬಂದ ಸ್ಥಲ ಗಳಾಗಿರುವದಿಲ್ಲ.

ಹಾಗಾದರೆ ಈ ರೀತಿ ವಿಚಾರ ಮಾಡಲಿಕ್ಕೆ ಹಚ್ಚಿದ ಕಾರಣವಾದರೂ ಏನು? ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಈ ಪ್ರಶ್ನೆಗೆ 'ಷಟ್‌ಸ್ಥಲಮಾರ್ಗ'ವೇ ಉತ್ತರ ವನ್ನು ಒದಗಿಸುತ್ತದೆ. 'ಲಿಂಗಲೀಲಾವಿಲಾಸ ಚಾರಿತ್ರ'ದಲ್ಲಿ ಹೇಳಲಾದ ಅಂಗಸ್ಥಲ, ಲಿಂಗಸ್ಥಲ, ಸಂಸಾರ ಹೇಯಸ್ಥಲ, ಗುರುಕಾರುಣ್ಯಸ್ಥಲಾದಿಗಳು ಭಕ್ತಸ್ಥಲ ಉಪಾಂಗಸ್ಥಲ ಗಳೆಂದು 'ಏಕೋತ್ತರ ಶತಸ್ಥಲಾದಿ'ಗಳಲ್ಲಿ ಇರುವವು. 'ಲಿಂಗಲೀಲಾವಿಲಾಸ ಚಾರಿತ್ರ' ಗ್ರಂಥದಲ್ಲಿ ಭಕ್ತಸ್ಥಲದ ಉಪಾಂಗಸ್ಥಲಗಳಾಗಿಲ್ಲ ಅವು. ಈ ಪಾರಂಪರಿಕ ರೀತಿಯನ್ನು 'ಲಿಂಗಲೀಲಾವಿಲಾಸ ಚಾರಿತ್ರ' ಗ್ರಂಥವು ಅನುಸರಿಸಿಲ್ಲ. ಈ ಕಾರಣಕ್ಕಾಗಿ ಇವು ತೋರಿಕೆಗೆ **ಸಂಕೀರ್ಣ**ವಾಗಿರುವಂತೆ ಕಂಡುಬರುವುದುಂಟು. ಆದರೆ ತಾತ್ತ್ವಿಕ ವಿಕಾಸ ಪರಿಕ್ರಮ ಕ್ಕನುಸರಿಸಿ ಆಯಾ ಸ್ಥಲಗಳು ಕ್ರಮವಾಗಿಯೇ ಇರುವುದರಿಂದ ಅವು **'ಸಂಕೀರ್ಣಸ್ಥಲ'** ಗಳಾಗಲಾರವು. 'ಸಂಕೀರ್ಣಸ್ಥಲ' ಎಂಬ ಪದವು ಅಲ್ಲಿಯ ಸ್ಥಲಗಳು ಪ್ರಥಮ ತೋರಿಕೆ, ಪಾರಂಪರಿಕ ರೀತಿಯಲ್ಲಿ ಇಲ್ಲದಿರುವಿಕೆಗಳಿಂದ 'ಲಿಂಗಲೀಲಾವಿಲಾಸ ಚಾರಿತ್ರ' ಗ್ರಂಥವು **ಸಂಕೀರ್ಣ**ಸ್ಥಲಗಳ ಕೃತಿ ಎಂದು ಹೆಸರಿಸಲಿಕ್ಕೆ ಕಾರಣ. ಆದರೆ ಇದು 'ಸವ್ಯಸ್ಥಲೀಕರಣ' ಎಂದು ಹೇಳಿ 'ನವಸ್ಥಲೀಕರಣ'ವು ಈ ಕೃತಿಯಿಂದ ಪ್ರಾರಂಭವಾಯಿತೆಂದು ಹೇಳಬಹುದು.

**ಪರಿಸಮಾಪ್ತಿ :**

'ಸ್ಥಲಕಟ್ಟು' ಪದವು ತಾಳೆಗರಿಯ ಹಸ್ತಪ್ರತಿ ಭಂಡಾರದ ಕೊಡುಗೆಯಾಗಿ ಸ್ಥಲ ಸಾಹಿತ್ಯದ ಪೆಂಡಿ ಎಂಬ ಅರ್ಥವನ್ನು ಕೊಟ್ಟರೆ, ಶಾಸ್ತ್ರಸಾಹಿತ್ಯದಲ್ಲಿ ಅದು ಸ್ಥಲಬಂಧ (ವ್ಯವಸ್ಥೆ) ಅಥವಾ ಷಟ್‌ಸ್ಥಲಬಂಧ (ವ್ಯವಸ್ಥೆ) ಮತ್ತು ಸ್ಥಲಸೂತ್ರ [ಬ್ರಹ್ಮಸೂತ್ರ ಎಂಬಂತೆ] ಎಂಬರ್ಥ ಕೊಡುವ ಪದವಾಗಿದೆ. ಆಸ್ತಿಕ ಸಾಹಿತ್ಯದಲ್ಲಿ ಬ್ರಹ್ಮಪದ ಹಸಿಗೆಯ ಪರಿಣಾಮದಿಂದ ವಿವಿಧಶಾಸ್ತ್ರ ಸಾಹಿತ್ಯ ಪ್ರಕಾರಗಳಾಗಿರುವಂತೆ, ಸ್ಥಲ (ಬ್ರಹ್ಮ) ಕುರಿತು ಮಾಡಿದ ಹಸಿಗೆಯಿಂದ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಸ್ಥಲಕಟ್ಟು ಸಾಹಿತ್ಯ ಪ್ರಕಾರ ಗಳಾಗಿವೆ. ಈ ವೈವಿಧ್ಯಮಯವಾದ ಬೆಳವಣಿಗೆಗೆ ತತ್ತ್ವ, ಧರ್ಮ, ಆಚಾರ, ಆಶ್ರಮ, ಅನುಭಾವಾದಿಗಳೇ ಕಾರಣ. ಇದರಿಂದ ಭಾರತೀಯ ಶಾಸ್ತ್ರ ಸಾಹಿತ್ಯ ಭಂಡಾರ ಸಮೃದ್ಧ

ಬೆಳವಣಿಗೆಯಾಗಿದೆ. ಶಬ್ದಾದ್ವೈತ, ಬ್ರಹ್ಮಾದ್ವೈತ ಸಮನ್ವಯ ವಿಚಾರ ಪ್ರವಾಹದ ಶಾಸ್ತ್ರಸಾಹಿತ್ಯವಾಗಿದೆ ಸ್ಥಲಕಟ್ಟು ಸಾಹಿತ್ಯ. ಶಬ್ದತತ್ತ್ವವಿಕಾಸವನ್ನು, ಬ್ರಹ್ಮತತ್ತ್ವ ವಿಕಾಸವನ್ನು ಸ್ಥಲಕಟ್ಟು ಸಾಹಿತ್ಯದಲ್ಲಿ ನೋಡುತ್ತೇವೆ. ಸ್ಥಲಕಟ್ಟು ಸಾಹಿತ್ಯ ಚರಿತ್ರೆಯಲ್ಲಿ ಪ್ರಾಚೀನ (ಪಾರಂಪರಿಕವಾದ) ಸ್ಥಲಕಟ್ಟು ಸಾಹಿತ್ಯ ಮತ್ತು ನವ್ಯಸ್ಥಲಕಟ್ಟು ಸಾಹಿತ್ಯ ಎಂಬ ಎರಡು ಹಂತುಗಳನ್ನು ನೋಡುತ್ತೇವೆ.

ಸ್ಥಲಕಟ್ಟು ಸಾಹಿತ್ಯ

ಪಾರಂಪರಿಕ ಸ್ಥಲಕಟ್ಟು ಸಾಹಿತ್ಯ | ನವ್ಯಸ್ಥಲಕಟ್ಟು ಸಾಹಿತ್ಯ

ಶೂನ್ಯಸಂಪಾದನೆಯಂಥ ಕೃತಿಗಳು ಕೂಡ ಷಟ್‌ಸ್ಥಲ ಸಾಹಿತ್ಯವನ್ನು ಕುರಿತು ಗೈದ ತಾತ್ತ್ವಿಕ ಚರ್ಚೆಗಳ ಇಲ್ಲವೆ ಪ್ರಸಂಗಗಳ ಕೃತಿಗಳಾಗಿರುವುದರಿಂದ ಅವು ಕೂಡ ಸ್ಥಲಶಾಸ್ತ್ರ ಸಾಹಿತ್ಯದ ಒಂದು ಪ್ರಕಾರವೇ ಆಗಿದೆ. ಸ್ಥಲಕಟ್ಟು ಸಾಹಿತ್ಯದ ವಿಕಾಸವು ಶಾಸ್ತ್ರದ ವೈವಿಧ್ಯಮಯವಾದ ಅವಶ್ಯಕತೆಗನುಸರಿಸಿ ಆಗಿರುವುದನ್ನು ಇಲ್ಲಿ ಗುರುತಿಸಲಾಗಿದೆ.

# ಏಕೋತ್ತರ ಶತಸ್ಥಲ

## (ದರ್ಶನ ಸಮೀಕ್ಷೆ ಮತ್ತು ಪ್ರತಿಯೊಂದು ಸ್ಥಲದ ಗುಣ ಲಕ್ಷಣಗಳ ನಿರೂಪಣೆ)

---

—ಡಾ|| ಎನ್. ವ್ಹಿ. ಕೊಪ್ಪಳ

ವಿಶಿಷ್ಟಾದ್ವೈತ, ಶಿವಾದ್ವೈತ, ಶಕ್ತಿವಿಶಿಷ್ಟಾದ್ವೈತ ಎಂಬ ಪರ್ಯಾಯ ನಾಮಗಳಿಂದ ವೀರಶೈವ ಸಿದ್ಧಾಂತವು ಸುಪ್ರಸಿದ್ಧವಾಗಿದೆ. 'ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರಿ!' ಎಂಬ ಪ್ರಶಸ್ತಿಯನ್ನು ೧೨ ನೆಯ ಶತಮಾನದ ಶಿವಶರಣರ ಕಾಲವು ಸಾರ್ಥಕಗೊಳಿಸಿದೆ. ಜೀವನು ಶಿವಪ್ರಾಪ್ತಿಗೆ ಕಾರಣವಾದ ಧರ್ಮ ಕಾರ್ಯವನ್ನಾಚರಿಸಿ ೩೬ ತತ್ತ್ವಯುತವಾದ ಹಾಗೂ ಸ್ಥಲ ಸಿದ್ಧಾಂತದಿಂದ ಬೆರೆತ ಶಿವಾದ್ವೈತ ಜ್ಞಾನವನ್ನು ಪಡೆಯಬೇಕು, ಅಂದರೆ ಆ ಜ್ಞಾನದಿಂದ ಪುನರಾವೃತ್ತಿ ರಹಿತವಾದ ಶಿವೈಕ್ಯವು ಪ್ರಾಪ್ತವಾಗುತ್ತದೆ ಎಂಬುದು ವೀರಶೈವ ಸಿದ್ಧಾಂತದ ಮುಕ್ತಿ. ಕ್ರಿಯಾ-ಜ್ಞಾನಗಳ ಮಹತ್ವವನ್ನರಿತ ವೀರಶೈವರಿಗೆ ಇಷ್ಟಲಿಂಗಾರ್ಚನೆಯೆ ಕ್ರಿಯಾಂಗ, ಅಂತರ್ಲಿಂಗಾರ್ಚನೆಯೆ ಜ್ಞಾನಾಂಗ. ಈ ದ್ವಿವಿಧ ಅರ್ಚನೆಗಳಿಗೆ ಆಧಾರವಾಗಿ ಅಷ್ಟಾವರಣ-ಪಂಚಾಚಾರ-ಷಟ್‌ಸ್ಥಲ ಸಿದ್ಧಾಂತಗಳು ಬೋಧಿತವಾಗಿವೆ.೧

**ಷಟ್‌ಸ್ಥಲ ಸಿದ್ಧಾಂತದ ನಿರೂಪಣೆಯು** ವಾತುಲ-ವೀರ-ಚಂದ್ರಜ್ಞಾನ-ಮತಂಗ-ಪಾರಮೇಶ್ವರ- ಮುಂತಾದ ಆಗಮಗಳಲ್ಲಿ ಹಾಗೂ ವೀರಶೈವ ತತ್ತ್ವಾಂಗಗಳಾದ ಇಷ್ಟಲಿಂಗ-ಪ್ರಾಣಲಿಂಗ-ಭಾವ ಲಿಂಗಾದಿಗಳ ಉಲ್ಲೇಖಗಳು ಕಾಮಿಕ-ಯೋಗಜ ಕಿರಣ ಮುಂತಾದ ಆಗಮಗಳಲ್ಲಿ ಕಾಣಿಸಿಕೊಂಡಿವೆ. ಸ್ಕಂದ ಪುರಾಣ-ಲಿಂಗ ಪುರಾಣಾದಿ ಶಿವ ಪುರಾಣಗಳಲ್ಲಿ ವೀರಶೈವ ಸಿದ್ಧಾಂತವು ಅಡಕವಾಗಿದೆ. ಷಟ್‌ಸ್ಥಲಕ್ಕೆ ಅಧಿಕಾರಿ ಯಾರು? ಎಂಬ ಪ್ರಶ್ನೆಗೆ ಉತ್ತರವಾಗಿ, ಪಾರಮೇಶ್ವರಾಗಮದಲ್ಲಿ—

ಶಿವಭಕ್ತಿವಿಹೀನಾಯ ದುರಾಚಾರರತಾಯ ಚ ।
ನಾಸ್ತಿಕಾಯ ನ ದುಷ್ಟಾಯ ಮಕ್ತವ್ಯಃ ಷಟ್‌ಸ್ಥಲ ಕ್ರಮಃ ||೨

---

೧ ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' ಪರಿಚ್ಛೇದ ೫, ಪುಟ ೩೨. ತಾಂತ್ರಿಕ ಹಾಗೂ ವೈದಿಕ ಧರ್ಮಗಳನ್ನು ಅವಲಂಬಿಸಿರುವ ಕಾರಣ ವೀರಶೈವವು ತಾಂತ್ರಿಕ ವೈದಿಕ ಮತವೆಂದೇ ಸಿದ್ಧಾಂತ ಶಿಖಾಮಣಿಯ ಅಭಿಪ್ರಾಯ.

೨ ಪಾರಮೇಶ್ವರ ತಂತ್ರ ಪಟಲ ೬-೪

ಶಿವಭಕ್ತಿ ಹೀನರಿಗೆ ಷಟ್‌ಸ್ಥಲ ರಹಸ್ಯ ಕ್ರಮವನ್ನು ಅರುಹಬಾರದೆಂದು ಬೋಧಿಸಿದೆ. 'ಷಟ್‌ಸ್ಥಲ' ಪದದಲ್ಲಿ ಕಾಣಿಸಿಕೊಳ್ಳುವ ಸ್ಥಲಪದದ ನಿರ್ವಚನ, ಅದರ ಷಡ್‌ವಿಧ ರೂಪಗಳ ಲಕ್ಷಣ ಹಾಗೂ ವಿವರಣೆಗಳು ಆಗಮಗಳಲ್ಲಿದ್ದುದು ಗಮನಾರ್ಹ.

ಅಹಮೇವ ಜಗತ್‌ಸ್ರಷ್ಟಾ ಪುನರ್ಮಯ್ಯೇವ ಲೀಯತೆ ।[೩]
ಅಹಮೇವ ಸ್ಥಲಂ ವಿದ್ಧಿ ಷಡ್ವಿಧಂ ಮಮರೂಪಕಂ ॥
ಸರ್ವಜ್ಞತಾ ತೃಪ್ತಿರನಾದಿ ಬೋಧಃ[೪]
ಸ್ವತಂತ್ರತಾ ನಿತ್ಯಮಲುಪ್ತ ಶಕ್ತಿಃ ।
ಅನಂತ ಶಕ್ತಿಶ್ಚ ವಿಭೋರ್ವಿಧಿಜ್ಞಾ
ಷಡಾಹುರಂಗಾನ್ಯಥ ಷಟ್‌ಸ್ಥಲಾನಿ ॥

ಷಟ್‌ಸ್ಥಲದ ಸಾಧನ–ಸಾಧ್ಯಗಳು—

ಭಕ್ತಾದಿ ಸಮ್ಯಗ್‌ಜ್ಞಾನಾಂತ ಮುತ್ತರೋತ್ತರ ಮುತ್ತಮಂ ।
ಸಾಧನಂ ಪೂರ್ವ ಪೂರ್ವಂ ಸ್ಯಾತ್ ಸಾಧ್ಯಂ ಸ್ಯಾದುತ್ತರೋತ್ತರಮ್ ॥[೫]

ಆದರೆ ಶೈವಾಗಮಗಳು ವೀರಶೈವ ಪ್ರಭೇದವನ್ನು ಮಾತ್ರ ಎತ್ತಿ ಹಿಡಿಯದೆ, ಅನಾದಿ ಶೈವ–ಆದಿಶೈವ–ಮಹಾಶೈವ–ಅನುಶೈವ–ಯೋಗಶೈವ (or ಅವಾಂತರ ಶೈವ) ಪ್ರವರ ಶೈವ, ವೀರಶೈವ–ಎಂಬ ಸಪ್ತವಿಧ ಶೈವಗಳಲ್ಲಿ ಕೊನೆಯದನ್ನಾಗಿ ಉಲ್ಲೇಖಿಸುತ್ತವೆ.[೬] ಕ್ರಿ. ಶ. ೧೪೭೦ ರಲ್ಲಿ ಅವತರಿಸಿದ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಸಪ್ತವಿಧ ಶೈವ ಪ್ರಭೇದಗಳಲ್ಲಿ ಅನಾದಿ ಶೈವವನ್ನು ಹೇಳದೆ ಅಲ್ಲಿ ವೀರಶೈವವನ್ನು ಸ್ಪಷ್ಟವಾಗಿ ನಿರ್ದೇಶಿಸಿದ್ದಾರೆ. ಅವರು ವೀರಶೈವದ ಮೂರು ಆಂತರಿಕ ಪ್ರಕಾರಗಳನ್ನು ಹೇಳಿರುವುದು ನಿಶ್ಚಿತ.[೭] ಅಂತೂ ವೀರಶೈವವು ಶೈವಪ್ರಭೇದ ಪರಂಪರೆಗಳಲ್ಲಿ ಅತ್ಯಂತ ಶ್ರೇಷ್ಠ ಪ್ರಕಾರ

೩ ಪಾರಮೇಶ್ವರ ತಂತ್ರ ಪಟಲ ೬–೫. ೯–೩೦
೪ " " ೬–೩೩
೫ " " ೬–೭೩
೬ ಸೂಕ್ಷ್ಮಾಗಮ ಪಟಲ ೭ (೮–೧೬)
೭ 'ಷಟ್‌ಸ್ಥಲ ಜ್ಞಾನ ಸಾರಾಮೃತ'–ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಗಳು. "....ಯೋಗಿಯಲ್ಲ; ....ಶರಣನಾಚರಣೆ ಬೇರೆ. ಆದಿ ಶೈವ, ಮಹಾ ಶೈವ, ಅನು ಶೈವ, ಅಂತರ ಶೈವ, ಅಂತ್ಯ ಶೈವ, ಪ್ರವರ ಶೈವವೆಂಬ ಈ ಆರು ಶೈವದ ನೀತಿಯಲ್ಲ; ಇಂತಿವೆಲ್ಲವೂ ಉತ್ಪತ್ತಿ–ಸ್ಥಿತಿ–ಲಯಂಗಳಿಗೆ ಕರ್ತ. ಶುದ್ಧ–ವಿಶೇಷ–ನಿರ್ವಾಣವೆಂದು ವೀರಶೈವ ಮೂಱು ತೆರನಾಗಿರ್ಪುದು, ಆ ಮೂರು ತಾನೆ ಆಱು ತೆಱನಾಗಿ ತೋಱುತ್ತದೆಂತೆಂದೊಡೆ ಭಕ್ತ–ಮಹೇಶ್ವರ–ಪ್ರಸಾದಿ–ಪ್ರಾಣಲಿಂಗಿ–ಶರಣ–ಐಕ್ಯ ಎಂದು. ಇಂತೀ ಆಱು ಪ್ರಕಾರದಲ್ಲಿ→

ವೆಂದು ಅರಿಯಬಹುದು. ಮುಂದೆ ಬಸವಾದಿ ಪ್ರಮಥರ ದಿವ್ಯಾನುಭವದಿಂದುದಿಸಿದ ಷಟ್‌ಸ್ಥಲ ತತ್ತ್ವ ಪ್ರತಿಪಾದನೆಯಿಂದ ದರ್ಶನ ಸ್ವರೂಪವನ್ನು ತಳೆಯಿತು. ಈ ಷಟ್‌ಸ್ಥಲ ಸಿದ್ಧಾಂತವು ತತ್ತ್ವಬದ್ಧವಾಗಿದೆ; ಲಿಂಗೋಪಾಸನೆಗೆ ಯುಕ್ತಿಯುಕ್ತವಾಗಿ ಸಂಶೋಧನೆ ಮಾಡಿದ ಸಾಧನಾ ಮಾರ್ಗವಾಗಿ ನಿಂತಿದೆ; ಮೋಕ್ಷ ಕಲ್ಪನೆ ಇಲ್ಲಿ ವಿಶಿಷ್ಟ ವಾಗಿದೆ. ಆತ್ಮನು ತನ್ನ ಆವಾಸ ಸ್ಥಾನವಾದ ಶರೀರವನ್ನು ಪ್ರಸಾದಕಾಯವನ್ನಾಗಿ ಮಾರ್ಪಡಿಸಿಕೊಂಡು ಪರಮಾರ್ಥದತ್ತ ಕ್ರಮಿಸುತ್ತಾನೆ; ತಾನೆ ಪರವಸ್ತುವಾಗುವ ಗುರಿ ಯನ್ನೂ ಮುಟ್ಟುತ್ತಾನೆ.

**ಸ್ಥಲ ವಿವೇಚನೆ:**

ವೀರಶೈವ ಪರಿಭಾಷೆಯಲ್ಲಿ 'ಸ್ಥಲ' ಎಂಬ ಪದಕ್ಕೆ ವಿಶಿಷ್ಟವಾದ ಅರ್ಥವುಂಟು. ಸ್ಥಾನ, ಮೆಟ್ಟಿಲು ಎಂಬುದ ಅದರ ರೂಢವಾದ ಅರ್ಥ. ಸಾಧಕನು ಗುರಿ ಮುಟ್ಟುವಲ್ಲಿ ಕ್ರಮಿಸಬೇಕಾದ ಮೆಟ್ಟಿಲುಗಳೆಂದೂ 'ಸ್ಥಲಕ್ಕೆ' ಇನ್ನೊಂದು ಅರ್ಥ. ಅಲ್ಲದೆ, ಚೇತನಾ ಚೇತನ ಪ್ರಪಂಚವು ಯಾವ ತತ್ತ್ವದಲ್ಲಿ ಉತ್ಪತ್ತಿಗೊಂಡು ಸ್ಥಿತಿಯಲ್ಲಿದ್ದು; ಅಂತ್ಯದಲ್ಲಿ ಲಯವನ್ನು ಹೊಂದುತ್ತದೆಯೊ ಅದೆ ಸ್ಥಲ. ಸ್ಥ ವರ್ಣವು ಸ್ಥಾನ ವಾಚಕವೂ, ಲ ವರ್ಣವು ಲಯ ವಾಚಕವೂ ಆಗಿದ್ದು, ಸೃಷ್ಟಿಯ ಸ್ಥಿತಿ–ಲಯಗಳಿಗೆ ಯಾವುದು 'ಅಭಿನ್ನ ನಿಮಿತ್ತೋಪಾದಾನ ಕಾರಣವೂ' ಆ ಪರಶಿವ ತತ್ವವೆ ಸ್ಥಲ. ಸಚರಾಚರ ಜಗತ್ತಿಗೆ ಅದು ಆಶ್ರಯಭೂತ.

ಯತ್ರಾದೌ ಸ್ಥೀಯತೇ ವಿಶ್ವಂ ಪ್ರಾಕೃತಂ ಪೌರುಷಂ ಯತಃ ।
ಲೀಯತೇ ಪುನರಂತೇ ಚ ಸ್ಥಲಂ ತತ್ಪ್ರೋಚ್ಯತೇ ತತಃ ॥
ಸಕಾರಃ ಸ್ಥಾನವಾಚೀ ಸ್ಯಾಲ್ಲಕಾರೋ ಲಯವಾಚಕಃ ।
ತಯೋಃ ಕಾರಣಭೂತಂ ಯತ್ತದೇವ ಸ್ಥಲ ಮುಚ್ಯತೇ ॥
ಅಧಿಷ್ಠಾನಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ ।
ಜಗತೋ ಯದ್ಭವೇತ್ತತ್ತ್ವಂ ತದ್ಧಿ ವೈ ಸ್ಥಲಮುಚ್ಯತೇ ॥೮

ಒಟ್ಟಿನಲ್ಲಿ ಸಚ್ಚಿದಾನಂದ ನಿತ್ಯ ಪರಿಪೂರ್ಣವಾದ, ಏಕಮೇವಾದ್ವಿತೀಯವಾದ, ಮಹದಾದಿ

---

→ವರ್ತಿಸುತ್ತಿಹುದು ವೀರಶೈವ ಮಹಾಲಿಂಗ ಶಿವ ಸಿದ್ಧೇಶ್ವರ ಪ್ರಭುವೆ; ಶಿವಯೋಗಿ ಶಿವಾಚಾರ್ಯ–'ಸಿದ್ಧಾಂತ ಶಿಖಾಮಣಿ' ಪರಿಚ್ಛೇದ ೧–೧೪. ಸಿದ್ಧಾಂತಾಖ್ಯೆ ಮಹಾತಂತ್ರ್ಯೇ ಕಾಮಿಕಾದ್ಯೇ ಶಿವೋದಿತೇ । ನಿರ್ದಿಷ್ಟ ಮುತ್ತರೇ ಭಾಗೇ ವೀರಶೈವ ಮತಂ ಪರಂ ॥

೮ ಮೊಗ್ಗೆಯ ಮಾಯಿದೇವ ಕೃತಿ–'ಶಿವಾನುಭವ ಸೂತ್ರ' II. ೪–೬ ವೈ. ನಾಗೇಶ ಶಾಸ್ತ್ರೀ–'ಶಕ್ತಿವಿಶಿಷ್ಟಾದ್ವೈತ' ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾ ಚರಂ । ತದ್ಬ್ರಹ್ಮ ಸ್ಥಲಮಿತ್ಯುಕ್ತಂ ಸ್ಥಲ ತತ್ತ್ವವಿಶಾರದೈಃ ॥

ತತ್ತ್ವಗಳಿಗೆ ಅತೀತವಾದ ಪರಶಿವತತ್ತ್ವವೆ ಸ್ಥಲ ಎಂಬುದು ವೀರಶೈವ ದರ್ಶನದ ಪರಿಭಾಷೆ. ಸ್ಥಲ ವಾಚಕವಾದ ಪರಶಿವ ತತ್ತ್ವವು ಶಕ್ತಿ ವಿಶಿಷ್ಟವಾದುದೂ ಅಹುದು. ಅಖಂಡಾದ್ವಯ-ನಿತ್ಯ ನಿರವಯ ಪರಿಪೂರ್ಣ-ಸಚ್ಚಿದಾನಂದ ಸ್ವರೂಪಾದ ನಿಃಕಲ ಪರಶಿವ ತತ್ತ್ವವು (= ಲಿಂಗವು) ಸ್ವಲೀಲಾ ವಿನೋದದ ನೆನವು ಮಾತ್ರದಿಂದ ಹಾಗೂ ತನ್ನ ಚಿತ್ಪ್ರಭಾ ಸಾಮರ್ಥ್ಯದ ಚಲನೆಯಿಂದ ಲಿಂಗಸ್ಥಲ, ಅಂಗಸ್ಥಲವೆಂದು ಇಬ್ಬಗೆಯಾಗುತ್ತದೆ.[೯] ಲಿಂಗಸ್ಥಲವೆ ಶಕ್ತಿ ಸಂಪನ್ನ ಶಿವನು ಹಾಗೂ ಉಪಾಸ್ಯ ದೇವತೆ. ಅಂಗಸ್ಥಲವೆ ನ್ಯೂನಶಕ್ತಿಸಂಪನ್ನ ಜೀವ ಹಾಗೂ ಉಪಾಸಕ. ಪರಶಿವ ತತ್ತ್ವವು ಎರಡು ಸ್ಥಲಗಳಾದಂತೆ, ಅವನಲ್ಲಿ ಅವಿನಾಭಾವದಿಂದಿರುವ ವಿಮರ್ಶಾ ಶಕ್ತಿಯೂ ಕಲಾಶಕ್ತಿ-ಭಕ್ತಿ ಶಕ್ತಿಯಾಗಿ ಪರಿಣಾಮಗೊಳ್ಳುತ್ತವೆ. ಪ್ರವೃತ್ತಿಪರವಾದ ಕಲಾಶಕ್ತಿಯು ಲಿಂಗವನ್ನಾಶ್ರಯಿಸುತ್ತದೆ; ನಿವೃತ್ತಿಪರವೆನ್ನಿಸಿದ ಭಕ್ತಿಯು ಅಂಗವನ್ನು ಅಂದರೆ ಮೋಕ್ಷಾಪೇಕ್ಷಿಯಾದ ಜೀವನನ್ನು ಶ್ರಯಿಸುತ್ತದೆ.

ಮೋಕ್ಷದ ಅಭಿಲಾಷೆಯುಳ್ಳ ಅಂಗನಿಗೋಸುಗ, ಏಕಮೇವಾದ್ವಿತೀಯವಾದ ನಿಷ್ಕಲ ಲಿಂಗವು ಅಂಗಸ್ಥಲ-ಲಿಂಗಸ್ಥಲವೆಂದು ದ್ವಿವಿಧ ರೂಪ ತಳೆಯುತ್ತದೆ. ಅಂಗಸ್ಥಲವು ತ್ಯಾಗಾಂಗ-ಭೋಗಾಂಗ-ಯೋಗಾಂಗವೆಂದೂ, ಲಿಂಗಸ್ಥಲವು ಇಷ್ಟ-ಪ್ರಾಣ-ಭಾವ ಲಿಂಗಗಳೆಂದು ವಿಭಾಗಗೊಂಡು, ಮತ್ತೆ ಅವುಗಳಲ್ಲಿ ಪ್ರತಿಯೊಂದೂ ಎರಡೆರಡಾಗಿ ಅಂದರೆ ಅಂಗ ಷಟ್ ಸ್ಥಲಗಳಾಗಿ (ಭಕ್ತ-ಮಹೇಶ್ವರ-ಪ್ರಸಾದಿ-ಪ್ರಾಣಲಿಂಗಿ-ಶರಣ-ಐಕ್ಯ ಸ್ಥಲಗಳೆಂದು) ಹಾಗೂ ಲಿಂಗ ಷಟ್‌ಸ್ಥಲಗಳಾಗಿ (ಆಚಾರ ಲಿಂಗ-ಗುರು ಲಿಂಗ-ಶಿವ ಲಿಂಗ-ಜಂಗಮ ಲಿಂಗ-ಪ್ರಸಾದ ಲಿಂಗ-ಮಹಾ ಲಿಂಗವೆಂದು) ತೋರಿಕೊಳ್ಳುತ್ತವೆ. ಲಿಂಗ ಷಟ್ ಸ್ಥಲಗಳಲ್ಲಿ ಕ್ರಮವಾಗಿ ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ, ಚಿತ್‌ಶಕ್ತಿಗಳ ಆವಿರ್ಭಾವವಿದ್ದು, ಮೋಕ್ಷಾಪೇಕ್ಷೆಯುಳ್ಳ ಶುದ್ಧ ಜೀವನು ಗುರು ಕಾರುಣ್ಯದಿಂದ ಲಿಂಗಾರಾಧನೆಯಲ್ಲಿ ತೊಡಗಿದಾಗ, ಅವನ ಅಂಗಷಟ್‌ಸ್ಥಲಗಳಲ್ಲಿರುವ ಷಟ್ ಭಕ್ತಿ ಶಕ್ತಿಗಳು ಅರ್ಥಾತ್ ಶ್ರದ್ಧಾ ಭಕ್ತಿ, ನೈಷ್ಠಿಕಾ ಭಕ್ತಿ, ಅವಧಾನ ಭಕ್ತಿ, ಆನಂದ ಭಕ್ತಿ, ಸಮರಸ ಭಕ್ತಿಗಳು ಕ್ರಮೇಣ ಜಾಗ್ರತವಾಗುತ್ತ ಊರ್ಧ್ವಗಮನ ಪ್ರವೃತ್ತಿವುಳ್ಳವಾಗಿ ಲಿಂಗಾಂಗ ಸಾಮರಸ್ಯವನ್ನು ಒದಗಿಸುತ್ತವೆ.

**ಸ್ಥಲ ವಿಭಾಗಗಳು:**

ತಾತ್ವಿಕ ಹಿನ್ನೆಲೆಯುಳ್ಳ ಷಟ್‌ಸ್ಥಲಗಳನ್ನು ಅನುಸಂಧಾನಕ್ಕೆ ಅನುಕೂಲವಾಗುವಂತೆ ಬಗೆಬಗೆಯ ಉಪವಿಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ. ಷಟ್‌ಸ್ಥಲಾನು ಭಾವಿಗಳ ಅನುಭವಕ್ಕೆ ಗೋಚರಿಸಿದಂತೆ ವೀರಶೈವ ಸಾಹಿತ್ಯದಲ್ಲಿ ವೈವಿಧ್ಯ ಪೂರ್ಣವಾದ ಸ್ಥಲ ವಿಭಾಗ ಕ್ರಮಗಳು ಗೋಚರಿಸುತ್ತವೆ. ೧೨ ನೆಯ ಶತಮಾನದಿಂದ ೧೪ ನೆಯ ಶತಮಾನದವರೆಗಿನ ಶಿವಶರಣರ ವಚನಗಳಲ್ಲಿ ೧, ೨, ೩, ೬, ೧೮, ೩೬, ೨೧೬ ಸ್ಥಲ ವಿಭಾಗ

---

೯ 'ಶಿವಾನುಭವ ಸೂತ್ರ' II. ೧೦

ಕ್ರಮಗಳ ಸಂಯೋಜನೆ ಇದ್ದು, ಈ ರೀತಿಯ ಸ್ಥಲವಿಕಾಸಕ್ಕೆ ಪ್ರವೃತ್ತಿಮಾರ್ಗವೆನ್ನಲಾಗುತ್ತದೆ; ಈ ವಿಭಾಗಗಳು ಕ್ರಮವಾಗಿ ಅಂತರ್ಧಾನವಾಗುತ್ತ ಐಕಸ್ಥಲವಾದಾಗ ಅದನ್ನು ಐಕಸ್ಥಲವೆಂದು ಕರೆಯಲಾಗುತ್ತದೆ.

ಆಗಮಗಳ ನಂತರದ ಕಾಲದಲ್ಲಿ ಖಿಲವಾಗಿದ್ದ ಷಟ್‌ಸ್ಥಲಸಿದ್ಧಾಂತವನ್ನು ಅರಿತು, ಆಚರಿಸಿ ಅಂಗಕ್ಕೆ ಅಳವಡಿಸಿಕೊಂಡವನು ೧೨ನೆಯ ಶತಮಾನದ ಚನ್ನಬಸವಣ್ಣ. ಷಟ್‌ಸ್ಥಲಬ್ರಹ್ಮಿ, ಷಟ್‌ಸ್ಥಲಧೀರ, ಷಟ್‌ಸ್ಥಲೋದ್ಧಾರಕ ಮುಂತಾದ ಬಿರುದುಗಳಿಂದ ಪ್ರಸಿದ್ಧನಾದ ಅವನ ವಚನಗಳಲ್ಲಿ ಷಟ್‌ಸ್ಥಲಸಿದ್ಧಾಂತದ ಮಹತ್ವವು ಪ್ರತಿಪಾದಿತವಾಗಿದೆ. ಲಿಂಗಸ್ಥಲಕ್ಕೆ ಸಂಬಂಧಪಟ್ಟ ಕ್ರಮವು ಚನ್ನಬಸವಣ್ಣನ ವಚನಗಳಲ್ಲಿ ಇದೆ. ಮೊದಲು ಭಕ್ತಸ್ಥಲದ ಆರಂಭದಲ್ಲಿ–ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕಾರುಣ್ಯಸ್ಥಲ, ತಾಮಸ ನಿರಸನಸ್ಥಲ, ಸ್ಥಲನಿರ್ದೇಶ (ಅರ್ಥಾತ್‌ಭಕ್ತಸ್ಥಲ ನಿರ್ದೇಶ) ಎಂಬ ೬ ಸ್ಥಲಗಳು ಬರುತ್ತವೆ; ನಂತರ ಆಚಾರಲಿಂಗಸ್ಥಲ ಮೊದಲ್ಗೊಂಡು ಮಹಾಲಿಂಗಸ್ಥಲ ಪರ್ಯಾಂತವಾದ ವಚನಗಳ ಪಂಚಿಕೆಯನ್ನು ಕಾಣುತ್ತೇವೆ.[೧೦] ಬಳಿಕ ಮಾಹೇಶ್ವರ ಸ್ಥಲದಿಂದ ಐಕ್ಯಸ್ಥಲದವರೆಗೆ ಷಟ್‌ಸ್ಥಲವನ್ನು ಮುಖ್ಯವಾಗಿಟ್ಟುಕೊಂಡು ಪ್ರತಿಯೊಂದು ಸ್ಥಲಗಳ ಪ್ರಾರಂಭದಲ್ಲಿ ತಾಮಸನಿರಸನಸ್ಥಲ, ಸ್ಥಲನಿರ್ದೇಶಗಳು ತೋರಿ, ಅನಂತರ ಲಿಂಗಾಚಾರ ಸ್ಥಲಾದಿ ಮಹಾಲಿಂಗಸ್ಥಲ–ಪರ್ಯಂತವಾದ ಸಂಬಂಧದ ವಚನಗಳ ಪಂಚಿಕೆಯನ್ನು ಕಾಣುತ್ತೇವೆ.[೧೧] ಇದು ಒಂದು ಬಗೆಯ ಷಟ್‌ಸ್ಥಲ ವಿಭಾಗಕ್ರಮ. ಸಾಧಕನು ಷಟ್‌ಸ್ಥಲ ಸಾಧನೆಯಲ್ಲಿದ್ದಾಗ ಪ್ರತಿಯೊಂದು ಸ್ಥಲದ ಅನುಭವದ ಆದಿಭಾಗದಲ್ಲಿ ತಾಮಸ ವುಂಟೆಂದೂ, ಅದು ನಿರಸನವಾದ ಬಳಿಕ ಆಯಾಸ್ಥಲಗಳ ಜ್ಞಾನವಾಗಿ ಷಡ್‌ವಿಧ ಲಿಂಗಸ್ಥಲಗಳ ಅನುಭವವು ಜಾಗೃತವಾಗುತ್ತದೆ ಎಂಬ ಅಭಿಪ್ರಾಯ ಓದುಗನಿಗೆ ಉಂಟಾಗುತ್ತದೆ. ಆದರೆ ಸಾಧಕರ ಅಂತರಂಗದ ಅನುಭಾವದ ಹಂತಗಳನ್ನು ಸೂಕ್ಷ್ಮವಾಗಿ ಗುರುತಿಸಿದ ಚನ್ನಬಸವಣ್ಣನು ಈ ರೀತಿಯ ಸ್ಥಲ ಕುಲಗಳನ್ನು ಗುರುತಿಸಿದ್ದಾನೆ ಎಂಬುದು ಸತ್ಯ. "ಬಸವಾದಿ ಪ್ರಮಥರ ಕಾಲದಲ್ಲಿ ಹದಿನೆಂಟು (೧೮) ವಿಭಾಗಗಳ ಕ್ರಮವೂ ಇದ್ದು, ಅದು ಸ್ಥೂಲ–ಸೂಕ್ಷ್ಮ–ಕಾರಣ ದೇಹಗಳ ಆಧಾರದ ಮೇಲೆ ನಿರ್ಧರಿಸಲಾಗಿದೆ; ಒಂದೊಂದು ಸ್ಥಲವು ತ್ರಿಭಾಗವುಳ್ಳದ್ದಾಗಿದೆ. ಹೀಗೆ ಅಂಗಸ್ಥಲದಲ್ಲಿ ೧೮ ಸ್ಥಲಗಳೂ, ಆಚಾರಾದಿ ಲಿಂಗತ್ರಯಗಳಲ್ಲಿ ೧೮ ಸ್ಥಲಗಳೂ ತೋರಿಕೊಂಡಿವೆ.

---

೧೦ ಚನ್ನಬಸವಣ್ಣನವರ ವಚನಗಳು (ಕ. ವಿ. ವಿ. ಧಾರವಾಡ ಪ್ರಕಟನೆ) ಪುಟ ೧–೧೫೪

೧೧ ಚನ್ನಬಸವಣ್ಣನವರ ವಚನಗಳು (ಕ. ವಿ. ವಿ. ಧಾರವಾಡ ಪ್ರಕಟನೆ) ಪುಟ ೧೫೫–೬೫೨.

ಅಲ್ಲದೆ, ೧೨ನೆಯ ಶತಮಾನದಲ್ಲಿ ಷಟ್‌ಸ್ಥಲ ಸಿದ್ಧಾಂತದ ಎರಡು ಘಟ್ಟಗಳು ಕಂಡು ಬರುತ್ತವೆ; ಒಂದನೆಯದು ಬಸವಣ್ಣನವರ ವಚನಗಳಲ್ಲಿ ವ್ಯಕ್ತವಾಗುವ ಕ್ರಮವಿಕಾಸ, ಅಲ್ಲಿ ಭಕ್ತಸ್ಥಲದಿಂದ ಐಕ್ಯಸ್ಥಲದ ವರೆಗಿನ ಹಂತಗಳನ್ನು ಒಂದೊಂದಾಗಿ ಏರುವ ಕ್ರಮವಿದೆ. ಉದಾಹರಣೆಗೆ ಬಸವಣ್ಣನ ವಚನವನ್ನು ನಿರೀಕ್ಷಿಸಬಹುದು.

"ಮೆಲ್ಲಮೆಲ್ಲನೆ ಭಕ್ತನೆನಿಸಿಕೊಂಬೆ; ಮೆಲ್ಲಮೆಲ್ಲನೆ ಮಹೇಶ್ವರನೆನಿಸಿಕೊಂಬೆ;
ಮೆಲ್ಲಮೆಲ್ಲನೆ ಪ್ರಸಾದಿಯೆನೆಸಿಕೊಂಬೆ; ಮೆಲ್ಲಮೆಲ್ಲನೆ ಪ್ರಾಣಲಿಂಗಿಯೆನಿಸಿಕೊಂಬೆ;
ಮೆಲ್ಲಮೆಲ್ಲನೆಶರಣನೆನಿಸಿಕೊಂಬೆ; ಮೆಲ್ಲಮೆಲ್ಲನೆ ಐಕ್ಯನೆನಿಸಿಕೊಂಬೆ.
ಮೆಲ್ಲಮೆಲ್ಲನೆ ಷಡುಸ್ಥಲವಮೀಱಿ ನಿರವಯಸ್ಥಲವನೈದುವೆ,
ಕೂಡಲಸಂಗಮದೇವಾ! ೧೨

ಇಲ್ಲಿ ಬಸವಣ್ಣನು ಕ್ರಮವಿಕಾಸದ ಬಗೆಗೆ ಹೇಳಿ, ಸ್ಥಲಗಳನ್ನು ಬೇರೆಮಾಡಿ ನುಡಿದರೂ, ಅವನು 'ಬೇಱಿಮಾಡಿ ನಡೆವ ಭಿನ್ನನಲ್ಲ,' ಅಂತರಂಗದಲ್ಲಿ ಅರಿವು ಪರಿಪೂರ್ಣವಿದ್ದು, ಬಹಿರಂಗದಲ್ಲಿ ದಾಸೋಹಸಂಪನ್ನನಾಗಿ, ಕಾಯಾ-ವಾಚಾ-ಮನಸಾ ಭಕ್ತಿಭಾವುಕನಾದವನು ಅವನು, ಕಾರಣ ಬಸವಣ್ಣನು ಭಕ್ತಸ್ಥಲದಲ್ಲಿಯೆ ನಿಂತು ಎಲ್ಲ ಸ್ಥಲಗಳ ಅರಿವನ್ನು ಮೂಡಿಸಿಕೊಂಡ ಮಹಂತನೆಂಬುದು ಸ್ಪಷ್ಟ. ಸಾಮಾನ್ಯ ದೃಷ್ಟಿಯಿಂದ ಓದುವವರಿಗೆ "ಮೆಲ್ಲಮೆಲ್ಲನೆ ಭಕ್ತ........" ಎಂಬ ವಚನವು ಭಕ್ತಸ್ಥಲದಿಂದ ಎಲ್ಲ ಸ್ಥಲಗಳಿಗೆ ಹಾರುತ್ತ ಹೋಗುವ ಅಂಶವನ್ನು ನಿರೂಪಿಸುವಂತಿದೆ ಹಾಗೂ ಯೋಗ ಸಾಧಕನು ಆಧಾರ-ಸ್ವಾಧಿಷ್ಠಾನ-ಮಣಿಪೂರಕ-ವಿಶುದ್ಧಿ-ಆಜ್ಞಾ-ಸಹಸ್ರಾರಚಕ್ರಗಳಿಗೇರುತ್ತ ಪಡೆಯಬಹುದಾದ ಅನುಭವದ ಸೂಚನೆಯನ್ನು ಮೇಲಿನ ವಚನವು ತಿಳಿಸುವಂತೆ ಭಾಸವಾಗುತ್ತದೆ. ಈ ಬಗೆಯ

---

೧೨ ಚನ್ನಬಸವಣ್ಣನವರ ವಚನಗಳು (ಕ.ವಿ.ವಿ. ಧಾರವಾಡ ಪ್ರಕಟನೆ ಪುಟ ೨೮ (ಅಡಿಟಿಪ್ಪಣಿ) ಬಸವರಾಜದೇವರ ಆಚರಣೆಯ ಸ್ಥಲದ ವಚನ.

ಕ್ರಮ ವಿಕಾಸದ ಒಳಮರ್ಮವನ್ನು ಅರಿತ ಚನ್ನಬಸವಣ್ಣನು. ಬಸವಣ್ಣನ ನಿಲವನ್ನು ಹೀಗೆ ಕೊಂಡಾಡಿದ್ದಾನೆ—

"ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂದು ಬೇಱಿಮಾಡಿ ನುಡಿದನು, ಬೇಱಿಮಾಡಿ ನಡೆವ ಭಿನ್ನನಲ್ಲ.
ಭಿನ್ನವಿಲ್ಲದ ಅಂತರಂಗದಲ್ಲಿ ಅರಿವು ಪರಿಪೂರ್ಣ ಬಸವಣ್ಣ.
ಬಹಿರಂಗದಲ್ಲಿ ದಾಸೋಹ ಸಂಪನ್ನ ಬಸವಣ್ಣ.
ಮನ-ವಚನ-ಕಾಯದಲ್ಲಿ ಸದ್ಭಕ್ತಿಸಂಪನ್ನ ಬಸವಣ್ಣ,
ಸರ್ವಾಂಗದಲ್ಲಿ ಸರ್ವಾಚಾರ ಬಸವಣ್ಣ."
—ಚನ್ನಬಸವಣ್ಣನವರ ವಚನ ೧೮೯೩ ಕ.ವಿ.ವಿ. ಧಾರವಾಡ.

ಸ್ಥಲ

| ಭಕ್ತಸ್ಥಲ | ಮಾಹೇಶ್ವರಸ್ಥಲ | ಪ್ರಸಾದಿಸ್ಥಲ | ಪ್ರಾಣಲಿಂಗಿಸ್ಥಲ | ಶರಣಸ್ಥಲ | ಐಕ್ಯಸ್ಥಲ |
|---|---|---|---|---|---|
| ೧) ಭಕ್ತನ ಭಕ್ತಸ್ಥಲ | ೧) ಮಾಹೇಶ್ವರನ ಭಕ್ತಸ್ಥಲ | ೧) ಪ್ರಸಾದಿಯ ಭಕ್ತಸ್ಥಲ | ೧) ಪ್ರಾಣಲಿಂಗಿಯ ಭಕ್ತಸ್ಥಲ | ೧) ಶರಣನ ಭಕ್ತಸ್ಥಲ | ೧) ಐಕ್ಯನ ಭಕ್ತಸ್ಥಲ |
| ೨) ಭಕ್ತನ ಮಹೇಶಸ್ಥಲ | ೨) ಮಾಹೇಶ್ವರಣ ಮಾಹೇಶ್ವರಸ್ಥಲ | ೨) ಪ್ರಸಾದಿಯ ಮಾಹೇಶ್ವರಸ್ಥಲ | ೨) ಪ್ರಾಣಲಿಂಗಿಯ ಮಾಹೇಶ್ವರಸ್ಥಲ | ೨) ಶರಣನ ಮಾಹೇಶ್ವರಸ್ಥಲ | ೨) ಐಕ್ಯನ ಮಾಹೇಶ್ವರಸ್ಥಲ |
| ೩) ಭಕ್ತನ ಪ್ರಸಾದಿಸ್ಥಲ | ೩) ಮಾಹೇಶ್ವರನ ಪ್ರಸಾದಿಸ್ಥಲ | ೩) ಪ್ರಸಾದಿಯ ಪ್ರಸಾದಿಸ್ಥಲ | ೩) ಪ್ರಾಣಲಿಂಗಿಯ ಪ್ರಸಾದಿಸ್ಥಲ | ೩) ಶರಣನ ಪ್ರಸಾದಿಸ್ಥಲ | ೩) ಐಕ್ಯನ ಪ್ರಸಾದಿಸ್ಥಲ |
| ೪) ಭಕ್ತನ ಪ್ರಾಣಲಿಂಗಿಸ್ಥಲ | ೪) ಮಾಹೇಶ್ವರನ ಪ್ರಾಣಲಿಂಗಿಸ್ಥಲ | ೪) ಪ್ರಸಾದಿಯ ಪ್ರಾಣಲಿಂಗಿಸ್ಥಲ | ೪) ಪ್ರಾಣಲಿಂಗಿಯ ಪ್ರಾಣಲಿಂಗಿಸ್ಥಲ | ೪) ಶರಣನ ಪ್ರಾಣಲಿಂಗಿಸ್ಥಲ | ೪) ಐಕ್ಯನ ಪ್ರಾಣಲಿಂಗಿಸ್ಥಲ |
| ೫) ಭಕ್ತನ ಶರಣಸ್ಥಲ | ೫) ಮಾಹೇಶ್ವರನ ಶರಣಸ್ಥಲ | ೫) ಪ್ರಸಾದಿಯ ಶರಣಸ್ಥಲ | ೫) ಪ್ರಾಣಲಿಂಗಿಯ ಶರಣಸ್ಥಲ | ೫) ಶರಣನ ಶರಣಸ್ಥಲ | ೫) ಐಕ್ಯನ ಶರಣಸ್ಥಲ |
| ೬) ಭಕ್ತನ ಐಕ್ಯಸ್ಥಲ | ೬) ಮಾಹೇಶ್ವರನ ಐಕ್ಯಸ್ಥಲ | ೬) ಪ್ರಸಾದಿಯ ಐಕ್ಯಸ್ಥಲ | ೬) ಪ್ರಾಣಲಿಂಗಿಯ ಐಕ್ಯಸ್ಥಲ | ೬) ಶರಣನ ಐಕ್ಯಸ್ಥಲ | ೬) ಐಕ್ಯನ ಐಕ್ಯಸ್ಥಲ |

ಭ್ರಾಂತಿ ನಿರಸನಕ್ಕಾಗಿ ಚನ್ನಬಸವಣ್ಣನು ೩೬ ಸ್ಥಲಗಳುಳ್ಳ 'ಸಮವಿಕಾಸ'ದ ಷಟ್‌ಸ್ಥಲವನ್ನು ಪ್ರತಿಷ್ಠಾಪಿಸಿದ್ದಾನೆ—

ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಹೇಶ್ವರ,
ಮೆಲ್ಲಮೆಲ್ಲನೆ ಪ್ರಸಾದಿ, ಮೆಲ್ಲಮೆಲ್ಲನೆ ಪ್ರಾಣಲಿಂಗಿ,
ಮೆಲ್ಲಮೆಲ್ಲನೆ ಶರಣ, ಮೆಲ್ಲಮೆಲ್ಲನೆ ಐಕ್ಯರಾದೆಹೆವೆಂಬರು ನಿಮ್ಮ ಶರಣರು!
ತಾವೇನು ಮರುಜವಣಿಯು ಕೊಂಡರೆ? ಅಮೃತ ಸೇವನೆಯ ಮಾಡಿದರೆ?
ಆವ ಸ್ಥಲದಲ್ಲಿ ನಿಂದಡೆಯು ಆ ಸ್ಥಲದಲ್ಲಿ ಷಡುಸ್ಥಲವಡಗದಿರ್ದಡೆ
ಆ ಭಕ್ತಿಯ ಬಾಯಲ್ಲಿ ಹುಡಿಯ ಹೊಯ್ಯನೆ
ಕೂಡಲಸಂಗಮದೇವ?

"ಅದು ಕಾರಣವಾಗಿ, ಆವಸ್ಥಲವನುಗೊಂಡಿದ್ದಡೆಯೂ ಆ ಸ್ಥಲಕ್ಕೆ ತಕ್ಕ ರೂಪಾಗಿ ಷಡ್ವಿಧಲಿಂಗವ ಬೆರಸಿಪ್ಪ ಭೇದವನು ಆ ಚನ್ನಬಸವರಾಜದೇವರ ಅನುಭಾವದ ಸ್ಥಲದ ವಚನದಲ್ಲಿಯೆ ಸ್ಥಲವಿಟ್ಟು ತೋಱುವೆನು."೧೩

ವಿವಿಧ ಪ್ರವೃತ್ತಿಯುಳ್ಳ ಸಾಧಕರು ತಮ್ಮ ಮಾನಸಿಕ ಅವಸ್ಥೆಗಳನ್ನು ಭಕ್ತಿ–ನಿಷ್ಠೆ-ಅವಧಾನ–ಅನುಭಾವ–ಆನಂದ–ಸಮರಸಗಳ ರೂಪದಲ್ಲಿ ಪರಿಶುದ್ಧಗೊಳಿಸಿಕೊಂಡ-ಸದಾಚಾರ–ಸತ್ಕ್ರಿಯೆಗಳಿಂದ ತಮ್ಮ ಪ್ರವೃತ್ತಿಗನುಸರಿಸಿದ ಸ್ಥಲದಲ್ಲಿಯೆ ನಿಂದು, ಸಹಜವಾಗಿ ಐಕ್ಯಸ್ಥಿತಿಯನ್ನು ತಲುಪಿ ಲಿಂಗಾಂಗ ಸಾಮರಸ್ಯವನ್ನು ಪಡೆಯಬಲ್ಲರು–ಎಂಬುದು ಚನ್ನಬಸವಣ್ಣನ ಅಭಿಮತ. ಹೀಗೆ ಷಟ್‌ಸ್ಥಲವನ್ನು ತಾತ್ವಿಕ ದೃಷ್ಟಿಯಿಂದ ಅವಲೋಕಿಸಿ ಅನುಭಾವ ಮಾರ್ಗವನ್ನು ಕಂಡುಕೊಂಡಲ್ಲಿ, ಷಟ್‌ಸ್ಥಲ–ಸಿದ್ಧಾಂತದ ಒಂದೊಂದು ಸ್ಥಲದಲ್ಲಿ ಆರಾರು ಸ್ಥಲಗಳಾಗಿ, ಒಟ್ಟು ೩೬ ಸ್ಥಲಗಳು ಗೋಚರಿಸುತ್ತವೆ.೧೪

ಈ ವಿಭಾಗ ಕ್ರಮವಲ್ಲದೆ ಇನ್ನೂ ಸೂಕ್ಷ್ಮವಾದ ವಿಭಾಗದ ಕಲ್ಪನೆಯಿಂದ ೨೧೬ ಸ್ಥಲಗಳನ್ನು ಶಿವಶರಣರು ಕಂಡುಕೊಂಡಿದ್ದಾರೆ. ಅವರ ಆಂತರಿಕ ಜಿಜ್ಞಾಸೆಯ ಫಲವಾಗಿ ೨೧೬ ಸಕೀಲಗಳ ನಿರ್ಣಯ ನಮಗೆ ಲಭ್ಯವಾಗಿದೆ.೧೫

ಅಲ್ಲದೆ ಷಟ್‌ಸ್ಥಲಗಳ ಅಂಗಸ್ಥಲಗಳು ೪೪, ಲಿಂಗಸ್ಥಲಗಳು ೫೭, ಒಟ್ಟು ೧೦೧ ಸ್ಥಲಗಳಾಗಿ ವಿಭಾಗಗೊಂಡ ವಿಧಾನವೂ ಕಂಡುಬರುತ್ತದೆ. ಈ ಸ್ಥಲಗಳ ಸಂಯೋಜ

---

೧೩ ಚನ್ನಬಸವಣ್ಣನವರ ವಚನಗಳು (ಕ.ವಿ.ವಿ. ಧಾರವಾಡ ಪ್ರಕಟನೆ) ಪುಟ ೨೯೦ ಹಾಗೂ ಷಟ್‌ಸ್ಥಲಕಟ್ಟುಗಳ ಪ್ರತಿಗಳಲ್ಲಿ ಭಕ್ತಸ್ಥಲಕ್ಕೆ ಪೀಠಿಕೆಯಾಗಿ ಬರುವ ವಚನ ಮತ್ತು ವಿವರ,
"ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಗಳು"-ವ. ೨೧೫ ಪುಟ ೧೩೪.

೧೪ ಸ್ಥಲವಿಭಾಗದ ಸೂಕ್ಷ್ಮ ಕಲ್ಪನೆಯಿಂದ ಚನ್ನಬಸವಣ್ಣನ ಪ್ರತಿಸ್ಥಲದ ಮೊದಲು ತಾಮಸ ನಿರಸನಸ್ಥಲವನ್ನೂ, ನಂತರ ಸ್ಥಲನಿರ್ದೇಶವನ್ನೂ ಹೇಳಿದ್ದಾನೆ.

೧೫ 'ವೀರಶೈವ ತತ್ತ್ವಪ್ರಕಾಶ' ಪರಿಶಿಷ್ಟ ೧ ನೋಡು '೨೧೬ ಸಕೀಲಗಳ ನಿರ್ಣಯ'

ನೆಯು ಷಟ್‌ಸ್ಥಲದ ಭದ್ರವಾದ ಅಡಿಗಲ್ಲಿನ ಮೇಲೆ ಕಟ್ಟಿದ ಭವ್ಯ ಹಾಗೂ ವೈಭವ ಪೂರ್ಣ ದೇಗುಲವಾಗಿದೆ. ಶಿವಾನುಭಾವಿಗಳ ಅಂತರಂಗದ ಸುಪ್ರಕಾಶವನ್ನು ಬೆಳಗಬಲ್ಲ ಲಿಂಗಾಂಗ ಸಾಮರಸ್ಯದ ನೆಲೆವೀಡಾಗಿದೆ.

**ಏಕೋತ್ತರ ಶತಸ್ಥಲದ ಐತಿಹ್ಯ:**

ಮೊಗ್ಗೆಯ ಮಾಯಿದೇವನ ಉಪದೇಶದಂತೆ ಪರಾತ್ಪರ ಜ್ಞಾನವನ್ನು ಪಡೆಯಲು ವಿಹಂಗಮಾರ್ಗ, ಮರ್ಕಟಮಾರ್ಗ. ಪಿಪಿಲಿಕಾ ಮಾರ್ಗವೆಂಬ ಪಥಗಳುಂಟು. ಇವು ಕ್ರಮವಾಗಿ ಸಾಧನೆಯ ಶೀಘ್ರಗತಿ, ಮಧ್ಯಗತಿ ಹಾಗೂ ಮಂದಗತಿಗಳನ್ನು ಸೂಚಿಸುತ್ತವೆ.

ಆದೊಡವಧರಿಸುವುದು ನೀವು ಕೇಳಿದ ಜ್ಞಾನ
ಭೇದ ಮೂರಾಗಿಹುದು ಒಂದು ವೃಕ್ಷಾಗ್ರದೊಳ
ಗಾದ ಪಣ್ಣಿನ ರಸವ ಪಿಡಿವೆನೆಂದನುಗೈಯ್ವವಿಹಗ ಮರ್ಕಟ ಪಿಪಿಲಿಕಾ ।
ವೇದ್ಯವೆ ಶೀಘ್ರಗತಿ ಮಧ್ಯಗತಿ ಮಂದಗತಿ
ಯಾದವವರಂದದಿಂ ವಸ್ತುವನ್ನರಸುತಿಹ
ಸಾಧಕರಿಗೆ ತಾನೊಂದು ದೊರಕೊಂಬುದೆಂದವನ ಮತಿಗೆ ತಕ್ಕನು
ಗತಿಯೊಳು ॥

ಏಕನಿಷ್ಠಾಚಾರ ಮಾರ್ಗದೊಳು ನಿಜವೆರಸಿ
ಸ್ವೀಕರಿಸೆ ಶೀಘ್ರಗತಿ ವಿಹಗವೆಂದೆನಿಸುವಾ
ಲೋಕನಂಗೆಯ್ದುಮಲ ವೀರಶೈವಾಚಾರ ಷಟ್‌ಸ್ಥಲಂಗಳ ಪಥದೊಳು ।
ನೂಕಿ ನಡೆಯಲು ಮಧ್ಯಗತಿ ಮರ್ಕಟಾಂಗವದು
ಲೋಕದೊಳು ನೂರೊಂದು ಸ್ಥಲವನ್ನೈದಲು ಮುಂದ
ಜೋಕೆಗತಿ ಪಿಪಿಲಿಕನ ತೆರದೊಳ್ಳೈದುಪುದಾಗಿ ಜ್ಞಾನ ತ್ರಿಗತಿಯೆನಿಸಿತು ॥೧೬

ಭೃಂಗಿ ಮೊದಲಾದ ದೇವಲೋಕದ ಗಣಂಗಳು ವಿಹಂಗಮಾರ್ಗವಾದ ಉತ್ಕಾಟಶ್ರದ್ಧೆ-ಯಿಂದ, ವೀರಶೈವ ಅನುಭಾವಿಗಳು ಮರ್ಕಟಮಾರ್ಗವಾದ ಷಟ್‌ಸ್ಥಲಾನುಸಂಧಾನದಿಂದ ಹಾಗೂ ಇನ್ನುಳಿದ ಶರಣಸಂಕುಲವು ಪಿಪಿಲಿಕಾ ಮಾರ್ಗವಾದ 'ನೂರೊಂದು ಸ್ಥಲಾ ಚರಣೆ'ಯಿಂದ ಪರಾತ್ಪರ ತತ್ತ್ವಜ್ಞಾನವನ್ನು ಸಾಕ್ಷಾತ್ಕರಿಸಿಕೊಂಡರೆಂದು ಮಾಯಿದೇವನು ಸ್ಪಷ್ಟಪಡಿಸಿದ್ದಾನೆ.೧೭

ಪರಂಪರಾಗತ ತಿಳಿವಳಿಕೆಯಂತೆ ವೀರಶೈವದರ್ಶನದ ತತ್ತ್ವಗಳು ಕಾಮಿಕಾವಿ ಆಗಮಗಳ ಉತ್ತರಭಾಗದಲ್ಲಿ ಅಸ್ತಿತ್ವವನ್ನು ಪಡೆದಿದ್ದು, ಅಲ್ಲಿಯೇ ೧೦೧ ಸ್ಥಲಗಳ

---

೧೬ ಮೊಗ್ಗೆಯ ಮಾಯಿದೇವ–'ಏಕೋತ್ತರಶತಸ್ಥಲ' (ಪದ್ಯ) ೫–೬.

೧೭ ಮೊಗ್ಗೆಯ ಮಾಯಿದೇವ–'ಏಕೋತ್ತರ ಶತಸ್ಥಲ' (ಪದ್ಯ) ೭

ಪರಿಚಯುವನ್ನು ಕೊಡುತ್ತವೆ. ಕನ್ನಡ ಅಧ್ಯಯನಪೀಠ, ಕ.ವಿ.ವಿ. ಧಾರವಾಡದ ಒಂದು ಹಸ್ತಪ್ರತಿಯು ಉಲ್ಲೇಖಿಸುವಂತೆ ವಾತುಲಾಗಮ ಪರಮೇಶ್ವರದ ವಿಜಯಭೈರವೀ ಪಟಲದಲ್ಲಿ ಶಿವನು ತನ್ನ ಸತಿ ಪಾರ್ವತಿಗೆ ಏಕೋತ್ತರ ಶತಸ್ಥಲದ ತತ್ತ್ವಗಳನ್ನು ಉಪದೇಶಿಸಿದ್ದಾನೆ. ಬಿಂಬಾಗಮವು ತಿಳಿಸುವಂತೆ, ಪಾರ್ವತಿದೇವಿಯು ನೂರೊಂದು ಸ್ಥಲಗಳ ರಹಸ್ಯವನ್ನು ಶ್ರೀರೇಣುಕರಿಗೂ, ಅವರು ಪುನಃ ಅದನ್ನು ಅಗಸ್ತ್ಯರಿಗೂ ಹೇಳಿದ್ದಾರೆ.೧೮ ಇವೆಲ್ಲವೂ ನೂರೊಂದು ಸ್ಥಲಗಳ ಮೂಲವನ್ನು ಗುರುತಿಸುವುದಕ್ಕೆ ಯತ್ನಗಳು.

ವಚನ ಸಾಹಿತ್ಯದ 'ವಂಶವೃಕ್ಷ'ವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಮೂರು ಮುಖ್ಯ ಸಾಹಿತ್ಯ ಪ್ರಕಾರಗಳನ್ನು ಕಾಣುತ್ತೇವೆ.

೧) **ಕೇವಲ ಸಂಕಲನಗಳು:** ಇಲ್ಲಿ ಸರ್ವಪುರಾತನರ ವಚನಗಳು, ಬೆಡಗಿನ ವಚನಗಳು, ಅನೇಕ ಶಿವಶರಣರ ಕಾಲಜ್ಞಾನದ ವಚನಗಳು ಸಮಾವೇಶವಾಗುತ್ತವೆ.

೨) **ತಾತ್ವಿಕ ಸಂಕಲನಗಳು:** ಇಲ್ಲಿ ಅನೇಕ ಶಿವಶರಣರ ಷಟ್‌ಸ್ಥಲದ ವಚನಗಳು, ಏಕೋತ್ತರ ಶತಸ್ಥಲ ಗ್ರಂಥಗಳು, ೨೧೬ ಸ್ಥಲಗಳ ಗಣವಚನ ರತ್ನಾವಳಿ ಹಾಗೂ ಹಲವಾರು ವಿವಿಧ ವಚನಗಳ ಸಂಕಲನಗಳು ಕಂಡುಬರುತ್ತವೆ.

೩) **ಸಂಪಾದನೆಗಳು:** ಇಲ್ಲಿ ಹಲವು ಶೂನ್ಯಸಂಪಾದನೆಗಳು, ಇತರ ಸಂಪಾದನೆಗಳನ್ನು ನಿರೀಕ್ಷಿಸಬಹುದಾಗಿದೆ.

ತಾತ್ವಿಕ ಸಂಕಲನಗಳ ಗುಂಪಿನಲ್ಲಿ ಬರುವ 'ಏಕೋತ್ತರಶತಸ್ಥಲ' ಎಂಬ ಸಾಹಿತ್ಯ ವೈವಿಧ್ಯ ಪೂರ್ಣವಾಗಿದೆ. ಇದರಲ್ಲಿ ಸಂಕಲನಗಳು, ಸ್ವತಂತ್ರ ಕೃತಿಗಳು, ಸಂದರ್ಭೋಚಿತ ೧೦೧ ಸ್ಥಲಗಳನ್ನು ಉಲ್ಲೇಖಿಸುವ ವೀರಶೈವ ಪುರಾಣಗಳು ಹಾಗೂ ಏಕೋತ್ತರ ಶತಸ್ಥಲ ಗ್ರಂಥದ ಟೀಕಾಕೃತಿಗಳು ಎಂದು ವಿಭಾಗಿಸಬಹುದಾಗಿದೆ.೧೯

ಏಕೋತ್ತರ ಶತಸ್ಥಲ ಅಥವಾ ನೂರೊಂರು ಸ್ಥಲದ ಕಲ್ಪನೆ ಬಹು ಪುರಾತನವಾದುದು. ಆದ್ಯ ವಚನಕಾರನೆನ್ನಿಸಿದ ದೇವರದಾಸಿಮಯ್ಯ (or ಜೇಡರ ದಾಸಿಮಯ್ಯ)ನ ಒಂದು ವಚನವು ನೂರೊಂದರ ವಿಚಾರವನ್ನು ಮಂಡಿಸುತ್ತದೆ; ಅಂಗಸ್ಥಲ ಹಾಗೂ ಲಿಂಗಸ್ಥಲಗಳ ಅವಾಂತರ ಸ್ಥಲಗಳು ೧೦೧ ಎಂಬ ಭರವಸೆಯನ್ನೀಯುತ್ತದೆ.

ಸಾಗರದೊಳಗಣ ಕಿಚ್ಚಿನ ಸಾಕಾರದಂತೆ
ಸಸಿಯೊಳಗಣ ಫಲಪುಷ್ಪಗಳ ರುಚಿ ಪರಿಮಳದಂತೆ
ಮನದ ಮರೆಯ ಮಾತು ನೆನಹಿನಲ್ಲಡಗಿದು

---

೧೮ K.U.D. ದಪ್ಪ ಕೈಬರಹದ ಪ್ರತಿ No.–೨೬೪

೧೯ ವಚನ ಸಾಹಿತ್ಯ (ವಂಶವೃಕ್ಷ) [ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯ ಸಂಪಾದನೆ. ಕ.ವಿ.ವಿ. ಧಾರವಾಡ ಪ್ರಕಟನೆ] ಪ್ರಸ್ತಾವನೆ.

ನಾಲಗೆ ನುಡಿವಾಗಲಲ್ಲದೆ ಕಾಣಬಾರದು ಕೇಳಬಾರದು
**ಒಂದಂಗದೊಳಡಗಿದ ನೂರೊಂದರ ಪರಿ** ರಾಮನಾಥಾ!

ಲಿಂಗಾರಾಧಕನ ಸಾಧನೆಯಲ್ಲಿ ಅಡಗಿದ ನೂರೊಂದು ಹಂತಗಳ ಕಲ್ಪನೆ ದಾಸಿಮಯ್ಯನ ಕಾಲಕ್ಕೆ ಪ್ರಚಲಿತವಿತ್ತು ಎಂಬುದಕ್ಕೆ ಈ ವಚನ ಸಾಕ್ಷಿ.

ಅಂಗಸ್ಥಲ, ಲಿಂಗಸ್ಥಲ ಹಾಗೂ ಮಿಶ್ರಸ್ಥಲಕ್ಕೆ ಸಂಬಂಧಪಟ್ಟಂತೆ ಷಟ್‌ಸ್ಥಲಜ್ಞಾನಿ ಚೆನ್ನಬಸವಣ್ಣನ ಮೂರು ವಚನದ ಕಟ್ಟುಗಳು ದೊರಕುತ್ತವೆ.[೨೦] ಅವುಗಳಲ್ಲಿ ಮಿಶ್ರಸ್ಥಲದ ಕಟ್ಟಿನಲ್ಲಿ, ಲಿಂಗಸ್ಥಲದಲ್ಲಿಯ ಸೂಕ್ಷ್ಮಸ್ಥಲಗಳನ್ನು ವರ್ಣಿಸುವ ಒಂದು ವಚನವು ಕಾಣಿಸಿಕೊಳ್ಳುತ್ತದೆ.[೨೧] ಆ ವಚನದಲ್ಲಿ ಲಿಂಗಸ್ಥಲದ ೫೭ ಅವಾಂತರ ಸ್ಥಲಗಳ ಗುಟ್ಟನ್ನರಿತು ಅವಿರಳನಾದ ಮಹಾಮಹಿಮನು ಜ್ಞಾನಿಯಲ್ಲ, ಅಜ್ಞಾನಿಯೂ ಅಲ್ಲ; ಶೂನ್ಯನಲ್ಲ ನಿಃಶೂನ್ಯನೂ ಅಲ್ಲ; ಅವನು ಉಭಯಾಚಾರ ತಾನೆಂದರಿತ ಪರಮಜ್ಞಾನಿಯೂ ನಿತ್ಯಮುಕ್ತನೂ ಆಗಿರುತ್ತಾನೆ ಎಂಬ ವಿವರವಿದೆ. ಇಂತು ಅಂಗಸ್ಥಲದ ಅವಾಂತರ ಸ್ಥಲಗಳನ್ನು ನಿರೂಪಿಸಿದ ಚೆನ್ನಬಸವಣ್ಣನಿಗೆ ಅಂಗಸ್ಥಲದ ೪೪ ಅವಾಂತರ ಸ್ಥಲಗಳ ಪರಿಚಯವಿರಲೂ ಸಾಕು.[೨೨] ಕಾರಣ ನೂರೊಂದು ಸ್ಥಲಗಳ ಅರ್ಥಾತ್ ಏಕೋತ್ತರ ಶತಸ್ಥಲಗಳ

---

೨೦ ಚನ್ನಬಸವಣ್ಣನವರ ಅಂಗಸ್ಥಲ, ಲಿಂಗಸ್ಥಲ ಹಾಗೂ ಮಿಶ್ರಸ್ಥಲದ ವಚನಗಳು ಕನ್ನಡ ಅಧ್ಯಯನ ಪೀಠ ಕ.ವಿ.ವಿ. ಯ ಹಸ್ತಪ್ರತಿ ಭಾಂಡಾರದಲ್ಲಿವೆ. ಈ ಸ್ಥಲಕಟ್ಟಿನ ವಚನಗಳ ಮುದ್ರಣವು ಡಾ. ಎಂ. ಎಂ. ಕಲಬುರ್ಗಿಯವರಿಂದ ಪ್ರಾರಂಭಗೊಂಡಿದೆ.

೨೧ 'ಚನ್ನಬಸವಣ್ಣನವರ ಮಿಶ್ರಷಟ್‌ಸ್ಥಲದ ವಚನಗಳು'
(ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಾಂಡಾರ)
'ಚನ್ನಬಸವಣ್ಣನವರ ವಚನಗಳು' (ಕ.ವಿ.ವಿ. ಧಾರವಾಡ ಪ್ರಕಟನೆ)
ಪುಟ ೬೪೧ ವಚನ ೧೪೪೦
"ಗುರುಲಿಂಗ ತ್ರಿವಿಧ—ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು
ಶಿವಲಿಂಗ ತ್ರಿವಿಧ—ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ
ಜಂಗಮಲಿಂಗ ತ್ರಿವಿಧ—ಸ್ವಯ, ಚರ, ಪರ
ಇಂತು ಆಚಾರಲಿಂಗಸ್ಥಲ ಒಂಬತ್ತು.

೨೨ ಮಹಾಲಿಂಗದೇವನು ತನ್ನ ಪರಮ ಶಿಷ್ಯ ಭಕ್ತಿಭಾಂಡಾರಿ ಜಕ್ಕಣಾರ್ಯನಿಗೆ ಬೋಧಿಸುವುದಕ್ಕಾಗಿಯೇ 'ಏಕೋತ್ತರ ಶತಸ್ಥಲ'ವನ್ನು ಸಂಕಲನಗೊಳಿಸಿದ್ದಾನೆ. "ಬಸವರಾಜ ದೇವರು ಚನ್ನಬಸವರಾಜದೇವರು....ಅಸಂಖ್ಯಾತ ಮಹಾಗಣಂಗಳ ಪರಮವಾಕ್ಯಾಮೃತಮಪ್ಪ ವಚನಂಗಳಿಂದ ಆ ತಚ್ಛಿಷಂಗೆ ಬೋಧಿಸುತ್ತಿರಲು, ಆ ಷಡುಸ್ಥಲದಲ್ಲಿ ಅಂಗಸ್ಥಲ ನಾಲ್ವತ್ತು ನಾಲ್ಕು ಲಿಂಗಸ್ಥಲ ಐವತ್ತೇಳು,→

ಸುಸ್ಪಷ್ಟ ಸ್ಥಲಕಟ್ಟಿನ ಸಂಯೋಜನೆ ೧೨ನೆಯ ಶತಮಾನದ ಚೆನ್ನಬಸವಣ್ಣನದೆಂದು ದೃಢವಾಗುತ್ತದೆ.೨೩

---

→ಉಭಯಂ ಏಕೋತ್ತರ ಶತಸ್ಥಲಗಳಾದವು...." —'ಏಕೋತ್ತರ ಶತಸ್ಥಲ' (ಮಹಾಲಿಂಗದೇವರು ನಿರೂಪಿಸಿದ್ದು)

ಮೊಗ್ಗೆಯ ಮಾಯಿದೇವ—'ಪದಏಕೋತ್ತರ ಶತಸ್ಥಲ' (ಷಟ್ಪದಿ)

"ದೇವಸಭೆಯೊಳಗೆ ದೇವರದೇವನೊಲಿದು ಗಿರಿ
ಜಾ ವನಿತೆಗೊರೆದನೇಕೋತ್ತರಶತಸ್ಥಲದ
ಭಾವದನುಭಾವಮಂ ಭೂಮಿಯೊಳು ಪೇಳ್ದ ಬಸವೇಶ ಸದ್ಭಕ್ತ ಜನಕೆ॥

ಈ ಪದ್ಯ ತಿಳಿಸುವಂತೆ ಏಕೋತ್ತರಶತಸ್ಥಲವನ್ನು ಮೊದಲು ಶಿವನು ತನ್ನ ಸತಿ ಗಿರಿಜೆಗೆ ಹೇಳಿದನು. ನಂತರ ಈ ಅನುಭವವನ್ನೇ ಬಸವಣ್ಣನು ಸದ್ಭಕ್ತರಿಗೆ ಉಪದೇಶಿಸಿದನು. ಪರಂಪರಾಗತ ತಿಳಿವಳಿಕೆಯಂತೆ ಬಸವಣ್ಣನೆ (ತನ್ನ ಸೋದರಳಿಯನಾದ) ಚೆನ್ನಬಸವಣ್ಣನ ಗುರು. ಆದ್ದರಿಂದ ಚನ್ನಬಸವಣ್ಣನ ವಚನಗಳಲ್ಲಿ ತೋರುವ ಲಿಂಗಸ್ಥಲದ ೫೭ ಸೂಕ್ಷ್ಮ ವಿಭಾಗಗಳು ಸ್ವಂತದವಾಗಿದ್ದರೂ ಆವಶ್ಯವಾಗಿ ಅಂಗಸ್ಥಲದ ೪೪ ವಿಭಾಗಗಳು (ಒಟ್ಟು ೧೦೧ ಸ್ಥಲಗಳು) ಬಸವಣ್ಣನಿಂದಲೇ ಚೆನ್ನಬಸವಣ್ಣನಿಗೆ ಅನುಗ್ರಹಿಸಲ್ಪಟ್ಟಿರಬೇಕು. ಕಾರಣ ಏಕೋತ್ತರಶತಸ್ಥಲಕ್ಕೆ ಬಸವ-ಚನ್ನಬಸವಾದಿಗಳು ಪ್ರತಿಷ್ಠಾಪಕರೆನ್ನಬಹುದಾಗಿದೆ.

೨೩ ಏಕೋತ್ತರ ಶತಸ್ಥಲ ಕೃತಿಗಳ ವಂಶವೃಕ್ಷ (ಪರಿಶಿಷ್ಟ-೨)

೧) ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆ
ಸಂಪಾದಕರು— ಡಾ. ಆರ್. ಸಿ. ಹಿರೇಮಠ, ಎಂ.ಎ. ಪಿಎಚ್.ಡಿ.
(ಕ.ವಿ.ವಿ. ಧಾರವಾಡ ಪ್ರಕಟನೆ)

೨) 'ಬಸವ ಪಥ' (ಮಾಸಿಕ ಪತ್ರಿಕೆ) ಡಾ. ಎಸ್. ವ್ಹಿ. ಐಯ್ಯನಗೌಡರ
ಲೇಖನ— "ಕನ್ನಡದಲ್ಲಿ 'ಏಕೋತ್ತರ ಶತಸ್ಥಲಗಳು'
ಒಂದು ಕಿರು ಪರಿಚಯ".

೩) 'ಗೌರವ' (ಅಭಿನಂದನ ಗ್ರಂಥ)—ಪ್ರೊ. ಜಿ. ಎ. ಶಿವಲಿಂಗಯ್ಯ ಅವರ
ಲೇಖನ—'ಏಕೋತ್ತರ ಶತಸ್ಥಲ ಸಾಹಿತ್ಯ' ಪುಟ ೩೦೭-೩೧೪.

ಆಗಮಲಿಂಗ ತ್ರಿವಿಧ—ಕ್ರಿಯಾಗಮ, ಭಾವಾಗಮ, ಜ್ಞಾನಾಗಮ
ಇಂತು ಗುರುಲಿಂಗಸ್ಥಲ ಒಂಬತ್ತು;
ಅಂತುಭಯಸ್ಥಲ ಹಂದಿನೆಂಟು. →

ಕನ್ನಡ ಸಾಹಿತ್ಯದ ಮಹಾಪರ್ವದಂತಿದ್ದ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ (ಕ್ರಿ. ಶ. ೧೪೧೯–೧೪೪೬) ವೀರಶೈವ ಸಾಹಿತ್ಯವು ಪುನರುತ್ಥಾನಗೊಂಡು

---

→ಅನುಗ್ರಹಲಿಂಗ ತ್ರಿವಿಧ—ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ
ಅರ್ಪಿತಲಿಂಗ ತ್ರಿವಿಧ—ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ
ತನುಗುಣಲಿಂಗ ತ್ರಿವಿಧ—ಶಿಷ್ಯ, ಶುಶ್ರೂಷೆ, ಸೇವ್ಯ
ಇಂತು ಶಿವಲಿಂಗಸ್ಥಲ ಒಂಬತ್ತು;
ಅಂತು ತೃತೀಯಸ್ಥಲ ಇಪ್ಪತ್ತೇಳು.
ಒಲವುಲಿಂಗ ತ್ರಿವಿಧ—ಜೀವಾತ್ಮ, ಅಂತರಾತ್ಮ, ಪರಮಾತ್ಮ
ನಿರೂಪಲಿಂಗ ತ್ರಿವಿಧ—ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ
ಪ್ರಸಾದಿಲಿಂಗ ತ್ರಿವಿಧ—ಆದಿ ಪ್ರಸಾದಿ, ಅಂತ್ಯ ಪ್ರಸಾದಿ, ಸೇವ್ಯ ಪ್ರಸಾದ
ಇಂತು ಜಂಗಮಲಿಂಗಸ್ಥಲ ಒಂಬತ್ತು:
ಅಂತು ಚತುರ್ಥಸ್ಥಲ ಮೂವತ್ತಾರು.
ಪಾದೋದಕಲಿಂಗ ತ್ರಿವಿಧ—ದೀಕ್ಷಾಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕ.
ನಿಷ್ಪತ್ತಿಲಿಂಗ ತ್ರಿವಿಧ—ಕ್ರಿಯಾನಿಷ್ಪತ್ತಿ, ಭಾವನಿಷ್ಪತ್ತಿ, ಜ್ಞಾನನಿಷ್ಪತ್ತಿ
ಆಕಾಶಲಿಂಗ ತ್ರಿವಿಧ—ಪಿಂಡಾಕಾಶ, ಬಿಂದ್ವಾಕಾಶ, ಮಹದಾಕಾಶ
ಇಂತು ಪ್ರಸಾದಲಿಂಗಸ್ಥಲ ಒಂಬತ್ತು;
ಅಂತು ಪಂಚಮಸ್ಥಲ ನಾಲ್ವತ್ತೈದು.
ಪ್ರಕಾಶಲಿಂಗ ತ್ರಿವಿಧ—ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ
ಪ್ರಸಾದಲಿಂಗ ತ್ರಿವಿಧ—ಸ್ವೀಕೃತ ಪ್ರಸಾದ, ಶಿಷ್ಟೋದನ ಪ್ರಸಾದ, ಚರಾಚರನಾಸ್ತಿ ಪ್ರಸಾದ
ಸ್ಥಲಲಿಂಗ ತ್ರಿವಿಧ—ಭಾಂಡಸ್ಥಲ, ಭಾಜನಸ್ಥಲ, ಅಂಗಲೇಪನಸ್ಥಲ
ಶೂನ್ಯಲಿಂಗ ತ್ರಿವಿಧ—ಸ್ವಯಪರವರಿಯದಸ್ಥಲ, ಭಾವಾಭಾವನಷ್ಟಸ್ಥಲ, ಜ್ಞಾನಶೂನ್ಯಸ್ಥಲ
ಇಂತೀ ಮಹಾಲಿಂಗಸ್ಥಲ ಹನ್ನೆರಡು;
ಅಂತು ಷಟ್‌ಸ್ಥಲ ಐವತ್ತೇಳು.
ಇಂತಿವೆಲ್ಲ ಸ್ಥಲಂಗಳನೊಳಕೊಂಡ ಮಹಾಮಹಿಮನು
"ಜ್ಞಾನಿಯಲ್ಲ, ಅಜ್ಞಾನಿಯಲ್ಲ, ಶೂನ್ಯನಲ್ಲ, ನಿಃಶೂನ್ಯನಲ್ಲ.
ಉಭಯಾಚಾರ ತಾನೆಂದಱಿದ ಪರಮಜ್ಞಾನಿಗೆ ಕೊಳುಕೊಡೆಯಿಲ್ಲ.
ಸಾಕಾರ ಸಂಬಂಧವನಱಿಯ, ನಿತ್ಯಮುಕ್ತ, ನಿರವಯ, ಉಭಯಾತ್ಮಕ
ತಾನು ಕೂಡಲಚೆನ್ನಸಂಗನೆಂದುಯೆನ್ನದ ಸುಯಿದಾನ!" 15

ಅಭೂತಪೂರ್ವ ಯಶಸ್ಸನ್ನು ಸಾಧಿಸಿತು. ವೀರಶೈವ-ಧರ್ಮಾವಲಂಬಿಯಾಗಿದ್ದ ಪ್ರೌಢ ದೇವರಾಯನು ಎಲ್ಲ ಮತದವರಿಗೂ ಪ್ರೋತ್ಸಾಹವಿತ್ತನು; ವೀರಶೈವರಿಗೆ ವಿಶೇಷಮನ್ನಣೆ ಯನ್ನಿತ್ತನು. ಕಾರಣ ಅನೇಕ ವೀರಶೈವ ಪ್ರತಿಭಾನ್ವಿತರು ಅಂದು ಉಚ್ಚ ಅಧಿಕಾರ ಸ್ಥಾನಗಳನ್ನು ಪಡೆದರಲ್ಲದೆ ಶ್ರೇಷ್ಠ ಕೃತಿಗಳನ್ನೂ ರಚಿಸಿದರು. ಅಂಥ ವಿದ್ವನ್ಮಣಿಗಳಲ್ಲಿ ಮಹಾಲಿಂಗದೇವ ಮೊಗ್ಗೆಯ ಮಾಯಿದೇವ, ಕುಮಾರ ಬಂಕನಾಥ, ಕಲ್ಲುಮಠದ ಪ್ರಭುದೇವ ಮುಂತಾದವರು ಅಗ್ರಗಣ್ಯರು. ಮುಂದೆ ಮಹಾಲಿಂಗದೇವರ ಪಥವನ್ನೇ ಅನುಸರಿಸಿ ಭಕ್ತಿಭಾಂಡಾರಿ ಜಕ್ಕಣಾರ್ಯ, ಲಕ್ಕಣ ದಂಡೇಶ, ಕರಸ್ಥಲದ ವೀರಣ್ಣೊಡೆಯ ಮುಂತಾದ ಶಿವಾನುಭಾವಿಗಳು ವೀರಶೈವ ಸಾಹಿತ್ಯದ ಬೆಳವಣಿಗೆಗೆ ಕಾರಣರಾದರು. ಮಹಾನುಭಾವಿಯಾದ ಮಹಾಲಿಂಗದೇವನು ತನ್ನ ಪರಮಶಿಷ್ಯ ಜಕ್ಕಣಾರ್ಯನಿಗಾಗಿ ಬಸವಾದಿ ಪ್ರಮಥರ ವಚನ ಹಾಗೂ ಸ್ವರವಚನಗಳನ್ನು ಮೂಲದ್ರವ್ಯವಾಗಿ ಬಳಸಿಕೊಂಡು ಅನುಭಾವದ ಕ್ರಮವನ್ನು ನಿರ್ಧರಿಸಿ ೧೦೧ ಸ್ಥಲಗಳನ್ನಾಗಿ ವಿಭಾಗಿಸಿ, ಅವುಗಳ ರಹಸ್ಯ ವನ್ನು ಪ್ರಕಟಪಡಿಸಲು 'ಏಕೋತ್ತರ ಶತಸ್ಥಲ'ವೆಂಬ ಗ್ರಂಥವನ್ನು ಸಂಕಲನಗೊಳಿಸಿದನು. ಈ ಗ್ರಂಥವು ಷಟ್‌ಸ್ಥಲ ಮಾರ್ಗದ ಔಚಿತ್ಯ, ಔನ್ನತ್ಯ ಹಾಗೂ ಸುಸೂಕ್ಷ್ಮ ವಿಕಾಸವನ್ನು ಸಾರುತ್ತದೆ. ವೀರಶೈವ ಸಿದ್ಧಾಂತ ಕೇಸರಿಯಾದ ಮಗ್ಗೆಯ ಮಾಯಿದೇವನು ಶರಣರ ಸಾಹಿತ್ಯವನ್ನೆಲ್ಲ ಅರಗಿಸಿಕೊಂಡು 'ಪದ ಏಕೋತ್ತರ ಶತಸ್ಥಲ'ವೆಂಬ (ಷಟ್ಪದಿ) ಸ್ವತಂತ್ರ ಕೃತಿಯನ್ನು ರಚಿಸಿದನು. ಇವರ ಮಾರ್ಗವಿಡಿದು, ಮಹಾಲಿಂಗದೇವನ ಮಾರ್ಗವನ್ನೆ ಹಿಡಿದು, ಭಕ್ತಿಭಾಂಡಾರಿ ಜಕ್ಕಣಾರ್ಯನು ತನ್ನ ಶಿಷ್ಯ ವಿಶ್ವನಾಥಾರಾಧ್ಯನಿಗೋಸುಗ ನೂರೊಂದು ಸ್ಥಲಗಳನ್ನು ಸ್ವರವಚನಗಳಿಂದ ಕ್ರಮಗೊಳಿಸಿದನು. (ಈ ಸ್ವರವಚನಗಳು ಬಸವಾದಿ ಪ್ರಮಥರ ಹಾಡುಗಳಾಗಿದ್ದು ವಚನಗಳ ಸಂಗ್ರಹದಲ್ಲಿ ದೊರಕುತ್ತವೆ.) ಸ್ವರ ವಚನಗಳಿಂದ ಸಂಗ್ರಹಿಸಲ್ಪಟ್ಟ ಜಕ್ಕಣಾರ್ಯನ ಕೃತಿಯು 'ಸ್ವರ ಏಕೋತ್ತರ ಶತಸ್ಥಲ' ಅಥವಾ 'ನೂರೊಂದು ಸ್ಥಲವೆಂದು' ಪ್ರಸಿದ್ಧವಾಗಿದೆ.

ಶ್ರೀ ಶಿವಯೋಗಿ ಶಿವಾಚಾರ್ಯ ಕೃತ 'ಸಿದ್ಧಾಂತ ಶಿಖಾಮಣಿಯು' ಏಕೋತ್ತರ ಶತಸ್ಥಲಗಳ ವರ್ಣನೆಯನ್ನು ಸಂಸ್ಕೃತದಲ್ಲಿ ಕೊಡುತ್ತದೆ. ಇಲ್ಲಿಯ 'ಉಪಾದಿ ಮಾಟ', 'ನಿರುಪಾಧಿ ಮಾಟ', 'ಸಹಜ ಮಾಟ' ಮುಂತಾದ ಸ್ಥಲಗಳ ಹೆಸರುಗಳು ಶಿವಶರಣರ ವಚನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಈ ಸ್ಥಲಗಳು ಶುದ್ಧ ಕನ್ನಡ ಪದವಾದ 'ಮಾಟ' ಎಂಬ ಪದದಿಂದ ಕೂಡಿದ್ದು, ಮಹಾಲಿಂಗದೇವನ 'ಏಕೋತ್ತರಸ್ಥಲ'ದಲ್ಲಿಯೂ ಉಂಟು. ಕಾರಣ ಮಹಾಲಿಂಗದೇವನ ಕಾಲದ ನಂತರ, ೧೨೧ ಸ್ಥಲಗಳ ತತ್ತ್ವಸಿದ್ಧಾಂತದ ಮಹತ್ವ ವನ್ನರಿತು ಸಂಸ್ಕೃತ ಭಾಷೆಯಲ್ಲಿ ಮೂಡಿ ಬಂದ ಕೃತಿಯು 'ಸಿದ್ಧಾಂತ ಶಿಖಾಮಣಿ' ಎನ್ನ ಬಹುದಾಗಿದೆ. ಡಾ. ಎಸ್. ಸಿ. ನಂದೀಮಠ ಅವರು ಕೂಡ '**The Siddhantha Sikhamani is lacking the anthentic proof of antiquity**' ಎಂದಿ

ದ್ದಾರೆ.[೨೪] ಮುಂದೆ ಅನೇಕರು ಏಕೋತ್ತರಶತಸ್ಥಲದ ಸಂಕಲನಕಾರರೂ, ಸ್ವತಂತ್ರ ಕೃತಿ ನಿರ್ಮಾಪಕರೂ, ಟೀಕೆ ಹಾಗೂ ವ್ಯಾಖ್ಯಾನಕಾರರೂ ಆದರು. ಹೀಗೆ ೧೫ನೆಯ ಶತಮಾನದಲ್ಲಿ ಹಾಗೂ ನಂತರದ ಕಾಲದಲ್ಲಿ ಈ ಸಾಹಿತ್ಯದ ವೈವಿಧ್ಯಪೂರ್ಣವಾದ ವಿಸ್ತಾರವು ಮೂಡಿ ಬಂದಿದೆ.[೨೫] ವೀರಶೈವ ಸಿದ್ಧಾಂತದಲ್ಲಿ ಅಡಕವಾದ ಅಷ್ಟಾವರಣ–ಪಂಚಾಚಾರ–ಷಟ್‌ಸ್ಥಲ–ನೂರೊಂದು ಸ್ಥಲಗಳ ಸೂಕ್ಷ್ಮವಾದ ವಿಧಿವಿಧಾನಗಳು ಹಾಗೂ ಅನುಭಾವದ ಆತ್ಯಂತಿಕ ಸಿದ್ಧಿಯ ನಿರೂಪಣೆಗಳು ಎಲ್ಲ 'ಏಕೋತ್ತರಶತಸ್ಥಲ'ಗಳಲ್ಲಿ ಹುದುಗಿವೆ. ಒಟ್ಟಿನಲ್ಲಿ ವೀರಶೈವನು ಆಚರಿಸಬೇಕಾದ ಸೂಕ್ಷ್ಮ ವಿವರಗಳು ಈ ಕೃತಿಗಳಲ್ಲಿದ್ದುದರಿಂದ, ಏಕೋತ್ತರಶತಸ್ಥಲಾಚರಣೆಯಿಂದ ಷಟ್‌ಸ್ಥಲಜ್ಞಾನವು ಪ್ರಾಪ್ತವಾಗಿ ಲಿಂಗಾಂಗಸಾಮರಸ್ಯವು ಸಹಜವಾಗಿ ಸಿದ್ಧಿಸುತ್ತದೆ[೨೬] ಎಂಬುದು ಸತ್ಯ.

ನೂರೊಂದು ಸ್ಥಲಗಳ ಕೃತಿಕಾರರು ಪರವಸ್ತು ನಿರ್ದೇಶವಾದ 'ಸ್ಥಲ' ಪದದಲ್ಲಿ ಮೊದಲು ಅಂಗಸ್ಥಲ ಹಾಗೂ ಲಿಂಗಸ್ಥಲವೆಂದು ವಿಭಾಗಿಸಿ, ಪುನಃ ಅಂಗಸ್ಥಲದಲ್ಲಿ ೪೪, ಲಿಂಗಸ್ಥಲದಲ್ಲಿ ೫೭ ವಿಭಾಗಗಳನ್ನು ಗುರುತಿಸಿದ್ದಾರೆ. ಅಂಗಸ್ಥಲವು ಭಕ್ತನ ಕ್ರಿಯೆ ಮತ್ತು ಸಾಧನೆಗಳನ್ನು ತೋರಿಸಿದರೆ ಲಿಂಗಸ್ಥಲವು ಭಕ್ತನಲ್ಲಿ ಇಳಿದು ಬರುವ ದೈವೀ ಅನುಗ್ರಹ ಹಾಗೂ ಶಕ್ತಿಗಳನ್ನು ಸೂಚಿಸುತ್ತದೆ. ಈ ದೃಷ್ಟಿಯಲ್ಲಿ ಬಸವಣ್ಣನ ವಚನಗಳು ಅಂಗಸ್ಥಲದ ತತ್ತ್ವಸಂಯೋಜನೆಯಲ್ಲಿ ರೂಪುಗೊಂಡಿದ್ದು ಅಂಗನ ಅನುಭಾವ ಮಾರ್ಗದಲ್ಲಿಯ ಏರುಪಾವಟಿಗೆಗಳನ್ನು ಸೂಚಿಸುತ್ತವೆ; ಚನ್ನಬಸವಣ್ಣನ ವಚನಗಳು ಲಿಂಗಸ್ಥಲದ ತತ್ತ್ವಸಂಯೋಜನೆಯಲ್ಲಿ ರಚಿತವಾಗಿದ್ದು ದೈವೀ ಅನುಗ್ರಹ ಹಾಗೂ ದೈವೀಜ್ಞಾನ ಅಥವಾ ಪರಂಜ್ಯೋತಿಯ ರೂಪದಲ್ಲಿರುವ ಲಿಂಗಗತ ಶಕ್ತಿಯ ಅವತರಣದ ಸಂಕೇತವಾಗಿವೆ. ಷಟ್‌ಸ್ಥಲಗಳಲ್ಲಿ ಕಂಡುಬರುವ ಭಕ್ತನಿಂದ ಮೊದಲ್ಗೊಂಡು ಐಕ್ಯಾಂತವಾದ ಪ್ರತಿಯೊಂದು ಸ್ಥಲದಲ್ಲಿ ಅಂಗಸ್ಥಲ–ಲಿಂಗಸ್ಥಲಗಳನ್ನು ಗುರುತಿಸಲಾಗಿದ್ದು, ಅವುಗಳ ಪರಸ್ಪರ ಸಂಬಂಧವನ್ನು ೧೦೧ ಸ್ಥಲಸಂಯೋಜನೆಯಲ್ಲಿ ಕಂಡರಿಸಲಾಗಿದೆ. ನೂರೊಂದು ಸ್ಥಲಗಳಲ್ಲಿಯ ಆತ್ಯಂತಿಕ ಗುರಿಯನ್ನು ಮುಟ್ಟಲು ಮೂರು ಮುಖ್ಯ ವಿಚಾರ

---

೨೪ ಕನ್ನಡ ಅಧ್ಯಯನಪೀಠ ಕ.ವಿ.ವಿ. ಧಾರವಾಡ ಹಸ್ತಪ್ರತಿಯು (No. ೨೬೪) ತಿಳಿಸುವಂತೆ, ೧೦೧ ಸ್ಥಲಗಳ ಉಪದೇಶವನ್ನು ಮೊಟ್ಟಮೊದಲು ಚೆನ್ನಬಸವಣ್ಣನು ತನ್ನ ಪೂರ್ವದ ಶರಣರ ಅನುಭವ ಹಾಗೂ ಅವರ ವಚನಗಳಿಂದ ಸಂಗ್ರಹಿಸಿದನು. ನಂತರ ಅದನ್ನೇ ಸೊನ್ನಲಿಗೆಯ ಸಿದ್ಧರಾಮೇಶ್ವರನಿಗೆ ಹಾಗೂ ಕಲ್ಯಾಣದ ಇತರ ಶಿವಶರಣರಿಗೆ ಬೋಧಿಸಿದನು.

೨೫ Dr. S. C. Nandimath—'A Hand book of Virasaivism' ಪುಟ ೨೦

೨೬ ಡಾ. ಫ. ಗು. ಹಳಕಟ್ಟಿ–'ವಚನಶಾಸ್ತ್ರಸಾರ' ಭಾಗ II, ಪು. ೩೪೩ (೧೯೩೮)

ಗಳುಂಟು– ೧) ಸದ್ಗುರುವಿನ ಮೂಲಕ ಪರವಸ್ತುವನ್ನು ಕುರಿತು ತಿಳಿಯುವದು. ೨) ಪ್ರತ್ಯಕ್ಷ ಶಿವಯೋಗಸಾಧನೆ. ೩) ಅನುಭಾವದ ಮುಖಾಂತರ ಶಿವಸಾಕ್ಷಾತ್ಕಾರ ಸಿದ್ಧಿ.

ಅಂಗಸ್ಥಲ ಹಾಗೂ ಲಿಂಗಸ್ಥಲಗಳ ಪರಸ್ಪರ ಸಂಬಂಧದಿಂದ ವ್ಯಕ್ತವಾಗುವ ೧೦೧ ಸ್ಥಲಗಳ ಚಿತ್ರಣ ಮತ್ತು ಷಟ್‌ಸ್ಥಲಗಳ ಪ್ರತಿಯೊಂದು ಸ್ಥಲದಲ್ಲಿ ತೋರಿಬರುವ ವಿವಿಧ ಸ್ಥಲಗಳ ಸಂಬಂಧವನ್ನು ಇನ್ನು ವಿವೇಚಿಸುವಾ.

I **ಭಕ್ತಸ್ಥಲದಲ್ಲಿ** ಒಟ್ಟು ೨೪ ಆವಾಂತರ ಸ್ಥಲಗಳಿದ್ದು, ಅವುಗಳಲ್ಲಿ ೧೫ ಅಂಗ ಸ್ಥಲಗಳು ಮತ್ತು ೯ ಲಿಂಗಸ್ಥಲಗಳೂ ಅಡಕವಾಗಿವೆ. ಅಂಗಸ್ಥಲಗಳು ಸಾಧಕನ ಸಾಧನೆಯ ಉತ್ತರೋತ್ತರ ಪ್ರಗತಿಯನ್ನೂ, ಲಿಂಗಸ್ಥಲಗಳು ಸಹಜ ದೈವೀ ಅವತರಣವನ್ನೂ ಸೂಚಿಸುತ್ತವೆ.

ಭಕ್ತಸ್ಥಲ

| **ಅಂಗಸ್ಥಲಗಳು** | **ಲಿಂಗಸ್ಥಲಗಳು** |
|---|---|
| ೧) ಪಿಂಡಸ್ಥಲ | ೧) ದೀಕ್ಷಾಗುರುಸ್ಥಲ |
| ೨) ಪಿಂಡಜ್ಞಾನಸ್ಥಲ | ೨) ಶಿಕ್ಷಾಗುರುಸ್ಥಲ |
| ೩) ಸಂಸಾರಹೇಯಸ್ಥಲ | ೩) ಜ್ಞಾನಗುರುಸ್ಥಲ |
| ೪) ಗುರುಕಾರುಣ್ಯಸ್ಥಲ | ೪) ಕ್ರಿಯಾಲಿಂಗಸ್ಥಲ |
| ೫) ಲಿಂಗಧಾರಣಸ್ಥಲ | ೫) ಭಾವಲಿಂಗಸ್ಥಲ |
| ೬) ವಿಭೂತಿಯ ಸ್ಥಲ | ೬) ಜ್ಞಾನಲಿಂಗಸ್ಥಲ |
| ೭) ರುದ್ರಾಕ್ಷಿಯ ಸ್ಥಲ | ೭) ಸ್ವಯಲಿಂಗಸ್ಥಲ |
| ೮) ಪಂಚಾಕ್ಷರಿಯ ಸ್ಥಲ | [ಇಲ್ಲವೆ ಸ್ವಯಂ ಲಿಂಗಸ್ಥಲ |
| ೯) ಭಕ್ತಿಸ್ಥಲ | ಇಲ್ಲವೆ ಸ್ವಯ ಜಂಗಮಸ್ಥಲ] |
| ೧೦) ಉಭಯಸ್ಥಲ | ೮) ಚರಸ್ಥಲ |
| ೧೧) ತ್ರಿವಿಧಸಂಪತ್ತುಸ್ಥಲ | [ಇಲ್ಲವೆ ಚರಜಂಗಮ ಇಲ್ಲವೆ |
| ೧೨) ಚತುರ್ವಿಧಸಾರಾಯಸ್ಥಲ | ಚರಲಿಂಗಸ್ಥಲ] |
| ೧೩) ಉಪಾಧಿಮಾಟಸ್ಥಲ | ೯) ಪರಸ್ಥಲ |
| ೧೪) ನಿರುಪಾಧಿಮಾಟಸ್ಥಲ | [ಇಲ್ಲವೆ ಪರಜಂಗಮ |
| ೧೫) ಸಹಜಮಾಟಸ್ಥಲ | ಇಲ್ಲವೆ ಪರಲಿಂಗಸ್ಥಲ]. |

ಷಟ್‌ಸ್ಥಲಮಾರ್ಗದಲ್ಲಿ ಭಕ್ತಸ್ಥಲದ ಮೊದಲಿನ ೮, ಅಂದರೆ ಪಿಂಡಸ್ಥಲದಿಂದ ಪಂಚಾಕ್ಷರಿಯಸ್ಥಲ(ಅರ್ಥಾತ್ ಮಂತ್ರಸ್ಥಲ)ದ ವರೆಗಿನ ಅಂಗಸ್ಥಲಗಳು ಸಾಧನೆಯ ಪ್ರಾರಂಭದ ಮೆಟ್ಟಿಲುಗಳು. ಅಂಗಸ್ಥಲದ ೪ನೆಯ ಉಪಭಾಗವಾದ ಗುರುಕಾರುಣ್ಯ

ಸ್ಥಲದೊಡನೆ ಲಿಂಗಸ್ಥಲದ ದೀಕ್ಷಾಗುರುಸ್ಥಲದ ಸಂಬಂಧವೇರ್ಪಡುತ್ತದೆ. ದೀಕ್ಷಾಕಾಲ ದಲ್ಲಿ ಶ್ರೀಗುರು ಅನುಗ್ರಹವೂ ಪರವಸ್ತುವಿನ (=ಲಿಂಗದ) ಕಿರಣಗಳೂ ಸಾಧಕನ ಸ್ಥೂಲ-ಸೂಕ್ಷ್ಮ-ಕಾರಣ ಶರೀರವನ್ನು ಜಾಗೃತಗೊಳಿಸುತ್ತವೆ; ಆಧ್ಯಾತ್ಮ ಸಾಧನೆಗೆ ಅವನು ಬದ್ಧಕಂಕಣನಾಗಿ ನಿಲ್ಲುವಂತೆ ಪ್ರೇರೇಪಿಸುತ್ತವೆ. ಸಂಸಾರದ ಬಂಧನವನ್ನು ಕಳೆದುಕೊಳ್ಳಲು ಬಯಸುವ ಸಾಧಕನಿಗೆ ಶ್ರೀಗುರುವು ತನ್ನ ಶಿವಯೋಗ ಸಾಮರ್ಥ್ಯದಿಂದ ದೀಕ್ಷೆಯನ್ನೀಯುತ್ತಾನೆ. ನಂತರ ಆಧ್ಯಾತ್ಮೋಪದೇಶವನ್ನು ಅರುಹುವುದು ಶಿಕ್ಷಾಗುರುಸ್ಥಲ ವೆಂದೂ, ಸಮ್ಯಕ್ ಪಥದಿಂದ ಸಮ್ಯಕ್‌ಜ್ಞಾನ ಮೂಡುವಂತೆ ಕಾರ್ಯಕೈಯುವುದೆ **ಜ್ಞಾನ ಗುರುಸ್ಥಲ**ವೆಂದೂ ಕರೆಯಲ್ಪಡುತ್ತದೆ.

ಅಂಗಸ್ಥಲದ ೮ ಅವಾಂತರ ಸ್ಥಲಗಳನ್ನು ಅಳವಡಿಸಿಕೊಂಡ ಸಾಧಕನು ವಿಭೂತಿ-ರುದ್ರಾಕ್ಷಿಗಳ ಧರಿಸಿ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತ ಲಿಂಗಾರ್ಚನೆಯಲ್ಲಿ ತೊಡಗಲು ಅದು **ಭಕ್ತಿಸ್ಥಲ**ವಾಗಿ ಪರಿಣಮಿಸುತ್ತದೆ. ನಿರಾಕಾರನಾದ ಶಿವನು ಶಿವಭಕ್ತನ ಭಕ್ತಿಗಾದ ಲಿಂಗರೂಪಾಗಿ ಗೋಚರಿಸುವನೆಂದು ನಂಬಿ ಪೂಜಿಸುವದೂ ಅವಿರಳ ಜ್ಞಾನಿಯಾಗಿ ಜಂಗಮನು ಶಿವನಲ್ಲದೆ ಅನ್ಯನಲ್ಲವೆಂಬ ಗಾಢ ಭಕ್ತಿಯು ಸೇರಿದಾಗ **ಉಭಯಸ್ಥಲ**ವೆನ್ನಿ ಸುತ್ತದೆ. ಭಕ್ತ-ಜಂಗಮರ ಸಂಬಂಧ ಅತಿ ಸೂಕ್ಷ್ಮವಾಗಿದೆ-

"ಭಕ್ತನ ಮಠಕ್ಕೆ ಜಂಗಮ ಬಂದು, ಆ ಭಕ್ತ ಮಾಡಿದಂತೆ
ಭಕ್ತಿಯ ಮಾಡಿಸಿಕೊಂಡು,
ಕ್ಷಮಿಸಬಲ್ಲಡೆ ಜಂಗಮ; ಆ ಕ್ಷಮೆಯೊಳಗೆ ಮಗ್ನನಾಗಬಲ್ಲಡೆ ಭಕ್ತ.
..............................................
ಬಂದ ಜಂಗಮದ ಇಂಗಿತಾಕಾರವಱಿದು,
ಬೇಡದ ಮುನ್ನವೆ ಮಾಡಬಲ್ಲಡೆ ಭಕ್ತನೆಂಬೆನು."

ಎಂಬ ವಚನದಂತೆ ಬೇಡುವ ಮೊದಲೇ ಮಾಡುವ ಭಕ್ತ, ಬೇಡದೆ ಮಾಡಿಸಿಕೊಂಬ ಜಂಗಮರ ಸನ್ನಿಧಾನ ಇಹ-ಪರಗಳೆರಡರಲ್ಲಿಯೂ ಉತ್ಕೃಷ್ಟವಾದುದು.

ಗುರು-ಲಿಂಗ-ಜಂಗಮರು ಆಧ್ಯಾತ್ಮಸಂಪತ್ತೆನಿಸಿ ತ್ರಿವಿಧ ಸಂಪತ್ ಸ್ಥಲವಾಗುತ್ತದೆ. ಭಕ್ತನಂಗದಲ್ಲಿ ಗುರುಭಕ್ತಿ, ಮನದಲ್ಲಿ ಲಿಂಗಭಕ್ತಿ, ಅರಿವಿನಲ್ಲಿ ಜಂಗಮಭಕ್ತಿ, ಪರಿಣಾಮದಲ್ಲಿ ಪ್ರಸಾದ-ಪಾದೋದಕ ಭಕ್ತಿಯಾಗಿ ಮೂಡಲು ಚತುರ್ವಿಧಸಾರಾಯಸಂಪತ್ತಾಗಿ ಒಡ ಮೂಡುತ್ತದೆ, ಸಾಧಕನ ಸರ್ವಾಂಗವನ್ನೂ ಶುದ್ಧಗೊಳಿಸುತ್ತದೆ.

"ತನುಶುದ್ಧವಾಯಿತ್ತು ಗುರುವಿನಿಂದ
ಮನಶುದ್ಧವಾಯಿತ್ತು ಲಿಂಗದಿಂದ
ಧನಶುದ್ಧವಾಯಿತ್ತು ಜಂಗಮದಿಂದ
ಪ್ರಾಣಶುದ್ಧವಾಯಿತ್ತು ಪ್ರಸಾದದಿಂದ

ಗುರುವಿಂಗೆ ಗುರುವಾಗಿ ಗುರುಪ್ರಸಾದವ ಕೊಂಬುದು.
ಲಿಂಗಕ್ಕೆ ಲಿಂಗವಾಗಿ ಲಿಂಗಪ್ರಸಾದವ ಕೊಂಬುದು
ಜಂಗಮಕ್ಕೆ ಜಂಗಮವಾಗಿ ಜಂಗಮಪ್ರಸಾದವ ಕೊಂಬುದು
ಪ್ರಸಾದಕ್ಕೆ ಪ್ರಸಾದವಾಗಿ ಪ್ರಸಾದವ ಕೊಂಬುದು[೨೭]
ಇಂತೀ ಚತುರ್ವಿಧಸ್ಥಲಕ್ಕೆ ಚತುರ್ವಿಧವಾಗಬಲ್ಲಡೆ,
ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯನು."

ನಾದ-ಬಿಂದು-ಕಳಾತೀತವಾದ ಘನಕ್ಕೆ ಘನವಾದ ಪರವಸ್ತುವು ಇನ್ನು, ಅನಾದಿ ಲಿಂಗವೆನಿಸಿ ಗುರುವಿನಕಾರುಣ್ಯದಿಂದ ಶಿಷ್ಯನ ಕರತಳಾಮಳಕವಾಗಿ ಇಷ್ಟಲಿಂಗಸ್ವರೂಪವನ್ನು ಪಡೆಯುತ್ತದೆ. 'ಉನ್ಮನಿಜೀವಿಯು ಲೌಕಿಕದ ಅನುಸಂಧಾನವ ಪರಿಹರಿಸಲಿಕೆ' ಬಂದ ಇಷ್ಟಲಿಂಗದಲ್ಲಿ ಗುರುಕಾರುಣ್ಯದಿಂದ ನಿಜಸುಖವ ಕಾಣಬೇಕೆಂಬುದೆ **ಕ್ರಿಯಾಲಿಂಗ ಸ್ಥಲ.**[೨೮] ದೇಹವೇ ದೇವಾಲಯು, ಜೀವವೆ ಪರಶಿವನಾದ್ದರಿಂದ ಸೋಹಂಭಾವದಿಂದ ಪರಮಾತ್ಮನನ್ನು ಪೂಜಿಸಿ ಅಜ್ಞಾನವೆಂಬ ಕತ್ತಲೆಯನ್ನು ಕಳೆಯಲು ಪ್ರೇರಕವಾದುದೆ **ಭಾಗಲಿಂಗಸ್ಥಲ.** ಆದ್ದರಿಂದ ಮಣಿದರ್ಪಣದಂತಿರುವ, ಸ್ವಸ್ವರೂಪಾನುಸಂಧಾನಕ್ಕೆ ಸಾಧನವಾಗಿರುವ ಇಷ್ಟಲಿಂಗದ ಅರ್ಚನೆ-ಪೂಜನೆಗಳಿಂದ, ಅಜಪಾಮಂತ್ರಾನುಸಂಧಾನ ಹಾಗೂ ನಿರ್ನಿಮೇಷಧ್ಯಾನಗಳಿಂದ ಸಾಧಕನಲ್ಲಿ ಕ್ರಮೇಣವಾಗಿ ಸಮತೆಯುಂಟಾಗುತ್ತದೆ; ನಿರ್ವಿಕಲ್ಪ ಸಮಾಧಿಯೂ ಲಭಿಸುತ್ತದೆ.[೨೯] ಹೀಗೆ ಸಾಧಕನ ಅಂಗದಲ್ಲಿ ಅಳವಟ್ಟ ಸತ್ಕ್ರಿಯಾಲಿಂಗವು ಭಾವಭರಿತವಾಗುತ್ತದೆ. ಈ ಅರಿವು ಭಕ್ತನಲ್ಲಿ ಇನ್ನೂ ಸೂಕ್ಷ್ಮವಾಗಿ ಜ್ಞಾನವು ಮಹಾಜ್ಞಾನವಾಗಿ ಅಳವಡುವುದೆ **ಜ್ಞಾನಲಿಂಗಸ್ಥಲ.** –ಈ ಸ್ಥಲದ ಅನುಭವ ಹೀಗಿದೆ–

'ತನುವಿಲ್ಲದೆ ಕಂಡು ನಿಂದೆ ಬೆರಗಿಲ್ಲದೆ ಕಂಡು ಬೆಜಗಾದೆ.[೩೦]

---

೨೭ ಮಹಾಲಿಂಗದೇವ–'ಏಕೋತ್ತರ ಶತಸ್ಥಲ' ಪು. ೪೬, ವ. ೨.

೨೮ ಮಹಾಲಿಂಗದೇವ–ಏಕೋತ್ತರ ಶತಸ್ಥಲ ಪು. ೫೮, ವ. ೫, ೧೦.

೨೯ ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ ಪು. ೬೯;
ಶಿವಯೋಗಿ ಶಿವಾಚಾರ್ಯಕೃತ–'ಸಿದ್ಧಾಂತ ಶಿಖಾಮಣಿ'
(ಕ್ರಿಯಾಸ್ಥಲ. ಶ್ಲೋಕ ೧)
ಗುರೋರ್ವಿಜ್ಞಾನಯೋಗೇನ ಕ್ರಿಯಾ ಯತ್ರ ವಿಲೀಯತೇ।
ತತ್ಕ್ರಿಯಾಲಿಂಗಮಾಖ್ಯಾತಂ ಸರ್ವೈರಾಗಮಪಾರಗೈಃ॥
ಮರಿತೋಂಟದಾರ್ಯರ ಪ್ರಕಾರ ಈ ಸ್ಥಲದಲ್ಲಿಯ ಗುರುವು ಜ್ಞಾನಗುರುವಾಗಿರುತ್ತಾನೆ.

೩೦ ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ' ಪು. ೭೧;
ಮೊಗ್ಗೆಯ ಮಾಯಿದೇವ–'ಏಕೋತ್ತರಶತಸ್ಥಲ' ಪದ್ಯ ೪೯; →

ರೂಹಿಲ್ಲದೆ ಕಂಡಱಿದೆ ಗೊಹೇಶ್ವರನೆಂಬ ಲಿಂಗವ,
.......................................
"ಆಱಱಿಂದ ಮೀಱಿದುದ, ಬೇಱಿ ತೋಱಲಿಲ್ಲದುದ,
ದೇವದಾನವಮಾನವರ ಬಲ್ಲತನದ ಬಗೆಯ
ಮೀಱಿದುದನೇನ ಹೇಳುವೆನಯ್ಯಾ?...."

**ಭಾವಲಿಂಗಸ್ಥಲ** ಹಾಗೂ **ಜ್ಞಾನಲಿಂಗಸ್ಥ**ಲಗಳಲ್ಲಿ ಪರಶಿವನ ಅರಿವು ಪ್ರಕಾಶವಾಗಿ ತೋರಿಕೊಳ್ಳುತ್ತದೆ. ಈ ಪ್ರಕಾಶವು ಪರಶಿವನ ಅವಿರಳ ಜ್ಞಾನವಲ್ಲದೆ ಬೇರೆಯಲ್ಲ.

ಲಿಂಗಸ್ಥಲದ ಕೊನೆಯ ಮೂರು ಹಂತಗಳಾದ **ಉಪಾಧಿಮಾಟ, ನಿರುಪಾಧಿಮಾಟ** ಹಾಗೂ **ಸಹಜಮಾಟಗಳು** ಬಹಳ ಮಹತ್ವಪೂರ್ಣವಾದವುಗಳು; ಚತುರ್ವಿಧಸಾರಾಯಸಂಪನ್ನನಾದ ಶಿವಭಕ್ತನು ಪರಶಿವನೆ ತಾನಾಗಿ ಸುಳಿಯುತ್ತಾನೆ. ಪರವಸ್ತುವಿಗೆ ಅನನ್ಯ ಶರಣಾಗತನಾಗುವುದೆ **ಉಪಾಧಿಮಾಟಸ್ಥಲ;** ಯಾವ ಕಾಮನೆಯಿಂದ ಗುರು–ಲಿಂಗ–ಜಂಗಮಕ್ಕೆ ಅರ್ಚನೆ–ಪೂಜೆ–ದಾಸೋಹಗಳನ್ನು ಮಾಡುವನೊ ಅದನ್ನು ಈ ಸ್ಥಲದಲ್ಲಿ ಪಡೆಯುತ್ತಾನೆ. ಏಕೆಂದರೆ–

"ಮರಕ್ಕೆ ಬೇರು ಬಾಯೆಂದು,[೩೧]
ತಳಕ್ಕೆ ನೀರನೆಱೆದಡೆ ಮೇಲೆ ಪಲ್ಲವಿಸುತ್ತು.
ಲಿಂಗಕ್ಕೆ ಜಂಗಮವೆ ಬಾಯೆಂದು ಪಡಿಪದಾರ್ಥವ ನೀಡಿದರೆ,
ಮುಂದೆ ಚತುರ್ವಿಧ ಪುರುಷಾರ್ಥವ ನೀವುದು........"
"ಸುಪ್ರಭಾತ ಸಮಯದಲ್ಲಿ ಅರ್ಥಿಯಲಿ ಶಿವಲಿಂಗವ ನೆನೆದಡೆ,
ತಪ್ಪುವದು ಕಾಲಕರ್ಮಂಗಳಪಮೃತ್ಯುಗಳಯ್ಯಾ
ಜಂಗಮಾರ್ಚನೆಯು ಮಾಟ ಕೂಡಲಸಂಗನ ಕೂಟ".

ಒಬ್ಬ ಶಿವಯೋಗಿಯು ತೃಪ್ತನಾದರೆ ಶಿವನೂ ಸಂತೃಪ್ತನಾಗುತ್ತಾನೆ; ಜೊತೆಗೆ ವಿಶ್ವವೂ ತೃಪ್ತಗೊಳ್ಳುತ್ತದೆ. ಭಕ್ತಸಮೂಹಕ್ಕೆ ಭಕ್ತಿಯ ನೆಲೆಯನ್ನು ಉಪದೇಶಪೂರ್ವಕವಾಗಿ ನಿರೂಪಿಸುತ್ತ, ತಾನು ಹಮ್ಮು–ಬಿಮ್ಮುಗಳಿಲ್ಲದೆ ನಿರುಪಾಧಿಕನಾಗಿ, ತನುಮನಧನಗಳು ಪರವಸ್ತುವಿನ ಸೊಮ್ಮೆಂದು ತಿಳಿದು ತ್ರಿವಿಧದಾಸೋಹವ ಮಾಡುವ ರೀತಿಯೇ **ನಿರುಪಾಧಿಮಾಟಸ್ಥ**ಲವಾಗುತ್ತದೆ. ಈ ಸ್ಥಲದಲ್ಲಿದ್ದ ಶಿವಭಕ್ತನು ಗುರುಪೂಜೆ, ಲಿಂಗಾರ್ಚನೆ ಹಾಗೂ ಜಂಗಮದಾಸೋಹವ ತನ್ನ ಜೀವಾಳವೆಂದು ಬಗೆದು ಸೇವೆಸಲ್ಲಿ

---

→ ಮಹಾಲಿಂಗದೇವ–'ಏಕೋತ್ತರಶತಸ್ಥಲ' ಪುಟ ೨೧೩–೨೧೪;
ಶಿವಯೋಗಿ ಶಿವಾಚಾರ್ಯಕೃತ–'ಸಿದ್ಧಾಂತ ಶಿಖಾಮಣಿ'
(ಭಾವಲಿಂಗಸ್ಥಲ ಶ್ಲೋಕ ೩೭–೩೯)

೩೧ ಮಹಾಲಿಂಗದೇವ–'ಏಕೋತ್ತರಶತಸ್ಥಲ' ಪುಟ ೨೧೮–೨೧೯, ವ. ೯, ೧೦.
ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ' (ಜ್ಞಾನಲಿಂಗಸ್ಥಲ)

ಸುತ್ತಾನೆ.[೩೨] ಲಿಂಗಜಂಗಮರಲ್ಲಿ ನಿರುಪಾಧಿಕನಾಗಿ ಕರ್ತೃ–ಭೃತ್ಯಭಾವದಿಂದ ದಾಸೋಹವ ಮಾಡಿದ ಮಹಿಮನು, ತಾನು ಮಾಡುವ ಕ್ರಿಯೆಮಾಡಿಸಿಕೊಳ್ಳುವ ವಸ್ತುವಿನೊಳಗೆ ಅವಿನಾಭಾವ ಸಂಬಂಧವುಂಟಾಗುವುದೆ **ಸಹಜಸ್ಥಲ** ("ಮಾಟಕೂಟವೆಂಬೆರಡರ ಅನುಮತದಿಂದವೆ ಭಕ್ತಿ,") ನಾನು ನೀನೆಂಬ ಭೇದವಳಿದು, ಎಲ್ಲವೂ ಶಿವನೆಂಬ ಭಾವ ಮೂಡಿ, ಮಾಡುವಾತನೂ ಮಾಡಿಸಿಕೊಂಬಾತನೂ ಪರವಸ್ತುವೆಂಬ ತಿಳಿವು ಇಲ್ಲಿ ಜಾಗೃತವಾಗುತ್ತದೆ.[೩೩]

ಭಕ್ತಸ್ಥಲಕ್ಕೆ ಸಂಬಂಧಿಸಿದ ಲಿಂಗಸ್ಥಲದ ಕೊನೆಯ ಮೂರು ಹಂತಗಳಾದ ಸ್ವಯ–ಚರ ಪರಸ್ಥಲಗಳು ಅರ್ಥಪೂರ್ಣವಾದವುಗಳು. ಕ್ರಿಯಾಜ್ಞಾನಭಾವಗಳು ಏಕವಾಗಿ ಭಕ್ತನಲ್ಲಿ ನಿಶ್ಚಲವಾದುದೆ **ಸ್ವಯಸ್ಥಲ** ಹೃದಯಶುದ್ಧನಾದ ಆತನ ಬಳಿಗೆ ಪಡಿಪದಾರ್ಥಗಳು, ನಿಧಿ–ನಿಕ್ಷೇಪಗಳು ಪ್ರತ್ಯಕ್ಷವಾಗುತ್ತವೆ.

ಶಿವಚಿನ್ಹೆಯ ಹೊತ್ತು ಬಾಹ್ಯವ್ಯಾಪಾರವ ತೀರಿಸಿ, ಸಕಲ ಫಲ–ಪದಗಳ ಜಯಿಸಿ, ಸುಜ್ಞಾನಾವೃತ ರುಚಿಯಿಂದ ತೃಪ್ತನಾದ ಶಿವಭಕ್ತನು ಪರವಸ್ತುವಿನ ಏಕಾಂತಸುಖದಲ್ಲಿ ಮಗ್ನನಾಗಿರುತ್ತಾನೆ.[೩೪] ಆ ಶಿವಯೋಗಿಯು ದ್ವಂದ್ವಾತೀತನೂ, ದೊರೆತುದರಲ್ಲಿ ಸಂತುಷ್ಟನೂ, ಇಂದ್ರಿಯ ನಿಗ್ರಹಿಯೂ, ಸಮದೃಷ್ಟಿಯುಳ್ಳವನೂ ಆಗಿರುತ್ತಾನೆ. ಪರಮಾನಂದಮಯ ಮಹಾಲಿಂಗದಲ್ಲಿ ತಾನೆತಾನಾಗಿ ಬೆರೆತಿರುತ್ತಾನೆ. ಇಂಥ ಶಿವಯೋಗಿಯು ಶಿವಧ್ಯಾನ–ಶಿವಾಧಿಕ್ಯಜ್ಞಾನ–ಭಿಕ್ಷಾಹಾರ ಆಡಂಬರವಿಲ್ಲದೆ ಶಿವೈಕಾಂತನಾಗುವಿಕೆಗಳೆಂಬ ನಾಲ್ಕು ಕರ್ಮಗಳನ್ನು ಮಾತ್ರ ಆಚರಿಸುವಂಥವನೆಂಬುದು ಸಿದ್ಧಾಂತ ಶಿಖಾಮಣಿಯ ಅಭಿಮತ.[೩೫] ಸ್ವಸ್ವರೂಪವನ್ನರಿತ ಸ್ವಯಲಿಂಗಿಗೆ ತಾನೆತಾನಾಗಿ ಚರಿಸುವ ಸ್ಥಿತಿ ಪ್ರಾಪ್ತವಾಗಲು ಚರಲಿಂಗನೆನಿಸುತ್ತಾನೆ.[೩೬] ಲೋಕಕಲ್ಯಾಣಕ್ಕಾಗಿ ಸುಳಿಯುವ ಜಗದಾರಾಧ್ಯನವನು.[೩೭] ಇಂಥ ಜಂಗಮನು ಕೇವಲ ಲಿಂಗಾಭಿಮಾನಿಯಾಗಿರುತ್ತಾನೆ. ಹೊನ್ನು–ಹೆಣ್ಣು–ಮಣ್ಣು ಅಶನ–ವ್ಯಸನಗಳಿಗಾಗಿ ಹುಟ್ಟಿಬಂದವನಲ್ಲ; ಲೋಕಕ್ಕೆ ಭಕ್ತಿಪಥವನ್ನು ತೋರಿಸಲು ಬಂದಿರುತ್ತಾನೆ ಹೀಗೆ ಅತಿವರ್ಣಾಶ್ರಮಿಯಾಗಿ, ಬ್ರಹ್ಮವೆ ತಾನಾಗಿ, ಆನಂದಮಯ

---

೩೨ ಮಹಾಲಿಂಗದೇವ–'ಏಕೋತ್ತರಶತಸ್ಥಲ, (ಉಪಾಧಿಮಾಟಸ್ಥಲ) ಪುಟ ೬೦, ವಚನ ೮, ಪುಟ ೬೧ ವ. ೧೨

೩೩ ಮಹಾಲಿಂಗದೇವ–'ಏಕೋತ್ತರಶತಸ್ಥಲ' ಪುಟ ೬೪, ವ–೫,೯ ಪುಟ ೬೫ ವ–೧೧

೩೪ ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ' ಪುಟ ೨೨ ಪದ್ಯ ಹಾಗೂ ವೃತ್ತ

೩೫ ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ' (ಸ್ವಯಸ್ಥಲ) ಪುಟ ೭೪

೩೬ ಶಿವಯೋಗಿ ಶಿವಾಚಾರ್ಯಕೃತ–ಸಿದ್ಧಾಂತ ಶಿಖಾಮಣಿ (ಸ್ವಯಸ್ಥಲ) ಶ್ಲೋಕ ೫೩–೫೬

೩೭ ಶಿವಯೋಗಿ ಶಿವಾಚಾರ್ಯಕೃತ– ಸಿದ್ಧಾಂತ ಶಿಖಾಮಣಿ (ಚರಲಿಂಗ ಸ್ಥಲ ಅಂದರೆ ಚರಸ್ಥಲ) ಶ್ಲೋಕ ೫೭

ನಾಗಿ ಹಾಗೂ ಜೀವನ್ಮುಕ್ತನಾಗಿ ರಾರಾಜಿಸುವ ಶಿವಯೋಗಿಯ ನಿಲವೆ ಪರಜಂಗಮಸ್ಥಲವೆನ್ನಿಸುತ್ತದೆ. ಪರಜಂಗಮನ ನಿಲವನ್ನು ಶರಣರು ಹೀಗೆ ವರ್ಣಿಸುತ್ತಾರೆ—

"ನಿಜವನಱಿದ ನಿಶ್ಚಿಂತನೆ, ಮರಣವಗೆಲಿದ ಮಹಾಂತನೆ,
ಘನವ ಕಂಡ ಮಹಿಮನೆ, ಪರವನೊಳಕೊಂಡ ಪರಿಣಾಮಿಯೆ
ಬಯಲಲೊದಗಿದ ಭರಿತನೆ,
ಗುಹೇಶ್ವರನಿರಾಳವನೊಳಕೊಂಡ ಸಹಜನೆ!"೩೮

II. **ಮಾಹೇಶ್ವರ ಸ್ಥಲದಲ್ಲಿ** ಒಟ್ಟು ೧೮ ಉಪವಿಭಾಗಗಳಿದ್ದು ೯ ಅಂಗಸ್ಥಲ, ೯ ಲಿಂಗಸ್ಥಲಗಳಾಗಿ ಪರಿಣಮಿಸುತ್ತವೆ. ಇಲ್ಲಿ ಭಕ್ತಿ ಹಾಗೂ ಉಪಾಸ್ಯಉಪಾಸಕರಲ್ಲಿರಬಹುದಾದ ದ್ವೈತಭಾವವು ಸೂಕ್ಷ್ಮವಾಗಿರುತ್ತದೆ. ಕಾರಣ ಈ ಸ್ಥಲದಲ್ಲಿದ್ದ ಮಾಹೇಶ್ವರನು ಕಟ್ಟುನಿಟ್ಟಾದ ಆಚರಣೆಗಳನ್ನು ಪಾಲಿಸಬೇಕಾಗುತ್ತದೆ.

ಮಾಹೇಶ್ವರಸ್ಥಲ

| **ಅಂಗಸ್ಥಲ** | **ಲಿಂಗಸ್ಥಲ** |
|---|---|
| ೧. ಮಾಹೇಶ್ವರ ಸ್ಥಲ | ೧. ಕ್ರಿಯಾಗಮ ಸ್ಥಲ |
| ೨. ಲಿಂಗನಿಷ್ಠಾಸ್ಥಲ | ೨. ಭಾವಾಗಮ ಸ್ಥಲ |
| ೩. ಪೂರ್ವಾಶ್ರಯ ನಿರಸನ ಸ್ಥಲ | ೩. ಜ್ಞಾನಾಗಮ ಸ್ಥಲ |
| ೪. ವಾಗದ್ವೈತನಿರಸನ ಸ್ಥಲ | ೪. ಸಕಾಯ ಸ್ಥಲ |
| ೫. ಆಹ್ವಾನನಿರಸನ ಸ್ಥಲ | ೫. ಅಕಾಯಸ್ಥಲ |
| ೬. ಅಷ್ಟಮೂರ್ತಿನಿರಸನ ಸ್ಥಲ | ೬. ಪರಕಾಯ ಸ್ಥಲ |
| ೭. ಸರ್ವಗತನಿರಸನ ಸ್ಥಲ | ೭. ಧರ್ಮಾಚಾರ ಸ್ಥಲ |
| ೮. ಶಿವಜಗನ್ಮಯ ಸ್ಥಲ | ೮. ಭಾವಾಚಾರ ಸ್ಥಲ |
| ೯. ಭಕ್ತದೇಹಿಕ ಲಿಂಗಸ್ಥಲ | ೯. ಜ್ಞಾನಾಚಾರ ಸ್ಥಲ |

ಅಂಗಸ್ಥಲದ ಪೂರ್ಣಜ್ಞಾನ ಹಾಗೂ ಆಚರಣೆಯಿಂದ (ಈ ಸ್ಥಲದಲ್ಲಿ) ಸಾಧಕನು ಭಗವದನುಗ್ರಹದ ಅವತರಣವನ್ನು ಅನುಭಾವಜ್ಞಾನವಾಗಿ ಹೊಂದುತ್ತಾನೆ. ಪರವಸ್ತುವೆ ಶ್ರೇಷ್ಠವೆಂದು ನಂಬಿ ಬಾಹ್ಯಸುಖವನ್ನು ತುಚ್ಛೀಕರಿಸಿ. ಧೀರನಾಗಿ, ನಿತ್ಯವಾದ ಶಿವಾನಂದ

---

೩೮ ಮಹಾಲಿಂಗದೇವ–'ಏಕೋತ್ತರಶತಸ್ಥಲ' (ಚರಸ್ಥಲ) ವ. ೧, ೬ ಹಾಗೂ ಪದ್ಯ
ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ' (ಚರಜಂಗಮಸ್ಥಲ) ವ.೧ ಹಾಗೂ ಪದ್ಯ
ಶಿವಯೋಗಿ ಶಿವಾಚಾರ್ಯ–ಸಿದ್ಧಾಂತ ಶಿಖಾಮಣಿ(ಚರಲಿಂಗಸ್ಥಲ)ಶ್ಲೋಕ ೫೮

ಸುಖದಲ್ಲಿ ಒಲವುಳ್ಳವನೆ **ವೀರಮಾಹೇಶ್ವರ**[೩೯] ಲೋಕದ ನಡೆ–ನುಡಿ ಬಳಕೆ ಅವನ ದಲ್ಲ; ಶಿವಪಥವಿಡಿದು ಅಜಾತನಾದವನು. ಆತನು ಹಿಡಿದುದನ್ನಾತ ಬಿಡನು, ನುಡಿದಂತೆ ನಡೆವನು. ಶಿವಜ್ಞಾನಾರೂಢನಾಗಿ ಲಿಂಗದಲ್ಲಿ ಮನಸ್ಸನ್ನಿರಿಸಿ, ಲಿಂಗದ ನುಡಿನಡೆಯುಳ್ಳವನಾಗಿರುತ್ತಾನೆ. ಮುಂದೆ ಛಲ–ನಿಯಮ–ವ್ರತದಲ್ಲಿ ನಿಶ್ಚಯ ಬುದ್ಧಿಯುಳ್ಳ ವೀರಮಾಹೇಶ್ವರನು ಪರವಸ್ತುವಿನ ಕುರುಹಾದ ಕರಸ್ಥಲದ ಲಿಂಗದಲ್ಲಿ ನಿಷ್ಠಾಪರನಾಗಲು **ಲಿಂಗನಿಷ್ಠಾಸ್ಥಲ**ವೆನ್ನಿಸುತ್ತದೆ.[೪೦] ನಂತರದ **ಪೂರ್ವಾಶ್ರಯನಿರಸನಸ್ಥಲದಲ್ಲಿ** ಮಾಹೇಶ್ವರನು ಜಾತಿ-ಜನನ-ರಜಉಚ್ಛಿಷ್ಟಸೂತಕಗಳನ್ನೂ ಕುಲ-ಛಲ-ತನು-ಮನ ನೆನಹು ಭಾವಗಳ ಸೂತಕಗಳನ್ನೂ ಅಳಿಯುತ್ತಾನೆ.[೪೧]ತದನಂತರದ **ವಾಗದ್ವೈತನಿರಸನ** (ಅಥವಾ ಸರ್ವಾದ್ವೈತನಿರಸನ) ಸ್ಥಲದಲ್ಲಿ ಅವನು ಶಿವಲಿಂಗಪೂಜಾದಿ ಕರ್ಮನಿಷ್ಠನಾಗಿ, ಪೂಜ್ಯನಾದ ಶಿವಲಿಂಗಕ್ಕೂ ಪೂಜಕನಾದ ಭಕ್ತನಿಗೂ ಭೇದವುಂಟೆಂದು ನಂಬುತ್ತಾನೆ;ಸರ್ವವೂ ಬ್ರಹ್ಮವೆಂಬ ಅದ್ವೈತಭಾವವನ್ನು ಅಲ್ಲಗಳೆಯುತ್ತಾನೆ.[೪೨] ಆಗ ಮನದ ಚಂಚಲವಳಿದು ಸರ್ವಾಂಗದಲ್ಲಿ ಲಿಂಗವು ವ್ಯಾಪಿಸಿದೆ ಎಂಬ ಜ್ಞಾನ ಸಂಪನ್ನನಾದ ಮಾಹೇಶ್ವರನಿಗೆ, ಆಹ್ವಾನ–ವಿಸರ್ಜನೆಗಳೆಲ್ಲಿ? ಅದು **ಆಹ್ವಾನ ನಿರಸನಸ್ಥಲ** ಇಲ್ಲಿ ಮಾಹೇಶ್ವರನ 'ಜ್ಞಾನವೆ ಪ್ರಸಾದಕಾಯ; ಜ್ಞೇಯವೆ ಚಿನ್ಮಯಲಿಂಗ' ಈ ಜ್ಞಾನ–ಜ್ಞೇಯಗಳ ಸಂಬಂಧವುಂಟಾಗಿ ಆತ ಶರಣನೆನ್ನಿಸಿಕೊಳ್ಳುತ್ತಾನೆ. ಇಂಥ ಮಾಹೇಶ್ವರನ ಪಥವೆಂತು?

ನಿಷ್ಠೆ ನಿಬ್ಬೆರಗು ಗಟ್ಟಿಗೊಂಡರೆ, ಏಕೋಭಾವದಲ್ಲಿ ಸೊಮ್ಮು ಸಂಬಂಧ. ಆಹ್ವಾನ ವಿಸರ್ಜನ, ದುರ್ಭಾವ ದುರ್ಬುದ್ಧಿಯು ಲಯವಾದಾತ ಮಾಹೇಶ್ವರ. ಗುರುಮುಖದಲ್ಲಿ ಶುದ್ಧವಾಗಿ ಪಂಚಭೂತದ ಹಂಗಡಗಿದರೆ, ಆತ ಮಾಹೇಶ್ವರನು. ಪರದೈವ, ಮಾನವ ಸೇವೆ, ಪರಸ್ತ್ರೀ, ಪರಧನವಂ ಬಿಟ್ಟು,

---

೩೯ ಮಹಾಲಿಂಗದೇವ–'ಏಕೋತ್ತರಶತಸ್ಥಲ' (ಪರಸ್ಥಲ) ವಚನ ೫, ೮, ೯

೪೦ ಶಿವಯೋಗಿ ಶಿವಾಚಾರ್ಯ'ಸಿದ್ಧಾಂತಶಿಖಾಮಣಿ' (ಮಾಹೇಶ್ವರಸ್ಥಲ) ಶ್ಲೋಕ ೧೫–೨೦;
ಮಹಾಲಿಂಗದೇವ–'ಏಕೋತ್ತರಶತಸ್ಥಲ' (ಮಾಹೇಶ್ವರಸ್ಥಲ) ವಚನ ೨,೩,೮, ೧೨

೪೧ ಮಹಾಲಿಂಗದೇವ–'ಏಕೋತ್ತರಶತಸ್ಥಲ' (ಲಿಂಗನಿಷ್ಠಾಸ್ಥಲ) ವ ೩,೪, ೭,೯
ಮೊಗ್ಗೆಯ ಮಾಯಿದೇವ–ಪದ 'ಏಕೋತ್ತರಶತಸ್ಥಲ' ಪದ್ಯ ೧೭

೪೨ ಮೊಗ್ಗೆಯ ಮಾಯಿದೇವ–ಪದ 'ಏಕೋತ್ತರಶತಸ್ಥಲ' ಪದ್ಯ–೧೮
ಮಹಾಲಿಂಗದೇವ–'ಏಕೋತ್ತರಶತಸ್ಥಲ' ಪುಟ ೮೧, ವಚನ–೪

ಏಕಲಿಂಗನಿಷ್ಠಾಪರನಾದರೆ ಆತ ಮಾಹೇಶ್ವರನು........[೪೨]

ಶಿವನಿಗೆ ಪಂಚಮಹಾಭೂತಗಳೂ, ಸೂರ್ಯ, ಚಂದ್ರ ಹಾಗೂ ಆತ್ಮರು-ಎಂಬ ಅಷ್ಟತನುಗಳಿರುವವೆಂಬ ನಂಬಿಕೆ ಪ್ರಸಿದ್ಧವಾಗಿದೆ. ಶಿವನು ಈ ಅಷ್ಟತನುಗಳಲ್ಲಿರುವನಲ್ಲದೆ ಆ ತನುಗಳೆ ಶಿವನಲ್ಲ; ಸರ್ವಗತನಾದ ಶಿವನು ಶಿವಶರಣನಿಗಾಗಿ ಕರಸ್ಥಲದಲ್ಲಿ ಇಷ್ಟಲಿಂಗ ರೂಪವಾಗಿ ಅವತರಿಸಿದ್ದಾನೆಂಬ ನಂಬಿಗೆಯೆ **ಅಷ್ಟಮೂರ್ತಿನಿರಸನ** ಸ್ಥಲವಾಗುತ್ತದೆ. ('ಕೂಡಲಸಂಗಾ,ನೀನು ನಿನ್ನಂತೆ, ಇವರೆಲ್ಲರೂ ನೀನಿರಿಸಿದಂತೆ![೪೪] ಮುಂದೆ, ಶಿವನು ಶರಣ ಭರಿತನು ಅಂದರೆ 'ಸದ್ಭಕ್ತರ ಭಾವದಲ್ಲಿಪ್ಪನು, ಮತ್ತೆಲ್ಲಿಯೂ ಇಲ್ಲ' ಎಂದು ನಿಶ್ಚಯಿಸಿ 'ಜಗಭರಿತಶಿವನೆಂಬುದನ್ನು ಅಲ್ಲಗಳೆಯುವುದರಿಂದ **ಸರ್ವಗತನಿರಸನಸ್ಥ**ಲವನ್ನಿಸುತ್ತದೆ.[೪೫] ಜಗತ್ತಿನಲ್ಲಿ ಶಿವನು ಹೊದ್ದಿಯೂ ಹೊದ್ದಂತೆ, ಬೆರೆಸಿಯೂ ಬೆರಸದಂತೆ ಇರುವನೆಂಬ ನಿಶ್ಚಯವೆ **ಜಗನ್ಮಯಸ್ಥ**ಲವಾಗುತ್ತದೆ. (ಶಿವ ಜಗವಾಗಬಲ್ಲ, ಜಗವಾಗದಿರಲೂ ಬಲ್ಲ; ಶಿವ ರೂಪಾಗಬಲ್ಲ, ರೂಪಾಗದಿರಲು ಬಲ್ಲ![೪೬] ಅಲ್ಲದೆ, ಶಿವನನ್ನು

---

೪೩ ಶಿವಯೋಗಿ ಶಿವಾಚಾರ್ಯ–'ಸಿದ್ಧಾಂತ ಶಿಖಾಮಣಿ' (ಸರ್ವಾದ್ವೈತನಿರಸನ ಸ್ಥಲ ಶ್ಲೋಕ ೪೦, ೪೧
ಡಾ. ಫ. ಗು. ಹಳಕಟ್ಟಿ–'ವಚನಶಾಸ್ತ್ರಸಾರ' II, ಪುಟ ೩೭೬–೩೭೭
'ಬ್ರಹ್ಮ ನಾನೆಂದು ಬರಿಯ ವಾಗದ್ವೈತದಲ್ಲಿ ಫಲವಿಲ್ಲ.......'
ಏಕೆಂದರೆ– ಕಾಮಕ್ರೋಧಾದಿಗಳಿರುವವರೆಗೆ 'ಬ್ರಹ್ಮವಾಗಿದ್ದೇನೆ' ಎಂಬ ವಾಗದ್ವೈತದಲ್ಲಿ ಹುರುಳಿಲ್ಲವೆಂಬುದು ಶಿವಶರಣರ ಅಭಿಮತ
ಮಹಾಲಿಂಗದೇವ–'ಏಕೋತ್ತರಶತಸ್ಥಲ' (ವಾಗದ್ವೈತನಿರಸನಸ್ಥಲ) ಪುಟ ೧೪ ವಚನ ೨, ೩, ೧೫

೪೪ ಮಹಾಲಿಂಗದೇವ–'ಏಕೋತ್ತರಶತಸ್ಥಲ' (ಆಹ್ವಾನನಿರಸನಸ್ಥಲ) ಪುಟ ೮೮, ವಚನ ೫,೧೦;
'ವಚನಶಾಸ್ತ್ರಸಾರ' II ಪುಟ ೩೭೯

೪೫ ಸಿದ್ಧಾಂತ ಶಿಖಾಮಣಿ (ಅಷ್ಟಮೂರ್ತಿನಿರಸನಸ್ಥಲ) ಶ್ಲೋಕ ೫೦
ಮಹಾಲಿಂಗದೇವ–'ಏಕೋತ್ತರಶತಸ್ಥಲ'(ಅಷ್ಟಮೂರ್ತಿನಿರಸನ ಸ್ಥಲ) ವ. ೧–೬
'ವಚನಶಾಸ್ತ್ರಸಾರ' II ಪುಟ ೩೮೩–೩೮೪,
ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ' ಪುಟ ೩೦–೩೨
ಎಲ್. ಬಸವರಾಜು–'ಶಿವದಾಸಗೀತಾಂಜಲಿ' ಪುಟ ೩೫ (ಪದ್ಯ)

೪೬ ಮಹಾಲಿಂಗದೇವ–'ಏಕೋತ್ತರಶತಸ್ಥಲ' (ಸರ್ವಗತನಿರಸನಸ್ಥಲ) ವ. ೧–೬
'ಜಗಭರಿತ ಶಿವನೆಂಬ ಶಬ್ದಕ್ಕೆ ಅಂಗವಾಸಲೊಲ್ಲವೆ
ಶರಣಭರಿತನಾದ ಕೂಡಲಚೆನ್ನಸಂಗಯ್ಯ!'

→

ಧರಿಸಿದ ವೀರಮಾಹೇಶ್ವರನಿಗೆ 'ಲಿಂಗಶರಣನಲ್ಲಿ ಭಾವಭೇದವಿಲ್ಲವೆಂಬ ಆಚಾರಕ್ಕೆ ಕಾರಣವಾದ **ಭಕ್ತದೇಹಿಕಲಿಂಗಸ್ಥಲವು** ಕೊನೆಯದಾಗುತ್ತದೆ. ಇವು ಮಾಹೇಶ್ವರನ ಅಂಗ ಸ್ಥಲಗಳ ಲಕ್ಷಣಗಳು ಹಾಗೂ ಆಚರಣೆಗಳು.

ಗುರುಕೃಪೆಗೆ ಪಾತ್ರನಾದ ಮಾಹೇಶ್ವರನ ಲಿಂಗಸ್ಥಲದಲ್ಲಿ ಮೊದಲು ಲಿಂಗವು **ಕ್ರಿಯಾಗಮ** ಸ್ವರೂಪನಾಗಿ ಅವತರಿಸುತ್ತದೆ. ಆದ್ದರಿಂದ ಮಾಹೇಶ್ವರನು ಹೊತ್ತಾನೆ ಎದ್ದು, ಅಗ್ಗವಣಿಪತ್ರೆಯ ತಂದು ಅರುಣೋದಯದಲ್ಲಿ ಲಿಂಗವನ್ನು ಪೂಜಿಸಲು ಸಿದ್ಧನಾಗುತ್ತಾನೆ. ಅಷ್ಟವಿಧಾರ್ಚನೆಯೊಡನೆ ಶಿವತತ್ತ್ವಗೀತವ ಹಾಡಿ, ಶಿವನೆದುರು ಭಕ್ತಿ ಜ್ಞಾನ ಸಂಭಾಷಣೆಯನ್ನು ಮಾಡುತ್ತಾನೆ. ಉದಯಕಾಲದಲ್ಲಿ ಲಿಂಗದರ್ಶನವನ್ನೂ ಹಗಲಿನಲ್ಲಿ ಜಂಗಮದರ್ಶನವನ್ನೂ ಪಡೆದು ಸದಾಚಾರ ಸಂಪನ್ನನಾಗುತ್ತಾನೆ. ಸತ್ಯವ ನುಡಿದು ಸಹಜದಲ್ಲಿ ನಡೆದು ಶಿವಲಿಂಗವನ್ನರಿಯುತ್ತಾನೆ. ಈ ಪ್ರವೃತ್ತಿಯು ಗುರು ಕಾರುಣ್ಯದಿಂದ ದೈವಿಶಕ್ತಿಪಾತವುಂಟಾದುದಕ್ಕೆ ನಿದರ್ಶನ, ಬಳಿಕ ಮಾಹೇಶ್ವರನಲ್ಲಿ ಲಿಂಗವು ನಿಷ್ಠಾಸ್ವರೂಪವ ತಾಳಿ **ಭಾವಾಗಮ**ಸ್ಥಲವಾಗುತ್ತದೆ. ಈ ಸ್ಥಲದಲ್ಲಿರಲು, ಕರಸ್ಥಲದಲ್ಲಿ ಶಿವಲಿಂಗವು ತೊಳಗಿಬೆಳಗುತ್ತದೆ; ಲಿಂಗದಲ್ಲಿ ತನು-ಮನ-ದೃಷ್ಟಿನಟ್ಟು ಶಿವಸುಖದಲ್ಲಿ ಓಲಾಡುವಂತಾಗುತ್ತದೆ. ಅಶಿವ ಕರ್ಮಗಳು ವಾರಿಕಲ್ಲಂತೆ ಕರಗುತ್ತವೆ. ಆಗ, 'ಭ್ರಮದ್ಭ್ರಮರಚಿಂತಾಯಾಂ ಕೀಟೋಪಿ ಭ್ರಮರಾಯತೇ' ಎಂಬ ವೀರಾಗಮ ವಚನದಂತ ಶಿವಲಿಂಗಧ್ಯಾನದಲ್ಲಿದ್ದ ಚಿತ್ತವು ಶಿವತ್ವವನ್ನು ಹೊಂದಲು ಯೋಗ್ಯವಾಗುತ್ತದೆ. ಭಾವಾಗಮಸಂಪನ್ನನಾದ ಶಿವಯೋಗಿಯ ಜ್ಞಾನ ಚಿನ್ಹವು ಲೌಕಿಕದ ಮುಕ್ತಿಗೆ ಕಾರಣವಾದ ಶಾಸ್ತ್ರವಾಗಿ ಪರಿಣಮಿಸುತ್ತದೆ. ಅದು **ಜ್ಞಾನಾಗಮಸ್ಥಲ.** ಅಂದರೆ ನಿಷ್ಠೆಯುಳ್ಳ ಮಾಹೇಶ್ವರನ ಭಾವಕ್ಕೆ ಸದ್ಭಾವ ಸನ್ನಿಹಿತವಾದ ಲಿಂಗದ ಮಹಾಜ್ಞಾನದ ಆಗಮನವು **ಜ್ಞಾನಾಗಮ**ಸ್ಥಲವಾಗುತ್ತದೆ.[೪೭] ಶಿವಯೋಗಿಯು ಕ್ರಿಯಾ-

---

→'ಉತ್ಪತ್ತಿ ಸ್ಥಿತಿ-ಲಯ-ಪ್ರಳಯರಹಿತನು,
ಸದ್ಭಕ್ತರಲ್ಲಿರ್ಪನಲ್ಲದೆ ಮತ್ತೆಲ್ಲಿಯೂ ಇಲ್ಲ, ಕೂಡಲಚೆನ್ನಸಂಗಯ್ಯ!'
"ಇದು ಕಾರಣ ಸದ್ಭಕ್ತ ಸದಾಚಾರದಲ್ಲಿರ್ಪನು........"
ಸಿದ್ಧಲಿಂಗೇಶ್ವರ 'ಏಕೋತ್ತರಶತಸ್ಥಲ' (ಸರ್ವಗತನಿರಸನಸ್ಥಲ) ಪದ್ಯ—
'ಎಲ್ಲ ಜೀವಂಗಳೊಳಗಿಲ್ಲ ಶಿವ ಸದ್ಭಕ್ತ
ರಲ್ಲಿ ಮಾಹೇಶ್ವರ ಪ್ರಸಾದಿಗಳಲಿ|
ತಲ್ಲಿಂಗ ಪ್ರಾಣಾಂಗದಲ್ಲಿ ಶರಣೈಕ್ಯ ನಿಜ
ದಲ್ಲಿ ಕೂಡಲಚನ್ನಸಂಗಭರಿತ|
ಮಹಾಲಿಂಗದೇವ 'ಏಕೋತ್ತರಶತಸ್ಥಲ' ಪುಟ ೯೯-೧೦೧

೪೭ ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' ಶ್ಲೋಕ ೨೪, ೨೫. →

ಜ್ಞಾನ-ಭಾವಗಳಿಗೆ ಅವನ ದೇಹವು ಸಾಧನವಾಗಿದೆ. ಶರೀರಮಾದ್ಯಂ ಖಲು ಧರ್ಮ ಸಾಧನಂ ಕಾರಣ ಅದು ಪ್ರಸಾದಕಾಯವೂ ಮಂತ್ರಪಿಂಡವೂ ಆಗಿ ಪರಿಣಮಿಸಿ, ಭೋಗ ಮೋಕ್ಷಗಳಿಗೆ ಕಾರಣವಾಗಿ ಲಿಂಗಕಾಯ ಸಂಬಂಧವನ್ನು ತಳೆಯುತ್ತದೆ. ಅದುವೆ **ಸಕಾಯಸ್ಥಲ.** ಶರಣರು ಬೋಧಿಸುವಂತೆ ಈ ಸ್ಥಲದಲ್ಲಿ-ಶಿವಭಕ್ತರ ಪ್ರಸಾದದಿಂದ ತನುವೂ ಅಸಂಖ್ಯಾತರ ನೆನಹಿನಿಂದ ಮನವೂ, ಸಕಲಗಣಂಗಳ ನಿರೀಕ್ಷಣೆಯಿಂದ ಚಕ್ಷುಗಳೂ, ಅವರ ಕೀರ್ತನೆಯಿಂದ ಶ್ರೋತ್ರವೂ, ಶುದ್ಧವಾಗುತ್ತವೆ, ಲಿಂಗಪೂಜೆಯಿಂದ ಭವವಳಿಯುತ್ತದೆ.[೪೮] ನಂತರ ಅನವರತವೂ ಸೋಹಂಭಾವ ಪೂರ್ಣನಾಗಿ ಲಿಂಗದ ಅರಿವಿನಲ್ಲಿರುವ ಶಿವಶರಣನು ತನ್ನ ಶರೀರದ ಬಾಧೆ ದೇಹಾಭಿಮಾನಗಳನ್ನು ಕಳೆದುಕೊಳ್ಳುತ್ತಾನೆ. ಅದು **ಅಕಾಯಸ್ಥಲ.**[೪೯] ಪರಶಿವನ ಸಕಲ ನಿಃಕಲಾತೀತವಾದ ಅರಿವು ಮಾಹೇಶ್ವರನಲ್ಲಿ ಸದಾಸನ್ನಿಹಿತವಾಗಿರುವುದೆ **ಪರಕಾಯಸ್ಥಲ**ವೆನಿಸುತ್ತದೆ. ಇಂಥ ಶರಣನ ಇರವಿಗೆ ಉದಾಹರಣೆ—

"ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ಸಂಭಾಷಣೆ,
ತೆರಹಿಲ್ಲದ ವಿಶ್ರಾಮಸ್ಥಾನಸುಖದ ಸುಖಿ, ತೆರಹಿಲ್ಲದ ಗಂಭೀರ ಸುಖಿ.
ತೆರಹಿಲ್ಲದ ನಂಬಿದ ಸ್ವಾನುಭಾವ ಸುಖಿ
ತೆರಹಿಲ್ಲದ ಮಹಾಮಹಿಮೆ ತೆರಹಿಲ್ಲದ ವಿಚಾರ
ಕೂಡಲಸಂಗಾ, ನಿಮ್ಮ ಶರಣಂಗೆ!"[೫೦]

ಲೋಕದ ಸಕಲ ಜನತೆಗೆ ಹಿತಕರವಾಗುವ ವೀರಮಾಹೇಶ್ವರನ ಸದ್ಧರ್ಮ ಚರಿತ್ರೆಯೆ **ಧರ್ಮಾಚಾರಸ್ಥಲ.** ಇಲ್ಲಿ ಸತ್ಯವಚನ, ನುಡಿದಂತೆ ನಡೆ, ಪ್ರಾಣಿಗಳಲ್ಲಿ ದಯೆ, ಸದಾಚಾರ-ಸದುವಿನಯ, ಸಕಲೇಂದ್ರಿಯವಶಿತ್ವ ಹಾಗೂ ಅಂತರಂಗ ಬಹಿರಂಗ ಶುದ್ಧಿಗಳು

---

→ ಪರಸ್ಯ ಜ್ಞಾನಚಿನ್ಹಾನಿ ಯಾನಿ ಸಂತಿ ಶರೀರಿಣಾಂ।
ತಾನಿ ಜ್ಞಾನಾಗಮತ್ವೇನ ಪ್ರವರ್ತಂತೇ ವಿಮುಕ್ತಯೆ॥
ಮಹಾಲಿಂಗದೇವ-'ಏಕೋತ್ತರಶತಸ್ಥಲ' (ಜ್ಞಾನಾಗಮಸ್ಥಲ) ಪು. ೨೪೨, ವ. ೪, ೬
ಮೊಗ್ಗೆಯ ಮಾಯಿದೇವ ಪದ 'ಏಕೋತ್ತರಶತಸ್ಥಲ' (ಪದ್ಯ)

೪೮ ಮಹಾಲಿಂಗದೇವ-'ಏಕೋತ್ತರಶತಸ್ಥಲ'(ಸಕಾಯಸ್ಥಲ) ಪು.೨೪೫-೨೪೬, ವ.೨

೪೯ ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' (ಅಕಾಯಸ್ಥಲ) ಶ್ಲೋಕ ೪೩-೪೭;
ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೨೫೧, ವ. ೧೦

೫೦ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೨೫೪, ವ. ೮ ಶಿವಯೋಗಿ ಶಿವಾಚಾರ್ಯ 'ಸಿದ್ಧಾಂತ ಶಿಖಾಮಣಿ' (ಪರಕಾಯಸ್ಥಲ) ಶ್ಲೋಕ ೪೯-೫೬

ಮಾಹೇಶ್ವರನಲ್ಲಿ ಸ್ಥಿತವಾಗಿರುತ್ತವೆ.[೫೧] ಆತನ ಸಧ್ಭಾವ ಚಾರಿತ್ರ್ಯವೆ **ಭಾವಾಚಾರ ಸ್ಥಲ.** ಇಲ್ಲಿ ಲಿಂಗವ ನೆನೆದು ಘನವೂ ಶಬ್ದ ಮುಗ್ಧಸ್ಥಿತಿಯೂ ಪ್ರಾಪ್ತವಾಗುತ್ತದೆ; ಮಾಹೇಶ್ವರನು ಮಹಾಜ್ಞಾನ ರೂಪನೂ ಆಗುತ್ತಾನೆ. ಅಂದರೆ ಪರಶಿವ ತತ್ತ್ವದ ಸಾಕ್ಷಾತ್ಕಾರದಿಂದ **ಜ್ಞಾನಾಚಾರ**ವು ಸ್ಫುಟವಾಗಿ ತೋರುತ್ತದೆ.[೫೨]

III ಮನಸ್ಸಿನ ಪರಿಶುದ್ಧಿಯಿಂದ ಪಾಪಬಂಧವನ್ನು ನಾಶಗೊಳಿಸಿದ ಮಾಹೇಶ್ವರನು ತನ್ನ ಕಾಯವೆ ಲಿಂಗಕಾಯವಾಗಿ, ಆ ಲಿಂಗಕಾಯವೆ ಭಕ್ತಕಾಯನಾಗುತ್ತಾನೆ. ಹಾಗೂ ಪ್ರಸಾದಿಸ್ಥಲವನ್ನೇರಿ ಅವಧಾನದ ಮುಖಾಂತರ ಮನಃ ಪ್ರಸಾದ (ಚಿತ್ತ ನೈರ್ಮಲ್ಯ)ವನ್ನು ಪಡೆಯಲು ನಿಶ್ಚಯಿಸುತ್ತಾನೆ. ಪ್ರಸಾದಿ ಸ್ಥಲದಲ್ಲಿ ಒಟ್ಟು ೧೬ ಉಪಸ್ಥಲಗಳಿದ್ದು ಅವುಗಳಲ್ಲಿ ೭ ಅಂಗಸ್ಥಲಗಳೂ ೯ ಲಿಂಗಸ್ಥಲಗಳೂ ಗೋಚರಿಸುತ್ತವೆ.

ಪ್ರಸಾದಿಸ್ಥಲ

**ಅಂಗಸ್ಥಲ**

೧. ಪ್ರಸಾದಿ ಸ್ಥಲ
೨. ಗುರುಮಹಾತ್ಮೆಯ ಸ್ಥಲ
೩. ಲಿಂಗಮಹಾತ್ಮೆಯ ಸ್ಥಲ
೪. ಜಂಗಮಮಹಾತ್ಮೆಯ ಸ್ಥಲ
೫. ಭಕ್ತಮಹಾತ್ಮೆಯ ಸ್ಥಲ
೬. ಶರಣಮಹಾತ್ಮೆಯ ಸ್ಥಲ
೭. ಪ್ರಸಾದಮಹಾತ್ಮೆಯ ಸ್ಥಲ

**ಲಿಂಗಸ್ಥಲ**

೧. ಕಾಯಾನುಗ್ರಹ ಸ್ಥಲ
೨. ಇಂದ್ರಿಯಾನುಗ್ರಹ ಸ್ಥಲ
೩. ಪ್ರಾಣಾನುಗ್ರಹ ಸ್ಥಲ
೪. ಕಾಯಾರ್ಪಿತ ಸ್ಥಲ
೫. ಕರಣಾರ್ಪಿತ ಸ್ಥಲ
೬. ಭಾವಾರ್ಪಿತ ಸ್ಥಲ
೭. ಶಿಷ್ಯಸ್ಥಲ
೮. ಶುಶ್ರೂಷಾ ಸ್ಥಲ
೯. ಸೇವ್ಯಸ್ಥಲ

ಇಲ್ಲಿ ಪ್ರಸಾದಿಯ ಅಂಗಸ್ಥಲದ ೭ ಹಂತಗಳು ಸದಾಚಾರ ಸಮೂಹದ ಮಹತ್ವವನ್ನು ನಿರೂಪಿಸುತ್ತವೆ.

**ಪ್ರಸಾದಿಸ್ಥ**ಲದಲ್ಲಿ ಶಿವಶರಣನು ತನಗೆ ಸಂಬಂಧಪಟ್ಟ ಸಕಲ ಪಡಿಪದಾರ್ಥಗಳನ್ನು ಇಷ್ಟ-ಪ್ರಾಣ-ಭಾವಲಿಂಗಗಳಿಗೆ ಅರ್ಪಿಸುತ್ತಾನೆ; ಪುನಃ ಅವನ್ನು ಶಿವಪ್ರಸಾದ

---

೫೧ ಮಹಾಲಿಂಗದೇವ-'ಏಕೋತ್ತರಶತಸ್ಥಲ' (ಧರ್ಮಾಚಾರಸ್ಥಲ) ಪುಟ ೨೫೭-೨೫೯ ಸಿದ್ಧಲಿಂಗೇಶ್ವರ 'ಏಕೋತ್ತರ ಶತಸ್ಥಲ' (ಧರ್ಮಾಚಾರಸ್ಥಲ) ಮೊಗ್ಗೆಯ ಮಾಯಿದೇವ 'ಪದ ಏಕೋತ್ತರಶತಸ್ಥಲ' ಪದ್ಯ)

೫೨ ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' (ಜ್ಞಾನಾಚಾರಸ್ಥಲ) ಶ್ಲೋಕ ೭೮ ಮೊಗ್ಗೆಯ ಮಾಯಿದೇವ 'ಪದ ಏಕೋತ್ತರಶತಸ್ಥಲ' ಪದ್ಯ ೬೨

ವಾಗಿ ಸ್ವೀಕರಿಸುತ್ತಾನೆ; ಗುರು–ಲಿಂಗ–ಜಂಗಮರ ಪ್ರಸಾದವನ್ನೂ ಪಡೆಯುತ್ತಾನೆ. ಆದರಿಂದ ಅಂತರಂಗ–ಬಹಿರಂಗ ಶುದ್ಧಿಯಾಗುತ್ತದೆ. ವಿಶೇಷವಾಗಿ ಮನಃಪ್ರಸಾದ ಸಿದ್ಧಿ ಸಾಧ್ಯವಾಗಿ ಪ್ರಸಾದಿ ಎನ್ನಿಸುತ್ತಾನೆ.[೫೩] ಪ್ರಸಾದದಲ್ಲಿ ನಿಷ್ಠೆಯುಳ್ಳವನು ತಿಳಿಯ ಬೇಕಾದ ಗುರುಮಹತ್ವವು **ಗುರುಮಹಾತ್ಮ್ಯ ಸ್ಥಲ**ವೆನ್ನಿಸುತ್ತದೆ. ಭಕ್ತಾನುಗ್ರಾಹಿ ಯಾದ ನಿರಾಕಾರ ಪರಶಿವನೆ ಸಾಕಾರ ಗುರುರೂಪವನ್ನು ಧರಿಸಿ ಬಂದಿರುವುದರಿಂದ, ಅವನು ಲೋಕಾನುಗ್ರಹಕ್ಕೂ ಭೋಗ–ಮೋಕ್ಷಾದಿಗಳಿಗೂ ಕಾರಣನು. ಶಿವಸ್ವರೂಪನೂ ಶಿವಾಚಾರಸ್ಥಾಪಕನೂ, ಶಿವಜ್ಞಾನಪ್ರದನೂ ಆದ ಗುರುವು ಸಾಮಾನ್ಯನಲ್ಲ. ಆದ್ದರಿಂದ ಅವನನ್ನು ಶ್ರೇಯಸ್ಸಿಗಾಗಿ ಏಕಚಿತ್ತದಿಂದ ಪೂಜಿಸಬೇಕೆಂಬುದು ಶರಣರ ಉಪದೇಶ.[೫೪] ಏಕೆಂದರೆ—

"ಗುರುವಚನವಲ್ಲದೆ ಲಿಂಗವೆಂದೆನಿಸದು[೫೫]
ಗುರುವಚನವಲ್ಲದೆ ನಿತ್ಯವೆಂದೆನಿಸದು
ಗುರುವಚನವಲ್ಲದೆ ನೇಮವೆಂದೆನಿಸದು........"
"ಗುರುಕಾರುಣ್ಯವೆ ಸದಾಚಾರ, ಗುರುಕಾರುಣ್ಯವೆ ಶಿವಾಚಾರ...."
"ಆಕಾರ ನಿರಾಕಾರ ಸಾಕಾರ ಸನುಮತನು
ಮಾಕರಿಸುವವನಲ್ಲ ಮನದಿಚ್ಛೆಗೆ
ಆಕಾರ ನಿರಾಕಾರ ಸಾಕಾರ ಸನುಮತದ
ಏಕಾಂತದೊಳಗಿಪ್ಪ ನಿಜಸ್ವರೂಪಂಗೆ

ಬಳಿಕ ಗುರುವಿನ ಕೃಪೆಯಿಂದ ಗೋಚರಿಸಿದ ಶಿವಲಿಂಗದ ಮಹತ್ವವು **ಶಿವಲಿಂಗ ಮಹಾತ್ಮ್ಯಸ್ಥಲ**ವೆನ್ನಿಸುತ್ತದೆ. ಗುರುವು ಅನುಗ್ರಹಿಸಿದ ಜ್ಞಾನಚಕ್ಷುವಿನಿಂದ ಶಿವಜ್ಞಾನದ

---

೫೩ ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ' (ಗುರುಪ್ರಸಾದಿಸ್ಥಲ) ಪುಟ ೩೫ ಶಿವಯೋಗಿ ಶಿವಾಚಾರ್ಯಕೃತ 'ಸಿದ್ಧಾಂತ ಶಿಖಾಮಣಿ' (ಪ್ರಸಾದಿಸ್ಥಲ) ಶ್ಲೋಕ ೨–೧೮

೫೪ ಶಿವಯೋಗಿ ಶಿವಾಚಾರ್ಯಕೃತ–'ಏಕೋತ್ತರಶತಸ್ಥಲ' (ಗುರುಮಹಾತ್ಮ್ಯಸ್ಥಲ) ಶ್ಲೋಕ ೧೯–೨೪ ಮಹಾಲಿಂಗದೇವ 'ಏಕೋತ್ತರಶತಸ್ಥಲ' ಪುಟ ೧೧೧ ವ. ೪, ೫ ಹಾಗೂ ಪದ್ಯ ಮೊಗ್ಗೆಯ ಮಾಯಿದೇವ 'ಪದ ಏಕೋತ್ತರಶತಸ್ಥಲ'

೫೫ ಮಹಾಲಿಂಗದೇವ–'ಏಕೋತ್ತರಶತಸ್ಥಲ' ಪುಟ ೧೧೬ ವ. ೧೦, ೧೨ ಹಾಗೂ ಪದ್ಯ

'ಪರಕ್ಕೆಪರವಾ ಘನಕ್ಕೆ ಮಹಾಘನವು
ವರಕೆ ವರ ನಿಜವಾಙ್ಮನೋತೀತಗತಿಶಯವು
ಸರಿಯಿಲ್ಲದ ಪ್ರತಿಮಲಿಂಗದ ಮಹಾತ್ಮೆಯಿಂದಿಲ್ಲ ಮೇಲಾದ ಘನವು॥ಪಲ್ಲ॥

ಕುರುಹೂ ಸರ್ವಕಾರಣವೂ ಆದ ಶಿವಲಿಂಗವನ್ನು ಅರಿಯಬಹುದಾಗಿದೆ. ಶರಣರ ದೃಷ್ಟಿಯಲ್ಲಿ ಶಿವಲಿಂಗಮಹಾತ್ಮೆ ಹೀಗಿದೆ—

"ವಟವೃಕ್ಷ ವಟಫಲಕೋಟಿಯ ನುಂಗಿಪ್ಪಂತೆ
ಸಟೆಯಿಂದಾದ ಅಜಾಂಡಕೋಟಿಯ ನುಂಗಿಪ್ಪದೇವಾ
ದಿಟಪುಟವಾಗಿ ಎನ್ನ ಕಣ್ಣು ಮನ ಕರಸ್ಥಲಕ್ಕೆ ಬಂದು ಪ್ರಕಟವಾಗಿದೆ
ಮಝಬಾಪ್ಪು, ಮಝು ಭಾಪು ಲಿಂಗವೆ!

....................................

ನಿಮ್ಮ ಮುಟ್ಟಿ ಸೃಷ್ಟಿ-ಸ್ಥಿತಿ-ಪ್ರಳಯಕ್ಕೆ ಹೊಱಗಾದೆನಯ್ಯಾ
ನಿಮ್ಮ ಮುಟ್ಟಿದ ಕಾರಣ, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.[೫೬]

ಶಿವಶರಣನು ಶ್ರೀಗುರು ಮಹತ್ವ ಲಿಂಗಮಹತ್ವಗಳನ್ನರಿತ ಬಳಿಕ **ಜಂಗಮಮಹತ್ವ**ವನ್ನರಿವುದು ವೀರಶೈವ ದರ್ಶನದ ದೃಷ್ಟಿಯಿಂದ ಅತ್ಯಾವಶ್ಯಕ. ಜ್ಞಾನಕ್ರಿಯಾಶಕ್ತಿಗಳಿಂದ ಜಗತ್ತನ್ನು ಬೆಳಗುವ ಪರಶಿವನೆ ತಾನೆಂದು ಸ್ವಸ್ವರೂಪವನ್ನು ಅರಿತವನು ಜಂಗಮನು,[೫೭] ಜಂಗಮವು ಲಿಂಗದ ಪ್ರಾಣ; ಜಂಗಮತ್ವವ ಸಾಧಿಸಿದವನು ಸ್ವಯಲಿಂಗವಾಗಿರುತ್ತಾನೆ; ಜಂಗಮವಿದ್ದಲ್ಲಿ ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದ-ಅನುಭಾವ ಮುಂತಾದವು ಸನ್ನಿಹಿತವಾಗುತ್ತವೆ; ಶಿವನೆ ಜಂಗಮರೂಪವನ್ನು ಧರಿಸಿ ಲೋಕವನ್ನು ಉದ್ಧರಿಸಲು ಸಂಚರಿಸುತ್ತಾನೆಂದು ವೀರಶೈವರು ನಂಬುತ್ತಾರೆ.[೫೮] ಶರಣ ಜಂಗಮ ಪ್ರಸಾದವನ್ನು ಸ್ವೀಕರಿಸಿ ಸುಖಿಯಾದ ಪ್ರಸಾದಿಯು ಗುರು-ಲಿಂಗ-ಜಂಗಮ ಮಹಾತ್ಮೆಯ ತಿಳಿದು ಅವುಗಳಲ್ಲಿ ಕೇವಲ ಭಕ್ತಿಯನ್ನಾಚರಿಸುವ ಕಾರಣ **ಭಕ್ತಿಮಹಾತ್ಮೆಯ ಸ್ಥಲ** ಗೋಚರಿಸುತ್ತದೆ. ಭಕ್ತನು ಇರವು ಶ್ರೇಷ್ಠವೆಂಬುದನ್ನು ಶರಣರು ಹೇಳುತ್ತಾರೆ—

"ಕಾಮಿಸಿದಲ್ಲದೆ ಕೊಡದು ಕಾಮಧೇನು
ಕಲ್ಪಿಸಿದಲ್ಲದೆ ಕೊಡದು ಕಲ್ಪತರು

---

೫೬ ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' (ಜಂಗಮಮಹಾತ್ಮೆಸ್ಥಲ) ಶ್ಲೋಕ ೩೬

ಜ್ಞಾನಂತ್ಯತಿಶಯಾದ್ಯೇತು ಶಿವಂ ವಿಶ್ವಪ್ರಕಾಶಕಂ।
ಸ್ವಸ್ವರೂಪತಯಾತೇತು ಜಂಗಮಾ ಇತಿ ಕೀರ್ತಿತಾಃ॥
ವಚನಶಾಸ್ತ್ರಸಾರ II ಪುಟ ೩೯೧ff

೫೭ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೧೨೦-೧೨೨ ಸಿದ್ಧಲಿಂಗೇಶ್ವರ 'ಏಕೋತ್ತರಶತಸ್ಥಲ' (ವೃತ್ತವನ್ನು ನೋಡು)

೫೮ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೧೨೩ ವ. ೫, ೭, ೮

ಚಿಂತಿಸಿದಲ್ಲದೆ ಕೊಡದು ಚಿಂತಾಮಣಿ
ಭಾವಿಸಿದಲ್ಲದೆ ಕೊಡನು ಶಿವನು
ಕಾಮಿಸದೆ, ಕಲ್ಪಿಸದೆ, ಚಿಂತಿಸದೆ, ಭಾವಿಸದೆ ಕೊಡಬಲ್ಲರು
ನಮ್ಮ ಕೂಡಲಸಂಗನ ಶರಣರು!"
"ಭಕ್ತನಿದ್ದ ಠಾವೇ ದೇವಲೋಕ,"
"ಭಕ್ತನಂಗಣವೆ ವಾರಣಾಸಿ!, ಶಿವಭಕ್ತನ ಕಾಯವೆ ಕೈಲಾಸ!"೪೯

ಪ್ರಸಾದಿಯ ಅಂತರಂಗ-ಬಹಿರಂಗದಲ್ಲಿ ಪರಿಣಾಮ (ತೃಪ್ತಿಯ) ಪ್ರಸಾದದ ಆನಂದವು ತೋರಿ, ಶಿವನೊಬ್ಬನೆ ತನ್ನ ರಕ್ಷಕನೆಂಬ ದೃಢವಿಶ್ವಾಸ ಮೂಡುತ್ತದೆ. ಆತ ಶಿವನನ್ನು ಆಶ್ರಯಿಸುತ್ತಾನೆ. ಶಿವನನ್ನು ಮೊರೆಹೊಕ್ಕು ಶರಣ ನೆನೆಸುತ್ತಾನೆ. ಅಂಥ ಶರಣನ ಮಹತ್ವದ ದ್ಯೋತಕವಾಗಿ **ಶರಣ ಮಹಾತ್ಮ್ಯೆಯಸ್ಥಲ** ವ್ಯಕ್ತವಾಗುತ್ತದೆ. ಈ ಸ್ಥಲದಲ್ಲಿ ಶರಣನಿಗೆ ಭಯವಿಲ್ಲ ಮನ-ವಚನ-ಕಾಯದಲ್ಲಿ ಆಸೆಯಿಲ್ಲ; ಅರ್ಥ-ಪ್ರಾಣ-ಅಭಿಮಾನದಲ್ಲಿ ಲೋಭವಿಲ್ಲ ಇಂದ್ರಿಯಗಳ ಗೆದ್ದು ಲಿಂಗ-ಜಂಗಮ-ಪ್ರಸಾದ ಸಾರಾಯನಾದ ಮಹಿಮನೆ ಶರಣನು. ಅವನು ಸ್ವತಂತ್ರನು; ಅವನಿದ್ದ ಕ್ಷೇತ್ರವೆ ವಾರಣಾಸಿ ಅವಿಮುಕ್ತಿ ಕ್ಷೇತ್ರ. ಅಂಥ ಸತ್ಯಶುದ್ಧ ಶರಣನು ನಿದ್ರೈಗೈದುದೆ ಜಪ, ಎದ್ದು ಕುಳಿತುದೆ ಶಿವರಾತ್ರಿಯ ಜಾಗರಣೆ, ನಡೆದುದೆ ಪಾವನ ನುಡಿದುದೆ ಶಿವತತ್ತ್ವ. ಅನಾಯಾಸವಾಗಿ ನಿರಂಜನನಾದ ಅವನ ಕಾಯವೆ ಕೈಲಾಸ.೫೦ ಇದು ಪ್ರಸಾದಿಯ ಅಂಗಸ್ಥಲದಲ್ಲಿದ್ದ ಶರಣನ ಮಹಾತ್ಮೆ. ನಂತರ ಪ್ರಸಾದಿಯು ಸ್ವೀಕರಿಸುವ ಪರಿಣಾಮ ಪ್ರಸಾದದ ಮಹಿಮೆಯನ್ನು **ಪ್ರಸಾದ ಮಹಾತ್ಮೆಯಸ್ಥ**ಲದಲ್ಲಿ ಕಾಣುತ್ತೇವೆ. ಶಿವಲಿಂಗ ನಿಷ್ಠೆಯುಳ್ಳವನೂ ಗುರುಸೇವಾತತ್ಪರನೂ, ಪ್ರಸಾದದಲ್ಲಿ ಶ್ರದ್ಧೆಯುಳ್ಳವನಾಗಿರುತ್ತಾನೆ. 'ನಂಬಿದರೆ ಪ್ರಸಾದ ನಂಬದಿರ್ದಡೆ ವಿಷ'ವೆಂಬುದು ಅವನಿಗೆ ಗೊತ್ತಿದೆ. ಪ್ರಸಾದದ ಮಹಿಮೆಯನ್ನು ಕಂಡ ಉರಿಲಿಂಗಪೆದ್ದಿ ಎಂಬ ಶರಣನು ಹೇಳುತ್ತಾನೆ.

'ಅಗ್ನಿ ಮುಟ್ಟಲು ತೃಣವಪ್ಪುದು ತಪ್ಪದಯ್ಯಾ!....
....ಶಿವಶಿವಾ ಪ್ರಸಾದದ ಮಹಿಮೆಯನೇನೆಂದುಪಮಿಸುವೆ?
ಪ್ರಸಾದವೆ ಗುರು. ಪ್ರಸಾದವೆ ಲಿಂಗ. ಪ್ರಸಾದವೆ ಜಂಗಮ.
ಪ್ರಸಾದವೆ ಪರಾಪರ. ಪ್ರಸಾದವೆ ಪರಮಾನಂದ.

---

೪೯ ಮಹಾಲಿಂಗದೇವ-'ಏಕೋತ್ತರಶತಸ್ಥಲ' (ಶರಣಮಹಾತ್ಮೆಸ್ಥಲ) ಪುಟ ೧೨೬-೧೨೯; ಸಿದ್ಧಲಿಂಗೇಶ್ವರ 'ಏಕೋತ್ತರಶತಸ್ಥಲ' (ಶರಣಮಹಾತ್ಮೆಸ್ಥಲ) ವೃತ್ತ, ಪದ್ಯ

೫೦ ಮಹಾಲಿಂಗದೇವ-'ಏಕೋತ್ತರಶತಸ್ಥಲ' (ಪ್ರಸಾದಮಹಾತ್ಮೆಸ್ಥಲ) ಪುಟ ೧೩೧; ಪದ್ಯ

ಪ್ರಸಾದವೆ ಪರಮಾಮೃತ. ಪ್ರಸಾದವೆ ಪರಮಜ್ಞಾನ.
ಪ್ರಸಾದವೆ ವಾಙ್ಮನೋತೀತ ಪ್ರಸಾದವೆ ನಿತ್ಯ ಪರಿಪೂರ್ಣ.
ಇಂತಪ್ಪ ಪ್ರಸಾದವ ಕೊಂಡು ನಾನು ಬದುಕಿದೆನಯ್ಯ,
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ!'೬೧

ಪ್ರಸಾದಿಸ್ಥಲವನ್ನಾಶ್ರಯಿಸಿದ ಅಂಗಸ್ಥಲಗಳ ಸಾಧನೆ ನಡೆದಂತೆ, ಲಿಂಗಸ್ಥಲದ ೯ ಹಂತಗಳು ಪ್ರಸಾದಿಯಲ್ಲಿ ಅಳವಟ್ಟು ಅವನು ಶಿವಾನುಗ್ರಹಭರಿತನಾಗುತ್ತಾನೆ; ಶುದ್ಧ-ಸಿದ್ಧ-ಪ್ರಸಿದ್ಧ ಪ್ರಸಾದ ಸಿದ್ಧನಾಗುತ್ತಾನೆ. ಶಿವಯೋಗದ ನಿರಂತರ ಸಾಧನೆಯಿಂದ ಹಾಗೂ ಗುರುಲಿಂಗ-ಜಂಗಮರ ಕೃಪಾಕಟಾಕ್ಷದಿಂದ ಪ್ರಸಾದಿಯು ಪರಿಶುದ್ಧವಾದ ದೈವೀ ಶರೀರವನ್ನು ಹೊಂದುತ್ತಾನೆ; ಜೊತೆಗೆ ಲೋಕವನ್ನುದ್ಧರಿಸಲೂ ಶಕ್ತನಾಗುತ್ತಾನೆ. ಅದುವೆ **ಕಾಯಾನುಗ್ರಹಸ್ಥಲ**ವೆನಿಸುತ್ತದೆ.೬೨ ಪ್ರಸಾದಿಯ ಸರ್ವೇಂದ್ರಿಯಗಳು ಅಂತರ್ಮುಖವಾಗಿ, ನಿರಂತರ ಲಿಂಗಧ್ಯಾನದಲ್ಲಿ ಲೀನವಾಗಲು ಅಂತರಂಗದಲ್ಲಿ ಪ್ರಾಣ ಲಿಂಗ-ಭಾವಲಿಂಗಗಳ ಪೂಜೆ ಧ್ಯಾನಗಳು ಸಹಜವಾಗಿ ಜರುಗುತ್ತವೆ; ಷಡಿಂದ್ರಿಯಗಳ ಪ್ರಸನ್ನತೆಯಿಂದ ಷಡ್ವಿದ ಲಿಂಗಗಳ (ಅರ್ಥಾತ್ ಅರಿವಿನ) ಸಂಬಂಧ ಉಂಟಾಗಿ ಶಿವಾದ್ವೈತಜ್ಞಾನವೂ ಪರಮಾನಂದವೂ ಲಭಿಸುತ್ತದೆ.೬೩ ಇದು **ಇಂದ್ರಿಯಾನುಗ್ರಹ ಸ್ಥಲ**. ಈ ಸ್ಥಲದ ಪರಿಣಾಮ ಕೆಳಗಿನಂತಿದೆ.

"ಶಬ್ದಸ್ಪರುಷ ರೂಪು ರಸ ಗಂಧ ಪಂಚೇಂದ್ರಿಯಂಗಳೆಲ್ಲಾ ಏಕಾಕಿಗಳಾಗಿರ್ದವು.
ತಮ್ಮೊಳಗೆ ತಾವು ಹರಿಯದೆ ಏಕಾಕಿಗಳಾಗಿರ್ದವು.
ಸಕಳೇಶ್ವರದೇವರಲ್ಲಿ ಪರಿಣಾಮಪ್ರಸಾದದ ಪದವಿಯ ಪಡೆದೆನಾಗಿ,
ಎನ್ನೊಡನೆ ಹುಟ್ಟಿ ನೀವೆಲ್ಲ ಸುಖಿಗಳಾದಿರಯ್ಯಾ."೬೪

ಇಂದ್ರಿಯಾನುಗ್ರಹ ಸಂಪನ್ನನಾಗಿ ಪರಶಿವನೆ ಅಂಗವಾಗಿರುವ ಪ್ರಸಾದಿಯು, ಪ್ರಾಣ ವಾಯುವನ್ನು ನಿರೋಧಗೊಳಿಸುತ್ತಾನೆ. ಅದರಿಂದ ದಶವಾಯುಗಳ ಸಂಚವಳಿಯುತ್ತದೆ, ದಶನಾಳಗಳ ಪಥ ಅಡಗುತ್ತದೆ; ದಶೇಂದ್ರಿಯಗಳ ಚಂಚಲವಳಿದು ಪ್ರಾಣರತಿಯಲ್ಲಿ ಪರವಸ್ತುವಿನ ಸಂಗವನ್ನನುಭವಿಸುತ್ತಾನೆ. ಈ ಸಂದರ್ಭದಲ್ಲಿ ಪ್ರಸಾದಿಯ ಚಿತ್ತದ ಕಳೆ

---

೬೧ ಶಿವಯೋಗಿ ಶಿವಾಚಾರ್ಯಕೃತ-'ಸಿದ್ಧಾಂತ ಶಿಖಾಮಣಿ' (ಕಾಯಾನುಗ್ರಹ ಸ್ಥಲ) ಸಿದ್ಧಲಿಂಗೇಶ್ವರ 'ಏಕೋತ್ತರಶತಸ್ಥಲ' ಪುಟ ೯೦. ಶ್ಲೋಕ ೫

೬೨ ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' (ಇಂದ್ರಿಯಾನುಗ್ರಹಸ್ಥಲ) ಶ್ಲೋಕ ೧೪-೨೩

೬೩ ಮಹಾಲಿಂಗದೇವ-'ಏಕೋತ್ತರಶತಸ್ಥಲ' (ಇಂದ್ರಿಯಾನುಗ್ರಹಸ್ಥಲ) ವ. ೭

೬೪ ಮಹಾಲಿಂಗದೇವ-'ಏಕೋತ್ತರಶತಸ್ಥಲ' (ಪ್ರಾಣಾನುಗ್ರಹಸ್ಥಲ) ಪದ್ಯ
ಸಿದ್ಧಲಿಂಗೇಶ್ವರ 'ಏಕೋತ್ತರಶತಸ್ಥಲ' (ಪ್ರಾಣಾನುಗ್ರಹಸ್ಥಲ) ಪದ್ಯ

ಬುದ್ಧಿಯೊಳಗೆ, ಬುದ್ಧಿ ಅಹಂಕಾರದೊಳಗೆ ಅಹಂಕಾರ ಮನದೊಳಗೆ, ಮನವು ಪರಮನದಲ್ಲಿ ಒಂದಾಗಿ ಲಿಂಗಸಂಗ ಸುಖವುಂಟಾಗುತ್ತದೆ. ಪ್ರಾಣವಾಯುವಿನ ಕುಂಭಕದಿಂದಾದ ಅನುಭವ ಹೀಗಿದೆ–

'ನಿಮ್ಮ ಕಾರುಣ್ಯವೆನ್ನ
ಮನದೊಳಗೆ ಸಂಬಂಧಿಸಿ
ಭಿನ್ನಭಾವವನಱಿಯದೆ ನಿಮ್ಮೊಳಡಗಿ
ಆನೇನೆಂದಱಿಯೆನಯ್ಯಾ
ಷಡುಚಕ್ರ ಕಮಲದಲ್ಲಿ ಸುಳಿದಾಡುವ
ಪ್ರಾಣಹಂಸನ ತಿಳುಹಿ
ಮಹಾನುಭಾವದೊಳಗೆ ನಿಲಿಸಿ
ನಿರ್ಮಳಲಿಂಗ ಪ್ರಾಣಿಯಾದೆನಯ್ಯಾ
ನೀನೆನ್ನ ಪ್ರಾಣದೊಳಗೆ ಪ್ರಾಣವಾಗಿ
ನಾ ನಿನ್ನ ಪ್ರಾಣದೊಳಗೆ ಪ್ರಾಣವಾಗಿ
ನಾ ನೀನೆಂಬುಭಯವನಱಿಯದೆ ನಿಮ್ಮ ಕೃ–
ಪಾನಂದದೊಳಗಿರ್ದೆನು ಕೂಡಲಸಂಗಯ್ಯಾ'[೬೫]

ಇದು **ಪ್ರಾಣಾನುಗ್ರಸ್ಥಲದ** ಇರವು. ಈ ಸ್ಥಿತಿಯಲ್ಲಿದ್ದ ಪ್ರಸಾದಿಯು ದೃಶ್ಯಜಗತ್ತನ್ನು ಶಿವಲಿಂಗವೆಂದು ಕಾಣುತ್ತಾನೆ. ಲಿಂಗಸಂಗ ಸುಖಿಯಾದ ಪ್ರಸಾದಿಯು ಪರವಸ್ತುವಿಗೆ ತನ್ನ ದೇಹಾಭಿಮಾನವನ್ನರ್ಪಿಸುವುದೆ **ಕಾಯಾರ್ಪಣ.** ಅಂತರ್ಬಾಹ್ಯೇಂದ್ರಿಯ ವಿಷಯಗಳನ್ನರ್ಪಿಸುವುದೆ **ಕರಣಾರ್ಪಣ;** ಭಾವವನ್ನು ಶಿವಲಿಂಗಕ್ಕೆ ಅರ್ಪಿಸುವುದೆ **ಭಾವಾರ್ಪಣ.** ಈ ತ್ರಿವಿಧ ಸಂಪನ್ನವಾದ (ಅಂದರೆ ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ ಸ್ಥಲ ಸಂಪನ್ನನಾದ) ಪರಮಪೂಜ್ಯ ಲಿಂಗವೆ ಉಪದೇಶಿಕ ಸ್ವರೂಪದಿಂದ ಶಿಷ್ಯಭಾವವನ್ನು ಹೊಂದುತ್ತದೆ. ಕಾರಣ, ಪರಬ್ರಹ್ಮದೇಹಿಯೂ ಭಾವಾರ್ಪಿತ ಸಂಪನ್ನನೂ ಆದ ಪ್ರಸಾದಿಯಿಂದ ಶಿಕ್ಷಿಸಲ್ಪಡುವವನೇ **ಶಿಷ್ಯ;** ಜ್ಞಾನ–ವೈರಾಗ್ಯ ಸಂಪನ್ನನಾದ ತನ್ನ ಗುರುವಿನಲ್ಲಿ ಮನೋವಾಕ್ ಕಾಯಕರ್ಮಗಳಾದ ಧ್ಯಾನ–ಸ್ತೋತ್ರ ಪೂಜಾ ಕ್ರಿಯೆಗಳನ್ನು ಮಾಡುವವನೂ, ಇಂದ್ರಿಯ ನಿಗ್ರಹಿಯಾಗಿ, ಅಷ್ಟಾಂಗ ಲಕ್ಷಣನಿಷ್ಠನಾಗಿ, ಮಣ್ಣು ಕಲ್ಲು–ಚಿನ್ನಗಳನ್ನು ಸಮಭಾವದಿಂದ ತಿಳಿದವನೂ, ಗುರುವನ್ನು ಶಿವಲಿಂಗ ಸಮಾನನೆಂದು ತಿಳಿದವನೂ ಶಿಷ್ಯನು. ಶ್ರೀಗುರುಮುಖದಿಂದ ಶಿವಜ್ಞಾನವನ್ನು ಪಡೆದು, ಶಿವಾನಂದಪೂರ್ಣನಾದಂಥ ಶಿಷ್ಯನು ರಾಗದ್ವೇಷರಹಿತನಾಗಿ ಜೀವನ್ಮುಕ್ತನಾಗುತ್ತಾನೆ. ಏಕೆಂದರೆ ಉರಿಲಿಂಗಪೆದ್ದಿ ಶರಣನು ಹೇಳುತ್ತಾನೆ.

---

೬೫ ಮಹಾಲಿಂಗದೇವ–'ಏಕೋತ್ತರಶತಸ್ಥಲ' ಪುಟ ೨೮೭ ವ. ೩ ಹಾಗೂ ಪದ್ಯ

'ಜ್ಯೋತಿಯ ಸಂಗದಿಂದ ಕರ್ಪುರ ಜ್ಯೋತಿಯಪ್ಪಂತೆ,
ಅಪ್ಪುವಿನ ಸಂಗದಿಂದ ಉಪ್ಪು ಅಪ್ಪುವಪ್ಪಂತೆ,
ಶ್ರೀಗುರುವಿನ ಸಂಗವ ಶಿಷ್ಯ ಮಾಡಿ ಶ್ರೀಗುರುವಪ್ಪುದು ತಪ್ಪದು
ಶಿವನಾಣೆ'[೬೬]

ಪರುಷದ ಸೋಂಕಿನಿಂದ ಲೋಹ ಹೊನ್ನಾಗುತ್ತದೆಯೆ ಹೊರತು ಪರುಷವಾಗದು. ಆದರೆ ಶಿಷ್ಯನು ಗುರುಮುಟ್ಟಿ ಗುರುವಾಗುತ್ತಾನೆ. ಮುಂದೆ ಪರಶಿವತತ್ತ್ವದ ರಹಸ್ಯಾರ್ಥವನ್ನು ತಿಳಿಯಲಿಚ್ಛಿಸಿ, 'ಅರ್ಥ-ಪ್ರಾಣ-ಅಭಿಮಾನಕ್ಕೆ ಒಡೆಯ'ನಾದ ಶ್ರೀಗುರುವಿನ ಪಾದಸೇವೆಯಲ್ಲಿ ತತ್ಪರನಾದ ಶಿಷ್ಯನೆ ಶುಶ್ರೂಷು ಎನ್ನಿಸಿಕೊಳ್ಳುತ್ತಾನೆ. (ಶಿಷ್ಯ ಭಾವನೆಯನ್ನು ಹೊಂದಿದ ಲಿಂಗವು ಪ್ರಸಾದಿಯ ಅಂಗದಲ್ಲಿ ಶುಶ್ರೂಷಾಭಾವವನ್ನು ತಳೆಯುತ್ತದೆ.)[೬೭] ಗುರು ಸೇವೆಯನ್ನು ಪಡೆದ ಶುಶ್ರೂಷುವೆ ಗುರುಸಮರಸದಿಂದ ತಾನು ಗುರುವೆ ಆಗಿ ಲೋಕಸೇವ್ಯನಾಗುವುದರಿಂದ **'ಸೇವ್ಯ'**ನೆನಿಸಿಕೊಳ್ಳುತ್ತಾನೆ; ಶಿಷ್ಯನೂ ಗುರುವಿನಂತೆ ಲೋಕದ ಜನರಿಂದ ಪೂಜೆಗೊಳ್ಳುತ್ತಾನೆ. ಜೊತೆಗೆ ಶಿವೋಹಂಭಾವವು ಶುಶ್ರೂಷುವಿನಲ್ಲಿ ಬಲಿತು ಶಿವತ್ವವುಂಟಾಗಿ ಶಿವನಂತೆ ಪೂಜ್ಯನೂ ಆಗುತ್ತಾನೆ. ಕಾರಣ ಇದಕ್ಕೆ **ಸೇವ್ಯಸ್ಥಲ**ವೆನ್ನಲಾಗುತ್ತದೆ.

ಶಿವಶರಣರ ಅನುಭಾವದಂತೆ ಭಕ್ತ-ಮಾಹೇಶ್ವರ, ಪ್ರಸಾದಿ-ಪ್ರಾಣಲಿಂಗಿ, ಶರಣ-ಐಕ್ಯಸ್ಥಲ ಜೋಡಿಗಳು ಸಾಧಕಶರಣನ ಸ್ಥೂಲ ಸೂಕ್ಷ್ಮ ಹಾಗೂ ಕಾರಣ ಸಂಬಂಧವುಳ್ಳವುಗಳು; ಮುಂದಿನ ನಿರವಯಸ್ಥಲಾದಿಗಳು ಮಹಾಕಾರಣ (ಅಥವಾ ತೂರ್ಯ)-ತೂರ್ಯಾತೀತ ಅವಸ್ಥೆಯ ಸಂಬಂಧವುಳ್ಳವುಗಳು.[೬೮] ಕಾರಣ ಭಕ್ತಾದಿ ಪ್ರಾಣಲಿಂಗ ಸ್ಥಲದವರೆಗೆ ಲಿಂಗವು ಉಪಾಸ್ಯೋಪಾಸಕ ಸಂಬಂಧದಂತೆಯೆ, ಸೂಕ್ಷ್ಮವಾದ ಗುರು-ಶಿಷ್ಯ ಸಂಬಂಧವನ್ನು ಹೊಂದುತ್ತದೆ-ಎಂಬುದನ್ನು ಈ ಸ್ಥಲಗಳ ಅವಾಂತರ ಸ್ಥಲಗಳು ಸೂಚಿಸುತ್ತವೆ.

IV ಶಿವದೀಕ್ಷಾ ಸಂಪನ್ನನಾದ ವೀರಶೈವನು ಅನೇಕ ಕ್ರಿಯಾಚರಣೆಗಳನ್ನು ಕೈಕೊಂಡು ಭಕ್ತ-ಮಾಹೇಶ್ವರ-ಪ್ರಸಾದಿ ಎಂಬ ಹೆಸರಿಗೆ ಕಾರಣನಾಗುತ್ತಾನೆ. ತರುವಾಯ, ಪ್ರಸಾದಿಯು ಜ್ಞಾನಕ್ಕೆ ಸಂಬಂಧಪಟ್ಟ ಆಚರಣೆಗಳನ್ನು ಅನುಸರಿಸಿ ಪ್ರಾಣಲಿಂಗಿ-ಶರಣ-

---

೬೬ ಸಿದ್ಧಲಿಂಗೇಶ್ವರ-'ಏಕೋತ್ತರಶತಸ್ಥಲ' (ಶುಶ್ರೂಷುಸ್ಥಲ)
ವಚನಶಾಸ್ತ್ರಸಾರ-II. ಪುಟ ೪೯೦-೪೯೧

೬೭ ೨೧೬ ಸಕೀಲಗಳ ಪಟವನ್ನು ನೋಡು

೬೮ ಶಿವಯೋಗಿ ಶಿವಾಚಾರ್ಯಕೃತ-'ಸಿದ್ಧಾಂತ ಶಿಖಾಮಣಿ' (ಪ್ರಾಣಲಿಂಗಿಸ್ಥಲ)
ಹಾಗೂ ಕರಿಬಸವ ಶಾಸ್ತ್ರಿಗಳ ಕನ್ನಡ ಟೀಕೆ

ಐಕ್ಯನೆಂದು ನಿರ್ದೇಶಿತನಾಗುತ್ತಾನೆ.[೬೯]

ಪ್ರಸಾದಿಯ ಚಿತ್ತವು ಶಿವತತ್ತ್ವದ ಚಿಂತನೆಯಿಂದ ಪರಿಶುದ್ಧವಾಗಿ ಶಿವಜ್ಞಾನೋದಯವಾಗುತ್ತದೆ. ಆ ಜ್ಞಾನಕ್ಕೆ ಗೋಚರವಾಗುವುದೆ ಜ್ಞೇಯವೆನ್ನಿಸುವ ಚೈತನ್ಯಾತ್ಮಕ ಲಿಂಗ, ಲಿಂಗದ ಶಕ್ತಿಯೆ ಪ್ರಾಣ, ಇವೆಲ್ಲವುಗಳ ಸಂಕೀರ್ತವೆ ಪ್ರಾಣಲಿಂಗ, ಇಂಥ ಪ್ರಾಣಲಿಂಗವನ್ನು ಧರಿಸಿದವನೆ ಪ್ರಾಣಲಿಂಗಿ. ಇನ್ನೊಂದು ರೀತಿಯಿಂದ ವಿಚಾರಿಸಿದರೆ, ತತ್ತ್ವಾತ್ಮಕವಾದ ಪ್ರಾಣ ಹಾಗೂ ತತ್ತ್ವಾತೀತವೂ ಜ್ಞಾನಮಯವೂ ಆದ ಪರಶಿವರ ಸಂಯೋಗವೆ ಪ್ರಾಣಲಿಂಗ. ಈ ಪ್ರಾಣಲಿಂಗವನ್ನರಿತವನೆ ಪ್ರಾಣಲಿಂಗಿ. ಅಂಥ ಪ್ರಾಣಲಿಂಗಿಯ ಆಚರಣೆ ಹಾಗೂ ಅನುಭಾವ ಸಿದ್ಧಿಗಳನ್ನು ಪ್ರತಿಪಾದಿಸುವಂಥಹದು **ಪ್ರಾಣಲಿಂಗಿಸ್ಥಲ** ಈ ಸ್ಥಲದ ಆಚಾರಪರ ಅಂಗಸ್ಥಲದ ೫ ವಿಭಾಗಗಳೂ, ಲಿಂಗಸಿದ್ಧಿಪರ ಲಿಂಗಸ್ಥಲದ ೧೨ ವಿಭಾಗಗಳೂ ಕೆಳಗಿನಂತಿವೆ.




೬೯ ಶಿವಯೋಗಿ ಶಿವಾಚಾರ್ಯ–'ಸಿದ್ಧಾಂತ ಶಿಖಾಮಣಿ' (ಪ್ರಾಣಲಿಂಗಿಸ್ಥಲ) ಶ್ಲೋಕ ೧–೧೦. ಸಿದ್ಧಲಿಂಗೇಶ್ವರ 'ಏಕೋತ್ತರಶತಸ್ಥಲ' ಪುಟ ೪೫ ಮಹಾಲಿಂಗದೇವ–'ಏಕೋತ್ತರ ಶತಸ್ಥಲ' ಪುಟ ೧೩೬–೧೩೭ ವಚನ ೪, ೭, ೮, ೧೨

ಗುರುವಿನುಪದೇಶದಂತೆ ಯೋಗಮಾರ್ಗದಿಂದ ಮೂಲಾಧಾರವ ಬಲಿದು ಪ್ರಾಣಾಪಾನವನೊಂದುಗೂಡಿಸಲು ನಾಭಿಕಂದದ ಮಧ್ಯದಲ್ಲಿ ಜ್ಯೋತಿಯು ಪ್ರಕಟವಾಗುತ್ತದೆ. ಅದಕ್ಕೆ ಪ್ರಾಣಲಿಂಗವೆನ್ನುವದುಂಟು. ಪ್ರಾಣವಾಯುವು ಸ್ತಬ್ಧವಾಗುವ ಸ್ಥಾನವೆ ಪ್ರಾಣಲಿಂಗ ಎಂಬ ಕಲ್ಪನೆಯೂ ಇದೆ. ಯೋಗಾಭ್ಯಾಸಿಯಾದ ಶಿವಜ್ಞಾನಿಗೆ ಹೃದಯಕಮಲ (=ಅನಾಹತಚಕ್ರ)ದಲ್ಲಿ ತೋರುವ ಪ್ರಕಾಶವು ಪರಬ್ರಹ್ಮ ಸ್ವರೂಪಾದ ಪ್ರಾಣಲಿಂಗ ಎಂದು ತಿಳಿಯುವ ರೂಢಿಯೂ ಇದೆ. ಪ್ರಾಣವು ಲಿಂಗವೆಂದರಿತ ಬಳಿಕ ಆ ಪ್ರಾಣವು ಪ್ರಸಾದವಾಗುತ್ತದೆ. ಲಿಂಗವು ಪ್ರಾಣವೆಂದರಿದ ನಂತರ ಅಂಗದಾಸೆ ಹಿಂಗುತ್ತದೆ; ಶಿವಲಿಂಗ ಸ್ಪರ್ಶ ಸುಖಿಗೆ ಅನಿಮಿಷ ದೃಷ್ಟಿಯು ಮೂಲವಾಗುತ್ತದೆ. ಕಾರಣ ಶರಣರ ಪರಿಭಾಷೆಯಲ್ಲಿ ಪ್ರಾಣಲಿಂಗವೆಂಬುದು ಅಂತರಂಗದಲ್ಲಿ ಆವರಿಸಿ ಬಹಿರಂಗದಲ್ಲಿ ತೋರುತ್ತದೆ; ಅನಿಮಿಷದೃಷ್ಟಿಯ ಮೊನೆಯಲ್ಲಿ ಮೂರ್ತಿಯಾಗಿ ಮನದ ಕೊನೆಯಲ್ಲಿ ತೊಳಗುತ್ತದೆ; ಬ್ರಹ್ಮರಂಧ್ರದಲ್ಲಿ ಜ್ಯೋತಿಯಾಗಿ ತೋರುತ್ತದೆ. ಹೀಗೆ ಪ್ರಾಣಲಿಂಗಾನುಭವವನ್ನು ಪಡೆದ ಪ್ರಾಣಲಿಂಗಿಯು ನಿರಂತರ ಸುಖಿ. ಒಮ್ಮೊಮ್ಮೆ ಪ್ರಾಣಲಿಂಗವು ನವನಾಳದಲ್ಲಿ ತುಂಬಿ ಎಳೆಯ ಮಾಣಿಕದಂತೆ ತೋರಿ ಜ್ಞಾನಜ್ಯೋತಿಯಾಗಿ ಬೆಳಗುತ್ತದೆ. ಪಿಂಡ-ಬ್ರಹ್ಮಾಂಡವನ್ನು ಮೀರಿ ತೋರುವ ಘನವಸ್ತುವಿನ ದಿವ್ಯಾನುಭವವನ್ನು ಬ್ರಹ್ಮರಂಧ್ರದಲ್ಲಿ ಲಿಂಗವಾಗಿ, ಭ್ರೂಮಧ್ಯದಲ್ಲಿ ಜಂಗಮವಾಗಿ, ನಾಸಿಕಾಗ್ರದಲ್ಲಿ ಪ್ರಸಾದವಾಗಿ, ಹೃದಯಸ್ಥಾನದಲ್ಲಿ ಸ್ವಾನುಭಾವವಾಗಿ ಶರಣರು ಅನುಭವಿಸಿದ್ದಾರೆ. ಈ ಅನುಭವದ ವಲಯಕ್ಕೆ ಪ್ರಾಣಲಿಂಗಿಸ್ಥಲವೆಂದು ಹೆಸರು. ದಿವ್ಯಾನುಭವಕ್ಕೆ ಒಳಗಾದ ಶರಣನ ಸ್ಥಿತಿ ಹೀಗಿದೆ.

"ಕಳೆಯೇಱಿದ ಲಿಂಗದ ತೇಜನರಿದು,
ಕಳೆಯುದ ವಳೆಯುದ ಸೀಮೆಯಿಂದತ್ತಲು ವೇಧಿಸಿದ ಮುಗ್ಧೆಯ ನೋಡಾ!
ಪಂಚಭೂತಿಕದ ಗಡಣೆಯ ಭಾವವನೆ ಮನದಲ್ಲಿ ಭಾವಿಸಿದ ಮುಗ್ಧೆಯ ನೋಡಾ!
ಇರುಳು ಹಗಲೆಂಬ ಬೆಳಗುಕತ್ತಲೆಯನಱಿಯುದ ಮುಗ್ಧೆಯ ನೋಡಾ!
ಆಕಾರ-ನಿರಾಕಾರ, ಪುಣ್ಯ-ಪಾಪದ ಅಱುಹಿನ ಮಱಹಿನ
-ಅಷ್ಟದಳಕಮಲದ ಮಧುಪಾನಿಯಾಗದೆ,
ಕೂಡಲ ಚನ್ನಸಂಗನೆಂಬ ಮಹಾಲಿಂಗವ ಮನದಲ್ಲಿ ಅಳವಡಿಸಿದ ಮುಗ್ಧೆಯ ನೋಡಾ!"೭೦

ಪ್ರಾಣಲಿಂಗದ ಆಂತರಿಕ ಪೂಜೆಯು **ಪ್ರಾಣಲಿಂಗಾರ್ಚನಾ ಸ್ಥಲವೆನ್ನಿಸುತ್ತದೆ.** ಲಿಂಗವೆ-ಪ್ರಾಣ, ಪ್ರಾಣವೆ ಲಿಂಗಸ್ವರೂಪಾದ ಶಿವಯೋಗಿಯ ಅಂತರಂಗದ ಪೂಜೆ ಮೆಚ್ಚುವಂಥಹದು. ಪ್ರಾಣಲಿಂಗಕ್ಕೆ ಪಂಚಾಕ್ಷರ ಮಂತ್ರದಿಂದ ಮಜ್ಜನವನ್ನೆರೆದು ಮನವ

---

೭೦ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೧೯೫ ವ.೪ ಪುಟ ೧೩೯, ೧೪೦ ವ. ೫-೭

ಪುಷ್ಪ, ಬುದ್ಧಿಯ ಗಂಧ, ಚಿತ್ತವೆ ನೈವೇದ್ಯವೆಂದು ಬಗೆದು,ಅಹಂಕಾರದಿಂದ ಆರೋಗಣೆಯ ಮಾಡಿ, ಪರಿಣಾಮದ ವೀಳೆಯವನ್ನರ್ಪಿಸಿ, ಸ್ನೇಹದ ವಂದನೆಯ ಮಾಡುತ್ತಾನೆ. ಅಂತ ರಂಗದ ವಸ್ತುಗಳನ್ನೆಲ್ಲ ಬಹಿರಂಗದ ವಸ್ತುಗಳಲ್ಲಿ ಒಂದುಗೂಡಿಸಿ ಲಿಂಗಾರ್ಚನೆಯ ಮಾಡುತ್ತಿರುವ ಪ್ರಾಣಲಿಂಗಿಯು, ಅಂತರಂಗ-ಬಹಿರಂಗಭರಿತನಾದ ಪರಶಿವನ ಇರವನ್ನು ಅನುಭವಿಸುತ್ತಾನೆ. ಪ್ರಾಣಲಿಂಗಪೂಜೆಯ ಇನ್ನೊಂದು ಪ್ರಕಾರ ಇದು

"ಎನ್ನ ಕಾಯವೆ ಅಗ್ಗವಣೆಯ ಬಿಂದಿಗೆ, ಮನವೇ ಸಿಂಹಾಸನ.
ಹೃದಯ ಕಮಲ ಪುಷ್ಪದ ಪೂಜೆಯ ಮಾಡಿ, ಎನ್ನ ಕಿವಿಗಳೆ ಕೀರ್ತಿಮುಖ,
ನೆನೆವ ನಾಲಗೆಯೆ ಘಂಟೆ ಶಿರ ಸುವರ್ಣಕಲಶ
ಎನ್ನ ನಯನ ಸ್ವಯಂ ಜ್ಯೋತಿಯಾರತಿಯನೆತ್ತುವೆ,
ಎನ್ನ ಚಂದ್ರಶೇಖರ ಲಿಂಗಕ್ಕೆ ಮಾಡಿದೆನ್ನ ಪ್ರಾಣಪೂಜೆಯ
ಎನ್ನ ಕಾಯ ಭಾಜನ ಒಲಿದಂತಾಗಲಿ;
ಕೂಡಲಸಂಗಮದೇವ ಪೂಜಿಸಿದಲ್ಲದೆ ನಿಲಲಾಜಿ!"
ಗಗನವೆ ಗುಂಡಿಗೆ, ಆಕಾಶವ ಅಗ್ಗವಣೆ;
ಚಂದ್ರಸೂರ್ಯರಿಬ್ಬರೂ ಪುಷ್ಪ ನೋಡಾ!
ಬ್ರಹ್ಮಧೂತು, ವಿಷ್ಣುದೀಪ, ರುದ್ರನೋಗರ ಅತಿಶಯ ನೋಡಾ!
ಗುಹೇಶ್ವರಲಿಂಗಕ್ಕೆ ಪೂಜೆ ನೋಡಾ![೭೧]

ಮೇಲಿನ ವಚನಗಳಲ್ಲಿ ಪಿಂಡಗತಶಕ್ತಿ ಹಾಗೂ ಬ್ರಹ್ಮಾಂಡಗತ ಶಕ್ತಿಗಳು ಪರ ಶಿವನಿಗೆ ಅರ್ಪಿತವಾಗುವ ರೀತಿಯನ್ನು ಗುರುತಿಸುತ್ತೇವೆ. ಅಂತರಂಗದ ಪೂಜೆಯ ಫಲ ವಾಗಿ ಸಕಲ ಇಂದ್ರಿಯಗಳು ಲಿಂಗದಲ್ಲಿ ಲಯವಾಗಿ ಪ್ರಾಣಲಿಂಗಿಯು ಶಿವಯೋಗ ಸಮಾಧಿ ಸ್ಥಿತನಾಗುತ್ತಾನೆ. ಅದು **ಶಿವಯೋಗ ಸಮಾಧಿಸ್ಥಲ** ಈ ಹಂತದಲ್ಲಿ ಸಂಸಾರದ ವ್ಯಾಮೋಹವಳಿದು ಭಕ್ತಿ, ಲಿಂಗ-ಜಂಗಮ-ಪ್ರಸಾದ ತ್ರಿವಿಧ ಸಂಪತ್ತು, ಮನಸ್ಥಿರರತ್ವ ಹಾಗೂ ಪರಶಿವ ಸಂಯೋಗಗಳು ಪ್ರಾಪ್ತವಾಗುತ್ತವೆ. ಜೊತೆಗೆ, ಪ್ರಾಣಲಿಂಗಿಯು ಷಟ್‌ಚಕ್ರಗಳಲ್ಲಿ ಬೆಳಗಿತೋರುವ ಬಹುರೂಪಗಳನ್ನು ಕಾಣುತ್ತ ಬಯಲು ಬೆರಸಿದ ಮರೀಚಿಯಂತೆ, ಉರಿವುಂಡ ಕರ್ಪೂರದಂತೆ,ಲಿಂಗಾಂಗ ಸಂಯೋಗವನ್ನು ಪಡೆಯುತ್ತಾನೆ.[೭೨]

---

೭೧ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೧೪೩, ವ. ೧, ೯
ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' (ಶಿವಯೋಗ ಸಮಾಧಿ ಸ್ಥಲ) ಶ್ಲೋಕ ೨೨-೨೮

೭೨ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೧೫೧-೧೫೩
ಸಿದ್ಧಲಿಂಗೇಶ್ವರ-'ಏಕೋತ್ತರಶತಸ್ಥಲ' ಪು. ೪೦
ಶಿವಯೋಗಿ ಶಿವಾಚಾರ್ಯಕೃತ-ಸಿದ್ಧಾಂತ ಶಿಖಾಮಣಿ ಶ್ಲೋಕ ೪೨ (ಅಂಗ ಲಿಂಗಸ್ಥಲ) ವಚನ ಶಾಸ್ತ್ರಸಾರ II ಪುಟ ೪೧ ff

ಪ್ರಾಣಲಿಂಗಿಯ ಮನಸ್ಥಲದಲ್ಲಿ ಮನೋಮೂರ್ತಿಯಾಗಿ ನಿಲ್ಲುವ ಲಿಂಗದ ಸಹಜ ನಿಲವೇ **ಲಿಂಗನಿಜಸ್ಥಲ**. ಈ ಸ್ಥಲದಲ್ಲಿ ಪ್ರಾಣಲಿಂಗಿಯು ಅಂತರಂಗದಲ್ಲಿ ಜ್ಯೋತಿರ್ಮಯ ಲಿಂಗವಾಗಿ ಅನುಭವಿಸಿದ ಪರವಸ್ತುವನ್ನು ಪ್ರತ್ಯಕ್ಷಾನುಭವ ಸಿದ್ಧವಾಗಿ ಅರಿಯುತ್ತಾನೆ. ಇದರಿಂದ ಲಿಂಗಾಂಗ ಸಾಮರಸ್ಯವೂ ಘಟಿಸಿ ಪ್ರಾಣಲಿಂಗಿಯ ಸರ್ವಾಂಗವೂ ಲಿಂಗಮಯ ವಾಗಿ ಬೆಳಗುತ್ತದೆ. ಈ ಸಾಧನೆಯ ಹಂತವೆ **ಅಂಗಲಿಂಗಸ್ಥಲ**.[೭೩]

ಪ್ರಾಣಲಿಂಗಿಯು ಅಂಗಸ್ಥಲದ ಉಪಸ್ಥಲಗಳ ಅಭ್ಯಾಸದಿಂದ ಲಿಂಗಾನುಗ್ರಹವನ್ನು ಪಡೆಯಲು ಪೂರ್ಣಸಮರ್ಥನಾಗುತ್ತಾನೆ; ಆಗ ಲಿಂಗಸ್ಥಲದ ಅತ್ಯಂತ ಸೂಕ್ಷ್ಮ ಹಂತಗಳ ಅರಿವು ಅವನಿಗೆ ವೇದ್ಯವಾಗುತ್ತದೆ. ಮೊದಲು ಪ್ರಾಣಲಿಂಗಿಯ ದೇಹ–ಇಂದ್ರಿಯ–ಪ್ರಾಣ–ಜೀವತತ್ತ್ವಗಳು ಪರಶಿವ ಲಿಂಗದಲ್ಲಡಗಲು **ಆತ ಸ್ಥಲ ಅಥವಾ ಜೀವಾತ್ಮ ಸ್ಥಲವಾಗುತ್ತದೆ.**[೭೪] ನಂತರದ **ಅಂತರಾತ್ಮಸ್ಥಲ**ವನ್ನು ಮೂರು ರೀತಿಯಿಂದ ವಿವರಿಸಲಾಗುತ್ತದೆ:

೧) ಗುರುಬೋಧೆಯಿಂದ ಜೀವಭಾವವನ್ನು ಕಳೆದುಕೊಂಡ ಆತ್ಮನಿಗೆ ಅಂತ ರಾತ್ಮತ್ವ ಉಂಟಾಗುವದು ಅರ್ಥಾತ್ ಸ್ವಸ್ವರೂಪ ಜ್ಞಾನದಿಂದ ದೇಹಭಾವವನ್ನು ಕಳೆದು ಕೊಂಡು ಪರಮಾತ್ಮಭಾವವುಂಟಾಗುವುದೆ ಅಂತರಾತ್ಮಸ್ಥಲ.

೨) ಗುರೂಪದೇಶ ಹೊಂದಿದ ಆತ್ಮನು ಆಹಾರ–ವ್ಯವಹಾರಗಳ ಸಂಬಂಧದಿಂದ ಜೀವಧರ್ಮ ಸಂಬಂಧವನ್ನೂ, ಸ್ವಸ್ವರೂಪಾನು ಸಂಧಾನದಿಂದ ಶಿವಧರ್ಮವನ್ನೂ ಹೊಂದಿ ಜೀವ–ಪರಮರ ಅಂತರಾಳಜ್ಞಾನಿಯಾಗಿರುವುದರಿಂದ ಅಂತರಾತ್ಮನೆನಿಸಿಕೊಳ್ಳುತ್ತಾನೆ.

೩) ಮಾನವ–ಪಶು–ಪಕ್ಷಿಗಳ ಭೇದವನ್ನು ಅಳಿಸಿ ಅಂತರಾತ್ಮನ ದೃಷ್ಟಿಯಿಂದ ಎಲ್ಲರೂ ಒಂದೆಂಬ ಅಭೇದ ಜ್ಞಾನವನ್ನುಂಟುಮಾಡುವುದೆ ಅಂತರಾತ್ಮಸ್ಥಲ ಈ ಸ್ಥಲದ ನಿರ್ದೇಶಕ್ಕೆ ಉದಾಹರಣೆ.

'ಶುಕ್ಲ ಶೋಣಿತ ಪಿಂಡೈಕ್ಯ....
ಮೊಲೆಮುಡಿಯಾದಡೆ ಹೆಣ್ಣೆಂಬರು ಗಡ್ಡ ಮೀಸೆಯಾದಡೆ ಗಂಡೆಂಬರು
ನಡುವೆ ಸುಳಿವಾತ್ಮ ಹೆಣ್ಣಲ್ಲ ಗಂಡಲ್ಲ....

---

೭೩ ಸಿದ್ಧಲಿಂಗೇಶ್ವರ–'ಏಕೋತ್ತರಶತಸ್ಥಲ' ಪುಟ ೧೦೩

· ಮಹಾಲಿಂಗೇಶ್ವರ–'ಏಕೋತ್ತರಶತಸ್ಥಲ' ಪುಟ ೨೯೭–೨೯

(ದೇಹಸಂಗದಿಂದ ಜೀವಾತ್ಮನೆನಿಸುತ್ತಾನೆ; ದೇಹಸಂಗರಾಹಿತ್ಯದಿಂದ ಅಂತರಾತ್ಮ ನೆನಿಸಿಕೊಳ್ಳುತ್ತಾನೆ

೭೪ ಶಿವಯೋಗಿ ಶಿವಾಚಾರ್ಯ–'ಏಕೋತ್ತರಶತಸ್ಥಲ' (ಅಂತರಾತ್ಮಸ್ಥಲ) ಶ್ಲೋಕ ೧೯–೨೮

ಮಹಾಲಿಂಗದೇವ–'ಏಕೋತ್ತರಶತಸ್ಥಲ' ಪುಟ ೩೦೦–೩೦೩

'ಜಗ ಒಂದೆಸೆ, ತಾನೊಂದೆಸೆ........
....ಇಂತೀ ಜಗ, ಆಗಮ, ವಿಧಿ, ಕ್ರೀ ನಿಷೇಧವಾಗಿ,
ಹೊದ್ದಿಯೂ ಹೊದ್ದನು ನೀರ ತಾವರೆಯಂತೆ....'

'ಒಳಗೊಂದು ಬೆಳಗುವ ಜ್ಯೋತಿಯಂತಪ್ಪ ವಿಚಾರವಿವೇನೋ?
ಅತ್ತ ಹೊದ್ದದು ತನ್ನ ತಾನು, ಇತ್ತ ಹೊದ್ದದು ಬಾಹ್ಯವಿಚಾರವ.
ವಿಚಾರಿಸುವ ವಿಚಾರ ತಾನಾಗಿ ಇರ್ದುದನರಿಯದು,
ಅಱಿಯದೆ ಮತ್ತೆ ಮಱಿದಿರದು
ಹೊದ್ದುವ ಕಾಳಿಕೆಯಲ್ಲಿ ಹೊದ್ದದು ನಿಸ್ಸಂದೇಹವಿಲ್ಲ.
ಹೊದ್ದಿಯೂ ಹೊದ್ದದೆ ಇರ್ದಿತ್ತು. ತುದಿಯಿಲ್ಲ, ಮೊದಲಿಲ್ಲ.
ತುದಿಮೊದಲೆರಡನೂ ಕೂಡಿಕೊಂಡು, ನಡುವೆ ಅಂತರಾತ್ಮನಾಗಿ ಇರ್ದಿತ್ತು.
ಜೀವಗುಣವಳಿದಲ್ಲಿ, ಪರಮಾತ್ಮನ ಮುಂದೆ ಪ್ರತಿಬಿಂಬವಾಗಿರ್ದಲ್ಲಿ
ಸಂಧಾನವನಱಸುತ್ತಿರ್ದೆನಯ್ಯಾ ಕೂಡಲಚೆನ್ನಸಂಗಾ![೭೫]

ಪರಶಿವಲಿಂಗದ ಅನುಸಂಧಾನದಿಂದ ಜೀವನ್ಮುಕ್ತನಾದ ಶಿವಯೋಗಿಯು, ಸಕಲರ ಹೃದಯಾಕಾಶದಲ್ಲಿ ಪ್ರೇರಕನಾದವನು ಪರಶಿವನು ಎಂದು ಅನುಭವಿಸಿದಾಗ **ಪರಮಾತ್ಮಸ್ಥಲ**ವೆನಿಸುತ್ತದೆ. ಪ್ರಾಣಲಿಂಗಿಯು ಶಿವಯೋಗ ಸಾಧನೆಯ ಬಲದಿಂದ ಪರಮಾತ್ಮನಾಗಿ ತನ್ನಲ್ಲಿ ತಾನು ಏಕವಾಗುವ ರೀತಿ ಹೀಗೆ

"ಪದ್ಮಾಸನದಲ್ಲಿ ಕುಳ್ಳಿರ್ದು, ಕುಂಡಲಿಯ ಸ್ಥಾನಕವನಱಿದು,
ಅಂಡಲೆದು ಅಧೋವಾಯುವನೂರ್ಧ್ವಮುಖವ ಮಾಡಿ,
ಪಾದಾಂಗುಲವನೊತ್ತಿ ಊರ್ಧ್ವವಾಯುವನಧೋಮುಖಕ್ಕೆ ತಂದು,
ಉತ್ತರ ಪೂರ್ವ ದಕ್ಷಿಣಮಂ ನೇತಿಗಳೆದು,
ಪಶ್ಚಿಮದ ಸುಷುಮ್ನೆಯಲ್ಲಿ ಮನ ಶಕ್ತಿಸಂಧಾನ ಸಂಯೋಗದಿಂದ
ಸಹಸ್ರದಳ ಕಮಲದಲ್ಲಿ ನಾದಭ್ರಮರನೆರರಿಗಿ
ಮಹಾವಾಸನಾಮೃತವ ದಣಿಯುಂಡು, ತ್ರಿಸಂಧಾನ ಒಂದಾದ ಬಳಿಕ,
ಆತ್ಮ ಪರಮಾತ್ಮ ಇಂತಾಗಿ, ಮರಳಿ ಅಂತರಾತ್ಮವಿಚಾರಕ್ಕೆ ಇಳಿದಲ್ಲಿ
ಅಭ್ಯಾಸಕ್ಕೆ ಬರಲಾಗದು. ಅದೆಂತೆಂದಡೆ:
ದೇವಲೋಕಕ್ಕೆ ಸಂದು ಮರಳಿ ಮಾನವನಪ್ಪಡೆ–ಅದೆ ಪಾತಕ
ಹಸಿದವನಮೃತವ ದಣಿಯುಂಡು, ಮರಳಿ ಹಸಿದುಂಡಹೆನೆಂದಡೆ ಅದೆ ಪ್ರಕೃತಿಗುಣ

೭೫ ಮಹಾಲಿಂಗದೇವ 'ಏಕೋತ್ತರಶತಸ್ಥಲ' ಪುಟ ೩೭೫ ವ. ೩ ಹಾಗೂ ಪದ್ಯ

ಇದು ಕಾರಣ, ಪರಮಾತ್ಮನಾದಾತನು ಪರಮಾತ್ಮನಾಗಿ ತನ್ನಲ್ಲಿ ತಾನೇಕೀ ಭವಿಸಿರಬೇಕು ಗುಹೇಶ್ವರಾ."೭೬

ಪರಮಾತ್ಮಸ್ವರೂಪಭಾವನೆಯುಳ್ಳ ಶಿವಯೋಗಿಯು ಸದಾಕಾಲವು ಪ್ರಾಣಲಿಂಗಾನು ಸಂಧಾನಿಯಾಗಿದ್ದು, ಅಹಕಾರ–ಮಮಕಾರವನ್ನಳಿದು, ತಾನೇ ಪರಮಾತ್ಮನೆಂಬ ಜ್ಞಾನ ದಿಂದ ಬದುಕಿ, ಸಕಲಜೀವಾತ್ಮರ ಲೇಸನು ಬಯಸುತ್ತಾನೆ. ದೇಹಗುಣವಿಲ್ಲದ ಅವನು ನಿರ್ದೇಹನೆನ್ನಿಸಿಕೊಳ್ಳುವ ಕಾರಣ **ನಿರ್ದೇಹಾಗಮಸ್ಥಲ**ವಾಗುತ್ತದೆ.೭೭ ನಿರ್ದೇಹವಾದ ಸ್ವಸ್ವರೂಪಕ್ಕೆ ಭಿನ್ನವಾದ ವಸ್ತುವೊಂದೂ ಇಲ್ಲವೆಂಬ ಅರಿವು ಶಿವಯೋಗಿಯಲ್ಲಿ ಅಳ ವಡಿಸಲು, ಅವನಲ್ಲಿ ಇಂದ್ರಿಯರಹಿತವಾದ ಮನೋಭಾವವು ತೋರಿ **ನಿರ್ಭಾವಾಗಮ**ವೆನ್ನಿಸಿಕೊಳ್ಳುತ್ತದೆ. 'ಅಹಂಬ್ರಹ್ಮಾಸ್ಮಿ' ಎಂಬ ಸ್ಥಿತಿಯಲ್ಲಿಯೂ ನಿರ್ವಿಕಲ್ಪವಿಲ್ಲದಿರುವುದು **ನಿರ್ಭಾವಾಗಮಸ್ಥಲ.**೭೮ ಇನ್ನೂ ಪ್ರಗತಿಯಾದಂತೆ ಶಿವಯೋಗಿಗೆ ಬಾಹ್ಯ ಪ್ರಪಂಚದ ವಸ್ತುಗಳಲ್ಲೆಲ್ಲ ಪರಶಿವನೆ ಗೋಚರಿಸುತ್ತಾನೆ; ಜ್ಞಾತೃ–ಜ್ಞಾನ–ಜ್ಞೇಯವೆಂಬ ತ್ರಿಪುಟಿಸಂಬಂಧದಲ್ಲಿ ತಾರತ್ಯವೇ ಇಲ್ಲದಾಗುತ್ತದೆ; ಆಗ ಶಿವಶರಣನಲ್ಲಿ ಭೇದಜ್ಞಾನವು ಸಂಪೂರ್ಣ ಅಳಿಯುವ ಕಾರಣ **ನಷ್ಟಾಗಮಸ್ಥಲ**ವೆಂದು ಹೆಸರು. ಈ ಸ್ಥಲದಲ್ಲಿ ಪಕ್ವನಾದ ಶಿವಯೋಗಿ ಎಲ್ಲವೂ ಮಾತುಮನಂಗಳಿಂದತ್ತತ್ತ ಮೀರಿದ ಬಯಲಾಗಿ ತೋರುತ್ತದೆ.

'ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು, ಬಯಲು ಬಯಲಾಗಿ' ತೋರುತ್ತದೆ. ಜೀವನ, ಭಾವನೆಗಳೆಲ್ಲ ಬಯಲಾಗಿ, ಶಿವಲಿಂಗವನ್ನು ಪೂಜಿಸುವವನೂ ಬಯಲಾಗಿ ಹೋಗುತ್ತಾನೆ.೭೯ ಸೃಷ್ಟಿಗೆ ಆಧಾರನಾದ ಪರಶಿವನ ಪ್ರಸಾದದಿಂದ ನಷ್ಟಾ

---

೭೬ ಸಿದ್ಧಲಿಂಗೇಶ್ವರ 'ಏಕೋತ್ತರಶತಸ್ಥಲ' ಪುಟ ೧೧೬
ಮಹಾಲಿಂಗದೇವ 'ಏಕೋತ್ತರಶತಸ್ಥಲ' ಪುಟ ೩೧೭–೩೧೯
ಶಿವಯೋಗಿಶಿವಾಚಾರ್ಯ–'ಸಿದ್ಧಾಂತ ಶಿಖಾಮಣಿ' (ನಿರ್ದೇಹಾಗಮಸ್ಥಲ)
ಶ್ಲೋಕ ೩೭–೩೮

೭೭ ಮಹಾಲಿಂಗದೇವ–'ಏಕೋತ್ತರ ಶತಸ್ಥಲ' ಪುಟ ೩೦೦–೩೦೨
ವಚನಶಾಸ್ತ್ರಸಾರ II ಪುಟ ೫೦೬–೫೦೭
ಶಿವಯೋಗಿ ಶಿವಾಚಾರ್ಯ–'ಸಿದ್ಧಾಂತ ಶಿಖಾಮಣಿ' (ನಿರ್ಭಾವಾಗಮಸ್ಥಲ)
ಶ್ಲೋಕ ೪೪–೪೫

೭೮ ಶಿವಯೋಗಿ ಶಿವಾಚಾರ್ಯಕೃತ–'ಸಿದ್ಧಾಂತ ಶಿಖಾಮಣಿ' (ನಷ್ಟಾಗಮಸ್ಥಲ)
ಶ್ಲೋಕ ೫೧-೫೩
ಮಹಾಲಿಂಗದೇವ–'ಏಕೋತ್ತರ ಶತಸ್ಥಲ' ಪುಟ ೩೧೩–೩೧೬ ಹಾಗೂ ಪದ್ಯ

೭೯ ಮಹಾಲಿಂಗದೇವ–'ಏಕೋತ್ತರ ಶತಸ್ಥಲ' ಪುಟ ೩೧೬–೩೨೮
ಮೊಗ್ಗೆಯ ಮಾಯಿದೇವ–'ಏಕೋತ್ತರ ಶತಸ್ಥಲ' ಪದ್ಯ ೭೯, ೮೦

ಗಮದಲ್ಲಿರುವ ಶಿವಯೋಗಿಯು ಆದಿಪ್ರಸಾದಿಯಾಗುವನು, ಪೃಥಿವ್ಯಾದಿಸಕಲ ಪದಾರ್ಥಗಳ ಲಯಕ್ಕೆ ಪರಶಿವನು ಆಧಾರಭೂತನಾದ್ದರಿಂದ ಅವನೆ ಅಂತ್ಯನೆನಿಸುವನು. ಕಾರಣ ಸಕಲ ವಸ್ತುಗಳ ಅಂತರ್ಯಾದಲ್ಲಿರುವ ಪರಶಿವನ ಸಾಕ್ಷಾತ್ಕಾರವು ಅಂತ್ಯಪ್ರಸಾದವೆಂದೂ, ಆ ಪ್ರಸಾದಾನುಭಾವಿಯು ಅಂತ್ಯಪ್ರಸಾದಿ ಎಂದು ಕರೆಯಲ್ಪಡುತ್ತಾನೆ. ಹೀಗೆ ಆದಿ-ಅಂತ್ಯ ಪ್ರಸಾದಿಸ್ಥಲಸಂಪನ್ನನಾದ ಪ್ರಾಣಲಿಂಗಿಯು ಶಿವಸ್ವರೂಪದ ಹಾಗೂ ಗುರೂಪದೇಶದ ಅನುಭವ ಪ್ರಸಾದವನ್ನು ಪಡೆದನೆಂದರೆ ಸೇವ್ಯಪ್ರಸಾದಿಯಾಗುತ್ತಾನೆ. ದಶವಿಧಪಾದೋದಕ, ಏಕಾದಶ ಪ್ರಸಾದವ ಬಲ್ಲವನಾಗಿ, ಜ್ಞಾತೃ-ಜ್ಞಾನ-ಜ್ಞೇಯಗಳನ್ನತಿಗಳೆದು, ನಿಃಪತಿ ಪದವು ತಾನಾಗಿ, ಚಿದ್ಘನ ಬೆಳಗಿನ ಬೆಳಗಿನೊಳಗೆ ಒಂದಾಗುವ ಶರಣನೀತ.೮೦

**ಆದಿ-ಅಂತ್ಯ-ಸೇವ್ಯವೆಂಬ ತ್ರಿವಿಧಸ್ಥ**ಲಗಳೊಂದಾದ ಶಿವಲಿಂಗವು, ಪ್ರಾಣಲಿಂಗಿಯಲ್ಲಿದ್ದ ಸೂಕ್ಷ್ಮಮಲತ್ರಯಗಳನ್ನು ಕಳೆದು, ಪ್ರಾಣವನ್ನು ನಿರ್ಮಲಗೊಳಿಸಲು, ಪಾದೋದಕ ಸ್ವರೂಪವನ್ನು ತಳೆಯುತ್ತದೆ. ಗುರುಮುಖದಿಂದ ಪರತತ್ವದ ಬಗೆಗೆ ವಿಶೇಷ ಜ್ಞಾನವನ್ನು ಹೊಂದಿದ ಸೇವ್ಯಪ್ರಸಾದಿಗೆ, ಗುರುಕರುಣಾಮೃತವೆಂಬಪಾದೋದಕವು ಸುಲಭ ಸಾಧ್ಯವಾಗುವುದೆ **ದೀಕ್ಷಾಪಾದೋದಕಸ್ಥ**ಲವಾಗುತ್ತದೆ. ಈ ದಿಸೆಯಲ್ಲಿ ಪಾದೋದಕ, ಲಿಂಗೋದಕ, ಮಜ್ಜನೋದಕ, ಸ್ಪರ್ಶನೋದಕ, ಅವಧಾನೋದಕ, ಅಪ್ಯಾಯನೋದಕ, ಹಸ್ತೋದಕ ಹಾಗೂ ಪರಿಣಾಮೋದಕ ಎಂಬ ದಶವಿಧ ಪಾದೋದಕ ಪ್ರಕಾರಗಳ ಮರ್ಮ ಹಾಗೂ ಮಹತ್ವ ಚನ್ನಬಸವಣ್ಣನಿಗಿದ್ದಂತೆ ತಿಳಿದುಬರುತ್ತವೆ.೮೧ ಪ್ರಾಣಲಿಂಗಿ, ಯಲ್ಲಿ ಶಿಕ್ಷೆಯು ಮುಖಾಂತರ ದೃಷ್ಟವಾಗುವ ಪಾದೋದಕಸ್ವರೂಪಕ್ಕೆ **ಶಿಕ್ಷಾಪಾದೋದಕ**ವೆಂದು ಹೆಸರು. ಕಾಯಾ-ವಾಚಾ-ಮನಸಾ ಅನನ್ಯ ಶರಣಗತನಾಗಿ ಗುರು-ಲಿಂಗ-ಜಂಗಮರ ಶ್ರೀ ಪಾದೋದಕವನ್ನುಹೊಂದಿ ಮಹಾಜ್ಞಾನ ಗುರುತತ್ತ್ವದಲ್ಲಿ ಪರಮಾನಂದ ಸ್ವರೂಪವನ್ನು ಅನುಭವಿಸುವದು **ಜ್ಞಾನಪಾದೋದಕಸ್ಥಲ.** ಜ್ಞಾನಗುರುವಿನಲ್ಲಿ ಐಕ್ಯವಾಗಿ ಸುಜ್ಞಾನಾಮೃತವ ಸೇವಿಸುವಾತನು ಪರಮಸುಖಿ ಎಂಬ ಒಳಗುಟ್ಟು ಇಲ್ಲಿದೆ.

---

೮೦ Ibid ಪುಟ ೩೩೧

೮೧ ಮಹಾಲಿಂಗದೇವ-'ಏಕೋತ್ತರ ಶತಸ್ಥಲ' ಪುಟ ೩೩೪-೩೩೭
ಶಿವಯೋಗಿ ಶಿವಾಚಾರ್ಯ ಕೃತ-'ಸಿದ್ಧಾಂತ ಶಿಖಾಮಣಿ' (ದೀಕ್ಷಾಪಾದೋದಕ ಸ್ಥಲ ಹಾಗೂ ಜ್ಞಾನಪಾದೋದಕ ಸ್ಥಲ)
ಪ್ರಾಣಲಿಂಗಿಸ್ಥಲದಲ್ಲಿಯ ಲಿಂಗಸ್ಥಲದ ಕೊನೆಯ ಮೂರು ಹಂತಗಳು ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿಯ ಪ್ರಕಾರ, ಶರಣಸ್ಥಲದ ಲಿಂಗಸ್ಥಲದಲ್ಲಿಯ ಮೊದಲ ಮೂರು ಸ್ಥಗಳಾಗಿ ಗೋಚರಿಸುತ್ತವೆ. ಮೊಗ್ಗೆಯ ಮಾಯಿದೇವನ 'ಏಕೋತ್ತರ ಶತಸ್ಥಲ'(ಪದ್ಯ)ವೂ ಸಿದ್ಧಾಂತ ಶಿಖಾಮಣಿಯನ್ನೇ ಅನುಸರಿಸುತ್ತದೆ

ತಾನೆ ಗುರು-ಲಿಂಗ-ಜಂಗಮ-ಪಾದೋದಕ-ಪರಮಾನಂದ-ನಿತ್ಯ ನಿರಂಜನನೆಂಬ ಅರಿವು ಈ ಸ್ಥಲದಲ್ಲಿ ಜಾಗ್ರತವಾಗುತ್ತದೆ.೮೨

V ಶಿವಜ್ಞಾನಸ್ವರೂಪನೂ ಲಿಂಗಾಂಗಸಾಮರಸ್ಯವುಳ್ಳವನೂ ಆದ ಪ್ರಾಣ ಲಿಂಗಿಯು ಮಹಾಜ್ಞಾನವನ್ನು ಹೊಂದಿ 'ತಾನೇ ಸತಿ ಶಿವಲಿಂಗವೇ ಪತಿ' (ಶರಣಸತಿ ಲಿಂಗಪತಿಭಾವವ ತಳೆದು) ಎಂಬ ಭಾವವನ್ನು ಬೆಳೆಸಿಕೊಂಡು ಶರಣನಾಗುತ್ತಾನೆ. ಇನ್ನು ಉತ್ಕೃಷ್ಟ ಶಿವಾನುಭವಿಯಾಗಿ, ಮಹಾಜ್ಞಾನಪೂರ್ಣನಾಗಿ, ಲಿಂಗದ ಆವಾಸಭೂಮಿಯೂ ಆಗಿ, ಅದೇಕೆ-ಸದೇಹ ಅರಿವಿನ ಮೂರ್ತಿಯಾಗಿ (=ಸದೇಹಲಿಂಗವಾಗಿ) ಸಂಚರಿಸುತ್ತಾನೆ. ಇಂಥ ಶರಣನ ಆಚರಣೆ ಹಾಗೂ ಹೊಂದಿದ ನಿಲುವನ್ನು ಶರಣಸ್ಥಲ ಪ್ರದರ್ಶಿಸುತ್ತದೆ. ಶರಣಸ್ಥಲದಲ್ಲಿ ಒಟ್ಟು ೧೩ ಉಪಭೇದಗಳಿದ್ದು ಅಲ್ಲಿ ೪ ಅಂಗಸ್ಥಲಗಳೂ ಹಾಗೂ ೯ಲಿಂಗ ಸ್ಥಲಗಳೂ ಸಮಾವೇಶಗೊಳ್ಳುತ್ತವೆ.




---

೮೨ ಮಹಾಲಿಂಗದೇವ-'ಏಕೋತ್ತರಶತಸ್ಥಲ' (ಶರಣಸ್ಥಲ) ಪುಟ ೧೫೫–೧೬೦
ಮೊಗ್ಗೆಯ ಮಾಯಿದೇವ–'ಏಕೋತ್ತರಶತಸ್ಥಲ (ಪದ್ಯ) ೩೭

ಪುರುಷಂಗೆ ತನ್ನ ತನುಮನದೊಳದವಿದ ಸುಖವ
ಸರಸ ಮೃದು ಮಧುರೋಕ್ತಿ ವಿಷಯ ಸುಖಗಳನೀವ
ತರುಣಿಯಂದದೊಳಮಳ ವೀರಶೈವಾಚಾರ ಷಟ್‌ಸ್ಥಳಂಗಳ ಪಥದೊಳು
ಭರಿತವಾಗಿರಲು ಭಸಿತವಾಗಿರಲು ಸಕಲಗುಣಗಳನಳಿದು →

ಶಿವಜ್ಞಾನಸ್ವರೂಪನೂ ಲಿಂಗಾಂಗಸಾಮರಸ್ಯವುಳ್ಳವನೂ ಆದ ಪ್ರಾಣಲಿಂಗಿಯು 'ಶರಣಸತಿಲಿಂಗಪತಿ' ಭಾವವನ್ನು ಬೆಳೆಸಿಕೊಂಡು ಶರಣನಾಗುತ್ತಾನೆ. ಇಲ್ಲವೆ ಮಹಾ ಜ್ಞಾನಪೂರ್ಣನಾಗಿ, ಲಿಂಗದ (=ಪರಶಿವನ) ಆವಾಸಭೂಮಿಯೂ ಆಗಿ, ಸ್ವತಃಲಿಂಗ ಮೂರ್ತಿಯಾಗಿರುವ ಜ್ಞಾನಿಯು ಶರಣನೆನಿಸುತ್ತಾನೆ. ಪತಿವ್ರತೆಯು ತನ್ನ ಪ್ರಾಣಕಾಂತ ನಲ್ಲಿ ಅನುರಕ್ತಳಾಗಿರುವಂತೆ ಶಿವಲಿಂಗಪತಿಯನ್ನು ನಂಬಿ ಅನ್ಯ ದೇವತೆಗಳನೆಚ್ಚದವನು ಶರಣ. ಲಿಂಗಾಂಗ ಸಾಮರಸ್ಯವೆಂಬ ಪರಮ ಸುಖವನ್ನು ಪಡೆವ ಶರಣನು 'ಲಿಂಗದ ನಡೆ, ಲಿಂಗದ ನುಡಿ, ಲಿಂಗದ ನೋಟ' ಉಳ್ಳವನು. ಕರ್ತೃತ್ವ-ಕರ್ಮ-ಜನನ-ಮರಣ-ಭೂತಾತ್ಮದ ಚರಿತ್ರ-ಕರಣಾದಿಗುಣಗಳು-ಹಿಂದಣ ಸ್ಥಿತಿ-ಮುಂದಣ ಲಯ-ಆದಿಮಧ್ಯಾವ ಸಾನಗಳು ಶರಣನಿಗಿಲ್ಲ; ಉಪಮಾತೀತನವನು. ನಿತ್ಯನಿರಂಜನವಸ್ತು ತಾನೆಂದರಿದು ಸುಜ್ಞಾನಜ್ಯೋತಿಯು ಬೆಳಗಿನ (ಚಿತ್ತದ) ಪ್ರಾಣಲಿಂಗದ ಮಹತ್ವದಲ್ಲಿ ಸತ್ಯಸ್ವರೂಪ ನಾಗಿರುತ್ತಾನೆ. ಆತನ ಸ್ಥಲವೇ ಶರಣಸ್ಥಲ.[೬೩] ಈ ಶರಣನಿಗೆ ಒಮ್ಮೊಮ್ಮೆ ಉಂಟಾಗುವ ತಾಮಸದ ನಿರಸನ ಕಾರ್ಯವನ್ನು **ತಾಮಸನಿರಸನಸ್ಥಲವು** ನಿರೂಪಿಸುತ್ತದೆ. ಪರುಷ ವನ್ನು ಮುಟ್ಟುವ ಲೋಹ ಹೊನ್ನಾಗುವುದರಿಂದ ಫಲವೇನು? ಲೋಹ ಪರುಷಕ್ಕೆ ಸಾಟಿಯಾಗದು. ಗುರುಕರುಣವನ್ನು ಪಡೆದು ಗುರುವಿನಂತಾಗಬೇಕಲ್ಲದೆ ಪರಿಭವ ತಪ್ಪದೆಂಬುದು ಈ ಸ್ಥಲದ ಮಹತ್ವ.[೬೪] ತಮೋನಿರಸನದಿಂದ ಮೋಕ್ಷಸಾಧಕವಾದ ಶಿವಜ್ಞಾನದ ಉದಯವಾಗುತ್ತದೆ. ಆ ಜ್ಞಾನಮಾರ್ಗವನ್ನು ನಿರ್ದೇಶಿಸುವ ಸ್ಥಲವೆ **ನಿರ್ದೇಶಸ್ಥಲ.**[೬೫] ಇಲ್ಲಿ ಶಿವತತ್ವವನ್ನು ಅರಿವ ಬಯಕೆಯುಂಟಾಗುವುದೇ ಶೀಲ ವಾಗಿದ್ದು, ಅಂಥ ಶೀಲಸಂಪನ್ನನಾಗುವ ಹಂತವು **ಶೀಲಸಂಪಾದನಸ್ಥಲ.**[೬೬] 'ಶರಣಸತಿ

---

→ ಹರನೊಳಗೆ ಭಾವರಸ ಬಲಿದಿರ್ಪದಾತನನು
ಶರಣಕುಲ ಹರುಷದೊಳು ಶರಣಸ್ಥಲವದೆಂದು ಪಿಸಿದುಪೊಗಳಿಯೆ ಪೇಳ್ವರು||
ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' (ಶರಣಸ್ಥಲ)
ಶ್ಲೋಕ ೧-೬-೧೦

೬೩ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೧೯೪ (ಪದ್ಯ)

೬೪ ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' (ನಿರ್ದೇಶಸ್ಥಲ)
ಶ್ಲೋಕ ೨೨-೨೬

೬೫ Ibid. (ಶೀಲಸಂಪಾದನಸ್ಥಲ) ಶ್ಲೋಕ ೩೦ ff (ಮಹಾಲಿಂಗದೇವ-'ಏಕೋತ್ತರ ಶತಸ್ಥಲ) ಪುಟ ೧೬೯-೧೭೩

೬೬ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೩೪೯-೩೫೩
ಶಿವಯೋಗಿ ಶಿವಾಚಾರ್ಯ-'ಸಿದ್ಧಾಂತ ಶಿಖಾಮಣಿ' (ಕ್ರಿಯಾನಿಷ್ಪತ್ತಿಸ್ಥಲ)
ಶ್ಲೋಕ ೨೯-೩೧
ಮೊಗ್ಗೆಯ ಮಾಯಿದೇವ-'ಏಕೋತ್ತರಶತಸ್ಥಲ' ಪದ್ಯ

ಲಿಂಗಪತಿ' ಎಂಬ ದೃಢಭಾವವುಳ್ಳವನಾಗಿ, ಶಿವಲಿಂಗವಿಷಯಕನಾಗಿರುವ ನಿಷ್ಠಾರೂಪ ಶೀಲವುಳ್ಳ ಶರಣನು ಮುಂದೆ ಐಕ್ಯಸ್ಥಿತಿಗೇರಲು ಶಕ್ತನಾಗುತ್ತಾನೆ.

ಶರಣಸ್ಥಲದ ಅಂಗಸ್ಥಲಗಳ ನಿರಂತರ ಸಾಧನೆಯು ಪ್ರಗತಿಪಥದತ್ತ ಸಾಗಿದಂತೆ ಲಿಂಗಸ್ಥಲಗಳಲ್ಲಿ ತೋರುವ ಪರವಸ್ತುವಿನ ಪ್ರಭೆಯು ಶರಣನ ಅಂಗದಲ್ಲಿ ಇಳಿಯಲು ಆರಂಭವಾಗುತ್ತದೆ. ಶರಣನ ಸತ್ಕ್ರಿಯೆಯಿಂದ ದೀಕ್ಷಾ-ಶಿಕ್ಷಾ-ಜ್ಞಾನಪಾದೋದಕಗಳು ನಿಷ್ಪತ್ತಿಸ್ವರೂಪವನ್ನು ಹೊಂದುತ್ತವೆ. ಅದು **ಕ್ರಿಯಾನಿಷ್ಪತ್ತಿಸ್ಥಲ**ವೆನ್ನಿಸುತ್ತದೆ. ಲಿಂಗದ ಆಚರಣೆಯಿಂದ ಅನುಭಾವ, ಮಾರ್ಗಕ್ರಿಯೆ, ಮೀರಿದಕ್ರಿಯೆ ಕೊನೆಗೆ ಕ್ರಿಯಾ ನಿಷ್ಪತ್ತಿಯುಂಟಾಗುತ್ತದೆ; ನಂತರ ಸರ್ವಾಂಗಲಿಂಗವಾಗುವ ಸ್ಥಿತಿಯು ಪ್ರಾಪ್ತವಾಗುತ್ತದೆ ಹಾಗೂ ನಿಶ್ಯಬ್ದಾತೀತಸ್ಥಿತಿಯುಂಟಾಗುತ್ತದೆ.[೮೭] ಬಳಿಕ ನಿಷ್ಪತ್ತಿ ಕ್ರಿಯೆಯುಳ್ಳ ಶಿವಜ್ಞಾನಿಯಲ್ಲಿ ಭಾವಸಂಬಂಧವಿಲ್ಲದಿದ್ದರೂ, ಸಚ್ಚಿದಾನಂದ ಸ್ವರೂಪನಾದ ಶಿವನಲ್ಲಿ ಅತ್ಯಂತ ಸೂಕ್ಷ್ಮರೂಪದ ಶಿವಭಾವ ಸಂಬಂಧವಿರುತ್ತದೆ. ಪ್ರಾಣದ ಕೊನೆಯ ಮೊನೆಯಲ್ಲಿ ತೋರುವ ಭಾವವು ಜ್ಞಾನದೊಡನೆ ಕೂಡಿ, ಪರಶಿವನಲ್ಲಿ ಸಮರಸವಾದರೆ ಆಗ, ಶಿವಯೋಗಿಯು ಸ್ವಸ್ವರೂಪಾನುಸಂಧಾನವನ್ನು ಅರಿತವನಾಗುತ್ತಾನೆ; ಶಿವೋಹಂ ಭಾವದಲ್ಲಿ ಪ್ರಕಾಶಿಸುತ್ತಾನೆ. ಅದು **ಭಾವನಿಷ್ಪತ್ತಿಸ್ಥಲ.**[೮೮] ಶಿವಯೋಗಿಯಲ್ಲಿರುವ ಸ್ವಸ್ವರೂಪಜ್ಞಾನವು ಸ್ವಾತ್ಮದಲ್ಲಿ ಲೀನವಾಗುವುದೆ ಜ್ಞಾನನಿಷ್ಪತ್ತಿಸ್ಥಲ. ಅದಕ್ಕೆ ಉದಾಹರಣೆ

'ಕಾಯಗುಣಂಗಳಳಿದು ಜೀವನ್ಮುಕ್ತನಾದ ಬಳಿಕ,
ಸಮ್ಯಗ್‌ಜ್ಞಾನವೆಂಬುದೊಂದು ಶಾಂತವು ದೊರೆಕೊಂಡಿತ್ತು ನೋಡಿರೆ!
ಅಂತರಂಗ ಬಹಿರಂಗವೆಂಬವನಱಿಯನಾಗಿ, ದ್ವೈತಾದ್ವೈತವ ನೀಕರಿಸಿ
ನಿರ್ವಾಣ ನಿಃಪತಿಯಾಗಿ-ಗೊಹೇಶ್ವರಾ,
ನಿಮ್ಮ ಶರಣನನುಪಮಸುಖಿಯಾಗಿರ್ದ.'

ಪಿಂಡದ ಉಪಾಧಿಯಿಂದ ಘಟಾಕಾಶ, ಮಠಾಕಾಶ ಇತ್ಯಾದಿಯಾಗಿ ತೋರಿದರೂ, ಆಕಾಶವು ಸ್ವರೂಪತಃ ಅಖಂಡವಾಗಿದೆ. ದೇಹದ ಉಪಾಧಿಯಿಂದ ಖಂಡಿತನಾಗಿದ್ದರೂ,

---

೮೭ ಶಿವಯೋಗಿ ಶಿವಾಚಾರ್ಯಕೃತ-'ಸಿದ್ಧಾಂತ ಶಿಖಾಮಣಿ' (ಭಾವನಿಷ್ಪತ್ತಿಸ್ಥಲ)
ಮಹಾಲಿಂಗದೇವ–'ಏಕೋತ್ತರಶತಸ್ಥಲ' (ಜ್ಞಾನನಿಷ್ಪತ್ತಿಸ್ಥಲ)
ಪುಟ ೩೪೭–೩೪೯
ಮೊಗ್ಗೆಯ ಮಾಯಿದೇವ-'ಏಕೋತ್ತರಶತಸ್ಥಲ' (ಪದ್ಯ) ೮೫

೮೮ ಮಹಾಲಿಂಗದೇವ–'ಏಕೋತ್ತರಶತಸ್ಥಲ' ಪುಟ ೩೪೯–೩೫೧
ಶಿವಯೋಗಿ ಶಿವಾಚಾರ್ಯಕೃತ–'ಸಿದ್ಧಾಂತ ಶಿಖಾಮಣಿ' (ಪಿಂಡಾಕಾಶಸ್ಥಲ)
ಶ್ಲೋಕ ೯–೫೮

ಆತ್ಮನು ಉಪಾಧಿರಹಿತನಾದಾಗ ಪರಿಪೂರ್ಣನೂ ಅದ್ವೈತ ಸಂಪನ್ನನೂ ಆಗಿರುವನೆಂಬು ದನ್ನು ವಿವರಿಸಲು ಪಿಂಡಾಕಾಶಸ್ಥಲವಾಗುತ್ತದೆ.[೮೯] ಸೂರ್ಯನು ಜಗತ್ತನ್ನು ಪ್ರಕಾಶಿಸು ವಂತೆ ಪರಶಿವ ಸ್ವರೂಪಿಯಾದ ಪಿಂಡದೊಳಗಿದ್ದ ಆತ್ಮನು ತನ್ನ ಇಚ್ಛಾ-ಜ್ಞಾನ-ಕ್ರಿಯಾ ಶಕ್ತಿಗಳಿಂದ ಜಗತ್ತನ್ನೆಲ್ಲ ವ್ಯಾಪಿಸಿಕೊಂಡಿರುವನೆಂಬ ವಿವೇಕವೇ **ಬಿಂದ್ವಾಕಾಶಸ್ಥಲ**[೯೦] ಮರದೊಳಗಿಹ ಮಂದಾಗ್ನಿಯಂತೆ, ನೊರೆ ಹಾಲೊಳಗಿಹ ತುಪ್ಪದಂತೆ, ದೇಹದಲ್ಲಿ ಆತ್ಮನು ಕಾಣದಂತಿದ್ದಾನೆ.

ಒಳಹೊರಗಿರುವ ಘಟಾಕಾಶ-ಮಹಾಕಾಶಗಳು ಒಂದೆ ಆಗಿರುವಂತೆ ದೇಹೋ ಪಾಧಿಯುಳ್ಳ ಆತ್ಮನೂ, ಸರ್ವವ್ಯಾಪಕನಾದ ಶಿವನೂ ಒಂದೆ ಎಂದು ತಿಳಿವುದು **ಮಹಾ ಕಾಶಸ್ಥಲ.** ಶಿವಲಿಂಗವು ಶರಣನ ಸರ್ವಕ್ರಿಯೆಗಳಲ್ಲಿ ಪ್ರಕಾಶಮಾನವಾಗಿರುವುದೆ **ಕ್ರಿಯೂಪ್ರಕಾಶಸ್ಥಲ.** ('ಕ್ರಿಯಾಭಾವದಿಂದ ಸಕಲೇಂದ್ರಿಯಂಗಳು ಕೂಡಲಚೆನ್ನ ಸಂಗಯ್ಯನಲ್ಲಿ ತಲ್ಲೀಯ ತದ್ರೂಪು!') ಶರಣನ ಮಹಾನುಭಾವ ಮಧ್ಯದಲ್ಲಿ ಭಾವ ಸ್ವರೂಪವು ತಾನೆ ತಾನಾಗಿ ಪ್ರಕಾಶವಾಗಿ ತೋರುತ್ತದೆ. ಅದು **ಭಾವಪ್ರಕಾಶಸ್ಥಲ** ಶರಣನ ಭಾವವು ನಷ್ಟವಾಗಿ ಮಹಾಜ್ಞಾನವು ತನ್ನಲ್ಲಿ ತಾನು ಪ್ರಕಾಶಿಸುವ ಇರವೆ **ಜ್ಞಾನ ಪ್ರಕಾಶಸ್ಥಲ**ವೆನ್ನಿಸುವದು. ಅಲ್ಲಮಪ್ರಭುವಿನ ವಾಣಿಯಂತೆ-

"ಸುಖವ ಬಲ್ಲಾತ ಸುಖಿಯಲ್ಲ, ದುಃಖವ ಬಲ್ಲಾತ ದುಃಖಿಯಲ್ಲ
ಸುಖದುಃಖವೆರಡನು ಬಲ್ಲಾತ ಜ್ಞಾನಿಯಲ್ಲ.
ಹುಟ್ಟದ ಮುನ್ನ ಸತ್ತವರ ಕುರುಹ ಬಲ್ಲಡೆ, ಬಲ್ಲ ಗುಹೇಶ್ವರ![೯೧]

VI ಕೊನೆಯದಾದ ಐಕ್ಯಸ್ಥಲದಲ್ಲಿ ೧೩ ಉಪಸ್ಥಲಗಳಿದ್ದು, ೪ ಅಂಗಸ್ಥಲಗಳು ಹಾಗು ೯ ಲಿಂಗಸ್ಥಲಗಳು ಕೆಳಗಿನಂತೆ ಅಡಕವಾಗಿರುತ್ತವೆ.

---

೮೯ ಶಿವಯೋಗಿ ಶಿವಾಚಾರ್ಯಕೃತ-'ಸಿದ್ಧಾಂತ ಶಿಖಾಮಣಿ' (ಬಿಂದ್ವಾಕಾಶಸ್ಥಲ) ಶ್ಲೋಕ ೬೪

೯೦ ಮಹಾಲಿಂಗದೇವ-'ಏಕೋತ್ತರ ಶತಸ್ಥಲ' (ಮಹದಾಕಾಶಸ್ಥಲ, ಕ್ರಿಯಾ ಪ್ರಕಾಶಸ್ಥಲ)
ಸಿದ್ಧಲಿಂಗೇಶ್ವರ 'ಏಕೋತ್ತರ ಶತಸ್ಥಲ' ಪುಟ ೩೫೫-೩೬೦
ಶಿವಯೋಗಿ ಶಿವಾಚಾರ್ಯಕೃತ-'ಸಿದ್ಧಾಂತ ಶಿಖಾಮಣಿ' (ಮಹಾದಾಕಾಶ ಸ್ಥಲ, ಕ್ರಿಯೊಪ್ರಕಾಶಸ್ಥಲ)
ಮೊಗ್ಗೆಯ ಮಾಯಿದೇವ-'ಏಕೋತ್ತರಶತಸ್ಥಲ' ಪದ್ಯ ೮೯

೯೧ ಮಹಾಲಿಂಗದೇವ-'ಏಕೋತ್ತರಶತಸ್ಥಲ' ಪುಟ ೩೬೪, ವ. ೧,
ಪುಟ ೩೬೮, ವ, ೧೩

ಐಕ್ಯಸ್ಥಲ

ಅಂಗಸ್ಥಲ

೧ ಐಕ್ಯಸ್ಥಲ
೨ ಸರ್ವಾಚಾರ ಸಂಪತ್ತುಸ್ಥಲ
೩ ಏಕಭಾಜನಸ್ಥಲ
೪ ಸಹಭೋಜನಸ್ಥಲ

ಲಿಂಗಸ್ಥಲ

೧ ಕೊಂಡುದು ಪ್ರಸಾದಸ್ಥಲ
೨ ನಿಂದುದೋಗರಸ್ಥಲ
೩ ಚರಾಚರನಾಸ್ತಿಸ್ಥಲ
೪ ಭಾಂಡಸ್ಥಲ
೫ ಭಾಜನಸ್ಥಲ
೬ ಅಂಗಲೇಪನಸ್ಥಲ
೭ ಸ್ವಯಪರವರಿಯದಸ್ಥಲ
೮ ಭಾವಾಭಾವನಷ್ಟಸ್ಥಲ
೯ ಜ್ಞಾನಶೂನ್ಯಸ್ಥಲ.

ಶರಣಸ್ಥಲದಲ್ಲಿ ನಿಂತು ಮಹಾಜ್ಞಾನ ವಿವೇಕದಿಂದ ಸಕಲ ಸಂಶಯಗಳ ಕಳೆದು ನಿಜವನರಿದು ಪರಮಾನಂದದಲ್ಲಿ ಸುಖಿಯಾದ ಶರಣನು, ತನ್ನ ಅರಿವನ್ನು ಘನಗೊಳಿಸಿ, ಮರವೆಯ ನಷ್ಟಗೊಳಿಸಿ, ಮಹಾಲಿಂಗದಲ್ಲಿ ಐಕ್ಯನಾಗುತ್ತಾನೆ. ಈ ರಹಸ್ಯವು **ಐಕ್ಯಸ್ಥಲ ದಲ್ಲಿ** ವ್ಯಕ್ತವಾಗುತ್ತದೆ. ಅಂದರೆ, ಮಲರಹಿತನೂ ನಿಷ್ಕಳಂಕನೂ ಶಿವೋಹಂ ಎಂಬ ಅನುಸಂಧಾನವುಳ್ಳವನೂ ಪರಶಿವನಲ್ಲಿ ಐಕ್ಯ ಹೊಂದುತ್ತಾನೆ. 'ಕರ್ಪೂರದ ಪ್ರಣತೆಯುಲ್ಲಿ ಜ್ಯೋತಿಯು ಬೆಳಗುವಂತೆ', 'ಕರ್ಪೂರದ ಗಿರಿಯನುರಿಕೊಂಡಂತೆ'. ಲಿಂಗಾಂಗ ಸಾಮರಸ್ಯ ದಿಂದ ಸುಜ್ಞಾನಭರಿತವಾಗಲು ಪೂರ್ಣ ಆನಂದ ಪ್ರಾಪ್ತವಾಗುತ್ತದೆ[೯೨] ಶರಣನು ದೇಹ ಧಾರಿಯಾಗಿದ್ದರೂ ಬಾಹ್ಯಾಭ್ಯಾಂತರ ವ್ಯವಹಾರಗಳು ಲಿಂಗದ ಆಚಾರಗಳಾಗಿ ಪರಿಣಮಿಸು ತ್ತವೆ. ಆಗ ಷಟ್‌ಸ್ಥಲ ಸಂಪನ್ನವಾದ ಸರ್ವಾಚಾರವು ನೆಲೆಗೊಂಡದ್ದು

**ಸರ್ವಾಚಾರ ಸಂಪತ್ತು ಸ್ಥಲ.** ಈ ಸ್ಥಲದ ನಿರ್ದೇಶಕ್ಕೆ ಉದಾಹರಣೆ–

'ಕಿಂಕುರ್ವಾಣತೆಯಿಂದ, ಬಂದ ಜಂಗಮವೆ ಲಿಂಗವೆಂದು,
ತನಗುಳ್ಳುದನಱಿದು ಮನ ಸಹಿತ ಮಾಡುವಲ್ಲಿ ಭಕ್ತ.
ನಿಷ್ಠೆ ನಿಬ್ಬೆರಸಿ ಗಟ್ಟಿಗೊಂಡು, ಅಭಿಲಾಷೆ ಸಮನಿಸದೆ,

---

೯೨ ಮಹಾಲಿಂಗದೇವ–'ಏಕೋತ್ತರ ಶತಸ್ಥಲ' (ಐಕ್ಯಸ್ಥಲ ಪುಟ ೧೭೪-೧೭೭);
ಸಿದ್ಧಲಿಂಗೇಶ್ವರ 'ಏಕೋತ್ತರ ಶತಸ್ಥಲ' (ಐಕ್ಯಸ್ಥಲ);
ಮೊಗ್ಗೆಯ ಮಾಯಿದೇವ-'ಏಕೋತ್ತರ ಶತಸ್ಥಲ' ಪದ್ಯ ೪೧;
ವಚನ ಶಾಸ್ತ್ರಸಾರ II ಪುಟ ೪೨೭-೪೨೮

ಪರಿಚ್ಛೇದ ಬುದ್ಧಿಯುಳ್ಳಲ್ಲಿ, ಮಾಹೇಶ್ವರ,
ಅನರ್ಪಿತ ಸಮನಿಸದೆ, ಬಂದುದ ಕಾಯದ ಕೈಯಲ್ಲಿ ಕೊಟ್ಟು,
ಲಿಂಗಸಹಿತ ಭೋಗಿಸುವಲ್ಲಿ, ಪ್ರಸಾದಿ.
ಪ್ರಾಣಕ್ಕೆ ಪ್ರಾಣವಾಗಿದ್ದುದನು, ಕಾಯಸ್ಥಿತಿಯನರಿದು ಎಚ್ಚರಗುಂದದಿಪ್ಪಲ್ಲಿ
ಪ್ರಾಣಲಿಂಗಸಂಬಂಧಿ.
ತನಗೆ ಲಿಂಗವಾಗಿ, ಲಿಂಗಕ್ಕೆ ತಾನಾಗಿ,
ಬಿಚ್ಚಿಬೇರಿಲ್ಲದಿಹ ಬೆಡಗಿನ ಚಿಲುಮೆಯಲ್ಲಿ, ಶರಣ.
ಸದಾಚಾರ ಸಂಪತ್ತಿನಲ್ಲಿ ಬಂದನುಭಾವವ ಮೀರಿ,
ಹೆಸರಡಗಿದ ಸುಖವದು ಲಿಂಗೈಕ್ಯವು........"[೯೩]

ಹೀಗೆ ಸರ್ವಾಚಾರ ಸಂಪತ್ತು ಸರ್ವಾಂಗದಲ್ಲಿ ಲೀನವಾದ ಲಿಂಗೈಕ್ಯನಿಗೆ ಮಹಾಲಿಂಗವು ಭಾಜನ (=ಆಧಾರ)ವಾಗಿ, ಆ ಮಹಾಲಿಂಗಕ್ಕೆ ಲಿಂಗೈಕ್ಯವೆ ಭಾಜನವಾಗಿ, ಉಭಯ ಸ್ವರೂಪವು ಏಕವಾಗಿ 'ಏಕಭಾಜನಸ್ಥಲ'ವೆಂಬ ನಾಮವುಂಟಾಗುತ್ತದೆ. (ಅಂಗದ ಮೇಲೆ ಪ್ರಾಣಪ್ರತಿಷ್ಠೆಯಾದ ಬಳಿಕ, ಲಿಂಗಕ್ಕೆಯೂ ತಮಗೆಯೂ ಏಕಭಾಜನವಲ್ಲದೆ ಬೇರೆ ಭಿನ್ನ ಭಾಜನವುಂಟೆ? —(ಚನ್ನಬಸವಣ್ಣ). ಸರ್ವಾಂಗವೂ ಲಿಂಗವಾದ ಮಹಿಮನಲ್ಲಿ ತೋರುವ ಅವಸ್ಥೆ ಇದು.

ಐಕ್ಯಸ್ಥಲದಲ್ಲಿಯ ಲಿಂಗಸ್ಥಲದ ಉಪವಿಭಾಗಗಳು ಮಹಾಲಿಂಗ ಶರಣರ ಅಭೇದ ಸ್ಥಿತಿಯನ್ನು ಎತ್ತಿ ತೋರಿಸುತ್ತವೆ.

ಮಹಾಘನಲಿಂಗದೊಳಗೆ ಭಿನ್ನಭಾವವಳಿದು ಪರಿಣಾಮ ಪ್ರಸಾದವನಾರೋಗಿಸಿ ಪರಮಾನಂದದಲ್ಲಿ ನಿರ್ವಯಲಾಗುವ ಐಕ್ಯನ ನೆಲೆಯು **ಕೊಂಡುದು ಪ್ರಸಾದ ಸ್ಥಲ.** ಪರಮಾನಂದ ಪ್ರಸಾದದ ನಿಜ ಸುಖವ ಹೊಂದಿ ತೃಪ್ತಿಗೊಂಡ ಲಿಂಗವು, ಐಕ್ಯನಲ್ಲಿ ತಾನೇ ಆಗಿ ನಿಂತ ನಿಲವೆ **ನಿಂದುದೋಗರ ಸ್ಥಲ.** ಲಿಂಗವು ಐಕ್ಯನಲ್ಲಿ ಚರಾಚರವೆಂಬ ಉಭಯನಾಸ್ತಿಯಾದ ಭೇದವೆ **ಚರಾಚರನಾಸ್ತಿಸ್ಥಲ** ಲಿಂಗವು ಐಕ್ಯನ ಸರ್ವಾಂಗವೆಂಬ ಭಾಂಡದಲ್ಲಡಗಿ, ಸರ್ವಾಚಾರವೆಂಬ ಸಕಲ ಕರಣ ದ್ರವ್ಯಗಳಿಗೆ ಆಶ್ರಯ ಸ್ಥಾನವಾಗಿರುವ ರಹಸ್ಯವೆ **ಭಾಂಡಸ್ಥಲ.** ಈ ಮಹಾಲಿಂಗವು ಐಕ್ಯನಿಗೆ ತಾನೆ ಮನಮೀಸಲ ಭಾಜನವಾಗಿರುವ ಮಹಿಮೆಯು **ಭಾಜನಸ್ಥಲ.** ಮಹಾಲಿಂಗವು ಐಕ್ಯನ ಸರ್ವಾಂಗದಲ್ಲಿ ನಿರ್ಲೇಪವಾದ ಭೇದವೆ **ಅಂಗಲೇಪನಸ್ಥಲ.** (ಲಿಂಗವ ಮುಟ್ಟಿದಂಗವೆಲ್ಲಾ ಲಿಂಗವಪ್ಪುವಯ್ಯಾ!) ಉದಾ:

'ಅಪ್ಪುವನ್ನಪ್ಪಿದ ವಾರಿಕಲ್ಲಿನಂತೆ, ವಾಯುವನ್ನಪ್ಪಿದ ಪರಿಮಳದಂತೆ,

---

೯೩ ಮಹಾಲಿಂಗದೇವ-'ಏಕೋತ್ತರ ಶತಸ್ಥಲ' ಪುಟ ೧೭೯-೧೮೦ ವ. ೭; ೨೧.

ಲಿಂಗವನ್ನಪ್ಪಿದ ಶರಣನ ದೇಹಿಯೆನ್ನಬಹುದೆ?
ಬಯಲೊಳಕೊಂಡ ಜ್ಯೋತಿಯಂತೆ-ಕೂಡಲಸಂಗಯ್ಯಾ,
ನಿಮ್ಮ ಶರಣನ ಪರಿ.'[೯೪]

ಮಹಾಲಿಂಗವು ಐಕ್ಯನಲ್ಲಿ 'ಇದಮಹಮೆಬ' ಉಭಯವನ್ನರಿಯದೆ ತಾನೆ ತಾನಾಗಿರ್ದ ರಹಸ್ಯವು **ಸ್ವಯಪರವಱಿಯದಸ್ಥಲ** ಅಂತರಂಗ-ಬಹಿರಂಗ ಆತ್ಮಸಂಗ ಒಂದೆಯಾಗಿ, ನಾದ-ಬಿಂದು ಕಳಾತೀತ ಆದಿಯಾಧಾರ ಒಂದೆಯಾಗಿ ಇರುವ ಪರವಸ್ತುವಿನ ಸಾಮರಸ್ಯದ ಸುಖವಿದು. ಸ್ವಯಪರವನರಿಯದ ಮಹಾಲಿಂಗವು ಐಕ್ಯನಲ್ಲಿ ಭಾವ-ನಿರ್ಭಾವಗಳು ನಷ್ಟವಾಗಲು ತೋರುವ ಮಹತ್ವವೆ **ಭಾವಾಭಾವನಷ್ಟಸ್ಥಲ**ವಾಯಿತು. ಈ ಮಹಾಲಿಂಗವು ಐಕ್ಯನ ಮೂಲಜ್ಞಾನವನ್ನಪ್ಪಿ, ಜ್ಞಾನವೆ ತಾನಾಗಿ, ಆ ಜ್ಞಾನವು ನಿಜದಲ್ಲಿ ನಿಂತು ಶೂನ್ಯವಾದ ರಹಸ್ಯವೆ **ಜ್ಞಾನಶೂನ್ಯಸ್ಥಲ.** ಅರುಹಿನ ಕುರುಹು ನಿರಾಳವಾದುದರ ಗೌಪ್ಯವಿದು. ತಾನು ಇದಿರೆಂಬುದನ್ನರಿಯದೆ, ಧ್ಯಾನವು ನಷ್ಟವಾಗಿ ಜ್ಞಾತೃ-ಜ್ಞಾನ-ಜ್ಞೇಯವೆಂಬ ತ್ರಿವಿಧವು ನಿರಾಳವಾದಸ್ಥಿತಿ ಇದು.

ಸಮಸ್ತ ಲೋಕದ ಕಲ್ಯಾಣಕ್ಕಾಗಿ, ವಿಶೇಷವಾಗಿ ಮಂದಾಧಿಕಾರಿಗಳ ಜ್ಞಾನ-ಹಾಗೂ ಅನುಭಾವ ಸಿದ್ಧಿಗಾಗಿ ಇಲ್ಲಿ ಕರೆ ಇದೆ. ವಿಸ್ತಾರವಾದ ರೀತಿಯಲ್ಲಿ ನೂರೊಂದು ಸ್ಥಲಗಳ ಪ್ರಸ್ಥಾನವನ್ನು ವೀರಶೈವ ಮಹಾಮಹಿಮರು ನಿರೂಪಿಸಿದ್ದಾರೆ. ಅರಿತು ಆಚರಿಸಬಲ್ಲ ಶಿವಶರಣರ ಹಿತಕ್ಕಾಗಿ, ನಿಶ್ರೇಯಸ್ ಸಿದ್ಧಿಗಾಗಿ ಈ ಸ್ಥಲಗಳು ಅಪರೂಪವಾಗಿವೆ; ಲಿಂಗಾಂಗ ಸಾಮರಸ್ಯ ಸಿದ್ಧಿದಾಯಕವಾಗಿವೆ. ಶ್ರೀ ಗುಬ್ಬಿ ಮಲ್ಲಣಾರ್ಯನ (ಕ್ರಿ. ಶ. ಸು. ೧೪೭೫) ನೂರೊಂದು ಸ್ಥಲಗಳು ಸಾಮಾನ್ಯವಾಗಿ ದೊರೆಯುವ ೧೦೧ ಸ್ಥಲಗಳಿಗಿಂತ ಭಿನ್ನವಾಗಿವೆ. ಅನುಭವ ಹಾಗೂ ಪ್ರಗತಿಯ ದೃಷ್ಟಿಯಿಂದ ಈ ಸ್ಥಲಗಳು ತುಂಬ ವ್ಯತ್ಯಾಸವುಳ್ಳವುಗಳಾಗಿದ್ದು, ಅಭ್ಯಾಸಿಗಳಿಗೆ ಆಹ್ವಾನವೀಯುತ್ತವೆ; ಅನುಭಾವಿಗಳ ಆತ್ಮವಿಶ್ಲೇಷಣೆಗೆ ಮಾರ್ಗವಾಗಿವೆ.[೯೫] ಒಟ್ಟಿನಲ್ಲಿ 'ಏಕೋತ್ತರ ಶತಸ್ಥಲ' (ಇಲ್ಲವೆ ನೂರೊಂದು ಸ್ಥಲಗಳು) ವೀರಶೈವ ಸಾಹಿತ್ಯ ಹಾಗೂ ಸಿದ್ಧಾಂತದ ವಿಶಿಷ್ಟ ಕೊಡುಗೆಯಾಗಿದ್ದು, ಷಟ್‌ಸ್ಥಲ ಸಿದ್ಧಾಂತದ ಸೂಕ್ಷ್ಮ ಹಾಗ ಆಂತರಿಕ ವಿಸ್ತಾರವನ್ನೂ, ಸಿದ್ಧಿಯ ಔನ್ನತ್ಯವನ್ನು ಸಾರುತ್ತದೆ.

---

೯೪ Ibid ಪುಟ ೩೮೫.

೯೫ ಗುಬ್ಬಿ ಮಲ್ಲಣರ ೧೦೧ ಸ್ಥಲಗಳನ್ನು ನೋಡು, **(ಪರಿಶಿಷ್ಟ-೩)**

| ಆಕೃತಿಗಳು | ತಾರಕಾಕೃತಿ | ದಂಡಕಾಕೃತಿ | ಕುಂಡಲಾಕೃತಿ | ಅರ್ಧಚಂದ್ರಾಕೃತಿ | ದರ್ಪಣಾಕೃತಿ | ಜ್ಯೋತಿರಾಕೃತಿ | ನಿಃಕಲಾಕೃತಿ | ನಿರಂಜನಾಕೃತಿ | ನಿಃಶೂನ್ಯಾಕೃತಿ |
|---|---|---|---|---|---|---|---|---|---|
| ಪ್ರಣವಗಳು | ನಕಾರಪ್ರಣವ | ಮಕಾರಪ್ರಣವ | ಶಿಕಾರಪ್ರಣವ | ವಕಾರ ಪ್ರಣವ | ಯಕಾರಪ್ರಣವ | ಓಂಕಾರಪ್ರಣವ | ಅಕಾರಪ್ರಣವ | ಉಕಾರಪ್ರಣವ | ಮಕಾರಪ್ರಣವ |
| ನಾದಗಳು | ವೇಣುನಾದ | ವೀಣಾನಾದ | ಘಂಟಾನಾದ | ಭೇರಿನಾದ | ಮೇಘನಾದ | ಪ್ರಣವನಾದ | ದಿವ್ಯನಾದ | ಸಿಂಹನಾದ | ಮಹಾನಾದ |
| ಚಕ್ರಗಳು | ಆಧಾರಚಕ್ರ | ಸ್ವಾಧಿಷ್ಠಾನಚಕ್ರ | ಮಣಿಪೂರಕಚಕ್ರ | ಅನಾಹತಚಕ್ರ | ವಿಶುದ್ಧಿ ಚಕ್ರ | ಆಜ್ಞಾ ಚಕ್ರ | ಬ್ರಹ್ಮ ಚಕ್ರ | ಶಿಖಾಚಕ್ರ | ಪಶ್ಚಿಮಚಕ್ರ |
| ವರ್ಣಗಳು | ಪೀತವರ್ಣ | ಶ್ವೇತವರ್ಣ | ಹರಿತವರ್ಣ | ಮಾಂಜಿಷ್ಟವರ್ಣ | ಕಪೋತವರ್ಣ | ಎಳೆಮಿಂಚಿನವರ್ಣ | ಜ್ಯೋತಿರ್ವರ್ಣ | ಮಹಾಜ್ಯೋತಿವರ್ಣ | ಅಗಣಿತ ಜ್ಯೋತಿವರ್ಣ |
| ಅಂಗಗಳು | ಪೃಥ್ವಿ ಅಂಗ | ಅಪ್ ಅಂಗ | ತೇಜಸ್ ಅಂಗ | ವಾಯು ಅಂಗ | ಆಕಾಶಾಂಗ | ಆತ್ಮಾಂಗ | ತ್ಯಾಗಾಂಗ | ಭೋಗಾಂಗ | ಯೋಗಾಂಗ |
| ಆತ್ಮಗಳು | ಜೀವಾತ್ಮ | ಅಂತರಾತ್ಮ | ಪರಮಾತ್ಮ | ನಿರ್ಮಲಾತ್ಮ | ಶುದ್ಧಾತ್ಮ | ಜ್ಞಾನಾತ್ಮ | ಮಹಾಆತ್ಮ | ದಿವ್ಯಾತ್ಮ | ಚಿನ್ಮಯಾತ್ಮ |
| ಸ್ಥಲಗಳು | ಭಕ್ತ | ಮಹೇಶ | ಪ್ರಸಾದಿ | ಪ್ರಾಣಲಿಂಗಿ | ಶರಣ | ಐಕ್ಯ | ನಿಷ್ಕಲ | ನಿರಂಜನ | ನಿಃಶೂನ್ಯ |
| ತನುಗಳು | ಸ್ಥೂಲ | ಸೂಕ್ಷ್ಮ | ಕಾರಣ | ನಿರ್ಮಲ | ಆನಂದತನು | ಶುದ್ಧತನು | ಚಿದ್ರೂಪತನು | ಚಿನ್ಮಯತನು | ನಿಮುಕ್ತತನು |
| ಹಸ್ತಗಳು | ಸುಚಿತ್ತಹಸ್ತ | ಸುಬುದ್ಧಿ ಹಸ್ತ | ನಿರಹಂಕಾರಹಸ್ತ | ಸುಮನಹಸ್ತ | ಸುಜ್ಞಾನಹಸ್ತ | ಸದ್ಭಾವಹಸ್ತ | ನಿಃಕಲಹಸ್ತ | ನಿರಾಳಹಸ್ತ | ನಿರಾಮಯಹಸ್ತ |
| ಲಿಂಗಗಳು | ಆಚಾರಲಿಂಗ | ಗುರುಲಿಂಗ | ಶಿವಲಿಂಗ | ಜಂಗಮಲಿಂಗ | ಪ್ರಸಾದಲಿಂಗ | ಮಹಾಲಿಂಗ | ಇಷ್ಟಲಿಂಗ | ಪ್ರಾಣಲಿಂಗ | ಭಾವಲಿಂಗ |
| ಮುಖಗಳು | ಘ್ರಾಣಮುಖ | ಜಿಹ್ವೆಮುಖ | ನೇತ್ರಮುಖ | ತ್ವಕ್ಕುಮುಖ | ಶ್ರೋತ್ರಮುಖ | ಹೃದಯಮುಖ | ಬ್ರಹ್ಮರಂಧ್ರಮುಖ | ಉನ್ಮನಿಮುಖ | ಪಶ್ಚಿಮಮುಖ |
| ಶಕ್ತಿಗಳು | ಕ್ರಿಯಾಶಕ್ತಿ | ಜ್ಞಾನಶಕ್ತಿ | ಇಚ್ಛಾಶಕ್ತಿ | ಆದಿಶಕ್ತಿ | ಪರಾಶಕ್ತಿ | ಚಿಚ್ಛಕ್ತಿ | ಆನಂದಮಯಶಕ್ತಿ | ನಿಭ್ರಾಂತಶಕ್ತಿ | ನಿರಾಮಯಶಕ್ತಿ |
| ಭಕ್ತಿಗಳು | ಶ್ರದ್ಧಾ ಭಕ್ತಿ | ನೈಷ್ಠಿಕಾಭಕ್ತಿ | ಅವಧಾನಭಕ್ತಿ | ಅನುಭವಭಕ್ತಿ | ಆನಂದಭಕ್ತಿ | ಸಮರಸಭಕ್ತಿ | ಪರಿಪೂರ್ಣಭಕ್ತಿ | ನಿರಂಜನಭಕ್ತಿ | ಅಪ್ರದರ್ಶನಭಕ್ತಿ |
| ಪದಾರ್ಥಗಳು | ಸುಗಂಧಪದಾರ್ಥ | ಸುರಸಪದಾರ್ಥ | ಸರೂಪ ಪದಾರ್ಥ | ಸುಸ್ಪರ್ಶಪದಾರ್ಥ | ಸುಶಬ್ದ ಪದಾರ್ಥ | ಸುತೃಪ್ತಿ ಪದಾರ್ಥ | ಪರಮಾನಂದ ಪದಾರ್ಥ | ಪರಿಪೂರ್ಣ ಪದಾರ್ಥ | ಅವಿರಳ ಪದಾರ್ಥ |
| ಪ್ರಸಾದಗಳು | ಸುಗಂಧ ಗಂಧ (ಪ್ರಸಾದ) | ರಸ.... | ರೂಪ.... | ಸ್ಪರ್ಶ.... | ಶಬ್ದ | ತೃಪ್ತಿಪ್ರಸಾದ | ಆನಂದಪ್ರಸಾದ | ಪರಿಪೂರ್ಣಪ್ರಸಾದ | ಅವಿರಳಪ್ರಸಾದ |
| ಪೂಜಾರಿಗಳು | ಬ್ರಹ್ಮ(ಪೂಜಾರಿ) | ವಿಷ್ಣು.... | ರುದ್ರ.... | ಈಶ್ವರ.... | ಸದಾಶಿವ | ನಿಃಕಲ.... | ನಿಃಶೂನ್ಯ.... | ನಿರಂಜನ(ಪೂಜಾರಿ) | ಮಹಾದೇವ (ಪೂಜಾರಿ) |
| ದೇವತೆಗಳು | ಬ್ರಹ್ಮನಧಿದೇವತೆ | ವಿಷ್ಣುವಿನಧಿದೇವತೆ | ರುದ್ರನಧಿದೈವ | ಈಶ್ವರನಧಿದೈವ | ಸದಾಶಿವನಧಿದೈವ | ನಿಃಕಲನಧಿದೈವ | ನಿಃಶೂನ್ಯನಧಿದೈವ (ಪರಶಿವನಧಿದೈವ) | ನಿರಂಜನನಧಿದೈವ (ಸರ್ವೇಶ್ವರನಧಿದೈವ) | ಮಹಾದೇವನಧಿ ದೈವ |
| ಕಲೆಗಳು | ನಿವೃತ್ತಿ ಕಲೆ | ಪ್ರತಿಷ್ಠಾ ಕಲೆ | ವಿದ್ಯಾಕಲೆ | ಶಾಂತಿಕಲೆ | ಶಾಂತ್ಯಾತೀತಕಲೆ | ಶಾಂತತೀತೋತ್ತರ ಕಲೆ | ಆನಂದಕಲೆ | ನಿರ್ಮಳಕಲೆ (ನಿರ್ನಾಮಕಲೆ) | ನಿರ್ವಾಚ್ಯಕಲೆ |
| ಸಾದಾಖ್ಯಗಳು | ಕರ್ಮಸಾದಾಖ್ಯ | ಕರ್ತೃಸಾದಾಖ್ಯ | ಮೂರ್ತಿಸಾದಾಖ್ಯ | ಅಮೂರ್ತಿಸಾದಾಖ್ಯ | ಶಿವಸಾದಾಖ್ಯ | ಮಹಾಸಾದಾಖ್ಯ | ಅಗಮ್ಯಸಾದಾಖ್ಯ | ಅವಿರಳಸಾದಾಖ್ಯ | ನಿರ್ಮುಕ್ತಿ ಸಾದಾಖ್ಯ (ನಿರ್ಮಳ ಸಾದಾಖ್ಯ) |
| ಲಕ್ಷಣಗಳು | ಸತ್ ಎಂಬ ಲಕ್ಷಣ | ಚಿತ್ ಎಂಬ ಲಕ್ಷಣ | ಆನಂದವೆಂಬ ಲಕ್ಷಣ | ನಿತ್ಯವೆಂಬ ಲಕ್ಷಣ | ಪರಿಪೂರ್ಣವೆಂಬ ಲಕ್ಷಣ | ಅಖಂಡವೆಂಬ ಲಕ್ಷಣ | ಅನಾಮಯವೆಂಬ ಲಕ್ಷಣ | ಅಗಮ್ಯವೆಂಬ ಲಕ್ಷಣ | ಅಗೋಚರವೆಂಬ ಲಕ್ಷಣ (ನಿರ್ವಾಚ್ಯವೆಂಬ ಲಕ್ಷಣ) |
| ಸಂಜ್ಞೆಗಳು | ಪರವೆಂಬಸಂಜ್ಞೆ | ಗೂಢವೆಂಬಸಂಜ್ಞೆ | ಶರೀರಸ್ಥ ಎಂಬ ಸಂಜ್ಞೆ | ಲಿಂಗಕ್ಷೇತ್ರವೆಂಬ ಸಂಜ್ಞೆ | ಅನಾದಿಯೆಂಬ ಸಂಜ್ಞೆ | ಮಹಾಸಂಜ್ಞೆ | ಅಪ್ರಮಾಣವೆಂಬ ಸಂಜ್ಞೆ | ನಿರಾಮಯವೆಂಬ ಸಂಜ್ಞೆ | ಅವಿರಳವೆಂಬ ಸಂಜ್ಞೆ |
| ದಿಕ್ಕುಗಳು | ಪೂರ್ವ | ಪಶ್ಚಿಮ | ದಕ್ಷಿಣ | ಉತ್ತರ | ಪಾತಾಳ | ಶುದ್ಧಪಯನು | ಹೃತ್ಕಮಲ | ದಿವ್ಯನಾದಘೋಷ | ಲಿಂಗಕ್ಷೇತ್ರ(ದಿಕ್ಕು) |
| ವೇದಗಳು | ಋಗ್ವೇದ | ಯಜುರ್ವೇದ | ಸಾಮವೇದ | ಅಥರ್ವಣದವೇದ | ಅಜಪವೇದ | ಗಾಯತ್ರಿವೇದ | ಧನುರ್ವೇದ | ಗಂಧರ್ವವೇದ | ಶಬ್ದವೇದ |

ಶ್ರೀಮಾನ್ ಬುದ್ಧಯ್ಯಸ್ವಾಮಿ ಪುರಾಣೀಕ ಮತ್ತು ಶ್ರೀಮಾನ್ ವೀ.ರು. ಕೊಪ್ಪಳ, ಎಂ.ಎ., ಬಿ.ಟಿ. ಅವರಿಂದ ದೊರೆತದ್ದು.

—'ವೀರಶೈವ ತತ್ತ್ವಪ್ರಕಾಶ' ಪರಿಶಿಷ್ಟ-೫

## ಏಕೋತ್ತರ ಶತಸ್ಥಲ (ಕೃತಿಗಳ ವಂಶವೃಕ್ಷ)   ಪರಿಶಿಷ್ಟ–೨

### I ಸಂಕಲನಗಳು

೧. ಮಹಾಲಿಂಗದೇವ(೧೪೩೦) 'ಏಕೋತ್ತರ ಶತಸ್ಥಲ'
೨. ಭಕ್ತಿ ಭಂಡಾರಿ ಜಕ್ಕಣಾರ್ಯ (೧೪೩೦)–'ಸ್ವರ ಏಕೋತ್ತರ ಶತಸ್ಥಲ'
೩. ಸಿದ್ಧಲಿಂಗೇಶ್ವರ ಅಂಕಿತವುಳ್ಳ 'ಏಕೋತ್ತರ ಶತಸ್ಥಲ' (ಡಾ. ಫ. ಗು. ಹಳಕಟ್ಟಿ ಸಂಪಾದಿತ)

### II ಸ್ವತಂತ್ರ ಕೃತಿಗಳು

೧. ಮಗ್ಗೆಯ ಮಾಯಿದೇವ ಕೃತ 'ಪದ್ಯೈಕೋತ್ತರ ಶತಸ್ಥಲ ಅಥವಾ 'ಏಕೋತ್ತರ ಶತಸ್ಥಲ ಷಟ್ಪದಿ' (ವಾರ್ಧಕ–ಷಟ್ಪದಿಗಳುಳ್ಳದ್ದು)
೨. (ವಿರಕ್ತ ತೋಂಟದಾರ್ಯ)? ಸಿದ್ಧಲಿಂಗೇಶ್ವರ ಅಂಕಿತವುಳ್ಳ– 'ಸಿದ್ಧಲಿಂಗೇಶ್ವರ ಶತಕ' (೧೦೧ ಸ್ಥಲಗಳಿಗೆ ಅನುಗುಣವಾಗಿ ಸಿದ್ಧಲಿಂಗೇಶ್ವರ ಅಂಕಿತವುಳ್ಳ

### III ವೀರಶೈವ ಪುರಾಣಗಳು (ಸಂದರ್ಭೋಚಿತ ೧೦೧ ಸ್ಥಲಗಳನ್ನು ಉಲ್ಲೇಖಿಸುವ)

೧. ಗುಬ್ಬಿ ಮಲ್ಲಣಾರ್ಯ ವೀರಶೈವಾಮೃತ ಮಹಾ ಪುರಾಣ' (ದಲ್ಲಿ)
೨. ಸಿದ್ಧನಂಜೇಶ ಕೃತ ಗುರುರಾಜ ಚಾರಿತ್ರ್ಯ
೩. ವಿರಕ್ತ ತೋಂಟದಾರ್ಯ ಕೃತ 'ಸಿದ್ಧೇಶ್ವರ ಪುರಾಣ'
೪. ದ್ಯಾಂಪುರ ಚನ್ನಕವಿ ಕೃತ ಪುರಾಣಗಳು

### IV ಏಕೋತ್ತರಸ್ಥಲದ ಟೀಕಾ ಕೃತಿಗಳು

೧. ಶ್ರೀಗಿರೀಂದ್ರ (೧೪೩೦) (ಜಕ್ಕಣಾರ್ಯ ಕೃತ ಗ್ರಂಥಕ್ಕೆ) 'ಏ.ಶತಸ್ಥಲ ಸ್ವರವಚನ ವ್ಯಾಖ್ಯಾನ,
೨. ಸಿದ್ಧಲಿಂಗೇಶ್ವರ– 'ಏಕೋತ್ತರ ಶತಸ್ಥಲ ವ್ಯಾಖ್ಯಾನ,

೪. ಗುಬ್ಬಿ ಮಲ್ಲಣಾರ್ಯ(೧೪೭೫)
'ಗಣಭಾಷಿತ ರತ್ನಮಾಲೆ'*
(೧೦೧ ಸ್ವತಂತ್ರ ಸ್ಥಲ
ಗಳುಳ್ಳದ್ದು ಆಗಮ ಹಾಗೂ
ಪುರಾಣ ಶ್ಲೋಕಗಳುಳ್ಳ
ಗದ್ಯಕೃತಿ)

೫. ಚೆನ್ನದಣ್ಣಾಯಕ–
'ವಚನೈಕೋತ್ತರ ಶತಸ್ಥಲ'*

೬. ಚೆನ್ನಬಸವ ರಾಜದೇವ–
'ಏಕೋತ್ತರ ಶತಸ್ಥಲ
ಸಾರಾಮೃತ

ನೂರೊಂದು ವೃತ್ತಗಳುಳ್ಳ ಕೃತಿ)

೩. ಬಸವೇಶ–(೧೬೦೦)ಪದ್ಯಕೋತ್ತರ
ಶತಸ್ಥಲ (೧೧೨ ವಾರ್ಧಕ
ಪಟ್ಟದಿಗಳುಂಟು)

೪. (ಇಮ್ಮಡಿ ಮುರುಘಾ ಗುರುಸಿದ್ಧ
ಕೃತ (೧೫೯೦) ಶಿವಮೊಗ್ಗ
ಜಿಲ್ಲೆಯ ಆನಂದಪುರದ ಬಳಿಗಿರುವ
ಮುರುಘಾಮಠದ ಸ್ವಾಮಿ)
'ಕೈವಲ್ಯಸೋಪಾನನಾಮ ಏಕೋತ್ತರ
ಶತಸ್ಥಲ' ('ಶಿವಲಿಂಗದೇವ'
ಅಂಕಿತವುಳ್ಳ ಕೃತಿ)

೫. ನಿಷ್ಕಲ ಚಿದಾನಂದಯೋಗಿ
'ನಿಃಕಲರ ವಚನ' (೫೭೬ ಸಾಂಗತ್ಯ
ಗಳಲ್ಲಿ ಅಂಗಸ್ಥಲಗಳ ನಿರೂಪಣೆ
ಬಳ್ಳಾರಿಯಲ್ಲಿ ೧೮೮೫ರಲ್ಲಿ ಪ್ರಕಟಿತ)

---

* "ವೇದಶಾಸ್ತ್ರ ಪುರಾಣೇತಿಹಾಸದಿ ನಾನಾ ಧರ್ಮಶಾಸ್ತ್ರೋಕ್ತ ಗ್ರಂಥಗಳಿಂ ಆದ್ಯರ ಸ್ಥಲಮಾಗೆ ಸೇರಿಸಿದಂ" (ಗಣಭಾಷಿತ ರತ್ನಮಾಲೆ)

* ಈ ಸಂಕಲನ ಕೃತಿಯು ೧೨ ನೆಯ ಶತಮಾನದ ಚೆನ್ನಬಸವಣ್ಣನದೆಂದು ಕೆಲವರ ಅಭಿಮತ. ಚಿಕ್ಕದಣ್ಣಾಯಕ, ಬಸವದಣ್ಣಾಯಕ ಎಂಬ ಬಿರುದುಗಳು ಚೆನ್ನಬಸವಣ್ಣನ ಬಿರುದುಗಳೆಂಬುದು ಪ್ರಸಿದ್ಧ. ಆದರೆ ಚೆನ್ನಬಸವಣ್ಣನು ಚನ್ನದಣ್ಣಾಯಕನಾಗಲಾರ, ಆದರೆ ಚೆನ್ನಬಸವಣ್ಣನ ತತ್ತ್ವ ಸಿದ್ಧಾಂತವನ್ನು ಒಪ್ಪುವ ಬೇರೊಬ್ಬ ಅನುಯಾಯಿಯ ಹೆಸರು ಆಗಿರಬೇಕು.

## ಪರಿಶಿಷ್ಟ-೩

## ಶ್ರೀ ಗುಬ್ಬಿ ಮಲ್ಲಣಾರ ನೂರೊಂದು ಸ್ಥಲಗಳು

("ಗಣಭಾಷ್ಯ ರತ್ನಮಾಲೆ ಕ್ರಿ. ಶ. ೧೭೩೩(1733)ರ ಕೈಬರಹದ ಪ್ರತಿಯಿಂದ ಉದ್ಧರಿಸಿದುದು"–ವೀ. ರು. ಕೊಪ್ಪಳ. ವೀರಶೈವ ತತ್ತ್ವಪ್ರಕಾಶ, ಧಾ. ಲಿಂ. ವಿ. ಸಂಸ್ಥೆಯ ಸಾಹಿತ್ಯ ಸಮಿತಿ ಪ್ರಕಟನೆ, ೪ ಪರಿಶಿಷ್ಟ-೧೦, ಪುಟ ೩೧.)

ಸ್ಥಲಗಳು:

I. ಅನುಭವಾದಿ ಸಹಜ ದೀಕ್ಷಾಂತವಾದ ಸ್ಥಲಗಳು ೪೪

೧ ಅನುಭಾವ ಸ್ಥಲ
೨ ಶರಣಸಂಗ ವಿಯೋಗಾವಸ್ಥೆಯ ಸ್ಥಲ
೩ ಶರೀರ ನಿರಸನ ಸ್ಥಲ
೪ ಮನೋನಿರಸನ ಸ್ಥಲ
೫ ಇಂದ್ರಿಯ ನಿರಸಲ ಸ್ಥಲ
೬ ಸಂಸಾರನಿರಸನ ಸ್ಥಲ
೭ ಸಂಸಾರವ್ಯಾಪ್ತಿ ನಿರಸನ ಸ್ಥಲ
೮ ನಿದ್ರಾನಿರಸನ ಸ್ಥಲ
೯ ಆಶಾನಿರಸನ ಸ್ಥಲ
೧೦ ದ್ವಂದ್ವಕರ್ಮನಿರಸನ ಸ್ಥಲ
೧೧ ತ್ರಿಬಂಧನಿರಸನ ಸ್ಥಲ
೧೨ ಮಾಯಾವಿಲಾಸವಿಧಿ ಸ್ಥಲ
೧೩ ಜನನಭಯ ಸ್ಥಲ
೧೪ ಜ್ಞಾನಪರಾಮರಿಕೆಯ ಸ್ಥಲ
೧೫ ಶಿವಕಾರುಣ್ಯಾಹ್ವಾನ ಸ್ಥಲ
೧೬ ದೃಷ್ಟನಷ್ಟ ಸ್ಥಲ
೧೭ ವೈರಾಗ್ಯ ಸ್ಥಲ
೧೮ ಅನರ್ಥಜೀವಿತನಿರಸನ ಸ್ಥಲ
೧೯ ಅನ್ಯದೈವನಿರಸನ ಸ್ಥಲ
೨೦ ಅನ್ಯದೈವಭಜನನಿರಸನ ಸ್ಥಲ
೨೧ ಶಿವಲಿಂಗಾರ್ಚನಪ್ರತಿಷ್ಠಾ ಸ್ಥಲ
೨೨ ಒಣವಾಗಾದ್ವೈತನಿರಸನ ಸ್ಥಲ
೨೩ ಶೂನ್ಯ ಸ್ಥಲ
೨೪ ಸ್ವಯಂಭುಲಿಂಗ ಉಮಾಪತಿ ಸ್ಥಲ
೨೫ ವಿಶ್ವೋತ್ಪತ್ತಿ ಸ್ಥಲ
೨೬ ದೇಹದೇಹಿಗಳ ಉತ್ಪತ್ತಿ ಸ್ಥಲ
೨೭ ಅಷ್ಟತನುಮೂರ್ತಿ ನಿರಸನ ಸ್ಥಲ
೨೮ ಸರ್ವಗತನಿರಸನ ಸ್ಥಲ
೨೯ ವಿದ್ಯಾವಾದನಿರಸನ ಸ್ಥಲ
೩೦ ಕರ್ಮವಾದನಿರಸನ ಸ್ಥಲ
೩೧ ಕರ್ಮಯೋಗನಿರಸನ ಸ್ಥಲ
೩೨ ಊರ್ಧ್ವಪುಂಡ್ರನಿರಸನ ಸ್ಥಲ
೩೩ ಅದೀಕ್ಷಿತಲಿಂಗಾರ್ಚನನಿರಸನ ಸ್ಥಲ
೩೪ ಶೈವದೀಕ್ಷಾನಿರಸನ ಸ್ಥಲ
೩೫ ಪುನರ್ದೀಕ್ಷಾಪ್ರತಿಷ್ಠೆಯ ಸ್ಥಲ
೩೬ ಭವಿಸಂಗನಿರಸನ ಸ್ಥಲ
೩೭ ಭವಿಪಾಕನಿರಸನ ಸ್ಥಲ
೩೮ ಪರದಾರನಿರಸನ ಸ್ಥಲ
೩೯ ಕಳವುನಿರಸನ ಸ್ಥಲ
೪೦ ಹುಸಿನಿರಸನ ಸ್ಥಲ
೪೧ ಹಿಂಸಾನಿರಸನ ಸ್ಥಲ
೪೨ ತಾಮಸಭಕ್ತಸಂಗನಿರಸನ ಸ್ಥಲ
೪೩ ತಾಮಸದೀಕ್ಷಾನಿರಸನ ಸ್ಥಲ
೪೪ ಸಹಜದೀಕ್ಷಾನಿರಸನ ಸ್ಥಲ

II. ದೀಕ್ಷಾವಿಧಿ ಆದಿಲಿಂಗಕೂಟಾತುರಾಂತ್ಯಮಾದ ೪೫ ಲಿಂಗಸ್ಥಲಗಳು

೪೫ ದೀಕ್ಷಾವಿಧಿಕ್ರಮ ಸ್ಥಲ
೪೬ ಗುರುಶಿಷ್ಯಪ್ರವೇಶ ಸ್ಥಲ

೪೭ ಗುರುಮಹಾತ್ಮ್ಯ ಸ್ಥಲ
೪೮ ವಿಭೂತಿಮಹಾತ್ಮ್ಯ ಸ್ಥಲ
೪೯ ರುದ್ರಾಕ್ಷಿಮಹಾತ್ಮ್ಯ ಸ್ಥಲ
೫೦ ಪಂಚಾಕ್ಷರಿಮಹಾತ್ಮ್ಯ ಸ್ಥಲ
೫೧ ಲಿಂಗಧಾರಣಮಹಾತ್ಮ್ಯ ಸ್ಥಲ
೫೨ ಶಿವಲಿಂಗಾರ್ಚನೆಮಹಾತ್ಮ್ಯ ಸ್ಥಲ
೫೩ ಲಿಂಗಾರ್ಪಿತ ಸ್ಥಲ
೫೪ ಪಾದೋದಕಮಹಾತ್ಮ್ಯ ಸ್ಥಲ
೫೫ ಪ್ರಸಾದಮಹಾತ್ಮ್ಯ ಸ್ಥಲ
೫೬ ಸದ್ಭಕ್ತಿವರ್ಣಾಧಿಕ್ಯ ಸ್ಥಲ
೫೭ ಪೂರ್ವಾಶ್ರಯನಿರಸನ ಸ್ಥಲ
೫೮ ಗುರುಭಕ್ತಿಶುಶ್ರೂಷಾ ಸ್ಥಲ
೫೯ ಪಾತ್ರಾಪಾತ್ರವಿವರಣಾ ಸ್ಥಲ
೬೦ ತಾಮಸಭಕ್ತನಿರಸನ ಸ್ಥಲ
೬೧ ತಾಮಸಮಹೇಶನಿರಸನ ಸ್ಥಲ
೬೨ ತಾಮಸಪ್ರಸಾದಿನಿರಸನ ಸ್ಥಲ
೬೩ ತಾಮಸಪ್ರಾಣಲಿಂಗಿನಿರಸನ ಸ್ಥಲ
೬೪ ತಾಮಸಶರಣನಿರಸನ ಸ್ಥಲ
೬೫ ತಾಮಸಐಕ್ಯನಿರಸನ ಸ್ಥಲ
೬೬ ಸ್ಥಾವರಲಿಂಗಪೂಜಾನಿರಸನ ಸ್ಥಲ
೬೭ ಉಪವಾಸನಿರಸನ ಸ್ಥಲ
೬೮ ಶಿವಲಿಂಗಾರ್ಚನಾವಿಧಿಕ್ರಮ ಸ್ಥಲ
೬೯ ಶಿವಲಿಂಗಾರ್ಚನಾಶ್ರದ್ಧಾ ಸ್ಥಲ
೭೦ ಅಭಿನ್ನಲಿಂಗಸ್ಥಲ
೭೧ ಜಂಗಮಲಿಂಗಶ್ರದ್ಧಾ ಸ್ಥಲ
೭೨ ಜಂಗಮಲಿಂಗಾರ್ಪಿತ ಸ್ಥಲ
೭೩ ತೀರ್ಥಪ್ರಸಾದ ಲಿಂಗಾರ್ಪಿತ ಸ್ಥಲ
೭೪ ತಾಮಸಶೀಲನಿರಸನ ಸ್ಥಲ
೭೫ ತಾಮಸಸಹಭೋಜನನಿರಸನ ಸ್ಥಲ
೭೬ ವಾಗಾದ್ವೈತನಿರಸನ ಸ್ಥಲ
೭೭ ತಾಮಸಸ್ವಾನುಭಾವನಿರಸನ ಸ್ಥಲ
೭೮ ದಾಸೋಹಪ್ರತಿಷ್ಠಾ ಸ್ಥಲ
೭೯ ಕಾಮ್ಯಪ್ರತಿಷ್ಠಾ ಸ್ಥಲ
೮೦ ಕಾಮ್ಯನಿರಸನ ಸ್ಥಲ
೮೧ ಸದ್ಭಕ್ತಚಾರಿತ್ರ ಸ್ಥಲ
೮೨ ಷಟ್ಸ್ಥಲನಿರ್ಣಯ ಸ್ಥಲ
೮೩ ಶಿವಭಕ್ತಪರೀಕ್ಷಾ ಸ್ಥಲ
೮೪ ಅನ್ಯೈಷ್ಠಿಕಾನಿರಸನ ಸ್ಥಲ
೮೫ ಸದ್ಭಕ್ತಿನೈಷ್ಠಿಕಾ ಸ್ಥಲ
೮೬ ವೀರದಾಸತ್ವನಿಷ್ಠಾ ಸ್ಥಲ
೮೭ ವಿಶ್ವಾಸಪ್ರತಿಷ್ಠಾ ಸ್ಥಲ
೮೮ ಶಿವಲಿಂಗವಿಕಳಾವಸ್ಥೆಯ ಸ್ಥಲ
೮೯ ಶಿವಲಿಂಗಕೂಟಾತುರ ಸ್ಥಲ.

III. ಶಿವಲಿಂಗಯೋಗಾನಂದಾದಿ ಸದ್ಭಕ್ತಮಹಾತ್ಮ್ಯಸ್ಥಲಾಂತ್ಯಮಾದ ೧೨ ನಿರಂಗಸ್ಥಲಗಳು

೯೦ ಶಿವಲಿಂಗಯೋಗಾನಂದ ಸ್ಥಲ
೯೧ ಬಾಹ್ಯಾಭ್ಯಂತರಲಿಂಗಸಂಯೋಗ ಸ್ಥಲ
೯೨ ಭಿನ್ನಭಾಜನನಿರಸನ ಸ್ಥಲ
೯೩ ಸಾವಧಾನಾರ್ಪಿತ ಸ್ಥಲ
೯೪ ಭಕ್ತದೇಹಿಕಲಿಂಗ ಸ್ಥಲ
೯೫ ಅನಾಗಮ ಸ್ಥಲ
೯೬ ಶರಣಚಾರಿತ್ರ ಸ್ಥಲ
೯೭ ಸ್ತುತಿನಿಂದಾನಿರಸನ ಸ್ಥಲ
೯೮ ನಿರಹಂಭಾವ ಸ್ಥಲ
೯೯ ಸದ್ಭಕ್ತಶುಶ್ರೂಷಾ ಸ್ಥಲ
೧೦೦ ಸದ್ಭಕ್ತನಮಸ್ಕಾರ ಸ್ಥಲ
೧೦೧ ಸದ್ಭಕ್ತಮಹಾತ್ಮ್ಯ ಸ್ಥಲ.

# ಶಿವಯೋಗ

(ಭಾರತೀಯ ಯೋಗ ಸಿದ್ಧಾಂತಗಳೊಂದಿಗೆ ವೈಜ್ಞಾನಿಕ ಅಧ್ಯಯನ)

---

— ಶ್ರೀಮನ್ನಿರಂಜನ ಪ್ರಣವಸ್ವರೂಪಿ ಜಗದ್ಗುರು ಅನ್ನದಾನೀಶ್ವರ
ಮಹಾಸ್ವಾಮಿಗಳವರು ಸಂಸ್ಥಾನಮಠ, ಮುಂಡರಗಿ

ಹಲವು ಯೋಗವ ಮಾಡಿ ಫಲವೇನು ಮಗನೆ ಎಂ
ದೊಲಿದು ಲಿಂಗಾಂಗ ಸುಲಭಯೋಗವ ನೋಡ
ಗಲಿಸಿದಾ ಗುರುವೆ ಕೃಪೆಯಾಗು. (ಗು. ತ್ರಿವಿಧಿ ೧೦೭)

ಭಾರತೀಯ ದರ್ಶನಗಳಲ್ಲಿ ಯೋಗಶಾಸ್ತ್ರಕ್ಕೆ ಮಹತ್ವದ ಸ್ಥಾನವಿದೆ. ಯೋಗ ದರ್ಶನ ಬಹು ಪ್ರಾಚೀನವಾದುದು. ಮಾನವ ಮಹಾದೇವನಾಗುವ ಸಾಧನವೇ ಯೋಗ. ಆತ್ಮ ಸಾಕ್ಷಾತ್ಕಾರದ ಸಾಧನೆಯ ಹಂತದಲ್ಲಿ ಭಾರತೀಯ ತತ್ವಜ್ಞಾನಿಗಳು ವಿವಿಧ ಹಂತಗಳನ್ನು ವಿಭಿನ್ನ ಪಥಗಳನ್ನು ಕಂಡುಕೊಂಡರು. ಇಂಥ ಪಥಗಳಿಗೆ, ಮತಗಳು ಅಥವಾ ದರ್ಶನಗಳೆನ್ನಬಹುದು. ಈ ಸಾಧನಗಳನ್ನು ಕ್ರಮಗೊಳಿಸುವ ಮಾರ್ಗಕ್ಕೆ 'ಶಾಸ್ತ್ರ'ವೆಂತಲೂ ರೂಢಿ. ಮುಖ್ಯವಾಗಿ ಆತ್ಮದರ್ಶನ ಮಾಡಿಸುವ, ಮಾಡಿಕೊಳ್ಳುವ ಪರಂಪರೆ ಬಹು ಪುರಾತನವಾಗಿ ಸಾಗಿಬಂದಿದೆ.

ಧಾರ್ಮಿಕ ಹಾಗೂ ವೈಚಾರಿಕ ಸ್ವಾತಂತ್ರ್ಯವುಳ್ಳ ಭಾರತೀಯರಲ್ಲಿ ಅನೇಕ ಮತಗಳು ಪ್ರಚಲಿತವಾಗಿದ್ದರೂ ವಸ್ತುತಃ ಆಸ್ತಿಕ ಮತ ಮತ್ತು ನಾಸ್ತಿಕ ಮತಗಳೆಂದು ಎರಡು ಭಾಗ ಮಾಡಿದ್ದಾರೆ. ಜೀವ-ಜಗದುತ್ಪತ್ತಿಗೆ ಉಪಾದಾನ ಕಾರಣನಾದ ಈಶನನ್ನು ಮನ್ನಿಸುವವರು ಆಸ್ತಿಕರು. ಈಶ್ವರನನ್ನು ಮನ್ನಿಸದೆ ಕೇವಲ ಶಾರೀರಿಕ ಶುದ್ಧಿ ಹಾಗೂ ಸುಖವನ್ನು ಬಯಸುವವರು ನಾಸ್ತಿಕರೆನಿಸಿಕೊಂಡರು.

**ಚಾರ್ವಾಕ ದರ್ಶನ:**

ನಾಸ್ತಿಕ ದರ್ಶನಗಳಲ್ಲಿ ಚಾರ್ವಾಕ-ಜೈನ-ಬೌದ್ಧರು ಸಮಾವೇಶಗೊಳ್ಳುತ್ತಾರೆ. ಮಾನವನು ವಿಚಾರವಾದಿಯಾದಂದಿನಿಂದಲೂ ಸ್ವಚ್ಛಂದತೆಯ ವಿಚಾರ ಬೆಳೆದು ಬಂದಿದೆ. ಎಂಬುದರಲ್ಲಿ ಸುಳ್ಳಿಲ್ಲ. ಚಾರ್ವಾಕರು 'ಶರೀರವೇ ಆತ್ಮ, ಮರಣವೇ ಮುಕ್ತಿ, ಪ್ರಾಣ ವಿರುವವರೆಗೆ ಸಾಲ ಮಾಡಿಯಾದರೂ ತುಪ್ಪತಿಂದು ಸುಖಿಯಾಗಿ ಬಾಳು' ಎನ್ನುತ್ತಾರೆ.

**ಜೈನ ದರ್ಶನ:**

ಜೈನಧರ್ಮ ಬೌದ್ಧಧರ್ಮಕ್ಕಿಂತಲೂ ಪ್ರಾಚೀನ. ಜೈನರೂ ಅನೀಶ್ವರವಾದಿಗಳು

ಭವಬಂಧನ ಗ್ರಂಥಿಗಳಿಂದ ವಿಮುಕ್ತನಾದ, ಧರ್ಮದಲ್ಲಿ ಸರ್ವಜ್ಞನಾದ, ರಾಗದ್ವೇಷಾದಿಗಳ ವಿಜಯಿಯಾದ ತ್ರೈಲೋಕ ಪೂಜ್ಯನಾದ, ಸಿದ್ಧ ಪುರುಷನಿಗೆ 'ಅರ್ಹತ' ಎಂದು ಕರೆಯುವರು. ವರ್ಧಮಾನನು ರಾಗದ್ವೇಷಾದಿ ಶತ್ರುಗಳನ್ನು ಜಯಿಸಿದುದರಿಂದ 'ಜಿನ' ನೆನಿಸಿದನು. ಅವನು ಪ್ರತಿಪಾದಿಸಿದ ಈ ಧರ್ಮ 'ಜೈನಧರ್ಮ'ವೆನಿಸಿತು. ಇವರದು ಅನೇಕಾಂತವಾದ. ಏಳುತೆರನಾದ ಸ್ಯಾದ್ವಾದವನ್ನು ವಸ್ತುವಿನ ಯಥಾರ್ಥಜ್ಞಾನ ಸಾಧನೆಗೆ ಬಳಸುತ್ತಾರೆ. ಆದರೆ ಕೈವಲ್ಯಜ್ಞಾನವಾಗುವವರೆಗೆ ಅನೇಕಾಂತತೆಯೇ ಇರುವುದು. ಕಾರಣ ಕೈವಲ್ಯ ಲಭಿಸುವುದು ಸುಲಭವೆನಿಸುವುದಿಲ್ಲ.

**ಬೌದ್ಧ ದರ್ಶನ:**

ಕ್ರಿ. ಪೂರ್ವ(೪೪೮-೫೦೦)ದ ಬುದ್ಧನಿಂದ ಉಗಮವಾದ ಬೌದ್ಧ ಧರ್ಮದಲ್ಲಿ ಆಧ್ಯಾತ್ಮಿಕ ರಹಸ್ಯಗಳನ್ನು ತಿಳಿಯುವದು ಅನಾವಶ್ಯಕವೆಂದು, ಕೇವಲ ಮಾನವ ಕಲ್ಯಾಣಕ್ಕಾಗಿ ಆಚಾರಮಾರ್ಗವನ್ನೇ ಸರಳವಾಗಿ ಪ್ರತಿಪಾದಿಸಿದರು. ಆಚಾರ ಶಿಕ್ಷಣದಲ್ಲಿ ಅಡಗಿದ ಸೂಕ್ಷ್ಮವಾದ ಸಿದ್ಧಾಂತಗಳನ್ನು ತಾರ್ಕಿಕ ಬುದ್ಧಿಯಿಂದ ಸಿದ್ಧಪಡಿಸಿದರು. ೧) ಮಾನವ ಜೀವನವು ದುಃಖದಿಂದ ಕೂಡಿದುದು, ೨) ದುಃಖಗಳಿಗೆ ಇರುವ ಕಾರಣ, ೩) ದುಃಖದಿಂದ ವಿಮೋಚನೆ, ೪) ದುಃಖನಿರೋಧ ಪ್ರಾಪ್ತಿಗಾಗಿ ಉಚಿತವಾದ ಉಪಾಯ, ಹೀಗೆ ನಾಲ್ಕು ತೆರನಾದ ವಿಚಾರಗಳಲ್ಲಿ ಬೌದ್ಧ ಸಿದ್ಧಾಂತ ರೂಪಗೊಂಡಿದೆ. ಮುಖ್ಯವಾಗಿ ೧೨ ಕಾರಣಗಳಿಂದಾಗುವ ದುಃಖ ನಿರೋಧವೇ ಮೋಕ್ಷವೆಂಬುದಾಗಿ ಇವರ ಅಭಿಮತ.

**ಆಸ್ತಿಕ ದರ್ಶನಗಳ ಹಿನ್ನೆಲೆ:**

ಆಸ್ತಿಕ ದರ್ಶನಗಳಲ್ಲಿ ಪ್ರಮುಖವಾದವುಗಳು ಷಡ್‌ದರ್ಶನಗಳು. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವ ಮೀಮಾಂಸಾ ಹಾಗೂ ಉತ್ತರ ಮೀಮಾಂಸಾ ಇವು ಆರು ದರ್ಶನಗಳು. ಇವು ಜೀವ-ಜಗತ್ತು-ಈಶ್ವರ ಈ ತ್ರಿಪುಟಿಯ ಯಥಾರ್ಥತೆಯನ್ನು ತಿಳಿಸಿಕೊಡುವ ಸಾಧನಗಳಾಗಿವೆ. ಕೊನೆಯದಾದ ಉತ್ತರ ಮೀಮಾಂಸೆಯು ಅದ್ವೈತ ಸಿದ್ಧಿಯನ್ನು ಸಾಧಿಸುತ್ತಿದ್ದರೂ ವೀರಶೈವರು ಶಕ್ತಿವಿಶಿಷ್ಟಾದ್ವೈತವನ್ನು ಸಂಪಾದಿಸುತ್ತಾರೆ. ಇವರಿಗೆ 'ಶಿವಾದ್ವೈತಿ'ಗಳೆಂಬ ಉಪನಾಮವಿದೆ.

ಭಾರತೀಯ ಆಸ್ತಿಕ ದರ್ಶನ ಪರಂಪರೆ ಹಾಗೂ ತಾತ್ವಿಕ ವಿಚಾರಗಳ ಹಿನ್ನೆಲೆ ಗಹನವಾಗಿದೆ. ಈ ದಿಸೆಯಲ್ಲಿ ಸಮಗ್ರವಾಗಿ ಪರಿಚಯಿಸದೆ ಮುಖ್ಯವಾಗಿ ವೀರಶೈವ ದರ್ಶನದ ಪಾತ್ರ ಇತರ ದರ್ಶನಗಳಿಗಿಂತ ಮಿಗಿಲಾದುದು, ವೈಜ್ಞಾನಿಕ ಸತ್ಯತೆಯನ್ನು ಪಡೆದುದು ಎಂಬುದನ್ನು ಈ ಲೇಖನದಲ್ಲಿ ಅಳವಡಿಸಬೇಕಿದೆ.

ಮನುಕುಲವು ವಿಭಿನ್ನ ದೇಶ, ಕಾಲಗಳಿಗನುಗುಣವಾಗಿ ಬೆಳೆದಂತೆ ವಿಭಿನ್ನ ದೈವತ್ವದ ಕಲ್ಪನೆಯನ್ನು ಹೊಂದುತ್ತ ಸಾಗಿದೆ. ಮಾನವನು ಪ್ರಕೃತಿಯ ಭಯಾನು

ಕತೆಗೊಳಗಾಗಿ ಪಂಚಭೂತಗಳನ್ನು ಆರಾಧಿಸಿದ. ಪ್ರಕೃತಿಯ ಸೌಂದರ್ಯಗಳಿಗೆ ಮಾರು ಹೋಗಿ ಕಲೆಯನ್ನು ಕರಗತ ಮಾಡಿಕೊಂಡ. ಇವೆಲ್ಲವುಗಳನ್ನು ನಿಯಂತ್ರಿಸಬಲ್ಲ ಮಹಾ ಶಕ್ತಿಯ ಸಂಶೋಧನೆಯ ಮಾರ್ಗದಲ್ಲಿ ಮಹಾದೇವನನ್ನು ಗುರುತಿಸಿದ. ಕಾಣದ ದೇವರಿಗೆ ವಿವಿಧ ರೂಪ–ನಾಮಗಳನ್ನು ಕೊಟ್ಟ. ಈ ಪರಮಾತ್ಮನಿಗೆ ಹಾಗೂ ಜೀವನಾದ ತನಗೆ ಇರುವ ಸಂಬಂಧವನ್ನು ಚಿಂತಿಸಿದ. ಜಗತ್ತಿನ ಯಥಾರ್ಥತೆಯನ್ನು ವಿಚಾರಿಸ ತೊಡಗಿದ. ಕೊನೆಗೆ 'ಮಣ್ಣು ಬಿಟ್ಟು ಮಡಿಕೆಯಿಲ್ಲ, ತನ್ನ ಬಿಟ್ಟು ದೇವರಿಲ್ಲ' ಎಂಬ ನಿರ್ಣಯಕ್ಕೆ ಬಂದನು. ಜಗದಲ್ಲಿ ಬಾಳಿ ಬದುಕುವ ಜೀವಾತ್ಮನಿಗೆ ಚಿರಶಾಂತಿ ಪಡೆಯಲು ಶಿವನಾಗುವ ಹಂಬಲ ಹುಟ್ಟಿಕೊಂಡಿತು. ಶಿವನೊಡನೆ ಸಮರಸ ಹೊಂದುವ ಸಾಧನೆಯೇ 'ಯೋಗ'ವೆನ್ನಲು ಅಭ್ಯಂತರವಿಲ್ಲ. ಈ ಯೋಗಮಾರ್ಗ ಬಹು ಪುರಾತನವಾದದ್ದು. ಇದು ವಿಭಿನ್ನ ವಿಚಾರಗಳಲ್ಲಿ ಪರಿಪುಷ್ಟವಾಗಿ ಬೆಳೆಯುತ್ತ ಬಂದಿವೆ.

**ನ್ಯಾಯ ದರ್ಶನ:**

ಶಿವಯೋಗವನ್ನು ವ್ಯಾಖ್ಯಾನಿಸುವ ಪೂರ್ವದಲ್ಲಿ ಷಡ್ ದರ್ಶನಗಳನ್ನು ಹಾಗೂ ಇತರ ಯೋಗಗಳನ್ನು ಪರಿಚಯಿಸಿಕೊಂಡರೆ ಅಪ್ರಸ್ತುತವೇನಲ್ಲ. ಈಗಾಗಲೇ ನಾಸ್ತಿಕ ದರ್ಶನಗಳನ್ನು ಪರಿಚಯಿಸಿಕೊಂಡಂತೆ ಆಸ್ತಿಕ ಧರ್ಮಗಳೆನಿಸಿದ ಷಡ್ ದರ್ಶನಗಳಲ್ಲಿ ತರ್ಕ ಪ್ರಧಾನವಾದುದು ನ್ಯಾಯ. ಗೌತಮ ಮುನಿ ಈ ದರ್ಶನದ ಪ್ರಧಾನನು. ವೈದಿಕ ಧರ್ಮದ ಸ್ವರೂಪ ಜ್ಞಾನ ಮಾಡಿಕೊಳ್ಳಲು ನ್ಯಾಯವು ಬಹು ಮುಖ್ಯವಾಗಿದೆ. ಆತ್ಮ ದರ್ಶನಕ್ಕೆ ಸಹಾಯಕವಾದ ತರ್ಕವೇ ನ್ಯಾಯದ ಗುರಿ. ಇದು ಹದಿನಾರು ಪದಾರ್ಥಗಳ ಯಥಾರ್ಥ ನಿರೂಪಣೆಯಿಂದ 'ಪದಾರ್ಥ ಮೀಮಾಂಸಕ'ವೆನಿಸಿತು. ಇದಕ್ಕೆ 'ಪ್ರಾಚೀನ ನ್ಯಾಯ' ವೆಂದು ಹೆಸರು. ಪ್ರಮಾಣ ಮೀಮಾಂಸಕ ಪದ್ಧತಿಗೆ 'ನವ್ಯ ನ್ಯಾಯ'ವೆನ್ನುವರು. ನ್ಯಾಯ ಸೂತ್ರಗಳನ್ನು ರಚಿಸಿ ಶಾಸ್ತ್ರವನ್ನು ಕ್ರಮಬದ್ಧಗೊಳಿಸಿದ ಮುನಿ ಗೌತಮ. ದೀಪದ ಬೆಳಕು ತನ್ನ ಮುಂದಿರುವ ಸಕಲ ವಸ್ತುಗಳನ್ನು ಪರಿಚಯಿಸುವಂತೆ, ಬುದ್ಧಿಯು ಸಮಸ್ತ ಪದಾರ್ಥಗಳನ್ನು ಪ್ರಕಾಶಗೊಳಿಸುವದು. ನ್ಯಾಯ ದರ್ಶನದಲ್ಲಿ ಆತ್ಮವೇ ಜ್ಞಾನದ ಅಧಿಷ್ಠಾನ. ಆದು ಕಾರಣ ಜ್ಞಾನ ಆತ್ಮಾಶ್ರಯ. ಜ್ಞಾನವು ಸ್ಮೃತಿ ಹಾಗೂ ಅನುಭವಾತ್ಮಕವೆಂದು ಎರಡು ತೆರನಾಗುವದು. ಈ ಜ್ಞಾನವು ಅನುಭವಾತ್ಮಕತೆಯಿಂದ ಯಥಾರ್ಥವಾದರೆ ಆತ್ಮನ ಸತ್ಯ ಸಾಕ್ಷಾತ್ಕಾರವಾಗುವದು.

**ವೈಶೇಷಿಕ ದರ್ಶನ:**

ನ್ಯಾಯ ದರ್ಶನಕ್ಕೆ ಪ್ರಮುಖ ವ್ಯಕ್ತಿ ಗೌತಮನೆನಿಸಿದಂತೆ, ವೈಶೇಷಿಕ ದರ್ಶನದಲ್ಲಿ ಕಣಾದ ಮುನಿಗೆ ಅಗ್ರಸ್ಥಾನವಿದೆ. ನ್ಯಾಯ ದರ್ಶನದಂತೆ ಇಲ್ಲಿಯೂ ಬುದ್ಧಿಯ ತರ್ಕದ ಮೇಲೆ ಸತ್ಯವನ್ನು ಉಜ್ಜಿ ನೋಡುವ ಸಾಹಸವೇ ಇರುವುದು. ನ್ಯಾಯವು ಜ್ಞಾನವನ್ನು ವಿಮರ್ಶಿಸಿದರೆ ವೈಶೇಷಿಕವು ಜ್ಞೇಯ ವಸ್ತುಗಳ ಲಕ್ಷಣದ ವಿಶೇಷ ವಿಮರ್ಶೆಯಲ್ಲಿ

ತೊಡಗುವದು. 'ವಿಶೇಷ'ವೆಂಬ ಪದಾರ್ಥದ ಕಲ್ಪನೆಯಿಂದಾಗಿ ಕಣಾದ ದರ್ಶನಕ್ಕೆ 'ವೈಶೇಷಿಕ'ವೆಂಬ ಅಭಿದಾನ ಬಂದಿದೆ.

ರಥ ಚಲಿಸುವುದೆಂದರೆ ರಥದೊಳಗಿರುವ ಚೇತನ ವ್ಯಕ್ತಿಯಾದ ಸಾರಥಿಯ ಕಲ್ಪನೆ ಬರುವಂತೆ, ಶರೀರದಲ್ಲಿ ಚೇತನ ವಸ್ತುವಿನ ಸೂಚನೆ ಬರುವುದು. ಮಾನವ ಶರೀರದಲ್ಲಿ ಹಿತವಾದ ಪದಾರ್ಥಗಳನ್ನು ಹೊಂದುವುದಕ್ಕೂ ಮತ್ತು ಅಹಿತವಾದ ಪದಾರ್ಥಗಳನ್ನು ಬಿಡುವುದಕ್ಕೆ ಸದಾಕಾಲ ವ್ಯವಹಾರ ನಡೆಯುತ್ತಿರುತ್ತದೆ. ಮುಖ್ಯವಾಗಿ ಈ ಎಲ್ಲದಕ್ಕೂ ಕಾರಣವಾದ ಚೇತನ ಪದಾರ್ಥವನ್ನು ಹೇಗೆ ಅನುಮಾನ ಮಾಡುತ್ತೇವೋ ಅದೇ ಆತ್ಮ ವೆಂದುದಾಗಿ ವೈಶೇಷಿಕರು ಆತ್ಮ ಸಿದ್ಧಿಯನ್ನು ಸಾಧಿಸುತ್ತಾರೆ. ಉಳಿದ ಇಂದ್ರಿಯಗಳನ್ನು ಖಂಡಿಸುತ್ತಾರೆ. ಈ ದರ್ಶನದಲ್ಲಿ ಏಳು ಪದಾರ್ಥಗಳ ವಿವೇಚನೆ ಮುಖ್ಯ. ವೈಶೇಷಿಕ ಸೂತ್ರದಂತೆ ಜೀವನದಲ್ಲಿ ಅಭ್ಯುದಯ ಹಾಗೂ ನಿಃಶ್ರೇಯಗಳನ್ನು ಸಿದ್ಧಿಸಿಕೊಡುವುದಕ್ಕೆ ಧರ್ಮವನ್ನುವರು. ಇವರು ಅಭ್ಯುದಯಕ್ಕೆ ತತ್ವಜ್ಞಾನವೆಂತಲೂ ನಿಃಶ್ರೇಯಸಕ್ಕೆ ಮೋಕ್ಷ ವೆಂದೂ ಅರ್ಥೈಸುವರು. ತತ್ವಜ್ಞಾನವೇ ಮೋಕ್ಷದ ಪರಮ ಸಾಧನ.

**ಸಾಂಖ್ಯ ದರ್ಶನ:**

ಸಾಂಖ್ಯ ದರ್ಶನದ ಪ್ರತಿಪಾದಕನು ಕಪಿಲ ಮುನಿ. ಭಾರತೀಯ ದರ್ಶನಗಳಲ್ಲಿ ಸಾಂಖ್ಯವು ಅತ್ಯಂತ ಪ್ರಾಚೀನ ಹಾಗೂ ಮಹತ್ವಪೂರ್ಣವಾಗಿದೆ. ಮೊಟ್ಟಮೊದಲು ತತ್ವಗಳ ಪರಿಗಣನೆ ಮಾಡಿದ್ದರಿಂದ ಇದು 'ಸಾಂಖ್ಯ ದರ್ಶನ'ವೆನಿಸಿಕೊಂಡಿದೆ. ಇಲ್ಲಿ ಪ್ರಕೃತಿ ಪುರುಷರ ವಿವೇಚನೆಯು ಪ್ರಮುಖ ವಿಷಯ. ಪ್ರಕೃತಿ ಪುರುಷರ ಅಜ್ಞಾನದಿಂದ ಸಂಸಾರವುಂಟಾಗುವುದೆಂದು ಇವರ ಅಭಿಪ್ರಾಯ. ಪ್ರಕೃತಿ ತತ್ತ್ವದಲ್ಲಿ ೨೪ ತತ್ತ್ವಗಳು ಪುರುಷನೊಬ್ಬ ಸೇರಿ ೨೫ ತತ್ತ್ವಗಳ ಪ್ರತಿಪಾದನೆಯೇ ಸಾಂಖ್ಯರ ದರ್ಶನ.

ವೇದಾಂತದ ಪುರುಷನಿಗಿಂತ ಸಾಂಖ್ಯರ ಪುರುಷ ಭಿನ್ನ. ವೇದಾಂತದಲ್ಲಿ ಪ್ರತಿ ಪಾದಿಸಲ್ಪಡುವ ಪುರುಷ ಅಥವಾ ಆತ್ಮ ಒಂದೇ ಆಗಿದ್ದರೆ, ಸಾಂಖ್ಯದಲ್ಲಿ ಪ್ರತಿಯೊಂದು ಜೀವದಲ್ಲಿಯೂ ಬೇರೆ ಬೇರೆ ಆತ್ಮರೆಂದು ಪ್ರತಿಪಾದಿಸಲ್ಪಟ್ಟಿದೆ. ಸಾಂಖ್ಯರು ಪರಿಣಾಮ ವಾದಿಗಳು. ವೈರಾಗ್ಯಾದಿ ಗುಣಗಳ ದ್ವಾರಾ ದುಃಖಗಳಿಂದ ಅತ್ಯಂತಿಕ ನಿವೃತ್ತಿಯೇ ಮಾನವ ಜೀವನದ ಲಕ್ಷ್ಯವಾಗಿರಬೇಕೆಂಬುದು ಸಾಂಖ್ಯರ ಅಭಿಮತ. 'ತಾನು ಪ್ರಕೃತಿ ಯಿಂದ ಭಿನ್ನನು' ಎಂಬ ವಿವೇಕ ಜ್ಞಾನದಿಂದ ದುಃಖ ನಿವೃತ್ತಿಯಾಗುವುದು. ಇದುವೇ ಸಾಂಖ್ಯರ ಮೋಕ್ಷವಾಗಿದೆ.

**ಯೋಗ ದರ್ಶನ:**

ಪತಂಜಲಿಯು ಯೋಗ ಪ್ರತಿಪಾದಕನು. ಯೋಗ ವಿಚಾರವು ಬಹು ಪ್ರಾಚೀನ ಹಾಗೂ ವ್ಯಾಪಕವಾಗಿ ಬೆಳೆದುಬಂದಿದೆ. ಪತಂಜಲಿಯ 'ಯೋಗ ಸೂತ್ರ'ವೇ ಯೋಗದ ಪ್ರಾಚೀನ ಗ್ರಂಥ. ಸಾಂಖ್ಯ ದರ್ಶನ ನಿಂತಲ್ಲಿಂದ ಮುಂದೆ ಯೋಗ ದರ್ಶನ ಮುನ್ನಡೆ

ಯುತ್ತದೆ. ಒಂದಾಗಿದ್ದುದನ್ನು ವಿವಿಧ ಬಗೆಯಲ್ಲಿ ವಿಂಗಡಿಸುವುದು ಸಾಂಖ್ಯರ ಗುರಿಯಾದರೆ, ಈ ಅನಂತ ರೂಪಾದ ಸೃಷ್ಟಿಯೆಲ್ಲವೂ ಒಂದು ವಸ್ತುವಿನಲ್ಲಿ ಕೂಡುವುದೆಂಬುದನ್ನು ಪರಿಶೀಲಿಸುವುದೇ ಯೋಗದ ಗುರಿಯಾಗಿದೆ. ಮನಸ್ಸಿನ ಚಂಚಲವಾದ ವೃತ್ತಿಗಳನ್ನು ನಿರೋಧಿಸಿದರೆ ಜೀವಾತ್ಮನಿಗೆ ಸ್ವಸ್ವರೂಪ ದರ್ಶನವಾಗುವದು. ಜೀವಾತ್ಮ ಪರಮಾತ್ಮರ ಸಂಯೋಗವೇ ಯೋಗದರ್ಶನದ ಮಣಿಹವಾಗಿದೆ.

ಇಲ್ಲಿ ಯೋಗ ವಿಷಯವೇ ಪ್ರತಿಪಾದ್ಯವಾದುದರಿಂದ ಕ್ರಮಪ್ರಾಪ್ತ ಇನ್ನೆರಡು ದರ್ಶನಗಳನ್ನು ವಿವರಿಸಿ ಯೋಗದ ವಿಚಾರವನ್ನು ಮುಂದೆ ವಿವರಿಸೋಣ.

**ಪೂರ್ವ ಮೀಮಾಂಸಾ ದರ್ಶನ:**

ವಸ್ತುವೊಂದರ ಸ್ವರೂಪದ ಯಥಾರ್ಥ ನಿರ್ಣಯಕ್ಕೆ 'ಮೀಮಾಂಸೆ' ಎಂಬ ಪರಿಭಾಷೆ, ವೇದಗಳಲ್ಲಿ ಕರ್ಮಕಾಂಡ ಹಾಗೂ ಜ್ಞಾನಕಾಂಡವೆಂದು ಎರಡು ಭಾಗ. ಯಜ್ಞ ಯಾಗಾದಿಗಳ, ವಿಧಿ ವಿಧಾನಗಳನ್ನು ವರ್ಣಿಸುವ ಕರ್ಮಕಾಂಡವೇ 'ಪೂರ್ವ ಮೀಮಾಂಸೆ' ಎನಿಸಿದೆ. ಜಗತ್ತು-ಜೀವ ಮತ್ತು ಈಶ್ವರ ಇವುಗಳ ಸ್ವರೂಪ ಮತ್ತು ಸಂಬಂಧ ನಿರೂಪಣೆಯೇ ಜ್ಞಾನ ಕಾಂಡ. ಇದಕ್ಕೆ 'ಉತ್ತರ ಮೀಮಾಂಸೆ' ಎನ್ನುವರು. ಇದು ವೇದದ ಉತ್ತರ ಭಾಗದಲ್ಲಿರುವುದರಿಂದ ಇದಕ್ಕೆ ವೇದಾಂತವೆಂಬ ಹೆಸರು ಪ್ರಸಿದ್ಧವಾಗಿದೆ.

ಮೀಮಾಂಸಕರು ವೇದಗಳನ್ನು ಅಪೌರುಷೇಯವೆನ್ನುತ್ತಾರೆ. ಮಾನವನು ಧರ್ಮ ಸಂಪಾದನೆಗಾಗಿ ಕರ್ಮಗಳನ್ನು ಅವಲಂಬಿಸಬೇಕಾಗುತ್ತದೆ. ಕರ್ಮಕಾಂಡದ ವಿಧಿಗಳಲ್ಲಿ ಪರಸ್ಪರವಾಗಿ ಕಂಡು ಬರುವ ವಿರೋಧಗಳನ್ನು ಪರಿಹರಿಸಲು ಪೂರ್ವ ಮೀಮಾಂಸಕರು ವ್ಯಾಖ್ಯಾನವನ್ನು ಬರೆದರು. ಇವರ ಕರ್ಮಕಾಂಡದ ವಿಧಿನಿಷೇಧಗಳ ತಾಕಲಾಟದಲ್ಲಿ ಮಾನವ ತತ್ತರಿಸುತ್ತಾನಲ್ಲದೆ ಚಿರಶಾಂತಿಯನ್ನು ಹೊಂದಲಾರನು.

**ಉತ್ತರ ಮೀಮಾಂಸಾ ದರ್ಶನ:**

ವೇದಗಳ ಉತ್ತರ ಭಾಗವೆನಿಸಿದ ಉಪನಿಷತ್ತುಗಳೇ 'ಉತ್ತರ ಮೀಮಾಂಸೆ'ಯ ಬುನಾದಿ. ಇವುಗಳನ್ನು ಆಧರಿಸಿ ವೇದಾಂತ ದರ್ಶನದ ಸೂತ್ರಗಳನ್ನು ರಚಿಸಿದವನು ಮಹರ್ಷಿ ಬಾದರಾಯಣನು. ಈ ಬ್ರಹ್ಮಸೂತ್ರಗಳಿಗೆ ಅನೇಕ ಆಚಾರ್ಯರು ತಮ್ಮ ತಮ್ಮ ಮತಾನುಸಾರವಾಗಿ ಭಾಷ್ಯಗಳನ್ನು ರಚಿಸಿರುವರು. ಅದ್ವೈತ ಪರವಾಗಿ ಶಂಕರಾಚಾರ್ಯರು ರಚಿಸಿದರೆ; ವಿಶಿಷ್ಟಾದ್ವೈತ ಪರವಾಗಿ ರಾಮಾನುಜರು ರಚಿಸಿರುವರು. ಮಧ್ವಾಚಾರ್ಯರು ರಚಿಸಿದ ಭಾಷ್ಯ ದ್ವೈತ ಪರವಾಗಿದೆ. ಇನ್ನು ಶ್ರೀಪತಿಪಂಡಿತರು 'ಶಕ್ತಿವಿಶಿಷ್ಟಾದ್ವೈತ' ಪರವಾಗಿ ರಚಿಸಿದರು. ಇದು ವೀರಶೈವರ ಸಿದ್ಧಾಂತವಾಗಿದೆ. ಇದಕ್ಕೆ ಶಿವಾದ್ವೈತವೆಂತಲೂ ಇನ್ನೊಂದು ಹೆಸರು.

ನಾಸ್ತಿಕ ದರ್ಶನಗಳು ಶರೀರ ಸುಖ ಹಾಗೂ ಶರೀರ ಸಂಶುದ್ಧಿಯನ್ನು ಪ್ರಧಾನ

ವಾಗಿರಿಸಿಕೊಂಡಿದ್ದರೆ, ಆಸ್ತಿಕ ದರ್ಶನಗಳು ಶರೀರ ಶುದ್ಧಿಯೊಂದಿಗೆ ಶರೀರಿಯಾದ ನಿತ್ಯ ಸತ್ಯನೆನಿಸಿದ ಆತ್ಮ ತತ್ತ್ವವನ್ನು ಗುರಿಯನ್ನಾಗಿರಿಸಿಕೊಂಡು ಮುನ್ನಡೆದಿದ್ದಾವೆ. ಅದರಲ್ಲೂ ವೇದಾಂತವು ಶರೀರದಲ್ಲಿರುವ ಆತ್ಮನ ಸಾಕ್ಷಾತ್ಕಾರವೇ ಮುಖ್ಯ ಗುರಿಯಾಗಿರಿಸಿರುವುದರಿಂದ ಈ ದರ್ಶನಕ್ಕೆ 'ಶಾರೀರಿಕ ಮೀಮಾಂಸೆ' ಎಂಬುದಾಗಿಯೂ ಕರೆದಿದ್ದಾರೆ.

ಈ ಬ್ರಹ್ಮಸೂತ್ರಗಳಿಗೆ ಪ್ರತಿಪಾದಿಸಲ್ಪಟ್ಟ ವಿಭಿನ್ನ ಆಚಾರ್ಯರ ಭಾಷ್ಯಗಳನ್ನು ಅವಲೋಕಿಸಿದಾಗ ಆಧ್ಯಾತ್ಮದ ಜಗ್ಗಾಟ ಸಾಧಕನಿಗೆ ಬಗೆಹರಿಯದ ಸಮಸ್ಯೆಯೆನ್ನ ಬಹುದು. ಅಸ್ತು ಅದ್ವೈತ ವೇದಾಂತದಲ್ಲಿ 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ' ಅಂದರೆ ಪರಮಾರ್ಥ ಸತ್ತಾರೂಪನಾದವನು ಬ್ರಹ್ಮನು ಮಾಯಿಕ ವಾದ ಜಗತ್ತು ಮಿಥ್ಯವೆನಿಸಿದೆ. ಜೀವನು ಬ್ರಹ್ಮನೇ ಹೊರತು ಬೇರಲ್ಲ ಎಂಬುದಾಗಿ ಪ್ರತಿಪಾದಿತ ಸಿದ್ಧಾಂತ, ಇದು ಜ್ಞಾನಪ್ರಧಾನವಾದುದು, ಕ್ರಿಯಾ ಗೌಣವಿದೆ.

**ಶಕ್ತಿ ವಿಶಿಷ್ಟಾದ್ವೈತ ದರ್ಶನ:**

ಶಕ್ತಿ ವಿಶಿಷ್ಟಾದ್ವೈತ ದರ್ಶನ ವೀರಶೈವರದು. ಇದು ಪುರಾತನವಾದುದು. ವೇದಾಗಮ ಪುರಾಣಗಳಲ್ಲಿ ವೀರಶೈವ ಸಿದ್ಧಾಂತ ಲಭ್ಯವಿದೆ. ಶೈವದಿಂದ ವೀರಶೈವ ವಾಯಿತೆನ್ನುವದು ಸಾಧುವಲ್ಲ. ವೀರಶೈವವು ಶೈವ ಧರ್ಮದೊಂದಿಗೆ ಸ್ವತಂತ್ರವಾಗಿ ಬೆಳೆದಿದೆಯೆನ್ನುವದೂ ತಿಳಿದು ಬರುತ್ತದೆ. ಬ್ರಹ್ಮಸೂತ್ರಗಳಿಗೆ ವೀರಶೈವ ಪರ ಭಾಷ್ಯ ಬರೆದವರು ಶ್ರೀಪತಿ ಪಂಡಿತರು. ಶಕ್ತಿ ವಿಶಿಷ್ಟಾದ್ವೈತ ದರ್ಶನಕ್ಕೆ ಶಿವಾದ್ವೈತವೆಂತಲೂ ದ್ವೈತಾದ್ವೈತವೆಂತಲೂ ನಾಮಗಳಿವೆ. ವೀರಶೈವರು ಶಿವಶಕ್ತಿಯನ್ನು ಭಿನ್ನವಾಗಿ ಭಾವಿಸುವದಿಲ್ಲ. ಶಿವನನ್ನು ಬಿಟ್ಟು ಶಕ್ತಿಯಿಲ್ಲ ಶಕ್ತಿಯನ್ನು ಬಿಟ್ಟು ಶಿವನಿಲ್ಲ ಚಂದ್ರ-ಚಂದ್ರಿಕೆಯಂತೆ, ವಹ್ನಿ ಹಾಗೂ ದಾಹಕ ಶಕ್ತಿಯಂತೆ, ಪುಷ್ಪ-ಪರಿಮಳದಂತೆ ಶಿವಶಕ್ತಿಯ ಅಭೇದತ್ವವಿದೆ. ಚಂದ್ರನು ಬೆಳದಿಂಗಳನ್ನು ಬಿಟ್ಟು ಇರಲಾರನೋ ಬೆಂಕಿಯೂ ದಾಹಕ ಶಕ್ತಿಯಿಂದ ಭಿನ್ನವಾಗಿರುವುದಿಲ್ಲ. ಪುಷ್ಪ ಹಾಗೂ ಸುಗಂಧವಾದರೂ ಬೇರೆ ಬೇರೆಯಾಗಿ ಇರುವದಿಲ್ಲ. ಇದರಂತೆ ಪರಶಿವನಾದರೂ ಶಕ್ತಿಸಮೇತನಾಗಿಯೇ ಇರುವನು.

ಈ ದರ್ಶನದಲ್ಲಿ ಜೀವ ಜಗತ್ತುಗಳನ್ನು ಮಿಥ್ಯವೆಂದು ಪ್ರತಿಪಾದಿಸುವದಿಲ್ಲ. ದೇಹೇಂದ್ರಿಯಗಳನ್ನು ಹೇಯವೆಂದು ತಿರಸ್ಕರಿಸುವದಿಲ್ಲ. ಜೀವನು ಕೈಕೊಂಡ ಯಾವುದೇ ವೃತ್ತಿ (ಕಾಯಕ) ಯನ್ನು ತುಚ್ಛವೆಂದು ಭಾವಿಸುವದಿಲ್ಲ. ಭೋಗವನ್ನು ದುಃಖಪ್ರದ ವೆಂದು ಬಿಡುವದಿಲ್ಲ. ಈ ಜಗತ್ತು ಆತ್ಮಶಕ್ತಿಯ ವಿಕಾಸಮಾರ್ಗಕ್ಕೆ ಸಾಧನವಾಗಿರುವದು. ಜಗತ್ತಾದರೂ ಶಿವಮಯವಾಗಿರುವದರಿಂದ ಜೀವನು ಗುರುಕರುಣೆಯಿಂದ ಶಿವಸಂಸ್ಕಾರ ಪಡೆದು ತನ್ನ ಅರುಹಿನ ಕುರುಹನ್ನೇ ಲಿಂಗವನ್ನಾಗಿ ದೊರಕಿಸುವನು. ಅರ್ಚನ, ಅರ್ಪಣ, ಅನುಭವ ಪಥಗಳಿಂದ ಲಿಂಗವೇ ತಾನಾಗುವನು. ಅಷ್ಟಾವರಣ-ಪಂಚಾಚಾರ-ಷಟ್‌ಸ್ಥಲ

ಗಳೇ ವೀರಶೈವನ ಸಾಧನಗಳು; ಸಿದ್ಧಾಂತಗಳು. ವೀರಶೈವನು ದೇಹ ತ್ಯಜಿಸಿ ಮುಕ್ತ ನಾಗುವದಿಲ್ಲ. ದೇಹಿಯಾಗಿಯೇ ನಿತ್ಯಮುಕ್ತಸ್ಥಿತಿ ಪಡೆವ ಅಹೋ ಭಾಗ್ಯ ವೀರಶೈವನದು.

'ಶಿವಾದ್ವೈತದಲ್ಲಿ ದ್ವೈತಮತದ ಭಕ್ತಿ, ಅದ್ವೈತ ಮತದ ಜ್ಞಾನ, ಇವೆರಡರ ಸಮನ್ವಯವನ್ನು ಸಾರಿದೆ. ದ್ವೈತಾದ್ವೈತವೆರಡು ಸಮರಸಗೊಳಿಸಿದೆ. ಅಂಗ ಪದದಿಂದ ಪ್ರಪಂಚಾಭಿವೃದ್ಧಿಯನ್ನು, ಶುದ್ಧಿಯನ್ನು, ಲಿಂಗ ಪದದಿಂದ ಪರಮಾರ್ಥ ಸಿದ್ಧಿಯನ್ನು ಸಮನ್ವಯಗೊಳಿಸಿದೆ; ಸಮರಸಗೊಳಿಸಿದೆ. ಭಾವವನ್ನು ಅಸುಗೊಳಿಸಿ ಬೆಳೆಸುವುದೆ ಶಿವಾದ್ವೈತದ ಜೀವಜೀವಾಳ. ಭವಕ್ಕೆ ಅನುವಾಗಿಸದೆ ಭವಹರನಿಗೆ ಅನುವಾಗಿಸುವುದೆ ಶಿವಾದ್ವೈತ ಧರ್ಮಮೂಲ'ವೆಂದು ಡಾ: ಜ. ಚ. ನಿ. ಯವರು ಶಿವಾದ್ವೈತ ದರ್ಶನದ ಸಾರವನ್ನು ಸುಂದರವಾಗಿ ವಿವರಿಸಿದ್ದಾರೆ.

ವೀರಶೈವ ಸಿದ್ಧಾಂತವು ತನ್ನದೇ ಆದ ವಿಶಿಷ್ಟ ಸ್ಥಾನಮಾನವನ್ನು ಹೊಂದಿದೆ. ಅಷ್ಟಾವರಣವನ್ನೇ ಅಂಗವಾಗಿರಿಸಿಕೊಂಡ ಶರಣನು ಪಂಚಾಚಾರಗಳನ್ನು ಪ್ರಾಣವಾಗಿಸಿ ಕೊಳ್ಳುತ್ತ ಷಟ್‌ಸ್ಥಲಾತ್ಮಕವಾಗಿ ಮುನ್ನಡೆಯುತ್ತಾನೆ. ಭಕ್ತಸ್ಥಲದ ಉಪಕ್ರಮದಿಂದ ಐಕ್ಯನ ಐಕ್ಯಸ್ಥಿತಿಯಲ್ಲಿ ಉಪಸಂಹಾರವಾಗುತ್ತದೆ. ಒಂದಾದುದು ನೂರೊಂದಾಗಿ ಪುನಃ ಒಂದರಲ್ಲಿ ಸಮರಸವಾಗುವ ತತ್ತ್ವಪುರುಷನೇ ತಾನಾಗುವ ಶುಭಯೋಗ ವೀರಶೈವರದ್ದು. ಇದುವೇ 'ಶಿವಯೋಗವೆನಿಸಿದೆ' ಇದಕ್ಕೆ ಲಿಂಗಾಂಗ ಸಮರಸವೆಂತಲೂ ಖ್ಯಾತಿ ಬಂದಿದೆ. ಇಲ್ಲಿ ಸಂಸಾರದ ಅಸಾರತೆಯಿಲ್ಲ. ಕೇವಲ ಜ್ಞಾನಮಾರ್ಗದಿಂದಾಗುವ ಕರ್ತವ್ಯಚ್ಯುತಿಗೆ ಅವಕಾಶವಿಲ್ಲ. ಜ್ಞಾನ ಕ್ರಿಯೆಗಳ ಸಮ-ಸಮುಚ್ಚಯದಲ್ಲಿ ಅಭ್ಯುದಯ ಹಾಗೂ ನಿಃಶ್ರೇಯಗಳನ್ನು ಸಾಧಿಸುವ ಸುವರ್ಣ ಅವಕಾಶ ಇಲ್ಲಿದೆ. ಅನ್ಯರ ಹಂಗಿನೊಳಗಾಗದೆ ಸತ್ಯ ಶುದ್ಧ ಕಾಯಕಮಾಡಿ ಕೈಲಾಸ ಕಾಣುವಂತೆ, ಅಷ್ಟಾವರಣ-ಪಂಚಾಚಾರ-ಷಟ್‌ಸ್ಥಲ ಗಳನ್ನು ಅಳವಡಿಸಿಕೊಂಡು ಕಾಯಕವೇ ಕೈಲಾಸ ಮಾಡಿಕೊಳ್ಳುವ ಮಹಾಮಹಿಹ ವೀರಶೈವರದು. ಜಾಗತಿಕ ದರ್ಶನಗಳಲ್ಲಿಯೇ ವಿಶಿಷ್ಟವಾದ ಕೊಡುಗೆ ಇವರದು. ಈ ದಿಸೆಯಲ್ಲಿ ಹನ್ನೆರಡನೆಯ ಶತಮಾನದ ಕ್ರಾಂತಿ ಪುರುಷ ಬಸವಣ್ಣನವರು ಈ ಧರ್ಮ-ದರ್ಶನಕ್ಕೆ ಮಹಾಬೆಳಕಾದರು. ವಚನವಾಙ್ಮಯವನ್ನು ನೀಡಿದ ಶರಣರು ವೀರಶೈವ ಸಿದ್ಧಾಂತಕ್ಕೆ ಮೇರುಮಣಿಯಾಗಿದ್ದಾರೆ. ಉಚ್ಚಸ್ಥಾನದಲ್ಲಿದ್ದಾರೆ. ಇದರಿಂದಾಗಿ ಈ ದರ್ಶನವು ಸುಲಭ ಹಾಗೂ ವೈಚಾರಿಕ ನಿಲವನ್ನು ಹೊಂದಿದೆ ಎಂದರೆ ತಪ್ಪಿಲ್ಲ. ವೈಚಾರಿಕ ಹಾಗೂ ಧಾರ್ಮಿಕ ಸ್ವಾತಂತ್ರ್ಯವು, ವೀರಶೈವ ಸಿದ್ಧಾಂತವನ್ನು ಹೊರತುಪಡಿಸಿದರೆ ಬೇರೆಲ್ಲಿಯೂ ಕಾಣ ಸಿಕ್ಕುವುದಿಲ್ಲ. ಸಕಲರ ಲೇಸಬಯಸುವ ಈ ದರ್ಶನ ವಿಶ್ವ ಧರ್ಮ ಗಳಲ್ಲಿ ಅಗ್ರಸ್ಥಾನ ಪಡೆಯಬಹುದಾಗಿದೆ. ಪ್ರಾಯೋಗಿಕ ತತ್ತ್ವಜ್ಞಾನ ಈ ದರ್ಶನದ ಮುಖ್ಯ ಅಂಶ.

**ಯೋಗದ ವ್ಯಾಖ್ಯಾನ :**

ವೀರಶೈವನು ತತ್ತ್ವಪುರುಷನಾಗಲು ಶಿವಯೋಗವನ್ನು ಸಾಧಿಸಬೇಕಾಗುವದು

ಈ ಶಿವಯೋಗದ ವಿಶ್ಲೇಷಣೆ ಮಾಡುವ ಪೂರ್ವದಲ್ಲಿ ಯೋಗದ ವ್ಯಾಖ್ಯಾನ ಅವಶ್ಯ ವಿದೆ. 'ಯುಜ್=ಸಂಗತ ಕರಣೆ'=ಘಟಿಸು, ಕೂಡುವಿಕೆ ಒಂದಾಗುವಿಕೆ ಎಂಬ ಅರ್ಥ ವುಳ್ಳ ಯುಜ್ ಧಾತುವಿನಿಂದ ಯೋಗ ಪದವು ನಿಷ್ಪನ್ನಗೊಳ್ಳುವುದು. 'ಯುಜ್-ಸಮಾಧೌ' ಎಂಬ ಧಾತುವಿನ ಪ್ರಕಾರ ಯೋಗವು ಸಮಾಧಿಯನ್ನು ಸೂಚಿಸುವದು. ಪತಂಜಲಿಯು ಯೋಗ ದರ್ಶನದಲ್ಲಿ 'ಯೋಗಶ್ಚಿತ್ತವೃತ್ತಿ ನಿರೋಧಃ 'ಮನಸ್ಸಿನ ಚಂಚಲ ವಾದ ವೃತ್ತಿಗಳನ್ನು ನಿರೋಧಿಸುವುದಕ್ಕೆ 'ಯೋಗ'ವೆಂದು ಕರೆದರೆ, ಭಗವದ್ಗೀತೆ ಯಲ್ಲಿ-'ಯೋಗಃ ಕರ್ಮಸು ಕೌಶಲಮ್' ಮತ್ತು 'ಸಮತ್ವಂ ಯೋಗ ಉಚ್ಯತೇ' ಕರ್ಮ ಕುಶಲತೆಯನ್ನು ಯೋಗವೆಂದು ಒಂದು ಕಡೆ ನಿರೂಪಿಸಿದ್ದಾರೆ. ಇನ್ನೊಂದೆಡೆಯಲ್ಲಿ ಸಮತ್ವವೇ ಯೋಗವೆಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಸಾಮಾನ್ಯವಾಗಿ ವ್ಯವಹಾರ ದಲ್ಲಿ 'ಅಪ್ರಾಪ-ಪ್ರಾಪಣೋ ಯೋಗಃ' ಅಲಭ್ಯವಾದ ವಸ್ತು ಆಕಸ್ಮಿಕವಾಗಿ ಲಭಿಸಿದರೆ ಅದಕ್ಕೂ ಯೋಗವೆನ್ನುವ ರೂಢಿಯಿದೆ. ರೂಢಿಗಿಂತಲೂ ಶಾಸ್ತ್ರಸಮ್ಮತವಾದ ಯೋಗವು ಇಂದ್ರಿಯ ಮತ್ತು ಚಿತ್ತವೃತ್ತಿಗಳ ನಿರೋಧವನ್ನು ಸಮಾಧಿಯನ್ನು ಸೂಚಿಸು ತ್ತದೆ. ಪತಂಜಲಿಯು ಚಿತ್ತವೃತ್ತಿಗಳನ್ನು ನಿವೃತ್ತಿಗೊಳಿಸುವದಕ್ಕೆ ಯೋಗವೆಂದು ಭಾಷ್ಯ ಬರೆದರೆ ಶಿವಾದ್ವೈತಿಗಳು ಇಂದ್ರಿಯ ಹಾಗೂ ಚಿತ್ತವೃತ್ತಿಗಳು ಕೇವಲ ನಿವೃತ್ತಿ ಯಾದರೆ ಸಾಲದು. ಅವು ನಿಷ್ಪತ್ತಿಗೊಳ್ಳಬೇಕೆಂಬುದಾಗಿ ವ್ಯಾಖ್ಯಾನಿಸುವರು. ನಿಷ್ಪತ್ತಿ ಭಾವವೇ ಶಿವಯೋಗಕ್ಕೆ ಪೂರಕವಾಗುವದು.

**ಯೋಗದ ಮಹತ್ವ :**

ಭಾರತೀಯ ದರ್ಶನಗಳಲ್ಲಿ ಯೋಗವನ್ನು ಹಿಂದೂ ಜನಾಂಗದ ಅತ್ಯಂತ ಪ್ರಾಚೀನ ಹಾಗೂ ಸಮೀಚೀನವಾದ ಸಂಪತ್ತನ್ನಾಗಿ ಮನ್ನಿಸುತ್ತಾರೆ. ಪರಮೇಶ್ವರ ನಿಂದ ಯೋಗವನ್ನು ಪಡೆದ ಹಿರಣ್ಯಗರ್ಭನೇ ಯೋಗದ ಆದ್ಯ ಪ್ರವರ್ತಕನೆನಿಸುತ್ತಾನೆ. ಅಲ್ಲದೆ-

'ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ, ಮನುರಿಕ್ಷ್ವಾಕವೇಽ ಬ್ರವಿತ್ ॥'

'ಕೃಷ್ಣನು-' 'ಈ ಯೋಗವನ್ನು ಪೂರ್ವದಲ್ಲಿ ಸೂರ್ಯದೇವನಿಗೆ ಉಪದೇಶಿಸಿದ ಅವನು ಮನುವಿಗೆ ಬೋಧಿಸಿದ. ಮನು ಮಹರ್ಷಿಯು ಇಕ್ಷ್ವಾಕು ಕುಮಾರ ರಾಮನಿಗೆ ಹೇಳಿದನು' ಎಂಬುದಾಗಿ ಯೋಗದ ಪ್ರಾಚೀನತೆಯನ್ನು ಅದರ ಮಹತ್ವವನ್ನು ಗೀತೆಯಲ್ಲಿ ಚನ್ನಾಗಿ ವಿವರಿಸಿರುವನು. ಭಗವದ್ಗೀತೆಯೂ ಯೋಗ ಪ್ರತಿಪಾದಕ ಗ್ರಂಥವೆಂಬುದಾಗಿ ದರ್ಶನಕಾರರೂ ಮನ್ನಿಸಿರುವರು. ಆಗಮುಗಳಲ್ಲೂ ಯೋಗ ಪ್ರತಿ ಪಾದಕ ಭಾಗವು ಪ್ರತ್ಯೇಕವಾಗಿದೆ. ಪುರಾಣಾದಿಗಳಲ್ಲಿಯೂ ಯೋಗ ವಿಷಯದ ಪ್ರತಿ ಪಾದನೆ ಬಹಳವಾಗಿದೆ. ಇನ್ನು ಸ್ವತಂತ್ರವಾದ ಯೋಗ ಗ್ರಂಥಗಳಿಗೆ ಕಡಿಮೆಯಿಲ್ಲ. ಯೋಗ ಸ್ವರೂಪ ಪ್ರತಿಪಾದನೆಯಲ್ಲಿ ಹಾಗೂ ಯೋಗ ಸಾಧನ ಕ್ರಮದಲ್ಲಿ ಕಾಲಾಸು

ಗುಣವಾಗಿ ಕೆಲಮಟ್ಟಿಗೆ ಭಿನ್ನವಾಗಿ ಕಾಣಬಹುದು. ಆದರೂ ಸರ್ವಯೋಗಗಳ ಸಮನ್ವಯವು ಶಿವಯೋಗದಲ್ಲಿ ಸಮಾವೇಶಗೊಂಡಿದೆ ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು.

**ಯೋಗ ಪ್ರಭೇದಗಳು :**

'ಶರೀರಮಾದ್ಯಂ ಖಲು ಧರ್ಮ ಸಾಧನಂ' (ಕಾಳಿದಾಸ) ಧರ್ಮ ಸಾಧನೆಗಳಲ್ಲಿ ಶರೀರವೇ ಪ್ರಪ್ರಥಮ ಸಾಧನವು. ಶಾರೀರಿಕ ಆರೋಗ್ಯ, ಮಾನಸಿಕ ಶಾಂತಿ ಹಾಗೂ ಈಶ್ವರ ಸಾಕ್ಷಾತ್ಕಾರಗಳನ್ನು ಪಡೆಯುವಲ್ಲಿ ಯೋಗಸಾಧನವು ಮಹತ್ವದ ಪಾತ್ರವನ್ನು ಹೊಂದಿದೆ. ನಾಸ್ತಿಕನಾಗಲಿ, ಆಸ್ತಿಕನಾಗಲಿ ಯಮಾದಿ ನಾಲ್ಕು ಅಂಗ ಗಳನ್ನು ಮನ್ನಿಸದೇ ಇರುವುದಿಲ್ಲ. ಪತಂಜಲಿಯು ಮುಖ್ಯವಾಗಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳೆಂದು ಯೋಗದ ಎಂಡು ಪ್ರಭೇದಗಳನ್ನು ಪ್ರತಿಪಾದಿಸಿದ್ದಾನೆ. ಇನ್ನು ಈ ಅಷ್ಟಾಂಗ ಯೋಗದಲ್ಲಿಯೂ ಹಟಯೋಗ, ಲಯಯೋಗ, ಮಂತ್ರಯೋಗ, ರಾಜಯೋಗವೆಂದು ನಾಲ್ಕು ಭೇದ ಗಳನ್ನು ಮಾಡುತ್ತಾರೆ. ಈ ಯೋಗ ಪ್ರಭೇದಗಳು ಒಂದಕ್ಕೊಂದು ಭಿನ್ನವೆನಿಸಿ ದರೂ ಒಂದಕ್ಕೊಂದು ಯೋಗ ಸಾಧನೆಯಲ್ಲಿ ಪೂರಕವೇ ಆಗಿವೆ. ಅಂತೆಯೇ ಹಠ ಯೋಗವು ಪೂರ್ವರಂಗವಾದರೆ ರಾಜಯೋಗವು ಉತ್ತರ ಭೂಮಿಯಾಗಿದೆ. ಇನ್ನು ಲಯ ಮತ್ತು ಮಂತ್ರ ಯೋಗಗಳು ರಾಜಯೋಗಕ್ಕೆ ಪೋಷಕವಾಗಿವೆ.

**ಹಠಯೋಗ :**

'ಹಠಯೋಗ' ಪದವೇ ಸೂಚಿಸುವಂತೆ ಹಠದಿಂದ ಸಾಧಿಸುವ ಯೋಗವೇ ಹಠ ಯೋಗವೆನಿಸುವದು. ಹಠಯೋಗದ ಪರಿಭಾಷೆಯು 'ಸಿದ್ಧಸಿದ್ಧಾಂತ ಪದ್ಧತಿ'ಯಲ್ಲಿ ಕೆಳಗಿನಂತಿದೆ.

> ಹಕಾರಃ ಕೀರ್ತಿತಃ ಸೂರ್ಯಃ ಠಕಾರಶ್ಚಂದ್ರ ಉಚ್ಯತೇ ।
> ಸೂರ್ಯಚಂದ್ರಮಸೋರ್ಯೋಗಾತ್ ಹಠಯೋಗೋಽಭಿಧೀಯತೇ ॥

ಇಡಾನಾಡಿಯು ಸೂರ್ಯನಾಡಿ, ಬಲನಾಸಾ ಪುಟದಲ್ಲಿಪ್ಪುದು. ಪಿಂಗಳಾನಾಡಿ ಚಂದ್ರ ನಾಡಿ, ಎಡನಾಸಾಪುಟದಲ್ಲಿಪ್ಪುದು. 'ಹಠ' ಶಬ್ದದ ಹಕಾರವು ಸೂರ್ಯನಾಡಿ ಸಂಕೇತವಾದರೆ ಠಕಾರವು ಚಂದ್ರನಾಡಿ ಎನಿಸಿದೆ. ಸೂರ್ಯ-ಚಂದ್ರನಾಡಿಗಳು ಸುಷುಮ್ನಾ ನಾಡಿಯಲ್ಲಿ ಸಮಾವೇಶಗೊಳಿಸುವದಕ್ಕೆ ಹಠಯೋಗವೆನ್ನುವರು. ಇಡಾ ಪಿಂಗಳಾ ಈ ಎರಡು ನಾಡಿಗಳಲ್ಲಿ ಸಂಚರಿಸುತ್ತಿರುವ ಪ್ರಾಣವಾಯುವು ಇವುಗಳ ಮಧ್ಯದಲ್ಲಿರುವ ಸುಷುಮ್ನಾನಾಡಿಯೊಳಕ್ಕೆ ಪ್ರವೇಶಿಸುವಿಕೆಯೇ ಹಠಯೋಗ. ಪ್ರಾಣಾಯಾಮದ ರೇಚಕ-ಪೂರಕ-ಕುಂಭಕ ಸಾಧನಗಳಿಂದ ಪ್ರಾಣವಾಯುವನ್ನು ಸುಷುಮ್ನೆಯಲ್ಲಿ ಸೇರಿಸುವ ಸಾಹಸ ಮಾಡುತ್ತಾರೆ, ಯೋಗಿಗಳು. ಪ್ರಾಣಾಯಾಮವನ್ನು ಗುರುಮುಖದಿಂದ ತಿಳಿದು ಅರಿತಾ

ಚರಿಸಬೇಕು. ಗ್ರಂಥಸ್ಥ ವಿಚಾರಗಳನ್ನು ಓದಿ ಪ್ರಾಣಾಯಾಮವನ್ನು ಸಾಧಿಸಬಾರದು. ಅರಿಯದೆ ಆಚರಿಸುವಲ್ಲಿ ಲಾಭಕ್ಕಿಂತ ಹಾನಿಯಾಗುವದು. ಪ್ರಾಣಾಪಾಯಕ್ಕೆರವಾಗ ಬೇಕಾಗುವದು.

ನಿಜಗುಣ ಶಿವಯೋಗಿಗಳು ತಮ್ಮ 'ಪಾರಮಾರ್ಥಪ್ರಕಾಶಿಕೆ'ಯಲ್ಲಿ ಹಠಯೋಗ ವ್ಯಾಖ್ಯೆಯನ್ನು ಹಾಗೂ ಅದರ ಲಾಭವನ್ನು ಈ ರೀತಿ ವಿವರಣೆ ಮಾಡಿದ್ದಾರೆ. 'ಹಠ ಯೋಗದಭ್ಯಾಸದಿಂ ಆ ತಮೋಗುಣಾದಿ ರೂಪ ಶ್ಲೇಷ್ಮಾದಿ ದೋಷಂಗಳು ನಾಶಮಾಗೆ ಸಮ್ಯಗ್‌ಜ್ಞಾನವಾಗುತ್ತಿಹುದು. ಆ ಸಮ್ಯಗ್‌ಜ್ಞಾನದಿಂ ಶಿವತತ್ವಾಭಿವ್ಯಕ್ತ ರೂಪಮಾದ ನಿಜಯೋಗಮಾಗುತ್ತಿಹುದಾಜ್ಞಾನ ಯೋಗಂಗಳ ಸಿದ್ಧಿನಿಮಿತ್ತಮಾಗಿ ಈ ಲೋಕದಲ್ಲಿ ವಿವೇಕಿಯಾದಾತನಿಂ ಶರೀರವೇ ಚನ್ನಾಗಿ ರಕ್ಷಿಸಲ್ತಕ್ಕುದಾ ಶರೀರ ರಕ್ಷಣೆಯೆ ಶ್ಲೇಷ್ಮಾದಿ ದೋಷನಾಶದಿಂದಪ್ಪುದಾ ದೋಷನಾಶವೇ ಧೌತಿ, ಬಸ್ತಿ ಮೊದಲಾದ ಷಟ್ಕರ್ಮಾಧಿಕ ಮುಳ್ಳ ಹಠಯೋಗದಿಂದಕ್ಕುಂ' ಶರೀರದಲ್ಲಿ ವಾತ-ಪಿತ್ಥ-ಕಫಗಳೇ ತ್ರಿದೋಷಗಳು. ಇವುಗಳ ವಿಷಮ ಸ್ಥಿತಿಯಿಂದಲೇ ಶಾರೀರಿಕ ರೋಗಬಾಧೆಯಾಗುವದು. ಬಾಧೆಗಳು ನಾಶವಾದಾಗ ಸಮ್ಯಗ್‌ಜ್ಞಾನವಾಗುವದು. ನಿಜಯೋಗ ಪ್ರಾಪ್ತಿಯಾಗುವದು. ಅದಕ್ಕಾಗಿ ಶರೀರ ರಕ್ಷಣೆ ಮಾಡಿಕೊಳ್ಳಲು ಶ್ಲೇಷ್ಮಾದಿ ದೋಷಗಳನ್ನು ಕಳೆದುಕೊಳ್ಳಲು ಧೌತಿ, ಬಸ್ತಿ, ನವಲಿ ಮೊದಲಾದ ಷಟ್ಕರ್ಮಾದಿಗಳನ್ನು ಸಾಧಿಸುವಿಕೆಯೇ ಹಠಯೋಗ ವೆನಿಸುವುದೆಂದು ನಿಜಗುಣರು ಪ್ರತಿಪಾದಿಸಿರುವರು. ಈ ಷಟ್ಕರ್ಮಗಳನ್ನು ಉತ್ತಮಾ ಧಿಕಾರಿಯೇ ಸಾಧಿಸಲು ಯೋಗ್ಯನು. ಇವು ಎಲ್ಲರಿಗೆ ಲಭ್ಯವಾಗುವದಿಲ್ಲ. ಹಠಯೋಗ ವನ್ನು ಸಾಧಿಸಿದ ಯೋಗಿಯ ಸ್ವರೂಪವನ್ನು 'ಹಠಪ್ರದೀಪಿಕೆಯಲ್ಲಿ' ಅವಲೋಕಿಸಿ

'ವಪುಃ ಕೃಶತ್ಯಂ ವದನೇ ಪ್ರಸನ್ನತಾ ।
ನಾದಸ್ಫುಟತ್ವಂ ನಯನೇ ಸುನಿರ್ಮಲೇ ॥
ಅರೋಗತಾ ಬಿಂದುಜಯೋಽಗ್ನಿದೀಪನಂ
ನಾಡೀ ವಿಶುದ್ಧಿ; ಹಠಯೋಗ ಲಕ್ಷಣಂ ॥'

ಹಠಯೋಗದಲ್ಲಿ ಅಷ್ಟಾಂಗಗಳ ಯಮ-ನಿಯಮ-ಅಸನ-ಪ್ರಾಣಾಯಾಮ ಪ್ರತ್ಯಾಹಾರ ಗಳು ಸಮಾವೇಶಗೊಳ್ಳುತ್ತವೆ. ಈ ಐದು ಯೋಗಾಂಗಳಿಂದ ಶರೀರವು ಕೃಷವಾಗಿ ಸುಂದರವಾಗುವದು. ಮುಖದಲ್ಲಿ ಕಾಂತಿಯುಂಟಾಗಿ ಪ್ರಸನ್ನತೆಯು ಕಾಣಿಸುವದು. ವಾಣಿಯು ಸ್ಫುಟವಾಗುವದು. ನೇತ್ರಗಳು ನಿರ್ಮಲಗೊಳ್ಳುವವು. ಅಂಧತ್ವವು ನಾಶ ವಾಗುವದು. ನಿರೋಗಿಯಾಗುವನು. ಬಿಂದು ಜಯಸಿದ್ಧಿಸುವದು. ಅಂದರೆ ವೀರ್ಯ ವೃದ್ಧಿಯಾಗುವದು. ಜಠರಾಗ್ನಿಯು ದೀಪಿಸುವದು. ಪಚನ ಶಕ್ತಿ ಚನ್ನಾಗಿ ಆಗುವದು. ನಾಡಿಗಳ ವಿಶುದ್ಧಿಯಾಗುವದು. ಹೀಗಾಗುವುದೇ ಹಠಯೋಗದ ಲಕ್ಷಣವೆಂದಿದ್ದಾರೆ. ನಾಥ ಸಂಪ್ರದಾಯದ ಗೋರಖನಾಥನು ಹಠಯೋಗದ ಸಾಧನೆಯಿಂದ ಕಾಯುವನ್ನು ವಜ್ರ ಕಾಯುವನ್ನಾಗಿ ಮಾಡಿಕೊಂಡ ಇತಿಹಾಸ ತಿಳಿದುಬರುತ್ತದೆ. ಪ್ರಭುಲಿಂಗ

ಲೀಲೆಯಲ್ಲಿ ಪ್ರತಿಪಾದಿಸಿದಂತೆ ವಜ್ರಕಾಯನಾದ ಗೋರಖನಾಥನು ಶಿವಯೋಗ ಸಂಪನ್ನನಾದ ವ್ಯೋಮಕಾಯನೆನಿಸಿದ ಅಲ್ಲಮ ಪ್ರಭುವಿನಿಂದ ಸೋಲನ್ನಪ್ಪುತ್ತಾನೆ. ಅಂದರೆ ಹಠಯೋಗವೇ ಕೊನೆಯ ಸಾಧನೆಯಲ್ಲ. 'ಕಾಯಬಲಿದರೆ ಮಾಯೆ ಬಲಿಯುವದು' ವಜ್ರಕಾಯನಾನೆಂಬ ಅಹಂಕಾರ ಅಳಿಯಲಿಲ್ಲ. ಅಹಂಕಾರದಿಂದ ಚಿರಶಾಂತಿ ಲಭಿಸುವದಿಲ್ಲ. ಚಿತ್ತವೃತ್ತಿಗಳು ನಿವೃತ್ತಿಯಾಗದಿರುವಾಗ ನಿಷ್ಪತ್ತಿಗೊಳ್ಳುವದಂತೂ ದೂರ ಉಳಿಯಿತು.

**ಲಯಯೋಗ :**

ಗುರು ಕೃಪೆ ಪಡೆದ ಸಾಧಕನು, ಸದ್ಗುರುವಿನಿಂದ ಉಪದೇಶಿಸಲ್ಪಟ್ಟ ಮಂತ್ರವನ್ನು ಅನುಸಂಧಾನ ಮಾಡಬೇಕಾಗುವದು. ಮಂತ್ರಧ್ಯಾನದ ನಾದದಲ್ಲಿ ಮನವನ್ನು ಲಯಗೊಳಿಸುವ ವಿಧಾನವೇ ಲಯಯೋಗವೆನಿಸುವದು. ಇನ್ನು ಕೆಲವರು ಭ್ರೂಮಧ್ಯದಲ್ಲಾಗಲಿ, ಪೂರ್ಣಿಮಾ ಯೋಗ ದೃಷ್ಟಿಯಲ್ಲಾಗಲಿ, ಅಂಥವರ ಶರೀರದ ಷಟ್‌ಚಕ್ರಗತ ಅಧಿದೇವತೆಯಲ್ಲಿ ಮನವಿರಿಸಿ ಬಿಂದುವಿನ ಅನುಸಂಧಾನ ಮಾಡುವದರಲ್ಲಿ ಮನವನ್ನು ಲಯಗೊಳಿಸುವದಕ್ಕೂ ಲಯ ಯೋಗವೆನ್ನುವರು. ನಿಜಗುಣಶಿವಯೋಗಿಗಳು 'ಕೈವಲ್ಯ ಪದ್ಧತಿ'ಯ ಯೋಗ ಪ್ರತಿಪಾದನ ಸ್ಥಲದಲ್ಲಿ ಲಯ ಯೋಗವನ್ನು ಕುರಿತು ಹೀಗೆ ಹಾಡಿದ್ದಾರೆ–

ಪಡೆದು ಜಪಿಸಿ ನೋಡಿ ಕೇಳಿ ನೆನೆದು ನಿಜ
ದೊಡಗೂಡಿ ಸುಖಿಸಬಲ್ಲೊಡೆ ಮುಕ್ತನಹನು ||ಪ||
ಮದಮೋಹ ನಿದ್ರೆಯೊಳಳಿಯೆ ಬೋಧಿಸಿ ವಿಷ
ಯದೊಳು ಸಂಚರಿಸಲೊಯ್ಯನೆ ಬರಸೆಳೆದು |
ಪುಡಿದು ಬಾರವೊಡೀಶನ ನೆನಹುಗಲಿಸಿ ನಿಜ |
ಹೃದಯವನಿಂತು ನೈತಿಡುವ ರೀತಿಯನು ||

ಲಯಯೋಗವನ್ನು ಸಾಧಿಸಬೇಕಾದರೆ, ಸಾಧಕನು ಮೊದಲು ಮನಸ್ಸಿನ ಸಮಾಧಾನ ಶಾಂತತೆಯನ್ನು ಸಾಧಿಸಬೇಕು. ಆಮೇಲೆ ಪರಮಾತ್ಮನ ಅನುಗ್ರಹ ಹೊಂದಲು ಮಂತ್ರವನ್ನು ಜಪಿಸಬೇಕು. ನಂತರ ಹೃದಯದಲ್ಲಿ ಬಿಂದು ಪ್ರಕಾಶವನ್ನು ಕಂಡು ಧ್ಯಾನಿಸುತ್ತ ವಿವಿಧ ನಾದಗಳನ್ನು ಕೇಳಿ ಶಂಭುಲಿಂಗನ ಧ್ಯಾನವನ್ನು ಮಾಡಿ, ಪರಬ್ರಹ್ಮನೊಡನೆ ಸಮರಸನಾಗಿ ಆನಂದ ಹೊಂದಿದರೆ ಅವನೇ ಮುಕ್ತನಾಗುವನು; ಇಂಥವನು ಲಯಯೋಗವನ್ನು ಅಳವಡಿಸಿಕೊಳ್ಳುವನು ಹೀಗೆ ಯೋಗಾಭ್ಯಾಸವನ್ನು ಮಾಡುವ ಸಮಯದಲ್ಲಿ ಸಾಧಕನಿಗೆ ಅಹಂಕಾರ ಅಥವಾ ಮದ ಬರುವದು ಸಹಜ. ಆಕಸ್ಮಿಕ ಸಿದ್ಧಿಗಳು ಲಭ್ಯವಾದರೆ ಈ ಮದ ಮತ್ತಷ್ಟು ಬೆಳೆಯುವದು. ಇದರಿಂದ ಯೋಗ ಸಿದ್ಧಿಯಾಗದೇ

ಯೋಗ ಭ್ರಷ್ಟನಾಗುವನು. ಆದ್ದರಿಂದ ಇಂಥ ಯೋಗಾಧಿಕಾರಿಯು ಮದದಿಂದ ದೂರ ನಾಗಬೇಕು. ಮೋಹನಿದ್ರೆಯನ್ನು ತ್ಯಜಿಸಬೇಕು. ತನ್ನ ಮನಸ್ಸಿಗೆ ಬೋಧಿಸಿಕೊಂಡ ಸ್ಥಿರಚಿತ್ತನಾಗಿರುವಂತೆ ಪ್ರಯತ್ನಿಸಬೇಕು, ಶಿವಧ್ಯಾನದೊಳಿರಿಸಬೇಕು. ಹೃದಯದಲ್ಲಿ ಶಿವನನ್ನು ಧ್ಯಾನಿಸುತ್ತ ಮರವೆಮಾಯೆಯನ್ನು ಮೀರಿ ಶಿವನೇ ತಾನೆಂದು ಮಂತ್ರಧ್ಯಾನ ಮಾಡುತ್ತ ಹೋಗುವದರಿಂದ ಹವಳದ ಬಳ್ಳಿಯಂತೆ, ಮಿಂಚಿನಂತೆ, ಬಂಗಾರದ ವರ್ಣ ದಂತೆ, ರತ್ನದ ದೀವಿಗೆಯಂತೆ, ನಕ್ಷತ್ರ ಪುಂಜದಂತೆ, ಸೂರ್ಯ-ಚಂದ್ರ-ಅಗ್ನಿಗಳ ಸಮೂಹದಂತೆ ಅನೇಕ ಪ್ರಕಾರದ ಬಿಂದು ಪ್ರಕಾಶವನ್ನು ಕಾಣುವನು. ಆಗ ಅವನು ಭೇರಿ ಮುರಜೆ, ಕಹಳೆ, ಶಂಖ, ಘಂಟಾ, ವೀಣೆ, ಕಿಂಕಿಣಿ, ಭ್ರಮರ ಮೊದಲಾದ ದಶವಿಧ ನಾದಗಳನ್ನು ಕೇಳಿಸಿಕೊಳ್ಳುವವನಾಗುವನು. ಇಂಥ ಲಯ ಯೋಗವು ಸುಲಭ ಸಾಧ್ಯ ವೇನೂ ಅಲ್ಲ.

**ಮಂತ್ರಯೋಗ :**

ಮಂತ್ರಯೋಗಕ್ಕೆ ಸ್ತ್ರೀ ಪುರುಷರೆಲ್ಲರೂ ಅಧಿಕಾರಿಗಳಾಗಬಹುದೆಂದು ಶಾಸ್ತ್ರ ಕಾರರು ಪ್ರತಿಪಾದಿಸುತ್ತಾರೆ. ಸದ್ಗುರುಗಳ ಮುಖದಿಂದ ಗಾಯತ್ರಿ ಮಂತ್ರವನ್ನಾಗಲಿ ಪಂಚಾಕ್ಷರಿ ಅಥವಾ ಷಡಕ್ಷರಿ ಮಂತ್ರವನ್ನಾಗಲಿ, ಮತ್ತಿತರೇ ತಮ್ಮ ಮತಾನುಸಾರ ಯಾವುದೇ ಮಂತ್ರವನ್ನು ಪಡೆದು ಅದನ್ನು ಏಕಾಗ್ರ ಚಿತ್ತದಿಂದ ಅನುಸಂಧಾನ ಮಾಡುವ ದಕ್ಕೆ 'ಮಂತ್ರಯೋಗ'ವೆನ್ನುವರು. ಮಂತ್ರಧ್ಯಾನಮಾಡುವಾಗ ಮನಸ್ಸನ್ನು ಅದರಲ್ಲಿ ತೊಡಗಿಸಬೇಕು. ಈ ಮಂತ್ರ ಯೋಗದಲ್ಲಿ ಧ್ಯಾನ-ಧಾರಣಗಳು ಸಮಾವೇಶಗೊಳ್ಳು ತ್ತವೆ. ಅಲ್ಲದೆ ಮೊದಲಿನ ಐದನ್ನು ಯಥಾವತ್ತಾಗಿ ಅಳವಡಿಸಿಕೊಂಡಿದ್ದರೆ, ಮನದಲ್ಲಿ ಧಾರಣೆಯು ಸುಲಭವಾಗುವದು. ಬಾಯಿಯಲ್ಲಿ ಎಲೆ ಅಡಕಿ ತಂಬಾಕು ತುಂಬಿಕೊಂಡಿ ದ್ದವನು ಅದನ್ನು ನುಂಗುವದಾಗಲಿ, ಉಗುಳುವುದನ್ನಾಗಲಿ ಮಾಡಿದರೆ ಮಾತ್ರ ಮಾತ ನಾಡಬಲ್ಲನು. ಅದರಂತೆಯೇ ಧಾರಣ-ಧ್ಯಾನಗಳನ್ನು ಸಾಧಿಸಲು ಮನಸ್ಸಿನಲ್ಲಿಯ ವ್ಯಾವಹಾರಿಕ ಚಿತ್ರಗಳನ್ನು, ಹಿಂದಿನ ವಿಷಯಗಳ ನೆನಪನ್ನು ಹೊರಗೆ ಹಾಕಬೇಕಾಗು ವದು. ಈ ವಿಕಾರಗಳನ್ನು ತಡೆದಾಗ ತನ್ನ ಇಷ್ಟದೇವರ ನಿರ್ದಿಷ್ಟ ಆಕಾರವನ್ನು ಹೃದಯ ದಲ್ಲಿ ಧಾರಣ ಮಾಡಿಕೊಳ್ಳಲು ಸಾಧ್ಯವಾಗುವುದು, ಎಲ್ಲ ವೃತ್ತಿಗಳನ್ನು ನಿರೋಧಿಸಿ ಧಾರಣ ಮಾಡಿಕೊಂಡ ಭಾವವನ್ನು ಧ್ಯಾನಿಸಬೇಕು. ಗುರೂಕ್ತ ಮಂತ್ರವನ್ನು ಜಪಿಸಬೇಕು.

ಈ ಧ್ಯಾನದಲ್ಲಿ ಪ್ರಾಣಾಯಾಮದ ಸಹಕಾರವು ಅವಶ್ಯವೆನಿಸುತ್ತದೆ. ಗುರು ಮುಖದಿಂದ ಪ್ರಾಣಾಯಾಮದ ಕ್ರಮವನ್ನು ಸಾಧಿಸಬೇಕು. ನಾಲ್ಕು ಸೆಕೆಂಡುಗಳ ಪೂರಕ, ಹದಿನಾರು ಸೆಕೆಂಡುಗಳ ಕುಂಭಕ, ಎಂಟು ಸೆಕೆಂಡುಗಳ ರೇಚಕವುಳ್ಳ ಪ್ರಾಣಾ ಯಾಮವು ಕನಿಷ್ಟ ತರಗತಿಯದು. ಎಂಟು ಸೆಕೆಂಡುಗಳ ಪೂರಕ, ಮೂವತ್ತೆರಡು ಸೆಕೆಂಡು ಗಳ ಕುಂಭಕ, ಹದಿನಾರು ಸೆಕೆಂಡುಗಳ ರೇಚಕವಾದರೆ ಮಧ್ಯಮ ಪ್ರಾಣಾಯಾಮ ಎನಿಸು

ವದು. ಇನ್ನೂ ಉತ್ತಮ ಪ್ರಾಣಾಯಾಮದಲ್ಲಿ ಹದಿನಾರು ಸೆಕೆಂಡುಗಳ ಪೂರಕ, ಅರವತ್ತುನಾಲ್ಕು ಸೆಕೆಂಡುಗಳ ಕುಂಭಕ, ಮೂವತ್ತೆರಡು ಸೆಕೆಂಡುಗಳ ರೇಚಕವಾಗಬೇಕು. ಪ್ರಾಣಾಯಾಮದಲ್ಲಿ ಕೆಲವರು ಪ್ರಥಮತಃ ರೇಚಕ ಮಾಡುತ್ತಾರೆ. ಇದರಿಂದ ಮೊದಲು ಅಶುದ್ಧ ವಾಯು ಹೊರಗೆ ಹೋಗುವದು. ನಂತರ ಕ್ರಮಸಂಖ್ಯೆಯಂತೆ ಪೂರಕಮಾಡಿ ಆ ಬಳಿಕ ಕುಂಭಕ ಮಾಡುತ್ತಾರೆ. ಇದೂ ಸಮಂಜಸವಾದುದೇ. ರೇಚಕದಿಂದ ಒಳಗಿನ ಗಾಳಿ ಹೊರಹೋಗುತ್ತದೆ. ಪೂರಕದಿಂದ ಶುದ್ಧ ಪ್ರಾಣ ವಾಯುವು ನಿಧಾನವಾಗಿ ಒಳ ಸೇರುತ್ತದೆ. ಕುಂಭಕದಲ್ಲಿ ಪ್ರಾಣವಾಯುವನ್ನು ನಿಲ್ಲಿಸುವದರಿಂದ ಪ್ರಾಣಶಕ್ತಿಯು ಬೆಳೆಯುತ್ತದೆ. ಪ್ರಾಣ ಶಕ್ತಿಯನ್ನು ಬೆಳೆಸಿಕೊಳ್ಳುವದರಿಂದ ಹೃದಯ ವಿಕಾರವು ಬರುವುದಿಲ್ಲ. ಅಲ್ಲದೆ ರಕ್ತದ ಒತ್ತಡವನ್ನು ಸಮತೋಲನದಲ್ಲಿ ಕಾಯ್ದುಕೊಳ್ಳಲು ಸಾಧ್ಯವಾಗುವದು. ಮುಖ್ಯವಾಗಿ ಪ್ರಾಣಾಯಾಮದಿಂದ ಮಂತ್ರಯೋಗವು ಸರಳವೆನಿಸುವದು ಪ್ರತ್ಯಾಹಾರದಿಂದಲೂ ಮನಸ್ಸಿನ ಸ್ಥಿರತೆ ಸಾಧ್ಯವಾಗುವದು.

ಮಂತ್ರಯೋಗದ ವಿಚಾರದಲ್ಲಿ ನಿಜಗುಣರು ಕೈವಲ್ಯ ಪದ್ಧತಿಯಲ್ಲಿ ಕೆಳಗಿನಂತೆ ನಿರೂಪಿಸುತ್ತಾರೆ–

'ಬೇರೆ ಬಹುವಿದ್ಯೆಯೊಳು ಬಳಲುವರು ತಮ್ಮೊಳಗೆ ।
ತೋರುವ ಮಹಾ ಮಂತ್ರವನು ಜಪಿಸದೆ' ॥ಪ॥

ಮತ್ತು ಇನ್ನೊಂದರಲ್ಲಿ–

ಒಂದೆರಡಾರೆಂಟುವರ್ಣದ ಮನುಗಳ
ಛಂದವನರಿದೆಳಸಿದುದನು ॥
ಕುಂದದೆ ಜಪಿಸುತಿರಲು ಮಂತ್ರಯೋಗವಿ
ದೆಂದು ಪೇಳುವರು ಸಂಯಮಿಗಳು ॥

'ಮನಸಾ ತಾಯತ ಇತಿ ಮಂತ್ರಃ' ಮತ್ತು 'ಮಂತಾರಂ ತ್ರಾಯತ ಇತಿ ಮಂತ್ರಃ' ಮನಸ್ಸಿನಲ್ಲಿ ಗೌಪ್ಯವಾಗಿ ರಕ್ಷಿಸಲ್ಪಡುವುದಕ್ಕೆ ಮಂತ್ರವೆನ್ನುವರು ಮತ್ತು ಮನನ ಮಾಡುವವರನ್ನು ರಕ್ಷಿಸುವುದಕ್ಕೆ ಮಂತ್ರವೆಂತಲೂ ಕರೆಯುವರು. ಮಂತ್ರ ಜಪದ ಪ್ರಕ್ರಿಯೆ ವ್ಯಾಪಕವಾಗಿದ್ದು ಗುರುಮುಖದಿಂದ ತಿಳಿದುಕೊಳ್ಳುವದರಿಂದ ಮಂತ್ರ ಜಪದಲ್ಲಿ ಶಕ್ತಿ ಬರುವದು. ಆದರೆ ಇಂಥ ಮಂತ್ರದ ಮಹತ್ವವನ್ನು ಅರಿಯದೆ, ಅಲ್ಪಸಿದ್ಧಿದಾಯಕ ಇತರ ವಿದ್ಯೆ ಅಥವಾ ಮಂತ್ರಗಳನ್ನು ಜಪಿಸಿ ಸ್ಥಿರತೆಯನ್ನು ಸಾಧಿಸಲಾರದೇ ಬಳಲುವದಕ್ಕಿಂತ ಮೋಕ್ಷದಾಯಕವೆನಿಸಿದ ಒಂದಕ್ಷರದ 'ಓಂ'ಕಾರ ಪ್ರಣವಮಂತ್ರವನ್ನಾಗಲಿ, ಎರಡಕ್ಷರದ 'ಸೋಽಹಂ' ಎಂಬ ಮಂತ್ರವನ್ನಾಗಲಿ, ಆರಕ್ಷರದ 'ಓಂ ನಮಃ ಶಿವಾಯ' ಎಂಬ ಷಡಕ್ಷರ ಮಹಾಮಂತ್ರವನ್ನಾಗಲಿ, ಇನ್ನು ಎಂಟಕ್ಷರದ 'ಹ್ರಾಂ, ಹ್ರಿಂ, ಹ್ರೂಂ ನಮಃ ಶಿವಾಯ' ಮಂತ್ರವನ್ನಾಗಲಿ ಎಡಬಿಡದೆ ಜಪಿಸುವ ಮನೋನಿಗ್ರಹವುಳ್ಳವರು

ಅವಶ್ಯವಾಗಿ ಮಂತ್ರಯೋಗವನ್ನು ಸಾಧಿಸುವರು ಎಂಬುದನ್ನು ಮೇಲಿನ ಪದ್ಯಗಳಿಂದ ತಿಳಿಯಬಹುದು. ಅವರ ಪದ್ಯಗಳಲ್ಲಿ ಮಂತ್ರಯೋಗದ ವಿವರವನ್ನು ಚೆನ್ನಾಗಿ ವಿವರಿಸಿದ್ದಾರೆ.

**ರಾಜಯೋಗ :**

ಹಠಯೋಗದಿಂದ ಶರೀರ ಶುದ್ಧಿಯಾದರೆ, ಲಯಯೋಗದಿಂದ ಪ್ರಾಣಶುದ್ಧಿಯಾಗುವುದು. ಮಂತ್ರಯೋಗದಿಂದ ಮನದ ಶುದ್ಧಿ ಸಾಧ್ಯವಾಗುವದು. ಇನ್ನು ರಾಜಯೋಗದಿಂದ ಶರೀರ-ಪ್ರಾಣ-ಮನಗಳಿಗೆ ರಾಜನಾದ ಜೀವನ ಶುದ್ಧಿಯಾಗುವದು. ಯೋಗದ ಸಪ್ತಾಂಗಗಳ ಅಭ್ಯಾಸದಿಂದ ಸಾಧಕನು ಶರೀರ-ಇಂದ್ರಿಯಗಳು ಹಾಗೂ ಮನಸ್ಸಿನ ಮೇಲೆ ತನ್ನ ಅಧಿಕಾರವನ್ನು ಪಡೆಯಬಲ್ಲನು. ಮುಂದೆ ತನ್ನ ಸ್ವಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವಾಗುವದು. ಸಮಾಧಿಯನ್ನು ಅಳವಡಿಸಿಕೊಳ್ಳುವನು. ಹಠ, ಲಯ, ಮಂತ್ರಯೋಗಗಳಲ್ಲಿ ಶಾರೀರಿಕ ಹಾಗೂ ಇಂದ್ರಿಯಗಳ ನಿಯಂತ್ರಣ ಸಾಧ್ಯವಾಗುವದು. ರಾಜಯೋಗದಲ್ಲಿ ಮಾನಸಿಕವಾದ ಹಾಗೂ ಆಂತರಿಕವಾದ ಭಾವನೆಯನ್ನು ಪರಿಶುದ್ಧಗೊಳಿಸಿ ಜೀವಾತ್ಮನನ್ನು ಮುಕ್ತಿಮಾರ್ಗದತ್ತ ಕಳಿಸುವ ಶಕ್ತಿಯಿದೆ. ನಿಜಗುಣ ಶಿವಯೋಗಿಗಳು 'ಕೈವಲ್ಯ ಪದ್ಧತಿ'ಯಲ್ಲಿ ರಾಜಯೋಗವನ್ನು ಕುರಿತು ಹೀಗೆ ವಿವರಿಸುತ್ತಾರೆ-

'ಯೋಗಿಗಲ್ಲದೆ ದೊರೆವುದೆ ಪರತರಮುಕ್ತಿ ||ಪ||
ಚಿರಸುಖಾಸನತೆ ಶರೀರದ ಸಸಿನತೆ |
ಕರಣನಿಕರದ ನಿಶ್ಚಲತೆ ||
ಮರುತ ಮನ ದಿಟ್ಟಿಗಳೊಂದುಗೂಡುತೆ |
ವರಹೃದಯಾನುಸಂಧಾನತೆ' ||೧||

ಮತ್ತು ಮುಂದಿನ ಪದ್ಯದಲ್ಲಿ-

'ಪರತತ್ವವದು ತನಗೆ ತಾನೆಗೋಚರವಹುದು |
ವಿರಚಿಸಿದೀ ಮೂರು ಲಕ್ಷ್ಯವರಿದಂದು' ||ಪ||

ಈ ಎಲ್ಲ ಯೋಗಗಳಲ್ಲಿ ಶ್ರೇಷ್ಠವಾದುದು ರಾಜಯೋಗವು. ರಾಜಯೋಗವನ್ನು ಸಾಧಿಸುವ ಸಾಧಕನು ಸುಖಕರವಾದ ಆಸನ, ಶರೀರದ ಸರಳತೆ, ಇಂದ್ರಿಯಗಳ ನಿಶ್ಚಲತ್ವ, ವಾಯು ಮನಸ್ಸು ಹಾಗೂ ದೃಷ್ಟಿಗಳು ಒಂದುಗೂಡುವಿಕೆ, ಹೃದಯದಲ್ಲಿ ಮಾಡತಕ್ಕ ಅನುಸಂಧಾನಗಳನ್ನು ಅಳವಡಿಸಿಕೊಂಡರೆ ಅಂಥವನು ನಿಶ್ಚಯವಾಗಿ ಪರತರ ಮುಕ್ತಿಯನ್ನು ಸಾಧಿಸುವನು. ಅಲ್ಲದೆ ಅವನು ಅಂತರ್ಲಕ್ಷ್ಯ, ಬಹಿರ್ಲಕ್ಷ್ಯ, ಮಧ್ಯಲಕ್ಷ್ಯ ಈ ಮೂರು ಪ್ರಕಾರವಾದ ಲಕ್ಷ್ಯಾನು ಸಂಧಾನವನ್ನು ತಿಳಿದರೆ ಬ್ರಹ್ಮ ಸಾಕ್ಷಾತ್ಕಾರ ಸುಲಭವಾಗುವದು.

ಹಠಯೋಗ ಪ್ರದೀಪಿಕೆಯು ಹಠಯೋಗದ ವಿಚಾರಗಳನ್ನು ಪ್ರತಿಪಾದಿಸಿದರೆ, ಪಾತಂಜಲಿ ಯೋಗ ಸೂತ್ರವು ರಾಜಯೋಗದ ರಹಸ್ಯವನ್ನು ಬೋಧಿಸುತ್ತದೆ. ಯೋಗ

ಸೂತ್ರದಲ್ಲಿ ೧೯೫ ಸೂತ್ರಗಳಿದ್ದು, ಅವುಗಳಲ್ಲಿ (೧) ಸಮಾಧಿ ಪಾದ (೨) ಸಾಧನ ಪಾದ (೩) ವಿಭೂತಿ ಪಾದ (೪) ಕೈವಲ್ಯ ಪಾದವೆಂದು ನಾಲ್ಕು ಪಾದಗಳಿವೆ. ಸಮಾಧಿ ಪಾದದಲ್ಲಿ ಚಿತ್ತವೃತ್ತಿಗಳ ವರ್ಣನೆಮಾಡಿ ಸಾಧನ ಪಾದದಲ್ಲಿ ಕ್ರಿಯಾಯೋಗ ವನ್ನು ಸಾಧನಗಳ ಮುಖಾಂತರ ಹೇಳಿದ್ದಾರೆ. ಅಷ್ಟಾಂಗಗಳಲ್ಲಿ ಪಂಚಾಂಗಗಳ ವಿವರ ಈ ಕ್ರಿಯಾ ಪಾದದಲ್ಲಿ ಬರುತ್ತದೆ. ಮಾರನೆಯ ವಿಭೂತಿ ಪಾದದಲ್ಲಿ ಧಾರಣ ಧ್ಯಾನ ಸಮಾಧಿಗಳ ಸ್ವರೂಪವನ್ನು ಮತ್ತು ಸಾಧನೆಯ ನಂತರ ಜೀವಾತ್ಮನು ಪಡೆಯುವ ವಿಭೂತಿತ್ವ (ಫಲ) ವನ್ನು ತಿಳಿಸಿದ್ದಾನೆ. ಮೋಕ್ಷ ರೂಪ ಸಮಾಧಿಯ ಸ್ವರೂಪವನ್ನು ಕೊನೆಯ ಪಾದವಾದ ಕೈವಲ್ಯ ಪಾದದಲ್ಲಿ ನಿರೂಪಿಸಿದ್ದಾನೆ. ಮೋಕ್ಷರೂಪ ಸಮಾಧಿಯು ಇಬ್ಬಗೆಯಾಗಿದೆ. ಮೊದಲು ಧ್ಯಾತಾ=ಧ್ಯಾನ ಮಾಡುವ ವ್ಯಕ್ತಿ. ಧ್ಯೇಯ - ಧ್ಯಾನ ಗಮ್ಯವಾದ ಪರವಸ್ತು; ಧ್ಯಾನ=ಧ್ಯಾನ ಮಾಡುವ ಕ್ರಿಯೆ; ಈ ಕ್ರಿಯೆಗಳೆಲ್ಲ ಅಡಗಿ ಕೇವಲ ಧ್ಯೇಯದ ಅರಿವು ಸಂಪ್ರಜ್ಞಾತ ಸಮಾಧಿಯಲ್ಲಿ ವ್ಯಕ್ತವಾಗುವದು. ಅಸಂಪ್ರಜ್ಞಾತ ಸಮಾಧಿಯಲ್ಲಿ ಧ್ಯೇಯವೇ ತಾನಾಗುವನು. ಯಾವುದರ ಅರಿವೂ ಇಲ್ಲಿ ನಿಲ್ಲುವದಿಲ್ಲ. ಇದುವೇ ರಾಜಯೋಗದ ಸಾಧ್ಯ ಅಥವಾ ಫಲವೆನ್ನಬಹುದು.

**ಮುದ್ರೆಗಳು ಹಾಗೂ ದೃಷ್ಟಿಗಳು :**

ಯೋಗ ಪ್ರಭೇದಗಳಾದ ಹಠಯೋಗ, ಲಯಯೋಗ, ಮತ್ತು ಮಂತ್ರಯೋಗ ಗಳಲ್ಲಿ ಮುದ್ರೆಗಳನ್ನು ಅಳವಡಿಸಿಕೊಳ್ಳುತ್ತಾರೆ. ಆಗಮಗಳಲ್ಲಿ ತಂತ್ರ ಭಾಗವು ಇದೆ. ದೇವತೆಯ ಧ್ಯಾನ ಮತ್ತು ಉಪಾಸನೆಯ ಐದಂಗಗಳಾದ ಪಟಲ, ಪದ್ಧತಿ, ಕವಚ, ಸಹಸ್ರ ನಾಮ, ಸ್ತೋತ್ರಗಳಿಂದ ಕೂಡಿದ ಗ್ರಂಥವು ಆಗಮಗಳಲ್ಲಿ ತಂತ್ರ ಸಾಹಿತ್ಯವೆನಿಸಿದೆ. ಆಗಮಗಳಲ್ಲಿ ಸೃಷ್ಟಿ, ಪ್ರಲಯ, ದೇವತಾರ್ಚನೆ, ಸರ್ವ ಸಾಧನ, ದುರಶ್ಚರಣ, ಷಟ್ಕರ್ಮ (ಶಾಂತಿ–ವಶೀಕರಣ–ಸ್ತಂಭನ–ವಿದ್ವೇಷಣ–ಉಚ್ಚಾಟನೆ–ಮಾರಣ)ಗಳು ಮತ್ತು ಧ್ಯಾನ ಯೋಗ ಹೀಗೆ ಏಳು ವಿಷಯಗಳು ಉಕ್ತವಾಗಿವೆ. ದುರ್ದೈವದಿಂದ ಶಾಕ್ತ್ಯಾಗಮದ ವಾಮಾಚಾರ ಹಾಗೂ ಹೇಯ ಪೂಜಾ ಪದ್ಧತಿಗಳಿಂದ ತಾಂತ್ರಿಕ ವಿಧಿ-ವಿಧಾನಗಳು ನಿಂದಾಸ್ಪದವಾದವು. ಯಾಕೆಂದರೆ ಕುಲಪದದಿಂದ ಆಧಾರಾದಿ ಚಕ್ರಗಳು ನಿರ್ದೇಶಿಸ ಲ್ಪಟ್ಟಿವೆ. ಅವುಗಳನ್ನು ತಿಳಿಯಲು ಶ್ರೀ ಚಕ್ರದ ಪೂಜೆ ಮಾಡುವವನು ಕೌಲ ಅಥವಾ ಸಮಯಮಾರ್ಗಿಯೆನಿಸುವನು. ಕಾಲಾಂತರದಲ್ಲಿ ಶ್ರೀ ಚಕ್ರದ ಕಲ್ಪನೆಯು ಸ್ತ್ರೀಯೋನಿಯ ಪೂಜೆಗೆ ಮಾರ್ಪಟ್ಟಿತು. ಶ್ರೀ ಚಕ್ರದ ಸಾಧನೆಯಲ್ಲಿ ಸಿದ್ಧಿಸಾಧಿಸದ ಮಂದಾಧಿಕಾರಿಗಳು ವಾಮಾಚಾರಿಗಳಾಗಿ ವರ್ತಿಸಹತ್ತಿದರು. ಶ್ರೀ ಚಕ್ರದ ಸಾಧನೆಗೆ ಪಂಚತತ್ತ್ವ ಸಾಧನೆ ಪೋಷಕವಾಗಿದೆ. ಇಲ್ಲಿ ಮದ್ಯ ಮಾಂಸ, ಮತ್ಸ್ಯ, ಮುದ್ರಾ, ಮೈಥುನಗಳೆಂಬ ಪಂಚಮ ಕಾರಗಳು ಬಾಹ್ಯ ವಾಚ್ಯಾರ್ಥದಲ್ಲಿ ಪರಿವರ್ತನೆಗೊಂಡವು.

ಇವುಗಳ ತಾತ್ವಿಕ ವಿಚಾರ ಅರ್ಥಪೂರ್ಣವಾಗಿದೆ. ಮದ್ಯವೆಂದರೆ ಹೊರಗಿನ ಮದ ವೇರಿಸಿ ಬುದ್ಧಿಶೂನ್ಯನನ್ನಾಗಿಸುವ ಮದ್ಯವಲ್ಲ. ಸಹಸ್ರದಳ ಕಮಲದಲ್ಲಿ ಸ್ರವಿಸುವ

ಅಮೃತವನ್ನು ಯೋಗಿಗಳು ಮಧ್ಯವೆಂದು ಕರೆದಿದ್ದಾರೆ. ಇಂಥ ಅಮೃತ ಪಡೆಯುವದು ಮಹಾಯೋಗಿಗೆ ಮಾತ್ರ ಸಾಧ್ಯ. ಇನ್ನು ಮಾಂಸವೆಂದರೆ–ತಂತ್ರ ಸಾಧಕನು ಪುಣ್ಯ ಹಾಗೂ ಪಾಪರೂಪಿಯಾದ ಜೀವಾತ್ಮನ ಪಶು ವಿಷಯುಗಳನ್ನು ಜ್ಞಾನರೂಪಿ ಖಡ್ಗದಿಂದ ಸಂಹರಿಸಿ ತನ್ನ ಮನಸ್ಸನ್ನು ಬ್ರಹ್ಮದಲ್ಲಿ ಲೀನಗೊಳಿಸುವದು. ಶರೀರದಲ್ಲಿರುವ ಇಡಾ ಮತ್ತು ಪಿಂಗಳಾ ನಾಡಿಗಳಲ್ಲಿ ಪ್ರವಹಿಸುವ ಶ್ವಾಸ–ನಿಶ್ವಾಸಗಳೇ ಮತ್ಸ್ಯಗಳು, ಇವುಗಳನ್ನು ಕುಂಭಕದಿಂದ ಪ್ರಾಣವಾಯುವನ್ನು ಸುಷುಮ್ನನಾಡಿಯಲ್ಲಿ ಸಂಚಾಲನೆಗೊಳಿಸುವದಕ್ಕೆ ಮತ್ಸ್ಯ ಸಾಧನೆಯೆನಿಸುವದು. ಅಸತ್ ಸಂಗದಿಂದ ಬಂಧನವಾಗುವದನ್ನು ಅರಿತು ಸತ್‌ಸಂಗವನ್ನುಮಾಡಿ ಮುಮುಕ್ಷುವೆನಿಸಿ ಅಸತ್ ಸಂಗವನ್ನು ಸಂಪೂರ್ಣವಾಗಿ ತ್ಯಜಿಸುವುದೇ ಮುದ್ರೆಯೆನಿಸುವದು. ಇನ್ನು ಮೈಥುನವೆಂದರೆ–ಸೇರಿಸುವುದು ಅಥವಾ ಕೂಡಿಸುವುದು ಎಂದರ್ಥ. ಸಹಸ್ರಾರದಲ್ಲಿರುವ ಪರಶಿವನೊಡನೆ ಕುಂಡಲಿನಿಯನ್ನು ಜಾಗ್ರತಗೊಳಿಸುವದು ಅಥವಾ ಸುಷುಮ್ನನಾಡಿಯಲ್ಲಿ ಪ್ರಾಣವನ್ನು ಮಿಳನಗೊಳಿಸುವದು ಎಂಬುದಾಗಿ ಅನುಭವಿಗಳು ಈ ಪಂಚಮಕಾರಗಳನ್ನು ಅರ್ಥೈಸಿದ್ದಾರೆ.

ಸಂಸಾರಿಕ ಸುಖಕ್ಕಿಂತ ಸಾವಿರ ಪಾಲು ಅಧಿಕವಾದ ಸುಖವು ಸುಷುಮ್ನನಾಡಿಯಲ್ಲಿ ಪ್ರಾಣವಾಯುವನ್ನು ಸ್ಥಿರಗೊಳಿಸುವದರಿಂದ ಉಂಟಾಗುವದು. ಇಂಥ ಸಾಧನೆಯನ್ನು ಸಾಧಿಸಿದ ಗೋರಕ್ಷನಾಥನು ವಜ್ರಕಾಯನಾದುದನ್ನು ಈಗಾಗಲೇ ಪ್ರತಿಪಾದಿಸಲಾಗಿದೆ.

ಇಲ್ಲಿ ಇನ್ನೊಂದು ಮಹತ್ವಪೂರ್ಣವಾದ ಸಂಗತಿಯನ್ನು ಗಮನಿಸಬೇಕು. ಪ್ರಾಚೀನ ಸೈಂಧವ ಸಂಸ್ಕೃತಿಯನ್ನು ವ್ಯಕ್ತಪಡಿಸುವ ಹರಪ್ಪಾ ಮತ್ತು ಮೊಹೆಂಜೋದಾರೋ ಅಗೆತಗಳಲ್ಲಿ ಲಭ್ಯವಾದ ಅವಶೇಷಗಳಿಂದ ಯೋಗದ ಪ್ರಾಚೀನತೆ ಸಿದ್ಧವಾಗುವದು. ಅಲ್ಲಿಯ ಚಿತ್ರ ಲಿಪಿಗಳಲ್ಲಿ ದೊರೆಯುವ ಮೀನ್‌ಕಣ್, ಮುಂಕಣ್, ಬಿಡುಗಣ್, ಓರ್‌ಕಣ್ ಪದಗಳು ಯೋಗದ ವಿಶೇಷತೆಯನ್ನು ಪ್ರತಿಪಾದಿಸುತ್ತವೆ. ಮೀನ್‌ಕಣ್, ಬಿಡುಗಣ್ ಪದಗಳು ಅಚ್ಚ ಕನ್ನಡದವು. ಒಂದು ಉಲ್ಲೇಖದಲ್ಲಿ– 'ಬಾನ್‌ತೇರ್, ಓರ್ ಮೀನ್‌ಕಣ್ ವೇಳ್' ಅಂದರೆ ಒಬ್ಬ ಮೀನ್ ಕಣ್ಣಿನವನು. ಬಾನ್ ಅರ್ಥಾತ್ ಆಗಸವನ್ನು ಮುಟ್ಟಿ ಆನಂದವನ್ನು ಹೊಂದುವನು. ಅನಿಮಿಷ ದೃಷ್ಟಿಯನ್ನು ಸಾಧಿಸಿದ ಯೋಗಿಗಳು ಮೇಲೆ ವಿವರಿಸಿದಂತೆ ಸುಷುಮ್ನನಾಡಿಯಲ್ಲಿ ಪ್ರಾಣವಾಯುವನ್ನು ಬೆರಸಿ ಬ್ರಹ್ಮರಂಧ್ರದ ಅಮೃತವನ್ನು ಸವಿಯಬಲ್ಲರು. ಅನಿಮಿಷ ದೃಷ್ಟಿಯಿಂದ ಕಾಲ–ಕರ್ಮಗಳನ್ನು ಜಯಿಸಬಹುದೆಂಬುದು ಅನುಭವಿಗಳಿಂದ ವೇದ್ಯವಾಗುತ್ತದೆ. ಇಡಾ–ಪಿಂಗಳಾ ನಾಡಿಯಲ್ಲಿ ಪ್ರವಹಿಸುವ ಪ್ರಾಣವಾಯುವನ್ನು ಸುಷುಮ್ನನಾಡಿಯಲ್ಲಿ ಸೇರಿಸುವ ಸಾಧನೆಗೆ ಮತ್ಸ್ಯ ಸಾಧನವೆಂಬುದನ್ನು ಶಾಸ್ತ್ರೀಯ ವಿಚಾರಗಳಿಂದ ಮೇಲೆ ವಿವರಿಸಲಾಗಿದೆ. ಮೀನ್‌ಕಣ್ ಪದವು ಮತ್ಸ್ಯ ಸಾಧನೆಯನ್ನೇ ಸೂಚಿಸುತ್ತದೆ. ಅನಿಮಿಷ ದೃಷ್ಟಿಯು ವೀರಶೈವರ ಶಿವ ಯೋಗದ ಒಂದು ಅಂಗ. ಈ ದ್ರಾವಿಡ ಸಂಸ್ಕೃತಿಯಲ್ಲಿ ಲಭ್ಯವಾದ ಲಿಂಗಗಳು ಮತ್ತು

ಈ ಶಿವಯೋಗವನ್ನು ಪ್ರತಿಪಾದಿಸುವ ಅನಿಮಿಷ ದೃಷ್ಟಿಗಳು ವೀರಶೈವರ ಪ್ರಾಚೀನತೆ ಯನ್ನು ವ್ಯಕ್ತಪಡಿಸುವದನ್ನು ಚನ್ನಾಗಿ ಅರ್ಥೈಸಿಕೊಳ್ಳಬೇಕು.

ಯೋಗ ಮುದ್ರೆಗಳಲ್ಲಿ ಮುಖ್ಯವಾದವುಗಳು ಮೂರು– ಖೇಚರೀ ಶಾಂಭವೀ, ಷಣ್ಮುಖೀ ಎಂದು. ಅಂತರಾತ್ಮನ ಅರಿವಿಗಾಗಿ ಸಾಧಕನು ನಯನ–ಮನ–ಪ್ರಾಣಗಳ ಸಂಯಮನಕ್ಕಾಗಿ ಸಾಧಿಸುವ ಕ್ರಿಯೆಗಳೇ ಮುದ್ರೆಗಳು. ಶಿವಯೋಗ ಪ್ರದೀಪಿಕೆಯ ಟೀಕಾಕಾರರು—

'ಮೋಚಯತಿ, ದ್ರಾವಯತೀತಿ ಮುದ್ರಾ'

ಅಜ್ಞಾನಾಂಧಕಾರವನ್ನು ತೊಲಗಿಸಿ ಶಿವಾನಂದ ಪ್ರವಾಹವನ್ನು ನಿರಾಯಾಸದಿಂದ ಸುರಿಸು ವದೇ ಮುದ್ರೆಯೆನಿಸುವದು ಎಂದು ಪ್ರತಿಪಾದಿಸಿದ್ದಾರೆ. ನಿಜಗುಣ ಶಿವಯೋಗಿಗಳು ಪಾರಮಾರ್ಥ ಪ್ರಕಾಶಿಕೆಯಲ್ಲಿ—

'ಹೃದಯಾಕಾಶ ಮಧ್ಯದ ದಿವ್ಯಲಿಂಗ ಸ್ಥಲದಂತರ್ಲಕ್ಷ್ಯಮಂ
ಕಾಣ್ಬುದಕ್ಕೆ ಪರಮೋಪಾಯಮಾದ ಮುದ್ರಾಲಕ್ಷಣ'

ವೆಂದು ಮುದ್ರೆಯ ಸ್ವರೂಪವನ್ನು ತಿಳಿಸಿದ್ದಾರೆ. ಈ ಮುದ್ರೆಗಳನ್ನು ಕೆಲವರು ರಾಜ ಯೋಗಾಂತರ್ಗತವಾಗಿಯೂ ಭಾವಿಸುತ್ತಾರೆ. ಖೇಚರೀ ಮುದ್ರೆ ಮತ್ತು ಶಾಂಭವೀ ಮುದ್ರೆಗೆ ಹೆಚ್ಚಿನ ಅಂತರವಿಲ್ಲ. ಹೃದಯದ ಅನಾಹತ ಚಕ್ರಗತ ಮಹಾ ಚೈತನ್ಯದಲ್ಲಿ ಲಕ್ಷ್ಯ, ಪ್ರಾಣ ಮತ್ತು ನಿಶ್ಚಲವಾದ ದೃಷ್ಟಿಗಳನ್ನಿರಿಸಿ ಹೊರಗೆ ಕೆಳಗೆ ನೋಡುತ್ತಿದ್ದರೂ ನೋಡದಂತಿರುವುದೇ ಶಾಂಭವಿ ಮುದ್ರೆಯೆನಿಸುವದು. ನಿಜಗುಣರು ಪಾರಮಾರ್ಥ ಪ್ರಕಾಶಿಕೆಯಲ್ಲಿ–

'ನಾಶಿಕಾಗ್ರದಲ್ಲಿರಿಸಲ್ಪಟ್ಟ ನಿಮೇಷೋನ್ಮೇಷಂಗಳಿಲ್ಲದ
ಲೋಚನಂಗಳ ದಿವ್ಯಾಲೋಕನದಿಂದೆ ಲಕ್ಷಿಸಲು ಯೋಗ್ಯಮಾದ
ಹೃದಯದಲ್ಲಿ ನಿಶ್ಚಲವಾದ ಜ್ಯೋತಿರ್ಮಂಡಲವನು
ಕಾಂಬುದೇ ಶಾಂಭವೀ ಮುದ್ರೆಯೆನಿಸುವದು.'

ಷಣ್ಮುಖೀ ಮುದ್ರೆಯ ಲಕ್ಷಣವನ್ನು ಶಿವಯೋಗ ಪ್ರದೀಪಿಕೆಯ ಟೀಕೆಯಲ್ಲಿ– 'ಮುಖದ ಏಕದೇಶವಮಾದ ನಾಸಾಪುಟದಲ್ಲಿ ಪ್ರಾಣವಾಯುವನ್ನು ಪೂರಿಸಿ ಅಗ್ನಿ ಸ್ಥಾಪನಾ ವೆನಿಸುವ ಅಧಃ ಕುಂಡಲಿನೀ ಸ್ಥಲದ ತ್ರಿಕೋಣಾಕಾರಮಾದ ಮೂಲಾಧಾರದಲ್ಲಿಯ ಅಪಾನ ವಾಯುವನ್ನು ಆಕುಂಚನಗೊಳಿಸಿ ತನ್ನ ಕರತಲವೆರಡರಲ್ಲಿಯ ಅಂಗುಷ್ಠ ತರ್ಜನೀ, ಮಧ್ಯಮ ಈ ಆರು ಬೆರಳುಗಳಿಂದ ಕಿವಿ, ಕಣ್ಣು, ಮೂಗುಗಳನ್ನು ಮುಚ್ಚಿ ಮಾಡುವ ಷಣ್ಮುಖೀ ಮುದ್ರೆಯಿಂದ ನಿಶ್ಚಲ ಚಿತ್ತರಾದ ಯೋಗಿಗಳು ಪ್ರಣವದ ದಶವಿಧ ನಾದದಲ್ಲಿ ಲೀನ ಚಿತ್ತರಾಗಿ ದಶವಿಧ ಬಿಂದು ಸಾಕ್ಷಾತ್ಕಾರ ರೂಪ ಪ್ರತ್ಯಯಗಳನ್ನು ಕಾಣುತ್ತಿಹರು' ಎಂದುದಾಗಿ ವಿವರಿಸಿರುವರು. ಕಿವಿ, ಕಣ್ಣು, ಮೂಗಿನ ಈ ಆರು ರಂಧ್ರಗಳನ್ನು ಆರು

ಬೆರಳುಗಳಿಂದ ಬಂದು ಮಾಡಿ ಬಾಯಿಯಿಂದ ಗಾಳಿಯನ್ನು ಒಳಗೆಳೆದು ತುಂಬಿ ಹೃದಯ ದಲ್ಲಿ ಅನಾಹತ ನಾದವನ್ನು ಕಂಡು ಬಿಂದು ದರ್ಶನ ಮಾಡಿಕೊಳ್ಳುವ ಈ ಷಣ್ಮುಖೀಕರಣ ಕಷ್ಟಸಾಧ್ಯವಾದುದು ಆಯಾಸಕರವಾದುದು.

ಯೋಗಿಗಳು ಖೇಚರೀ ಮುದ್ರೆಯನ್ನು ಉತ್ತಮ ಅಧಿಕಾರಿಗೆ ಶಾಂಭವಿ ಮುದ್ರೆಯನ್ನು ಮಧ್ಯಮಾಧಿಕಾರಿಗೆ ಷಣ್ಮುಖೀ ಮುದ್ರೆಯನ್ನು ಮಂದಾಧಿಕಾರಿಗೆಂದು ಹೇಳುತ್ತಾರೆ. ರಾಜಯೋಗದಲ್ಲಿ ಈ ಖೇಚರೀ ಮುದ್ರೆಯು ರಾಜ ಮುದ್ರೆಯೆನಿಸಿದೆ. ಇದರ ಮಹತ್ವವು ಉಪನಿಷತ್ತುಗಳಲ್ಲಿ ಧಾರಾಳವಾಗಿ ಬಂದಿದೆ. ಯೋಗ ಚೂಡಾಮಣ್ಯುಪ ನಿಷತ್ತಿನಲ್ಲಿ ಖೇಚರೀ ಮುದ್ರೆಯ ಮಹತ್ವವನ್ನು ಧಾರಾಳವಾಗಿ ಬಣ್ಣಿಸಿದ್ದಾರೆ. ಆಕಾಶ ದಲ್ಲಿ ಸಂಚರಿಸುವ ಶಕ್ತಿಯು ಈ ಮುದ್ರೆಯ ಸಾಧನೆಯಿಂದ ಸಾಧ್ಯವೆಂದು ಹೇಳುತ್ತಾರೆ. ಭ್ರೂಮಧ್ಯದಲ್ಲಿ ಊರ್ಧ್ವದೃಷ್ಟಿಯಿಂದ ಸಾಧಿಸುವ ಕಾರಣ ಇದಕ್ಕೆ ಖೇಚರೀ ಮುದ್ರೆಯೆಂದು ಕರೆದಿದ್ದಾರೆ.

ಖೇಚರೀ ಮುದ್ರೆಯು ಬಾಹ್ಯ ಹಾಗೂ ಅಂತಃ ಖೇಚರೀ ಎಂದು ಇಬ್ಬಗೆಯಾಗಿದೆ. ಯೋಗಿಗಳು ನಾಲಿಗೆಯಲ್ಲಿ ಎರಡು ಹೋಳು ಮಾಡಿ ಒಂದು ಭಾಗವನ್ನು ಒಳಗೆ ಇನ್ನೊಂದು ಭಾಗವನ್ನು ಭ್ರೂಮಧ್ಯಕ್ಕೆ ಸೇರಿಸುವರು. ಇದಕ್ಕೆ ಬಾಹ್ಯಖೇಚರಿ ಎನ್ನುವರು. ಯಾವ ಯೋಗಿಯು ಹೃತ್ಕಮಲದ ದಿವ್ಯಲಿಂಗನೆಂಬ ಅಂತರ್ಲಕ್ಷ್ಯದಲ್ಲಿ ಮನಸ್ಸು, ಮನಸ್ಸಿನೊಡನೆ ಬೆರೆತ ವಾಯುವಿನಿಂದ ನಿಶ್ಚಲವಾದ ತಾರಕ ಮಂಡಲ (ಕಣ್ಣಿನಲ್ಲಿಯ ಗುಡ್ಡೆಗಳು) ಉಳ್ಳವನಾಗುವನೋ ಈ ಸ್ಥಿತಿಯು ಅಂತಃ ಖೇಚರೀಯೆನಿಸುವದು. ಖೇಚರೀ ಮುದ್ರೆಯನ್ನು ಸಾಧಿಸಿದ ಯೋಗೇಶ್ವರನು ಜಾಗ್ರ-ಸ್ವಪ್ನ-ಸುಷುಪ್ತಿಗಳನ್ನು ಜಯಿಸಿಲೋಕ ಪೂಜ್ಯನೆನಿಸುವನು. ಇವನಿಗಿಂತಲೂ ಪೂಜ್ಯನು ಬೇರೊಬ್ಬನೆನಿಸನು. ಹೀಗೆ ಮುದ್ರೆಗಳು ದೃಷ್ಟಿಗಳು ಯೋಗ ಸಾಧನೆಯಲ್ಲಿ ಮಹತ್ವದ ಸ್ಥಾನವನ್ನು ಹೊಂದಿವೆ. ಆದರೆ ಅವುಗಳ ಸಾಧನೆ ಸತತಾಭ್ಯಾಸ, ವೈರಾಗ್ಯಾದಿಗಳಿಂದ ಮಾತ್ರ ಸಾಧ್ಯವಾಗುವದು.

**ಭಗವದ್ಗೀತೆಯ ಯೋಗಗಳು :**

ಮಹಾಭಾರತ ಯುದ್ಧದ ಸಂದರ್ಭದಲ್ಲಿ ಸ್ವಜನರನ್ನು ನೋಡಿದ ಅರ್ಜುನನು ಯುದ್ಧ ವಿಮುಖನಾಗುತ್ತಿರಲು ಸಾರಥಿಯಾದ ಶ್ರೀಕೃಷ್ಣನು ಅವನಿಗೆ ಸ್ವಧರ್ಮ ನಿಷ್ಠೆ ಅರ್ಥಾತ್ ಕರ್ಮಯೋಗವನ್ನು ಪ್ರತಿಪಾದಿಸುತ್ತಾನೆ. ಗೀತೆಯಲ್ಲಿ ಕರ್ಮ, ಜ್ಞಾನ, ಭಕ್ತಿ, ಧ್ಯಾನ, ಸಮಾಧಿ ಸ್ಥಿತಿ, ಸಮತೆ ಮತ್ತು ಕರ್ಮಕುಶಲತೆ ಇತ್ಯಾದಿ ಅರ್ಥಗಳಲ್ಲಿ ಯೋಗದ ಪರಿಭಾಷೆಯಾಗಿ ಯೋಗ ಪದ ಬಳಕೆಯಾಗಿದೆ ಮತ್ತು ಇಲ್ಲಿ ಯೋಗಮಾರ್ಗ ಗಳು, ಧರ್ಮಶಬ್ದಗಳು, ವಾಚ್ಯವೆನಿಸಿವೆ.

'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್' ॥೨೪॥ ಕರ್ಮ ಯೋಗ ರೂಪಾದ ಧರ್ಮವು ಸ್ವಲ್ಪಾಗಿಯಾದರೂ ಅನುಷ್ಠಾನದಲ್ಲಿ ಬಂದರೆ ಭಯಾನಕ

ಭಯದಿಂದ ಕಾಪಾಡುವದೆಂದು ಕೃಷ್ಣನು ಬೋಧಿಸಿದ್ದನ್ನು ನೋಡಿದಾಗ ಧರ್ಮಪದ ಯೋಗವನ್ನು ಸೂಚಿಸಿದೆ. ಸಾಮಾನ್ಯ ವ್ಯಕ್ತಿಯೂ ಕರ್ಮ ಶೂನ್ಯನಾಗಿರುವದಿಲ್ಲ. ಕರ್ತವ್ಯ ಕರ್ಮ ನಿಷ್ಠನಾಗಿರಬೇಕು. ತನ್ನ ಉದ್ಧಾರ ತನ್ನ ಕೈಯಲ್ಲಿದೆ. ತನಗೆ ಹಸಿವಾದಾಗ ತಾನೇ ಭುಂಜಿಸುವಂತೆ ತನ್ನ ಕರ್ತವ್ಯವನ್ನು ತಾನೇ ಪೂರೈಸಬೇಕು. ಯೋಗ ಯುಕ್ತನಾದವನು ಸರ್ವತ್ರ ಸಮಭಾವ ಉಳ್ಳವನಾಗಿ ಸರ್ವಭೂತಗಳನ್ನು, ಸರ್ವಭೂತಗಳಲ್ಲಿ ತನ್ನನ್ನು ದರ್ಶಿಸುವನು. ಆತ್ಮ ದರ್ಶನವೆಂದರೆ ಸರ್ವತ್ರ ಆತ್ಮ ಸ್ವರೂಪದ ಸಾಕ್ಷಾತ್ಕಾರ. ಈ ಸಾಕ್ಷಾತ್ಕಾರವು ಈ ಗೀತೆಯಲ್ಲಿ ಹೇಳಿದ ಕರ್ಮ–ಜ್ಞಾನಾದಿ ಯೋಗ ಮಾರ್ಗದಿಂದ ಸಿದ್ಧಿಸುವದು. ಇಂಥ ಸಿದ್ಧಿಯಿಂದ ಆತ್ಮನು ದುಃಖ ರಹಿತನಾಗುವನು. ಆತ್ಮನಿಗೆ ಪ್ರಕೃತಿ ಸಂಬಂಧದಿಂದ ದುಃಖ ಸಂಯೋಗವಾಗಿರುವುದು. ಆ ಸಂಯೋಗದ ವಿಯೋಗವೇ ಯೋಗವೆಂದುದಾಗಿ (ಅ. ೬. ೨೩)

'ತಂ ವಿದ್ಯಾತ್ ದುಃಖ ಸಂಯೋಗಂ ವಿಯೋಗಂ ಯೋಗ ಸಜ್ಞಿತಂ' ಎಂದು ಗೀತೋಕ್ತಿಯಿದೆ. ಅಲ್ಲದೆ ಆರನೆಯ ಅಧ್ಯಾಯದಲ್ಲಿ ಮುಂದುವರೆದು 'ಅರ್ಜುನ ತಪಸ್ವಿಗಳಿಗಿಂತಲೂ, ಕರ್ಮಿಗಳಿಗಿಂತಲೂ, ಜ್ಞಾನಿಗಳಿಗಿಂತಲೂ ಯೋಗಿಯೇ ಅಧಿಕನಾಗಿರುವನು. 'ನೀನೂ ಯೋಗಿಯಾಗು' ಎಂದು ಪ್ರತಿಪಾದಿಸಿದ್ದಾನೆ. ಗೀತೆಯಲ್ಲಿ ಕರ್ಮ–ಜ್ಞಾನ–ಭಕ್ತಿ ಇವು ಮೂರು ಮುಖ್ಯವಾಗಿವೆ. ಇವು ಪರಸ್ಪರ ಪೂರಕಗಳೂ ಆಗಿವೆ. ಇವು ಕೇವಲ ಕರ್ಮ–ಜ್ಞಾನ–ಭಕ್ತಿಗಳಾಗಿ ಉಳಿಯದೆ, ಕರ್ಮಯೋಗ–ಜ್ಞಾನಯೋಗ–ಭಕ್ತಿಯೋಗಗಳಾಗಿ ಪರಿಣಮಿಸಿವೆ. ಈ ಮೂರು ಒಂದಾಗಿ ಪರಿಣಮಿಸಿದ ಯೋಗವೇ ಗೀತೆಯ ಯೋಗವು.

**ಅರವಿಂದರ ಪೂರ್ಣಯೋಗ:**

ಪಾಂಡಿಚೇರಿಯ ಅರವಿಂದರು ಆಧುನಿಕ ಮಹರ್ಷಿಗಳೆನಿಸಿದ್ದಾರೆ. ಇವರೂ ಯೋಗ ಪರಂಪರೆಯಲ್ಲಿ ತಮ್ಮ ಸ್ಥಾನವನ್ನು ವಿಜೃಂಭಿಸಿಕೊಂಡಿದ್ದಾರೆ. ಇವರದು 'ಪೂರ್ಣಯೋಗ'ವೆಂದು ಪ್ರಖ್ಯಾತಿ ಪಡೆದಿದೆ.

ಅರವಿಂದರು ಮಾನವನಲ್ಲಿ ವಿಶ್ವವ್ಯಾಪಕವಾದ ಜಾಗ್ರತವಾದ ಮಹಾ ಚೈತನ್ಯವಾದ ಅಂಶವನ್ನು ಕಂಡರು ಜೀವಾತ್ಮ ಚೈತನ್ಯ ಪರಮಾತ್ಮನೊಡನೆ ಸಂಬಂಧಗೊಳಿಸುವದಕ್ಕೆ ಯೋಗವೆಂದರು. ಇದಕ್ಕೆ ಭಕ್ತ–ಭಗವಾನರ ಸಂಯೋಗವನ್ನಾಗಿಯೂ ವ್ಯಾಖ್ಯಾನಿಸಿದರು. ಮಾನವ ಅನೇಕ ಗುಣಗಳ ಸಮೂಹವಾಗಿದ್ದು ಪ್ರಕೃತಿಯ ಸರ್ವಸ್ತರಗಳೂ ಅವನಲ್ಲಿ ನೆಲೆಸಿರುತ್ತವೆ. ಸೃಷ್ಟಿಯ ಸಕಲಧಾರೆಗಳೂ ಅವನೊಳಗೆ ಹರಿಯುತ್ತವೆ. ಮನುಷ್ಯನಲ್ಲಿ ಮೂರು ಸ್ತರಗಳನ್ನು ವಿಚಾರಿಸುತ್ತಾರೆ. ದೇಹ ಹಾಗೂ ಅದನ್ನು ಸಂಜೀವಿತವಾಗಿರಿಸುವ ಪ್ರಾಣಶಕ್ತಿ ಇದು ಒಂದು ಸ್ತರವಾದರೆ, ಮನಸ್ಸು ಎರಡನೆಯುಸ್ತರ. ಅದು ಊರ್ಧ್ವತರ ಕ್ಷೇತ್ರವೆನಿಸಿದೆ. ಇದರಲ್ಲಿ ಬುದ್ಧಿ, ವಿಚಾರ, ಚಿಂತನೆ ಹಾಗೂ ಭಾವುಕತೆ ಇವು ವಿರಾಜಿಸು

ತ್ರವೆ. ಇನ್ನು ಮೂರನೆಯದು ಉದ್ಯತಮ ಕ್ಷೇತ್ರ. ಅದೇ ಅಧ್ಯಾತ್ಮ ಬೋಧೆ. ವಿಜ್ಞಾನಮಯವೂ, ಆನಂದಮಯವೂ ಅದರ ಸ್ವರೂಪವಾಗಿದೆ. ಅದು ಅಮೃತತ್ವದ ಅಧಿಷ್ಠಾನವಾಗಿದೆ.

ಮನುಷ್ಯನ ಸ್ವಭಾವ ಶೂನ್ಯನಾದರೆ ಪಶುಭಾವವನ್ನು ಹೊಂದುವನು. ಮನ ಬುದ್ಧಿಗಳ ಸಲುವಾಗಿರುವ ಸಹಜ ಭಾವವೇ ಮನುಷ್ಯನ ಮನುಷ್ಯ ಭಾವ. ಇನ್ನು ತುರಿಯ ಜ್ಞಾನ ಹಾಗೂ ಆನಂದಗಳ ಭಾವವೇ ದೇವಭಾವ ಎನಿಸುವದು. ಈ ದೇವಭಾವಕ್ಕೆ ಸಿದ್ಧಭಾವವೆಂದಾಗಲೀ, ಭಾಗವತ ಭಾವವೆಂದಾಗಲಿ ಕರೆದರು. ಉತ್ತಕ್ರಾಂತಿಗತಿಯಲ್ಲಿ ಪಶುಭಾವವು ಮನುಷ್ಯ ಭಾವವಾಗಿ; ಮನುಷ್ಯ ಭಾವವು ದೇವಭಾವವಾಗಿ ಕ್ರಮದಿಂದ ಮೇಲೇರುವದು. ಹೀಗೆ ಪಶುಭಾವದಿಂದ ದೇವಭಾವಕ್ಕೆ ಒಯ್ಯಲು ಸಮರ್ಥವಾದ ಶಕ್ತಿಯೇ ಯೋಗ ಶಕ್ತಿಯೆಂದು ಪ್ರತಿಪಾದಿಸಿದರು. ಸ್ಥೂಲ ಶರೀರ ಹಾಗೂ ಪ್ರಾಣ ಶಕ್ತಿಗಳನ್ನು ಕೇಂದ್ರವಾಗಿಟ್ಟುಕೊಂಡು ಅದರೊಳಗೆ ಪರಮಾತ್ಮನ ಸ್ಪರ್ಶವನ್ನು ಅನುಭವಿಸು ವದಕ್ಕೆ ಹಠಯೋಗದ ಉದ್ದೇಶವೆಂದರು. ಮನುಷ್ಯನ ಸೂಕ್ಷ್ಮ ಶರೀರದಲ್ಲಿ ಕೇಂದ್ರೀ ಭೂತವಾದುದನ್ನಾಗಿ ರಾಜಯೋಗವನ್ನು ಕಂಡರು. ಮನುಷ್ಯನ ಆಧ್ಯಾತ್ಮ ವೃತ್ತಿಯಲ್ಲಿ ಪ್ರತಿಷ್ಠಿತವಾದ ಜ್ಞಾನ, ಭಕ್ತಿ, ಕರ್ಮಯೋಗಗಳು ಜ್ಞಾನ-ಪ್ರೇಮ-ಕರ್ಮ ಪ್ರವೃತ್ತಿ ಗಳಾಗಿ ಒಂದನ್ನೊಂದು ಆಶ್ರಯಿಸಿ ಮನುಷ್ಯನನ್ನು ದೇವ ಭಾವಕ್ಕೆ ಮುಟ್ಟಿಸುವವು.

ಛಾಂದೋಗ್ಯೋಪನಿಷತ್ತಿನಲ್ಲಿ ಪ್ರತಿಪಾದಿಸಿದಂತೆ 'ಏಕೇನ ವಿಜ್ಞಾತೇನ ಸರ್ವಂ ವಿಜ್ಞಾತಂ ಭವತಿ ತದ್ ವಿಜಿಜ್ಞಾಸಸ್ವ, ತದ್‌ಬ್ರಹ್ಮ' ಪರಬ್ರಹ್ಮ ವಸ್ತುವೊಂದನ್ನು ತಿಳಿದರೆ ಉಳಿದೆಲ್ಲವೂ ತಿಳಿದಂತಾಗುವದು ಎಂಬಂತೆ ಪೂರ್ಣಯೋಗದಲ್ಲಿ, 'ವಿಜ್ಞಾನ ಏಕ ಹಾಗೂ ಬಹುಗಳ ಸಮಂಜಸ್ಯ ಕ್ಷೇತ್ರವಾಗಿದೆ. ಈ ಸ್ಥರವನ್ನು ತಲುಪಿದ ಮೇಲೆ ಕೇವಲ ಏಕವನ್ನಷ್ಟೇ ಕಾಣಲಾಗುವದಿಲ್ಲ ಆದರೆ ಬಹುತ್ವದ ಒಳಗೆ ಬಹುತ್ವವನ್ನು ತೆಗೆದುಕೊಂಡು ಅದನ್ನು ಅಪ್ಪಿಕೊಂಡ ಏಕತ್ವವನ್ನು ಪ್ರತಿಷ್ಠಿತಗೊಳಿಸಲಾಗುತ್ತದೆ. ಮಾಯಾವಾದಿಗಳು ಯಾವ 'ಬಹು'ವಿನಲ್ಲಿ ಏಕವನ್ನು ನೋಡುವರೋ, ಅದು ಬಹುವನ್ನು ಲುಪ್ತಗೊಳಿಸಿ ಏಕವನ್ನು ನೋಡುವದು. ಬಹುವನ್ನು ಜಾಗ್ರತವಾಗಿರಿಸಿ, ಬಹುವಿನ ಬಹುತ್ವವಿರುವಾಗಲೇ ಅಲ್ಲ. ಆದರೆ ಬಹುವಿನ ಬಹುತ್ವದ ಸಲುವಾಗಿಯೇ ಇರುವ ಏಕತ್ವದ ಸಿದ್ಧಿಯೇ ಪೂರ್ಣ ಯೋಗಿಯ-ವಿಜ್ಞಾನ ಸಾಧಕನ ವಿಶೇಷತ್ವ'ವೆಂದು ಪ್ರತಿಪಾದಿಸಿದ್ದಾರೆ. ಅಂದರೆ ಒಳ ಹೊರಗೂ ಪೂರ್ಣತೆಯನ್ನು ಕಾಣುವದು.

ಅರವಿಂದರು ವೀರಶೈವರ ಶಿವಯೋಗದ ನಿಲವನ್ನು ಅರಿತಿದ್ದರೆ ಪೂರ್ಣಯೋಗ ವನ್ನು ಇನ್ನಷ್ಟು ಸುಲಭವಾಗಿ ಪ್ರತಿಪಾದಿಸಬಹುದಿತ್ತು. ವಿವೇಕಾನಂದರಿಗೂ ನಮ್ಮ ಸಿದ್ಧಾಂತದ ಪರಿಚಯವಾದಂತೆ ಕಂಡುಬರಲಿಲ್ಲ. ವೀರಶೈವರು ಕೂಪಮಂಡೂಕದಂತೆ ನಮ್ಮ ಧರ್ಮ ವಿಶ್ವಧರ್ಮವೆಂದರೆ ಸಾಲದು. ಸಿದ್ಧಾಂತದಲ್ಲಿರುವ ತತ್ತ್ವವನ್ನು ವಿಶ್ವದ ಎಲ್ಲ ಭಾಗಗಳಿಗೆ ತಲುಪಿಸುವ ಕಾರ್ಯಕೈಕೊಳ್ಳುವುದು ಅವಶ್ಯವಿದೆ.

ಇಲ್ಲಿಯವರೆಗೆ ಭಾರತೀಯ ದರ್ಶನಗಳ ಹಿನ್ನೆಲೆಯಲ್ಲಿ ಯೋಗ ಪ್ರಭೇದಗಳನ್ನು ವಿವೇಚಿಸಿದ್ದಾಯಿತು. ಭಗವದ್ಗೀತೆಯ ಯೋಗವನ್ನು ಅರಿತು ಅರವಿಂದರ ಪೂರ್ಣ ಯೋಗದ ಸ್ವರೂಪವನ್ನು ಅವಲೋಕಿಸಲಾಯಿತು. ಇನ್ನು ಶಕ್ತಿವಿಶಿಷ್ಟಾದ್ವೈತ ದರ್ಶನ ವೆನಿಸಿದ ವೀರಶೈವರ ಶಿವಯೋಗದ ಸ್ವರೂಪ-ಸಾಧನೆ-ಸಿದ್ಧಾಂತಗಳನ್ನು ಪರಿಶೀಲಿಸೋಣ. ಈ ಸಂದರ್ಭದಲ್ಲಿ ಒಂದು ಮಾತನ್ನು ಹೆಚ್ಚು ಗಮನದಲ್ಲಿಡಬೇಕಾಗಿದೆ., ಅದೇನೆಂದರೆ, ವೀರಶೈವವೆಂಬುದು ಜಾತಿವಾಚಕ ಪದವಲ್ಲ. ವೀರಶೈವ ಅಥವಾ ಲಿಂಗವಂತ ಪದಗಳಾಗಲಿ ಅವು ತತ್ತ್ವಸೂಚಕಗಳಾಗಿವೆ. ಈಗಾಗಲೇ ತಿಳಿಸಿದಂತೆ, ವೀರಶೈವನು, ಅಷ್ಟಾವರಣವೇ ಅಂಗವನ್ನಾಗಿಸಿಕೊಂಡು ಪಂಚಾಚಾರಗಳನ್ನು ಪ್ರಾಣವಾಗಿಸಿ, ಷಟ್‌ಸ್ಥಲಗಳನ್ನು ಆತ್ಮ ವಾಗಿರಿಸಿಕೊಂಡರೆ, ತತ್ತ್ವಪುರುಷನೇ ತಾನಾಗುವನು. ಶರೀರ–ಪ್ರಾಣ–ಆತ್ಮಗಳು ಒಂದಕ್ಕೊಂದು ಅಭಿನ್ನವಾಗಿರುವಂತೆ, ಈ ತತ್ತ್ವತ್ರಯಗಳು ಒಂದಕ್ಕೊಂದು ಅಭಿನ್ನ ವಾಗಿವೆ.

**ವೀರಶೈವದ ಯಥಾರ್ಥತೆ:**

'ವೀಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿನೀ
ಯಸ್ಯಾಂ ರಮಂತೇ ಯೇ ಶೈವಾಃ ವೀರಶೈವಾಶ್ಚತೇ ಮತಾಃ' (ಸಿದ್ಧಾಂತ ಶಿಖಾ ಮಣಿ.)

"ಯೋ ಹಸ್ತ ಪೀಠೇ ನಿಜಲಿಂಗ ಮಿಷ್ಟಂ
ವಿನ್ಯಸ್ಯ ತಲ್ಲೀನ ಮನಃ ಪ್ರಚಾರಃ
ಬಾಹ್ಯಕ್ರಿಯಾ ಸಂಕುಲ ನಿಸ್ಪೃಹಾತ್ಮಾ
ಸಂಪೂಜಯತ್ಸಂಗ ಸ ವೀರಶೈವಃ" (ಶಂಕರ ಸಂಹಿತೆ)

'ವೀರಶೈವ' ಪದವು ತತ್ವನಿಷ್ಟವಾಗಿದೆ. 'ವೀ' ಶಬ್ದವು ಶಿವಜೀವರ ಐಕ್ಯವನ್ನು ಬೋಧಿಸುವ ವಿದ್ಯೆಯನ್ನು ಸಂಕೇತಿಸಿದರೆ, 'ರ' ಪದವು ಆ ವಿದ್ಯೆಯಲ್ಲಿ ಯಾವ ಶಿವ ಭಕ್ತನು ರಮಿಸುವನೋ, ಅವನಿಗೆ 'ವೀರಶೈವ' ನೆಂಬುದಾಗಿ ಸಿದ್ಧಾಂತ ಶಿಖಾಮಣಿಕಾರರು ನಿರೂಪಿಸಿದ್ದಾರೆ. ಸಂಕರ ಸಂಹಿತೆಯಲ್ಲಿ ಇನ್ನೂ ಸ್ಪಷ್ಟವಾಗಿ ವೀರಶೈವ ಸಿದ್ಧಾಂತದ ಯಥಾರ್ಥತೆಯನ್ನೇ ತಿಳಿಸಿದ್ದಾರೆ. ಯಾವ ಶಿವಭಕ್ತನು ಗುರು ಕರುಣೆಯಿಂದ ಪಡೆದ ಇಷ್ಟಲಿಂಗವನ್ನು ವಾಮ ಕರದಲ್ಲಿ ಧರಿಸಿಕೊಂಡು ಲಿಂಗದಲ್ಲಿ ಮನಸ್ಸನ್ನು ಹಾಗೂ ದೃಷ್ಟಿ ಯನ್ನಿರಿಸಿ, ಬಾಹ್ಯವಾದ ಚಿತ್ತ ವೃತ್ತಿಗಳನ್ನೆಲ್ಲ ದೂರೀಕರಿಸಿ ನಿಸ್ಪೃಹಾತ್ಮನಾಗಿ ಸಂಪೂಜಿಸು ವನೋ, ಅವನೇ ವೀರಶೈವನೆನಿಸುವನು. ಅಂದರೆ ಶಿವಯೋಗವನ್ನು ಸಾಧಿಸುವವನೇ ವೀರಶೈವ ಪದ ವಾಚ್ಯನೆನಿಸುವನು. ಪ್ರಾರಂಭದ 'ಹಲವು ಯೋಗವ ಮಾಡಿ' ಎನ್ನುವ ತ್ರಿಪದಿಯೂ ಇದೆ ಅರ್ಥವನ್ನು ಸೂಚಿಸಿದೆ. ವೀರಶೈವರಿಗೆ ಲಿಂಗವಂತರೆಂತಲೂ ರೂಢಿಯುಂಟು.

'ಸಿರಿಯುಳ್ಳವನೇ ಸಿರಿವಂತ
ಗುಣವುಳ್ಳವನೇ ಗುಣವಂತ
ಲಿಂಗವುಳ್ಳವನೇ ಲಿಂಗವಂತನು ನಿಜದಿ,
ಲಿಂಗಗುಣಗಳನ್ನು ಆಯತ, ಸ್ವಾಯತ, ಸನ್ನಿಹಿತ
ಮಾಡಿಕೊಂಡವನೇ ಲಿಂಗಾಯತನು
ಲಿಂಗಾಂಗ ಸಾಮರಸ್ಯದ ಸವಿಯುಂಡಾತನೆ
ನಿಜ ವೀರಶೈವನಯ್ಯಾ ಮೃಡಗಿರಿ ಅನ್ನದಾನೀಶ||' ವಚನ ಸಂಪದ

ಸಂಪತ್ತುಳ್ಳವನಿಗೆ ಸಿರಿವಂತನೆಂಬಂತೆ, ಗುಣವುಳ್ಳವನಿಗೆ ಗುಣವಂತನೆನ್ನುವರು, ಹಾಗೆ ಲಿಂಗವುಳ್ಳವನಿಗೆ ಲಿಂಗವಂತನೆಂಬ ಹೆಸರು. ಈ ಇಷ್ಟಲಿಂಗವನ್ನು ಸುಮ್ಮನೇ ಧರಿಸಿಕೊಂಡರಾಗದು. ಗುರುಕರುಣೆಯಿಂದ ಸಂಸ್ಕಾರ ಪೂರ್ವಕ ಆಯತ ಮಾಡಿಕೊಳ್ಳಬೇಕು. ವೇಧಾ, ಮಂತ್ರ, ಕ್ರಿಯಾ ದೀಕ್ಷೆಗಳ ಮೂಲಕ ಮೂರು ಶರೀರದಲ್ಲಿಯ ಆಣವಮಲ, ಮಾಯಾಮಲ, ಕಾರ್ಮಿಕಮಲಗಳ ನಾಶಹೊಂದಿಸಿ ಶಿವಜ್ಞಾನವನ್ನು ಬೋಧಿಸಿ ಸದ್ಗುರುನಾಥನು ಮೂರು ಶರೀರಕ್ಕೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವೆಂಬ ಮೂರು ಲಿಂಗಗಳನ್ನು ಕರುಣಿಸುತ್ತಾನೆ. ಗುರುಕೃಪೆಯಿಂದ ಆಯಾತ ಮಾಡಿಕೊಂಡ ಇಷ್ಟ ಲಿಂಗವನ್ನು ಅರ್ಚನಾದಿ ಸತ್ಕ್ರಿಯೆಗಳಿಂದ ಸ್ವಾಯತೀ ಕರಿಸಿಕೊಳ್ಳಬೇಕು. ಪ್ರಾಣಲಿಂಗವನ್ನಾರಿಸಿಕೊಳ್ಳಬೇಕು. ಪ್ರಾಣವೇ ಲಿಂಗವಾಗಿ, ಲಿಂಗವೇ ಪ್ರಾಣವಾಗುವ ಭಾವ ಬಲಿದರೆ ಲಿಂಗ ಸನ್ನಿಹಿತನಾಗುವನು. ಅಂದರೆ ಲಿಂಗವೇ ತಾನಾಗುವನು.

### ಇಷ್ಟಲಿಂಗದ ಸ್ವರೂಪ ಹಾಗೂ ವೈಜ್ಞಾನಿಕತೆ:

ಯಾವ ಮತದ ಮಾನವನೇ ಆಗಲಿ ಸ್ವ-ಇಚ್ಛೆಯಿಂದ ಶ್ರದ್ಧೆಯಿಂದ ಗುರು ಕರುಣೆ ಪಡೆದು ಇಷ್ಟ ಲಿಂಗವನ್ನು ಧರಿಸಬಹುದು. ಲಿಂಗಧಾರಿಗಳೆಲ್ಲ ಸಮಾನರು. ಲಿಂಗದ ಮುಖ ಜಂಗಮ, ಜಂಗಮನು ನಿರಾಭಾರಿಯಾಗಿ ಜ್ಞಾನಮೂರುತಿ ಎನಿಸಿರುವನು. ಗುರು-ಲಿಂಗ-ಜಂಗಮರೇ ವೀರಶೈವರ ಪ್ರತ್ಯಕ್ಷ ದೇವರು. ಗುರು ಶಿಕ್ಷಕನೆನಿಸಿದರೆ ಜಂಗಮನು ತಪಾಸಕನು. ಈ ದೇವರನ್ನು ಪೂಜಿಸಲು ವಿಭೂತಿ, ರುದ್ರಾಕ್ಷಿ, ಮಂತ್ರಗಳು ಸಾಧನಗಳು. ಗುರು ಲಿಂಗ ಜಂಗಮರನ್ನು ಪೂಜಿಸಿದರೆ ದೊರೆಯುವ ಫಲಗಳು ಪಾದೋದಕ, ಪ್ರಸಾದಗಳು. ಇವೇ ಅಷ್ಟಾವರಣ. ಲಿಂಗಧಾರಣ ಮಾಡುವದರಿಂದ ಅಬಾಲವೃದ್ಧರು, ಸ್ತ್ರೀ ಪುರುಷರು ಧಾರ್ಮಿಕ ಸ್ವಾತಂತ್ರ್ಯವನ್ನು ಪಡೆಯುತ್ತಾರೆ. ಪ್ರಾಣವೆನಿಸಿದ ಪಂಚಾಚಾರಗಳಲ್ಲಿ ಮೊದಲನೆಯದಾದ ಲಿಂಗಾಚಾರವು ಧಾರ್ಮಿಕ ಸ್ವಾತಂತ್ರ್ಯವನ್ನೇ ಬೋಧಿಸುವದು. ಲಿಂಗಧಾರಿಯು ಅನ್ಯರಿಗೆ ಕೈಯೊಡ್ಡದೇ ಕಾಯಕ ಮಾಡಿ ದಾಸೋಹಂಭಾವಿಯಾಗುವ ಸದಾಚಾರವನ್ನು ತಿಳಿಸುವದು ಸದಾಚಾರವು. ಅಲ್ಲದೇ ಭಕ್ತನಾದವನು ಸಚ್ಚಾರಿತ್ರ ಶೀಲನಾಗುವದನ್ನು ಸದಾಚಾರ ಸೂಚಿಸಿದೆ. ಲಿಂಗಭಕ್ತರೆಲ್ಲ ಒಂದೆಂಬ

ಸಮಾನತೆಯನ್ನು ಸಾರುವದು ಶಿವಾಚಾರ. ಧರ್ಮ ತತ್ತ್ವಗಳಲ್ಲಿ ಧಾರ್ಮಿಕ ಪೂಜ್ಯರಲ್ಲಿ ಗೌರವಾದರಗಳನ್ನು ಕಾಯ್ದುಕೊಂಡಿರುವುದೇ ಗಣಾಚಾರ. ಪರಸ್ಪರರಲ್ಲಿ ವ್ಯಕ್ತಿಗೌರವ ತೋರಿಸುವುದೇ ಭೃತ್ಯಾಚಾರ. ಈ ಐದು ಆಚಾರಗಳೇ ವೀರಶೈವನು ಧಾರ್ಮಿಕ, ಸಾಮಾಜಿಕ, ಆರ್ಥಿಕ ಸಮಾನತೆಯನ್ನು ಸಾಧಿಸುವ ಗುರಿಗಳಾಗಿವೆ.

ವೀರಶೈವ ಪ್ರಕ್ರಿಯೆಯೇ ಲಿಂಗದಿಂದ ಪ್ರಾರಂಭವಾಗುವದು. ಈ ಇಷ್ಟಲಿಂಗವು ಅಂಗನ ಬಾಹ್ಯ ವಸ್ತುವಲ್ಲ. ಶುದ್ಧಾಂತಃಕರಣೆಯಾದ ಜೀವನೇ ಅಂಗನೆನಿಸುವನು. ಆಗ ಜೀವಾತ್ಮನ ಜಡಭಾವ ಅಳಿಯುತ್ತದೆ. ಸದ್ಗುರುನಾಥನು ಶಿಷ್ಯನ ಶರೀರ ಶುದ್ಧಿಯನ್ನು ಮಾಡಿ ಅವನ ಪಾವನಾತ್ಮಕ ಮಸ್ತಕದ ಪಶ್ಚಿಮ ಶಿಖಾ ಚಕ್ರ ಮಧ್ಯದ ನಿಜವಸ್ತುವಾದ ಮಹಾ ಚೈತನ್ಯವನ್ನು ಅವನ ಶಿರದ ಮೇಲೆ (ಗುರು) ತನ್ನ ವರದ ಹಸ್ತವನ್ನಿರಿಸಿ ಯೋಗ ಶಕ್ತಿಯಿಂದ ತನ್ನ ಭಾವದಲ್ಲಿ ಭಾವಿಸುತ್ತಾನೆ. ಶಕ್ತಿಪಾತವನ್ನು ಮಾಡಿ ಶಿಷ್ಯನ ಅಜ್ಞಾನ ಚೈತನ್ಯವನ್ನು ಮನದಲ್ಲಿ ಮೂರ್ತಿ ರೂಪಗೊಳಿಸುತ್ತಾನೆ. ನಂತರ ಅದನ್ನು ಶಿಷ್ಯನ ಕಂಗಳಿಂದ ತನ್ನ ಕೃಪಾಪೂರ್ಣ ದೃಷ್ಟಿಯ ಮುಖಾಂತರ ಹೊರತೆಗೆದು ಇಷ್ಟಲಿಂಗವನ್ನಾಗಿ ಮಾಡಿ ಕರುಣಾಮಯ ಹೃದಯದಿಂದ ಶಿಷ್ಯನ ವಾಮ ಹಸ್ತದಲ್ಲಿ ಇರಿಸುತ್ತಾನೆ. ಈ ಲಿಂಗವು ನಿನ್ನ ಚಿತ್ ಸ್ವರೂಪ. ಪ್ರಾಣವೇ ಇದೆಂದು ಬೋಧಿಸುತ್ತಾನೆ. ಬಂಧ, ಮೋಕ್ಷಗಳಿಗೆ ಕಾರಣವಾದ ಮನಸ್ಸಿಗೆ ಷಡಕ್ಷರ ಮಹಾ ಮಂತ್ರವನ್ನು ಉಪದೇಶಿಸುತ್ತಾನೆ. ಯಾವ ಪರವಸ್ತುವಿನಲ್ಲಿ ಸಕಲ ಚರಾಚರ ಪ್ರಾಣಿಗಳು ಲೀನವಾಗುವವೋ, ಪುನಃ ಹುಟ್ಟುವವೋ ಅದುವೇ ಈ ಇಷ್ಟ ಲಿಂಗ. ಈ ಇಷ್ಟಲಿಂಗದಲ್ಲಿ ಮೂರು ಲೋಕದ ಸಚರಾಚರ ಜಗತ್ತು ಅಡಗಿದೆ. ಇದನ್ನು ಹೊರತು ಪಡಿಸಿ ಬೇರೆ ಯಾವುದೂ ಇಲ್ಲವೆಂದು. ಲಿಂಗದ ಮಹತ್ವವನ್ನು ನಿರೂಪಿಸುತ್ತಾನೆ. ಸ್ವರೂಪವನ್ನು ಸಾದರ ಪಡಿಸುತ್ತಾನೆ. 'ಲೀಯತೇ ಗಮ್ಯತೇ ಯತ್ರ ಜಗದೇತಲೆ ಚರಾಚರಂ|ತಲ್ಲಿಂಗಮಿತಿ ವಿಖ್ಯಾತಂ ಲಿಂಗತತ್ತ್ವ ಪರಾಯಣೈ' ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯ ಸಚರಾಚರಂ| ಲಿಂಗಬಾಹ್ಯಾತ್ ಪರಂ ನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇತ್||'ಎಂಬ ಪ್ರಮಾಣಗಳು ಮೇಲಿನ ಅರ್ಥವನ್ನೇ ವಿಸ್ತರಿಸಿವೆ.

ಅರುಹಿನ ಕುರುಹಾಗಿ ಚಿಚೈತನ್ಯದ ಚುಳುಕಾಗಿ ದೊರೆವ ಲಿಂಗದ ವಿಚಾರದಲ್ಲಿ ಜಗದಣ್ಣ ಬಸವಣ್ಣನವರು–

'ಜಗದಗಲ ಮುಗಿಲಗಲ, ಮಿಗೆಯಗಲ, ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ
ಅಗಮ್ಯ, ಅಗೋಚರ, ಅಪ್ರತಿಮ ಲಿಂಗವೆ
ಕೂಡಲ ಸಂಗಮ ದೇವಯ್ಯಾ
ನೀವೆನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ' ಎಂದಿದ್ದಾರೆ.

ಮಹಾಶರಣ ಸೊಡ್ಡಳ ಬಾಚರಸನು ಕರಸ್ಥಳದ ಇಷ್ಟಲಿಂಗವನ್ನು ಹೀಗೆ ವರ್ಣಿಸುತ್ತಾನೆ.–

'ಶ್ರುತಿತತಿಗಳ ಶಿರದಮೇಲೆ ಒಪ್ಪುತಿಪ್ಪ
ಅತ್ಯತಿಷ್ಠದ್ದಶಾಂಗುಲನ ಕಂಡೆನಯ್ಯಾ
ಅಣುವಿಂಗೆ ಅಣು, ಮಹತ್ತಿಗೆ ಮಹತ್ತಾದ
ತ್ರಿಣಯನ ಮೂರ್ತಿಯ ಕಂಡೆನಯ್ಯಾ
ವಾಙ್ಮನಕ್ಕಗೋಚರವಾದ ನಿರವಯ ಬ್ರಹ್ಮವ ಕಂಡೆನಯ್ಯಾ
ನಿತ್ಯನೇಕೋ ರುದ್ರನದ್ವಿತೀಯನ ಕಂಡೆನಯ್ಯಾ
ಎನ್ನ ಕರಸ್ಥಲದೊಳಗೆ ಮಹಾದಾನಿ ಸೊಡ್ಡಳನ ಕಂಡೆನಯ್ಯಾ'

ಜಗದಗಲ, ಮುಗಿಲಗಲನಾದ, ಅತ್ಯತಿಷ್ಠದ್ದಶಾಂಗುಲನಾದ, ಅಣೋರಣೀಯಾನ್ ಮಹತೋ ಮಹಿಯಾನನಾದ ಪರಶಿವನು ಗುರುಕೃಪೆಯಿಂದ ಕರಸ್ಥಲದಲ್ಲಿ ಇಷ್ಟಲಿಂಗವಾಗಿ ಪರಿಣಮಿಸುತ್ತಾನೆ.

ಸದ್ಗುರು ಅನುಗ್ರಹಿಸುವ ಸಂಸ್ಕಾರ ಅನುಪಮವಾಗಿದೆ. ತ್ರೈತನುಗಳಿಗೆ ಸಂಸ್ಕಾರ ನೀಡುತ್ತಾನೆ. ತ್ರಿಮಲಗಳನ್ನು ಕಳೆಯುತ್ತಾನೆ. ಮನಸ್ಸಿಗೆ ಮಂತ್ರಗಳನ್ನು ಬೋಧಿಸುತ್ತಾನೆ. ಆತ್ಮನಿಗೆ ಮೋಕ್ಷವಾಗುವ ಅರ್ಥಾತ್ ಅಂಗ–ಲಿಂಗನಾಗುವ ಪರಿಯುನ್ನು ತಿಳಿಸುತ್ತಾನೆ. ವೇದಾಂತಿಗಳು ತಿಳಿಸುವ ಚತುರ್ವಿಧ ಮಹಾವಾಕ್ಯಗಳೆನಿಸಿದ ಅಹಂಬ್ರಹ್ಮಾಸ್ಮಿ (ನಾನು ಬ್ರಹ್ಮನಿದ್ದೇನೆ) ಅಯಮಾತ್ಮಾ ಬ್ರಹ್ಮ (ಈ ಆತ್ಮನೇ ಬ್ರಹ್ಮನಾಗಿದ್ದಾನೆ) ಪ್ರಜ್ಞಾನಾಂಬ್ರಹ್ಮ (ಪ್ರಕೃಷ್ಟವಾದ ಜ್ಞಾನವೇ ಬ್ರಹ್ಮವಾಗಿದೆ) ಮತ್ತು 'ತತ್ತ್ವಮಸಿ' (ಅಬ್ರಹ್ಮವೇ ನೀನಾಗಿರುವೆ) ಎಂಬ ಈ ಬಾಯ (ನುಡಿ) ಬ್ರಹ್ಮವನ್ನು ಪ್ರತ್ಯಕ್ಷವಾಗಿ ಎಮ್ಮ ಕಂಗಳಿಂದ ನೋಡಲು ಮನಮುಟ್ಟಿ ಪೂಜಿಸಲು ಭಾವ ತುಂಬಿ ಹಾಡಲು ಅನುವು ಮಾಡಿಕೊಡುತ್ತಾನೆ. ಮಂತ್ರ–ಲಯ ಯೋಗಗಳಲ್ಲಿ ಕಾಣದ ಬಿಂದುವನ್ನು ಭಾವಿಸಿ ನಾದಾನುಸಂಧಾನ ಮಾಡುವದು ಸುಲಭವಾಗುವದಿಲ್ಲ. ಇಲ್ಲಿ ಸಕಲ ನಿಷ್ಕಲವೆನಿಸಿದ ಇಷ್ಟಲಿಂಗವನ್ನು ಪೂಜೆ ಮಾಡಿ–ನೋಡಿ–ಕೂಡುವ ಸತ್ಕ್ರಿಯೆ ಸಮನ್ವಯಗೊಳ್ಳುತ್ತಿದೆ.

ಸಮುದ್ರದಲ್ಲಿ ಸಕಲ ನದಿಗಳು ಸಮಾವೇಶಗೊಂಡಿರುವಂತೆ ಈ ಲಿಂಗದಲ್ಲಿ ಸಕಲವೂ ಒಳಗೊಂಡಿದೆ. ಇದು ಸರ್ವೇಶ್ವರತ್ವದ ಕುರುಹಾಗಿರುವದರಿಂದ ಬಹು ದೇವತಾವಾದವನ್ನು ದೂರೀಕರಿಸುತ್ತದೆ. ಸರ್ವಾಂತರ್ಯಾಮಿಯು ಇದಾಗಿದೆ. ಏಕದೇವ ಉಪಾಸನೆಯೂ ಇಲ್ಲಿದೆ. ಶರೀರದಲ್ಲಿರುವ ನವ ಚಕ್ರಗಳ ನವಬ್ರಹ್ಮರು ಒಂದೊಂದು ಲಿಂಗವೆನಿಸಿ ಈ ಇಷ್ಟಲಿಂಗದಲ್ಲಿ ಸಮಾವೇಶಗೊಳ್ಳುತ್ತಾರೆ. ಗುರುವಿನ ಯೌಗಿಕ ಶಕ್ತಿಯಿಂದ ಶಿಷ್ಯನ ಮಸ್ತಕದಲ್ಲಿಯ ಪಶ್ಚಿಮ ಚಕ್ರಗತ ಹವಣಿಸಬಾರದ ತೇಜವುಳ್ಳ ನಿರಂಜನ ಬ್ರಹ್ಮವು. ಇಷ್ಟ ಲಿಂಗದಲ್ಲಿ ಭಾವಲಿಂಗವೆನಿಸುವದು. ಶಿಖಾಚಕ್ರದ ಮಹಾ ಜ್ಯೋತಿರ್ವರ್ಣವುಳ್ಳ ನಿಃಶೂನ್ಯ ಬ್ರಹ್ಮವು ಪ್ರಾಣಲಿಂಗವೆನಿಸಿದರೆ, ಮಸ್ತಕ ಮಧ್ಯದ ಬ್ರಹ್ಮರಂಧ್ರದ ಸಹಸ್ರಾರ

ದಲ್ಲಿಯ ಪದ್ಮಜ್ಯೋತಿ ವರ್ಣವುಳ್ಳ ಬ್ರಹ್ಮವು ಇಷ್ಟಲಿಂಗವಾಗುವುದು. ಭ್ರೂಮಧ್ಯದ ದ್ವಿದಳ ಆಜ್ಞಾಪದ್ಮದಲ್ಲಿಯ ಮಿಂಚಿನ ವರ್ಣವುಳ್ಳ ನಿಸ್ಸೀಮ ಪರಬ್ರಹ್ಮವು ಮಹಾಲಿಂಗ ವೆನಿಸುವದು. ಕಂಠಗತವಾದ ವಿಶುದ್ಧಿ ಚಕ್ರದಲ್ಲಿಯ ನೀಲವರ್ಣವುಳ್ಳ ವಿಜ್ಞಾನ ಬ್ರಹ್ಮವು ಪ್ರಸಾದ ಲಿಂಗವಾದರೆ ಹೃದಯದಲ್ಲಿಯ ಅನಾಹತ ಚಕ್ರದ ಮಾಂಜಿಷ್ಠ ವರ್ಣವುಳ್ಳ ಆನಂದ ಬ್ರಹ್ಮವು ಜಂಗಮ ಲಿಂಗವೆನಿಸುವದು. ನಾಭಿ ಮಂಡಲದ ಮಣಿಪೂರಕ ಚಕ್ರ ದಲ್ಲಿಯ ರಕ್ತವರ್ಣವುಳ್ಳ ಸತ್‌ಕಲಾ ಬ್ರಹ್ಮವು ಶಿವಲಿಂಗವಾದರೆ, ಗುಹ್ಯಸ್ಥಾನಗತ ಸ್ವಾಧಿ ಷ್ಠಾನ ಚಕ್ರದಲ್ಲಿಯ ಶ್ವೇತ ವರ್ಣವುಳ್ಳ ಪಿಂಡ ಬ್ರಹ್ಮವು ಗುರುಲಿಂಗವೆನಿಸುವದು. ಗುದ ಸ್ಥಾನಗತ ಆಧಾರ ಚಕ್ರದಲ್ಲಿಯ ಮೂರ್ತಿ ಬ್ರಹ್ಮವು ಪೀತವರ್ಣವುಳ್ಳದ್ದಾಗಿ ಆಚಾರಲಿಂಗ ವೆನಿಸುವದು. ಈ ನವ ಬ್ರಹ್ಮರು ಪ್ರವೃತ್ತಿ ಕ್ರಮದಿಂದ ಭಾವಲಿಂಗವು ಆಚಾರಲಿಂಗ ವಾಗಿ ಭಕ್ತನ ಕರದಲ್ಲಿಯ ಇಷ್ಟಲಿಂಗದಲ್ಲಿ ಕಂಗೊಳಿಸುತ್ತಾರೆ. ಹೀಗೆ ಲಿಂಗದ ವಿಜ್ಞಾನ ಅಸದಳವಾಗಿದೆ. ಇಷ್ಟಲಿಂಗಕ್ಕೂ ಸ್ಥಾವರಲಿಂಗಕ್ಕೂ ಆಕಾಶ ಭೂಮಿಯಷ್ಟು ಅಂತರವಿದೆ. ಭಕ್ತನ ಶರೀರದ ಮೇಲೆ ಸದಾ ಇದ್ದು ಕಾಯುವಳಿದರೂ ಜೊತೆ ಬರುವಂಥದ್ದು ಲಿಂಗದ ಹೊರತಾಗಿ ಬೇರೊಂದು ವಸ್ತುವಿಲ್ಲ. ನೂರೆಂಟು ದೇವರುಗಳ ತಾಕಲಾಟ ಇಲ್ಲಿಲ್ಲ. ಪೌರೋಹಿತ್ಯದ ಗದ್ದಲವಂತೂ ಸುಳಿಯಲಾರದು.

ಇಷ್ಟಲಿಂಗದಲ್ಲಿ ವೈಜ್ಞಾನಿಕತೆಯೂ ಸಾಕಷ್ಟು ವ್ಯಕ್ತವಾಗುತ್ತದೆ. ಇಷ್ಟಲಿಂಗದಲ್ಲಿ ಕಾಂತಮಯ (ಮ್ಯಾಗ್ನೆಟಿಕ್) ವಿದ್ಯುನ್ಮಯ (ಇಲೆಕ್ಟ್ರಿಕ್) ಅಣುಮಯ (ಅಟೋಮಿಕ್) ಪ್ರಕಾಶಮಯ (ಲೈಟ) ಧ್ವನಿಮಯ (ಸೌಂಡ್) ಶಕ್ತಿಗಳಿವೆ. ಇಷ್ಟಲಿಂಗದ ಪೀಠಿಕೆಯ ಪಂಚ ಸೂತ್ರಗಳು ದೇಹಿಯ ದೇಹದ ಪಂಚಲಕ್ಷಣಗಳನ್ನು ಹೊಂದಿವೆ. ಲಿಂಗದ ಮೇಲಿ ರಿಸುವ ಕಂಥೆಯು ಚೌಪದೀಯ ಗುಣಗಳಿಂದ ಕೂಡಿದ್ದು ಕಾಂತಮಯವಾಗಿದೆ. ದೃಷ್ಟಿ ಯೋಗಕ್ಕೆ ಅತ್ಯಂತ ಸಹಕಾರಿಯಾಗಿದೆ.. ಕಪ್ಪು ಚುಕ್ಕೆಯನ್ನು ನೋಡಿ ಸಾಧಿಸುವ ಮೆಸ್ಮೆರಿ ಝಮ್‌ಗಿಂತಲೂ ಕ್ರಿಯಾ, ಜ್ಞಾನ, ಇಚ್ಛಾ, ಆದಿ, ಪರಾ, ಚಿಚ್ಛಕ್ತಿ ಈ ಆರು ಶಕ್ತಿಗಳಿಂದ ಪರಿಪೂರ್ಣವಾದ ಇಷ್ಟಲಿಂಗದ ಅನುಸಂಧಾನ ಮಾಡುವದರಿಂದ ಅಂಗನ ಶ್ರದ್ಧಾ, ನಿಷ್ಠಾ, ಸಾವಧಾನ, ಅನುಭವ, ಆನಂದ, ಸಮರಸಗಳೆಂಬ ಆರು ಭಕ್ತಿಗಳು ಪಕ್ವಗೊಳ್ಳುವವು. ಕಾಂತಮಯವಾದ ಲಿಂಗದಲ್ಲಿ ವಿದ್ಯುನ್ಮಯತೆಯು (ಪ್ರಕಾಶ) ತುಂಬಿಕೊಂಡಿದೆ. ಈ ಲಿಂಗ ಅಣುವಿಗಿಂತಲೂ ಅಣುವಾಗಿದೆ ಎಂಬುದನ್ನು ಈಗಾಗಲೇ ಪ್ರತಿಪಾದಿಸಲಾಗಿದೆ. ಪ್ರಣವದ ಆರಕ್ಷರಗಳ ಸಂಬಂಧವುಳ್ಳ ಲಿಂಗವು ಪ್ರಣವದಿರವೇ ಆಗಿದೆ. ಅದಕ್ಕಾಗಿ ಅದು ಧ್ವನಿಮಯವೆನಿಸಿದೆ. ಪರಶಿವನು ನಾದ ಬಿಂದು-ಕಲಾ ಸ್ವರೂಪನು. ಲಿಂಗವು ಈ ಲಕ್ಷಣ ಲಕ್ಷಿತವಾಗಿದೆ. ಲಿಂಗಪೂಜಾನಿಷ್ಠನಾದ ಭಕ್ತನು ನೆಲದ ಮೇಲೆ ಕುಳಿತು ಪೂಜಿಸಬಾರದು. ಯಾಕೆಂದರೆ ಅವನ ಆತ್ಮ ಶಕ್ತಿಯ ವಿಕಾಸವು ಭೂಮಿಯಲ್ಲಿ (ಅರ್ಥಿಂಗ) ಸೇರಿ ಹೋಗ ಬಾರದೆಂಬುದೇ ಮುಖ್ಯಾಂಶ. ಲಿಂಗದ ಪರಿಕಲ್ಪನೆ ಹಾಗೂ ವೈಜ್ಞಾನಿಕತೆಗಳು ವ್ಯಾಪಕ ವಾಗಿದ್ದು ಗಹನವೂ ಆಗಿದೆ. ವೈಚಾರಿಕವಾಗಿರುವದರಿಂದ ಈ ವಿಷಯವನ್ನೇ ಪ್ರತಿ

ಪಾದಿಸಲು ಸಾಧ್ಯವಿಲ್ಲ. ಕರಿಯು ಕನ್ನಡಿಯಲ್ಲಿ ಅಡಗಿದಂತೆ ಸೂಕ್ಷ್ಮವಾಗಿ ಲಿಂಗದ ಮಹತ್ವವನ್ನು ಮಾತ್ರ ಬಿತ್ತರಿಸಲಾಗಿದೆ.

**ಲಿಂಗಧಾರಣದ ಆವಶ್ಯಕತೆ :**

ಪ್ರತಿಯೊಬ್ಬನ ಹೃದಯದಲ್ಲಿ ಪ್ರಾಣಲಿಂಗವಿರುವದು. ಅದುಕಾರಣ ಬಾಹ್ಯವಾಗಿ ಇಷ್ಟಲಿಂಗ ಧರಿಸುವ ಆವಶ್ಯಕತೆ ಇಲ್ಲವೆಂದು ಕೆಲವರು ವಾದಿಸುತ್ತಾರೆ. ಇದು ಸರಿಯಲ್ಲ ಗರ್ಭಸ್ಥ ಶಿಶು ತಾಯಿಯ ಹೊಟ್ಟೆಯಿಂದ ಹೊರಗೆ ಬಾರದೇ ಅವಳು ತಾಯಿಯೂ ಎನಿಸುವುದಿಲ್ಲ. ಹೊಟ್ಟೆಯಲ್ಲಿಯ ಶಿಶುವಿನಿಂದ ಅವಳು ಆನಂದವನ್ನು ಹೊಂದಲಾರಳು. ಆಡಿಸಿ ಮುದ್ದಾಡಿಸಿ ಜೋಗುಳ ಪಾಡಲು ಬರುವುದಿಲ್ಲ. ಇದರಂತೆ, ಆಕಳಿಗೆ ಬೇನೆಬಂದಾಗ ವೈದ್ಯರೊಬ್ಬರು ಆಕಳ ತುಪ್ಪವನ್ನು ಹಚ್ಚಿ ತಿಕ್ಕಲು ಹೇಳುವರು. ಅದರ ಹೊಟ್ಟೆಯಲ್ಲಿ ಹಾಲಿದೆ, ಹಾಲಿನಲ್ಲಿ ತುಪ್ಪವಿದೆಯಲ್ಲವೆಂದರೆ, ಅದಕ್ಕೆ ಬೇನೆ ವಾಸಿಯಾಗದು. ಆಕಳ ಹಾಲನ್ನು ಕರೆದು ಚನ್ನಾಗಿ ಕಾಯಿಸಿ, ಹೆಪ್ಪುಹಾಕಿ, ಮಜ್ಜಿಗೆ ಮಾಡಿ, ಬೆಣ್ಣೆ ತೆಗೆದು ಕಾಯಿಸಿದರೆ ತುಪ್ಪವಾಗುವದು. ಅನೇಕ ಕ್ರಿಯಾ ಸಮನ್ವಿತ ತುಪ್ಪವನ್ನು ಗೋವಿನ ನೋವಿಗೆ ಹಚ್ಚಿ ತಿಕ್ಕಿದರೆ, ಅದು ಕಡಿಮೆಯಾಗುವಂತೆ ಗುರುವರನು ಶಿಷ್ಯನ ಜೀವಭಾವ ವನ್ನು ಶರೀರದ ಮಲಗಳನ್ನು ಸಂಸ್ಕಾರದಿಂದ ಕಳೆದು ವಿಮಲ ಚೈತನ್ಯಮಯ ಬೆಳಗನ್ನು ಇಷ್ಟಲಿಂಗದಲ್ಲಿ ನೆಲೆಗೊಳಿಸಿದರೆ ಮಾತ್ರ ಅದು ಇಷ್ಟಲಿಂಗವಾಗುವದು. ಪ್ರಣತಿಯಲ್ಲಿ ಎಣ್ಣೆ ಬತ್ತಿಯನ್ನು ಹಾಕಿ ಜ್ಯೋತಿ ಮುಟ್ಟಿಸಿದರೆ ಕಿರಣಗಳು ಹರಡಿ ಪ್ರಕಾಶವು ಪಸರಿ ಸುವದು. ಹಾಗೆಯೇ ಇಷ್ಟಲಿಂಗವೆಂಬ ಜ್ಯೋತಿ ಗುರುವಿನಿಂದ ಬೆಳಗಿದಾಗ ಪ್ರಾಣಲಿಂಗದ ಕಿರಣಗಳು ಸಕಲೇಂದ್ರಿಯಗಳಲ್ಲಿ ವ್ಯಾಪಿಸಿ ಭಾವಲಿಂಗದ ಬೆಳಕು ಹರಡುವದು. ಊಟ ಮಾಡದವನಿಗೆ ಹೊಟ್ಟೆಯ ಹಸಿವು ಹಿಂಗುವುದಿಲ್ಲ, ತೃಪ್ತಿಯಂತೂ ಆಗುವದಿಲ್ಲ.

ಹೊರಗುರಿಯುಲೊಳಗನ್ನ ಪರಿಪಕ್ವವಾದಂತೆ
ಹೊರಗಣ ಸತ್ಕ್ರಿಯಾಂತರದ ಸುಜ್ಞಾನವೆಂ
ದೊರೆದ ಶ್ರೀಗುರುವೆ ಕೃಪೆಯಾಗು ಗು. ತ್ರಿ. ೧೩.೭

ಪಾತ್ರೆಯಲ್ಲಿ ಅಕ್ಕಿಯನ್ನು ಹಾಕಿ ಒಲೆಯ ಮೇಲಿಟ್ಟರಾಗುವದಿಲ್ಲ. ಕೆಳಗೆ ಚೆನ್ನಾಗಿ ಅಗ್ನಿ ಯನ್ನು ಪುಟಗೊಳಿಸಬೇಕಾಗುವುದು. ಅಗ್ನಿಯ ಸಂಸ್ಕಾರವಿಲ್ಲದೆ ಅಕ್ಕಿಯು ಬೇಯದು, ಅನ್ನವಾಗದು. ಇದರಂತೆ ಅಂಗನು ಲಿಂಗಮಯನಾಗಬೇಕಾದರೆ ಸತ್ಕ್ರಿಯೆ ಹಾಗೂ ಸುಜ್ಞಾನಗಳ ಸಂಗಮ ಅವಶ್ಯವಾಗಿಬೇಕು. ಸುಜ್ಞಾನ ಸತ್ಕ್ರಿಯೆಗಳ ಸಮನ್ವಯವೆ ವೀರಶೈವ ಸಿದ್ಧಾಂತ. ಕ್ರಿಯಾ ರಹಿತವಾದ ಜ್ಞಾನಕ್ಕೆ ಪ್ರಾಧಾನ್ಯತೆಯಿಲ್ಲ. ಜ್ಞಾನ ರಹಿತ ವಾದ ಕರ್ಮವೂ ಮುಖ್ಯವೆನಿಸಬಾರದು. ಪಕ್ಷಿಯು ಹಾರಲು ಎರಡೂ ರೆಕ್ಕೆಗಳು ಬೇಕಾ ಗುವಂತೆ ಕರ್ಮ-ಜ್ಞಾನಗಳೆರಡೂಬೇಕು. ಇಲ್ಲಿ ಕರ್ಮವೆಂದರೆ, ಜಡಕರ್ಮವಲ್ಲ; ಸತ್ಕ್ರಿಯೆ ಗಳು. ಅದರಂತೆ, ಜ್ಞಾನವೆಂದರೆ, ಬರಿ ಶುಷ್ಕವಾದ ಜ್ಞಾನವಲ್ಲ; ಸುಜ್ಞಾನ.

**ಇಷ್ಟಲಿಂಗಾರ್ಚನೆ :**

ಪರತರ ಶಿವಲಿಂಗವೆಳಸಿ ನಿನಗಾಗಿ
ಕರಕಂಜದೊಳು ಕಾಣಿಸಿತು ಯೋಗಿ ಯಜಿಸು

ಎಂದು ನಿಜಗುಣರು ಪ್ರತಿಪಾದಿಸಿದ್ದಾರೆ. ಸರ್ಪಭೂಷಣ ಶಿವಯೋಗಿಗಳು ಕೈವಲ್ಯ ಕಲ್ಪ ವಲ್ಲರಿಯಲ್ಲಿ—

ಕರದೊಳಗೆ ಕಾಣಿಪುದು ಪರವಸ್ತುವಿದನರಿಯ
ದರೆ ಮರುಳರೊಳಗರಸಿ ತೊಳಲಿ ಬಳಲುವರು

ಎಂದು ನಿರೂಪಿಸುತ್ತಾರೆ. ಸದ್ಗುರುನಾಥನಿಂದ ಲಭ್ಯವಾದ ಕರಕಮಲದಲ್ಲಿಪ್ಪ ಇಷ್ಟಲಿಂಗವು ಪರಾತ್ಪರ ಪರವಸ್ತು. ಅದನ್ನು ಶಿವಯೋಗಿಯಾಗಿ ಪೂಜಿಸಬೇಕು. ಕರದಿಷ್ಟಲಿಂಗವು ಅನಿಷ್ಟಗಳನ್ನು ಪರಿಹರಿಸಿ ಇಷ್ಟಾರ್ಥಗಳನ್ನು ಕರುಣಿಸುವದು. 'ಇಷ್ಟಲಿಂಗಮಿದಂ ಸಾಕ್ಷಾದ ನಿಷ್ಟ ಪರಿಹಾರಕಂ' ಎಂದು ರೇಣುಕರು ಪ್ರತಿಪಾದಿಸಿದ್ದಾರೆ. ಇದು ವರರತ್ನ. ಈ ಲಿಂಗದಲ್ಲಿ—

'ನಾನು ಕಾಮಿಸುತಿರ್ಪ ಸಾಲೋಕ್ಯವಿದೆ ಸಾಮೀಪ್ಯವಿದೆ.
ಸಾರೂಪ್ಯವಿದೆ, ಸಾಯುಜ್ಯವಿದೆ, ಧರ್ಮವಿದೆ ಅರ್ಥವಿದೆ.
ಕಾಮವಿದೆ, ಮೋಕ್ಷವಿದೆ, ನಾನೇ ನರಸುವ ಬಯಕೆ ಎಲ್ಲವೂ ಇದೆ ನೋಡಾ
ಶ್ರೀಗುರು ಕಾರುಣ್ಯದಿಂದ ಮಹಾವಸ್ತು ಕರಸ್ಥಳಕ್ಕೆ
ಬಂದ ಬಳಿಕ ಸರ್ವ ಸುಖಂಗಳೆಲ್ಲವೂ ಇದೆ ನೋಡಾ.
ಇನ್ನೆನ್ನ ಬಯಲ ಭ್ರಮೆಯೊಳಗೆ ಹೋಗಿಸದಿರಯ್ಯಾ ನಿಮ್ಮ
ಬೇಡಿಕೊಂಬೆನು, ನಿಮಗೆ ಎನ್ನಾಣೆ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.'

ಉರಿಲಿಂಗ ಪೆದ್ದಿಗಳು ಅನುಭವಿಸಿದ ಅನುಭವವನ್ನು ಚೆನ್ನಾಗಿ ಅಳವಡಿಸಿಕೊಳ್ಳಬೇಕು. ಇಷ್ಟಲಿಂಗದಲ್ಲಿ ಚತುರ್ವಿಧ ಮುಕ್ತಿಗಳಿವೆ, ಚತುರ್ವಿಧ ಪುರುಷಾರ್ಥಗಳಿವೆ. ಅಷ್ಟೇ ಏಕೆ ನಾವು ಬಯಸುವ ಬಯಕೆಗಳೆಲ್ಲ ಪೂರೈಸುವ ಕಲ್ಪವೃಕ್ಷ–ಕಾಮಧೇನು–ಚಿಂತಾಮಣಿ ಈ ಇಷ್ಟಲಿಂಗವೆನಿಸಿದೆ. ಅದಕ್ಕಾಗಿ ಇದರಲ್ಲಿ ಚನ್ನಾಗಿ ಶ್ರದ್ಧೆಯುಳ್ಳವನಾಗಬೇಕು. ಲಿಂಗದ ಹೊರತಾಗಿ ಅನ್ಯ ದೈವವಿಲ್ಲೆಂಬ ಫಲವೇ ಲಿಂಗಾಚಾರದ ಪರಾಕಾಷ್ಠೆ. ಎಲ್ಲವನ್ನು ಲಿಂಗದಲ್ಲಿ ಕಾಣಬೇಕು 'ಸರ್ವಂ ಲಿಂಗಮಯಂ ಜಗತ್' ಈ ಜಗವೆಲ್ಲ ಲಿಂಗಮಯವೆಂಬ ಭಾವಬಲಿತು ಅರ್ಚಿಸಬೇಕು, ಆರಾಧಿಸಬೇಕು. ಇಂಥ ಸಕಲ ಸುಖಂಗಳ ನೀವ, ಇಷ್ಟಾರ್ಥದಾಯಕ ಇಷ್ಟ ಲಿಂಗವನ್ನು ಕಡೆಗಣಿಸಿ ಅರೆಮರುಳರಂತೆ ಒಣಗುವ–ಬತ್ತುವ ಮರಗಳನ್ನು ಜಲವನ್ನು ಪೂಜಿಸುತ್ತಾರೆ. ಮಾತನಾಡದ, ಜಡವಾದ ಸ್ಥಾವರ ದೇವರನ್ನು ಆರಾಧಿಸುತ್ತಾರೆ. ಮೊರ, ಒಣಕೆ, ಗುಂಡುಕಲ್ಲು ಮೊದಲಾದ ಕಾಲಿಡಲು ಇಂಬಿಲ್ಲದಷ್ಟು ದೇವರನ್ನು ವ್ರತ

ಗಳನ್ನು ಕಲ್ಪಿಸುವುದರಿಂದ ಯಾವ ಫಲವೂ ಸಿಕ್ಕದು. ಮೋಕ್ಷವೂ ಲಭಿಸದು. ಆದ್ದರಿಂದ ಅನ್ಯ ದೇವತೆಗಳನ್ನು ಅನ್ಯ ವ್ರತಗಳನ್ನೆಲ್ಲ ನಿವಾರಿಸಿ ಇಷ್ಟಲಿಂಗಾರ್ಚನವ್ರತಪರನಾದರೆ ಲಿಂಗಾಂಗ ಸಮರಸ ಸಾಧ್ಯ.

**ಲಿಂಗಪೂಜೆಯೇ ಶಿವಯೋಗ:**

'ಶಿವಪೂಜೆಯೇ ಮುಖ್ಯ ಶಿವಯೋಗಮೆನಿಸುವದು|
ಶಿವಪೂಜೆಯಿಲ್ಲದಗೆ ಮುಕ್ತಿ ಘಟಿಸದು ಮತ್ತೆ' ಮತ್ತು-
'ಶಿವಪೂಜೆಗೆಣೆಯುಂಟೆ ಮೂಜಗದೊಳು'|| ಕವಿರತ್ನ ದ್ಯಾಂಪೂರ

ಚನ್ನಕವಿಗಳು ಬಾಲಲೀಲಾ ಮಹಾಂತೇಶ್ವರ ಪುರಾಣದ ನಾಲ್ಕನೆಯ ಸಂಧಿಯಲ್ಲಿ ಶಿವ ಪೂಜೆಯೇ ಮುಖ್ಯ ಶಿವಯೋಗವೆಂಬುದಾಗಿ ಸ್ಪಷ್ಟಪಡಿಸಿದ್ದಾರೆ. ಶಿವಲಿಂಗ ಪೂಜೆಯಿಲ್ಲದೆ ಮುಕ್ತಿಯಾಗದು, ಇಂಥ ಶಿವಪೂಜೆಗೆ ಸಮವಾದ ಸುಲಭ ಸಾಧನ ಮತ್ತೊಂದಿಲ್ಲ; ಅಂತೆಯೇ ವೈರಾಗ್ಯ ನಿಧಿ ನಾಗಭೂಷಣ ಘನಮಠಾರ್ಯರು-

"ಶಿವಲಿಂಗ ಪೂಜೆ ಮಾಳ್ಪರಿಗೆ ಭವ ಭಯವಿಲ್ಲ,
ಶಿವಲಿಂಗ ಪೂಜೆ ಮಾಳ್ಪರಿಗೆ ಜನಿಮೃತಿಗಳಿಲ್ಲ
ಶಿವಲಿಂಗ ಪೂಜೆ ಮಾಳ್ಪರಿಗೆ ದಾರಿದ್ರ್ಯ ದೋಷಂಗಳವು ಮುನ್ನಿಲ್ಲವೈ
ಶಿವಲಿಂಗ ಪೂಜೆ ಮಾಳ್ಪರಿಗೆ ಮೋಸಗಳಿಲ್ಲ
ಶಿವಲಿಂಗ ಪೂಜೆ ಮಾಳ್ಪರಿಗೆ ನಾಶನವಿಲ್ಲ
ಶಿವಲಿಂಗ ಪೂಜೆ ಮಾಳ್ಪರಿಗೆ ಸತಿ-ಸುತ-ಮತ್ತ ಗಜ ಪಲ್ಲಕ್ಕಿಗಳಪ್ಪುವು."

ಎಂದು ಶಿವಲಿಂಗ ಪೂಜೆಯ ಘನತೆಯನ್ನು ಹೃದಯ ತುಂಬಿ ಹಾಡಿದ್ದಾರೆ. ಸಕಲ ಸಿದ್ಧಿಯು ಸಕಲ ಸಂಪದವು ಶಿವಲಿಂಗ ಪೂಜೆಯಲ್ಲಿ ಅಡಗಿರುವಾಗ ಈ ಕರದಿಷ್ಟಲಿಂಗವು ವರರತ್ನ ವಲ್ಲದೇ ಮತ್ತೇನು? ಸ್ಥಾವರ ಪೂಜೆಗಿಂತ ಇಷ್ಟಲಿಂಗ ಪೂಜೆ ಸುಲಭ ಹಾಗೂ ಸರಳ ಆನಂದದಾಯಕವೂ ಆಗಿದೆ ನೋಡಿ—

'ಸ್ಥಾವರ ಪೂಜೆಯೆಂತಲ್ಲ ನೋಡು ನಮ್ಮ ಶಿವಪೂಜೆ.
ಇದಿರಿಟ್ಟು ಮಾಡುವದು ಸ್ಥಾವರ ಪೂಜೆ.
'ರುದ್ರೋ ಭೂತ್ವಾ ರುದ್ರಂ ಯಜೇತ್' ಎಂಬ ಶೃತಿಯಂತೆ,
ಶಿವನಾಗಿ ಶಿವಲಿಂಗವ ಪೂಜಿಸುವದು ನಮ್ಮ ಪರಿ.
ಪೂಜ್ಯ ಪೂಜಕ ಭೇದವಳಿಯದು ಸ್ಥಾವರದಲಿ.
ದ್ವಂದ್ವವುಳಿಯದು ಅಂಗನೆ ಲಿಂಗನಾಗುವ ಶಿವಪೂಜೆಯಲಿ.
ಸ್ಥಾವರ ಪೂಜಿಸಲು ಗುಡಿ ಗುಂಡಾರ ಸೇರಬೇಕು.
ಆವಸ್ಥಲದಲ್ಲಾದರೂ ಮಾಡಬಹುದು ಶಿವಲಿಂಗ ಪೂಜೆಯ

ಅಂಗದಲಿ ಸದಾ ಧರಿಸಿರ್ಪ ಲಿಂಗಪೂಜೆಗಿಂ ಮಿಗಿಲಾದುದು
ಮತ್ತೊಂದಿಲ್ಲವಯ್ಯಾ ಮೃಡಗಿರಿ ಅನ್ನದಾನೀಶ' ||ವಚನ ಸಂಪದ ೩೫೦||

ಇಷ್ಟಲಿಂಗವೊಂದರಲ್ಲೇ ನಿಷ್ಠೆ ಇರಿಸಿ ಭಕ್ತಿ ಶೀಲ ನೇಮಗಳಿಂದ ಪೂಜಿಸಬೇಕು. ಸಿದ್ಧರಾಮೇಶ್ವರರು–

'ಇಷ್ಟಲಿಂಗ ಪೂಜೆಯದು ಅಷ್ಟೈಶ್ವರ್ಯಪ್ರದವಾಯಿತ್ತು
ಪ್ರಾಣಲಿಂಗ ಪೂಜೆಯದು ಅಖಂಡ ಚಿದೈಶ್ವರ್ಯ ಪ್ರದವಾಯಿತ್ತು
ಭಾವಲಿಂಗ ಪೂಜೆಯದು ನಿರ್ಭಾವ ನಿಜಾನಂದ ವಸ್ತು ಸ್ವರೂಪ
ವಾಯಿತ್ತು ಕೇಳಾ ಕಪಿಲಸಿದ್ಧ ಮಲ್ಲಿಕಾರ್ಜುನ'

ಇಷ್ಟಲಿಂಗ–ಪ್ರಾಣಲಿಂಗ–ಭಾವಲಿಂಗಗಳ ಪೂಜಾಫಲವನ್ನು ತಿಳಿಸಿಕೊಟ್ಟಿದ್ದಾರೆ. ತೋಂಟದ ಸಿದ್ಧಲಿಂಗೇಶ್ವರರು ಶಿವಯೋಗವನ್ನು ಕುರಿತು–

'ಇನ್ನು ವೀರಮಾಹೇಶ್ವರರುಗಳ ಲಿಂಗಸಂಧಾನವೆಂತೆಂದೊಡೆ–
ಬ್ರಹ್ಮರಂಧ್ರದಲ್ಲಿಪ್ಪ ನಾದಚೈತನ್ಯವಪ್ಪ ಪರಮ ಚಿತ್ಕಳೆಯನೇ
ಭಾವ ಮನ ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ
ಭಾವದಲ್ಲಿ ಸತ್ಸ್ವರೂಪವಪ್ಪ ಭಾವಲಿಂಗವೆನಿಸಿ, ಪ್ರಾಣದಲ್ಲಿ ಚಿತ್‌ಸ್ವರೂಪ
ವಪ್ಪ ಪ್ರಾಣಲಿಂಗವೆನಿಸಿ
ಕರಸ್ಥಳದಲ್ಲಿ ಆನಂದ ಸ್ವರೂಪವಪ್ಪ ಇಷ್ಟಲಿಂಗವೆಂದೆನಿಸಿ
ಒಂದೇ ವಸ್ತು ತನುಮನ ಭಾವಂಗಳಲ್ಲಿ ಇಷ್ಟ–ಪ್ರಾಣ–ಭಾವವಾದ
ಭೇದವನರಿದು, ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ,
ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ
ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ
ಈ ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡನೆ ಕೂಡಿ
ಲಿಂಗವೇ ತಾನು ತಾನಾಗಿ ವಿರಾಜಿಸುತಿರ್ಪುದೀಗ ಶಿವಯೋಗ ನೋಡಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ' ||೩೬೪||

ಎಂದು ಲಿಂಗತ್ರಯುಗಳ ಶಿವಯೋಗ ಸಮನ್ವಯವನ್ನು ವರ್ಣಿಸಿರುವರು. ಇಷ್ಟಲಿಂಗವನ್ನು ಕರದಿಂದ ಅರ್ಚಿಸಿ ದೃಷ್ಟಿಯಿಂದ ಗ್ರಹಿಸಬೇಕು. ಪ್ರಾಣಲಿಂಗವನ್ನು ಮನದಿಂದ ಅರ್ಚಿಸ ಬೇಕು. ಭಾವಲಿಂಗವನ್ನು ಭಾವಜ್ಞಾನದಿಂದ ಆರಾಧಿಸಬೇಕು.

**ಶಿವಯೋಗದ ಅಂಗಗಳು:**

ಅಷ್ಟಾವರಣ ಸಂಪನ್ನನಾದ ಶರಣನು ಪಂಚಾಚಾರಗಳನ್ನು ಪ್ರಾಣವಾಗಿಸಿಕೊಂಡರೆ ಸಾಲದು, ಷಟ್ ಸ್ಥಲಾತ್ಮನಾಗಿ ಮುನ್ನಡೆಯಬೇಕಾಗುವದು. ವೀರಶೈವ ಸಿದ್ಧಾಂತವು ಷಟ್

ಸ್ಥಲಾತ್ಮಕವಾದುದು. ಶರೀರವು ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮರಿಂದ ಜನ್ಮವಾದುದು. ಈ ಆರು ತತ್ವಗಳ ಸಾಕ್ಷಾತ್ಕಾರ ಷಟ್‌ಸ್ಥಲದಲ್ಲಿ ವ್ಯಕ್ತವಾಗುತ್ತದೆ. ಭಕ್ತನು ಪೃಥ್ವ್ಯಂಗನಾಗಿ ಪೃಥ್ವಿಯು ಸಹನೆ, ಶಾಂತಿ, ಕಿಂಕರತನಗಳನ್ನು ಮೈಗೂಡಿಸಿಕೊಂಡು ಆಚಾರಲಿಂಗವನ್ನು ಅರ್ಚಿಸುವನು. ಮಾಹೇಶ್ವರನು ಜಲಾಂಗನಾಗಿ ಜಲದ ಸ್ವಚ್ಛತೆ–ಶುಭ್ರತೆಗಳನ್ನು ಅರ್ಥಾತ್ ಸಚ್ಚಾರಿತ್ರ್ಯ ಶೀಲನಾಗಿ ಗುರುಲಿಂಗವನ್ನು ಗೌರವಿಸುವನು. ಪ್ರಸಾದಿಯು ಅಗ್ನ್ಯಂಗನಾಗಿ ಅಗ್ನಿಯು–ಹಸಿ–ಒಣ ಕಟ್ಟಿಗೆಗಳನ್ನು ತನ್ನಂತೆ ಮಾಡಿ ಕೊಳ್ಳುವ ಹಾಗೆ ಸುಖ ದುಃಖಗಳಲ್ಲಿ ಸಮನಾಗಿ ಶಿವಲಿಂಗವನ್ನು ಪೂಜಿಸುವನು. ಪ್ರಾಣ ಲಿಂಗಿಯು ವಾಯ್ವಂಗನಾಗಿ ಪ್ರಾಣವಾಯು ಸರ್ವಾಂಗದಲ್ಲಿ ವ್ಯಾಪಿಸುವಂತೆ ಲಿಂಗ ಪ್ರಾಣಿ ಯಾಗಿ ಜಂಗಮ ಲಿಂಗವನ್ನು ಆರಾಧಿಸುತ್ತಾನೆ. ಶರಣನು ಆಕಾಶಾಂಗನಾಗಿ ಆಕಾಶದಂತೆ ವ್ಯಾಪಕ ಶಿವದೃಷ್ಟಿ ಬಲಿದು ಲಿಂಗ ಪತಿಗೆ ಆನಂದದಿಂ ಸರ್ವಾರ್ಪಣ ಭಾವವುಳ್ಳವನಾಗಿ ಪ್ರಸಾದ ಲಿಂಗವನ್ನು ಪ್ರಸನ್ನೀಕರಿಸಿಕೊಳ್ಳುವನು. ಐಕ್ಯನು ಆತ್ಮಾಂಗನಾಗಿ ಆತ್ಮನು ಎಲ್ಲ ರಲ್ಲಿ ಸಮರಸವಾಗಿರುವಂತೆ, ಉರಿಯುಂಡ ಕರ್ಪುರದಂತೆ ಸಮರಸ ಉಳ್ಳವನಾಗಿ ಮಹಾ ಲಿಂಗವನ್ನು ಬೆರೆಯುವನು. ಷಟ್‌ಸ್ಥಲವು ಅಂಗ, ಲಿಂಗ, ಭಕ್ತಿ, ಶಕ್ತಿ, ಹಸ್ತಮುಖ, ಪದಾರ್ಥ ಪ್ರಸಾದಗಳೆಂದು ಎಂಟು ವಿಧವಾಗಿ ಅಳವಡುವದರಿಂದ ಅಷ್ಟವಿಧ ಸಕೀಲ ವೆಂತಲೂ ಷಟ್‌ಸ್ಥಲದಲ್ಲಿ ಅಂಗ–ಲಿಂಗಗಳ ತ್ರಿಪುಟ ಸೇರಿ ನವವಿಧ ಸಕೀಲವೆಂತಲೂ ತತ್ವಗಳ ವಿಸ್ತಾರವಾಗುವದು. ಹೀಗೆ ವಿಸ್ತಾರಗೊಳ್ಳುತ್ತ ನವವಿಧವು ೨೪ ತತ್ವಗಳಲ್ಲಿ ವಿಸ್ತಾರಗೊಂಡು ೨೧೬ ಸಕೀಲುಗಳಲ್ಲಿ ಪೂರ್ಣವಾಗುವದು. ಎಲ್ಲವನ್ನೂ ವಿಸ್ತರಿಸಲು ಅವಕಾಶವಿಲ್ಲ.

> 'ಜ್ಞಾನಂ ಶಿವಮಯಂ ಭಕ್ತಿಃ ಶೈವೀ ಧ್ಯಾನಂ ಶಿವಾತ್ಮಕಂ।
> ಶಿವವ್ರತಂ ಶಿವಾರ್ಚೇತಿ ಶಿವಯೋಗೋಹಿ ಪಂಚಧಾ||' ಶಿ. ಪ್ರ. ೧–೧೫

ಶಿವಯೋಗ ಪ್ರದೀಪಿಕೆಯಲ್ಲಿ ಶಿವಯೋಗವನ್ನು ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವ ವ್ರತ, ಶಿವಾರ್ಚನವೆಂದು ಐದು ವಿಭಾಗ ಮಾಡಿದ್ದಾರೆ. ಅಂದರೆ ಈ ಐದಂಗಗಳಲ್ಲಿ ಶಿವಯೋಗದ ಸಾಕ್ಷಾತ್ಕಾರವಾಗುವದು. ಶಿವಯೋಗದಲ್ಲಿ ಕೊನೆಯದಾದ ಶಿವಾರ್ಚನೆಯೇ ಮುಖ್ಯವಾಗಿದ್ದರೂ ಶಿವಾರ್ಚನೆಗೆ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತಗಳು ಪೂರಕವಾಗಿವೆ. ಈ ಶಿವಯೋಗದಲ್ಲಿ ಹಿಂದಿನ ಯೋಗಗಳೆನಿಸಿದ ಹಠ, ಲಯ, ಮಂತ್ರ, ರಾಜಯೋಗಗಳೂ ಸಮಾವೇಶಗೊಳ್ಳುತ್ತವೆ. ಹಠಯೋಗ ಶರೀರ ಶುದ್ಧಿಯ ಸಾಧನ ವಾದರೆ, ಲಯಯೋಗವು ಪ್ರಾಣಶುದ್ಧಿಯ ಸಾಧನಯೋಗವೆನಿಸಿದೆ. ಮಂತ್ರಯೋಗವು ಮನಶುದ್ಧಿಯ ಸಾಧನವೆನಿಸಿದರೆ, ರಾಜಯೋಗವು ಇವೆಲ್ಲಕ್ಕೂ ರಾಜನಾದ ಜೀವಶುದ್ಧಿಯ ಸಾಧನಯೋಗವು. ಹೀಗೆ ರಾಜಯೋಗದಲ್ಲಿ ಶುದ್ಧನಾದ ಜೀವಾತ್ಮನು ಶಿವನಲ್ಲಿ ಸಮರಸ ಹೊಂದುವದೇ ಶಿವಯೋಗ. ನಾಲ್ಕು ಯೋಗಗಳು ಮಂಚದ ನಾಲ್ಕು ಕಾಲುಗಳಿದ್ದಂತೆ. ಶಿವಯೋಗವು ನಾಲ್ಕು ಕಾಲುಗಳನ್ನು ಹೊಂದಿದ ಪೂರ್ಣವಾದ ಮಂಚದಲ್ಲಿ ಆನಂದ

ಕೊಡುವಂಥದ್ದು. ರಾಜನೆಂದರೆ–ಚಂದ್ರ ರಾಜಯೋಗವೆಂದರೆ ಚಂದ್ರಯೋಗ–ಶಿವ ಯೋಗ–ಚಂದ್ರಧರಯೋಗ ಎನಿಸುವದು. ಶಿವಜ್ಞಾನ; ಶಿವಭಕ್ತಿ, ಶಿವಧ್ಯಾನ, ಶಿವವ್ರತ, ಶಿವಾರ್ಚನಗಳೆಂಬ ಶಿವಯೋಗದ ಪಂಚ ಪ್ರಕಾರಗಳನ್ನು ಜಗದ್ಗುರು ರೇಣುಕರು ಪಂಚ ಯಜ್ಞವೆಂತಲೂ ಜ್ಞಾನಯಜ್ಞವೆಂತಲೂ ಪ್ರತಿಪಾದಿಸಿದ್ದಾರೆ. ಶಿವಜ್ಞಾನದಿಂದ ಶಿವಯೋಗವು ಪ್ರಾರಂಭವಾಗುವದು. ಶಿವಜ್ಞಾನವೆಂದರೆ ಶಿವನ ಚಿತ್ ಶಕ್ತಿ ಈ ಶಿವನ ಚಿತ್ ಕಳೆಯನ್ನು ಸದ್ಗುರುವಿನ ಅನುಭವೋಪದೇಶದಲ್ಲಿ ತೊಳಗಿ ಬೆಳಗಿಸಬೇಕು. ಕಾಯದ ಕತ್ತಲೆ ಅಳಿಯಬೇಕು. ಜೀವಭ್ರಾಂತಿ ತೊಲಗಬೇಕು. ದೇಹ ದೇವಾಲಯವಾಗಿ ಬೆಳಗಿ ದರೆ, ಸತ್ಯವಾದ ಸುಂದರವಾದ ಶಿವಸ್ವರೂಪ ಸಾಕ್ಷಾತ್ಕಾರವಾಗುವದು. ಮೇಲೆ ವಿವರಿಸಿ ದಂತೆ ಬ್ರಹ್ಮರಂಧ್ರದಲ್ಲಿ ಅರ್ಥಾತ್ ಪಶ್ಚಿಮ ಶಿಖಾಚಕ್ರದಲ್ಲಿಪ್ಪ ನಾದಚೈತನ್ಯವಪ್ಪ ಪರಮ ಚಿತ್ಕಳೆಯನ್ನೇ ಶ್ರೀ ಗುರುರಾಯನು ಭಾವ–ಮನ–ಕರದಲ್ಲಿ ತಂದು ಸಾಹಿತ್ಯವ ಮಾಡು ತ್ತಾನೆ. ಆದಕ್ಕಾಗಿ ಭಾವದಲ್ಲಿ ಸತ್ ಸ್ವರೂಪವಪ್ಪ ಪ್ರಭಾವ ಲಿಂಗವೆನಿಸುವದು. ಪ್ರಾಣ ದಲ್ಲಿ ಚಿತ್ ಸ್ವರೂಪವಪ್ಪ ಪ್ರಾಣಲಿಂಗವೆನಿಸುವದು. ಕರಸ್ಥಳದಲ್ಲಿ ಆನಂದ ಸ್ವರೂಪವಪ್ಪ ಇಷ್ಟಲಿಂಗವೆನಿಸುವದು. ಘನತರವೆನಿಸಿದ ಇಷ್ಟ–ಪ್ರಾಣ–ಭಾವ ಲಿಂಗಗಳ ಸುಜ್ಞಾನ ಸದಾ ಬೆಳಗುತ್ತಿದ್ದರೆ, ಶಿವಭಕ್ತಿಯ ಪ್ರಕಾಶ ತುಂಬೆಲ್ಲ ಪಸರಿಸುವದು. ಜ್ಞಾನವಿಲ್ಲದ ಭಕ್ತಿ ಮೂಢ ನಂಬಿಕೆಗೆ ಅಥವಾ ಅಂಧಶ್ರದ್ಧೆಗೆ ಕಾರಣವಾಗುವದು. ಷಟ್ ಸ್ಥಳದ ಭಕ್ತಿ ಗಳು ಸರಪಳಿಯ ಕೊಂಡಿಯಂತೆ ಒಂದಕ್ಕೊಂದು ಹೊಂದಿವೆ. ಮೊದಲು ಲಿಂಗದಲ್ಲಿ ಶ್ರದ್ಧಾ ಭಕ್ತಿ ಇರಬೇಕು. ಶ್ರದ್ಧಾಭಕ್ತಿಯಲ್ಲಿ ಇಷ್ಟ–ಪ್ರಾಣ–ಭಾವಲಿಂಗಗಳ ಸುಜ್ಞಾನ ಕೂಡಿದರೆ ನಿಷ್ಠಾಭಕ್ತಿಯು ಗರಿಷ್ಠವಾಗುವದು. ನಿಷ್ಠೆಯಲ್ಲಿ ಜ್ಞಾನವಿಲ್ಲದಿದ್ದರೆ, ಮೂಢ ಸಂಪ್ರದಾಯಗಳಿಗೆ ಒಳಗಾಗುವನೆಂದೇ ಮೂರನೆಯ ಭಕ್ತಿ ಸಾವಧಾನವೆನಿಸಿದೆ. ಸಾವಧಾನ ವುಳ್ಳ ಭಕ್ತಿಯಿಂದ ಅನುಭವ ಬೆಳೆಯುವದು. ಅನುಭವದಲ್ಲಿ ಆನಂದವಿದೆ, ಆನಂದದಲ್ಲಿ ಸಮರಸವಿದೆ. ಹೀಗೆ ಭಕ್ತಿಯು ಜ್ಞಾನಯುತವಾಗಬೇಕು. ಕೇವಲ ತಿಳಿದರೆ ಶಿವನೊಲಿ ಮೆಯಾಗದು. ತಿಳಿದಂತೆ ಅನುರಾಗವುಳ್ಳವರಾಗಬೇಕು. ಪೂಜ್ಯ ವಸ್ತುವಿನಲ್ಲಿರುವ ಅನುರಾಗವೇ ಅನುಗ್ರಹಕ್ಕೆ ಕಾರಣವಾಗುವದು. ಯಾಕೆಂದರೆ ಶಿವನು ಭಕ್ತಿ ಪ್ರಿಯನು 'ಭಕ್ತೇ ರಸಾಧ್ಯಾಂನಹಿಕಿಂಚಿದಸ್ತಿ' ಭಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಯೋಗ ದಲ್ಲಿ ಕಾಣದ ಬಿಂದುವಿನಲ್ಲಿ ಧ್ಯಾನ ಮಾಡುವುದಾಗಲೀ ಭಕ್ತಿಮಾಡುವದಾಗಲೀ ಸರಳ ವೆಂದು ಕಾಣುವದಿಲ್ಲ. ಆದಕ್ಕಾಗಿ ಕಾಣದ ವಸ್ತುವಿನಲ್ಲಿ ಕಣ್ಮನಗಳನ್ನಿಡಲು ಸಾಧ್ಯವಾಗ ದೆಂದರಿತು ಗುರುರಾಯ ಕರದಲ್ಲಿ ಇಷ್ಟಲಿಂಗವನ್ನು ಕರುಣಿಸಿ ದೃಷ್ಟಿಯಿಂದ ನೋಡಲು ತಿಳಿಸಿದ್ದಾನೆ.

ಶಿವಜ್ಞಾನ–ಶಿವಭಕ್ತಿಗಳು ಸಂಪನ್ನವಾದ ಬಳಿಕ ಶಿವಧ್ಯಾನ ಕಠಿಣವಾಗುವದಿಲ್ಲ. ಧ್ಯಾನವೆಂದರೆ ಅಂತರ್ಲಕ್ಷ್ಯ ಸಂಯಮನ. ತನ್ನ ಲಕ್ಷ್ಯವನ್ನು ಹೊರಗೆ ಹರಿಬಿಡದೆ ಬಾಹ್ಯ ವೃತ್ತಿಗಳನ್ನೆಲ್ಲ ಮೂರಿರಿಸಿ ಇಷ್ಟಲಿಂಗದಲ್ಲಿ ದೃಷ್ಟಿ ಮನಸ್ಸುಗಳನ್ನು ನಿಲ್ಲಿಸುವದೇ

ಧ್ಯಾನವೆನಿಸುವದು. ಈ ಧ್ಯಾನದಲ್ಲಿ ಕೇವಲ ನೆನಹು ಅಲ್ಲ ದೃಷ್ಟಿಯಿಂದ ಲಿಂಗವನ್ನು ನಿರೀಕ್ಷಿಸುತ್ತ ಮನದಲ್ಲಿ ಮಂತ್ರಾರ್ಥವನ್ನು ನೆನೆಯುತ್ತಾ ಮಂತ್ರ ಜಪಾನುಷ್ಠಾನವು ನಡೆಯುವದು. ಇದರಿಂದ ಧ್ಯೇಯಾಕಾರ ಹೊಂದುವದು ಸುಲಭವಾಗುವದು.

ಪ್ರವೃತ್ತಿ ಕ್ರಮದಲ್ಲಿ ಪ್ರಾಪ್ತವಾದ ಲಿಂಗವನ್ನು ನಿವೃತ್ತಿ ಕ್ರಮದಲ್ಲಿ ಅರ್ಚಿಸಬೇಕಾಗುವದು. ಗುರುಪುತ್ರನಾದ ಪ್ರತಿಯೊಬ್ಬನು ನಿವೃತ್ತಿಯನ್ನು ಸಾಧಿಸಬೇಕು. ಆದ್ದರಿಂದ ಗುದಸ್ಥಾನದಲ್ಲಿಯ ಆಧಾರ ಚಕ್ರದಲ್ಲಿ ಮನ ಸ್ಥಿರವಾದರೆ ಅಲ್ಲಿರುವ ಆಚಾರಲಿಂಗವನ್ನು ಧ್ಯಾನಿಸಬೇಕು. ಗುಹ್ಯದ ಸ್ವಾಧಿಷ್ಠಾನದಲ್ಲಿ ಮನನಿಂತರೆ ಅಲ್ಲಿರುವ ಗುರುಲಿಂಗವನ್ನು ಸ್ಮರಿಸಬೇಕು. ನಾಭಿಯಮಣಿಪೂರಕದಲ್ಲಿ ಮನ ನಿಂತರೆ ಅಲ್ಲಿರುವ ಶಿವಲಿಂಗವನ್ನು ಅರ್ಚಿಸಬೇಕು. ಹೃದಯದ ಅನಾಹತದಲ್ಲಿ ಮನನೆಲೆಗೊಂಡರೆ ಅಲ್ಲಿರುವ ಜಂಗಮ ಲಿಂಗವನ್ನು ನೆನೆಯಬೇಕು. ಕಂಠದ ವಿಶುದ್ಧಿಯಲ್ಲಿ ಮನ ಬಂದರೆ ಅಲ್ಲಿರುವ ಪ್ರಸಾದ ಲಿಂಗವನ್ನು ಧ್ಯಾನಿಸಬೇಕು. ಭ್ರೂ ಮಧ್ಯದ ಆಜ್ಞಾ ಚಕ್ರದಲ್ಲಿ ಮನ ಸ್ಥಿರಗೊಂಡರೆ ಅಲ್ಲಿರುವ ಮಹಾಲಿಂಗವನ್ನು ಧ್ಯಾನಿಸಬೇಕು. ಅಲ್ಲಿಂದ ಮೇಲೆ ಮನ ಉನ್ಮನಗೊಳ್ಳುವದು. ಆಗ ಧ್ಯಾನದ ಅವಶ್ಯಕತೆಯಿಲ್ಲ. ಧ್ಯಾನ ಧೇಯ ಧ್ಯಾತೃ ಒಂದಾಗುವದು. ಆಗ ಲಿಂಗವೇ ತಾನಾಗುವದು.

ಶಿವಯೋಗದ ನಾಲ್ಕನೆಯ ನೋಂಪಿ ಶಿವವ್ರತವು. ವ್ರತವು ಶಿವ ಭಕ್ತನಿಗೆ ಅತ್ಯವಶ್ಯವಾದುದು. ನಿಯಮ ಬದ್ಧವಾಗಿ ಮಾಡುವ ಸತ್‌ಕ್ರಿಯೆಯು ಸಫಲವೆನಿಸುವದು. ವ್ರತ ಶಬ್ದಕ್ಕೆ ನಿಯಮ, ನೇಮ, ಕಟ್ಟಳೆ ಹಾಗೂ ನಿಷ್ಠೆಯೆಂದು ಅರ್ಥಗಳಿವೆ. ಶಿವವ್ರತದಿಂದ ಸಕಲೇಂದ್ರಿಗಳು ಶಿವಭಾವವನ್ನು ಹೊಂದುವವು. ಸತ್ಯ ಶುದ್ಧ ಕಾಯಕಕ್ಕೆ ಶಿವಪೂಜಾ ಸಾಹಿತ್ಯ ಸಂಗ್ರಹಕ್ಕೆ ಸಂಚರಿಸುವದೇ ಪಾದವ್ರತ ಎನಿಸುವದು. ಕುಕರ್ಮಗಳನ್ನು ಬಿಟ್ಟು ಸತ್ಕ್ರಿಯೆಗಳನ್ನು ಮಾಡುವದೇ ಕರ ವ್ರತ. ಸುತ್ತಮುತ್ತಲಿನ ಅಮಂಗಳವನ್ನು ನೋಡದೇ ಮಂಗಲಮಯ ರೂಪಗಳನ್ನು ನೋಡುವದೇ ಕಣ್ಣುಗಳ ನಿಯಮವಾಗಬೇಕು. ವಿಕೃತಿಯಲ್ಲಿ ಪಕೃತಿಯನ್ನಾಗಿ ಪ್ರಕೃತಿಯನ್ನು ಸಂಸ್ಕೃತಿಯನ್ನಾಗಿ ಕಾಣುವ ಭಾವ ಬಲಿಯಬೇಕು. ಅಸತ್ಯವನ್ನು ತ್ಯಜಿಸಿ ಸದಾ ಸತ್ಯ ನುಡಿಗಳನ್ನಾಡುವದು ಮುಖವ್ರತವೆನಿಸುವದು ಉತ್ತಮ ನುಡಿಗಳನ್ನು ಆಲಿಸುವದು ಕಿವಿಗೆ ಭೂಷಣ. ಪರೋಪಕಾರಿಯಾಗಿ ಸಕಲರ ಲೇಸ ಬಯಸುವದೇ ಜೀವನ ವ್ರತವಾಗಬೇಕು. ಹೀಗೆ ಒಳ್ಳೆಯ ನಡೆಯನ್ನು ಚಾಚೂ ತಪ್ಪದೆ ನಡೆಸಿದರೆ ಅದುವೆ ಶಿವವ್ರತವು.

ಶಿವಾರ್ಚನೆಯು ಶಿವಯೋಗದ ಐದನೆಯ ಸಾಧನ. ಶಿವಾರ್ಚನೆಯಿಂದಲೇ ಶಿವಯೋಗದ ಸಿದ್ಧಿಯಾಗುವದು. ಇದು ಇಬ್ಬಗೆಯಾಗಿದೆ. ಇಷ್ಟ ಲಿಂಗಾರ್ಚನೆಯು ಬಾಹ್ಯ ಉಪಚಾರಗಳಿಂದ ಕೂಡಿರುವುದರಿಂದ ಅದು ಬಾಹ್ಯಪೂಜೆ. ಪ್ರಾಣಲಿಂಗಾರ್ಚನೆಯು ಹೊರಗಿನ ಉಪಚಾರಗಳನ್ನುಳಿದು ಆಂತರಿಕ ಉಪಚಾರಗಳಿಂದ ಕೂಡಿದೆ. ಅದಕ್ಕಾಗಿ ಅದು ಆಂತರಿಕ ಪ್ರಜ್ಞೆಯೆನಿಸುವದು. ಆಂತರಿಕ ಪೂಜೆ ಮುಖ್ಯವಾಗಿದ್ದರೂ

ಇಷ್ಟಲಿಂಗದ ಬಾಹ್ಯೋಪಚಾರಗಳ ಪೂಜೆಯು ಬೇಕೆಬೇಕು. ಸತ್ಕ್ರಿಯಾ ಸಮನ್ವಿತ ಬಾಹ್ಯಪೂಜೆಯಿಲ್ಲದೆ ಆಂತರಿಕ ಪ್ರಾಣಲಿಂಗರೂಪ ಜ್ಞಾನಪೂಜೆ ಘಟಿಸುವದಿಲ್ಲ.

ತ್ಯಾಗಾಂಗವೆನಿಸಿದ ಸ್ಥೂಲ ತನುವಿನ ಅಂಗ ಗುಣಗಳು ಅಳಿದು ಲಿಂಗ ಗುಣಗಳು ಲಭ್ಯವಾಗಲು ಭೋಗಾಂಗವೆನಿಸಿದ ಸೂಕ್ಷ್ಮ ತನುವಿನ ಜ್ಞಾನೇಂದ್ರಿಯಗಳು ಲಿಂಗ ಸಂಬಂಧ ವನ್ನು ಹೊಂದುವದು ಅತ್ಯವಶ್ಯವಿದೆ.

ಷಟ್ ಸ್ಥಲಾತ್ಮಕ ಬಾಹ್ಯ ಶಿವಪೂಜೆಯಲ್ಲಿ ಮಾಡುವ ಪ್ರತಿಯೊಂದು ವಿಧಾನಗಳು ಸತ್ಕ್ರಿಯೆಗಳೆನಿಸಿವೆ. ಈ ಕ್ರಿಯೆಗಳಲ್ಲಿ ವೈಜ್ಞಾನಿಕತೆ, ತಾತ್ವಿಕತೆಗಳು ಮನೆಮಾಡಿ ಕೊಂಡಿವೆ. ಪರಿಶುದ್ಧಗೊಂಡ ಅಂಗತ್ರಯದಲ್ಲಿ ಲಿಂಗ ತ್ರಯವನ್ನು ಒಂದುಗೂಡಿಸುತ್ತಾ ಹೋಗಬೇಕಾಗುವದು. ಶಿವಪೂಜೆ ಗೈದ ಪರಿಯನ್ನು ಸೂಕ್ಷ್ಮವಾಗಿ ಅವಲೋಕಿಸೋಣ. ಲಿಂಗಧಾರಿಯು–ಗುರು–ಲಿಂಗ–ಜಂಗಮ ತ್ರಯರನ್ನು ಧ್ಯಾನಿಸಿ ನಿದ್ರೆಗೈದರೆ ಸ್ವಪ್ನಾವಸ್ಥೆಯ ದೋಷಗಳಿಂದ ದೂರವಾಗುವನು. ಬ್ರಾಹ್ಮೀ ಮುಹೂರ್ತದಲ್ಲಿ ಶಿವನಾಮಸ್ಮರಣೆ ಗೈಯ್ಯುತ್ತ ಜಾಗ್ರತ (ಎದ್ದು)ನಾಗಿ ಲಿಂಗದೇವನನ್ನು ಲಿಂಗಯೋಗಿಗಳ ಶರಣರ ಭಾವ ಚಿತ್ರಗಳನ್ನು ಸಂದರ್ಶಿಸಿ ಮಹಾಲಿಂಗ ಬಿಂದುವನ್ನು ಭ್ರೂಮಧ್ಯದಲ್ಲಿ ಧ್ಯಾನಿಸಬೇಕು. ಕೊನೆಗೆ ಲಿಂಗಯ್ಯನಿಗೆ ಶರಣೆಂದರೂ ಸಾಕು. 'ಹೊತ್ತಾರೆ ಎದ್ದು ಲಿಂಗವ ನೆನೆದರೆ ತಪ್ಪುವವು ಅಪಮೃತ್ಯು-ಕಾಲಕರ್ಮಗಳು' ಎಂದಿದ್ದಾರೆ. ಪ್ರಮಥರು ಪ್ರಾತರ್ವಿಧಿ ಗಳನ್ನು ತೀರಿಸಿ ಲಿಂಗಪೂಜೆಗೆ ಬೇಕಾದ ಹೂಪತ್ರಿಗಳನ್ನು ಸ್ವತಃ ಎತ್ತಿಕೊಳ್ಳಬೇಕು. ಅದ ರಿಂದ ಉಗುರಿನ ಮೂಲಕ ಬಿಲ್ವ, ಬನ್ನಿ ಹಾಗೂ ಹೂಗಳ ರಸ ರಕ್ತದಲ್ಲಿ ಸೇರಿ ಆರೋಗ್ಯ ವರ್ಧಕವಾಗುವದು. ಬೇವು, ಜಾಲಿ, ನೆಲ್ಲಿ, ಉತ್ತರಾಣಿ, ಹುಲಗಲಿ ಮೊದಲಾದ ರಸವುಳ್ಳ ಮರಗಳ ಕಡ್ಡಿಯಿಂದ ಹಲ್ಲುಜ್ಜುವದರಿಂದ ಹಲ್ಲಿನ ಆರೋಗ್ಯ ಹೆಚ್ಚುವದು. ಸ್ನಾನಮಾಡು ವಾಗ ಧೂಳಪಾದೋದಕವನ್ನು ನೀರಿನಲ್ಲಿ ಬೆರೆಸಿ ಸ್ನಾನಮಾಡಬೇಕು. ಅಂದರೆ ಜಲದ ಜಡತ್ವವು ದೂರವಾಗುವದು.

**ಅಷ್ಟಾಂಗ ಯೋಗ ನಿರಸನ ಹಾಗೂ ಸಮನ್ವಯ :**

ಶಿವನಾಮ ಸ್ಮರಣೆಗೈಯುತ್ತ–'ಇದು ಶಿವನ ಸದನ'ವೆಂದು ಭಾವಿಸುತ್ತ ಶಿವಪೂಜಾ ಮಂದಿರಕ್ಕೆ ಬಂದು ಆಸನದ ಮೇಲೆ ಕುಳಿತುಕೊಳ್ಳಬೇಕು. ನೆಲ, ಕಲ್ಲುಗಳ ಮೇಲೆ ಕುಳಿತು ಕೊಳ್ಳಬಾರದೆಂದು ಈಗಾಗಲೇ ಸೂಚಿಸಿದ್ದಾಗಿದೆ. ನಮ್ಮ ಶಿವಯೋಗದಲ್ಲಿ ಅಷ್ಟಾಂಗ ಯೋಗಗಳು ಸಹಜವಾಗಿ ಸಮಾವೇಶಗೊಳ್ಳುತ್ತವೆ. ಆದರೆ ಯೋಗದರುಶನದಲ್ಲಿ ಪ್ರತಿ ಪಾದಿಸಲ್ಪಡುವ ಅಷ್ಟಾಂಗ ಯೋಗದ ಅರ್ಥಕ್ಕಿಂತ ಇಲ್ಲಿ ಪಕ್ವಭಾವ ಬೆಳೆಯುತ್ತದೆ. ಸಾಧ ಕನು ಅಹಿಂಸಾ, ಸತ್ಯ, ಆಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹಗಳೆಂಬ ಪಂಚಲಕ್ಷಣ ಲಕ್ಷಿತ ವಾದ ಯಮವು. ಭಯಾನಕತೆಯುಳ್ಳದು: ಕಾರಣ ನಮ್ಮವರು ಅದನ್ನು ಬದಿಗಿರಿಸಿ, ಇಂದ್ರಿಯಗಳನ್ನು ಉದಾತ್ತೀಕರಿಸುವ ವಿನೂತನ ತತ್ತ್ವವನ್ನು ಪ್ರತಿಪಾದಿಸಿದರು. ಭಕ್ತಿ, ಜ್ಞಾನ, ಸತ್ಕ್ರಿಯೆಗಳಿಂದ ಮನವನ್ನು ಸುಮನಗೊಳಿಸಿ ಗುರು ಕರುಣಿಸಿದ ಇಷ್ಟಲಿಂಗಾ

ರ್ಚನೆಯಲ್ಲಿ ತೊಡಗಿಸಿದರು. ಬಹಿರಿಂದ್ರಿಯಗಳನ್ನು ಲಿಂಗಪೂಜೆಯ ಸಾಧನ ಸಾಮಗ್ರಿ ಸಂಗ್ರಹದಲ್ಲಿ ವಿನಿಯೋಗಿಸಿದರು. ಯಮವು ಬಹಿರಿಂದ್ರಿಯ ನಿಗ್ರಹ ಸಾಧನವಾದರೆ, ಶೌಚ-ಸಂತೋಷ-ತಪಃ ಸ್ವಾಧ್ಯಾಯ-ಈಶ್ವರ ಪ್ರಣಿಧಾನಗಳೆಂಬ ಅಂಗವುಳ್ಳ ನಿಯಮವು ಅಂತರಿಂದ್ರಿಯ ನಿಗ್ರಹವೆನಿಸಿದೆ. ಶರೀರೇಂದ್ರಿಯಗಳನ್ನು ಶೋಷಿಸುವ ಈ ನಿಯಮವನ್ನು ಕಡೆಗಣಿಸಿ ಸ್ವಯಲಿಂಗ ಪೂಜಾ ನಿಯಮಗಳನ್ನು ನಿರೂಪಿಸುತ್ತಾರೆ. ಆಯತ ಮಾಡಿ ಕೊಂಡ ಲಿಂಗವು ಸ್ವಯವಾಗುವ (ಸ್ವಾಯತ) ಸಾಧನವೇ ಲಿಂಗಾರ್ಚನೆ. ಲಿಂಗಪೂಜಕನು, ಲಿಂಗಭೋಗೋಪಭೋಗಿಯಾಗಿ ಇಂದ್ರಿಯಗಳನ್ನು ಉದಾತ್ತೀಕರಿಸಿಕೊಂಡು ಸದಾ ಸಂತೋಷಿಯಾಗುವನು. ಈ ಲಿಂಗಾರ್ಚನೆಯಾದರೂ ಸ್ವಸ್ವರೂಪಾನುಸಂಧಾನವುಳ್ಳದು. ಶಿವಪೂಜೆಗೆ ಕುಳಿತುಕೊಳ್ಳಲು ಆಸನಗಳ ಉಪಯೋಗವಾಗುವದು. ಶರೀರಕ್ಕೆ ಆಯಾಸ ಕರವೆನಿಸಿದ ಆಸನಗಳನ್ನು ಬದಿಗಿರಿಸಿ ಸಿದ್ಧಾಸನ, ಸುಖಾಸನ, ಪದ್ಮಾಸನಗಳ ಉಪಯೋಗ ಸಹಜವಾಗುವದು. ಯಮ-ನಿಯಮಗಳು ಭಕ್ತಸ್ಥಲದಲ್ಲಿ ಸಮಾವೇಶಗೊಳ್ಳುತ್ತವೆ. ಲಿಂಗಾರ್ಚನೆಯಲ್ಲಿ ಆಸನಗ್ರಹಣಮಾಡಿ ಗುರುಧ್ಯಾನ ಸಂಕಲ್ಪ ಹಾಗೂ ಪ್ರಾಣಾಯಾಮ ಗಳನ್ನು ಪೂರೈಸಬೇಕು. ಭಸ್ಮ, ರುದ್ರಾಕ್ಷಧಾರಣದವರೆಗೆ ಭಕ್ತಸ್ಥಲವೇ ಪೂರ್ಣಗೊಳ್ಳು ವದು. ಮಾಹೇಶ್ವರ ಸ್ಥಲದಲ್ಲಿ ಶಿವಷಡಕ್ಷರ ಮಂತ್ರನ್ಯಾಸಗಳು ಬರುತ್ತವೆ. ಪರಶಿವನ ಈ ಸರ್ವಜ್ಞ, ಶಕ್ತಿ, ನಿತ್ಯತೃಪ್ತ ಶಕ್ತಿ, ಅನಾದಿ ಬೋಧ ಶಕ್ತಿ, ಸ್ವತಂತ್ರ ಶಕ್ತಿ, ಅಲುಪ್ತ ಶಕ್ತಿ, ಅನಂತ ಶಕ್ತಿಗಳೆಂಬ ಆರು ಶಕ್ತಿಗಳನ್ನು ನಿತ್ಯದಲ್ಲಿ ಪರ-ದೇಹ-ಅಂಗಗಳಲ್ಲಿ ನ್ಯಾಸ ಗೊಳಿಸಿಕೊಳ್ಳುವದರಿಂದ ಶಿವಯೋಗಿಯಲ್ಲಿ ಅನುಪಮ ಶಕ್ತಿ ಸಂಚಯವಾಗುವದು. ಮಂತ್ರ ನ್ಯಾಸದೊಂದಿಗೆ ದಿಗ್ಬಂಧನಮಾಡಿ ಷಡಕ್ಷರ ಮಂತ್ರವನ್ನು ಜಪಿಸುವದೂ ಈ ಸ್ಥಲ ದಲ್ಲಿಯೇ ಸಮಾಪ್ತಿಯಾಗುವದು. ಹೀಗೆ ಕಾಯ-ಕರಣೇಂದ್ರಿಯಗಳನ್ನು ವಿಷಯಗಳಿಂದ ಮುಕ್ತಗೊಳಿಸಿ (ಆತ್ಮ) ಲಿಂಗಸ್ವರೂಪಮಾತ್ರದಲ್ಲಿ ಚಿತ್ತವು ಬೆರೆಯುವಂತೆ ಮಾಡುವದ ರಿಂದ ಪ್ರತ್ಯಾಹಾರವೂ ಘಟಿಸುವದು. ಅಲ್ಲದೆ, ಕರ್ಮೇಂದ್ರಿಯಗಳಲ್ಲಿ ಇಷ್ಟಲಿಂಗ ಸಂಬಂಧ, ಜ್ಞಾನೇಂದ್ರಿಯಗಳಲ್ಲಿ ಪ್ರಾಣಲಿಂಗ ಸಂಬಂಧ, ಕರಣೇಂದ್ರಿಯಗಳಲ್ಲಿ ಭಾವ ಲಿಂಗದ ಸಂಬಂಧವೂ ಸಾಧ್ಯವಾಗುವದು.

ಪ್ರಸಾದಿ ಪ್ರಾಣಲಿಂಗ ಸ್ಥಲಗಳಲ್ಲಿ ಕರಪೀಠಾರ್ಚನೆ ಮಾಡಿ ಪಶ್ಚಿಮ ಶಿಖಾ ಚಕ್ರದ ಚಿತ್ಕಳೆಯನ್ನು ಧ್ಯಾನಿಸಿ ಇಷ್ಟಲಿಂಗದಲ್ಲಿ ಆಹ್ವಾನಿಸಿ ಅಭಿಷೇಕ ಹಾಗೂ ಷೋಡಶೋಪ ಚಾರಗಳನ್ನು ಪೂರೈಸಿ ಲಿಂಗದೃಷ್ಟಿಯನ್ನಿಡುವದು. ಸ್ವತಂತ್ರಸಿದ್ಧಲಿಂಗೇಶ್ವರರು ನಿರೂಪಿಸಿ ದಂತೆ—

'ಅಂಗೈಯ ಲಿಂಗದಲ್ಲಿ ಕಂಗಳು ನಟ್ಟು
ಎವೆ ಹಳಚದೆ, ಮನ ಕವಲಿಡದೆ
ಚಿತ್ರದ ರೂಹಿನ ತೆರನಂತೆ ಲಿಂಗವ ನೋಡಿ ನೋಡಿ
ಕಂಗಳಲ್ಲಚ್ಚೊತ್ತಿ, ಮನದಲ್ಲಿ ನೆನೆ ನೆನೆದು, ನೆರೆವ

ಲಿಂಗ ಸುಖ ಸಂಪನ್ನರನೇ ಲಿಂಗವೆಂಬೆನು
ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ'

ಹೀಗೆ ಶಿವಯೋಗದಪರಾಕಾಷ್ಠತೆ ಬೆಳೆಯುವದು. ಪ್ರಭುಲಿಂಗಲೀಲೆಯಲ್ಲಿಯೂ—

'ಆಲಿನಿಂದೊಡೆ ಸುಳಿದು ಸೂಸುವ
ಗಾಳಿನಿಲುವುದು ಗಾಳಿ ನಿಲೆ ಮನ
ಮೇಲೆ ನಿಲುವುದು, ಮನವು ನಿಂದೊಡೆ ಬಿಂದು ನಿಂದಿಹುದು।
ಲೀಲೆಯಿಂದಾ ಬಿಂದು ನಿಂದೊಡೆ
ಕಾಲಕರ್ಮವ ಗೆದ್ದು ಮಾಯೆಯ
ಹೇಳಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ॥'

ಲಿಂಗದಲ್ಲಿ ದೃಷ್ಟಿಯು ಸ್ಥಿರವಾಗುತ್ತ ಹೋದಂತೆ ಉಸಿರಾಟವು ಸ್ಥಿರವಾಗುವದು. ಪ್ರಾಣ ವಾಯು ಕುಂಭಕವಾದರೆ ಮನದ ಹರಿದಾಟ ನಿಲ್ಲುವದು. ಹೀಗೆ ದೃಷ್ಟಿ, ಶ್ವಾಸ, ಮನಗಳು ಸ್ಥಿರಗೊಳ್ಳಲು ಲಿಂಗದಲ್ಲಿ ದಿವ್ಯ ಪ್ರಕಾಶ ಕಾಣುವದು. ಹೀಗೆ ಬಾಹ್ಯ ಪೂಜೆಯು ಅಂತರ್ಮುಖವಾಗಲು ಆಂತರಿಕ ಪ್ರಾಣಪೂಜೆಯು ಪ್ರಾರಂಭವಾಗುವದು. ಪ್ರಾಣಲಿಂಗದ ಧ್ಯಾನ ಬಲಿತು ಭಾವಲಿಂಗದ ಸಾಕ್ಷಾತ್ಕಾರ ಮಾಡುವಲ್ಲಿ ಧಾರಣಯೋಗವು ಲಭ್ಯವಾಗು ವದು. ಆ ಭಾವಲಿಂಗದ ಅನುಭಾವದ ಚಿದಾನಂದದಲ್ಲಿ ಸಮರಸಗೊಳ್ಳುವದೇ ಸಮಾಧಿಯು. ಆಂತರಿಕವಾಗಿ ಷಟ್‌ಸ್ಥಲಗಳು ಪೂರ್ಣಗೊಂಡಿದ್ದರೂ ಲೋಕವ್ಯವಹಾರಕ್ಕೆ ಬರಲು ಶರಣ ಐಕ್ಯ ಸ್ಥಲಗಳಲ್ಲಿ ಇಷ್ಟ–ಪ್ರಾಣ–ಭಾವಲಿಂಗಗಳಿಗೆ ಮಂಗಳ ಮಾಡಿ ಸ್ತುತಿಸಿ ಲಿಂಗ ಪೂಜೆಯು ಮಂಗಲವಾದರೂ ಪೂಜೆ ಪೂರ್ಣವಾಗುವದಿಲ್ಲ. ಪೂಜಾ ಫಲಗಳೆನಿಸಿದ ಪಾದೋದಕ–ಪ್ರಸಾದ ಅವಶ್ಯ.

**ಆಂತರಿಕ ಪೂಜೆ–ಶೂನ್ಯ ಸಂಪಾದನೆ:**

ಭಾರತೀಯ ದರ್ಶನಗಳಲ್ಲಿ ಧರ್ಮ–ಅರ್ಥ–ಕಾಮ–ಮೋಕ್ಷಗಳು ಚತುರ್ವಿಧ ಪುರುಷಾರ್ಥಗಳೆನಿಸಿದರೆ, ವೀರಶೈವ ಸಿದ್ಧಾಂತದಲ್ಲಿ ಗುರು, ಲಿಂಗ, ಜಂಗಮ, ಪ್ರಸಾದ ಗಳು ಚತುರ್ವಿಧ ಸಾರಾಯ ಸಂಪತ್ತೆನಿಸಿವೆ. ಪ್ರಸಾದ ಸದ್ಭಾವವೇ ಶಿವಾದ್ವೈತದ ಚರಮ ಸಿದ್ಧಾಂತ. ಅಂತೆಯೇ ನಿತ್ಯದಲ್ಲಿಯೂ ಶಿವಯೋಗಾನುಷ್ಠಾನವು ಪಾದೋದಕ–ಪ್ರಸಾದಗಳಲ್ಲಿ ಪರಿಪೂರ್ಣತೆಯನ್ನು ಹೊಂದುವದು. ಪ್ರಸಾದ ಸದ್ಭಾವದಲ್ಲಿ ನಿತ್ಯ ತೃಪ್ತತೆಯಿದೆ. ಅಲ್ಲಮ ಪ್ರಭುಗಳು—

'ಅಳಿದು ಕೂಡುವದು ಒಂದು ಯೋಗ
ಅಳಿಯದೆ ಕೂಡುವದು ಒಂದು ಯೋಗ
ಈ ಎರಡು ಯೋಗಗಳಿಗೆ ಅಳಿಯದೆ
ಕೂಡುವ ಯೋಗವರಿವುದು ಗುಹೇಶ್ವರಾ ।'

ಇಲ್ಲಿ ಶಿವಯೋಗದ ವೈಶಿಷ್ಟ್ಯವನ್ನು ಪ್ರತಿಪಾದಿಸಿದ್ದಾರೆ. ಯೋಗ ದರ್ಶನಗಳಲ್ಲಿ ಅಳಿದು ಕೂಡುವ ಯೋಗವಿದ್ದರೆ ಶಿವಯೋಗದಲ್ಲಿ ಅಳಿಯದೆ ಕೂಡುವ ಕಲೆಯಿದೆ. ಅಳಿದು ಕೂಡುವುದರಿಂದ ಪ್ರಗತಿಗೆ ಅವಕಾಶವಿಲ್ಲ. ಉಳಿದು ಕೂಡುವದರಿಂದ ಪ್ರಗತಿಗೆ ವಿಕಾಸಕ್ಕೆ ಸಾಕಷ್ಟು ಆಸ್ಪದವಿದೆ. ವೀರಶೈವ ಶರಣನು ನಿತ್ಯದಲ್ಲೂ ಐಕ್ಯ ಸ್ಥಿತಿಗೇರಿದರೂ ಲೋಕ ವ್ಯವಹಾರಕ್ಕಾಗಿ ಪುನಃ ಸತ್ಕಾಯಕಕ್ಕಾಗಿ ಭಕ್ತ ಸ್ಥಲಕ್ಕೆ ಅವತರಿಸುತ್ತಾನೆ. ಅದಕ್ಕಾಗಿಯೇ ಬಸವಣ್ಣನವರು—

'ಮಾಡುವ ನೀಡುವ ಭಕ್ತನ ಕಂಡರೆ, ನಿಧಿ ನಿಧಾವ ಕಂಡಂತಾಯಿತ್ತು
ಪಾದೋದಕ ಪ್ರಸಾದ ಜೀವಿಯು ಕಂಡೊಡೆ ಹೋದ ಪ್ರಾಣ
ಬಂದತ್ತಾಯಿತ್ತು
ಅನ್ಯರ ಮನೆಗೆ ಹೋಗಿ, ತನ್ನುದರವ ಹೊರೆಯದ ಅಚ್ಚ ಶರಣರ ಕಂಡಡೆ
ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆ' (೭೫೮)

ಲಿಂಗಪೂಜೆಯನ್ನು ಮಾಡುವ, ಕಾಯಕ ಮಾಡುವ, ಕಾಯಕ ಮಾಡಿ ದಾಸೋಹಂಭಾವದಿಂ ನೀಡುವವನೆ ಭಕ್ತ. ಇಂಥವನೇ ತತ್ವದ ನಿಧಿ-ನಿಧಾನ ಮಾಡುವ ಮಾಟದಲ್ಲಿ ಪಾದೋದಕ ಪ್ರಸಾದಕ್ಕಾಗಿ ಜೀವಿಸಿದರೆ ಮರುಜೀವಣಿ ಮತ್ತಿಲ್ಲ. ಈ ವಚನದಲ್ಲಿ ವೀರಶೈವ ಸಿದ್ಧಾಂತದ ತಿರುಳು ತುಂಬಿದೆ. ಅದೆಷ್ಟು ಅರ್ಥ ಮಾಡಿದರೂ ಕಡಿಮೆ. ಶಿವಯೋಗದ ಸಿದ್ಧಿಯಲ್ಲಿ ಸಾಮಾಜಿಕ, ಆರ್ಥಿಕ ಭದ್ರತೆ ಇದೆ. ಅನ್ಯರ ಹಂಗಿಲ್ಲ. ಶಿವನ ಹಂಗನ್ನೂ ಹರಿದವರು ನಮ್ಮ ಶರಣರು. ಮೈಲಾರ ಬಸವಲಿಂಗರ ನುಡಿ ನೋಡಿ–

ಗುರು ಕೃಪೆಯ ಪಡೆದಿಷ್ಟ ಲಿಂಗ ಪೂಜೆಯ ಮಾಡಿ
ಹರುಷದಿಂ ಜಂಗಮಾರ್ಚನೆ ಗೈದು ಬಳಿಕವರ
ಚರಣ ತೀರ್ಥವ ಕೊಂಡು ಸುಪ್ರಸಾದವನುಂಡು ಚಿದ್ಭಸಿತ ರುದ್ರಾಕ್ಷೆಯಿಂ ।
ವರಚಿದಂಗಕ್ಕಲಂಕರಿಸಿ ಪಂಚಾಕ್ಷರಿಯ
ಸ್ಮರಿಸುವೀ ಪರಿಯೋಳಷ್ಟಾವರಣದಾಚರಣೆ
ಶರಣಗಲ್ಲದೆ ಹರನಿಗಿಲ್ಲವಾದುದರಿಂದೆ ಹರನಿಗಿಂದಧಿಕ ಶರಣಂ ॥

ವೀರಶೈವ ದಾರ್ಶನಿಕ ಸಿದ್ಧಾಂತದ ಸಾರಸಾರಾಯಗೊಂಡಿದೆ. ಶಿವನಿಗಿಂತಲೂ ಶಿವಶರಣನೇ ಅತ್ಯಧಿಕವೆಂದು ಸಿದ್ಧಾಂತಗೊಳಿಸಿದ ಅಗ್ಗಳಿಕೆ ವೀರಶೈವ ಅನುಭವಿಗಳಿಗಿದೆ. ಅದಕ್ಕಾಗಿ ಅಲ್ಲಮ ಪ್ರಭುಗಳು ಅಳಿಯದೆ ಕೂಡುವ ಯೋಗವನ್ನು ಅರಿಯಬೇಕು, ಸಾಧಿಸಬೇಕೆಂದು ಮನನೀಯವಾಗಿ ತಿಳಿಸಿದ್ದಾರೆ.

ಅರುಹಿನ ಕುರುಹೆನಿಸಿದ ಇಷ್ಟಲಿಂಗವನ್ನೇ ಷೋಡಶೋಪಚಾರಗಳಿಂದ ಅರ್ಚಿಸಿದರೆ ಶಿವಯೋಗವಾಗುವದಿಲ್ಲ ಎಂಬುದನ್ನು ವಿವರಿಸಲಾಗಿದೆ. ಬಾಹ್ಯ ಸಾಧನೆಯಿಂದ ಆಂತರಿಕ ಸಾಧನೆಯನ್ನು ಸಾಧಿಸಬೇಕು. 'ಅರುಹ ಪೂಜಿಸಲೆಂದು ಕುರುಹಕೊಟ್ಟೊಡೆ ಅರುಹ

ಮರೆತು ಕುರುಹ ಪೂಜಿಸುವನು' ಧಡ್ಡನೆಂದಿದ್ದಾರೆ ಪ್ರಭುಗಳು. ಅಂತರಂಗದ ಸಾಧನೆಯಲ್ಲಿಯೇ ಶೂನ್ಯ ಸಂಪಾದನೆಯಾಗುವದು. ಬೌದ್ಧರ ಶೂನ್ಯಕ್ಕೂ ನಮ್ಮ ಶೂನ್ಯಕ್ಕೂ ಮಹದಂತರವಿದೆ. ನಮ್ಮ ಶೂನ್ಯವು ಎಲ್ಲವನ್ನೂ ಒಳಗೊಂಡ ಪರಿಪೂರ್ಣತೆಯುಳ್ಳದು. ಅದುವೆ ಇಷ್ಟಲಿಂಗ ಲಿಂಗಾಂಗಮಯನಾಗುವಿಕೆಯೇ ಶೂನ್ಯ ಸಂಪಾದನೆ. ಅಂತರಂಗದಷ್ಟಾವರಣ ಇಂತಿದೆ.—

ಅರಿವೆ ಗುರುವಾಗಿ ಪ್ರಾಣವೇ ಲಿಂಗವಾಗಿ
ಮತ್ತಿರದೆ ಸುಜ್ಞಾನ ಜಂಗಮವಾಗಿ ಬಳಿಕವರ
ಚರಣ ಜಿಹ್ವೆಯೊಳು ಶೇಷ ನಾಸಿಕದಲ್ಲಿ ಚಿದ್ ಭಸಿತ ತ್ವಕ್ಕಿನಲ್ಲಿ ।
ಪರಮ ರುದ್ರಾಕ್ಷಿ ನೇತ್ರದಲಿ ಪಂಚಾಕ್ಷರಿಯು
ವರಶ್ರೋತ್ರದಲ್ಲಿಯೇ ಪರಿಯೋಳಷ್ಟಾವರಣ
ಶರಣನೊಳು ಸಂಬಂಧವಾದಂತೆ ಹರನಿಗಲ್ಲದರಿಂದೆ ಶರಣನಧಿಕಂ ॥

ಇಂಥ ಸಾಧನೆ ಶಿವನಿಗಲ್ಲ. ಶಿವಶರಣ ಸಾಧಿಸುತ್ತಾನೆ. ಅಳಿಯದೆ ಒಂದಾಗುತ್ತಾನೆ. ಉಳಿದು ಬಾಳುತ್ತಾನೆ, ಬೆಳಗುತ್ತಾನೆ. ಅರಿವನ್ನೇ ಗುರುವನ್ನಾಗಿ ಗೌರವಿಸುತ್ತಾನೆ. ಅರುವಿನ ಎಚ್ಚರಿಕೆಯಲ್ಲಿ ಆಚಾರಗಳನ್ನು ಪ್ರಾಣವಾಗಿಸಿಕೊಳ್ಳುತ್ತಾನೆ. ಈ ಪ್ರಾಣವೇ ಲಿಂಗ ಪ್ರಾಣಿ ಎನಿಸುವದು, ಪ್ರಾಣಲಿಂಗವನ್ನರಿಯುವ ಸುಜ್ಞಾನದ ಸತ್–ಚಿತ್–ಆನಂದ ಕಳೆಯೇ ಜಂಗಮವೆನಿಸುವದು. ಇಂಥ ಅರಿವು–ಆಚಾರ–ಸುಜ್ಞಾನ ರೂಪಿ ಗುರು–ಲಿಂಗ–ಜಂಗಮರನ್ನು ಶರಣನು ಆರಾಧಿಸಿ ಅವರ ಕೃಪಾ ಪೂರಿತ ಪಾದೋದಕವನ್ನು ಗುರುಲಿಂಗದ ನೆಲೆಯಾದ ಜಿಹ್ವೆಯಿಂದ ಸ್ವೀಕರಿಸುವನು. ಆಚಾರಲಿಂಗದ ಸ್ಥಾನವೆನಿಸಿದ ನಾಸಿಕದಲ್ಲಿ ಗಂಧ ಪ್ರಸಾದವನ್ನು ಸ್ವೀಕರಿಸುವನು. ಭಾವಾರ್ಪಣದಿಂದ ಪ್ರಸಾದ ಸದ್ಭಾವ ನೆಲೆಸುವದು. ಹೀಗೆ ಸತ್ಕ್ರಿಯಾ–ಸುಜ್ಞಾನಗಳಿಂದ ಶರಣನ ಕಾಯವು ಬೆಳ್ಳಂಬೆಳಗುವದು. ಈ ಬೆಳಕೇ ತ್ವಕ್ಕಿನಲ್ಲಿ ಚಿದ್ಭಸಿತವಾಗಿ ತೋರುವದು. ನೇತ್ರಂಗಳಲ್ಲಡಗಿದ ಶಿವಶಾಂತ ದೃಷ್ಟಿಯೇ ಚಿದ್ರುದ್ರಾಕ್ಷವೆನಿಸುವದು. ಮನ ಮಾತುಗಳು ಮಂತ್ರವಾಗಿ ಸ್ವಾನುಭವದ ನೆನಹಿನಲ್ಲಿ ಪ್ರತಿಧ್ವನಿಸುವದರಿಂದ ಶರಣನ ಶ್ರೋತ್ರದಲ್ಲಿ ಸದಾಕಾಲವೂ ಷಣ್ಮಂತ್ರವು ಕೇಳಿ ಬರುವದು. ಇಂಥ ಶಿವಯೋಗಿಯು ಬಾಹ್ಯ ಭೌತಿಕದತ್ತ ಲಕ್ಷ್ಯ ಕೊಡುವುದೇಯಿಲ್ಲ. ಯಾವಾಗಲೂ ಅಂತರಂಗದ ಅರುವಿನಲ್ಲಿ ಎಚ್ಚರಗೊಂಡಿರುತ್ತಾನೆ. ಇವನಿಗೇನೆ ಲಿಂಗಾಂಗ ಸಮರಸವೆಂಬ ಶೂನ್ಯ ಸಂಪಾದನೆಯು ಸಂಪ್ರಾಪ್ತವಾಗುವದು. ಪರಶಿವ ಅವನನ್ನು ಸ್ವಾಗತಿಸುತ್ತಾನೆ.

ಭಕ್ತಿಯೆಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು.
ಲಿಂಗವೆಂಬ ಎಲೆಯ ಮೇಲೆ, ವಿಚಾರವೆಂಬ ಹೂವಾಯಿತ್ತು
ಆಚಾರವೆಂಬ ಕಾಯಾಯಿತ್ತು; ನಿಷ್ಪತ್ತಿಯೆಂಬ ಹಣ್ಣಾಯಿತ್ತು.

ನಿಷ್ಪತ್ತಿಯೆಂಬ ಹಣ್ಣು, ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ. (೫೨೫)

ವಿಚಾರ (ಸುಜ್ಞಾನ) ಹಾಗೂ ಆಚಾರ (ಸತ್ಕ್ರಿಯೆ) ಗಳಲ್ಲಿ ನಿಷ್ಪತ್ತಿಗೊಂಡ ಶರಣನು ಶಿವನೇ ತಾನಾಗುವನು. ಶಿವನ ಪ್ರೀತಿಗೆ ಪಾತ್ರನಾಗುವನು. ಆ ಶಿವಯೋಗಿಯು—

ಹರಿವ ನದಿಗೆ ಮೈಯಲ್ಲ ಕಾಲು
ಉರಿವ ಅಗ್ನಿಗೆ ಮೈಯಲ್ಲ ನಾಲಿಗೆ
ಬೀಸುವ ಗಾಳಿಗೆ ಮೈಯೆಲ್ಲ ಮುಖ
ಗುಹೇಶ್ವರಾ ನಿಮ್ಮ ಶರಣಂಗೆ
ಸರ್ವಾಂಗವೆಲ್ಲವೂ ಲಿಂಗ (ಪ. ವ. ೧೨೬೫)

ಸರ್ವಾಂಗವೆಲ್ಲವೂ ಲಿಂಗವಾಗುವದು. ಹರಿವ ನದಿ ಮೈಯಲ್ಲ ಕಾಲಾಗಿ ಹರಿವಂತೆ, ಶಿವಯೋಗಿಯ ಸತ್ಕ್ರಿಯೆ ಅರ್ಥಾತ್ ಅರ್ಚನೆಯು ಸರ್ವತೋಮುಖ ನಡೆಯುವದು. ಉರಿವ ಅಗ್ನಿ ಮೈಯೆಲ್ಲ ನಾಲಿಗೆಯಾಗಿ ಸ್ವೀಕರಿಸುವದು. ಹಾಗೆಯೇ ಶರಣನು ಸರ್ವಾತ್ಮ ಭಾವದಿಂದ ಅರ್ಪಣ ಮಾಡುವನು. ಗಾಳಿ ಮೈಯೆಲ್ಲ ಮುಖವಾಗಿ ಬೀಸುವಂತೆ ಶರಣನ ಅನುಭಾವ ಪರಿಪೂರ್ಣವಾಗಿ ಬೆಳಗುವದು. ಇದುವೇ ಶಿವಯೋಗದ ಸತ್ಫಲ.

**ಉಪಸಂಹಾರ:**

ಭಾರತೀಯ ದರ್ಶನಗಳು ಜಗತ್ತನ್ನು ಮಿಥ್ಯಾ ರೂಪದಲ್ಲಿ ಕಂಡಿವೆ. ಜೀವಾತ್ಮನ ಶರೀರ ಶುದ್ಧಿಯ ದಿಶೆಯಲ್ಲಿ ಬಲಾತ್ಕಾರವಾದ ಹಠ ಮೊದಲಾದ ಯೋಗಗಳು ಮುನ್ನಡೆದಿವೆ. ಭಾರವಾದ ವಿಧಿ-ವಿಧಾನಗಳಿಂದ ದೇಹೇಂದ್ರಿಯಗಳನ್ನು ದಂಡಿಸುತ್ತವೆ. ಮುದ್ರಾದಿಗಳಂತೂ ಭಯಾನಕ ಸ್ಥಿತಿಯಲ್ಲಿ ಗೋಚರಿಸುತ್ತವೆ. ಯೋಗ ಸಿದ್ಧಿಯನ್ನು ಸಾಧಿಸುವವರಿಗಿಂತ ಯೋಗ ಭ್ರಷ್ಟರಾಗುವುದೇ ಹೆಚ್ಚು. ಭಗವದ್ಗೀತೆ ಪ್ರತಿಪಾದಿಸುವ ಕರ್ಮಯೋಗದಲ್ಲಿ ಕರ್ಮ ಮಾಡುವ ಅಧಿಕಾರವಿದೆ. ಆದರೆ ಫಲ ಬಯಸುವ ಹಕ್ಕಿಲ್ಲ. ದೇಹ ತ್ಯಜಿಸಿದ ಮೇಲೆ ಮುಕ್ತಿಯನ್ನು ಕಲ್ಪಿಸುತ್ತವೆ. ಈ ದರ್ಶನಗಳು, ಜ್ಞಾನ ಪ್ರಾಧಾನ್ಯತೆಯಿಂದಾಗಿ ಕರ್ಮಶೂನ್ಯತೆಯೂ ಬೆಳೆಯುತ್ತವೆ. ಅಲ್ಲದೆ, ನಿರಾಕಾರ ನಿರ್ಗುಣ ಈಶ್ವರನ ಸಾಕ್ಷಾತ್ಕಾರವೂ ಸುಲಭವಲ್ಲ. ಈ ಎಲ್ಲ ಮಾತುಗಳನ್ನು ಪರಿಶೀಲಿಸಿದರೆ; ವೀರಶೈವರ ದಾರ್ಶನಿಕ ದೃಷ್ಟಿಯು ಎಲ್ಲ ದರ್ಶನಗಳ ಉತ್ತಮವಾದ ಅಂಶಗಳನ್ನು ಅಂಗೀಕರಿಸಿ ತನ್ನದೇ ಆದ ವಿಶಿಷ್ಟತೆಯನ್ನು ಸಾಧಿಸಿದೆ. ವೈಜ್ಞಾನಿಕವಾಗಿ ಪರಿಶೀಲಿಸಿದೆ. ಧಾರ್ಮಿಕ ಸ್ವಾತಂತ್ರ್ಯ ಇಲ್ಲಿದೆ. ಕರ್ಮ ಭೂಮಿಯಾದ ಈ ಜಗತ್ತು ಶರಣನಿಗೆ ಮಿಥ್ಯವಲ್ಲ, ಕಾಯ ಹೇಯವಲ್ಲ, ಕೂಡಲ ಸಂಗಮದೇವರನೊಲಿಸಲು ಬಂದ ಪ್ರಸಾದ ಕಾಯವಿದು. ಲಿಂಗವನ್ನು ಕಂಗಳಿಂದ ಕಂಡು ಪೂಜಿಸಿ ಆನಂದಿಸಿ ಲಿಂಗವೇ ತಾನಾಗುವ ಭಾಗ್ಯ ಇಲ್ಲಿದೆ.

ಶರೀರ ಶುದ್ಧಿಯ ದೃಷ್ಟಿಯಿಂದ ಸಾಂಸ್ಕಾರಿಕ ಬಾಳು ಪ್ರಮುಖವಾಗಿದೆ. ಕಾಯ ಕೈಲಾಸವಾಗಬೇಕು. ಕಾಯಕದಲ್ಲಿ ಕೈಲಾಸ ಕಾಣಬೇಕು. ಇಲ್ಲಿ ವಿಧಿ-ವಿಧಾನಗಳು ಸುಜ್ಞಾನ-ಸತ್ಕ್ರಿಯೆಗಳ ಸಮನ್ವಯದಲ್ಲಿ ಸಾಗುವದರಿಂದ ಜಡವಾಗುವುದಿಲ್ಲ. ಲಿಂಗಧಾರಿ ಕಾಯಕನಿಷ್ಠನಾಗುವದರಿಂದ, ಅನ್ಯರ ಹಂಗಿನೊಳಗಾಗುವದಿಲ್ಲ. ಲಿಂಗವ ಪೂಜಿಸಿದ ಫಲ ನಿತ್ಯ ನಿತ್ಯ ಕೈಯ ಮೇಲೆ ಲಭ್ಯವಿದೆ. ಇದರಿಂದಾಗಿ ಸಾಮಾಜಿಕ ಸಮಾನತೆ ಹಾಗೂ ಆರ್ಥಿಕ ಭದ್ರತೆಯೊಂದಿಗೆ ಧಾರ್ಮಿಕ ಸ್ವಾತಂತ್ರ್ಯ ಲಭ್ಯವಾಗುವದು. ಶಿವಯೋಗ ಸಾಧನೆಯಿಂದಾಗಿ ಲಿಂಗಾಂಗ ಸಮರಸ ಸಮನಿಸುವದು. ಪೂರ್ಣತ್ವದ ಪರಿಣಾಮ ಪ್ರಾಪ್ತ ವಾಗುವದು. ಇದು ಶಿವಯೋಗದ ವೈಶಿಷ್ಟ್ಯವಾಗಿದೆ. ವಿಶ್ವ ಧರ್ಮಗಳನ್ನು ಬೀರುವ ಮಹಾದರ್ಶನ ಶಿವಯೋಗ.

## ಗ್ರಂಥ ಋಣ


೧) ಗುರುಕರುಣ ತ್ರಿವಿಧಿಯಲ್ಲಿ ವೀರಶೈವ ದಾರ್ಶನಿಕ ಸಿದ್ಧಾಂತ

೨) ಮಾನವ ಧರ್ಮ

೩) ವಚನ ಸಂಪದ —ಲೇ: ಶ್ರೀ ಜ. ಅ. ಸಂಸ್ಥಾನಮಠ ಮುಂಡರಗಿ

೪) ಭಾರತೀಯ ಸಂಸ್ಕೃತಿ ದರ್ಶನ —ಸಂ. ಅ. ನ. ಕೃಷ್ಣರಾಯ

೫) ಭಾರತೀಯ ದರ್ಶನ —ಪಂ. ಬಲದೇವ ಉಪಾಧ್ಯಾಯ

೬) ಶಿವಯೋಗ —ಪಂ. ನಾಗೇಶ ಶಾಸ್ತ್ರಿಗಳು

೭) ಶಿವಯೋಗ —ಅನ್ನದಾನೀಶ್ವರ ವಿರಕ್ತಮಠ

೮) ಬೆಳಗು —ಶಿವಯೋಗ ಮಂದಿರ ಸ್ಮರಣ ಸಂಪುಟ

೯) ಅಕ್ಕಮಹಾದೇವಿಯ ಯೋಗಾಂಗ ತ್ರಿವಿಧಿ

೧೦) ಕೈವಲ್ಯ ಪದ್ಧತಿ —ನಿಜಗುಣ ಶಿವಯೋಗಿ

೧೧) ಪಾರಮಾರ್ಥ ಪ್ರಕಾಶಿಕೆ — "

೧೨) ವಿವೇಕ ಚಿಂತಾಮಣಿ — "

೧೩) ವಚನ ಸಾಹಿತ್ಯ ಸಂಗ್ರಹ —ಸಂ: ಸ. ಶಿ. ಭೂಸನೂರಮಠ

೧೪) ಶಿವಯೋಗ ರಹಸ್ಯ —ಶ್ರೀ ಕುಮಾರಸ್ವಾಮಿಗಳು ನವಕಲ್ಯಾಣಮಠ

೧೫) ಶಿವಾದ್ವೈತ ದರ್ಶನ —ಡಾ: ಜ ಚ. ನಿ.

೧೬) ಶಿವಯೋಗ ಪ್ರದೀಪಿಕೆ —ಚನ್ನಸದಾಶಿವ ಶಿವಯೋಗಿ

೧೭) ಬಸವಣ್ಣನವರ ವಚನಗಳು —ಪ್ರಕಟನೆ: ಕ. ವಿ. ವಿ. ಧಾರವಾಡ

೧೮) ಅಲ್ಲಮ ಪ್ರಭುದೇವರ ವಚನಗಳು — "

೧೯) ಕೈವಲ್ಯ ಕಲ್ಪವಲ್ಲರಿ —ಷಡಕ್ಷರಿ ಕವಿಗಳು

೨೦) ಸಿದ್ಧಗಂಗಾ ಶ್ರೀ —ಸಿದ್ಧಗಂಗಾಮಠದ ಸ್ಮರಣ ಸಂಪುಟ

೨೧) ಸಿದ್ಧಾಂತ ಶಿಖಾಮಣಿ

# ಅಷ್ಟಾಂಗಯೋಗ-ಶಿವಯೋಗ

—ಶ್ರೀ ಕುಮಾರಸ್ವಾಮಿಗಳು-ನವಕಲ್ಯಾಣಮಠ

ಪುರಾತನ ಸೈಂಧವ ಸಂಸ್ಕೃತಿಯನ್ನು ಬಿತ್ತರಿಸುವಂತಹ ಮೊಹೆಂಜೋದಾರೋ, ಹರಪ್ಪಗಳ ಅಗೆತಗಳಲ್ಲಿ ದೊರೆತ ಅವಶೇಷಗಳಿಂದ ಯೋಗಕ್ಕೆ ಒಂದು ಪ್ರಾಚೀನ ಪರಂಪರೆಯುಂಟೆಂದು ಗೊತ್ತಾಗುತ್ತದೆ. ಅಲ್ಲಿಯ ಚಿತ್ರಲಿಪಿಗಳಲ್ಲಿ 'ಮೀನ್‌ಕಣ್' 'ಮುಂಕಣ್' 'ಬಿಡುಗಣ್' 'ಓರ್‌ಕಣ್'-ಈ ಪದಗಳು ದೊರೆಯುತ್ತವೆ. ಅವುಗಳಲ್ಲಿ ಮೀನ್‌ಕಣ್ ಪದವು ಬಹಳ ಮಹತ್ವದ್ದು, ಮೀನ್‌ಕಣ್ ಇದು ಅಚ್ಚಕನ್ನಡ ಪದ. ಇದರ ಸಂಸ್ಕೃತ ಅನುವಾದವೇ 'ಅನಿಮಿಷದೃಷ್ಟಿ' ಅನಿಮಿಷದೃಷ್ಟಿ ಪ್ರಯೋಗದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯುವ ವಿಧಾನ ಆಗ ಪ್ರಚಾರದಲ್ಲಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ. ಇಂತಹ ಸಾಕ್ಷಾತ್ಕಾರವನ್ನು ಪಡೆದವರಿಗೆ ಮೀನರೆಂದು ಸಂಬೋಧಿಸುತ್ತಿದ್ದರು. ಇವರು ಗುಹೆಯಲ್ಲಿ ವಾಸಿಸಿ, ತಪಸ್ಸನ್ನಾಚರಿಸುತ್ತಿದ್ದರೆಂದು ತಿಳಿದುಬಂದಿದೆ. ಈ ಮೀನರೇ ಶಿವಯೋಗದ ಆದ್ಯಪ್ರವರ್ತಕರೆಂದು ಹೇಳಲಾಗುತ್ತಿದೆ. ಇಂದಿಗೆ ಐದು ಸಾವಿರ ವರ್ಷಗಳ ಹಿಂದೆ ಶಿವಯೋಗವು ಅದಾವ ಸ್ವರೂಪದಲ್ಲಿತ್ತೆಂದು ಯಥಾರ್ಥವಾಗಿ ತಿಳಿದುಕೊಳ್ಳಲಿಕ್ಕೆ ಸಾಕಷ್ಟು ಸಾಧನ ಸಾಮಗ್ರಿಗಳು ನಮಗೆ ಉಪಲಬ್ಧವಿಲ್ಲ. ಆದರೆ ಇಷ್ಟು ಮಾತ್ರ ನಿಜ: ಶಿವಯೋಗದ ಮುಖ್ಯ ಲಕ್ಷಣವಾದ ಅನಿಮಿಷದೃಷ್ಟಿ ಅಥವಾ ಮೀನ್‌ಕಣ್ ಒಂದು ಯೋಗ ವಿಧಾನವಾಗಿ ಪ್ರಚಾರದಲ್ಲಿತ್ತು. ಅನಿಮಿಷದೃಷ್ಟಿಯೆಂದರೆ ಅರೆದೆರೆದದೃಷ್ಟಿ. ಕಣ್ಣು ಪೂರ್ಣಮುಚ್ಚಿಯೂ ಅಲ್ಲ; ತುಂಬಾ ತೆರೆದುದೂ ಅಲ್ಲ, ಅಂಥದೃಷ್ಟಿ. ಕಣ್ಣು ಪೂರ್ಣ ಮುಚ್ಚಿದರೆ, ಅಂತರ್ಲಕ್ಷ್ಯವಾಗುವುದು; ಕಣ್ಣು ತುಂಬಾ ತೆರೆದರೆ ಬಹಿರ್ಲಕ್ಷ್ಯವಾಗುವುದು. ಅನಿಮಿಷದೃಷ್ಟಿಯು ದೇಹದಲ್ಲಿ ದೀಪದಂತೆ ಮಧ್ಯ ಲಕ್ಷ್ಯವಾಗುವುದು; ಇದನ್ನೇ ಪ್ರಭುದೇವರು ತಮ್ಮದೊಂದು ವಚನದಲ್ಲಿ 'ಒಳ ಹೊರೆಗೆಂಬುದನ್ನರಿಯದೇ ಅನಿಮಿಷನಾಗಿರ್ದನಾಶರಣನು' ಎಂದು ಹೇಳಿದರು. ಈ ಅನಿಮಿಷದೃಷ್ಟಿಯೇ ಮುಂದೆ, ಶಾಂಭವೀಮುದ್ರೆಯಾಗಿ ಪರಿಣಮಿಸಿತು. "ಕಾಣುತಿದೆ ಚರಬಿಂದು ಶಾಂಭವೀಯ ಕೋಣೆಯಲಿ ಲಕ್ಷ್ಯವಿಟ್ಟಾಕ್ಷಣದಿ"-ಇನ್ನೊಂದು ಆಶ್ಚರ್ಯದ ಮಾತೆಂದರೆ, ಈ ಮಧ್ಯಲಕ್ಷ್ಯವೇ ಸಮಾಜ ಜೀವನದಲ್ಲಿ ಮಧ್ಯಮಾರ್ಗದ ತತ್ತ್ವ ಜ್ಞಾನವಾಗಿ, ಕಂಗೊಳಿಸಿತು. ಅದು ಬುದ್ಧನಲ್ಲಿ ಸುಳಿದೆಗೆದು ಬೆಳೆಯಿತು.

ಮೊಹೆಂಜೋದಾರೋ, ಹರಪ್ಪಗಳ ಅಗೆತಗಳಲ್ಲಿ ಹಲವಾರು ವಿಚಿತ್ರ ಶಾಸನಗಳು ತೊರೆತಿವೆ. ಒಂದು ಶಾಸನದಲ್ಲಿ ಹೀಗೆ ಉಲ್ಲೇಖವಿದೆ; 'ಬಾನತೇರ ಓರ್ ಮೀನಕಣ್ ವೇಳ್'

ಒಬ್ಬ ಮೀನ್ ಕಣ್ಣಿನವನು ಬಾನನ್ನು ಅಥವಾ ಆಗಸವನ್ನು ಮುಟ್ಟಿ ಆನಂದವನ್ನು ಪಡೆಯು ವನು. ಆಗಸವನ್ನು ಮುಟ್ಟಿ ಆನಂದವನ್ನು ಪಡೆಯುವುದೆಂದರೇನು? ಅನಿಮಿಷದೃಷ್ಟಿ ಯನ್ನು ಪಡೆದ ಆಧ್ಯಾತ್ಮ ಯೋಗಿಗಳು ಯೋಗ ಬಲದಿಂದ ಬ್ರಹ್ಮರಂಧ್ರವನ್ನು ಸೇರಿ, ಸಹಸ್ರಾರದಲ್ಲಿ ನೆಲಸಿನಿಂದ ಪರಮಾನಂದ ಪಯೋನಿಧಿಯೊಳೋಲಾಡುವರು, ಸಿಂಧು ನದಿಯ ಕೊಳ್ಳದಲ್ಲಿ ದೊರೆತ ಅವಶೇಷಗಳಲ್ಲಿ ಆಸನಬದ್ಧರಾಗಿ, ನಿಟಿಲ ಭ್ರೂಮಧ್ಯದಿ ನಟ್ಟನೋಟವುಳ್ಳ ಯೋಗಿಗಳು ಪ್ರತಿಮೆಗಳು ಉಪಲಬ್ಧವಾಗಿವೆ; ಎಂಬುದನ್ನು ಗಮನಿಸಿ ದರೆ, ಯೋಗಿಗಳು ಬಗೆಗೆ ಅಥವಾ ಯೋಗದ ಬಗೆಗೆ ಆದರಭಾವವು ಆಗಿನ ಜನ ಸಾಮಾನ್ಯರಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಯೋಗಿಗಳು ಪಡೆದ ಈ ದಿವ್ಯದೃಷ್ಟಿಗೆ 'ಮೀನ್‌ಕಣ್' ಎಂದು ಹೆಸರು.

ಮೀನದ ವಿಷಯವಾಗಿ ವಿವೇಚನೆ ಪ್ರಾಚೀನಕಾಲದಿಂದಲೂ ನಡೆದಿದೆ. ಭಾರತೀ ಯರು ಕಲ್ಪಿಸಿರುವ ದಶಾವತಾರಗಳಲ್ಲಿ ಮತ್ಸ್ಯಾವತಾರವೇ ಮೊದಲನೆಯದು. ಪುರಾಣದ ಈ ಕಲ್ಪನೆಯನ್ನು ಪ್ರಾಣಿಗಳ ಜೀವನದ ಇಲ್ಲವೆ ಮಾನವಬುದ್ಧಿಯ ವಿಕಾಸದ ಪರವಾಗಿ ವಿವರಿಸುವುದುಂಟು ಡಾರ್ವಿನ್‌ನು ಮಂಗನಿಂದ ಮಾನವನು ಉಂಟಾದನೆಂದು ಹೇಳಿದರೆ ಅಮೇರಿಕೆಯ ಡಾ. ಟಿನ್ಲೆ ಎಂಬವನು ಈ ಸಿದ್ಧಾಂತವನ್ನು ಅಲ್ಲಗಳೆದು, ಮೀನಿನಿಂದ ಮಾನವನು ಉದಯಿಸಿದನೆಂದು ಪ್ರತಿಪಾದನೆ ಮಾಡಿದ್ದಾನೆ. ಮಾನವಾವ ತಾರದ ಕಲ್ಪನೆಗೆ ಮತ್ಸ್ಯಾವತಾರವೇ ಮೊದಲು ಎಂಬ ಪೌರಾಣಿಕ ಕಲ್ಪನೆಗೆ ಈ ಮಾತಿನಿಂದ ಪುಷ್ಟಿ ದೊರೆಯುತ್ತದೆ. ಪ್ರಾಣಿಶಾಸ್ತ್ರದ ವಿಚಾರವೇನೇ ಇರಲಿ. ಮೀನ್ ಪ್ರಪಂಚದ ಮಥಿತಾರ್ಥದಲ್ಲಿ ಯೋಗಿಗಳು ಬೇರೊಂದು ರೀತಿಯಿಂದ ಕಂಡು ಹಿಡಿದಿ ದ್ದಾರೆ. ನೀರಿನಲ್ಲಿಯ ಮೀನವು, ತತ್ತಿಯನ್ನಿಟ್ಟು ಗಾಢವಾದ ಪ್ರೇಮದಿಂದ ಅದನ್ನು ನೋಡುವುದು. ಆಗ ಅದರಿಂದ ಮರಿಗಳು ಹೊರಬೀಳುವುವು. ತಾಯಿಯ ಕಟ್ಟಳ್ಕ ರಿಂದ ಕಂಡಾಗ ತತ್ತಿಯೊಡೆದು ಮೀನಿನ ಮರಿಯು ಹೊರಗೆಬರುವುದೆಂಬ ಮಾತಿನಲ್ಲಿ ಪ್ರೇಮದೃಷ್ಟಿಯೇ ಜೀವನಾಧಾರವೆಂಬ ರಹಸ್ಯವಡಗಿದೆ. ಪ್ರಪಂಚಕ್ಕೆ ಬಲವೇ ಮೂಲ ವಲ್ಲ; ಒಲವೇ ಮೂಲವಾಗಿದೆ. ಒಲವು ಪ್ರಪಂಚದ ಜೀವಾಳ. ಈ ಒಲವಿನಲ್ಲಿ, ಈ ಪ್ರೇಮದಲ್ಲಿ ಜೀವನದ ಸಾಮರಸ್ಯವಿದೆ. ಈ ಒಲವಿಗೆ, ಈ ಕಡುನೇಹದ ನೋಟಕ್ಕೆ ಅನಿಮಿಷದೃಷ್ಟಿ ಅಥವಾ ಮೀನ್‌ಕಣ್ ಎಂದು ಹೆಸರು; ಮೀನದ ಈ ಉಪಮೆಯನ್ನೇ ಇದಿರಿಟ್ಟುಕೊಂಡು ಶ್ರೀ ಗುರು ನೋಟ ಮಾತ್ರದಿಂದ ಶಿಷ್ಯನಿಗೆ ಶಕ್ತಿಪಾತವನ್ನು ಮಾಡಬಲ್ಲನೆಂಬ ಪ್ರತೀತಿಯು ಯೋಗಶಾಸ್ತ್ರದಲ್ಲಿ ರೂಢವಾಗಿದೆ.

ಅಲ್ಲಮಪ್ರಭುದೇವರು ಅನಿಮಿಷಯೋಗದಿಂದ ಅದೆಂತಹ ಉನ್ನತವಾದ ಅಧ್ಯಾತ್ಮಿಕ ನಿಲುವನ್ನು ಪಡೆದಿದ್ದರೆಂಬುದು ಶೂನ್ಯ ಸಂಪಾದನೆಯಲ್ಲಿ ಕಾಣುವ ಅನಿಮಿಷ ಯ್ಯನ ವರ್ಣನೆಯಿಂದ ದೃಗ್ಗೋಚರವಾಗುತ್ತದೆ.

'ಅಂತರಂಗದೊಳು ಗುರುಭಾವ ತಲೆದೋರುತಿರ್ಪ; ಅಲ್ಲಮಪ್ರಭು
ದೇವರು ತಮ್ಮ ಮೂಲ ಜ್ಞಾನದಿಂದ ಅನಿಮಿಷದೇವರ ಸಮಾಧಿ
ಯನ್ನು ಕಂಡು ಒಳಪೊಕ್ಕುನೋಳ್ಪಾಗಳು ಒಂದು ದೀಪ್ತಿ
ಬೆಳಗುತಿರೆ, ಕಂಡು, ಸ್ವಸ್ಥಪದ್ಮಾಸನದಲ್ಲಿ ಕುಳ್ಳಿರ್ದು, ಕರಸ್ಥಳ
ದೊಳು ಅಮೃತ ಲಿಂಗಮಂ ಪಿಡಿದು, ಆಲಿಂಗದೊಳು ಆಲಿಂಗನವಾಗಿ,
ಕರಣಂಗಳೆಲ್ಲ ನಿಃಕರಣವನೈದಿ, ಭಾವನಿರ್ಭಾವದೊಳನಿಂದು,
ನೋಟನೆಟ್ಟು, ದೃಷ್ಟಿಪ್ಥಿಸಿ, ಎವೆಹಳಚದೆ, ಅರಿವುಕರಿಗೊಂಡು
ತಾನೆಂಬುದು ತರಹರವಾಗಿ, ನೀನೆಂಬುದು ನಿಃಪತಿಯಾಗಿ, ಉಭಯ
ಸಂದು ಅಡಗಿ ಸ್ವಯವಾಗಿ, ಮನೋಲಯ ಸ್ಥಾನದೊಳು ಸರ್ವ
ಚೈತನ್ಯವನೈದಿ, ತನುಪರಮಕಾಷ್ಟಿಯೊಳು ಪರವಸವಾಗಿ, ತನ್ನ
ನಿಜ ಸಮಾಧಿಯೊಳು ಮೂರ್ತಿಗೊಂಡಿರ್ಪಸದ್ಗುರುವಂಕಂಡು'

ಈ ವಚನದಲ್ಲಿ ಮೀನ್ ಕಣ್ಣಿನ ನಿಲವು ವ್ಯಕ್ತವಾಗುವುದಲ್ಲದೆ, ವೀರಶೈವರು ಕರಸ್ಥಲದಿ ಲಿಂಗವ ಹಿಡಿದು ಸಂಪಾದಿಸಿದ ಶಿವಯೋಗದ ರಹಸ್ಯವು ವಿದಿತವಾಗುವುದು.

ಭಾರತೀಯ ತತ್ತ್ವಶಾಸ್ತ್ರದಲ್ಲಿ ಷಡ್‌ದರ್ಶನಗಳಿಗೆ ಒಂದು ಮಹತ್ವದ ಸ್ಥಾನ ವಿದೆ. ಆ ದರ್ಶನಗಳಲ್ಲಿ ಒಂದಾದಪಾದ, ಸಾಧನಪಾದ, ವಿಭೂತಿಪಾದ ಮತ್ತು ಕೈವಲ್ಯಪಾದವೆಂಬ ನಾಲ್ಕು ಪಾದಗಳಲ್ಲಿ ಈ ಸೂತ್ರವನ್ನು ವಿಭಾಗಿಸಲಾಗಿದೆ.

ಯೋಗವೆಂದರೆ ಚಿತ್ತವೃತ್ತಿ ನಿರೋಧವೆಂದು ವ್ಯಾಖ್ಯಾನ ಮಾಡಲಾಗಿದೆ. ಪ್ರಮಾಣಾದಿ ವೃತ್ತಿಗಳಿಗೆ ವಶವರ್ತಿಯಾದ ಕಾರಣ ದೃಷ್ಟಾ ಅಥವಾ ಆತ್ಮನು ವೃತ್ತಿ ಸಾರೂಪ್ಯವನ್ನು ಹೊಂದುತ್ತಾನೆ. ಆದುದರಿಂದಾಗಿ ಅವನು ಬಂಧನಕ್ಕೊಳಗಾಗುತ್ತಾನೆ. ವೃತ್ತಿಗಳನ್ನು ನಿರೋಧಿಸುವುದರಿಂದ ವೃತ್ತಿಸಾರೂಪ್ಯದ ನಿರೋಧವೂ ಲಭಿಸುತ್ತದೆ. ಆಗ ಆತ್ಮನು ತನ್ನ ಸ್ವರೂಪ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಈ ಸ್ವರೂಪ ಸಾಕ್ಷಾತ್ಕಾರಕ್ಕೆ ಯೋಗವೆಂದು ಹೆಸರು. ಅಭ್ಯಾಸ ವೈರಾಗ್ಯಗಳು ವೃತ್ತಿಯನ್ನು ನಿರೋಧಿಸುವ ಉಪಾಯಗಳಿವೆ. ಅಭ್ಯಾಸ ಕಾಲದಲ್ಲಿ ಉತ್ತರೋತ್ತರ ಶ್ರದ್ಧಾ, ವೀರ್ಯ, ಸ್ಮೃತಿ ಅಥವಾ ಪ್ರಜ್ಞೆ. ಇವುಗಳ ಅಭಿವ್ಯಕ್ತಿಯುಂಟಾಗುತ್ತದೆ. ಉತ್ಕಟವಾದ ಇಚ್ಛೆಯುಳ್ಳ ಸಾಧಕವೇ ಯೋಗಾಭ್ಯಾಸದ ಅಧಿಕಾರಿಯಾಗಬಲ್ಲನು. ಅಭ್ಯಾಸ ವೈರಾಗ್ಯ ಗಳಿಂದ ವೃತ್ತಿಗಳ ನಿರೋಧವು ಲಭಿಸುವಂತೆ, ಈಶ್ವರ ಭಕ್ತಿಯಿಂದಲೂ, ಅದು ಲಭಿಸಿ ಸುತ್ತದೆ. ಪಂಚಕ್ಲೇಶಾದಿಗಳಿಲ್ಲದ ಪುರುಷ ವಿಶೇಷನು ಈಶ್ವರನು. ಅವನು ಎಲ್ಲದರ ಆಧಾರವಾಗಿದ್ದು ಕಾಲಾತೀತನಾಗಿದ್ದಾನೆ. ಓಂಕಾರವು ಇಂಥ ಈಶ್ವರವಾಚಕ ಶಬ್ದ ವಾಗಿದೆ. ಓಂಕಾರ ಅಥವಾ ಪ್ರಣವವನ್ನು ಭಾವಪೂರ್ಣವಾಗಿ ಜಪಿಸುವುದರಿಂದ ಈಶ್ವರ ಸಾಕ್ಷಾತ್ಕಾರವಾಗುತ್ತದೆ. ಸಾಧನ ಕಾಲದಲ್ಲಿ ರೋಗ ರುಜಿನಗಳು ಇನ್ನಿತರ

ಅಡೆತಡೆಗಳು ಚಿತ್ತವನ್ನು ವಿಕ್ಷೇಪಗೊಳಿಸುತ್ತವೆ. ಈ ಅಡೆತಡೆಗಳ ನಿವಾರಣೆಗಾಗಿ, ಏಕ ತತ್ತ್ವದ ಅಭ್ಯಾಸದ ಅವಶ್ಯಕತೆವಿದೆ. ಮೈತ್ರಿ, ಕರುಣಾ, ಮುದಿತಾ, ಉಪೇಕ್ಷಾ, ಇತ್ಯಾದಿ ಭಾವನೆಗಳಿಂದ, ಪ್ರಾಣಾಯಾಮದಿಂದ, ಸತ್ಪುರುಷರ ಸ್ಮರಣೆಯಿಂದ, ಸ್ವಪ್ನ ಹಾಗೂ ನಿದ್ರೆಗಳ ಯಥಾರ್ಥವಾದ ಜ್ಞಾನದಿಂದ ಇವುಗಳಲ್ಲಿ ಯಾವುದಾದರೊಂದು ಸಹಾಯದಿಂದಲಾದರೂ ಪ್ರಗತಿಯಾಗುತ್ತಾ ಹೋದಂತೆ, ಅಲೌಕಿಕ ವಿಷಯಗಳ ಜ್ಞಾನವಾಗುವುದು. ಆ ಅಲೌಕಿಕ ವಿಷಯಗಳಲ್ಲಿ ನೆಲೆನಿಲ್ಲದೆ ಸಾಧನವು ಮುಂದುವರೆಯುತ್ತಾ ಹೋದರೆ ಆತ್ಮಸಾಕ್ಷಾತ್ಕಾರವು ಸಂಭವಿಸುವುದು. ಅಲೌಕಿಕ ವಿಷಯಗಳ ಸಾಕ್ಷಾತ್ಕಾರವೇ ಸಬೀಜ ಅಥವಾ ಸಂಪ್ರಜ್ಞಾತ ಸಮಾಧಿಯೆಂದೂ ಆತ್ಮ ಸಾಕ್ಷಾತ್ಕಾರವೇ ನಿರ್ಬೀಜ ಅಥವಾ ಅಸಂಪ್ರಜ್ಞಾತ ಸಮಾಧಿಯೆಂದೂ ಹೇಳಲ್ಪಡುವುದು.

ಪತಂಜಲಿಪ್ರಣೀತ ಯೋಗದರ್ಶನವು ಹಿರಣ್ಯ ಗರ್ಭದಿಂದ ಉಪದೇಶಿಸಲಾದ ಯೋಗಶಾಸ್ತ್ರವೆಂದು ಪರಿಗಣಿಸಲ್ಪಡುತ್ತದೆ. ಹಿರಣ್ಯಗರ್ಭನು ಪತಂಜಲಿಗಿಂತ ಪೂರ್ವದವನಾದರೂ, ಅದೆಷ್ಟು ಶತಮಾನಗಳಿಂದ ಪೂರ್ವದವನೆಂದು ನಿರ್ದಿಷ್ಟವಾಗಿ ಹೇಳು ಬರುವಂತಿಲ್ಲ. ಹಿರಣ್ಯಗರ್ಭನು ಯೋಗಸೂತ್ರಗಳನ್ನು ರಚಿಸಿದ್ದನೆಂದೂ, ಆ ಸೂತ್ರಗಳು ಇಂದು ನಮಗೆ ಉಪಲಬ್ಧವಿಲ್ಲದಿದ್ದರೂ ಪತಂಜಲಿಯ ಕಾಲಕ್ಕೆ ಅವು ಉಪಲಬ್ಧವೆಂದೂ, ಪತಂಜಲಿಯು ಅವುಗಳನ್ನು ಆದರಿಸಿಯೇ ತನ್ನ ಅಷ್ಟಾಂಗಯೋಗದರ್ಶನವನ್ನು ರಚಿಸಿದನೆಂದೂ ಪಂಡಿತರ ಅಭಿಪ್ರಾಯವಿದೆ. ತೈತ್ತಿರೀಯ ಉಪನಿಷತ್ತಿನಲ್ಲಿ ಪ್ರಾಚೀನ ಯೋಗದ ಉಲ್ಲೇಖವಿದೆ. ಈ ಪ್ರಾಚೀನ ಯೋಗವು ಹಿರಣ್ಯ ಗರ್ಭನ ಯೋಗವೆಂದೇ ನಿಷ್ಕರ್ಷೆಯಾದರೆ ಹಿರಣ್ಯ ಗರ್ಭನ ಯೋಗಕ್ಕೆ ಮೂರು ಸಾವಿರ ವರ್ಷಗಳ ಪ್ರಾಚೀನತೆಯಿದ್ದ ಹಾಗಾಗುತ್ತದೆ.

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಇವೇ ಯೋಗದ ಅಷ್ಟಾಂಗಗಳು, ಇವುಗಳಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಇವು ಬಾಹ್ಯವೆಂದೂ, ಧಾರಣ, ಧ್ಯಾನ, ಸಮಾಧಿ–ಈ ಮೂರೂ ಅಭ್ಯಂತರವೆಂದೂ ವಿಭಾಗಿಸಲಾಗಿದೆ. ಅಭ್ಯಂತರ ಅಂಗಗಳಾದ ಧಾರಣ, ಧ್ಯಾನ, ಸಮಾಧಿಗಳನ್ನು ಶಿವಯೋಗವು ಆತ್ಮಸಾತ್ ಮಾಡಿಕೊಂಡಿದೆ. ಪತಂಜಲಿಗನುಸಾರವಾಗಿ ಧಾರಣ ಎಂದರೆ ದೇಶಬಂಧಚಿತ್ತಸ್ಯಧಾರಣಾ, ದೇಹದ ಯಾವುದಾದರೊಂದು ಭಾಗದಲ್ಲಿಯಾಗಲಿ (ಭ್ರೂಮಧ್ಯ, ನಾಸಿಕಾಗ್ರ, ಹೃದಯ ಇತ್ಯಾದಿ) ಇಲ್ಲವೆ ದೇಹದಿಂದ ವ್ಯತಿರಿಕ್ತವಾದ ಯಾವುದಾದರೊಂದು ವಸ್ತುವಿನ ಮೇಲಾಗಲಿ ಲಕ್ಷ್ಯವನ್ನು ಕೇಂದ್ರೀಕರಿಸುವುದೇ ಧಾರಣಯೆನಿಸಿಕೊಳ್ಳುವುದು. ಆದರೆ ಶಿವಯೋಗದಲ್ಲಿ ಲಿಂಗವನ್ನು ಧರಿಸುವುದೇ ಧಾರಣ. ಹೀಗೆ ಧರಿಸಿದ ಲಿಂಗವನ್ನು ಕರಸ್ಥಲದಲ್ಲಿಟ್ಟು ನಿರ್ನಿಮಿಷದೃಷ್ಟಿಯಿಂದ ನಿರೀಕ್ಷಿಸುವುದೇ ಧ್ಯಾನ. ಈ ಅವಿರಳ ಧ್ಯಾನದಿಂದ ಇಂದ್ರಿಯಂಗಳಿಗಾವರಿಸಿ,

ತಮಸ್ ಅಳಿದು ತೇಜಸ್ಸು ಬೆಳಗಲನುವಾಗುವುದು. 'ಅರೆಮುಗಿದ ಕಣ್ಣುಗಳೆರಡರ ತಾರೆಗಳ ನಡುವೆ ತರುಣಿ ಶಶಿ ಶಿಖಿಬಿಂಬ ಸೂಕ್ಷ್ಮರಂಧ್ರದೊಳು ಪೊರೆಪೊಣ್ಮೆ ಕೋಟಿ ಮಿಂಚುಗಳಂತೆ ಝಗಝಗಿಸಿ ಮೆರೆವ ಬಿಂದು ಪ್ರಭೆಯನೋಳ್ವ ಸಂತಸದ' ಈ ಬಿಂದು ಪ್ರಭೆ ಅಥವಾ ಚಿತ್ಕಳೆಯಲ್ಲಿ ಮನವಳಿದು ಬೆಳಗಿದ ಉನ್ಮನಿಜ್ಯೋತಿಯಲ್ಲಿ ಒಡವೆರೆದು ಒಂದಾಗುವುದೇ ಸಮಾಧಿ. ಶಿವಯೋಗದಲ್ಲಿ ಧಾರಣ ಧ್ಯಾನ ಸಮಾಧಿಗಳ ಇಂಗಿತವು ಇಂತಿವೆ.

ಮಹತ್ ಇಲ್ಲವೆ ಬುದ್ಧಿಗೆ ಹಿರಣ್ಯಗರ್ಭವೆಂಬ ಹೆಸರಿದೆ. ಹಿರಣ್ಯಗರ್ಭನಿಂದ ಈ ಯೋಗವು ಆರಂಭವಾಯಿತೆಂದರೆ ಬುದ್ಧಿಯಿಂದ ಆರಂಭವಾಯಿತು ಎಂದಹಾಗೆ. ಹಿರಣ್ಯಗರ್ಭನ ಯೋಗವಿದ್ದಂತೆ ಅನಿಮಿಷಯೋಗವೂ ಒಂದಿದೆ. ಹಿರಣ್ಯಗರ್ಭನ ಯೋಗವು ಎಲ್ಲಿ ಮುಗಿಯುವದೋ ಅಲ್ಲಿಂದಲೇ ಅನಿಮಿಷ ಯೋಗವು ಪ್ರಾರಂಭವಾಗುವುದು. ಚಿತಿ+ಶಕ್ತಿಯಿಂದ ಹಿರಣ್ಯಗರ್ಭನ ಯೋಗವು ಕೊನೆಗಂಡರೆ, ಅದೇ ಚಿತಿ+ಶಕ್ತಿ ಇಲ್ಲವೆ ಚಿತ್‌ಶಕ್ತಿಯಿಂದ ಅನಿಮಿಷಯೋಗವು ಅಥವಾ ಶಿವಯೋಗವು ಪ್ರಾರಂಭವಾಗುತ್ತದೆ. 'ಪುರುಷಾರ್ಥ ಶೂನ್ಯನಾಂ ಗುಣಾನಾಂ ಕೈವಲ್ಯಂ, ಸ್ವಪ್ರತಿಷ್ಠಾವಾ ಚಿತಿ, ಶಕ್ತಿರಿತಿ' ಜೀವನಿಗೆ ಭೋಗ ಮತ್ತು ಮೋಕ್ಷ ಒದಗಿಸಿಕೊಟ್ಟ ತ್ರಿಗುಣಗಳಿಗೆ ಮತ್ತೇನನ್ನೂ ಸಾಧಿಸಿಕೊಡುವ ಪ್ರಯೋಜನ ಉಳಿಯಲಿಲ್ಲವಾದ್ದರಿಂದ, ಆ ತ್ರಿಗುಣಗಳು ಪುರುಷಾರ್ಥದಿಂದ ಶೂನ್ಯವಾಗಿ ತಮ್ಮ ಉಪಾದಾನವಾದ ಪ್ರಧಾನದಲ್ಲಿ ಲೀನವಾಗುವುವು. ಈ ವಿಲಯವೇ ಪ್ರತಿ ಪ್ರಸವವೆನಿಸುತ್ತವೆ. ತತ್ಪರಿಣಾಮವಾಗಿ ಚೇತನಪುರುಷನು ವೃತ್ತಿಗಳೊಡನೆ ಸಾರೂಪ್ಯವನ್ನು ಪಡೆಯದೆ ತನ್ನ ಸ್ವರೂಪದಲ್ಲಿ ಪ್ರತಿಷ್ಠಿತನಾಗುವನು. ಇದೇ ಕೈವಲ್ಯ.

ಹಿರಣ್ಯಗರ್ಭನ ಹಾಗೂ ಶಿವಯೋಗಿಗಳ ವಿವರಣೆಯನ್ನು ಅಲ್ಲಮಪ್ರಭುದೇವರು ತಮ್ಮದೊಂದು ವಚನದಲ್ಲಿ ಬಹಳ ಮಾರ್ಮಿಕವಾಗಿ ಮಾಡಿದ್ದಾರೆ.

'ಅಳಿದುಕೂಡುವುದು ಒಂದು ಯೋಗ, ಅಳಿಯದೆಕೂಡುವುದು ಒಂದು
ಯೋಗ; ಈ ಎರಡು ಯೋಗಗಳಿಗೆ ಆಳಿಯದೆಕೂಡುವ
ಯೋಗವರಿವುದು ಗುಹೇಶ್ವರಾ.'

ಅಳಿದುಕೂಡುವ ಯೋಗವಾಗಲಿ ಉಳಿದುಕೂಡುವ ಯೋಗವಾಗಲಿ ಎರಡೂ ವೃತ್ತಿಗಳೇ ಎಂದು ಹಗುರವಾಗಿ ಮಾತನಾಡಬಹುದು. ಹಾಗಲ್ಲ, ಅವೆರಡೂ ವೃತ್ತಿಗಳಿಂದಲೂ ಅವುಗಳ ಅತ್ಯಂತಿಕ ಪರಿಣಾಮಕಾರಿಯಾದಲ್ಲಿ ಮಹತ್ತರದಲ್ಲಿ ಭೇದವಿದೆ. ಅಳಿದು ಕೂಡುವುದರಿಂದ ಪ್ರಗತಿಗೆ ಆಸ್ಪದವಿಲ್ಲ. ಉಳಿದು ಕೂಡುವದರಿಂದ ಪ್ರಗತಿಗೆ ಸಾಕಷ್ಟು ಇಂಬಿದೆ. ಚಿತ್‌ಶಕ್ತಿಯಿಂದ ಆರಂಭವಾಗುವ ಅನಿಮಿಷಯೋಗವು ಅಥವಾ ಶಿವಯೋಗವು ದೇಹ, ಪ್ರಾಣ, ಮನ, ಬುದ್ಧಿಗಳನ್ನು ಅಲ್ಲಗಳೆಯದೇ ಅವೆಲ್ಲವುಗಳನ್ನು ಪರಿಶುದ್ಧಗೊಳಿಸುವುದು. ಚಿತ್‌ಶಕ್ತಿಯು ಸೋಂಕಿನಿಂದ ಅದೆಲ್ಲ ಪಾರದರ್ಶಕವಾಗುವುದು. ಹೀಗೆ ಪಾರದರ್ಶಕವಾದ ಅಂತಃಕರಣದಲ್ಲಿ ಆತ್ಮನ ಶಕ್ತಿಗಳೆಲ್ಲ ಪ್ರತಿಫಲಿಸುವುವು. ಹಿರಣ್ಯ

ಗರ್ಭನ ಯೋಗದಲ್ಲಿ ಪ್ರತಿಪ್ರಸವವಿದ್ದರೆ ಅನಿಮಿಷನ ಯೋಗದಲ್ಲಿ ಪ್ರತಿಫಲನವಿದೆ. ಈ ಅನಿಮಿಷ ಯೋಗವು, ಈ ಶಿವಯೋಗವು ಆಗಮಗಳಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಪ್ರತಿಪಾದಿಸಲ್ಪಟ್ಟಿವೆ. ಆದರೆ ಶ್ರೀ ಬಸವಾದಿ ಶರಣರು ಶಿವಯೋಗಕ್ಕೆ ಸುವ್ಯವಸ್ಥಿತ ಸ್ವರೂಪವನ್ನು ಕೊಡಲಿಕ್ಕೆ ಪ್ರಯತ್ನಪಟ್ಟರು. ಇಷ್ಟೇ ಅಲ್ಲ. ಅವರ ಕೈಯಲ್ಲಿ ಅದು ಒಂದು ಮೂರ್ತಸ್ವರೂಪವನ್ನು ತಳೆಯಿತು.

ಯೋಗ ಪರಂಪರೆಯಲ್ಲಿ ಹಲವಾರು ಯೋಗಗಳ ಉಲ್ಲೇಖವಿದ್ದರೂ ಹಠಯೋಗ ಮತ್ತು ರಾಜಯೋಗಗಳು ಮಹತ್ವದವುಗಳೆಂದು ಪರಿಗಣಿಸಲಾಗಿದೆ. ಹಠಯೋಗ ಪ್ರದೀಪಿಕೆಯು ಹಠಯೋಗದ ಸಕೀಲವನ್ನು ತಿಳಿಸಿದರೆ ಪಾತಂಜಲಿ ಯೋಗಸೂತ್ರವು ರಾಜಯೋಗದ ರಹಸ್ಯವನ್ನು ಬೋಧಿಸುತ್ತದೆ. ವೃತ್ತಿಗಿಂತ ಪ್ರಾಣವು ಅಧಿಕವೆಂದೂ ವೃತ್ತಿಯು ಪ್ರಾಣವನ್ನು ಹಿಂಬಾಲಿಸುವುದೆಂದೂ ಹಠಯೋಗವು ತಿಳಿಸುವದು. ಪ್ರಾಣ ನಿರೋಧವು ಹಠಯೋಗದ ತಿರುಳಾದರೆ ವೃತ್ತಿನಿರೋಧವು ರಾಜಯೋಗದ ರಹಸ್ಯವಾಗಿದೆ. ಆದರೆ ಶಿವಯೋಗವು ಇವೆರಡಕ್ಕಿಂತಲೂ ಭಿನ್ನವಾಗಿದೆ. ಅದು ನೇರವಾಗಿ ಚಿತ್‌ಶಕ್ತಿ ಇಲ್ಲವೆ ಶುದ್ಧ ಸಂಕಲ್ಪದಿಂದ ಆರಂಭವಾಗುತ್ತದೆ. ಈ ಚಿತ್‌ಶಕ್ತಿಯು ಪ್ರಾಣ ಹಾಗೂ ವೃತ್ತಿಗಳಿಗಿಂತ ಭಿನ್ನವಾಗಿ, ಅವೆರಡಕ್ಕಿಂತ ವಿಶೇಷವಾಗಿರುತ್ತದೆ. ಈ ಸೃಷ್ಟಿಯಾಗಲಿ, ಇದರಲ್ಲಿ ಕಂಡುಬರುವ ವಿವಿಧ ತತ್ತ್ವಗಳಾಗಲಿ ಚಿತ್‌ಶಕ್ತಿಯ ಅವಿರ್ಭಾವವೇ ಹೊರತು ಆಭಾಸವಲ್ಲ. ಕ್ರಮಿಕ ತರಗತಿಯಿಂದ ಈ ಸೃಷ್ಟಿಯಲ್ಲಿ ಏಳು ಮುಖ್ಯವಾದ ತತ್ತ್ವಗಳಿರುತ್ತವೆ. ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಆತ್ಮ, ಪರಮಾತ್ಮ ಇವೇ ಆ ತತ್ತ್ವಗಳು, ಪೃಥ್ವಿಯಲ್ಲಿ ಧಾರಣಶಕ್ತಿ ಇದೆ, ಆತ್ಮನಲ್ಲಿ ಬುದ್ಧಿ ಶಕ್ತಿ ಇದೆ. ಪರಮಾತ್ಮನಲ್ಲಿ ಚಿಚ್ಛಕ್ತಿ ಇದೆ. ವಾಯುವಿನಲ್ಲಿ ಸಂಚಲನಶಕ್ತಿ ಇದೆ. ಆಕಾಶದಲ್ಲಿ ವ್ಯಾಪಕಶಕ್ತಿ ಇದೆ. ಆತ್ಮನಲ್ಲಿ ಬುದ್ಧಿ ಶಕ್ತಿ ಇದೆ. ಪರಮಾತ್ಮನಲ್ಲಿ ಚಿಚ್ಛಕ್ತಿ ಇದೆ. ಶಿವಯೋಗವು ಈ ಚಿತ್‌ಶಕ್ತಿಯಿಂದ ಆರಂಭವಾಗಿ ಕ್ರಮೇಣವಾಗಿ ಎಲ್ಲದರ ಶಕ್ತಿಗಳನ್ನು ಉನ್ನತಗೊಳಿಸುತ್ತಾ ಸೃಷ್ಟಿಯ ಸೊಬಗನ್ನು ಸವಿಯುಗಲಿಸುವುದು. ಆಗ ಸೃಷ್ಟಿಯು ಬರಿಯ ಕಲೆಯಲ್ಲ ಚಿತ್‌ಕಳೆಯಾಗಿ ಕಂಗೊಳಿಸುವುದು. ಇಂತಹ ಚಿತ್‌ಕಳೆಯನ್ನು ಅಂಗಕ್ಕೆ ಅಳವಡಿಸಿಕೊಳ್ಳುವ ವಿಧಾನವನ್ನು ತಿಳಿಸಿ ಹೇಳುವುದು ಶಿವಯೋಗ.

●

# ನಿಗಮಾಂತ–ಆಗಮಾಂತ ತೌಲನಿಕ ವಿಚಾರ

—ಪಂ. ನಾಗಭೂಷಣ ಶಾಸ್ತ್ರಿಗಳು

**ಪ್ರಾಕ್‌ಕಥನ:**

ಭಾರತವು ವಿಶ್ವವ್ಯಾಪಕ ಕೀರ್ತಿ ಪಡೆದದ್ದು ಆಧ್ಯಾತ್ಮಿಕ ಸಂಸ್ಕೃತಿಯ ಪ್ರಭಾವದಿಂದಲೇ! ಭಾರತೀಯರು ಮೊದಲಿನಿಂದಲೂ ಭೌತಿಕ ಕೃಷಿಯೊಡನೆ ಆಧ್ಯಾತ್ಮಿಕ ಕೃಷಿಯಲ್ಲಿ ತೊಡಗಿಕೊಂಡವರಾಗಿದ್ದವರು. ಅಂತೆಯೇ ಭಾರತದಲ್ಲಿದ್ದ ೩೩ ಕೋಟಿ ಜನರೆಲ್ಲ ದೇವತೆಗಳೆಂದು ಹೇಳಿಸಿಕೊಳ್ಳುವಂತಾದರು. ಭಾರತವು ತನ್ನ ಹೆಸರನ್ನು "ಭಾಯಾಂ ರತಃ ಭಾರತಃ ಭಾ–ಜ್ಞಾನ, ರತ ಆಸಕ್ತವಾಗಿರುವದು" ಎಂದು ಅರ್ಥಪೂರ್ಣ ಮಾಡಿಕೊಂಡಿರುವದು.

ಯಾವ ಜನಾಂಗದ ಪ್ರವೃತ್ತಿಯು ಸದಾ ವಿಷಯೋನ್ಮುಖವಾಗಿರುವದೋ, ಆ ಜನಾಂಗವು ಪರಿಭವದ ಕಾಟದಿಂದ ದೂರಾಗಿರುವದು ತಪ್ಪದು.

ಆಧ್ಯಾತ್ಮಿಕ ಜೀವನದಲ್ಲಿ ಪರಾಕಾಷ್ಠವನ್ನು ಮುಟ್ಟಿದ ಮಹಾನುಭಾವಿಗಳ ಅನುಗ್ರಹದಿಂದಲೇ ಪ್ರಪಂಚದ ಜನರೆಲ್ಲ ಜ್ಞಾನಿಗಳೆನಿಸಿಕೊಳ್ಳುವಂತಾದರು ಎಂಬುದನ್ನು 'ಮನು' ಎಂದೋ ಹೇಳಿಬಿಟ್ಟಿರುವನು.

"ಏತದ್ದೇಶ ಪ್ರಸೂತಸ್ಯ ಸಕಾಶಾದಗ್ರ ಜನ್ಮನಃ।
ಸ್ವಂಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ॥"

ಎಂಬುದೇ ಆ ಉಕ್ತಿ.

ಭಾರತದಲ್ಲಿ ಷಡ್‌ದರ್ಶನಗಳು ಪ್ರಸಿದ್ಧವಾಗಿರುವವು. ಅವನ್ನು ರಚಿಸಿದ ಋಷಿಗಳು ಆರು ಜನ: ೧. ಗೌತಮ, ೨. ಕಣಾದ, ೩. ಕಪಿಲ, ೪. ಪತಂಜಲಿ, ೫. ಜೈಮಿನಿ, ೬. ಬಾದರಾಯಣ.

ಷಡ್‌ದರ್ಶನಗಳು– ೧. ನ್ಯಾಯ, ೨. ವೈಶೇಷಿಕ, ೩. ಸಾಂಖ್ಯ, ೪. ಯೋಗ, ೫. ಪೂರ್ವಮೀಮಾಂಸಾ, ೬. ಉತ್ತರ ಮೀಮಾಂಸಾ.

ಇವೆಲ್ಲ ದರ್ಶನಗಳು ಅಧಿಕಾರಿಗಳ ತಾರತಮ್ಯದ ಮೇಲೆಯೇ ರಚಿತವಾಗಿರುವವು. ಕೊನೆಯದಾದ ದರ್ಶನವೇ "ವೇದಾಂತ" ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇಲ್ಲಿ ವೇದಾಂತ ಎಂದ ಕೂಡಲೇ ಬ್ರಹ್ಮಾದ್ವೈತ (ಮಾಯಾವಾದ) ಎಂದೇ ಬಹುಜನರ ತಿಳುವಳಿಕೆಯಾಗಿರುವದು. ಈ ಅದ್ವೈತ ದರ್ಶನವು ಜನತೆಯಲ್ಲಿ ಬಹಳ ಪ್ರಚಾರವಾಗಿರುವದೇ ಇದಕ್ಕೆ ಕಾರಣ. ಬ್ರಹ್ಮಸೂತ್ರಗಳನ್ನು ಅಭ್ಯಾಸಮಾಡಿ ನೋಡಿದವರಿಗೆ

ಬಾದರಾಯಣನಿಗಿಂತ ಪೂರ್ವದಲ್ಲಿಯೇ ಅನೇಕ ಜನ ಆಚಾರ್ಯರು ವೇದಾಂತ ತತ್ತ್ವ ಮೀಮಾಂಸೆಯಲ್ಲಿ ತೊಡಗಿಕೊಂಡಿದ್ದರೆಂಬುದು ಸುಸ್ಪಷ್ಟವಾಗುವದು. ಅವರಲ್ಲಿ ಅತ್ರೇಯ, ಅಶ್ಮರಥ್ಯ, ಔಡಲೋಮಿ, ಕಾಷ್ಣಾ‌ರ್ಜಿಯ, ಕಾಶಕೃತ್ಸ್ನ, ಜೈಮಿನಿ ಬಾದರಿ ಮೊದಲಾದವರ ಹೆಸರುಗಳು ಕಂಡುಬರುವವು.

ವೇದಾಂತಸೂತ್ರಗಳನ್ನು ರಚಿಸಿದ ಬಾದರಾಯಣ ಕ್ರಿ. ಪೂ. ೨೦೦ ವರ್ಷದವ ನೆಂದು ಇತಿಹಾಸಜ್ಞರು ಹೇಳುವರು. ಔಪನಿಷದ ಸಿದ್ಧಾಂತದ ಬಗೆಗೆ ಉಂಟಾಗಿದ್ದ ವಿರೋಧಾಭಾಸವನ್ನು ಪರಿಹರಿಸುವದಕ್ಕಾಗಿಯೇ ವೇದಾಂತ ಸೂತ್ರಗಳು ಉದಯಿಸ ಬೇಕಾಯಿತು. ಇವುಗಳ ಮೇಲೆ ಆಚಾರ್ಯರೆಲ್ಲರೂ ತಮ್ಮ ತಮ್ಮ ಮತಾನುಸಾರ ಭಾಷ್ಯ ರಚನೆ ಮಾಡಿರುವರು.

ಶರೀರದಲ್ಲಿದ್ದ ನಿತ್ಯ ಆತ್ಮನನ್ನೇ ಗುರಿಯಾಗಿ ಇಟ್ಟುಕೊಂಡು ನಿರ್ಮಾಣವಾಗಿದ್ದ ನಿಮಿತ್ತವಾಗಿಯೇ ಈ ದರ್ಶನಕ್ಕೆ "ಶಾರೀರಿಕ ಮೀಮಾಂಸೆ" ಎಂಬ ಹೆಸರು ಬಂದಿರುವದು. 'ಜೈಮಿನಿ' ರಚಿಸಿದ ಸೂತ್ರಗಳು ಕರ್ಮಪ್ರಧಾನವಾದ ವೇದದ ಭಾಗವಾದ್ದರಿಂದ ಅದನ್ನು 'ಪೂರ್ವಮೀಮಾಂಸೆ'ಯೆಂದೂ, ಬಾದರಾಯಣನು ರಚಿಸಿದ ಸೂತ್ರಗಳು, ವೇದದ ಜ್ಞಾನ ಪ್ರಧಾನವಾಗಿದ್ದ ನಿಮಿತ್ತ 'ಉತ್ತರ ಮೀಮಾಂಸೆ'ಯೆಂದೂ ಜ್ಞಾನಿಗಳು ಕರೆಯುತ್ತ ಬಂದಿರುವರು. ಇದಲ್ಲದೇ ಸಂಸಾರವನ್ನು ತೊರೆದು ನಿಂತ ಸನ್ಯಾಸಿಗಳಿಗೇನೇ ಉಪಯುಕ್ತ ವಾಗಿದ್ದರಿಂದ 'ಭಿಕ್ಷುಸೂತ್ರ'ವೆಂಬ ಹೆಸರಿನಿಂದಲೂ ಕರೆಯಲಾಗುವದು.

**ಈ ಸೂತ್ರಗಳ ಮೇಲೆ ಭಾಷ್ಯ ರಚಿಸಿದ ಆಚಾರ್ಯರು:**

| ನಾಮ | ಕಾಲ | ಭಾಷ್ಯ | ಮತ |
|---|---|---|---|
| ೧. ಶಂಕರ | ೭೮೮ | ಶಾರೀರಿಕ ಭಾಷ್ಯ | ನಿರ್ವಿಶೇಷಾದ್ವೈತ |
| ೨. ಭಾಸ್ಕರ | ೧೦೦೦ | ಭಾಸ್ಕರ ಭಾಷ್ಯ | ಭೇದಾಭೇದ |
| ೩. ರಾಮಾನುಜ | ೧೧೪೦ | ಶ್ರೀಭಾಷ್ಯ | ವಿಶಿಷ್ಟಾದ್ವೈತ |
| ೪. ಆನಂದತೀರ್ಥ | ೧೨೩೮ | ಪೂರ್ಣಪ್ರಜ್ಞ | ದ್ವೈತ |
| ೫. ನಿಂಬಾರ್ಕ | ೧೨೫೦ | ವೇದಾಂತ ಪಾರಿಜಾತ | ದ್ವೈತಾದ್ವೈತ |
| ೬. ಶ್ರೀಕಂಠ | ೧೨೭೦ | ಶೈವಭಾಷ್ಯ | ಶೈವವಿಶಿಷ್ಟಾದ್ವೈತ |
| ೭. ಶ್ರೀಪತಿ | ೧೪೦೦ | ಶ್ರೀಕರಭಾಷ್ಯ | ಶಕ್ತಿವಿಶಿಷ್ಟಾದ್ವೈತ |
| ೮. ವಲ್ಲಭ | ೧೪೭೯ | ಅಣುಭಾಷ್ಯ | ಶುದ್ಧಾದ್ವೈತ |
| ೯. ವಿಜ್ಞಾನಭಿಕ್ಷು | ೧೬೦೦ | ವಿಜ್ಞಾನಾಮೃತ | ಅಭಿಭಾಗಾದ್ವೈತ |
| ೧೦. ಬಲದೇವ | ೧೭೨೫ | ಗೋವಿಂದ | ಅಚಿಂತ್ಯ ಭೇದಾಭೇದ |

ಇವೆಲ್ಲ ಭಾಷ್ಯಗಳು ಭಿನ್ನ ಭಿನ್ನವಾಗಿರುವಷ್ಟೇ ಅಲ್ಲ. ಸೂತ್ರ ಹಾಗೂ ಅಧಿಕರಣ ಗಳ ಸಂಖ್ಯೆಯಲ್ಲಿಯೂ ಅಂತರವು ಕಂಡುಬರುವದು.

ಈ ಸೂತ್ರಗಳಲ್ಲಿ ೧) ಸಮನ್ವಯ ೨) ಅವಿರೋಧ ೩) ಸಾಧನ ೪) ಫಲ ಎಂಬ ನಾಲ್ಕು ಅಧ್ಯಾಯಗಳುಂಟು.

ಈ ಸೂತ್ರಗಳ ಮೇಲೆ ಭಾಷ್ಯ ರಚಿಸಿದ ಆಚಾರ್ಯರೆಲ್ಲರೂ ಭಿನ್ನ ಭಿನ್ನ ಸಿದ್ಧಾಂತಗಳನ್ನೇ ಮಾಡಿದ್ದಾರೆ. ಅಂತೆಯೇ ಬ್ರಹ್ಮಸೂತ್ರಗಳಲ್ಲಿರುವ ನಿಶ್ಚಿತ ಸಿದ್ಧಾಂತವಾವುದೆಂದು ನಿರ್ಣಯಿಸುವದು ಬಿಗಿಯಾಗಿರುವದು. ಅಲ್ಪಾಕ್ಷರಗಳಲ್ಲಿ ಬಹ್ವರ್ಥವನ್ನು ತುಂಬಿ ಹೇಳುವದೇ ಸೂತ್ರಗಳ ಲಕ್ಷಣ. ಅಂತೆಯೇ ಅವುಗಳಲ್ಲಿ ಹುದುಗಿದ ನೈಜಾರ್ಥವನ್ನು ತಿಳಿದುಕೊಳ್ಳಲು ಭಾಷ್ಯದ ಸಹಾಯ ಮಾಡಿಕೊಳ್ಳುವದು ಅನಿವಾರ್ಯವಾಗಿರುವದು.

ಸುಪ್ರಸಿದ್ಧ ದಾರ್ಶನಿಕ ಪಂಡಿತರೆನಿಸಿದ ಡಾ|| ಘಾಟೆ ಎಂಬುವರು ಸೂತ್ರಾರ್ಥಗಳನ್ನು ಕಂಡುಹಿಡಿಯಲು ಪ್ರಯತ್ನ ಮಾಡಿದ್ದಾರೆ. ಅವರ ಅಭಿಪ್ರಾಯದ ಪ್ರಕಾರ 'ಶಂಕರಾಚಾರ್ಯರ ಸಿದ್ಧಾಂತವು ಬ್ರಹ್ಮಸೂತ್ರಗಳ ಅಭಿಪ್ರಾಯಕ್ಕೆ ಪೂರ್ಣ ವಿರುದ್ಧವಾಗಿರುವದು'.

ಶಂಕರಾಚಾರ್ಯರು ಗೌಡಪಾದರ ಶಿಷ್ಯರಾದ ಗೋವಿಂದರ ಶಿಷ್ಯರು. ಗೌಡಪಾದರೇ ಅದ್ವೈತ ವೇದಾಂತದ ಪ್ರಥಮಾಚಾರ್ಯರೆಂದು ತಜ್ಞರ ಅಭಿಪ್ರಾಯ. ಮಾಂಡೂಕ್ಯ ಕಾರಿಕೆಯು ಅದ್ವೈತ ಸಿದ್ಧಾಂತದ ಆಧಾರ ಶಿಲೆಯಾಗಿರುವದೆಂದೇ ಅವರೆಲ್ಲರ ನಿಶ್ಚಿತ ಅಭಿಪ್ರಾಯವಾಗಿರುವದಲ್ಲದೇ, ಇದರ ಮೇಲಿಂದ ಮಾಯಾವಾದವು ಪ್ರಾರಂಭವಾದದ್ದು ಗೌಡಪಾದರಿಂದಲೇ ಎಂದು ತಿಳಿದುಬರುವದು.

* * * *

**ವೇದಾಂತ**: ಅದ್ವೈತ ವೇದಾಂತದಲ್ಲಿ ಪರಮಾರ್ಥ ಸತ್ತಾರೂಪ ಬ್ರಹ್ಮ ಒಬ್ಬನಾಗಿದ್ದರೂ, ಮಾಯೆಯ ನಿಮಿತ್ತ ಅನೇಕಾತ್ಮಕವಾದ ಜೀವ, ಜಗದ್ರೂಪದಲ್ಲಿ ವಿವರ್ತಿಸುವದೆಂದು ಹೇಳಲಾಗಿದೆ. ಉಪನಿಷತ್ತಿನಲ್ಲಿ ಬ್ರಹ್ಮ, ಸಗುಣ ಹಾಗೂ ನಿರ್ಗುಣ ಹೀಗೆ ಎರಡು ಪ್ರಕಾರವಾಗಿರುವದೆಂದು ಹೇಳಲಾಗಿದೆ. ನಿರ್ಗುಣ ಬ್ರಹ್ಮ ಪಾರಮಾರ್ಥಿಕ ಸಗುಣ ಬ್ರಹ್ಮ ವ್ಯಾವಹಾರಿಕ. ಆಚಾರ್ಯರು ಬ್ರಹ್ಮದ ಲಕ್ಷಣವನ್ನು ಸ್ವರೂಪ ಲಕ್ಷಣ, ತಟಸ್ಥ ಲಕ್ಷಣ ಹೀಗೆ ಎರಡು ಪ್ರಕಾರವಾಗಿ ಮಾಡಿರುವರು,

ವಿಮರ್ಶಕರು ಅವರ ಸಿದ್ಧಾಂತಗಳನ್ನು ನಿಷ್ಪಕ್ಷಪಾತವಾಗಿ ವಿಮರ್ಶಿಸಿ ಒಂದು ನಿಷ್ಕರ್ಷಕ್ಕೆ ಬರಬೇಕೆಂದು ಪ್ರಯತ್ನಿಸಿದ್ದುಂಟು.

ಪ್ರತಿಯೊಂದು ತತ್ತ್ವಶಾಸ್ತ್ರದಲ್ಲಿ ದೇವ, ಜೀವ ಜಗತ್ತು ಇವೇ ಮುಖ್ಯವಾಗಿ ಪ್ರತಿಪಾದಿತವಾಗಿರುವಷ್ಟೇ. ಈ ಮೂರೂ ಸ್ವತಂತ್ರ ಸತ್ಯವುಳ್ಳವುಗಳೆಂದು ಹೇಳುವ ದರ್ಶನಗಳುಂಟು. ಆದರೆ ಶಾಂಕರ ಅದ್ವೈತ ದರ್ಶನದಲ್ಲಿ ಬ್ರಹ್ಮವೊಂದೇ ಸತ್ಯ. ಜೀವ ಜಗತ್ತುಗಳೆರಡೂ ಬ್ರಹ್ಮ ಸತ್ಯವನ್ನೇ ಅವಲಂಬಿಸಿರುವವು. ಯಾವುವು ಸ್ವತಂತ್ರ ಸತ್ತೆವುಳ್ಳವುಗಳಾಗದೇ, ಕೇವಲ ಜ್ಞಾನ ವಿಷಯಗಳಾಗುವವೋ, ಅವು ಭ್ರಮಾತ್ಮಕವಾಗಿರುವವೆಂಬುವಲ್ಲಿ ಸಂದೇಹವಿರುವದಿಲ್ಲ. ಈ ದೃಷ್ಟಿಯಿಂದ ವಿಚಾರಿಸಿದಾಗ ಜೀವ ಜಗತ್ತುಗಳ

ಜ್ಞಾನ ಭ್ರಮಾತ್ಮಕವೆಂದೇ ಸಿದ್ಧವಾಗುವದು. ಆದರೆ ಬ್ರಹ್ಮವು ಅವೆರಡನ್ನು ಅಂತರ್ಭಾವ ಮಾಡುವ ರೀತಿಯು ಮಾತ್ರ ಭಿನ್ನವಾಗಿರುವದು.

ಯಾವನಾದರೊಬ್ಬನಿಗೆ ತನ್ನ ಮುಂದೆ ಬಿದ್ದ ಒಂದು ರಜ್ಜುವಿನಲ್ಲಿ ಮಂದಾಂಧ ಕಾರದ ನಿಮಿತ್ತವಾಗಿ ಸರ್ಪಭ್ರಮೆಯಾಯಿತೆಂದು ತಿಳಿಯೋಣ. ಆಗ ಅದರ ಸಮೀಪಕ್ಕೆ ಹೋಗಿ ಪರಾಮರ್ಶಿಸಿ ನೋಡಿದಾಗ, ಅವನಿಗೆ ಇದು ಸರ್ಪವಲ್ಲ, ಹಗ್ಗ ಎಂಬ ಅರಿವಾಗುವದು. ಅಲ್ಲಿ ಬಾಧಿತವಾದದ್ದು ಪೂರ್ವದಲ್ಲಿ ಜ್ಞಾನ ವಿಷಯವಾಗಿದ್ದ ಸರ್ಪ ವಷ್ಟೇ; ಹಗ್ಗ ಮಾತ್ರ ಹಾಗೇ ಇರುವದು. ಇದರಂತೆ ಹಳದಿ ಬಣ್ಣದ ಕನ್ನಡಕ ಧರಿಸಿ ದವನು ಶುಭ್ರ, ಸ್ಫಟಿಕಮಣಿಯನ್ನು ನೋಡಿ 'ಇದು ಹಳದಿಯಾಗಿದೆ' ಎಂದು ತಿಳಿಯುವನು. ಕನ್ನಡಕವನ್ನು ತೆಗೆದು ನೋಡಿದಾಗ ಅದೇ ಸ್ಫಟಿಕಮಣಿಯು ಶುಭ್ರ ವಾಗಿಯೇ ತೋರುವದು. ಇಲ್ಲಿ ಬದಲಾದದ್ದು ವಸ್ತುವಲ್ಲ. ಪೀತಗುಣ ಮಾತ್ರ. ಮೊದಲನೆಯ ಉದಾಹರಣೆಯಲ್ಲಿ ಪದಾರ್ಥವೊಂದು, ತೋರುವುದು ಮತ್ತೊಂದು, ಎರಡನೆಯ ಉದಾಹರಣೆಯಲ್ಲಿ ಪದಾರ್ಥ ಮಾತ್ರ ಅದೇ. ಆದರೆ ಯಾವುದು ಅದರ ರೂಪಾಗಿರಲಿಲ್ಲವೋ ಅದು ಮಾತ್ರ ಜ್ಞಾನಾಂತರದಿಂದ ಬಾಧಿತವಾಗಿ ಈಗ ಇಲ್ಲದಂತಾಗು ವದು. ಸ್ಫಟಿಕಮಣಿಯು ಹಳದಿ ಬಣ್ಣದ ಕನ್ನಡಕದ ಉಪಾಧಿಯಿಂದಲೇ ಹಳದಿಯಾಗಿ ಕಾಣುತ್ತಿತ್ತಷ್ಟೇ! ಅದು ಅದರ ನಿಜಸ್ವರೂಪವಲ್ಲ. ಅದಕ್ಕಾಗಿಯೇ ಅದು ಭ್ರಮೆ ಯಾಯಿತು. ಉಪಾಧಿಯಿಲ್ಲದಾಗ ಅದೇ ತನ್ನ ನಿಜಸ್ವರೂಪದಲ್ಲಿ ತೋರ ಹತ್ತುವದು. ಅದಕ್ಕಾಗಿಯೇ ಈ ಭ್ರಮಜ್ಞಾನವು ಸೋಪಾಧಿಕವಾಗಿರುವದು. ಮೊದಲನೆಯ ಉದಾ ಹರಣೆಯಲ್ಲಿ ಇಂತಹ ಯಾವ ಉಪಾಧಿಯೂ ಇರುವದಿಲ್ಲ. ಅದಕ್ಕಾಗಿಯೇ ಅದನ್ನು ನಿರುಪಾಧಿಕ ಭ್ರಮೆಯೆಂದು ಹೇಳಲಾಗುವದು. ಶಂಕರಾಚಾರ್ಯರು ಇವೆರಡು ಭ್ರಮೆ ಗಳನ್ನು ಕುರಿತು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ "ಶುಕ್ತಿಃ ರಜತವದವಭಾಸತೇ", ಏಕಶ್ಚಂದ್ರಃ ಸದ್ವಿತೀಯವತ್" ಎಂದು ಹೇಳಿದ್ದಾರೆ. ಅದಕ್ಕಾಗಿಯೇ ಆಚಾರ್ಯರು "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವನಾಪರಃ" "ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯೆ, ಜೀವನು, ಬ್ರಹ್ಮನೇ ಆಗಿರುವನು" ಎಂದು ಅಭಿಪ್ರಾಯಪಟ್ಟಿರು ವರು. ಇಲ್ಲಿ, ಇಲ್ಲದ ಜಗತ್ತು ಇರುವ ಬ್ರಹ್ಮನಲ್ಲಿ ತೋರುವ ನಿಮಿತ್ತವಾಗಿಯೇ ಇದು ಮಿಥ್ಯೆಯಾಯಿತು. ಆದರೆ ಶುಭ್ರವಾದ ಸ್ಫಟಿಕದ ಮಣಿಯು ಹಳದಿಯಾಗಿ ತೋರಿದ್ದು, ಕನ್ನಡಕೋಪಾಧಿಯಿಂದ, ಅದನ್ನು ತೆಗೆದು ನೋಡಿದಾಗ, ಅದೇ ಸ್ಫಟಿಕವು ತನ್ನ ನಿಜಸ್ಥಿತಿ ಯಲ್ಲಿಯೇ ಕಂಡುಬರುವದು. ಹಾಗೆಯೇ ಬ್ರಹ್ಮನು ಉಪಾಧಿ ದೋಷದಿಂದ ಜೀವ ನಾಗಿದ್ದರೂ, ಉಪಾಧಿ ಇಲ್ಲದಾಗ ಅವನೇ ತನ್ನ ಮೂಲ ಸ್ವರೂಪವಾದ ಬ್ರಹ್ಮಸ್ಥಿತಿಯಲ್ಲಿ ಉಳಿಯುವನು. ಅಂತೆಯೇ ಜೀವನನ್ನು ಜಗತ್ತಿನಂತೆ ಮಿಥ್ಯೆಯೆಂದು ಹೇಳದೆ ಜೀವನು ಬ್ರಹ್ಮನೇ ಆಗಿರುವನೆಂದು ಹೇಳಿದ್ದಾರೆ.

ನಾನಾತ್ಮಕವಾದ ಜಗತ್ತು ಅದ್ವಿತೀಯವಾದ ಹಾಗೂ ನಿರ್ವಿಶೇಷನಾದ ಬ್ರಹ್ಮನಿಂದ

ಹೇಗೆ ಸೃಷ್ಟಿಯಾಯಿತು? ಎಂಬ ಪ್ರಶ್ನೆಗೆ ಅದ್ವೈತ ವೇದಾಂತವು ಮಾಯೆಯನ್ನೇ ಮುಖ್ಯ ಕಾರಣವೆಂದು ಉತ್ತರಕೊಡುವದು. ಮಾಯಾ ವಿರಹಿತ ಬ್ರಹ್ಮನಿಂದ ಜಗತ್ತಿನ ಸೃಷ್ಟಿ ಯಾಗದು. ಮಾಯೆಯಲ್ಲಿ ಆವರಣ ಹಾಗೂ ವಿಕ್ಷೇಪ ಎಂಬ ಎರಡು ಶಕ್ತಿಗಳುಂಟು. ಮೊದಲನೆಯ ಶಕ್ತಿಯು ಬ್ರಹ್ಮನ ಸ್ವರೂಪವನ್ನು ಆವರಣ ಮಾಡುವದು. ಎರಡನೆಯ ಶಕ್ತಿಯು ಬ್ರಹ್ಮನಲ್ಲಿ ಇಲ್ಲದ ಜಗತ್ತನ್ನು ಹುಟ್ಟಿಸುವದು. ಮಾಯೋಪಾಧಿಕ ಬ್ರಹ್ಮನೇ ಜಗತ್ತಿನ ಕರ್ತೃವಾಗುವನು. ಅವನೇ ಜಗತ್ತಿನ ಉಪಾದಾನ ಕಾರಣ ಹಾಗೂ ನಿಮಿತ್ತ ಕಾರಣನು.

ಈ ವೇದಾಂತದ ಅಭಿಪ್ರಾಯ ಪ್ರಕಾರ ಜೀವನು ಚೈತನ್ಯರೂಪನು. ಪರಬ್ರಹ್ಮವೇ ಉಪಾಧಿ ಸಂಪರ್ಕದಿಂದ ಜೀವಭಾವ ತಾಳಿರುವದು. ಉಪಾಧಿಯಿಲ್ಲದಿರುವಾಗ ಅದೇ ತನ್ನ ಮೂಲ ಚಿತ್ಸ್ವರೂಪದಲ್ಲಿ ಉಳಿದು ಬಿಡುವದು. ಒಂದೇ ಒಂದಾದ ಕಾರಣ ಸತ್ತೆಯು ಅವಿನಾಶಿಯು ಹಾಗೂ ನಿರ್ವಿಕಾರಿಯೂ ಆಗಿರುವದು. "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತಿಯು ಸ್ವಗತ, ಸಜಾತೀಯ ವಿಜಾತೀಯ ಭೇದ ಶೂನ್ಯವಾದ ಪರಬ್ರಹ್ಮವೊಂದನ್ನೇ ಸತ್ಯವೆಂದು ಹೇಳುತ್ತದೆ. ಅಂತಹ ಅದ್ವಿತೀಯ ಬ್ರಹ್ಮದಲ್ಲಿ ತೋರುವ ನಾನಾತ್ಮಕವಾದ ಪ್ರಪಂಚವು ಕೇವಲ ಕಲ್ಪನಾತ್ಮಕವಾಗಿರುವದು. ಅಂದರೆ ಜಗತ್ತು ಮಾಯೆಯ ಪರಿಣಾಮ ವಿವರ್ತ ಆಗಿರುತ್ತದೆ. ಕಾರಣದ ಸತ್ತೆಯೇ ಕಾರ್ಯ ದಲ್ಲಿರುವದಾದರೆ ಅದಕ್ಕೆ 'ಪರಿಣಾಮ' ಎಂಬ ಹೆಸರು. ಕಾರಣ ಸತ್ತೆಗಿಂತ ಕಾರ್ಯಸತ್ತೆ ಭಿನ್ನವಾದರೆ ಅದಕ್ಕೆ 'ವಿವರ್ತ'ವೆನ್ನುವರು. ಇಲ್ಲಿ ಜಗತ್ಕಾರಣ ಬ್ರಹ್ಮನ ಸತ್ತೆಯು ಪಾರಮಾರ್ಥಿಕವು ಕಾರ್ಯವಾದ ಜಗತ್ತಿನ ಸತ್ತೆಯು, ವ್ಯಾವಹಾರಿಕವು. ಹೀಗೆ ಸತ್ತೆಗಳಲ್ಲಿ ವಿಷಮತೆಯುಂಟಾದುದರಿಂದ ಜಗತ್ತು ಬ್ರಹ್ಮವಿವರ್ತವು ಎಂದು ಹೇಳ ಬೇಕಾಗುವದು. ಯಾವಾಗ ಜಗದಧಿಷ್ಠಾನ ಭೂತವಾದ ಬ್ರಹ್ಮದ ಸಾಕ್ಷಾತ್ಕಾರವಾಗು ವದೋ ಆಗಲೇ ಜಗತ್ತು ಬಾಧಿತವಾಗುವದು.

ಶಂಕರಾಚಾರ್ಯರ ಅದ್ವೈತ ಸಿದ್ಧಾಂತವನ್ನೂ ಪರಿಶೀಲನ ಮಾಡಿ ನೋಡಿದರೆ ಇವರು ಹೇಳುವ ವಿವರ್ತವಾದವು ಘಟ್ಟಿಯಾಗಿ ನಿಲ್ಲದೆಂದೇ ತಿಳಿದುಬರುತ್ತದೆ. ಹಗ್ಗದಲ್ಲಿ ಸರ್ಪಭ್ರಮೆಯನ್ನು ಹೊಂದುವವನಿಗೆ ಮೊದಲು ಸರ್ಪಜ್ಞಾನವು ಆಗಿರಲೇಬೇಕಷ್ಟೇ! ಪೂರ್ವದಲ್ಲಿ ಸರ್ಪದ ಜ್ಞಾನವೇ ಇಲ್ಲದವನಿಗೆ ಹಗ್ಗದಲ್ಲಿ ಸರ್ಪಭ್ರಾಂತಿಯು ಎಂದೂ ಆಗದು. ಅದರಂತೆ ಬ್ರಹ್ಮನಲ್ಲಿ ಜಗತ್ತನ್ನು ನೋಡುವವರಿಗೆ ಬ್ರಹ್ಮಾತಿರಿಕ್ತ ಯಾವ ಸ್ಥಳದಲ್ಲಿ ಜಗತ್ತಿನ ಜ್ಞಾನವಾಗಿದ್ದಿತು? ಬ್ರಹ್ಮಾತಿರಿಕ್ತ ಸ್ಥಾನವೇ ಇಲ್ಲವಷ್ಟೇ! ಅಂದ ಮೇಲೆ ಬ್ರಹ್ಮನಲ್ಲಿ ಅಧ್ಯಾಸ ಹೇಗೆ ಸಂಭವಿಸುವದು?

ಜಗತ್ತಿನಲ್ಲಿ ವ್ಯವಹಾರಿಕ ಸತ್ಯವನ್ನು ಹೇಳಲು ಸಿದ್ಧರಾದ ಶಂಕರಾಚಾರ್ಯರು ಪಾರಮಾರ್ಥಿಕ ಸತ್ಯವನ್ನು ಏಕೆ ಹೇಳಬಾರದಾಗಿತ್ತು? ಜಗತ್ತು ಅಸತ್ಯವೆಂದು ಅದು

ಇದ್ದ ಸ್ಥಿತಿಯಲ್ಲಿ ಕಡೆತನಕ ಉಳಿಯುವದಿಲ್ಲವೆಂದು ಹೀಗೆ ಹೇಳಿದ್ದಾರೆ ಎಂದಾದರೆ **ಕಾರ್ಯ**ರೂಪದಿಂದಷ್ಟೇ ಅಸತ್ಯವಾಗುವದು. **ಕಾರಣ**ರೂಪದಿಂದ ಸತ್ಯವಾಗಿರುವದೆಂದು ಹೇಳಿದರೆ ತಪ್ಪೇನು! ಬಂಗಾರದ ಆಭರಣಗಳು ಕಾರ್ಯರೂಪದಲ್ಲಿ ಅಸತ್ಯವಾಗಿದ್ದರೂ ಕಾರಣರೂಪದಲ್ಲಿ ಸತ್ಯವಾಗಿಲ್ಲವೇನು! ಒಡವೆಗಳ ಕಾಲದಲ್ಲಿಯೂ ಅವು ಬಂಗಾರವೇ ಆಗಿರುವವಷ್ಟೇ! ಹಾಗೆಯೇ ಜಗತ್ತನ್ನು ಹೇಳುವದಾದರೆ ವಿವರ್ತವಾದವು ಅಸಮಂಜಸವಾಗಿರುವದೆಂದೇ ಹೇಳಬೇಕಾಗುವದು.

* * * *

ಪ್ರಕೃತಿ ಶಕ್ತಿ ಆತ್ಮಶಕ್ತಿಗೆ ಅಧೀನವಾದರೆ ಅದರಿಂದ ಮಾನವ ಪ್ರಗತಿ ಎಷ್ಟು ತೀವ್ರವಾಗಿ ಆಗಬಹುದೆಂಬುದನ್ನು ಆಧ್ಯಾತ್ಮಿಕಶಾಸ್ತ್ರ ಉದ್ಘೋಷಿಸುತ್ತ ಬಂದಿದೆ. ಆತ್ಮಶಕ್ತಿಯು ಬೆಳೆದಷ್ಟು ಪ್ರಕೃತಿಶಕ್ತಿ ತನ್ನ ವಿಕಾರವನ್ನು ಹೊರಚೆಲ್ಲಿ ಆತ್ಮಾಧೀನವಾಗಿ ಬಾಳಬಲ್ಲದು. ಅದಕ್ಕಾಗಿ ಪ್ರತಿಯೊಬ್ಬನೂ ಆತ್ಮಶಕ್ತಿಯನ್ನು ಬೆಳೆಸಿಕೊಳ್ಳಲು ಪ್ರಯತ್ನ ಮಾಡಲೇಬೇಕು. ಇದೇ ಮಾನವನ ಮಾನವತ್ವದ ಅಚ್ಚ ಲಕ್ಷಣವೆಂದು ಹೇಳಬಹುದು.

ಭಾರತೀಯ ಆದರ್ಶ ಪದ್ಧತಿಯಲ್ಲಿ ಆತ್ಮಶಕ್ತಿಯ ವಿಕಾಸಕ್ಕೆ ಮಹತ್ವ ಬಂದಿರುವದು ಸ್ವಾಭಾವಿಕವೇ! ಭಾರತೀಯ ತತ್ತ್ವಶಾಸ್ತ್ರಗಳೆಲ್ಲ ಈ ಬಗ್ಗೆಯೇ ಸಂದೇಶ ಬೀರುತ್ತ ಬೀರುತ್ತ ಬಂದಿವೆ.

ಆತ್ಮಶಕ್ತಿಯು ಇಚ್ಛಾ, ಜ್ಞಾನ ಕ್ರಿಯಾ ಈ ತ್ರಿವಿಧಾತ್ಮಕ ಶಕ್ತಿಗಳ ಒಕ್ಕೂಟವಾಗಿರುವದು. ಆತ್ಮಶಕ್ತಿಯ ಒಂದಂಗವಾದ ಇಚ್ಛೆಗೆ ಕೆಲವು ಪರ್ಯಾಯ ಶಬ್ದಗಳಿರುವವು. ಪ್ರೇಮ, ಶ್ರದ್ಧೆ, ಅಪೇಕ್ಷೆ ಎಂಬುವೇ ಅವು. ಮಾನವನು ಮೊದಲು ತನ್ನ ಸ್ವಾಭಾವಿಕವಾದ ಕರ್ತವ್ಯದಲ್ಲಿ ಇಚ್ಛೆಯುಳ್ಳವನಾದರೆ, ಆ ಕರ್ತವ್ಯದಲ್ಲಿ ಪ್ರವೃತ್ತಿ ಹೊಂದಿದವನಾಗುವನು. ಕರ್ಮದಲ್ಲಿಟ್ಟ ಪ್ರೇಮವೇ ಬರಬರುತ್ತ ಶ್ರದ್ಧೆಯ ರೂಪ ಪಡೆಯುವದು. ಅದು ಜೀವನ ಸ್ವಭಾವಕ್ಕನುಗುಣವಾಗಿರುವದು. ಮಾನವ ಜೀವನವನ್ನು ಬೆಳೆಸಿ ಬೆಳಗಿಸುವಲ್ಲಿ ಶ್ರದ್ಧೆಯು ಪ್ರಮುಖ ಪಾತ್ರವಹಿಸುವದು. ಗೀತೆಯಲ್ಲಿ—

"ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ
ಶ್ರದ್ಧಾಮಯೋಽಯಂ ಪುರುಷಃ
ಯೋಯಚ್ಛ್ರದ್ಧಃ ಸಏವಸಃ"

ಪ್ರತಿಯೊಬ್ಬ ವ್ಯಕ್ತಿಯ ಸ್ವಭಾವಕ್ಕನುಸಾರವಾಗಿ ಅವರವರಲ್ಲಿ ಶ್ರದ್ಧೆಯುಂಟಾಗುವದು. ಮಾನವರು ತಮ್ಮ ತಮ್ಮ ಶ್ರದ್ಧೆಗನುಗುಣವಾಗಿ ಫಲವನ್ನು ಪಡೆಯುವರು. ಇದು ಆತ್ಮವಿಕಾಸ ರೂಪವಾದ ಸಂಸ್ಕೃತಿಯಲ್ಲಿ ಮುಖ್ಯ ಅಂಗವಾಗಿರುವದು.

**ಜ್ಞಾನಕ್ರಿಯಾ ಶಕ್ತಿಗಳು:** ಶ್ರದ್ಧೆಯೊಂದೇ ಮಾನವ ಪ್ರಗತಿಗೆ ಸಾಧನವಾಗದು. ಅಂಧ ವಿಶ್ವಾಸವು ಮಾನವ ಜೀವನವನ್ನು ಮೇಲಕ್ಕೆತ್ತುವ ಬದಲು ಕೆಳಕ್ಕೊತ್ತುವದು. ಜ್ಞಾನಪೂರ್ವಕವಾದ ವಿಶ್ವಾಸವು ಜೀವನನ್ನು ಮೇಲಕ್ಕೆತ್ತಿ ಸುರಕ್ಷಿತವಾಗಿಡಬಹುದು.

ಪ್ರತಿಯೊಬ್ಬ ವ್ಯಕ್ತಿಯು ತಾನು ಕೈಕೊಳ್ಳುವ ಕ್ರಿಯಾತ್ಮಕವಾದ ಕರ್ತವ್ಯದಲ್ಲಿ, ಜ್ಞಾನ-ಶ್ರದ್ಧೆಗಳು ಸೇರಿದ್ದರೆ ಆಗಬಹುದಾದ ಆತ್ಮ ವಿಕಾಸಕ್ಕೆ ಪೂರ್ಣ ಸಹಾಯ ದೊರೆಯುವದು. ಪ್ರಾಕೃತಕ್ರಿಯೆಯು, ಅಪ್ರಾಕೃತ ಕ್ರಿಯೆಯಾಗಬೇಕು. ಜಡವಾದ ಕರ್ಮ ಚೈತನ್ಯ ಪೂರ್ಣವಾಗಬೇಕು. ಆಗಲೇ ಜೀವನು ದೇವನ ಸ್ವರೂಪವನ್ನು ಪಡೆಯಬಲ್ಲನು. ಕರ್ಮವು ಜಡವಾಗಿರುವದು. ಅದು ಯಾವಾಗ ಜ್ಞಾನವನ್ನು ಸಮಾಶ್ರಯಿಸುವದೋ ಆಗಲೇ ತನ್ನಲ್ಲಿಯ ಜಡತ್ವವನ್ನು ಹೋಗಲಾಡಿಸಿಕೊಂಡು, ಆತ್ಮನನ್ನು ಬಂಧಿಸುವದನ್ನು ತಪ್ಪಿಸಿಕೊಂಡು ಆತ್ಮ ವಿಕಾಸಕ್ಕೆ ಸಹಾಯ ಸಲ್ಲಿಸಹತ್ತುವದು. ಕಬ್ಬಿಣ ಗುಂಡನ್ನು ನೀರಲ್ಲಿ ತೇಲಿಬಿಟ್ಟರೆ ಅದು ಮುಳುಗಿ ಹೋಗುವದು. ಅದೇ ಗುಂಡನ್ನು ಕಾಸಿ, ಚಪ್ಪಟೆಯಾಗಿಸಿ ಬಿಟ್ಟರೆ ಅದು ನೀರಿನಲ್ಲಿ ತೇಲಹತ್ತುವದು. ಅಷ್ಟೇ ಅಲ್ಲ. ತನ್ನನ್ನು ಆಶ್ರಯಿಸಿದವರನ್ನೂ ನೀರಿನಿಂದ ಪಾರುಮಾಡಿ ಬಿಡುವದು.

ಹಾಗೆಯೇ ಕರ್ಮವೂ ಕೂಡ. ಇವು ಸಮಸಮುಚ್ಚಯ ರೂಪದಲ್ಲಿಯೇ ಮೋಚಕಗಳಾಗಿವೆಯೆಂದು ಹಲವರು ಹೇಳಿದ್ದಾರೆ. ಅವರಲ್ಲಿ ಭತೃ ಪ್ರಪಂಚನ ಹೆಸರು ಪ್ರಸಿದ್ಧವಾಗಿದೆ. ಶಂಕರಾಚಾರ್ಯರು ಬೃಹದಾರಣ್ಯಕೋಪನಿಷತ್ತಿನ ಭಾಷ್ಯದಲ್ಲಿ ಮೇಲಿಂದ ಮೇಲೆ "ಔಪನಿಷದುಮನ್ಯಃ" ಎಂದು ಮೇಲಿಂದ ಮೇಲೆ ಪರಿಹಾಸ ಮಾಡಿರುವರು. ಆದರೂ ಅವನ ಕಾಲದಲ್ಲಿ ಅವನ ಪಾಂಡಿತ್ಯಕ್ಕೆ ಎಷ್ಟೂ ಚ್ಯುತಿ ಬರುವಂತಿರಲಿಲ್ಲವೆಂದು ಮಾತ್ರ ಧಾರಾಳವಾಗಿ ಹೇಳಬಹುದಾಗಿದೆ. ಶಂಕರಾಚಾರ್ಯರ ಶಿಷ್ಯನೇ ಭತೃಹರಿಯ ಬಗ್ಗೆ ಬಹಳ ಗೌರವವನ್ನು ವ್ಯಕ್ತ ಮಾಡಿದ್ದು ಅತ್ಯಂತ ಶ್ಲಾಘನೀಯವಾಗಿದೆ. ದಾರ್ಶನಿಕ ದೃಷ್ಟಿಯಿಂದ ಇವನ ಮತ ದ್ವೈತಾದ್ವೈತ, ಭೇದಾಭೇದ, ಅನೇಕಾಂತ ಮುಂತಾದ ಅನೇಕ ಹೆಸರುಗಳಿಂದ ಪ್ರಸಿದ್ಧಿ ಪಡೆದದ್ದುಂಟು. ಅವನ ಮತದಲ್ಲಿ ಪರಮಾರ್ಥವು ಒಂದು ಮತ್ತು ಅನೇಕ. ಆದುದರಿಂದ ಕರ್ಮ ಅಥವಾ ಜ್ಞಾನವನ್ನು ಪ್ರತಿಪಾದಿಸಿ ಎರಡರ ಸಾರ್ಥಕತೆಯನ್ನು ಸ್ವೀಕರಿಸಲಾಗಿದೆ.

**ಸಿದ್ಧಾಂತ :**

ಭಾರತೀಯ ಆಧ್ಯಾತ್ಮಿಕ ದರ್ಶನಗಳಲ್ಲಿ ವೇದಾಂತ ದರ್ಶನ ಬಹಳ ಮಹತ್ವಸ್ಥಾನ ಪಡೆದಿರುವದು. ಇತರ ದರ್ಶನಗಳ ಕೂಗಾಟ ನಡೆಯುವದು ವೇದಾಂತ ಕೇಸರಿ ಗುಡುವ ತನಕ!

ಇಂತಹ ಶಾಸ್ತ್ರವನ್ನು ಕೂಡ ತತ್ತ್ವಗಳಿಂದ ಸೋಲಿಸಿ ಮೂಕನಂತೆ ಕುಳ್ಳಿರಿಸಿ ಬಿಡುವ ಯೋಗ್ಯತೆಯನ್ನು ಪಡೆದದ್ದು ಶಿವದರ್ಶನ ಅಥವಾ ಶಿವಾದ್ವೈತದರ್ಶನ.

ಇಲ್ಲಿ 'ಪ್ರಧಾನಮಲ್ಲ ನಿಬರ್ಹಣನ್ಯಾಯ'ವನ್ನು ಸ್ಮರಿಸಿಕೊಳ್ಳಬಹುದು. ದೇಶದ ಎಲ್ಲ ಮಲ್ಲರನ್ನು ಗೆದ್ದವರನ್ನು ಗೆದ್ದು ಬಿಟ್ಟರೆ ಮತ್ತಾರನ್ನೂ ಗೆಲ್ಲುವ ಅವಶ್ಯಕತೆಯೇ ಇರುವದಿಲ್ಲ. ಅದರಂತೆ ಶಿವಾದ್ವೈತ ಸಿದ್ಧಾಂತವು ಅಷ್ಟು ಸತ್ವಯುತವಾಗಿರುವದೆಂದು ಇಲ್ಲಿ ಅಭಿವ್ಯಕ್ತವಾಗುವದು.

ದರ್ಶನಕಾರರೆಲ್ಲರೂ ದೇವ, ಜೀವ ಜಗತ್ತು ಈ ಮೂರರ ವಿಚಾರವನ್ನೇ ತಮ್ಮ ಗುರಿಯನ್ನಾಗಿರಿಸಿಕೊಂಡು ವಿಚಾರ ಮಾಡುತ್ತ ಬಂದಿರುವರು.

ವೇದಾಂತ ದರ್ಶನದಲ್ಲಿಯೂ ದೇವನ ಮೀಮಾಂಸೆಯು ಉಪನಿಷದ್ಋಷಿಗಳ ಅಭಿಪ್ರಾಯ ಪ್ರಕಾರ ಪ್ರಾರಂಭವಾಗಿ ಬಿಟ್ಟಿದೆ. "ಏಕಮೇವಾ ದ್ವಿತೀಯಂ" ಎಂಬ ಶ್ರುತಿ ವಾಣಿಗನುಸರಿಸಿ, ಸ್ವಗತ, ಸಜಾತೀಯ, ವಿಜಾತೀಯ ಭೇದರಹಿತ ಬ್ರಹ್ಮತತ್ತ್ವ ಒಂದೇ ಒಂದಾಗಿರುವದು. ಅಂತಹ ತತ್ವದಲ್ಲಿ ಜಗತ್ತು ತೋರುವದು, ಅಜ್ಞಾನ ಮೂಲಕ. ಅದಕ್ಕಾಗಿ ಇರುವ ಬ್ರಹ್ಮನಲ್ಲಿ, ಇಲ್ಲದ ಜಗತ್ತು ತೋರುವುದರಿಂದ ಬ್ರಹ್ಮವಿವರ್ತವಾಗಿರುವದೆಂದು ನಿರ್ಣಯಿಸಲಾಗಿದೆ. ಇಲ್ಲಿ ಕಾರಣಸತ್ತೆಯು ಪಾರಮಾರ್ಥಿಕವಾಗಿದ್ದು ಕಾರ್ಯಸತ್ತೆಯು ವ್ಯಾವಹಾರಿಕವಾಗಿರುವದು. ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದ ಪ್ರಾರಂಭದಲ್ಲಿ ಬರೆದ ಅಧ್ಯಾಸಭಾಷ್ಯದಲ್ಲಿ "ಸ್ಮೃತಿರೂಪಃ ಪರತ್ರ ಪೂರ್ವ ದೃಷ್ಟಾವಭಾಸಃ" ಎಂದು ಅಧ್ಯಾಸ ಲಕ್ಷಣವನ್ನು ಹೇಳಿರುವರು. ಇದು ಅವರ ಸಿದ್ಧಾಂತಕ್ಕೆ ಪೂರ್ಣ ವಿರೋಧವಾಗಿರುವದು. ಬ್ರಹ್ಮಾತಿರಿಕ್ತವಾದದ್ದು ಯಾವುದೂ ಇಲ್ಲವೆಂದು ಹೇಳುವ ಶಾಸ್ತ್ರದಲ್ಲಿ, ಬ್ರಹ್ಮಾತಿರಿಕ್ತ ಯಾವುದರಲ್ಲಿ ಜಗತ್ತಿತ್ತು? ರಜ್ಜು ಸರ್ಪನ್ಯಾಯದ ದೃಷ್ಟಾಂತದ ಪ್ರಕಾರ, ಇದು ಇರುವುದಿಲ್ಲವೆಂಬುದು ಸ್ಪಷ್ಟವಾಗಿಯೇ ತಿಳಿದುಬರುವದು. ಬೇರೆ ಕಡೆಗೆ ಸರ್ಪವನ್ನು ನೋಡಿದವನೇ ಮಂದಾಂಧಕಾರದಲ್ಲಿ ನಡೆಯುವಾಗ, ತನ್ನ ಕಾಲಲ್ಲಿ ಸಿಕ್ಕ ಹಗ್ಗವನ್ನು ಸರ್ಪ ಎಂದು ಭಾವಿಸುವದು ಸಹಜವಾಗಿದೆ. ಹಾಗೆ ಬ್ರಹ್ಮಾತಿರಿಕ್ತ ಸ್ಥಾನವೆಂಬುದೇ ಇಲ್ಲದಿರುವಾಗ ಬ್ರಹ್ಮನಲ್ಲಿ ಜಗತ್ತು ತೋರುವದೆಂತು? ಅದಕ್ಕಾಗಿ ಶಿವದರ್ಶನದಲ್ಲಿ ಶಿವನೆಂಬುವನು ಶಕ್ತಿಸಮೇತನಾಗಿರುವನು. ಅವನಿಗೆ ಲೀಲೆ ಮಾಡುವ ಇಚ್ಛೆಯಾದಾಗ ಜಗದ್ರೂಪದಲ್ಲಿ ಪರಿಣಮಿಸುವನು ಎಂದು ಹೇಳಲಾಗಿದೆ. ಸತ್, ಚಿತ್ ಆನಂದ ಸ್ವರೂಪನಾದ ಶಿವನು ಜೀವ ಜಗತ್ ರೂಪದಲ್ಲಿ ಪರಿಣಾಮ ಹೊಂದಿದಾಗ ಲಿಂಗ, ಅಂಗ ಎಂಬ ಎರಡು ಭಾಗವಾಯಿತು. ಲಿಂಗವೇ ಉಪಾಸ್ಯ, ಅಂಗವೇ ಉಪಾಸಕ ಆಗುವದು. ಲಿಂಗತತ್ತ್ವದಲ್ಲಿ ೧೧ ಅಂಗತತ್ತ್ವದಲ್ಲಿ ೨೫ ಹೀಗೆ ಒಟ್ಟು ೩೬ ತತ್ತ್ವರೂಪವುಳ್ಳದ್ದಾಗುವದು. ಇದೆಲ್ಲ ಪ್ರವೃತ್ತಿ ಮಾರ್ಗದಲ್ಲಿ ನಡೆದಾಗ.

ಶಿವತತ್ತ್ವವು ಪ್ರವೃತ್ತಿಪರವಾದಾಗ ಲಿಂಗ, ಅಂಗರೂಪದಲ್ಲಿ ಪರಿಣಾಮ ಹೊಂದಿ, ವ್ಯವಹರಿಸಿ, ನಿವೃತ್ತಿಪರನಾದಾಗ ಅಂಗನನ್ನು ತನ್ನಲ್ಲಿ ಲಯಗೊಳಿಸಲು ತೊಡಗುವನು. ಅದಕ್ಕಾಗಿ ಅಂಗನು "ಅಂಗಚ್ಛತೀತಿ ಅಂಗಂ" ಎನಿಸಿಕೊಂಡನು. ಅದಕ್ಕಾಗಿಯೇ ಸಾಧನ ಮಾರ್ಗದಲ್ಲಿ ಅಂಗನು ಸಾಗಿ, ಲಿಂಗೋಪಾಸನೆಯಿಂದ ಲಿಂಗರೂಪವನ್ನು ಪಡೆದುಕೊಳ್ಳಬೇಕಾಗುವದು. ಇಲ್ಲಿ "ಲಿಂಗೋಪಾಸನೆ"ಯೆಂದರೆ ಲಿಂಗವನ್ನು ಎದುರಿಗಿಟ್ಟುಕೊಂಡು ಭಿನ್ನ ದೃಷ್ಟಿಯಿಂದ ಅರ್ಚನ ನಡೆಸುವದಲ್ಲ. "ಅಹಂ ಗೃಹೋಪಾಸನಾ ರೂಪವಾದದ್ದು" ಅಂಗನು ತಾನು ಲಿಂಗವೇ ಆಗಿರುವೆನೆಂಬ ಸದ್ಭಾವವನ್ನು ಬೆಳೆಸಿಕೊಳ್ಳುವ ಪ್ರಕ್ರಿಯೆಯದು. ಈ ಉದ್ದೇಶವನ್ನು ಸಾಧಿಸುವದಕ್ಕಾಗಿ, ಪ್ರತಿಯೊಬ್ಬ ಸಾಧಕನು ತನ್ನ ಅಂಗದ ಮೇಲೆ

ಲಿಂಗಧಾರಣ ಮಾಡಿಕೊಂಡು, 'ನಾನೇ ಲಿಂಗನಾಗಿರುವೆ' ಎಂಬ ನೈಜಸ್ವರೂಪದ ಎಚ್ಚರ ದಲ್ಲಿರುವನು. "ಮುಕ್ತಿ ಕಾಮೋಲಿಂಗಧಾರಣ ಮಾಚರೇತ್" ಎಂದು ಶ್ರುತಿ ಸಾರಿದೆ.

"ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷುಚ।
ಲಿಂಗಧಾರಣ ಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್॥"

ಅದ್ವೈತಮತದಲ್ಲಿ "ಜ್ಞಾನಾದೇವ ಹಿ ಕೈವಲ್ಯಂ" ಎಂದು ಕೇವಲ ಜ್ಞಾನಕ್ಕೇನೇ ಮಹತ್ವಕೊಡಲಾಗಿದೆ. ಶಿವಸಿದ್ಧಾಂತದಲ್ಲಿ ಜ್ಞಾನಕರ್ಮಗಳೆರಡೂ ಬೇಕೆಂದು ಹೇಳ ಲಾಗುವದು.

"ನಕ್ರಿಯಾರಹಿತಂ ಜ್ಞಾನಂ ನ ಜ್ಞಾನರಹಿತಾಕ್ರಿಯಾ।
ಅಪಶ್ಯನ್ ಅಂಧಕೋದಗ್ಧೋಽಗಚ್ಛನ್ ಪಂಗುಶ್ಚದಹ್ಯತೇ॥"

ವೀರಶೈವ ಸಿದ್ಧಾಂತದಲ್ಲಿ ಜಗತ್ತು ಮಿಥ್ಯೆಯಲ್ಲ. ದುಃಖಮಯವಲ್ಲ, ಇದು ಶಿವ ಪ್ರಸಾದರೂಪವಾಗಿದೆ.

ಈ ಲೋಕದಲ್ಲಿ ಹುಟ್ಟಿ ಬಂದ ಜೀವಿಗಳು ಲೌಕಿಕ ಭೋಗದಿಂದ ದೂರ ಸರಿ ಯದೇ, ಅವುಗಳೊಡನೆ ನಿರ್ಲೇಪ ಸ್ಥಿತಿಯಲ್ಲಿದ್ದು ಶಿವಸ್ವರೂಪ ಪಡೆಯಬೇಕಾಗುವದು.

ಲೌಕಿಕ ಜೀವನವೇ ಶುದ್ಧ ಶಿವಮಯ ಜೀವನವಾಗಿ ಪರಿಣಮಿಸಬೇಕು. ಲೋಕಾನು ಭವವೇ ಶುದ್ಧ ಶಿವಮಯ ಜೀವನವಾಗಿ ರೂಪಗೊಳ್ಳಬೇಕು. ಇದನ್ನು ಸಾಧಿಸ ಬಯ ಸುವವರಿಗೆ ಅಷ್ಟಾವರಣ, ಪಂಚಾಚಾರಗಳ ಆಚರಣೆಯಿಂದ ಕೂಡಿದ ಷಟಸ್ಥಲಾ ಚರಣೆಯೇ ಪರಮ ಸಾಧನವೆಂದು ಅನುಭಾವಿಗಳು ಹೇಳಿದ್ದಾರೆ.

ವೀರಶೈವ ಸಿದ್ಧಾಂತದಲ್ಲಿ ಹೇಳಿದ ಸಂಸಾರ ಹೇಯಸ್ಥಲದ ಬಗ್ಗೆ ಸರಿಯಾಗಿ ತಿಳಿದುಕೊಂಡರೆ ಅದ್ವೈತಿಗಳು ಹೇಳುವ ಸಂಸಾರ ಹೇಯವಲ್ಲವೆಂದು ತಿಳಿಯದಿರದು.

ಸಂಸಾರವೆಂದರೆ ಆತ್ಮನು ಸತಿ ಪುತ್ರಾದಿಗಳೊಡನೆ ಕುಟುಂಬ ಜೀವಿಯಾಗಿ ವಿಷಯಗಳನ್ನು ಭೋಗಿಸುವದೇ ಆಗಿರುವದು. ಜೀವನ ವೃತ್ತಿಗೆ "ಕಾಯಕ ಸ್ವರೂಪ" ಕೊಟ್ಟು ಲೌಕಿಕ ಜೀವನವನ್ನೇ, ಪಾರಮಾರ್ಥಿಕ ಜೀವನವನ್ನಾಗಿ ಪರಿಣಮಿಸುವಂತೆ ಆಚರಿಸುವವರಿಗೆ ಸಂಸಾರದ ಸುಖ ದುಃಖಗಳು ಅಂಟಿಕೊಳ್ಳಲಾರವು. ವೀರಶೈವ ಸಮಾಜದಲ್ಲಿ ವೈರಾಗ್ಯ ಶೀಲರಾದ ಪ್ರಭುದೇವ, ಅಕ್ಕಮಹಾದೇವಿ ಮುಂತಾದವರು ಅವಿವಾಹಿತರಾಗಿ ವೈಯಕ್ತಿಕ ಜೀವನ ಮಾರ್ಗದಲ್ಲಿ ನಡೆದದ್ದುಂಟು. ಇದು ಅವರ ಸ್ವಭಾವಕ್ಕನು ರೂಪಿಯಾಗಿರುವದು. ವಿವಾಹವು ಷಟಸ್ಥಲಾಚರಣೆಗೆ ಪ್ರತಿಬಂಧಕವೆಂದು ತಿಳಿಯಕೂಡದು.

"ಕಾಯವೆಂಬ ವನಿತೆಗೆ, ಆತ್ಮನೆಂಬ ಪುರುಷ ನೋಡಾ
ಈ ದೇಹದ, ಆತ್ಮನ ಸಂಬಂಧದಿಂದ ಹುಟ್ಟಿದ

ಸಕಲ ಕರಣೇಂದ್ರಿಯಗಳೇ ಮಕ್ಕಳು ನೋಡಾ
ಇದೇ ಸಂಸಾರವೆಂದರಿಯದೆ ನಾನು ಹೊನ್ನು
ಹೆಣ್ಣು ಮಣ್ಣು ಬಿಟ್ಟು ವಿರಕ್ತನಾದೆನೆಂಬ
ಅಜ್ಞಾನಿಯ ಪರಿಯ ನೋಡಾ
ಇದು ವಿರಕ್ತಿಯೇ ಅಲ್ಲ
ದೇಹ ಇಂದ್ರಿಯ ಮನಃಪ್ರಾಣಾದಿಗಳ
ಮಹದಲ್ಲಿ ಒಡಗೂಡಿದಾತನೇ ಪರಮವಿರಕ್ತನು
ಆತನಿಗೆ ನಮೋ ನಮೋ ಎಂಬೆನು
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ"

—ಸಿದ್ಧಲಿಂಗಯತಿಗಳು

ಎಂಬ ವಚನದಿಂದ ವಿವಾಹದಿಂದಲೇ 'ಸಂಸಾರಿ'ಯಾಗುವನೆಂಬುದು ನಿಷೇಧಿಸಲ್ಪಟ್ಟಿದೆ.

ಭಕ್ತಿಭಾವದಿಂದ ಕೂಡಿದ್ದು ಸಂಸಾರವಲ್ಲ. ಹೇಯವಲ್ಲ, ಉಪಾದೇಯವು, ಅದೇ ಶ್ರೇಯವು.

"ಸಮದೃಷ್ಟಿಯಾಗದವನ ಭಕ್ತನೆಂತೆಂಬೆ?
ವಿಷಯಂಗಳಳಿಯದವನ ಮಹೇಶ್ವರನೆಂತೆಂಬೆ?
ಶಿವಕರುಣ ಪಡೆಯದನ್ನಕ್ಕ ಪ್ರಸಾದಿಯೆಂತೆಂಬೆ?
ಅಂಗೇಂದ್ರಿಯಗಳಳಿಯದವನ ಪ್ರಾಣಲಿಂಗಿಯೆಂತೆಂಬೆ?
ಸಂಕಲ್ಪ ಹರಿಯದನ್ನಕ್ಕ ಶರಣನೆಂತೆಂಬೆ?
ನಮ್ಮ ಕಪಿಲಸಿದ್ಧ ಮಲ್ಲೇಶನ ಕೂಟವ ನರಿಯದವನ ಐಕ್ಯನೆಂತೆಂಬೆ?"

* * * *

ಹೀಗೆ ಭಾರತದಲ್ಲಿ ಆಧ್ಯಾತ್ಮಿಕ ಮೀಮಾಂಸೆಯೇನೋ ಬಹುಕಾಲದಿಂದಲೂ ಸಾಗಿ ಬಂದಿರುವದೇನೋ ನಿಜ. ಅನೇಕ ಜನ ತತ್ತ್ವಾನ್ವೇಷಿಗಳು ಈ ಬಗ್ಗೆ ಕೃಷಿ ಮಾಡಿ ದಣಿದುಕೊಳ್ಳಬೇಕಾಯಿತು. ಇಂತಹ ಅತಿ ಕಠಿಣವಾದ ಆಧ್ಯಾತ್ಮಿಕ ತತ್ತ್ವಜ್ಞಾನವನ್ನು ತಮ್ಮ ಅನುಭವ ಮೂಸೆಯಲ್ಲಿ ಹಾಕಿ ಅದಕ್ಕೊಂದು ಉತ್ತಮ ಸ್ಥಿತಿ ಪ್ರಾಪ್ತವಾಗುವಂತೆ ಮಾಡಿದ ಶ್ರೇಯಸ್ಸು ಕನ್ನಡ ನಾಡಿನ ಶರಣ-ಶರಣೆಯರಿಗೇನೇ ಸಲ್ಲುವದಾಗಿದೆ.

ಇದು ಕೇವಲ ಕನ್ನಡ ಸಾಹಿತ್ಯ ವಾಙ್ಮಯಕ್ಕೆ ಸಲ್ಲುವ ಗೌರವವಾಗದೆ ಕನ್ನಡಿಗರ ಗೌರವಕ್ಕೂ ಸೇರುವದಾಗಿರುವದೆಂಬುದು ಅತ್ಯಂತ ಸಂತಸಕರವಾದದ್ದು.

ಇಂತಹ ಅನುಭಾವ ಸಾಹಿತ್ಯದ ಮುಂದೆ ಓಡಿ ಹೋಗಬಲ್ಲ ಸಾಹಿತ್ಯ ಯಾವುದೂ ಇಲ್ಲವೆಂಬ ಬಗ್ಗೆ ಅನೇಕ ತತ್ತ್ವಾನ್ವೇಷಿಗಳಾದ ಮನೀಷಿಗಳು ಮುಕ್ತಕಂಠದಿಂದ ಹೇಳಿದ್ದುಂಟು. ಭಾರತದಲ್ಲಿ ಉಪನಿಷದ್ವಾಙ್ಮಯಕ್ಕಿರುವ ಗೌರವವು ಕನ್ನಡ ವಾಙ್ಮಯಕ್ಕೆ

ಸಲ್ಲುವದಾಗಿರುವದೆಂಬುದು ಕನ್ನಡ ಸಾಹಿತ್ಯಕ್ಕೂ, ಕನ್ನಡಿಗರಿಗೂ ಗೌರವ ತರುವಂತಹದಾಗಿರುವದು.

ಬಹುಕಾಲದಿಂದ ತತ್ತ್ವಾನ್ವೇಷಣದಲ್ಲಿ ತೊಡಗಿಕೊಂಡಿದ್ದ ಮಹಾಮಹಾ ಬುದ್ಧಿಶಾಲಿಗಳೆನಿಸಿದ ಆಚಾರ್ಯರಿಂದ ಸಾಧ್ಯವಾಗದ್ದನ್ನು ತಮ್ಮ ಅನುಭವ ಕುಲುಮೆಯಲ್ಲಿ ಕಾಸಿ, ಬಡಿದು ಒಂದು ಹದಕ್ಕೆ ತಂದಿಟ್ಟ ಶರಣರ ಸಾಹಸವು, ಕೈಲಾಸದ ಗಂಗೆಯನ್ನು ಭೂಮಿಗೆ ತಂದಿಳಿಸಿದವನಿಗಿಂತಲೂ ಹೆಚ್ಚಿನದಾಗಿದೆ. ಅತ್ಯುಚ್ಚ ಮಟ್ಟ ದೇವವಾಣಿಯೆನಿಸಿದ ಸಂಸ್ಕೃತವು, ಕನ್ನಡ ನುಡಿಯ ಮಟ್ಟಕ್ಕಿಳಿಯದಿದ್ದಾಗ ಕನ್ನಡ ನುಡಿಯನ್ನೇ ದೇವವಾಣಿಯ ಮಟ್ಟಕ್ಕೇರಿಸುವಂತೆ ಮಾಡಿದ ಶರಣರ ಋಣವನ್ನು ಕನ್ನಡಿಗರು ತೀರಿಸುವದೆಂತು!!

ಅಚ್ಚಳಿಯದ ನಿಜಾನಂದವನ್ನುಂಟು ಮಾಡಬಲ್ಲುದೇ "ಅನುಭಾವ". ಅದರ ಮಹತಿಯನ್ನು ಎತ್ತಿ ತೋರಿಸಲು ಈ ಮಾತಷ್ಟೇ ಸಾಕು. ಜ್ಞಾನದ ಪರಿಪಕ್ವವಾದ ಅವಸ್ಥೆಯೇ 'ಅನುಭಾವ'ವೆಂದು ಹೇಳಿದಾಗ ಅದರ ಮುಂದೆ ಮತ್ತಾವುದಿರುವದು? ಎಂಬ ಪ್ರಶ್ನೆಗೆ ಅವಕಾಶವೇ ಇರುವದಿಲ್ಲ. ಜ್ಞಾನ, ಸುಜ್ಞಾನ, ಮಹಾಜ್ಞಾನ ಎಂಬ ಜ್ಞಾನ ತ್ರಯದಲ್ಲಿ ಪರಾಕಾಷ್ಠವನ್ನು ಪಡೆದದ್ದೇ "ಅನುಭಾವ"ವೆನಿಸುವದು. ಕೇಳಿ ತಿಳಿದು ಕೊಳ್ಳುವದು ಜ್ಞಾನವಾದರೆ ಅದರಂತೆ ನಡೆದು ತಿಳಿದುಕೊಳ್ಳುವುದು "ಸುಜ್ಞಾನ"ವೆನಿಸುವದು. 'ಸುಜ್ಞಾನ'ದೊಡನೆ ಒಂದಾಗುವದೇ ಮಹಾಜ್ಞಾನವಾಗುವದು.

ಅನುಭವವೆಂದರೆ ಕೇವಲ ಬೌದ್ಧಿಕವಾಗಲಾರದು. ಅದು ಸದುಹೃದಯದ ಸದ್ಭಾವ ಸಹಕೃತವಾದಾಗಲೇ ತನ್ನ ನೈಜ ಸ್ಥಿತಿಯಲ್ಲುಳಿಯುವದು. ಅದಕ್ಕಾಗಿ "ಅಪೌರುಷೇಯ"ಗಳೆಂದು ಕರೆಯಿಸಿಕೊಳ್ಳುವ ಉಪನಿಷತ್ತುಗಳಿಗಿಂತಲೂ ಹೆಚ್ಚಿನ ಸ್ಥಾನಮಾನಗಳನ್ನು ಪಡೆದುಕೊಂಡ ವಚನ ವಾಙ್ಮಯವು, ಕನ್ನಡ ವಾಙ್ಮಯಕ್ಕೂ, ಕನ್ನಡಿಗರಿಗೂ ನಿಜವಾದ ಗೌರವವನ್ನು ತಂದುಕೊಡುವದಾಗಿರುವದು. ಆಧ್ಯಾತ್ಮಿಕದಂತಹ ಕ್ಲಿಷ್ಟ ವಿಷಯವನ್ನು ಸುಬೋಧವಾಗಿ ಹೇಳಬಲ್ಲ ಜಾಣ್ಮೆಯನ್ನು ಕಾಣುವದು ಶರಣ ಶರಣೆಯರಲ್ಲಿಯೇ! ಅವರ ಸಾಹಿತ್ಯ ಕನ್ನಡ ಸಾಹಿತ್ಯ ಮಂದಿರಕ್ಕೆ ಹೆಚ್ಚಿನ ಸ್ವರ್ಣಕಲಶ ವಿಟ್ಟಂತಿರುವದು.

| ನಿಗಮಾಂತ | ಆಗಮಾಂತ |
|---|---|
| ೧. ವೇದಾಂತ | ಸಿದ್ಧಾಂತ |
| ೨. ಬ್ರಹ್ಮಾದ್ವೈತ (ಜಗನ್ಮೂಲತತ್ತ್ವ) | ಶಿವಾದ್ವೈತ |
| ೩. ಬ್ರಹ್ಮ ನಿರ್ವಿಶೇಷ | ಶೂನ್ಯ ನಿಶೂನ್ಯ ಸರ್ವಶೂನ್ಯ ನಿರಾಲಂಬ ಶಿವ ಸವಿಶೇಷ |

| | | |
|---|---|---|
| ೪. | ಜಗತ್‍ಬ್ರಹ್ಮವಿವರ್ತ | ಜಗತ್‍ಬ್ರಹ್ಮ ಪರಿಣಾಮ (ಅವಿಕೃತ ಪರಿಣಾಮ) |
| ೫. | ಜಗತ್ ಮಿಥ್ಯಾ (ಜೀವ ಬ್ರಹ್ಮೈಕ್ಯವ) | ಜಗತ್ ಸತ್ಯ (ಜೀವ ಸತ್ಯ ಶಿವರೂಪ) |

* * * *

ಷಟ್‍ಸ್ಥಲಾಚರಣದಿಂದ ಆತ್ಮನ ಮತ್ತು ಅವನ ತನುಕರಣಾದಿಗಳ ದುಷ್ಟ ಸಂಸ್ಕಾರವು ದೂರವಾಗುವದು. ಅವನಲ್ಲಿ ಸತ್ಕ್ರಿಯಾ-ಸುಜ್ಞಾನಗಳ ಸಂಸ್ಕಾರವು ಗಟ್ಟಿಗೊಳ್ಳುವುದು. ಆಮೇಲೆ ಆತ್ಮನಲ್ಲಿ ಲಿಂಗಕಳಾ ಪ್ರಕಾಶವು ಬೆಳಗುವದು. ಹೀಗಾಗುವದೇ ಸರ್ವಾಂಗ ಲಿಂಗಸ್ಥಿತಿ. ಈ ಸ್ಥಿತಿಯಲ್ಲಿ ಆತ್ಮನ ಭೂತಕಾಯವು ಪ್ರಸಾದ ಕಾಯಕವಾಗುವದು. ಮಾಂಸಪಿಂಡವು ಮಂತ್ರಪಿಂಡವಾಗುವದು. ಕರಣಗಳು ಲಿಂಗಕರಣಗಳಾಗುವವು. ಈ ಅವಸ್ಥೆಯಲ್ಲಿ ಆತ್ಮನ ದೇಹ, ಇಂದ್ರಿಯಗಳು, ಪ್ರಾಣ ರಸರಕ್ತಾದಿ ಧಾತುಗಳು ಮೊದಲಾದ ಅಂಗಗಳ ಸರ್ವ ಭಾಗದಲ್ಲಿಯೂ ತಾತ್ತ್ವಿಕ ರೀತಿಯಿಂದ ಷಡ್ಲಿಂಗಗಳ ಮತ್ತು ಷಡಕ್ಷರಗಳ ಸಂಬಂಧವನ್ನು ವಿವರಿಸಲಾಗುವದು. ಈ ವಿವರಣೆಯಲ್ಲಿ ಸರ್ವಾಂಗಲಿಂಗ ಸ್ಥಿತಿಯು ಹೃದಯಂಗಮವಾಗಿ ಚಿತ್ರಿತವಾಗಿರುವದು. ಉದಾಹರಣೆಗಾಗಿ-ಮೊಗ್ಗೆಯ ಮಾಯಿದೇವರು ತಮ್ಮ 'ವಿಶೇಷಾರ್ಥ ಪ್ರಕಾಶಿಕೆ'ಯಲ್ಲಿ ಹೇಳಿರುವ ಸರ್ವಾಂಗಲಿಂಗ ಸ್ಥಿತಿಯನ್ನು ಇಲ್ಲಿ ವಿವರಿಸಲಾಗುವದು.

"ಆಚಾರೋಽಯಂ ದೇಹ ಆತ್ಮಾ ಗುರುಸ್ತತ್ಪ್ರಾಣೋ-
ಲಿಂಗಂಸ್ಯಾಚ್ಚರಶ್ಚೇಂದ್ರಿಯಂಹಿ । ಪ್ರಾಸಾದೋಽ
ಸೌ ಗೋಚರೋ ಯನ್ಮಹತ್‍ಸ್ಯಾತ್ತೃಪ್ತಿಃ
ಸಾಕ್ಷಾತ್ ಷಟ್‍ಸ್ಥಲ ಬ್ರಹ್ಮಮೂರ್ತಿಃ ॥

—(ವಿಶೇಷಾರ್ಥ ಪ್ರಕಾಶಿಕೆ)

ಶ್ರೀ ವಿರಕ್ತ ತೋಂಟದಾರ್ಯರು ತಮ್ಮ ಸಿದ್ಧೇಶ್ವರ ಪುರಾಣದ ೨೧ನೇ ಸಂಧಿಯ ೨೮ನೇ ಪದ್ಯದಲ್ಲಿ ಶ್ರೀ ತೋಂಟದ ಸಿದ್ಧಲಿಂಗನ ಲಿಂಗಾನಂದ ಯೋಗವನ್ನು ಸರಳವಾಗಿ ಷಟ್ಪದಿಯಲ್ಲಿ, ಮೇಲಿನ ಶ್ಲೋಕದ ಅರ್ಥಕ್ಕನುಸರಿಸಿ ಹೀಗೆ ವರ್ಣಿಸಿರುವರು.

"ವಿಲಸಿತಾಚಾರಲಿಂಗವೆ ದೇಹವಾಗಿ ನಿ । ಶ್ಚಲ ತರದ
ಗುರುಲಿಂಗವೇ ಆತ್ಮವಾಗಿ ನೆರೆ । ಸುಲಭದಿಂ
ಶಿವಲಿಂಗವೇ ಪ್ರಾಣವಾಗಿ ಚರಲಿಂಗ ವಿಂದ್ರಿಯಗಳಾಗಿ ॥
ವಿಲಸತ್ಪ್ರಸಾದರೂಪದ ಲಿಂಗವೇ ವಿಷಯ ॥
ಕುಲವಾಗಿ ತೊಳಗುವ ಮಹಾಲಿಂಗವೇ ಮಹೋ ।
ಜ್ವಲ ತೃಪ್ತಿಯಾಗಿ ಯಾತೃಪ್ತಿಯಿಂದಿತರತರುವನರಿಯದೊಪ್ಪಿರ್ದನು ॥"

ಅಂದರೆ–ಷಟ್‌ಸ್ಥಲಾಚರಣದಲ್ಲಿ ನಿರತನಾದ ಅಂಗನ (ಜೀವಾತ್ಮನ) ದೇಹ, ಆತ್ಮ, ಪ್ರಾಣ, ಇಂದ್ರಿಯಗಳು, ಇಂದ್ರಿಯಂಗಳಿಂದ ಭೋಗ್ಯವಾದ ವಿಷಯಗಳು ವಿಷಯಾನುಭವದಿಂದುಂಟಾಗುವ ತೃಪ್ತಿ. ಈ ಆರು ಕ್ರಮವಾಗಿ–ಆಚಾರಾದಿಯಾದ ಆರು ಲಿಂಗಗಳ ಸ್ವರೂಪವಾಗಿರುವವು. ಷಡ್ಲಿಂಗ ಸ್ವರೂಪವೇ ಷಟ್‌ಸ್ಥಲ ಬ್ರಹ್ಮರೂಪವು ಈ ರೂಪವನ್ನು ಪಡೆಯುವದೇ ಸರ್ವಾಂಗ ಲಿಂಗ ಸ್ಥಿತಿಯು.

ಷಟ್‌ಸ್ಥಲಾಚರಣೆಗೆ ಪ್ರಸಾದಭೋಗ ಅವುಗಳಿಂದುಂಟಾಗುವ ತೃಪ್ತಿ ಇವುಗಳೇ ಫಲವು. ಜಗತ್ತಿನ ಸತ್ಪದಾರ್ಥಗಳೆಲ್ಲವೂ ಪ್ರಸಾದವಾಗಿ ಪರಿಣಮಿಸಬೇಕು. ಆತ್ಮನು ಅಪ್ರಸಾದ ಭೋಗಿಯಾಗಿ ತೃಪ್ತನಾಗಬೇಕು. ಈ ತೃಪ್ತಿಯು ನಿತ್ಯವಾದುದು, ಲಿಂಗಾನಂದರೂಪವಾದುದು. ಇದೇ ಲಿಂಗಭೋಗೋಪ ಭೋಗಜನ್ಯವಾದ ಶಿವಸುಖವು. ಇದನ್ನು ಪಡೆದವನು ಮುಕ್ತ ಜೀವಿಯು. ಈ ಸ್ಥಿತಿಯನ್ನು ಪಡೆಯುವದೇ ಷಟ್‌ಸ್ಥಲಾಚರಣೆಯ ಗುರಿ. ಜಗತ್ತಿನ ಪದಾರ್ಥಗಳು ಪ್ರಸಾದರೂಪವಾಗಿ ಗೋಚರಿಸಬೇಕಾದರೆ– ದೇಹ, ಆತ್ಮ, ಪ್ರಾಣ, ಇಂದ್ರಿಯಗಳು ಇವುಗಳು ಮೊದಲು ಶುದ್ಧಿಯಾಗಬೇಕು. ಲಿಂಗರೂಪವಾಗಬೇಕು. ಆದ್ದರಿಂದ ಷಟ್‌ಸ್ಥಲಾಭ್ಯಾಸಿಯು ಮೊದಲು ಸದಾಚಾರಿಯಾಗಿರಬೇಕು. ಸದಾಚಾರದಿಂದ ಭೂತಕಾಯವಳಿದು ಲಿಂಗಕಾಯವಾಗುವದು. ಈ ಕಾಯವನ್ನೇ ಆಚಾರಲಿಂಗ ಸ್ವರೂಪವಾದುದೆಂದು ಹೇಳುವರು. ಗುರುಬೋಧೆಯಿಂದ ಆತ್ಮನು ಅಹಂಕಾರ ಮಮಕಾರ ರೂಪವಾದ ಭ್ರಾಂತಿಯನ್ನು ತ್ಯಜಿಸಿ ಲಿಂಗಜ್ಞಾನಮಯನಾದರೆ ಆತ್ಮನು ಗುರುಲಿಂಗ ಸ್ವರೂಪನಾಗುವನು. ಇದರಂತೆ ಆತ್ಮನ ಪ್ರಾಣವು ವಾಯುರೂಪವಾಗಿರದೆ, ಲಿಂಗಮಯ ಪ್ರಾಣವಾದರೆ ಅದು ಶಿವಲಿಂಗ ಸ್ವರೂಪವಾಗುವದು ಮತ್ತು ಆತ್ಮನ ಇಂದ್ರಿಯಗಳ ಚಂಚಲತ್ವವಡಗಿ ವಿಷಯ ಭೋಗವನ್ನು ಬಿಟ್ಟು, ಲಿಂಗಭೋಗಕ್ಕೆ ಅವು ತಕ್ಕವುಗಳಾಗಬೇಕು. ಆಗ ಅವು ಜಂಗಮಲಿಂಗ ಸ್ವರೂಪವಾಗುವವು. ಈ ಸ್ಥಿತಿಯನ್ನು ಪಡೆದ ಭಕ್ತನಿಗೆ ಜಗತ್ತಿನ ಸತ್ಪದಾರ್ಥ ಸಮೂಹವು ಶಿವಪ್ರಸಾದವಾಗಿ ಕಾಣುವದು. ಈ ರೀತಿಯಿಂದ ಗೋಚರಿಸುವ ಪ್ರಸಾದವೇ ಪ್ರಸಾದಲಿಂಗವು. ಈ ಪ್ರಸಾದ ಭೋಗದಿಂದ ಜನಿಸಿದ ತೃಪ್ತಿಯೇ ಮಹಾಲಿಂಗ. ಈ ರೀತಿಯ ಮಹಾಲಿಂಗದಲ್ಲಿ (ತೃಪ್ತಿಯಲ್ಲಿ) ಸಮರಸ ಹೊಂದಿದ ಭಕ್ತನು ಷಟ್‌ಸ್ಥಲ ಬ್ರಹ್ಮಮೂರ್ತಿಯಾಗಿ ಕಂಗೊಳಿಸುವನು. ಇದೇ ಸರ್ವಾಂಗಲಿಂಗ ಸ್ಥಿತಿಯು ಶಕ್ತಿವಿಶಿಷ್ಟಾದ್ವೈತದ ಮತ್ತು ಅಷ್ಟಾವರಣ ಪಂಚಾಚಾರಗಳಿಂದ ಕೂಡಿದ ಷಟ್‌ಸ್ಥಲ ಸಿದ್ಧಾಂತದ ಸ್ವರೂಪಗಳ ವಿಚಾರವು, ಆತ್ಮಶಕ್ತಿ ವಿಕಾಸ ರೂಪವಾದ ಭಾರತೀಯ ಸಂಸ್ಕೃತಿಗೆ ಹೇಗೆ ಪೋಷಕವಾಗಿರುವದೆಂಬುದು ವಿವೇಕಿಗಳಿಗೆ ಹೊಳೆಯದಿರದು. ಇದರಂತೆ ಅದ್ವೈತಾದಿ ತತ್ತ್ವ ಶಾಸ್ತ್ರಗಳೂ ಸಂಸ್ಕೃತಿಯ ಪೋಷಕಗಳಾಗಿರುವವು. ತತ್ತ್ವ ಶಾಸ್ತ್ರಗಳ ಪ್ರಕ್ರಿಯೆಯೂ ಪ್ರತಿಪಾದನ ಕ್ರಮವೂ ಭಿನ್ನವಾಗಿದ್ದರೂ ಅವೆಲ್ಲವುಗಳ ಗುರಿಯು ಒಂದೇ ಇರುವದು. ಈ ದೃಷ್ಟಿಯಿಂದ ಸರ್ವ

ತತ್ತ್ವ ಶಾಸ್ತ್ರಗಳನ್ನು ಅಭ್ಯಾಸಮಾಡಿ ಭಾರತೀಯರು ಆತ್ಮವಿಕಾಸವನ್ನು ಮಾಡಿಕೊಳ್ಳಬೇಕು.

* * * *

ಸರ್ವೇ ಭವಂತು ಸುಖಿನಃ ।
ಸರ್ವೇ ಸಂತು ನಿರಾಮಯಾಃ ॥
ಸರ್ವೇ ಭದ್ರಾಣಿ ಪಶ್ಯಂತು ।
ಮಾಕಶ್ಚಿತ್ ದುಃಖಭಾಕ್ ಭವೇತ್ ॥

# ಮಾಯಿದೇವರ ಷಟ್ಸ್ಥಲ ವಿವೇಚನೆ

—ಡಾ. ಪರಡ್ಡಿ ಮಲ್ಲಿಕಾರ್ಜುನ, ಧಾರವಾಡ

ಎಲೆ ರಾಮು ಕೇಳಿನ್ನು ಸಕಲಾಗಮಂಗಳಿಗೆ
ನೆಲೆಯೆನಿಸಿ ಪ್ರೌಢನಿಂ ಪೂಜೆಯಂ ಕೊಂಡು ಷಟ್
ಸ್ಥಲ ಮಾರ್ಗಮಂ ಸಕಲ ಶಿವಭಕ್ತಿ ಸಂತತಿಗೆ ಕರತಲಾಮಲಕವಾಗಿ ।
ತಿಳಿವೊಲನುಭವ ಸೂತ್ರವಾದಿ ಶಾಸ್ತ್ರಂಗಳ
ಗೆಲವಿನಿಂ ಪೇಳ್ದು ನಿಜ ಶಿವಸಮಾಧಿಯಲಿ ಮಿಗೆ
ನಿಲವಿನಿಂದಲ್ಲಿ ಮೊಗ್ಗೆಯ ಮಾಯಿದೇವ ಪ್ರಭುವನಿರದೆ ಮುಕ್ತನಹುದು ॥೧

ವಿರೂಪಾಕ್ಷ ಪಂಡಿತ ಕೃತ ಚೆನ್ನಬಸವ ಪುರಾಣದ ಈ ಪದ್ಯದಿಂದ ಮೊಗ್ಗೆಯ ಮಾಯಿದೇವ ಪ್ರಭುಗಳು ಪ್ರೌಢದೇವರಾಯನ ಕಾಲದಲ್ಲಿದ್ದು, ಇವರ ಕಾಲ ಸುಮಾರು ಕ್ರಿ. ಶ. ೧೪೩೦ ಇರಬಹುದೆಂದು ಕರ್ನಾಟಕ ಕವಿ ಚರಿತೆಕಾರರ ಅಭಿಪ್ರಾಯವಾಗಿದೆ.೨ ಮಾಯಿದೇವರು ತಮ್ಮ ವಾಸಸ್ಥಳದ ಬಗ್ಗೆ ಈ ರೀತಿ ಹೇಳಿಕೊಂಡಿದ್ದಾರೆ–

ತಾವೆಲ್ಲ ಪುರೀಮಹಂ ವಂದೇ ಭವಪಾಶ ನಿಕೃಂತಿನೀಂ
ಯಸ್ಯಾಂ ಸನ್ನಿಹಿತಃ ಪ್ರೀತ್ಯಾ ಸೋಮಃ ಸೋಮಾರ್ಧಶೇಖರಃ ॥೩

ಎಂಬಿತ್ಯಾದಿ ಸವಿಸ್ತಾರ ವರ್ಣನೆಯಿಂದ "ಮಲಪಹಾರಿಣೀ ನದಿಯ ತೀರದಲ್ಲಿರುವ ಐಪುರ ಕ್ಷೇತ್ರವು ಮಾಯಿದೇವರ ವಾಸಸ್ಥಾನ"ವೆಂದು ನಿಶ್ಚಿತವಾಗಿ ತಿಳಿದುಬರುತ್ತದೆ.

'ಕುಮತ ಮತ ವಿಭೇದೀ ಷಟ್ಸ್ಥಲ ಬ್ರಹ್ಮವಾದೀ'೪

ಎಂಬಿತ್ಯಾದಿಯಾಗಿ ತನ್ನ ವರ್ಣನೆಯನ್ನು ಮಾಡಿಕೊಂಡಿರುವಲ್ಲಿ ಯಾವುದೇ ಅತಿಶಯೋಕ್ತಿಯಿಲ್ಲವೆಂದು ಹೇಳಬಹುದು. ಏಕೆಂದರೆ–

ಸತ್ಯಶುದ್ಧ ಶಿವಾದ್ವೈತ ವಿದ್ಯಾತಂತ್ರ ಸ್ವತಂತ್ರಧೀಃ ।
ಕಲ್ಯಾಣದಾಹ್ವಯಃ ಶ್ರೀಮಾನ್ ಮಾಯಿದೇವ ಮಹಾಪ್ರಭುಃ ॥೫

---

೧ ಚೆನ್ನಬಸವ ಪುರಾಣ ೬೩ನೆಯ ಸಂಧಿ ೩೪ನೆಯ ಪದ್ಯ.
೨ ಆರ್. ನರಸಿಂಹಾಚಾರ್ ಕರ್ನಾಟಕ ಕವಿಚರಿತ ಭಾಗ ೨ ಪುಟ ೨೦
೩ ಶಿವಾನುಭವ ಸೂತ್ರ I.೯
೪ ಅದೇ. I.೨೩
೫ ಅದೇ. I.೨೨

ಎಂಬ ಶ್ಲೋಕದ ಪ್ರಮಾಣದಂತೆ ಕಲ್ಯಾಣಕರ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ ನಿಷ್ಠ ರಾಗಿದ್ದುದಲ್ಲದೇ, ಅವರ ಈ ನಿಷ್ಠೆಗೆ ಪ್ರಮಾಣವನ್ನು "ವಿದ್ಯಾನಗರದಲ್ಲಿ ನೆರಳಿಲ್ಲದ ಒಂದು ಸ್ತಂಭವನ್ನು ನಿಲ್ಲಿಸಿ, ವೀರಶೈವರಿಗೆ ನರಕವಿಲ್ಲವೆಂದು ಸಿದ್ಧಮಾಡಿದ ಘಟನೆ ಯನ್ನು ಭೈರವೇಶ್ವರ ಕಾವ್ಯದಲ್ಲಿ ಶಾಂತಲಿಂಗ ದೇಶಿಕರೂ, ಪಾಲ್ಕುರಿಕೆ ಸೋಮೇಶ್ವರ ಪುರಾಣದಲ್ಲಿ ಸಿದ್ಧನಂಜೇಶನೂ ಉಲ್ಲೇಖಿಸುತ್ತಾರೆ. ಒಟ್ಟಿನಲ್ಲಿ ವೀರಶೈವ ನಿಜಾಚರಣೆ ಯುಳ್ಳ ಮಾಯಿದೇವ ಪ್ರಭುಗಳು ಷಟ್ಸ್ಥಲ ವಿಷಯವಾಗಿ ಅಧಿಕಾರಯುತವಾಗಿ ಮಾತ ನಾಡಲು ಸಮರ್ಥರಾದ ಕೆಲವೇ ವಿದ್ವಾಂಸರಲ್ಲಿ ಅಗ್ರಗಣ್ಯರೆಂದು ಒಪ್ಪುವುದು ನ್ಯಾಯ ಸಮ್ಮತ.

ವಿಶೇಷಾರ್ಥ ಪ್ರಕಾಶಿಕೆಯೆಂಬ ಉತ್ತರ ಭಾಗದಿಂದ ಕೂಡಿದ "ಶಿವಾನುಭವ ಸೂತ್ರ ವೆಂಬ" ಸಿದ್ಧಾಂತ ಗ್ರಂಥವನ್ನೂ, ಶತಕತ್ರಯ ಸಾನುವಾದವೆಂಬ ಮೂಲಗ್ರಂಥವನ್ನೂ ಸಂಸ್ಕೃತದಲ್ಲಿ ಬರೆದಿದ್ದು, ಷಟ್ಸ್ಥಲ ಗದ್ಯ ಮತ್ತು ಏಕೋತ್ತರ ಶತಸ್ಥಲವೆಂಬ ಕನ್ನಡ ಗ್ರಂಥಗಳನ್ನು ಬರೆದಿರುವರು. ಈ ಎಲ್ಲಾ ಮಹತ್ವಪೂರ್ಣವಾದ ಗ್ರಂಥಗಳನ್ನು ಧಾರವಾಡದ ಶ್ರೀ ಮುರುಘಾಮಠವು ಪ್ರಕಟಗೊಳಿಸಿದೆ. ಮೈಸೂರು ವಿಶ್ವವಿದ್ಯಾ ನಿಲಯದ ಪ್ರಾಚ್ಯ ಸಂಶೋಧನ ಸಂಸ್ಥೆಯು ಇತ್ತೀಚೆಗೆ ಶಿವಾನುಭವ ಸೂತ್ರವನ್ನು ದೇವ ನಾಗರಿ ಲಿಪಿಯಲ್ಲಿ ಪ್ರಕಟಮಾಡಿದೆ. ಅವರ ಸಂಸ್ಕೃತ ಗ್ರಂಥಗಳ ಆಧಾರದಿಂದ ಮಾಯಿ ದೇವರ ಷಟ್ಸ್ಥಲ ಸಿದ್ಧಾಂತ ವಿವೇಚನೆಯನ್ನೀಗ ಮಾಡೋಣ.

ಶಾಂಕರಾದ್ವೈತದ ಪರಿಪೂರ್ಣತೆಯೇ ಶೈವಧರ್ಮದ ಹಿನ್ನೆಲೆಯಲ್ಲಿ, ವೀರಶೈವ ವೆಂದು ಕರೆಯಬಹುದಾಗಿದ್ದು, ಶಾಸ್ತ್ರೀಯವಾಗಿ ಶಕ್ತಿವಿಶಿಷ್ಟಾದ್ವೈತವೆಂದು ಪ್ರಸಿದ್ಧ ವಾಗಿದೆ. ಬೀಜದಲ್ಲಿ ವೃಕ್ಷವಾಗುವ ಅದ್ಭುತ ಶಕ್ತಿ ಅಡಗಿರುವಂತೆ ಜೀವನಲ್ಲಿ ಶಿವನಾಗುವ ಶಕ್ತಿ ಅಡಗಿರುತ್ತದೆ. ಅಂದರೆ ಶಿವಜೀವಾ ಭೇದವನ್ನು ಶಕ್ತಿ ವಿಶಿಷ್ಟವಾಗಿ ವಿವರಿಸುವ ಮತವಿದೆನ್ನಲಡ್ಡಿಯಿಲ್ಲ. ಜಗತ್ತು ಮಿಥ್ಯೆ (ಜಗನ್ಮಿಥ್ಯಾ) ಎಂದು ಜರಿಯದೇ ಸಕಲ ಪ್ರಪಂಚವೂ ಶಿವಮಯವಾಗಿರುವುದಲ್ಲದೇ ಜೀವನು ಶಿವನಾಗಲು ಮುಖ್ಯ ಸಾಧನವಾಗಿದೆ. ದೇಹವೇ ಶಿವಾಲಯವಾಗಿರಲು, ಜೀವಿಯ ಪ್ರತಿಯೊಂದು ಕ್ರಿಯೆಯೂ ಶಿವಪೂಜೆಯಾಗಿ ಪರಿಣಮಿಸುತ್ತದೆ.

ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ[೬]

ಎಂಬ ಶಂಕರಾಚಾರ್ಯರ ಸೂಕ್ತಿಯಂತೆ ಬಂಧವಿಮೋಚನೆಗಾಗಿ ಶಿವನ ಶಕ್ತಿಯೇ ಭಕ್ತಿ ಯಾಗಿ ಪರಿಣಮಿಸುವುದನ್ನು ಕಾಣಬಹುದು. ಇಚ್ಛಾದಿ ರೂಪಭೇದದಿಂದ ಆರಾಗುವ ಶಕ್ತಿಯೇ ಶ್ರದ್ಧಾದಿ ಭಕ್ತಿಯ ಷಡ್‌ಭೇದವನ್ನು ಹೊಂದುವುದನ್ನು ಅವಲೋಕಿಸಿದಾಗ, ವೀರಶೈವದಲ್ಲಿಯ ವಿಕಾಸ ಮಾರ್ಗವು ವೈಜ್ಞಾನಿಕತೆಯ ಅರಿವಾಗದೇ ಇರದು. ಅಂಗಾಂಗ

೬ ಶಿವಮಾನಸ ಪೂಜಾ, ೪.

ಸಾಮರಸ್ಯವೇ ಪ್ರಧಾನ ಗುರಿಯಾಗಿರುವ ಷಟ್ಸ್ಥಲ ಮಾರ್ಗದಲ್ಲಿ ಶಿವಶಕ್ತಿಯ ಲೀಲೆಯೇ ಪರಾಜಿಸುವುದನ್ನು ಕಾಣಬಹುದು. ಇದು ಕೇವಲ ತಾತ್ತ್ವಿಕ ಶಾಸ್ತ್ರವಾಗಿರದೇ ಸಾಧನ ಮಾರ್ಗವಾಗಿರುವುದು ವೀರಶೈವ ಮತದ ಮಹೋನ್ನತಿಗೆ ಸಾಕ್ಷಿಯಾಗಿದೆ. ಸ್ಥಲಶಬ್ದ ವಾಚ್ಯವಾದ ಪರಶಿವನು ಉಪಾಸ್ಯೋಪಾಸಕ ದೃಷ್ಟಿಯಿಂದ ಲಿಂಗ ಮತ್ತು ಅಂಗವೆಂದ್ಲು ಎರಡು ಭೇದವನ್ನು ಹೊಂದುತ್ತಾನೆ. ಸ್ಥೂಲ, ಸೂಕ್ಷ್ಮ ಮತ್ತು ಕಾರಣವೆಂಬ ಶರೀರ ತ್ರಯದಲ್ಲಿ ಲಿಂಗೋಪಾಸನೆ ಅವ್ಯಾಹತವಾಗಿ ನಡೆಯಲೆಂಬ ಉದ್ದೇಶದಿಂದ ಇಷ್ಟ, ಪ್ರಾಣ ಮತ್ತು ಭಾವವೆಂಬ ಲಿಂಗತ್ರಯನಾಗಿ ಪರಿಣಮಿಸುವುದನ್ನು ಅಂಗವು ಕ್ರಮವಾಗಿ ತ್ಯಾಗಾಂಗ, ಭೋಗಾಂಗ ಮತ್ತು ಯೋಗಾಂಗವೆಂದು ಮೂರು ವಿಧವಾಗುವುದನ್ನು ಕಾಣಬಹುದು. ಈ ಕ್ರಮವೇ ವಿಕಸಿತವಾದಾಗ, ಹೃದಯ ಸಹಿತ ಪಂಚೇಂದ್ರಿಯ ಮೂಲಕ ಪೂಜೆಯು ನಡೆಯಬೇಕೆಂಬ ಬಯಕೆಯಿಂದ ಆಚಾರಾದಿ ಆರು ಲಿಂಗಗಳ ಹಾಗೂ ಭಕ್ತಾದಿ ಆರು ಅಂಗಗಳ ಕಲ್ಪನೆಯನ್ನು ಮಾಡಲಾಗಿದೆ. ಸಾಂಖ್ಯರ ೨೫ ತತ್ತ್ವಗಳ ಜೊತೆ ಹನ್ನೊಂದು ತತ್ತ್ವಗಳನ್ನು ಸೇರಿಸಿ ಒಟ್ಟು ೩೬ ತತ್ವಗಳಿಗೆ ಅನುಗುಣವಾಗಿ ಆರಾರು ಲಿಂಗಾಂಗ ಸ್ಥಲಗಳನ್ನು ವಿಭಾಗಿಸಲಾಗಿದ್ದರೂ ಸಹ ಶಿವಶರಣರ ಅನುಭಾವಕ್ಕನುಗುಣ ವಾಗಿ ಸ್ಥಲ ವಿಭಾಗವನ್ನು ಅನೇಕ ವಿಧವಾಗಿ ಮಾಡಿರುವುದನ್ನು ನೋಡಬಹುದು. ಅತ್ಯಂತ ಜನಪ್ರಿಯ ಸ್ಥಲ ವಿಭಾಗದ ಪ್ರಕಾರ ನೂರೊಂದು ಸ್ಥಲ ಕಲ್ಪನೆ ವೈಜ್ಞಾನಿಕ ವಾಗಿದ್ದರೂ ೪೪ ಅಂಗಸ್ಥಳಗಳನ್ನೂ, ೫೭ ಲಿಂಗಸ್ಥಲಗಳನ್ನು ಅಂಗ ಹಾಗೂ ಲಿಂಗಕ್ಕೆ ಸಂಬಂಧಿಸಿದ ಷಟ್ಸ್ಥಲಾಂತರ್ಗತವಾಗಿರುವುದನ್ನು ಕಾಣುತ್ತೇವೆ. ಒಟ್ಟಾರೆ ಷಟ್ಸ್ಥಲಾ ಚರಣೆಯಿಂದ ಲಿಂಗಾಂಗ ಸಾಮರಸ್ಯ ಹೊಂದುವುದೇ ಶಿವಶರಣರ ಪರಮ ಗುರಿಯಾಗಿದ್ದು ಪ್ರಗತಿಪಥದ ದ್ಯೋತಕವಾಗಿಯೇ ಷಟ್ಸ್ಥಲ ವಿವೇಚನೆಯನ್ನು ಮಾಡಬೇಕಾಗುತ್ತದೆ.

ಮಾಯಿದೇವರ ವಿಶೇಷಾರ್ಥ ಪ್ರಕಾಶಿಕಾ ಸಹಿತ ಅನುಭವ ಸೂತ್ರವು ವೀರಶೈವ ಸಿದ್ಧಾಂತದ ಪ್ರಮಾಣ ಗ್ರಂಥವೆಂದು ಒಪ್ಪುವುದಕ್ಕೆ ಕೆಲವರು ಕೆಲ ಆಕ್ಷೇಪಗಳನ್ನೆತ್ತು ತ್ತಾರೆ. ಗ್ರಂಥಾರಂಭದಲ್ಲಿಯೇ ಷಟ್ಸ್ಥಲ ಸಿದ್ಧಾಂತವು ಶ್ರುತಿ, ಸ್ಮೃತಿ ಪುರಾಣಾದಿಗಳಲ್ಲಿ ಪ್ರತಿಪಾದಿತವಾಗಿದಯೆಂದು ಮಾಯಿದೇವರ ಅಭಿಮತ–

> ಶ್ರುತಿ ಸ್ಮೃತೀಹಾಸ್ತೇಶ್ಚ ಶಿವಧರ್ಮಾದಿ ಶಾಸ್ತ್ರಕೈಃ ||
> ಕಥ್ಯತೇ ಶಿವಸಿದ್ಧಾಂತ ತಂತ್ರಂ ಷಟ್ಸ್ಥಲ ನಿರ್ಣಯಂ ||೭

ಆದರೆ ಉಪಲಬ್ಧವಿರುವ ಯಾವುದೇ ಗ್ರಂಥದಲ್ಲಿ ಸಮಗ್ರವಾದ ಷಟ್ಸ್ಥಲ ನಿರೂಪಣೆ ಕಂಡುಬರುವುದಿಲ್ಲವೆಂಬುದು ಕೆಲವರ ಆಕ್ಷೇಪವನ್ನವಲಂಬಿಸಿದ ಶಿವಾನುಭವ ಸೂತ್ರವೂ ಪ್ರಮಾಣವಲ್ಲವೆಂದರಿಯಬೇಕು. ಈ ಆಕ್ಷೇಪಕ್ಕೆ ಸಮಾಧಾನವಿದು–ಶಿವಶರಣರ ಕಾಲಕ್ಕೆ ಒಂದು ನಿಶ್ಚಿತ ಪರಿಪೂರ್ಣ ರೂಪ ಹೊಂದಿದ ಷಟ್ಸ್ಥಲ ಸಿದ್ಧಾಂತಕ್ಕೆ ಅಲ್ಲಲ್ಲಿ ಹರಡಿದ

---

೭ ಶಿವಾನುಭವ ಸೂತ್ರಂ I, ೨೮.

ಶ್ರುತ್ಯಾದಿ ವಾಕ್ಯಗಳೇ ಪ್ರಮಾಣವೆಂದು ಒಪ್ಪಿದರೆ ಈ ಆಕ್ಷೇಪ ಅರ್ಥಹೀನವಾಗುತ್ತದೆ. ಅದೇ ರೀತಿ ಮಾಯಿದೇವರು ವಾತುಲ ತಂತ್ರೋಕ್ತ ಸಿದ್ಧಾಂತವೇ ತಮ್ಮ ಸೂತ್ರಗಳಿಗೆ ಆಧಾರವೆಂದು ಒಪ್ಪಿರುವುದೂ ಆಕ್ಷೇಪಾರ್ಹವಲ್ಲವೇ? ಏಕೆಂದರೆ ಆಗಮಗಳು ಅವೈದಿಕ ವೆಂದು ಒಪ್ಪಿದರೆ ಈ ಷಟ್ಸ್ಥಲ ಸಿದ್ಧಾಂತವೂ ತಾಂತ್ರಿಕ (ಅವೈದಿಕ) ವೆಂದು ಒಪ್ಪ ಬೇಕಾಗುತ್ತದೆ.

ವಾತುಲಾಖ್ಯೇ ಮಹಾತಂತ್ರೇ ಪೂರ್ವೋತ್ತರ ವಿಭೇದತಃ |
ಭಾಗದ್ವಯಂ ಸಮಾಖ್ಯಾತಂ ತಸ್ಮಿನ್ನುತ್ತರ ನಾಮ ನಿ
ತಂತ್ರೋತ್ತರ ಪ್ರದೀಪಾಖ್ಯಂ ಶಿವಸಿದ್ಧಾಂತ ತಂತ್ರಕಮ್ ||
ಅಸ್ತಿತತ್ರಾಹ ದೇವೇಶೋ ದೇವ್ಯೈ ಷಟ್ಸ್ಥಲ ನಿರ್ಣಯಮ್ ||೮

ಆದರೆ ವೇದದಂತೆಯೇ ಆಗಮವೂ ಪ್ರಮಾಣವೆಂದು ಒಪ್ಪಿದರೆ ಈ ಆಕ್ಷೇಪಕ್ಕೆ ಆಸ್ಪದ ವಿರದು. ಏಕೆಂದರೆ ವೇದಾಗಮಗಳ ಆಧಾರದಿಂದಲೇ ಪ್ರತಿಯೊಂದು ಮತವೂ ಪರಿ ಪೂರ್ಣತೆಯನ್ನು ಹೊಂದಿರುವುದನ್ನು ಕಾಣುತ್ತೇವೆ. ಶಿವ ನಿಃಶ್ವಾಸಜನ್ಯ ವೇದಕ್ಕೂ ಶಿವಮುಖೋದಿತ್ ಆಗಮಕ್ಕೂ ಅಂದರೆ ಶಿವ ಕರ್ತೃತ್ವವಿರುವ ವೇದಾಗಮಗಳಿಗೆ ಭೇದ ವೆಲ್ಲಿ? ಹೀಗೆ ವೇದಾಗಮ ಮಾರ್ಗದಲ್ಲಿ ನಡೆಯುವ ಮಾಯಿದೇವರ ಗ್ರಂಥ (ಶಿವಾನು ಭವಾದಿ)ಗಳು ಪ್ರಮಾಣ ಗ್ರಂಥಗಳೆಂದು ಒಪ್ಪುವುದೇ ಯುಕ್ತಿಸಂಗತ. ಇದೇ ಅಭಿಪ್ರಾಯ ವನ್ನು ಸಿದ್ಧಾಂತ ಶಿಖಾಮಣಿ ಹೀಗೆ ವ್ಯಕ್ತಮಾಡಿದೆ.

ವೇದಸಿದ್ಧಾಂತಯೋರೈಕ್ಯಂ ಏಕಾರ್ಥ ಪ್ರತಿಪಾದ ನಾತ್ |
ಪ್ರಾಮಾಣ್ಯಂ ಸದೃಶಂ ಪ್ರೋಕ್ತಂ ಪಂಡಿತೇರೇತಯೋಸ್ಸದಾ ||೯

ಆದುದರಿಂದಲೇ ತನ್ನ ಗ್ರಂಥರಚನೆಗೆ ಆಧಾರವೂ ಪ್ರಮಾಣಭೂತವೂ ಹೀಗೆ ಪ್ರಾಂಜಲ ವಾಗಿ ಒಪ್ಪಿದ್ದು ಸಮಂಜಸ.

ಗುರೂಕ್ತ್ಯಾ ಸ್ವಾನುಭೂತ್ಯಾಚ ತರ್ಕತಶ್ಚ ಪ್ರಮಾಣತಃ |
ಕಥ್ಯತೇ ಶಿವಸಿದ್ಧಾಂತ ತಂತ್ರಂ ಷಟ್ಸ್ಥಲ ನಿರ್ಣಯಮ್ ||೧೦

ಉಪನಿಷತ್ತುಗಳಂತೆ ಪ್ರಮಾಣಭೂತವಾದ ವಚನವಾಙ್ಮಯ ಏಕೋತ್ತರ ಶತಸ್ಥಲ (ಷಟ್ಸ್ಥಲ) ಪರಿಪೂರ್ಣತೆಯನ್ನು ಹೊಂದಿರುವುದರಿಂದ ಅದರ ಪರಿಪೂರ್ಣತೆಯ ಅಧ್ಯಯನಕ್ಕಾಗಿ ವಚನಶಾಸ್ತ್ರದ ಅಧ್ಯಯನ ಮನನ ಅನಿವಾರ್ಯವೆಂದು ಕ್ರಿಯಾಸಾರದಲ್ಲಿ ಈ ರೀತಿ ವ್ಯಕ್ತವಾಗಿದೆ.

---

೮ ಶಿವಾನುಭವ ಸೂತ್ರ II, ೨೬, ೨೭.
೯ ಸಿದ್ಧಾಂತ ಶಿಖಾಮಣಿ V ೧೩.
೧೦ ಶಿವಾನುಭವ ಸೂತ್ರ I ೩೨.

"ಏಕೋತ್ತರ ಶತಸ್ಥಲಾನಾಂ ಭೇದಸ್ತು ಭಾಷಾ ಪ್ರಬಂಧಾದೇವಾವಗಂತವ್ಯಃ" ಇದನ್ನೇ ಗಮ್ಯಮಾನ ರೀತಿಯಿಂದ ಮಾಯಿದೇವರು ಒಪ್ಪಿರುವುದನ್ನು ನಾವು ಊಹಿಸ ಬಹುದಲ್ಲವೇ?

ಪ್ರಥಮೋಪದೇಶದಲ್ಲಿ ಷಟ್‌ಸ್ಥಲ ಬ್ರಹ್ಮೋಪದೇಶವಿಧಿ, ದ್ವಿತೀಯೋಪದೇಶ ದಲ್ಲಿ ಶಿವಲಿಂಗಾರ್ಚನ ಕ್ರಮ, ತೃತಿಯೋಪದೇಶದಲ್ಲಿ ಪ್ರಸಾದ ಸದ್ಭಾವ, ಚತುರ್ಥೋಪ ದೇಶದಲ್ಲಿ ಪುರಶ್ಚರಣ ಮತ್ತು ಪಂಚಮೋಪದೇಶದಲ್ಲಿ ಅವಸಾನ ವಿಧಾನ ಎಂದು ವೀರಶೈವರ ಧಾರ್ಮಿಕ ವಿಧಾನಗಳನ್ನು ವಿವರಿಸುವ ವಿಶೇಷಾರ್ಥ ಪ್ರಕಾಶಿಕೆ ಷಟ್‌ಸ್ಥಲ ಸಿದ್ಧಾಂತ ನಿರೂಪಣೆಗೆ ಅಷ್ಟೊಂದು ಸಹಾಯಕವಾಗದೇ ಇರುವುದರಿಂದ ಶಿವಾನುಭವ ಸೂತ್ರ ವತ್ತು ಶತಕತ್ರಯಗಳ ಆಧಾರದಿಂದ ಮಾಯಿದೇವರ ಷಟ್‌ಸ್ಥಲ ಸಿದ್ಧಾಂತ ನಿರೂಪಣೆಯ ವಿವೇಚನೆಯನ್ನು ನೋಡೋಣ.

ಲಿಂಗಾಂಗ ಸಂಬಂಧಿಯಾದ ಷಟ್‌ಸ್ಥಲದ ಉಲ್ಲೇಖವನ್ನು ಭಕ್ತಿ ಶತಕದಲ್ಲಿ ಈ ರೀತಿ ಯಾಗಿ ಮಾಡಲಾಗಿದೆ:

ಅಂಗಸ್ಥಲಗಳು ಆರು:

ಭಕ್ತೋ ಮಾಹೇಶ್ವರಶ್ಚೇತಿ ಪ್ರಸಾದಿ ಪ್ರಾಣಲಿಂಗಕಃ।
ಶರಣಃ ಶಿವಲಿಂಗೈಕ್ಯಃ ಷಟ್‌ಸ್ಥಲಂ ಚ ಮಮ ಪ್ರಿಯೋ॥

ಲಿಂಗಸ್ಥಲ ಸಮನ್ವಯು:

ಭಕ್ತಸ್ಯಾಚಾರಲಿಂಗಂ ಚ ಗುರುಲಿಂಗಂ ಮಹೇಶ್ವರಂ
ಪ್ರಸಾದಿನಃ ಪ್ರಾಣಲಿಂಗಂ ಜಂಗಮಂ ಪ್ರಾಣಲಿಂಗಕಂ
ಶರಣಸ್ಯ ಪ್ರಸಾದಂ ಚ ಐಕ್ಯಸ್ಯ ಮಹದೇವ ಚ।
ಏತತ್ ಸೂಕ್ಷ್ಮತರಂ ತಸ್ಮಾತ್ ವಿಶೇಷಂ ಶ್ರುಣು ಪಾರ್ವತಿ॥೧೧

ಪ್ರಾರಂಭದಲ್ಲಿ ದ್ವೈತ ಭಾವನೆಯಿದ್ದು, ಕ್ರಮೇಣ ಅದ್ವೈತ ಭಾವನೆ ಬಲಿತು ಲಿಂಗಾಂಗ ಸಾಮರಸ್ಯವೆಂಬ ಮೋಕ್ಷೋಪಾಯವಾದ ವೀರಶೈವದಲ್ಲಿ ಸ್ಥಲ ನಿಷ್ಪತ್ತಿಯನ್ನು ತನ್ಮುಖೇನ ಸ್ಥಲ ಸ್ವರೂಪ ನಿರೂಪಣೆಯನ್ನು ಮಾಡಲಾಗುತ್ತದೆ.

ಏಕಮೇವ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ
ಶಿವತತ್ತ್ವಂ ಶಿವಾಚಾರ್ಯಾಃ ಸ್ಥಲಮಿತ್ಯಾಹು ರಾವರಾತ್॥೧೨

ಯತ್ರಾದೌ ಸ್ಥೀಯತೇ ವಿಶ್ವಂ ಪ್ರಾಕೃತಂ ಪೌರುಷಂಯತಃ।
ಲೀಯತೇ ಪುನರಂತೇ ಚ ಸ್ಥಲಂ ತತ್ ಪ್ರೋಚ್ಯತೇ ತತಃ॥

---

೧೧ ಭಕ್ತಿಶತಕ ೫೦-೫೨

೧೨ ಶಿವಾನುಭವ ಸೂತ್ರ II ೩

ಎಂದರೆ ಏಕಮೇವಾ ದ್ವಿತೀಯವಾದ ಪರಬ್ರಹ್ಮ(ಶಿವ)ವು ಸಚ್ಚಿದಾನಂದ ಲಕ್ಷಣವಾಗಿದ್ದು, ಆ ಶಿವತತ್ತ್ವವನ್ನೇ ಶಿವಾಚಾರ್ಯರು ಸ್ಥಲವೆಂದು ಕರೆಯುತ್ತಾರೆ. ಏಕೆಂದರೆ ಪ್ರಾಕೃತವೂ ಪೌರುಷವೂ ಆದ ಇಡೀ ವಿಶ್ವವು ಅಲ್ಲಿ ಸ್ಥಿರವಾಗಿರುವುದಲ್ಲದೇ, ಕೊನೆಯಲ್ಲಿ ಅಲ್ಲಿಯೇ ಲೀನವಾಗುವುದು. ಪರಶಿವ ನಾಮಕ ಸ್ಥಲ ನಿರ್ದೇಶ್ಯ ಪರಬ್ರಹ್ಮವೇ ಮುಮುಕ್ಷುಗಳಾದ ಶಿವಶರಣರಿಗೆ ಪರಮಪದವಾಗಿರುವುದಿಲ್ಲವೇ?

ಪರನಿರ್ವಾಣನಿಷ್ಠಾನಾಂ ಯದ್ ಭವೇತ್ ಪರಮಂ ಪದಂ
ತದಾಹುಃ ಸ್ಥಲಮದ್ವೈತಂ ಶಿವಜ್ಞಾನೈಕತತ್ಪರಾಃ॥೧೩

ಇಂತು ಏಕಮೇವಾದ್ವಿತೀಯವಾದ ಆ ಸ್ಥಲವೇ ಸ್ವಶಕ್ತಿ ಕ್ಷೋಭದಿಂದ ಲಿಂಗಾಂಗವೆಂದು ಎರಡಾಗುತ್ತದೆ. 'ಒಂದೆರಡಾದುದನರಿಯರು' ಎಂಬ ಅಲ್ಲಮಪ್ರಭುದೇವರ ಉದ್ಗಾರ ವನ್ನಿಲ್ಲಿ ಸ್ಮರಿಸಬಹುದಲ್ಲವೇ?

ಸ್ವಶಕ್ತಿ ಕ್ಷೋಭಮಾತ್ರೇಣ ಸ್ಥಲಂ ತದ್ ದ್ವಿವಿಧ ಭವೇತ್।
ಏಕಂ ಲಿಂಗಸ್ಥಲಂ ಪ್ರೋಕ್ತ ಮನ್ಯದಂಗಸ್ಥಲಂ ಸ್ಮೃತಂ॥೧೪

ಲಿಂಗವೇ ಶಿವನೆಂತಲೂ, ಅಂಗವೇ ಜೀವನೆಂತಲೂ, ಲಿಂಗಾಂಗ ಸಾಮರಸ್ಯವೇ ಮಾನವರ ಪರಮಗುರಿಯೆಂತಲೂ ತಿಳಿಯುವುದು ಸಮಂಜಸ. 'ಜೀವೋ ಬ್ರಹ್ಮೈವ ನಾಪರಃ' ಎಂಬ ಶಂಕರೋಕ್ತಿಯೂ ಇದನ್ನೇ ಸಮರ್ಥಿಸಿಲ್ಲವೇ? ಶಿವಜೀವೈಕ್ಯವೇ ಲಿಂಗಾಂಗ ಸಾಮರಸ್ಯ ವೆಂದು ಭಕ್ತಿ ಶತಕದಲ್ಲಿ ಸ್ಫುಟವಾಗಿ ಹೇಳಲಾಗಿದೆ.—

ಲಿಂಗಸ್ಥಲಂ ಶಿವಃ ಸಾಕ್ಷಾತ್ ಜೀವಾತ್ಮಾಂಗಸ್ಥಲಂ ಭವೇತ್।
ಲಿಂಗಾಂಗಸ್ಥಲ ಯೋರೈಕ್ಯಂ ಶಿವಜೀವೈಕ್ಯ ಮೇವಹಿ॥೧೫

ಅವೆರಡರಲ್ಲಿ ಕ್ರಮವಾಗಿ ಉಪಾಸ್ಯ ಮತ್ತು ಉಪಾಸಕ ಭಾವವಿರುವುದನ್ನು ಸ್ಪಷ್ಟವಾಗಿ ಕಾಣುತ್ತೇವೆ.

ಉಪಾಸ್ಯೋಪಾಸಕತ್ವೇನ ಸ್ವಯಮೇವ ದ್ವಿಧಾ ಭವೇತ್।
ಲಿಂಗಸ್ಥಲ ಮುಪಾಸ್ಯಂ ಸ್ಯಾದಂಗಸ್ಥಲ ಮುಪಾಸಕಂ॥೧೬

ಇದರಿಂದ ಸಿದ್ಧವಾಗುವುದಿಷ್ಟು—ಶಿವಜೀವರಲ್ಲಿ, ಲಿಂಗಾಂಗಗಳಲ್ಲಿ ಅಂತತೋ ಭೇದವಿಲ್ಲ, ಆದಿ ಭೇದವೂ ಇಲ್ಲ. ಶಿವನೇ ತನ್ನ ಪೂಜೆಯನ್ನು ತಾನೇ ಮಾಡಿಕೊಳ್ಳುತ್ತಾನೆ. ಶಿವೋ ಭೂತ್ವಾ ಶಿವಾಯಜೇತ್ ಎಂಬ ಪ್ರಮಾಣ ವಾಕ್ಯದಿಂದ ಸ್ವಯಂ ಶಿವನಾಗದೆ ಶಿವಪೂಜೆ ಘಟಿಸದು. ಇದನ್ನೇ ಮಾಯಿದೇವರು ಹೀಗೆ ವಿವರಿಸಿದ್ದಾರೆ.

---

೧೩ ಅದೇ II ೯

೧೪ ಅದೇ II ೧೦

೧೫ ಅದೇ II ೩೩ ಭಕ್ತಿಶತಕ ೧೧೪

೧೬ ಶಿವಾನುಭವ ಸೂತ್ರ II ೧೩

ಶಿವಸ್ಯೈವ ಶಿವೋಪಾಸ್ತಿರಿತಿ ನಾನಾ ಶ್ರುತಿ ಸ್ಮೃತಿಃ||೧೭

ಶಿವಾಭಿದ ಸ್ಥಲವೇ ದ್ವಿವಿಧವಾದಂತೆ, ಶಿವನಿಷ್ಠವೂ, ಶಿವಧರ್ಮಚಾರಿಣಿಯೂ ಆದ ಶಕ್ತಿಯೂ ಸಹ ಕಲಾ(ಶಕ್ತಿ) ಭಕ್ತಿ ಎಂದು ಎರಡು ರೂಪವನ್ನು ಹೊಂದುವುದು ನ್ಯಾಯ ಸಹಜ.

ಲಿಂಗಸ್ಥಲಾಶ್ರಯಾ ಕಾಚಿತ್ ಕಾಚಿದಂಗಸ್ಥಲಾಶ್ರಯಾ|
ಲಿಂಗಸ್ಥಲಾಶ್ರಯಾ ಶಕ್ತಿಃ ಕಲಾರೂಪಾ ಪ್ರಕೀರ್ತಿತಾ|
ಅಂಗಸ್ಥಲಾಶ್ರಯಾ ಶಕ್ತಿಃ ಭಕ್ತಿರೂಪಾ ಭವಾಪಹಾ||೧೮

ಜಗದುತ್ಪತ್ತಿಗೆ ಕಾರಣೀಭೂತವಾದ (ಪ್ರವೃತ್ತಿಪರ) ಶಕ್ತಿಯು ಸವಾಸನೆಯೆಂದೂ, ಮೋಕ್ಷ ಪ್ರದವೂ ನಿವೃತ್ತಿ ಪದವೂ ಆದ ಭಕ್ತಿ ನಿರ್ವಾಸನೆಯೆಂದೂ ಖ್ಯಾತವಾಗಿದೆ—

ತಸ್ಮಾತ್ಸವಾಸನಾ ಶಕ್ತಿಃ ಭಕ್ತಿ ರ್ನಿರ್ವಾಸನಾ ಮತಾ||೧೯

ಇದನ್ನೇ ಇನ್ನೂ ಸ್ಫುಟವಾಗಿ ಹೀಗೆ ಹೇಳಲಾಗಿದೆ.

ಶಕ್ತ್ಯಾ ಪ್ರಪಂಚಸೃಷ್ಟಿಃ ಸ್ಯಾದ್ ಭಕ್ತ್ಯಾತದ್ವಿಲಯೋ ಮತಃ||೨೦

ಸ್ಥಲದ ಪ್ರಥಮ ಭೇದವಾದ ಲಿಂಗದ ವ್ಯುತ್ಪತ್ತಿ ಇಂತಿದೆ.

ಲೀಯತೇ ಗಮ್ಯತೇ ಯತ್ರಯೇನಸರ್ವಂ ಚರಾಚರಾಂ
ತದೇ ತಲ್ಲಿಂಗ ಮಿತ್ಯುಕ್ತಂ, ಲಿಂಗತತ್ತ್ವಪರಾಯಣ್ಯೈಃ||೨೧

ಉಪಾಸ್ಯನಾದ ಲಿಂಗಪರ್ಯಾಯ ಶಿವನು ತ್ರಿಮೂರ್ತಿಯಾಗಿ ಪರಿಣಮಿಸುತ್ತಾನೆಂಬ ಮಾತನ್ನಿಲ್ಲಿ ಸ್ಮರಿಸಬಹುದು:—

ಏಕಮೂರ್ತಿಸ್ತ್ರಿಯೋಭಾಗಾಃ ಗುರುರ್ಲಿಂಗಂ ಚ ಜಂಗಮಃ|
ಜಂಗಮಶ್ಚ ಗುರುರ್ಲಿಂಗಂ ತ್ರಿವಿಧಂ ಲಿಂಗಮುಚ್ಯತೇ||

ಈ ರೀತಿ ಮೂರನ್ನೂ ಸಮಾನ ಬುದ್ಧಿಯಿಂದ ತಾರತಮ್ಯ ಭಾವನೆಯಿಲ್ಲದೆ ಕಂಡು ಪೂಜಿಸ ವವನೇ ನಿಜವಾದ ಭಕ್ತ. ಉಪಾಸ್ಯವಾದ ಶಿವಲಿಂಗವೇ ಅಂಗನ ತ್ರಿಕರಣಗಳಲ್ಲಿ ಪೂಜಿ ಗೊಳ್ಳಲು ಮೂರು ವಿಧವಾಗಿ ಭಾವಲಿಂಗ, ಪ್ರಾಣಲಿಂಗ ಮತ್ತು ಇಷ್ಟಲಿಂಗವೆಂದು ಪ್ರಸಿದ್ಧವಾಗಿದೆ.

---

೧೭ ಅದೇ II ೧೬
೧೮ ಅದೇ II ೨೨, ೨೩
೧೯ ಅದೇ II ೨೬
೨೦ ಅದೇ II ೨೫
೨೧ ಅದೇ III ೩

ಪ್ರಥಮಂ ಭಾವಲಿಂಗಂಸ್ಯಾದ್ ದ್ವಿತೀಯಂ ಪ್ರಾಣಲಿಂಗಕಂ
ತೃತೀಯ ಮಿಷ್ಟಲಿಂಗಂಸ್ಯಾದಿತ್ಯೇತತ್ ತ್ರಿವಿಧಂ ಸ್ಮೃತಂ|| ೨೨

ಅಂದರೆ ಕ್ರಮವಾಗಿ ಕಾರಣ, ಸೂಕ್ಷ್ಮ ಮತ್ತು ಸ್ಥೂಲ ಶರೀರಗಳಲ್ಲಿ ಭಾವಲಿಂಗ, ಪ್ರಾಣಲಿಂಗ ಮತ್ತು ಇಷ್ಟಲಿಂಗಗಳ ನೆಲಸಿ ಭಕ್ತನ(ಅಂಗನ ಪೂಜೆಯನ್ನು ಕೈಕೊಂಡು ಅವನ ಮುಕ್ತಿಗೆ ಕಾರಣೀಭೂತವಾಗುತ್ತವೆ. ಈ ಮೂರು ಲಿಂಗಗಳೇ ಮತ್ತೆ ಎರಡೆರಡಾಗಿ ಪರಿಣಮಿಸಿ ಷಡ್‌ಲಿಂಗಗಳಾಗುತ್ತವೆ. ಅಂದರೆ ಭಾವಲಿಂಗವು ಮಹಾಲಿಂಗವೆಂದೂ, ಪ್ರಸಾದಲಿಂಗವೆಂದೂ ಎರಡು ಭೇದವನ್ನು ಹೊಂದುತ್ತದೆ. ಪ್ರಾಣಲಿಂಗವು ಚರಲಿಂಗ ವೆಂದೂ ಶಿವಲಿಂಗವೆಂದೂ ಇಬ್ಭಾಗವಾಗುತ್ತದೆ. ಅದೇ ರೀತಿ ಇಷ್ಟಲಿಂಗವು ಗುರುಲಿಂಗ ವೆಂದೂ ಆಚಾರಲಿಂಗವೆಂದು ಎರಡಾಗಿ ಪರಿಣಮಿಸುತ್ತದೆ. ಹೀಗೆ ಲಿಂಗಸ್ಥಲದ ೬ ಭೇದ(ಷಟ್‌ಸ್ಥಲ) ಕಲ್ಪನೆಯನ್ನು ಮಾಡಲಾಗಿದೆ.

ಏವಂ ಹಿ ಷಡ್‌ವಿಧಂ ಭೂತಂ ಲಿಂಗಂ ಪರಮ ಕಾರಣಂ|| ೨೩

ಅದೇ ರೀತಿ ಕಲಾರೂಪಾ ಶಕ್ತಿಯು ಆರು ವಿಧವಾಗಿ ಪರಿಣಮಿಸಿ ಆರು ಲಿಂಗಗಳಲ್ಲಿ ನೆಲಸಿದ ಸಂಗತಿ ವೈಜ್ಞಾನಿಕವಾಗಿದೆಯಲ್ಲವೆ?

ಶಕ್ತಯಃ ಷಡ್‌ವಿಧಾಃ ಜ್ಞೇಯಾಃ ಷಟ್‌ಸ್ಥಲೇಷು ಸಮಾಹಿತಾ|| ೨೪

ಅರ್ಥಾತ್ ಒಂದೇ ಒಂದಾದ (ವಿಮರ್ಶ) ಶಕ್ತಿಯು ಕ್ರಮವಾಗಿ ಚಿತ್, ಪರಾ, ಆದಿ, ಇಚ್ಛಾ, ಜ್ಞಾನ ಕ್ರಿಯಾ ಶಕ್ತಿಯೆಂದು ಪ್ರಸಿದ್ಧವಾಗಿದೆ. ಇಂತು ಶಕ್ತಿಯುಕ್ತವಾದ ಆರು ಲಿಂಗಸ್ಥಲಗಳ ಸ್ವರೂಪ ವರ್ಣನೆಯನ್ನು ವಿಸ್ತಾರ ಪೂರ್ವಕವಾಗಿ ಮಾಡಲಾಗಿದ್ದು, ಅದನ್ನಿಲ್ಲಿ ಸಂಕ್ಷೇಪವಾಗಿ ನೋಡೋಣ:

ಇಷ್ಟಲಿಂಗದ ಅನಿವಾರ್ಯತೆ ಮತ್ತು ಮಹಿಮೆಯನ್ನು ಕೆಳಗಿನಂತೆ ವರ್ಣಿಸಲಾಗಿದೆ.

ಇಷ್ಟಮರ್ಥಂ ಸ್ವಭಕ್ತಾನಾಮನುಯಚ್ಛತಿ ಸರ್ವದಾ|| ೨೫

ಶಿವಗುಣಗಳಾದ ಸತ್, ಚಿತ್ ಮತ್ತು ಆನಂದಗಳನ್ನು ಕ್ರಮವಾಗಿ ಭಾವಲಿಂಗ, ಪ್ರಾಣ ಲಿಂಗ ಮತ್ತು ಇಷ್ಟಲಿಂಗಗಳು ಪ್ರತಿವಿಧಿಸುತ್ತವೆ. ಈ ಮೂರು ಮುಂದೆ ಆರಾದ ಬಗೆ ಯನ್ನು ಈಗಾಗಲೇ ವಿವರಿಸಲಾಗಿದೆ. (ಶಿವಾನುಭವ ಸೂತ್ರ III, ೧೧, ೧೨) ಅವು ಕ್ರಮವಾಗಿ ಇಂತಿವೆ. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದ ಲಿಂಗ ಮತ್ತು ಮಹಾಲಿಂಗ. ಈ ಲಿಂಗ ಷಟ್‌ಸ್ಥಲದ ಸ್ವರೂಪ ಸಂಕ್ಷಿಪ್ತವಾಗಿ ಇಂತಿದೆ.

---

೨೨ ಅದೇ III ೫, ೬

೨೩ ಅದೇ III ೨೨

೨೪ ಅದೇ III ೨೩

೨೫ ಅದೇ III ೧೦

೧. **ಆಚಾರಲಿಂಗ:**

ಕರ್ಮಾತ್ಮನಾ ಸಕಲತತ್ತ್ವ ನಿವಾಸಹೇತೋಃ
ರಾಧಾರಭೂತಮಚಲಂ ಕ್ರಿಯಯಾ ಸ್ವಶಕ್ತ್ಯಾ
ಚಿತ್ತೇನ ಧಾರ್ಯಮಧಿರೂಢ ನಿವೃತ್ತಿ ಮಾರ್ಗಂ
ಹ್ಯಾಚಾರಲಿಂಗಮಿತಿ ವೇದವಿದೋ ವದಂತಿ|| ೨೬

ಅರ್ಥಾತ್ ಸಕಲತತ್ತ್ವಗಳ ಆಧಾರವೂ, ಕ್ರಿಯಾತ್ಮಕವೂ, ನಿವೃತ್ತಿ ಮಾರ್ಗಗಾಮಿಯೂ, ಕ್ರಿಯಾಶಕ್ತಿಪೂರ್ಣವೂ ಆಗಿದ್ದು, ಮನೋಗಮ್ಯವಾದುದೇ ಆಚಾರಲಿಂಗ.

೨. **ಗುರುಲಿಂಗ:**

ಸ್ವಜ್ಞಾನಶಕ್ತಿ ವಿಭವೋತ್ಥಿತ ಕರ್ತೃತತ್ತ್ವಂ
ಸರ್ವೋಪದೇಶವಿಧಿ ತಂತ್ರಕೃತ ಪ್ರತಿಷ್ಠಂ
ತೇಜೋನಿಧಿಂ ಪರಮಾಪಾರ ಸುಖಾಂಬುರಾಶಿಂ
ಬುದ್ಧೇಃ ಪದೇ ವಿನಿಹಿತಂ ಗುರುಲಿಂಗಮಾಹುಃ|| ೨೭

ಎಂದರೆ–ತೇಜಃಪುಂಜವೂ ಸುಖಸಾಗರವೂ, ಸರ್ವೋಪದೇಶ ಸಮರ್ಥವೂ, ಜ್ಞಾನಶಕ್ತಿ ಯುಕ್ತವೂ, ಕರ್ತೃಸಾದಾಖ್ಯ ತತ್ತ್ವಾಧಾರವೂ ಆಗಿ ಬುದ್ಧಿಗಮ್ಯವಾದುದೇ ಗುರುಲಿಂಗವು.

೩. **ಶಿವಲಿಂಗ:**

ವಿದ್ಯಾಕಲಾಕಲಿತರೂಪಸುಶೋಭಮಾನಂ
ದಿವ್ಯಪ್ರಭಾಪಟಲಮೇಕಮುಖಂ ಪ್ರಶಾಂತಂ
ಇಚ್ಛಾ ಸ್ವಶಕ್ತಿಪರಿಜೃಂಭಿತ ಮೂರ್ತತತ್ತ್ವ
ವ್ಯಕ್ತೇಃ ಹೃದಿಕೃತಪದೇ ಶಿವಲಿಂಗಮಾಹುಃ|| ೨೮

ಅಂದರೆ–ವಿದ್ಯಾಕಲಾಪೂರ್ಣವೂ ದಿವ್ಯಪ್ರಭಾವಿರಾಜಮಾನವೂ, ಪ್ರಶಾಂತವೂ, ಇಚ್ಛಾಶಕ್ತಿ ಪರಿಗತವೂ, ಮೂರ್ತಸಾದಾಖ್ಯತತ್ತ್ವಾಧಾರವೂ ಆಗಿದ್ದು, ಅಹಂಕಾರಗಮ್ಯವಾದುದೇ ಶಿವಲಿಂಗವು.

೪. **ಚರಲಿಂಗ:**

ಸಾಭ್ಯಂತರಂಗ ಬಹಿರಂಗ ಮಮೂರ್ತತತ್ತ್ವಂ
ಜ್ಯೋತಿರ್ಮಯಂ ಪುರುಷಮಕ್ಷರತಃ ಪರಾಖ್ಯಂ

---

೨೬ ಅದೇ III ೩೩
೨೭ ಅದೇ III ೩೨
೨೮ ಅದೇ III ೩೧

ಸ್ವಾತ್ಮಾದಿಶಕ್ತಿ ಘಟಿತಂ ಮನಸೈವ ನಿತ್ಯಂ
ಧ್ಯಾತವ್ಯಮಾಪ್ತಮತಯಶ್ಚರಲಿಂಗಮಾಹುಃ॥೨೯

ಅರ್ಥಾತ್ ಜ್ಯೋತಿಃಸ್ವರೂಪವೂ, ಬಹಿರಂತರ್ವ್ಯಾಪಕವೂ, ಪರಮಪುರುಷ ರೂಪವೂ, ಅಮೂರ್ತತತ್ತ್ವಾಧಾರವೂ, ಆದಿಶಕ್ತಿಪೂರ್ಣವೂ, ಉಪಾಧಿರಹಿತವೂ ಆಗಿದ್ದು, ಜ್ಞಾನ ಗಮ್ಯವಾದುದೇ 'ಜಂಗಮಲಿಂಗ.'

೫. **ಪ್ರಸಾದಲಿಂಗ:**

ಜ್ಯೋತಿರ್ಮಯಂ ನಿಜಮನಂತಮತೀಂದ್ರಿಯಾರ್ಥಂ
ಜ್ಞಾನೋಪಲಬ್ಧ ಮಮೃತಂ ಪರಿಣಾಮಬೀಜಂ
ಸಾದಾಖ್ಯತತ್ತ್ವಮುದಿತಂ ಪರಯಾ ಸ್ವಶಕ್ತ್ಯಾ
ಪ್ರಾಹುಃ ಪ್ರಸಾದ ಘನಲಿಂಗಮುಪಾಧಿಹೀನಂ॥೩೦

ಎಂದರೆ–ಪರಂಜ್ಯೋತಿ ಸ್ವರೂಪವೂ, ಅಖಂಡವೂ, ಇಂದ್ರಿಯಾಗೋಚರವೂ, ಆತ್ಮ ಸ್ವರೂಪವೂ, ಜಗತ್ಪರಿಣಾಮ ಕಾರಣವೂ, ಪರಾಶಕ್ತಿಸಹಿತವೂ, ಸಾದಾಖ್ಯತತ್ತ್ವಾಶ್ರಯವೂ ಮತ್ತು ಉಪಾಧಿರಹಿತವೂ ಆಗಿದ್ದು, ಜ್ಞಾನಗಮ್ಯವಾದುದೇ ಪ್ರಸಾದಲಿಂಗ.

೬. **ಮಹಾಲಿಂಗ:**

ಆದ್ಯಂತ ಶೂನ್ಯಮಮಲಂ ಪರಿಪೂರ್ಣಮೇಕಂ
ಸೂಕ್ಷ್ಮಂ ಪರಾತ್ಪರಮನಾಮಯಮ ಪ್ರಮೇಯಂ
ಭಾವೈಕಗಮ್ಯಮಜಡಂ ಶಿವತತ್ತ್ವಮಾಹುಃ
ಚಿಚ್ಛಕ್ತಿ ಸಂಸ್ಫುರಣರೂಪಮಹಾತ್ಮಲಿಂಗಂ॥೩೧

ಅಂದರೆ–ಅನಾದಿಯೂ, ಅನಂತವೂ, ನಿರ್ಮಲವೂ, ಪರಿಪೂರ್ಣವೂ, ಸೂಕ್ಷ್ಮವೂ, ಏಕ ಮೇವಾದ್ವಿತೀಯವೂ, ಪರಾತ್ಪರವೂ, ಭವದೂರವೂ, ಚೇತನವೂ, ಚಿಚ್ಛಕ್ತಿಪೂರ್ಣವೂ, ಅಪ್ರಮೇಯವೂ ಆದ ಪರಶಿವತತ್ತ್ವವೇ ಮಹಾಲಿಂಗವೆಂದು ಕರೆಯಿಸಿಕೊಳ್ಳುತ್ತದೆ. ಇದು ಭಾವಗಮ್ಯವಾದುದೆಂದು ಅನುಭಾವಿಗಳ ಅಭಿಮತ.

ಅಂಗಸ್ಥಲ ಶಬ್ದವಾಚ್ಯವಾದ ಭಕ್ತನು ಆರು ಲಿಂಗಸ್ಥಲಗಳ ಉಪಾಸನೆಯನ್ನು ಹಂತಹಂತವಾಗಿ ಮಾಡುವಲ್ಲಿ ಷಡ್ವಿಧವಾಗಿ ಪರಿಣಮಿಸುತ್ತಾನೆ. ತ್ಯಾಗಾಂಗ, ಭೋಗಾಂಗ ಮತ್ತು ಯೋಗಾಂಗಗಳಲ್ಲಿ ವ್ಯವಸ್ಥಿತವಾದ ಈ ಷಡ್‌ವಿಧ ಅಂಗಸ್ಥಲಗಳಲ್ಲಿ ಆರು ವಿಧ

---

೨೯ ಅದೇ III ೩೦
೩೦ ಅದೇ III ೨೯
೩೧ ಅದೇ III ೨೮

ವಾದ ಭಕ್ತಿಯು ನೆಲೆಗೊಳ್ಳುತ್ತದೆ. ಭಕ್ತಿಯೇ ಮುಕ್ತಿಯ ಜನನಿಯೆಂದು ಮಾಯಿದೇವರು ನಿರ್ದಿಷ್ಟವಾಗಿ ಅಭಿಪ್ರಾಯಪಡುತ್ತಾರೆ.

ಪ್ರಸಾದೋಜನಕಃ ಪ್ರೋಕ್ತಃ ಜನನೀ ಭಕ್ತಿರೀರಿತಾ।
ಅನಯೋರೈಕ್ಯಭಾವೇನ ಜನಿತಾ ಮುಕ್ತಿಕನ್ಯಕಾ॥ ೩೨

ಶಿವಭಕ್ತಿಯೊಂದೇ ಆದರೂ ಆರು ಅಂಗಸ್ಥಲಗಳಲ್ಲಿ ವಿದ್ಯಮಾನವಾಗಿ ಆರು ಹೆಸರುಗಳಿಂದ ಖ್ಯಾತವಾಗುತ್ತದೆ–ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸ ವೆಂದು,

ಷಟ್ಸ್ಥಲೇಷುಪ್ರವಿಶ್ಯೈಷಾಭಕ್ತಿಃ ಷಡ್ವಿಧರೂಪಿಣೀ॥ ೩೩

ಲಿಂಗಾಂಗ–ಸಾಮರಸ್ಯಕ್ಕೆ ಕಾರಣೀಭೂತವಾದ ಭಕ್ತಿಯು ವೀರಶೈವ ಧರ್ಮದಲ್ಲಿ ಪ್ರಾಮುಖ್ಯ ಹೊಂದಿದೆ.

ಆರು ಷಡಂಗಸ್ಥಲಗಳ ಉಲ್ಲೇಖವಿಂತಿದೆ–

ಐಕ್ಯಂತು ಶರಣಂನಾಮ ಪ್ರಾಣಲಿಂಗ ಪ್ರಸಾದಿ ಚ
ಮಾಹೇಶ್ವರಂ ಭಕ್ತಮಿತಿಕ್ರಮಾತ್ ಷಟ್ಸ್ಥಲಮುಚ್ಯತೇ॥ ೩೪

ವಿಕಾಸಕ್ರಮದಿಂದ ಭಕ್ತಾದಿ ಐಕ್ಯಾಂತ ಷಟ್ಸ್ಥಲಗಳ ಸ್ವರೂಪನಿರೂಪಣೆ ಸಂಕ್ಷಿಪ್ತ ವಾಗಿ ಇಂತಿದೆ–

೧. ಭಕ್ತಸ್ಥಲ:

ಮಿಥ್ಯೈವ ಸತ್ಯಮಿತಿಭೌತಯಿದಂ ಶರೀರಂ
ಪ್ರಾಣಾರ್ಥ ಜಾತಮಿತಿ ತತ್ರ ವಿರಕ್ತ ಚಿತ್ತಂ
ಭಕ್ತಿಕ್ರಿಯಾಚರಣಯೈವ ಸದಾ ವಿರಕ್ತಂ
ಭಕ್ತಸ್ಥಲಂ ಭವವಿಕಾರವಿದೂರಮಾಹುಃ॥ ೩೫

ಶರೀರಾದಿ ವಸ್ತುಪ್ರಪಂಚವೆಲ್ಲವೂ ಸತ್ಯವೆಂಬಂತೆ ಕಾಣುತ್ತಿದ್ದರೂ, ಇದೆಲ್ಲ ಮಿಥ್ಯೆಯೆಂದು ತಿಳಿದು, ಅಲ್ಲಿಂದ ಮನಸ್ಸನ್ನು ನಿವೃತ್ತಗೊಳಿಸಿ, ಅದನ್ನು ಸದ್ಭಕ್ತಿ ಸದಾಚಾರಣೆಗಳಲ್ಲಿ ಅಳವಡಿಸಿಕೊಂಡಿರುವದೇ ಭಕ್ತಸ್ಥಲವೆಂದು ತಿಳಿಯಬೇಕು. ಪಿಂಡಸ್ಥಲಾದಿ ಹದಿನೈದು ಅವಾಂತರ ಭೇದಗಳಲ್ಲಿ ಭಕ್ತಸ್ಥಲದ ಸವಿಸ್ತಾರವರ್ಣನೆಯನ್ನು ಸಿದ್ಧಾಂತ ಶಿಖಾಮಣಿಯ ಐದು ಅಧ್ಯಾಯಗಳಲ್ಲಿ ೬ರಿಂದ ಹತ್ತರವರೆಗೆ, ಕಾಣಬಹುದು: ಶ್ರದ್ಧಾಭಕ್ತಿಸಮೇತನೂ,

೩೨ ಭಕ್ತಿಶತಕ ೩೦
೩೩ ಶಿವಾನುಭವಸೂತ್ರ IV ೨೦
೩೪ ಅದೇ IV ೧೭
೩೫ ಅದೇ IV ೩೨

ಭವವಿಕಾರದೂರನೂ ಆದ ಭಕ್ತ ವಿಸ್ತೃತ ವರ್ಣನೆಯನ್ನು ಜ್ಞಾನ ಶತಕದ ನಾಲ್ಕು ಶ್ಲೋಕಗಳಲ್ಲಿ (೩೫–೩೮) ಕಾಣಬಹುದಾಗಿದ್ದು, ಅವುಗಳಲ್ಲಿ ಒಂದು ಶ್ಲೋಕ ವಿಶೇಷ ಉಲ್ಲೇಖನೀಯವಾಗಿದೆ.

ಭೃತ್ಯಾಚಾರಂ ಸದಾಚಾರಂ ಲಿಂಗಜಂಗಮಯೋರ್ದ್ವಯಂ
ಏಕಮಿತ್ಯೋಮ ಯಾನ್ ಜ್ಞಾನಂ ಭಕ್ತಸ್ಥಲಮನುತ್ತಮಂ॥[೩೬]

೨. ಮಾಹೇಶ್ವರಸ್ಥಲ:

ಆಸ್ತಿಕ್ಯಬುದ್ಧಿ ನಿಯಮವ್ರತ ಧರ್ಮಶೌಚಾ
ದಿಲಕ್ಷಣಪರಿಸ್ಫುಟ ಸತ್‌ಚರಿತ್ರಂ।
ಲಿಂಗೈಕ್ಯನೈಷ್ಠಿಕತಯಾ ಸಹವೀರ ವೃತ್ತಂ
ಮಾಹೇಶ್ವರಸ್ಥಲ ಮಿತಿ ಪ್ರವದಂತಿ ಸಂತಃ॥[೩೭]

ಎಂದರೆ ಆಸ್ತಿಕ್ಯಬುದ್ಧಿಯಿಂದಲೂ, ಲಿಂಗಪೂಜಾದಿ ನಿತ್ಯನಿಯಮವ್ರತಗಳಿಂದಲೂ, ಸತ್ಯ ಧರ್ಮಶೌಚಾದಿ ಆಚರಣೆಯಿಂದಲೂ ಕೂಡಿದ ಸಚ್ಚಾರಿತ್ರ್ಯವುಳ್ಳವನೂ, ಲಿಂಗೈಕ್ಯನಿಷ್ಠಾ ಮಯನೂ ಆದವನೇ ಮಾಹೇಶ್ವರನೆಂದು ಕರೆಯಲ್ಪಡುತ್ತಾನೆ. ಲಿಂಗನಿಷ್ಠಾದಿ ೯ ಅವಾಂತರ ಭೇದಸಹಿತ ಮಾಹೇಶ್ವರ ಸ್ಥಲದ ವಿಸ್ತಾರಪೂರ್ವಕ ವರ್ಣನೆಯನ್ನು ಸಿದ್ಧಾಂತ ಶಿಖಾ ಮಣಿಯ ಹತ್ತನೆಯ ಅಧ್ಯಾಯದಲ್ಲಿ ಕಾಣಬಹುದು. ಮಾಹೇಶ್ವರ ಸ್ಥಲದ ಸಂಕ್ಷಿಪ್ತ ವರ್ಣನೆಯನ್ನು ತಮ್ಮ ಭಕ್ತಿಶತಕದ ೪೯ನೆಯ ಪದ್ಯದಲ್ಲಿ ಮಾಯಿದೇವರೇ ಪುನಃ ಮಾಡಿ ದ್ದನ್ನು ನೋಡಬಹುದು.

ಪರದ್ರವ್ಯ ಪರಸ್ತ್ರ್ಯಾದಿವರ್ಜಿತೋ ಭಾವಶುದ್ಧಿಮಾನ್
ಲಿಂಗನಿಷ್ಠಾನಿಯುಕ್ತಾತ್ಮಾ ಮಾಹೇಶ್ವರ ಇತಿ ಸ್ಮೃತಃ॥

೩. ಪ್ರಸಾದಿಸ್ಥಲ:

ಆತ್ಮೋಪಭೋಗವಿಷಯಾಣಿ ಹಿ ಸಾವಧಾನಂ
ದ್ರವ್ಯಾಣ್ಯಹಂಕೃತಿಮಿತ್ಯೈರ ಖಿಲ್ಯೋಶ್ಚ ವರ್ಗ್ಯೈಃ।
ಲಿಂಗೇ ಸಮರ್ಪ್ಯ ಬಹುಶೋಲಭತೇ ಪ್ರಸಾದಂ
ಯತ್ತತ್ ಪ್ರಸಾದಿಗದಿತಂ ಗುರುಭಿಃ ಸ್ಥಲಂಸ್ಯಾತ್॥[೩೮]

ಇಂದ್ರಿಯದ್ವಾರಾ ತಾನು ಅನುಭವಿಸುವ ಸಕಲ ವಿಷಯೋಪಭೋಗವನ್ನು ಲಿಂಗಕ್ಕೆ ಅರ್ಪಿಸಿ ಅವಧಾನ ಭಕ್ತಿಯಿಂದ ಅದೆಲ್ಲವನ್ನು ಪ್ರವಾದರೂಪದಿಂದ ಸ್ವೀಕರಿಸುವವನೇ ಪ್ರಸಾದಿ

---

೩೬ ಭಕ್ತಿಶತಕ ೩೮

೩೭ ಶಿವಾನುಭವಸೂತ್ರ IV ೩೧

೩೮ ಅದೇ IV ೩೦

ಯೆನಿಸಿಕೊಳ್ಳುವನು. ಗುರು ಮಹಾತ್ಮ್ಯಾದಿ ೭ ಆವಾಂತರ ಭೇದವುಳ್ಳ ಈ ಸ್ಥಲದ ವಿಸ್ತಾರಪೂರ್ವಕ ವರ್ಣನೆಯನ್ನು ಸಿದ್ಧಾಂತ ಶಿಖಾಮಣಿಯ ೧೧ನೆಯ ಅಧ್ಯಾಯದಲ್ಲಿ ನೋಡಬಹುದು. ಭಕ್ತಿಶತಕದ ೪೨ನೆಯ ಶ್ಲೋಕದಲ್ಲಿ ಈ ರೀತಿ ಮಾಡಲಾಗಿದೆ.

ಲಿಂಗಾರ್ಪಿತ ಪ್ರಸಾದಂ ಸಂಭೋಗೀ ಲಿಂಗ ಸಂಯುತಃ
ಅನರ್ಪಿತಂ ವಿಸೃಜ್ಯಂ ಚ ಪ್ರಸಾದಿಸ್ಥಲಮುತ್ತಮಂ॥

೪. ಪ್ರಾಣಲಿಂಗಿಸ್ಥಲ:

ಪ್ರಾಣೇಂದ್ರಿಯಾದಿಷು ಮಹಾಹಮಿತಿ ಪ್ರಮೋಹಂ
ಸಂಭ್ರಾಂತಿ ಸಿದ್ಧಮಪಹಾಯ ಸಮಪ್ತಮೇತತ್।
ಲಿಂಗೇ ನಿಧಾಯ ಮನಸಾ ಯದನುಪ್ರಯುಕ್ತಂ
ತತ್ ಪ್ರಾಣಲಿಂಗಿ ಸುಚರಸ್ಥಲಮಾಹುರಾರ್ಯಾಃ॥೩೯

ಅಂದರೆ ಪ್ರಾಣ ಹಾಗೂ ಇಂದ್ರಿಯಗಳಲ್ಲಿ ಅಹಂಕಾರ ಮಮಕಾರಗಳನ್ನು ಮತ್ತು ಭ್ರಮೆಯಿಂದ ಜನಿಸಿದ ಮೋಹವನ್ನು ತ್ಯಜಿಸಿ, ಎಲ್ಲವೂ ಲಿಂಗಸಂಬದ್ಧವೆಂದು ತಿಳಿದು, ಅದರಲ್ಲಿಯೇ ಲೀನವಾದ ಚಿತ್ತವುಳ್ಳವನೇ ಅನುಭಾವ ಭಕ್ತಿಯುಳ್ಳ ಪ್ರಾಣಲಿಂಗಿಯು ೫ ಆವಾಂತರ ಭೇದಗಳಿಂದ ಕೂಡಿದ ಈ ಸ್ಥಲದ ವಿವರವಾದ ವರ್ಣನೆಯನ್ನು ಸಿದ್ಧಾಂತ ಶಿಖಾಮಣಿಯ ೧೨ನೆಯ ಅಧ್ಯಾಯದಲ್ಲಿ ಕಾಣಬಹುದು. ಭಕ್ತಿಶತಕದ ೪೪ನೆಯ ಶ್ಲೋಕದಲ್ಲಿ ಈ ಸ್ಥಲದ ವರ್ಣನೆ ಈ ರೀತಿ ಬಂದಿದೆ–

ಲಿಂಗಪ್ರಾಣಂ ತು ಸುಗುಣಂ ದುರ್ಗುಣಂ ಭಾವಸಂಯುತಂ
ಪುಣ್ಯಪಾಪೋಭಯಾಭಾವಂ ಪ್ರಾಣಲಿಂಗಿಸ್ಥಲಂ ಭವೇತ್॥

೫. ಶರಣಸ್ಥಲ:

ಜ್ಞಾನ ಪ್ರಕಾಶಬಲತಃ ಸ್ವಯಮೇವ ಲಿಂಗಂ
ದೇಹೇಂದ್ರಿಯಾದಿ ಮಮ ರೂಪಮಿತಿ ಪ್ರಬುಧ್ಯ
ಯುಕ್ತೇ ಸಮಾಪ್ತವಿಷಯೇ ಸತಿಯದ್ ವಿಶುದ್ಧಂ
ತತ್ಪ್ರಾಹುರಾಗಮವಿದಃ ಶರಣಸ್ಥಲಂ ಹಿ॥೪೦

ಅರ್ಥಾತ್ ಜ್ಞಾನವೆಂಬ ಪ್ರಕಾಶ ಶಕ್ತಿಯಿಂದ ತಾನು ತನ್ನ ದೇಹೇಂದ್ರಿಯಗಳೆಲ್ಲ ಲಿಂಗವೇ ಆಗಿರುವುದೆಂದು ತಿಳಿದು, ಸಕಲ ವಿಷಯಯುತನಾದರೂ, ಶುದ್ಧನಾಗಿ, ಆನಂದ ಭಕ್ತಿಯಿಂದ ಕೂಡಿರುವವನೇ ಶರಣನೆನಿಸುತ್ತಾನೆ. ನಾಲ್ಕು ಆವಾಂತರ ಭೇದಗಳಿಂದ ಕೂಡಿದ ಶರಣ ಸ್ಥಲದ ಸವಿಸ್ತಾರ ನಿರೂಪಣೆಯನ್ನು ಸಿದ್ಧಾಂತ ಶಿಖಾಮಣಿಯ ೧೩ ನೆಯ

---

೩೯ ಅದೇ IV ೨೯

೪೦ ಅದೇ IV ೨೮

ಅಧ್ಯಾಯದಲ್ಲಿ ಕಾಣುತ್ತೇವೆ. ಭಕ್ತಿ ಶತಕದ ಒಂದು ಶ್ಲೋಕದಲ್ಲಿ ಇದನ್ನೇ ಬಹುಸುಂದರವಾಗಿ ವಿವರಿಸಲಾಗಿದೆ.

ಪತಿರ್ಲಿಂಗಂ ಸತೀಚಾಹಂ ಹೃದಿಯತ್ರಸ್ವಯಂಪ್ರಭುಃ।
ಪಂಚೇಂದ್ರಿಯಗುಣೋನಾಸ್ತಿ ಶರಣಸ್ಥಲ ಮುತ್ತಮಂ॥೪೧

ಈ ಸ್ಥಲದ ಆನಂದ ಭಕ್ತಿಯ ಯಥಾರ್ಥ ಕಲ್ಪನೆ ಲಿಂಗ ಪತಿ ಶರಣ ಸತಿ ಎಂಬ ಮಾತಿನಲ್ಲಿ ವ್ಯಕ್ತವಾಗಿದೆಯಲ್ಲವೆ?

೬. ಐಕ್ಯಸ್ಥಲ :

ನಾಹಂ ತ್ವಮೊಪಥಿತ ಶಬ್ದವಿಭೇದ ವೃತ್ತಿಃ
ನ ಪ್ರಾಣದೇಹಮನ ಇಂದ್ರಿಯ ಭೌತಿಕಾನಿ।
ಸರ್ವಂ ಭ್ರಮಾತ್ಮಕಮಿದಂ ಮಯಿ ನೇತಿ ಭಾವಾದ್
ಐಕ್ಯಸ್ಥಲಂ ಸಮರಸಂ ಸುಖರೂಪಮಾಹುಃ॥೪೨

ಲಿಂಗವೆನ್ನೆ, ಲಿಂಗೈಕ್ಯವೆನ್ನೆ ಎಂಬ ಮಹಾದೇವಿಯಕ್ಕನ ವಚನದಂತೆ ನಾನು ನೀನೆಂಬ ಭೇದಭಾವವಳಿದು, ದೇಹಾದಿಗಳಲ್ಲಿಯ ಭೇದವನ್ನು ದೂರಮಾಡಿ ಅಂದರೆ ಭ್ರಾಂತಿ ಜನ್ಯ ದ್ವೈತಭಾವವಳಿದು ಶಿವಾದ್ವೈತ ಭಾವದಿಂದ, ಸಮರಸ ಭಕ್ತಿಯಿಂದ ಕೂಡಿಕೊಂಡು ಸದಾ ಸುಖಿಯಾಗಿರುವವನೇ ಐಕ್ಯನು ನಾಲ್ಕು ಅವಾಂತರ ಭೇದಗಳನ್ನೊಳಗೊಂಡ ಐಕ್ಯಸ್ಥಲದ ನಿರೂಪಣೆ ಸಿದ್ಧಾಂತ ಶಿಖಾಮಣಿಯ ೧೪ ನೆಯ ಪರಿಚ್ಛೇದದಲ್ಲಿ ಕಂಡುಬರುತ್ತದೆ. ಭಕ್ತಿ ಶತಕದ ೪೮ನೆಯ ಶ್ಲೋಕವೂ ಐಕ್ಯಸ್ಥಲದ ಸ್ವರೂಪವನ್ನು ಅತಿಸುಂದರವಾಗಿ ಹೀಗೆ ವಿವರಿಸುತ್ತದೆ.

ವಿಷಯಾನಂದ ಕಣಿಕಾ ನಿಃಸ್ಪೃಹೋ ವಿಮಲಾಶಯಃ
ಶಿವಾನಂದ ಮಹಾಸಿಂಧು ಮಜ್ಜನಾದೈಕ್ಯಮುಚ್ಯತೇ॥

ಈ ಷಡಂಗ ಸ್ಥಲಗಳನ್ನು ಆತ್ಮ ಸಹಿತವಾದ ಪಂಚಭೂತಗಳಿಗೂ ನಾದಬಿಂದು ಕಲೆಗಳಿಗೂ, ಜ್ಞಾನಕ್ರಿಯೆಗಳಿಗೂ, ಅನ್ವಯಿಸಲಾಗುತ್ತದೆ. ಹೇಗೆಂದರೆ ಪೃಥ್ವಿ, ಅಪ್, ತೇಜ, ವಾಯು, ಆಕಾಶ ಮತ್ತು ಆತ್ಮಗಳು ಕ್ರಮವಾಗಿ ಭಕ್ತಾದಿ, ಐಕ್ಯಾಂತ ಆರು ಸ್ಥಲಗಳಿಗೆ ಅಂಗಗಳಾಗಿವೆ. ಐದು ಶ್ಲೋಕಗಳಲ್ಲಿ (IV ೩೪–೩೮) ಬಿಂದುವಿಗೆ ಭಕ್ತ ಮಾಹೇಶ್ವರರೂ ನಾದಕ್ಕೆ ಪ್ರಸಾದಿ, ಪ್ರಾಣಲಿಂಗಿಗಳೂ ಮತ್ತು ಕಲೆಗೆ ಶರಣ ಐಕ್ಯರೂ ಸಂಬಂಧಿಸಿದ್ದಾರೆಂದು ಸರಿಯಾಗಿ ವಿವರಿಸಲಾಗಿದೆ. ಇದೇ ರೀತಿ ಭಕ್ತಾದಿ ಮೊದಲಾದ ಮೊದಲಿನ ಮೂರು ಸ್ಥಲಗಳು ಕ್ರಿಯಾತ್ಮಕವೂ, ಪ್ರಸಾದಿಯಾದ ನಂತರ ಮೂರು ಸ್ಥಲ

---

೪೧ ಭಕ್ತಿಶತಕ ೪೫

೪೨ ಶಿವಾನುಭವ ಸೂತ್ರ IV ೨೭

ಗಳು ಜ್ಞಾನಾತ್ಮಕವೂ ಆಗಿವೆಯೆಂದು ಎರಡು ಶ್ಲೋಕಗಳಲ್ಲಿ (IV ೩೯–೪೦) ವಿವರಿಸಲಾಗಿದೆ. ಇಂತು ಷಡಂಗ ಸ್ಥಲಗಳ, ಷಡ್ಲಿಂಗ ಸ್ಥಲಗಳ ವಿಸ್ತೃತವೂ ತಾತ್ತ್ವಿಕವೂ ಆದ ವರ್ಣನೆಯನ್ನು ಶಿವಾನುಭವ ಸೂತ್ರದಲ್ಲಿ ಕಾಣಬಹುದು.

ಶಕ್ತಿಭಕ್ತಿ ಪ್ರಭೇದಗಳ, ಸ್ಥಾನ ಭೇದಗಳ ತತ್ತ್ವಭೇದಗಳ ಮುಖ ಭೇದಗಳ ಹಸ್ತ ಭೇದಗಳ ಪ್ರಸಾದ ಭೇದಗಳ ಅರ್ಪಣ ಭೇದಗಳ, ಅವಸ್ಥಾ ಭೇದಗಳ ಶರೀರ ಭೇದಗಳ—ಒಟ್ಟಾರೆ ಮಾನವ ಸರ್ವಾಂಗೀಣ ಪ್ರಗತಿಯ ಪರಿಚಯ ದಾಯಕವಾದ ಲಿಂಗಾಂಗ ಷಡ್‌ಭೇದಗಳನ್ನು ಅವುಗಳ ಸಾಮರಸ್ಯ ಸ್ವರೂಪ ಹಾಗೂ ಸಾಮರಸ್ಯೋಪಾಯವನ್ನು ವಿವರಿಸಿದ ಮಾಯಿದೇವರು.

ಪ್ರಸಾದಾದೇವ ಸಾಭಕ್ತಿಃ ಪ್ರಸಾದೋ ಭಕ್ತಿಸಂಭವ।
ಯಥೈವಾಂಕರತೋಬೀಜಂ ಬೀಜತೋವಾಯಥಾಂಕುರಃ॥೪೩

ಎಂಬಂತೆ ಪ್ರಸಾದ ಜನ್ಯವೂ, ಪ್ರಸಾದ ಜನಕವೂ ಆದ ಶಿವ ಭಕ್ತಿಯನ್ನು ಪಂಚಮ ಪುರುಷಾರ್ಥವೆಂದು ಯಥಾರ್ಥವಾಗಿ ಕರೆದಿದ್ದಾರೆ.

ಪಂಚಮ ಪುರುಷಾರ್ಥೋಹಿ ಶೈವೀ ಭಕ್ತಿಃ ಸನಾತನೀ॥೪೪

ಧರ್ಮಾರ್ಥ ಕಾಮಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯವನ್ನೂ ಮೀರಿದ ಭಕ್ತಿಯ ಮಹಿಮೆ ಅಪಾರ, ಅನುಪಮ. ಏಕೆಂದರೆ ಶಿವಪ್ರಸಾದದಿಂದ ಜ್ಞಾನವೂ (VIII ೭೬) ಜ್ಞಾನದಿಂದ ಮೋಕ್ಷವೂ (VIII ೭೬) ದೊರೆಯುತ್ತಿದ್ದು ಅವೆರಡನ್ನೂ ಮೀರಿದ್ದು ಶಿವಭಕ್ತಿ (VIII ೭೭)

ಅದ್ವೈತ ಭಕ್ತಿಯ ಪರಾಕಾಷ್ಠೆಯೂ ಸಂಸಾರ ನಾಶಕವೂ ಆದ ಅಂದರೆ ಅಂತಿಮ ಗುರಿಯಾದ ಶಿವಭಕ್ತಿಯ ಮಹಿಮಾತಿಶಯವನ್ನು ಕ್ರಿಯಾ ವಿಶ್ರಾಂತಿ ಪರಿಚ್ಛೇದದಲ್ಲಿ ವರ್ಣಿಸಿ ತಮ್ಮ ಗ್ರಂಥವನ್ನು ಮುಗಿಸಿದ್ದಾರೆ ಮಾಯಿದೇವರು.

---

೪೩ ಅದೇ VIII ೩೧

೪೪ ಅದೇ VIII ೭೮

# ಅಷ್ಟಾವರಣಗಳು : ಒಂದು ಅಧ್ಯಯನ

—ಡಾ. ಮಲ್ಲಿಕಾರ್ಜುನ ಶಿ. ಲಠ್ಠೆ

ಮನುಷ್ಯ ಬದುಕುವದಕ್ಕೆ 'ಉದರ ನಿಮಿತ್ತಂ ಬಹುಕೃತವೇಷಂ' ಎಂದಂತೆ ಯಾವುದೊ ಒಂದು ಉದ್ಯೋಗ ಮಾಡಬೇಕು. ಆ ಉದ್ಯೋಗದಲ್ಲಿ ಪ್ರಾಮಾಣಿಕತನ ಇರಬೇಕು. ಸ್ವಾರ್ಥ ಸುಳಿಯಬಾರದು, ಇದ್ದುದರಲ್ಲಿ ಕೂಡಿ ತಿನ್ನುವ, ಸಹ ಜೀವನದ, ಸಮಾತಾಭಾವ ಬೆಳೆದುಬರಬೇಕು. ಧರ್ಮದಂತೆ ಗಳಿಸಿ, ಇತರರೊಂದಿಗೆ ಉಪಭೋಗಿಸಿ ತ್ಯಾಗಿಯಾಗಿ ಮುಕ್ತಿ ಪಡೆಯಬೇಕು. ಅಂದರೆ ತನ್ನತನದ ಅರಿವು ಮೂಡಿಸಿಕೊಂಡು ತಾನೇ ತಾನಾಗುವ ಮಹತ್ತಾದ ವ್ಯಕ್ತಿತ್ವ ರೂಪಿಸಿಕೊಳ್ಳಬೇಕು. ಅಂದಾಗ ಆ ವ್ಯಕ್ತಿ ಪರಿಪೂರ್ಣನೆನಿಸುತ್ತಾನೆ. ಇಂಥ ವ್ಯಕ್ತಿಗಳಿಂದ ಕೂಡಿದ ಆ ಸಮಾಜ, ದೇಶ ದೊಡ್ಡ ದೆನಿಸುತ್ತದೆ.

ತೌಕಿಕ ಸುಖಕ್ಕೆ ಮನಸೋಲುವುದು ಮನುಷ್ಯ ಸಹಜ ಸ್ವಭಾವ. ಹಾಗೆ ಮನ ಸೋತು ಆಶೆ–ಆಮಿಷಗಳ ಬಲೆಯಲ್ಲಿ ಬಿದ್ದು ಒದ್ದಾಡಿ ಅದ್ಹೇಗೊ ಎದ್ದರೂ ಮತ್ತೆ ಬೀಳುತ್ತಿರುವುದುಂಟು. ಭೂಮಿ, ಹೇಮ, ಕಾಮಿನಿ ತನ್ನವೇ ಎಂದು ಏನೆಲ್ಲವನ್ನೂ ಮಾಡಿ ಅವುಗಳನ್ನು, ಎಷ್ಟು ಬೇಕು ಅಷ್ಟೇ ಅಲ್ಲ, ಹೆಚ್ಚೆಚ್ಚು ಗಿಟ್ಟಿಸಿಕೊಂಡಷ್ಟು ತನ್ನ ಅಂತಸ್ತು–ದೊಡ್ಡಸ್ತಿಕೆ ಬೆಳೆಯುತ್ತದೆಂದೇ ಮಾನವನಿಗೆ ಭ್ರಮೆ. ಅವು ತನಗಾಗಿ, ತನ್ನ ವರಿಗಾಗಿ ಎನ್ನುವ ಸ್ವಾರ್ಥ ಮನೋಭಾವ ಬೇರೆ. ಗುಣ ಕಳೆದುಕೊಂಡು, ಧನ–ಕನಕ ಗಳನ್ನು ಗಳಿಸಿಕೊಂಡ ಈತನಿಗೆ ಸಮಾಜದಲ್ಲಿ ಉನ್ನತಸ್ಥಾನ ಬೇರೆ. ಇಂತಹ ಹವ್ಯಾಸ ದಲ್ಲಿ ಬೆಳೆದೋಲಾಡುವ ಜನಕ್ಕೇನೂ ಕೊರತೆಯಿಲ್ಲ. ಅವರು ನಡೆದದ್ದೇ ಮಾರ್ಗ, ನುಡಿದದ್ದೇ ಮಂತ್ರ. ಹೀಗಾಗಿ ಸಮಾಜದ ಉನ್ನತ ಮೌಲ್ಯಗಳು ಬದಲಾವಣೆ ಹೊಂದಿ ಪ್ರಾಮಾಣಿಕತನಕ್ಕೆ, ಗುಣಶೀಲಕ್ಕೆ, ಸತ್ಯನಿಷ್ಠೆಗೆ, ಬೆಲೆ ಇಲ್ಲದಂತಾಯ್ತು. ಕೇವಲ ಆಡಂಬರ ಜೀವಿಗಳಿಗೆ, ಟೊಳ್ಳುಗಟ್ಟಿಗಳಿಗೆ ಮಾತ್ರ ಮರ್ಯಾದೆ ದೊರಕಹತ್ತಿತು. ಧರ್ಮದ ಒಳ ತಿರುಳನರಿಯದೆ ಹೊರಮೈಯ ಲಾಂಛನಕ್ಕೆ ಶಿರಬಾಗಿ, ಅಂಧಶ್ರದ್ಧೆ, ಅಜ್ಞಾನ, ಭ್ರಾಂತಿ, ಸುಳ್ಳು–ಮೋಸಗಳನ್ನೇ ಒಳಗಿಟ್ಟು ಪೂಜೆ ಮಾಡುತ್ತ ಧರ್ಮದ ಗ್ಲಾನಿಯಾಗುತ್ತ ಬಂದ ಕಾಲದಲ್ಲಿ ಮಹಾಪುರುಷರ ಅವತಾರ ಆಗುತ್ತದೆನ್ನುವ ಕಲ್ಪನೆ ಮೂಡಿತು. ಕೃಷ್ಣ, ಮಹಾವೀರ, ಬುದ್ಧ, ಏಸೂ, ಪೈಗಂಬರ, ಬಸವ, ಅರವಿಂದ ಮೊದಲಾದ ಮಹರ್ಷಿಗಳ ಅವತಾರವೂ ಮಾನವಲೋಕದ ಕಲ್ಯಾಣಕ್ಕಾಗಿಯೇ ಎಂದು ದಟ್ಟವಾದ ನಂಬಿಕೆ. ಲೌಕಿಕ

ಜಗತ್ತಿನ ವ್ಯಾಮೋಹದ ಬಲೆಯಲ್ಲಿ ಬಿದ್ದ ಮನುಷ್ಯನಿಗೆ ಅಲ್ಲಿಂದ ಪಾರಾಗಿ ವೈರಾಗ್ಯ ತಾಳುವುದೆಂದರೆ ಅದೊಂದು ಮಹಾ ಯಾಗವೇ ಸರಿ. ಇದಕ್ಕಾಗಿ ಸುಗಮದಾರಿ ಹುಡುಕಿ ಕೊಡುವಭಾರ ಧರ್ಮಗುರುಗಳದು. ಈ ಮಹಾ ಉದ್ದೇಶಕ್ಕಾಗಿಯೆ ಆಗಾಗ ಜಗದ್ವಂದ್ಯ ರೆನಿಸಿದ ಧರ್ಮ ಗುರುಗಳ, ವಿಭೂತಿ ಪುರುಷರ–ಅವತಾರವಾಗುತ್ತಿರುತ್ತದೆ.

ಬದುಕಿಗೆ ಹಿಡಿಅನ್ನ, ತುಂಡು ಬಟ್ಟೆ, ಶಯನಕ್ಕೆ ಒಂದೀಟು ಜಾಗ ಎಂದರೆ ಸಾಲದು, ಅರಿವೂ ಅವಶ್ಯವಾಗಿ ಬೇಕು. ಅರಿವಿನ ಕುರುಹು ಹಿಡಿದೇ ಜನತಾ ವ್ಯವಹಾರ ಸಾಗ ಬೇಕು. ಇದನ್ನು ತೋರಿಸಿಕೊಡುವ ತವನಿಧಿಯೇ ಗುರು. ಗುರುಮುಖೇನ ದೊರೆತ ವಿದ್ಯೆ ಬಹು ಪರಿಣಾಮಕಾರಿಯಾದದ್ದು. ಶಿಷ್ಯನ ಸರ್ವಾಂಗ ಸುಂದರ ವ್ಯಕ್ತಿತ್ವ ನಿರ್ಮಾಣದಕ್ಕೆ ಗುರು ಪರಿಶ್ರಮ ಪಡುತ್ತಾನೆ. ಚೇತನ ಶಕ್ತಿಯನ್ನು ಕರುಣಿಸುತ್ತಾನೆ. ಧರ್ಮಾಚರಣೆಗಳ ಚೌಕಟ್ಟಿನಲ್ಲಿ ನಡೆಯ ಹಚ್ಚಿ ಒಳ-ಹೊರಗೂ ಪರಿಶುದ್ಧನನ್ನಾಗಿ ಮಾಡುತ್ತಾನೆ.

'ಧರ್ಮ' ಮನುಷ್ಯನ ಒಳಿತಿಗಾಗಿ ಹುಟ್ಟಿಕೊಂಡದ್ದು. ಮನುಷ್ಯನಿಂದಲೇ ಅದರ ಧ್ಯೇಯ ಧೋರಣೆಗಳು ರೂಪತಾಳಿದ್ದು. ಧರ್ಮದಲ್ಲಿ ಒಂದು ತಾತ್ವಿಕ ಭಾಗವಿದ್ದರೆ ಇನ್ನೊಂದು ಆಚಾರಕ್ಕೆ ಸಂಬಂಧಿಸಿದುದು. ಇವೆರಡೂ ಪರಸ್ಪರಾವಲಂಬಿಗಳು ಕೆಟ್ಟದ್ದ ರಿಂದ ಒಳ್ಳೆಯದರ ಕಡೆಗೆ ಪರಿವರ್ತನ ಹೊಂದುವುದೇ ಧರ್ಮದ ಪರಮ ಗುರಿ ಯಾಗಿರುತ್ತದೆ.

ಧರ್ಮದ ತತ್ವಗಳು ಒಳ್ಳೆಯವಿದ್ದ ಮಾತ್ರಕ್ಕೆ ಅಷ್ಟರಿಂದಲೆ ಆ ಧರ್ಮಶ್ರೇಷ್ಠ ವೆಂದು ಹೇಳಲಾಗದು. ಆ ತತ್ವಗಳನ್ನು ಆಚರಣೆಗೆ ತಂದಾಗ ಮಾತ್ರ ಅದು ಶ್ರೇಷ್ಠ ವಾದುದಾಗುತ್ತದೆ. 'ಆಚಾರಃ ಪ್ರಥಮೋ ಧರ್ಮಃ', 'ಆಚಾರವೇ ಸ್ವರ್ಗ' ಎಂಬ ಮಹಾನುಭಾವಿಗಳ ಉಕ್ತಿಗಳಲ್ಲಿ ಆಚಾರದ ಮಹತಿಯನ್ನು ಗುರುತಿಸಬಹುದಾಗಿದೆ. 'ಕಚ್ಚೆ ಕೈ ಬಾಯಿಗಳು ಶುದ್ಧವಿದ್ದರೆ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ' ಎಂಬ ಸರ್ವಜ್ಞನ ಖಂಡತುಂಡ ವಚನದಲ್ಲಿ ಆಚಾರ ಧರ್ಮದ ಹಿರಿಮೆಯನ್ನು ಕಾಣುತ್ತೇವೆ.

ವೀರಶೈವ ಧರ್ಮದಲ್ಲಿ ಇತರ ಧರ್ಮಗಳಂತೆ ಆಚಾರಕ್ಕೆ ವಿಶೇಷಸ್ಥಾನ ನೀಡಿದ್ದಾರೆ. ಪಂಚಾಚಾರಗಳು ಈ ಆಚಾರ ಧರ್ಮದ ಪ್ರಾಣಸ್ವರೂಪವಾಗಿದ್ದರೆ, ಅಂಗಸ್ವರೂಪದ ಅಷ್ಟಾವರಣಗಳನ್ನೂ ಆತ್ಮಸ್ವರೂಪದ ಷಟ್‌ಸ್ಥಲಗಳನ್ನೂ ಈ ಪಂಚಾಚಾರಗಳು ಕೂಡಿ ಸುವ ಕೊಂಡಿಯಂತಿವೆ. ವೀರಶೈವ ಸಾಧಕನು ಅಂತೆಯೆ ತನುಮನಧನಗಳೆಂಬ ತ್ರಿವಿಧ ಸಂಪತ್ತು ಬೆಳೆಸಿಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಮೊದಲು ಸದೃಢ ಕಾಯ ಹೊಂದಬೇಕು. ವ್ಯಭಿಚಾರ, ಅನಾಚಾರಗಳಿಂದ ದೂರಿರಬೇಕು. ಸಂಯಮ ಶೀಲನಾಗಬೇಕು. ಇದುವೇ ತನುಶುದ್ಧಿ, ಅಷ್ಟಾವರಣಗಳ ಆಚರಣೆಯಿಂದ ಇದನ್ನು ಸಾಧಿಸಿಕೊಳ್ಳಬಹುದು. ನಂತರ ಮನಶುದ್ಧಿ ಹೊಂದಬೇಕು. ಅದಕ್ಕಾಗಿ ಚಂಚಲ ಸ್ವಭಾವದ ಮನಸ್ಸನ್ನು ಹಿಡಿತದಲ್ಲಿ

ಇಟ್ಟುಕೊಳ್ಳಲು ಸುರೆ ಮೊದಲಾದ ಮಾದಕ ಪಾನೀಯಗಳನ್ನು ಸೇವಿಸಬಾರದು. ಆಮೇಲೆ ಧನದಲ್ಲಿ ಶುಚಿಯಾಗಿರಬೇಕು. ಸ್ವಂತ ಕಾಲಮೇಲೆ ನಿಂತು ಉದ್ಯೋಗದಲ್ಲಿ ನಿರತರಾಗಿ ಪ್ರಾಮಾಣಿಕವಾಗಿ ಗಳಿಸಬೇಕು. ಹೀಗೆ ನಡೆಯುವುದಕ್ಕಂದೇ ಮನುಷ್ಯನು ಕೆಲವೊಂದು ವಿಧಿನಿಯಮಗಳನ್ನು ಹಾಕಿಕೊಂಡಿದ್ದಾನೆ. ಸತ್ಯವನ್ನು ನುಡಿಯುವುದು ಕೂಡಿ ಬಾಳುವುದು, ಸಚ್ಚಾರಿತ್ರಶೀಲವಾಗಿ ಜೀವಿಸುವುದು ಮೊದಲಾದವು ಒಳ್ಳೆಯ ವರ್ತನೆಗಳೆಂದು ನಂಬಿಕೊಂಡಿದ್ದಾನೆ. ಗುರುತೋರಿದ ದಾರಿಯಲ್ಲಿ, ಅವುಗಳನ್ನು ಆಚರಣೆಯಲ್ಲಿ ಅಳವಡಿಸಿಕೊಳ್ಳುತ್ತ ಬಂದಿದ್ದಾನೆ.

ಭಾರತ ವಿಶಾಲವಾದ ದೇಶವಿದ್ದಂತೆ ಪುಣ್ಯ ಪುರುಷರ, ಸಾಧುಸಂತರ ನೆಲೆವೀಡೂ ಆಗಿದೆ. ಹಲವಾರು ಮತಧರ್ಮದ ಮಹಾಪುರುಷರು ಇಲ್ಲಿ ಕಾಲಕಾಲಕ್ಕೆ ಅವತರಿಸಿ ತತ್ವ ಹೇಳಿದ್ದಾರೆ. ನೀತಿ ಬೋಧಿಸಿದ್ದಾರೆ. ದರ್ಶನಗಳನ್ನು ಸಾರಿದ್ದಾರೆ. ವೇದ ಪ್ರಾಮಾಣ್ಯವನ್ನು ಒಪ್ಪಿಕೊಳ್ಳುವ ನ್ಯಾಯ, ವೈಶೇಷಿಕ, ಸಾಂಖ್ಯ ಯೋಗ, ಪೂರ್ವ ಮೀಮಾಂಸಾ, ಉತ್ತರ ಮೀಮಾಂಸಾ–ಇವು ಆಸ್ತಿಕ ದರ್ಶನಗಳಾಗಿವೆ. ವೇದ ಪ್ರಮಾಣವನ್ನು ಒಪ್ಪಿಕೊಳ್ಳುವ ಚಾರ್ವಾಕ, ಜೈನ, ಬೌದ್ಧ ದರ್ಶನಗಳು ನಾಸ್ತಿಕವೆನಿಸಿವೆ. ವೇದದ ಕೊನೆಯ ಭಾಗವನ್ನು ಪ್ರಮಾಣವೆಂದು ಹೇಳುವ, ಉತ್ತರ ಮೀಮಾಂಸಾ ದರ್ಶನವನ್ನು ವೇದಾಂತ ಎಂದೂ ಕರೆದಿರುವರು. ಈ ವೇದಾಂತ ಭಾಗದಲ್ಲಿ ದ್ವೈತ, ವಿಶಿಷ್ಟಾದ್ವೈತ, ದ್ವೈತಾದ್ವೈತ, ಶುದ್ಧಾದ್ವೈತ ಮತ್ತು ಶಕ್ತಿವಿಶಿಷ್ಟಾದ್ವೈತ ದರ್ಶನಗಳು ಸಮಾವೇಶವಾಗಿರುತ್ತವೆ.

ವೀರಶೈವಧರ್ಮವು ಶೈವಧರ್ಮದ ಒಂದು ಶಾಖೆಯಾಗಿದ್ದು ಅದು ಆಸ್ತಿಕ ಧರ್ಮವೆನಿಸಿರುತ್ತದೆ. ಆಚಾರ ಭೇದದಿಂದ ಶೈವಧರ್ಮದಲ್ಲಿ ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ ಮತ್ತು ವೀರಶೈವ ಎಂದು ನಾಲ್ಕು ಭೇದಗಳನ್ನು ಕಾಣುತ್ತೇವೆ. ಸಾಮಾನ್ಯ ಶೈವರು ಸ್ವಯಂಭುಲಿಂಗ ಇಲ್ಲವೆ ಪ್ರತಿಷ್ಠಾಪನಗೊಂಡ ಲಿಂಗವನ್ನೂ, ಮಿಶ್ರ ಶೈವರು ಪೀಠಸ್ಥಲಿಂಗವನ್ನು–ವಿಷ್ಣು ಮೊದಲಾದ ದೇವತೆಗಳನ್ನು, ಶುದ್ಧಶೈವರು ಪೀಠ ಇಲ್ಲವೆ ಹಸ್ತದಲ್ಲಿಟ್ಟುಕೊಂಡ ಲಿಂಗವನ್ನೂ ಪೂಜಿಸುತ್ತಾರೆ. ವೀರಶೈವರು ಇಷ್ಟಲಿಂಗವನ್ನು ಪೂಜಿಸುವವರಾಗಿದ್ದಾರೆ. ಲಿಂಗವು ಕಳಚಿಬಿದ್ದರೆ ಪ್ರಾಣವನ್ನೇ ತ್ಯಜಿಸುವ ವೀರ–ಧೀರ ಲಿಂಗೋಪಾಸಕರಿವರು.

ವೀರಶೈವ ಎಂಬುದು ವೀರ, ಶೈವ ಎಂಬೆರಡು ಪದಗಳಿಂದಾಗಿದ್ದು 'ವೀ' ಎಂದರೆ ಶಿವಜೀವರ ಐಕ್ಯಜ್ಞಾನವನ್ನು ಉಂಟುಮಾಡುವ ವಿದ್ಯೆಯೆಂದೂ ಈ ವಿದ್ಯೆಯಲ್ಲಿ ರಮಿಸುವವರೇ–ವೀರಶೈವರೆಂದೂ ಅರ್ಥೈಸಿದ್ದಾರೆ.

'ವೀ ಶಬ್ದೇನೋಚ್ಯತೆ ವಿದ್ಯಾಶಿವಜೀವೈಕ್ಯ ಬೋಧಿನೀ
ತಸ್ಯಾಂ ರಮನ್ತೆಯೆ ಶೈವಾ ವೀರಶೈವಾಸ್ತು ತೇ ಮತಾಃ'

(ಶಂಕರ ಸಂಹಿತೆ ಅ. ೮೪)

ವೀರಶೈವ ಮತವನ್ನು ಶಕ್ತಿ ವಿಶಿಷ್ಟಾದ್ವೈತ ಎಂದೂ ವಿಶೇಷಾದ್ವೈತ ಎಂದೂ ಕರೆಯುವರು. ಮಾಯೆಯ ಸಂಬಂಧದಿಂದ ಈಶ್ವರನ ಅಂಶಗಳೇ 'ಜೀವ' ಎಂಬ ಹೆಸರನ್ನು ತಾಳಿರುತ್ತವೆ. ಮಲತ್ರಯಗಳ ಬಂಧನದಲ್ಲಿ ಸಿಲುಕಿದ ಈ ಜೀವರು ಅಂತೆಯೆ, ಈಶ್ವರನಿಗಿಂತ ಭಿನ್ನರಾಗಿ ತೋರುವರು. ಗುರು ಕಾರುಣ್ಯವಾದಾಗ ಶಿವದೀಕ್ಷೆ ಉಂಟಾಗುತ್ತದೆ. ಅಂಗರೂಪಗಳಾದ ಅಷ್ಟಾವರಣಗಳನ್ನು ಅನುಷ್ಠಾನದಲ್ಲಿ ತರುತ್ತಾನೆ; ಆಗಾಗ ಲಿಂಗಾಂಗ ಸಾಮರಸ್ಯ ಉಂಟಾಗುತ್ತದೆ. ಮಲತ್ರಯಗಳ ಬಂಧನದಿಂದ ಬಿಡುಗಡೆ ಹೊಂದುತ್ತಾನೆ. ನಿಜಾಂಶಕ್ಕೆ ತಿರುಗುತ್ತಾನೆ. ಈ ಲಿಂಗಾಂಗ ಸಾಮರಸ್ಯದ ಮಾರ್ಗವನ್ನು ಷಟ್‌ಸ್ಥಲ ಮಾರ್ಗವೆಂದು ಕರೆಯುವ ವಾಡಿಕೆ. ಈ ಮಾರ್ಗದಲ್ಲಿ ಜ್ಞಾನಕ್ರಿಯೆಗಳೆರಡೂ ಸಮನ್ವಯಗೊಳ್ಳಬೇಕು. ಈ ಜ್ಞಾನ, ಕ್ರಿಯೆಗಳನ್ನೇ ಅರಿವು-ಆಚಾರ ಎಂದೂ ಕರೆಯುವರು. ಷಟ್‌ಸ್ಥಲ ಜ್ಞಾನವೇ ಅರಿವು. ಪಂಚಾಚಾರ-ಅಷ್ಟಾವರಣಗಳು ಆಚಾರ. ಈ ಅರಿವು-ಆಚಾರಗಳೇ ಲಿಂಗಾಂಗ ಸಾಮರಸ್ಯಕ್ಕೆ ಪ್ರೇರಣೆ ನೀಡುತ್ತವೆ. ಅರಿವಿನ ವಿಕಾಸಕ್ಕೆ ಆಚಾರದ ಅವಶ್ಯಕತೆ ಇದ್ದದ್ದೇ.

'ಕ್ರಿಯೆಯೇ ಜ್ಞಾನ; ಆ ಜ್ಞಾನವೇ ಕ್ರಿಯೆ.
ಜ್ಞಾನವೆಂದಡೆ ತಿಳಿವುದು; ಕ್ರಿಯೆಯೆಂದಡೆ
ತಿಳಿದಂತೆ ಮಾಡುವುದು, ಪರಸ್ತ್ರೀಯ
ಭೋಗಿಸಬಾರದೆಂಬುದೇ ಜ್ಞಾನ,
ಅದರಂತೆ ಆಚರಿಸುವುದೇ ಕ್ರಿಯೆ.
ಅಂತು ಆಚರಿಸದಿದ್ದಡೆ ಅದು ಅಜ್ಞಾನ (ಕರ್ಮ) ನೋಡಾ.
ಕೂಡಲ ಚನ್ನಸಂಗಮದೇವಾ.' (ಷ. ಪ್ರ. ಪು. ೧೩೪)

ಎಂಬ ಚನ್ನಬಸವಣ್ಣನವರ ವಚನ ಇದಕ್ಕೆ ಅಪ್ಪಟ ನಿದರ್ಶನವಾಗಿದೆ.

ವೀರಶೈವ ಧರ್ಮದಲ್ಲಿ ಅಷ್ಟಾವರಣಗಳ ಪಾತ್ರ ಮಹತ್ವದ್ದಾಗಿವೆ. ಧಾರ್ಮಿಕ ನೆಲಗಟ್ಟಿನ ಮೇಲೆ ನೈತಿಕ-ಸೌಧವನ್ನು ಕಟ್ಟಲು ಈ ಧರ್ಮಾಚರಣೆಗಳು ಸಹಾಯಕಾರಿಯಾಗಿವೆ. ಸಾಮಾಜಿಕ ಸ್ವಾಸ್ಥ್ಯ ಕಾಪಾಡಿಕೊಳ್ಳಲು ಇವು ಹೆಚ್ಚು ಪರಿಣಾಮಕಾರಿಯಾಗಿರುತ್ತವೆ. ಅಂತೆಯೆ ಅಷ್ಟಾವರಣಗಳನ್ನು ಅಂಗವೆಂದೂ, ಪಂಚಾಚಾರಗಳನ್ನು ಪ್ರಾಣವೆಂದೂ, ಷಟ್‌ಸ್ಥಲಗಳನ್ನು ಆತ್ಮ ಎಂದೂ ಕರೆದಿದ್ದಾರೆ. ಹೆಸರಿನಲ್ಲೇ ಸೂಚಿತವಾದಂತೆ ಅಷ್ಟಾವರಣ ಎಂದರೆ-ಎಂಟು ಹೊದಿಕೆಗಳು. ಮಲತ್ರಯಗಳ ಬಾಧೆ ತಟ್ಟಬಾರದೆಂದು ಈ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂಟು ಹೊದಿಕೆಗಳನ್ನು ಆಚ್ಛಾದಿಸಿಕೊಳ್ಳಲಾಗುವುದು ಎಂದು ಹೇಳಿದ್ದಾರೆ. ಯೋಧನಿಗೆ ಕವಚ, ಅರಮನೆಗೆ ಕೋಟೆ, ತೋಟಕ್ಕೆ ಬೇಲಿ-ಇದ್ದಂತೆ ವೀರಶೈವ ಸಾಧಕನಿಗೆ ಈ ಅಷ್ಟಾವರಣಗಳು ಶ್ರೀರಕ್ಷೆಯಾಗಿರುತ್ತವೆ. ಇದು ಸಾಮಾಜಿಕ ಸಮತೆಯನ್ನೀಯುವಲ್ಲಿ ಸ್ಫೂರ್ತಿಯ ಸೆಲೆಯಾಗಿರುತ್ತವೆ.

ಅಷ್ಟಾವರಣಗಳಲ್ಲಿ ಮುಖ್ಯವಾಗಿ ಬಾಹ್ಯ ಮತ್ತು ಆಂತರಿಕ ಎಂದು ಎರಡು ಪ್ರಕಾರಗಳಿರುತ್ತವೆ. ಬಾಹ್ಯ ಅಷ್ಟಾವರಣಗಳು ಸ್ಥೂಲ, ಸೂಕ್ಷ್ಮ ಶರೀರಕ್ಕೂ, ಆಂತರಿಕ ಅಷ್ಟಾವರಣಗಳು ಕಾರಣ ಶರೀರಕ್ಕೂ ಸಂಬಂಧಿಸಿದವುಗಳಾಗಿವೆ. **ಸ್ಥೂಲ ಶರೀರದಲ್ಲಿಯ** (೧) ಗುರು (೨) ಲಿಂಗ (೩) ಜಂಗಮ (೪) ಪಾದೋದಕ (೫) ಪ್ರಸಾದ (೬) ವಿಭೂತಿ (೭) ರುದ್ರಾಕ್ಷಿ (೮) ಮಂತ್ರ ಮತ್ತು **ಸೂಕ್ಷ್ಮ ಶರೀರದಲ್ಲಿಯ** (೧) ತನು (೨) ಮನ (೩) ಪ್ರಾಣ (೪) ಮುಖ (೫) ಮೂಗು (೬) ತ್ವಕ್ (೭) ನೇತ್ರ (೮) ಕರ್ಣ–ಇವು ಬಾಹ್ಯ ಅಷ್ಟಾವರಣಗಳಾಗಿರುತ್ತವೆ. **ಕಾರಣ ಶರೀರ** ದಲ್ಲಿಯ (೧) ಅರಿವು (೨) ಆತ್ಮ (೩) ಅನುಭವ (೪) ಅಂತಃಕರಣ (೫) ಪ್ರಸನ್ನತೆ (೬) ನಿಷ್ಕಾಮ (೭) ನಿರ್ಮೋಹ (೮) ಅನಾಹತ–ಇವು ಆಂತರಿಕ ಅಷ್ಟಾವರಣಗಳಾಗಿರುತ್ತವೆ.

**ಗುರು–ಲಿಂಗ–ಜಂಗಮರು** ಲಿಂಗಾಂಗಿಗೆ ಉಪಾಸ್ಯಮೂರ್ತಿಗಳಾಗಿವೆ. ಈ ಮೂರೂ ಅವ್ಯಕ್ತಬ್ರಹ್ಮನ ವ್ಯಕ್ತಸ್ವರೂಪವಾಗಿರುತ್ತವೆ.

**ಭಸ್ಮ–ರುದ್ರಾಕ್ಷಿ–ಮಂತ್ರ**–ಇವು ಉಪಾಸನೆಗೆ ಬೇಕಾದ ಮುಖ್ಯ ಸಾಧನಗಳಾಗಿರುತ್ತವೆ.

**ಪಾದೋದಕ–ಪ್ರಸಾದಗಳು**–ಉಪಾಸನೆಯಿಂದ ದೊರೆಯುವ ಲಾಭಗಳಾಗಿವೆ. ಈ ಅಷ್ಟಾವರಣಗಳನ್ನು ಉತ್ತಮ ಸಾಮಾಜಿಕ ಆಚರಣೆಗಳೆಂದೂ ಕರೆಯುವರು. ಷಟ್‌ಸ್ಥಲವನ್ನು ಆತ್ಮಸಂಸ್ಕರಣ ರೂಪವೆಂದೂ ಕರೆದು ಅದನ್ನು ಸಿದ್ಧಾಂತ ಭಾಗಕ್ಕೆ ಸೇರಿಸಿದ್ದಾರೆ. ಪಂಚಾಚಾರಗಳನ್ನು ನೈತಿಕ ವಿಭಾಗದಲ್ಲಿಯೂ ಅಷ್ಟಾವರಣಗಳನ್ನು ಮತಾಚಾರದಲ್ಲಿಯೂ ಸೇರಿಸಿದ್ದಾರೆ. ಈ ಮತಾಚಾರ ಧಾರ್ಮಿಕ ಆಚಾರವಾಗಿರುತ್ತದೆ.

"ಅಷ್ಟಾವರಣಗಳು ಜೀವನನ್ನು ತನ್ನ ಗುರಿಯಕಡೆ ಒಯ್ಯುವ ಹಾದಿ ಸೇರುವುದರಿಂದ ಅವು ಅಂತರಂಗಗಳು. ವೀರಶೈವ ಧರ್ಮವನ್ನು ಸ್ವೀಕರಿಸಿದ ವ್ಯಕ್ತಿಯು ತನ್ನ ಗುರಿಯಾದ ಲಿಂಗಾಂಗ ಸಾಮರಸ್ಯ ಪಡೆಯಬೇಕಾದರೆ ಈ ಆವರಣಗಳ ಎಲ್ಲೆಯಲ್ಲಿರಬೇಕು."

ಉಪಾಸ್ಯಮೂರ್ತಿಗಳು :

**ಗುರು :**

ಅಷ್ಟಾವರಣಗಳಲ್ಲಿ ಮೊದಲ ಸ್ಥಾನ ಗುರುವಿಗೆ ಸಲ್ಲುವಂತಹದು. ಗುರುವಿನ ಉಪದೇಶಕ್ಕೆ ಪಾತ್ರನಾದ ಪುರುಷನೇ ಪರಮಾತ್ಮನನ್ನು ಅರಿತುಕೊಳ್ಳುವನು. ಅಜ್ಞಾನವನ್ನು ಪರಿಹರಿಸಿ, ಶಿವಜ್ಞಾನವನ್ನುಂಟು ಮಾಡಿಕೊಡುವ ಸದ್ಗುರುವನ್ನು ಸಾಧಕನು ಮೊದಲು ಅನುಸರಿಸಬೇಕು. ಗುರುಗಳಲ್ಲಿ ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು ಎಂದು ಮೂರು ಪ್ರಕಾರಗಳಿರುತ್ತವೆ. ಒಬ್ಬನಿಂದಲೂ ಈ ಮೂರು ಕ್ರಿಯೆಗಳೂ ನಡೆಯು

ಬಹುದು. ಗುರು ಶಿಷ್ಯನಿಗೆ ದೀಕ್ಷೆ ಕೊಡುವುದರಿಂದ ಶಿಷ್ಯನು ತನ್ನ ತನುತ್ರಯಗಳಿ ಗಂಟಿಕೊಂಡ ಮಲತ್ರಯಗಳನ್ನು ಕಳೆದುಕೊಂಡು ಸರ್ವಾಂಗಲಿಂಗ ಸಿದ್ಧೀ ಪಡೆಯುವನು. ಅವಿದ್ಯೆ-ಆತ್ಮನನ್ನು ಅಣುರೂಪನನ್ನಾಗಿ (ಸಂಕುಚಿತ) ಮಾಡುವುದರಿಂದ ಆ ಅವಿದ್ಯೆಯೇ ಆಣವಮಲವೆನಿಸಿದೆ. ಸತ್ಯವಾಗಿರುವುದನ್ನು ಇಲ್ಲವೆಂದೂ, ಪ್ರಕಾಶಿಸುವುದನ್ನು ಅಪ್ರಕಾಶ ವೆಂದೂ ವ್ಯವಹರಿಸುವ ಕಿಂಚಿಜ್ಞತ್ವವೇ ಮಾಯಾಮಲವೆನಿಸಿದೆ. ಕರ್ಮಫಲ ವಾಸನಾ ರೂಪವಾದುದೇ ಕಾರ್ಮಿಕ ಮಲವೆನಿಸಿದೆ. ಇವು ಸ್ಥೂಲ-ಸೂಕ್ಷ್ಮ-ಕಾರಣ ಶರೀರಗಳನ್ನು ಆವರಿಸಿ ಬಂಧನಕ್ಕೊಳಪಡಿಸುವುದರಿಂದ ಆತ್ಮನಿಗೆ ಪಶುತ್ವ (ಜೀವಭಾವ) ಉಂಟಾಗು ವುದು. ಇದರಿಂದ ಆತ್ಮನು ಸಂಸಾರ ದುಃಖಕ್ಕೆ ಗುರಿಯಾಗುವನು. ಈ ಜೀವಭಾವದ ಪರತ್ವವನ್ನು ಕಳೆದುಕೊಳ್ಳಲೆಂದೇ ಮುಮುಕ್ಷುವಿಗೆ ಶಿವದೀಕ್ಷೆ ಅವಶ್ಯವಾಗಿರುತ್ತದೆ. ಕುಲ ಹೀನ ಶಿಷ್ಯನಿಗೆ ಅನುಗ್ರಹಮಾಡಿ ಅಂಥ ಶಿಷ್ಯನಲ್ಲಿ ಮೇಲು ಕೀಳು ಎನಿಸಿ ತಾರತಮ್ಯ ಉಂಟುಮಾಡುವ ಗುರುಗಳನ್ನು ಅಂಬಿಗರ ಚೌಡಯ್ಯ ತರಾಟೆಗೆ ತೆಗೆದುಕೊಂಡದ್ದನ್ನು ಆತನ ವಚನದಲ್ಲಿ ಕಾಣಬಹುದಾಗಿದೆ.

'ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ
ಅವನ ಮನೆಯಲ್ಲಿ ಉಣಬಾರದೆಂದು ಹೇಳಿ
ಅಕ್ಕಿಕಣಕವ ತರುವ ಗುರುವನಾ ಕಂಡಡೆ
ಕೆಡಹಿಹಾಕಿ ಮೂಗನೆ ಕೊಯ್ದು ಇಟ್ಟಂಗಿಯ
ಕಲ್ಲಿಲೆತಿಕ್ಕಿ, ಸಾಸಿವೆಯ ಹಿಟ್ಟನೆ ತಳೆದು
ಲಿಂಬಿಯರಸವನೆ ಹಿಂಡಿ ಪಡುವಣಗಾಳಿಗೆ
ಹಿಡಿಯೆಂದಾತ ನಮ್ಮ ಅಂಬಿಗರ ಚೌಡಯ್ಯ'

ಯಾವುದೇ ಕಸಬು ಮಾಡುವ ಶಿಷ್ಯನಿರಲಿ, ಅಂಥವನ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನದೊರಕಿಸಿ ಕೊಡುವ ಆಧ್ಯಾತ್ಮಿಕ ಸಂಸ್ಕಾರವೇ ಶಿವದೀಕ್ಷೆಯೆನಿಸಿದೆ.

'ಧೀಮತೆ ಯೇನ ವಿಜ್ಞಾನಂ ಕ್ಷೀಯತೆ ಪಾಶಬಂಧನಂ
ತಸ್ಮಾತ್ಸಂಸ್ಕಾರ ಏವಾಯಂ ದೀಕ್ಷೇತ್ಯಪಿ ಚ ಕಥ್ಯತೇ'

ಸದ್ಗುರುವಾದವನು ಶಿಷ್ಯನ ತನುತ್ರಯದಲ್ಲಿರುವ ಮಲತ್ರಯಗಳನ್ನು ವೇಧಾ, ಮಂತ್ರ, ಕ್ರಿಯೆಗಳೆಂಬ ತ್ರಿವಿಧ ದೀಕ್ಷಾಬಲದಿಂದ ಸುಟ್ಟು, ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ಇಷ್ಟ, ಪ್ರಾಣ ಭಾವವೆಂಬ ತ್ರಿವಿಧ ಲಿಂಗಗಳನ್ನು ಸ್ಥಾಪಿಸುವನು. 'ನೀನು ಶಿವನಿದ್ದೀಯೆ' ಎಂದು ಗುರು ಬೋಧಿಸುತ್ತಾನೆ. ಅದನ್ನು ಶಿಷ್ಯನು ಅಷ್ಟೇ ಶ್ರದ್ಧೆಯಿಂದ ನಂಬುತ್ತಾನೆ. ಶ್ರವಣ ಮಾಡುತ್ತಾನೆ. ಆದರಿಂದ ಅವನಲ್ಲಿರುವ ಅಜ್ಞಾನ ಅಳಿಯುತ್ತದೆ. 'ಶಿವೋಹಂ' ಎಂಬ ಭಾವವನ್ನು ಮೂಡಿಸಿಕೊಳ್ಳುತ್ತಾನೆ. ಅದುವೆ ಕಾರಣ ತನುವಿನ ಭಾವಲಿಂಗ ಎಂದು ಹೆಸರಿಸಿದುದುಂಟು. ಶಿಷ್ಯನ ಕರ್ಣದಲ್ಲಿ ಶಿವಮಂತ್ರವನ್ನು (ಪಂಚಾ ಕ್ಷರೀ) ಉಪದೇಶಿಸುವುದು **ಮಂತ್ರಾದೀಕ್ಷೆಯಾಗಿದೆ.** ಆಗ ಮಾಯಾಮಲ ಅಳಿದು

ಪರಿಶುದ್ಧವಾದ ಸೂಕ್ಷ್ಮ ಶರೀರವನ್ನು ಸಾಕ್ಷಾತ್ಕರಿಸಲ್ಪಡುವ ಚೈತನ್ಯವೇ ಪ್ರಾಣಲಿಂಗ ಎನಿಸುವುದು. ಪಂಚ ಕಲಶಗಳ ತೀರ್ಥದಿಂದ ಶಿಷ್ಯನನ್ನು ಮೂರಾವರ್ತಿ ಅಭಿಷೇಕಿಸಿ ಇಷ್ಟಲಿಂಗವನ್ನು ಶಿಷ್ಯನ ಹಸ್ತದಲ್ಲಿ ನ್ಯಸ್ತಗೊಳಿಸುವುದೇ ಕ್ರಿಯಾದೀಕ್ಷೆಯಾಗಿದೆ.

'ಏವಂ ದೀಕ್ಷಾ ಪ್ರಕರ್ತವ್ಯಾ ಯಾವಜ್ಜೀವಂ ಪ್ರತಿಜ್ಞಯಾ'

(ಲಿಂಗಪುರಾಣ ಅ. ೨೧)

ಎಂಬಂತೆ ಗುರೋಪದೇಶದಂತೆ ಲಿಂಗಧಾರಣ, ಲಿಂಗಪೂಜೆ, ಶಿವಮಂತ್ರ ಜಪ, ಶಿವ ತತ್ವಾನುಸಂಧಾನ ಮುಂತಾದ ಜ್ಞಾನ ಕ್ರಿಯಾತ್ಮಕವಾದ ಆಚರಣೆಗಳನ್ನು ದೇಹವಿರುವ ವರೆಗೆ ಆಚರಿಸುತ್ತ ಇರುವೆನು ಎಂದು ಪ್ರತಿಜ್ಞೆ ಮಾಡಿ ಹಾಗೆ ನಡೆಯಬೇಕಾಗುತ್ತದೆ. ಇದು ಸ್ತ್ರೀ ಪುರುಷರೆಲ್ಲರಿಗೂ ಸಮಾನವಾದುದಾಗಿರುತ್ತದೆ. ಇಂಥ ಸಾಧನೆಯನ್ನು ಮುಂದುವರಿಸಿಕೊಂಡು ಹೋದಾಗ ಶಿವೋಹಂಭಾವ ಸರಿದು ದಾಸೋಹಂಭಾವ ಬಲಿಯುತ್ತದೆ.

'ಜನ್ಮ ಜನ್ಮಕ್ಕೆ ಹೋಗಲೀಯದೆ
ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ
ಲಿಂಗ ಜಂಗಮ ಪ್ರಸಾದದ ನಿಲವತೋರಿ
ಬದುಕಿಸಯ್ಯ ಕೂಡಲಸಂಗಮದೇವಾ ನಿನ್ನ ಧರ್ಮ' (ಬ.ವ. ೮೩೩)

ಎಂಬ ಬಸವಣ್ಣನವರ ವಚನದಲ್ಲಿ ಭಕ್ತಿಭಂಡಾರಿ ಬಸವಣ್ಣನವರ ದಾಸೋಹಂಭಾವದ ನಿಲವನ್ನು ಗುರುತಿಸಬಹುದಾಗಿದೆ. 'ಶಿವಪಥನರಿವೊಡೆ ಗುರುಪಥವೆ ಮೊದಲು' ಎಂಬ ಅವರ ಉಕ್ತಿಯಂತೂ ಗುರುವಿನ ಮಹತಿಯನ್ನು ಮಹದೆತ್ತರಕ್ಕೆ ಏರಿಸಿದೆ. ಚನ್ನಬಸವಣ್ಣನವರೂ ಕೂಡ 'ಗುರುದೇವೊ ಮಹಾದೇವೊ' ಎಂದು ಕೊಂಡಾಡಿದ್ದಾರೆ. ಮಹಾದೇವಿಯಕ್ಕ ನರಜನ್ಮವ ತೊಡೆದು ಹರಜನ್ಮವ ಮಾಡಿದವನೆಂದೂ ಭವಬಂಧನ ಬಿಡಿಸಿ ಪರಮ ಸುಖವ ತೋರಿದವನೆಂದೂ ಗುರುವಿನ ಮಹಾತ್ಮೆಯನ್ನು ಹಾಡಿ ಹರಸಿದ್ದಾಳೆ.

'ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೆ
ಭವಬಂಧನ ಬಿಡಿಸಿ ಪರಮಸುಖವ ತೋರಿದ ಗುರುವೆ
ಭವಿಯೆಂಬುದ ತೊಡೆದು ಭಕ್ತೆಯೆಂದೆನಿಸಿದ ಗುರುವೆ
ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೆ ಶರಣು'

'ಗುರುವಿನ ಕರುಣದಿಂದ ಲಿಂಗಜಂಗಮವ ಕಂಡೆ
ಗುರುವಿನ ಕರುಣದಿಂದ ಪಾದೋದಕ ಪ್ರಸಾದವ ಕಂಡೆ
ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಗೋಷ್ಠಿಯ ಕಂಡೆ
ಚನ್ನಮಲ್ಲಿಕಾರ್ಜುನಯ್ಯಾ ನಾ ಹುಟ್ಟಲೊಡನೆ ವಿಭೂತಿಯ
ಪಟ್ಟವಕಟ್ಟಿ ಸದ್ಗುರುಸ್ವಾಮಿ ಲಿಂಗಸ್ವಾಯತವ ಮಾಡಿದನಾಗಿ ಧನ್ಯಳಾದೆನು'

ಗುರುವಿನಿಂದ ದೊರಕದ ವಿದ್ಯೆ ವಿದ್ಯೆಯೆ ಅಲ್ಲ ಎಂದ ಅಲ್ಲಮಪ್ರಭು ಗುರುವಿನ ಹಸ್ತದೊಳಗಿಪ್ಪ ಶಿಷ್ಯ–ಅಪ್ಪಟ ಚಿನ್ನವೆಂದಿದ್ದಾರೆ.

'ಜ್ಯೋತಿಯೊಳಗಣ ಕರ್ಪುರಕ್ಕೆ
ಅಪ್ಪುವಿನ ಕೈಯಲ್ಲಿಪ್ಪ ಉಪ್ಪಿಂಗೆ
ಶ್ರೀಗುರುವಿನ ಹಸ್ತದೊಳಗಿಪ್ಪ ಶಿಷ್ಯಂಗೆ
ಈ ಮೂರಕ್ಕೆಯೂ ಬೇರೆ ಕ್ರಿಯಾವರ್ತಕ
ಉಂಟೇ ಗುಹೇಶ್ವರಾ.'

ಗುರುವಿನನ್ನು ಭವಿರೋಗ ವೈದ್ಯ ಎಂದೂ; ಅವನೊಬ್ಬನೇ ಭವರೋಗ ಕಳೆಯು ಬಲ್ಲನೆಂದೂ ಶರಣರು ಹಾಡಿ ಹೊಗಳಿದ್ದಾರೆ. ಗುರುಪಾದವ ಮುಟ್ಟಿ ಭವಗೆಟ್ಟೆನು ಎಂದಿದ್ದಾರೆ.

'ಗುರು ಕರುಣಿಸಲು ಸಂಸಾರ ವಿಷಯು ಕೆಟ್ಟಿತ್ತು.
ಮಾಯಾಸಂಚು ಬಿಟ್ಟಿತ್ತು. ಹುಟ್ಟರತು ಹೋಯಿತು.
ನೆಟ್ಟನೆ ಗುರುಪಾದವ ಮುಟ್ಟಿ ಭವಗೆಟ್ಟೆನು ಕಾಣಾ ರಾಮನಾಥಾ'

ಆ ಆ ಯುಗಗಳಲ್ಲಿ ಗುರು–ಶಿಷ್ಯರ ಸಂಬಂಧ ಕುರಿತು ಮಾರ್ಮಿಕವಾಗಿ–ಅಲ್ಲಮ ಪ್ರಭು ಚಿತ್ರಿಸಿದುದನ್ನು ತಿಳಿಯುಬಹುದಾಗಿದೆ. ಇದು ಪ್ರಸ್ತುತಕ್ಕೆ ತೀರ ಹತ್ತಿರವಾದದ್ದಾಗಿದೆ.

'ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ.
ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಯ್ದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ.
ದ್ವಾಪರಯುಗದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ.
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ–ಗುಹೇಶ್ವರಾ
ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನು.'

ಗಣದಾಸಿ ವೀರಣ್ಣನವರಂತೂ ಗುರುವೇ ಪರಶಿವ, ಸಕಲ ವಿದ್ಯಾಸ್ವರೂಪ, ಸಕಲ ಮಂತ್ರಸ್ವರೂಪ, ಕಾಮಧೇನು–ಎಂದೆಲ್ಲ ಗುರುವಿನ ಮಹಿಮಾತಿಶಯವನ್ನು ಮನತುಂಬ ಹಾಡಿ ಕುಣಿದಾಡಿದ್ದಾರೆ. ಜೇಡರ ದಾಸಿಮಯ್ಯನಂತೂ

'ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ
ಆ ತೃಣವನಾ ಕಿಚ್ಚು ನುಂಗಿದಂತೆ,

ಗುರುಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ
ಆತನ ಸರ್ವಾಂಗವೆಲ್ಲವು ಲಿಂಗ ಕಾಣಾ ರಾಮನಾಥಾ'

(ವ. ಶಾ. ಸಾ. ವ. ೩೬೧)

ನಮ್ಮ ಸನಾತನ ಧರ್ಮದ ಆಚರಣೆಗಳಲ್ಲೂ ಗುರುವಿಗೆ ವಿಶೇಷ ಸ್ಥಾನವುಂಟು. ಗುರು, ಬ್ರಹ್ಮ, ವಿಷ್ಣು, ಮಹೇಶ್ವರ–ಆದ್ದರಿಂದ ಗುರುವಿಗೆ ನಮಸ್ಕಾರ ಎಂದಿದ್ದಾರೆ.

'ಗುರುರ್ಬ್ರಹ್ಮ ಗುರುರ್ವಿಷ್ಣುಃ।
ಗುರುರ್ದೇವೋ ಮಹೇಶ್ವರಃ॥
ಗುರುಸಾಕ್ಷಾತ್ ಪರಬ್ರಹ್ಮಃ।
ತಸ್ಮೈ ಶ್ರೀಗುರುವೇ ನಮಃ॥'

'ಗುರು ಇಲ್ಲದ ಮಠ ಅಲ್ಲ, ಹಿರಿಯರಿಲ್ಲದ ಮನೆ ಅಲ್ಲ' ಎಂಬ ಗಾದೆಯೂ ಇದೆ. ಗುರುವಿನ ಸ್ಥಾನ ಅತ್ಯಂತ ಮಹತ್ವಪೂರ್ಣವಾದುದು. ಹಲವಾರು ವಿದ್ಯೆಗಳನ್ನು ನೀಡ ಬಲ್ಲವರೂ ಗುರುಗಳೇ. ಶಾಲೆಯಲ್ಲಿರುವ, ಮಠದಲ್ಲಿರುವ ಅಧ್ಯಾಪಕರು 'ಗುರು' ಶಬ್ದದ ಪ್ರತಿನಿಧಿಗಳು. ಅಂತೆಯೆ ಪ್ರಕೃತಿ (ನಿಸರ್ಗ) ಮತ್ತು ಪರಿಸರ ಅನಧಿಕೃತ ಗುರುಗಳಾಗು ತ್ತಾರೆ. ಇವರು ಸಮರ್ಥರಾದರೆ ಸಮಾಜ ದೊಡ್ಡದಾಗುತ್ತದೆ. ಅಂಥ ಗುರು ಯಾವಾ ಗಲೂ ಉರಿಯುವ ದೀಪವಾಗಬೇಕು. ಅಂಥ ದೀಪ ಮಾತ್ರ ಇನ್ನೊಂದು ದೀಪವನ್ನು ಬೆಳಗಿಸಬಲ್ಲುದಾಗಿದೆ. ಮಹಾಕವಿ ರವೀಂದ್ರನಾಥ ಠಾಕೂರರು ಹೇಳಿದ ಉಕ್ತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

'A Teacher can never teach another
Unless he is still learning himself
A Lamp can never light another
Unless it continues to burn itself.'

'ಹರ ಮುನಿದರೆ ಗುರು ಕಾಯುವ, ಗುರು ಮುನಿದರೆ ಹರ ಕಾಯ' ಎಂಬ ಉಕ್ತಿ ಯಲ್ಲಿ ಹರನಿಗಿಂತ ಗುರು ಶ್ರೇಷ್ಠ ಎಂಬ ಮಾತು ಅಡಕವಾಗಿದೆ. ಪರಶಿವನು ನಿರಾಕಾರ; ಗುರು ಸಾಕಾರ. ಅವನನ್ನು ಮೊರೆಹೊಕ್ಕರೆ, ಅವನ ಉಪದೇಶ ಆಲಿಸಿದರೆ ಮುಕ್ತಿ ಕಟ್ಟಿಟ್ಟದ್ದು. ಅಂತೆಯೆ ನಿಜಗುಣ ಶಿವಯೋಗಿಗಳು 'ಶ್ರೀಗುರು ವಚನೋಪದೇಶವ ನಾಲಿಸಿದಾಗಳಹುದು ನರರಿಗೆ ಮುಕುತಿ' ಎಂದಿದ್ದಾರೆ. ಮುಪ್ಪಿನ ಷಡಕ್ಷರಿಗಳು 'ಸಕಲಕೆಲ್ಲಕೆ ನೀನೆ ಅಕಳಂಕ ಗುರುವೆಂದು ನಿಖಿಳಶಾಸ್ತ್ರ ಪೇಳುತಿರಲು ಅರಿದನು' ಎಂದಂದು 'ಗುರು' ಎನ್ನುವುದು ಒಂದು ತತ್ವವೆಂದೂ ಅದು ಅನಾದಿ, ಅವಿನಾಶಿ, ಸರ್ವವ್ಯಾಪಿಯೆಂದೂ ಹಾಡಿದ್ದಾರೆ. 'ನ ಗುರೋರಧಿಕಂ, ನ ಗುರೋರಧಿಕಂ' ಎಂದರೆ ಗುರುವಿಗಿಂತ ಹೆಚ್ಚಿನವರ ಯಾರೂ ಇಲ್ಲವೆಂದು ಶ್ರುತಿ ಸಾರಿದೆ.

**ಲಿಂಗ:**

ಅವ್ಯಕ್ತದ ಪರಬ್ರಹ್ಮದ ವ್ಯಕ್ತರೂಪವೇ ಲಿಂಗವಾಗಿದೆ. ಇದು ಶಿವಚೈತನ್ಯದ ಪ್ರತೀಕವೂ ಅಹುದು. ಸ್ಥಾವರಲಿಂಗ ಪಾಚೀನಕಾಲದಿಂದಲೂ ಪೂಜಿಸಲ್ಪಡುತ್ತ ಬಂದಿದೆ. ಇದು ಶಿವಭಕ್ತಿ ಪ್ರಚಾರಕ್ಕಾಗಿಯೂ ಹುಟ್ಟಿಕೊಂಡದ್ದು. ಸ್ಥಾವರಲಿಂಗದಲ್ಲಿ ಸ್ವಯಂಭೂ ಆರ್ಷ ಮತ್ತು ಪ್ರತಿಷ್ಠಿತ ಹೀಗೆ ಮೂರು ಪ್ರಕಾರದ ಲಿಂಗಗಳಿರುತ್ತವೆ. ಸೌರಾಷ್ಟ್ರ ಸೋಮೇಶ್ವರ, ಕಾಶೀ ವಿಶ್ವನಾಥ, ಶ್ರೀಶೈಲ ಮಲ್ಲಿಕಾರ್ಜುನ ಮೊದಲಾದ ಜ್ಯೋತಿರ್ಲಿಂಗ ಗಳೆಲ್ಲ ಸ್ವಯಂಭೂ ಎಂಬ ಕಲ್ಪನೆ. ಇವುಗಳನ್ನು ಯಾರು ಬೇಕಾದವರೂ ಪೂಜಿಸಬಹು ದಾಗಿದೆ. ವಿಭೂತಿಪುರುಷರಿಂದ ಸ್ಥಾಪಿತವಾದ ಅಗಸ್ತೇಶ್ವರ, ಭೀಮೇಶ್ವರ ಮೊದಲಾದ ಲಿಂಗಗಳು ಆರ್ಷಲಿಂಗಗಳಾಗಿರುತ್ತವೆ. ಆಗಮೋಕ್ತ ಲಿಂಗಗಳು–ಪ್ರತಿಷ್ಠಿತವಾದವುಗಳಾಗಿವೆ. ಇವುಗಳನ್ನು ಆಗಮೋಕ್ತರೇ ಪೂಜಿಸಬೇಕಾಗುತ್ತದೆ. ಮೊಹೆಂಜೊದಾರೊ ಹರಪ್ಪಾ ಸಂಸ್ಕೃತಿಯ ಕಾಲದಷ್ಟು ಹಿಂದೆಯೆ ಶಿವಲಿಂಗಗಳ ಪೂಜೆ ನಡೆಯುತ್ತಿತ್ತು ಎಂಬುದಕ್ಕೆ ಸಾಕಷ್ಟು ಅವಶೇಷಗಳು ಇಂದು ದೊರಕಿರುತ್ತವೆ. ಶೈವ ಧರ್ಮದ ಪ್ರಾಚೀನತೆಗೆ ಈ ಸ್ಥಾವರ ಲಿಂಗಗಳು ಸಾಕ್ಷಿಯಾಗಿವೆ.

ಸ್ಥೂಲತನುವಿನ ಭವಿತನ ಹೋಗಲಾಡಿಸಲು ಇಷ್ಟಲಿಂಗದ ಅವಶ್ಯಕತೆ ಇರುವಂತೆ ಸೂಕ್ಷ್ಮ ಕಾರಣ ಶರೀರಗಳನ್ನೊಳಗೊಂಡ ಅಂಗತ್ರಯವನ್ನು ಲಿಂಗತ್ರಯವನ್ನಾಗಿ ಮಾಡು ವಲ್ಲೂ ಇಷ್ಟಲಿಂಗದ ಶಕ್ತಿಯು ದಿವ್ಯವಾಗಿದೆ.

ಜಡಶರೀರದ ಪ್ರಾಕೃತಿಕ ಗುಣಗಳನ್ನು ಕೆಡಿಸಿ ಅಂದರೆ ಅಂಗಗುಣಗಳನ್ನಳಿದು ಲಿಂಗ ಗುಣಗಳನ್ನು ಅಳವಡಿಸುವುದೇ ಇಷ್ಟಲಿಂಗಧಾರಣೆಯ ಉದ್ದೇಶವಾಗಿರುತ್ತದೆ. ಇಷ್ಟ ಲಿಂಗವು ಗುರು ಕರುಣಿಸಿಕೊಟ್ಟ ಅರುಹಿನ ಕುರುಹಾಗಿರುತ್ತದೆ. ಇದನ್ನು ಧರಿಸಿದ ಸಾಧಕನು ಆಜೀವಪರ್ಯಂತ ಪೂಜಿಸಬೇಕು. ಮರಣ ಹೊಂದಿದಾಗ ಆತನ ಸ್ಥೂಲ ಕಾಯದೊಂದಿಗೆ ಇಷ್ಟಲಿಂಗವನ್ನು ನಿಕ್ಷೇಪಗೊಳಿಸುವರು. ಇಷ್ಟಾರ್ಥವನ್ನು ನೀಡುವುದರ ಜೊತೆಗೆ 'ಇಷ್ಟಲಿಂಗಮಿದಂ ಅನಿಷ್ಟ ಪರಿಹಾರಕಂ' ಎಂದಂತೆ ಅನಿಷ್ಟ ಪರಿಹಾರಕ ಶಕ್ತಿಯೂ ಈ ಲಿಂಗಕ್ಕಿರುತ್ತದೆ. ಇಷ್ಟಲಿಂಗಪೂಜೆ ಕರಸ್ಥಲದಲ್ಲಿ, ಪ್ರಾಣಲಿಂಗಪೂಜೆ ಉರಸ್ಥಲದಲ್ಲಿ, ಭಾವಲಿಂಗಪೂಜೆ ಶಿರಸ್ಥಲದಲ್ಲಿ ನಡೆಯುತ್ತದೆ. ಕರದ ಇಷ್ಟಲಿಂಗಪೂಜೆ ಕ್ರಿಯೆಯಾಗಿ, ಉರದ ಪ್ರಾಣಲಿಂಗಪೂಜೆ ಯೋಗವೆನಿಸಿ, ಶಿರದ ಭಾವಲಿಂಗಪೂಜೆ ಜ್ಞಾನವೆನಿಸುತ್ತದೆ. ಕರದ ಮತ್ತು ಶಿರದ ಕ್ರಿಯಾಜ್ಞಾನಗಳ ಸಂಸ್ಕೃತಿಯನ್ನು ಒಂದುಗೂಡಿಸುವ ಉರದ ಸಂಸ್ಕೃತಿಯೇ ಶಿವಯೋಗವೆನಿಸುತ್ತದೆ.

ಆಲಿ ನಿಂದೊಡೆ ಸುಳಿದು ಸೂಸುವ।
ಗಾಳಿ ನಿಲುವುದು ಗಾಳಿ ನಿಲೆಮನ।
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು।

ಲೀಲೆಯಿಂದಾ ಬಿಂದು ನಿಂದೊಡೆ।
ಕಾಲಕರ್ಮವ ಗೆದ್ದು ಮಾಯೆಯ।
ಹೇಳ ಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ। (ಪ್ರ. ಲಿಂ. ಲೀ. ಪು. ೨೧೧)

ಎಂದು ಚಾಮರಸ ಕವಿಯು ಇಷ್ಟಲಿಂಗಪೂಜೆಯ ಮಹತಿಯನ್ನು ಮನಂಬುಗುವಂತೆ ಚಿತ್ರಿಸಿದ್ದಾನೆ. ಚನ್ನಬಸವಣ್ಣನವರೂ ಕೂಡಾ:

'ಆಲಿನುಂಗಿದ ನೋಟದಂತೆ, ಬಯಲು ನುಂಗಿದ ಬ್ರಹ್ಮಾಂಡದಂತೆ
ಮುತ್ತು ನುಂಗಿದ ಉದಕದಂತೆ ಪುಷ್ಪನುಂಗಿದ ಪರಿಮಳದಂತೆ'

ಎಂದು ಲಿಂಗ ಮಹಾನುಭಾವಿಯ ಹಿರಿಮೆಯನ್ನು ಹೇಳಿದ್ದಾರೆ. ಹೀಗೆ ಶಿವಯೋಗಿಗಳ ಸಾಧನೆ ಇಷ್ಟಲಿಂಗದೊಂದಿಗೆ ಪ್ರಾರಂಭಗೊಂಡು ಪ್ರಾಣಲಿಂಗದಲ್ಲಿ ಹಣ್ಣಾಗಿ ಭಾವಲಿಂಗದಲ್ಲಿ ಕಳಚಿ ಕೈಗೆಟಕುತ್ತದೆ. ಗುರೂಪದೇಶದಿಂದ ಎಲ್ಲ ಇಂದ್ರಿಯಗಳಲ್ಲಿ ಲಿಂಗವೆ ಪ್ರಕಾಶಿಸುವುದನ್ನು 'ಎನ್ನ ಸರ್ವಾಂಗವೆಲ್ಲವು ಲಿಂಗವಾದ ಪರಿಶ್ರಮವೆಂತೆಂದಡೆ' ಎಂಬ ದೀರ್ಘ ವಚನದಲ್ಲಿ ಚನ್ನಬಸವಣ್ಣನವರು ಸವಿಸ್ತಾರವಾಗಿ ಬಣ್ಣಿಸಿದ್ದಾರೆ.

ಇಷ್ಟಲಿಂಗಧಾರಿಗೆ ಕಾಯಕ, ದಾಸೋಹ ಅವಶ್ಯ. ಜಾತಿ, ಜನನ, ಪ್ರೇತ, ಉಚ್ಛಿಷ್ಟ ಹಾಗೂ ರಜಸ್ಸೂತಕಗಳಿರುವುದಿಲ್ಲ. ಇಂದ್ರಿಯಗಳ ಸುಖೋಪಭೋಗಗಳೆಲ್ಲವೂ ಲಿಂಗಕ್ಕೆ ಅರ್ಪಣವಾಗಬೇಕು. ಅಂದಾಗ ಆತನ ಕಾಯ ಪ್ರಸಾದ ಕಾಯ, ಮನಸ್ಸು ಪ್ರಸನ್ನ, ಆತ ಶಿವಸ್ವರೂಪಿ. ಆತನೇ ಲಿಂಗವಂತ.

'ಯೋ ಹಸ್ತಪೀಠೆ ನಿಜಮಿಷ್ಟಲಿಂಗಂ ವಿನ್ಯಸ್ಯ ತಲ್ಲೀನಮನಃ ಪ್ರಚಾರಃ।
ಬಾಹ್ಯಕ್ರಿಯಾ ಸಂಕುಲ ನಿಸ್ಪೃಹಾತ್ಮಾ ಸಂಪೂಜ್ಯಯತ್ಯಂಗ ಸ ವೀರಶೈವ'
(ಶಂ. ಸಂ.)

'ಲಿಂಗವೇ ಪ್ರಾಣ, ಪ್ರಾಣವೇ ಲಿಂಗ'–ಈ ಸಾಮರಸ್ಯ ವೀರಶೈವ ಸಾಧಕನ ಪ್ರಾಣಲಿಂಗ ಸ್ಥಲದ ಪ್ರತೀಕವಾಗಿದೆ. ಲಿಂಗ ಕಳೆದುಕೊಂಡರೆ ಪ್ರಾಣ ಬಿಡಬೇಕು ಎನ್ನುವ ವಿಚಾರಕ್ಕೆ ಅಂಟಿಕೊಂಡು ಅದರ ವಾಚ್ಯಾರ್ಥ ಹಿಡಿಯದೆ ಲಿಂಗವೆಂದರೆ ಪ್ರಾಣ ಎನ್ನುವಷ್ಟರ ಮಟ್ಟಿಗೆ ಪ್ರೇಮ ಎಂದು ಅರ್ಥಮಾಡಿಕೊಳ್ಳಬೇಕು.

'ವೀರಶೈವನಾದವನು ಪ್ರಮಾದ ವಶಾತ್, ಏನ ಕೇನ ಕಾರಣದಿಂದ ಇಷ್ಟಲಿಂಗವನ್ನು ಕಳೆದುಕೊಂಡರೆ ಪ್ರಾಣವನ್ನು ಕಳೆದುಕೊಳ್ಳಬೇಕೆಂಬ ಅಭಿಪ್ರಾಯ ವೀರಶೈವ ಧರ್ಮದಲ್ಲಿ ಹೇಳಿದೆಯಾದರೂ ಆದನ್ನು ಅಕ್ಷರಶಃ ಸತ್ಯವೆಂದು ತಿಳಿಯಕೂಡದು.' ಅಂಗದಮೇಲೆ ಲಿಂಗಧರಿಸಿಕೊಂಡಷ್ಟಕ್ಕೆ ಆತನ ಅಂಗ ಪರಿಶುದ್ಧವಾಗಲಾರದು. ತನು, ಮನ, ಭಾವಶುದ್ಧಿಯ ತ್ರಿವಿಧವನರಿಯದೆ 'ಲಿಂಗದೇಹಿ ಸದಾಶುಚಿ' ಎಂದು ಬೀಗಿಕೊಂಡರೆ ನಾಯಕ ನರಕ ಎಂದು ಹೇಳಿದ ಚನ್ನಬಸವಣ್ಣನವರ ವಚನವನ್ನು ಉಲ್ಲೇಖಿಸಬಹುದಾಗಿದೆ.

ಅಯ್ಯಾ ತನುಶುದ್ಧನಾಗಿ ಇಷ್ಟಲಿಂಗವ ಪೂಜಿಸಬೇಕು
ಮನಶುದ್ಧನಾಗಿ ಪ್ರಾಣಲಿಂಗವ ಧ್ಯಾನಿಸಬೇಕು
ಭಾವಶುದ್ಧನಾಗಿ ಭಾವಲಿಂಗವ ಭಾವಿಸಬೇಕು.
ಇಂತೀ ತ್ರಿವಿಧವನರಿಯದೆ,
'ಲಿಂಗದೇಹಿ ಸದಾಶುಚಿಃ' ಎಂಬೊಂದು ವಾಕ್ಯವನೆ ಮುಂದುಮಾಡಿ
'ಕ್ರಿಯಾದ್ವೈತಂ ನಕರ್ತವ್ಯಂ' ಎಂಬ ವಾಕ್ಯ ಮರೆಮಾಜಿ
ಸ್ನಾನಪೂಜಾದಿ ಸತ್ಕ್ರಿಯಾ ಸಂಪನ್ನನಾಗದೆ
ಶಮ, ದಮಾದಿ ಸದ್ಗುಣ ಸಂಪತ್ತಿಯ ಪಡೆಯದೆ
ನಿತ್ಯ ನಿರ್ಮಲಪ್ಪ ನೆಲೆಯಾಗದೆ
ಆನು ಶುದ್ಧನಾದೆನೆಂಬ ಕ್ರಿಯಾದ್ವೈತಿಯಾದ ಪಾತಕನ
ನಾಯಕ ನರಕದಲ್ಲಿಕ್ಕುವ, ನಮ್ಮ ಕೂಡಲಸಂಗಮದೇವ

ಆದ್ದರಿಂದ ವೀರಶೈವ ಸಾಧಕನು ಇಷ್ಟಲಿಂಗ ಧರಿಸಿಕೊಂಡಾದ ಮೇಲೆ ತನು ಶುದ್ಧ ಮಾಡಿಕೊಂಡು ಭಕ್ತ, ಮಹೇಶಸ್ಥಲ ಹೊಂದಬೇಕು, ಪ್ರಾಣಲಿಂಗ ಧ್ಯಾನದಿಂದ ಮನಸ್ಸನ್ನು ನಿರ್ಮಲಗೊಳಿಸಿಕೊಂಡು ಪ್ರಸಾದಿ, ಪ್ರಾಣಲಿಂಗಿಸ್ಥಲ ಸೇರಬೇಕು. ಭಾವಲಿಂಗದಿಂದ ಭಾವಪರಿಶುದ್ಧಗೊಳಿಸಿಕೊಂಡು ಸಮರ್ಪಣ ಭಾವದಿಂದ ಶರಣ, ಐಕ್ಯಸ್ಥಿತಿಗೇರಬೇಕು. ಇವು ಕ್ರಮಸಯುಚ್ಚಯದಂತೆ ಸಮಸಮುಚ್ಚಯದಲ್ಲೂ ನಡೆಯಬೇಕಾಗುತ್ತದೆ. ಹೀಗೆ ಧಾರಣ, ಧ್ಯಾನ, ಸಮಾಧಿಯೋಗದಿಂದ ತನು, ಮನ ಭಾವ ಶುದ್ಧಗೊಳಿಸಿಕೊಳ್ಳುವುದೇ ತ್ರಿವಿಧ ಶುದ್ಧಿಯಾಗಿದೆ.

ಇಷ್ಟಲಿಂಗ ಪೂಜೆಯಿಂದ ನಮ್ಮ ಅನಿಷ್ಟಗಳು ದೂರಾಗುತ್ತವೆ. ಆರೋಗ್ಯ ಭಾಗ್ಯ ಲಭಿಸುತ್ತದೆ. ಇಷ್ಟಲಿಂಗದ ಕಂತೆಯಲ್ಲಿ ಕಣ್ಣಿನ ಬೆಳಕನ್ನು ಹೆಚ್ಚಿಸುವ ಶಕ್ತಿ ಇರುವುದರಿಂದ ಅದನ್ನು ದೃಷ್ಟಿಯಿಟ್ಟು ನೋಡುವುದರಿಂದ ಕಣ್ಣಿನ ಕಾಂತಿ ಹೆಚ್ಚುತ್ತದೆ. ಮಣಿ, ಮಂತ್ರ ಔಷಧಿ ರೂಪಾದ ಲಿಂಗವನ್ನು ಉದಕ, ಪತ್ರಿ ಮೊದಲಾದ ವಸ್ತುಗಳಿಂದ ಪೂಜಿಸುವುದರಿಂದ ಅದನ್ನು ತೀರ್ಥವೆಂದು ಸೇವಿಸಿದರೆ ನಮ್ಮಲ್ಲಿಯ ಅಜೀರ್ಣತೆ ದೂರಾಗಿ ರೋಗರುಜಿನಗಳು ಬಾರದಂತಾಗುತ್ತದೆ.

**ಜಂಗಮ :**

ಲಿಂಗ ತತ್ವದ ರಹಸ್ಯವನ್ನು ಅರಿತು, ಅಳವಡಿಸಿಕೊಂಡು, ಉಪಾಸ್ಯ ಮೂರುತಿಯಾಗಿ ಶಿಷ್ಯರಿಗೆ ತಿಳಿಸಿಕೊಡುತ್ತ, ಭಕ್ತೋದ್ಧಾರಕ್ಕಾಗಿ ಸಂಚರಿಸುವ ಶಿವಯೋಗಿಯೇ ಜಂಗಮ ಎನಿಸಿದ್ದಾನೆ. 'ಜಂಗಮಕ್ಕೆರೆದರೆ ಸ್ಥಾವರನೆನೆಯಿತು' ಎಂದಂತೆ 'ಲಿಂಗದ ಮುಖವೇ ಜಂಗಮ' ಆಗಿದ್ದಾನೆ. ಅಂಗವಿಕಾರಗಳನ್ನೆಲ್ಲ ದೂರಮಾಡಿ, ಷಟ್‌ಸ್ಥಲ ಆಚರಣೆಯುಳ್ಳವನಾಗಿ ಶಿವತತ್ವವನ್ನು ಪ್ರಕಟಪಡಿಸುವ ಚರಮೂರ್ತಿಯೇ ಜಂಗಮ

ಮೂರುತಿಯಾಗಿದ್ದಾನೆ. ಗುರುತೈಲ, ಲಿಂಗ ಬತ್ತಿ, ಜಂಗಮ ಜ್ಯೋತಿಯಾಗಿ ಕಂಗೊಳಿಸಿದ್ದಾನೆ.

'ಬೇಡುವಾತ ಜಂಗಮನಲ್ಲ, ಬೇಡಿಸಿಕೊಂಬಾತ ಭಕ್ತನಲ್ಲ
ಬೇಡದೆ ಆ ಭಕ್ತ ತಾನೇ ಮಾಡಿದ ಮಾಟವ
ಪರಿಣಾಮಿಸಬಲ್ಲಡೆ ಜಂಗಮ'

ಎಂದು ಚನ್ನಬಸವಣ್ಣನವರು ಜಂಗಮನ ಇರವನ್ನು ಅರುಹಿದ್ದಾರೆ. ಪರಶಿವನೇ ಭಕ್ತೋದ್ಧಾರ ಕಾರ್ಯಕ್ಕಾಗಿ ಗುರುರೂಪದಿಂದ, ಲಿಂಗರೂಪದಿಂದ, ಜಂಗಮರೂಪದಿಂದ ಶೋಭಿಸುತ್ತಿರುವನು. ಪರಮಾತ್ಮ ಸ್ವರೂಪನಾಗಿರುವ ವೀರಮಾಹೇಶ್ವರನು ಲೋಕೋದ್ಧಾರಕ್ಕಾಗಿಯೇ ನಿರಂತರ, ಸರ್ವತ್ರ ಸಂಚರಿಸುತ್ತಿರುತ್ತಾನೆ. ಇವನು ಸರ್ವಸಂಗ ನಿವೃತ್ತನೂ, ತತ್ವಾರ್ಥಬೋಧಕನೂ ಆಗಿದ್ದಾನೆ. ಸ್ಥಿತಜ್ಞ, ಆತ್ಮಜ್ಞ, ಬ್ರಹ್ಮವೇದೀ ಹಾಗೂ ಅತಿಥಿಯಾದ ಈ ಜಂಗಮನ ಸೇವೆಯೇ ಶಿವನ ಸೇವೆಯಾಗಿರುತ್ತದೆ. ಇಂಥವನ ಪಾದಪೂಜೆ ಮಾಡುವವನಿಗೆ ಭೋಗಯೋಗಗಳೆರಡರ ಲಾಭ ಇರುತ್ತದೆ. ಜಂಗಮ ಮೂರ್ತಿಯ ಪಾದಧೂಳಿಯು ಯಾವನ ಮನೆಯಲ್ಲಿ ಬೀಳುವುದೋ ಅವನ ಮನೆ ಪಾವನ ಾಗುವುದು. ಅವನ ದರ್ಶನ ಮಾತ್ರದಿಂದ ಸರ್ವಸಿದ್ಧಿಗಳುಂಟಾಗುವವು. ಶಿವ ೀಗಿಯೂ, ಶಿವಸ್ವರೂಪಿಯೂ ಆದ ಈ ಜಂಗಮ ಸಂತೃಪ್ತನಾದರೆ ಶಿವನುಸಂತೃಪ್ತ. ರಿಂದ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ತೃಪ್ತಿಹೊಂದುವುದು. ಜಂಗಮ ್ಯಾಯನವಾದರೆ ಲಿಂಗಸಂತುಷ್ಟಿ

'ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯಾ,
ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯಾ,
ಜಂಗಮ ವಾಪ್ಯಾಯನವಾದರೆ ಲಿಂಗಸಂತೃಪ್ತಿಯಹುದಯ್ಯಾ'

(ವ. ಶಾ. ಸಾ. ೬೭೬)

ಎಂದು ಚನ್ನ ಬಸವಣ್ಣನವರೂ

'ಮರಕ್ಕೆ ಬಾಯಿ ಬೇರೆಂದು
ತಳಕ್ಕೆ ನೀರನೆರೆದಡೆ
ಮೇಲೆ ಪಲ್ಲವಿಸಿತ್ತು ನೋಡಾ.
ಲಿಂಗದ ಬಾಯಿ ಜಂಗಮವೆಂದು
ಪಡಿಪದಾರ್ಥವ ನೀಡಿದಡೆ
ಮುಂದೆ ಸಕಳಾರ್ಥವನೀವನು' (ಬ. ವ. ೪೨೦)

ಎಂದು ಬಸವಣ್ಣನವರೂ ಜಂಗಮನು ಹರನೆಂದು ಕಂಡು 'ಲಿಂಗದ ಬಾಯಿ ಜಂಗಮ' ಎಂದು ಸಾರಿದ್ದಾರೆ. ಅದಕ್ಕೆಂದೇ ಜಂಗಮನನ್ನು ಪೂಜಿಸಿ, ವಂದಿಸಿ, ಧನ, ಕನಕ, ವಸ್ತ್ರಾದಿ

ಗಳನ್ನು ಸಮರ್ಪಿಸಿ ಅತಿಥಿಯೆಂದು ಸತ್ಕಾರ ಮಾಡಿದಡೆ ಕೋಟಿಯಾಗಗಳ ಪುಣ್ಯಲಾಭ ವೆಂದೂ ಜನರ ತಿಳುವಳಿಕೆಯಾಗಿದೆ.

'ಅರಿದಾರರ್ಥಂಗಳಾ
ಚರಿಸುತಿ ವೈರಾಗ್ಯದೊಡನೆ ಶಿವಸಿದ್ಧಾಂತದ
ತಿರುಳನುಪದೇಶಿಸುತ ಸಂ
ಚರಿಸುವ ಶಿವಯೋಗಿವರನದೇಂ ಜಾವಳನೆ?'

ಎಂಬ ಪದ್ಯದಲ್ಲಿ ಹುಲ್ಯಾಳದ ಶ್ರೀ ಶಂಭುಲಿಂಗ ಶಿವಾಚಾರ್ಯರು (ಅಷ್ಟಾವರಣ ವಿವೇಕ)-ಜಂಗಮನೆಂದರೆ ಆರು ಅರ್ಥಗಳನ್ನು ಅರಿತು ಆಚರಿಸುವ ಚರಮೂರ್ತಿಯೆಂದು ಹೇಳಿದ್ದಾರೆ. ಇಲ್ಲಿ ಆರು ಅರ್ಥಗಳೆಂದರೆ ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯ-ಎಂಬುವುಗಳಾಗಿವೆ.

'ಜ್ಞಾನಂ ಜ್ಞೇಯಮನುಷ್ಠೇಯಮಧಿಕಾರೋರ್ಥ ಸಾಧನಂ
ಸಾಧ್ಯಂ ಚೇತಿ ಷಡರ್ಥಾನಾಂ ಸಂಗ್ರಹಸ್ತ್ವೇಷ ಸಂಗ್ರಹಂ'

ಎಂದುತೆ ಜಂಗಮನಾದವನು ಗುರೂಪದಿಷ್ಟವಾದ ಶಿವಜ್ಞಾನ (ಜ್ಞಾನ) ಪಶುಪತಿ ಪಾಶ ವೆಂಬ ತ್ರಿಪದಾರ್ಥ (ಜ್ಞೇಯ) ಲಿಂಗಪೂಜಾದಿಗಳು (ಅನುಷ್ಠೇಯ) ಭಸ್ಮ ರುದ್ರಾಕ್ಷಾದಿ ದೀಕ್ಷಾಸಂಪನ್ನತೆ (ಅಧಿಕಾರ) ಶಿವಮಂತ್ರ ಜಪಾದಿಗಳು (ಸಾಧನ) ಶಿವಸಮಾನತಾ ರೂಪ ಮುಕ್ತಿ (ಸಾಧ್ಯ) ಇವುಗಳನ್ನು ಅಳವಡಿಸಿಕೊಂಡು ಆಚರಿಸುವಂತವನಾಗಬೇಕು. ಜಂಗಮರಲ್ಲಿ ಸ್ವಯ, ಚರ, ಪರ ಎಂದು ಮೂರು ಪ್ರಕಾರದವರಿದ್ದಾರೆ. ಮಠ ಹಿಡಿದು ಕೊಂಡವರು ಸ್ಥಿರ, ಸಂಚರಿಸುವವರು ಚರ, ದಾರ್ಶನಿಕ ಶಕ್ತಿ ಪಡೆದವರು ಪರ ಜಂಗಮ ರೆನಿಸಿದ್ದಾರೆ. ಜಂಗಮ ಎನ್ನುವುದು ಬರಿಯ ಜಾತಿವಾಚಕವಾಗಿರದೆ ಅದು ಅನುಭಾವದ ನೀಲವೂ ಆಗಿರುತ್ತದೆ.

ಗುರು ಎಂಥವನಿದ್ದರೂ ಆತನಿಗೂ ಲಿಂಗ ಪೂಜೆ ಬೇಕೇ ಬೇಕು. ಅದೇ ರೀತಿ ಜಂಗಮನಿಗೂ ಇಷ್ಟಲಿಂಗ ಪೂಜೆ ಕಡ್ಡಾಯ. ಗುರು-ಲಿಂಗ-ಜಂಗಮರು ಎಂಬ ತ್ರಿವಿಧ ಮೂರ್ತಿಗಳ ಸ್ವರೂಪ ಒಂದೇ. ಆದುದರಿಂದ, ಗುರುವಾಗಲೀ ಜಂಗಮನಾಗಲೀ ತಮ್ಮ ಇಷ್ಟಲಿಂಗದಲ್ಲಿ ಪೂಜ್ಯ ಭಾವನೆ ತಾಳಿರಬೇಕಾಗುತ್ತದೆ.

**ತ್ರಿವಿಧ ದಾಸೋಹ:**

ಉಪಾಸ್ಯ ಮೂರ್ತಿಗಳಾದ ಗುರು ಲಿಂಗ ಜಂಗಮರಿಗೆ ತನು ಮನ ಧನಗಳನ್ನು ಅರ್ಪಿಸಿದಾಗ ಮಲತ್ರಯಗಳಿಂದ ವಿಮುಕ್ತನಾಗುತ್ತಾನೆ. ಆಗ ಸರ್ವವ್ಯಾಪಕತ್ವ ಸರ್ವಜ್ಞತ್ವ ಮತ್ತು ಸರ್ವ ಕರ್ತೃತ್ವಗಳನ್ನು ಪಡೆದು ತ್ರಿವಿಧ ದಾಸೋಹಿಯಾಗಿ ಕಂಗೊಳಿಸುತ್ತಾನೆ.

ಈ ತ್ರಿವಿಧವ ಹೊರಗು ಮಾಡಿ ಕೇವಲ ಲಿಂಗಪೂಜಿಸುವವರನ್ನು ಶಿವನು ಎಂದೂ ಮೆಚ್ಚ ಲಾರನು.

ತನುವ ಕೊಟ್ಟು ಗುರುವನೊಲಿಸಬೇಕು
ಮನವ ಕೊಟ್ಟು ಲಿಂಗವನೊಲಿಸಬೇಕು
ಧನವ ಕೊಟ್ಟು ಜಂಗಮವನೊಲಿಸಬೇಕು
ಈ ತ್ರಿವಿಧವ ಹೊರಗು ಮಾಡಿ ಹರೆಯ ಹೋಲಿಸಿ
ಕುರುಹ ಪೂಜಿಸುವರ ಮೆಚ್ಚ ಕೂಡಲಸಂಗಮದೇವ. (ಬ. ವ. ೨೦೬)

ತ್ರಿವಿಧ ದಾಸೋಹವಿಲ್ಲದೆ ಆಡಿ–ಹಾಡಿ–ಓದಿದಡೇನೂ ಪ್ರಯೋಜನವಿಲ್ಲ. ಭಕ್ತಿಯಿಲ್ಲ ದವರನ್ನು ಒಲ್ಲ ಎಂಬುದೂ ಅಷ್ಟೇ ಸತ್ಯವಾಗಿದೆ.

'ಆಡಿದಡೇನು ಹಾಡಿದಡೇನು ಓದಿದಡೇನು
ತ್ರಿವಿಧ ದಾಸೋಹವಿಲ್ಲದನ್ನಕ್ಕ?
ಆಡದೆ ನವಿಲು? ಹಾಡದೆ ತಂತಿ? ಓದದೆ ಗಿಳಿ?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ' (ಬ. ವ. ೨೦೭)

ಗುರುವಿನಲ್ಲಿ ಶ್ರದ್ಧೆ ಗಟ್ಟಿಗೊಳಿಸಿಕೊಂಡು ಲಿಂಗದಲ್ಲಿ ನಿಷ್ಠೆ ತಾಳಿ ಜಂಗಮನಿಗೆ ಭಕ್ತಿಯ ಬೆಳಕನ್ನು ಉಣಬಡಿಸದೆ ಕೇವಲ ದಾಸೋಹವೆಂದರೆ ಯಾರೂ ಮೆಚ್ಚಲಾರರು. 'ಭಕ್ತಿ ಹೀನನ ದಾಸೋಹವನ್ನು ಸದ್ಭಕ್ತರು ಸವಿಯಲಾರರು.' ಅದಕ್ಕಾಗಿ ತನು–ಮನ–ಧನ ಶುದ್ಧಗೊಳಿಸಿಕೊಳ್ಳಬೇಕು. ಅಷ್ಟಾವರಣ ಅಳವಡಿಸಿಕೊಳ್ಳುವುದು ಈ ತನು, ಮನ, ಧನ ಶುದ್ಧೀಕರಣಕ್ಕಾಗಿಯೇ. ವ್ಯಭಿಚಾರ, ಅತ್ಯಾಚಾರ, ಅನಾಚಾರ ಮೊದಲಾದ ದುರ್ಗುಣ ಗಳನ್ನು ದೂರ ಸರಿಸಿ ಪರಿಶುದ್ಧ ಕಾಯ ಹೊಂದಬೇಕು. ದೇಹ ದೇವಾಲಯವಾಗಬೇಕು. ಮಾದಕ ದ್ರವ್ಯ ಸೇವನೆಯಿಂದ ದೂರಿದ್ದು, ಸತ್ಯದ, ಶಿವಸ್ವರೂಪದ ದಾರಿ ಹಿಡಿದು-ಮನ ಸ್ಸನ್ನು ನಿರ್ಮಲಗೊಳಿಸಿಕೊಳ್ಳಬೇಕು. ದುಡಿದು ತರುವ ದುಡ್ಡು ಸತ್ಯ–ಶುದ್ಧ ಕಾಯಕದಿಂದ ಬರಬೇಕು. ಹೀಗೆ ತನು ಮನಧನಗಳನ್ನು ಪರಿಶುದ್ಧಗೊಳಿಸಿಕೊಂಡು ಕ್ರಮವಾಗಿ ಗುರುಲಿಂಗ ಜಂಗಮರಿಗೆ ಸಮರ್ಪಿಸಿ ಬದುಕುವುದೇ ತ್ರಿವಿಧ ದಾಸೋಹವಾಗಿರುತ್ತದೆ. ಅಂತೆಯೆ ಸಿದ್ಧರಾಮ ಶಿವಯೋಗಿಗಳು

'ಸೋಹಂ ಎಂಬುದದು ಅಂತರಂಗದ ಮದ ನೋಡಯ್ಯ
ಶಿವೋಹಂ ಎಂಬುದದು ಬಹಿರಂಗದ ಮದ ನೋಡಯ್ಯ
ಈ ದ್ವಂದ್ವವನಳಿದು 'ದಾಸೋಹಂ' ಎಂದೆನಿಸಯ್ಯ
ಕಪಿಲಸಿದ್ಧಮಲ್ಲಿಕಾರ್ಜುನ.' (ಸಿ. ದೇ. ವ–ಪು. ೬೨)

ಎಂದೆಂದು ಹೊನ್ನು, ಹೆಣ್ಣು, ಮಣ್ಣುಗಳಿಗೆ ಬಾಯಿ ಬಿಡದೆ, ಸಟೆ ಮಾಡಿ, ಗುರುಲಿಂಗ ಜಂಗಮಕ್ಕರ್ಪಿಸಿದ ಮಹಾ ದಾಸೋಹಿ ಎನಿಸಿದ್ದಾರೆ. ದಾಸೋಹ ಮಾರ್ಗದಿಂದಲೇ ಗುರುಲಿಂಗ ಜಂಗಮ ಪ್ರಸಾದಗಳನ್ನು ಕಂಡು ಬಸವಣ್ಣನವರು ಕೂಡಿ ದಾಸೋಹವ

ಮಾಡಿದಡೆ ಅಲ್ಲಿ ಶಿವನು ಕೂಡಿಕೊಳ್ಳುವನು ಎಂದ್ಹೇಳಿ 'ಸರ್ವದಲಿ ದಾಸೋಹವೆ ಬೇಕು' ಎಂದೂ 'ಆಯ್ಯಾ ನಿಮ್ಮ ಶರಣರ ದಾಸೋಹಕ್ಕೆ ಎನ್ನ ತನು ಮನ ಧನವಲಿಸುವಂತೆ ಮಾಡಯ್ಯ' ಎಂದೂ 'ದಾಸೋಹಂ ಭಾವವನೇ ಕರುಣಿಸಿ ಬದುಕಿಸಯ್ಯ' ಎಂದೂ ಸಾರಿದ್ದಾರೆ. ಮುಂದುವರಿದು–

'ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು
ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು
ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು

(ಬ. ವ. ೭೦೮)

.................................................

ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರೀಯ ಮಾಡನು

ಎಂದೆಲ್ಲ ಹಾಡಿ ತ್ರಿವಿಧ ಸಂಪತ್ತನ್ನು ಗುರು ಲಿಂಗ ಜಂಗಮಕ್ಕೆ ಸಮರ್ಪಿಸಿದ್ದಾರೆ.

ಜಂಗಮರಿಗೆ ಏನೆಲ್ಲವನ್ನೂ ಕೊಡುವ ಆವೇಶದಲ್ಲಿ ವಾಚ್ಯಾರ್ಥಕ್ಕೆ ಜೋತು ಬಿದ್ದು ಕೆಲವರು ಅಂಗನೆಯರನ್ನೂ ಕೊಟ್ಟರೆಂದು ತಪ್ಪು ಅರ್ಥ ಹೇಳುತ್ತಿದ್ದಾರೆ. ಅದು ಅಜ್ಞಾನದ, ಅಪಪ್ರಚಾರದ ಮಾತೇ ಹೊರತು ಸತ್ಯಾಂಶದಿಂದ ಕೂಡಿದ್ದಲ್ಲ. ಇಂಥವರಿಗೆ ಸಿದ್ಧರಾಮ ದೇವರು ಸರಿಯಾದ ಉತ್ತರ ನೀಡಿ ಅವರ ಬಾಯಿ ಮುಚ್ಚಿಸಿದ್ದಾರೆ.

'.................................................
ಇದ್ದ ಮನ ಲಿಂಗಕ್ಕೆ ಕೊಟ್ಟಾಗಳೆ ಹೆಣ್ಣಳಿದುದು
ಇದ್ದ ಧನ ಜಂಗಮಕ್ಕೆ ಕೊಟ್ಟಾಗಳೆ ಹೊನ್ನಳಿದುದು
ಇದ್ದ ತನು ಗುರುವಿಂಗೆ ಕೊಟ್ಟಾಗಳೆ ಮಣ್ಣಳಿದುದು
.................................................
ಹೆಣ್ಣು ಎಂದಡೆ ತಾನು, ಶರಣಸತಿ ಲಿಂಗಪತಿ ಎಂಬ ಭಾವದಿಂದ
ಲಿಂಗಕ್ಕೆ ಮನಕೊಟ್ಟು ವಧುವಾದೆನಲ್ಲದೆ
ತನ್ನಂಗನೆಯ ಕೊಡಲಿಲ್ಲವು'
'ಹೊನ್ನು ಎಂದಡೆ ಜಂಗಮಕ್ಕೆ ಧನವಕೊಟ್ಟು
ನಿಧಿ ನಿಧಾನವಿಲ್ಲವಾದನಲ್ಲದೆ ತನ್ನಂಗನೆಯ ಕೊಡಲಿಲ್ಲವು
ಮಣ್ಣು ಎಂದೆಡೆ ತನ್ನ ತನುವ ಗುರುವಿಂಗೆ ಕೊಟ್ಟು
ಸ್ವಯಂಭುವಾದನಲ್ಲದ ತನ್ನಂಗನೆಯ ಕೊಡಲಿಲ್ಲವು'

ಹೀಗೆ ಗುರು–ಲಿಂಗ–ಜಂಗಮರ ಸಮರ್ಪಣೆಯಲ್ಲಿ ತ್ರಿವಿಧ ದಾಸೋಹದ ಕಲ್ಪನೆ ಆಗುವಂತಿದೆ. ಗುರು–ಲಿಂಗ–ಜಂಗಮಕ್ಕೂ ಅರುಹು, ಆಚಾರ, ಸತ್ಕ್ರಿಯೆಗಳು ಬೇಕು

ಎಂದು ಒತ್ತಿ ಹೇಳಿ, ಅದಿಲ್ಲದವರು ಶಿವಪಥಕ್ಕೆ ಸಲ್ಲರು ಎಂದು ಹೇಳಿದ್ದಾರೆ.

'ಗುರುವಿಂಗಾದರೂ ಅರುಹು ಆಚಾರಬೇಕು
ಲಿಂಗಕ್ಕಾದರೂ ಅರುಹು ಸತ್ಕ್ರಿಯೆ ಬೇಕು
ಜಂಗಮಕ್ಕಾದರೂ ಅರುಹು ಆಚಾರ ಸತ್ಕ್ರಿಯೆ ಬೇಕು
ಅದೇನು ಕಾರಣವೆಂದರೆ, ಅರುಹು ಆಚಾರ ಸತ್ಕ್ರಿಯೆ-
ಸನ್ನಿಹಿತ ಶಿವನಿರ್ಪನಾಗಿ ಅರುಹುಗೆಟ್ಟು ಆಚಾರದಪ್ಪಿ
ಸತ್ಕ್ರಿಯೆ ಹೀನರಾಗಿರ್ಪರು-ಸಲ್ಲರಯ್ಯ ಶಿವಪಥಕ್ಕೆ
ಅಖಂಡೇಶ್ವರಾ.'

ಅರುಹು-ಆಚಾರಗಳಿಂದ ಕೂಡಿದ ಉಪಾಸ್ಯ ಮೂರ್ತಿಗಳಾದ ಗುರುಲಿಂಗ ಜಂಗಮರ ಸೇವೆಯಿಂದ ಪಾದೋದಕ ಪ್ರಸಾದ ಲಭ್ಯವಾಗಿ ಪುನೀತರಾಗುವರು.

ಜಂಗಮನ ಬೋಧನೆ ಸಮಾಜದ ಉದ್ಧಾರದ ಹಾದಿಯಲ್ಲಿರಬೇಕು. ಅಹಂಕಾರದ, ಅರ್ಥವಿಲ್ಲದ ಬರಿಯ ಉಪದೇಶ ಯಾರಿಗೂ ಹಿಡಿಸದು. ಆತನ ಅಂದರೆ ಜಂಗಮನ ಮಾತಿಗಿಂತಲೂ, ಬೋಧನೆಗಿಂತಲೂ ಕಚ್ಚೆ-ಕೈ-ಬಾಯಿಗಳು ಶುದ್ಧವಾಗಿರಬೇಕು. ಚನ್ನಬಸವಣ್ಣನವರು ಜಂಗಮ ಲಕ್ಷಣದ ಜೀವನಾಡಿಯನ್ನು ಹೀಗೆ ಗುರುತಿಸಿದ್ದಾರೆ.

ಜಂಗಮ ಜಂಗಮವೆಂದೊಡೇನು
ಬಾಯಿಲೆಕ್ಕಕ್ಕೆ ಜಂಗಮವೆ?
ಜಂಗಮ ಜಂಗಮವೆಂದೊಡೆ ಉಪಾಧಿಕನೆ?
ಜಂಗಮ ಜಂಗಮವೆಂದೊಡೆ ಅಶಕನೆ?
ಜಂಗಮ ಜಂಗಮವೆಂದೊಡೆ ಕಾರ್ಯ ಕಾರಣನೆ?
ಜಂಗಮ ಜಂಗಮವೆಂದೊಡೆ ಸ್ತ್ರೀಲಂಪಟನೆ?
ಈ ಷಡ್ಗುಣದಿಚ್ಛೆಕರ ಜಂಗಮವೆನ್ನೆನಯ್ಯಾ.

**ಉಪಾಸನಾ ಫಲಗಳು:**

ಗುರು-ಜಂಗಮರ ಪಾದ ಪರುಷ ಮಣಿಗಳ ಮೇಲೆ ಮಂತ್ರ ಪೂರ್ವಕವಾಗಿ ಎರೆದ ಉದಕವು ಪಾದದ ಸಂಗದಿಂದ ಪವಿತ್ರವಾಗುತ್ತದೆ. ಪಾದ ತೇಜಸ್ಸಿನಿಂದ ನಿರ್ಮಲವಾಗುತ್ತದೆ. ಅದನ್ನೇ 'ಪಾದೋದಕ' ಎನ್ನುವ ವಾಡಿಕೆ.

'ಬ್ರಹ್ಮಂಗೆ ವಾಕ್ಪರುಷ
ವಿಷ್ಣುವಿಂಗೆ ನಯನ ಪರುಷ
ರುದ್ರಂಗೆ ಹಸ್ತ ಪರುಷ

ನಮ್ಮ ಕೂಡಲ ಸಂಗನ ಶರಣರಿಗೆ
ಪಾದವೇ ಪರುಷ.

ಎಂದು ಬಸವಣ್ಣನವರು ಸಾರಿದಂತೆ ಶರಣರಿಗೆ ಗುರುವಿನ, ಜಂಗಮನ ಪಾದಗಳು ಪರುಷ ಮಣೆಗಳಾಗಿವೆ. ಅಂತಹ ಪವಿತ್ರ ಪಾದಗಳ ತೇಜಸ್ಸಿನಿಂದ ದೊರೆಯುವ ಪಾದೋದಕ ದಿಂದ ಪವಿತ್ರರಾಗುವರೆಂಬುದನ್ನು ಒತ್ತಿ ಹೇಳಿದ್ದುಂಟು. ಪಾದೋದಕವು ಉಪಾಸೋ ಪಾಸಕರ ಸಾಮರಸ್ಯದ ಫಲವಾಗಿದ. ಗುರು–ಲಿಂಗ–ಜಂಗಮರಿಗೆ ತನು–ಮನ–ಧನ ಗಳನ್ನು ಅರ್ಪಿಸುವುದರ ಪ್ರತಿಫಲವಿದು.

ಬಾಹ್ಯಾಡಂಬರಕ್ಕೆಂದು ಭಕ್ತರೆನಿಸಿ ಭಾಂಡ ಭಾಜನ ಶುದ್ಧಗೊಳಿಸದಿದ್ದರೆ ಅದು ವ್ಯರ್ಥ ಸಾಧನೆ. ಗುರು–ಲಿಂಗ–ಜಂಗಮರ ಸೇವೆ ಕೈಕೊಳ್ಳುತ್ತ, ತನು–ಮನ–ಧನ ಗಳನ್ನು ಅರ್ಪಿಸುತ್ತ ಅವರಿಂದ ಪಾದೋದಕ ಪಡೆಯುವುದು ವೀರಶೈವ ಸಾಧಕನ ಪರಮ ಕರ್ತವ್ಯವಾಗಿದೆ.

ಪಾದೋದಕದಲ್ಲಿ ಒಟ್ಟು ಹತ್ತು ಪ್ರಕಾರಗಳನ್ನು ಹೇಳುವುದುಂಟು. ಗುರು ಪಾದೋದಕ, ಲಿಂಗ ಪಾದೋದಕ, ಜಂಗಮ ಪಾದೋದಕ, ಅವದಾರ ಪಾದೋದಕ, ಅಪ್ಯಾಯನ ಪಾದೋದಕ, ಹಸ್ತೋದಕ, ಪರಿಣಾಮ ಪಾದೋದಕ, ಖಂಡಿತ ಪಾದೋ ದಕ ಮತ್ತು ನಿರ್ನಾಮ ಪಾದೋದಕ–ಇವು ಹತ್ತು ಬಗೆಗಳಾಗಿರುತ್ತವೆ.

೧. ಪಾದ ಪೂಜೆಯ ಪ್ರಥಮದಲ್ಲಿ ಎರಡೂ ಪಾದಗಳನ್ನು ಉದಕದಿಂದ ಹತ್ತು ಸಲ ಸ್ಪರ್ಶಿಸಿದುದು ಗುರುಪಾದೋದಕವೆನಿಸುತ್ತದೆ.

೨. ಮಧ್ಯದಲ್ಲಿ ಎರಡೂ ಪಾದಗಳ ಬೆರಳುಗಳನ್ನು ಮಂತ್ರ ಉದಕದಿಂದ ಹತ್ತು ಸಲ ಸ್ಪರ್ಶಿಸುವುದು ಲಿಂಗ ಪಾದೋದಕವೆನಿಸುತ್ತದೆ. ಇದನ್ನು ಕ್ರಿಯಾ ಪಾದೋದಕ ಎಂದೂ ಕರೆಯುವ ವಾಡಿಕೆ.

೩. ಅಂತ್ಯದಲ್ಲಿ ಪಾದಗಳ ಹೆಬ್ಬೆರಳುಗಳೆರಡರ ಮೇಲೆ ಮತ್ತು ಮಧ್ಯದಲ್ಲಿ ಸೇರಿ ಹತ್ತು ಸಲ ಮಂತ್ರೋಚ್ಚಾರಣೆಯಿಂದ ಎರೆದ ಉದಕವು ಜಂಗಮ ಪಾದೋದಕವಾಗಿದೆ. ಇದನ್ನು ಜ್ಞಾನ ಪಾದೋದಕವೆಂದೂ ಕರೆಯುವರು.

೪. ಕ್ರಿಯಾ ಬಟ್ಟಲಲ್ಲಿರುವ ಗುರುಲಿಂಗ ಜಂಗಮ ಪಾದೋದಕವನ್ನು ಬಲಹಸ್ತದ ಐದೂ ಬೆರಳುಗಳಿಂದ ಸ್ಪರ್ಶ ಮಾಡಿದುದು ಸ್ಪರ್ಶ ಪಾದೋದಕವಾಗಿದೆ.

೫. ಐದೂ ಬೆರಳುಗಳಿಂದ ಇಷ್ಟಲಿಂಗದ ಮೇಲೆ ಉದಕ ಎರೆದುದು ಅವದಾರ ಪಾದೋದಕವಾಗಿದೆ.

೬. ಲಿಂಗದ ಮೇಲೆ ಮೂರು ಸಲ ಎರೆದ ನಂತರ ಬಲಹಸ್ತದ ಐದೂ ಬೆರಳು ಗಳನ್ನು ಸ್ವೀಕರಿಸಲು ಮುಖದಲ್ಲಿರಿಸುವುದು ಅಪ್ಯಾಯನ ಪಾದೋದಕವಾಗಿದೆ.

೭. ಮರಳಿ ಅವೇ ಬೆರಳುಗಳಿಂದ ಇಷ್ಟಲಿಂಗವನ್ನು ಎತ್ತಿ ಎಡಹಸ್ತದ ಬೆರಳುಗಳ ತುದಿಯ ಮೇಲಿರಿಸಲು ಎಡದ ಅಂಗೈಯಲ್ಲಿರುವ ತೀರ್ಥವು ಹಸ್ತೋದಕವೆನಿಸುವುದು.

೮. ಎಡದ ಅಂಗೈಯಲ್ಲಿರುವ ತೀರ್ಥವನ್ನು ಸೇವಿಸಲು ಪರಿಣಾಮ ಪಾದೋದಕ ಎನಿಸುವುದು.

೯. ಕ್ರಿಯಾ ಬಟ್ಟಲಲ್ಲಿರುವ ತೀರ್ಥವನ್ನು ಮರಳಿ ಸ್ವಲ್ಪ ಸಲ್ಲಿಸಿ ಸ್ವಲ್ಪ ಉಳಿಸಿ ಇರಿಸುವುದು ಖಂಡಿತ ಪಾದೋದಕವಾಗಿದೆ.

೧೦. ಕೊನೆಗೆ ಎರಡೂ ಕೈಗಳಿಗೂ ಇಷ್ಟಲಿಂಗಕ್ಕೂ ಹತ್ತಿದ್ದ ತೇವವನ್ನು (ದ್ರವ) ಮೈಗೆ ಒರಿಸಿಕೊಂಡು ಆರಿಸಿ ಬಿಡುವುದೇ ಅಂದರೆ ಇಲ್ಲದಂತೆ ಮಾಡುವುದೇ ನಿರ್ನಾಮ ಪಾದೋದಕವಾಗಿದೆ.

ಗುರು ಪಾದೋದಕದಿಂದ ಸ್ಥೂಲ ಶರೀರದ ಶುದ್ಧೀಕರಣವಾಗುತ್ತದೆ ಲಿಂಗ ಪಾದೋದಕದಿಂದ ಸೂಕ್ಷ್ಮ ಶರೀರದ ಶುದ್ಧೀಕರಣವಾಗುತ್ತದೆ. ಜಂಗಮ ಪಾದೋದಕ ದಿಂದ ಕಾರಣ ಶರೀರದ ಶುದ್ಧೀಕರಣವಾಗುತ್ತದೆ. ಸಂಚಿತ ಕರ್ಮ, ಪ್ರಾರಬ್ಧ ಕರ್ಮ, ಆಗಮಿಕ ಕರ್ಮಗಳು ದೂರಾಗಿ, ಸಂಸ್ಕೃತಿಯ ಬಂಧ ಹರಿಯುತ್ತದೆ.

ಪರಮ ಗುರು ಲಿಂಗ ಜಂಗಮ
ಚರಣೋದಕವನ್ನು ಭಕ್ತಿಯಿಂ ಸೇವಿಸುವ
ನರನಿಗೆ ಸಂಸ್ಕೃತಿ ಬಂಧವು
ಪರಿಹರಿಪ ವರ್ಗ ಪದವು ಕೈಸಾರ್ದಪ್ಪುದು.

ಈ ದಶವಿಧ ಪಾದೋದಕ ಸ್ವೀಕಾರದಿಂದ ದಶವಾಯು ವಿಕಾರಗಳು ದೂರಾಗು ತ್ತವೆ. ಅಂತೆಯೇ ಪಾದೋದಕವನ್ನು ಪ್ರತ್ಯಕ್ಷ ಪರಬ್ರಹ್ಮವೆಂದಿದ್ದಾರೆ. ಪಾದೋದಕ ಸ್ವೀಕರಿಸುವಲ್ಲಿ ಉದಾಸೀನ ಭಾವ ತಾಳಿದರೆ ಪ್ರಳಯಕಾರಿ. ಭಕ್ತಿ ಭಾವದಿಂದ ಸೇವಿಸಿದರೆ ಭವನಾಶವಾಗುವುದು.

ಪಾದೋದಕವನ್ನು ಚನ್ನಬಸವಣ್ಣನವರು ಕಾಲಜಲವೆಂದೂ, ಸರ್ಪಭೂಷಣ ಶಿವಯೋಗಿಗಳು ಭವರೋಗ ವೈದ್ಯವೆಂದೂ 'ಶಿವ ಸಾಯುಜ್ಯ' ಎಂದೂ ಕರೆದಿದ್ದಾರೆ. ಪಾದೋದಕ ಸೇವನೆಯಿಂದ ತನು ಶುದ್ಧ, ಮನ ಶುದ್ಧವಾಗುತ್ತದೆಂದೂ, ಸಿಂಪಡಿಸಿದ ಸ್ಥಳವೆಲ್ಲವೂ ಶುದ್ಧವೆಂದೂ ನಂಬಿಕೆ.

**ಪ್ರಸಾದ:**

ಗುರು ಲಿಂಗ ಜಂಗಮರನ್ನು ಪೂಜಿಸಿ, ತನು ಮನ ಧನಗಳನ್ನು ಅರ್ಪಿಸಿ ಪ್ರಸಾದ ಪಡೆಯಬೇಕಾಗುತ್ತದೆ. ಅರ್ಪಿಸಿದ ಆಹಾರವಷ್ಟೇ ಪ್ರಸಾದವಲ್ಲ, ಭೋಗಿಸುವ ಷಡ್ವಿಷಯ, ದೇಹೇಂದ್ರಿಯಗಳೂ ಪ್ರಸಾದವೆನಿಸುತ್ತವೆ. ಹೀಗೆ ಗುರು, ಲಿಂಗ, ಜಂಗಮರಿಗೆ ಅರ್ಪಿಸಿ

ಪಡೆದ ಪ್ರಸಾದ ಹನ್ನೊಂದು ವಿಧ. ಈ ಹನ್ನೊಂದು ವಿಧದ ಪ್ರಸಾದಗಳು ಎರಡು ಬಗೆಯಲ್ಲಿರುವವು. ಪ್ರಸಾದ, ಅನುಗ್ರಹ, ನೈರ್ಮಲ್ಯ ಎಂದರ್ಥ.

**ಒಂದನೆಯ ಬಗೆಯ ಏಕಾದಶ ಪ್ರಸಾದಗಳು:**

೧. ದೀಕ್ಷೆಯಿಂದ ತನು-ಶುದ್ಧಗೊಳಿಸುವುದು ಶುದ್ಧ ಪ್ರಸಾದ. ಇದನ್ನು ಗುರು -ಪ್ರಸಾದವೆಂದೂ ಕರೆಯುವರು. ೨. ಷಡಕ್ಷರೀ ಮಂತ್ರ (ಓಂ ನಮಃ ಶಿವಾಯ) ಜಪಿಸಿ ಮನಸ್ಸನ್ನು ಸಿದ್ಧಪಡಿಸುವುದೇ ಸಿದ್ಧ ಪ್ರಸಾದ. ಇದನ್ನು ಲಿಂಗ ಪ್ರಸಾದವೆಂದು ಕರೆಯುವರು. ೩. ತನು, ಮನ, ಶುದ್ಧ ಸಿದ್ಧ ಪ್ರಸಾದವಾದವು ಎಂಬ ಭಾವನೆಯೇ ಪ್ರಸಿದ್ಧ ಪ್ರಸಾದ. ಇದನ್ನು ಜಂಗಮ ಪ್ರಸಾದ ಎಂದು ಕರೆಯುವರು. ೪. ಆತ್ಮನಿಗೆ ಉಂಟಾದ ಪ್ರಸನ್ನತೆಯೇ (ಪ್ರಸಾದ) ಆಪ್ಯಾಯನ ಪ್ರಸಾದ. ೫. ವೀರಶೈವದಿಂದ ಹೊರತು- ಇತರರಿಂದ ಈ ರೀತಿ ಪ್ರಸಾದ ಸಿದ್ಧಿಯಾಗದು ಎಂಬುದೇ ಸಮಯ ಪ್ರಸಾದ. ೬. ವಿಷಯುಗಳನ್ನು ಗ್ರಹಿಸುವ ಪಂಚೇಂದ್ರಿಯಗಳು ಲಿಂಗ ಸಂಬಂಧದಿಂದ ಪ್ರಸಾದವನ್ನು ಗ್ರಹಿಸುವ ಲಿಂಗ ಮುಖಗಳಾಗಿ ಪರಿಣಮಿಸುವುದೇ ಪಂಚೇಂದ್ರಿಯ ವಿರಹಿತ ಪ್ರಸಾದ. ೭. ಅಂಗನ ಅಂತಃಕರಣಗಳಾದ ಚಿತ್ತಾದಿಗಳು ಲಿಂಗಕರಣಗಳಾಗಿ ಪರಿಣಮಿಸುವುದೇ ಅಂತಃಕರಣ ವಿರಹಿತ ಪ್ರಸಾದ. ೮. ಅಂಗನು ಲಿಂಗ ಸಂಬಂಧದಿಂದ ಲಿಂಗ ಪ್ರಸಾದ ಸೇವನೆಗೆ ಯೋಗ್ಯವಾಗಿ ಪರಿಣಮಿಸುವುದೇ ಪ್ರಸಾದಿಯ ಪ್ರಸಾದ. ೯. ತನು ಕರಣಾದಿ ಗಳು ಪ್ರಸಾದ ರೂಪವಾದುವೆಂಬ ಭಾವನೆ ನಿಶ್ಚಲಗೊಂಡರೆ ಅದು ಸದ್ಭಾವ ಪ್ರಸಾದ. ೧೦. ಸದ್ಭಾವಿಯಾಗಿ ಪರರ ಸ್ತುತಿ ನಿಂದೆಗಳಲ್ಲಿ ಸಮತೆಯಿಂದಿರುವುದೇ ಸಮತಾ ಪ್ರಸಾದ. ೧೧. ಈ ಸಮತಾ ಜ್ಞಾನದಿಂದ ಪ್ರಶಂಸಿಸುವುದೇ ಜ್ಞಾನ ಪ್ರಸಾದ. ಹೀಗೆ ಆತ್ಮ ಮತ್ತು ಆತ್ಮನಿಗೆ ಸಂಬಂಧಿಸಿದ ತನು ಕರಣಾದಿಗಳು ದೀಕ್ಷಾದಿ ಕ್ರಿಯೆಗಳಿಂದ ಪವಿತ್ರಾದಿ ಗುಣಗಳನ್ನು ಪಡೆದು ಸದ್ಗುಣ ಸಂಪತ್ತುಳ್ಳ ಅಂಗನೇ ಲಿಂಗ ಭೋಗಕ್ಕೆ ತಕ್ಕವನಾಗುವನು.

**ಎರಡನೆಯ ಬಗೆಯ ಏಕಾದಶ ಪ್ರಸಾದಗಳು:**

ಇದರಲ್ಲಿ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ ಎಂದು ಮೂರು ಬಗೆಯ ಏಕಾದಶ ಪ್ರಸಾದ ಕ್ರಮವಿರುವದು. ಕಾಯಾರ್ಪಣ ಕ್ರಮದಲ್ಲಿ ೧) ಭಸ್ಮಧರಿಸಿದ ಹಸ್ತ ದಿಂದ ಭೋಗ್ಯಪದಾರ್ಥವನ್ನು ಶುದ್ಧಗೊಳಿಸುವುದು ಶುದ್ಧಪ್ರಸಾದ. ೨) ಈ ಶುದ್ಧ ಪ್ರಸಾದವನ್ನು ಲಿಂಗಕ್ಕರ್ಪಿಸಿದಾಗ ಅಲ್ಲಿ ಪ್ರಸಾದ ಕಳೆ ವೇಧಿಸುವವು. ಇದು ಸಿದ್ಧ ಪ್ರಸಾದ. ೩) ಸಿದ್ಧಪ್ರಸಾದವನ್ನು ನಾಲಗೆಯ ಮೇಲಿಟ್ಟು ಭುಂಜಿಸುವುದೇ ಪ್ರಸಿದ್ಧ ಪ್ರಸಾದ. ೪) ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದದಿಂದ ಮನೋವಿಕಾಸವೇ ಆಪ್ಯಾಯನ ಪ್ರಸಾದ. ೫) ಈ ಪ್ರಸಾದ ಸೇವನೆಯ ಸಮಯದಲ್ಲಿ ಇತರ ಪದಾರ್ಥಗಳನ್ನು ಸೇವಿ ಸುವುದು ಅನರ್ಪಿತವೆಂದು ತಿಳಿಯುವುದು ಸಮಯ ಪ್ರಸಾದವಾಗಿದೆ. ೬) ಇತರ ವಿಷಯ ಗಳ ಕಡೆಗೆ ಪಂಚೇಂದ್ರಿಯಗಳನ್ನು ಹೋಗಗೊಡದಿರುವುದೇ ಪಂಚೇಂದ್ರಿಯ ವಿರಹಿತ

ಪ್ರಸಾದವಾಗಿರುತ್ತದೆ. ೭) ಇತರ ಸಂಕಲ್ಪಾದಿಗಳಿಗೆ ಅಂತಃಕರಣ ಸುಳಿಯದಂತೆ ಮಾಡಿ, ನಿಶ್ಚಲತೆಯಿಂದ ಪ್ರಸಾದ ಸೇವಿಸುವುದೇ ಅಂತಃಕರಣ ವಿರಹಿತ ಪ್ರಸಾದವಾಗಿರುತ್ತದೆ. ೮) ಗುರುಲಿಂಗ ಜಂಗಮರಿಂದ ಪಡೆದ ಪ್ರಸಾದದೊಡನೆ ತನ್ನ ಪ್ರಸಾದವನ್ನೂ ಭುಂಜಿಸುವುದು ಪ್ರಸಾದಿಯ ಪ್ರಸಾದವಾಗಿದೆ. ೯) ಸದ್ಭಾವದಿಂದ ಭೋಗಿಸುವುದು ಸದ್ಭಾವ ಪ್ರಸಾದವಾಗಿದೆ. ೧೦) ಪ್ರಸಾದ ಸೇವನೆಯ ಸಮಯದ ಹೊರತು ಇನ್ನೇನನ್ನೂ ಸೇವಿಸದೆ ಶಾಂತಿ ಸಹನೆಗಳಿಂದಿರುವುದು ಸಮತಾ ಪ್ರಸಾದವಾಗಿದೆ. ೧೧) ಈ ಸಮತಾ ಪ್ರಸಾದದಿಂದ ಪುನಃ ಪೂಜೆ ಪ್ರಾರಂಭವಾಗುವವರೆಗೂ ಪ್ರಸಾದ ಕಾಯನಾಗಿರುವುದು ಜ್ಞಾನಪ್ರಸಾದವಾಗಿಯೂ ಕಂಗೊಳಿಸುತ್ತದೆ. ಈ ಕಾಯಾರ್ಪಣ ಪ್ರಸಾದ ಕ್ರಮವನ್ನೇ ನಿತ್ಯ ಆಚರಣೆಯಲ್ಲಿ ಕಾಣುತ್ತೇವೆ.

ಕಾಯಾರ್ಪಣದಲ್ಲಿ ಕಾಯಶುದ್ಧಿ, ಪದಾರ್ಥಶುದ್ಧಿ ಆಗುತ್ತದೆ. ಆಗ ಪ್ರಸಾದ ಕಾಯರಾಗಿ ಲಿಂಗಸಂಗದಿಂದ ಪ್ರಸಾದ ಸೇವಿಸುವ ಕ್ರಮವು ಕರಣಾರ್ಪಣದಲ್ಲಿರುತ್ತದೆ. ಕಾಯಾರ್ಪಣ ಸ್ಥೂಲ ಶರೀರಕ್ಕೂ ಇಷ್ಟಲಿಂಗಕ್ಕೂ ಸಂಬಂಧಿಸಿದ್ದರೆ ಕರಣಾರ್ಪಣ ಸೂಕ್ಷ್ಮ ಶರೀರಕ್ಕೂ ಪ್ರಾಣಲಿಂಗಕ್ಕೂ ಸಂಬಂಧ ಇದೆ. ಕಾಯಾರ್ಪಣ ಶಿವಪೂಜಾ ಕಾಲಕ್ಕೆ, ಕರಣಾರ್ಪಣ ಸರ್ವಕಾಲಕ್ಕೂ ಇಂದ್ರಿಯ ವ್ಯವಹಾರಕ್ಕೆ ಸಂಬಂಧಿಸಿದುದಾಗಿದೆ. ಶಿವ-ಜೀವರ ತಾದಾತ್ಮ್ಯ ಅರ್ಪಣದಲ್ಲಿ ಸೇರಿಕೊಂಡಿರುತ್ತದೆ. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಿಂದ ಪ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯಕ್ಕಂಟಿಕೊಂಡ ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಪರಿಣಾಮಗಳು ಪರಿಶುದ್ಧಿ ಹೊಂದಿ ಇಂದ್ರಿಯಗಳು ವಿಷಯಮಯವಾಗದೆ ಪ್ರಸಾದಮಯವಾಗುವವು ಇದನ್ನೇ ಕರಣಾರ್ಪಣದ ಪ್ರಯೋಜನ ಎನ್ನುವರು.

ಕರಣಾರ್ಪಣದಿಂದ ಕರಣಗಳು ಶುದ್ಧವಾದಂತೆ, ಭಾವಾರ್ಪಣದಿಂದ ಆತ್ಮಾನುಭಾವಗಳೂ ಶುದ್ಧವಾಗುವವು. ಭಾವಾರ್ಪಣದಲ್ಲಿ ಭಾವಲಿಂಗದ ಪ್ರಧಾನತೆ ಇರುವದು. ಭಾವಾರ್ಪಣದಿಂದ ಆತ್ಮನು ಶಿವಸ್ವರೂಪಿಯಾಗುವನು. (ಪ್ರಸಾದರೂಪ) ಅವನ ಕ್ರಿಯೆಗಳು ಶಿವಕ್ರಿಯೆಗಳಾಗುವವು. ಹೀಗೆ ಹರಗುರು, ಜಂಗಮದೇವರು ಕರುಣಿಸಿಕೊಟ್ಟ ಪ್ರಸಾದವನ್ನು ಸೇವಿಸುವುದರಿಂದ ವಿಷಯೋಪ ಭೋಗದಿಂದ ಅಲಿಪ್ತನಾಗುತ್ತಾನೆ.

'ಪಾವನ ಹರಗುರು ಜಂಗಮ
ದೇವರು ಕರುಣಿಸಿದ ಸುಪ್ರಸಾದವನೊಲವಿಂ
ಸೇವಿಸಿ ಸುಖಿಸುವ ಭಕ್ತನಾ
ಭಾವವು ವಿಷಯೋಪಭೋಗದಿಂದಲಿಪ್ತಂ'

ಅಂತೆಯೇ ಮಹಾತ್ಮರು ಪ್ರಸಾದ ಜೀವನವನ್ನು ಅದ್ಭುತ ಸಂಪತ್ತೆಂದಿರುವರು. 'ಪಾದೋದಕ ಪ್ರಸಾದ ಜೀವಿಯ ಕಂಡಡೆ, ನಿಧಿ ನಿಧಾನವ ಕಂಡಂತೆ' 'ಪ್ರಸಾದವ ಮದ್ದನಿಕ್ಕೆ

ಸಲಹು' 'ಪಾದೋದಕ ಪ್ರಸಾದದಿಂದ ಭವಗೆಟ್ಟೆನು' 'ಚಿತ್ತಸ್ಯಹಿ ಪ್ರಸಾದೇನ ಹರಿಸಿ ಕರ್ಮಶುಭಾ ಶುಭಂ' ಎಂದೂ

'ಗುರುಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾಯಿತು
ಆ ಭಾವವೇ ಮಹಾನುಭಾವವಾಗಿ ಎನಗೆ ಮತ್ತೆ ಬೇರೆ
ಪ್ರಸಾದವಿಲ್ಲ' ಎಂದೂ
'ಚತುರ್ವಿಧ ಫಲಬೇಡ, ಅಣಿಮಾದಿ ಸಿದ್ಧಿಗಳು ಬೇಡ
ನಿಮ್ಮ ಶರಣರು ಉಂಡುಳಿದುದು ಕೊಂಡುಮಿಕ್ಕಿದ
ಪರಮ ಪ್ರಸಾದಕ್ಕೆ ಯೋಗ್ಯನ ಮಾಡಿ ಬದುಕಿಸು'

ಎಂದೂ ಮಹಾನುಭಾವರು ಪ್ರಸಾದದ ಹಿರಿಮೆ ಕುರಿತು ಹಾಡಿದ್ದಾರೆ.

'ರೋಗಕ್ಕೆ ಔಷಧವಿದ್ದಂತೆ ಯೋಗಕ್ಕೆ ಮೂಲ ಈ ಪ್ರಸಾದವಾಗಿದೆ.' ಶರೀರದ ರೋಗಗಳನ್ನು ಔಷಧದಿಂದ ದೂರಮಾಡಿಕೊಂಡಂತೆ ಈ ಪ್ರಸಾದ ಸೇವನೆಯಿಂದ ಭವ ರೋಗವನ್ನು ಕಳೆದುಕೊಳ್ಳಬಹುದಾಗಿದೆ. ಪ್ರಸಾದ ಸೇವನೆಯಲ್ಲಿ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ.

೧) ಉಂಡು ಉಳಿಸಬಾರದು ೨) ಕೊಂಡು ಮರುಳಿಸಬಾರದು ೩) ತುಂತುರ ಹನಿ ಹಾರಗೊಡಬಾರದು ೪) ದ್ರವಗುಂದಬಾರದು ೫) ಲಿಂಗ ನಿರೀಕ್ಷಣೆ ತಪ್ಪಬಾರದು ೬) ಮಂತ್ರಧ್ಯಾನ ಮರೆಯಬಾರದು ೭) ಸಾವಧಾನದಿಂದ ಲಿಂಗಪ್ರಸಾದ ಸ್ವೀಕರಿಸು ವಂತಾಗಬೇಕು. ಇವುಗಳನ್ನು ಪ್ರಸಾದದ ಸಪ್ತವಿಧ ಭಕ್ತಿಗಳೆಂದೂ ಕರೆದಿರುವರು.

'ಅಡಿಗಡಿಗೆ ಸಿರಿವಂತರೆಂದು ನೋಡಿ ಕೊಂಬುವದು
ಉಪಜೀವಿತ ಪ್ರಸಾದ
ಬಡವರೆಂದು ಓರೆಮಗ್ಗಲಾಗಿ ಕೊಂಬುವುದು
ತುಡುಗಡೆ ಪ್ರಸಾದ
ನಚ್ಚುಮುಚ್ಚಿನಿಂದ ಎಳೆದುಸೆಳೆದು ಕೊಂಬುವುದು
ದಳಾದುಳಿ ಪ್ರಸಾದ
ಇಕ್ಕುವವರನಂಜಿಸಿ ಕೊಂಬುವುದು
ಪೀಡೆಕಾರ ಕರ್ಮಪ್ರಸಾದ
ಇಕ್ಕುವಾತ ಮನದಲ್ಲಿ ಗುಡಿಕಟ್ಟಿ ಕೊಂಬುವುದು
ಸಮಯ ಪ್ರಸಾದ
ವೇಷಧಾರಿ ಹುಸಿಹುಂಡರಲ್ಲಿ ಕೊಂಬುವುದು
ಹುಸಿನುಸುಳು ದೆಸೆಗೇಡಿ ಪ್ರಸಾದ
ಅರಿವು ಆಚಾರ ಹೀನರಾದ ಸಂಕಲ್ಪದಲ್ಲಿ ಕೊಂಬುವುದು

ಸಂದೇಹಕಂದಿನ ಪ್ರಸಾದ
ಇದು ಕಾರಣ ಕೂಡಲಚನ್ನಸಂಗಮದೇವಾ
ನಿಮ್ಮ ಪ್ರಸಾದಿಗಳ ಪೂರ್ವವಯ್ಯ'

ಎಂದು ಚನ್ನಬಸವಣ್ಣನವರು ಪ್ರಸಾದವ ಹುಚ್ಚುತನವನ್ನು ಬಯಲಿಗೆಳೆದಿದ್ದಾರೆ. ಪ್ರಸಾದವನ್ನು ಸಿಕ್ಕಸಿಕ್ಕಲ್ಲಿ, ಸಿಕ್ಕು ಬಟ್ಟೆ ತೆಗೆದುಕೊಳ್ಳಬಾರದೆಂದು ಉಚ್ಚರಿಸಿದ್ದಾರೆ. ಅದಕ್ಕಾಗಿ ಪ್ರತ್ಯೇಕ ಸ್ಥಳದ ಅವಶ್ಯಕತೆಯನ್ನು ಒತ್ತಿಹೇಳಿದ್ದಾರೆ. ಒಂದು ವೇಳೆ ಕೊಡಬಾರದ ತಾವಿನಲ್ಲಿ ಕೊಂಡು ತಿಂದರೆ ತುಡುಗುಣಿ ನಾಯಿ ತಿಂದಂತೆ ಎಂದಿದ್ದಾರೆ.

'ತನ್ನ ಲಿಂಗಕ್ಕೆ ಕೊಡಬಾರದ ತಾವಿನಲ್ಲಿ
ಪ್ರಸಾದವಕೊಂಡು ತುಡುಗುಣಿ ನಾಯಿಯಂತೆ
ತಿಂಬುವವರನೇನೆಂಬೆನಯ್ಯ?
ಅದು ತನ್ನ ಒಡಲ ಹೊರೆವುದಲ್ಲದೆ
ಹಿಡಿದ ಕುಳಕ್ಕೆಸಲ್ಲದು,
'ದ್ರವ್ಯಂ ಧಾತು ಶುಭಂ ಭವೇತ್'
ಎಂದುದಾಗಿ ಕೂಡಲ ಚನ್ನಸಂಗಯ್ಯನಲ್ಲಿ
ಅದುತಾ ಬೀಸರವಾದ ವ್ರತಗೇಡಿ,
ಮೂಳರನೆನಗೆ ತೋರದಿರಯ್ಯ'

ಗುರುಕಾರುಣ್ಯ ಪಡೆದು ದೀಕ್ಷೆ ಹೊಂದಿದವನು ಲಿಂಗಪ್ರಸಾದ, ಗುರುಪ್ರಸಾದ, ಜಂಗಮ ಪ್ರಸಾದವನ್ನು ಸೇವಿಸಬೇಕು. ಉಳಿದವರ ಎಂಜಲ ಸೇವಿಸಬಾರದು ಹಸಿವೆಯೆಂದು ಆಸೆಪಟ್ಟು ಉಣ್ಣಬಾರದು ಹಾಗೆ ಮಾಡಿದರೆ ಅದು ಗುರುದ್ರೋಹ ಪ್ರಸಾದದ್ರೋಹ ಎಂದೂ ಹೇಳಿದ್ದಾರೆ. ಇಲ್ಲಿ ಪ್ರಸಾದವನ್ನು ಕೆಡಿಸಬಾರದು, ಸಮಾಧಾನದಿಂದ ಸೇವಿಸಬೇಕು ಎಂಬಲ್ಲಿ 'ಅನ್ನದೇವರು ಎಂಬ ಭಾವನೆ ಬರುತ್ತದೆ. ನಮ್ಮ ದೇಶದಲ್ಲಿ ಆಹಾರದ ಕೊರತೆಯಿಂದ ಸಾವಿರಾರು ಜನ ಬಳಲುತ್ತಿರುವಾಗ ಅನ್ನವನ್ನು ಕೆಡಿಸಬಾರದು ಎಂಬ ತತ್ವ–ದೇಶದ ಸಮುಗ್ರತೆಗೆ ಸಾಕ್ಷಿಯಾಗಿರುತ್ತದೆ. ಗುರುಲಿಂಗ, ಜಂಗಮಕ್ಕೆ ಮೊದಲು ನೈವೇದ್ಯ ಅರ್ಪಿಸಿ, ಎಡೆಮಾಡಿ, ಆಮೇಲೆ ತಾನು ಸೇವಿಸಬೇಕು ಎನ್ನುವ ಪ್ರಸಾದ ತತ್ವದಲ್ಲಿ ತನ್ನದಂಬುದು, ಎಲ್ಲರದೂ ಎಂಬ ಮನೋಭಾವ ಅಡಕವಾಗಿರುತ್ತದೆ.

**ಉಪಾಸನಾ ಸಾಧನಗಳು :**

ವಿಭೂತಿ, ರುದ್ರಾಕ್ಷಿ, ಮಂತ್ರ ಇವು ಉಪಾಸನಾ ಸಾಧನಗಳಾಗಿವೆ. ಶರಣರಿಗೆ ತೀರ್ಥವೆ ಮಂಗಳ–ಮಜ್ಜನ; ವಿಭೂತಿಯೆ ಅರಿಷಿಣ, ರುದ್ರಾಕ್ಷಿಯೆ ಮೈದೊಡಿಗೆ, ಗುರು–ಲಿಂಗ–ಜಂಗಮರ ಸೇವಾತತ್ಪರನಾದ ಭಕ್ತನಿಗೆ ವಿಭೂತಿ, ರುದ್ರಾಕ್ಷಿ, ಮಂತ್ರಗಳು ಮುಖ್ಯ ಸಾಧನಗಳೂ ಆಗಿವೆ. ವಿಭೂತಿಯಂತೂ ಶಿವನ ಪ್ರಿಯವಾದ ವಸ್ತುವಾಗಿದೆ. ಆ ಇದು

ಆತನ ಜ್ಞಾನತೇಜಸ್ಸಾಗಿಯೂ ಕಂಗೊಳಿಸಿದೆ, ವಿದ್ಯುಕ್ತವಾಗಿ ಸಿದ್ಧಪಡಿಸುವ ಭಸ್ಮಧಾರಣೆಯಿಂದ ಚರ್ಮರೋಗ ನಿವಾರಣೆಯಾಗುತ್ತದೆ. ಭಸ್ಮಧರಿಸಿ ಚಿತ್‌ಪ್ರಕಾಶ ಹೊಂದಿ ಜೀವಿಸುವುದರಿಂದ ವಿಧಿಲಿಖಿತ ಮಾರ್ಪಾಡಾಗಿ ಅದು ಶಿವ ಲಿಖಿತವಾಗುವುದು. ಸರ್ವಾಚಾರ ಸಂಪತ್ತು ದೊರಕುವುದು 'ಸಏಷಃ ಭಸ್ಮಾಜ್ಯೋತಿಃ' ಎಂದಂತೆ ಶಿವನೆಂಬ ಹೆಸರುಳ್ಳ ತೇಜಸ್ಸೇ ಭಸ್ಮವಾಗಿರುತ್ತದೆಯೆಂಬ ಕಲ್ಪನೆ.

ಭಸ್ಮದಲ್ಲಿ ನಿರುಪಾಧಿಕ ಮತ್ತು ಸೋಪಾಧಿಕ ಎಂಬ ಎರಡು ಮುಖ್ಯ ಪ್ರಕಾರಗಳಿವೆ. ಜ್ಯೋತಿರ್ಮಯನಾದ ಪರಶಿವನ ಸ್ವರೂಪವಾಗಿರುವ ಭಸ್ಮ ಅದು ನಿರುಪಾಧಿಕ ಎಂದೂ, ಶಿವಮಂತ್ರ ಹಾಗೂ ಅಗ್ನಿಗಳಿಂದ ತಯಾರಿಸುವಂತಹದು ಸೋಪಾಧಿಕವೆಂದೂ ಕರೆಯುವರು. ಸೋಪಾಧಿಕ ಭಸ್ಮದಲ್ಲಿ ಮತ್ತೆ ಐದು ಪ್ರಕಾರದ ಭಸ್ಮಗಳಿವೆ. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ–ಎಂಬ ಶಿವನ ಪಂಚಮುಖಗಳಿಂದ ಕ್ರಮವಾಗಿ ನಂದೆ, ಭದ್ರೆ, ಸುರುಭಿ, ಸುಶೀಲೆ, ಸುಮನೆ– ಈ ಐಯ್ದು ಗೋವುಗಳು ಜನಿಸಿದವು. ೧) ನಂದೆ ಕಪಿಲ ವರ್ಣದ್ದು ಆದ್ದರಿಂದ ಅದರ ಸೆಗಣಿಯಿಂದಾದ ಭಸ್ಮವು 'ವಿಭೂತಿ' ಯಾಗಿದೆ. ೨) ಭದ್ರೆ ಕಪ್ಪು ಬಣ್ಣದ್ದು– ಇದರ ಸೆಗಣಿಯಿಂದಾದ ಭಸ್ಮವನ್ನು 'ಭಸಿತ' ಎಂದಿದ್ದಾರೆ. ೩) ಸುರಭಿಗೆ ಬಿಳಿಯ ಬಣ್ಣ ಇದರ ಸೆಗಣಿಯಿಂದ ತಯಾರಿಸಿದ್ದು 'ಭಸ್ಮ' ವಾಗಿದೆ. ೪) ಕೆಂಪು ಮತ್ತು ಕಪ್ಪು ಬಣ್ಣದ 'ಸುಶೀಲೆ' ಎಂಬ ಆಕಳ ಸೆಗಣಿಯಿಂದ ತಯಾರಿಸಿದ ಭಸ್ಮ 'ಕ್ಷಾರ' ಎಂದಾಗಿದೆ. ೫) ಕೆಂಪು ಬಣ್ಣದ 'ಸುಮನೆ'ಯ ಸೆಗಣಿಯಿಂದ ತಯಾರಾದ ಭಸ್ಮ 'ರಕ್ಷೆ' ಎನಿಸಿದೆ.

ಶಿವಪೂಜಾದಿ ನಿತ್ಯಕರ್ಮಗಳಲ್ಲಿ ಅಣಿಮಾದ್ಯಷ್ಟ ಸಿದ್ಧಿಗಾಗಿ 'ವಿಭೂತಿ'ಯನ್ನೂ ಜಂಗಮಪಾದ ಪೂಜಾದಿ ನೈಯಿತ್ತಿಕ ಕರ್ಮಗಳಲ್ಲಿ ಶಿವತತ್ವ ಪ್ರಕಾಶಕ್ಕಾಗಿ 'ಭಸಿತ'ವನ್ನೂ ಮನೋವಾಕ್ಕಾಯ ಜನ ದೋಷ ನಿವಾರಣೆಗೆ ಸರ್ವವಿಧ ಪ್ರಾಯಶ್ಚಿತ್ತವೆಂದು ಭಸ್ಮವನ್ನು ಆಧ್ಯಾತ್ಮಿಕಾದಿ ತಾಪತ್ರಯಗಳಿಂದಾಗುವ ವಿಪತ್ತು ನಾಶಪಡಿಸಲು ಸಕಲ ಕಾರ್ಯಗಳಲ್ಲಿ 'ಕ್ಷಾರ'ವನ್ನೂ, ಗೃಹರಕ್ಷಾದಿ ಭಯ ನಿವಾರಣೆಗೆಂದು 'ರಕ್ಷೆ'ಯನ್ನೂ ಉಪಯೋಗಿಸುವರು. ಈ ಭಸ್ಮ ತಯಾರಿಸುವ ವಿಧಾನವೂ ಅಷ್ಟೇ ಕೌತುಕವನ್ನು ಉಂಟು ಮಾಡುವಂತಹದು. ಇದು ಕಲ್ಪ, ಅನುಕಲ್ಪ, ಉಪಕಲ್ಪ, ಅಕಲ್ಪ–ಎಂದು ನಾಲ್ಕು ವಿಧಾನಗಳಿಂದ ಕೂಡಿದ್ದಾಗಿದೆ.

ಭಸ್ಮಧಾರಣ ತತ್ವ ಬಹು ಪುರಾತನದ್ದು. ವೇದ, ಆಗಮ, ಪುರಾಣಗಳಲ್ಲಿ ಇದರ ಉಲ್ಲೇಖವಿದೆ. ಕಾಲಾಗ್ನಿ ರುದ್ರೋಪನಿಷತ್ತಿನಲ್ಲಿಯೂ ದಾಖಲಾತಿ ಇದೆ. ಶರಣರ ವಚನಗಳಲ್ಲಂತೂ ಹಾಸುಹೊಕ್ಕಾಗಿದೆ. 'ಕೂಡಲಸಂಗನ ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ' ಎಂದು ಬಸವಣ್ಣ ಹಾಡಿದ್ದಾನೆ.

'ಹಿತವಿದೆ, ಸಕಲಲೋಕದ ಜನಕ್ಕೆ ಮತವಿದೆ
ಶ್ರುತಿ ಪುರಾಣದ ಗತಿ ಇದೆ. ಭಕುತಿಯ ಬೆಳಗಿನ
ಉನ್ನತಿಯಿದೆ. ಶ್ರೀವಿಭೂತಿಯನೊಲಿದು ಧರಿಸಿದರೆ

ಭವವನು ಪರಿವುದು ದುರಿತ ಸಂಕುಳವನೊರೆಸುವುದು
ಹರನ ಸಾಲೋಕ್ಯ ಸಾಮಿಪ್ಯದಲ್ಲಿರಿಸುವುದು.
ನಿರುತವಿದೆ ನಂಬು ಮನುಜಾ ಜನನ ಭೀತಿ
ಮರಣ ಭಯದಿಂದ ಈ ವಿಭೂತಿಯು—
ಅಗಸ್ತ್ಯ, ಕಶ್ಯಪ, ಜಮದಗ್ನಿಗಳು ಧರಿಸುವರು–ನೋಡಾ
ಶ್ರೀಶೈಲ ಮಲ್ಲಿಕಾರ್ಜುನನೊಲಿಸುವ ಶ್ರೀವಿಭೂತಿ'

ಎಂದು ಮಹಾದೇವಿಯಕ್ಕ ವಿಭೂತಿಯ ಮಹತ್ವವನ್ನು ಸಾರಿದ್ದಾಳೆ. ಹೀಗೆ ಭಸ್ಮದ ಉಪಯೋಗಕ್ಕೆ ಲೆಕ್ಕವಿಲ್ಲ. ರೋಗವಾಸಿಯಾಗುತ್ತದೆ, ಗಾಯ ಮಾಯುತ್ತದೆ. ಶರೀರ ಸೌಂದರ್ಯ ಹೆಚ್ಚುತ್ತದೆ. ಭಸ್ಮಾಸ್ನಾನವಂತೂ ತನು–ಮನಗಳೆರಡನ್ನೂ ಶುದ್ಧಗೊಳಿಸುತ್ತದೆ. ಇದನ್ನು ಹಣೆ, ತಲೆ, ಕಿವಿಗಳೆರಡೂ, ಕೊರಳು, ಹೆಗಲುಗಳೆರಡೂ, ಹೃದಯ, ಹೊಕ್ಕಳ, ಬೆನ್ನು–ತೋಳುಗಳೆರಡೂ, ಕತ್ತು, ಮುಂಗೈಗಳೆರಡೂ–ಈ ಹೀಗೆ ಹದಿನೈದು ಸ್ಥಾನಗಳಲ್ಲಿ ಶಿವಮಂತ್ರವನ್ನು ಪಠಿಸುತ್ತ ಭಕ್ತ ಭಸ್ಮ ಧರಿಸಬೇಕು. ಇದರಿಂದ ತ್ರಿವಿಧ ಕರ್ಮಗಳು ನಾಶವಾಗುತ್ತವೆ.

**ಭಸ್ಮ ತಯಾರಿಸುವ ವಿಧಾನ: ೧. ಕಲ್ಪಭಸ್ಮ**

ರೋಗವಿಲ್ಲದ, ಕರುವಿದ್ದ ಆಕಳನ್ನು ಚೆನ್ನಾಗಿ ಪೂಜಿಸಿ, ಅದರ ಸೆಗಣಿಯನ್ನು ಭೂಮಿಗೆ ಬೀಳಗೊಡದೆ, ಅಂತರದಲ್ಲಿಯೇ, ಸದ್ಯೋಜಾತ ಮಂತ್ರ ಹೇಳುತ್ತ, ಸೆಗಣಿಯನ್ನು ಹಿಡಿದು ಉಂಡೆಯಾಕಾರ ಮಾಡಬೇಕು. ತತ್ಪುರುಷ ಮಂತ್ರದಿಂದ ಅದನ್ನು ಒಣಗಿಸಬೇಕು. ಅಘೋರ ಮಂತ್ರದಿಂದ ಅಗ್ನಿಯಲ್ಲಿ ಸುಡಬೇಕು. ಮೂಲಮಂತ್ರದಿಂದ ಹೀಗೆ ಪರಿಶೋಧಿಸಿ, ತಯಾರಿಸಿದುದು ಕಲ್ಪಭಸ್ಮವಾಗಿದೆ.

**೨. ಅನುಕಲ್ಪ ಭಸ್ಮ:**

ಅರಣ್ಯದಲ್ಲಿ ಬಿದ್ದಿರುವ ಸೆಗಣಿಯನ್ನು ಆರಿಸಿ ತರಬೇಕು. ಅದನ್ನು ಕುಟ್ಟಿ ಪುಡಿ ಮಾಡಬೇಕು. ಶಿವಮಂತ್ರದಿಂದ ಅಗ್ನಿಯಲ್ಲಿ ದಹಿಸಿ, ಮೂಲಮಂತ್ರದಿಂದ ಶೋಧಿಸಿ, ತಯಾರಿಸಿದುದೇ ಅನುಕಲ್ಪ ವಸ್ತುವಾಗಿದೆ.

**೩. ಉಪಕಲ್ಪ ಭಸ್ಮ:**

ಅರಣ್ಯದಲ್ಲಿ ದಾವಾಗ್ನಿಯಿಂದ ದಹಿಸಲ್ಪಟ್ಟ ಅಥವಾ ಅಂಗಡಿಗಳಿಂದ ತಂದ ಭಸ್ಮವನ್ನು ವಸ್ತ್ರದಲ್ಲಿ ಶೋಧಿಸಿ, ಗೋಮೂತ್ರದಿಂದ ಕಲಿಸಿ ಉಂಡೆ ಮಾಡಿ, ಶಿವಮಂತ್ರದಿಂದ ಅಗ್ನಿಯಲ್ಲಿ ಸುಟ್ಟು–ಮೂಲಮಂತ್ರದಿಂದ ಶೋಧಿಸಿ, ತಯಾರಿಸಿದ್ದೇ ಉಪಕಲ್ಪ ಭಸ್ಮವಾಗಿರುತ್ತದೆ.

**೪. ಅಕಲ್ಪ ಭಸ್ಮ:**

ಶುಚಿರ್ಭೂತವಾದ ಸೆಗಣಿಯನ್ನು ತೆಗೆದುಕೊಂಡು ಮಂತ್ರ ಸಂಸ್ಕಾರಾದಿಗಳಿಲ್ಲದೆ ಹಾಗೆ ತಯಾರಿಸಿದುದು–ಅಕಲ್ಪ ಭಸ್ಮವಾಗಿದೆ. ಭಸ್ಮಧಾರಣೆ ಮೂರು ತೆರನದಾಗಿದೆ.

೧) ಸರ್ವಾಂಗಕ್ಕೆ ಪ್ರೋಕ್ಷಿಸುವುದು ಭಸ್ಮಸ್ನಾನವಾಗಿದೆ; ೨) ಅನುಲೇಪನ ಮಾಡುವುದು 'ಉದ್ಧೂಳನ'ವೆನಿಸಿದೆ. ೩) ತ್ರಿಪುಂಡ್ರವು ಧಾರಣವಾಗಿ ಆಚರಣೆಯಲ್ಲಿದೆ. ಅಡ್ಡವಿಭೂತಿಯಿಲ್ಲದವರ ಮುಖವು ಹೊಲ್ಲ ಎಂದಿದ್ದಾರೆ. ತನುಮನಧನವ ಸಮರ್ಪಿಸದೆ ಕೇವಲ ವಿಭೂತಿ ಧರಿಸುವ ಡಂಭಾಚಾರಿಗಳನ್ನು ಬಸವಣ್ಣನವರು ತರಾಟೆಗೆ ತೆಗೆದುಕೊಂಡಿದ್ದಾರೆ.

ಹಲವುಪರಿಯಲಿ ವಿಭೂತಿಯ ಹೂಸಿ

..........................................

ತನುಮನಧನವ ಸಮರ್ಪಿಸದವರ

ಕೂಡಲಸಂಗಮದೇವರೆಂತೊಲಿವನು (ಬ. ವ. ೨೦೫)

**ರುದ್ರಾಕ್ಷಿ:**

ಪರಶಿವನ ಜ್ಞಾನಚಕ್ಷುವಿನ ಪ್ರತೀಕ ರುದ್ರಾಕ್ಷಿ. ತ್ರಿಪುರ ದಹನ ಕಾಲಕ್ಕೆ ಶಿವನು ಕಣ್ಣು ತೆರೆದಾಗ ಬಿದ್ದ ಅಶ್ರು ಬಿಂದುಗಳೇ ರುದ್ರಾಕ್ಷಿಗಳಾಗಿವೆಯೆಂಬ ನಂಬಿಕೆಯಿದೆ. ಇದು ಒಂದು ಮರದ ಕಾಯಿಯು ಆಗಿದೆ. ಇದನ್ನು ಶರೀರದಲ್ಲಿ ಧರಿಸಿಕೊಂಡರೆ ರೋಗ ಭಯ, ನಿವಾರಣೆ ಆಗುವುದೆಂಬ ನಂಬಿಕೆ ಬೇರೆ. ಮಾನಸಿಕ ರೋಗವನ್ನು ಪರಿಹರಿಸುವುದು. ಅಧ್ಯಾತ್ಮ ಸಾಧನೆ ಮಾಡುವಲ್ಲಿ, ಆತ್ಮವಿಕಾಸದಲ್ಲಿ ಸಹಾಯಕಾರಿ. ಭೂತಚೇಷ್ಟೆಗಳೆಲ್ಲಾ ದೂರವಾಗುತ್ತವೆ. ಪಾಪ-ಪರಿಹಾರವಾಗುವುದುಂಟು, ರುದ್ರಾಕ್ಷಿ ನೀರು ಮೈಮೇಲೆ ಬಿದ್ದರೆ ಅಥವಾ ರುದ್ರಾಕ್ಷಿ ನೀರನ್ನು ಕುಡಿದರೆ ಪಿತ್ತನಾಶವಾಗುತ್ತದೆ.

ರುದ್ರಾಕ್ಷಿಗಳಲ್ಲಿ ಮೂರು ಬಗೆ ೧) ದಪ್ಪ ರುದ್ರಾಕ್ಷಿ ೨) ಖಾರಿಕಾಯಿಯಷ್ಟು ರುದ್ರಾಕ್ಷಿ ೩) ಕಡಲೆ ಕಾಳಿನಾಕಾರದ ರುದ್ರಾಕ್ಷಿ. ಇವುಗಳಿಗೆ ಒಂದರಿಂದ ಹದಿನಾಲ್ಕರ ವರೆಗೆ ಮುಖಗಳಿರುತ್ತವೆ. ಸಾಧಕರು ಧರಿಸಿಕೊಳ್ಳುವ ಸ್ಥಾನಗಳು ಹೀಗಿವೆ.

ಶಿರಸ್ಸು—೨, ೩, ೧೨ ಮುಖದ ಮೂರು ರುದ್ರಾಕ್ಷಿ

ತಲೆಯಸುತ್ತ—೧೧ ಮುಖದ ಮೂವತ್ತಾರು ರುದ್ರಾಕ್ಷಿ

ಕಿವಿಯಲ್ಲಿ (ಎರಡು) —೧೦ ಮುಖದ ಎರಡು, ಏಳು ಮುಖದ ಎರಡು ಹೀಗೆ ಆರಾರು.

ಕೊರಳು—೬ ಮುಖದ ಹದಿನಾರು ಮತ್ತು ೮ ಮುಖದ ಹದಿನಾರು ಹೀಗೆ ಮೂವತ್ತೆರಡು.

ಎದೆಯ ಮೇಲೆ—೪ ಮುಖದ ಐವತ್ತು, ಪ್ರತಿಯೊಂದು ತೋಳಿಗೆ ೧೬ ರಂತೆ.

ಮುಂಗೈ(ಎರಡು) ೧೨ರಂತೆ ಇಪ್ಪತ್ನಾಲ್ಕು.

ಯಜ್ಞೋಪವೀತದಂತೆ—೧೪ ಮುಖದ ೧೦೮.

ಹೀಗೆ ರುದ್ರಾಕ್ಷಿಗಳನ್ನು ಧರಿಸುವ ವಾಡಿಕೆಯಿದೆ. ಆಂತರಿಕವಾಗಿ ಸದ್ಗುಣಗಳೇ ಭಕ್ತನ ರುದ್ರಾಕ್ಷಿಗಳು. ಶಿವಾನುಭವದ ಅರಿಕೆಯು, ತತ್ವ ಚಿಂತಾಮಣಿಗಳ ಪ್ರತೀಕ ರುದ್ರಾಕ್ಷಿ.

'ತತ್ವ ಚಿಂತಾಮಣಿಗಳೆಂಬ ರುದ್ರಾಕ್ಷಿಗಳ
ಭಕ್ತಿದಾರದಲ್ಲಿ ಸರಗೊಳಿಸಿ
ಯುಕ್ತಿ ವಿಧಾನವಿಡಿದು ಧರಿಸಿ ಸದ್ಯೋನ್ಮುಕ್ತನಾದೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ. (ಪ. ಜ್ಞಾ. ಸಾ. ೧೯೪)

ರುದ್ರಾಕ್ಷಿಯನ್ನು ಹಸ್ತದಲ್ಲಿ ಧರಿಸಿದವರು ದಾನಕೊಡಬೇಕೇ ಹೊರತು ತೆಗೆದು ಕೊಳ್ಳಬಾರದು. ಬಾಹುವಿನಲ್ಲಿ ಧರಿಸಿದರೆ ಪರವಧೂಸಂಗ ತ್ಯಾಜ್ಯ. ಉದರದಲ್ಲಿದ್ದರೆ ಅನ್ಯ ದೈವಕ್ಕೆರಗಬಾರದು. ಹೀಗೆ ನೈತಿಕ ಆಚರಣೆಯ ಧ್ಯೋತಕ ರುದ್ರಾಕ್ಷಿ ಧಾರಣೆ.

'ಶ್ರೀ ವಿಭೂತಿ ರುದ್ರಾಕ್ಷಿಯಿದ್ದವರ ಲಿಂಗವೆಂಬೆ
ಇಲ್ಲದವರ ಭವಿಯೆಂಬೆ' ಎಂದೂ
'ಶ್ರೀವಿಭೂತಿಯ ಹೂಸದವರ ಶ್ರೀ ರುದ್ರಾಕ್ಷಿಯ ಧರಿಸದವರ
ನಿತ್ಯ ಲಿಂಗಾರ್ಚನೆಯ ಮಾಡದವರ'
'ಜಂಗಮವೆ ಲಿಂಗವೆಂದರಿಯದವರ
ಸದ್ಭಕ್ತರ ಸಂಗದಲ್ಲಿರದವರ ಎನಗೊಮ್ಮೆ ತೋರದಿರಯ್ಯ'
(ಬ. ವ. ೪೫೧)

ಎಂದು ಶರಣರು ನುಡಿದಿದ್ದಾರೆ. ಷಣ್ಮುಖ ಶಿವಯೋಗಿಗಳು ಅನಂತಕೋಟಿ ಯಜ್ಞ, ಅನಂತಕಾಲ ತಪ, ಧ್ಯಾನ, ವೇದಾಭ್ಯಾಸ ಮಾಡಿ ತೊಳಲುವದು ಬೇಡ. ರುದ್ರಾಕ್ಷಿಯ ಧರಿಸಿದಾಕ್ಷಣವೇ ಇವೆಲ್ಲ ದೊರೆಕೊಳ್ಳುತ್ತವೆ ಎಂದು ಹಾಡಿ–ರುದ್ರಾಕ್ಷಿ ಧರಿಸಿದ ಮಹಾತ್ಮನು ವಿಶ್ವಾಧಿಕ, ವಿಶ್ವಾತೀತ ಎಂದೂ ನುಡಿದಿದ್ದಾರೆ. ಕೋಟಿ ಗೋವುಗಳನ್ನು ದಾನ ಮಾಡಿದ ಫಲ–ನಿತ್ಯವೂ ರುದ್ರಾಕ್ಷಿ ಧರಿಸಿದವರಿಗೆ ಲಭಿಸುವುದಂತೆ. ರುದ್ರಾಕ್ಷಿಗಳು ದಿವ್ಯ ಔಷಧಿ. 'ಪೆನ್ಸಿಲಿನ್' ಔಷಧಕ್ಕಿಂತಲೂ ಗುಣಕಾರಿ ರುದ್ರಾಕ್ಷಿಗೆ.

**ಮಂತ್ರ:**

ಪರಮಾತ್ಮನ ನಾಮಸ್ಮರಣೆಯನ್ನು 'ಮಂತ್ರ' ಎಂದೂ ಕರೆಯಲಾಗುತ್ತಿದೆ. 'ನಿಮ್ಮ ನಾಮವೆನಗೆ ಮಂತ್ರ'–'ನಿಮ್ಮ ನಾಮ ಕಾಮಧೇನುವೆನಗೆ'–ಎಂದ ಹಾಗೆ ಮಹಾಮಂತ್ರ ಗಳಲ್ಲಿ 'ನಮಃ ಶಿವಾಯ' ಒಂದು. ಇದನ್ನು ಪಂಚಾಕ್ಷರೀ ಮಂತ್ರ ಎನ್ನುವರು. ಒಟ್ಟು ಮಂತ್ರಗಳ ಸಂಖ್ಯೆ ಏಳುಕೋಟಿ ಎಂದು ಲೆಕ್ಕ ಹಾಕಿದ್ದಾರೆ. 'ನಮಃ ಶಿವಾಯ' ಪಂಚಾಕ್ಷರಿಮಂತ್ರಕ್ಕೆ ಓಂ ಸೇರಿಕೊಂಡರೆ ಅದುವೇ ಮೂಲ ಪಂಚಾಕ್ಷರಿ ಮಂತ್ರವಾಗುತ್ತದೆ.

೧. ಮೂಲ ಪಂಚಾಕ್ಷರಿ: ಓಂ ನಮಃಶಿವಾಯ
೨. ಸೂಕ್ಷ್ಮ ಪಂಚಾಕ್ಷರಿ: ಓಂ ಹ್ರಾಂ ಹ್ರೀಂ–ನಮಃಶಿವಾಯ
೩. ಸ್ಥೂಲ ಪಂಚಾಕ್ಷರಿ: ಓಂ ಹ್ರಾಂ ಹ್ರೀಂ ಹ್ರೂಂ–ನಮಃಶಿವಾಯ
೪. ಮಾಯಾ ಪಂಚಾಕ್ಷರಿ: ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ– ನಮಃ ಶಿವಾಯ
೫. ಪ್ರಸಾದ ಪಂಚಾಕ್ಷರಿ: ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ– ನಮಃ ಶಿವಾಯ

ಗುರು–ಶಿಷ್ಯನಿಗೆ ದೀಕ್ಷೆ ಕೊಡುವ ಕಾಲಕ್ಕೆ ಹೇಳುವ ಈ ಮಂತ್ರಗಳನ್ನು ಜಪಿಸುವುದರಿಂದ ಅಣಿಮಾದಿ ಸಿದ್ಧಿಗಳು ಸಹ ಲಭಿಸುತ್ತವೆ. ಆಂತರಿಕ ಅರ್ಥದಲ್ಲಿ ಚಿನ್ನಾದವೇ ಮಂತ್ರವಾಗಿದೆ. ಬರಿಯ ಮಂತ್ರ ಪಠಿಸಿ, ಮೋಸ ಸುಲಿಗೆಗಿಳಿಯುವ ಅನಾಚಾರಿಗಳಿಗೆ ದೇವರು ಮೆಚ್ಚಲಾರನು. "ಹೆರರ ಗೋಣಕೊಯ್ಯೆನೆಂದು ಮಂತ್ರವನೋದುವ ನೇಣುಗಾರರ ಮೆಚ್ಚ ಕೂಡಲಸಂಗಮದೇವಾ".

ಓಂಕಾರ ತ್ವಕ್ಕಿನಲ್ಲಿ (ಆಜ್ಞೆ) ನಕಾರ ರಕ್ತದಲ್ಲಿ (ಆಧಾರ) ಮಕಾರ ಮಾಂಸದಲ್ಲಿ (ಸ್ವಾಧಿಷ್ಠಾನ) ಶಿಕಾರ ಮೇದಸ್ಸಿನಲ್ಲಿ (ಮಣಿಪೂರಕ) ವಕಾರ ಅಸ್ಥಿಯಲ್ಲಿ (ಅನಾಹತ) ಜಯಕಾರ ಮಜ್ಜೆಯಲ್ಲಿ (ವಿಶುದ್ಧಿ) ಉದ್ಭವಿಸುತ್ತವೆ. ಓಂ ಎಂಬುದು ನಿಷ್ಕಲಲಿಂಗವನ್ನೂ (ಭಾವಲಿಂಗ) ನಮಃಶಿವಾಯ ಸಕಲಲಿಂಗವನ್ನೂ (ಇಷ್ಟಲಿಂಗ) ಬೋಧಿಸುತ್ತವೆ. ಸಕಲ ಜಗತ್ತು ನನ್ನದಲ್ಲ, ಶಿವನಿಗೋಸ್ಕರವಾಗಿರುವುದು—ಉಪಭೋಗ್ಯವಾದ ಜಗತ್ತು ಶಿವನಿಗೋಸ್ಕರ ಎಂಬುದು 'ಓಂ ನಮಃ ಶಿವಾಯ' ಎಂಬುದರ ಅರ್ಥವಾಗಿರುತ್ತದೆ. 'ಓಂ ಎಂದರೆ ಅಖಿಲ ಜಗತ್ತು, ನಮಃ ಅಂದರೆ ನಮಮ ನನ್ನದಲ್ಲ. ಶಿವ ಅಂದರೆ(ಅದು) ಶಿವನದು ಎಂಬರ್ಥ. ದೇಹದಲ್ಲಿ ಲಿಂಗ ಸಂಬಂಧ ಇರುವಂತೆ ಮನದಲ್ಲಿ ಮಂತ್ರ ಸಂಬಂಧ ಇರಬೇಕು. ಗುರುಲಿಂಗವನ್ನು ಕರಸ್ಥಲಕ್ಕೆ ಕೊಟ್ಟರೆ ಮನಸ್ಥಲಕ್ಕೆ ಮಂತ್ರವನ್ನು ಕೊಟ್ಟಿದ್ದಾನೆ. ದೇವರನ್ನು ಒಲಿಸಿಕೊಳ್ಳುವುದಕ್ಕೆಂದು ಈ ಮಂತ್ರ ಪಠಿಸುವ ವಾಡಿಕೆ. ದೇವನೊಲಿದ ಮೇಲೆ ಮಂತ್ರವಿಲ್ಲ, ಲಿಂಗವಿಲ್ಲ. 'ಆ ದೇವನೊಲಿದ ಭಕ್ತಂಗೆ ಇನ್ನಾವ ಮಂತ್ರವದೇಕಯ್ಯಾ' ಶಿವಮಂತ್ರ ಜಪಿಸಲು ಅವನಿಗೆ ಮರಣದ ಭಯ ಹಿಂಗುತ್ತದೆ.

'ಸಕಲ ವೇದಂಗಳ ಮೂಲವಿದು.
ಸಕಲ ಶಾಸ್ತ್ರಂಗಳ ಸಾರವಿದು.
ಸಕಲಾಗಮಗಳ ಆರುಹಿದು.
ಸಕಲ ಮಂತ್ರಗಳ ಮಾತೆಯಿದು.
ಇಂತಪ್ಪ ಶಿವಮಂತ್ರವೆಂಬ ಸಂಜೀವನವು
ಎನ್ನಂಗಕ್ಕೆ ಸಂಗಿಸಲಾಗಿ ಎನಗೆ
ಮರಣದ ಭಯ ಹಿಂಗಿತ್ತಯ್ಯಾ ಅಖಂಡೇಶ್ವರಾ'

ಎಂದು ಷಣ್ಮುಖ ಶಿವಯೋಗಿಗಳು ಮಂತ್ರದ ಮಹಿಮೆಯನ್ನು ಕೊಂಡಾಡಿದ್ದಾರೆ. ಅದೇ ರೀತಿ 'ದುರಿತವ ಪರಿಹರಿಸಬಲ್ಲಡೆ ಓಂ ನಮಃ ಶಿವಾಯ ಶರಣೆಂಬುದೇ ಮಂತ್ರ' ಎಂದು ಮಹಾದೇವಿಯಕ್ಕ ಹಾಡಿದ್ದಾಳೆ. ಹೀಗೆ ಮಂತ್ರ ಪರಶಿವನ ಅಭಿಧಾನವಾಗಿದೆ. ಅಭಿಧೇಯವೂ ಆಗಿದೆ. ಗುರೂಪದೇಶ ಪಡೆದು ಮಂತ್ರವನ್ನು ಜಪಿಸಿದರೆ ನಿಜಕ್ಕೂ ಮಹಾದೇವನ ಸಾಕ್ಷಾತ್ಕಾರವಾಗುತ್ತದೆಯೆಂಬ ನಂಬಿಕೆ ಭಕ್ತರದಾಗಿದೆ. ಇದಕ್ಕೆ ಅರವತ್ಮೂರು ಪುರಾತನರಲ್ಲಿ ಒಬ್ಬರಾದ ಮುರುಘರ ಹೆಸರನ್ನು ಉದಾಹರಿಸಬಹುದಾಗಿದೆ.

ಒಟ್ಟಿನ ಮೇಲೆ ಅಷ್ಟಾವರಣಗಳ ಒಟ್ಟು ಗುರಿ-ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆಯೆಂದರಿದು ಆಚರಿಸುವುದಾಗಿದೆ. ಅರಿವು ಇಲ್ಲದ ಆಚರಣೆಗಾಗಲಿ, ಆಚಾರವಿಲ್ಲದ ಅರಿವಿಗಾಗಲಿ ಯಾವ ಬೆಲೆಯೂ ಇಲ್ಲ. ಅದಕ್ಕೆಂದು ತನುಮನಧನವೆಂಬ ತ್ರಿವಿಧ ಸಂಪತ್ತನ್ನು ಪರಿಶುದ್ಧಗೊಳಿಸಿಕೊಂಡು ಉಪಾಸ್ಯಮೂರ್ತಿಗಳಾದ-ಗುರುಲಿಂಗಜಂಗಮರಿಗೆ ಸಮರ್ಪಿಸಿದಾಗ ಅಂಥವನು ಆಚಾರಕ್ಕೆ ಅರಸಾಗಿ ಆದರ್ಶದ ಬಾಳನ್ನು ಸಾಗಿಸುತ್ತಾನೆ.

ಪರಮಾತ್ಮನು ಭಕ್ತರಿಗೆ ತನ್ನನತದ ಅರಿವು ಮಾಡಿಸಿಕೊಡಲು ಗುರುವಾಗಿ ಉಪದೇಶ ನೀಡುತ್ತಾನೆ. ತಾನೇ ಲಿಂಗವಾಗಿ ಮನದಲ್ಲಿ ಇಂಬುಗೊಳ್ಳುತ್ತಾನೆ. ಜಂಗಮವಾಗಿ ಅಹಂಭಾವ ದೂರಮಾಡುತ್ತಾನೆ. ಪ್ರಸಾದಿಯಾಗಿ ಸರ್ವಾಂಗ ಅನುಗ್ರಹಿಸುತ್ತಾನೆ. ಪಾದೋದಕವಾಗಿ ಒಳಹೊರಗು ಶುದ್ಧಗೊಳಿಸಿ ಚಿತ್‌ಸ್ವರೂಪಿಯನ್ನಾಗಿ ಮಾಡುತ್ತಾನೆ. ವಿಭೂತಿ, ರುದ್ರಾಕ್ಷಿ, ಮಂತ್ರಗಳು ಸಾಧನ ವಸ್ತುಗಳಾಗಿ, ಭಕ್ತಿಯ ಕುರುಹಾಗಿ, ಭಕ್ತನ ಆಭರಣಗಳೆನಿಸುತ್ತವೆ. ಹೀಗೆ ವೈಯಕ್ತಿಕವೂ, ಆತ್ಮಹಿತಕ್ಕೆ ಸಾಧನವೂ ಆದ ಇಷ್ಟಲಿಂಗ ದಲ್ಲಿ ಶ್ರದ್ಧೆಯಿಟ್ಟು, ಅರುಹಿನ ಕುರುಹಾದ ಇಷ್ಟಲಿಂಗದಲ್ಲಿ ಸಾಕಾರಪೂಜೆ ನೆರವೇರಿಸುತ್ತ, ಸತ್ಯಶುದ್ಧ ಕಾಯಕ ಕೈಕೊಂಡು, ಮಹಾದಾಸೋಹಿಯಾಗಿ, ಸಮರ್ಪಣಭಾವ ಮೆರೆದು, ಸಕಲ ಜೀವಾತ್ಮರಿಗೆ ಲೇಸಬಯಸುತ್ತ, ವ್ಯಷ್ಟಿಪ್ರಜ್ಞೆಯ ಜೊತೆಗೆ, ಸಮಷ್ಟಿಪ್ರಜ್ಞೆ ಮೆರೆ ಯುತ್ತಾನೆ. ಪ್ರಾಣಲಿಂಗಿಯಾಗಿ ತನ್ನಂತೆ ತನ್ನ ಸಮಾಜವನ್ನು ಮೇಲಕ್ಕೆತ್ತಿಕೊಂಡು ಧರ್ಮತೇಜದಲ್ಲಿ ವಿರಾಜಮಾನನಾಗಿ, ವಿನಯಶೀಲನಾಗಿ, ಭೃತ್ಯಭಾವ ಮೆರೆಯುತ್ತಾನೆ. ಭಾವಲಿಂಗಿಯಾಗಿ ಸಮಾಜಸೇವಾ ದುರಂಧರನಾಗಿ, ವೀರಶೈವನಾಗಿ ಹುಟ್ಟಿಬಂದ ಮೇಲೆ ಪಡೆದುಕೊಳ್ಳಬೇಕಾದ ಪಸಲು ಇದಾಗಿದೆ.

ಬಾಹ್ಯ ಅಷ್ಟಾವರಣಗಳ ಜೊತೆಗೆ ಅರಿವು, ಪ್ರಾಣ, ಅನುಭವ, ಚಿತ್, ಸದ್ಗುಣ, ಚಿನ್ನಾದ, ಚಿದ್ಬಿಂದು-ಈ ಅಂತರಷ್ಟಾವರಣಗಳು ಸೇರಿಕೊಂಡು ಅಂತರಂಗ-ಬಹಿರಂಗ ಶುದ್ಧೀ ಹೊಂದಿ ಶಿಷ್ಯನು ಗುರುಮುಟ್ಟಿ ಗುರುವಾಗುತ್ತಾನೆ. ಹೀಗೆ ಆಚಾರ-ವಿಚಾರಗಳಲ್ಲಿ ಸುಂದರ ಸಮನ್ವಯ ಸಾಧಿಸಿದವನೇ ಶಿವನೆನಿಸುತ್ತಾನೆ.

'ಭಕ್ತಿಯೆಂಬ ಪೃಥ್ವಿಯಮೇಲೆ
ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತು.
ಲಿಂಗವೆಂಬ ಎಲೆಯಮೇಲೆ
ವಿಚಾರವೆಂಬ ಹೂವಾಯಿತು
ಆಚಾರವೆಂಬ ಕಾಯಾಯಿತು.
ನಿಷ್ಪತ್ತಿಯೆಂಬ ಹಣ್ಣಾಯಿತು
ನಿಷ್ಪತ್ತಿಯೆಂಬ ಹಣ್ಣು ಕಳಚಿಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ' (ಬ. ವ. ೫೨೫)

ಎಂಬ ಬಸವಣ್ಣನವರು ಈ ವಚನದಲ್ಲಿ ಗುರು–ಲಿಂಗ, ಆಚಾರ–ವಿಚಾರಗಳ ಮಹತಿಯನ್ನು ಬಹು ಸುಂದರವಾಗಿ ಎರಕ ಹೊಯ್ದಿದ್ದಾರೆ. ವೀರಶೈವ ಧರ್ಮದ ಉದಾತ್ತವೂ, ವಿಶ್ವಮಾನ್ಯವೂ ಆದ ತತ್ವಸರಣಿ ಇದಾಗಿದೆ. ಯಾವುದೇ ಧರ್ಮವಿರಲಿ, ಅದರ ಉದಾತ್ತ ತತ್ವಗಳನ್ನು ಆಚರಣೆಗೆ ತಂದಾಗಲೇ ಆ ಧರ್ಮಕ್ಕೆ ಬೆಲೆ.

ಇಂದು ಸ್ವಾರ್ಥದ ದಾಹ ನೆತ್ತಿಗೇರಿ, ಒಳಜಗಳಗಳು ಹುಟ್ಟಿಕೊಂಡು ಪರಸ್ಪರ ಗುದ್ದಾಟಕ್ಕೆ ಇಳಿಯುತ್ತಿರುವ ನಮಗೆ, ಯಾವ ಮತ–ಪಂಥದ ಭೇದವಿಲ್ಲದೆ, ಅಷ್ಟಾವರಣ ಗಳನ್ನು ಆಚರಣೆಗೆ ತಂದುಕೊಳ್ಳುವುದು ಮಹತ್ವದ, ಅತ್ಯವಶ್ಯಕ ಕೆಲಸವಾಗಿದೆ. ಪಾರಿ ಭಾಷಿಕ ಪದಗಳನ್ನು ಸರಿಸಿ, ಅಷ್ಟಾವರಣಗಳ ಒಳಹೂರಣ ಅರ್ಥೈಸಿಕೊಂಡು ಆಚರಣೆ ಗಿಳಿಸಿದಲ್ಲಿ ನಮ್ಮ ಬಾಳ ಸುಖದ ಬಾಳಾಗುವುದು, ಇಲ್ಲವಾದಲ್ಲಿ ಹಾಳು.

# ಶರಣರು ಪರಿಶೋಧಿಸಿ ಸಾಧಿಸಿದ ಶಿವಯೋಗ

—ಸಿದ್ಧಯ್ಯ ಪುರಾಣಿಕ

ಒಬ್ಬ ಸಾಧಾರಣ ಮಾನವನು ನಿಸರ್ಗ ತನ್ನಲ್ಲಿ ನಿಕ್ಷೇಪಿಸಿರುವ ಅದ್ಭುತ ಶಕ್ತಿಗಳಲ್ಲಿ ನೂರರಲ್ಲೊಂದು ಪಾಲನ್ನು ಮಾತ್ರ ಬಳಸಿಕೊಂಡು ಬದುಕು ಸಾಗಿಸುತ್ತಾನೆ. ಇನ್ನುಳಿದ ನೂರಕ್ಕೆ ತೊಂಬತ್ತೊಂಬತ್ತು ಪಾಲು ಶಕ್ತಿ ವ್ಯರ್ಥವಾಗುತ್ತದೆ. ಅದನ್ನು ಉಪಯೋಗಿಸಲು ಅವನು ಕಲಿತರೆ ಅವನು ಅತಿಮಾನವನಾಗುತ್ತಾನೆ. ದೇವ ಮಾನವನಾಗುತ್ತಾನೆ. 'ಅದನ್ನು ಉಪಯೋಗಿಸಿಕೊಳ್ಳುವುದೆಂತು' ಎಂಬ ಪ್ರಶ್ನೆ ಸಾವಿರಾರು ವರ್ಷಗಳ ಹಿಂದೆಯೇ ಈ ದೇಶದ ಮನೀಷಿಗಳನ್ನು ಕಾಡಿತು. ಅವರು ಕಂಡುಕೊಂಡ ಉತ್ತರವೇ ಯೋಗವಿಜ್ಞಾನ.

ಈ ಯೋಗವಿಜ್ಞಾನ ತಿಳಿಸುವಂತೆ ಬ್ರಹ್ಮಾಂಡದಲ್ಲೆಲ್ಲ ಪಸರಿಸಿರುವ ಚೈತನ್ಯ ಶಕ್ತಿಯೇ ದೇಹತ್ವವನ್ನು ಪಡೆದ ಮಾನವನಲ್ಲಿಯೂ ಮೂಡಿ ಮೆದುಳು ಬಳ್ಳಿಯ ಬುಡ ದಲ್ಲಿರುವ ಮೂಲಾಧಾರ ಚಕ್ರದಲ್ಲಿ ಸುಪ್ತವಾಗಿರುತ್ತದೆ. ಇದನ್ನು ಕುಂಡಲಿನಿಯೆಂದು ಕರೆದಿದ್ದಾರೆ. ಇದೊಂದು ಸಾಂಕೇತಿಕ ಸರ್ಪ; ಪ್ರಕೃತಿಯ ಪ್ರತಿಕೃತಿ. ಕುಟಿಲಾಂಗಿ, ಭುಜಂಗಿ, ಶಕ್ತಿ, ಈಶ್ವರಿ, ಅರುಂಧತಿ–ಇವು ಅದರ ಇತರ ನಾಮಗಳು. ನಮ್ಮ ಎಲ್ಲ ರಾಗ–ದ್ವೇಷಗಳಿಗೆ, ಕ್ಲೇಶೇಷಣಗಳಿಗೆ ಕಾರಣವಾದ ಈ ಅರೆಸುರುಳಿ ಸುತ್ತಿದ ಸರ್ಪವೇ ಜಾಗ್ರತಗೊಂಡು ಯೌಗಿಕ ಅಷ್ಟಚಕ್ರಗಳಲ್ಲಿ (ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಸೂರ್ಯ, ಅನಾಹತ, ವಿಶುದ್ಧಿ, ಆಜ್ಞಾ, ಸಹಸ್ರಾರು) ಶಕ್ತಿಯಾಗಿ ಪ್ರವಹಿಸಿದಾಗ ಯಾವ ಯಾವ ಯೌಗಿಕ ಚಕ್ರಕ್ಕೆ ಕುಂಡಲಿನೀ ಶಕ್ತಿ ಪ್ರವಾಹ ತಲುಪುವುದೋ ಆ ಚಕ್ರ ವಿಕಸಿತವಾಗುತ್ತದೆ; ಆ ಚಕ್ರದ ನರ–ನಾಡಿಗಳು ಉದ್ದೀಪನಗೊಂಡು, ಅಂತಃಕರಣದೊಂದಿಗೆ ಸಂಬಂಧಪಟ್ಟ ಜ್ಞಾನತಂತುಗಳು (Parasympathetic nerves and ductless glands) ಉದ್ದೀಪನಗೊಂಡು ಯೌಗಿಕ ಚಕ್ರದಲ್ಲಿ ಕ್ರಮವಾಗಿ ಚೈತನ್ಯ ಚಿಮ್ಮಿ, ಮನಃ ಶಕ್ತಿ ವರ್ಧಿಸಿ, ಆತ್ಮವಿಕಾಸ ಸಾಧಿಸಲು ವ್ಯಕ್ತಿ ಶಕ್ತನಾಗುತ್ತಾನೆ. ಇದೇ ಜೀವನಶಕ್ತಿ ಸಹಸ್ರಾರವನ್ನು ತಲುಪಿದಾಗ ಸಮಾಧಿಯ ಯೋಗ್ಯತೆ ಪ್ರಾಪ್ತವಾಗುತ್ತದೆ.

ಮುಂದುವರಿಯುವ ಮುನ್ನ ಈ ಯೌಗಿಕ ಅಷ್ಟಚಕ್ರಗಳ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚಬೇಕು. ಆಧುನಿಕ ಶರೀರ ಶಾಸ್ತ್ರಜ್ಞರು ಮಾನವ ದೇಹದಲ್ಲಿ ಜ್ಞಾನ ತಂತುಗಳ ಸಂಗಮ ಸ್ಥಾನಗಳನ್ನು ಗುರುತಿಸಿದ್ದಾರೆ. ಬೇರೆ ಬೇರೆ ಸ್ಥಳಗಳಲ್ಲಿ ಕವಲೊಡೆದ ಜ್ಞಾನ ತಂತುಗಳು ಗ್ರಂಥಿರೂಪದಲ್ಲಿ ಇಲ್ಲಿ ಸೇರುತ್ತವೆ. ಇಂಥ ಒಂದೊಂದು ಸಂಗಮ ಸ್ಥಳವನ್ನು

ಒಂದು ಚಕ್ರವೆಂದು ಯೋಗ ವಿಜ್ಞಾನ ಗುರುತಿಸಿದರೆ ಇಂಥ ಚಕ್ರಗಳ ಸ್ಥಾನದಲ್ಲಿಯೇ ಶರೀರ ಶಾಸ್ತ್ರಜ್ಞರು ಗುರುತಿಸಿರುವ ನಿರ್ನಾಳಗ್ರಂಥಿ (ductless gland)ಗಳು ಇರುವುದು ಕುತೂಹಲಕಾರಿ. ಕೆಳಗಣ ಕೋಷ್ಟಕ ಮನನೀಯ.

**ಯೌಗಿಕ ಚಕ್ರಕ್ಕೆ ಸಮಾನಾಂತರ ಸ್ಥಾನದಲ್ಲಿರುವ ನಿರ್ನಾಳಗ್ರಂಥಿಗಳು**

| ಯೌಗಿಕ ಚಕ್ರ– | ಮಿದುಳು ಬಳ್ಳಿಯಲ್ಲಿ ಯೌಗಿಕ ಚಕ್ರದ ಅಸ್ತಿತ್ವ | ಯೌಗಿಕ ಚಕ್ರಕ್ಕೆ ಸಮಾನಾಂತರದಲ್ಲಿರುವ ನಿರ್ನಾಳ ಗ್ರಂಥಿಗಳು |
|---|---|---|
| ೧. ಮೂಲಾಧಾರ– | ಜನನೇಂದ್ರಿಯಕ್ಕೆ ಸಮಾನಾಂತರ | –ಲೈಂಗಿಕ (Testes ovaries) ನಿರ್ನಾಳ ಹಾರ್ಮೋನ್ ಉತ್ಪಾದನಾಗ್ರಂಥಿ |
| ೨. ಸ್ವಾಧಿಷ್ಠಾನ– | ಮೂತ್ರಪಿಂಡಕ್ಕೆ ಸಮಾನಾಂತರ | –ಎಡ್ರಿನಾಲಿಸ್ ಗ್ರಂಥಿ |
| ೩. ಮಣಿಪೂರಕ– | ಜಠರಕ್ಕೆ ಸಮಾನಾಂತರ | –ಮೇದೋಜೀರಕ ಗ್ರಂಥಿ |
| ೪. ಸೂರ್ಯ– | ಹೃದಯಕ್ಕೆ ಸಮಾನಾಂತರ | –ಥೈಮಸ್‌ಗ್ರಂಥಿ |
| ೫. ಅನಾಹತ– ವಿಶುದ್ಧಿ ಚಕ್ರ | ಕಂಠಮೂಲಕ್ಕೆ ಸಮಾನಾಂತರ | –ಥೈರ್ಯೊಡ್ ಮತ್ತು ಪೆರಾಥೈರ್ಯೊಯ್ಡ್‌ಗ್ರಂಥಿಗಳು |
| ೬. ಆಜ್ಞಾಚಕ್ರ– | ಭ್ರೂಮಧ್ಯಕ್ಕೆ ಸಮಾನಾಂತರ | –ಪಿನಿಯಲ್ ಗ್ರಂಥಿ |
| ೭. ಸಹಸ್ರಾರ– | ಮೆದುಳಿನ ತಳಭಾಗ | –ಪಿಟ್ಯುಟರಿ ಗ್ರಂಥಿ |

ಈ ಚಕ್ರಗಳು ಆರು ಮಾತ್ರವೆಂಬುದೂ ಇದೆ. ಆಧಾರ–sacral plexus ಸ್ವಾಧಿಷ್ಠಾನ–prostatic, ಮಣಿಪೂರಕ–epigastric, ಅನಾಹತ–cardial, ವಿಶುದ್ಧಿ–pharyngal, ಆಜ್ಞಾ-Cavernous ಈ ಗ್ರಂಥಿಗಳನ್ನು ಹೇಳಲಾಗಿದೆ.

ಪ್ರತಿಯೊಂದು ಚಕ್ರಕ್ಕೂ ಒಂದೊಂದು ಭೂತ, ಕೋಣೆ, ಪದ್ಮ, ಅಕ್ಷರ, ವರ್ಣ, ಅಧಿದೇವತೆಗಳನ್ನು ಹೇಳಲಾಗಿದೆ. ಅಖಿಲಭಾರತ ಖ್ಯಾತಿಯ ಮಹಾಯೋಗಿ ಅಲ್ಲಮ ಪ್ರಭುಗಳ ಈ ವಚನ ಇವೆಲ್ಲವನ್ನು ವಿಶದೀಕರಿಸುತ್ತದೆ.

"ಗುದಸ್ಥಾನದಲ್ಲಿ ಆಧಾರಚಕ್ರ, ಪೃಥ್ವಿಯೆಂಬ ಮಹಾಭೂತ, ಚತುಃಕೋಣೆ, ಚೌಪಳ ಪದ್ಮ, ಅಲ್ಲಿಹ ಅಕ್ಷರ ನಾಲ್ಕು: ವ–ಶ–ಷ–ಸ; ಅದರ ವರ್ಣ ಸುವರ್ಣ, ಅದಕ್ಕೆ ಅಧಿದೇವತೆ ದ್ರಾಕ್ಷಾಯಣಿ; ಲಿಂಗಸ್ಥಾನದಲ್ಲಿ ಸ್ವಾಧಿಷ್ಠಾನ ಚಕ್ರ, ಅಪ್ಪುವೆಂಬ ಮಹಾಭೂತ, ಧನುರ್ಗತಿ, ಷಡುದಳ ಪದ್ಮ, ಅಲ್ಲಿಹ ಅಕ್ಷರವಾರು: ಬ–ಭ–ಮ–ಯ–ರ–ಲ; ಅದರ ವರ್ಣ ಪಚ್ಚೆಯ ವರ್ಣ ಅದಕ್ಕೆ ಅಧಿದೇವತೆ ಬ್ರಹ್ಮನು: ನಾಭಿಸ್ಥಾನದಲ್ಲಿ ಮಣಿಪೂರಕ ಚಕ್ರ, ತೇಜವೆಂಬ ಮಹಾಭೂತ, ತ್ರಿಕೋಣೆ, ದಶದಳ ಪದ್ಮ, ಅಲ್ಲಿಹ ಅಕ್ಷರ ಹತ್ತು: ಡ–ಢ–ಣ–ತ–ಥ–ದ–ಧ–ನ–ಪ–ಫ; ಅದರ ವರ್ಣ ಕೃಷ್ಣ ವರ್ಣ ಅದಕ್ಕೆ

ಅಧಿದೇವತೆ ವಿಷ್ಣು; ಹೃದಯ ಸ್ಥಾನದಲ್ಲಿ ಅನಾಹತ ಚಕ್ರ, ವಾಯುವೆಂಬ ಮಹಾಭೂತ ಷಟ್ಕೋಣೆ, ದ್ವಾದಶದಳ ಪದ್ಮ, ಅಲ್ಲಿಹ ಅಕ್ಷರ ಹನ್ನೆರಡು:ಕ-ಖ-ಗ-ಘ-ಙ-ಚ-ಛ-ಜ-ಝ-ಞ-ಟ-ಠ; ಅದರ ವರ್ಣ ಕುಂಕುಮ ವರ್ಣ, ಅದಕ್ಕೆ ಅಧಿದೇವತೆ ಮಹೇಶ್ವರನು; ಕಂಠಸ್ಥಾನದಲ್ಲಿ ವಿಶುದ್ಧಿಚಕ್ರ, ಆಕಾಶವೆಂಬ ಮಹಾಭೂತ, ವರ್ತುಳಾಕಾರ, ಷೋಡಶದಳ ಪದ್ಮ, ಅಲ್ಲಿಹ ಅಕ್ಷರ ಹದಿನಾರು: ಅ-ಆ-ಇ-ಈ-ಉ-ಊ-ಋ-ೠ-ಌ-ೡ-ಏ-ಐ-ಓ-ಔ-ಅಂ-ಅಃ, ಅದರ ವರ್ಣ ಶ್ವೇತವರ್ಣ ಅದಕ್ಕೆ ಅಧಿದೇವತೆ ಸದಾಶಿವನು; ಭ್ರೂ ಮಧ್ಯಸ್ಥಾನದಲ್ಲಿ ಆಜ್ಞಾಚಕ್ರ, ಮನವೆಂಬ ಮಹಾಭೂತ, ತಮಂಧಾಕಾರ, ದ್ವಿದಳ ಪದ್ಮ, ಅಲ್ಲಿಹ ಅಕ್ಷರವೆರಡು: ಹಂ-ಕ್ಷಂ; ಅದರ ವರ್ಣ ಮಾಣಿಕ್ಯ ವರ್ಣ, ಅದಕ್ಕೆ ಅಧಿ ದೇವತೆ ಶ್ರೀಗುರು; ಉನ್ಮನಿ ಜ್ಯೋತಿ ಬ್ರಹ್ಮರಂಧ್ರದಲ್ಲಿ ಸಹಸ್ರದಳ ಪದ್ಮ ಅಲ್ಲಿ ಅಮೃತ ವಿಹುದು. ಅಲ್ಲಿ ಓಂಕಾರ ಸ್ವರೂಪವಾಗಿ ಗುಹೇಶ್ವರ ಲಿಂಗವು ಸದಾ ಸನ್ನಿಹಿತನು". (ಅಲ್ಲಮನ ವಚನ ಚಂದ್ರಿಕೆ-೧೮೮).

ಈಗ ಅಧೋಮುಖಿಯಾದ ಕುಂಡಲಿನಿಯು ಊರ್ಧ್ವಗಾಮಿಯಾಗುವಂತೆ ಮಾಡಿ ಅದರ ಶಕ್ತಿ ಪ್ರವಾಹವನ್ನು ಈ ಚಕ್ರಗಳಿಗೆ ಹರಿಸುವುದು ಹೇಗೆ ಎಂಬ ಪ್ರಶ್ನೆ ಎದುರಾಗುತ್ತದೆ. ವೇದಾಗಮೋಪನಿಷತ್ತುಗಳಲ್ಲಿಯೂ, ಭಗವದ್ಗೀತೆಯಲ್ಲಿಯೂ ಶ್ರೀ ಮದ್ಭಾನಿಗವತದಲ್ಲಿಯೂ ಬಂದಿರುವ ಯೋಗ ವಿಷಯಕ ಮಂತ್ರ ಶ್ಲೋಕಾದಿಗಳಲ್ಲಿ ಹರಡಿದ ಅಂಶಿಕ ವಿವರಗಳನ್ನು ಮಥಿಸಿ ೨ನೆಯ ಶತಮಾನದ ಪತಂಜಲಿ ಮಹರ್ಷಿ ರಚಿಸಿದ ಯೋಗ ಸೂತ್ರಗಳೇ ಯೋಗಾನುಷ್ಠಾನಾರ್ಥಿಗಳಿಗೆ ದಾರಿದೀಪಗಳೆನಿಸಿವೆ. 'ಹಠ ಯೋಗ ಪ್ರದೀಪಿಕಾ' 'ಘೇರಂಡ ಸಂಹಿತಾ', 'ಗೋರಕ್ಷ ಪದ್ಧತಿ', 'ಯೋಗ ಯಾಜ್ಞವಲ್ಕ್ಯಂ' 'ಷಟ್ಚಕ್ರ ಚಿಂತಾಮಣಿಃ ರಾಜಯೋಗ ಚಿಂತಾಮಣಿಃ' 'ವಿಷ್ಣುಪುರಾಣಂ,' 'ಯೋಗ ಚಿಂತಾಮಣಿಃ' ಇತ್ಯಾದಿ ಗ್ರಂಥಗಳೂ ಇವೆ. ಪರಿಣಾಮ: ಅನೇಕ ಯೋಗ ಮಾರ್ಗಗಳ ಉಗಮ; ತತ್ಪರಿಣಾಮವಾಗಿ ಉಪರಿನಿರ್ದಿಷ್ಟ ಪ್ರಶ್ನೆಗೆ ಬೇರೆ ಬೇರೆ ಉತ್ತರ. ಪತಂಜಲಿಯ ಯೋಗ ಸೂತ್ರಗಳಿಗೆ ವ್ಯಾಸ ಭಾಷ್ಯ, ವಾಚಸ್ಪತಿಯವರ 'ತತ್ವ ವೈಶಾರದೀ' ಎಂಬ ವಿವರಣಾ ಗ್ರಂಥ, ಭೋಜರಾಜನ 'ರಾಜ ಮಾರ್ತಾಂಡ' ಎಂಬ ಭಾಷ್ಯ ಗ್ರಂಥಗಳಿದ್ದು, 'ಯೋಗ ಸೂತ್ರ'ಗಳೇ ಯೋಗ ವಿಷಯಕ ಆಧಾರ ಗ್ರಂಥವೆಂದು ಭಾವಿಸಲಾಗಿದೆ.

ಇದರ ಪ್ರಕಾರ ಯೋಗವೆಂದರೆ ಚಿತ್ತ ವೃತ್ತಿ ನಿರೋಧವೇ (ಯೋಗಶ್ಚಿತ್ತವೃತ್ತಿ ನಿರೋಧಃ) ಚಿತ್ತ ವೃತ್ತಿಗಳು ಐದು ತೆರನಾಗಿವೆ:

೧. ಕ್ಷಿಪ್ತ: ವಿಷಯಗಳ ಮಧ್ಯೆ ಎಸೆಯಲ್ಪಡುವ ಅವಸ್ಥೆ

೨. ಮೂಢ: ನಿದ್ದೆಯಲ್ಲಿರುವಂಥ ಸ್ಥಿತಿ

೩. ವಿಕ್ಷಿಪ್ತ: ಸತ್ವ ಪ್ರಧಾನವಾದ ಸ್ಥಿತಿಯಾಗಿದ್ದು ಇಲ್ಲಿ ಮನಸ್ಸು ವಿಷಯ ಮತ್ತು ಧ್ಯಾನಗಳ ಮಧ್ಯೆ ಹೊಯ್ದಾಡುತ್ತಿರುತ್ತದೆ.

೪. ಏಕಾಗ್ರ: ಯಾವುದೋ ಒಂದು ವಸ್ತುವಿನಲ್ಲಿ ಏಕಾಗ್ರತೆ ಹೊಂದಿರುವ ಸ್ಥಿತಿ.

೫. ನಿರುದ್ಧ: ಮೇಲಿನ ನಾಲ್ಕು ಸ್ಥಿತಿಗಳಿಂದ ಹೊರಗಾದ ಸ್ಥಿತಿ; ಮನಸ್ಸು ಪೂರ್ಣ ಹತೋಟಿಯಲ್ಲಿರುವ ಸ್ಥಿತಿ.

ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ವೃತ್ತಿಗಳಲ್ಲಿ ಎರಡು ಪ್ರಕಾರ: ಬಾಹ್ಯ, ಆಂತರಿಕ, ವಿಪರ್ಯಯ, ಪ್ರಮಾಣ, ವಿಕಲ್ಪ, ನಿದ್ರಾಸ್ಥಿತಿ–ಇವು ಬಾಹ್ಯ ವೃತ್ತಿಗಳು; ಧ್ಯಾನ ಸಮಾಧಿಗಳೇ ಅಂತರ್ವೃತ್ತಿಗಳು ಬಾಹ್ಯವೃತ್ತಿಗಳ ವಿವರ:

ವಿಪರ್ಯಯ: 'ವಿಪರ್ಯಯೋ ಮಿಥ್ಯಾಜ್ಞಾನಂ ಅತದ್ರೂಪ ಪ್ರತಿಷ್ಠಂ' ಇದ್ದ ವಸ್ತುವಿನಲ್ಲಿ ಇಲ್ಲದ ವಸ್ತುವಿನ ಜ್ಞಾನಮಾಡಿಕೊಳ್ಳುವುದು.

ಪ್ರಮಾಣ: 'ಪ್ರತ್ಯಕ್ಷ ಅನುಮಾನ ಆಗಮಾಃ ಪ್ರಮಾಣಾನಿ' 'ಪಾತಂಜಲ ಯೋಗ ಸೂತ್ರ ೧–೭ ಇಂದ್ರಿಯಗಳ ಮೂಲಕ ಬಾಹ್ಯ ವಸ್ತುಗಳನ್ನು ಅರಿತುಕೊಳ್ಳುವುದು ಪ್ರತ್ಯಕ್ಷ ಪ್ರಮಾಣ; ಹೇತುವಿನ ಸಹಾಯದಿಂದ ಸಾಧ್ಯವಸ್ತುವನ್ನು ಸಿದ್ಧಮಾಡುವುದು ಅನುಮಾನ ಪ್ರಮಾಣ; ಶಾಸ್ತ್ರ ಹಾಗೂ ಆಪ್ತ ಪುರುಷನ ವಚನಗಳಿಂದ ವಸ್ತು ಜ್ಞಾನ ಮಾಡಿಕೊಳ್ಳುವುದು ಆಗಮ ಇಲ್ಲವೆ ಶಬ್ದ ಪ್ರಮಾಣ.

ವಿಕಲ್ಪ: 'ಶಬ್ದ ಜ್ಞಾನಾನುಪಾತೀ ವಸ್ತು ಶೂನ್ಯೋ ವಿಕಲ್ಪಃ ಇಲ್ಲದ ವಸ್ತುವಿನ ಬರಿ ಶಾಬ್ದಿಕ ಜ್ಞಾನ ಉಂಟಾದರೆ ಅದು ವಿಕಲ್ಪ.

ನಿದ್ರಾ: 'ಅಭಾವ ಪ್ರತ್ಯಯಾಲಂಬನಂ ವೃತ್ತಿಃ ನಿದ್ರಾ' ವಿಪರ್ಯಯ, ಪ್ರಮಾಣ, ವಿಕಲ್ಪ ವೃತ್ತಿಗಳಿಲ್ಲದೆ ಚಿತ್ತವು ಸುಪ್ತ ಸ್ಥಿತಿಯಲ್ಲಿದ್ದರೆ ಅದು ನಿದ್ರೆ.

ಬಾಹ್ಯ ವೃತ್ತಿಗಳಿಗೆ ಪರಮಾತ್ಮನನ್ನು ಗ್ರಹಿಸುವ ಸಾಮರ್ಥ್ಯವಿಲ್ಲ; ಧ್ಯಾನ–ಸಮಾಧಿ ರೂಪಿ ಅಂತರ್ವೃತ್ತಿಗಳಿಂದ ಮಾತ್ರ ದಿವ್ಯಾನುಭವ ಸಾಧ್ಯ. ಮನಸ್ಸನ್ನು ವಿಷಯ ಗಳತ್ತ ಹರಿಯಲು ಬಿಡದೆ ಹೃದಯಸ್ಥ ಆತ್ಮದೇವನಲ್ಲಿಯೇ ಕೇಂದ್ರೀಕರಿಸುವುದು ಧ್ಯಾನ ವೃತ್ತಿ, ಅದನ್ನು ಅಲ್ಲಿಯೇ ಸ್ಥಿರಗೊಳಿಸುವುದು ಸಮಾಧಿ.

ಇದು ಗುರಿ. (ಸಂಯೋಗೋ ಯೋಗ ಇತ್ಯಾಹುರ್ಜೀವಾತ್ಮ ಪರಮಾತ್ಮನೋಃ ಯಾಜ್ಞವಲ್ಕ್ಯ) ದಾರಿ? ಪತಂಜಲಿ 'ಚಿತ್ತವೃತ್ತಿ ನಿರೋಧಃ' ಎಂದು ಹೇಳುತ್ತಾನೆ. ಅದಕ್ಕಾಗಿ 'ಯಮ ನಿಯಮಾಸನ ಪ್ರಾಣಾಯಮ ಪ್ರತ್ಯಾಹಾರ ಧಾರಣಾಧ್ಯಾನ ಸಮಾಧ ಯೋಷ್ಟಾಂಗಾನಿ' ಎಂಬ ಸಾಧನ ಕ್ರಮವನ್ನು ಹೇಳಿದ್ದಾನೆ. ಇವುಗಳ ವ್ಯಾಖ್ಯೆಯನ್ನು ಪತಂಜಲಿಯ ಯೋಗ ಸೂತ್ರಗಳಲ್ಲಿ ಕೆಳಗಿನಂತೆ ಕೊಡಲಾಗಿದೆ:

ಯಮ: ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ–ಸೂತ್ರ ೨–೩೦.

ನಿಯಮ: ಶೌಚ–ಸಂತೋಷ–ತಪಃ–ಸ್ವಾಧ್ಯಾಯೇಶ್ವರ ಪ್ರಣಿಧಾನಾನಿ ನಿಯಮಾಃ ಸೂತ್ರ ೨–೩೨.

ಆಸನ: "ಸ್ಥಿರಸುಖಮಾಸನಂ" ಯೋ. ಸೂ. ೨–೪೪

ಪ್ರಾಣಾಯಾಮ: ತಸ್ಮಿನ್ ಸತಿ ಶ್ವಾಸ ಪ್ರಶ್ವಾಸಯೋರ್ಗತಿ ವಿಚ್ಛೇದಃ ಪ್ರಾಣಾಯಾಮಃ–ಸೂ. ೨–೪೯.

ಪ್ರತ್ಯಾಹಾರ: ಸ್ವವಿಷಯಾ ಸಂಪ್ರಯೋಗೆ ಚಿತ್ತಸ್ವರೂಪಾನುಕಾರ ಇವೇಂದ್ರಿಯಾಣಾಂ ಪ್ರತ್ಯಾಹಾರಃ–ಸೂ. ೨–೫೪.

ಧಾರಣ: ದೇಶಬಂಧಶ್ಚಿತ್ತಸ್ಯ ಧಾರಣಾ—ಸೂ. ೩–೧.

ಧ್ಯಾನ: ತತ್ರ ಪ್ರತ್ಯಯೈಕತಾನತಾ ಧ್ಯಾನಂ—ಸೂ. ೩–೨.

ಸಮಾಧಿ: ತದೇವಾರ್ಥ ಮಾತ್ರ ನಿರ್ಭಾಸಂ ಸ್ವರೂಪ ಶೂನ್ಯ ಮಿವ ಸಮಾಧಿ—ಸೂ. ೩–೩.

ಯಮ ನಿಯಮಾದಿಗಳು ಒಳಗೊಳ್ಳುವ ಅಂಗಗಳ ವ್ಯಾಖ್ಯೆಯನ್ನು ಪತಂಜಲಿ ಯೋಗ ಸೂತ್ರ ಭಾಷ್ಯಕಾರ ವ್ಯಾಸ ಕೊಟ್ಟಿದ್ದಾನೆ. ಅವುಗಳನ್ನೂ ತಿಳಿದುಕೊಳ್ಳುವುದು ಅಗತ್ಯವಾದುದು.

೧. ಯಮ: (ಅ) ಅಹಿಂಸೆ—'ತತ್ರಾಹಿಂಸಾ ಸರ್ವಥಾ ಸರ್ವದಾ ಸರ್ವಭೂತಾನಾಮನಭಿ ದ್ರೋಹಃ' (ಭಾಷ್ಯ–೩೦)

ಅರ್ಥಾತ್, ಯಾವ ರೀತಿಯಲ್ಲಿಯೂ, ಯಾವ ಕಾಲದಲ್ಲಿಯೂ ಯಾವ ಜೀವಿಗಳಿಗೂ ತೊಂದರೆಯನ್ನುಂಟು ಮಾಡದಿರುವುದೇ ಅಹಿಂಸೆ. ಇದು ನೇತ್ಯಾತ್ಮಕ ವ್ಯಾಖೆ, ಇತ್ಯಾತ್ಮಕವಾಗಿ ಹೇಳುವುದಾದರೆ 'ದಯವಿರಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ' ಎಂಬ ಬಸವೋಕ್ತಿಯನ್ನು ಉದಾಹರಿಸಬೇಕು; 'ತನ್ನಂತೆ ಪರರ ಬಗೆಯಬೇಕು' ಎಂಬ ಸರ್ವಜ್ಞ ವಚನವನ್ನು ಉದಾಹರಿಸಬೇಕು; 'ಆತ್ಮವತ್ಪ್ರತಿಕೂಲಾನಿ ನ ಪರೋಷಾಂ ಸಮಾಚರೇತ್' ಎಂಬ ಸುಭಾಷಿತವನ್ನು ಉದಾಹರಿಸಬೇಕು, ಜೈನ ಬೌದ್ಧ ಧರ್ಮಗಳ ಧ್ಯೇಯವಾಕ್ಯಗಳಾದ 'ಅಹಿಂಸಾ ಪರಮೋಧರ್ಮಃ' ಮತ್ತು 'ಸಮ್ಯಕ್ ಕರ್ಮಾಂತ'ಗಳನ್ನು ಉದಾಹರಿಸಬೇಕು. ಪಾತಂಜಲಿ ಏಕೇ ಜಾತಿ ದೇಶ ಕಾಲ ಸಮಯಾನವಚ್ಛಿನ್ನಾ ಸಾರ್ವಭೌಮ ಮಹಾವ್ರತಮ್–ಜಾತಿ, ದೇಶ, ಕಾಲ ಮತ್ತು ಸಮಯ ಇವುಗಳಿಂದ ಸೀಮಿತವಾಗದಿದ್ದರೆ 'ಅಹಿಂಸೆ ಸಾರ್ವಭೌಮ ಮಹಾವ್ರತ'ವೆಂದು ಹೇಳಿರುವುದು ಅತ್ಯಂತ ಸೂಕ್ತವಾದುದು.

ಸತ್ಯ(ಆ)–ಪಾತಂಜಲ ಯೋಗ ಸೂತ್ರಗಳ ವ್ಯಾಸಭಾಷ್ಯ ಸತ್ಯವನ್ನು ಹೀಗೆ ನಿರ್ವಚಿಸಿದೆ:

"ಸತ್ಯಂ ಯಥಾರ್ಥೇ ವಾಙ್ಮನಸಿ ಯಥಾ ದೃಷ್ಟಂ ಯಥಾ ಶ್ರುತಂ ವಾಙ್ಮನಶ್ಚೇತಿ" ಮಾತು ಮನಗಳಲ್ಲಿರುವ ಯಥಾರ್ಥತೆಯೇ ಸತ್ಯಃ ಕಂಡುದನ್ನು ಕಂಡಂತೆ, ಕೇಳಿದಂತೆ ಆಲೋಚಿಸುವುದು ಮತ್ತು ನುಡಿಯುವುದೇ ಸತ್ಯ. "ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮಾನಾಂ" ಎಂಬ ಸುಭಾಷಿತಾರ್ಥದಲ್ಲಿ ಸತ್ಯವನ್ನು ನುಡಿದರೆ ಸಾಲದು ಅದರಂತೆ ನಡೆಯುವುದೂ ಅಗತ್ಯವೆಂಬುದು ಸೂಚಿತವಾಗಿದೆ. 'ದಿಟತ ನುಡಿವುದು,

ನುಡಿದಂತೆ ನಡೆವುದು' ಎಂಬ ಬಸವ ಸೂತ್ರ ಸತ್ಯದ ಸ್ವರೂಪ ನಿರ್ಣಯಕ್ಕೆ ಸಹಕಾರಿ. 'ಸತ್ಯಂವದ' ಎಂಬುದು ಆದೇಶ.

ಆಸ್ತೇಯ(ಇ)–'ಕಳಬೇಡ' ಎನ್ನುವುದ ಅಣ್ಣನವರ ಒಂದನೆಯ ಆದೇಶ, ಕಳ್ಳತನ ವೆಂದರೆ ಇನ್ನೊಬ್ಬರ ವಸ್ತುವನ್ನು ಕದಿಯುವುದು ಮಾತ್ರವಲ್ಲ. ಶರಣರಿದರ ನೂರಾರು ಮುಖಗಳನ್ನು ತೋರಿಸಿದ್ದಾರೆ, 'ತುಡುಗುಣಿತನ' ಬಹುರೂಪಿಯಾದುದು. ಕೃತಿಚೌರ್ಯ, ಮಿಗುತಾಯ ಮೌಲ್ಯದ ಚೌರ್ಯ, ದುಡಿಯದೆ ಪಡೆಯುವುದು, ದೇವರ, ಧರ್ಮದ, ಮತದ, ಮಹಾಪುರುಷರ ಹೆಸರಿನಲ್ಲಿ ದಾನದಕ್ಷಿಣೆ–ಯಜ್ಞ–ಯಾಗ–ಯಾತ್ರೆ–ಅಭಿಷೇಕ ಇತ್ಯಾದಿ ದೊಡ್ಡ ಹೆಸರುಗಳಲ್ಲಿ ದೋಚುವುದು,–ಒಂದೇ ಎರಡೇ, ನೂರಾರು ಈ ಕಳ್ಳ ತನದ ಕಳ್ಳರೂಪಗಳು. ಇವೆಲ್ಲವುಗಳನ್ನು ತ್ಯಜಿಸುವುದು ಆಸ್ತೇಯ.

ಬ್ರಹ್ಮಚರ್ಯ (ಈ)–"ವೀರ್ಯಧಾರಣಂ ಬ್ರಹ್ಮಚರ್ಯಮ್" ಎನ್ನುತ್ತದೆ ಶಾಸ್ತ್ರ 'ಬ್ರಹ್ಮಚರ್ಯಂ ಗುಪ್ತೇಂದ್ರಿಯ ಸ್ಯೋಪಸ್ಥಸ್ಯ ಸಂಯಮಃ' ಎನ್ನುತ್ತದೆ ವ್ಯಾಸಭಾಷ್ಯ. ಬ್ರಹ್ಮಚರ್ಯದ ಅರ್ಥ ಇದಕ್ಕೂ ವಿಶಾಲವಾದುದು. ಸಂಯಮಶಕ್ತಿಯ ಸಂಪಾದನೆಯೇ ಬ್ರಹ್ಮಚರ್ಯದ ಗುರಿ, ಸಂಸಾರಿಯಾದವನೂ ಸಂಯಮದಿಂದ ವೀರ್ಯ ನಾಶವನ್ನು ತಪ್ಪಿಸಿಕೊಂಡು ವೀರ್ಯ ರಕ್ಷಣೆ ನೀಡುವ ಗ್ರಹಣಶಕ್ತಿ, ಸ್ಮರಣಶಕ್ತಿ, ಪ್ರಜ್ಞಾಶಕ್ತಿ, ಕಾರ್ಯಶಕ್ತಿಗಳ ಹೆಚ್ಚಳವನ್ನು ಪಡೆದುಕೊಳ್ಳಬಹುದು. ಸತಿಯಿದ್ದೂ ವ್ರತಿಯಾಗಿ ಬ್ರಹ್ಮಚಾರಿಗಳಾಗಿದ್ದ ಬಸವ–ಬಾಪೂಜಿಯಂಥವರು ಇದಕ್ಕೆ ನಿದರ್ಶನ. ಶ್ರೀ ಶಂಕರಾ ಚಾರ್ಯರ ಪ್ರಕಾರ ಸದ್ಗ್ರಂಥಗಳ ಅಧ್ಯಯನದಲ್ಲಿರುವವರು, ಬ್ರಹ್ಮವಸ್ತುವಿನ ಆಧಾರ ದಲ್ಲಿಯೇ ನಡೆಯುವವರು. 'ಅಹಂಬ್ರಹ್ಮಾಸ್ಮಿ' ಎಂಬ ಮಹಾಕಾವ್ಯದಲ್ಲಿ ಅಚಲ ನಿಷ್ಠೆ ಯುಳ್ಳವರು ಬ್ರಹ್ಮಚಾರಿಗಳೇ, ಆದರೂ ಹನ್ನೆರಡು ವರ್ಷ ನೈಷ್ಠಿಕ ಬ್ರಹ್ಮಚರ್ಯ ಅಗಾಧ ಶಕ್ತಿದಾಯಕವೆನ್ನುತ್ತಾರೆ ಸ್ವಾಮಿ ವಿವೇಕಾನಂದರು:

**"Power comes to him who observes unbroken Brahmacharya for a period of twelve years. Complete continence gives great intellectual and spiritual power".** ಮುಂದುವರಿದು ಅವರೇ ಬ್ರಹ್ಮಚರ್ಯದ ಸಾರವತ್ತಾದ ನಿರ್ವಚನವನ್ನು ನೀಡುತ್ತಾರೆ. **'Chastity in thought, word and deed always and in all conditions is what is called Brahmacharya. The Brahmacharin must be pure in thought, word and deed."**

ಅಪರಿಗ್ರಹ–(ಉ)ವಸ್ತುಗಳನ್ನು ಸಂಗ್ರಹಿಸುತ್ತ ಸಂಗ್ರಹಿಸುತ್ತ ವಸ್ತುಗಳ ಗುಲಾಮನಾಗು ವುದೇ ಪರಿಗ್ರಹ ಬುದ್ಧಿ,ಸಂಗ್ರಹಬುದ್ಧಿ(**Possessive impulse**)ಇದಕ್ಕೆ ದಾಸನಾದವನಿಗೆ ಜೀವನದ ಉನ್ನತ ಮೌಲ್ಯಗಳತ್ತ (**higher values of life**) ಲಕ್ಷ್ಯವೇ ಹೋಗು ವುದಿಲ್ಲ. ಯೋಗ ಸಾಧನೆ ದೂರವೇ ಉಳಿಯಿತು, ಸಭ್ಯತೆ ಸಂಸ್ಕೃತಿಗಳೂ ಅಪ್ರಿಯ.

ವಾಗುತ್ತವೆ ಅವನಿಗೆ. ಆದುದರಿಂದ ಈ ಸಂಗ್ರಹ ಬುದ್ಧಿಯ ಒಂಟೆ ಹಿಡಿತವನ್ನು ತಪ್ಪಿಸಿಕೊಳ್ಳಬೇಕು. ವ್ಯಾಸಭಾಷ್ಯದ ಈ ವ್ಯಾಖ್ಯಾನ ಮನನೀಯ: "ವಿಷಯಾಣಾ ಮಾರ್ಜನ ರಕ್ಷಣ ಕ್ಷಯ ಸಂಗ ಹಿಂಸಾದೋಷ ದರ್ಶನಾದಸ್ವೀಕರಣಮಪರಿಗ್ರಹ ಇತ್ಯೇತೇ ಯಯಾಃ" ಎಂದರೆ ವಸ್ತುಗಳ ಸಂಪಾದನೆಯು ಅವುಗಳ ರಕ್ಷಣೆ, ನಾಶ ಮತ್ತು ಅವುಗಳಲ್ಲಿ ಆಸಕ್ತಿ, ಅವುಗಳಿಗಾಗಿ ಹಿಂಸೆ ಇತ್ಯಾದಿ ದೋಷಗಳಿಂದ ಕೂಡಿರುವುದರಿಂದ ಅವುಗಳನ್ನು ಸ್ವೀಕರಿಸದಿರುವುದೇ ಅಪರಿಗ್ರಹ.

ಜೀವನಾಗತ್ಯದ ವಸ್ತುಗಳನ್ನೂ ನಿರಾಕರಿಸಬೇಕೆಂದು ಇದರ ಅರ್ಥವಲ್ಲ. ಬದುಕಲು ಅಪರಿಹಾರ್ಯವಾಗಿ ಬೇಕಾಗುವ ಗಾಳಿ ನೀರು ಬೆಳಕು ಅನ್ನ ಅರಿವೆ ಮುಂತಾದುವನ್ನು ನಿರಾಕರಿಸುವುದಾದರೂ ಹೇಗೆ? ಪತಂಜಲಿ ಪ್ರಣೀತ ಅಷ್ಟಾಂಗ ಯೋಗದಲ್ಲಿ (ಯೋಗ ಸೂತ್ರ ೩:೩೧) ಕಂಠಮೂಲಕ್ಕೆ ಸಮಾನಾಂತರವಾಗಿ ಮಿದುಳು ಬಳ್ಳಿಯಲ್ಲಿರುವ ವಿಶುದ್ಧಿ ಚಕ್ರದೆಡೆಗೆ ಕುಂಡಲಿನೀಶಕ್ತಿ ಹರಿದಾಗ ಆಹಾರವಿಲ್ಲದೆಯೆ ಸೂರ್ಯಶಕ್ತಿಯನ್ನು ನೇರವಾಗಿ ಆಹ್ವಾನಿಸಿ ಆಸ್ವಾನಿಸಿ ತನ್ನ ದೈಹಿಕ ಕ್ರಿಯೆಗೆ ಬೇಕಾಗುವ ಚೈತನ್ಯವನ್ನು ಪಡೆಯಬಹುದೆಂದು ಹೇಳಿದ್ದರೂ ಎಷ್ಟು ಜನರು ಆ ರೀತಿ ಆಹಾರವಿಲ್ಲದೆ ಇರಬಲ್ಲರು? ಯುಗಕ್ಕೊಬ್ಬರು, ಸಾಮಾನ್ಯ ಸಾಧಕರು 'ಯುಕ್ತಾಹಾರ–ವಿಹಾರ'ಗಳೊಡನೆಯೇ ಇರಬೇಕಾಗುತ್ತದೆ. ಆದುದರಿಂದ ತನ್ನ ಕನಿಷ್ಠ ಆವಶ್ಯಕತೆಗಳನ್ನು ಪೂರೈಸುವಷ್ಟು ನ್ಯೂನತಮ ವಸ್ತುಗಳನ್ನು ಪರಿಗ್ರಹಿಸಿದರೆ ಅಪರಿಗ್ರಹ ಭಂಗವಾಗುವುದಿಲ್ಲ. ದುರಾಶಾಪ್ರೇರಿತನಾಗಿ ಅಗತ್ಯಕ್ಕಿಂತ ಹೆಚ್ಚಿನ ವಸ್ತುಗಳನ್ನು ಸಂಗ್ರಹಿಸತೊಡಗಿದಾಗ ಅದು ತುಚ್ಛ ಪರಿಗ್ರಹವಾಗುತ್ತದೆ. ಶರಣರ ವಿಚಾರಧಾರೆ ಈ ತೊಡಕನ್ನು ಬಿಡಿಸುವಲ್ಲಿ ಸಫಲವಾಗಿದೆ. ತನ್ನ ಕನಿಷ್ಠತಸು ಅಗತ್ಯಗಳಿಗಿಂತಲೂ ಹೆಚ್ಚಾಗಿ ಸಂಗ್ರಹಿಸಿದರೆ ಆ ಮಿಗುತಾಯುವನ್ನು ದಾಸೋಹಕ್ಕೆ ಸಮರ್ಪಿಸಬೇಕು. ಈ ನಿಜ ಗುರುಸ್ವತಂತ್ರ ಸಿದ್ಧಲಿಂಗೇಶ್ವರಾಂಕಿತದ ವಚನ ಅದೆಷ್ಟು ಮನೋಜ್ಞ:

"ಬಂದುದ ಕಿರಿದು ಮಾಡಿ, ಬಾರದುದ ಹಿರಿದು ಮಾಡಿ,
ಆವಾಗಲೂ ಚಿಂತಿಸಿ ಬಳಲುತ್ತಿರಲೇಕೆ?
ಇರುಹೆ ಅರುದಿಂಗಳ ದವಸವ ಕೂಡಿ ಹಾಕುವಂತೆ,
ತಾ ಕಿರಿದಾದಡೂ ಆಸೆ ಹಿರಿದಾಯಿತ್ತು;
ಸ್ಥೂಲಕಾಯವಾದ ಮದಗಜಕ್ಕೇನು ಮುಂದಕ್ಕೆ ಬೇಕೆಂಬ ಆಸೆಯುಂಟೆ?
ಇಲ್ಲ. ಇರುಹೆಯು ಆನೆಯು ಅಂತರವ ನೋಡಿರಣ್ಣ;
ಅರಿದು ಸಲಹುವ ಶಿವನಿದ್ದ ಹಾಗೆ, ಬರಿದೆ ಆಸೆಯಿಂದಲೇಕೆ ಸಾವಿರಿ,
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನಾಧೀನವನರಿಯದೆ?"

ಆಶೆಯೇ ಪಾಶ, ಆಶೆಯೇ ದಾಸತ್ವ, ಆಶಾರಹಿತತ್ವವೇ ಈಶತ್ವ. ಈ ಆಶಾಪಾಶ ವನ್ನು ಹರಿಯಲು ಅಪರಿಗ್ರಹವ್ರತ ಅನಿವಾರ್ಯ.

**೨–ನಿಯಮ**: ಶೌಚ: (ಅ) ಇದು ಎರಡು ವಿಧ: ಒಂದು ಬಾಹ್ಯ ಶೌಚ: ಎರಡು, ಆಂತರಿಕ ಶೌಚ. ಬಾಹ್ಯಶೌಚಕ್ಕೆ ಮೃಜ್ಜಲಾದಿಗಳಿಂದ ಮಜ್ಜನ ಸಾಕು; ಆಂತರಿಕ ಶೌಚಕ್ಕೆ ಹಠಯೋಗ ಪ್ರದೀಪಿಕೆ (೨–೨೨) ಷಟ್ಕರ್ಮಗಳನ್ನು ಹೇಳಿದೆ:

"ಧೌತಿರ್ಬಸ್ತಿಸ್ತಥಾ ನೇತಿಸ್ತ್ರಾಟಕಂ ನೌಲಿಕಂ ತಥಾ;
ಕಪಾಲಭಾತಿಶ್ಚೈತಾನಿ ಷಟ್ಕರ್ಮಾಣಿ ಪ್ರಚಕ್ಷತೇ"

ಧೌತಿ, ಬಸ್ತಿ, ನೇತಿ, ತ್ರಾಟಕ, ನೌಲಿ, ಕಪಾಲ ಭಾತಿ– ಈ ಷಟ್ಕರ್ಮಗಳಿಂದ ಆಂತರಿಕ ಶುದ್ಧಿ, ಧೌತಿಯೆಂದರೆ ತೊಳೆಯುವುದು. ಇದು ನಾಲ್ಕು ವಿಧ, ಅಂತರ ಧೌತಿ ದಂತ ಧೌತಿ, ಹೃದ್ಧೌತಿ, ಮಲಶೋಧನ, ಅಂತರ ಧೌತಿಯಲ್ಲಿ ನಾಲ್ಕು ವಿಧಗಳು: ಪಾತಸಾರ ಧೌತಿ, ವಾರಿಸಾರ ಧೌತಿ, ವಹ್ನಿಸಾರ ಧೌತಿ, ಬಹಿಷ್ಕೃತ ಧೌತಿ. ದಂತ ಧೌತಿಯಲ್ಲಿಯೂ ನಾಲ್ಕು ಪ್ರಕಾರಗಳು: ದಂತಮೂಲ ಧೌತಿ, ಜಿಹ್ವಾಮೂಲಧೌತಿ, ಕರ್ಣಧೌತಿ, ಕಪಾಲರಂಧ್ರ ಧೌತಿ. ಹೃದೌಧತಿಯಲ್ಲಿ ಮೂರು ಪ್ರಕಾರಗಳು: ದಂಡ ಧೌತಿ, ವಮನ ಧೌತಿ, ವಾಸ ಧೌತಿ, ಮಲಶೋಧನ ಧೌತಿಯಲ್ಲಿ ಉಪ ವಿಭಾಗಗಳಿಲ್ಲ. ಇವೆಲ್ಲವುಗಳ ವಿವರಣೆ ಈ ಲೇಖನದ ವ್ಯಾಪ್ತಿಗೆ ಹೊರಗು.

ಬಸ್ತಿಯಲ್ಲಿ ಎರಡು ಬಗೆ; ಜಲಬಸ್ತಿ ಮತ್ತು ಸ್ಥಲಬಸ್ತಿ;
ನೇತಿಯಲ್ಲಿ ಮೂರು ಪ್ರಕಾರಗಳು; ಜಲನೇತಿ, ಕಪಾಲನೇತಿ, ಸೂತ್ರನೇತಿ;
ತ್ರಾಟಕದಲ್ಲಿ ಸೂರ್ಯತ್ರಾಟಕ, ಚಂದ್ರತ್ರಾಟಕ, ದೀಪತ್ರಾಟಕ, ಮರದೆಲೆಗಳ ತ್ರಾಟಕ, ವಾರಿತ್ರಾಟಕ, ದರ್ಪಣ ತ್ರಾಟಕ, ಮೂರ್ತಿ ತ್ರಾಟಕ, ಓಂ ತ್ರಾಟಕಗಳೆಂಬ ಪ್ರಕಾರಗಳು ನೌಲಿಯಲ್ಲಿ ಉಪಭೇದಗಳಿಲ್ಲ,
ಕಪಾಲಭಾತಿಯಲ್ಲಿ ವ್ಯುತ್ಕ್ರಮ, ನಾಮಕ್ರಮ, ಸೀತ್ಕ್ರಮವೆಂಬ ಮೂರು ಭೇದಗಳು. ಇವುಗಳ ವಿವರಣೆಗೂ ಸ್ಥಲ ಸಾಲದು.

ನಿಯಮದಲ್ಲಿ ಎರಡನೆಯದೇ **ಸಂತೋಷ**. ಸಂತೋಷ ಯಾರಿಗೆ ಬೇಡ? ಆದರೆ ಎಷ್ಟು ಜನರಿಗೆ ಸಿಕ್ಕುತ್ತದೆ, ದಕ್ಕುತ್ತದೆ ನಿಜವಾದ ಸಂತೋಷ? ಬಯಸುವುದು ಸಂತೋಷವನ್ನು, ಪಡೆಯುವುದು ವಿಷಯ ವ್ಯಾಕುಲತೆಯನ್ನು; ಬಯಸುವುದು ಸುಖವನ್ನು, ಪಡೆಯುವುದು ದುಃಖವನ್ನು; ಮಗ್ಗೆಯ ಮಾಯಿದೇವ ಪ್ರಭುವಿನ ಈ ಪದ್ಯ ಹೃದ್ಯ:

"ಸುಖಮಂ ಕಾಂಕ್ಷಿಪರೈಸೆ ಸರ್ವರುಮನೇಕಾಯಸದಿಂ ಯತ್ನದಿಂದ–
ದಖಿಲೋಪಾಯದಿನಲ್ಲಿದೂಹಿಪರೆ ನಾನಾ ಯುಕ್ತಿಯಿಂದುಃಖಮಂ?

ಸುಖಕೆಂದಿಟ್ಟ ಸೊಡರ್ ನಿಮಿರ್ದು ಮನೆಯಂ ಸುಟ್ಟಂದದಿಂ ದುಃಖಮಂ
ಸುಖಕಾಮತ್ವವೆ ಮಾಳ್ಪುದಂತದು ಭವತ್ಕೃತ್ಯಂ ಶಿವಾವಲ್ಲಭಾ;"

ಜಾರ್ಜ ಸಾಂತಾಯನರ ಈ ಮಾತುಗಳೂ ಮಾರ್ಮಿಕ: "Nothing happens to us as we would. We want peace and make war; we need science and obey the will to believe; we want art and flounder among whimsicalities; we believe in general comfort and equality and we strain every nerve to become millionairs".

ಆದಯ್ಯನ ಈ ವಚನ ನಿಜಸುಖೇಚ್ಛುಗಳಿಗೆ, ಸಂತೋಷಾರ್ಥಿಗಳಿಗೆ ದಾರಿ ದೀಪ:

"ಸಕಲೇಂದ್ರಿಯಂಗಳಲ್ಲಿ ವಿಕಾರಿಸುವ ಮನವ
ಸೆಳೆದು ನಿಂದಾತನೇ ಸುಖಿ;
ಪಂಚೇಂದ್ರಿಯಂಗಳಿಚ್ಛೆಯಲ್ಲಿ ಮನಂಗೊಂಡು
ಸುಳಿವಾತ ದುಃಖಿ;
ಮನ ಬಹಿರ್ಮುಖವಾಗಲು ಮಾಯಾ ಪ್ರಪಂಚಿ,
ಮನವಂತರ್ಮುಖಿಯಾದರೆ ಅವಿರಳಜ್ಞಾನಿ,
ಮನವು ಮಹದಲ್ಲಿ ನಿಂದಿರಲಾತ ಮುಕ್ತನು,
ಮನೋಲ್ಲಯವಾದರೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅಭೇದ್ಯನು.

ನಿಯಮದ ಮೂರನೆಯ ಅಂಗ–ತಪಸ್ಸು.

ತಪಸ್ಸು ವಿಶಾಲಾರ್ಥವುಳ್ಳುದು ತೈತರೀಯೋಪನಿಷತ್ತು ತಪಸ್ಸಿನ ಅರ್ಥವನ್ನಿಂತು ಕ್ರೋಢೀಕರಿಸಿದೆ: ಋತಂ ತಪಸ್ಸತ್ಯಂ ತಪಶ್ರುತಂ ತಪಶ್ಯಾತಂ ತಪೋ ದಮಸ್ತಪಶ್ಶಮಸ್ತಪೋ ದಾನಂ ತಪೋ ಭೂರ್ಭುವಸ್ಸುವರ್ಬ್ರಹ್ಮೈತ ತದುಪಾಶೀತತ್ತಪಃ" ಮನದಲ್ಲಿ ಧರ್ಮವಿರುದ್ಧವಾದ ವಿಷಯವನ್ನು ಯೋಚಿಸುವುದು, ಫಲಾಭಿಸಂಧಿ ಇಲ್ಲದೆ ಮಾಡುವ ಕರ್ಮವು, ಸತ್ಯವಾದ ನಡೆ–ನುಡಿ, ವೇದಾಂತಶ್ರವಣ, ಶಮದಮಾದಿ ಗುಣಯುಕ್ತನಾಗಿರುವುದು, ದಾನ, ದೇವತಾರಾಧನೆ, ಯಾಗಾದಿ ಕರ್ಮ,– ಇವೆಲ್ಲ ತಪಸ್ಸೇ; ಅಲ್ಲದೆ, ಸ್ವರ್ಗಮರ್ತ್ಯಪಾತಾಳ ಲೋಕಗಳೆಲ್ಲವೂ ಬ್ರಹ್ಮಸ್ವರೂಪವೆಂದು ಭಾವಿಸುವುದು, ಅರ್ಥಾತ್, ಅಕಾರ, ಉಕಾರ, ಮಕಾರ ಸ್ವರೂಪವಾದ ಓಂಕಾರದಿಂದ ಸಮಾಧಿಯನ್ನು ಸಾಧಿಸುವುದು ತಪಸ್ಸೆನಿಸುವುದು.

ತಪಸ್ಸಿನಲ್ಲಿ ಮೂರು ವಿಧ: ದೈಹಿಕ, ವಾಚಿಕ, ಮಾನಸಿಕ:

ಇವುಗಳ ಬಗ್ಗೆ ಅನ್ಯತ್ರ ಸಿಕ್ಕುವ ವಿವರಣೆಗಳೇನೇ ಇರಲಿ, ಶ್ರೀಮನ್ನಿಜಗುಣ ಶಿವಯೋಗಿಗಳವರ ಕೆಳಗಣ ಹಾಡು ಅತ್ಯಂತ ಬೋಧಪ್ರದ:

ಮಾಡಲಿಲ್ಲವೆ ತಪವ ಮಾಡಲಿಲ್ಲವೆ
ಕೂಡಿ ಸುಗುಣದೊಡನೆ ತಿಳಿದು

ನೋಡಿ ತ್ರಿವಿಧ ಕರಣದಲ್ಲಿ—ಮಾಡಲಿಲ್ಲವೆ ತಪವ
ಗುರುಭಜನೆ ಸುಕರ್ಮವೃತ್ತಿ
ಹರನ ಪೂಜೆ ಶರಣ ಸೇವೆ
ಪರಮ ಸಾತ್ವಿಕಂಗಳಿನಿತು
ನೆರೆದು ನೆಲಸಿ ತನುವಿನಲ್ಲಿ—ಮಾಡಲಿಲ್ಲವೆ ತಪವ....
ವಿನಯವನ್ಯ ಹಿತವತರ್ಕ
ವನಪ ಶಬ್ದವಚಲಿತಾರ್ಥ—
ವನಪು ಮಂತ್ರವಾಗಮಂಗ—
ಳಿನಿತು ವಿಡಿದು ವಚನದಲ್ಲಿ—ಮಾಡಲಿಲ್ಲವೆ ತಪವ....
ಶಮೆ ವಿವೇಕವಾತ್ಮ ವಿದ್ಯೆ
ದಮೆ ದಯಾ ವಿರಕ್ತಿ ಯೋಗ
ವಿಮಳರೂಪ ಶಂಭುಲಿಂಗ
ವಮರ್ದು ತೋರೆ ಸುಮನದಲ್ಲಿ—ಮಾಡಲಿಲ್ಲವೆ ತಪವ....

ನಿಯಮದ ನಾಲ್ಕನೆ ಅಂಗ **ಸ್ವಾಧ್ಯಾಯ**: 'ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಮ್'....(ಅಧ್ಯಯನ ಮತ್ತು ಪ್ರವಚನದಲ್ಲಿ ಪ್ರಮಾದ ಕೂಡದು)(ತೈತ್ತರೀಯೋಪನಿಷತ್).

ಆದರೆ ಯೋಗಕ್ಕೆ ಸಂಬಂಧಿಸಿದಂತೆ ಸ್ವಾಧ್ಯಾಯವೆಂದರೆ ಸಾಮಾನ್ಯ ಅಧ್ಯಯನವಲ್ಲ, ವಿಶೇಷ ಅಧ್ಯಯನ. ಇದನ್ನು ವ್ಯಾಸಭಾಷ್ಯ ವಿಶದೀಕರಿಸುತ್ತದೆ: "ಸ್ವಾಧ್ಯಾಯೋ ಮೋಕ್ಷ ಶಾಸ್ತ್ರಾಣಾಮಧ್ಯಯನಂ ಪ್ರಣವ ಜಪೋವಾ"— ಮೋಕ್ಷ ಶಾಸ್ತ್ರದ ಅಧ್ಯಯನ ಮತ್ತು ಓಂಕಾರ ಜಪವೇ ಸ್ವಾಧ್ಯಾಯ. ಮೋಕ್ಷಶಾಸ್ತ್ರವೆಂದರೆ ವೇದಾಂತ, ವೇದಾಂತವು ಉಪನಿಷತ್ ಪ್ರಣೀತವಾದುದು. ಇದು ಆತ್ಮ ತತ್ತ್ವದ ಉಪಾಸನೆಗೆ ಸಹಕಾರಿ. ಆತ್ಮದ ವ್ಯಾಖ್ಯೆಯನ್ನು ಶ್ರೀ ಶಂಕರಾಚಾರ್ಯರು, "ಯದಾಪ್ನೋತಿ ಯದಾದತ್ತೇಯಚ್ಚಾತ್ತಿ ವಿಷಯಾನಿಹ, ಯಚ್ಚಾಷ್ಯ ಸಂತತೋಭಾವಸ್ತಸ್ಮಾದುದಾತ್ಮೇತಿರ್ತ್ಯತೇ" ಎಂದು ತಮ್ಮ ಕಥೋಪನಿಷದ್ಭಾಷ್ಯದಲ್ಲಿ ಮಾಡಿದ್ದಾರೆ. ಎಂದರೆ, ಆತ್ಮವು ಸಮಸ್ತ ವಸ್ತುಗಳಲ್ಲಿ ವ್ಯಾಪಿಸಿದೆ: ಸಮಸ್ತ ವಸ್ತುಗಳನ್ನು ತನ್ನ ಸ್ವರೂಪದಲ್ಲಿ ಗ್ರಹಿಸುತ್ತದೆ; ಸ್ಥಿತಿ ಕಾಲಗಳಲ್ಲಿ ಅದು ವಿಷಯಗಳನ್ನು ಅನುಭವಿಸುತ್ತದೆ: ಇದರ ಇರುವಿಕೆ ನಿರಂತರವಾದುದು. ಇಂಥ ಆತ್ಮತತ್ತ್ವದ ಅನುಸಂಧಾನದಿಂದ ಸಾಲೋಕ್ಯ. ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯಗಳೆಂಬ ಚತುರ್ವಿಧ ಮೋಕ್ಷವನ್ನು ಪಡೆಯಬಹುದು. ಜೊತೆಗೆ ಓಂಕಾರ ಜಪ ನಡೆಯುತ್ತಿದ್ದರೆ ಇನ್ನೂ ಲೇಸು. ಯಾಕೆಂದರೆ 'ಓಂಮಿತಿ ಇದಂ ಸರ್ವಂ' 'ಓಂ ಇತಿ ಬ್ರಹ್ಮ' ಎಂದು ತೈತ್ತರೀಯೋಪನಿಷತ್ ಸಾರಿದರೆ, "ಓಂ ಇತ್ಯೇಕಾಕ್ಷರಂ ಬ್ರಹ್ಮ ಧ್ಯೇಯಾಸ್ಸರ್ವ ಮುಮುಕ್ಷುಭಿಃ" ಎಂದು ಧ್ಯಾನಬಿಂದೂಪನಿಷತ್ ಹೇಳುತ್ತದೆ. ಒಟ್ಟಿನಲ್ಲಿ

ಬ್ರಹ್ಮವಿದನಾಗಿ, ಬ್ರಹ್ಮೋಪಾಸಕನಾಗಿ ಬ್ರಹ್ಮನಲ್ಲಿ ಕೂಡಲು ಸ್ವಾಧ್ಯಾಯ ಸಹಾಯಕವಾಗುತ್ತದೆ.

ನಿಯಮದ ಐದನೆಯ ಅಂಶವೇ **ಈಶ್ವರ ಪ್ರಣಿಧಾನ.** ಪರಮಾತ್ಮನ ಧ್ಯಾನ, ಪರಮಾತ್ಮನಲ್ಲಿ ಭಕ್ತಿ–ಇದೇ ಈಶ್ವರ ಪ್ರಣಿಧಾನ. ಧ್ಯಾನದ ವಿಷಯ ಮುಂದೆ ಬರುತ್ತದೆ. ಇಲ್ಲಿ ಭಕ್ತಿಯೆಂದರೇನೆಂಬುದನ್ನು ತಿಳಿದುಕೊಂಡರೆ ಸಾಕು: ಇದು ನಿಜಗುಣ ಶಿವಯೋಗಿಗಳ ಪ್ರಸಿದ್ಧ ವ್ಯಾಖ್ಯೆ:

"ಆವ ಕಾಲದೊಳು ಬಳಿಕಾವ ದೇಶದೊಳು ಬೇ–
ರಾವ ವಸ್ತುವಿನೊಳೊಡಪರೆಯದತಿ ಮಮತೆ
ಆವ ಪರಿಯೊಳು ತನ್ನ ಮೇಲಿರ್ಪುದಂತೆ ಗುರು
ದೇವತೆಯೊಳನುರಾಗವಿಹುದೆ ನಿಜಭಕ್ತಿ"

(ಜೀವಿಗೆ ತನ್ನ ಮೇಲಿರುವ ಅತಿಮಮತೆ ಇನ್ನಾವ ವಸ್ತುವಿನ ಮೇಲೂ ಇರದು. ಅದೇ ಅತಿ ಮಮತೆಯನ್ನು ಗುರು–ದೇವತೆಗಳ ಮೇಲಿರಿಸುವುದೇ ಭಕ್ತಿ.) ಈ ಭಕ್ತಿ ಸಾಧ್ಯವಾಗಬೇಕಾದ ತಾನೂ, ದೇಹವೂ, ಕರ್ಮವೂ, ವಿಷಯುಗಳೂ, ಭೋಗೇತ್ಯಾದಿಗಳೂ, ಈ ಪ್ರಪಂಚವೆಲ್ಲವೂ ಈಶ್ವರನೇ, ಬೇರೆಯಲ್ಲವೆಂದು ತಿಳಿದು ಪ್ರೀತಿಪೂರ್ವಕವಾಗಿ ಅಭಿಮಾನಾದಿಗಳನ್ನುಳಿದು ಶ್ರೀಗುರು ಶಂಭುಲಿಂಗನನ್ನು ಧ್ಯಾನಿಸಬೇಕೆಂದು ಅವರೇ ಅನ್ಯತ್ರ (ಕೈವಲ್ಯ ಪದ್ಧತಿ: ನೀತಿಕ್ರಿಯಾಚರ್ಯಸ್ಥಲ) ಹೇಳಿದ್ದಾರೆ. 'ಪ್ರೇಮಪೂರ್ವಕಮನುಧ್ಯಾನಂ ಭಕ್ತಿರಿತ್ಯಭಿಧೀಯತೇ' ಎಂದು ನಾರದ ಭಕ್ತಿ ಸೂತ್ರದಲ್ಲಿ ಹೇಳಿದೆ. ಭಾಗವತ ಭಾವಪೂರ್ಣ ವ್ಯಾಖ್ಯೆಯನ್ನು ನೀಡಿದೆ: (೧೧–೧೦–೧೪)

"ಅಜಾತ ಪಕ್ಷಾ ಇವ ಮಾತರಂ ಖಗಾಃ ಸ್ತನ್ಯಂ ಯಥಾ ವತ್ಸರತಾಃ ಕ್ಷುಧಾರ್ತಾಃ ।
ಪ್ರಿಯಂ ಪ್ರಿಯೇವ ವ್ಯುಷಿತಂ ವಿಷಣ್ಣಾ ಮನೋಽರವಿಂದಾಕ್ಷದಿದೃಕ್ಷತೇ ತ್ವಾಮ್‌ ॥"

ಎಂದರೆ, ರೆಕ್ಕೆಯಿಲ್ಲದ ಹಕ್ಕಿಗಳು ತಮ್ಮ ತಾಯಿಯ ವಿಷಯದಲ್ಲಿ ಕಾತರಿಸುವಂತೆ, ಇಲ್ಲವೆ ಹಸಿವಿನಿಂದ ಬಸವಳಿದ ಕೂಸುಗಳು ತಮ್ಮ ತಾಯಿಯ ಹಾಲಿಗಾಗಿ ಹಂಬಲಿಸುವಂತೆ, ಅಥವಾ ವಿರಹಸಂತಪ್ತ ವನಿತೆಯು ತನ್ನ ಪ್ರಿಯತಮನಿಗಾಗಿ ಚಡಪಡಿಸುವಂತೆ, ಭಗವಂತನಿಗಾಗಿ ಹಾತೊರೆಯುವವನೇ ಭಕ್ತ.

ಭಕ್ತಿಯಲ್ಲಿ ಹಲವು ವಿಧಗಳನ್ನು ಹೇಳಲಾಗಿದೆ. ಭಕ್ತಿ ಮಾರ್ಗ ಜನಪ್ರಿಯವಾದುದರ ಸಂಕೇತವಿದು. ಗೌಣೀಭಕ್ತಿ, ಪರಾಭಕ್ತಿಯೆಂದೂ, ನವವಿಧಭಕ್ತಿಯೆಂದೂ, ಷಡ್ವಿಧಭಕ್ತಿಯೆಂದೂ ದಶವಿಧಭಕ್ತಿಯೆಂದೂ ಭಕ್ತಿಯ ವಿಧಗಳನ್ನು ವಿವರಿಸಲಾಗಿದ್ದರೆ ಭಕ್ತರಲ್ಲಿಯೂ ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂಬ ಭೇದಗಳನ್ನು ಹೇಳಿದೆ ಭಗವದ್ಗೀತೆ. ಅದರ 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಎಂಬ ಉಕ್ತಿ ಈಶ್ವರ ಪ್ರಣಿಧಾನದ ಸೂಕ್ತ ನಿರ್ವಚನವಾಗಿದೆ.

೩. **ಆಸನ**: 'ಸ್ಥಿರಸುಖಮಾಸನಂ' ಎಂಬುದು ಯೋಗಸೂತ್ರ. ಬಹಳ ಹೊತ್ತು ಸ್ಥಿರವಾಗಿ ಮತ್ತು ಸುಖವಾಗಿ ಕುಳಿತುಕೊಳ್ಳುವುದನ್ನು ಯೋಗಸಾಧನೆ ಮಾಡು ವವರು ಕಲಿಯಬೇಕಾಗುತ್ತದೆ. ಕಲಿಯದಿದ್ದರೆ ಧ್ಯಾನ ಧಾರಣ ಸಮಾಧಿಗಳು ಸಿದ್ಧಿಸುವು ದಿಲ್ಲ. ಆಸನ ಸಿದ್ಧಿಯಿಂದ ಬೇರೆ ಲಾಭಗಳೂ ಇವೆ–ಶರೀರ ಶುದ್ಧಿ, ಸ್ವಾಸ್ಥ್ಯವೃದ್ಧಿಗಳೇ ಅವು. ಈ ಆಸನಗಳ ಸಂಖ್ಯೆ ಇಂತಿಷ್ಟೇ ಎಂದು ನಿರ್ಧರವಾದಂತಿಲ್ಲ. ಯೋಗ ಶಾಸ್ತ್ರದಲ್ಲಿ ಅವು ೮೪ ಲಕ್ಷವೆಂದು ಹೇಳಲಾಗಿದೆ. ನಿಜಗುಣ ಶಿವಯೋಗಿಗಳು ತಮ್ಮ 'ವಿವೇಕ ಚಿಂತಾಮಣಿ'ಯಲ್ಲಿ ಅವುಗಳನ್ನು ೮೪ ಲಕ್ಷಗಳಿಂದ ೮೪ಕ್ಕೆ ಇಳಿಸಿದ್ದಾರೆ. ಆದಯ್ಯನು ಹೆಸರಿಸಿರುವ ಆಸನಗಳು ಇವು: "ಪದ್ಮಾಸನ, ಸಿದ್ಧಾಸನ, ಬದ್ಧಾಸನ, ವಜ್ರಾಸನ, ಮಯೂರಾಸನ, ಗರುಡಾಸನ, ಅರ್ಧಾಸನ, ಕುಕ್ಕುಟಾಸನ, ಮಂಡೂಕಾಸನ, ಗೋಮುಖಾಸನ, ಮತ್ಸ್ಯಾಸನ, ವೀರಾಸನ, ಸ್ಮಶಾನಾಸನ, ಹಸ್ತಾಸನ, ಮಸ್ತಕಾಸನ, ಕುಠಾರಾಸನ, ಸಿಂಹಾಸನ, ಮಧ್ಯಲವಣೆ, ಶಿರೋ ಲವಣೆಯೊಳಗಾದ ಆಸನ ಬಂಧಂ ಗಳಿಂದಾಚರಿಸುವುದು ಆಸನಯೋಗ. ಇವೆಲ್ಲ ರಾಜಯೋಗ ಸಾಧಕನಿಗೆ ಅವಶ್ಯಕವಲ್ಲ: ಸುಖಾಸನ, ಪದ್ಮಾಸನಗಳು ಸಾಕು ಎಂದು ಹೇಳಲಾಗಿದೆ.

೪. **ಪ್ರಾಣಾಯಾಮ**: "ತಸ್ಮಿನ್ ಸತಿಶ್ವಾಸಪ್ರಶ್ವಾಸ ಸಯೋರ್ಗತಿ ವಿಚ್ಛೇದಃ ಪ್ರಾಣಾಯಾಮಃ" ಎಂಬುದು ಯೋಗಸೂತ್ರ. ಶ್ವಾಸಪ್ರಶ್ವಾಸನಗಳನ್ನು ತಡೆದು ಪ್ರಾಣ ಶಕ್ತಿಯನ್ನು ಅಂಕಿತದಲ್ಲಿಟ್ಟುಕೊಳ್ಳುವುದು ಪ್ರಾಣಾಯಾಮ. ನಿಶ್ಚಿತ ಅವಧಿಯವರೆಗೆ ಉಸಿರನ್ನು ಒಳಗೆಳೆದುಕೊಳ್ಳುವುದು 'ಪೂರಕ.' ಒಳಗೆಳೆದುಕೊಂಡ ಉಸಿರನ್ನು ನಿಶ್ಚಿತ ಅವಧಿಯವರೆಗೆ ಒಳಗೇ ಹಿಡಿದಿಟ್ಟುಕೊಳ್ಳುವುದು 'ಕುಂಭಕ'; ಆಮೇಲೆ ನಿಯಮದಿಂದ ನಿಶ್ಚಿತ ಅವಧಿಯಲ್ಲಿ ಅದನ್ನು ಹೊರಬಿಡುವುದು 'ರೇಚಕ'. ಮೂಗಿನ ಒಂದು ದ್ವಾರ ದಿಂದ ಉಸಿರೆಳೆದುಕೊಂಡು ಇನ್ನೊಂದು ದ್ವಾರದಿಂದ ನಿಯಮಿತವಾಗಿ ಬಿಡುವುದೂ ಇದೆ. ಪ್ರಾಣಾಯಾಮದಲ್ಲಿ ಬಾಹ್ಯವೃತ್ತಿ, ಅಭ್ಯಂತರವೃತ್ತಿ, ಸ್ತಂಭವೃತ್ತಿ ಮತ್ತು ತುರೀಯ ವೃತ್ತಿ ಎಂಬ ನಾಲ್ಕು ಪ್ರಬೇಧಗಳುಂಟು. ಇವೆಲ್ಲ ಗುರುಮುಖದಿಂದಲೇ ಕಲಿಯಬೇಕಾ ದುವು. ಪ್ರಾಣಾಯಾಮದಿಂದ ರಕ್ತ ಶುದ್ಧಿ, ಆರೋಗ್ಯ ವೃದ್ಧಿ, ಮಾನಸಿಕ ಪರಿಶುದ್ಧಿ, ಸ್ಥಿರತೆ ಸಮತೆಗಳು ಸಾಧಿತವಾಗುವುದರಲ್ಲಿ ಸಂದೇಹವಿಲ್ಲ.

೫. **ಪ್ರತ್ಯಾಹಾರ**: ಪಂಚೇಂದ್ರಿಯಗಳಲ್ಲಿ ಒಂದಕ್ಕೆ ವಶವಾದರೆ ಸಾಕು, ಬಂಧನ ಬಿಟ್ಟದ್ದಲ್ಲ, ಅಳಿವು ತಪ್ಪುವುದಿಲ್ಲ. ಪ್ರಭುದೇವರ ಈ ವಚನ ಅತ್ಯಂತ ಮನೋಜ್ಞ:

"ಕರಿಯು ಸ್ಪರ್ಶನೇಂದ್ರಿಯದಿಂದ ಬಂಧನವಡೆದಳಿಯಿತ್ತು;
ಪತಂಗನು ರೂಪೇಂದ್ರಿಯದಿಂದ ಬಂಧನವಡೆದಳಿಯಿತ್ತು:
ಭೃಂಗನು ಗಂಧೇಂದ್ರಿಯದಿಂದ ಬಂಧನವಡೆದಳಿಯಿತ್ತು;

ಕುರಂಗನು ಶಬ್ದೇಂದ್ರಿಯದಿಂದ ಬಂಧನವಡೆದಳಿಯಿತ್ತು;
ಮತ್ಸ್ಯವು ರಸನೇಂದ್ರಿಯದಿಂದ ಬಂಧನವಡೆದಳಿಯಿತ್ತು."

ಇಂತೀ ಒಂದೊಂದು ಇಂದ್ರಿಯೋದ್ರೇಕದಿಂದ ಒಂದೊಂದು ಪ್ರಾಣಿಯ ಪ್ರಳಯವಾಯಿತ್ತು; ಪಂಚೇಂದ್ರಿಯಂಗಳ ಒಂದು ಘಟದಲ್ಲಿ ತಾಳಿದ ಮನುಷ್ಯ ಪ್ರಾಣಿಗಳಿಗೆ

"ಮರೆವೆ ಎಡೆಗೊಂಡು, ದೇಹಮೋಹಭ್ರಾಂತು ಮುಸುಕಿ,
ಮಾಯೆಯ ಬಾಯ ತುತ್ತಹುದು ಚೋದ್ಯವೇನು ಹೇಳಾ, ಗುಹೇಶ್ವರ?"

ಈ ಪಂಚೇಂದ್ರಿಯಗಳು ತರುವ ಅನಾಹುತಗಳನ್ನು ತಪ್ಪಿಸಿಕೊಳ್ಳುವ ಉಪಾಯವೊಂದಿದೆ. ಈ ಪಂಚೇಂದ್ರಿಯಗಳೆಂಬ ದೇಹ ರಥದ ಹಯುಗಳನ್ನು ಕುಣಿಸುವುದು, ಓಡಿಸುವುದು ಮನಸ್ಸು. ಆದುದರಿಂದ ಮನಸ್ಸು ಬಹಿರ್ವಿಷಯಗಳತ್ತ ಹರಿಯದಂತೆ ಹಿಡಿದಿಟ್ಟು ಬಿಟ್ಟರೆ ಪಂಚೇಂದ್ರಿಯಗಳ ಚೇಷ್ಟೆಗಳು ತಾವಾಗಿ ನಿಲ್ಲುತ್ತವೆ. ಹೀಗೆ ವಿಷಯ ಪರಾನ್ಮುಖವಾದ ಮನಸ್ಸನ್ನು ಪರವಸ್ತುವಿನತ್ತ ಸೆಳೆಯುವ ಸಾಧನವೇ ಪ್ರತ್ಯಾಹಾರ. ಇದು ಸಾಧಿಸಿದರೆ ಮಾತ್ರ ಮುಂದಿನ ಧಾರಣ: ಧ್ಯಾನ ಸಮಾಧಿಗಳು ಸಾಧ್ಯ.

೬. **ಧಾರಣಾ:** 'ದೇಶಬಂಧಶ್ಚಿತ್ತಸ್ಯ ಧಾರಣಾ–ಇದು ಯೋಗ ಸೂತ್ರ. ಚಿತ್ತವನ್ನು ನಿಶ್ಚಲವಾಗಿ ಅಪೇಕ್ಷಿತ ವಸ್ತು, ವಿಚಾರ, ಸ್ಥಳ, ಆಕಾರಾದಿಗಳ ಮೇಲೆ ನೆಲೆಯಾಗಿ ನಿಲ್ಲಿಸುವುದೇ ಧಾರಣಾ. ಪ್ರಾಣಾಯಾಮದಿಂದ ಉಸಿರಿನ ಮೇಲೆ ಹಿಡಿತ, ಪ್ರತ್ಯಾಹಾರದಿಂದ ಇಂದ್ರಿಯಗಳ ಮೇಲೆ ನಿಯಂತ್ರಣ, ಧಾರಣೆಯಿಂದ ಉಪಾಸಿತ ವಸ್ತುವಿನಲ್ಲಿ ಚಿತ್ತದ ಕೇಂದ್ರೀಕರಣ. ಇದು ಮುಂದಿನ ಮೆಟ್ಟಲಾದ ಧ್ಯಾನಕ್ಕೆ ಅತ್ಯಾವಶ್ಯಕ.

೭. **ಧ್ಯಾನ:** 'ತತ್ರ ಪ್ರತ್ಯಯೇಕತಾನತಾ ಧ್ಯಾನಮ್'–ಇದು ಪತಂಜಲಿಯ ಸೂತ್ರ. ಮನಸ್ಸನ್ನು ಧ್ಯೇಯುವಸ್ತುವಿನಲ್ಲಿ ಪೂರ್ಣವಾಗಿ ನಿಲ್ಲಿಸುವುದೇ ಧ್ಯಾನ. ಧ್ಯಾನಿಸುವವ, ಧ್ಯಾನಿಸುವ ವಸ್ತು–ಎರಡರಲ್ಲೂ ಭಿನ್ನತೆಯೇ ಉಳಿಯುವುದಿಲ್ಲ. ಇಂದ್ರಿಯಗಳು ಮನಸ್ಸು ಮೊದಲೇ ನಿಗ್ರಹಿಸಲ್ಪಟ್ಟಿವೆಯಾಗಿ ಧ್ಯಾನಜ್ಯೋತಿ ನಿರ್ವಾತ ಸ್ಥಳದಲ್ಲಿ ನಿಶ್ಚಲವಾಗಿ ಉರಿಯುವ ದೀಪದಂತೆ ಅವಿಚಲಿತವಾಗಿ ಬೆಳಗುತ್ತದೆ. ದೇಹಭಾವವಳಿದು, ಜೀವಭಾವವಳಿದು, ಶಿವಭಾವ ಮೂಡುತ್ತದೆ.

೮. **ಸಮಾಧಿ:** ಇದು ಯೋಗ ಸಾಧನೆಯ ಅಂತಿಮ ಫಲ. ಇಲ್ಲಿ ಸಾಧಕ ತನ್ನನ್ನು ತಾನೇ ಮರೆತು, ಧ್ಯೇಯ ವಸ್ತುವಿನಲ್ಲಿ ತನ್ಮಯನಾಗಿ, ಯೋಗ ಸೂತ್ರದಲ್ಲಿ ವಿವರಿಸಿದಂತೆ, 'ತದೇವಾರ್ಥ ಮಾತ್ರ ನಿರ್ಭಾಸಂ ಸ್ವಸ್ವರೂಪ ಶೂನ್ಯಮಿವ ಸಮಾಧಿಃ' ಆಗಿ, ನಿಜತತ್ವದಲ್ಲಿ ಬೆರೆತು ಹೋಗುತ್ತಾನೆ. ಇಲ್ಲಿಯೂ ಸಂಪ್ರಜ್ಞಾತ ಸಮಾಧಿ, ಅಸಂಪ್ರಜ್ಞಾತ ಸಮಾಧಿಯೆಂಬ ಎರಡು ಪ್ರಕಾರಗಳಿವೆ. ಸಂಪ್ರಜ್ಞಾತ ಸಮಾಧಿಯಲ್ಲಿ ಪ್ರಜ್ಞೆ,ಜ್ಞ ಉಳಿದಿರುತ್ತದೆ; ಅಸಂಪ್ರಜ್ಞಾತ ಸಮಾಧಿಯಲ್ಲಿ ಪ್ರಜ್ಞೆ ಅಳಿದಿರುತ್ತದೆ.

ನಿಜದಲ್ಲಿ ನಿಂತುದರ ನೆನಹು ಉಳಿದರೆ ಅದು ಸಂಪ್ರಜ್ಞಾತ 'ಸಮಾಧಿ' ನೆನಹು ಅಳಿದರೆ ಅದನ್ನು ಅಸಂಪ್ರಜ್ಞಾತ ಸಮಾಧಿ. ಅಲ್ಲಮ ಪ್ರಭುಗಳ ಈ ವಚನ ಇಲ್ಲಿ ಪ್ರಸ್ತುತ:

"ಅಷ್ಟಾಂಗ ಯೋಗದಲ್ಲಿ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧಾನಧಾರಣ ಸಮಾಧಿಯೆಂದು ಎರಡು ಯೋಗ ಉಂಟು ಅಲ್ಲಿ: ಅಳಿದು ಕೂಡುವು ದೊಂದು ಯೋಗ; ಅಳಿಯದೇ ಕೂಡುವುದೊಂದು ಯೋಗ; ಈ ಎರಡು ಯೋಗ ದೊಳಗೆ ಅಳಿಯದೆ ಕೂಡುವ ಯೋಗವರಿದು ಕಾಣಾ, ಗುಹೇಶ್ವರಾ." (ಅ. ವ. ಚಂ. ೨೫೭).

ಶಿವಯೋಗದ ವಿಷಯ ಬಂದಾಗ ಈ ಅಳಿಯದೆ ಕೂಡುವ ಯೋಗದ ವಿಶದೀ ಕರಣವಾಗುತ್ತದೆ. ಈಗ, ಸಮಾಧಿ ಸ್ಥಿತಿಯ ಬಗ್ಗೆ ಇನ್ನಷ್ಟು ತಿಳಿದುಕೊಳ್ಳೋಣ. ಸಮಾಧಿ ಸ್ಥಿತಿಯಲ್ಲಿ ಧ್ಯಾನದ ವಿಷಯ, ಧ್ಯಾನಕ್ಕೆ ಸಾಧನವಾದ ಮನಸ್ಸು, ಧ್ಯಾನವೆಂಬ ಕ್ರಿಯೆ ಇವು ಮೂರೂ ಇಲ್ಲವಾಗಿ ಆತ್ಮವು ತನ್ನ ಆನಂದದಲ್ಲಿ ತನ್ಮಯವಾಗಿರುತ್ತದೆ. ಈ ಸ್ಥಿತಿಯನ್ನೇ ಕೈವಲ್ಯವೆಂದು ಕರೆಯಲಾಗಿದೆ. ಈ ಸ್ಥಿತಿಯಲ್ಲಿ ಸಾಧಕನು ತಾನು ಶರೀರ ಮಾತ್ರವಲ್ಲ, ಜೀವಿ ಮಾತ್ರವಲ್ಲ, ಅನಂತಶಕ್ತಿ ಸಮೇತವಾದ ಅಮರ ಆತ್ಮ, ಶರೀರ–ಕಾಲ–ನಿಮಿತ್ತ–ತ್ರಿಗುಣ–ಇತ್ಯಾದಿಗಳಿಂದ ಅತೀತನಾಗಿರುವೆನೆಂಬುದನ್ನು ಅನುಭವಿಸು ತ್ತಾನೆ. ಇದು ಸದೇಹ ಕೈವಲ್ಯ, ಜೀವನ್ಮುಕ್ತಿ. ಆದಯ್ಯನಿದನ್ನು ತನ್ನದೇ ಆದ ರೀತಿ ಯಲ್ಲಿ ಬಣ್ಣಿಸಿದ್ದಾನೆ: "ಅಪ್ರತಿಭಾ ಸ್ಥಾನದಿಂದುತ್ತರ ವಿಭಾಗೆಯ ಅಜಪೆಯಿಂದತ್ತಣ ಚಿತ್ರಭೆಯಿಂದುಜ್ವಳ ತೇಜ ಸ್ವಯಂ ಪ್ರಕಾಶ ದಿವ್ಯ ತೇಜದಿಂದೊಪ್ಪಿಪ್ಪ ಮಹಾಘನ ಪರವಸ್ತುವನಿದಿರಿಟ್ಟೀಕಿಸಿ, ಆ ಮಹಾಪ್ರಕಾಶದಲ್ಲಿ ಒಡಗೂಡಿ, ತಾನು ತಾನಾಗಿ, ಜಗದ್ವಿ ಹರಣೆಯನೇನೆಂದರಿಯದ ಪರಮಕಾಷ್ಠೆಯ ಸಮಾಧಿಯಲ್ಲಿಪ್ಪುದು ಸಮಾಧಿಯೋಗಃ"

ಇದಿಷ್ಟು ಅಷ್ಟಾಂಗ ಯೋಗದ ಸಾಮಾನ್ಯ ಸ್ವರೂಪ. ಪ್ರಸ್ಥಾನತ್ರಯಿಗಳನ್ನೇ ಆಧರಿಸಿ ವಿವಿಧ ದರ್ಶನಗಳು ಮೈದೋರಿದಂತೆ ಅಷ್ಟಾಂಗಯೋಗವನ್ನೇ ಆಧರಿಸಿ ವಿವಿಧ ಯೋಗ ದರ್ಶನಗಳು ಉದ್ಭವಿಸಿದುವು. ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ ಇವು ಪ್ರಾರಂಭದಿಂದಲೂ ಪ್ರಚಲಿತವಿರುವ ಯೋಗಪ್ರಕಾರಗಳು. ಇವಲ್ಲದೆ ಅಷ್ಟಾಂಗ ಯೋಗ, ಪಂಚಯೋಗ, ಶಾಂಭವೀಯೋಗ, ಖೇಚರಿ, ಷಾಣ್ಮುಖೀ, ಬಹು ಮುದ್ರೆಗಳೆಂಬ ಯೋಗ ಪ್ರಕಾರಗಳನ್ನು ಸಿದ್ಧರಾಮನೂ. (ವಚನ–೧೦೪೩) ಹಠಯೋಗ, ಅಂಬಿಕಾಯೋಗ, ಆತ್ಮಯೋಗ, ಸಿದ್ಧಯೋಗ, ಪಿಶಾಚಯೋಗ, ಅಷ್ಟಾಂಗಯೋಗವೆಂಬ ಯೋಗ ಪ್ರಕಾರಗಳನ್ನು ಆದಯ್ಯನೂ (ಸ.ಪ್ರ.ವ. ಭಾಗ–೨) ಉಲ್ಲೇಖಿಸುತ್ತಾರೆ. ಕರ್ಮ ಯೋಗ, ಜ್ಞಾನಯೋಗ, ಭಕ್ತಿಯೋಗಗಳೂ ಬೆಳೆದು ನಿಂತುವು. ಬಹುಶಃ ಇವುಗಳಿಗಿಂತ ಹಿಂದಿನದಾದ ಶಿವಯೋಗವೂ ರಾಜಯೋಗಾಭಿನ್ನವಾಗಿ ಪ್ರವರ್ಧಿಸಿತು. ಇವುಗಳ ಬಗ್ಗೆ ಬರೆಯುವ ಮುನ್ನ ಒಂದು ವಿಷಯವನ್ನು ಪ್ರಸ್ತಾಪಿಸಲೇಬೇಕು.

ವೇದಾಂತದ ಬಳಿವಿಡಿದು ದುರುಳವೇದಾಂತಿಗಳು ಹುಟ್ಟಿದಂತೆ, ಧರ್ಮಮಾರ್ಗದ ಬಳಿವಿಡಿದು ವಾಮಮಾರ್ಗಿಗಳು ಹುಟ್ಟಿದಂತೆ ಯೋಗಮಾರ್ಗದ ಬಳಿವಿಡಿದು ಅಣಿಮಾದಿ ಅಷ್ಟಸಿದ್ಧಿಗಳ ಬೆನ್ನು ಹತ್ತಿದವರೂ ಹುಟ್ಟಿದರು. ಯೋಗದ ವಿಕೃತ ರೂಪಗಳು ಕಾಣಿಸಿಕೊಂಡು ಯೋಗವು ಶೋಷಣೆಯ ಸಾಧನವಾಗಿ ಪರಿಣಮಿಸಿತು. ಇಂಥ ಯೋಗಮಾರ್ಗಗಳನ್ನು ಶರಣರು ನಿಸ್ಸಂಕೋಚವಾಗಿ ಖಂಡಿಸಿದ್ದಾರೆ. ಇದು ಅಲ್ಲಮಪ್ರಭುಗಳ ಅಧಿಕಾರವಾಣಿ:

"ಹಠಯೋಗ ಲಂಬಿತೆಯೆಂದು, ಆಕುಂಚನವೆಂದು, ವಜ್ರಿಅಮರಿಯ ಕಲ್ಪವೆಂದು ಮಲಮೂತ್ರಂಗಳಂ ಸೇವಿಸುತ, ಇದು ಪೂರ್ವನವನಾಥ ಸಿದ್ಧರ ಮತ್ತೋಕ್ತವೆಂದು ಕಾಪಾಲಿಕಾಚಾರಣೆಯನಾಚರಿಸುವವರಲ್ಲಿ ಶರಣರು; ಮೇಣು, ತಲೆಯೊಳಗಣ ವಾತ ಪಿತ್ತ ಶ್ಲೇಷ್ಮವ ತೆಗೆದು ಅಮೃತವೆಂದು ಬಿಸುಗುದೃಷ್ಟವ ತೋರುವರಲ್ಲ ಶರಣರು; ದ್ರವಿಸುವ ದೇಹದಲ್ಲಿ ಅಪ್ಪುವಿನ ಫಲರಸಕ್ಷೀರ ಮೊದಲಾದುವ ಸೇವಿಸುತ್ತ ಅನ್ನವ ಬಿಟ್ಟೆವೆಂಬ ಭೂತಚೇಷ್ಟಕರಲ್ಲಿ ಶರಣರು. ಇವೆಲ್ಲವು ಕಾಕುಸಟೆ ಭ್ರಾಂತೆಂದು ತಿಳಿದು ನಿರ್ಧರನಿಜದಿ ನಿಂದರು. ಗುಹೇಶ್ವರ, ನಿಮ್ಮ ಶರಣರು ಅಗ್ರಗಣ್ಯರು."

ಅದು ಅಲ್ಲಮಪ್ರಭುಗಳ ಅಪರಾವತಾರಿಗಳೆನಿಸಿದ ತೋಂಟದ ಸಿದ್ಧಲಿಂಗೇಶ್ವರರ ವಿವೇಕವಾಣಿ;

"ಅಂಬಿಕಾ ಯೋಗಳ ಡೊಂಬರಿಗೆ ಸರಿಯೆಂಬೆ;
ಹಠಯೋಗಿಗಳ ಆಟಮಟಕಾರರೆಂಬೆ;
ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂಬೆ;
ಪವನಯೋಗಿಗಳ ಪ್ರಪಂಚಿಗಳೆಂಬೆ;
ಲಯಯೋಗಿಗಳ ನಾಯಿಗಿಂತ ಕಡೆಯೆಂಬೆ,
ಅದೇನು ಕಾರಣವೆಂದಡೆ:
ಲಯಯೋಗವೆಂಬುದು ನಾನಾದರ್ಶನದಲ್ಲಿ
ವರ್ತಿಸುವುದಾಗಿ ಆದಶಿವಯೋಗಿಗಳೊಲ್ಲರು.
ಮಂತ್ರ ಯೋಗವೆಂಬುದು ಸರ್ವರನ್ನು ಸಂದೇಹಕ್ಕಿಕ್ಕಿ ಕೊಲುತ್ತಿಪ್ಪುದು.
ಅದೇನು ಕಾರಣವೆಂದಡೆ:
ಮಂತ್ರವೇ ಲಿಂಗ, ಲಿಂಗವೇ ಮಂತ್ರ ವೆಂದರಿದು
ಲಿಂಗನೆನಹ ಸಂಬಂಧಿಸಿಕೊಳಲರಿಯದೆ
ಲಿಂಗವಿರಹಿತವಾಗಿ ಮಾಡುತ್ತಿಪ್ಪರಾಗಿ
ಆದ ಅಂಗಲಿಂಗ ಸಂಬಂಧಿಗಳು ಮೆಚ್ಚರು ನೋಡಾ;

ಅದೇನು ಕಾರಣವೆಂದಡೆ:
ಕೆಲವು ಶೈವರುಗಳು ಮಾಡುವರಾಗಿ
ರಾಜಯೋಗವೆಂಬುದು ಗಾಜುಗೋಜು ನೋಡಾ;
ಅದನು ಲಿಂಗವಿರಹಿತವಾಗಿ ಜ್ಞಾತೃಜ್ಞಾನಜ್ಞೇಯವೊಂದಾದಲ್ಲಿಯೇ
ಯೋಗವೆನುತಿಪ್ಪರಾಗಿ ಇವು ಒಂದೂ ಲಿಂಗಾಂಗದ ಯೋಗದ ಹೆಜ್ಜೆಯಲ್ಲ.
ಅದು ಕಾರಣ ಲಿಂಗನಿಷ್ಠರು ವೆಚ್ಚರು. ಅದೇನು ಕಾರಣವೆಂದರೆ
ಲಿಂಗವ ತೆಗೆದಡೆ ಲಿಂಗದೊಡನೆ ಪ್ರಾಣಹೋಗದಾಗಿ
ಆವೆಲ್ಲಿಯ ಯೋಗವೈ ಭ್ರಾಂತು ಯೋಗ;
ಇದು ಕಾರಣ ಲಿಂಗ ಪ್ರಾಣಿಗಳು ಪ್ರಾಣಲಿಂಗ ಸಂಬಂಧಿಗಳು
ಪ್ರಸಾದ ಮುಕ್ತರು ಈ ಮೂರು ಪ್ರಕಾರದಲ್ಲಿ ಕೂಡುತಿಪ್ಪರು ಶಿವಯೋಗಿಗಳು
ಇದು ಕಾರಣ, ನಿಮ್ಮ ಶರಣರು ಸ್ವಾನುಭಾವಜ್ಞಾನಶುದ್ಧ ಶಿವಯೋಗದಲ್ಲಿ
ಪ್ಪರು ಕಾಣಾ, ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ;

ಶಿವಶರಣರ ಒಲವು ಶಿವಯೋಗದತ್ತ ಎಂಬುದು ಸಿದ್ಧವಾಯಿತು. ಈ ಶಿವ ಯೋಗದ ಸ್ವರೂಪವೇನು? ಉಪನಿಷತ್ ಪ್ರಣೀತಯೋಗ ಆಗಮೋಕ್ತ ಶಿವಯೋಗವೇ? ಇಪ್ಪತ್ತು ಉಪನಿಷತ್ತುಗಳಲ್ಲಿ–ಎಂದರೆ ಅದ್ವಯ ತಾರಕೋಡ ನಿಷತ್, ಅಮೃತನಾದೋಪ ನಿಷತ್, ಅಮೃತ ಬಿಂದೂಪನಿಷತ್, ಕುರಿಕೋಪನಿಷತ್, ತೇಜೋ ಬಿಂದೂಪನಿಷತ್, ತ್ರಿಶಿಖಿ ಬ್ರಾಹ್ಮಣೋಪನಿಷತ್, ಜಾಬಾಲ ದರ್ಶನೋಪನಿಷತ್, ಧ್ಯಾನಬಿಂದೂಪನಿಷತ್, ನಾದಬಿಂದೂಪನಿಷತ್, ಪಾಶುಪತ ಬ್ರಹ್ಮೋಪನಿಷತ್, ಬ್ರಹ್ಮ ವಿದ್ಯೋಪನಿಷತ್, ಮಂಡಲ ಬ್ರಾಹ್ಮಣೋಪನಿಷತ್, ಮಹಾವಾಕ್ಯೋಪನಿಷತ್,ಯೋಗ ಕುಂದಿಲ್ಯುಪನಿಷತ್, ಯೋಗಚೂಡಾಮಣ್ಯುಪನಿಷತ್, ಯೋಗತತ್ತ್ವೋಪನಿಷತ್, ಯೋಗ ಶಿಖೋಪನಿಷತ್, ಮಹೋಪನಿಷತ್, ಕಾಂಡಿಲ್ಯೋಪನಿಷತ್ ಮತ್ತು ಹಂಸೋಪನಿಷತ್ತುಗಳಲ್ಲಿ–ಯೋಗ ವಿಷಯ ಪ್ರತಿಪಾದಿತವಾಗಿದೆ. ಮಂತ್ರಯೋಗ, ಹಠಯೋಗ, ಲಯಯೋಗ, ರಾಜ ಯೋಗ, ಧ್ಯಾನ, ಧಾರಣ, ಸಮಾಧಿ, ಅಷ್ಟಾಂಗ ಯೋಗ, ನಾಡಿಸ್ಥಾನಗಳು, ವಾಯು ವ್ಯಾಪಾರಗಳು, ಒಂಬತ್ತು ಆಸನಗಳು, ಬಂಧಗಳ ಪ್ರಕಾರಗಳು, ಮುದ್ರೆಗಳು, ಧ್ಯಾನ ಸ್ವರೂಪ, ನಾದಾನುಸಂಧಾನ, ಯಮನಿಯಮಾದಿಗಳ ನಿರೂಪಣೆ, ಸುಷುಮ್ನಾನಾಡಿಯ ಮಹತಿ. ಕುಂಡಲಿನಿಯ ಸಹಾಯದಿಂದ ಗ್ರಂಥಿತ್ರಯಗಳನ್ನು ನಿವಾರಿಸಿ ನಿರ್ವಿಕಲ್ಪ ಸಮಾಧಿ ಯನ್ನು ಪಡೆವಪರಿ. ಪರಬ್ರಹ್ಮದ ಸ್ವರೂಪ ಇತ್ಯಾದಿಗಳ ನಿರೂಪಣೆಯಿದೆ. ಸುಪ್ರಭೇದಾ ಗಮ, ಮೃಗೇಂದ್ರಾಗಮಾದಿ ಕೆಲವು ಆಗಮುಗಳಲ್ಲಿ ಆಗಮಗಳ ಯೋಗಪಾದ ಲಭ್ಯವಿದ್ದು ಇವುಗಳಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ. ಪ್ರತ್ಯಾಹಾರ, ಧಾರಣ, ಧ್ಯಾನ ಸಮಾಧಿಗಳ ಬಗ್ಗೆ, ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ ಆಜ್ಞಾ ಎಂಬ ಷಟ್‌ಚಕ್ರಗಳ ಬಗ್ಗೆ ವಿವರಣೆಯಿದೆ. ಅಲ್ಲದೆ, ಮಾನವನ ಶರೀರದಲ್ಲಿರುವ

೭೨೦೦೦ ನಾಡಿಗಳು, ಅವುಗಳಲ್ಲಿ ಪ್ರಧಾನವಾದ ಇಡಾ ಪಿಂಗಳಾ, ಸುಷುಮ್ನಾ ನಾಡಿಗಳು, ದಶವಾಯುಗಳು, ಅಣಿಮಾದಿ ಸಿದ್ಧಿಗಳು ವಿವರ ಇತ್ಯಾದಿಗಳನ್ನೂ ಪ್ರತಿಪಾದಿಸಲಾಗಿದೆ.

ಶರಣರು ಪರಿಶೋಧಿಸಿ ಸಾಧಿಸಿದ ಶಿವಯೋಗದ ಸ್ವರೂಪವಾವದೆಂಬುದನ್ನು ನೋಡುವ ಮೊದಲು ಇನ್ನೆರಡು ಅಂಶಗಳನ್ನು ಗಮನಿಸಬೇಕು. ಡಾ: ಶಿ. ಜೆ. ನಂದಿಮಠ ಅವರು 'ಶ್ರೀ ಶಿವಯೋಗ ಮಂದಿರದ ಬೆಳಗು' ಸರಿಯಾಗಿಯೇ ಕಂಡು ಹಿಡಿದಿರುವಂತೆ ಸುಪ್ರಭೇದಾಗಮ ಮತ್ತು ಈಶ್ಯಾನ ಶಿವಯೋಗಿಗಳ (ಈಶಾನ ಶಿವಗುರುದೇವ ಪದ್ಧತಿಗಳಲ್ಲಿ ವರ್ಣಿತವಾದ ಯೋಗವು ಯೋಗದರ್ಶನದಿಂದ ವಿಶೇಷವಾಗಿ ಭಿನ್ನವಾಗಿಲ್ಲದಿದ್ದರೂ ಒಂದು ಮಹತ್ವದ ವ್ಯತ್ಯಾಸವಿದೆ. ಈಶ್ವರನ ಪ್ರತಿಬಿಂಬ (ಮೂರ್ತಿ)ವನ್ನು ಮುಂದಿಟ್ಟುಕೊಂಡು ಆದರ ಮೇಲೆ ದೃಷ್ಟಿಯನ್ನಿರಿಸಿ, ಅದರಲ್ಲಿಯೇ ಮನಸ್ಸಿನ ವ್ಯಾಪಾರವನ್ನೆಲ್ಲ ಕೇಂದ್ರೀಕರಿಸಿ, ಧ್ಯಾನವನ್ನು ದೃಢಪಡಿಸಿ, ಸಮಾಧಿಯುನ್ನು ಸಾಧಿಸುವ ವಿಧಾನಕ್ಕೆ ಶೈವಾಗಮುಗಳು ಪ್ರಾಮುಖ್ಯತೆಯನ್ನು ಕೊಟ್ಟಂತೆ ತೋರುವುದು ರಾಜಯೋಗದ ತತ್ತ್ವಗಳು ಶೈವಾಗಮಗಳ ಯೋಗದಲ್ಲಿ ಅಡಕವಾಗಿವೆಯಾದರೂ ಮೂರ್ತಿಯನ್ನು ಮುಂದಿಟ್ಟುಕೊಂಡು ಧ್ಯಾನಿಸುವುದೊಂದು ಅದರ ವೈಶಿಷ್ಟ್ಯ.

ಎರಡನೆಯ ಅಂಶ ಇದು: ಮೇಲ್ಕಾಣಿಸಿದ ಯೋಗವಿಧಾನಗಳೆಲ್ಲ ಸಾಮಾನ್ಯರಿಗೆ ಸಾಧ್ಯವಾಗದ ವಿಧಾನಗಳು. ಹಠಯೋಗ, ಲಯಯೋಗ ಇತ್ಯಾದಿಗಳು ಯೋಗ್ಯ ಗುರುವಿನ ಮಾರ್ಗದರ್ಶನವಿಲ್ಲದೆ ಸಾಧಿಸಲು ಹೋದರೆ ಅಪಾಯ ಕಟ್ಟಿಟ್ಟ ಗಂಟು. ಜ್ಞಾನಯೋಗವಂತೂ ಹೇಳಿ ಹೇಳಿ ಜ್ಞಾನೋಪಾಸಕರಿಗೆ ಮೀಸಲಾದುದು. ಸಾಧನ ಚತುಷ್ಟಯಗಳೆನಿಸಿರುವ ನಿತ್ಯಾನಿತ್ಯ ವಸ್ತು ವಿವೇಕ, ಇಹಾಮುತ್ರಾರ್ಥ-ಫಲಭೋಗ ವಿರಾಗ, ಶಮಾದಿ ಷಟ್ಕ ಸಂಪತ್ತು, ಮುಮುಕ್ಷತ್ವಗಳನ್ನು ಅಳವಡಿಸಿಕೊಂಡು, ಶ್ರವಣ ಮನನ-ನಿಧಿಧ್ಯಾಸನಗಳ ಮೂಲಕ ಉಪದೇಶ ಮಹಾವಾಕ್ಯಗಳೆನಿಸಿರುವ ತತ್ತ್ವಮಸಿ, ಅಹಂಬ್ರಹ್ಮಾಸ್ಮಿ, ಅಯಮಾತ್ಮಾ ಬ್ರಹ್ಮ, ಪ್ರಜ್ಞಾನಂಬ್ರಹ್ಮಗಳ ಅಂತರಾರ್ಥವನ್ನು ಅರಿತು ಅನುಭವಿಸಿ, ಜ್ಞಾನಯೋಗವನ್ನು ಸಾಧಿಸಬೇಕಾಗುತ್ತದೆ. ರಾಜಯೋಗದ ವಿಚಾರ ಇದಾಗಲೇ ಪ್ರಸ್ತಾಪಿತವಾಗಿದೆ. ಅಷ್ಟಾಂಗಯೋಗದ ಪ್ರಾಣಾಯಾಮ, ಸಮಾಧಿಗಳು ಸಾಮಾನ್ಯ ಸಂಸಾರಿಗಳಿಗೆ ಎಟುಕದ ವಿಷಯಗಳು. ಅಲ್ಲದೆ ಇವುಗಳ ಸಾಧನೆಯನ್ನು ಮನೆಯಲ್ಲಿದ್ದುಕೊಂಡು ಮಾಡಲಾಗದು. ಭಗವದ್ಗೀತೆಯ ಕೆಳಗಣ ಶ್ಲೋಕಗಳಲ್ಲಿ ಪ್ರಸ್ತುತ:

"ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ

ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ" (ಅಧ್ಯಾಯ ೬, ಶ್ಲೋಕ ೧೦)

ಯೋಗಿಯು ನಿರ್ಜನ ಪ್ರದೇಶದಲ್ಲಿ ಇದ್ದುಕೊಂಡು, ಏಕಾಕಿಯಾಗಿ, ಸಂಯತ ಚಿತ್ತಾ

ತ್ಮನೂ, ನಿರಾಶಿಯೂ, ಅಪರಿಗ್ರಹವ್ರತನೂ ಆಗಿ ಯಾವಾಗಲೂ ಮನಸ್ಸನ್ನು ಯೋಗದಲ್ಲಿರಿಸಬೇಕು.

ತತ್ರೈಕಾಗ್ರಂ ಮನಃ ಕೃತ್ವಾಯತಚಿತ್ತೇಂದ್ರಿಯ ಕ್ರಿಯಃ
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮ ವಿಶುದ್ಧಯೇಃ
(ಅಧ್ಯಾಯ ೬ ಶ್ಲೋಕ ೧೨)

ಆಸನಸ್ಥನಾಗಿ, ಮನಸ್ಸನ್ನು 'ಏಕಾಗ್ರಗೊಳಿಸಿ, ಚಿತ್ತೇಂದ್ರಿಯಗಳನ್ನು ನಿಗ್ರಹಿಸಿ, ಅಂತಃಕರಣ ಶುದ್ಧಿ ಪಡೆದು ಯೋಗವನ್ನು ಸಾಧಿಸಬೇಕು.

ಪ್ರಶಾಂತಾತ್ಮಾ ವಿಗತಭೀ ಬ್ರಹ್ಮಚಾರಿವ್ರತೇ ಸ್ಥಿತಃ
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ
(ಅಧ್ಯಾಯ ೬, ಶ್ಲೋಕ ೧೪)

ಪ್ರಶಾಂತಾತ್ಮನೂ ನಿರ್ಭಯನೂ ಆಗಿ, ಬ್ರಹ್ಮಚಾರಿವ್ರತದಲ್ಲಿ ಇರುವವನಾಗಿ, ಮನಸ್ಸನ್ನು ಸಂಯಮ ಯುಕ್ತವನ್ನಾಗಿ ಮಾಡಿ, ತನ್ನಲ್ಲಿಯೇ ಚಿತ್ತವುಳ್ಳವನಾಗಿ, ನಾನೇ ಪರಮಗತಿಯೆಂದು ಭಾವಿಸಿ ಯೋಗಯುಕ್ತನಾಗಿರಬೇಕು.

ಇವೆಲ್ಲ ಶ್ರೀ ಸಾಮಾನ್ಯರಿಗೆ ಸಾಧ್ಯವಾಗದ ಸಂಗತಿಗಳೆಂದು ಹೇಳುವುದೇ ಬೇಡ. ಯಜ್ಞ–ಯಾಗ–ಹೋಮ–ಹವನಾಶ್ರಿತ ಕರ್ಮಯೋಗವು, ತ್ರಯೋಪಚಾರ, ಪಂಚೋಪಚಾರ, ದಶೋಪಚಾರ, ಷೋಡಶೋಪಚಾರಗಳೇ ಮುಖ್ಯವಾಗುತ್ತ ಬಂದ ಭಕ್ತಿಯೋಗವು ಬಡವರಿಗೆ ಭಾರವೆನಿಸಿದುದು ಆಶ್ಚರ್ಯವಲ್ಲ. ಇದನ್ನರಿತೇ ಶ್ರೀಕೃಷ್ಣನು–

ಪತ್ರಂ ಪುಷ್ಪಂ ಫಲಂ ತೋಯಂ
ಯೋ ಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತಮ್
ಅಶ್ನಾಮಿ ಪ್ರಯತಾತ್ಮನಃ
(ಅಧ್ಯಾಯ ೬ ಶ್ಲೋಕ ೨೬) ಎಂದು ಸಾರಬೇಕಾಯಿತು.

---

ತ್ರಯೋಪಚಾರ: ಧೂಪ ಮೊದಲಾದ ಸುಗಂಧ ದ್ರವ್ಯಗಳನ್ನು ಉರಿಸುವುದು, ದೀಪ ಬೆಳಗುವುದು, ನೈವೇದ್ಯ

ಪಂಚೋಪಚಾರ: ಗಂಧ ಸಮರ್ಪಣೆ, ಪುಷ್ಪ ಸಮರ್ಪಣೆ, ಧೂಪ, ದೀಪ ನೈವೇದ್ಯ

ದಶೋಪಚಾರ: ಅರ್ಘ್ಯ, ಪಾದ್ಯ, ಆಚಮನ, ಸ್ನಾನ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಪುನರಾಚಮನ

ಷೋಡಶೋಪಚಾರ: ಧ್ಯಾನ, ಆವಾಹನ, ಆಸನ, ಪಾದ್ಯ, ಅರ್ಘ್ಯ, ಸ್ನಾನ, ವಸ್ತ್ರ, ಯಜ್ಞೋಪವೀತ, ಚಂದನ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ನೀರಾಜನಾ, ಸುವರ್ಣ ಪುಷ್ಪ (ಧನಕನಕ)

ಹೀಗೆ ಸಾರಿದರೂ ಹಿಂದೂ ದೇವಾಲಯಗಳಲ್ಲಿ ಷೋಡಶೋಪಚಾರಗಳ ಅಟ್ಟಹಾಸವೇ ಅಟ್ಟಹಾಸ; ಬಾಹ್ಯಾಡಂಬರದ ಅರ್ಚನ ವಿಧಾನದಲ್ಲಿ ಭಕ್ತಿ ಹೂತುಹೋಯಿತು.

ಪ್ರಚಲಿತವಿದ್ದ ಎಲ್ಲ ಯೋಗ ವಿಧಾನಗಳಲ್ಲಿದ್ದ ಅರಕೆಗಳನ್ನೂ, ಕಠಿನತೆ–ಕಠೋರತೆಗಳನ್ನೂ, ದುಬಾರಿತನ ಡಾಂಭಿಕತೆಗಳನ್ನೂ ಗುರುತಿಸಿದ ಶಿವಶರಣರು ತಮ್ಮ ಜನಪರ ನಿಲುವಿಗೆ ತಕ್ಕ ಸುಲಭ ಸಾಧ್ಯವಾದ ಯೋಗ ಪದ್ಧತಿಯೊಂದನ್ನು ಯೋಗ ಸಮನ್ವಯ ದ್ವಾರಾ ರೂಪಿಸಿದರು. ಅದರ ಕೇಂದ್ರಬಿಂದು ಇಷ್ಟಲಿಂಗಾರ್ಚನೆ. ಆಗಮಗಳ ಮೂರ್ತೀ ಮೂಲಕ ಯೋಗಾನುಷ್ಠಾನದಲ್ಲಿಲ್ಲದ ಯೌಗಿಕ ಮಹತ್ವ ಇಷ್ಟಲಿಂಗಾರ್ಜನೆಗೆ ಇದೆ. ಕಳಾಭರಿತವಾದ ಕಂತೆಯ ಹೊರಾವರಣವುಳ್ಳ, ಸಶಾಸ್ತ್ರೀಯದಾಗಿ ಸಿದ್ಧಪಡಿಸಿದ ಇಷ್ಟ ಲಿಂಗವನ್ನು ಅಂಗೈಯಲ್ಲಿಟ್ಟು, ಆ ಅಂಗೈಯನ್ನು ಭ್ರೂಮಧ್ಯದಿಂದ ಸುಮಾರು ಹನ್ನೆರಡು ಅಂಗುಲ ಪ್ರಮಾಣದಲ್ಲಿರಿಸಿ, ಇಷ್ಟಲಿಂಗದಲ್ಲಿ ದೃಷ್ಟಿಯನ್ನು ಕೀಲಿಸಬೇಕು. ತನಗೆ ಸಹ್ಯ ವೆನಿಸುವ ಸುಲಭವಾದ ಆಸನದಲ್ಲಿ ಕುಳಿತಿರಬೇಕು. ಇಷ್ಟಲಿಂಗಾರ್ಚನೆಯಿಂದ ಪ್ರಾಣ ಲಿಂಗೋಪಾಸನೆಗೆ, ಪ್ರಾಣಲಿಂಗೋಪಾಸನೆಯಿಂದ ಭಾವಲಿಂಗೋಪಾಸನೆಗೆ ಅವರೋಹಿಸ ಬೇಕು. ಇದು ಶರಣರು ಶೋಧಿಸಿ ಸಾಧಿಸಿದ ಶಿವಯೋಗದ ಸ್ವರೂಪ. ಅಷ್ಟಾಂಗ ಯೋಗಗಳಲ್ಲಿ ಮಹತ್ವವಿರುವುದು ಸಾಧನೆಗೆ ಸಹಾಯಕವಾಗುವ ಮೊದಲಿನ ಐದು ಅಂಗ ಗಳಿಗಲ್ಲ, ಸಾಧನೆಯ ಸಾಧ್ಯವೆನಿಸುವ ಕೊನೆಯ ಮೂರಕ್ಕೆ–

ಯಮನಿಯಮಾದಿಕಾಷ್ಟ ವಿಧಯೋಗದೊಳುತ್ತರ ಪೂರ್ವಭಾ
ಗ ಮನನುಮಾನದೃಷ್ಟಿ ವಿಮಳಶ್ರುತದಿಂದರಿದಲ್ಲಿ ಪೂರ್ವಭಾ
ಗಮನನುಳಿದುತ್ತರಾರ್ಧ ಶಿವಯೋಗ ಸಮಾಹಿತ ಭಕ್ತಿ ಸತ್ಕ್ರಿಯಾ
ಶ್ರಮ ಪರಮಾರ್ಥಯಂ ಬಿಡದೆ ವರ್ತಿಸುವರ್ ಶರಣರ್ ಶಿವಾಧವಾಃ

—ಮಗ್ಗೆಯ ಮಾಯಿದೇವರು

ಎಂದರೆ ಧಾರಣಾ, ಧ್ಯಾನ ಸಮಾಧಿಗಳಿಗೆ. ಇವುಗಳನ್ನೇ ಇಷ್ಟಲಿಂಗಾರ್ಚನೆಯು ಸುಲಭ ವಾಗಿ ಸಾಧಿಸುತ್ತದೆ. ಇಷ್ಟದಲ್ಲಿ ನೆಟ್ಟ ದೃಷ್ಟಿ ಧಾರಣಾ, ಇಷ್ಟದ ಧ್ಯಾನವೇ ಧ್ಯಾನ, ತದ್ಧ್ಯಾನಾನಂದದಲ್ಲಿ ಲೀನವಾಗುವುದೇ ಸಮಾಧಿ. ಇವುಗಳೇ ಇಷ್ಟ ಪ್ರಾಣ, ಭಾವಲಿಂಗ ಪೂಜೆಗಳು ಕೂಡ. ಇಲ್ಲಿ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ ರಾಜಯೋಗ ಗಳ ಸುಂದರ ಸಮನ್ವಯ. ಅಂತೆಯೇ ಅನುಪಮ ಜ್ಞಾನಿ ಅಲ್ಲಮಪ್ರಭುಗಳೂ ಕೇಳಿದರು: "ಅಮೃತ ಸಾಗರದೊಳಿದ್ದು ಆಕಳ ಚಿಂತೆಯೇಕೆ? ಮೇರು ಮಂದಿರದೊಳಗಿದ್ದು ಜರಗ ತೊಳೆವ ಚಿಂತೆಯೇಕೆ? ಶ್ರೀ ಗುರುವಿನೊಳಗಿದ್ದು ತತ್ತ್ವವಿದ್ಯದ ಚಿಂತೆಯೇಕೆ? ಪ್ರಸಾದ ದೊಳಗಿದ್ದು ಮುಕ್ತಿಯ ಚಿಂತೆಯೇಕೆ? ಕರಸ್ಥಲದೊಳಗೆ ಲಿಂಗವಿದ್ದ ಬಳಿಕ ಮುಕ್ತಿನಾವ ಚಿಂತೆಯೇಕೆ ಹೇಳಾ, ಗುಹೇಶ್ವರಾ?"

ಕರಸ್ಥಲದ ಇಷ್ಟಲಿಂಗಕ್ಕೆ ಅಲ್ಲಮಪ್ರಭುಗಳೂ ಇಷ್ಟು ಮಹತ್ವ ಕೊಡಲು ಕಾರಣ

ಗಳಿವೆ. ಉಳಿದ ಯೋಗಗಳ ಗುರಿ ಸಮಾಧಿಯಾದರೆ ಶಿವಯೋಗದ ಗುರಿ ಲಿಂಗಾಂಗ ಸಾಮರಸ್ಯ. ಸರ್ವಾಂಗ ಲಿಂಗಮಯತ್ವ. ಅಲ್ಲಮಪ್ರಭುಗಳ ಅಪರಾವತಾರಿಗಳೆನಿಸಿದ ತೋಂಟದ ಸಿದ್ಧಲಿಂಗ ಶಿವಯೋಗೀಶ್ವರರು ಇದನ್ನು ಮನೋಹರವಾಗಿ ನಿರೂಪಿಸಿದ್ದಾರೆ.

"ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧಿ ಈ ಎಂಟು ಅಷ್ಟಾಂಗ ಯೋಗಗಳು. ಈ ಯೋಗಂಗಳೊಳಗೆ ಉತ್ತರಭಾಗ, ಪೂರ್ವಭಾಗ ಎಂದು ಎರಡು ಪ್ರಕಾರವಾಗಿಹವು. ಯಮ ಪಂಚಕವೈದು ಪೂರ್ವಯೋಗ, ಧ್ಯಾನಧಾರಣ ಸಮಾಧಿ ಎಂದು ಮೂರು ಉತ್ತರ ಯೋಗ....ಈ ಎಂಟು ಇತರ ಮತದವರು ಮಾಡುವ ಯೋಗಂಗಳು. ಈ ಕರ್ಮ ಕೌಶಲ್ಯದಲ್ಲಿ ಲಿಂಗವಿಲ್ಲ ನೋಡಾ....ಇನ್ನು ವೀರಮಾಹೇಶ್ವರರುಗಳ ಲಿಂಗಾನುಸಂಧಾನವೆಂತೆಂದೊಡೆ ಬ್ರಹ್ಮರಂಧ್ರದಲ್ಲಿಪ್ಪನಾದ ಚೈತನ್ಯವಪ್ಪ ಪರಮ, ಚಿತ್ಕಳೆಯನೇ ಭಾವಮನಕರಗಳಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ, ಭಾವದಲ್ಲಿ ಸತ್ಸ್ವರೂಪವಪ್ಪ, ಒಂದೇ ವಸ್ತು ತನುಮನಭಾವಂಗಳಲ್ಲಿ ಇಷ್ಟ ಪ್ರಾಣ ಭಾವವಾದ ಭೇದವನರಿಯದೆ, ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ, ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ, ಈ ಲಿಂಗತ್ರಯವಿಡಿದಾಚರಿಸಿ, ಲಿಂಗದೊಡನೆ ಕೂಡಿ, ಲಿಂಗವೇ ತಾನಾಗಿ ವಿರಾಜಿಸುತಿರ್ಪುದೀಗ ಶಿವಯೋಗ ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ."

ಈ ಸ್ಥಿತಿಯನ್ನು ತಲುಪುವಲ್ಲಿ ವಿಘ್ನಗಳು ಮೂರು–ಇಂದ್ರಿಯ ಚಾಪಲ್ಯಗಳು ಮನಸ್ಸು, ಉಸಿರಿನ ಉರವಣಿಗೆ. ಮನದ ಚಂಚಲತೆ ಇಂದ್ರಿಯಗಳ ಸಂಚಲತೆಗೆ ಕಾರಣವಾಗುತ್ತದೆ; ವಾಯುವಿನ ಸಂಚಲತೆ ಮನದ ಚಂಚಲತೆಗೆ ಕಾರಣವಾಗುತ್ತದೆ. ವಾಯುವನ್ನು ಪ್ರಾಣಾಯಾಮದಿಂದ, ಇಂದ್ರಿಯಗಳನ್ನು ಶಮಾದಿಗಳಿಂದ, ಮನವನ್ನು ಧ್ಯಾನ ಧಾರಣ ಸಮಾಧಿಗಳಿಂದ ಸಂಯತಗೊಳಿಸಲು ದಾರಿ ತೋರುತ್ತದೆ ಅಷ್ಟಾಂಗಯೋಗ. ಆದರೆ ಪ್ರಾಣಾಯಾಮ ಯೋಗ್ಯ ಗುರು ದೊರೆತರೆ ಮಾತ್ರ ಸಾಧ್ಯ; ಇಲ್ಲದಿದ್ದರೆ ಪ್ರಾಣಾಯಾಮ ಪ್ರಾಣಾಪಾಯವೆಂಬುದನ್ನು ಇದಾಗಲೇ ಸೂಚಿಸಲಾಗಿದೆ.

ಇನ್ನು ಇಂದ್ರಿಯಗಳ ವಿಚಾರ, ನಿರೋಧ, ದಮನ, ನಿಗ್ರಹ ಇತ್ಯಾದಿಗಳಿಂದ ಇಂದ್ರಿಯಗಳನ್ನು ವಶಪಡಿಸಿಕೊಳ್ಳುವ ವಿಧಾನ ಅಷ್ಟೊಂದು ಫಲಪ್ರದವಲ್ಲ, ಪ್ರಶಸ್ತವಲ್ಲ. ಬಸವಣ್ಣನವರು ಹೇಳಿಲ್ಲವೆ– "ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವುವು ದೋಷಂಗಳು, ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು" ಎಂದು? ಅಲ್ಲಮಪ್ರಭುಗಳ ಈ ವಚನ ಇಲ್ಲಿ ಪ್ರಸ್ತುತ:

"ಕಂಗಳೇಕೆ ನೋಡಬೇಡ ಎಂದಡೆ ಮಾಣವು?
ಶ್ರೋತ್ರಂಗಳೇಕೆ ಆಲಿಸಬೇಡ ಎಂದಡೆ ಮಾಣವು?
ಜಿಹ್ವೆಯೇಕೆ ರುಚಿಸಬೇಡ ಎಂದಡೆ ಮಾಣವು?

ನಾಸಿಕವೇಕೆ ವಾಸಿಸಬೇಡ ಎಂದಡೆ ಮಾಣವು?
ತ್ವಕ್ಕೇಕೆ ಸೋಂಕ ಬೇಡ ಎಂದಡೆ ಮಾಣವು?
ಈ ಭೇದವನರಿದು ನುಡಿಸಲು ಸಮಧಾತುವಾಯಿತ್ತು.
ಗುಹೇಶ್ವರ ಲಿಂಗಕ್ಕೆ ಒಲಿದ ಕಾರಣ ಅಭಿಮಾನದಲಜ್ಜೆ
ಬೇಸತ್ತು ಹೋಯಿತ್ತು."

ಬೇಡವೆಂದರೆ ಮಾಣವು ಇಂದ್ರಿಯಗಳು. ಲಿಂಗಕ್ಕೆ ಒಲಿದರೆ ಮಾತ್ರ ಅವುಗಳ ಉಪಶಮನ ಸಾಧ್ಯ. ಒಲಿವುದು ಸುಲಭವಾಗಲೆಂದು ಒಂದೊಂದು ಇಂದ್ರಿಯಕ್ಕೂ ಒಂದೊಂದು ಲಿಂಗವನ್ನು ಅಳವಡಿಸಿದರು. ಶ್ರೋತ್ರ-ವಾಕ್ಕುಗಳೆಂಬ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಪ್ರಸಾದಲಿಂಗ, ತ್ವಕ್ಕು-ಪಾಣಿಗಳೆಂಬ ಜ್ಞಾನೇಂದ್ರಿಯ-ಕರ್ಮೇಂದ್ರಿಯ ಗಳಿಗೆ ಜಂಗಮಲಿಂಗ, ನೇತ್ರ-ಪಾದಗಳೆಂಬ ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳಿಗೆ ಶಿವಲಿಂಗ, ಜಿಹ್ವೆ-ಗುಹ್ಯಗಳೆಂಬ ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳಿಗೆ ಗುರುಲಿಂಗ, ನಾಸಿಕ-ಗುದಗಳೆಂಬ ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳಿಗೆ ಆಚಾರಲಿಂಗ, ಮನಕ್ಕೆ ಮಹಾಲಿಂಗ. ಹೀಗೆ ಇಷ್ಟಲಿಂಗವು ಆಚಾರಲಿಂಗ ಮೊದಲುಗೊಂಡು ಮಹಾಲಿಂಗದವರೆಗೆ ಆರು ಲಿಂಗಗಳ ರೂಪಗಳನ್ನು ಧರಿಸಿದಾಗ ಅಂಗನೂ ಭಕ್ತ, ಮಹೇಶ, ಪ್ರಸಾದಿ, ಪ್ರಾಣ ಲಿಂಗಿ, ಶರಣ, ಐಕ್ಯ ಸ್ಥಲಗಳನ್ನು ಪಡೆಯುತ್ತಾನೆ. ಈ ಷಡ್ವಿಧಲಿಂಗೋಪಾಸನೆಯನ್ನು ಷಡ್ವಿಧೇಂದ್ರಿಯ ಮುಖದಿಂದಲೇ ಮಾಡಬೇಕಾಗುತ್ತದೆ. ಈ ವಿಶಿಷ್ಟ ಉಪಾಸನೆಯಿಂದ ಸರ್ವೇಂದ್ರಿಯಗಳಿಗೂ ಲಿಂಗ ಸಂಬಂಧ ಉಂಟಾಗಿ ಸರ್ವೇಂದ್ರಿಯಗಳೂ ಲಿಂಗಮಯ ವಾಗಿ, ಲಿಂಗ ಕಳೆಯಿಂದ ಥಳಥಳಿಸುವುವು. ಕರಣಂಗಳು ಲಿಂಗಕಿರಣಂಗಳಾಗಿ, ಅಂಗನು ಸರ್ವಾಂಗಲಿಂಗಿಯಾಗುವನು. ಇದು ಇಂದ್ರಿಯಗಳನ್ನು ನಿರೋಧಿಸದೆ, ನಿಗ್ರಹಿಸದೆ ಅವು ಗಳನ್ನು ಉದಾತ್ತೀಕರಿಸುವ ವಿನೂತನ ವಿಧಾನ.

ಇನ್ನು ಮನದ ವಿಚಾರ: ಮನದ ಮರ್ಕಟತನ ಸರ್ವವೇದ್ಯ. ಅಕ್ಕಮಹಾದೇವಿಯ ಈ ವಚನ ಮನವನ್ನು ಗೆಲ್ಲುವುದು ಹೇಗೆಂಬುದನ್ನು ಮನೋಜ್ಞವಾಗಿ ನಿರೂಪಿಸುತ್ತದೆ:

"ಲೋಕದ ಚೇಷ್ಟೆಗೆ ರವಿ ಬೀಜವಾದಂತೆ
ಕರಣಂಗಳ ಚೇಷ್ಟೆಗೆ ಮನವೇ ಬೀಜ;
ಆನು ನಿಮ್ಮಲ್ಲಿ ಒಡವೆರೆದ ಬಳಿಕ
ಎನಗೆ ಭವವುಂಟೆ, ಚೆನ್ನಮಲ್ಲಿಕಾರ್ಜುನ?"

ಮನಕ್ಕೂ ಲಿಂಗ ಸಂಬಂಧದಿಂದಲೇ ಮಹದಲ್ಲಿ ಮನೆಮಾಡುವುದು ಸಾಧ್ಯವಾಗು ತ್ತದೆ. ಹೀಗೆ ವಾಯು, ಇಂದ್ರಿಯಗಳು, ಮನ-ಇವುಗಳನ್ನು ಜಯಿಸುವುದು ಇಷ್ಟ ಲಿಂಗಾರ್ಚನೆಯೊಂದರಿಂದಲೇ ಸಾಧ್ಯವಾಗುತ್ತದೆ. ಚಾಮರಸನ ಪ್ರಭುಲಿಂಗಲೀಲೆಯ ಈ ಪದ್ಯಗಳು ಹೃದ್ಯ:

ಆದೋದಾಲಿಸಿ ಕೇಳು ಭಕ್ತಿಯ ಹಾದಿಗೊಂದೇ ಕೀಲು ದಿಟ ಬೇ
ಕಾಮದೀ ತನು ತನುವಿಡದು ಕಾಬುದು ಸಮಸ್ತವನು
ಹೇಳುವೊಡೆ ಮನವೆಂಬ ಹಕ್ಕಿಗೆ ಕಾಲುಗಳಿಲ್ಲೈ ತೊಳಲುತಿಹ ಕ-
ಣ್ಣಾಲಿಗಳು ದಿಟವದಕೆ ಪಕ್ಕಗಳೀಡೆ ಚಿಂಗಳದ
ಗಾಳಿಯಾಗಿಹುದಂತು ಕಾರಣ ವಾಲಿಯೇ ಸಾಧನಕೆ ಸಾಧನ
ಮೂಲವನೆ ನಿಲಿಸುವನು ಭಕ್ತನು ಬಸವ ಕೇಳೆಂದ
ಆಲೀನಿಂದೊಡೆ ಸುಳಿದು ಸೂಸುವ
ಗಾಳಿನಿಲುವುದು ಗಾಳಿ ನಿಲೆ ಮನ
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು
ಲೀಲೆಯಿಂದಲಿ ಬಿಂದು ನಿಂದೊಡೆ
ಕಾಲಕಾಮರಗೆದ್ದು ಮಾಯೆಯ
ಹೇಳ ಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ.

ಆಲಿಯೇ ಸಾಧನಕೆ ಸಾಧನ. ಆಲಿ ಇಷ್ಟದಲ್ಲಿ ನೆಲೆಯೂರಿ ನಿಂತಾಗ ಗಾಳಿ ನಿಲ್ಲುವುದು; ಗಾಳಿ ನಿಂತಾಗ ಮನ ನಿಲ್ಲುವುದು; ಮನ ನಿಂತಾಗ ಬಿಂದು ನಿಲ್ಲುವುದು. ಒಂದೇ ಏಟಿಗೆ ಮೂರು ಅಮೃತ ಫಲಗಳನ್ನು ಪಡೆವ ಪವಾಡವಿದು. ಅಷ್ಟಾಂಗಯೋಗದ ಪೂರ್ವಾರ್ಧನ ಗೊಡವೆಗೆ ಹೋಗದೆಯೂ ಯೋಗ ಸಾಧನೆ ಸಾಧ್ಯವೆಂಬುದನ್ನು ಈ ಶತಮಾನದ ಮಹಾಯೋಗಿ ಅರವಿಂದರು ತೋರಿಸಿಕೊಟ್ಟರು–ತಮ್ಮ ಪೂರ್ಣಯೋಗದ ಪ್ರತಿಪಾದನೆಯಿಂದ. ಇದನ್ನೇ ಶಿವಶರಣರು ಹನ್ನೆರಡನೆಯ ಶತಮಾನದಲ್ಲಿಯೇ ತೋರಿಸಿ ಕೊಟ್ಟರು–ತಮ್ಮ ಶಿವಯೋಗದ ಮೂಲಕ. ಷಟ್‌ಚಕ್ರಗಳ, ಅಷ್ಟಾಂಗ ಯೋಗದ, ಹಲವು ಯೋಗ ಪ್ರಕಾರಗಳ ಹುಳುವಿನಲ್ಲಿ ಕಂಗೆಟ್ಟಿದ್ದ ಶ್ರೀ ಸಾಮಾನ್ಯನಿಗೆ–ಸ್ತ್ರೀ ಪುರುಷ ರಿಬ್ಬರಿಗೂ–ಮನೆಯಲ್ಲಿಯೇ ಕುಳಿತು ಅಂಗಾಂಗಯೋಗವನ್ನು ಸಾಧಿಸುವ ಸದವಕಾಶ ದೊರೆಯಿತು.

ಇದೊಂದು ಸ್ವತಂತ್ರ ಯೋಗ ಮಾರ್ಗ–ಶಿವಯೋಗ ಪ್ರದೀಪಿಕೆಯು ಹೇಳುವಂತೆ ತತ್ತ್ವತಃ ರಾಜಯೋಗವೇ ಅಲ್ಲ. ಶಿವಜ್ಞಾನ, ಶಿವಭಕ್ತಿ, ಶಿವಾರ್ಚನ ಇತ್ಯಾದಿಗಳನ್ನು ಸೇರಿಸಿದಾಕ್ಷಣ ರಾಜಯೋಗ ಶಿವಯೋಗವಾಗುವುದಿಲ್ಲ. ಇದಕ್ಕಾಗಿ ತಮ್ಮದೇ ಆದ ಪರಿಭಾಷೆಯನ್ನೇ ಸೃಷ್ಟಿಸಿಬಿಟ್ಟರು ಶಿವಶರಣರು. ಇದು ಸಿದ್ಧರಾಮನ ದೃಷ್ಟಿಯಲ್ಲಿ ಷಟ್ ಚಕ್ರಗಳ ಸ್ವರೂಪ:

“ಆಧಾರ ಸ್ವಾಧಿಷ್ಠಾನ, ಮಣಿಪೂರಕ, ವಿಶುದ್ಧಿ, ಆಜ್ಞೆ ಎಂಬರು.
ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ವಿಶುದ್ಧಿ,
ಆಜ್ಞೆಯ ಬಲ್ಲರೆ ನೀವು ಹೇಳಿರೋ!
ಅರಿವು ಉಳ್ಳುದೇ ಆಧಾರ, ಅನಾಹುತ ಕೂಡಿಪ್ಪುದೇ ಸ್ವಾಧಿಷ್ಠಾನ,

ಮಣಿಯ ಬೆಳಗಿನಲ್ಲಿಪ್ಪುದೇ ಮಣಿಪೂರಕ, ಆಶೆ ಇಲ್ಲದುದೇ ಅನಾಹತ,
ಅಲ್ಲ, ಅಹುದೆಂಬುದನತಿಗಳೆದಿಪ್ಪುದೇ ವಿಶುದ್ಧಿ,
ಸರ್ವಜೀವಂಗಳಲ್ಲಿ ದಯೆಯುಳ್ಳುದೇ ಆಜ್ಞೆ,
ಇಂತಪ್ಪುದೀಗ ಶಿವಯೋಗ;
ಉಳಿದ ಅಭ್ಯಾಸ ಯೋಗಿಗಳ ಕಂಡು ನಗುತಿರ್ದನಯ್ಯಾ–
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ;"

ಇದು ತೋಂಟದ ಸಿದ್ಧಲಿಂಗ ಶಿವಯೋಗೀಶ್ವರರು ಯೋಗದ ಅಷ್ಟಾಂಗಗಳಿಗೆ ನೀಡಿರುವ ವಿವರಣೆ:

೧. ಯಮ: ಅನೃತ, ಹಿಂಸೆ, ಪರಧನದಾಶೆ, ಪರಸ್ತ್ರೀ ಮೋಹ, ಪರನಿಂದೆ–ಈ ಐದನ್ನು ಬಿಟ್ಟು ಲಿಂಗಾರ್ಚನೆ ಮಾಡುವುದೇ ಯಮಾಂಗ.

೨. ನಿಯಮ: ....ತ್ರಿಕರಣಗಳಲ್ಲಿ ಷಡಕ್ಷರ ಮಂತ್ರ ಜಪಿಸುತ್ತ, ಅಶುಚಿತ್ವವನ್ನು ಬಿಟ್ಟು, ವಿಭೂತಿ ರುದ್ರಾಕ್ಷಿಗಳನ್ನೂ ಧರಿಸಿ, ಶಿವಲಿಂಗಾರ್ಚನ ತತ್ಪರನಾಗಿದ್ದು ಪಾಪಕ್ಕೆ ಭೀತನಾಗಿರುವುದೇ ನಿಯಮಾಂಗ.

೩. ಆಸನ: ಸಿದ್ಧಾಸನ, ಪದ್ಮಾಸನ, ಸ್ವಸ್ತಿಕಾಸನ, ಅರ್ಧಚಂದ್ರಾಸನ, ಪರ್ಯಂಕಾಸನ– ಈ ಐದು ಆಸನಗಳಲ್ಲಿ ಒಂದನ್ನು ಪರಿಗ್ರಹಿಸಿ, ಸುಸ್ಥಿರ ಚಿತ್ತನಾಗಿ ಮೂರ್ತಗೊಂಡು ಶಿವಲಿಂಗಾರ್ಚನೆ ಮಾಡುವುದೇ ಆಸನಾಂಗ.

೪. ಪ್ರಾಣಾಯಾಮ: ಈಡಾ ಪಿಂಗಳಗಳಲ್ಲಿ ಚರಿಸುವ ರೇಚಕ ಪೂರಕಂಗಳ ಭೇದವನರಿದು, ಮನಪವನಂಗಳ ಮೇಲೆ ಲಿಂಗವ ಸಂಬಂಧಿಸಿ, ಮನಪವನ ಪ್ರಾಣಗಳನ್ನು ಲಿಂಗದೊಡನೆ ಕೂಡಿಸಿ, ಲಿಂಗ ಸ್ವರೂಪವ ಮಾಡಿ, ವಾಯು ಪ್ರಾಣತ್ವವ ಕಳೆದು ಲಿಂಗಪ್ರಾಣಿಯಾಗಿ, ಹೃದಯ ಕಮಲ ಮಧ್ಯದಲ್ಲಿ ಪ್ರಣಮವನುಚ್ಚರಿಸುತ್ತಾ ಪರ ಶಿವ ಧ್ಯಾನಗಳಲ್ಲಿ ಪರವಶನಾಗುವುದೇ ಪ್ರಾಣಾಯಾಮ ಯೋಗ.

೫. ಪ್ರತ್ಯಾಹಾರ: ಗುರು ಕೃಪೆಯಿಂದ ಸರ್ವೇಂದ್ರಿಯಗಳನ್ನು ಸಾವಧಾನದಿಂದ ಲಿಂಗ ಮುಖಿಗಳನ್ನಾಗಿ ಮಾಡಿಕೊಳ್ಳುವುದೇ ಪ್ರತ್ಯಾಹಾರಯೋಗ.

೬. ಧ್ಯಾನ: ಅಂತರಂಗದ ಶುದ್ಧ ಪರಮಾತ್ಮ ಲಿಂಗವನ್ನೇ ಶ್ರೀಗುರು ಶಿವಲಿಂಗ ಸ್ವರೂಪವ ಮಾಡಿ ಕರಸ್ಥಲಕ್ಕೆ ತಂದು ಕೊಟ್ಟಿರುವನು. ಆ ಕರಸ್ಥಲದ ಲಿಂಗವೇ ಪರಮಾತ್ಮ ಸ್ವರೂಪವೆಂದರಿದು, ಅದನ್ನು ಆಧಾರಾದಿ ಸ್ಥಾನಗಳಲ್ಲಿ ಆಹ್ವಾನ ವಿಸರ್ಜನೆಗಳಿಲ್ಲದೆ ಧ್ಯಾನಿಸುವುದೇ ಧ್ಯಾನಯೋಗವೆನಿಸುವುದು.

೭. ಧಾರಣ: ಶ್ರೀಗುರು ಕರುಣಿಸಿದ ಲಿಂಗವನ್ನು ಭಾವ, ಮನ, ಕರ ಮೊದಲಾದ ಸರ್ವಾಂಗದಲ್ಲಿ ಧರಿಸುವುದೇ ಧಾರಣಯೋಗ.

೮. ಸಮಾಧಿ: ಸತ್ಕ್ರಿಯಾ ಜ್ಞಾನಯೋಗದಿಂದ ಪ್ರಾಣಂಗೆ ಶಿವಕಳೆಯ ಸಂಬಂಧಿಸಿ, ಇಷ್ಟ–ಪ್ರಾಣಭಾವವೆಂಬ ಲಿಂಗತ್ರಯವನು ಏಕಾಕಾರ ಮಾಡಿ, ಅಖಂಡ ಪರಿಪೂರ್ಣ ಕೇವಲ ಪರಂಜ್ಯೋತಿ ಸ್ವರೂಪವಾದ ಮಹಾಲಿಂಗದೊಡನೆ ಸಂಯೋಗವಾಗಿ, ಭಿನ್ನವಿಲ್ಲದೆ ಏಕಾರ್ಥವಾಗಿರುವುದೇ ಸಮಾಧಿಯೋಗ.

ಇಂತೀ ಅಷ್ಟಾಂಗಯೋಗದಲ್ಲಿ ಶಿವಲಿಂಗಾರ್ಚನೆಯ ಮಾಡಿ ಶಿವತತ್ತ್ವದೊಡನೆ ಕೂಡುವುದೇ ಲಿಂಗಾಂಗ ಯೋಗವೆನಿಸುವುದು.

ಇವೆಲ್ಲವನ್ನು ಅಳವಡಿಸಿಕೊಳ್ಳುವ ಪೂಜೆ ಹೇಗಿರಬೇಕು? ಚೆನ್ನಬಸವಣ್ಣನವರ ಈ ವಚನ ಇದನ್ನು ಬೆರಗಾಗುವಂತೆ ಬಣ್ಣಿಸುತ್ತದೆ. ಎಲ್ಲವನ್ನು ನವೀಕರಿಸಿದರು ಶರಣರು:

"ಹೊರಗನೆ ಕೊಯ್ದು ಹೊರಗನೆ ಪೂಜಿಸಿದಡೆ
ಪರಿಣಾಮವಿಲ್ಲ. ಪ್ರಯೋಜನವಿಲ್ಲ, ಸುಖದೊರಕೊಳ್ಳದು ನೋಡಾ;
ಅದೆಂತೆಂದಡೆ: ಸರ್ವಜೀವಂಗಳಲ್ಲಿ ಹಿಂಸೆಯ ಮಾಡದಿರಬಲ್ಲಡೆ ಪ್ರಥಮ ಪುಷ್ಪ;
ಸರ್ವೇಂದ್ರಿಯಂಗಳ ನಿಗ್ರಹಿಸಿಕೊಂಡಿರಬಲ್ಲಡೆ ದ್ವಿತೀಯ ಪುಷ್ಪ;
ಸರ್ವಾಹಂಕುರವರತು ಶಾಂತನಾಗಿರಬಲ್ಲಡೆ ತೃತೀಯ ಪುಷ್ಪ;
ಸರ್ವವ್ಯಾಪಾವಳಿದು ನಿರ್ವ್ಯಾಪಾರಿಯಾಗಿರಬಲ್ಲಡೆ ಚತುರ್ಥ ಪುಷ್ಪ;
ದುರ್ಭಾವ ಪ್ರಕೃತಿಯಳಿದು ಸದ್ಭಾವ ಎಡೆಗೊಂಡಿರಬಲ್ಲಡೆ ಪಂಚಮ ಪುಷ್ಪ;
ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿಯಾಗಿರಬಲ್ಲಡೆ ಷಷ್ಠ ಪುಷ್ಪ;
ಅನೃತವ ಮರೆದು ಸತ್ಯವ ನುಡಿಯಬಲ್ಲಡೆ ಸಪ್ತಮ ಪುಷ್ಪ:
ಸಕಲ ಪ್ರಪಂಚವಳಿದು ಶಿವಜ್ಞಾನ ಸಂಪನ್ನನಾಗಿರಬಲ್ಲಡೆ ಅಷ್ಟಮ ಪುಷ್ಪ;
ಇಂತೀ ಅಷ್ಟದಳ ಕಮಲದಲ್ಲಿ ಸಹಜಪೂಜೆ ಮಾಡಬಲ್ಲ ಶರಣರು
ನಿಮ್ಮ ಪ್ರತಿಬಿಂಬದಂತಿಪ್ಪರು ಕಾಣಾ, ಕೂಡಲಚೆನ್ನಸಂಗಮದೇವಾ".

ಇಂತಿದು ಬೆರಸಿಯೂ ಬೇರಿಪ್ಪ, ಅಳಿಯದೆ ಕೂಡುವ, ಶಿವಯೋಗ, ಲಿಂಗಾಂಗ ಯೋಗ. ಯೋಗಕ್ಕೆ ಕೂಡುವೆಂದು ಕರೆಯುವುದಾದರೆ ಇದನ್ನು ನೋಟ ಕೂಟವೆಂದು ಕರೆಯುಬಹುದು. ದೃಷ್ಟಿಯೋಗವೆಂದೂ ಕರೆಯುಬಹುದು. ಇಲ್ಲಿ ಮುಖ್ಯವಾದುದು ಜೀವ ಭಾವವು ಶಿವಭಾವವಾಗಿ ಪರಿವರ್ತಿತವಾಗುವುದು. ಇದು ಸಾಧ್ಯವಾಗುವುದು ಲಿಂಗ ಪೂಜೆಯಿಂದ.

"ಲಿಂಗದೊಳಿದ್ದು ಲಿಂಗಮನೆ ತಾಳ್ದು ನಿರಂತರ ಲಿಂಗಪೂಜೆಯಂ
ಲಿಂಗದಿನೊಲ್ದು ವಿಸ್ತರಿಸಿ ಲಿಂಗಕೆ ಲಿಂಗಮನರ್ಪಿಸುತ್ತು ಮಾ
ಲಿಂಗ ಪದಾರ್ಥಮಂ ಸವಿದು ಲಿಂಗ ಸುಖಾಸ್ಪದನಾಗಿ ರಾಜಿಪಂ
ಲಿಂಗನಿಜೈಕ್ಯನಯ್ಯ ಪರಮ ಪ್ರಭುವೇ ಮಹದೈಪುರೀಶ್ವರಾ;
—ಮಗ್ಗೆಯ ಮಾಯಿದೇವರು

ಇದುವರೆಗೆ ವಿವರಿಸಿದ ಎಲ್ಲವನ್ನು ಏಕಾತ್ರಗೊಳಿಸಿದ ಚನ್ನಬಸವಣ್ಣನವರ ಸುದೀರ್ಘ ವಚನವೊಂದಿದೆ. ಅದನ್ನು ಉದಾಹರಿಸಿ ಈ ಬರಹಕ್ಕೆ ಪೂರ್ಣವಿರಾಮ ಹಾಕ ಬಹುದಾಗಿದೆ. ಶಿವಯೋಗದ ಗುರಿಯಾದ ಸರ್ವಾಂಗಲಿಂಗಮಯತ್ವದ ಸಾಧನೆಗೆ ಇದು ಬೀಗದ ಕೈಯಾಗಿದೆ.

"ಎನ್ನ ಸರ್ವಾಂಗವೆಲ್ಲವೂ ಲಿಂಗವಾದ ಪರಿಕ್ರಮವೆಂತೆಂದಡೆ
ಶ್ರೀಗುರು ಬಸವಣ್ಣನುಪದೇಶಿಸಿದ ಇಷ್ಟಲಿಂಗವೆನ್ನ ಸರ್ವಾಂಗದಲ್ಲಿ
ಭಿನ್ನನಾಮಂಗಳಿಂದ ಪ್ರಕಾಶಿಸುತ್ತಿಹುದು.
ಅದೆಂತೆಂದಡೆ: ಸ್ಥೂಲಾಂಗದಲ್ಲಿ ಇಷ್ಟಲಿಂಗವೆಂದು, ಸೂಕ್ಷ್ಮಾಂಗದಲ್ಲಿ
ಪ್ರಾಣಲಿಂಗವೆಂದು, ಕಾರಣಾಂಗದಲ್ಲಿ ಭಾವಲಿಂಗವೆಂದು ತ್ರಿಭೇದವಾಗಿಹುದು.
ಇಂತು ಅಂಗವ ಕುರಿತು ಮೂರುತೆರನಾಯಿತ್ತು.
ಇನ್ನು ಇಂದ್ರಿಯಂಗಳ ಕುರಿತು ಆರುತೆರನಾಗಿರ್ಪುದು
ಅದು ಹೇಗೆಂದಡೆ ಹೃದಯದಲ್ಲಿ ಮಹಾಲಿಂಗವೆಂದು,
ಶ್ರೋತ್ರದಲ್ಲಿ ಪ್ರಸಾದಲಿಂಗವೆಂದು.
ತ್ವಕ್ಕಿನಲ್ಲಿ ಜಂಗಮಲಿಂಗವೆಂದು, ನೇತ್ರದಲ್ಲಿ ಶಿವಲಿಂಗವೆಂದು,
ಜಿಹ್ವೆಯಲ್ಲಿ ಗುರುಲಿಂಗವೆಂದು, ಘ್ರಾಣದಲ್ಲಿ ಆಚಾರಲಿಂಗವೆಂದು
ಇಂತು ಷಡೀಂದ್ರಿಯಗಳಲ್ಲಿ ಷಡ್ವಿಧಲಿಂಗದಾಗಿ ತೋರಿತ್ತು.
ಇಂತೀ ಮರ್ಯಾದೆಯಲ್ಲಿ ಜ್ಞಾನಕರ್ಮೇದ್ರಿಯಂಗಳಲ್ಲಿಯೂ
ಲಿಂಗವೇ ಪ್ರಕಾಶಿಸುತ್ತಿರುವುದು.
ಅದು ಹೇಗೆಂದಡೆ: ಜ್ಞಾನೇಂದ್ರಿಯಂಗಳಿಗೆಯೂ,
ಕರ್ಮೇಂದ್ರಿಯಂಗಳಿಗೂ ಭೇದವಿಲ್ಲ.

...........................................

ಇಂತೀ ಜ್ಞಾನೇಂದ್ರಿಯಂಗಳಿಗೆಯೂ, ಕರ್ಮೇಂದ್ರಿಯಂಗಳಿಗೆಯೂ
ಹೃದಯವೆ ಆಶ್ರಯ ಸ್ಥಾನವಾದ ಕಾರಣ
ಹೃದಯ ಅಕಾಶವೆನಿಸಿತ್ತು.
ಅಲ್ಲಿ ಸ್ಥೂಲ ಸೂಕ್ಷ್ಮ ಕಾರಣರೂಪಿಂದೆಲ್ಲಾ ಇಂದ್ರಿಯಂಗಳಿರುತ್ತಿಹವು.
ಅದು ಹೇಗಂದಡೆ: ಘ್ರಾಣದ ಘ್ರಾಣವೆ ಆಚಾರಲಿಂಗ:
ಜಿಹ್ವೆಯ ಜಿಹ್ವೆಯೆ ಗುರುಲಿಂಗ;
ನೇತ್ರದ ನೇತ್ರವೆ ಶಿವಲಿಂಗ; ತ್ವಕ್ಕಿನತ್ವಕ್ಕೆ ಜಂಗಮಲಿಂಗ:
ಶ್ರೋತ್ರದ ಶ್ರೋತ್ರವೆ ಪ್ರಸಾದಲಿಂಗ:
ಹೃದಯದ ಹೃದಯವೆ ಮಹಾಲಿಂಗ. ಈ ಆರು ಲಿಂಗಕ್ಕೆ, ಲಿಂಗಸ್ಥಲ ಆರು.
ಅವಾವುವೆಂದಡೆ:

ಐಕ್ಯ, ಶರಣ, ಪ್ರಾಣಲಿಂಗಿ, ಪ್ರಸಾದಿ, ಮಾಹೇಶ್ವರ.
ಭಕ್ತ–ಎಂದೀ ಆರು ಲಿಂಗಸ್ಥಲಗಳು
ಇನ್ನು ಷಡಾಧಾರಂಗಳಲ್ಲಿ ಷಡಕ್ಷರ ರೂಪದಿಂದ ಷಡ್ಲಿಂಗ ಸ್ಥಾಪ್ಯವಾಗಿಹವು.
ಇಂತೀ ಮರ್ಯಾದೆಯಲ್ಲಿ ಷಡ್ಧಾತುವಿನಲ್ಲಿ
ಷಡಕ್ಷರರೂಪಿಂದ ಷಡ್ಲಿಂಗ ಸ್ಥಾಪ್ಯವಾಗಿಹವು.
ಇಂತೀ ಮರ್ಯಾದೆಯಲ್ಲಿ ಷಡ್ಧಾತುವಿನಲ್ಲಿ
ಷಡಕ್ಷರರೂಪಿಂದ ಷಡ್ಲಿಂಗ ಸ್ಥಾಪ್ಯವಾಗಿಹವು.
ಇಂತೀ ಷಡ್ಧಾತುವೆ ಷಡಕ್ಷರಮಯವಾಗಿ, ಅವೆ ಲಿಂಗಂಗಳಾಗಿ,
ಒಳಹೊರಗೆ ತೆರಹಿಲ್ಲದೆ ಸರ್ವಾಂಗವೆಲ್ಲವೂ ಲಿಂಗಮಯವಾದ ಇರವು.
ಅದು ತಾನೆ ಶಿವನಿರವು, ಅದು ತಾನೆ ಶಿವನಭವನ,
ಅದು ತಾನೆ ಶಿವನ ವಿಶ್ರಾಮ ಸ್ಥಾನ.
ಇಂತೀ ಷಟ್ಸ್ಥಲ ಬ್ರಹ್ಮವನರಿದಾತನೇ ಶರಣ,
ಆತನೇ ಲಿಂಗೈಕ್ಯ....ಕೂಡಲಚೆನ್ನಸಂಗಯ್ಯ.

ಶಿವಯೋಗದ ಸ್ವರೂಪ ಇಷ್ಟರಿಂದ ಸ್ಪಷ್ಟವಾಗಿದ್ದರೆ ನನ್ನ ಶ್ರಮಸಾರ್ಥಕ. ಇಲ್ಲಿ ಶಿವಯೋಗ ಬಗ್ಗೆ ಬರೆಯಬೇಕಾದುದೆಲ್ಲವನ್ನೂ ಬರೆಯಲಾಗಿಲ್ಲ. ಬರೆದುದೆಲ್ಲ ಸರಿಯಿದೆ ಯೆಂಬ ಭ್ರಮೆಯೂ ನನಗಿಲ್ಲ. 'ಶಿವಯೋಗ ಮಂದಿರ'ದಲ್ಲಿ ಶಿವಯೋಗದ ಬಗ್ಗೆ ಒಂದು ಕಮ್ಮಟ ನಡೆದು ಅದರಲ್ಲಿ ಶಿವಯೋಗ ಸಾಧಕರೆಲ್ಲ ಭಾಗವಹಿಸಿ, ಶಿವಯೋಗದ ಬಗ್ಗೆ ಅಧಿಕೃತವಾದ ಒಂದು ಗ್ರಂಥವನ್ನು ರಚಿಸಿ ಪ್ರಕಟಿಸಿದರೆ ಬಹಳ ಚೆನ್ನಾಗುವುದು. ಅಂಥ ಪ್ರಮಾಣ ಗ್ರಂಥ ಬರುವವರೆಗೆ ಶಿವಭಕ್ತರು ಇಷ್ಟಲಿಂಗಾರ್ಚನೆಯ ಸರಿಯಾದ ರೀತಿಯನ್ನು ಅರಿತುಕೊಂಡು ಮನೆಯಲ್ಲಿಯೇ ಇಷ್ಟಲಿಂಗಾನುಸಂಧಾನದ ಮೂಲಕ ಪ್ರಾಣಭಾವಲಿಂಗ ಗಳ ಉಪಾಸನೆಯನ್ನು ಮಾಡಿದರೆ ಕ್ರಮೇಣ ಅಂಗ ಲಿಂಗಮಯವಾಗಿ ಜೀವಶಕ್ತಿ ಶಿವ ಶಕ್ತಿಯಾಗಿ ವಿಕಸಿತವಾಗುವುದು; ಅಂಗದಲ್ಲಿ ನಿಕ್ಷೇಪಿತವಾಗಿರುವ ಸರ್ವಶಕ್ತಿಗಳು ಪ್ರಖರ ವಾಗಿ ಪ್ರಕಟವಾಗಿ ಮಾನವ ಶರಣನಾಗುವನು.

ಗ್ರಂಥಋಣ: ಅಲ್ಲಮಪ್ರಭು, ಚೆನ್ನಬಸವ, ಸಿದ್ಧರಾಮ, ತೋಂಟದ ಸಿದ್ಧಲಿಂಗೇಶ್ವರರ ವಚನಗಳು. ಶಿವಯೋಗ ಪ್ರದೀಪಿಕೆ, ಕೈವಲ್ಯ ಪದ್ಧತಿ, ಅಷ್ಟಾಂಗ ಯೋಗದಲ್ಲಿ ಯಮ ನಿಯಮ, ಶತಕತ್ರಯ, ಭಗವದ್ಗೀತೆ, ಸಿದ್ಧಾಂತ ಶಿಖಾಮಣಿ, ವಚನ ಶಾಸ್ತ್ರಸಾರ, ರಜದೀಪ್ತಿ, ಚಿತ್ಪ್ರಭೆ, ಮಹಾಂತ, ಸಿದ್ಧಗಂಗಾಶ್ರೀ, ಅರ್ಚನ, ಯೋಗಾಂಗ ವಿಭೂಷಣ, ಲಿಂಗಜಿದಮೃತಬೋಧೆ, ಪರಂಜ್ಯೋತಿ (ಜುಲೈ ೧೯೮೮) ಶಿವಯೋಗ ಪ್ರದೀಪಿಕಾ, ವೈರಾಗ್ಯದಲರು, ಶಿವಯೋಗ ಮಂದಿರದ ಬೆಳಗು, ಪಾತಂಜಲಯೋಗ ಸೂತ್ರ ಇತ್ಯಾದಿ.

●

# ಶರಣರು ಕಂಡ ಶಿವ

—ಶಿವಯೋಗಿ॥ಬ್ರಹ್ಮಾಕುಮಾರ ಬಸವರಾಜ ರಾಜಋಷಿ



ಆದಿಸನಾತನ ದೇವೀ ದೇವತೆಗಳ ನಿವಾಸವಾಗಿದ್ದ ಸ್ವರ್ಣಮಯುಗೀ ಭಾರತದಲ್ಲಿ ಯುಗ ಪರಿವರ್ತನೆಯಾಗಿ ಜನನಮರಣ ಚಕ್ರದಲ್ಲಿ ಕ್ರಮಿಸಿ–ಚಲಿಸಿದಾಗ ಭಾರತದಲ್ಲಿ ಭಕ್ತಿ ಯುಗ ಬಂದಿತು. ಏಕೇಶ್ವರನಲ್ಲಿ ಭಕ್ತಿ ಆಗ ಇತ್ತು. ಏಕದೇವೋಪಾಸನೆ ನಡೆದಿತ್ತು. ಅನೇಕ ದೇವರು ಆಗ ಇರಲ್ಲಿಲ್ಲ. ಬಹುದೇವೋಪಾಸನೆ ಆಗ ಬಂದಿರಲಿಲ್ಲ. ಆ ಕಾಲದಲ್ಲಿ ಈಶ್ವರೋಪಾಸನೆ ಮಾತ್ರ ಭಾರತದಲ್ಲಿತ್ತು. ಇದಕ್ಕೆ ಸಾಕ್ಷಿಯಾಗಿ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಅರಬ್ಬೀಸಮುದ್ರದಿಂದ ಬಂಗಾಳಕೊಲ್ಲಿವರೆಗೆ ಕೇವಲ ಇದ್ದದ್ದು ದ್ವಾದಶ ಜ್ಯೋತಿರ್ಲಿಂಗಗಳು ಮಾತ್ರ. ಆಸೇತು ಹಿಮಾಚಲದವರೆಗೆ ಭಾರತೀಯರೆಲ್ಲಾ ಆಗ ಶಿವೋಪಾಸಕರೇ. ಅನ್ಯದೇವರುಗಳ ಹಂಗು ಇಲ್ಲದ ಕಾಲವದು. ರಾಜನಿಂದ ಪ್ರಜೆಗಳವರೆಗೆ, ಧನಿಕನಿಂದ ದೀನನವರೆಗೆ, ಪಂಡಿತನಿಂದ ಪಾಮರರವರೆಗೆ ಈಶ್ವರೋಪಾಸನೆಯಲ್ಲದೆ ನಶ್ವರೋಪಾಸನೆ ಇರಲಿಲ್ಲ ಆಗ ಇದ್ದವೆಂದು ಹೇಳಲು ಯಾವ ಐತಿಹಾಸಿಕ ಆಧಾರಗಳೂ ಇಲ್ಲ. ಆಗ ಶಿವೋಪಾಸಕರಲ್ಲಿ ಎರಡು ಪಂಗಡಗಳಾದದ್ದು ಕಂಡು ಬರುತ್ತದೆ. ದೇವಾಲಯಗಳಲ್ಲಿನ ಶಿವೋಪಾಸಕರಿಗೆ ಶೈವಬ್ರಾಹ್ಮಣರೆಂದೂ ಅಂಗದ ಮೇಲೆ ಶಿವಲಿಂಗ ಧರಿಸಿ ಶಿವೋಪಾಸಕರಾದವರಿಗೆ ವೀರಶೈವರೆಂದೂ ಪ್ರತೀತಿ ಇದ್ದಿದ್ದು ಕಂಡುಬರುತ್ತದೆ.

ಭಕ್ತಿ ಪ್ರಧಾನ ಭಾರತದ ಅಭಕ್ತಿಯುಗದಲ್ಲಿ ಭಕ್ತಶಿರೋಮಣಿಗಳಲ್ಲಿ ಚಂಚಲತೆ ಬೆಳೆದು ಅವರ ಏಕದೇವೋಪಾಸನೆಗೆ ಬದಲಾಗಿ ಬಹುದೇವೋಪಾಸನೆ ಬೆಳೆದಿತ್ತು. ಬ್ರಹ್ಮ

ವಿಷ್ಣು ಶಂಕರರೆಂಬ ತ್ರಿಮೂರ್ತಿಗಳ ಪೂಜೆಗೆ ಪ್ರಾರಂಭಿಸಿದರು. ಶಕ್ತಿ ಉಪಾಸಕರು ಜಗದಂಬೆ-ಲಕ್ಷ್ಮಿ-ಸರಸ್ವತಿಗಳನ್ನು ಪೂಜಿಸತೊಡಗಿದರು. ಅಷ್ಟದಿಕ್ಪಾಲಕರ ಅರ್ಚನೆ, ಬಲಶಾಲಿ ರಾಜರುಗಳಲ್ಲಿ ಭಕ್ತಿ, ಶಾಸ್ತ್ರ, ಪುರಾಣಾದಿಗಳಿಂದ ಬಹುದೇವೋಪಾಸನೆ ಬಲಿತು, ಭಾರತದಲ್ಲಿದ್ದ ಏಕದೇವೋಪಾಸನೆ ನಶಿಸಿಹೋಗಿದೆ ಎಂದರೆ ತಪ್ಪಿಲ್ಲ.

ಹತ್ತರಿಂದ ಹನ್ನೆರಡನೆಯ ಶತಮಾನಗಳಲ್ಲಿ ವೀರಶೈವರಲ್ಲಿ ಕ್ರಾಂತಿಕಾರ ವಿಚಾರಗಳು ಮೂಡಿ ಮತ್ತೆ ಶಿವನೇ ಸರ್ವೋತ್ತಮನೆಂದೂ, ಶಿವನಲ್ಲದೆ ಅನ್ಯದೇವರೇ ಇಲ್ಲವೆಂದೂ, ಶಿವನ ಜೊತೆಜೊತೆಗೆ ಅನ್ಯದೇವತಾ ಉಪಾಸನೆ ಮಾಡುವವರನ್ನು ವ್ಯಭಿಚಾರಿ ಭಕ್ತರೆಂದೂ ಅಂಥವರನ್ನು ಶಿವನು ಮೆಚ್ಚುವುದಿಲ್ಲವೆಂದೂ ಶಿವನು ಮೆಚ್ಚದವರನ್ನು ಶಿವಶರಣರೂ ನಚ್ಚಿಕೂಡದೆಂದೂ ಶಾಸ್ತ್ರ ಪುರಾಣಾದಿಗಳಲ್ಲಿನ ಯಜ್ಞಯಾಗಗಳ ಹೆಸರಿನಲ್ಲಿ ನಡೆಯುತ್ತಿದ್ದ ಬಲಿಗಳನ್ನು-ಅಂಧಶ್ರದ್ಧೆ-ಸಾಂಪ್ರದಾಯ ಶರಣತೆಯನ್ನು ಖಂಡಿಸಿ, ದಂಡಿಸಿ, ಸೆಟೆದು ನಿಂತ ವೀರಶೈವರೆಂದರೆ ಶರಣರು ಅವರೇ ಶಿವಶರಣರು. ಶಿವನಿಗಲ್ಲದೆ ಇನ್ನೊಂದು ದೈವಕ್ಕೆ ಶರಣೆನ್ನದ ಶಿವಶರಣರು. ಅವರ ವಚನಗಳಿಂದಲೇ ಅದನ್ನು ಅರಿಯೋಣ.

**ದೇವರು ಒಬ್ಬನೇ ಇದ್ದಾನೆ:**

ಭಕ್ತಿಭಂಡಾರಿ ಬಸವಣ್ಣನವರು ಶಿವಶರಣರಲ್ಲೆಲ್ಲಾ ಹೆಸರಾದವರು. ಹನ್ನೆರಡನೇ ಶತಮಾನದ ಶಿವಶರಣರ ಸಂಘಟಿಕರು, ನೇತಾರರು, "ಕೂಡಲಸಂಗಮದೇವ" ಎಂಬ ಅಂಕಿತನಾಮದಿಂದ ವಚನ ರಚನೆ ಮಾಡಿದ ಮಹಾಮಂತ್ರ ಪುರುಷರು.

ಸ್ವಾಮಿ ನೀನು, ಶಾಶ್ವತನು ನೀನು. ಎತ್ತಿದೆ ಬಿರುದು ಜಗವೆಲ್ಲರಿಯಲು
ಮಹದೇವ-ಮಹದೇವ ಇಲ್ಲಿಂದ ಬೇರೆ ಶಬ್ದವಿಲ್ಲ. ಪಶುಪತಿ ಜಗಕೆ-ಏಕೋದೇವ
ಸ್ವರ್ಗ-ಮರ್ತ್ಯ-ಪಾತಾಳಕ್ಕೆಲ್ಲಾ ಒಬ್ಬನೇ ದೇವ-ಕೂಡಲಸಂಗಮದೇವ.

ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಲು ಬೇಡ
ದೇವನೊಬ್ಬನೇ ಕಾಣಿರೋ ಇಬ್ಬರೆಂಬುದು ಹುಸಿ ನೋಡಾ
ಕೂಡಲ ಸಂಗಮ ದೇವನೊಬ್ಬನೇ ಅಲ್ಲದೆ ಇಬ್ಬರಿಲ್ಲವೆಂದಿತ್ತು ವೇದವು.

ಶಿವನೇ ಜಗತ್ರಯಕ್ಕೊಡೆಯನೆಂದುದು ವೇದ ಉತ್ಪತ್ತಿ-ಸ್ಥಿತಿ-
ಲಯಕಾರಣವೆಂದುದು ವೇದ
ಈಶ್ವರಸ್ಸರ್ವ ಜಗತ್ಪ್ರಭುಃ ಪ್ರೇರಕೋ ವಿಶ್ವಬುಕ್ ಎಂಬ ಶೃತಿ ಇದು ಕಾರಣ
ಕೂಡಲಸಂಗಮ ದೇವನೊಬ್ಬನೇ ದೇವನು.

ಶಿವಶರಣರ ವಚನಾಮೃತವನ್ನು ಸವಿಯಬೇಕಾದರೆ, ಶಿವಶರಣರು ಶಿವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದರೆ ನಾವೂ ಸಹಾ "ಶಿವಚಕೋರಿ"ಯಾದರೆ ಮಾತ್ರ ಸಾಧ್ಯ. ಶಿವನನ್ನು ಕಾಣಬೇಕಾದರ ಶಿವಾರ್ಪಿತಭಾವ, ಭಾವನೆಗಳು ಭಕ್ತಿಯಲ್ಲಿ ಯುಕ್ತಿ-ಯುಕ್ತ

ಯಲ್ಲಿ ಭಕ್ತಿ ಬೇಕೇಬೇಕು. ಶಿವಭಕ್ತನಿಗಲ್ಲದೆ–ಶಿವಶರಣನಿಗಲ್ಲದೆ ಶಿವ ಜ್ಞಾನವನ್ನು ಬೇರಾರಿಗೂ ಹೇಳಬಾರದು. ಶರಣರು ಕಂಡ ಶಿವನನ್ನು ಇಲ್ಲಿ ನಾವೂ ಕಾಣಬಾರದೇಕೆ. ಶಿವಶರಣರ ವಚನ ಭಂಡಾರದಲ್ಲಿ ಶಿವನಮಹಿಮೆಗಳು ಈ ರೀತಿ ಸಂಗ್ರಹಗೊಂಡಿವೆ.

೧. ಶಿವಪರಮಾತ್ಮನು ಜ್ಯೋತಿರ್ಲಿಂಗನು
೨. ಶಿವಪರಮಾತ್ಮನು ಅಜಡನು
೩. ಶಿವಪರಮಾತ್ಮನು ಅಜನ್ಮನು
೪. ಶಿವಪರಮಾತ್ಮನು ಅಯೋನಿಜನು
೫. ಶಿವಪರಮಾತ್ಮನು ಅಕಾಯನು
೬. ಶಿವಪರಮಾತ್ಮನು ಅಶರೀರಿಯು
೭. ಶಿವಪರಮಾತ್ಮನು ಅವ್ಯಕ್ತನು
೮. ಶಿವಪರಮಾತ್ಮನು ಅಭೋಕ್ತನು
೯. ಶಿವಪರಮಾತ್ಮನು ಅಹಿಂಸಕನು
೧೦. ಶಿವಪರಮಾತ್ಮನು ಅನಾದಿಯು
೧೧. ಶಿವಪರಮಾತ್ಮನು ಅವಿನಾಶಿಯು
೧೨. ಶಿವಪರಮಾತ್ಮನು ಅವಿಭಾಜ್ಯನು
೧೩. ಶಿವಪರಮಾತ್ಮನು ಸ್ವಯಂಭುಲಿಂಗನು
೧೪. ಶಿವಪರಮಾತ್ಮನು ಮೃತ್ಯುಂಜಯನು
೧೫. ಶಿವಪರಮಾತ್ಮನು ಸರ್ವಜ್ಞ ಜ್ಞಾನೇಶ್ವರನು
೧೬. ಶಿವಪರಮಾತ್ಮನು ಸರ್ವ ಆತ್ಮರಿಗೆ ಲೇಸನೇ ಬಯಸುವವನು.

ಶಿವನು ಈ ಮೇಲ್ಕಂಡ ಷೋಡಶ ಮಹಾಮಹಿಮನು. ಈ ಎಲ್ಲಾ ಸೋಲಾ ಮಹಿಮೆಗಳು ಯಾರೊಬ್ಬನಲ್ಲಿಯೇ ಇವೆಯೋ ಅವನೇ ಶಿವನು. ಅವುಗಳಲ್ಲಿ ಕೆಲವು ಇವೆ ಕೆಲವು ಇಲ್ಲವೆಂದರೆ ಅವನು ಅಶಿವನೇ ಹೊರತು ಶಿವನಲ್ಲ. ಆದ್ದರಿಂದ ಮೇಲಿನ ಎಲ್ಲಾ ಶಿವನ ಮಹಿಮೆಗಳನ್ನೂ ಸದಾ ಅಜಪಾಜಪ ಮಾಡಿರುವವರೆಂದರೆ ಶಿವಶರಣರು.

**ಶಿವಪರಮಾತ್ಮನು ಹುಟ್ಟು–ಸಾವಿಲ್ಲದ ಅಜನ್ಮ–ಮೃತ್ಯುಂಜಯ ಶಂಭುವು:**

ಹುಟ್ಟು–ಮೆಟ್ಟೆಂಬುದು ನಿಮ್ಮಲ್ಲಿಲ್ಲ. ನಿಮ್ಮಿಂದ–ನೀವೇ ಸ್ವಯಂಭುವಯ್ಯಾ
ಇಂತಾದಿರಯ್ಯಾ–ನೀವಿಂತಾದಿರಯ್ಯಾ. ನಿಮ್ಮ ಮಹಾತ್ಮೆಯ ನೀವೇ ಬಲ್ಲಿರಿ.
ನಿಜಗುರು ಕಪಿಲಸಿದ್ಧ ಮಲ್ಲಿನಾಥಯ್ಯಾ.

ತಾಯಿಯ ಉದರದಿಂದ ನಿಮಗೆ ಹುಟ್ಟಿಲ್ಲ, ಶರೀರಕ್ಕೆ ಮೆಟ್ಟಿರುವಂತೆ ಆತ್ಮಕ್ಕೆ ಮೆಟ್ಟಿದ ಶರೀರವು ನಿಮಗಿಲ್ಲೆ ಇಲ್ಲ. ನಿಮ್ಮಿಂದ–ನೀವೇ ಆದವರು ಆದ್ದರಿಂದ ನೀವು ಸ್ವಯಂಭು ಅರ್ಥಾತ್ ಶಂಭು ನಿಮ್ಮ ಮಹಾತ್ಮೆ ನೀವೇ ಬಲ್ಲಿರಲ್ಲದೆ ಬೇರಾರಿಗೂ ತಿಳಿಯದು ಎನ್ನುತ್ತಿದೆ ಮೇಲಿನ ಶಿವಶರಣರ ವಚನ.

**ಶಿವಪರಮಾತ್ಮನು ಅಯೋನಿಜನು:**

ಜಗತ್ತಿನಲ್ಲಿ ಎಲ್ಲರಿಗೂ ಮಾತಾ–ಪಿತರುಂಟು, ಮಾತಾಪಿತರಿಂದ ಜನನ ಅವರಿಗುಂಟು ಆದರೆ ಶಿವಪರಮಾತ್ಮನಿಗೆ ಮಾತಾಪಿತರಿಲ್ಲ, ಗುರುವಿಲ್ಲ, ಪಿತರ ಪಿತ, ಪತಿಗಳಪತಿ, ಗುರುವಿನಗುರು ಸ್ವಯಂ ಪರಮಾತ್ಮನೆ ಶಿವನೇ ಆಗಿದ್ದಾನೆ ಎನ್ನುತ್ತಿದೆ ಈ ವಚನ.

ಅಮೃತವತಿ ಸೋಮಶಂಭುವಿಗೆ ಹುಟ್ಟಿದಾತ ಇಂದ್ರ
ಸತ್ಯಋಷಿ ಜೋಪ್ಪಾದೇವಿಗೆ ಹುಟ್ಟಿದಾತ ಬ್ರಹ್ಮ
ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು ನಾಭೀರಾಜ
ವರುತಾದೇವಿಗೆ ಹುಟ್ಟಿದಾತ ಅರುಹ
ಇವರೆಲ್ಲರೂ ಯೋನಿಜರೆಂಬುದ ಜಗವೆಲ್ಲ ಬಲ್ಲುದು ಉತ್ಪತ್ತಿ-ಸ್ಥಿತಿ,
ಪ್ರಳಯಕ್ಕೆ ಹೊರಗಾದ ನಮ್ಮ
ಕೂಡಲಸಂಗಮದೇವಂಗೆ ಮಾತಾಪಿತರುಂಟೇ ಹೇಳಿರೇ?

**ಅನಾದಿ-ಅವಿನಾಶಿ-ಅವ್ಯಕ್ತನು ಶಿವಪರಮಾತ್ಮನು:**

ಅಮೌಲ್ಯನು, ಅಪ್ರಮಾಣನು, ಅಗೋಚರ ಲಿಂಗವು
ಆದಿ-ಮಧ್ಯಾಂತ್ಯವಿಲ್ಲದ ಲಿಂಗವು
ನಿತ್ಯ-ನಿರ್ಮಲಲಿಂಗವು, ಅಯೋನಿಸಂಭವನಯ್ಯಾ
ನಮ್ಮ ಕೂಡಲಸಂಗಮದೇವಾ.
ಶಿವಪರಮಾತ್ಮನಿಗೆ ಮೌಲ್ಯ ಇಷ್ಟೆ ಎಂದು ಹೇಳಲಾಗದ ಅಮೌಲ್ಯನು
ಶಿವನು-ಸತ್ಯನು, ನಿತ್ಯನು, ಸಾಕಿಗೆ ಸಿಲುಕದವನು ಅಂದರೆ ಅಪ್ರಮಾಣನು
ಅಗೋಚರನು, ಅವ್ಯಕ್ತನು, ಅಸದೃಶ್ಯನು ಆದರೂ ಜ್ಯೋತಿರ್ಲಿಂಗನು
ಆದಿ-ಮಧ್ಯ-ಅಂತ್ಯಗಳಿಲ್ಲದ ಅನಾದಿ ಅವಿನಾಶಿ ಜ್ಯೋತಿರ್ಲಿಂಗನು
ಸದಾ ನಿರ್ಮಲನು-ಶ್ರೇಷ್ಠನು, ಮಲರಹಿತನು, ಪಾಪರಹಿತನು
ಅಯೋನಿ ಸಂಭವ ಶಂಭುಲಿಂಗನು ಕೂಡಲಸಂಗಮ ಶಿವನು.

**ಅವ್ಯಕ್ತ-ಅಭೋಕ್ತ-ಅಭೇದ್ಯ ಜ್ಯೋತಿರ್ಲಿಂಗನು ಶಿವನು:**

ತಾಯಿತಂದೆ ಇಲ್ಲದ ಕಂದಾ ನಿನಗೆ ನೀನೇ ಹುಟ್ಟಿ ಬೆಳೆದೆಯಲ್ಲಾ
ನಿನ್ನ ಪರಿಣಾಮವೇ ನಿನಗೆ ಪ್ರಾಣ ತೃಪ್ತಿಯಾಗಿ ಇದ್ದೆಯಲ್ಲಾ
ಭೇದಕರಿಗೆ ಅಭೇದ್ಯನಾಗಿ ನಿನ್ನ ನೀನೇ ಬೆಳಗುತ್ತಿರ್ದೆಯಲ್ಲಾ
ನಿನ್ನ ಚಾರಿತ್ರ್ಯ ನಿನಗೇ ಸಹಜ ಗುಹೇಶ್ವರ.

ತಾಯಿ ತಂದೆ ಇಲ್ಲದೆ ನಿನಗೆ ನೀನೇ ಹುಟ್ಟಿ ಬೆಳೆದ ಚೈತನ್ಯನು ಸದಾ ಎಳೆಯನೂ (ಕಂದಾ) ಆದರೂ ಹಳೆಯನೂ (ಬೆಳೆದವನು) ಆಗಿರುವೆಯಲ್ಲಾ. ನೀನು ಅಭೋಕ್ತನು ಆದ್ದರಿಂದ ನೀನು ಸದಾ ಸಂತೃಪ್ತನು ನಿನ್ನನ್ನು ಯಾರೂ ಭೇದಿಸಲಾರದ ಅಭೇದ್ಯನು, ಅವಿಚ್ಛಿನ್ನನು, ಅವಿಭಾಜ್ಯನು, ಸಂತೃಪ್ತನು. ನಿನ್ನನ್ನು ಯಾರೂ ಭೇದಿಸಲಾರದ ಅಭೇದ್ಯನು, ಅವಿಚ್ಛಿನ್ನನು, ಅವಿಭಾಜ್ಯನು ಸದಾ ನಿನಗೆ ನೀನೇ ಬೆಳಗುತ್ತಿರುವ ಜ್ಯೋತಿರ್ಲಿಂಗ ಪರಮ ಪವಿತ್ರ ಸ್ವರೂಪನು ನಿನ್ನ ಚರಿತೆ ನಿನಗೆ ಗೊತ್ತಲ್ಲದೆ ಅನ್ಯರು ಹೇಗೆ ವರ್ಣಿಸಬಲ್ಲರು.

**ಶಿವನು ಬೇರೆ ಮತ್ತು ತಪಸ್ವೀ ಶಂಕರನು ಬೇರೆ ಎಂದು ಶರಣರು ಹೇಳುತ್ತಾರೆ:**

ಬೆನಕನು ಹರನ (ಶಿವನ) ಮಗನೆಂಬ ಪಾತಕರೆ ನೀವು ಕೇಳಿರೋ
ಪಾರ್ವತಿಯು ಹರನ (ಶಿವನ) ಸತಿಯೆಂಬ ಶಿವದ್ರೋಹಿಗಳೆ ನೀವು ಕೇಳಿರೋ
ಲಿಂಗದ್ರೋಹಿಗಳೆ ನೀವು ಕೇಳಿರೋ
ಅಜಾತ–ಪವಿತ್ರನೊಬ್ಬನೇ ಕೂಡಲ ಸಂಗಮದೇವ ಕಾಣಿರೋ.

**ನಮ್ಮ ಶಿವನು ಈ ಕೆಳಗಿನ ಗುಣವುಳ್ಳವರನಲ್ಲವೆಂದು ಹೇಳುತ್ತಾರೆ ಶರಣರು:**

ಅಸುರ ಮಾಲೆಗಳಿಲ್ಲ–ತ್ರಿಶೂಲಢಮರುಗುವಿಲ್ಲ
ಬ್ರಹ್ಮಕಪಾಲವಿಲ್ಲ–ಭಸ್ಮಭೂಷಣನಲ್ಲ
ವೃಷಭವಾಹನನಲ್ಲ–ಋಷಿಯ ಮಗಳೊಡನಿದ್ದಾತನಲ್ಲ
ಎಸಗುವ ಸಂಸಾರದ–ಕುರುಹಿಲ್ಲದಾತಂಗೆ
ಹೆಸರಾವುದು ಎಂದ–ಅಂಬಿಗರ ಚೌಡಯ್ಯ.

**ಶಿವನು ಜಡಮೂರ್ತಿಯಲ್ಲ ಎನ್ನುತ್ತಾರೆ ಶರಣರು:**

ಒಂದು ಜನ್ಮದಲ್ಲಿ ನಿನ್ನ ಕಲ್ಲದೇವರ ಮಾಡಿ–ಕಲ್ಲಕುಟಿಕನಾಗಿ ಹುಟ್ಟಿದೆ
ಒಂದು ಜನ್ಮದಲ್ಲಿ ನಿನ್ನ ಕಟ್ಟಿಗೆಯದೇವರ ಮಾಡಿ–ಬಡಿಗನಾಗಿ ಹುಟ್ಟಿದೆ
ಒಂದು ಜನ್ಮದಲ್ಲಿ ನಿನ್ನ ಮಣ್ಣದೇವರಮಾಡಿ–ಕುಂಬಾರನಾಗಿ ಹುಟ್ಟಿದೆ
ಒಂದು ಜನ್ಮದಲ್ಲಿ ನಿನ್ನ ನೀರದೇವರಮಾಡಿ–ವಿಪ್ರನಾಗಿ ಹುಟ್ಟಿದೆ
ಇಂತಿವೆಲ್ಲ ನೀವೆಂದು ಭಾವಿಸಿ–ಇಂತೀ ಭವಂಗಳಲ್ಲಿ ಹುಟ್ಟಿದೆ
ನೀನು ನಿರಾಕಾರನೆಂದು ಎನ್ನ ಕರಸ್ಥಲದಲ್ಲಿ ಪೂಜಿಸಿ
ಸಕಲಕುಲದವರಿಗೆ ಹೊರಗಾದೆ ಕಾಣ
ಶಿವಪ್ರಿಯ ಚೆನ್ನಕದಂಬಲಿಂಗ ನಿರ್ಮಾಣ ಪ್ರಭುವೆ.

**ಪರಮಾತ್ಮ ಸರ್ವವ್ಯಾಪಿ ಅಲ್ಲ ಎನ್ನುತ್ತಾರೆ ಶರಣರು:**

ಶಿವನು ಜಗದ್ಭರಿತನೆಂದೆಂಬುವರ ಬಾಯಲ್ಲಿ
ಇಕ್ಕಿರೋ ಹನ್ನೆರಡು ವರ್ಷದ ಹಳೆಯ ಪಾದರಕ್ಷೆಯ
ಅದೇನು ಕಾರಣವೆಂದಡೆ
ಶಿವನು ಜಗದ್ಭರಿತನೇ? ಅಲ್ಲ
ಶಿವನು ಜಗದ್ಭರಿತನಾದೊಡೆ ಜೀವಕ್ಕೆ–ಜೀವ ಭಕ್ಷಿಸಲೇತಕೋ?
ಶಿವನು ಜಗದ್ಭರಿತನಾದೊಡೆ ಪ್ರಾಣಕ್ಕೆ–ಪ್ರಾಣ ವಿರೋಧಿಸಲೇತಕೋ?
ಶಿವನು ಜಗದ್ಭರಿತನಾದೊಡೆ ತಾನೇ ಗುರು, ತಾನೇ ಲಿಂಗ, ತಾನೇ ಜಂಗಮ
ತಾನೇ ಪಾದೋದಕ–ಪ್ರಸಾದ ಕಾಣ ನಿಃಸಂಗ ನಿರಾಳ ಪ್ರಭುವೇ.

**ಅದ್ವೈತ ಒಂದು ಭ್ರಮೆ:**

ಶರೀರದಲ್ಲಿ ಇರುವ ಆತ್ಮನು ಜನನಮರಣ ಚಕ್ರದಲ್ಲಿ ವ್ಯಕ್ತನಾಗಿ ಭೋಕ್ತನಾಗಿ ಋಣಚಕ್ರದಲ್ಲಿ ತಿರುಗುತ್ತಿರುತ್ತಾನೆ. ಜನನಮರಣದ ಚಕ್ರದಲ್ಲಿ ತಿರುಗುತ್ತಿರುವ ಆತ್ಮನು ಜನನಮರಣಗಳಲ್ಲಿಯೇ ಬಾರದ ಶಿವನು ಹೇಗೆ ಆಗುತ್ತಾನೆ. ಅಭೋಕ್ತನು ಹೇಗೆ ಆಗುತ್ತಾನೆ. ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ ಎಂದು ತನ್ನನ್ನು ತಾನೇ ಕರೆದು ಕೊಳ್ಳುವುದು ಮನೋಭ್ರಮೆ ಮಾತಿನ ಮಾಲೆ ಎನ್ನುತ್ತಾರೆ ಶರಣರು. ತನ್ನನ್ನೇ ತಾನು ಶಿವನೆಂದೂ, ಬ್ರಹ್ಮನೆಂದೂ, ತನ್ನ ಬಿಟ್ಟು ದೇವರಿಲ್ಲೆಂದೂ–ಮಣ್ಣ ಬಿಟ್ಟು ಮಡಿಕೆ ಇಲ್ಲೆಂದೂ ಘಟಾಕಾಶ–ಮಹಾಕಾಶವೆಂದು ಪಂಚಭೂತಗಳನ್ನೂ ಆತ್ಮ–ಪರಮಾತ್ಮನ ಅಂದರವರಿಯದೆ ವಾದ ಮಾಡಿದರೆ ಅಂತಹವರ ಜೊತೆ ಮೌನ ಮಾಡಿರೆನ್ನುತ್ತಾರೆ ಶರಣರು. ಶಿವಶರಣರು ಶಿವನನ್ನು ಪತಿ ಎಂದೂ ಆತ್ಮನಾದ ತನ್ನನ್ನು ಸತಿ ಎಂದೂ ಎಂದೆಂದಿಗೂ ನಂಬುವವರಾಗಿರುತ್ತಾರೆ.

**ಅದ್ವೈತವ ನಂಬಿದ್ದ ಅಲ್ಲಮಪ್ರಭುಗಳು ಹೀಗೆ ಹೇಳಿದ್ದಾರೆ:**

ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ
ಬ್ರಹ್ಮವ ನುಡಿದು ಭ್ರಮಿತನಾದೆನಯ್ಯಾ
ಶೂನ್ಯವ ನುಡಿದು ಸುಖ–ದುಃಖಕ್ಕೆ ಗುರಿಯಾದೆನಯ್ಯಾ
ಗುಹೇಶ್ವರ ನಿಮ್ಮ ಶರಣಸಂಗನ ಬಸವನ
ಸಾನ್ನಿಧ್ಯದಿಂದಾನು ಸದ್ಭಕ್ತನಾದೆನಯ್ಯಾ.

**ದ್ವೈತಾದ್ವೈತದ ಬಗ್ಗೆ ಬಸವಣ್ಣನವರು ಹೀಗೆ ಹೇಳಿದ್ದಾರೆ:**

ದ್ವೈತಾದ್ವೈತವನೋದಿ ಏನು ಮಾಡುವಿರಯ್ಯಾ? ನಮ್ಮ ಶರಣರಗುರಿಗರಗಾಗಿ
ಕರಗದನ್ನಕ್ಕಾ
ಸ್ಥಾವರ–ಜಂಗಮ ಒಂದೇ ಎಂದು ನಂಬದನ್ನಕ್ಕಾ ಕೂಡಲ ಸಂಗಮದೇವ
ಬರಿಯ ಮಾತಿನ ಮಾಚಿಲೆಯಲೇನಹುದು?

**ಶಿವನೇ ಪತಿ ಶರಣನೇ ಸತಿ:**

ಪರಮಮಂಗಳಮೂರ್ತಿ ಪರಂಜ್ಯೋತಿ ಸ್ವರೂಪನೂ, ಪರಮ ಪವಿತ್ರನು ಆದ ಪರಮೇಶ್ವರನನ್ನು ತನ್ನ ಪತಿ ಎಂದು ಆತ್ಮರಾದ ತಮ್ಮನ್ನು ಸತಿ ಎಂದೂ ಅಂಗೈಯಲ್ಲಿರುವ ಲಿಂಗವು ಶಿವನ ಪ್ರತೀಕವೆಂದೂ ಅಂಗದೊಳಗಿರುವ ಆತ್ಮವು ಸತಿಯ ಪ್ರತೀಕವೆಂದೂ ಲಿಂಗಾಂಗ ಸಾಮರಸ್ಯ ಮಾಡುವರು ಶರಣರು.

ಜಗವೆಲ್ಲಾ ಅರಿಯಲು ಎನಗೊಬ್ಬ ಗಂಡನುಂಟು ಆನು ಮುತ್ತೈದೆ, ಆನು ನಿಸ್ಸೈದೆ
ಕೂಡಲ ಸಂಗಯ್ಯನಂತಪ್ಪ ಎನಗೊಬ್ಬ ಗಂಡನುಂಟು.

ಎಂದೂ ಹುಟ್ಟರಿಯದ ಸಾಯಲಾರದ ಅಜನ್ಮ ಮೃತ್ಯುಂಜಯನಾದ ಶಿವನನ್ನು ತನ್ನ ಗಂಡನೆಂದೂ ಆತ್ಮನಾದ ತನ್ನನ್ನು ಪತಿವ್ರತಾ ಸತಿಶಿರೋಮಣಿ ಎಂದೂ ಹಾಗೂ ಎಂದೆಂದಿಗೂ ನಾನು ಮುಂಡೆಯಾಗದ ಮುತ್ತೈದೆ ಎಂದೂ ಅಂದರೆ ತನ್ನ ಗಂಡನಾದ ಶಿವನು ಮೃತ್ಯುಂಜಯನೆಂದೂ ಹಾಗೂ ತಾನು ನಿಸ್ಸೈದೆ ಅಂದರೆ ಪತಿಯ ವ್ರತದಲ್ಲಿ ನಿಷ್ಠೆ ಉಳ್ಳವಳೆಂದೂ ಶಿವಪತಿ ಶರಣಸತಿ ಭಾವನೆಯು ಶಾಶ್ವತವಾಗಿರುವುದು ಕಂಡು ಬರುತ್ತದೆ. ಆತ್ಮನಾದ ಬಸವಣ್ಣನು ಶರೀರ ರೂಪದಿಂದ ಗಂಡಸಾಗಿದ್ದರೂ ತನ್ನನ್ನು ಅಂದರೆ ಆತ್ಮನಾದ ತನ್ನನ್ನು ಸತಿರೂಪದಲ್ಲಿಯೇ ಸಂಬೋಧಿಸಿಕೊಂಡಿದ್ದಾನೆ. ಇದು ಶರಣರ ಶಿವಪತಿ ಶರಣ ಸತಿ ಸಂಬಂಧವನ್ನು ತೋರಿಸುತ್ತದೆ.

ಸತಿ ಭಕ್ತೆಯಾದೊಡೆ ಹೊಲೆಗಂಜಲಾಗದು. ಪತಿ ಭಕ್ತನಾದೊಡೆ ಕುಲಕ್ಕಂಜಲಾಗದು
ಸತಿ-ಪತಿ ಎಂಬ ಅಂಗ ಸುಖ ಹಿಂಗಿ ಲಿಂಗವೇ ಪತಿಯಾದ ಬಳಿಕ
ಸತಿಗೆ ಬೇರೆ ಪತಿಯುಂಟೆ? ಪತಿಗೆ ಬೇರೆ ಸತಿಯುಂಟೆ?
ಪಾಲುಂಡು ಮೇಲುಂಬರೇ? ಗುಹೇಶ್ವರಾ?

ಒಂದು ಸಂಸಾರದಲ್ಲಿ ಸತಿ-ಪತಿಗಳಿದ್ದರೆ ಅವರಿಬ್ಬರೂ ಶಿವಭಕ್ತರಾದರೆ, ವೀರಶೈವ ರಾದರೆ, ಶಿವಶರಣರಾದರೆ ಸತಿಯ ಅಂಗದ ಮೇಲಿರುವ ಶಿವಲಿಂಗದಲ್ಲಿ ಭಕ್ತಿ ಬೆಳೆದರೆ ತನ್ನ ಹೊಲೆತನಕ್ಕೆ ಅಂಜುವ ಅಗತ್ಯವಿಲ್ಲ, ಶರೀರ ಧರ್ಮ ಮುಟ್ಟು, ಆದರಿಂದ ಶಿವಭಕ್ತಿಗೆ ಮೈಲಿಗೆಯಾಗುವುದಿಲ್ಲ. ಅದರಂತೆಯೇ ಪತಿಯು ಧರಿಸಿರುವ ಶಿವಲಿಂಗದಲ್ಲಿ ಭಕ್ತಿ ಬೆಳೆದರೆ ಆಗ ಆತನು ಯಾವದೇ ಲೌಕಿಕದ ಜಾತಿಯಾಗಿದ್ದರೂ ಆತನೂ ಶರಣನೇ ಆದ್ದರಿಂದ ತನ್ನ ಪೂರ್ವ ಕುಲಕ್ಕೆ ಅಂಜುವ ಅಗತ್ಯವಿಲ್ಲ ಅಥವಾ ಬೇರೆ ಕುಲದವರು ತನ್ನನ್ನು ಮುಟ್ಟಿದರು ತಾನು ಮೈಲಿಗೆಯಾದೆನೆಂದು ಎಂದೂ ಅಂಜಕೂಡದು. ಶರೀರ ಧರ್ಮ ಪ್ರಕಾರ ಸತಿ-ಪತಿ ಎಂಬ ಅಜ್ಞಾನ ಭಾವದಿಂದ ಅಂಗಸುಖಿಗಳು ಅಂಗಸುಖವಳಿದರೆ ಶಿವಲಿಂಗವೇ ಪತಿ ಎಂದು ಇಬ್ಬರೂ ತಮ್ಮ ತಮ್ಮ ಶಿವಲಿಂಗದಲ್ಲಿಯೇ ನಿಷ್ಠೆಉಳ್ಳವರಾಗಿರಬೇಕು. ಶರೀರಧರ್ಮ ಮರೆ ಯಬೇಕು. ಹೆಣ್ಣು ತನ್ನನ್ನು ಲೌಕಿಕ ಗಂಡನ ಸತಿ ಎಂದು ಇನ್ನು ಭ್ರಮಿಸುವ ಅಗತ್ಯವಿಲ್ಲ ಗಂಡನೆಂದೂ ಹಿಂದೆ ತಿಳಿದವನು ಈಗ ಶಿವನನ್ನೇ ತನಗೂ ಪತಿ ಎಂದೂ ನಂಬಿರುವದರಿಂದ ತಾನೇ ಸತಿಯಾಗಿ ಶಿವನನ್ನೇ ಪತಿಯಾಗಿ ಸ್ವೀಕರಿಸಿದ ಮೇಲೆ ಲೌಕಿಕ ಅವರಿಗಿಲ್ಲ. ಚಪಾತಿ-ರೊಟ್ಟಿ-ಪಲ್ಯ-ಅನ್ನ-ಸಾರು ಎಲ್ಲ ಉಂಡು ಕೊನೆಗೆ ಹಾಲು ಕುಡಿದ ಮೇಲೆ ಮತ್ತೆ ಬೇರೆ ಇನ್ನೊಮ್ಮೆ ಊಟ ಮಾಡುವ ಅಗತ್ಯ ಹೇಗಿಲ್ಲವೊ ಅಂದಿನ ದಿನಕ್ಕೆ. ಹಾಗೆಯೇ ಈ ಜನ್ಮಕ್ಕೆ ಆ ಸತಿಪತಿಗಳಿಗೆ ಶಿವನೇ ಪತಿ ತಾವೇ ಸತಿ ಎಂಬ ಅಂತಿಮ ನಿರ್ಣಯ, ನಿಶ್ಚಿಂತ, ಶಿವೋಪಾಸಕರಾಗಿರಬೇಕು ಎನ್ನುತ್ತಾರೆ ಅಲ್ಲಮಪ್ರಭುಗಳು.

ಅರಸನ ಕಂಡು ತನ್ನ ಪುರುಷನ ಮರೆದರೆ ಮರನೇರಿ ಕೈಬಿಟ್ಟಂತಾಯಿತಯ್ಯಾ
ಇಹಲೋಕಕ್ಕೆ ದೂರ ಪರಲೋಕಕ್ಕೆ ದೂರ
ನಮ್ಮ ಕೂಡಲ ಸಂಗಮದೇವ ಜಂಗಮ ಮುಖ ಲಿಂಗವಾದ ಕಾರಣ.

ಆತ್ಮನಾದ ತನ್ನನ್ನು ಸತಿ ಎಂದು ತಿಳಿದು ಪರಮಾತ್ಮನಾದ ಶಿವನನ್ನು ಪತಿ ಎಂದು ಸ್ವೀಕರಿಸಿದ ಮೇಲೆ ಅಂಗೈನಲ್ಲಿರುವ ಲಿಂಗವು ಜಂಗಮಮುಖವಾದ ಅಂದರೆ ಚೈತನ್ಯ ಶಿವನ ಪ್ರತೀಕವಾಗಿದೆ ಎಂದು ನಂಬಿದ ಮೇಲೆ ಯಾವುದೇ ಶರೀರಧಾರಿ ಅನ್ಯದೇವರುಗಳಿಗೆ ಶರಣುಹೋದರೆ ಚಕ್ರವರ್ತಿಯ ಹೆಂಡತಿಯಾದ ರಾಣಿಯು ತನ್ನ ಪತಿಯ ಮಹತ್ವವನ್ನು ತನ್ನ ಸ್ಥಾನವನ್ನು ಅರಿಯದೇ ಕೇವಲ ಒಬ್ಬ ರಾಜನಿಗೆ ಮನಸೋತರೆ ತೆಂಗಿನ ಮರವನ್ನು ಹತ್ತಿ ಕೈಬಿಟ್ಟಂತಾಯಿತು ಅವರ ಗತಿ. ಹಾಗೆಯೇ ಆಧ್ಯಾತ್ಮಿಕ ಜೀವಿಯು ಬೇರೆ ಕಡೆ ಚಂಚಲ ಮನಸ್ಕನಾದರೆ ಇಹಲೋಕಕ್ಕೂ ದೂರ ಪರಲೋಕಕ್ಕೂ ದೂರವೆಂದು ಹೇಳಿರುವರು.

**ತಂದೆ-ತಾಯಿ-ಸರ್ವ ಸಂಬಂಧ ಶಿವನೆಂದರು ಶರಣರು:**

ತಂದೆ ನೀನು-ತಾಯಿ ನೀನು ಬಂಧು ನೀನು-ಬಳಗ ನೀನು
ನೀನಲ್ಲದೆ-ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ
ಹಾಲಲದ್ದು-ನೀರಲದ್ದು

ಸಕಲ ಭುವನಾದಿ ಭುವನಂಗಳಿಗೆ ತಂದೆ ಸಕಲ ದೇವಾದಿ ದೇವರ್ಕಗಳಿಗೆ ತಂದೆ
ಭವ ಭವದಲ್ಲಿ ನೀನೆನ್ನ ತಂದೆ ಗುಹೇಶ್ವರ ಲಿಂಗ ನಿರಾಳದಲ್ಲಿ ನೀನೆನ್ನ ತಂದೆ.

**ಶಿವಯೋಗ:**

ಗಡ್ಡ ಮೀಸೆ ಬಂದರೆ ಗಂಡೆಂಬರು- ಮೊಲೆ ಮುಡಿ ಬಂದಡೆ ಹೆಣ್ಣೆಂಬರು, ಒಳಗೆ ಸುಳಿವ ಆತ್ಮನು ಗಂಡೂ ಅಲ್ಲ-ಹೆಣ್ಣು ಅಲ್ಲ ಎನ್ನುತ್ತಾರೆ ಶರಣರು. ಆತ್ಮನು ಲಿಂಗಭೇದ, ವಯೋಭೇದ ವರ್ಣಭೇದ, ಜಾತಿಭೇದರಹಿತನು. ತನ್ನನ್ನು ಜ್ಯೋತಿಸ್ವರೂಪ ಆತ್ಮನೆಂದೂ ತಿಳಿದುಕೊಂಡು ಸದಾ ಭ್ರುಕುಟಿಯಲ್ಲಿರುವ ಆತ್ಮಜ್ಯೋತಿಯಾಗಿ ಪರಮಾತ್ಮನ ಹಿಂದೆ ತಿಳಿಸಿದ ಮುಖ್ಯ ೧೬ ಮಹಿಮೆಗಳನ್ನು ನೆನಪು ಮಾಡಬೇಕು. ಅಂಗೈನಲ್ಲಿರುವ ಲಿಂಗವು ಪರಮಾತ್ಮನ ರೂಪವಾಗಿದೆ. ಅತ್ತಕಡೆ ನೀಲೋನ್ಮಿತ ದೃಷ್ಟಿಯನ್ನು ತದೇಕ ವಾಗಿ ನಿಲ್ಲಿಸಿ ಚೈತನ್ಯಪರಮಾತ್ಮನ ಸವಿಸ್ಮೃತಿಯಲ್ಲಿ ತಲ್ಲೀನನಾಗಬೇಕು. ಲವಲೀನನಾಗ ಬೇಕು. ಮನತುಂಬಿ ಮನಸ್ಸಿನಲ್ಲಿಯೇ ಶಿವನ ಮಹಿಮೆಗಳನ್ನು ಹಾಡಿಕೊಳ್ಳಬೇಕು. ಶಿವನ ಪ್ರೇಮದಲ್ಲಿ ಮೈ ಮರೆಯಬೇಕು, ಕುಳಿತಿರುವ ಸ್ಥಳ-ಸಮಯ ಹಾಗೂ ಜಗತ್ತಿನ ಎಲ್ಲವೂ ಆ ಸಮಯದಲ್ಲಿ ಮರೆತಿರುತ್ತಾರೆ. ಶಿವನಲ್ಲದೆ ಇನ್ನೊಂದು ಆಗ ಅರಿಯರು ಯೋಗಿಗಳು. ಹೀಗೆ ಸತಿ-ಪತಿಭಾವದಲ್ಲಿ, ಮಗ ಮತ್ತು ತಂದೆ ಸಂಬಂಧದಲ್ಲಿ ಶಿಷ್ಯ-ಗುರುವಿನ ಸಂಬಂಧದಲ್ಲಿ, ರೋಗಿ-ವೈದ್ಯನ ಸಂಬಂಧದಲ್ಲಿ, ಸಖಿ-ಸಖರ ಸಂಬಂಧದಲ್ಲಿ ಸರ್ವಸಂಬಂಧದಲ್ಲಿ ಶಿವನ ಹಾಡಿ ಹರಸಬೇಕು ಮನದಲ್ಲೇ, ಶಬ್ದವಿಲ್ಲದೆ ಹಾಡಬೇಕು

ಮನದಲ್ಲಿ ಈ ಆನಂದಕ್ಕೆ ಶಿವಾನಂದ–ಬ್ರಹ್ಮಾನಂದ, ಮಹದಾನಂದ, ಇತ್ಯಾದಿ ವರ್ಣಿಸಲಾಗುತ್ತದೆ. ಇದು ಅತೀಂದ್ರಿಯದ ಸುಖದಿಂದ ಉಂಟಾಗುವ ಆನಂದವಾಗಿರುತ್ತದೆ. ಇದಕ್ಕೆ ಶಿವಯೋಗವೆನ್ನಲಾಗುತ್ತದೆ. ಯೋಗ ಎಂದರೆ ಸಂಬಂಧ–ಶಿವನಜೊತೆಗೆ ಆತ್ಮನು ಅರ್ಥಾತ್ ಯೋಗಿಯು ಇಡುವ ಸತ್ಯ ಸಂಬಂಧ ಇದಾಗಿರುತ್ತದೆ.

ಎಲ್ಲ ಶಿವಶರಣರೂ ಶಿವಯೋಗಿಗಳಾಗಿಯೇ ಇರುತ್ತಾರೆ, ಶಿವಯೋಗವಿಲ್ಲದವರು ಶಿವಶರಣರಲ್ಲ, ಶಿವಯೋಗಿಗಳೇ ಶಿವಶರಣರು. ತಮ್ಮದೇ ಆದ ರೀತಿಯಲ್ಲಿ ತಮ್ಮ ಮನಸ್ಸಿನಂತರಾಳದಲ್ಲಿ ಇರುವ ಶಿವಯೋಗದ ಶಿವಶರಣರ ಕೆಲವು ವಚನಗಳನ್ನು ನೋಡೋಣ.

ನಾ ನಿಮ್ಮ ನೆನೆವೆನು ನೀವೆನ್ನನರಿಯಿರ, ನಾ ನಿಮ್ಮನೋಲೈಸುವೆನು,
ನೀವೆನ್ನ ಕಾಣರಿ. ನಾನೆಂತುಬದುಕುವೆನೆಂತು ಜೀವಿಸುವೆನಯ್ಯಾ? ಕೂಡಲ
ಸಂಗಮದೇವಾ, ಎನಗೆ ನೀನೆ ಪ್ರಾಣ ಗತಿ ಮತಿ ನೋಡಯ್ಯಾ

ಜಾಗೃತ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದು ನೆನೆದೊಡೆ ತಲೆದಂಡ ತಲೆದಂಡ
ಹುಸಿಯಾದರೆ ದೇವ, ತಲೆದಂಡ, ತಲೆದಂಡ, ಕೂಡಲ ಸಂಗಮದೇವಾ
ನೀವಲ್ಲದೆ ಅನ್ಯರ ನೆನೆದೊಡೆ ತಲೆದಂಡ ತಲೆದಂಡ.

ಜಪ–ತಪ ನಿತ್ಯನೇಮವೆನಗುಪದೇಶ: ನಿಮ್ಮ ನಾಮವೆನಗೆ ಮಂತ್ರ,
ಶಿವನಾಮವೆನಗೆ ತಂತ್ರ, ಕೂಡಲ ಸಂಗಮ ದೇವಯ್ಯಾ, ನಿಮ್ಮ ನಾಮ
ಕಾಮಧೇನುವೆನಗೆ.

ಅಕಟಕಟಾ, ಬೆಡಗು ಬಿನ್ನಾಣವೆಂಬುದೇನೊ? 'ಓಂ ನಮಃ ಶಿವಾಯ"
ಎಂಬುದೇ ಮಂತ್ರ, 'ಓಂ ನಮಃ ಶಿವಾಯ' ಎಂಬುದೇ ತಂತ್ರ ನಮ್ಮ
ಕೂಡಲಸಂಗಮ ದೇವರ ನೆನೆವುದೇ ಮಂತ್ರ.

ಎನ್ನ ಮನದಲ್ಲಿ ಮತ್ತೊಂದನರಿಯೆನಯ್ಯಾ, 'ಓಂ ನಮಃ ಶಿವಾಯ
ಓಂ ನಮಃ ಶಿವಾಯ' ಎನುತಿರ್ದೆನೆ. ಎನಗಿದೇ ಮಂತ್ರ, ಎನಗಿದೇ ತಂತ್ರ
ಎನಗಿದೇ ಜಪ ಕೂಡಲ ಸಂಗಮದೇವಾ, ನೀನೇ ಬಲ್ಲೆ ಎಲೆ ಲಿಂಗವೇ.

ಅಂದು ಇಂದು ಮತ್ತೊಂದೆನಬೇಡ, ದಿನವಿಂದೇ 'ಶಿವಶರಣೆಂಬವಂಗೆ:
ದಿನವಿಂದೇ ಹರ ಶರಣೆಂಬವಂಗೆ ದಿನವಿಂದೇ ನಮ್ಮ ಕೂಡಲ ಸಂಗನು
ಮಾಣದೆ ನೆನೆವಂಗೆ.

**ಸದಾ ಶಿವಯೋಗಿಯ ಸ್ಥಿತಿ:**

ಪರಚಿಂತೆ ಎಮಗೇಕಯ್ಯ ನಮ್ಮ ಚಿಂತೆ ನಮಗೆ ಸಾಲದೆ
ಕೂಡಲಸಂಗಯ್ಯ ಒಲಿವನೋ–ಒಲಿಯನೋ

ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು.
ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕೆ ಭಾನುವಿನ ಉದಯದಾ ಚಿಂತೆ
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ
ಎನಗೆ ನಮ್ಮ ಕೂಡಲ ಸಂಗಮದೇವನ ನೆನೆವ ಚಿಂತೆ.

**ಸಹಜ ಶಿವಯೋಗಿಯೇ– ಸಹಜ ರಾಜಯೋಗಿ:**

ಮಂತ್ರಯೋಗ, ಹಠಯೋಗ, ಲಯಯೋಗ, ಭಕ್ತಿಯೋಗದ ಮೇಲೆ ನಿಂದ, ರಾಜಯೋಗದ ಮೇಲೆ ನುಡಿವದು ಕಾಣರೇ–ಯೋಗಾತೀತಂ ಮನಾತೀತಂ, ಭಾವಾತೀತಂ ನಿರಂಜನಂ, ಸರ್ವಶೂನ್ಯಂ ನಿರಾಕಾರಂ, ಪರಮಾನಂದಮವ್ಯಯಂ, ಎಂದುದಾಗಿ, ಶಿವಜೀವ: ಲಿಂಗಪ್ರಾಣ, ಶಿವಯೋಗವೆಂಬುದೇ ಐಕ್ಯ, ಮಹಾಲಿಂಗೈಕ್ಯದ ನಿಲವ ಅನುಮಾನಿಗಳೆತ್ತ ಬಲ್ಲರು ಕೂಡಲ ಸಂಗಮದೇವಾ?

ವಿಶ್ವದಲ್ಲಿ ಸರ್ವ ಕಂಟಕ ಪರಿಹಾರಕ ಮಂತ್ರ ಒಂದೇ. ಅದನ್ನೇ ಕೆಲವರು ಷಡಕ್ಷರಿ ಮಂತ್ರವೆಂದೂ, ಕೆಲವರು ಪಂಚಾಕ್ಷರಿ ಮಂತ್ರವೆಂದೂ ಜಪಿಸುವರು ಷಡಕ್ಷರಿ ಮಂತ್ರದಲ್ಲಿ ಷಡ್ (೬) ಅಕ್ಷರಗಳೂ, ಪಂಚಾಕ್ಷರಿ ಮಂತ್ರದಲ್ಲಿ ಪಂಚ(೫) ಅಕ್ಷರಗಳು ಇದ್ದರೂ ಉಪಾಸನೆ ಮಾತ್ರ ಒಬ್ಬನನ್ನೇ ಕುರಿತದ್ದಾಗಿರುತ್ತದೆ. "ಓಂ ನಮಃ ಶಿವಾಯ" ಎಂಬ ೬ ಅಕ್ಷರ ಉಳ್ಳಮಂತ್ರವೇ ಷಡಕ್ಷರಿ ಮಂತ್ರ, "ಶಿವಾಯ ನಮಃ" ಎಂಬ ೫ ಅಕ್ಷರ ಉಳ್ಳ ಮಂತ್ರವೇ ಪಂಚಾಕ್ಷರಿ ಮಂತ್ರ, ಈ ಮಂತ್ರಗಳಲ್ಲಿ ಉಪಾಸನೆ ಮಾಡುವುದೇ "ಶಿವ"ನನ್ನು, ಏಳು ಕೋಟಿ ಮಂತ್ರಗಳಲ್ಲಿ "ಓಂ ನಮಃ ಶಿವಾಯ" ಎಂಬುದೇ ಮೂಲ ಮಂತ್ರ. "ಓಂ ನಮಃ ಶಿವಾಯ" ಎಂಬುದೇ ಆದಿಮಂತ್ರ. "ಓಂ ನಮಃ ಶಿವಾಯ" ಎಂಬುದೇ ಮಹಾಮಂತ್ರ. ಈ ಮಂತ್ರಕ್ಕೆ ಸಮಮಂತ್ರ ಬೇರಿಲ್ಲ. ಈ ಮಂತ್ರಕ್ಕೂ ಹೆಚ್ಚಿನ ಮಂತ್ರ ಮತ್ತೊಂದಿಲ್ಲ.

ಅರ್ಥ ಅರಿಯದೇ ಪಠಿಸುವುದು ವ್ಯರ್ಥ. ಗ್ರಾಮಾಫೋನ್ ನುಡಿದಂತೆ, ರೇಡಿಯೋ ಪಠಿಸಿದಂತೆ. ಹಾಗಾದರೆ "ಓಂ ನಮಃ ಶಿವಾಯ" ಇದರ ಅರ್ಥವೇನು?

ಓಂ–ಆತ್ಮಜ್ಯೋತಿಯಾದ ನಾನು (ಶರೀರದಲ್ಲಿರುವವ)
ಶಿವಾಯ–ಪರಂಜ್ಯೋತಿ ಶಿವಪರಮಾತ್ಮನಾದ ನಿನಗೆ
ನಮಃ–ನಮಸ್ಕರಿಸುತ್ತಿದ್ದೇನೆ.

"ಆತ್ಮಜ್ಯೋತಿಯಾದ ನಾನು ಪರಂಜ್ಯೋತಿ ಪರಮಾತ್ಮನಾದ ನಿನಗೆ ನಮಸ್ಕರಿಸುತ್ತಿದ್ದೇನೆ." ಇಲ್ಲಿ ನಮಸ್ಕರಿಸುವವನು ಆತ್ಮ. ನಮಸ್ಕಾರ ಸ್ವೀಕರಿಸುವವನು ಪರಮಾತ್ಮ ನಮಸ್ಕರಿಸುವವನು ಅಧೀನನು ನಮಸ್ಕಾರ ಸ್ವೀಕರಿಸುವವನು 'ಅಧಿಪತಿ' ಅಧಿಪತಿಯು

ಸದಾ ಜಗದೇಕ ಒಡೆಯ, ಚರಚರಾಗಳ ಒಡೆಯ, ಈಶ್ವರ ನಶ್ವರನಲ್ಲದವನು, ಶಾಶ್ವತನು ಅನಾದಿಯು, ಅವಿನಾಶಿಯು, ಅಯೋನಿಜನು, ಅಶರೀರಿಯು ಅಕಾಯನು ಅವ್ಯಕ್ತನು, ಅಬೋಕ್ತನು ಸ್ವಯಂಭು (ಶಂಭು), ಜ್ಯೋತಿರ್ಮಯನು ಪರಂಜ್ಯೋತಿಯು, ಜನನ-ಮರಣಮುಕ್ತ, ಮೃತ್ಯುಂಜಯನು, ಶಿವನು, ಸದಾಶಿವನು, ಸದಾ ಮಂಗಳಕಾರಿ, ಸದಾ ಶುಭಕಾರಿ, ಸದಾ ಕಲ್ಯಾಣಕಾರಿ. ಸ್ವಯಂನ್ನು ಆತ್ಮನೆಂದು ತಿಳಿದು ಶಿವಪರಮಾತ್ಮನಿಗೆ ತನ್ನ ಮನ-ಬುದ್ಧಿಯನ್ನು ಪೂರ್ಣ ಅರ್ಪಣಮಾಡಿ ನಿರಂತರ ಅವನ ನೆನಪಿನಲ್ಲಿರುವುದೇ ಶಿವಯೋಗಿ. ನಿರಂತರ ನೆನಪುಮಾಡುವವನೇ ಶಿವಯೋಗಿ.

# ರಾಜಶಿವಯೋಗ: ಅಧಿಕೃತ ವಿಶ್ಲೇಷಣೆ*

## (ಷಟ್‌ಸ್ಥಲ ಸಾಧನೆ: ಶಿವಯೋಗ ಸಿದ್ಧಿ)

—ಡಾ. ಎಸ್. ಎಂ. ವೃಷಭೇಂದ್ರಸ್ವಾಮಿ

ಶಿವಶರಣ ಸಮುದಾಯದಲ್ಲಿ ಷಟ್‌ಸ್ಥಲ ತತ್ತ್ವ ವಿವೇಚನೆ ಹಾಗೂ ಶಿವ ಯೋಗದ ಗುರಿಗಮ್ಯಗಳನ್ನು ಅಧಿಕೃತವಾಗಿ- ತರ್ಕಬದ್ಧವಾಗಿ ಪರಾಮರ್ಶಿಸುವವರಲ್ಲಿ ಶ್ರೀ ಚನ್ನಬಸವಣ್ಣನವರು ಹಾಗೂ ತೋಂಟದ ಸಿದ್ಧಲಿಂಗಶಿವಯೋಗಿಗಳು ಅತ್ಯಂತ ಪ್ರಮುಖರು. ಮಹಾಜ್ಞಾನಿ ಚೆನ್ನಬಸವಣ್ಣನವರು, ತಮ್ಮ ವಚನಗಳಲ್ಲಿ ವೀರಶೈವದ ಎಲ್ಲ ಅಂಶಗಳನ್ನು ಪರಿಶೀಲಿಸಿ, ಅದರ ಒಂದು ಅಂಗವಾಗಿ 'ಶಿವಯೋಗ'ದ ರೀತಿ– ನೀತಿಗಳನ್ನೂ ಅಧಿಕೃತವಾಗಿ ನಿರ್ದೇಶಿಸಿರುವರು. ಈ ಅಂಶಗಳನ್ನು 'ಷಟ್‌ಸ್ಥಲ ಪ್ರಭೆ' ಯಲ್ಲಿ ಡಾ. ಆರ್. ಸಿ. ಹಿರೇಮಠರು ವಿವರವಾಗಿ ಚರ್ಚಿಸಿರುವರು. ಅಲ್ಲಿ ಷಟ್‌ಸ್ಥಲ ಗಳು–ಅಷ್ಟಾಂಗಯೋಗ–ಶಿವಯೋಗ ಮುಂತಾದವುಗಳ ಪರಿಶೀಲನೆ ತೌಲನಿಕವಾಗಿ ಮೂಡಿಬಂದಿದೆ. ಚನ್ನಬಸವಣ್ಣನವರ ವಚನಗಳನ್ನೇ ಆಧರಿಸಿ 'ಶಿವಯೋಗ'ದ ಮಹತ್ವವನ್ನು ವಿವರಿಸುವ ಪ್ರಯತ್ನ ಮಾಡಿರುವರು.

ಆದರೆ, ಅದೇ ಗ್ರಂಥದ, ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳನ್ನು ಕುರಿತ ಭಾಗದಲ್ಲಿ ಷಟ್‌ಸ್ಥಲಜ್ಞಾನ ಸಾರಾಮೃತದಲ್ಲಿ ಮೂಡಿಬಂದಿರುವ ತಾತ್ವಿಕಾಂಶ ಗಳನ್ನು ಪರಿಶೀಲಿಸಿರುವರು. ಚೆನ್ನಬಸವಣ್ಣನವರು ಷಟ್‌ಸ್ಥಲಜ್ಞಾನಿ, ಶ್ರೀ ತೋಂಟದ ಸಿದ್ಧಲಿಂಗೇಶ್ವರರು 'ಶಿವಯೋಗಿ' 'ಷಟ್‌ಸ್ಥಲಜ್ಞಾನದ ಸಾರಾಮೃತ'ದಲ್ಲಿ ಷಟ್‌ಸ್ಥಲ ಗಳನ್ನು ವಿವರಿಸಿ, ಅದರ ಅಂತಿಮ ಗುರಿಯಾದ ಶಿವಯೋಗವನ್ನು ಇತರ ಯೋಗ ಪದ್ಧತಿಗಳೊಡನೆ ತೌಲನಿಕವಾಗಿ ಪರಿಶೀಲಿಸಿ, ಎಲ್ಲ ಯೋಗಗಳ 'ರಾಜ'ನೆಂಬ ರಾಜ ಯೋಗವನ್ನೂ ದಾಟಿ ನಿಲ್ಲುವ ಶಿವಯೋಗವನ್ನು 'ರಾಜಶಿವಯೋಗ'ಎಂದು ಕರೆದಿರು ವುದು ಅತ್ಯಂತ ಮಹತ್ವದ ಸಂಗತಿ. ಶಿವಶರಣರಲ್ಲಿ, ಷಟ್‌ಸ್ಥಲದ ಸಾಧನೆ ಮಾಡುತ್ತಾ ಹೋಗುವುದೇ, ಶಿವಯೋಗ. ಇದು ನಿತ್ಯಯೋಗ, ನಿತ್ಯಸಿದ್ಧಿ, ಸಾಧಕನ ಬದುಕನ್ನೆಲ್ಲ ಆವರಿಸಿರುವ ಜೀವನದ ಸರ್ವವ್ಯವಹಾರಗಳಲ್ಲಿಯೂ ಈ ಶಿವತ್ವವನ್ನು ಪರಿಭಾವಿಸಿ, 'ಶಿವ'ವನ್ನು, ಶಿವಶಕ್ತಿಯುನ್ನು, ಭಕ್ತಿಯ ಮೂಲಕ ಅನುಭವಿಸುವ ಜೀವನಯೋಗವೇ ಶಿವಯೋಗ, ಇತ್ತೀಚೆಗೆ ಶ್ರೀ ಅರವಿಂದರಿಂದ ಪ್ರಚಲಿತವಾಗಿರುವ 'ಪೂರ್ಣಯೋಗ'ದ ಎಲ್ಲ ಮಹತ್ತ್ವದ ಅಂಶಗಳನ್ನೊಳಗೊಂಡ ಯೋಗ ಈ ರಾಜಶಿವಯೋಗ.

---

*ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಷಟ್‌ಸ್ಥಲ ಜ್ಞಾನ ಸಾರಾಮೃತ ಗ್ರಂಥದ ಪರಿಶೀಲನೆ

ಲಂಬಿಕಾ ಯೋಗಿಗಳ ಡೊಂಬರಿಗೆ ಸರಿಯೆಂದೆಂಬೆ
ಹಠಯೋಗಿಗಳ ಆಟಮಟ ಗಾರರೆಂದೆಂಬೆ,
ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂದೆಂಬೆ,
ಪವನಯೋಗಿಗಳ ಪ್ರಪಂಚಿಗಳೆಂದೆಂಬೆ
... .............................
ಇದು ಕಾರಣ, ನಿಮ್ಮ ಶರಣರು ಲಿಂಗಪ್ರಾಣಿಗಳು
ಪ್ರಾಣಲಿಂಗ ಸಂಬಂಧಿಗಳು, ಪ್ರಸಾದ ಮುಕ್ತರು,
.................................
ಇದು ಕಾರಣ, ನಿಮ್ಮ ಶರಣರು ಸ್ವಾನುಭವ ಜ್ಞಾನ ಶುದ್ಧ
ಶಿವಯೋಗದಲ್ಲಿ ಸ್ವರೂಪ ಜ್ಞಾನಿಗಳು ಕಾಣಾ (ವ. ೩೫೮)

ಎಂಬ ತೋಂಟದ ಸಿದ್ಧಲಿಂಗೇಶ್ವರರ ವಚನ ಶಿವಯೋಗದ ಮಹತಿಗೆ ಸಾಕ್ಷಿ.

ಷಟ್‌ಸ್ಥಲದ ಸಾಧನೆಯೇ ಶಿವಯೋಗ ಸಿದ್ಧಿಗೆ ದಾರಿ, ಸಾಧನೆಯೇ ಸಿದ್ಧಿ. 'ಷಟ್ ಸ್ಥಲ ಜ್ಞಾನ ಸಾರಾಮೃತ' ಈ ಸತ್ಯವನ್ನು ವಿವರವಾಗಿ ನಿರೂಪಿಸಿದೆ. ಸ್ವಯಂ ಶಿವ ಯೋಗ ಸಿದ್ಧರಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರು, ಇದನ್ನು ತಮ್ಮ ಸ್ವಾನುಭವ ವಿವೇಕದಿಂದ ವಿಶ್ಲೇಷಿಸಿರುವರು. ಚೆನ್ನಬಸವಣ್ಣನವರ ವಚನಗಳಲ್ಲಿ ಅಲ್ಲಲ್ಲಿ ಮೂಡಿರುವ ಭಾವವನ್ನು, ಇಲ್ಲಿ ತರ್ಕಬದ್ಧವಾಗಿ ವಿವೇಚಿಸಿರುವರು. ಷಟ್‌ಸ್ಥಲಗಳು, ಕ್ರಮವಾಗಿ ಮೇಲೇರುವ ಸೋಪಾನಗಳಲ್ಲ, ಒಂದರೊಳಗೊಂದು, ಒಳಗೊಳಗೇ ವಿಕಾಸವಾಗುವ ಸಮುಚ್ಚಯವೆಂಬುದನ್ನೂ, ಲಿಂಗಧ್ಯಾನ, ಲಿಂಗಭಕ್ತಿ, ಲಿಂಗಪೂಜೆ, ಲಿಂಗ ಪ್ರಸಾದ, ಲಿಂಗ ದಲ್ಲಿ ಐಕ್ಯವಾಗುವುದೇ, ಶಿವಯೋಗ ಎಂದು ವಿವರಿಸಿರುವರು. ಷಟ್‌ಸ್ಥಲಕ್ಕೂ ಪೂರ್ವದ, ಐಕ್ಯ ಸ್ಥಲಾನಂತರ ಹೆಚ್ಚಿನ ಸ್ಥಲಗಳ ವಿವೇಚನೆ ಅತ್ಯಂತ ಗಮನಾರ್ಹವಾದುದು.

ಭಕ್ತ ಸ್ಥಲ ಮಾಹೇಶ್ವರ ಸ್ಥಲದಲ್ಲಡಗಿ,
ಮಾಹೇಶ್ವರ ಸ್ಥಲ ಪ್ರಸಾದಿ ಸ್ಥಲದಲ್ಲಡಗಿ,
ಪ್ರಸಾದಿ ಸ್ಥಲ ಪ್ರಾಣಲಿಂಗಿ ಸ್ಥಲದಲ್ಲಡಗಿ,
ಪ್ರಾಣಲಿಂಗಿ ಸ್ಥಲ ಶರಣ ಸ್ಥಲದಲ್ಲಡಗಿ
ಶರಣ ಸ್ಥಲ ಐಕ್ಯ ಸ್ಥಲದಲ್ಲಡಗಿ–
ಇಂತೀ ಷಡಾಂಗಯೋಗ ಸಮರಸವಾಗಿ
ಷಡುಸ್ಥಲವ ಮೀರಿ, ನಿರವಯಲ ಸ್ಥಲವನೈದಿ
ಆ ನಿರವಯ ಸ್ಥಲ, ನಿರಾಳದಲ್ಲಡಗಿ
ಆ ನಿತ್ಯ ನಿರಂಜನ ಪರವಸ್ತು ತಾನಾಯಿತ್ತಾಗಿ
ಕ್ರಿಯಾ ನಿಷ್ಪತಿ ಜ್ಞಾನ ನಿಷ್ಪತಿ ಭಾವ ನಿಷ್ಪತಿ ಮಾಡುವ
ಕ್ರೀಗಳೆಲ್ಲಾ ನಿಷ್ಪತಿಯಾಗಿ–

ಅರಿವ ಅರುಹೆಲ್ಲಾ ಅಡಗಿ, ಭಾವಿಸುವ ಭಾವವೆಲ್ಲಾ ನಿರ್ಭಾವವಾಗಿ
ನಿರ್ಲೇಪಕ, ನಿರಂಜನ ವಸ್ತು ತಾನುತಾನಾದಲ್ಲದೆ
ಧ್ಯಾನಿಸಲಿಕೇನೂ ಇಲ್ಲ.
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭು ತಾನೆ
ಷಟ್‌ಸ್ಥಲ ಜ್ಞಾನ ಸಾರಾಯ ಸ್ವರೂಪನೆಂದು ಹೇಳಲ್ಪಟ್ಟನು. (ವ. ೭೦೧)

'ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭು'-ವೆಂಬ ಅಂಕಿತದ ಈ ಕೊನೆಯ ವಚನ ತನ್ನ ಗುರು ಷಟ್‌ಸ್ಥಲ ಜ್ಞಾನ ಸಾರಾಯ ಸ್ವರೂಪನೆಂದು ತಿಳಿಸಿ, ಅದೇ ವೀರಶೈವ ತತ್ತ್ವ ಸಿದ್ಧಾಂತದ 'ಸಾರಾಯ' ಎಂದೂ ಸೂಚಿಸಿರುವರು. ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು. ಕಾರಣ, 'ಷಟ್‌ಸ್ಥಲ ಜ್ಞಾನ ಸಾರಾಮೃತ' ಮುಖ್ಯವಾಗಿ ವೀರಶೈವ ತತ್ತ್ವ ಗ್ರಂಥ. ಆ ಅನಾದಿ ತತ್ತ್ವವನ್ನು ವಿವರಿಸುವ ಶ್ರೀ ಸಿದ್ಧಲಿಂಗರೂ ಅಂಥ ತತ್ತ್ವದ ಸಾಕಾರ ಸ್ವರೂಪ, ಅವರ ಸ್ವಾನುಭವ ವಿವೇಕದಿಂದ ಮೂಡಿದ ಈ ಕೃತಿ ಎಂದಿಗೂ 'ಅಮೃತ' ಸ್ವರೂಪವಾದುದು. ಮೇಲಿನ ವಚನವೇ ನಿರೂಪಿಸುವಂತೆ, ಇದು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ– ಶರಣ. ಐಕ್ಯವೆಂಬ ಆರು ಸ್ಥಲಗಳು ಸಮ ಸಮುಚ್ಚಯ ರೀತಿಯಲ್ಲಿ ಒಂದರೊಳಗೆ ಇನ್ನೊಂದು, ಅಡಗಿ, ಅದನ್ನು ಮೀರಿ, ನಿರವಯಸ್ಥಲ– ನಿರಾಳಸ್ಥಳದಲ್ಲಿ ಅಡಗಿ 'ನಿರಾಳ ನಿತ್ಯ ನಿರಂಜನ ಪರವಸ್ತು' ತಾನೇ ತಾನಾಗಿರುವಂಥ ಸ್ಥಿತಿಯನ್ನು ಈ 'ಸಾರಾಮೃತ' ವಿವೇಚಿಸುತ್ತದೆ. ಈ ವೀರಶೈವ ತತ್ತ್ವ ಮಹತ್ತ್ವವನ್ನು ಸ್ವಾನುಭವದಿಂದರಿತ ಶಿವಯೋಗಿಗಳು, ಸ್ವಂತವಾಗಿ ತಾವೇ ರಚಿಸಿದ ವಚನಗಳ ಮೂಲಕ, ಅದರ ಸೂಕ್ಷ್ಮ–ಸುಸೂಕ್ಷ್ಮಗಳನ್ನು ವಿವರಿಸಿರುವುದರಿಂದ, ಇದರ ಅಧಿಕೃತತೆ ಹೆಚ್ಚಾಗಿದೆ. ಬಸವಾದಿಗಳು ಸ್ವಭಾವ–ಸನ್ನಿವೇಶ ಪ್ರೇರಿತವಾಗಿ ರಚಿಸಿದ ವಚನಗಳನ್ನು, ಇತರರು ಸ್ಥಲ ಕಟ್ಟಿಗೆ ಅನ್ವಯಿಸಿ ವಿಂಗಡಿಸಿರುವುದನ್ನು ಗಮನಿಸಿದರೆ, ಶ್ರೀ ತೋಂಟದಾರ್ಯರ ಈ ಕೃತಿಯಲ್ಲಿ ಸಕ್ರಮ ವ್ಯವಸ್ಥೆ, ಖಚಿತ ನಿರೂಪಣೆ, ಒಂದೊಂದು ಸ್ಥಲದಲ್ಲಿ, ಆರೂ ಸ್ಥಲಗಳು (ಭಕ್ತ ಸ್ಥಲದಲ್ಲಿ–ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಐಕ್ಯಸ್ಥಳ) ಒಳಗೊಂಡಿರುವ ವಿವೇಚನೆ, ಅಲ್ಲಿನ ಭಾವ–ಬುದ್ಧಿ–ಪ್ರಕಾಶಗಳ ಸುಸೂಕ್ಷ್ಮದ ಪರಾಮರ್ಶೆ ಅನೇಕ ವ್ಯಾಖ್ಯಾನಗಳನ್ನು ಪ್ರೇರಿಸಿದ್ದರೂ,ಶೂನ್ಯ ಸಂಪಾದನೆಗಳು ವಿವರಿಸುವ ಪ್ರಯತ್ನ ಮಾಡಿದ್ದರೂ, ಶ್ರೀ ತೋಂಟದಾರ್ಯರ 'ವಿವೇಚನೆ' ಮಹತ್ತ್ವ ಇನ್ನೂ 'ಅತ್ತತ್ತಲಾಗಿಯೇ' ನಿಂತಿದೆ. ಆಧುನಿಕ ದೃಷ್ಟಿಯ ವಿವೇಚನೆಯನ್ನೊಳಗೊಂಡ ಸಂ. ಶಿ. ಭೂಸನೂರುಮಠರ 'ಪರಾಮರ್ಶೆ.' ಡಾ. ಜಚನಿ ಯವರ 'ಸಂಪಾದನೆಯ ಸೊಂಪು'ಗಳನ್ನು ದಾಟಿ ನಿಲ್ಲುತ್ತಿದೆ ಈ 'ಸಾರಾಮೃತ'ದ ತತ್ತ್ವ ವಿವೇಕ. ಬೆಡಗಿನ ವಚನಗಳ ಬೆಡಗು–ಬೆರಗು ನಮಗಿನ್ನೂ 'ರಹಸ್ಯ'ವಾಗಿದೆ, ಬುದ್ಧಿ ಪೂರ್ವಕ ವಿವೇಚನೆ ಹೊರಟವರೆಲ್ಲ, 'ಸ್ವಾನುಭವ ವಿವೇಕ'ದಿಂದ ಮಾತ್ರ ಅರಿವಾಗಬಲ್ಲ ಈ ತತ್ತ್ವ 'ರಹಸ್ಯ'ದ ಸಮೀಪಕ್ಕೆ ಹೋಗುವ ಪ್ರಯತ್ನ ಮಾಡಿರುವರು. ಆಧುನಿಕ

ವೈಜ್ಞಾನಿಕ ದೃಷ್ಟಿಕೋನದಿಂದ ಅಳೆಯುವ ಪ್ರಯತ್ನ ಇನ್ನಷ್ಟೂ ವ್ಯಾಪಕವಾಗಬೇಕಾಗಿದೆ. ಶ್ರೀ ತೋಂಟದಾರ್ಯರು ಬಳಸುವ ವಿಶೇಷ ಪದ (ಪಾರಿಭಾಷಿಕ)ಗಳ ಅರ್ಥ ನಿರ್ದಿಷ್ಟತೆ ಆಗಬೇಕಾಗಿದೆ. ಹತ್ತಾರು ನಿಷ್ಠೆಯ ಚೇತನಗಳ ಸಾಮೂಹಿಕ ದುಡಿಮೆಯನ್ನು ಆಹ್ವಾನಿಸುತ್ತದೆ.

**ಅಧಿಕ ಸ್ಥಲಗಳ ವಿವೇಚನೆ:**

ಶ್ರೀ ತೋಂಟದಾರ್ಯರ 'ಷಟ್‌ಸ್ಥಲ ಜ್ಞಾನಸಾರಾಮೃತ' ಪರಿಶೀಲಿಸುವ ಇನ್ನೊಂದು ಮಹತ್ತ್ವದ ಅಂಶ– ಅದರ ಅಧಿಕ ಸ್ಥಲಗಳ ವಿವೇಚನೆ. ಪ್ರಸಿದ್ಧವಾದ 'ಭಕ್ತ ಸ್ಥಲದಿಂದ ಐಕ್ಯ ಸ್ಥಲದವರೆಗಿನ ಷಟ್‌ಸ್ಥಲಗಳ ಪೂರ್ವವಲ್ಲಿನ 'ಅಂಗ–ಲಿಂಗ'– 'ಆತ್ಮ–ಪರಮಾತ್ಮ' 'ಪಿಂಡ-ಪಿಂಡಜ್ಞಾನ' ಮುಂತಾದ ಸೂಕ್ಷ್ಮ ಸಂಗತಿಗಳನ್ನು,ಹದಿನೆಂಟು ಸ್ಥಲಗಳಾಗಿ ನಿರೂಪಿಸಿರುವರು! ಭಕ್ತ ಸ್ಥಳಕ್ಕೆ ಪೂರ್ವದಲ್ಲಿ ಬಂದಿರುವ ಈ ಸ್ಥಲಗಳು. 'ಭಕ್ತ ಸ್ಥಳ'ದ ಹಿನ್ನೆಲೆಯಾಗಿರುವುವು. ಅದರಲ್ಲೂ, ಪಿಂಡಸ್ಥಲಕ್ಕೂ ಹಿಂದಿನ– ಸೃಷ್ಟಿಯ ಮೂಲ ಹಾಗೂ ವಿಕಾಸವನ್ನು ಸೂಚಿಸುವ 'ಸರ್ವಶೂನ್ಯ ನಿರಾಲಂಬ ಸ್ಥಲ-ಶೂನ್ಯ ಲಿಂಗ ಸ್ಥಲ–ನಿಃಕಲ ಲಿಂಗಸ್ಥಲ–ಮಹಾಲಿಂಗ ಸ್ಥಲ–ಅಂಗ–ಲಿಂಗೋದ್ಭವ ಸ್ಥಲ–ಪಂಚಮೂರ್ತಿ ಲಿಂಗಸ್ಥಲಗಳೆಂಬ ಈ ಪೂರ್ವ ಷಟ್‌ಸ್ಥಲಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ವೀರಶೈವ ತತ್ತ್ವ ವಿವೇಚಿಸಿರುವ ಈ ಶೂನ್ಯ–ನಿಶ್ಶೂನ್ಯ ಬಯಲು=ನಿರ್ಬಯಲುಗಳ ವಿಚಾರ ವಿಶೇಷವಾಗಿ ಬಂದಿದೆ ಎಂಬುದನ್ನು ಗಮನಿಸಬಹುದು. ಇಲ್ಲಿ ಬರುವ ನಿರವಯ–ನಿರಾಮಯ–ನಿರಾಕುಳ–ನಿಃಪುರುಷ, ನಿರಂಜನ........ನಿರ್ಗುಣ, ನಿರಾಧಾರ, ನಿರಾಲಂಬ' ಇತ್ಯಾದಿ ಮಾತುಗಳ ವಿಶೇಷಾರ್ಥವನ್ನು ಆಧುನಿಕ ಭೌತಶಾಸ್ತ್ರ– ಸೃಷ್ಟಿ ಶಾಸ್ತ್ರಗಳ ಹಿನ್ನೆಲೆಯಲ್ಲಿ ಪರಿಶೀಲಿಸುವ ಆವಶ್ಯಕತೆ ಇದೆ. ವೀರಶೈವದ ಶೂನ್ಯ ಬಯಲುಗಳ ವಿವೇಚನೆ ಇಲ್ಲಿ ಇನ್ನಷ್ಟು ನಿರ್ದಿಷ್ಟವಾಗಿದೆ ಎಂದರಿವಾಗುವುದು.

'ಸರ್ವಶೂನ್ಯ ನಿರಾಲಂಬ'ದಿಂದ ಪಂಚಮೂರ್ತಿ ಸ್ಥಲಗಳವರೆಗಿನ ಪರಿಶೀಲನೆಯ ನಂತರ ಬಂದಿವೆ. 'ಪಿಂಡಸ್ಥಲ' ಮತ್ತು 'ಪಿಂಡ ಜ್ಞಾನಸ್ಥಲ'– '........ಪಂಚಭೂತಮೆ ದೇಹ. ಆತ್ಮನೇ ದೇಹಿಯಾದ ಕಾರಣ, ದೇಹ–ದೇಹಿಯೆಂಬೆರಡು ಸಮರಸವಾಗಿ ಪಿಂಡೇವೆನಿಸಿತ್ತಾಗಿ, ಮುಂದೆ ಪಿಂಡಸ್ಥಲವಾದುದು' ಎಂಬ ಸೂತ್ರವಾಕ್ಯ ಇದರ ಸಕ್ರಮ ವಿಚಾರದ ಬೆಳವಣಿಗೆಯನ್ನು ಸೂಚಿಸುತ್ತದೆ. ವಸ್ತು–ಪಿಂಡ–ಪಿಂಡಜ್ಞಾನ ವಿವೇಚನೆಯಂತೂ ಅದ್ಭುತವಾಗಿ ಮೂಡಿದೆ. 'ಆದಿಪಿಂಡ, ಮಧ್ಯಪಿಂಡ, ಅನಾದಿಪಿಂಡ........' ಇತ್ಯಾದಿ ಪರಿಶೀಲನೆ, ಅಂಗ–ಲಿಂಗ ಸಂಬಂಧದ ವಿವರಣೆ ಅತ್ಯಂತ ವಿವೇಚನಾರ್ಹವಾಗಿದೆ.

ದೇಹವ ಮರೆಗೊಂಡಿಪ್ಪ ಆತ್ಮನಂತೆ,
ಶಕ್ತಿಯ ಮರೆಗೊಂಡಿಪ್ಪ ಶಿವನಂತೆ,
ಕ್ಷೀರವ ಮರೆಗೊಂಡಿಪ್ಪ ತುಪ್ಪದಂತೆ

ವಾಚ್ಯವ ಮರೆಗೊಂಡಿಪ್ಪ ಅನಿರ್ವಾಚ್ಯದಂತೆ
ಲೋಕಾರ್ಥದೊಳಗಿಪ್ಪ ಪರಮಾರ್ಥದಂತೆ
ಎನ್ನ ಆತ್ಮದೊಳಡಗಿಪ್ಪ ಪರಮಾತ್ಮ ತತ್ತ್ವವು
ಬೀಜದೊಳಡಗಿದ ವೃಕ್ಷದಂತೆ ಇದ್ದಿತಯ್ಯಾ.
ನಾನರಿಯದ ಮುನ್ನ, ಎನ್ನೊಳಗಡಗಿದ್ದಿತಯ್ಯಾ ಶರಣ–ಲಿಂಗ ಸಂಬಂಧ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ. (ವ. ೮೦)

ಸುಪರಿಚಿತವಾದ ವಸ್ತು ಭಾಷೆಯಲ್ಲಿ, ವಿಶೇಷಾರ್ಥವನ್ನು ಸ್ಪಂದಿಸುವ ಕಲೆ ಗಣನೀಯವಾದುದು. ವ್ಯಾಖ್ಯಾನಿಸಿದಷ್ಟೂ ಅರ್ಥ ವಿಸ್ತಾರವಾಗುವ, ಅರ್ಥ ಖಚಿತವಾಗುವ ಸಾಧ್ಯತೆ ಪಡೆದಿದೆ ಈ ವಚನ.

'ಪಿಂಡ ಜ್ಞಾನಸ್ಥಲ'ದ ನಂತರ ಮತ್ತೆ ಆರು ಸ್ಥಲಗಳನ್ನು ವಿವೇಚಿಸಿರುವುದೂ, ಅದೂ ಭಕ್ತ ಸ್ಥಳದ ಪೂರ್ವದಲ್ಲಿ ಪರಿಶೀಲಿತವಾಗಿರುವುದೂ ಗಮನಾರ್ಹ ಸಂಗತಿ. ಸಂಸಾರ ಹೇಯಸ್ಥಲ, ಗುರು ಕರುಣಸ್ಥಲ, ಲಿಂಗಧಾರಣ ಸ್ಥಲ, ವಿಭೂತಿ ಧಾರಣ ಸ್ಥಲ, ರುದ್ರಾಕ್ಷಿ ಸ್ಥಲ, ಪಂಚಾಕ್ಷರೀ ಸ್ಥಲ–ಈ ಆರು ಸ್ಥಲಗಳು ಹೇಗೆ ಅಂಗ-ಲಿಂಗ ಉಪಾಸನೆಯ ಷಟ್‌ಸ್ಥಲ ತತ್ತ್ವಕ್ಕೆ ಆದಿಯಾದ ಭಕ್ತ ಸ್ಥಲಕ್ಕೆ 'ನೆಲಗಟ್ಟು' ಎಂಬುದನ್ನು ಪರಿಶೀಲಿಸಬೇಕು. ಶ್ರೀ ತೋಂಟದಾರ್ಯರ ಇಲ್ಲಿನ ವಚನಗಳೆಲ್ಲ ಈ ತತ್ವವನ್ನು ವಿಶೇಷ ರೀತಿಯಾಗಿ ವಿವೇಚನೆ ಮಾಡಿವೆ. ಸಂಸಾರ ಹೇಯಸ್ಥಳದ ವಚನಗಳಲ್ಲಿ ಸಂಸಾರದ ಅಸಾರತೆ ಅನಿತ್ಯತೆಗಳನ್ನು ಭಾವ ತೀವ್ರತೆಯಿಂದ ನಿರೂಪಿಸಿರುವರು.

ದೇವಸ್ತ್ರೀಯರ ಸಂಗಕ್ಕೆ ಎಣಿಸುವುದೆಲ್ಲಾ ಕಾಯಗುಣ ಕಾಣಿರಣ್ಣಾ
ಆವ ಹಾವಾದೊಡೇನು ವಿಷವೊಂದೇ ನೋಡಾ!
ಮಾಯಿಕಕ್ಕೆ ದೇವತ್ವವುಂಟೇ ಮರುಳು ಮಾನವಾ?
ಮಹಾದೇವನೇ ದೇವನಲ್ಲದೆ, ಅನಿತ್ಯವಾದ
ಮಾಯಾ ಪ್ರಪಂಚು, ನಿತ್ಯವಾದ ಶಿವನ ನೆನೆದರೆ
ಕೆಡುವುದು ಕಾಣಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.
(ವ. ೧೦೮)

ಹಾಗೆಯೇ, 'ಗುರು ಕರುಣೆ'ಯನ್ನು

'ಭವತಿಮಿರವೆಂಬ ಅಜ್ಞಾನದಿಂದ ಮುಸುಕಿಕೊಂಡು,
ಕಾಣಬಾರದೆಯಿದ್ದ ಕಣ್ಣಿಂಗೆ ಜ್ಞಾನವೆಂಬ ಅಂಜನವನೆಚ್ಚಿ,
ಶಿವಪಥವಿದೆಂದು ತೋರಿಸಿದ ಸದ್ಗುರು ದೇವಂಗೆ
ನಮೋ ನಮೋ ಎಂಬೆನಯ್ಯಾ,
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ (ವ. ೧೫೮)

ಎಂಬ ಭಾವಪೂರ್ಣ ಮಾತುಗಳಿಂದ ವರ್ಣಿಸಿರುವರು.

ಹೀಗೆ, ವೀರಶೈವ ತತ್ತ್ವ ಬೋಧಿಸುವ ಸೃಷ್ಟಿಜ್ಞಾನ, ಪಿಂಡಜ್ಞಾನ ಹಾಗೂ 'ಭಕ್ತ....ಐಕ್ಯ' ಷಟ್‌ಸ್ಥಲ ಜ್ಞಾನದ ವಿಶೇಷ ಪರಿಶೀಲನೆ ಈ 'ಷಟ್‌ಸ್ಥಲ ಜ್ಞಾನ ಸಾರಾಮೃತ ವಚನ' ಎಂಬ ಅರ್ಥಪೂರ್ಣ ಶಿರೋನಾಮೆಯು, ಅನ್ವರ್ಥ ಪೂರ್ಣ ಅಮೃತ ವಿವೇಚನೆಯಾಗಿದೆ. ಶಿವಾನುಭವಿ, ಧರ್ಮಧುರಂಧರ ಶ್ರೀ ತೋಂಟದಾರ್ಯರ ಈ ಕೃತಿ ಅತ್ಯಂತ ಮಹತ್ತ್ವದ್ದಾಗಿದೆ.

ಷಟ್‌ಸ್ಥಲಗಳ ವಿವೇಚನೆ ಈ 'ಸಾರಾಮೃತ'ದ ಬಹು ಮುಖ್ಯ ಭಾಗ. ಭಕ್ತಸ್ಥಲ ದಲ್ಲಿ, ಮುಂದಿನ ಐದು ಸ್ಥಲಗಳೂ ಸ್ಥೂಲವಾಗಿ ಒಳಗೊಂಡು ವಿಕಾಸವಾಗುತ್ತಿರುವ ವಿವರಗಳನ್ನು, ಅಲ್ಲಿ ಭಕ್ತನ ದೇಹ–ಮನಸ್ಸು–ಪ್ರಾಣಗಳಲ್ಲಿ ಆಗುವ ಮಾರ್ಪಾಟುಗಳನ್ನು ಶ್ರೀ ಸಿದ್ಧಲಿಂಗೇಶ್ವರರು ವಿವೇಚಿಸಿರುವರು.

"ಸದಾಚಾರದಲ್ಲಿ ನಡೆವವನ, ಶಿವನಲ್ಲಿ ಭಕ್ತಿಯಾಗಿಪ್ಪವನ,
ಶಿವಲಾಂಛನವ ಕಂಡಲ್ಲಿ ವಂದನೆಗೈಯುತ್ತಿಪ್ಪವನ,
ಲಿಂಗ–ಜಂಗಮವ ಒಂದೆ ಭಾವದಲ್ಲಿ ಕಂಡು,
ಭೃತ್ಯಾಚಾರ–ಸದಾಚಾರಯುಕ್ತನಾಗಿರಬಲ್ಲರೆ,
ಭಕ್ತಸ್ಥಲವಿದೆಂಬೆನಯ್ಯಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ"
(ವ. ೨೧೨)

ಹೀಗೆ, ಆಚರಣೆಯೇ ಮೂಲವಾದ ಭಕ್ತಸ್ಥಲದ ಸಾಧನೆ–ಮುಂದಿನ ಹಂತಗಳಲ್ಲಿ ವಿಕಾಸ ವಾಗಿ, ಮಾಹೇಶ್ವರಸ್ಥಲದಲ್ಲಿ ಆಚರಣೆ, ನಿಷ್ಠೆ ಬಲಿದು ನಿಲ್ಲುವ ಘಟ್ಟಗಳನ್ನು ನಿರೂಪಿ ರುವರು.

'..............................
ಅರುಹು ಸಹಿತವಾಗಿ ಗುರುವೆಂದೆಂಬೆ,
ಆಚಾರ ಸಹಿತವಾಗಿ ಶಿಷ್ಯನೆಂದೆಂಬೆ
ನಿಷ್ಠೆ ಸಹಿತವಾಗಿ ಲಿಂಗವೆಂದೆಂಬೆ
...................................' (ವ. ೨೭೦)

ಎಂದು ಗುರು-ಲಿಂಗ-ಭಕ್ತ ಸಂಬಂಧಗಳನ್ನು ವಿವರವಾಗಿ ಚರ್ಚಿಸಿರುವರು. ಮುಂದಿನ ಪ್ರಸಾದಿ ಸ್ಥಲದಲ್ಲಿ,

ತನುವ ಗುರುವಿಗೆ ಸವೆವುದು ಶೀಲ,
ಮನವ ಲಿಂಗಕ್ಕೆ ಸವೆವುದು ಶೀಲ
ಧನವ ಜಂಗಮಕ್ಕೆ ಸವೆವುದು ಶೀಲ (ವ. ೩೧೧)

ಎಂದು ನಿರೂಪಿಸಿ.

ಆಚಾರ ಅನಾಚಾರವೆಂಬುದು ಇಲ್ಲ,
ಸೀಮೆ ನಿಸ್ಸೀಮೆ ಎಂಬುದು ಇಲ್ಲ
ಗಮನ–ನಿರ್ಗಮನವೆಂಬುದು ಇಲ್ಲವಯ್ಯಾ
.......................................
ಇವೇನೂ ಇಲ್ಲದ ಪರಮ ನಿರ್ವಾಣ ನಿರ್ವಯಲೇ:
ಶರಣ–ಲಿಂಗ ಸಮರಸವಯ್ಯಾ........(ವ. ೩೨೭)

ಅಲ್ಲಿ ಮೂಡುವ ಭಾವ 'ನಾ ನೀನೆಂಬುದ ಹೊದ್ದದೆ ಎರಡಳಿದ ನಿರಾಳ ನೀನೇ' (ವ. ೩೩೨) ಎಂಬ ನಿಲವಿಗೆ ನಿಲ್ಲುವ ಸಾಧನೆಯನ್ನು ವಿವರಿಸಿರುವರು.

'ಪ್ರಸಾದಿಸ್ಥಲ'ದ ಸದಾಚಾರಗಳಿಂದ, ಸಾವಧಾನದಿಂದ, ಸಿದ್ಧಿಸುತ್ತದೆ ಪ್ರಾಣಲಿಂಗಿ ಸ್ಥಳ. ಅಂಗ–ಲಿಂಗ ಸಂಬಂಧ ಬಲಿದು 'ಇಂತೀ ಷಡ್ವಿಧ ಲಿಂಗದಲ್ಲಿ ಬೆರಸಿ ಬೇರಿಲ್ಲದಿರ ಬಲ್ಲರೆ ಪ್ರಾಣಲಿಂಗಿಯೆಂದೆಂಬೆನಯ್ಯಾ' (ವ. ೩೩೪) ಎಂದೂ, ಶಿವಯೋಗದ ವಿವಿಧ ಅನುಭವಗಳನ್ನು ಈ ಸ್ಥಳದಲ್ಲಿ ನಿರೂಪಿಸಿರುವರು.

"....ನಿಮ್ಮ ಶರಣರು ಕಾಯವನು, ಜೀವವನು, ಕರಣವನ್ನು
ಕೇವಲ ಪರಂಜ್ಯೋತಿಯೊಳಗೆ ಬೆರಸಿ ಬೇರಿಲ್ಲದೆ,
ಕಾಯುವನು, ಕರಣವನು ಹೊದ್ದದೆ
ಮಹಾಘನಲಿಂಗ ಪದದೊಳಗಿಪ್ಪರಯ್ಯಾ" (ವ. ೩೬೦)

ಎಂದೂ ಪ್ರಾಣಲಿಂಗಿಯ ಐಕ್ಯಸ್ಥಳದಲ್ಲಿ,

ಎನ್ನರುಹೇ ನಿನ್ನರುಹಯ್ಯಾ, ನಿನ್ನರುಹೇ ಎನ್ನರುಹಯ್ಯಾ!
ಎನ್ನ ಜೀವನವೇ ನಿನ್ನ ಜೀವನವಯ್ಯಾ!
ಎನ್ನ ಸುಖವೇ ನಿನ್ನ ಸುಖವಯ್ಯಾ
ನಿನ್ನ ಸುಖವೇ ಎನ್ನ ಸುಖವಯ್ಯಾ
ನಿನಗೆ–ನನಗೆ ಸಂದು ಸಂಶಯವಿಲ್ಲ
.......................................

ಎಂಬ ಸಮರಸ ನಿಲವನ್ನೂ ತಳೆದು, 'ಆದಿಯಲು ಸಂದಿಲ್ಲ, ಅನಾದಿಯಲು ಸಂದಿಲ್ಲ ಎಂದೆಂದೂ ಸಂದಿಲ್ಲ ಶರಣ–ಲಿಂಗಕ್ಕೆ' (ವ. ೪೩೨) ಎಂದು ಈ ಐಕ್ಯಭಾವವನ್ನೂ ನಿರೂಪಿಸಿರುವರು.

ಶರಣಸ್ಥಲದ ಸಾಧನೆಯಲ್ಲಿ 'ಲಿಂಗವೆ ಪತಿಯಾಗಿ, ತಾನೆ ಸತಿಯಾಗಿ, ಅನ್ಯವೇನ ನರಿಯದೆ, ಪಂಚೇಂದ್ರಿಯರಹಿತನಾಗಿ ತೆರಹಿಲ್ಲದರುಹು ತಾನಾಗಿ, ನೆರೆಯರುಹಿನೊಳು ನಿಬ್ಬೆರಗಾಗಿ, ಹೃದಯಕಮಲ ಮಧ್ಯದಲ್ಲಿ ಪರಮೇಶ್ವರನೊಳಗಣ ಸಮರಸ ಸ್ನೇಹವೆರಸಿ ಅಗಲದಿಪ್ಪುದೀಗ ಶರಣಸ್ಥಲ' (ವ. ೪೪೩) ಎಂದು ನಿರ್ವಚನ ನೀಡಿರುವರು. ಈ

ಸುಸೂಕ್ಷ್ಮವಾದ ಶರಣಸ್ಥಲದ ವಿವರಗಳನ್ನು ನೂರಮುವ್ವತ್ತುನಾಲ್ಕು ವಚನಗಳ ಮೂಲಕ ನಿರೂಪಿಸಿರುವರು.

'ವಾರಿ ಬಲಿದು, ವಾರಿ ಶಿಲೆಯಾದಂತೆ,
ವಾರಿ ಶಿಲೆ ಕರಗಿ ಉದಕವಾದಂತೆ,
ನಿನ್ನ ವಿನೋದಕ್ಕೆ ನೀನೆ ಶರಣನಾದೆ
ನಿನ್ನ ವಿನೋದಕ್ಕೆ ನೀನೆ ಲಿಂಗವಾದೆ,
ನಿನ್ನ ವಿನೋದ ನಿಂದಲ್ಲಿ ನೀನೆ,
ಶರಣ–ಲಿಂಗವೆಂಬುಭಯವಳಿದು
ನಿರಾಳ ನಿರ್ಮಾಯನಾಗಿ, ಶಬ್ದಮಯವಾದೆನು ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ'(ವ. ೫೭೩)

ಎಂಬ ಅತ್ಯಂತ ಸರಳ ಭಾಷೆಯು, ನೀರ ಉಪಮಾನಗಳಿಂದ ಶರಣ–ಲಿಂಗ ಸಂಬಂಧ ವನ್ನು, ಈ ಸೃಷ್ಟಿ ಹೇಗೆ 'ಶಿವಲೀಲೆ' ಎಂಬುದನ್ನೂ ವಿವರಿಸಿದ ವೈಶಿಷ್ಟ್ಯವನ್ನು ಗಮನಿಸಬೇಕು.

ವೀರಶೈವದಲ್ಲಿ 'ಐಕ್ಯಸ್ಥಲ'ವೆಂದರೆ, 'ನಿರ್ವಾಣ', 'ಮುಕ್ತಿ' ಎಂದರೆ ಬಿಡುಗಡೆ. 'ಸಾಯುಜ್ಯ' ಎಂದು ಅರ್ಥವಲ್ಲ. ಶರಣ–ಐಕ್ಯಸ್ಥಲಗಳನ್ನು ಸಾಧಿಸಿ, 'ಶಿವನೇ' ಆಗಿ, ಮತ್ತೆ, ಭಕ್ತಸ್ಥಲಕ್ಕಿಳಿದು, ಸಾಮಾನ್ಯರಂತೆ, ಮಾನವರಾಗಿ ಬಾಳಿ, ಲೋಕಹಿತ ಕಾರ್ಯ ದಲ್ಲಿ 'ಲಿಂಗ'ವಾಗಿ ತೊಡಗುವ ವಿಶೇಷ ಸ್ಥಿತಿ ಎಂಬುದನ್ನು ಗಮನಿಸಬೇಕು.

'ಆತ್ಮನೇ ಅಂಗವಾದ ಐಕ್ಯನಲ್ಲಿ, ಭಕ್ತ....
ಶರಣನಪ್ಪ ಅಂಗ ಪಂಚಕವು ಗರ್ಭೀಕೃತವಾಗಿ....
ಆ ಐಕ್ಯಂಗೆ ಮಹಾಲಿಂಗ ಸಂಬಂಧವಾಗಿ
ಆ ಮಹಾಲಿಂಗದಲ್ಲಿಯೇ ಆಚಾರಲಿಂಗ....
ಲಿಂಗ ಪಂಚಕವು ಗರ್ಭೀಕೃತವಾಗಿ ಮಹಾಲಿಂಗವೇ ಆಶ್ರಯವಾಗಿ
ಇಂತೀ ಷಡ್ವಿಧ ಲಿಂಗದಲ್ಲಿ ಬೆರಸಿ ಬೇರಿಲ್ಲದಿರಬಲ್ಲರೆ ಐಕ್ಯನೆಂಬೆನಯ್ಯಾ'
(ವ. ೫೭೮)

ಎಂಬ ವಚನದಲ್ಲಿ ಆರು ಸ್ಥಲಗಳಲ್ಲಿ ಆರು ಲಿಂಗಗಳು ಸಮರಸವಾಗುವ, ಸಂಬಂಧವನ್ನು ವಿವರಿಸಿರುವರು. ಅಂಥ ಭಕ್ತ 'ಕಾಮದಿಂದ ಕರಿವನು, ಕ್ರೋಧದಿಂದ ಕೊರವನು....ಏಕ ಮೇವ ಪರಬ್ರಹ್ಮವು ತಾನೇ ನೋಡ'(ವ. ೬೪೫)ಅಲ್ಲದೆ, 'ಸತ್ಯನಲ್ಲ, ಅಸತ್ಯನಲ್ಲ....ಸೀಮ ನಲ್ಲ, ನಿಸ್ಸೀಮನಲ್ಲ, ಪರಮ ನಿರಂಜನನು ತಾನೇ ನೋಡಾ ಭಕ್ತನು' (ವ. ೬೪೦) 'ಚಿತ್ತ ಬುದ್ಧಿ ಅಹಂಕಾರ, ಮನ ಜ್ಞಾನ ಭಾವಂಗಳ ಮೀರಿದ ನಿರ್ಭಾವಲಿಂಗೈಕ್ಯನಯ್ಯಾ' (ವ. ೬೪೭) ಆತನಿಗೆ 'ವಂದನೆ–ನಿಂದನೆಗಳಿಲ್ಲ', 'ಪ್ರಾಣ ಪರತತ್ತ್ವದಲ್ಲಡಗಿದ ಪ್ರಾಣ

ಲಿಂಗೈಕ್ಯಂಗೆ ಪ್ರಪಂಚಿನ ಹೊದ್ದಿಗೆಯುಂಟೇ?' (ವ. ೬೭೨) ಮುಂತಾಗಿ ಐಕ್ಯಸ್ಥಲದಲ್ಲಿ ನಿಂತ ಜೀವದ ಘನತೆಯನ್ನು ಅನ್ಯಾದೃಶವಾಗಿ ನಿರೂಪಿಸಿರುವರು. ಶ್ರೀ ಸಿದ್ಧಲಿಂಗೇಶ್ವರರೇ, ಐಕ್ಯಸ್ಥಲದಲ್ಲಿ ನಿಂತು, ಕಂಡುಂಡ ಅನುಭವಗಳನ್ನು ಅತ್ಯಂತ ಮನೋಜ್ಞವಾಗಿ ವಿವರಿಸಿರುವರು.

ಗಾಳಿ ಗಂಧವನಪ್ಪಿದಂತೆ, ಬಯಲು ಬಯಲನಪ್ಪಿದಂತೆ,
ಬೆಳಗು ಬೆಳಗನಪ್ಪಿ ಮಹಾಬೆಳಗಾದಂತೆ,
ಶರಣ ಲಿಂಗವನಪ್ಪಿ, ಮಹಾಲಿಂಗವೇ ತಾನು ತಾನಾಗಿ
ನಿರ್ವಯಲಾದನು ನೋಡಾ (ವ. ೬೯೪)
'.............................
ಆ ನಿರವಯ ವಸ್ತುವ ನೊಡಗೂಡಿ,
ನಾನು ನಿರಾಳನಾದೆನು ಕಾಣಾ' (ವ. ೬೯೫)

ಆಗ, 'ನಾನೆಂಬುದು, ನೀನೆಂಬುದು, ಏನು ಏನುಯೆಂಬುವದಕ್ಕೆ ತೆರಹಿಲ್ಲದ, ಪರಿಪೂರ್ಣ ಸರ್ವಮಯವಾದೆನು ಕಾಣಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ' (ವ.೬೯೬) ಎಂಬ ಅನುಭವ ವ್ಯೆದಾಳುವುದನ್ನು ನಿರೂಪಿಸಿರುವರು.

ಕೊನೆಯ 'ನಿರವಯಸ್ಥಲ'ದಲ್ಲಿ, ಶಿವ–ಜೀವೈಕ್ಯ ಬೋಧನೆಯ ತುರೀಯ ಸ್ಥಿತಿಯನ್ನು ವರ್ಣಿಸಿರುವರು.

'ಒಳಗೆ ನೋಡಿದರೆ, ಒಳಗೆ ಬಯಲು,
ಹೊರಗೆ ನೋಡಿದರೆ, ಹೊರಗೆ ಬಯಲು ನೋಡಾ,
ನೆನೆದೆನೆಂದರೆ ಮನ ಬಯಲು,
ನೆನೆಯಿಸಿಕೊಂಡೆನೆಂದರೆ ನೀನಿಲ್ಲವಾಗಿ
ನಾನು ಬಯಲು, ನೀನು ಬಯಲು ನೋಡಾ'

ಎಂಬ ವಚನದಲ್ಲಿ, 'ಸರ್ವಶೂನ್ಯ ನಿರಾಲಂಬ ಸ್ಥಲ'–ಸ್ಥಿತಿ, ಮತ್ತೆ ಜೀವಿಯಲ್ಲಿ ಮೂಡಿದ, ಪೂರ್ಣಚಕ್ರಗತಿಯ ವಿಕಾಸವನ್ನು, ಆತ್ಮ–ಪರಮಾತ್ಮ ಐಕ್ಯಸ್ಥಿತಿಯನ್ನು ನಿರೂಪಿಸಿರುವರು. ಹೀಗೆ, ಮಹಾ ಅನುಭಾವಿಗಳಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರು, ವೀರಶೈವದ 'ಪ್ರಾಣ'ವೇ ಆದ, ಷಟ್‌ಸ್ಥಲವನ್ನು, ಅಷ್ಟಾವರಣ, ಪಂಚಾಚಾರಗಳ ಹಿನ್ನೆಲೆಯಲ್ಲಿ ಸಾದ್ಯಂತವಾಗಿ ವಿವೇಚಿಸಿರುವುದರಿಂದ ಇದೊಂದು ವೀರಶೈವ ತತ್ತ್ವದ ಅಧಿಕೃತ ಗ್ರಂಥವಾಗಿದೆ.

**ಯೋಗ ಸಮನ್ವಯ:**

ವೀರಶೈವವನ್ನು 'ಸಪ್ತಶ್ರುತಿ ಸಮನ್ವಯ'ವೆಂದು ವರ್ಣಿಸಿರುವರು. ಅದು ಅತ್ಯಂತ ಪರಿಷ್ಕೃತವೂ, ಇತ್ತೀಚಿನದೂ ಆದ ಶುದ್ಧ ಹಿಂದೂ ಧರ್ಮ ಎಂದೂ ಕರೆದಿರುವರು.

ವೇದ–ಆಗಮ–ಉಪನಿಷತ್ ತತ್ತ್ವಗಳಲ್ಲಿ ಮಹತ್ತ್ವವಾದ ಅಂಶಗಳನ್ನು ಮಾತ್ರ ಅಳವಡಿಸಿ, ತಮ್ಮ ಸ್ವಾನುಭವದಿಂದ ಶಿವಶರಣರು ರೂಪಿಸಿದ ಧರ್ಮವಾದ್ದರಿಂದ, ಅದರಲ್ಲಿ ಸಮನ್ವಯ ದೃಷ್ಟಿ, ಸುಧಾರಣಾ ದೃಷ್ಟಿ, ಪ್ರಾಗತಿಕ ದೃಷ್ಟಿ ಒಳಕೊಂಡಿದೆ. ಅದರ ಸಾಮಾಜಿಕ ತತ್ತ್ವಗಳಾದ–ಕಾಯಕ–ದಾಸೋಹಗಳನ್ನು ಇಲ್ಲಿ ಪ್ರಸ್ತಾಪಿಸದೆ ಅದರ ತಾತ್ವಿಕ ಅಂಶಗಳಾದ ಲಿಂಗಾಂಗ ಸಾಮರಸ್ಯ ಸಿದ್ಧಾಂತ ಹಾಗೂ ಸರ್ವಯೋಗ ಸಮನ್ವಯವಾದ ಶಿವಯೋಗದ ಅಂಶಗಳನ್ನು ಇಲ್ಲಿ ಪರಿಶೀಲಿಸಲಾಗುವುದು. ಶ್ರೀ ಸಿದ್ಧ ಲಿಂಗೇಶ್ವರರು ವೀರಶೈವದ 'ಶಿವಯೋಗ'ವನ್ನು ತಮ್ಮ ವಚನಗಳಲ್ಲಿ 'ರಾಜಶಿವಯೋಗ' ವೆಂದು ನಿರೂಪಿಸಿರುವರು. ತಮ್ಮ ಗುರು ಅಂಥ ಯೋಗಾಚಾರ್ಯ, ತಾವು ಅದನ್ನು ಸಾಧಿಸಿ ನಿಂತವರು ಎಂಬುದನ್ನು ಅವರ ವಚನಗಳು ಸಾಬೀತುಗೊಳಿಸುತ್ತಿವೆ.

> ನಾದಬಿಂದು ಕಳಾಭೇದವ ತಿಳಿದಲ್ಲದೆ ಆರಕ್ಷರವಾದ ತೆರನನರಿಯಬಾರದು.
> ಆರಕ್ಷರಕೆ ಮೂಲ ಪ್ರಣಮವ ತಿಳಿದಲ್ಲದೆ, ನಾದ ತಲೆದೋರದು.
> ನಾದದ ಬೆಳಗಿನ ಕಳೆಯ ನೋಡಿ ಕಂಡಲ್ಲದೆ
> **ರಾಜಶಿವಯೋಗಿ**ಯಾಗಬಾರದು
> ರಾಜಶಿವಯೋಗವೆಂಬುದು,
> **ಆದಿಯಲ್ಲಿ ಶಿವ ಬೀಜವಾದ ಮಹಾಮಹಿಮನಿಗೆ**
> **ಸಾಧ್ಯವಪ್ಪುದಲ್ಲದೆ ತ್ರೈಜಗದಲ್ಲಾರಿಗೂ**
> **ಅಸಾಧ್ಯ ನೋಡಾ**|| ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ
> (ವ. ೩೭೨)

ಭಾರತದಲ್ಲಿ ಪ್ರಸಿದ್ಧವಾಗಿರುವ ಯೋಗ ಪ್ರಕಾರಗಳಲ್ಲಿ ಹೆಚ್ಚಿನ ಜನಮನ್ನಣೆ ಪಡೆದಿರುವುದು ರಾಜಯೋಗ. ಶಿವಯೋಗವು ಆ ರಾಜಯೋಗದ ಮುಂದುವರಿದ ರೂಪವೆಂದೂ, ಇತ್ತೀಚೆಗೆ ಅರವಿಂದರು ಪ್ರಸ್ತಾಪಿಸಿರುವ 'ಪೂರ್ಣಯೋಗ'ದ ಸ್ಥಿತಿಯನ್ನು, ಮೀರಿನಿಂತ ಮಹತ್ವದ ಸ್ಥಾನವನ್ನು ಪಡೆದಿದೆ ಎಂದು ಹೇಳಲಾಗಿದೆ. ಶ್ರೀ ಸಿದ್ಧಲಿಂಗೇಶ್ವರರು ತಮ್ಮ ವಚನಗಳಲ್ಲಿ ರಾಜಶಿವಯೋಗವನ್ನು 'ಕೆಲವು ಶೈವರುಗಳು ಮಾಡುವರಾಗಿ, ರಾಜಯೋಗವೆಂಬುದು ಗಾಜು ಗೋಜು ನೋಡಾ........ಇವು ಒಂದೂ ಲಿಂಗಾಂಗ ಯೋಗದ ಹೆಜ್ಜೆಯಲ್ಲ ನೋಡಾ....ನಿಮ್ಮ ಶರಣರು ಸ್ವಾನುಭವ ಜ್ಞಾನಶುದ್ಧ ಶಿವಯೋಗದಲ್ಲಿ ಸ್ವರೂಪ ಜ್ಞಾನಿಗಳು ಕಾಣಾ' (ವ. ೩೫೮) ಎಂದು ನಿರ್ದೇಶಿಸಿರುವರು. ಹೀಗೆ ಸ್ವಸ್ವರೂಪ ಜ್ಞಾನವೇ ಶಿವಯೋಗ. ಸುಪ್ರಸಿದ್ಧ ರಾಜಯೋಗವನ್ನು ಮೀರಿದ 'ಸಹಜಯೋಗ', ಪೂರ್ಣಯೋಗವನ್ನು ಒಳಕೊಂಡ ಪರಿಪೂರ್ಣಯೋಗ. ಸರ್ವಾಂಗಲಿಂಗಿ ಸ್ಥಿತಿ, ನಿರವಯ ಸ್ಥಲಗಳನ್ನು ಸಾಧಿಸಿದ ರಾಜಶಿವಯೋಗಿ ಶ್ರೀ ಸಿದ್ಧಲಿಂಗೇಶ್ವರರು, ತಮ್ಮ ಷಟ್‌ಸ್ಥಲ ಜ್ಞಾನ ಸಾರಾಮೃತದಲ್ಲಿ ಈ 'ರಾಜಶಿವಯೋಗ' ವೀರಶೈವದ ಯೋಗವೆಂದು ಅಧಿಕೃತವಾಗಿ ನಿರೂಪಿಸಿರುವುದರಿಂದ, ಈ ಕೃತಿ ವೀರಶೈವ ಯೋಗದ ಅಧಿಕೃತ ಗ್ರಂಥವೆಂಬುದು ಖಚಿತವಾಗುತ್ತದೆ.

'ನಿಮ್ಮ ಶರಣರು ಕಾಯವನು, ಜೀವವನು, ಕರಣವನು,
ಕೇವಲ ಪರಂಜ್ಯೋತಿ ಲಿಂಗದೊಳಗೆ ಬೆರಸಿ ಬೇರಿಲ್ಲದೆ,
ಕಾಯವನು, ಕರಣವನು ಹೊದ್ದದೆ, ಮಹಾಘನಲಿಂಗ
ಪದದೊಳಗಿಪ್ಪರಯ್ಯಾ (ವ. ೩೬೦)

ಎಂದು ತಿಳಿಸಿ, ಈ ಯೋಗದ ಆಗು-ಹೋಗುಗಳ ಸಾದ್ಯಂತವಾದ ವಿವರಣೆಯನ್ನು ವಚನ ೩೬೪ ರಲ್ಲಿ ಪ್ರಸ್ತಾಪಿಸಿರುವರು. 'ಲಿಂಗತ್ರಯ ವಿಡಿದಾಚರಿಸಿ, ಲಿಂಗದೊಡನೆ ಕೂಡಿ, ಲಿಂಗವೇ ತಾನುತಾನಾಗಿ ವಿರಾಜಿಸುತ್ತಿಪ್ಪುದೀಗ ಶಿವಯೋಗ ನೋಡಾ' ಎಂದು ಸ್ಪಷ್ಟ ಪಡಿಸಿರುವರು. ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿ ಅಂಥ ಪರಿಪೂರ್ಣ ಶಿವಯೋಗಿ, ಜ್ಯೋತಿರ್ಲಿಂಗವಾಗಿ, ಅಂದಿಗೂ-ಇಂದಿಗೂ ಇರುವ ರಾಜ ಶಿವಯೋಗಿ.

ಕೊನೆಯದಾಗಿ, ಷಟ್‌ಸ್ಥಲಜ್ಞಾನ ಸಾರಾಮೃತ ಹಿಂದಿನ ಬಸವ, ಚೆನ್ನಬಸವ, ಪ್ರಭುದೇವ ಮುಖ್ಯರಾದ ಪುರಾತನರೆಲ್ಲರನ್ನು ಭಕ್ತಿಯಿಂದ ಸ್ಮರಿಸಿ, ಅವರ ವಿಚಾರಗಳನ್ನು ಸಕ್ರಮಗೊಳಿಸಿದ, ಸ್ಪಷ್ಟ ಹಾಗೂ ನಿರ್ದಿಷ್ಟಗೊಳಿಸಿದ ಗ್ರಂಥವಾಗಿದೆ.

ಬಸವಣ್ಣನ ಪ್ರಸಾದದಿಂದ ಭಕ್ತಿಜ್ಞಾನ ವೈರಾಗ್ಯ ಸಂಪನ್ನನಾದೆನಯ್ಯಾ
ಚೆನ್ನಬಸವಣ್ಣನ ಪ್ರಸಾದದಿಂದ ಷಟ್‌ಸ್ಥಲಜ್ಞಾನ ಸಂಪನ್ನನಾದೆನಯ್ಯಾ
ಪ್ರಭುದೇವರ ಪ್ರಸಾದದಿಂದ, ಪರಶಿವ ತತ್ತ್ವವೇ ಎನ್ನ ಸ್ವರೂಪವೆಂದರಿದು
ಸಮಸ್ತ ಸಂಸಾರ ಪ್ರಪಂಚ ಕೊಡಹಿದೆನು ನೋಡಾ (ವ. ೫೩೭)

ಎಂದು ಸ್ಮರಿಸಿ, ಏಳುನೂರೆಪ್ಪತ್ತು ಅಮರ ಗಣಂಗಳ 'ಪರಮ ಪ್ರಸಾದದಿಂದ............ ಪರಮಾನಂದ ಪ್ರಭಾಮಯನಾಗಿರ್ದೆನು ನೋಡಾ' ಎಂದು ಅಭಿಪ್ರಾಯಪಟ್ಟಿರುವರು. 'ಚೆನ್ನಬಸವಣ್ಣನೇ....ನನ್ನ ಪ್ರಾಣಲಿಂಗ' (ವ. ೪೭೯) 'ಪ್ರಮಥರಾಣೆ....ಬಸವಣ್ಣನಾಣೆ' (ವ. ೧೦೧) ಮುಂತಾದ ಹೇಳಿಕೆಗಳಲ್ಲಿ ತಮ್ಮ ವಿನಯವನ್ನು ಸೂಚಿಸಿರುವುದರ ಜೊತೆಗೆ, ಅವರೆಲ್ಲರ ಅನುಭವ ಸಾರಾಯವನ್ನು, ತಮ್ಮ 'ಅನುಭವ ಅಮೃತ'ವನ್ನಾಗಿ ಮಾಡಿ ಕೊಂಡುದನ್ನು ಸೂಚಿಸಿರುವರು. ತಾವು ಪಡೆದ ಪರಮಾನಂದ ಸ್ಥಿತಿಯನ್ನು 'ನೋಡಿಹೆ ನೆಂದರೆ ನೋಟ ಸಮರಸವಾಯಿತ್ತು

ಕೂಡಿಹೆನೆಂದರೆ ಕೂಟ ನಿಬ್ಬೆರಗಾಯಿತ್ತು
ನೋಟ-ಕೂಟಗಳೆಂಬು ಭಯುವಳಿದು
ನಿಜದಲ್ಲಿ ನಿರ್ವಯಲಾಯಿತ್ತಯ್ಯಾ,
ನೋಡಲಿಲ್ಲದ, ನುಡಿಸಲಿಲ್ಲದ, ಕೂಡಲಿಲ್ಲದ
ಅಪ್ರತಿಮ ತಾನು ತಾನಾದ ಪರಮಾನಂದ ಸುಖದಲ್ಲಿ
ಓಲಾಡುತ್ತಿರ್ದನಯ್ಯಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.
(ವ. ೬೧೮)

ಎಂಬ ವಚನದಲ್ಲಿ ನಿರೂಪಿಸಿರುವರು. ಬಸವಾದಿ ಶರಣರ ವಚನದ ಸಾಲು ಸಾಲುಗಳು, ವಿಚಾರದ ಮೊತ್ತ ಮೊತ್ತವೂ, ಶ್ರೀ ತೋಂಟದಾರ್ಯರ ವಚನಗಳಲ್ಲಿ ಕಾಣಸಿಗುತ್ತವೆ. ಶ್ರೀ ತೋಂಟದಾರ್ಯರ ಈ ಷಟ್‌ಸ್ಥಲ ವಿವೇಚನೆ ಮುಂದೆ ನೂರೊಂದು ಸ್ಥಲ ವಿವೇಚನೆಯಾಗಿ ಮುಂದುವರಿದಿರುವುದು ಕಾಣುತ್ತದೆ. ಗುರು–ಲಿಂಗ–ಜಂಗಮ–ಸಮರಸದ ತಾತ್ತ್ವಿಕಾರ್ಥದೊಡನೆ, ಅವುಗಳ ಸಾಮಾಜಿಕ ಸಂಬಂಧಗಳ ವಿವೇಚನೆಯೂ ಅದರ ಪ್ರತೀಕವಾದ 'ಕಾಯಕ–ದಾಸೋಹ' ವಿಚಾರಗಳೂ, 'ಪದಾರ್ಥ–ಪ್ರಸಾದವಾಗುವ ರೀತಿ–ನೀತಿಗಳೂ ಶೂನ್ಯಸಂಪಾದನೆಗಳಲ್ಲಿ, ಏಕೋತ್ತರ ಶತಸ್ಥಲ ಗ್ರಂಥಗಳಲ್ಲಿ, ಶರಣರ ವಚನಗಳಿಗೆ ಬರೆದ ಟೀಕೆ–ವ್ಯಾಖ್ಯಾನಗಳಲ್ಲಿ ಸ್ಪಷ್ಟರೂಪವನ್ನು ಪಡೆದಿರುವುದು ವಿದಿತವಾಗುತ್ತದೆ. ಹೀಗೆ, ತತ್ವದ ಬೆಳವಣಿಗೆ, ಯೋಗಾನುಭವದ ವಿಕಾಸ ಶರಣ ಪರಂಪರೆಯ ವಿಶಿಷ್ಟ ಗುಣ. 'ಶಿವಯೋಗ' ವಿಚಾರವೂ ವಿಕಾಸವಾಗಿ ನಿಂತಿದೆ.

ಶ್ರೀ ಎಡೆಯೂರು ತೋಂಟದ ಸಿದ್ಧಲಿಂಗ ಶಿವಯೋಗಿಗಳ 'ಷಟ್‌ಸ್ಥಲ ಜ್ಞಾನ ಸಾರಾಮೃತ'– ಸಾಹಿತ್ಯ, ಭಾಷೆ, ಪ್ರಯೋಗಗಳ ದೃಷ್ಟಿಯಿಂದಲೂ ಗಮನಾರ್ಹಕೃತಿ. ಬೆಡಗಿನ ವಚನಗಳಿಗೆ ಬಂದ ವ್ಯಾಖ್ಯಾನಗಳೇ, ಅವುಗಳ ಮಹತ್ವವನ್ನು ಎತ್ತಿತೋರುತ್ತಿವೆ. ಅವುಗಳನ್ನೂ ದಾಟಿ–ಮೀಟಿನಿಂತ ಆಧ್ಯಾತ್ಮಿಕಾರ್ಥ ರಮಣೀಯತೆಗೆ ಎಂಥವರೂ ಹಣಿಮಣಿಯಬೇಕಾಗಿದೆ. ಇಂದ್ರಿಯಾತೀತ ದಿವ್ಯಬದುಕಿನ ಉಕ್ಕಂದಗಳಾದ ಈ ಜ್ಞಾನಾಮೃತ ವಚನಗಳಲ್ಲಿರುವ 'ಅಮೃತ' ಸ್ಪರ್ಶವಾಗುವುದು, ಪುಣ್ಯಜೀವಿಗಳಿಗೆ ಮಾತ್ರ; ಪ್ರಯತ್ನಶೀಲರಿಗೆ ಮಾತ್ರ. ಮಹಾಲಿಂಗವಾಗಿರುವ ಗುರು ಶಿವಸಿದ್ಧೇಶ್ವರ ಪ್ರಭುವಿನ ಪರಮಶಿಷ್ಯ ಶ್ರೀ ಸಿದ್ಧಲಿಂಗ ಶಿವಯೋಗಿಗಳು ಸಾಧಿಸಿದ 'ಷಟ್‌ಸ್ಥಲ ಜ್ಞಾನ'ದ 'ಸಾರಾಯ' ಅಷ್ಟೇ ಅಲ್ಲ 'ಅಮೃತ'! ಇದು ವೀರಶೈವ ಧರ್ಮ–ತತ್ತ್ವ–ಯೋಗ ವಿಚಾರಗಳ 'ಸಾರಾಮೃತ' ಅಮೃತಸಾರ, ಸಾರ ಸಾರಾಯಾಮೃತ!!

ಶೂನ್ಯ ಸಂಪಾದನೆಗಳು, ಲಿಂಗಲೀಲಾ ವಿಲಾಸ ಚಾರಿತ್ರ, ಮುಂತಾದ ಗ್ರಂಥಗಳು, ಈ "ಸಾರಾಮೃತ"ದ ಅಧಿಕೃತ ವಿಚಾರಗಳನ್ನು ಮುಂದುವರಿಸಿವೆ. 'ಶೂ. ಸಂ. ಪರಾಮರ್ಶೆ' ಹಾಗೂ 'ಸಂಪಾದನೆಯ ಸೊಂಪು' ಮುಂತಾದ ವ್ಯಾಖ್ಯಾನ ಗ್ರಂಥಗಳು ಷಟ್‌ಸ್ಥಲಜ್ಞಾನ, ಶಿವಯೋಗದ ವಿಶೇಷಾಂಶಗಳನ್ನು ಅತ್ಯಾಧುನಿಕ ದೃಷ್ಟಿಯಿಂದ ಪರಿಶೀಲಿಸಿರುವುದು ಗಮನಿಸಬೇಕಾದ ಸಂಗತಿ.

# ಶೂನ್ಯಸಂಪಾದನೆ: ಸಾಹಿತ್ಯಸಂಪತ್ತು ಮತ್ತು ಸೃಜನಶೀಲತೆ

—ಡಾ. ಬಿ. ವ್ಹಿ. ಶಿರೂರ

ಹದಿನೈದು ಹದಿನಾರನೆಯ ಶತಮಾನಗಳು ವಚನ ಸಾಹಿತ್ಯದ ಇತಿಹಾಸದಲ್ಲಿ ನವಮನ್ವಂತರದ ಯುಗಗಳು. ಈ ಕಾಲದಲ್ಲಿ ವಚನ ರಚನೆಯೊಂದಿಗೆ ಆ ಹಿಂದಿನ ಸಾಹಿತ್ಯವನ್ನು ಸಂಗ್ರಹಿಸುವ, ಸಂಕಲಿಸುವ, ಸಂಪಾದಿಸುವ, ಬೇರೆ ಬೇರೆ ಸಾಹಿತ್ಯ ಪ್ರಕಾರಗಳ ಮೂಲಕ ಶರಣರ ವ್ಯಕ್ತಿತ್ವವನ್ನು ನಿರೂಪಿಸುವ ಕಾರ್ಯ ಅತ್ಯಂತ ತೀವ್ರಗತಿಯಿಂದ ನಡೆಯಿತು. ಇಂಥ ಪ್ರಯತ್ನದ ಒಂದು ದಿವ್ಯಫಲ 'ಶೂನ್ಯಸಂಪಾದನೆ' ಕೇವಲ ಎರಡುನೂರು ವರ್ಷಗಳ ಅಲ್ಪ ಅವಧಿಯಲ್ಲಿ ಶಿವಗಣ ಪ್ರಸಾದಿ ಮಹಾದೇವಯ್ಯ (೧೪೨೦), ಹಲಗೆದೇವ (೧೪೯೫), ಗುಮ್ಮಳಾಪುರದ ಸಿದ್ಧಲಿಂಗದೇವರು (೧೫೪೦)[೧] ಮತ್ತು ಗೂಳೂರು ಸಿದ್ಧವೀರಣ್ಣೊಡೆಯರು (೧೬೧೬)[೧] 'ಶೂನ್ಯಸಂಪಾದನೆ' ಎಂಬ ಒಂದೇ ಹೆಸರಿನಡಿಯಲ್ಲಿ ನಾಲ್ಕು ಕೃತಿ ರಚಿಸಿರುವುದು ಒಂದು ವಿಶೇಷವೇ ಸರಿ. ಈಗ ಲಭ್ಯವಿರುವ ಈ ನಾಲ್ಕೂ ಕೃತಿಗಳಲ್ಲಿ ಶೂನ್ಯಸಂಪಾದನೆಯ ಭವ್ಯ ಕಲ್ಪನೆಯು ಮೊಳಕೆಯೊಡೆದುದು, ಗಿಡವಾಗಿ ಬೆಳೆದು ನಿಂತುದು ಶಿವಗಣ ಪ್ರಸಾದಿ ಮಹಾದೇವಯ್ಯನಲ್ಲಿ,[೨] ರಮ್ಯ ಫಲವಿತ್ತುದು ಗೂಳೂರು ಸಿದ್ಧವೀರಣ್ಣೊಡೆಯನಲ್ಲಿ. ಆದ್ದರಿಂದ ಇವುಗಳಲ್ಲಿ ಮೊದಲನೆಯದು ಸಂಪಾದನೆ, ಆ ಮೇಲಿನವು ಆವೃತ್ತಿಗಳು, ಪರಿಷ್ಕೃತ ಆವೃತ್ತಿಗಳು.[೩] ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ ಪರಿಷ್ಕರಣಗೊಳ್ಳಲು ಮತ್ತು ೨ನೆಯ ಶೂನ್ಯಸಂಪಾದನೆ ಮೈದಾಳಲು ಮೊದಲಿನ ಸಂಪಾದನೆಯಲ್ಲಿ ಸಿದ್ಧರಾಮಯ್ಯನಿಗೆ ಲಿಂಗದೀಕ್ಷಾ ಕ್ರಮವಿಲ್ಲದಿರುವುದೇ ಕಾರಣವಾಗಿದೆ. ಹಾಗೆಯೆ ೩ನೆಯ ಮತ್ತು ೪ನೆಯ ಪರಿಷ್ಕರಣಗಳು ರೂಪುಗೊಳ್ಳಲು ಮೊದಲಿನ ಎರಡು ಶೂನ್ಯಸಂಪಾದನೆಗಳಲ್ಲಿ ಬರುವ 'ಪ್ರಭು

---

೧ ಈ ಪೂರ್ವದಲ್ಲಿ ಇವರಿಬ್ಬರ ಕಾಲವನ್ನು ೧೫೦೦, ೧೫೭೦ ಎಂದು ಭಾವಿಸಲಾಗಿತ್ತು. (ನೋಡಿ: ಶಿವಗಣ ಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆ ಪ್ರ. ಪು. ೧೦)

೨ ಆದರೂ ಇದಕ್ಕೆ ಸಲ್ಲಬೇಕಾದ ಗೌರವ ಸಂದಿಲ್ಲವೆಂದೇ ಹೇಳಬೇಕು.

೩ ಮಾರ್ಗ ಸಂ. ೧ ಪು. ೫೯೭

ದೇವರ ಪೂರ್ವಸಾಂಗತ್ಯ' ಅಲ್ಲಮನ ಜನ್ಮ ವೃತ್ತಾಂತದ ಕಥೆಯನ್ನು ಅಲ್ಲಗಳೆಯುವುದೇ ಕಾರಣವಿದ್ದಂತೆ ತೋರುತ್ತದೆ.೪

ವೀರಶೈವರಲ್ಲಿ 'ಶೂನ್ಯ' ಎಂದರೆ ಸೃಷ್ಟಿಯನ್ನೆಲ್ಲಾ ತುಂಬಿತುಳುಕಿರುವ ಮೂಲ ಭೂತವಾದ ತತ್ವ. 'ಸಂಪಾದನೆ'ಎಂದರೆ ಆ ತತ್ವದೊಡನೆ ಪಡೆಯುವ ಸಮರಸದ ಆನಂದ೫ ಒಟ್ಟಾರೆ 'ಶೂನ್ಯ ಸಂಪಾದನೆ' ಎಂದರೆ ಲಿಂಗಾಂಗ ಸಾಮರಸ್ಯ. ಇಲ್ಲಿ ಇಂಥ ಸ್ವರೂಪ ವನ್ನೈದಿದ 'ಅಲ್ಲಮಪ್ರಭುದೇವರು'– ಬಸವರಾಜದೇವರು, ಚೆನ್ನಬಸವರಾಜದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಗಳೊಡನೆ ಮಹಾನುಭಾವ ಪ್ರಸಂಗಮಂ ಮಾಡಿ ಶೂನ್ಯ ಸಂಪಾದನೆಯ ಸದ್ಗೋಷ್ಠಿ ಕಥಾಪ್ರಸಂಗಮಂ ಮುಕ್ತಮಾಗಿರ್ದ ಶಿವಾದ್ವೈತ ವಚನಂಗಳನ್ನು ಉತ್ತರ ಪ್ರತ್ಯುತ್ತರ ಸಂಬಂಧವಾಗಿ ಸೇರಿಸಿ ಶಿವಗಣಪ್ರಸಾದಿ ಮಹಾ ದೇವಂಗಳು ಮರ್ತ್ಯಲೋಕದ ಮಹಾಗಣಂಗಳಿಗೆ ಮಹಾಪ್ರಸಂಗಮಂ ಸಮರ್ಪಿಸಿದುದನ್ನು, ವಿವರಿಸಲಾಗಿದೆ. ಇದರಿಂದ ಮಹಾದೇವಯ್ಯ ಈ ಪೂರ್ವದಲ್ಲಿ ಬಿಡಿಬಿಡಿ (ಮುಕ್ತ) ಯಾಗಿದ್ದ ವಚನಗಳನ್ನು ಸಂದರ್ಭಕ್ಕನುಗುಣವಾಗಿ ಸಂಯೋಜಿಸಿಕೊಂಡು ಸಂವಾದರೂಪ ದಲ್ಲಿ ಹೆಣೆದಿರುವನು ಎಂಬುದು ಸ್ಪಷ್ಟವಾಗುತ್ತದೆ. ಈ ಸಂವಾದರೂಪದ ಶೈಲಿಗೆ ಈತನೆ 'ಕಥಾಪ್ರಸಂಗ', 'ಮಹಾಪ್ರಸಂಗ' ಎಂದು ಕರೆದಿದ್ದಾನೆ.ಆದ್ದರಿಂದ ಇದೊಂದು ಅಧ್ಯಾತ್ಮದ ಗಂಭೀರ ವಸ್ತುವನ್ನೊಳಗೊಂಡ ಯಕ್ಷಗಾನ ಪ್ರಸಂಗದಂತಿದೆ. ಆದ್ದರಿಂದ ಇದನ್ನು ಡಾ. ಆರ್. ಡಿ. ರಾನಡೆ ಅವರು "It is a very extraordinary work. The dialougs in Sunyasampadane are planned very much on the lines of platonic dialougs" ಎಂದು ಬಣ್ಣಿಸಿದ್ದಾರೆ. ಇಲ್ಲಿಯ ಗದ್ಯ ಭಾಗ ಭಾಗವತನ ಮಾತಿನಂತೆ, ಪದ್ಯ(ವಚನ) ಭಾಗ ಪಾತ್ರಗಳ ಮಾತಿನಂತೆ ಸಂಯೋಜನೆ ಗೊಂಡಿರುತ್ತದೆ.೬ ಆದ್ದರಿಂದ ಇಲ್ಲಿಯ ವಚನಗಳು ಅಂತ್ಯದಲ್ಲಿ ಕಾಣಾ ಚೆನ್ನಬಸವಣ್ಣ, ಹೇಳಾ ಪ್ರಭುವೆ, ಬಾರಾ ಸಿದ್ಧರಾಮಯ್ಯ ಎಂಬ ಸಂಬೋಧನೆಯನ್ನು ಪಡೆದಿವೆ. ಬಹುಶಃ ಇವು ಸಂಪಾದನೆಕಾರರು ಸಂದರ್ಭಕ್ಕನುಗುಣವಾಗಿ ಸೇರಿಸಿದ ಪದಗಳಾಗಿರಬೇಕು.

ಶಿವಗಣಪ್ರಸಾದಿ ಮಹಾದೇವಯ್ಯಗಳು ಶೂನ್ಯ ಸಂಪಾದನೆಯಲ್ಲಿ ೧೬ ಜನ ವಚನ

---

೪ ಗೂಳೂರು ಸಿದ್ಧವೀರಣ್ಣೊಡೆಯರು ಸಂಗ್ರಹಿಸಿದ ಪ್ರಭುದೇವರ ಶೂನ್ಯಸಂಪಾದನೆ ಸಂ. ಪ್ರೊ. ಸಂ. ಶಿ. ಭೂಸನೂರಮಠ ಪ್ರ. ಪು. XIII

೫ ಈ 'ಸಂಪಾದನೆ' ಎಂಬ ಪದ ಆರಂಭದಲ್ಲಿ ಕೇವಲ ಶೂನ್ಯಸಂಪಾದನೆಗೆ ಮೀಸ ಲಾಗಿದ್ದಿತು. ಬರುಬರುತ್ತ ವಚನಗಳ ಸಂಗ್ರಹಕಾರರು, ಸಂಕಲನಕಾರರು ತಾವು ಸಂಕಲಿಸಿದ, ಸಂಗ್ರಹಿಸಿದ ಕೃತಿಗಳಿಗೂ 'ಸಂಪಾದನೆ' ಎಂಬ ಪದ ಬಳಸಲು ಪ್ರಾರಂಭಿಸಿದರು. ಉದಾಹರಣೆಗೆ: ಶೀಲಸಂಪಾದನೆ, ಸಂಪಾದನೆಯ ಸಾರಾಮೃತ ಮೊದಲಾದವು.

೬ ಮಾರ್ಗ ೧. ಪು. ೫೫೭

ಕಾರರ ೯೫೫ ವಚನಗಳನ್ನು ಸಂವಾದ ರೂಪದಲ್ಲಿ ಹೆಣೆದಿದ್ದರೆ, ಹಲಗೆದ ೩೫ ವಚನ ಕಾರರ ೧೪೧೮ ವಚನಗಳನ್ನೂ, ಗುಮ್ಮಳಾಪುರದ ಸಿದ್ಧಲಿಂಗದೇವರು ೩೯ ಜನ ವಚನ ಕಾರರ ೧೩೩೭ ವಚನಗಳನ್ನೂ ಗೂಳೂರು ಸಿದ್ಧವೀರಣ್ಣೊಡೆಯರು ೩೫ ಜನ ವಚನ ಕಾರರ ೧೪೩೦ ವಚನಗಳನ್ನೂ, ಸಂವಾದರೂಪದಲ್ಲಿ ಶೇಖರಿಸಿದ್ದಾರೆ. ಕೆಲವೊಂದು ಸಲ ಸಂದರ್ಭಕ್ಕನುಗುಣವಾದ ಶರಣರ ವಚನ ಸಿಗದೆ ಇದ್ದಾಗ ಅಂಥವನ್ನು ತಾವೇ ರಚಿಸಿ ಅವನ್ನು 'ಸಮಯದ ವಾಕ್ಯ' (೧೨೦೫, ೧೨೦೭, ೧೨೯೮) ಎಂದು ಕರೆದಿದ್ದಾರೆ. ಇದರಿಂದ ಸಂಪಾದನೆಕಾರರ ವಚನ ಸಾಹಿತ್ಯದ ಬಗೆಗಿನ ನಿಷ್ಠೆ ಸ್ಪಷ್ಟವಾಗುತ್ತದೆ. ಇಲ್ಲಿ ವೀರಶೈವದರ್ಶನದ ಮುಖ್ಯತತ್ವಗಳಾದ ಗುರು, ಲಿಂಗ, ಜಂಗಮ ಇವೇ ಮೊದಲಾದ ವನ್ನು ಆ ಆ ವಚನಕಾರರ ವಚನಗಳ ಮೂಲಕ ವಿವೇಚಿಸಲಾಗಿದೆ.

ವಚನಗಳ ಸಂಕಲನದ ಪ್ರಥಮ ಹೆಜ್ಜೆಯನ್ನು 'ಸಕಲ ಪುರಾತನರ ವಚನಗಳು' ಕಟ್ಟಿನಲ್ಲಿ ಕಾಣುತ್ತೇವೆ. ಅಲ್ಲಿ ಒಬ್ಬೊಬ್ಬ ವಚನಕಾರನ ೧೫–೨೦ ವಚನಗಳನ್ನು ಕೊಟ್ಟು ಅವುಗಳಿಗೆ 'ಪ್ರಭುದೇವರ ಬಸವಣ್ಣನ ಸಂಪಾದನೆ', 'ಪ್ರಭುದೇವರ ಮಹಾದೇವಿಯಕ್ಕ ಗಳ ಸಂಪಾದನೆ' ಮುಂತಾದ ಹೆಸರಿನ್ನಿಡಲಾಗಿದೆ. ಅಲ್ಲದೆ ಸಿಂಗಿರಾಜನ 'ಬಸವರಾಜ ಚಾರಿತ್ರ್ಯ'ದಲ್ಲಿ ಶೂನ್ಯ ಸಂಪಾದನೆಯು ಹಾಗೆ ಪ್ರಭು ಸಂಪಾದನೆ, ಕ್ರಿಯಾ ಸಂಪಾದನೆ ಎಂಬ ಭಾಗಗಳು ಬರುತ್ತಿದ್ದು ಪ್ರಭು ಸಂಪಾದನೆಯಲ್ಲಿ 'ಪ್ರಭುದೇವ ಮತ್ತು ಬಸವಣ್ಣ ನವರ ಪ್ರತ್ಯಕ್ಷ ವಚನಗಳನ್ನು ಸಂವಾದರೂಪದಲ್ಲಿ ಶೇಖರಿಸಿ ಕೊಡಲಾಗಿದೆ.[೭] ಇವ ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯ ಸಂಪಾದನೆಯ ಹಂದರದ ಹೊಳವಿಗೆ ತೋರುಬೆರಳಾಗಿರಬೇಕು. ಇದು ಏನೇ ಇರಲಿ, ಕೇವಲ ಶರಣರ ವಚನಗಳನ್ನವಲಂಬಿಸಿ, ಅವಕ್ಕೆ ತಕ್ಕ ಪರಿಸರವನ್ನು ಕಲ್ಪಿಸಿ, ಸೊಗಸಾದ ಸಂಭಾಷಣೆಯ ರೂಪದಲ್ಲಿ ಇಡೀ ಕೃತಿ ರಚಿಸಿರುವುದು ಶಿವಗಣ ಪ್ರಸಾದಿ ಮಹಾದೇವಯ್ಯಗಳ ಹೆಗ್ಗಳಿಕೆಯೆಂದೇ ಹೇಳಬೇಕು.

ಶೂನ್ಯ ಸಂಪಾದನೆಯು ಸಾಹಿತ್ಯ ಸಂಪತ್ತು, ಆ ಶೂನ್ಯ ಸಂಪಾದನೆಯ ಹಂದರ ವನ್ನು ಕಟ್ಟಲು ಬಳಸಿಕೊಂಡ ವಚನಗಳನ್ನೇ ಅವಲಂಬಿಸಿದೆ. 'ವ್ಯಕ್ತಿತ್ವದ ಸಿದ್ಧಿ'ಯನ್ನು ಸಾಧಿಸಿದ ಚೇತನದ ಉಕ್ಕಂದಗಳಾಗಿ, ಅನುಭಾವದ ಅಂತರಂಗವನ್ನು ಬಿಂಬಿಸುವ ನುಡಿ ಗಡಣವಾಗಿ ಹಾಗೂ ಪರಿಸರದ ಬದುಕಿನ ಜ್ವಲಂತ ಚಿತ್ರಣವಾಗಿರುವ ವಚನಗಳು ಜಗತ್ತಿನ ಸಾಹಿತ್ಯದಲ್ಲಿಯೇ ಒಂದು ವಿಶಿಷ್ಟತೆಯನ್ನು ಸಾಧಿಸಿವೆ.[೮] ಇಂಥ ವಚನವಾರಿಧಿ ಯಲ್ಲಿ ಮುಳುಗಿ ಮೇಲೆತ್ತಿ ತಂದ ಮುತ್ತುರತ್ನಗಳಂತಿರುವ ಹಲವಾರು ವಚನಗಳಿಂದ ಈ ಶೂನ್ಯಸಂಪಾದನೆ ಶೋಭಿಸಿದೆ. ೧) ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದು ಕೊಂಡು....೨) ಆಲಿಸುವ ಬಳ್ಳಿ ಕಾಲ ಸುತ್ತಿತೆಂಬಂತೆ.... ೩) ತನುವ ತೋಂಟವ ಮಾಡಿ ಮನವ ಗುದ್ದಲಿಯ ಮಾಡಿ.... ೪) ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನ

---

೭ ಶತಮಾನ ಕನ್ನಡ ಸಾಹಿತ್ಯ ಡಾ. ವಿ. ಶಿವಾನಂದ ಪು. ೩೯

೮ ಕ. ಭಾರತಿ ೧೪–೩, ೪

ವಾಯಿತ್ತು.... ಇಂಥ ಹಲವು ಹತ್ತು ವಚನಗಳು ನಮಗೆ ಇಲ್ಲಿ ದೊರೆಯುವುದರಿಂದ ಶೂನ್ಯ ಸಂಪಾದನೆಯನ್ನು ವಚನಗಳ ರತ್ನ ಭಂಡಾರವೆಂದು ಕರೆಯಬಹುದು.

ಶೂನ್ಯ ಸಂಪಾದನೆಯಲ್ಲಿ ಸೃಜನಶೀಲತೆಯ ಸೊಗಸನ್ನು ಕಾಣಬೇಕಾದರೆ ಅದರ ನಾಯಕನಾದ ಪ್ರಭುವಿನ ಘನ ವ್ಯಕ್ತಿತ್ವದ ನಿರೂಪಣೆಗೆ ಮೊರೆ ಹೋಗಬೇಕು. ಕುಮಾರವ್ಯಾಸನ ಶ್ರೀ ಕೃಷ್ಣನ ಹಾಗೆ ಪ್ರಭು ಇಲ್ಲಿಯ ಪ್ರತಿಯೊಂದು ಪಾತ್ರದ ಚೈತನ್ಯ ಶಕ್ತಿಯಾಗಿ ನಿಂತಿದ್ದಾನೆ. ಆ ಪಾತ್ರಗಳ ಅಂತರಂಗವನ್ನು ಅರಳಿಸುವ, ಅಳಲನ್ನು ತೊಡೆಯುವ, ಕೊನೆಯಲ್ಲಿ ನಿರವಯಕ್ಕೆ ಎತ್ತುವ ಮಹಾಘನ ಮೂರುತಿಯಂತೆ ಈತ ಇಲ್ಲಿ ಚಿತ್ರಿತನಾಗಿದ್ದಾನೆ. ಮಹಾದೇವಯ್ಯ ಪ್ರಾರಂಭದ ಪ್ರಭುದೇವರ ಗದ್ಯದಲ್ಲಿ ಪ್ರಭುವನ್ನು 'ಶ್ರೀಮತ್ಪರಮತತ್ವ ಪರಮಾನಂದ ಪರಂಜ್ಯೋತಿ ಪರಮೇಶ್ವರ ಅಗಮ್ಯ ಅಗೋಚರ'....ದೇಹೇಂದ್ರಿಯ ಮನಃಪ್ರಾಣಾಹಂಕಾರಾದಿ ಗುಣಧರ್ಮ ಕರ್ಮನಿರ್ಲೇಪನ. ಬಸವ ಚೆನ್ನಬಸವರಾಜ ಪ್ರಾಣನಾಯಕ ಶ್ರೀ ವೀರ ಶಿವಾಚಾರಣಿಕೋರತ್ನ ಮರ್ತ್ಯ ಲೋಕ ಪಾವನ ಕಾರಣವತಾರ.... ಶ್ರೀ ಮತ್ಸಕಲ ಜಗದಾಚಾರ್ಯರು ಮಪ್ಪಪ್ರಭುದೇವರು (ಪ್ರ. ೧) ಎಂದು ಬಣ್ಣಿಸುವ ಮೂಲಕ ಅಧ್ಯಾತ್ಮದ ಭವ್ಯ ಪೀಠಿಕೆಯನ್ನೇ ಹಾಕಿದ್ದಾನೆ. ಹರಿಹರನ ಕಥಾ ಮಾರ್ಗದಲ್ಲಿ ಮುಂದುವರಿದು 'ಪ್ರಥಮದಲ್ಲಿ ಪ್ರಭುದೇವರ ಸಾಂಗತ್ಯ' ಎಂಬ ಭಾಗದಲ್ಲಿ ಪ್ರಭು ಕಾಮಲತೆಯ ವಶದಿಂದ ಶಿವನ ಶಾಪ ಪಡೆದು, ಭೂಲೋಕಕ್ಕೆ ಬಂದನೆಂದಿದೆ.[೯] ಹೀಗೆ ಸಂಸಾರದಲ್ಲಿ ಸಿಕ್ಕಿ, ಅಲ್ಲಿಂದ ಮೇಲೆದ್ದು ತಾತ್ವಿಕವಾಗಿ ಬೆಳೆದು ನಿಂತ ಪ್ರಭುವಿನ ಬಗೆಗೆ ಮಹಾದೇವಯ್ಯನಿಗೆ ಅಪಾರ ಭಕ್ತ್ಯಾದರಗಳಿವೆ. ಅದಕ್ಕಾಗಿ ಆತನನ್ನು ಮುಂದಿನ ಗದ್ಯಭಾಗದಲ್ಲಿ 'ಕರ್ಮಕ್ಷಯವಾಗಿ ಸುಜ್ಞಾನಾಂಕುರಮನೊಳಕೊಂಡು ಷಡುಸ್ಥಲವು ಷಡಂಗದಲ್ಲಿ ಸಮರಸವನೆಯ್ದಿ ಸರ್ವಾಚಾರ ಸಂಪತ್ತು ನಿಷ್ಪತ್ತಿಯಾಗಿ, ಮಹಾಜ್ಞಾನವೇ ತಾನಾಗಿ ನಿಂದ ಪದಸ್ಥಲವೇ ಸ್ಥಲವಾಗಿ.... ನಿರಾಶಾಭರಿತವೆಂಬ ಜಂಗಮಸ್ಥಲವನಳವಡಿಸಿ ನಿಃಶಬ್ದವೆಂಬ ವಚನಾನುಭಾವಮಂ ತನ್ನಾಶ್ರಯಿಸಿದ ಮಹಾನು

---

೯ ಇದನ್ನು ಮಹಾದೇವಯ್ಯ ಸಂಗ್ರಹಿಸಿರುವ ರೀತಿ ಮೆಚ್ಚುವಂತಿದೆ. ಆದರೆ ಇದನ್ನೂ ಸಿದ್ಧಲಿಂಗದೇವರು ಮತ್ತು ಸಿದ್ಧವೀರಣ್ಣೊಡೆಯರು 'ಆ ನಿಃಕಲ ಪರಶಿವಲಿಂಗ ತಾನೆ ಜಗಹಿತಾರ್ಥವಾಗಿ ಮೂಜಿಾಗಿ ಮರ್ತ್ಯಕ್ಕೆ ಅವತರಿಸಿದಡೆ ಇದೇನು ಕಾರಣ ಮರ್ತ್ಯಕ್ಕೆ ಬಂದರೆಂದು ಸಂಕಲ್ಪಿಸಿ ಶಾಪದಿಂದ ಬಂದರೆಂದು ಆವನೊಬ್ಬನು ನುಡಿವುತ್ತಿದ್ದಾನು. ಅವನು ಇಪ್ಪತ್ತೆಂಟು ಕೋಟಿ ನರಕದಲ್ಲಿ ರವಿ ಶಶಿಯುಳ್ಳನ್ನಂಬರ ನರಕವನನುಭವಿಸುತ್ತಿಪ್ಪನು.' (ಗೂ. ಸಿ. ವೀ. ಶೂ. ಸಂ. ಪು. ೪೫) ಎಂದು ಕಠೋರವಾಗಿ ಖಂಡಿಸಿದ್ದಾರೆ. ಆದರೂ ಅವರು ತಮ್ಮ ಕೃತಿಯುದ್ದಕ್ಕೂ ಮಹಾದೇವಯ್ಯನನ್ನು ಇಡಿಯಾಗಿ ಅನುಸರಿಸಿರುವುದು ಒಂದು ಮೋಜೇ ಸರಿ.

ಭಾವಿಗಳಿಗೆ ನಿರೂಪಿಸಲೆಳಸಿ, ಕಾಯವೆಂಬ ಕಂಥೆಯಂ ಧರಿಸಿ, ನಿಂದಲ್ಲಿ ನೆಳಲಿಲ್ಲದೆ ಸುಳಿದಲ್ಲಿ ಹೆಜ್ಜೆಯಿಲ್ಲದೆ ಸುಳಿದು....[೧೦] ಎಂದು ಪ್ರಭುವಿನ ಘನವ್ಯಕ್ತಿತ್ವವನ್ನು ನಿರೂಪಿಸಿದ್ದಾನೆ. ಆತ್ಮ ಕಲ್ಯಾಣವನ್ನು ಸಾಧಿಸಿಕೊಂಡ ಪ್ರಭು ಲೋಕಕಲ್ಯಾಣದತ್ತ ಹೊರಟುದನ್ನೂ, ಅಲ್ಲಿಯ ಆತನ ಕಾರ್ಯ ಚಟುವಟಿಕೆಗಳನ್ನೂ ಹೀಗೆ ವಿವರಿಸಿದ್ದಾನೆ: 'ಮರ್ತ್ಯಲೋಕವನ್ನೆದೆ ಪಾವನವ ಮಾಡುತ್ತ ಶ್ರೀವೀರಶಿವಾಚಾರದ ಘನಮಂ ಕರತಳಾಮಳಕವಾಗಿ ಸಮಸ್ತರೊಳು ತೊಳಗಿ ಬೆಳಗ ತೋಱುತ್ತ ಶಿವಾದ್ವೈತ ತತ್ವಭೇದಂಗಳಂ ಶಿವಸುಖಿಗಳೊಳು ಕೃಪೆಯಿಂ ನಿರೂಪಿಸುತ್ತ ಸ್ವಾನುಭಾವಗಮ್ಯರೊಳು ಸಮ್ಮೇಳನಂಗೆಯ್ಯುತ್ತ ಸಮ್ಯಕ್ ಶರಣರೊಳು ಸಮರಸಮಂ ಮಾಡುತ್ತ....'ಬಂದನು, ಮುಂದುವರಿದು ಆತನ ರೂಪ, ವೇಷಭೂಷಣಗಳನ್ನು ಈ ರೀತಿ ಬಣ್ಣಿಸಿದ್ದಾನೆ. ಅಕಾಯವೆ ಕಾಯವಾಗಿ ಬಲದ ಹಸ್ತದೊಳು ವೀಣಾದಂಡಮಂ ಪಿಡಿದು, ಪರಮಾನಂದ ರಸವೊಸರಲು ಪಾಡುವ ಸ್ವರವೆ ನಾದಬ್ರಹ್ಮದೊಳು ತರಹರವಾಗಿ ದಿವ್ಯ ವಚನಾಮೃತಂಗಳಂ ಪಾಡುತ್ತ ಲೋಕದ ಲಜ್ಜಾಭಿಮಾನಂಗಳನಱಿಯದೆ ದಿಗಂಬರದಿಂದಿತರೇತರ ಭಾವಂಗಳಂ ಮಱೆದು ತನ್ನೊಳು ತನ್ನ ನಿಜದ ನಿಲವ ನೋಡುತ್ತ ಇಂತನಂತ ದೇಶಂಗಳೊಳು ಸುಳಿದು ದೇಶಾಂತರಮಂ ನಟಿಸಿ ತೋರುತ್ತ ಬರುತ್ತಿರಲು....[೧೧]' ಹೀಗೆ ನಡೆದರೆ ಹೆಜ್ಜೆ ಮೂಡದ, ನಿಂದರೆ ನೆಳಲಿಲ್ಲದ, ನಿರಾಕಾರಮೂರ್ತಿಯಂತಿದ್ದ ಪ್ರಭುವನ್ನು ಶೂನ್ಯ ಪೀಠಕ್ಕೇರಿಸಿ ಸಾಧ್ಯವಿದ್ದಷ್ಟು ಶಬ್ದದ ಮೂಲಕ ಆತನ ವ್ಯಕ್ತಿತ್ವದ ಮಹಿಮೆಯನ್ನು ನಿರೂಪಿಸಲು ಪ್ರಯತ್ನಿಸಿದ್ದಾನೆ ಮಹಾದೇವಯ್ಯ.

ಈ ರೀತಿ ಮಾಯಾವಿಲಾಸವನ್ನು ನಿವೃತ್ತಿ ಮಾಡಿದ ಪ್ರಭುದೇವರು ನಿರ್ಮಾಯಕವಾಗಿ, ಸಕಲ ಪ್ರಪಂಚು ವ್ಯಾಪ್ತಿಗಳನೆಲ್ಲವನು ಮಱೆದು, ಶಿವಜ್ಞಾನ ಪ್ರಕಾಶದೊಳು ಅಂತರಂಗ ಶುದ್ಧಾತ್ಮನಾಗಿ....ಒಂದು ದಿನ ಒಂದು ಏಕಾಂತಸ್ಥಳದೊಳು ಶಿವಚಿಂತಾತುರ ಸಮಾಧಿಯೊಳು ಕುಳ್ಳಿರಲು,[೧೨] ಅಂಜನವುಳ್ಳವರಿಗೆ ನಿಧಾನ ತಲೆದೋರುವಂತೆ... ಅನಿಮಿಷದೇವರ ಸಮಾಧಿಯನ್ನು ಕಂಡನು. ಒಳಹೊಕ್ಕು ನೋಳ್ಪಾಗಳು ಒಂದು ದೀಪ್ತಿ ಬೆಳಗುತ್ತಿರೆ

೧೦ ಶಿ. ಪ್ರ. ಮ. ಶೂ. ಸಂ. ಪು. ೨೦

೧೧ ಇಲ್ಲಿ ಮೂರೂ ಸಂಪಾದನೆಕಾರರು ಪ್ರಭುದೇವನನ್ನು 'ಲೋಕದ ಲಜ್ಜಾಭಿಮಾನಂಗಳ ನಱಿದು ದಿಗಂಬರ ವೇಷಧಾರಿಯಾಗಿ' ಎಂದು ಬಣ್ಣಿಸಿರುವುದು ವಿಶೇಷವೆನ್ನಿಸಿದೆ. ಅದೇ ಪು. ೩೨

೧೨ ಇದನ್ನು ಸಿದ್ಧವೀರಣ್ಣೊಡೆಯ ಅಲ್ಲಮ ಪ್ರಭುದೇವರು ತಮ್ಮ ಮೂಲಜ್ಞಾನ ದೃಷ್ಟಿಯಿಂ ಅನಿಮಿಷ ದೇವರು ತಮಗೆ ಗುರುವೆಂದಱಿದು ಬಪ್ಪಲ್ಲಿ ಗೊಗ್ಗಯ್ಯನನ್ನು ಕಂಡು ಅವನಿಗೆ ಸನ್ಮಾರ್ಗ ತೋಱಿ....ತಮ್ಮ ಮೂಲಜ್ಞಾನದಿಂದ ಅನಿಮಿಷದೇವರ ಸಮಾಧಿಯಂ ಕಂಡು ಒಳಹೊಕ್ಕು ನೋಳ್ಪಾಗಳು (ಪು. ೧೧) ಎಂದು ಮಾರ್ಪಡಿಸಿಕೊಂಡಿದ್ದಾನೆ.

ಕಂಡು, ಅಲ್ಲಿ ಸ್ವಸ್ಥ ಪದ್ಮಾಸನದಲ್ಲಿ ಕುಳ್ಳಿರ್ದು ಕರಸ್ಥಲದೊಳು ಅಮೃತಲಿಂಗಮಂ ಪಿಡಿದು ಆ ಲಿಂಗದೊಳು ಆಲಿಂಗನಮಾಗಿ ಕರಣಂಗಳೆಲ್ಲ ನಿಃಕರಣಮನೆಯ್ದಿ........ನಿತ್ಯ ಸಮಾಧಿಯೊಳು ಮೂರ್ತಿಗೊಂಡಿದ್ದ ಸದ್ಗುರುವನ್ನು ಕಂಡನು. 'ಅರಸುವ ಬಳ್ಳಿ ಕಾಲ ಸುತ್ತಿತು' ಎಂಬಂತೆ ಸಂತೋಷವಾಯಿತು. ಆತನಿಂದ ಉಪದೇಶ ಪಡೆಯಬೇಕೆಂದರೆ ಆ ಮಹಾತ್ಮನು 'ತಾನೆಂಬುದನೂ ಅಱಿಯನು ಇದಿರೆಂಬುದನೂ ಅಱಿಯನು'. ಕೊನೆಗೆ ಪ್ರಭು ತನಗೆ ತಾನೇ ಗುರೂಪದೇಶ ಪಡೆಯಬೇಕೆಂದು ನಿಶ್ಚಯಿಸಿ ಆ ಕರಸ್ಥಲದ ಲಿಂಗವ ತಾನೇ ಅನುಗ್ರಹಿಸಿಕೊಳ್ಳಲು ಆ ಗುರುಮೂರ್ತಿ ನಿರವಯ್ದಿದನು. ಅವನ ಅಸ್ಥಿ ಚರ್ಮ ಗಳು ಸಂಚು ತಪ್ಪಿ ನೆಲಕ್ಕೆ ಉದುರಿದವು. ಗುರುದ್ರೋಹ ಸಂಬಂಧಿಸಿತೆಂದು ಅನುತಾಪಂ ಬಟ್ಟು ಕೊನೆಗೆ ತನ್ನನ್ನು ತಾನು ಈ ರೀತಿ ಸಂತೈಸಿಕೊಂಡನು :

ಕಸ್ತೂರಿಯ ಮೃಗ ಬಂದುಸುಳಿಯಿತ್ತಯ್ಯ
ಸಕಲ ವಿಶ್ವಾಸದ ರೂಪು ಬಂದು ಮುಂದೆ ನಿಂದಿತ್ತಯ್ಯ
ಆವ ಗ್ರಹ ಬಂದು ಸೋಂಕಿತೆಂದಱಿಯೆನು
ಹೃದಯಕಮಲ ಮಧ್ಯದಲ್ಲಿ ಗುರುವನಱಿದು ಪೂಜಿಸಿ
ಗುರುವಿಖ್ಯಾತನೆಂಬುದನಱಿದೆ ನೋಡಾ
ಗುಹೇಶ್ವರಲಿಂಗದಲ್ಲಿ ಹಿಂದಣ ಹುಟ್ಟಱತು ಹೋದುದ ಕಂಡೆನು.

ಈಗ ಗುರುವಿನ ಹಸ್ತದ ಲಿಂಗಸ್ಪರ್ಶದಿಂದ ಪೂರ್ವಜನ್ಮದ ಭವಾಂತರವನ್ನು ಕಳೆದು ಪರಿ ಶುದ್ಧನಾಗಿ ನಿಂತಿದ್ದಾನೆ ಪ್ರಭು. ಹೀಗೆ ಅನಿರೀಕ್ಷಿತವಾಗಿ ಒದಗಿ ಬಂದ ಈ ಪ್ರಸಂಗದಿಂದ ಪ್ರಭುವಿಗೂ ಆಶ್ಚರ್ಯವಾಗಿದೆ. ಅದಕ್ಕಾಗಿ ಆತ:

ಎತ್ತಣ ಮಾಮರ, ಎತ್ತಣ ಕೋಗಿಲೆ
ಎತ್ತಣಿಂದೆತ್ತ ಸಂಬಂಧವಯ್ಯಾ?
ಬೆಟ್ಟದ ನೆಲ್ಲಿಕಾಯಿ, ಸಮುದ್ರದೊಳಗಣ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯಾ?
ಗುಹೇಶ್ವರಲಿಂಗಕ್ಕೂ ಎನಗೂ
ಎತ್ತಣುದೆತ್ತ ಸಂಬಂಧವಯ್ಯಾ!

ಎಂದು ಉದ್ಗಾರ ತೆಗೆದಿದ್ದಾನೆ. 'ಈ ಸನ್ನಿವೇಶವೇ ಈ ವಚನಕ್ಕೊಂದು ಅರ್ಥವಂತಿಕೆ ಯನ್ನು ತಂದುಕೊಟ್ಟಿದೆ. ಕಾಮಲತೆಯ ಸಾವಿನಿಂದ ಜರ್ಝರಿತನಾದ ದುಃಖಿ ಅಲ್ಲಮನಿಗೆ ಅನಿಮಿಷನಿಂದ ದೊರಕಿದ ಇಷ್ಟಲಿಂಗ ಅವನಿಗೆ ಕತ್ತಲಲ್ಲಿ ದಾರಿದೀಪವಾಯಿತು, ತಾನು ಮುಂದೆ ಏನಾಗಬೇಕೆಂಬುದನ್ನು ತೋರಿಸಿತು. ಸಾಮಾನ್ಯನಾದ ತಾನೆಲ್ಲಿ, ಅನಿರೀಕ್ಷಿತವಾಗಿ ದೊರಕಿದ ಈ ಲಿಂಗವೆಲ್ಲಿ? ಈ ಸಂತೋಷ, ಅದಕ್ಕಿಂತ ಆಶ್ಚರ್ಯ ಬೆರಗುಗಳು ಇಲ್ಲಿ ಮೂಡಿ ಬಂದಿವೆ. ಹೀಗೆ ಒಂದೊಂದು ವಚನಕ್ಕೆ ಒಂದೊಂದು ಸನ್ನಿವೇಶವನ್ನು ಕಲ್ಪಿಸು

ವುದೇ ಆ ವಚನಕ್ಕೆ ಒಂದು ಅರ್ಥವಿವರಣೆಯೂ ಆಗಬಹುದು. ಆಗ ಆ ವಚನದ ಚೌಕಟ್ಟೇ ಆ ವಚನದ ವ್ಯಾಖ್ಯಾನವಾಗುತ್ತದೆ. ಈ ರೀತಿ ಮುಕ್ತಕದಂತಿದ್ದ ವಚನಗಳನ್ನು ಆಯ್ದುಕೊಂಡು, ಅವಕ್ಕೆ ತಕ್ಕ ಸಂಬಂಧ ಕಲ್ಪಿಸಿ, ಆ ವಚನಗಳನ್ನು ಸುಸಂಬದ್ಧವಾಗಿ ಹೆಣೆದಿರುವ ಜಾಣ್ಮೆ ಮಹಾದೇವಯ್ಯಗಳ ಸೃಜನಶೀಲತೆಗೆ ಒಂದು ಒಳ್ಳೆಯ ನಿದರ್ಶನ.೧೩

ವಚನಕಾರರು ಪರಸ್ಪರ ಎದುರುಬದರಾಗಿ ನಿಂತು ಸಂಭಾಷಿಸಿದರೇನೋ ಎನ್ನುವಂತೆ ಸಂದರ್ಭಗಳನ್ನು ಕಲ್ಪಿಸಿರುವುದು ಮಹಾದೇವಯ್ಯಗಳ ಮಹೋನ್ನತ ಕಲ್ಪನೆಗೆ ಉಜ್ವಲ ನಿದರ್ಶನಗಳಾಗಿವೆ. ಅವು ಆತನ ಸೃಜನಶೀಲತೆಗೆ ದಿವ್ಯ ದೃಷ್ಟಾಂತಗಳಾಗಿವೆ. ಇವುಗಳಲ್ಲಿ ಒಂದು ಮಹೋನ್ನತ ಸ್ಥಲ ಮುಕ್ತಾಯಕ್ಕನ ಪ್ರಸಂಗ.೧೪ 'ತನ್ನೊಳು ತನ್ನ ನಿಜದ ನಿಲವ ನೋಡುತ್ತ' ಪ್ರಭು 'ಇಂತನಂತ ದೇಶಂಗಳೊಳು ಸುಳಿದು ದೇಶಾಂತರಮಂ ನಟಿಸಿ ತೋಱುತ್ತ' ಮುಕ್ತಾಯಕ್ಕನ ಬಳಿಗೆ ಬಂದ ಸನ್ನಿವೇಶ ಅತ್ಯದ್ಭುತವಾಗಿದೆ. ನಾಟಕೀಯ ಸನ್ನಿವೇಶದಿಂದ ಕೂಡಿದೆ. ಗುರುವಿನಂತಿದ್ದ ಅಣ್ಣನ ಮರಣದ ವಿಯೋಗದಿಂದ ದುಃಖಿಸುತ್ತಿದ್ದ ಮುಕ್ತಾಯಕ್ಕನನ್ನು ಪ್ರಭು ಕಂಡು ಕೇಳುವ ಪ್ರಶ್ನೆ ಹೀಗಿದೆ:

ಅಂಗೈಯೊಳಗೊಂದು ಅರಳ್ವ ತಲೆಯ ಹಿಡಿದುಕೊಂಡು
ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ?
ಸಂದ ಸಂಪಗೆಯರಳ ತುಂಬಿ ಬಂಡುಂಬ ಭೇದವನರಿಯದೆ
ಹಂಬಲಿಸುವ ಪರಿತಾಪವೇನು ಹೇಳಾ?
ಒಂದೆಂಬೆನೆ ಎರಡಾಗಿದೆ, ಎರಡೆಂಬೆನೆ ಒಂದಾಗಿದೆ
ಅರಿವಿನೊಳಗಣ ಮರಹಿದೇನು ಹೇಳಾ
ದುಃಖವಿಲ್ಲದ ಅಕ್ಕೆ, ಅಕ್ಕೆ ಇಲ್ಲದ ಅನುತಾಪ
ಗುಹೇಶ್ವರಲಿಂಗದಲ್ಲಿ ತೋರುತ್ತಿದೆ
ನೀನಾರೆಂದು ಹೇಳಾ ಎಲೆ ಅವ್ವಾ!

ಅಲ್ಲಮಪ್ರಭುವಿನ ಈ ಕಾವ್ಯಮಯ ಪ್ರಶ್ನೆಯಲ್ಲಿ ಪರಮಾರ್ಥದ ಧ್ವನಿ ತರಂಗಗೊಂಡಿದೆ. ಕೂದಲನ್ನು ನೇವರಿಸದೆ, ತಲೆಗೆ ಕೈ ಹಚ್ಚಿಕೊಂಡು ಕಣ್ಣುಗಳಲ್ಲಿ ಕಂಬನಿ ಸುರಿಸುತ್ತಿರುವ ಮುಕ್ತಾಯಕ್ಕನ ಚಿತ್ರವು ತನ್ನಷ್ಟಕ್ಕೇ ಮನೋಹರವಾಗಿದ್ದರೂ ಅದರ ಪಾರಮಾರ್ಥಿಕ ಅರ್ಥವು ಇನ್ನೂ ಮನೋಹರವಾಗಿದೆ. 'ತಲೆ' ಪ್ರಾಪಂಚಿಕ ಜ್ಞಾನದ ಸಂಕೇತವಾದರೆ, ಅಕ್ಕನ ಅರಿವಿನ ಎದುರಿಗೆ ಪ್ರಜ್ವಲಿಸುತ್ತಿರುವ ಪರವಸ್ತುವೆ 'ಅರಳ್ವ ತಲೆ'. ಕಂಬನಿಯನ್ನು

---

೧೩ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ. ೪. ಪು. ೩೩೪ ದಲ್ಲಿ ಬಂದ ವಿವರಣೆಯನ್ನು ಸ್ವಲ್ಪ ಹಿಂದುಮುಂದಾಗಿ ಬಳಸಿಕೊಂಡಿದೆ.

೧೪ ಈ ಪ್ರಸಂಗದ ಆಯ್ದ ವಿವರಣೆಯನ್ನು 'ಅಮೃತ ಬೆಳಸು' (ಶ್ರೀ ನಿ.ಪ್ರ.ಮಹಾಂತ ಸ್ವಾಮಿಗಳ ಅಮೃತಮಹೋತ್ಸವ ಸಂಪುಟ ಪು.೭೧-೭೨)ವಿನಿಂದ ಎತ್ತಿಕೊಂಡಿದೆ.

ಪವಣಿಸುವುದು ಎಂದರೆ ಮುಕ್ತಿಯನ್ನು ಪಡೆಯುವ ಬಯಕೆ. ಆದರೆ ಮೂಲದಲ್ಲಿ ಅಖಂಡವಾಗಿದ್ದ ಪರವಸ್ತು ದೃಷ್ಟಿ–ದೃಶ್ಯವೆಂದು ಎರಡಾದ ಚೋದ್ಯವನ್ನು ಗ್ರಹಿಸಲು ಅಸಮರ್ಥಳಾಗಿದ್ದಾಳೆ ಮುಕ್ತಾಯಕ್ಕ. ಸಂಪಗೆಯ ಹೂವಿಗೆ ಎರಗಿದ ಭ್ರಮರದಂತೆ ಪರವಸ್ತುವಿನಲ್ಲಿ ಪರವಶಗೊಳ್ಳುವುದೇ ಯೋಗ, ಪೂರ್ಣಯೋಗ. ಅಕ್ಕನಿಗೆ ಅದು ಸಾಧ್ಯವಾಗಿಲ್ಲ. ಸಾಮಾನ್ಯರಿಗೆ ದುಃಖ ಅನುತಾಪ ಸಹಜ. ಆದರೆ ಮುಕ್ತಾಯಕ್ಕನಂತಹ ಜ್ಞಾನಿಗೆ ಅನುತಾಪಕ್ಕೆ ಎಡೆ ಎಲ್ಲಿದೆ? ಒಂದು ಎರಡರ ಸಂಧಿಯಲ್ಲಿ ನಿಂತು ಕತ್ತಲೆ ಬೆಳಗಕಾಂಬ ಅಕ್ಕನ ದ್ವಂದ್ವಕ್ಕೆ ಉಜ್ವಲ ವ್ಯಾಖ್ಯಾನವಾಗಿದೆ ಈ ರಹಸ್ಯಪೂರ್ಣವಾದ ಪ್ರಶ್ನೆ. ಇದಕ್ಕೆ ಉತ್ತರವಾಗಿ ಮುಕ್ತಾಯಕ್ಕ

ಅಱಿಂದು ಕುಱುಹ ಬೆಸಗೊಳಲು ಏನ ಹೇಳುವೆಸಯ್ಯಾ?
ಕಾಯದೊಳಗೆ ಮಾಯವಿಲ್ಲ, ಭಾವದೊಳಗೆ ಭ್ರಮೆಯಿಲ್ಲ,
ಕರೆದು ಬೆಸಗೊಂಡಡೆ ಕುಱುಹಿಲ್ಲ.
ತಲೆಯಳಿದು ನೆಲೆಗೆಟ್ಟು ಬೆಳಗುವ ಜ್ಯೋತಿ ಎನ್ನ ಅಜಗಣ್ಣ ತಂದೆಯು
ಬೆನ್ನ ಬಳಿಯುವಳಾನು.

ಎಂದು ಅರ್ಥಪೂರ್ಣವಾಗಿಯೇ ಉತ್ತರಿಸುತ್ತಾಳೆ. ಅವರಿಬ್ಬರ ನಡುವಿನ ಚರ್ಚೆ ಮುಂದುವರಿದಂತೆ ಪ್ರಭುದೇವನ ಸ್ವಯುಸ್ಥಲದ ನಿರ್ವಚನದಲ್ಲಿ ವಿಪರೀತ ವಿರೋಧವನ್ನು ಕಾಣುತ್ತಾಳೆ ಅಕ್ಕ. ಪ್ರಭುದೇವನಾದರೂ ಆ ನೆಲೆಗೆ ಏರಿದ್ದಾನೆಯೆ? ಸ್ವಯವಾದ ಸ್ಥಲ ದಿಂದ ಶಬ್ದಸಂದಣಿ ಏಕೆ ಹೊರಹೊಮ್ಮಬೇಕು? ತನ್ನೆದುರಿಗೆ ಬೆಳಗಿದ ಅಜಗಣ್ಣನ ವ್ಯಕ್ತಿತ್ವದೊಂದಿಗೆ ಪ್ರಭುವಿನ ವ್ಯಕ್ತಿತ್ವವನ್ನು ಹೋಲಿಸಿ ನೋಡುತ್ತಾಳೆ. ಅರಿವ ಮರೆದು ಸ್ವಯದಲ್ಲಿ ಲೀನವಾದ ಅಜಗಣ್ಣನಿಂದ ಶಬ್ದವೆಂದೂ ಹೊರಹೊಮ್ಮಲಿಲ್ಲ. ಆದರೆ ಪ್ರಭುವಿನ ರೀತಿಯಾದರೊ ವಿಚಿತ್ರ. ಅದು ಅವಳಿಗೆ ಕೇವಲ ವಾಗದ್ವೈತವಾಗಿ ತೋರುತ್ತದೆ:

ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು
ಶಿಶುಕಂಡ ಕನಸಿನಂತಿರಬೇಕಲ್ಲದೆ, ನುಡಿದು ಹೇಳುವನ್ನಕ್ಕರ
ಭಿನ್ನವಲ್ಲದೇನು ಹೇಳಾ?
ನೆರೆಯರಿತು ಮರೆಯಬಲ್ಲಡೆ
ಎನ್ನ ಅಜಗಣ್ಣನಂತೆ ಶಬ್ದಮುಗ್ಧವಾಗಿರಬೇಕಲ್ಲದೆ
ಶಬ್ದಸಂದಣಿಯ ಮಾತು ಸಮವಲ್ಲ ನೋಡಾ ಪ್ರಭುವೆ.

'ಶಬ್ದಸಂದಣಿಯ ಮಾತು ಸಮವಲ್ಲ' ಎಂಬ ಅಕ್ಕನ ಜಟಿಲ. ಅಂತೆಯೇ ದಿಟ್ಟ ನಿಲುವು ಅವಳ ಅನುಭಾವಿಕ ವ್ಯಕ್ತಿತ್ವದ ಸತ್ವಸಾರವನ್ನು ವ್ಯಕ್ತಗೊಳಿಸುತ್ತದೆ. ಸತ್ಯಾನ್ವೇಷಣೆಗೆ ಭಾಷೆ ಎಲ್ಲಿ ತೊಡಕಾಗುತ್ತದೆಯೋ ಎಂಬ ಸಂಶಯ ಹೆಜ್ಜೆ ಹೆಜ್ಜೆಗೆ ಅವಳನ್ನು ಕಾಡು

ತ್ತದೆ. ಅಲೌಕಿಕ ಅನುಭವಕ್ಕೂ ಲೌಕಿಕ-ಭಾಷೆಗೂ ಸಂಬಂಧವೇನೆಂಬುದನ್ನು ಅರಿಯಲು ಅಸಮರ್ಥಳಾಗಿದ್ದಾಳೆ. ಪ್ರಭುವಿನ ವ್ಯಕ್ತಿತ್ವದ ಪಾರದರ್ಶಕತೆಯನ್ನೂ ಬಲ್ಲ ಆಕೆ ಮತ್ತೆ ಅವನ ಪ್ರಜ್ವಲತೆಯನ್ನು ಕೆಣಕುತ್ತಾಳೆ. ಅವನ 'ಆ ರೂಢಿಯ ಕೂಟದ' ಅನುಭಾವ ವನ್ನು ಪರೀಕ್ಷೆಗೆ ಒಡ್ಡುತ್ತಾಳೆ. ಈ ಪರೀಕ್ಷೆಯಲ್ಲಿ ಅಲ್ಲಮಪ್ರಭು ತನ್ನ ಉತ್ತರೋತ್ತರ ಪ್ರಜ್ವಲತೆಯನ್ನು ಪ್ರಕಟಿಸುತ್ತಾ ದೇದಿಪ್ಯಮಾನವಾಗಿ ಬೆಳಗುವದನ್ನು ಕಾಣುತ್ತೇವೆ.

ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದ ಪರತತ್ವ.
ತಾಳೋಷ್ಟ ಸಂಪುಟವೆಂಬುದು ನಾದ ಬಿಂದು ಕಳಾತೀತ.
ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲಿ ಕೇಳಾ ಮರುಳೆ.

ಪ್ರಭುವಿನ ಈ ಉತ್ತರ ಭಾಷೆ ಮತ್ತು ಅನುಭವಗಳ ಸಂಕೀರ್ಣತೆಯನ್ನು ಶಿವಶರಣರು ಕಂಡ ಬಗೆಯನ್ನು ಸೂಕ್ಷ್ಮವಾಗಿ ವಿವೇಚಿಸುತ್ತದೆ. ಪ್ರಭುವಿನ ದೃಷ್ಟಿಯಲ್ಲಿ ಅನುಭವವು ಮಾತಿನಲ್ಲಿ ವ್ಯಕ್ತಗೊಳ್ಳುವ ಕ್ರಿಯೆಯು; ನಿರಾಕಾರಲಿಂಗವು ಆಕಾರವನ್ನು ತಳೆಯುವ ಕ್ರಿಯೆಯಂತೆ-ಸಹಜ ಸುಂದರವಾದುದು. ಮಾನವ ಭಾಷೆಯು ಮಾತು ಅಹಮ್ಮಿನ ಮೂಲ ದಿಂದ ಸ್ಫುರಣಗೊಳ್ಳುವುದರಿಂದ ಅದು ವಾಗದ್ವೈತ. ಆದರೆ ಸ್ವಯಂ ಜ್ಯೋತಿಯಲ್ಲಿ ಉರಿಯುಂಡ ಕರ್ಪುರದಂತೆ ಕರಗಿ ಹೋದ, ಲಿಂಗವೆ ತಾನಾದ ಶರಣನ ಮಾತು ಜ್ಯೋತಿರ್ಲಿಂಗ. ತನ್ನ ಗುರು ಅನಿಮಿಷಯ್ಯನ ತಪಸ್ಸು ಹಾಗೂ ಅಜಗಣ್ಣನ ಯೋಗ ಗಳೆರಡೂ ಶಬ್ದಸೂತಕಗಳಿಲ್ಲದ ನಿಃಶಬ್ದ ಅನುಭವಗಳು. ಆದರೆ ಶರಣ ತನ್ನಿರವನ್ನು ಮರೆದು ನಿಃಶಬ್ದ ಮೌನಿಯಾಗಿರಲೂಬಹುದು, ತನ್ನಲ್ಲಿ ತುಂಬಿದ ಪರಬ್ರಹ್ಮ ಸಂವೇದನೆಗೆ ಮಾತಿನ ಅಭಿವ್ಯಕ್ತಿ ಕೊಡಲೂಬಹುದು. ಅನ್ಯರ ಮನದ ಸಂದೇಹ ನಿವಾರಣೆಗಾಗಿ ಲಿಂಗಾನುಭವವನ್ನು ಮಾತಿನಲ್ಲಿ ಅಭಿವ್ಯಕ್ತಿಗೊಳಿಸಲೇಬೇಕು. ಹೀಗೆ ನಿಜಸ್ಥಳದ ಪರಮೋಚ್ಚ ನಿಲವಿನ ಪರಿಯನ್ನು ತನ್ನ ಇರವಿನಿಂದಲೆ ಪ್ರಜ್ವಲಿಸಿ ತೋರುತ್ತಾನೆ ಪ್ರಭು! ಶರಣರ ನಡೆಯೆಲ್ಲ ಕೆಟ್ಟು ಬಯಲ ನಡೆಯಾಗಲು, ನುಡಿಯೆಲ್ಲ ಕೆಟ್ಟು ಬಯಲ ನುಡಿ ಯಾಗಲು ದ್ವೈತದ ಜವನಿಗೆ ಸರಿಯುತ್ತದೆ. ಒಂದು ಎರಡರ ಗುಸುಟು ಎಂದರೆ ಸಂದೇಹ ಇಲ್ಲವಾಗುತ್ತದೆ. ಗುಹೇಶ್ವರ ನಿಲವು ನಿರ್ಬಯಲ ಸ್ವರೂಪದ್ದೆಂದೂ ಅದು ಅಜಗಣ್ಣನ ನಿಲವಿನಿಂದ ಭಿನ್ನವಲ್ಲವೆಂಬುದನ್ನು ಪ್ರತ್ಯಕ್ಷ ಪ್ರಮಾಣಿಸಿ ತೋರುವಲ್ಲಿ ಯಶಸ್ವಿಯಾಗು ತ್ತಾನೆ. ಪ್ರಭುವಿನ 'ಕರುಣದ ಶಿಶು' ಎಂಬ ಆತ್ಮೀಯ ಕರೆ ಅವಳ ಮನಸ್ಸಿನ ಅಹಂಕಾರ ವನ್ನು ಕರಗಿಸಿಬಿಡುತ್ತದೆ. ಅಜಗಣ್ಣನ ನಿಲವು ಎಂತೋ ಅಂತೆಯೇ ಪ್ರಭುವಿನ ನಿಲವೂ ಅವಳ ಕಣ್ಣೆದುರಿಗೆ ಬೆಳಗಿ ಅವಳ ದೃಷ್ಟಿಕೋನದಲ್ಲಿ ಅಪೂರ್ವ ಪರಿವರ್ತನೆಯುಂಟಾಗು ತ್ತದೆ. ಅಕ್ಕನ ಜೀವನದಲ್ಲಿ ಇದೊಂದು ಅಪೂರ್ವ ಕ್ಷಣ. ಅವಳ ಹೃದಯವು ಈಗ ನಿರವಯುಸಮಾಧಿಗೆ, ಶೂನ್ಯಸಂಪಾದನೆಗೆ ಪರಿಪಕ್ವಗೊಂಡಿತೆಂಬುದು ಪ್ರಭುವಿಗೆ ಸ್ಪಷ್ಟ ವಾಗಿ ತೋರುತ್ತದೆ. ಅಜಗಣ್ಣ ಬಯಲ ಬೆರಸಿದ ಮರೀಚಿಯಂತೆ ಬಯಲೇ ಆಗಿ ನಿಂತಿದ್ದಾನೆ. ನೀನೂ ಅದರಲ್ಲಿ ಬೇರಿಲ್ಲದಂತೆ ಬೆರಸಿ ನೋಡು ಎಂದು ಉಪದೇಶಿಸಿ

ಅವಳನ್ನು ಮನೋಲಯಸ್ಥಲಕ್ಕೆ ನೂಕಿ ನಿರವಯಲ ಸಮಾಧಿಯಲ್ಲಿ ನೆಲೆಗೊಳಿಸುತ್ತಾನೆ. ಹೀಗೆ ಮುಕ್ತಾಯಕ್ಕನನ್ನು ತನ್ನರಿವಿನ ನಿಲವಿಗೇರಿಸಿ, ತನ್ನ ಜಂಗಮಯಾತ್ರೆಯ ಶುಭಾರಂಭ ಮಾಡಿದ್ದಾನೆ ಪ್ರಭು. ಶರಣರ ಚರಮ ಗುರಿಯಾದ 'ಅರಿವೆ ಗುರು' ಎಂಬ ತತ್ತ್ವವನ್ನು ಈ ಪ್ರಸಂಗದ ಮೂಲಕ ಸ್ಪಷ್ಟಪಡಿಸಿದ್ದಾನೆ ಮಹಾದೇವಯ್ಯ.

ಇಲ್ಲಿಂದ ಮುಂದೆ ಪ್ರಭು 'ಸಿದ್ಧರಾಮಯ್ಯದೇವರ'೧೫ ದರುಶನವಾಗಬೇಕೆಂದು ಹೊರಟು, ಸೊನ್ನಲಿಗೆಗೆ ಬಂದು, ಸಿದ್ಧರಾಮನು ಕಟ್ಟಿಸುತ್ತಿದ್ದ ಕೆಱೆಯಱವಟ್ಟಿಗೆ ಗುಡಿಗೋಪುರಂಗಳನ್ನು ನೋಡುತ್ತ 'ಕೆಱೆಯ ಕಟ್ಟಿಸುವ ಒಡ್ಡನ ಪ್ರತಾಪವೇನೆಂಬೆನಯ್ಯಾ?' ಎಂದು ವಿಡಂಬಿಸುತ್ತ ಬರುತ್ತಾನೆ. 'ಒಂದು ಕಲ್ಲನೆ ಕಡೆದು,ಮತ್ತೊಂದು ಕಲ್ಲಿಂಗೆ ಭೋಗವ ಕೊಟ್ಟಿಹೆನೆಂಬ ಅಜ್ಞಾನವಿದೇನೋ' ಎಂದು ಪ್ರಶ್ನಿಸುತ್ತಾನೆ. ಮುಂದುವರಿದು ತಾನೊಂದು ಕೆರೆ ಕಟ್ಟಿಸಿದುದಾಗಿ ಹೇಳುತ್ತಾನೆ.

> ತನುವೆಂಬ ಏಱಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ;
> ಪರಮಾನಂದವೆಂಬ ಜಲವ ತುಂಬಿ
> ಕಟ್ಟೆಯ ಕಟ್ಟಬಲ್ಲವರನಾರನೂ ಕಾಣೆ
> ನಾನು ಕಟ್ಟಿದ ಕೆಱೆ ಸ್ಥಿರವಾಯಿತ್ತು ಗುಹೇಶ್ವರಾ ನಿಮ್ಮಾಣೆ.

ಇದರ ಮರ್ಮವನ್ನು ತಿಳಿಯದ ಸಿದ್ಧರಾಮನ ಗುಡ್ಡುಗಳು, ತಮ್ಮ ಒಡೆಯನನ್ನು ಅವಮಾನಿಸುವನೆಂದು ಸಿಟ್ಟಿಗೆದ್ದು ಕಲ್ಲು ಗುಂಡುಗಳಿಂದ ಬಂದು ತಾಗುವರು. ಅದರಿಂದ ಅವರೇ ಗಾಯಗೊಂಡು ಹತಾಶರಾಗಿ ಸಿದ್ಧರಾಮನ ಬಳಿ ಬಂದು 'ದೇವಾ! ಆವನೊಬ್ಬ ಇಂದ್ರಜಾಲಕನು ನಿಮ್ಮನು ಬಾಯಿಗೆ ಬಂದಂತೆ ನಿಂದಿಸುತ್ತಿರಲು ನಾವೆಲ್ಲರೂ ಗುರುನಿಂದೆಯಂ ಕೇಳಿ ಸುಮ್ಮನಿರಬಾರದೆಂದು ಕಲ್ಲು ಗುಂಡುಗಳಿಂದಿಟ್ಟು ನೋಯಿಸಲು, ಆತನ ತಾಗಿದಂಥ ಘಾಯಂಗಳೆಲ್ಲವೂ ನಮ್ಮನ ಮರಳಿ ತಾಗಿ ದೆಸೆದೆಸೆಯಿಂದೆಲ್ಲರೂ ನೊಂದು ಘಾಸಿಯಾದೆವು' ಎಂದು ಅರುಹಿದರು. 'ಆ ಗುಡ್ಡುಗಳ ನೋವೇ ತನ್ನ ನೋವೆಂದು' ತಿಳಿದು ಸಿದ್ಧರಾಮ ಅವರನ್ನು ಮೇಲುಗಟ್ಟಿ ಬರುವ ಪ್ರಸಂಗವಂತೂ ಅತ್ಯಂತ ನಾಟಕೀಯವಾಗಿ ನಿರೂಪಿತವಾಗಿದೆ. ಸಿದ್ಧರಾಮ ಹಣೆಗಣ್ಣು ತೆರೆದು ಕಿಚ್ಚನ್ನು ಹೊರಹೊಮ್ಮಿಸಲು ಪ್ರಭು ಅಂಗಾಲ ಕಣ್ಣಿನ ಮಹಾಜ್ವಾಲೆಯನ್ನು ಹೊರಹೊಮ್ಮಿಸುವನು. ಇದನ್ನು ಕಂಡು ನಡುಗಿದ ಗುಡ್ಡುಗಳು 'ಆತನು ನಿಂದರೆ ನೆಳಲಿಲ್ಲ, ಸುಳಿದರೆ ಹೆಜ್ಜೆಯಿಲ್ಲ, ಕಾಯವಿದು

---

೧೫ ಇಲ್ಲಿ ಮಹಾದೇವಯ್ಯ ಸಿದ್ಧರಾಮಯ್ಯನಿಗೆ ಯಾವ ವಿಶೇಷಣವನ್ನೂ ಬಳಸದೆ ಅವನಿಗೆ ಇನ್ನೂ ಜ್ಞಾನೋದಯವಾಗಬೇಕಿದೆ ಎಂಬುದನ್ನು ಸೂಚಿಸಿದಂತಿದೆ. ಆದರೆ ಸಿದ್ಧವೀರಣ್ಣೊಡೆಯರು ಇಲ್ಲಿ ಈತನನ್ನು 'ಶ್ರೀಮತ್ಪರಮೇಶ್ವರನ ಶುದ್ಧ ಸಾತ್ವಿಕವೆ ಜಗಹಿತಾರ್ಥವಾಗಿ ಮರ್ತ್ಯಕ್ಕವತರಿಸಿ' ಎಂದು ಬಣ್ಣಿಸಿರುವುದು ಮುಂದಿನ ಘಟನೆಗೆ ಪೂರಕವಾದಂತೆ ತೋರುವುದಿಲ್ಲ.

ಕಾಯವಿಲ್ಲ. ನೀವಿನ್ನು ಆವ ಪರಿಯಲ್ಲಿ ಮುನಿಸ ತಿಳುಹಿ ತಪ್ಪಿರಿ' ಎಂದು ಕೇಳಲು 'ಅವನಾದ ಗತಿಯು ನಾನಪ್ಪೆ, ಅವನಿಂದ ನಿಲವ ನಿಲುವೆನು....ಮದಹಸ್ತಿ ಮದಹಸ್ತಿಯ ಹಿಡಿವುದಲ್ಲದೆ ಮತ್ತೊಂದ ಹಿಡಿಯದು....ರೂಪಿಲ್ಲದಾತನ ರೂಪಿಸಿ ಹಿಡಿವೆನು' ಎಂದು ಪ್ರಭುವಿನ ಬಳಿ ಬರುವನು. ಬಂದು ಪ್ರಭುವನ್ನು ಕಾಣುತ್ತವೆ 'ಅಜಲುಗೊಂಡ ಕೆಱಗೆ ತೊಱೆ ಬಂದು ಹಾಯಿದಂತೆ ಸೋತು ಶರಣಾಗತನಾಗುವನು. ಪ್ರಭುವಿನೊಂದಿಗೆ ಸಂಭಾಷಣೆಯಲ್ಲಿ ತೊಡಗಿ ಕರ್ಮಯೋಗವನ್ನು ಪ್ರತಿಪಾದಿಸುವನು. ಪ್ರಭು ಅದನ್ನು ಖಂಡಿಸಿ ಶಿವಯೋಗವನ್ನು ನಿರೂಪಿಸುವನು. ಮುಂದುವರಿದು ತನ್ನ ಕರಸ್ಥಲಲಿಂಗದ ಪೂರ್ವಾಪರವನ್ನು ತಿಳಿಯ ಹೇಳುವನು. ಅದರಿಂದ ಸಿದ್ಧರಾಮ ಕುತೂಹಲಗೊಂಡು 'ಇಷ್ಟಲಿಂಗವಿಡಿದು ನಿಜಲಿಂಗೈಕ್ಯದ ಕಾಬ ಪರಿ ಹೇಗೆ?' ಎಂದು ಪ್ರಶ್ನಿಸುವನು 'ಆ ಕರಸ್ಥಲಲಿಂಗದಲ್ಲಿ ಅಡಗಿಪ್ಪ ಸ್ಥಲ ನಿರ್ದೇಶನವೆಷ್ಟು ಭೇದ' ಎಂದೂ ಕೇಳುವನು. ಇಲ್ಲೂ ಸಿದ್ಧರಾಮ ಇಷ್ಟಲಿಂಗದ ಬಗ್ಗೆ ಕುತೂಹಲ ತೋರುವ, ಪ್ರಶ್ನೆಗಳನ್ನು ಕೇಳುವ ಪ್ರಸಂಗಗಳಿವೆ. ಸಿದ್ಧರಾಮ ಕೇಳಿದ ಪ್ರಶ್ನೆಗಳಿಗೆ ಪ್ರಭು 'ಈ ಸೂಕ್ಷ್ಮದ ಸ್ಥಿತಿಗತಿ ಯನ್ನು ಸಂಗನಬಸವಣ್ಣ ಬಲ್ಲನು. ಆತನ ಕೈಯಿಂದ ನಿನಗೆ ತಿಳಿಹಿಕೊಡಿಸಿಹೆನೆ'ಂದು ಆತನನ್ನು ಕಲ್ಯಾಣಕ್ಕೆ ಕರೆದುಕೊಂಡು ಬರುವನು. ಅಲ್ಲಿ ನಡೆದ ಮಹಾನುಭಾವಗೋಷ್ಠಿ ಯಲ್ಲಿ ಚೆನ್ನಬಸವಣ್ಣ ಸಿದ್ಧರಾಮನನ್ನು ಒರೆದೊರೆದು ನೋಡುವನು. ಆಗ ಪ್ರಭು 'ಆಕಾಶವ ನಡರುವಂಗೆ ಅಟ್ಟಗೋಲು ಹಂಗೇಕೆ? ಸಮುದ್ರವ ದಾಂಟುವಂಗೆ ಹಱಿಗೋಲ ಹಂಗೇಕೆ? ಸೀಮೆಯ ಮೀಱಿದ ನಿಸ್ಸೀಮಂಗೆ ಸೀಮೆಯ ಹಂಗೇಕೆ?' (ವ. ೫೬೬) ಎಂದು ಸಿದ್ಧರಾಮನಿಗೆ ಇಷ್ಟಲಿಂಗದ ಅವಶ್ಯಕತೆ ಏಕೆ ಎಂದು ಪ್ರಶ್ನಿಸುವನು. ಅದಕ್ಕೆ ಚೆನ್ನಬಸ ವಣ್ಣನೂ 'ಅಹುದಹುದು ಅಂಗಕ್ಕೆ ಲಿಂಗವ ನಱಸಬೇಕಲ್ಲದೆ ಲಿಂಗಕ್ಕೆ ಲಿಂಗವನಱಸ ಲುಂಟೇ' (ವ. ೫೬೭) ಎಂದು ಇಷ್ಟಲಿಂಗದ ಅವಶ್ಯಕತೆಯಿಲ್ಲ ಎಂಬ ಒಪ್ಪಿಗೆ ಸೂಚಿಸು ವನು.[೧೬] ಹೀಗೆ ಸಾಕಾರನಿಷ್ಠೆ ಭೂತಂಗಳೊಳನುಕಂಪೆಯಲ್ಲಿಯೇ ಮೈಮರೆತು ಅದೇ

---

೧೬ ಆದರೆ ಮುಂದೆ ಸಿದ್ಧರಾಮನ ಲಿಂಗದೀಕ್ಷೆಯ ವಿಷಬೀಜ ಬಿತ್ತಿದವನು ಹಲಗೆ ಯಾರ್ಯ. ಅರ್ತಿ ಚೆನ್ನಬಸವಣ್ಣ–'ಸೀಮೆಯ ಮೀಱಿದ ನಿಸ್ಸೀಮ ಸಿದ್ಧರಾಮಯ್ಯನೆಂಬ ಮಾತು ಅಂತಿರಲಯ್ಯ' ಎಂದು ಪ್ರಭುವನ್ನು ಖಂಡಿಸಿ ಸಿದ್ಧರಾಮನಿಗೆ ಲಿಂಗ ಕಟ್ಟಲೇಬೇಕೆಂದು ಪಟ್ಟು ಹಿಡಿವನು. ಉರಿಲಿಂಗಪೆದ್ದಿ ಗಳೂ, 'ಸಾಕಾರವಿಡಿದು ಅರ್ಚನೆ ಪೂಜನೆಯ ಮಾಡಬೇಕಲ್ಲದೆ ನಿರಾಕಾರವ ನಂಬಲಾಗದು' ಎಂದು ಹೇಳುವರು. ಈ ರೀತಿ ಏಳನೂಱೆಪ್ಪತ್ತು ಅಮರ ಗಣಂಗಳು ಸಿದ್ಧರಾಮನ ಅಷ್ಟಾಂಗ ಯೋಗಗಳ ಜಱಿದು ಖಂಡಿಸಿ ನಿರಸಮಂ ಮಾಡುವರು. ಆಗ ಸಿದ್ಧರಾಮ 'ಹಿಂದೆ ಬಯಸಿದೆ ಕಾಳುತನದಲ್ಲಿ ಎನ್ನ ಮಂದ ಮತಿಯ ನೋಡಿರಯ್ಯ' ಎಂದು ಪಶ್ಚಾತ್ತಾಪಬಟ್ಟು ಬಸವಣ್ಣ ಚೆನ್ನಬಸವಣ್ಣ→

ಕೊನೆಯು ಬ್ರಹ್ಮವೆಂದು ಸಿದ್ಧರಾಮ ತಿಳಿದಿದ್ದಾಗ ಇದನ್ನು ಒಳಗೊಂಡೂ ಇದಿರಾಚೆಯ ಇರವಿನ ಅರಿವನ್ನು ಉಂಟು ಮಾಡಿಕೊಡುವುದಕ್ಕಾಗಿ ಪ್ರಭು ಆತನನ್ನು ಕಲ್ಯಾಣಕ್ಕೆ ಕರೆ ತಂದಿದ್ದಾನೆ. ಆ ಪ್ರಕಾರ ಆತ ಜ್ಞಾನೋದಯ ಹೊಂದಿ, ತನ್ನತನವನ್ನು ಇಲ್ಲಗೈದು ಸ್ವಯಂಭೂಶೂನ್ಯವನ್ನು ಸಂಪಾದಿಸುವನು.

ಪ್ರಭು ಸಿದ್ಧರಾಮನನ್ನು ಕಲ್ಯಾಣದತ್ತ ಕರೆದುಕೊಂಡು ಹೊರಟ ಮಧ್ಯದಲ್ಲಿ ಕಲ್ಯಾಣದಲ್ಲಿ ಒಂದು ಮಹತ್ವಪೂರ್ಣ ಘಟನೆ ನಡೆಯುತ್ತಿದೆ. ಅದು ಚೆನ್ನಬಸವಣ್ಣ, ಬಸವಣ್ಣನಿಂದ ಅನುಗ್ರಹವನ್ನು ಪಡೆದು, ಪ್ರಾಣಲಿಂಗ ಸಂಬಂಧವಳವಟ್ಟ ಪ್ರಸಂಗ. ಈ ಪ್ರಸಂಗವನ್ನು ಮಹಾದೇವಯ್ಯ ಅತ್ಯಂತ ನಾಟಕೀಯವಾಗಿ ಚಿತ್ರಿಸಿದ್ದಾನೆ. ಚೆನ್ನಬಸವಣ್ಣ ಬಸವಣ್ಣನನ್ನು ಸಂಬೋಧಿಸಿ 'ನೀವು ಘಟಸಿದ ಘಟಕ್ಕೆ ಕಾರುಣ್ಯವ ಮಾಡಿ ಸಲಹು' ಎಂದು ಪ್ರಾರ್ಥಿಸುತ್ತಾನೆ. ಅದಕ್ಕೆ ಉತ್ತರವಾಗಿ ಬಸವಣ್ಣ 'ನಾನೊಬ್ಬರಿಗೂ ಉಪದೇಶವ ಮಾಡಲಮ್ಮೆನು... ....ತತ್ವವ ಹಿಡಿದವರ ತೊತ್ತಾಗಿ ನಡೆವೆನು... ನಾನು ಎಲ್ಲಾ ಶಿವಭಕ್ತರಿಗೆ ಶಿಶುವಲ್ಲದೆ ಒಬ್ಬರಿಗೂ ಗುರುವಲ್ಲ' ಎನ್ನುವನು. ಚೆನ್ನಬಸವಣ್ಣ ಅದಕ್ಕೆ ಒಪ್ಪದೆ 'ನೀವು ನಾನು ಹೊಟ್ಟೆಯಲ್ಲಿರ್ದಂದು ವಿಭೂತಿಯ ಪಟ್ಟವ ಕಟ್ಟಿದಂದೆ ಅನುಗ್ರಹವಾಯಿತ್ತು' 'ಅನಾದಿವಿಡಿದು ನಾನು ನಿಮ್ಮ ಶಿಷ್ಯ' ಎಂದು ತಿಳಿ ಹೇಳುವನು. ಇಷ್ಟಕ್ಕೂ ಬಸವಣ್ಣ ಒಪ್ಪದಿದ್ದಾಗ ಚೆನ್ನಬಸವಣ್ಣ ಒಂದು ತಂತ್ರ ಹೂಡುವನು. 'ಅಂಗೈಯ ಲಿಂಗದ ಲಕ್ಷಣವ ನೋಡಿ' ಎಂದು ತನ್ನ ಕೈಯ ಲಿಂಗವನ್ನು ಬಸವಣ್ಣನ ಕೈಯಲ್ಲಿ ಕೊಡುವನು. ಅದಕ್ಕೆ ಬಸವಣ್ಣ 'ಲಿಂಗದ ಲಕ್ಷಣವನರಿಸಲಾಗದು ಕೋ' ಎಂದು ಅದನ್ನು ಮರಳಿ ಕೊಡುವನು. ಚೆನ್ನಬಸವಣ್ಣ ಅದನ್ನೇ 'ಮಹಾಪ್ರಸಾದ'ವೆಂದು ಕೈಕೊಳ್ಳುವನು. ಗುರುವಿನ ದೃಷ್ಟಿ ಮಾತ್ರದಿಂದಲೂ ಶಿಷ್ಯನಿಗೆ ಇಷ್ಟಲಿಂಗದ ಚಿತ್ಕಳೆ ಲಭ್ಯವಾಗುತ್ತಿದೆ ಎಂಬ ಸಿದ್ಧಾಂತ ಇಲ್ಲಿ ಪ್ರತಿಪಾದಿತವಾಗಿದೆ. 'ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತು' ಎಂಬಂತಿರುವ ಚೆನ್ನಬಸವಣ್ಣನ ಚಾಕಚಕ್ಯತೆ, ಬಸವಣ್ಣನ ಮುಗ್ಧತ್ವ ಮೊದಲಾದವು ಇಲ್ಲಿ ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿತವಾಗಿವೆ.

ಪ್ರಭು ಮತ್ತು ಸಿದ್ಧರಾಮರು ಬಂದು ಬಸವಣ್ಣನ ದ್ವಾರವಟ್ಟದ ಮುಂದೆ ನಿಂದಿರಲು, ಲಿಂಗಾರ್ಚನೆಯಲ್ಲಿ ತೊಡಗಿದ್ದ ಬಸವಣ್ಣ ಅದನ್ನು ಅರಿತು, 'ಭಕ್ತನ ಮನೆಯೇ ತನ್ನ ಮನೆಯೆಂದು ಇಲ್ಲಿಯವರೆಗೆ ಬಂದವನು ಒಳಗೇಕೆ ಬಾರನು' ಎಂದು, ಅವರನ್ನು

---

→ ರಿಂದ ಲಿಂಗಧಾರಣ ಮಾಡಿಸು ಎಂದು ಪ್ರಾರ್ಥಿಸುವನು. ಇದನ್ನು ಗುಮ್ಮಳಾಪೂರ ಗೂಳೂರ ಅವರೂ ಸ್ವೀಕರಿಸಿದ್ದಾರೆ. 'ಸ್ಥಾವರಲಿಂಗ ಇಷ್ಟಲಿಂಗಗಳ' ಹೊಯ್ದಾಟದಲ್ಲಿ ವೀರಶೈವವು ತತ್ತರಿಸುತ್ತಿರುವಾಗ ಇಷ್ಟಲಿಂಗ ಅದಕ್ಕೆ ಪ್ರಾಣ ಎಂಬುದನ್ನು ಇಲ್ಲಿ ಸಾಧಿಸಿ ತೋರಲಾಗಿದೆ. (ಗು. ಸಿ. ದೇ. ಶೂ. ಸಂ. ಪ್ರಸ್ತಾವನೆ).

ಕರೆತರಲು ಪರಿಚಾರಕರನ್ನು ಕಳುಹುವನು. ಸಾಕ್ಷಾತ್ ಜಂಗಮವೇ ಮನೆಬಾಗಿಲವರೆಗೆ ಬಂದಿರುವಾಗ ಲಿಂಗದಲ್ಲಿ ಮೈಮರೆತ ಬಸವಣ್ಣನ ನಡತೆ ಪ್ರಭುವಿಗೆ ಹಿಡಿಸದೆ 'ಬಾರೆನು' ಎನ್ನುವನು. ಅದನ್ನು ಕೇಳಿ ಬಸವಣ್ಣ ಅವನನ್ನು ಲೋಹ ಶಸ್ತ್ರ, ಭಾವ ಶಸ್ತ್ರಗಳಿಂದ ಹಿಡಿದು ತರಲು ಕಳಹುವನು. ಅದೂ ಅವರಿಗೆ ಅಸಾಧ್ಯವಾಗಲು ಹಡಪದಪ್ಪಣ್ಣನನ್ನು ಕಳುಹುವನು. ಅದಕ್ಕೆ ಪ್ರಭು 'ಅಂಗದ ಕೈಯಲು ಕ್ರೀಯಿರಲು ಮಾತಿನ ದ್ವೈತವ ನಾಡುವ ಭೃತ್ಯಾಚಾರ ಹೀನರ ಮನೆಗೆ ಬಾರೆನು' ಎಂದು ಸ್ಪಷ್ಟವಾಗಿ ಹೇಳುವನು. ಕೊನೆಗೆ ಚೆನ್ನಬಸವಣ್ಣ ಬಸವಣ್ಣನ ಬಳಿ ಬಂದು 'ಸಂಗಮನಾಥ ಮನೆಗೆ ಅಂಗವಿಡಿದು ನಡೆದು ಬಂದಡೆ ದಿಮ್ಮನೆ ಇದಿರೆದ್ದು ವಂದಿಸಬೇಕು' ಎಂದು ಹೇಳುವನು. ಇದರಿಂದ ಬಸವಣ್ಣನಿಗೆ ಜ್ಞಾನೋದಯವಾಗುತ್ತದೆ. ತಾನು ಮಾಡಿದ ತಪ್ಪಿನ ಅರಿವಾಗುತ್ತದೆ. ಈ ಕುತ್ತದಿಂದ ಪಾರು ಮಾಡಲು 'ಪಾಪ ಕೂಪದಲಿ ಬಿದ್ದವನನೆಬ್ಬಿಸಿ ಕೂಡಲಸಂಗನ ಶರಣರ ತೋರಿಸಿ ಎನ್ನನುಳುಪ' ಎಂದು ಪ್ರಾರ್ಥಿಸುವನು, 'ಹೋದ ಜೀವಕ್ಕೆ ಕರುಣವೆಂಬ ಮರುಜವಣಿಯ ಹಿಂಡು' ಎಂದು ಕೇಳುವನು. ಕೊನೆಗೆ ಚೆನ್ನಬಸವಣ್ಣನ ಸಲಹೆಯ ಮೇರೆಗೆ ಪ್ರಭುದೇವರಲ್ಲಿ ಬಂದು ಶರಣಾಗತನಾಗುವನು. 'ಸಂಗನಬಸವಣ್ಣನೊಳಗೆ ಇಂತು ಮಱವೆ ಹುಟ್ಟಿದ ಬಳಿಕ ಉಳಿದ ಭಕ್ತರ ಪಾಡೇನು' ಎಂದು ಪ್ರಭು ಬಸವಣ್ಣನನ್ನು ಅರೆದು ಒರೆದು ಕೊನೆಗೆ ಒಲಿವನು. ಇಲ್ಲಿ 'ಭಕ್ತನಾದವನು ಮೈಮರೆಯಲಾಗದು' ಎಂಬ ಎಚ್ಚರಿಕೆ ಇರುವುದರೊಂದಿಗೆ 'ಭಕ್ತನಾದವನು ಲಿಂಗದ ಬೆಳಕನ್ನು ಜಂಗಮದ ಸೇವೆಯಲ್ಲಿ ಸಾಧಿಸಬೇಕು' ಎಂಬ ಬೋಧೆಯೂ ಕಾಣಿಸಿಕೊಂಡಿದೆ.

ಪ್ರಭು ಮತ್ತು ಸಿದ್ಧರಾಮರು ಬಸವಣ್ಣನ ಮಠದ ಹತ್ತಿರ ಬರುತ್ತಿದ್ದಂತೆ ಬಸವರಾಜ ದೇವರ ಪ್ರಸಾದದ ಕುಳಿಯೊಳಗೆ ಒಕ್ಕ ಮಿಕ್ಕ ಶೇಷ ಪ್ರಸಾದವನ್ನು ಸ್ವೀಕಾರ ಮಾಡಿ, ಹನ್ನೆರಡು ವರ್ಷ ಪರಿಯಂತರ ತಮ್ಮ ನಿಜ ಸ್ವರೂಪವ ಮರೆಸಿಕೊಂಡಿದ್ದ ಮರುಳ ಶಂಕರದೇವರನ್ನು[೧೭] ಕಂಡು ಪ್ರಭು ಈ ರೀತಿ ನಿರೂಪಿಸುತ್ತಾನೆ.

---

೧೭ ಮರುಳ ಶಂಕರದೇವ ಪ್ರಸಾದ ಕುಂಡದ ಬಳಿಯಿಂದ ಎದ್ದು ಬಂದ ವರ್ಣನೆಯನ್ನು ಸಿದ್ಧ ವೀರಣ್ಣೊಡೆಯರು ಈ ರೀತಿ ಕಾವ್ಯಮಯವಾಗಿ ಬಣ್ಣಿಸಿದ್ದಾರೆ. ವಸಂತಮಾರುತಂ ಬರಲು ಚೂತದಿಂದಂಕುರಂ ಪೊಱಮಡುವಂತೆ, ಸ್ವಾತಿಯ ವರ್ಷದ ದಿನಕ್ಕೆ ಅಂಬುಧಿಯೊಳಗಿರ್ದ ಮೌಕ್ತಿಕ ಶಂಬುಕ ಅಂಬುಧಿಯೊಳಿರ್ದು ಕಾಣಬಪ್ಪಂತೆ, ನಲಿದು ಸೂಜಿಕಲ್ಲ ಕಾಣುತ್ತ ಸೂಜಿ ಮೆಲ್ಲನೆ ತನ್ನ ಸ್ಥಾನದಿಂದೇಳುವಂತೆ ಶಿವಯೋಗಾನಂದದಲ್ಲಿ ತನುವ ಮಱೆದಿರ್ದ ಶಿವಯೋಗಿ ತನಗೆ ಶಿವ ಪ್ರಸನ್ನವಾಗಲು ಮುಂದೆ ಶಿವನ ಶ್ರೀ ಚರಣ ಕಮಲಮಂ ಕಂಗಳಿಂದೊತ್ತಿಕೊಂಬೆನೆಂಬ ತೆಱನಂತೆ,ಪೌರ್ಣಿಮೆಯ ಚಂದ್ರನುದಯಕ್ಕೆ ಸಿಂಧು ಮೆಲ್ಲನೆ ಮುಂದಕ್ಕುಬ್ಬಿ ನಡೆದು ಬಪ್ಪಂತೆ ಮರುಳ ಶಂಕರದೇವರು ಪ್ರಸಾದ ಕುಂಡದಿಂಪೊಱಮಡುತಿರ್ದ→

ಬೀದಿಯಲ್ಲಿ ಬಿದ್ದ ಮಾಣಿಕ್ಯವ
ಹೂಳಿದ್ದ ನಿಧಾನವನಾರಿಗೂ ಕಾಣಬಾರದು ನೋಡಾ
ಮರಣವುಳ್ಳವರಿಗೆ ಮರುಜವಣಿ ಸಿಕ್ಕುವದೆ?
ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿ ಇಪ್ಪಂತೆ ಇಪ್ಪರಯ್ಯಾ ಶಿವಶರಣರು
ಗುಹೇಶ್ವರನ ಶರಣ ಮರುಳ ಶಂಕರದೇವರ ನಿಲವ ನೋಡಾ ಸಂಗನ
ಬಸವಣ್ಣ.

ಇದನ್ನು ಕೇಳಿ ಬಸವಣ್ಣ ನಡನಡುಗಿ ಚಿಂತಾಕ್ರಾಂತನಾಗಿ ಇಷ್ಟು ದಿನ ನನ್ನ ದ್ವಾರವಟ್ಟದ ಮುಂದೆಯೇ ಮಹಾಲಿಂಗೈಕ್ಯನಪ್ಪ ಶರಣನಿದ್ದರೂ ಆತನ ನಿಲವನ್ನರಿಯದೆ ಕೆಟ್ಟೆನೆಂದು ಅನುತಾಪಪಡುವನು. ಪ್ರಭು, ಬಸವಣ್ಣ, ಚೆನ್ನಬಸವಣ್ಣ ಎಲ್ಲರೂ ಸೇರಿ ಮರುಳ ಶಂಕರ ದೇವರನ್ನು ಸ್ತುತಿಸತೊಡಗಲು, ತನ್ನಿರವು ಪ್ರಕಟವಾಯಿತೆಂದು ಶಂಕರ ದೇವನು ನಿರವಯಲಾದನು.

ಇಲ್ಲಿಂದ ಮುಂದೆ, ಪ್ರಭು ಬಸವಣ್ಣನಿಗೆ ಪ್ರಸನ್ನನಾಗಿ ಬಸವಣ್ಣನನ್ನು ಸ್ತೋತ್ರ ಮಾಡುವ, ಬಸವಣ್ಣ ಪ್ರತಿಯಾಗಿ ಪ್ರಭುವನ್ನು ಸ್ತೋತ್ರ ಮಾಡುವ ಪ್ರಸಂಗ ವಿವರ ವಾಗಿ ಬಂದಿದೆ. ಅಲ್ಲದೆ ಪ್ರಭುದೇವರು ಬಸವಣ್ಣನಿಂದ ತಮ್ಮ ಪೂರ್ವ ಸಂಗತಿಯನ್ನು ಅಱಿಯುವ, ಚಿಕ್ಕ ದಣ್ಣಾಯಕರು ಪ್ರಭುದೇವರೊಡನೆ ಬಸವರಾಜ ದೇವರ ಪೂರ್ವಾಪರ ಸಂಬಂಧವನ್ನು ಸುಜ್ಞಾನ ದೃಷ್ಟಿಯಿಂದೀಕ್ಷಿಸುವ, ಚೆನ್ನಬಸವಣ್ಣನು ಸಂಗನ ಬಸವಣ್ಣನ ಸರ್ವಾಚಾರ ಸಂಪತ್ತನ್ನು ಕೊಂಡಾಡಿ ಪ್ರಭುದೇವರಿಗೆ ಬಿನ್ನೈಸುವ, ಚಿಕ್ಕದಣ್ಣಾಯಕರು ಎನ್ನ ಶಿವಜ್ಞಾನದ ಕಂದೆಱವೆಯೂ ಎನ್ನ ಮಹಾಪ್ರಸಾದಿತ್ವವೂ ಮಡಿವಾಳ ಮಾಚಿ ತಂದೆಯಿಂದ ಸಂಗನ ಬಸವಣ್ಣನಿಂದ ಆಯಿತ್ತೆಂದು ಬಿನ್ನಹ ಮಾಡುವ, ಪ್ರಭುದೇವರು ಮಡಿವಾಳ ಮಾಚಿದೇವರ ಸಮರಸ ಭಾವನೆಯನ್ನೊರೆದು ನೋಡುವ, ಪ್ರಭುದೇವರು ಬಸವಣ್ಣನೊಡನೆ ಮಡಿವಾಳ ತಂದೆಗಳ ಕೊಂಡಾಡುವ ಸನ್ನಿವೇಶಗಳು ವಿಸ್ತಾರವಾಗಿ (೩೦೪ನೆಯ ವಚನದಿಂದ ೫೮೮ನೆಯ ವಚನದ ವರೆಗೆ) ನಿರೂಪಿತವಾಗಿದೆ. ಅದೆ ಅದೆ ತನದಿಂದ ಇಲ್ಲಿ ಕಾವ್ಯದ ಕಸುವು ಕುಸಿದಿದೆ. ಮಹಾದೇವಯ್ಯ ಇಲ್ಲಿ ಪರಸ್ಪರರನ್ನು ಎದುರು ಬದರು ತಂದು ಹೊಗಳಿಸುವದನ್ನು ಬಿಟ್ಟು ಮತ್ತೇನನ್ನೂ ಮಾಡಿಲ್ಲ. ಈ ಮಹಾನುಭಾವಗೋಷ್ಠಿಯಲ್ಲಿ ಪ್ರಭು, ಬಸವಣ್ಣ, ಚೆನ್ನಬಸವಣ್ಣರಲ್ಲದೆ ಸೊಡ್ಡಳ ಬಾಚರಸ, ಹಡಪದಪ್ಪಣ್ಣ.... ಮುಖ್ಯರಾದ ಅಸಂಖ್ಯಾತ ಮಹಾಗಣಂಗಳೆಲ್ಲ ಭಾಗವಹಿಸಿ ನಿತ್ಯನಿಜ ತತ್ವದಲ್ಲಿ ಸಮರಸರಾಗಿ ಪರಮಾನಂದದಲ್ಲಿ ಓಲಾಡುತ್ತಿದ್ದರಂತೆ.

→ ಪ್ರಸ್ತಾವದೊಳು.... (ಪು. ೧೧೪–೫). ಹೊರನೋಟಕ್ಕೆ ಜಡವಾಗಿ ಬಿದ್ದಿದ್ದು ಇದ್ದಕ್ಕಿದ್ದಂತೆ ಚೈತನ್ಯವನ್ನು ಪಡೆಯುವ ವಿಸ್ಮಯವು ಇಲ್ಲಿಯ ಅನೇಕ ಶಬ್ದ ಚಿತ್ರಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೂಡಿದೆ. (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ. ೪. ಪು, ೩೨೩)

ಈ ಪ್ರಸಂಗದಲ್ಲಿ ಆಗಮಿಸಿದ ಅಕ್ಕಮಹಾದೇವಿಯ ಆಗಮನ ಶೂನ್ಯ ಸಂಪಾದನೆಗೆ ಕಾವ್ಯದ ಮಹಾಪೂರವನ್ನೇ ಹೊತ್ತು ತರುತ್ತಿದೆ. ಕೌಶಿಕನ ಪ್ರಸಂಗದಿಂದ ಮುಕ್ತಳಾಗಿ, ಶರಣರ ಸಂದರ್ಶನವನ್ನೂ ಅನುಭವ ಮಂಟಪದ ಸುಖವನ್ನೂ ಹಾರೈಸಿ ಉಡುತಡಿಯಿಂದ ಕಲ್ಯಾಣದವರೆಗೆ ನೂರಾರು ಮೈಲು ನಡೆದು ಬಂದ ಹರೆಯದ ಹೆಣ್ಣನ್ನು ನೋಡಿ ಕಿನ್ನರಿ ಬ್ರಹ್ಮಯ್ಯ[೧೮] ಮೊದಲಾದ ಎಲ್ಲ ಶರಣರೂ ಬೆಕ್ಕಸ ಬೆರಗಾಗುತ್ತಾರೆ. ಅಲ್ಲಮಪ್ರಭು ತನಗಾದ ಆಶ್ಚರ್ಯವನ್ನು ತೋರಗೊಡದೆ ಅಕ್ಕನನ್ನು ತೀವ್ರ ಪರೀಕ್ಷೆಗೆ ಗುರಿ ಮಾಡುತ್ತಾನೆ.

ಉದುಮದದ ಯೌವನವನೊಳಕೊಂಡ ಸತಿ ನೀನು
ಇತ್ತಲೇಕೆ ಬಂದೆಯವ್ವಾ?
ಸತಿಯೆಂದರೆ ಮುನಿವರು ನಮ್ಮ ಶರಣರು
ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು
ಅಲ್ಲವಾದರೆ ತೊಲಗು ತಾಯೆ
ನಮ್ಮ ಗೊಹೇಶ್ವರನ ಶರಣರಲ್ಲಿ ಸಂಗ ಸುಖ ಸನ್ನಹಿತವ
ಬಯಸುವರೆ ನಿನ್ನ ಪತಿ ಯಾರೆಂಬುದ ಹೇಳಾ ಎಲೆ ಅವ್ವಾ ಎನ್ನುವನು.

ಮುಂದುವರಿದು

ತಪ್ಪ ಹೊಱಿಸಿ ಹೊರಟಿಹೆನೆಂಬುದು ಸತ್ಯವೆ?
ತನು ಸೀರೆಯನುಳಿದು ನಿರ್ವಾಣದಲ್ಲಿ
ಮನದ ಭ್ರಾಂತು ನಿಶ್ಚಯವಾಗದು
ಕೇಶವೆಂಬ ಸೀರೆಯು ಅಂಗಕ್ಕೆ ಮಱೆಯಾಯಿತ್ತು
ಅಪಮಾನವೆಂತು ಹಱಿಯಿತ್ತು
ಅದು ಗೊಹೇಶ್ವರಲಿಂಗಕ್ಕೆ ಸಲ್ಲದ ವೇಷ.[೧೯]

ಎನ್ನುತ್ತಾನೆ. ಯಾವುದನ್ನು ತಿರಸ್ಕರಿಸಿ, ಅದನ್ನು ಮರೆಯಲೆಂದು ಅಕ್ಕ ಇಲ್ಲಿಯವರೆಗೆ ಬಂದಿದ್ದಳೋ ಅದನ್ನೇ ಪ್ರಭು ಇಲ್ಲಿ ಮತ್ತೆ ಕೆದಕಿ ಕೇಳಿದಾಗ ಆಕೆಯ ಜೀವ ತಲ್ಲಣ ಗೊಂಡಿರಬೇಕು. ಆದರೂ ಆಕೆ ದಿಕ್ಕುಗೆಡದೆ, 'ರೂಹಿಲ್ಲದ ಚೆಲುವ ಚೆನ್ನಮಲ್ಲಿಕಾರ್ಜುನ ನಿಗೆ ತಾನೊಲಿದಿರುವುದಾಗಿ' ಹೇಳುವಳು. ಮುಂದುವರಿದು

---

೧೮ ಹಲಗೆಯಾರ್ಯನಲ್ಲಿ ಕಿನ್ನರಿಬೊಮ್ಮಯ್ಯ ಅಕ್ಕನನ್ನು ಅತಿರೇಕ ಅಶ್ಲೀಲವೆನ್ನುವಷ್ಟರ ಮಟ್ಟಿಗೆ ಪರೀಕ್ಷಿಸಿದುದಾಗಿ ಚಿತ್ರಿತವಾಗಿದೆ.

೧೯ ಕೌಶಿಕನ ಪ್ರಸಂಗವನ್ನು ಮರೆಮಾಚುವದಕ್ಕಾಗಿ ಗೂಳೂರವರು ಈ ವಚನವನ್ನು ಬಿಟ್ಟಿದ್ದಾರೆ.

ಕಾಯ ಕಪ್ಪಿನೆ ಕಂದಿದಡೇನಯ್ಯಾ
ಕಾಯ ಮಿಟ್ಟನೆ ಮಿಂಚಿದಡೇನಯ್ಯಾ
ಅಂತರಂಗ ಶುದ್ಧವಾದ ಬಳಿಕ
ಚೆನ್ನಮಲ್ಲಿಕಾರ್ಜುನ ಲಿಂಗವು
ಒಲಿದ ಕಾಯವು ಹೇಗಿದ್ದಡೇನಯ್ಯಾ

ಎಂದು ಪ್ರಶ್ನಿಸುವಳು. ಮತ್ತೆ ಮುಂದುವರಿದು-

ಫಳ ಒಳಗೆ ಪಕ್ವವಾಗಿಯಲ್ಲದೆ ಹೊಱಗಣ ಸಿಪ್ಪೆ ಒಪ್ಪಗೆಡದು
ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು
ಆ ಭಾವದಿಂದೆ ಮುಚ್ಚಿದೆ. ಇದಕ್ಕೆ ನೋವೇಕೆ?
ಕಾಡದಿರಣ್ಣಾ, ಚೆನ್ನಮಲ್ಲಿಕಾರ್ಜುನ ದೇವರದೇವನ ಒಳಗಾದವಳಾ

ಎಂದು ಉತ್ತರಿಸುವಳು. ಅಕ್ಕನ ಈ ದಿಟ್ಟ ಉತ್ತರ ಪ್ರಭುವನ್ನೂ ಮಂತ್ರಮುಗ್ಧನನ್ನಾಗಿಸಿತು. ಆದರಿಂದ ಅವನು ಭಾವಭರಿತನಾಗಿ 'ಮಹಾದೇವಿಯಕ್ಕಗಳ ನಿಲವಿಂಗೆ ಶರಣೆನುತಿರ್ದೆನು' ಎನ್ನುವನು. ಉಳಿದ ಶರಣರೂ ಆಕೆಯನ್ನು ಮನದುಂಬಿ ಬಣ್ಣಿಸುವರು, ಮಹಾದೇವಿಯಕ್ಕ ಕಲ್ಯಾಣದಿಂದ ಶ್ರೀಶೈಲಕ್ಕೆ ನಿರ್ಗಮಿಸುವಳು.

ಇಲ್ಲಿಂದ ಮುಂದೆ ಪ್ರಭು ಸಿದ್ಧರಾಮನನ್ನು ಸೊನ್ನಲಿಗೆಗೆ ಬೀಳ್ಕೊಟ್ಟು ತಾನು ದೇಶಾಂತರ ಹೊರಡುವನು. ನಾನಾದೇಶ–ಗಿರಿ–ಗಹ್ವರಗಳನ್ನು ತಿರುಗಿ ಹನ್ನೆರಡು ವರ್ಷದ ನಂತರ ಪುನಃ ಕಲ್ಯಾಣಕ್ಕೆ ಬರುವನು. ಆತನ ಬರುವಿಕೆಯನ್ನೇ ಹಾರೈಸಿ ಬಸವಣ್ಣ ಶೂನ್ಯ ಸಿಂಹಾಸನವನ್ನು ರಚಿಸಿ 'ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ' (ವ. ೬೫೧) ಕಾಯ್ದು ಕುಳಿತಿದ್ದಾನೆ. ಇಲ್ಲಿ ಮತ್ತೆ ಶೂನ್ಯ ಸಂಪಾದನೆಕಾರನ ನಾಟ್ಯ ಗುಣ ಗರಿಗೆದರಿದೆ. 'ಕೆದಱಿದ ತಲೆಯ ನಡೆಯ ತೊನೆವ....' ಅತ್ಯಂತ ಮಲಿನ ವಿಲಕ್ಷಣ ವೇಷದ ಪ್ರಭುವನ್ನು ಬಸವಣ್ಣ ಗುರುತಿಸಿ ಆತನ ಪೂಜೆಯಲ್ಲಿ ನಿರತನಾಗುತ್ತಾನೆ. ನೆರೆದ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರು ಬಸವಣ್ಣ ತಮ್ಮನ್ನು ಉಪೇಕ್ಷಿಸಿದನೆಂದು ಕುಪಿತಗೊಳ್ಳುತ್ತಾರೆ. ಪ್ರಭು ತನ್ನನ್ನು 'ತೃಪ್ತಿ'ಪಡಿಸಿದರೆ ಆ ಜಂಗಮರ ತೃಪ್ತಿಯಾದಂತೆಯೆ ಎಂದು ಹೇಳುತ್ತಾನೆ. ಬಸವಣ್ಣ ಪ್ರಭುವಿನ ಆರೋಗಣೆಗೆ ತೊಡಗುತ್ತಾನೆ, ನೀಡಿ ನೀಡಿ ದಣಿಯುತ್ತಾನೆ. ಕೊನೆಗೆ ಚೆನ್ನಬಸವಣ್ಣನ 'ತೃಪ್ತಿಯ ನೊಲಿವರೆ ನೀನು ಬೋನ, ನಾನು ಪದಾರ್ಥ' ಎಂದ ಮಾತಿನಂತೆ ಆತ್ಮಾರ್ಪಣೆ ಮಾಡಿಕೊಳ್ಳಲು ಪ್ರಭು, ಜಂಗಮರೆಲ್ಲ ತೃಪ್ತರಾಗುತ್ತಾರೆ. ಸ್ತುತಿ, ಪ್ರತಿಸ್ತುತಿಗಳಿಂದ ಮುಂದಿನ ಭಾಗ ತುಂಬಿ ಹೋಗಿದೆ. ಕೊನೆಯಲ್ಲಿ ಪ್ರಭು, ಶರಣ ಪ್ರಮುಖರ ಅವಸಾನ ಕಾಲವನ್ನು ನೆನಪಿಸಿ, ನಿರ್ವಯಲಾಗುವ ಸ್ಥಳ ಸೂಚನೆ ಮಾಡಿ, ತಾನು ಶ್ರೀಶೈಲದತ್ತ ಹೋಗುತ್ತಾನೆ. ಇಲ್ಲಿಗೆ ಶೂನ್ಯ ಸಂಪಾದನೆ ಕೊನೆಗೊಳ್ಳುತ್ತಲಿದೆ.

ಇಲ್ಲಿ ಬರುವ ಪಾತ್ರಗಳು ಹಲವು ಹತ್ತು. ಈ 'ಮಹಾ ವ್ಯಕ್ತಿಗಳೆಲ್ಲರೂ ಪರಿಪೂರ್ಣ ಶೂನ್ಯವನ್ನು ಸಂಪಾದಿಸಿದ ಶ್ರೀಮಂತರು.... ಪ್ರಭುವನ್ನು ದಿಟ್ಟತನದಿಂದ ಒರೆಗೆ ಹಚ್ಚಿ ನುಡಿದು, ಅವನ ನಿಲವನ್ನು ಕಂಡು ಮಣಿದು ಆ ಮಾರ್ಗದಲ್ಲಿ ಏಕೈಕ ನಿಷ್ಠೆಯಿಂದ ಮುನ್ನಡೆದ ಶಿವಯೋಗ ಸಾಧಕಿ ಮುಕ್ತಾಯಕ್ಕ; ತನ್ನತನವನ್ನು ಸಂಪೂರ್ಣವಾಗಿ ಇಲ್ಲಗೈದು ಶೂನ್ಯಗೊಳಿಸಿ ಸ್ವಯಂ ಭೂ ಶೂನ್ಯವನ್ನು ಸಂಪಾದಿಸಿ ಆದರ್ಶ ಶಿವಯೋಗಿಯಾದ ಸಿದ್ಧರಾಮ; ವಯಸ್ಸಿನಿಂದ ಚಿಕ್ಕವನಾದರೂ ಮೊದಲಿನಿಂದಲೂ ಮಹಾ ಜ್ಞಾನಿಯಾಗಿಯೇ ಕಾಣಿಸಿಕೊಳ್ಳುವ ಚೆನ್ನಬಸವಣ್ಣ; ಭಕ್ತಿ ಮನೋಧರ್ಮ ಪ್ರಕಾಶಿತವಾದ ಅಂತರಂಗ ಬಹಿರಂಗ ಎರಡೊಂದಾದ ಮಾನವ ಜಾತಿ ಒಂದೇ ಎಂದು ಸಾಧಿಸಿದ, ಸಾಮಾಜಿಕ ಸುಧಾರಣೆ-ನಿರಾಸೆಯಲ್ಲಿ ಕೊನೆಗೊಂಡರೂ ವಿಚಲಿತಗೊಳ್ಳದೆ, ಅನುಪಮವಾದ ಆನಂದದ ನಿಲವಿನ ಸಂಗಯ್ಯನಲ್ಲಿ ಸರ್ವ ನಿವಾಸಿಯಾಗಿ ಸೇರಿ ಹೋದ ಸಾಮರಸ್ಯದ ಮಹಿಮ ಬಸವಣ್ಣ; ಗುಪ್ತ ಭಕ್ತಿಯ ಮರುಳ ಶಂಕರದೇವ; ಕಾಯಕ ನಿಷ್ಠೆಯ ಮಡಿವಾಳ ಮಾಚಿದೇವ; ಕಾಯಕ ತತ್ವದ ಮಹತ್ವ ಎತ್ತಿ ತೋರಿಸಿದ ಆಯ್ದಕ್ಕಿ ಮಾರಯ್ಯ-ಲಕ್ಷ್ಮಮ್ಮ ಮತ್ತು ಮೋಳಿಗೆಯ ಮಾರಯ್ಯ-ಮಹಾದೇವಮ್ಮ; ಜಂಗಮ ದಾಸೋಹ ನಿಷ್ಠೆಯ ನುಲಿಯ ಚಂದಯ್ಯ; ಜ್ಞಾನ ಮಾರ್ಗದ ಘಟ್ಟಿವಾಳಯ್ಯ; ಹೆಣ್ಣು ಕುಲಕ್ಕೆ ಗೌರವ ತಂದು ಕೊಟ್ಟ ಮಹಾಮಾತೆ ಅಕ್ಕಮಹಾದೇವಿ....'೨೦ ಮುಂತಾದ ಶರಣರು ಇಲ್ಲಿಯ ಸಜೀವ ಪಾತ್ರಗಳು.

ಇವು ಇಲ್ಲಿ 'ನಗುತ್ತವೆ, ಅಳುತ್ತವೆ, ಸಂದೇಹಿಸುತ್ತವೆ, ಸಮಾಧಾನಪಡುತ್ತವೆ: ಭಯ, ನಿರಾಸೆ, ಸುಖ, ಆನಂದ, ತೃಪ್ತಿ, ಸವಾಲು, ಅವಮಾನ, ಕೋಪ, ಸ್ನೇಹ, ಪ್ರೇಮ ಮುಂತಾದ ಎಲ್ಲ ಬಗೆಯ ಮನುಷ್ಯ ಸಹಜ ಅನುಭವಗಳನ್ನು ಪಡೆಯುತ್ತವೆ, ಎಲ್ಲ ಅನುಭವಗಳ ಮುಕುಟಪ್ರಾಯನಾದ ಬಯಲನ್ನು ಪಡೆಯುತ್ತವೆ.೨೧ ಈ ಎಲ್ಲ ಪಾತ್ರಗಳಿಗೆ ಸೂತ್ರಪ್ರಾಯನಾಗಿ ನಿಂತವ ಅಲ್ಲಮಪ್ರಭು. 'ತನ್ನ ಕಂಡ, ಕೇಳ್ದ, ಪೆಸಗೊಂಡ, ನುಡಿಸಿದ ಸರ್ವಜನಂಗಳ ಭವಪಾಶ ಬಂಧನವನ್ನು ಹರಿದವನು. ಆತನ ವಿರಾಟ್ ವ್ಯಕ್ತಿತ್ವದ ಒಂದೊಂದು ಮುಖ ಒಂದೊಂದು ಸನ್ನಿವೇಶದಲ್ಲಿ ವ್ಯಕ್ತವಾಗಿದೆ.

ಈ ಎಲ್ಲ ಪಾತ್ರಗಳು ನಿರ್ವಹಿಸಬೇಕಾದ ಪಾತ್ರದೊಂದಿಗೆ ಅವು ವರ್ತಿಸಬೇಕಾದ ರೀತಿ-ನೀತಿ ಹಾವ-ಭಾವ ಚಲನವಲನಗಳನ್ನು ದಿಗ್ದರ್ಶಕನ ಹಾಗೆ ಮಹಾದೇವಯ್ಯ ಅಲ್ಲಲ್ಲಿ ಸೂಚನೆಯನ್ನಿತ್ತಿದ್ದಾನೆ. ಉದಾಹರಣೆಗೆ ಪ್ರಭು ಮತ್ತು ಸಿದ್ಧರಾಮರನ್ನು ಒಡಂಬಡಿಸಿ ಬಸವಣ್ಣ ಅವರನ್ನು ತನ್ನ ಮನೆಗೆ ಕರೆತರುವಾಗಿನ ಚಿತ್ರ ಹೀಗಿದೆ: 'ಮುತ್ತಿನ

೨೦ ಪ್ರ. ಕರ್ನಾಟಕ ಪು. ೧೮೬-೭.

೨೧ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ. ೪, ಪು. ೩೩೪

ತೋರಣಮಂ ಕಟ್ಟಿ, ದೇವಾಂಗವಸ್ತ್ರಮಂ ನಡೆಮುಡಿಯಂ ಪಾಸಿ, ನವರತ್ನ ಖಚಿತದಿಂದೆಸೆವ ಮೇಲುಕಟ್ಟಂಕಟ್ಟಿ, ಷಡುಸಮಾರ್ಜನೆ ರಂಗವಾಲಿಯನಿಕ್ಕಿ ಮಹಾವಾದ್ಯಗಳೊಡನೆ ಕಳಸ ಕನ್ನಡಿಯಿಂದಿದಿರುಗೊಂಡು ಮುತ್ತು ಮಾಣಿಕ್ಯದಾರತಿಗಳಂ ಪಿಡಿದೆತ್ತಿ ಮಂಗಳಸ್ವರದಿಂ ಪಾಡಿ, ಪರಮ ಹರುಷದಿಂ ಆ ಬಸವರಾಜದೇವರು ಕೈಗುಡೆ, ಮಡಿವಾಳ ಮಾಚಿತಂದೆ ಗಳು ಪಾಯವಧಾರೆಂದು ಉಗ್ಗಡಿಸಿ, ಸೊಡ್ಡಳ ಬಾಚರಸರ ಹೆಗಲ ಮೇಲೆ ಹಸ್ತಮಂ ಮಡಗಿ, ಚೆನ್ನಬಸವರಾಜದೇವರೊಡನೆ ನಸುನಗೆಯಿಂ ಪ್ರಸಂಗಿಸುತ್ತ ಏಕಾಂತದ ಮಠಕ್ಕೆ ಬಿಜಯಂಗೈದು....' (ಪು. ೧೬೪). ಇದನ್ನು ಓದುತ್ತಿದ್ದಂತೆ ಪ್ರಭು ಬಸವಣ್ಣನ ಮನೆಗೆ ಬಂದ ದೃಶ್ಯ ಕಣ್ಣೆದುರಿಗೆ ನಡೆಯುತ್ತಿರುವಂತೆ ಭಾಸವಾಗುತ್ತದೆ.

ಇಂಥ ಹಲವು ನಾಟಕೀಯ ಸನ್ನಿವೇಶಗಳನ್ನು ಕಲ್ಪಿಸಿ ಮಹಾದೇವಯ್ಯ ಕುಶಲ ನಾಟಕಕಾರನಾಗಿರುವಂತೆ, ಅಲ್ಲಲ್ಲಿ ಹಲವಾರು ವರ್ಣನೆಗಳನ್ನೂ ಅಲಂಕಾರಗಳನ್ನೂ ಔಚಿತ್ಯಪೂರ್ಣವಾಗಿ ತಂದು ಒಳ್ಳೆಯ ರಸಜ್ಞನೂ ಭಾವುಕನೂ ಎನ್ನಿಸಿದ್ದಾನೆ. ಉದಾ ಹರಣೆಗೆ ಶಾಸನದಲ್ಲಿ 'ನಾಸೀದಸ್ತಿ ಕಲ್ಯಾಣೇ ಕಲ್ಪಪುರೇ....' ಎಂದು ಹೊಗಳಿಸಿಕೊಳ್ಳ ಲ್ಪಟ್ಟ ಕಲ್ಯಾಣ ಪಟ್ಟಣ ಪ್ರಭು ಮತ್ತು ಸಿದ್ಧರಾಮರು ಅಲ್ಲಿಗೆ ಬಂದಾಗ ಹೇಗಿತ್ತು ಎಂಬುದನ್ನು ಮಹಾದೇವಯ್ಯ ಈ ರೀತಿ ಬಣ್ಣಿಸಿದ್ದಾನೆ. 'ಮರ್ತ್ಯಲೋಕದ ಸಕಲೈ ಶ್ವರ್ಯದ ಭಂಡಾರದ ನಿಜನಿಳಯವೆನಿಪ್ಪ ಮತ್ತಂ ಭೂದೇವತೆಯ ಹೃತ್ಕಮಲಕರ್ಣಿಕಾ ವಾಸವೆನಲೊಪ್ಪುವ ವಾಣಿಯ ಮುಖದರ್ಪಣವೆನಿಪ್ಪ ಸಕಲ ಧರ್ಮಂಗಳಂ ತೀವ್ರವ ಕರಂಡಗೆಯೆನಿಪ್ಪ ಮತ್ತಂ ಸತ್ಯಸಾಗರವೆನಿಸಿಪ್ಪ ಭಕ್ತಿಯ ತವರ್ಮನೆಯೆನಿಸಿಪ್ಪ ಮುಕ್ತಿಗೆ ಮುಖವೆನಿಸಿಪ್ಪ ಪುಣ್ಯದಪುಂಜವೆನಿಸಿಪ್ಪ ಮತ್ತಂ ಅಭಿನವ ಕೈಲಾಸವೆನಿಸಿಪ್ಪ ಶ್ರೀ ಕಲ್ಯಾಣ ಪುರ (ಪು. ೧೦೭) ಅದೇ ರೀತಿ ಬಸವಣ್ಣನ ಮನೆಯ ದ್ವಾರವಟ್ಟದ ವರ್ಣನೆ ಹೀಗಿದೆ: ಆ ದ್ವಾರ ವಟ್ಟದೊಳು ಹೋಗುವ ಹೊರಡುವ ಮಹಾಲಿಂಗವಂತರಂ ಅಲ್ಲಿ ವಚನ ಶಾಸ್ತ್ರಂಗಳಂ ಪೇಳುವ ಕೇಳುವ ಶಿವತತ್ವ ವಿದ್ಯಾಭ್ಯಾಸಿಗಳಂ ಮತ್ತಂ ಶಿವಯೋಗಾಬುಧಿ ಯೊಳಿಪ್ಪ ಪರಮ ರಾಜಯೋಗಿಗಳಂ....ಮತ್ತಂ ಆ ಲಿಂಗದಲ್ಲಿ ವೀರವ್ರತನಿಯಮಮಂ ಕೈಕೊಂಡು, ಕಣ್ಣ ಕಳೆದೀಜಿಸಿ, ಕಣ್ಣಂ ಪಡೆವ, ಜಿಹ್ವೆಯ ಸಮರ್ಪಿಸಿ ಜಿಹ್ವೆಯ ಪಡೆವ, ಶಿರವಂ ಕಡಿದಾರತಿಯನೆತ್ತಿ ಶಿರವಂ ಪಡೆವ ವೀರಗಣಂಗಳಂ....(ಪು. ೧೧೫-೬). ಈ ವರ್ಣನೆಗಳು ಅಂದಿನ ಲಿಂಗವಂತರ ಸಂಭ್ರಮ ಸಡಗರಗಳನ್ನು ಭವ್ಯಜೀವನವನ್ನೂ ಚಿತ್ರಿ ಸುವುದರ ಜೊತೆಗೆ ಬಸವಣ್ಣನ ಘನವ್ಯಕ್ತಿತ್ವ ಪರಿಚಯಕ್ಕೆ ಪೂರ್ವ ಪೀಠಿಕೆಯಂತೆ ಇಲ್ಲಿ ಬಂದು ಔಚಿತ್ಯಪೂರ್ಣವೆನ್ನಿಸಿವೆ. ಬಸವಣ್ಣನಿದ್ದ ಮನೆಯನ್ನು ಶೂನ್ಯಸಂಪಾದನೆಕಾರ 'ಸಂಗನಬಸವಣ್ಣನಿಪ್ಪ ಶಿವಾಲಯಮಂ' ಎಂದೂ ಬಣ್ಣಿಸಿರುವುದು ಹೆಚ್ಚು ಅರ್ಥವಂತಿಕೆ ಯನ್ನು ತಂದುಕೊಟ್ಟಿದೆ.

ಮಹಾದೇವಯ್ಯ ಶಾಸ್ತ್ರ ವಿಷಯವನ್ನು ಸರಳವಾಗಿ ಸೂತ್ರಬದ್ಧವಾಗಿ ಹೇಳಬಲ್ಲ ಪರಿಣತ. ಆರಂಭದಲ್ಲಿ, ಅನಿಮಿಷದೇವನಿಂದ ಇಷ್ಟಲಿಂಗವನ್ನು ಪಡೆದು ಪ್ರಭು ಪಿಂಡ

ಸ್ಥಲದಿಂದ ಜಂಗಮಸ್ಥಲದ ನಿಲುಕಡೆಗೆ ಬಂದು ನಿಂತ ನಿಲವನ್ನು ವಿವರಿಸತೊಡಗಿ, ಷಟ್ಸ್ಥಲಗಳ ನಿಲವನ್ನು ಶಾಸ್ತ್ರಬದ್ಧವಾಗಿ ಜನಸಾಮಾನ್ಯನಿಗೂ ಅರ್ಥವಾಗುವಂತೆ ವಿವೇಚಿಸಿದ್ದಾನೆ. ಉದಾಹರಣೆಗೆ ಇಲ್ಲಿಯ ಶರಣಸ್ಥಲದ ವಿವೇಚನೆಯನ್ನು ನೋಡ ಬಹುದು: 'ಇಂತು ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರ ನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವದೊಳಗಣ ಅಱಿವಿಂ ಶರಣನಾಗಿ, ಆ ಅಱಿವು ನಿಜದಲ್ಲಿ ಸಮರಸವನ್ನೈದಿ ನಿರ್ಭಾವ ಪದದೊಳು ನಿಂದ ಭೇದ (ಪು. ೧೩) ಈ ರೀತಿ ಆರೂ ಸ್ಥಲಗಳನ್ನು ಸುಲಭವಾದ ಭಾಷೆಯಲ್ಲಿ, ವಚನಗಳನ್ನೇ ಕರಗಿಸಿ ಗದ್ಯದಲ್ಲಿ ಎರಕ ಹೊಯ್ದಂತೆ, ಸೂತ್ರಬದ್ಧವಾದ ಶೈಲಿಯಲ್ಲಿ ನಿರೂಪಿಸಲಾಗಿದೆ. ಇವನ್ನಷ್ಟೇ ಒಂದೆಡೆಗೆ ಸೇರಿಸಿದರೂ ಈ ಭಾಗ ವೀರಶೈವರ ಷಟ್ಸ್ಥಲ ಗಳಿಗೆ ಒಳ್ಳೆಯ ಕೈಪಿಡಿಯೆನ್ನಿಸುತ್ತದೆ.

ಮಹಾದೇವಯ್ಯನ ಇನ್ನೊಂದು ಮಹತ್ವದ ಗುಣ–ಸಂಕ್ಷೇಪತೆ. ತನ್ನ ಪೂರ್ವದ ಶರಣರ ಕಥೆಯನ್ನು ಪ್ರಸಂಗಕ್ಕನುಗುಣವಾಗಿ ಸಂಗ್ರಹರೂಪದಲ್ಲಿ ಹೇಳುವ ಜಾಣ್ಮೆ ಈತನಲ್ಲಿದೆ. ಪ್ರಾರಂಭದಲ್ಲಿ ಬರುವ 'ಪ್ರಥಮದಲ್ಲಿ ಪ್ರಭುದೇವರ ಸಾಂಗತ್ಯ' ಹರಿಹರನ ಪ್ರಭುದೇವರ ರಗಳೆಯ ಸಂಗ್ರಹರೂಪವಾಗಿದೆ. ಪ್ರಭು-ಸಿದ್ಧರಾಮರು ಕಲ್ಯಾಣಕ್ಕೆ ಬಂದ ಪ್ರಸಂಗದಲ್ಲಿ ಬಸವಣ್ಣನ ಚರಿತ್ರೆಯನ್ನು ಹೇಳತೊಡಗಿ ತನ್ನ ಪೂರ್ವದ ಕಥಾಮಾರ್ಗ ವೊಂದನ್ನು ಸಂಗ್ರಹಿಸಿದ್ದಾನೆ (ಪು. ೯೨). ಅದೇ ರೀತಿ ಕೊನೆಯಲ್ಲಿ ಬರುವ ಅಕ್ಕಮಹಾ ದೇವಿಯ ಚರಿತ್ರೆಯನ್ನು ನಾಲ್ಕೆಂಟು ಸಾಲುಗಳಲ್ಲಿ ಸಂಗ್ರಹಿಸಿ ಹಿಡಿದಿಟ್ಟಿರುವ ರೀತಿ ಮೆಚ್ಚುವಂತಿದೆ (ಪು. ೨೪೯). ಈ ರೀತಿ ತನ್ನ ಪೂರ್ವದ ಕಥಾ ಸಂಪ್ರದಾಯಗಳನ್ನು ಸಂಗ್ರಹಿಸುವಲ್ಲಿಯೂ ಮಹಾದೇವಯ್ಯ ಕಾವ್ಯದ ಸೊಗಡನ್ನು ಮೆರೆದಿದ್ದಾನೆ. ಉದಾ ಹರಣೆಗೆ ಪ್ರಭುವಿನ ಚರಿತ್ರೆಯಲ್ಲಿ ನವಮಾಂಸಂ ತೀವಿದ ಗರ್ಭಿಣಿಯಂತು ಶಿವತತ್ವವಿದ್ಯೆ ಯೊಳಗೆ ಸಂಪೂರ್ಣವಾಗಿ ಎಡೆಗೊಂಡು (ಪು. ೧೪), ಅಂಜನವುಳ್ಳವರಿಗೆ ನಿಧಾನ ತಲೆ ದೋರುವಂತೆ ಶಿವಜ್ಞಾನಾಂಜನ ದೃಷ್ಟಿಯ ಮುಂದೆ ಅನಾದಿ ಸಂಸಿದ್ಧಮಾದ ಅನಿಮಿಷ ದೇವರ ಸಮಾಧಿ ಕಾಣುತ್ತ ಬರುತ್ತಮಿರೆ (ಪು. ೧೫) ಎಂಬ, ಬಸವಣ್ಣನ ಚರಿತ್ರೆಯಲ್ಲಿ 'ಶಿವಕಲ್ಪತರುವಿನ ಸಸಿ ಬೆಳೆವಂತೆ'(ಪು. ೯೨) ಶಿವಜ್ಞಾನ ಪ್ರಭಾಪಂಜರಮ ಕಾಯಮಾಗಿ ನಿತ್ಯ ನಿಜ ತತ್ತ್ವ ಪ್ರಸಂಗವೆ ಪ್ರಾಣವಾಗಿ (ಪು. ೧೧೬) ಎಂಬ ಮಾತುಗಳು ಮಹಾ ದೇವಯ್ಯನ ಕಾವ್ಯಸಾಮರ್ಥ್ಯವನ್ನು ಪ್ರತಿಪಾದಿಸಲು ಪುಷ್ಟಿವೊದಗಿಸುತ್ತವೆ. ಇಂಥ ಧ್ವನಿಪೂರ್ಣವಾದ ಅರ್ಥವತ್ತಾದ ಮಾತುಗಳು ಈ ಕೃತಿಯ ತುಂಬ ಇಡಿ ಕಿರಿದಿವೆ. ಇದರಿಂದ ಈ ಗದ್ಯಭಾಗ ರಸವತ್ಕಾವ್ಯದಂತೆ ತೋರಿದೆ. ಹರಿಹರನ ತರುವಾಯದ ಗದ್ಯ ಸಾಹಿತ್ಯಕ್ಕೆ ಒಳ್ಳೆಯ ಉದಾಹರಣೆ ಎನ್ನಿಸಿದೆ.

ಇಷ್ಟೂ ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆಯ ಚೌಕಟ್ಟು. ಇದನ್ನು ಮುಂದೆ ಬಂದ ಹಲಗೆಯಾರ್ಯ, ಸಿದ್ಧಲಿಂಗದೇವರು, ಸಿದ್ಧವೀರಣ್ಣೊಡೆಯರು

ಚಾಚೂ ತಪ್ಪದೆ ಅನುಸರಿಸಿದ್ದಾರೆ. ಇವರಲ್ಲಿ ಕೊನೆಯ ಇಬ್ಬರು ಅಲ್ಪ-ಸ್ವಲ್ಪ ಬದಲಾವಣೆಯನ್ನೂ ಮಾಡಿಕೊಂಡು, ಹಲವು ಹೆಚ್ಚಿನ ಪ್ರಸಂಗಗಳನ್ನು ಸೇರಿಸಿ ಮೂಲದ ಸೊಗಸಿಗೆ ಇನ್ನಷ್ಟು ಮೆರಗನ್ನುಂಟುಮಾಡಿದ್ದಾರೆ. ಆದರೆ ಹಲಗೆದೇವ ಮಾತ್ರ ಮೂಲದ ಕಥೆಯನ್ನು ಬಹಳಷ್ಟು ಹಿಂಜಿ ಶೂನ್ಯಸಂಪಾದನೆಯ ಉದ್ದೇಶವನ್ನೇ ಹಾಳುಮಾಡಿದಂತಿದೆ. ಸಿದ್ಧರಾಮನ ಲಿಂಗದೀಕ್ಷೆಯ ವಿಷಬೀಜವನ್ನು ಮೊತ್ತಮೊದಲಿಗೆ ಬಿತ್ತಿದವನೆ ಇವನು. 'ಸೀಮೆಯ ಮೀಜಿಿದ ನಿಸ್ಸೀಮ ಸಿದ್ಧರಾಮಯ್ಯನೆಂಬ ಮಾತು ಅಂತಿರಲಯ್ಯ' ಎಂದು ಚೆನ್ನಬಸವಣ್ಣನೆ ಪ್ರಭುವನ್ನು ಮೂದಲಿಸಿ ಸಿದ್ಧರಾಮನಿಗೆ ಲಿಂಗ ಕಟ್ಟಲೇಬೇಕೆಂದು ಪಟ್ಟುಹಿಡಿದಂತೆ ಇಲ್ಲಿ ಚಿತ್ರಿಸಲಾಗಿದೆ. ಅಲ್ಲದೆ ಇಲ್ಲಿ ಸಿದ್ಧರಾಮನನ್ನು ವಿಷ್ಣುವಿನ ಅವತಾರ ಎಂದು ಕಲ್ಪಿಸಿರುವುದೂ ಒಂದು ವಿಪರ್ಯಾಸವೆ ಸರಿ. ಮುಂದೆ ಬಂದ ಸಿದ್ಧಲಿಂಗದೇವರು ಈ ಪ್ರಸಂಗವನ್ನು ಔಚಿತ್ಯಪೂರ್ಣವಾಗಿ ಸಂಗ್ರಹಿಸಿದರೆ, ಸಿದ್ಧವೀರಣ್ಣೊಡೆಯರು ಇದನ್ನು ಇನ್ನೂ ಸಂಕ್ಷೇಪಿಸಿದ್ದಾರೆ.

ಶೂನ್ಯಸಂಪಾದನೆಯಲ್ಲಿ ಕಾಯಕದ ಮಹತಿಯನ್ನು ಸಾರುವ ನುಲಿಯ ಚಂದಯ್ಯಗಳ ಪ್ರಸಂಗವನ್ನು ಸೇರಿಸಿದ ಶ್ರೇಯಸ್ಸು ಮಾತ್ರ ಹಲಗೆಯಾರ್ಯನದು. ಇದನ್ನು ಅನುಸರಿಸಿ ಮುಂದೆ ಬಂದ ಸಿದ್ಧಲಿಂಗದೇವರು ಆಯ್ದಕ್ಕಿ ಮಾರಯ್ಯಗಳ ಸನ್ನಿವೇಶವನ್ನು ಸೇರಿಸಿದ್ದಾನೆ. ಇಂದಿಗೂ ಪ್ರಸ್ತುತವೆನ್ನಿಸಬಹುದಾದ ಈ ಪ್ರಸಂಗದ ಸೇರ್ಪಡೆಯಿಂದ ಶೂನ್ಯಸಂಪಾದನೆಗೆ ಹೆಚ್ಚಿನ ಬೆಲೆ ಪ್ರಾಪ್ತವಾಗಿದೆ. ಇಲ್ಲಿ ಕಾಯಕದ ಮಹತಿಯನ್ನು ಸಾರುವ–

ಕಾಯಕದಲ್ಲಿ ನಿರತನಾದರೆ ಗುರುದರುಶನವಾದಡೂ ಮರೆಯಬೇಕು
ಲಿಂಗಪೂಜೆಯಾದಡೂ ಮರೆಯಬೇಕು
ಜಂಗಮ ಮುಂದಿದ್ದರೂ ಹಂಗು ಹರಿಯಬೇಕು
ಕಾಯಕವೇ ಕೈಲಾಸವಾದ ಕಾರಣ
ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು

ಎಂಬ ವಚನ ಇಲ್ಲಿ ಬಂದಿದೆ. ಇದಕ್ಕೆ ಪೂರಕವಾಗಿ ಮಾರಯ್ಯನ ಹೆಂಡತಿ ಲಕ್ಕಮ್ಮ.

'ದಾಸೋಹವೆಂಬ ಸೇವೆಯ ಬಿಟ್ಟು
ನೀಸಲಾರದೆ ಕೈಲಾಸವೆಂಬ ಆಸೆ ಬೇಡ' ಎಂದೂ
'ಮಾಡಿ ನೀಡಿ ಹೋದೆಹೆನೆಂಬಾಗ ಕೈಲಾಸವೇನು ಕೈಕೂಲಿಯೆ'

ಎಂದೂ ಕೇಳಿರುವ ವಚನಗಳು ಇಲ್ಲಿವೆ. ಇಂಥ ವಿಚಾರಧಾರೆಯನ್ನೊಳಗೊಂಡ ಹಲವು ಹತ್ತು ವಚನಗಳು ಇಲ್ಲಿರುವುದರಿಂದ ಈ ಭಾಗ ಶೂನ್ಯಸಂಪಾದನೆಯಲ್ಲಿಯೆ ವಿಶೇಷ ಗೌರವ ಪಡೆದಿದೆಯೆಂದು ಹೇಳಬಹುದು. ಜೊತೆಗೆ ಗೋರಕ್ಷಕನ ಪ್ರಸಂಗವೂ ಇಲ್ಲಿ ಸೇರ್ಪಡೆಯಾಗಿದೆ. ಅಲ್ಲದೆ ಅಕ್ಕಮಹಾದೇವಿಯ ಪ್ರಸಂಗದಲ್ಲಿ ಆಕೆ ಶರಣರಿಂದ

ಬೀಳ್ಕೊಂಡು ಮಹಾರಣ್ಯವನ್ನು ಪ್ರವೇಶಿಸಿ ಚೆನ್ನಮಲ್ಲಿಕಾರ್ಜುನನ ಹಂಬಲದಲ್ಲಿ ವಿಕಳಾವಸ್ಥೆಯಲ್ಲಿ ಸುಳಿದಾಡಿದ ಪ್ರಸಂಗವನ್ನು ಕಲ್ಪಿಸಿ, ಮಹಾದೇವಯ್ಯನಲ್ಲಿ ಇಲ್ಲದ ಹಲವಾರು ಉತ್ಕೃಷ್ಟ ವಚನಗಳು ಇಲ್ಲಿ ಸೇರ್ಪಡೆಯಾಗುವಂತೆ ಮಾಡಿದ್ದಾನೆ.

ಈ ಎಲ್ಲ ಶೂನ್ಯಸಂಪಾದನೆಗಳ ಮಧುರ ಫಲವೆನ್ನುವಂತೆ ಮೂಡಿಬಂದಿರುವ ಗೂಳೂರ ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ ಇಪ್ಪತ್ತೊಂದು ಉಪದೇಶಗಳಾಗಿ ವಿಭಜನೆಗೊಂಡು. ಅವಕ್ಕೆ ತಕ್ಕ ತಲೆಬರಹಗಳನ್ನು ಪಡೆದಿದೆ. ಒಂದೊಂದು ಉಪದೇಶದ ಪ್ರಾರಂಭದಲ್ಲಿ ಈ ಇಡೀ ಉಪದೇಶದ ಸಾರ ಹೇಳುವ ಒಂದೊಂದು ಕಂದ ಪದ್ಯ ಇಲ್ಲಿದೆ. ಅಲ್ಲದೆ ಪ್ರಾರಂಭದಲ್ಲಿ ಗೊಗ್ಗಯ್ಯನ ಪ್ರಸಂಗವನ್ನೂ ಮಧ್ಯದಲ್ಲಿ ಮೋಳಿಗೆಯ್ಯ ಮತ್ತು ಘಟ್ಟಿವಾಳಯ್ಯಗಳ ಪ್ರಸಂಗವನ್ನೂ ಸೇರಿಸಿದ ಶ್ರೇಯಸ್ಸು ಈತನದು. ಗೊಗ್ಗಯ್ಯನ ಪ್ರಸಂಗದ ಒಂದೇ ಒಂದು ವಚನ (ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ ಪು. ೧೧) ಒಳ್ಳೆ ಅರ್ಥವಂತಿಕೆಯಿಂದ ಕೂಡಿರುವುದಾದರೂ ಪ್ರಭು ಇನ್ನೂ ದೀಕ್ಷೆ ಪಡೆಯುವ ಅಂದರೆ ತಾನು ಪರಿಪೂರ್ಣನಾಗುವ ಪೂರ್ವದಲ್ಲಿ ಈ ಉಪದೇಶ ಮಾಡಿರುವುದು ಅಷ್ಟು ಔಚಿತ್ಯಪೂರ್ಣವೆನ್ನಿಸುವುದಿಲ್ಲ. ಆದರೆ ಮುಂದಿನ ಮೋಳಿಗೆಯ್ಯಗಳ ಮತ್ತು ಘಟ್ಟಿವಾಳಯ್ಯಗಳ ಪ್ರಸಂಗಗಳು ಅವರವರ ಘನವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಗಳಾಗಿವೆ. ಈ ಶೂನ್ಯಸಂಪಾದನೆಯ ಮಹತಿಯನ್ನು ಗೂಳೂರುಸಿದ್ಧ ವೀರಣ್ಣೊಡೆಯರೇ ಹೀಗೆ ವಿವರಿಸಿದ್ದಾರೆ.

'ಇದು ಪರಮಗುರು ಪರಮ ವೀರಶೈವ ಸಿದ್ಧಾಂತ ತತ್ವಜ್ಞಾನ
ಇದು ವೀರಶೈವಾಚಾರ ಪ್ರತಿಷ್ಠಾಪನಾಚಾರ್ಯ
ಇದು ದಿವ್ಯ ವೇದಾಂತ ಶಿರೋಮಣಿ
ಇದು ಸಮಸ್ತಶಾಸ್ತ್ರ ಮುಖ್ಯ ಮುಖದರ್ಪಣ,
..............................
ಇದು ಅಜ್ಞಾನ ತಿಮಿರಾಂಜನ ತಂತ್ರವಪ್ಪ
ಪ್ರಭುದೇವರ ಶೂನ್ಯಸಂಪಾದನೆ........' (ಪು. ೪೦೭)

ಹಲವೆಡೆ ಸಿದ್ಧವೀರಣ್ಣೊಡೆಯ, ಮಹಾದೇವಯ್ಯಗಳು ನಿರೂಪಿಸಿದ ಪಾತ್ರಗಳ ಕಾಳಿಕೆಯನ್ನು ಕಳೆದು ಹೋಗಿ ಅವನ್ನೆಲ್ಲ ಅತಿ ಮಾನವತ್ವಕ್ಕೆ ಏರಿಸಿದ್ದಾನೆ. ಉದಾಹರಣೆಗೆ ಮಹಾದೇವಯ್ಯನಲ್ಲಿ ಚೆನ್ನಬಸವಣ್ಣನೆಂಬ 'ಪ್ರಸಾದ ಮುಖದಿಂನಾಗಾಂಬಿಕೆಯ ಗರ್ಭದೊಳು ಚೆನ್ನಬಸವಣ್ಣನೆಂಬ ನಾಮದಿಂದೊಗೆದು' (ಪು. ೬೨) ಎಂದಿರುವುದನ್ನು ಸಿದ್ಧವೀರಣ್ಣೊಡೆಯ 'ನಿಷ್ಕಲ ಪರಶಿವನ ಸೂಕ್ಷ್ಮ ತತ್ವವೆ ಚೆನ್ನಬಸವಣ್ಣನೆಂಬ ನಾಮದಿಂದ ಮರ್ತ್ಯಕ್ಕವತರಿಸಿ' (ಪು. ೭೩) ಎಂದು ತಿದ್ದಿದ್ದಾನೆ. ಅದೇ ರೀತಿ ಮಹಾದೇವಯ್ಯನಲ್ಲಿ ಬಸವಣ್ಣನಿಗೆ ಪರಮೇಶ್ವರ 'ನಿನ್ನ ಪ್ರಾಣಲಿಂಗವನಟ್ಟಿಸಿಕೊಂಡು ಬಾ ಹೋಗು' (ಪು. ೬೨)

ಎಂದು ಬೆಸನಂ ಕೊಟ್ಟನೆಂದು ಹೇಳಿದರೆ, ಸಿದ್ಧವೀರಣ್ಣೊಡೆಯ 'ಜಗಹಿತಾರ್ಥವಾಗಿ ಬಸವೇಶ್ವರನೆಂಬ ನಾಮ ಧರಿಸಿ' (ಪು. ೭೨) ಬಂದನೆಂದಿದ್ದಾನೆ.[೨೨] ಅಕ್ಕಮಹಾದೇವಿಯನ್ನು ಕುರಿತು ಮಹಾದೇವಯ್ಯ 'ಭವಿಯ ಸಂಗಮಂ ತೊಱೆದು' ಎಂದಿರುವ ಮಾತನ್ನು ಸಿದ್ಧವೀರಣ್ಣೊಡೆಯ 'ಅಂಗಸಂಗಮಂ ತೊಱೆದು' ಎಂದು ತಿದ್ದಿದ್ದಾನೆ. ಪ್ರಾರಂಭದಲ್ಲಿ ಬರುವ ಅಜಗಣ್ಣನನ್ನು ಮಹಾದೇವಯ್ಯ ಕೇವಲ 'ಅಜಗಣ್ಣ ತಂದೆ' ಎಂದು ಸಂಬೋಧಿಸಿದ್ದರೆ, ಸಿದ್ಧವೀರಣ್ಣೊಡೆಯ 'ಕೈಲಾಸದಲ್ಲಿ ಸಮಸ್ತ ಪ್ರಮಥಗಣಂಗಳೊಳಗೊರ್ವ ಗಣಾಧೀಶ್ವರನು ಜಗಹಿತಾರ್ಥವಾಗಿ ಮರ್ತ್ಯಕ್ಕವತರಿಸಿ' (ಪು. ೨೪) ಎಂದಿದ್ದಾನೆ.[೨೩] ಮಹಾದೇವಯ್ಯನ 'ಸಿದ್ಧರಾಮ ದೇವರು, (ಪು. ೪೯) ಎಂಬ ಉಲ್ಲೇಖವನ್ನು ಸಿದ್ಧವೀರಣ್ಣೊಡೆಯ 'ಕೈಲಾಸದಿಂದ ಶ್ರೀ ಪರಮೇಶ್ವರನ ಶುದ್ಧ ಸಾತ್ವಿಕವೆ ಜಗಹಿತಾರ್ಥವಾಗಿ ಮರ್ತ್ಯಕ್ಕವತರಿಸಿ' ಎಂದಿದ್ದಾನೆ. (ಪು. ೫೯).

ಒಟ್ಟಾರೆ ಇಲ್ಲಿ ಮಾನವನ 'ಅಂತರಂಗ ಹಾಗೂ ಬಹಿರಂಗ ಶುದ್ಧಿಯ ಕಾರಣಗಳಾದ ಗುರು-ಲಿಂಗ-ಜಂಗಮ ಸೇವೆ, ಕಾಯಕ, ದಾಸೋಹ, ಸರ್ವಾರ್ಪಣ, ಶಿವಯೋಗ ವಿಚಾರಗಳು ತೆರೆ ತೆರೆಯಾಗಿ ಮೂಡಿ ಬಂದಿವೆ. 'ಹುಟ್ಟು-ಸಾವು-ಸಿದ್ಧಿಯ ಮಾನವತ್ವದ ನಿರಂತರ ಸಮಸ್ಯೆ ಮುಕ್ತಾಯಿ ಸಂಪಾದನೆಯಲ್ಲಿ; ಹಠಯೋಗ-ಶಿವಯೋಗ-ಇಷ್ಟಲಿಂಗದ ವಿಚಾರ ಸಿದ್ಧರಾಮ ಹಾಗೂ ಗೋರಕ್ಷರ ಪ್ರಸಂಗದಲ್ಲಿ; ಮರುಳ ಶಂಕರದೇವರ ಪ್ರಸಂಗದಲ್ಲಿ ನಿಜಭಕ್ತಿ; ಪ್ರಸಾದಮಹಿಮೆಗಳ ಪ್ರಾತ್ಯಕ್ಷಿಕೆ ವೀರ ವೈರಾಗ್ಯ ಲಿಂಗನಿಷ್ಠೆ ಅಕ್ಕನ ಪ್ರಸಂಗದಲ್ಲಿ; ನುಲಿಯ ಚಂದಯ್ಯಗಳ ಸಂಪಾದನೆಯಲ್ಲಿ ಶರಣತ್ವ ಹಾಗೂ ತತ್ವ; ಆಯ್ದಕ್ಕಿ ಮಾರಯ್ಯ ಮೋಳಿಗೆ ಮಾರಯ್ಯಗಳ ಪ್ರಸಂಗದಲ್ಲಿ ಕಾಯಕ ದಾಸೋಹ; ಸರ್ವಶರಣರ ಅವಸಾನ ಪ್ರಸಂಗದಲ್ಲಿ ಜೀವ-ದೇಹ-ಸಾಧನೆ-ಶೂನ್ಯಸಂಪಾದನೆಗಳ ವಿವಕ್ಷೆಯಿದೆ.[೨೪] ಹೀಗೆ ನಾಟಕೀಯ ರೂಪದಲ್ಲಿ ಶರಣರ ವಚನಗಳ ಮೂಲಕ ಆ ಆ

---

೨೨ ಈ ಮಾತನ್ನು ಮೇಲಿಂದ ಮೇಲೆ ಹಲವಾರು ಶರಣರ ಮೂಲಕವೂ ಆಡಿಸಿದ್ದಾನೆ ಸಿದ್ಧವೀರಣ್ಣೊಡೆಯ. ಉದಾಹರಣೆಗೆ ಚೆನ್ನಬಸವಣ್ಣ 'ಭುವನವ ಸಲಹಲೆಂದವತರಿಸಿದಿರಿ' (ಪು. ೭೨), ಸಿದ್ಧರಾಮ 'ಜಗವ ಪಾಲಿಸಬರಲು' (ಪು.೮೬) ಪ್ರಭು 'ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು ಕರ್ತನಟ್ಟಿದ ಶರಣ' (ಪು. ೮೭), ಎಂದು ಬಸವಣ್ಣನನ್ನು ಹೊಗಳಿದ್ದಾರೆ. ಅದೇ ರೀತಿ ಹಡಪದಪ್ಪಣ್ಣ (ಪು. ೯೩), ಮರುಳಶಂಕರದೇವ (ಪು. ೧೨೦), ಮಡಿವಾಳ ಮಾಚಿದೇವ (ಪು. ೧೬೮) ಅಕ್ಕಮಹಾದೇವಿ (ಪು. ೨೮೯) ಮೊದಲಾದವರೂ ಬಸವಣ್ಣನನ್ನು ಮನದುಂಬಿ ಬಣ್ಣಿಸಿದ್ದಾರೆ.

೨೩. ಮಹಾದೇವಯ್ಯನಲ್ಲಿಯ 'ತಂದೆ' ಎಂಬ ಪದದಲ್ಲಿ ಕಂಡುಬರುವ ಆಪ್ತತ್ವ ಸಿದ್ಧವೀರಣ್ಣೊಡೆಯರಲ್ಲಿ ಕಾಣದು.

೨೪ ಕರ್ನಾಟಕ ಭಾರತಿ ಸಂ: ೧೪ ಸಂ. ೩-೪

ಶರಣರ ನಡೆನುಡಿ, ಆಚಾರ ವಿಚಾರಗಳನ್ನೊಳಗೊಂಡ ಜೀವನ ಚರಿತೆಯನ್ನು ವೀರಶೈವರ ತತ್ತ್ವ ವಿಚಾರಗಳನ್ನೂ ರಸಮಯವಾಗಿ ಪ್ರತಿಪಾದಿಸುವ ಕೃತಿ ಶೂನ್ಯಸಂಪಾದನೆ. "ಶಿವ ಶರಣರ ತತ್ತ್ವಜ್ಞಾನಕ್ಕೆ ಅಧಿಕೃತ ಗ್ರಂಥವಾಗಿ, ಶರಣ ಸಮುದಾಯದ ಚಾರಿತ್ರ ಚಿತ್ರಣದ ಕಾವ್ಯವಾಗಿ, ಅಲ್ಲಲ್ಲಿ ರಸ-ಭಾವ ಪ್ರೇರಕ ವರ್ಣನೆ, ಸಂಭಾಷಣೆ ಹಾಗೂ ಸನ್ನಿವೇಶ ವರ್ಣನೆಯ ಕೃತಿಯಾಗಿ, ಮಾನವನ ಚಿರಂತನ ಜ್ವಲಂತ ಸಮಸ್ಯೆಗಳ ಪ್ರಾತಿನಿಧಿಕ ಗ್ರಂಥ ವಾಗಿ, ಕನ್ನಡಕ್ಕೊಂದು ಹೆಮ್ಮೆಯಾಗಿ, ವಿಶ್ವ ವಿಚಾರ ಸಾಹಿತ್ಯಕ್ಕೊಂದು ಮಹತ್ತ್ವದ ಕೊಡುಗೆಯಾಗಿ ಸೃಷ್ಟಿಯಾಗಿದೆ ಶೂನ್ಯಸಂಪಾದನೆ."೨೫

---

೨೫ ಆದೇ

# ತೋಂಟದ ಸಿದ್ಧಲಿಂಗ ಶಿವಯೋಗಿ:
# ವೀರಶೈವ ತತ್ವಶಾಸ್ತ್ರದ ಹಿನ್ನೆಲೆಯಲ್ಲಿ

—ಡಾ|| ಬಿ. ನಂ. ಚಂದ್ರಯ್ಯ

ತೋಂಟದ ಸಿದ್ಧಲಿಂಗ ಶಿವಯೋಗಿಗಳು ಹದಿನಾರನೆಯ ಶತಮಾನದ ಕರ್ನಾಟಕದ ಜನ ಜೀವನದಲ್ಲಿ, ಅದರಲ್ಲೂ ವೀರಶೈವದ ಪುನರುಜ್ಜೀವನದ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದ ಶಿವಯೋಗಿಗಳು, ವಚನಕಾರರು, ಸಾಮಾನ್ಯವಾಗಿ ವೀರಶೈವ ಕವಿಗಳ, ವಚನಕಾರರ ಜೀವನ ಚರಿತ್ರೆಯನ್ನು ಬರೆಯುವುದು ಬಹಳ ಕಷ್ಟ. ಅದರಲ್ಲೂ ಶಿವಯೋಗಿಗಳ ಚರಿತ್ರೆಯನ್ನು ತಿಳಿಯುವುದು ಇನ್ನೂ ಕಷ್ಟ. ಕಾರಣ, ಲೌಕಿಕ ಪ್ರಸಿದ್ಧಿಗೆ ಮನಸ್ಸು ಕೊಡದೆ ಅಧ್ಯಾತ್ಮ ಸಿದ್ಧಿಯ ಕಡೆಗೆ ಮನಸ್ಸು ಬಿಚ್ಚಿದ ಶಿವಯೋಗಿಗಳು ತಮಗೆ ಶಿವದೀಕ್ಷೆಯನ್ನು ಕೊಟ್ಟ ಆಧ್ಯಾತ್ಮ ಗುರುವಿನ ಕರಕಮಲ ಸಂಜಾತರೆಂದು ಹೇಳಿಕೊಳ್ಳುತ್ತ ಪೂರ್ವಾಶ್ರಮವನ್ನು ನೆನೆಯದೇ ಅದನ್ನು ಮರೆಮಾಚುತ್ತಾರೆ. ಒಂದು ವೇಳೆ ಅಪ್ಪಿತಪ್ಪಿ ನೆನೆದರೂ ಅಂಥವರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಸಿದ್ಧಲಿಂಗ ಶಿವಯೋಗಿಗಳೇ ತಮ್ಮ ವಚನವೊಂದರಲ್ಲಿ– ಶಿವಾಶ್ರಯದಲ್ಲಿ ಹುಟ್ಟಿ, ಗುರಕರ ಜಾತನಾಗಿ, ಗುರುಕುಮಾರನಾಗಿ, ಹಿಂದಣ ತಂದೆ–ತಾಯಿಗಳ ಹೆಸರು ಹೇಳಿ ಭವಾಶ್ರಯುವ ನೆನೆವ ನರಕ ಜೀವಿಯು ನನಗೆ ತೋರದಿರಿ:

> ಗುರುವಿನಿಂದ ಉಪದೇಶವ ಪಡೆದು, ಗುರುಪುತ್ರ ನೆನಿಸಿಕೊಂಡ ಬಳಿಕ
> ಪೂರ್ವದ ತಾಯಿ–ತಂದೆಯೆಂದು, ಬಂಧುಗಳೆಂದು
> ಮಲಸಂಬಂಧವ ನೆನೆಯಲಾಗದು ಕಾಣಿರೋ.
> ಇನ್ನಿವ ನೆನೆದಿರಾದರೆ ಶಿವದ್ರೋಹ ತಪ್ಪದಯ್ಯಾ.
> ಇನ್ನು ನಿಮಗೆ ತಾಯಿ–ತಂದೆಗಳ ಹೇಳಿಹೆ ಕೇಳಿರೇ.
> ಗುರುವೇ ತಾಯಿ, ಗುರುವೇ ತಂದೆ, ಗುರುವೇ ಬಂಧುಗಳು;
> ಗುರುವಿನಿಂದ ಪರವಿನ್ನಾದೂ ಇಲ್ಲವೆಂದು ನಂಬಬಲ್ಲರೆ ಶಿಷ್ಯನೆಂಬೆನಯ್ಯಾ.
> ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ! ||೧೬೪||

ಎಂದು ಅತ್ಯಂತ ನಿಷ್ಠುರವಾಗಿಯೇ ಹೇಳಿ ಕೊಂಡಿರುವುದರಿಂದ ಅವರ ಪೂರ್ವಾಶ್ರಮದ ಬದುಕನ್ನು, ಜೀವನ ಚರಿತ್ರೆಯನ್ನು ನಿಖರವಾಗಿ ತಿಳಿಯುವುದು ಬಹಳ ಕಷ್ಟ. ಆದರೂ ಅವರ ವಚನಗಳಿಂದ ಹಾಗೂ ಅವರ ಬಗ್ಗೆ ಬರೆದಿರುವ ಕೃತಿಗಳಿಂದ ಸ್ಥೂಲವಾದ ಅವರ ಜೀವನ ಚಿತ್ರವನ್ನು ರೂಪಿಸಬಹುದು. ಯಡೆಯೂರಿನಲ್ಲಿ ದೊರೆಯುವ ಶಾಸನ ಬಿಟ್ಟರೆ,

ಅವರು ಬದುಕಿದ್ದ ಕಾಲದಲ್ಲಿಯೇ ಬರೆದ ೨ನೇ ಗುಬ್ಬಿಯ ಮಲ್ಲಣಾರ್ಯನ ಮಗ ಶಾಂತೇಶ (೧೫೬೧) ಬರೆದಿರುವ 'ಶಾಂತೇಶನ ಸಿದ್ಧೇಶ್ವರ ಪುರಾಣ',೧ ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ (೧೫೮೪), ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣ (ಸು. ೧೬೦೬), ಸಿದ್ಧನಂಜೇಶನ ಗುರುರಾಜ ಚಾರಿತ್ರ (ಸು. ೧೫೮೪-೧೬೭೯), ಸಿದ್ಧ ನಂಜೇಶನ ಭಾವ ರತ್ನಾಭರಣ (ಅನುಪಲಬ್ಧ), ಚನ್ನವೀರ ಜಂಗಮದೇವನ ಷಟ್ಸ್ಥಲ ವಲ್ಲಭ (ಸು. ೧೬೭೯-೧೭೦೦), ಸಿದ್ಧೇಶ್ವರ ರಗಳೆ, ಹೇರಂಬನ ಸಿದ್ಧೇಶ್ವರ ಸಾಂಗತ್ಯ (೧೭೧೯-೧೭೬೯) ಹಾಗೂ ಕವಿ ಚರಿತಕಾರರ ಅಭಿಪ್ರಾಯಗಳನ್ನು ಆಧರಿಸಿ ಅವರ ಜೀವನ ಕಾಲವನ್ನೂ, ಚರಿತ್ರೆಯನ್ನು ಕೆಳಕಂಡಂತೆ ರೂಪಿಸಲಾಗಿದೆ.

ತೋಂಟದ ಸಿದ್ಧಲಿಂಗ ಶಿವಯೋಗಿಗಳಿಗಿಂತ ಸ್ವಲ್ಪ ಕಾಲ ಹಿಂದೆ ಇದ್ದ ಲಕ್ಕಣ್ಣ ದಂಡೇಶ, ೨ನೇ ಗುಬ್ಬಿ ಮಲ್ಲಣಾರ್ಯರ ಕೃತಿಗಳು, ಕಗ್ಗೆರೆಯ ಶಾಸನೋಕ್ತರಾದ ಚನ್ನ ವೀರಪ್ಪ ವಡೆಯರು, ಅವರ ಪತ್ನಿ ಪರ್ವತಮ್ಮರ ಕಾಲ, ಶಿವಯೋಗಿಗಳ ಸಮಕಾಲೀನ ಕೃತಿ ಶಾಂತೇಶನ ಸಿದ್ಧೇಶ್ವರ ಪುರಾಣ, ಸಿದ್ಧಲಿಂಗ ಶಿವಯೋಗಿಗಳು ಶಿವೈಕ್ಯರಾದ ತರುಣ ದಲ್ಲಿಯೇ ಬರೆಯಲಾದ ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ' ಇವುಗಳಲ್ಲಿನ ಸಂಗತಿಗಳನ್ನು ಪರೀಕ್ಷಿಸಿ, ಕವಿ ಚರಿತಕಾರರು, ಡಾ॥ ಆರ್. ಸಿ. ಹಿರೇಮಠ ಅವರ ಅಭಿಪ್ರಾಯಗಳನ್ನು ಪರಿಶೀಲಿಸಿದ ಡಾ. ಎಲ್. ಬಸವರಾಜ ಅವರು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕಾಲವನ್ನು ಸು. ಕ್ರಿ. ಶ. ೧೫೦೦ ರಿಂದ ೧೫೪೫ರ ಅವಧಿ ಎಂದು ನಿರ್ಧರಿಸಿದ್ದಾರೆ. ಇನ್ನಷ್ಟು ಪರಿಷ್ಕಾರಗೊಂಡು, ಮತ್ತಷ್ಟು ಗಟ್ಟಿ ಆಧಾರಗಳು ದೊರೆ ಯುವವರೆಗೆ ಇದನ್ನೇ ಶಿವಯೋಗಿಗಳ ಜೀವಿತಾವಧಿಯ ಕಾಲ ಎಂದು ಇಟ್ಟುಕೊಳ್ಳಬಹು ದೆಂದು ತೋರುತ್ತದೆ.

ಶಿವಯೋಗಿಗಳು ಪ್ರಸಿದ್ಧಿಗೆ ಬರುವುದಕ್ಕೆ ಮುನ್ನ ನಾಡಿನ ಆಗಿನ ಸಾಮಾಜಿಕ ಧಾರ್ಮಿಕ ಪರಿಸ್ಥಿತಿಗಳು ಹೇಗಿದ್ದಿರಬಹುದು? ಅದರ ಸ್ಥೂಲ ಚಿತ್ರವನ್ನು ಕಾಣಲು ಪ್ರಯತ್ನಿಸಬಹುದು. ದಕ್ಷಿಣ ಭಾರತದಲ್ಲಿ ಪ್ರಮುಖವಾಗಿ ಹಿಂದೂ ಧರ್ಮಕ್ಕೆ ಚ್ಯುತಿ ಯುಂಟಾಗುತ್ತಿದ್ದುದನ್ನು ಅರಿತುಕೊಂಡ ಚೋಳ, ಚೇರ, ಪಾಂಡ್ಯ, ಚಾಳುಕ್ಯ ಮುಂತಾದ ದಕ್ಷಿಣದ ರಾಜರು ಬಹಮನಿಯ ಪ್ರಭಾವವನ್ನು ತಡೆಯಲು ಒಟ್ಟಾಗಿ ಸೇರಿ ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಮಾಡಿದರು. ಆರಂಭದಿಂದಲೂ ಸತತವಾಗಿ ನಡೆ ಯುತ್ತಲೇ ಇದ್ದ ಮುಸ್ಲಿಮರ ದಾಳಿಗಳನ್ನು ತಡೆಯುತ್ತ, ಹಿಮ್ಮೆಟ್ಟಿಸುವುದರಲ್ಲಿಯೇ ತಮ್ಮ ರಾಜಕೀಯ ಬದುಕಿನ ಬಹು ಭಾಗವನ್ನು ಕಳೆದರೂ, ಕೆಲವು ರಾಜರು ಹೊರಗಿನ ಶತ್ರುಗಳನ್ನು ಧೈರ್ಯವಾಗಿ ಎದುರಿಸುತ್ತಲೇ ಆಂತರಿಕವಾಗಿ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸುಭದ್ರತೆಯನ್ನು ಒದಗಿಸಿ ಕೊಡುವಲ್ಲಿ ಯಶಸ್ವಿಯಾದರು. ಈ ರಾಜ ಪರಂಪರೆ ಯಲ್ಲಿ ಎರಡನೆಯ ದೇವರಾಯನ ಕಾಲ ವೀರಶೈವದ ಪುನರುಜ್ಜೀವನದ ದೃಷ್ಟಿಯಿಂದ

೧ ಸಂ. ಡಾ॥ ಬಿ. ನಂ. ಚಂದ್ರಯ್ಯ-೧೯೭೧

ಅತ್ಯಂತ ಗಮನಾರ್ಹವಾದ ಮಹತ್ವದ ಕಾಲ. ಎಲ್ಲರಿಗೂ ತಿಳಿದಿರುವಂತೆ ಸರ್ವಧರ್ಮ ಸಹಿಷ್ಣುಗಳಾದ ವಿಜಯನಗರ ಸಾಮ್ರಾಟರು ಎಲ್ಲ ಧರ್ಮಗಳ, ಧರ್ಮಗ್ರಂಥಗಳ ಬೆಳವಣಿಗೆಗೆ ಕಾರಣರಾದವರು. ಅವರ ಈ ಸಮನ್ವಯ ದೃಷ್ಟಿಯ ಫಲವಾಗಿ ಆಯಾ ಧರ್ಮದ ವಿದ್ವಾಂಸರು ತಮ್ಮ ತಮ್ಮ ಧರ್ಮ ಗ್ರಂಥಗಳನ್ನು ಸಂಗ್ರಹಿಸಿ,ಸಂಕಲಿಸಿ ವ್ಯಾಖ್ಯಾನಿಸಿದರು. ವೀರಶೈವ ಧರ್ಮದವರೂ ಅಷ್ಟು ಹೊತ್ತಿಗಾಗಲೇ ನೆಲೆ ನಿಂತಿದ್ದರೂ, ೧೨ನೇ ಶ. ದಲ್ಲಿ ಕ್ಷಿಪ್ರಕ್ರಾಂತಿಯ ಫಲವಾಗಿ ಚದುರಿ ಚೆಲ್ಲಾಪಿಲ್ಲಿಯಾಗಿದ್ದ ವಚನಗಳನ್ನು ಸಂಗ್ರಹಿಸಿ,ಸಂಕಲಿಸಿ, ಸಂಗೋಪನ ಮಾಡಿದ್ದಲ್ಲದೆ ಷಟ್ಸ್ಥಲ ಧರ್ಮಾನುಸಾರಿಯಾಗಿ ವಚನಗಳ ಸ್ಥಲ ವಿಭಾಗ ಮಾಡಿ ವೀರಶೈವ ಧರ್ಮದ ನೈಜರೂಪವನ್ನು ಕೊಡುವ ಕೆಲಸ ಮಾಡಿದರು. ರಾಜರು, ಮಂತ್ರಿಗಳು, ರಾಜಾಧಿಕಾರಿಗಳು ಈ ಮಣಿಹದಲ್ಲಿ ಆಸ್ಥೆ ಶ್ರದ್ಧೆ ವಹಿಸಿದ್ದಲ್ಲದೆ ಸ್ವಯಂ ಗ್ರಂಥ ರಚನೆ, ಸಂಕಲನ ಕಾರ್ಯ ಮಾಡಿದರು. ತತ್ಫಲವಾಗಿ ಏಕೋತ್ತರ ಶತಸ್ಥಲ, ಶೂನ್ಯಸಂಪಾದನೆಗಳಂಥ ಸಂಕಲನ ಗ್ರಂಥಗಳು ಹೊರಬಂದವು. ವೀರಶೈವಕ್ಕೆ ಭದ್ರವಾದ ಧಾರ್ಮಿಕ ಸ್ವರೂಪ ದೊರೆಯಿತು. ವಚನಗಳನ್ನು ಶಾಸ್ತ್ರಗಳೆಂದು, ಆಗಮಗಳೆಂದು, ಹಿಂದೆ ಕರೆದಿದ್ದರೂ, ಖಚಿತ ನೆಲೆಗಟ್ಟನ್ನು ರೂಪಿಸಿ ಅವಕ್ಕೆ ಧರ್ಮದಲ್ಲಿ, ಧರ್ಮ ಪ್ರವರ್ತನೆಯಲ್ಲಿ ಮಹತ್ವದ ಸ್ಥಾನ ಕೊಟ್ಟರು. ಆದರೆ ಎರಡನೇ ದೇವರಾಯನ ಮರಣಾನಂತರ ವಿಜಯನಗರ ಸಾಮ್ರಾಜ್ಯ ಪತನದ ಹಾದಿ ಹಿಡಿಯಿತು. ವೀರಶೈವ ಧರ್ಮದಲ್ಲೂ ಪತನದ ಹೆಜ್ಜೆ ಗುರುತು ಕಾಣತೊಡಗಿತು. ಧರ್ಮಕ್ಕೆ ಮತ್ತೊಮ್ಮೆ ಚ್ಯುತಿಯುಂಟಾಗುತ್ತಿದೆಯೇನೋ ಎಂಬಂತಿದ್ದ ಕಾಲದಲ್ಲಿ ಸಿದ್ಧಲಿಂಗರ ಉದಯವಾಗಿ ಹ್ರಾಸಲಾಗುತ್ತಿದ್ದ ಧರ್ಮ ಮತ್ತೆ ಭದ್ರವಾಗಿ ನಿಲ್ಲಲು ಅನುಕೂಲವಾಯಿತು. ಸಿದ್ಧಲಿಂಗರು ಏಳುನೂರೊಂದು ವಿರತರನ್ನು ಕೂಡಿಕೊಂಡು ನಾಡಿನುದ್ದಗಲಕ್ಕೂ ಸಂಚರಿಸಿ ಪುನಃ ಷಟ್ಸ್ಥಲೋದ್ಧಾರ ಮಾಡಿದರು.

'ಚನ್ನಬಸವೇಶ್ವರ ದೇವರ ಕರಕಮಲದಲ್ಲಿ ಉತ್ಪತ್ತಿಯಾದ ಶಿಶು ಸಿದ್ಧಲಿಂಗ ನಾನಯ್ಯ' ಎಂದು ಹೇಳಿಕೊಂಡಿರುವ ವಚನದ ಪ್ರಕಾರ ಅವರ ಗುರುಪರಂಪರೆ ಈ ರೀತಿ ಇದೆ: ಅನಾದಿ ಗಣೇಶ್ವರ, ಆದಿ ಗಣೇಶ್ವರ, ನಿರ್ಮಾಯ ಗಣೇಶ್ವರ, ನಿರಂಜನ ಗಣೇಶ್ವರ, ಜ್ಞಾನಾನಂದ ಗಣೇಶ್ವರ, ಆತ್ಮ ಗಣೇಶ್ವರ, ಅಧ್ಯಾತ್ಮ ಗಣೇಶ್ವರ, ರುದ್ರ ಗಣೇಶ್ವರ, ಬಸವಪ್ರಭು ದೇವರು, ಆದಿಲಿಂಗ ದೇವರು, ಚನ್ನವೀರೇಶ್ವರ ದೇವರು, ಹರಪನಹಳ್ಳಿಯ ಗೋಸಲೇಶ್ವರ ದೇವರು, ಶಂಕರ ದೇವರು, ದಿವ್ಯಲಿಂಗ ದೇವರು, ಚನ್ನಬಸವೇಶ್ವರ ದೇವರು ಮತ್ತು ತೋಂಟದ ಸಿದ್ಧಲಿಂಗ ಶಿವಯೋಗಿಗಳು, ಹೀಗೆ ಈ ಗುರು ಪರಂಪರೆಯಲ್ಲಿ ಶಿವಯೋಗಿಗಳು ಹದಿನಾರನೆಯವರಾಗಿ ಬರುತ್ತಾರೆ.

ಪ್ರೌಢದೇವರಾಯನಾದ ಮೇಲೆ ಸಿಂಹಾಸನಕ್ಕೆ ಯಾರು ಉತ್ತರಾಧಿಕಾರಿಯಾಗಬೇಕೆಂಬ ಯಾದವೀ ಕಲಹ ಆರಂಭವಾಗಿ ವಿರೂಪಾಕ್ಷರಾಯ ಪಟ್ಟಕ್ಕೇರುವುದಕ್ಕೆ ಮುನ್ನ ದೇಶದಲ್ಲಿ ಅನಾಯಕತ್ವ ಅರಾಜಕತ್ವ ತಲೆದೋರಿ ಅಶಾಂತಿ ನೆಲೆಸಿತ್ತು. ವೀರಶೈವಾಚಾರ

ವಡಗಿತ್ತು. ಇಂಥ ದುರ್ಭರ ಸನ್ನಿವೇಶದಲ್ಲಿ ದೇಶದಲ್ಲಿ ಶಾಂತಿ ನೆಲೆಸಿ ವೀರಶೈವಾಚಾರವನ್ನು ಉದ್ಧರಿಸಲು ಈಶನು:

"....ನಿರಂಜನ ಗಣೇಶನೊಡನೆ
ವರಗಣೇಶ್ವರರೇಳ್ನೂರ್ವರಂ ಕೂಡಿಕೊಂ
ಡಿರದೆ ಭೂಮಿಯೊಳುದಿಸಿ ಜಂಗಮಸ್ಥಲವಾಂತು
ಪರಮ ಪಟ್ಸ್ಥಲವನುದ್ಧರಿಸಲೆಂದು ಕಳುಹಲವರೊಡಗೂಡಿ
ಭೂಮಿಗಿಳಿದು ||೪೩||

*　　*　　*　　*

ಪರಮು ಗೋಸಲ ಚನ್ನಬಸವೇಶ್ವರನ
ಸರನೇರುಪದಿಂದಾ ನಿರಂಜನ ಗಣೇಶ್ವರಂ
ಹರುಷದಿಂದೊಗೆದು ಸಿದ್ಧೇಶನಾಮವನಾಂತು....' ||೪೪|| ಮರೆಯುತ್ತಾರೆ.

ಹೀಗೆ ಬಂದ ಶಿಶು ಎಂಟು ವರ್ಷದ ಬಾಲಕನಾಗಿಯೇ ನೇರವಾಗಿ ವಾಣಿಜ್ಯಪುರಿ ಅಥವಾ ಹರಪನಹಳ್ಳಿಗೆ ಬಂದು ಅಲ್ಲಿದ್ದ ಗುರುಸಾರ್ವಭೌಮನೆನಿಸಿದ್ದ ಚನ್ನಬಸವಯತಿವರರ ಅಡಿಗೆರಗಿ ಕೈ ಮುಗಿದು ತನಗೆ ಶಿವ ದೀಕ್ಷೆಯನ್ನು ಕರುಣಿಸಬೇಕೆಂದು ಬೇಡುತ್ತಾರೆ. ಪರಮಪರಂಜ್ಯೋತಿ ಸ್ವರೂಪಿಯಾದ ನಿನಗೆ ನಾನು, ದೀಕ್ಷೆ ಕೊಡಲಾರೆನೆಂದಾಗ, ನಾನು ನಿಮ್ಮ ಶಿಶುವೆಂದು ತಿಳಿದು ನೋಡಿ ನನಗೆ ಶಿವದೀಕ್ಷೆ ಕೊಡಬೇಕೆಂದು ಬೇಡಲು ಶಿವದೀಕ್ಷೆ ನೀಡಿದರೆಂದೇ ಇವರ ಬಗ್ಗೆ ಕಾವ್ಯ ಬರೆದ ವೀರಶೈವ ಕವಿಗಳೆಲ್ಲ ಹೇಳುತ್ತಾರೆ. ಪರಂಪರೆಯಂತೆ ಇವರಾರೂ ಶಿವಯೋಗಿಗಳ ತಂದೆ-ತಾಯಿಗಳ ಹೆಸರನ್ನಾಗಲಿ, ಅವರ ಪೂರ್ವಾಶ್ರಮದ ಯಾವುದೇ ಘಟನೆಯನ್ನಾಗಲೀ ತಿಳಿಸಿಲ್ಲ. ಆದರೆ ಬ್ರಾಹ್ಮಣ ಕವಿಯಾದ ಹೇರಂಬ ಮಾತ್ರ ತನ್ನ 'ಸಿದ್ಧಲಿಂಗೇಶ್ವರ ಸಾಂಗತ್ಯ' ಗ್ರಂಥದಲ್ಲಿ ಶಿವಯೋಗಿಗಳ ತಂದೆ-ತಾಯಿಗಳ ಹೆಸರನ್ನು ಬಾಲ್ಯ ಜೀವನವನ್ನು ವಿಸ್ತಾರವಾಗಿಯೇ ವರ್ಣಿಸಿದ್ದಾನೆ. "ಹರಪನಹಳ್ಳಿಯಲ್ಲಿ ವಾಸವಾಗಿದ್ದ ಮಲ್ಲಿಕಾರ್ಜುನ ಮತ್ತು ಜ್ಞಾನಾಂಬೆ ದಂಪತಿಗಳು ಪುತ್ರಸಂತಾನಾಪೇಕ್ಷಿಗಳಾಗಿ ಗುರುಗಳಾದ ಚನ್ನಬಸವ ದೇವರಲ್ಲಿಗೆ ಬಂದು ತಮ್ಮ ಅಪೇಕ್ಷೆಯನ್ನು ಗುರುಗಳಲ್ಲಿ ನಿವೇದಿಸಿಕೊಳ್ಳಲು, ಅವರಿತ್ತ ಪ್ರಸಾದ ಮಹಿಮೆಯಿಂದ ಗಂಡು ಮಗುವನ್ನು ಪಡೆಯುತ್ತಾರೆ. ಆ ಮಗುವಿನ ಅಸಾಧಾರಣ ವರ್ಚಸ್ಸನ್ನು ಕಂಡ ತಂದೆ-ತಾಯಿಗಳು ಅವನಿಗೆ ಸಿದ್ಧಲಿಂಗನೆಂದು ನಾಮಕರಣ ಮಾಡುತ್ತಾರೆ. ಕೆಲಕಾಲ ಕಳೆದ ಮೇಲೆ ಆತನನ್ನು ಶಾಲೆಗೆ ಕಳುಹಿಸಿದಾಗ ಶಿವಧ್ಯಾನಾಸಕ್ತನಾದ ಈ ಬಾಲಕ ಓದು-ಬರಹದಲ್ಲಿ ಆಸಕ್ತಿ ತೋರದೆ ಸಂಸಾರದ ಅನಿತ್ಯತೆ ಹಾಗೂ ಅಧ್ಯಾತ್ಮ ಜೀವನದ ಸಾರವನ್ನು ತನ್ನ ಸಂಗಾತಿಗಳಿಗೆ ಬೋಧಿಸುತ್ತಾನೆ. ಇದನ್ನು ಕಂಡ ಶಾಲೆಯ ಉಪಾಧ್ಯಾಯರು ಇವನಿಂದ ಶಾಲೆಯ ಇತರ ಹುಡುಗರೂ ಕೆಟ್ಟು ಹೋಗುವರೆಂದು ಭಾವಿಸಿ ಅವನನ್ನು ಅವನ ತಂದೆ-ತಾಯಿ

ಗಳಿಗೆ ಒಪ್ಪಿಸುತ್ತಾರೆ. ಅವರು ತಮ್ಮ ಮಗುವಿನಲ್ಲಿದ್ದ ಅಸದೃಶ ಶಕ್ತಿಯನ್ನು ಕಂಡು, ಗುರುತಿಸಿ ತಮ್ಮ ಮಗುವನ್ನು ಗುರು ಗೋಸಲ ಚನ್ನಬಸವೇಶ್ವರರ ಸನ್ನಿಧಿಯಲ್ಲಿ ಒಪ್ಪಿಸಿ ಬಿಡುತ್ತಾರೆ." ಹೀಗೆ ಹೇರಂಬನಿಂದ ಶಿವಯೋಗಿಗಳ ಬಾಲ್ಯದ ಅನೇಕ ಅಂಶಗಳು ತಿಳಿಯುತ್ತವೆ.

ಒಟ್ಟಿನಲ್ಲಿ ಶಿಶು ಸಿದ್ಧಲಿಂಗನಿಗೆ ಗುರು ಗೋಸಲ ಚನ್ನ ಬಸವೇಶ್ವರರಿಂದ ಶಿವದೀಕ್ಷೆ ಮಂತ್ರೋಪದೇಶಗಳಾಗುತ್ತವೆ. "ಗುರು ಚನ್ನಬಸವೇಶ್ವರರು ಮಂತ್ರ ವಿಧಾನದೊಡನೆ ಶಿಷ್ಯನಂ ಸ್ವೀಕರಿಸಿ....ಸಮ ಗದ್ದುಗೆಯೊಳ್ ಮೂರ್ತಿಗೊಳಿಸಿ, ಶುದ್ಧ ಸಿದ್ಧ ಪ್ರಸಾದಾವ ದಾನತ್ರಯವು ನೀನೆಯೆಂದು ಸೂಚಿಸುವಂತೆ ಸಿದ್ಧಲಿಂಗನೆಂಬ ಪೆಸರಿಂ ಕರೆದು....ಚನ್ನ ಬಸವೇಶ್ವರಂ ತನ್ನ ಹಸ್ತ ಸರಸಿಜ ಸಂಜಾತನಾದ ನಿರ್ಮಳ ಶಿಶುವಿಂಗೆ ಪರಮ ಶಾಂತಿ ಯೆಂಬುದಕದಿಂ ಮಜ್ಜನಕೆರೆದು ಚಿದ್ಭಸಿತಮಂ ಪಣೆಗಿಟ್ಟು ಏಕೋಭಾವವೆಂಬ ಏಕಮುಖ ರುದ್ರಾಕ್ಷಿಯಂ ಕೊರಲೊಳ್ಳಟ್ಟಿ ಶಿವತತ್ತ್ವವನರಿವರಿವಿನ ಲಿಂಗಮಂ ಕಟ್ಟಿ ಪರಮಜ್ಞಾನಮೆಂಬ ಬಾಯಿಲೆಣ್ಣೆ ಮನಿಕ್ಕೆ ದ್ವೈತಾದ್ವೈತಾಗಮಗಳೆಂಬ ಜನರ ದೃಷ್ಟಿ ನೆಡದಂತೆ ಶಿವಾದ್ವೈತ ವೆಂಬ ತಿಲಕವನ್ನಿಟ್ಟು ಸದ್ಭಕ್ತಿಯೆಂಬ ಮೊಲೆಲಾಲಂ ಕೊಟ್ಟು ಮಹಾಜ್ಞಾನವೆಂಬ ತೊಟ್ಟಿ ಲೊಳ್ಮಲಗಿಸಿ ಚಿನ್ನಾದವೆಂಬ ಜೋಗುಳೆಯಂ ಪಾಡಿ ಪರಬ್ರಹ್ಮದ ಶಿಶುವಂ ಸಲಹುವಂತೆ ಸಲಹುತಿರ್ದ ಶಿಶುವಿಂಗೆ ನವವಿಧ ಭಕ್ತಿಗಳ್ ಬಲಿದು ನವ ವರ್ಷಂಗಳಾಗೆ ಮತ್ತಂ ವೇದ ಶಾಸ್ತ್ರಾಗಮೋಪ ನಿಷತ್ಪುರಾಣಂಗಳೆಲ್ಲಂ ಜಿಹ್ವಾಗ್ರದೊಳ್ನೆಲಸಿರುತ್ತ ಸಿದ್ಧೇಶ್ವರಂ...." ದೀಕ್ಷೆಯಂ ಪಡೆದು ಅನನ್ಯ ಭಕ್ತಿಯಿಂದ ಗುರುಗಳ ಸೇವೆ ಮಾಡುತ್ತಾರೆ.

ತಮ್ಮದೇ ಆದ ರೀತಿಯಲ್ಲಿ ತಮ್ಮ ಅನನ್ಯ ಭಕ್ತಿಯನ್ನು ಗುರುಗಳಲ್ಲಿ ಸಮರ್ಪಿಸುತ್ತ ಹೊತ್ತಾರೆ ಎದ್ದೂ ಪರಬ್ರಹ್ಮಜ್ಞಾನಿಯೆನಿಸಿದ ಸಿದ್ಧಲಿಂಗ ಯತಿವರರು ಪುಷ್ಪಗಳನ್ನು ತಿರಿದು ತಂದು, ಗುರುವಿನಡಿಯಲ್ಲಿ ಮಾಲೆಗಳನ್ನು ಮಾಡಿ, ಅಸಂಖ್ಯಾತ ಶರಣರಂತೆ ಅಷ್ಟಾವಿಧ ಪೂಜೆ ಮಾಡುತ್ತ ಮಾಡುತ್ತಾ ಇರುವಾಗಲೇ ದೀಪಕ್ಕೆ ಎಣ್ಣೆ ಇಲ್ಲದಂತಾದರೆ ನೀರನ್ನೇ ಎರೆದು ದೀಪ ಉರಿಸುತ್ತ ಶಿವಪೂಜೆ ಮಾಡುತ್ತಾರೆ. ಇಂಥ ಕಾರಣಿಕ ಶಿಶು ತಂದು ನೀಡಿದ ನೈವೇದ್ಯವನ್ನೆಲ್ಲ ಕಲ್ಲಬಸವ ಸೇವಿಸುತ್ತದೆ. ಈ ರೀತಿ ಅಘಟನ ಘಟನಾ ಸಾಮರ್ಥ್ಯಗಳನ್ನು ಪಡೆದ ಶಿವಯೋಗಿಗಳ ದಿವ್ಯ ತೇಜಸ್ಸಿನಿಂದ ಪ್ರಭಾವಿತರಾಗಿ ಅವರ ಲ್ಲಿದ್ದ ಚಿತ್ಕಲೆಯನ್ನು ಗುರುತಿಸಿದ ಗುರುಗಳು ಈತನಿಗೆ ತನ್ನ ಚರಪಟ್ಟಾಧಿಕಾರವನ್ನು ವಹಿಸಿಕೊಡಬೇಕೆಂದೂ, ಮುಂದೆ ಇವನಿಂದ ಷಟ್ಸ್ಥಲೋದ್ಧಾರವಾಗಿ ಅದು ಲೋಕದಲ್ಲಿ ನೆಲೆನಿಲ್ಲಬೇಕಾಗಿರುವುದರಿಂದ ಈತನನ್ನು ದೇಶಾಂತರಕ್ಕೆ ಕಳುಹಿಸಬೇಕೆಂದೂ ಮನಸ್ಸಿನಲ್ಲಿ ನಿಶ್ಚೈಸಿ, ಸಿದ್ಧಲಿಂಗ ಯತಿಗಳನ್ನು ಅತ್ಯಂತ ಅಕ್ಕರೆಯಿಂದ ತಮ್ಮ ಬಳಿಗೆ ಕರೆದು, ತಮ್ಮ ಚರಪಟ್ಟಾಧಿಕಾರವನ್ನು ಅವರಿಗೆ ವಹಿಸಿಕೊಡುತ್ತಾರೆ. ಆಗ ಶಿವಯೋಗಿಗಳು ಆ ಪಟ್ಟ ವನ್ನು ಗುರುಗಳಲ್ಲಿಯೇ ಬಿಟ್ಟು ಮಹಾ ಶಿಷ್ಯನಂತೆ ನಡೆದುಕೊಂಡು, ನನ್ನನ್ನು ನೆನೆಸಿ ಕೊಂಡಾಗ ನಿಮಗೆ ಕಾಣಿಸಿಕೊಳ್ಳುವೆನೆಂದು ತಂದೆ-ತಾಯಿಗಳಿಗೆ ಹೇಳಿ, ಷಟ್ಸ್ಥಲವನುಂಟು

ಮಾಡಲೆಂದು ಶಿವನಿಂ ಕಳುಹಿಸಿಕೊಂಬ ರೇಣುಕ ಗಣೇಶ್ವರನಂತೆ, ಬಸವಾದಿ ಪ್ರಮಥರಂ ಬೋಧಿಸಲೆಂದು ಹರನಿಂ ಕಳುಹಿಸಿಕೊಂಬ ಅಲ್ಲಮ ಪ್ರಭುವಿನಂತೆ, ಶ್ರೀ ಗುರುವಿನ ಪಾದ ಕಮಲಗಳಿಗೆ ನಮಸ್ಕಾರ ಮಾಡಿ ಸಮಸ್ತ ಜಂಗಮ ದೇವರ್ಸಹಂ ದೇಶಾಟನೆಗೆ ಹೊರಡುತ್ತಾರೆ. ಆಗ ಅವರ ಜೊತೆಯಲ್ಲಿ ಘನ ಮಹಿಮಾ ಶಾಲಿಗಳೂ, ಶರಣಕುಲದೀಪಕರು ಎಂದು ಖ್ಯಾತನಾಮರಾದ ಘನಲಿಂಗದೇವರು, ಶಾಂತ ಮಲ್ಲಿಕಾರ್ಜುನ, ಬತ್ತಲೇಶ, ರಾಜವಟ್ಟದೇವರು, ಚನ್ನದೇವರು ದೊಡ್ಡ ಸಿದ್ಧಲಿಂಗೇಶ್ವರ, ಕರಕಣದೇವರು, ಲಂಬಕರ್ಣ ದೇವರು, ಸಿದ್ಧಮಲ್ಲೇಶ್ವರ, ಗುಮ್ಮಟಾಪುರದ ವರ ಸಿದ್ಧಲಿಂಗೇಶ್ವರ, ಎಡತೊರೆಯ ಪುರದ ಗುರುಸಿದ್ಧವೀರಣ್ಣೊಡೆಯರು, ಶಿವಘನಲಿಂಗ ದೇವರು, ಚಿಕ್ಕ ಮಲ್ಲೇಶ್ವರರು, ಮರುಳ ಸಿದ್ಧೇಶ್ವರ, ಚಂದ್ರಶೇಖರರು, ಶಿವ ಸುರಗಿಯಾರ್ಯ, ಬೆಡಗಿನ ಪರ್ವತೇಶ್ವರ, ಪಟ್ಟಣದ ದೇವರು, ಜಗುನಿಯ ಮರುಳು ದೇವರು, ಸತ್ರಿಮಾರ್ಯ, ಮಳೆಯ ದೇವರು, ಉಪ್ಪಿನ ಹಳ್ಳಿಮಾರ್ಯ, ಜೋಲಿಯಾ ಬಸವೇಶ್ವರ, ರಾಜವಟ್ಟಿಯ ಕೆಳದಿಯ ಸಿದ್ಧ ಬಸವೇಶ್ವರ, ಹಿರಣ್ಯಾರ್ಯ, ಶೀಲವಂತಾರ್ಯ, ಕೊಡಗಿಯ ಹಳ್ಳಿಮಾರ್ಯ, ಕಿತ್ತಾವರದ ಚನ್ನ ಮಲ್ಲೇಶ್ವರ, ಘಟ್ಟ ಸಿದ್ಧಯ್ಯ, ಚಿಟ್ಟಿಗ ಮಲೇಶ್ವರ, ಕಟ್ಟೆಯ ಪುರದ ನಂಜದೇವ, ಸುಚ್ಚು ಪರ್ವತದೇವ, ದೊಡ್ಡ ಸಿದ್ಧಯ್ಯ, ರೇವಣಸಿದ್ಧದೇವರು ಮುಂತಾದ ಶರಣರಾದಿಯಾಗಿ ಏಳುನೂರು ವಿರತರನ್ನು ಅಲ್ಲಲ್ಲಿ ಕೂಡಿಕೊಂಡು:

ಅಲ್ಲಲ್ಲಿ ನಾನಾಪವಾಡಮಂ ಮೆರೆವುತಿರ
ಲಲ್ಲಲ್ಲಿ ಗಣನಾಥರುದಿಸಿ ಚರರೂಪಿನಿಂ
ದಲ್ಲಲ್ಲಿ ಪೂಜೆಗೊಳುತ್ತೈದಿ ತೋಂಟದಯತಿಯ ಸಾರಲತಿ ಪ್ರೀತಿಯಿಂದೆ ||
ಮೆಲ್ಲ ಮೆಲ್ಲನೆ ತೋಂಟದಾರ್ಯರಾ ವಿರತರೊಳ್
ಬಲ್ಲಬಲ್ಲರೊಳು ತತ್ವಾನುಭಾವಂಗಳಿಂ
ಸೊಲ್ಲು ಸೊಲ್ಲಿಗೆ ಪರಮ ಷಟ್ಸ್ಥಲವನುಸುರುತ್ತ....

ತಮ್ಮ ಇಹಲೋಕದ ಮಣಹವನ್ನು ಪ್ರಾರಂಭಿಸಿದ ಯತಿವರರು ದಕ್ಷಿಣಕ್ಕೆ ನಡೆದು ಕಂಚಿ, ಕಾಳಹಸ್ತ, ಚಿದಂಬರಗಳನ್ನು ಸಂದರ್ಶಿಸಿ ಅರುಣಾಚಲಕ್ಕೆ ಬಂದು ಅರುಣಾಚಲೇಶ್ವರನನ್ನು ಪೂಜಿಸಿದಾಗ ಆತ ಪ್ರತ್ಯಕ್ಷನಾಗಿ ತನ್ನ ಕೊರಳಲ್ಲಿದ್ದ ಪಂಚತಾವಡವೆಂಬ ರತ್ನಾಹಾರವನ್ನು ಸಿದ್ಧಲಿಂಗೇಶ್ವರರ ಕೊರಳಿಗೆ ಹಾಕುತ್ತಾನೆ. ಹೊತ್ತಾರೆ ಪೂಜೆಗೆಂದು ಬಂದ ಅರ್ಚಕರು ಇದನ್ನು ಕಂಡು ರಾಜನಲ್ಲಿ ದೂರು ಹೇಳಿದಾಗ ಯತಿವರರು ಅದನ್ನು ಹಿಂತಿರುಗಿಸಿ ಮತ್ತೆ ಅರುಣಾಚಲೇಶ್ವರನಿಂದಲೇ ಅವರೆಲ್ಲರೆದುರಿಗೆ ಪಡೆದು ರಾಜನಾದಿಯಾಗಿ ಎಲ್ಲರನ್ನು ಪರಿವರ್ತಿಸುತ್ತಾರೆ. ಅಲ್ಲಿಂದ ಗೋದಾವರಿ ತೀರಕ್ಕೆ ಬಂದು ಅಲ್ಲಿನ ದ್ವಿಜನಿಗೆ ಪ್ರಸಾದದ ಮಹತ್ವವನ್ನು ಪ್ರತ್ಯಕ್ಷ ತ್ರಿಯಂಬಕೇಶ್ವರನಿಂದಲೇ ಹೇಳಿಸುತ್ತಾರೆ. ಅಲ್ಲಿಯೇ ಹಸನಾಗಿದ್ದ ಪುರುಷ್ಕಾ ರಾಜನಿಗೆ ಪ್ರಾಣದಾನ ಮಾಡುತ್ತಾರೆ.

ಸಹ್ಯಾದ್ರಿಗೆ ಬಂದು ಮಹಾಬಲೇಶ್ವರ ಲಿಂಗದ ಮೇಲ್ಭಾಗದಿಂದ ಹರಿದು ಬರುತಿದ್ದ ಕೃಷ್ಣವೇಣಿಯನ್ನು ಕಂಡು ಆ ಲಿಂಗದ ನೆತ್ತಿಯ ಮೇಲೆಯೇ ಕಾಲು ತೊಳೆದು, ಆ ಪಾದೋದಕದಿಂದ ಶಿವಾರ್ಚನೆ ಮಾಡುವುದನ್ನು ಕಂಡು ರೇಗಿದ ಅರ್ಚಕರು ಲಿಂಗಶುದ್ಧಿ ಮಾಡಲು ಹೊರಟಾಗ ಬರುತ್ತಿದ್ದ ನೀರೇ ಬತ್ತಿ ಹೋಗಲು, ಪುನಃ ಲಿಂಗದ ಆಜ್ಞೆಯ ಮೇರೆಗೆ ಸಿದ್ಧಲಿಂಗ ಶಿವಯೋಗಿಗಳನ್ನು ಪ್ರಾರ್ಥಿಸಿ ನೀರನ್ನು ಪಡೆಯುತ್ತಾರೆ. ಅನಂತರ ಓಜೇಶ್ವರದಲ್ಲಿ ಉತ್ತುಂಗಯೋಗಿಯ ಗರ್ವವನ್ನು ಕಳೆದು, ಉಳುವೆಯಲ್ಲಿ ಶರಣರು ಬಯಲಾದ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ಜನಾರ್ದಜೀಯನ ಮದವನ್ನು ಇಳಿಸಿ, ತುಳುವ ದೇಶಕ್ಕೆ ಹೋಗಿ ಕಾರ್ಕಳದಲ್ಲಿ ಜೈನರಿಗೆ ಸನ್ಮತಿಯನ್ನು ಕರುಣಿಸಿ, ಕಾವೇರಿಗೆ ಬಂದು ಲಿಂಗಾರ್ಚನೆ ಮಾಡಿ, ದಾರಿಬಿಟ್ಟ ಕಾವೇರಿಯನ್ನು ದಾಟಿ ಮಾರ್ಗಮಧ್ಯದಲ್ಲಿ ಅನೇಕ ಪವಾಡಗಳನ್ನು ಮೆರೆಯುತ್ತ ರಾಮೇಶ್ವರಕ್ಕೆ ಬರುತ್ತಾರೆ. ಅಲ್ಲಿ ಲಿಂಗವನ್ನು ಪೂಜಿಸಿ, ತನ್ನ ಶಿಷ್ಯರಿಗೆ ರಾಮಲಿಂಗ, ಹನುಮಲಿಂಗಗಳ ಪೂರ್ವಕತೆಗಳನ್ನು ಹೇಳಿ, ಕೀಳು ಮಲೆಯಾಳಕ್ಕೆ ಬಂದು ಅಲ್ಲಿನ ರಾಣಿಗೂ, ಹೆಂಗಸರಿಗೂ ಬುದ್ಧಿಕಲಿಸಿ, ಅವರಿಗೆ ಶಿವಭಕ್ತಿಯ ಮಾರ್ಗವನ್ನು ಬೋಧಿಸಿ, ಕೊಡಗು ಕೊಂಕಣ ದೇಶಗಳ ಮೂಲಕ ಉಡುಪಿಗೆ ಬಂದು ಅಲ್ಲಿ ಕೃಷ್ಣ, ಶಂಕರನಾರಾಯಣ, ಕೊಲ್ಲೂರ ಮೂಕಾಂಬಿಕೆ ಮುಂತಾದ ಪುಣ್ಯಕ್ಷೇತ್ರ ದರ್ಶನ ಮಾಡಿ, ಪ್ರಜೆಗಳಿಗೆ ಕಂಟಕಪ್ರಾಯನಾಗಿದ್ದ ಇರುಲನೆಂಬ ವ್ಯಾಧನನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿ ಪರಶುರಾಮ ಕ್ಷೇತ್ರಕ್ಕೆ ಬರುತ್ತಾರೆ. ಅಲ್ಲಿ ಶಿವಭಕ್ತನ ಭಕ್ತಿಯನ್ನು ಸ್ವೀಕರಿಸಿ, ಅವನ ಮನೆಗೆ ಚಾರ್ವಾಕರಿಟ್ಟ ಬೆಂಕಿ ಮನೆಸುಟ್ಟರೂ ಅವನನ್ನು ಸುಡದಂತಿರಿಸಿ, ಚಾರ್ವಾಕರಿಗೆ ಬುದ್ಧಿಕಲಿಸಿ, ಅವರಿಗೆ ಶಿವಾಚಾರ ಮಾರ್ಗವನ್ನು ಬೋಧಿಸುತ್ತಾರೆ.

ದಕ್ಷಿಣದ ಸಂಚಾರ ಮುಗಿಸಿ ಉತ್ತರಾಭಿಮುಖವಾಗಿ ಹೊರಟು ಮಾರ್ಗಮಧ್ಯದಲ್ಲಿ ಅನೇಕ ಪವಾಡಗಳನ್ನು ಮೆರೆಯುತ್ತ ಕಾಶಿಗೆ ಬಂದು, ಅಲ್ಲಿ ಹರಿಶ್ಚಂದ್ರರಾಯನಿದ್ದ ಸ್ಥಳವನ್ನು ಸಂದರ್ಶಿಸಿ, ಹಿಮಾಲಯಕ್ಕೆ ಬರುತ್ತಾರೆ. ಅಲ್ಲಿ ಕೇದಾರೇಶ್ವರನ ಅವತಾರ, ಗೌರಿಯ ಜನನ, ದಕ್ಷಯಾಗ ಧ್ವಂಸಗಳ ಕತೆಗಳನ್ನು ತಮ್ಮ ಶಿಷ್ಯರಿಗೆ ಹೇಳುತ್ತಿರುವಾಗ ಗೊಲ್ಲನೊಬ್ಬನ ಧ್ವನಿಕೇಳಿ, ಅಲ್ಲಿಗೆ ಧಾವಿಸಿ, ಹುಲಿ ಹಿಡಿದಿದ್ದ ಹಸುವನ್ನು ರಕ್ಷಿಸಿ, ಗೊಲ್ಲನ ದೊಡ್ಡಿಗೆ ಹೋಗಿ, ಅವನ ಭಕ್ತಿಗೆ ಮೆಚ್ಚಿ, ಅವನ ಗೋವುಗಳನ್ನು ಕಾದು, ಮತ್ತೆ ತನ್ನವರನ್ನು ಕೂಡಿಕೊಂಡು ವಿದ್ಯಾನಗರಕ್ಕೆ ಬಂದು ಸೋಮವಾರದ ಬಸವಮ್ಮ ನೆಂಬ ಶಿವಶರಣೆಯ ಸತ್ಕಾರ ಸ್ವೀಕರಿಸಿ, ಗಂಗೆಗಿಂತ ಜಂಗಮ ಪಾದೋದಕವೇ ಶ್ರೇಷ್ಠ ಎಂಬುದನ್ನು ಸಿದ್ಧಪಡಿಸುತ್ತಾರೆ.

ಅಲ್ಲಿಂದ ಸ್ವದೇಶಾಭಿಮುಖವಾಗಿ ಪ್ರಯಾಣ ಮಾಡುತ್ತಿರುವಾಗ ಆಂಧ್ರದೇಶಕ್ಕೆ ಬಂದು ಅಲ್ಲಿನ ನೀರುಗಂಟಿಗೆ ಸಹಾಯಮಾಡಿ, ಪಂಪಾವಿರೂಪಾಕ್ಷನ ದರ್ಶನ ಪಡೆದು ವಿರೂಪಾಕ್ಷ ಜಂಗಮನಿಗೆ ಉಪದೇಶವಿತ್ತು, ಕಣಿಯ ಕಲ್ಲೂರ ಭೂಪನ ಅಹಂಕಾರವನ್ನು

ಕಳೆದು ಗೂಳೂರು ಮಠಕ್ಕೆ ಬಂದಾಗ ಅವರಲ್ಲಿದ್ದ ಶಿಷ್ಯನೊಬ್ಬ 'ನಮ್ಮ ಸಿದ್ಧಲಿಂಗೇಶ್ವರರಿಗೆ ಸಮನಾದ ಜಂಗಮರು ಬೇರೊಬ್ಬರಿಲ್ಲ' ಎಂದು ಸಾರಲು ಅವನ ನಾಲಿಗೆಯೇ ಬಿದ್ದುಹೋಯಿತು. ಶಿವಭಕ್ತರಾದವರೆಲ್ಲರೂ ಒಂದೇ, ಅವರಲ್ಲಿ ಮೇಲು–ಕೀಳನ್ನೆಣಿಸಬಾರದೆಂದು ಬುದ್ಧಿಕಲಿಸಿ, ಅವನಿಗೆ ಮರಳಿ ನಾಲಗೆ ಕೊಡುತ್ತಾರೆ. ಕೇತ್ಸಮುದ್ರಕ್ಕೆ ಬಂದು ಆ ಗ್ರಾಮದ ಬಳಿಯಿದ್ದ ಅರೆಕಲ್ಲು ಬಂಡೆಯಲ್ಲಿ ತಮ್ಮ ಪಾದ ಒತ್ತಿ ಗಂಗೆಯನ್ನು ಬರಿಸಿ, ದ್ರಾವಿಡ ದೇಶದಿಂದ ಬಂದ ವೀರಣ್ಣಾರ್ಯನ ವಿಷವ್ಯಾಧಿಯನ್ನು ಆ ಸಿದ್ಧಗಂಗೆಯಲ್ಲಿ ಮಿಂಯಿಸಿ ಕಳೆದು ಅವನಿಗೆ ಕನ್ನಡ ಭಾಷೆ ಕಲಿಸುತ್ತಾರೆ.

ಅನಂತರ ಕನ್ನಡ ನಾಡಿಗೆ ಬಂದು ಶರಣ ಮುಂಬರವೆನಿಸದ ಕನ್ನಡಿಗರ ಕಾಶಿಯಾದ ಕಲ್ಯಾಣದ ಬಸವೇಶ್ವರ ದೇವಾಲಯದಲ್ಲಿ ತಂಗಿದ್ದಾಗ, ಅಲ್ಲಿ ದೊಡ್ಡದೊಂದು ಜಾತ್ರೆಯೇ ನೆರೆದು ವೃಷಭಾಲಯದಲ್ಲಿ ಪೂಜೆ ನಡೆಯುತ್ತದೆ. ಅಲ್ಲಿ ಶಿಲಾ ವೃಷಭನು ಕನ್ನೆಯು ತಾದಿಟ್ಟ ತುಪ್ಪವನ್ನು ಸವಿಯುವಂತೆ ಮಾಡಿ, ತುಮಕೂರಿಗೆ ಬಂದು ತುಂಬೆ ಹೂವಿನ ಮಳೆಗರೆಯುವಂತೆ ಮಾಡುತ್ತಾರೆ. ದೇವರಾಯನ ದುರ್ಗ, ಚೆನ್ನರಾಯಪಟ್ಟಣ, ಗೂಳೂರು ಮೊದಲಾದ ಸ್ಥಳಗಳಲ್ಲಿ ಒಂದೇ ರಾತ್ರಿ ದರ್ಶನವಿತ್ತು, ಹಾಗಲವಾಡಿಯ ಮುದಿಯ ಭೂಪಾಲನನ್ನು ಅನುಗ್ರಹಿಸಿ, ಕುಣಿಗಲಿನಲ್ಲಿ ಕುಹಕಿಯಾದ ಲಿಂಗಣ್ಣೊಡೆಯನು ಕೊಟ್ಟ ಸಾವಿರ ಎಳನೀರುಗಳನ್ನು ಭೂತಗಳಿಗೆ ಕುಡಿಸಿ, ಹುಲಿಯೂರು ದುರ್ಗಕ್ಕೆ ಬಂದು ಅಲ್ಲಿದ್ದ ಮಾಹೇಶ್ವರ ಜ್ವರವನ್ನು ಹೋಗಲಾಡಿಸಿ, ಅಲ್ಲಿಯೂ ಸಿದ್ಧಗಂಗೆಯನ್ನು ಬರಿಸಿ, ವಿಧವೆಯೊಬ್ಬಳಿಗೆ ಮಾಂಗಲ್ಯಭಾಗ್ಯವನ್ನು ಕರುಣಿಸಿ, ಅಲ್ಲಿನ ಜೈನರಿಗೆ ಬುದ್ಧಿಕಲಿಸಿ, ಹೊಳಲುಗುಂದದ ಮಾಯಾದೇವಿಯ ಮಂದಿರದಲ್ಲಿ ದೇವಿಯಿಂದ ಭಿಕ್ಷೆ ಪಡೆಯುತ್ತಾರೆ. ಮತ್ತೆ ಹರಪನಹಳ್ಳಿಗೆ ಬಂದು, ತಂದೆ–ತಾಯಿಗಳಿಗೆ ದರ್ಶನವಿತ್ತು, ಗುರುಗಳ ಸನ್ನಿಧಿಗೆ ಬಂದು ನಮಸ್ಕರಿಸಲು ಗುರುಗಳು ಆನಂದಪರವಶರಾಗಿ, ಸಿದ್ಧಲಿಂಗೇಶ್ವರರ ಸ್ಫೂರ್ತಿಪ್ರಭೆ ಪೃಥ್ವಿಯಲ್ಲಿ ಶಾಶ್ವತವಾಗಿ ಪಸರಿಸುತ್ತಿರಲೆಂದು ಆಶೀರ್ವಾದ ಮಾಡುತ್ತಾರೆ. ಹುಟ್ಟೂರಲ್ಲಿ ಕೆಲದಿನ ತಂಗಿದ್ದು ಮತ್ತೆ ದೇಶ ಸಂಚಾರ ಹೊರಟು, ಸಿದ್ಧಗಂಗೆಗೆ ಬಂದು, ಅಲ್ಲಿ ಕಲ್ಲಿನಲ್ಲಿ ಗಂಗೆಯನ್ನು ಬರಿಸಿ, ಆ ಕ್ಷೇತ್ರಕ್ಕೆ ಸಿದ್ಧಗಂಗೆ ಎಂದು ಹೆಸರಿಟ್ಟು, ಬಂಡಿಹಳ್ಳಿಗೆ ಬಂದು ಪ್ರಜಾಪೀಡಕವಾಗಿದ್ದ ಘೋರ ಸರ್ಪವನ್ನು ಪಾತಾಳಕ್ಕೆ ಹೋಗುವಂತೆ ಹೇಳಿಕಳುಹಿಸಿ ತಾವು ಕಗ್ಗೆರೆಗೆ ಬರುತ್ತಾರೆ.

ಕಗ್ಗೆರೆಯ ಸಮೀಪದ ಉಪವನದಲ್ಲಿ ಶಿವಯೋಗಿಗಳು ಬರುತ್ತಿರುವಾಗ ಆಲೂರ ಭಕ್ತರಾದ ನಂಬಣ್ಣ ಮತ್ತು ಪಟೇಲ ಗಿರಿಗೌಡರು ಅವರನ್ನು ಕಂಡು ತಾವು ನಮ್ಮೂರಿಗೆ ದಯಮಾಡಿಸಿ ಪೂಜೆ ಸ್ವೀಕರಿಸಬೇಕೆಂದು ಬಿನ್ನವಿಸಿಕೊಂಡಾಗ, ಮುಂದಾಗುವುದನ್ನು ಅರಿತಿದ್ದ ಸಿದ್ಧಲಿಂಗೇಶ್ವರರು ಎಷ್ಟು ಬೇಡವೆಂದರೂ ಅವರನ್ನು ಒಪ್ಪಿಸಿ, ಅಲ್ಲಿಯೇ ಇದ್ದ ಮಾವಿನ ಮರದಡಿಯಲ್ಲಿ ಗದ್ದುಗೆ ಹಾಕಿ ಕೂರಿಸಿ, ಊರೊಳಗೆ ಹೋಗಿ ದೈವದವರನ್ನೆಲ್ಲ ಕರೆತರಬೇಕೆನ್ನುವಷ್ಟರಲ್ಲಿಯೇ ಕೆಂಚ, ದೊಡ್ಡರೆಂಬ ಶಬರರು ಬಂದು ಕಗ್ಗೆರೆಗೆ

ಮುತ್ತಿಗೆ ಹಾಕಿದಾಗ ಜನರೆಲ್ಲ ಚದುರಿಹೋಗಿ ನಿಡುಗಲ್ಲರಸರ ಸಹಾಯ ಪಡೆಯುತ್ತಾರೆ. ನಂಬೆಣ್ಣನ ಭಕ್ತಿಯ ಔತಣವನ್ನು ಸ್ವೀಕರಿಸಿದ್ದ ಸಿದ್ಧಲಿಂಗೇಶ್ವರರು ಬೇರೆಲ್ಲಿಯೂ ಹೋಗದೆ ಆ ಮಾವಿನ ಮರದಡಿಯಲ್ಲಿಯೇ ಶಿವಯೋಗಾ ನಿದ್ರೆಮುದ್ರಿತರಾಗುತ್ತಾರೆ. ಹಾಗೆಯೇ ಆರುತಿಂಗಳವರೆಗೆ ಶಿವಯೋಗಾನುಷ್ಠಾನದಲ್ಲಿರುವಾಗ ಅವರ ದೇಹದ ಸುತ್ತ ಹುತ್ತು ಬೆಳೆಯಿತಂತೆ, ಆರು ತಿಂಗಳು ಕಳೆದ ಮೇಲೆ ಕಗ್ಗೆರೆಯ ಗೌಡರು ಶಬರಾಧಿನಾಥನ ನಂಬುಗೆ ಪಡೆದು ಪುನಃ ಕಗ್ಗೆರೆಯನ್ನು ಕಟ್ಟಿಸಿ ನಂಬೆಣ್ಣ ಮೊದಲಾದ ಭಕ್ತರು ಬಂದು ಕಗ್ಗೆರೆಯಲ್ಲಿ ನೆಲೆಸುತ್ತಾರೆ. ಇಲ್ಲಿ ಪುನಃ ಅವರು ನೆಲೆಸಿದಮೇಲೆ ಒಂದು ಕೌತುಕ ನಡೆಯುತ್ತದೆ. ನಿಂಬೆಣ್ಣಸೆಟ್ಟಿಯ ಹಸುವೊಂದು ಪ್ರತಿನಿತ್ಯ ಬಂದು ಶಿವಯೋಗಿಗಳ ಮೇಲೆ ಕಟ್ಟಿದ್ದ ಹುತ್ತದ ಮೇಲೆ ಹಾಲು ಕರೆದು ಹೋಗುತ್ತಿರುತ್ತದೆ. ಈ ರಹಸ್ಯವನ್ನು ತಿಳಿಯಲು ತಮ್ಮ ಮನೆಯ ದನಗಾಹಿಯೊಂದಿಗೆ ಬಂದು, ನಿಜಸ್ಥಿತಿಯನ್ನು ಅರಿತು ಅಚ್ಚರಿಗೊಂಡ ನಿಂಬೆಣ್ಣನಿಗೆ ತಾವು ಊರು ಬಿಡುವುದಕ್ಕೆ ಮುನ್ನ ಶಿವಯೋಗಿಗಳಲ್ಲಿ ಭಕ್ತಿಯಿಂದ ನಿವೇದಿಸಿಕೊಂಡಿದ್ದ ಮಾತುಗಳು ನೆನಪಿಗೆ ಬಂದು, ದುಗ್ಧಧಾರೆಯನ್ನೆರೆದು, ಹುತ್ತವನ್ನು ಕರಗಿಸಿ, ಶಿವಯೋಗ ನಿದ್ರಾಮುದ್ರೆಯಲ್ಲಿದ್ದ ಸಿದ್ಧಲಿಂಗ ಶಿವಯೋಗಿಗಳನ್ನು ಕೊಂಡಾಡಲು ಅವರು ಎಚ್ಚೆತ್ತು, ಕಣ್ದೆರೆದು ಜನರಿಗೆ ದರ್ಶನವೀಯುತ್ತಾರೆ. ಅಂದಿನಿಂದ ತೋಂಟದ ಸಿದ್ಧಲಿಂಗ ಶಿವಯೋಗಿಗಳೆಂದು ಪ್ರಸಿದ್ಧರಾಗುತ್ತಾರೆ.

ಏಳುನೂರು ವಿರಕ್ತರು ಸಹಿತ ಶಿವಯೋಗಿಗಳನ್ನು ಅತ್ಯಂತ ವೈಭವದಿಂದ ಮೆರವಣಿಗೆಯಲ್ಲಿ ಕರೆದುಕೊಂಡು ಕಗ್ಗೆರೆಯನ್ನು ಪ್ರವೇಶಿಸಿ, ಆ ಊರಿನಲ್ಲೆಲ್ಲ ಮೆರವಣಿಗೆ ಮಾಡಿಸುತ್ತಾರೆ. ಶಿವಯೋಗಿಗಳು ಶಿವಪೂಜೆ, ಪಾದಾರ್ಚನೆ ಮುಗಿದ ಬಳಿಕ ನಂಬೆಣ್ಣನ ಭಕ್ತಿಯನ್ನುಸ್ವೀಕರಿಸಿ, ಜಂಗಮರುಸಹವಾಗಿ ಶಿವತತ್ವಾನುಭವಗೋಷ್ಠಿಯಲ್ಲಿರುವಾಗ ಎಡೆಯೂರು ಗ್ರಾಮದ ಮೃಡಭಕ್ತರು ಬಂದು ಬಿನ್ನಹ ಮಾಡಿ ಒಡನೆ ಕೊಂಡೊಯ್ಯುತ್ತಾರೆ. ಆ ಊರಿನಲ್ಲಿದ್ದ ಉಗ್ರಾಕ್ಷನ ಭಕ್ತ ಸಿದ್ಧರಾಮಯ್ಯ ಶೀಘ್ರದಿ ಸಿದ್ಧೇಶ್ವರರಿಗೆ ಉಗ್ರಾಂಬಕ ಪೂಜೆಗೆಂದು ಭಸಿತವನೀಡಲು, ಆತನ ಮನೆಗೆ ಹೋಗಿ, ಮೃದುಗದ್ದುಗೆಯಲ್ಲಿ ಮಂಡಿಸಿ ಶಿವಪೂಜೆ ಮಾಡಿ, ಅಲ್ಲಿ ನೆರೆದಿದ್ದ ಜಂಗಮದೊತ್ತೊತ್ತೆಯಂ ನೋಡಿ ಹರ್ಷಚಿತ್ತರಾಗಿ ಪರಮಜ್ಞಾನದ ವಿಭೂತಿಯನ್ನು ಸೂಕ್ಷ್ಮಾಂಗದಲ್ಲಿ ಧರಿಸಿ, "......ಸಿದ್ಧಲಿಂಗೇಶ್ವರರು ಇಷ್ಟಲಿಂಗದ ಅಷ್ಟವಿಧಾರ್ಚನ ಮಾಡಿ........ಪ್ರಾಣಲಿಂಗದಲ್ಲಿ ಚಿತ್ರುಭೋಣ ಪಂಚೇಂದ್ರಿಯಂಗಳು ಸಿಕ್ಕಿ ನೆನೆವ ಮನಂ ನಷ್ಟವಾಗಿ ಕಾರಣ ತನುವಿನ ಭಾವದಿಂ ಗ್ರಹಿಸಿದ ಭಾವದ ಪಂಚೇಂದ್ರಿಯಂಗಳು ಭಾವಲಿಂಗ ಪೂಜೆಯಲ್ಲಿಯೇ ಸಿಕ್ಕಿ ಅಭಾವ ನಿರ್ಭಾವವಾಗಿ ಒಳಹೊರಗೆ ತೆರಹಿಲ್ಲದೆ ನಿಲಾಕ ಜ್ಯೋತಿಯಂತೆ ದೀಪವ ನೊಳಕೊಂಡ ಸ್ಫಟಿಕದ ಘಟದಂತೆ ಮತ್ತಂ ಲಿಂಗದಲ್ಲಿ ಮನವನಿಂಬಿಟ್ಟು....ಸಿದ್ಧಲಿಂಗೇಶ್ವರರ ತನುತ್ರಯದಲ್ಲಿ ಲಿಂಗತ್ರಯ ಪೂಜೆಯಂ ಜಾಗ್ರಸ್ವಪ್ನಸುಷುಪ್ತಿಯಿಂ ನಿಬ್ಬೆರಗುವಟ್ಟು..... ಭಕ್ತತಲೆಯೆಬ್ಬಿಸೆ ಚಿತ್ರಿತ ಪುತ್ರನಂತೆ....ನಿಃಶಬ್ದದೊಳಿರುತ್ತೆ....ಆಚಾರಲಿಂಗವೆ ದೇಹವಾಗಿ

ಗುರುಲಿಂಗಲೆಯಾತ್ಮನಾಗಿ ಶಿವಲಿಂಗವೆ ಪ್ರಾಣವಾಗಿ ಚರಲಿಂಗವೆ ಯಿಂದ್ರಿಯಂಗಳಾಗಿ ಪ್ರಸಾದಲಿಂಗವೆ ವಿಷಯಂಗಳಾಗಿ ಮಹಾಲಿಂಗವೆ ತೃಪ್ತಿಯಾಗಿ ಆ ತೃಪ್ತಿ ಘನವಾ ದುಬ್ಬಸದಿಂ ಕಳವು ಸೊಕ್ಕೆಯುಸಿರ್ನಿಂದು ನುಡಿಯಡಗಿರ್ದನೊಯೆಂದು" ಭಕ್ತರು ಸಂದೇಹ ಪಡುವಂತೆ ಶಿವಯೋಗ ನಿದ್ರೆಯಲ್ಲಿದ್ದು ಭಕ್ತರು ನಾನಾವಿಧ ಭಕ್ತಿಗೀತೆಗಳನ್ನು ದೀರ್ಘ ಕಾಲ ಹಾಡಿದ ಮೇಲೆ ಎಚ್ಚರಿಸುತ್ತಾರೆ. ಇದೇ ರೀತಿಯಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಏಳುನೂರು ವಿರಕ್ತರನ್ನು ಕೂಡಿಕೊಂಡು ದೇಶಾದ್ಯಂತ ಸುತ್ತಾಡಿ ಜನರಿಗೆ ಷಟ್ಸ್ಥಲ ಸಿದ್ಧಾಂತದ ಉಪದೇಶ ಮಾಡುತ್ತಾರೆ. ಅಲ್ಲಲ್ಲಿ ಸಿಕ್ಕಿದ ಜೈನ, ವೈಷ್ಣವ, ಶೈವ ಮೊದಲಾದ ಧರ್ಮದವರನ್ನು ವಾದದಲ್ಲಿ ಸೋಲಿಸಿ ವೀರಶೈವ ಧರ್ಮದ ತಿರುಳಾದ ಷಟ್ಸ್ಥಲ ತತ್ವದಲ್ಲಿ ಅದ್ಭುತವಾದ ಕ್ರಾಂತಿಯುಂಟುಮಾಡುತ್ತಾರೆ. ಅಲ್ಲಮ ನ ಅಪರಾವತಾರಿಗಳಾದ ಸಿದ್ಧಲಿಂಗ ಶಿವಯೋಗಿಗಳು ಮತ್ತೊಮ್ಮೆ ಷಟ್ಸ್ಥಲೋದ್ಧಾರ ಮಾಡಿ ಶಿವಭಕ್ತಿಯನ್ನು ಉಳಿಸಿ, ಬೆಳೆಸಿ ನಾಡಿನ ಜನಮನದಲ್ಲಿ ಚಿತ್ಪ್ರಭೆಯನ್ನು ಬೆಳಗುತ್ತಾರೆ.

ಕೊನೆಯಲ್ಲಿ ತಾವು ಎಡೆಯೂರಿನಲ್ಲಿರುವಾಗ ಶಿವಯೋಗಿಗಳು ತಮ್ಮ ಶಿಷ್ಯರಲ್ಲೊಬ್ಬ ರಾದ ಬೋಳ ಬಸವೇಶ್ವರರಿಗೆ ಷಟ್ಸ್ಥಲಾಂತರ್ಗತ ಏಕೋತ್ತರ ಶತಸ್ಥಲ ಸಿದ್ಧಾಂತವನ್ನು ಬೋಧಿಸಿ, ತಮ್ಮ ನಿರಂಜನ ಪಟ್ಟವನ್ನು ಅವರಿಗೆ ಕಟ್ಟಿ, ಸಪ್ಪೆದೇವರು, ಉಪ್ಪಿನಹಳ್ಳಿಯ ಸ್ವಾಮಿ, ಗುಮ್ಮಳಾಪುರದ ಸಿದ್ಧಲಿಂಗದೇವರು, ಶೀಲವಂತದೇವರು, ಬೋಳಬಸವಾರ್ಯರೇ ಮೊದಲಾದ ತಮ್ಮ ಶಿಷ್ಯರಿಗೆಲ್ಲ ಮೋಕ್ಷಮಾರ್ಗವನ್ನರುಹಿ, ತಮ್ಮ ಶಿಷ್ಯರಲೊಬ್ಬರಾದ ಚನ್ನವೀರಪ್ಪ ಒಡೆಯರ ಇಷ್ಟದಂತೆ ಚಿಟ್ಟಿಗದೇವರು ಕಟ್ಟಿಸಿದ್ದ ಎಡೆಯೂರ ಕಲ್ಲುಮಠ ದಲ್ಲಿ ನಿರ್ವಿಕಲ್ಪ ಸಮಾಧಿ ಪಡೆಯುತ್ತಾರೆ.

ಹದಿನಾರನೆಯ ಶತಮಾನದುದ್ದಕ್ಕೂ ಶತಾಯುಷಿಗಳಾಗಿ ಬಾಳಿರಬಹುದಾದ, ಪರಿಪೂರ್ಣ ಬದುಕನ್ನು ತುಂಬಿಕೊಂಡು ಷಟ್ಸ್ಥಲಿಗಳಾದ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಬದುಕು ಘನವಾದುದು, ಮಹಿಮಾನ್ವಿತವಾದುದು. ಶ್ರೀಗುರುವಿನ ಪದತಲದಲ್ಲಿ ಕುಳಿತು ಗುರುಪೂಜೆಯಲ್ಲಿಯೇ ಶಿವಪೂಜೆ ಮಾಡಿ, ವ್ಯಕ್ತಿಯ ವೈಯಕ್ತಿಕ ಆತ್ಮವಿಕಾಸ ಮಾಡಿಕೊಂಡು, ವ್ಯಷ್ಟಿಯ ಉನ್ನತಿಯಲ್ಲಿಯೇ ತುಷ್ಟಿಪಡೆಯದೆ ಸಮಷ್ಟಿಯ ಉದ್ಧಾರಕ್ಕೆ ಬದುಕನ್ನು ಮೀಸಲಾಗಿಟ್ಟು, ಅದನ್ನು ಸಾಧಿಸಿ ಯಶಸ್ಸುಕಂಡ ಧನ್ಯಜೀವಿ. ನಾಡಿನಲ್ಲುಂಟಾಗಿದ್ದ ಅಶಾಂತಿಯನ್ನು ಅಡಗಿಸಿ, ಶಿವಭಕ್ತಿಯನ್ನು ನೆಲೆಗೊಳಿಸಿ, ಷಟ್ಸ್ಥಲೋದ್ಧಾರ ಮಾಡಿ, ನಾಡಿನಲ್ಲಿ ಶಾಂತಿ ನೆಲೆಸುವಂತೆ ಮಾಡಿದ ಮಹಾಚೇತನ. ಷಟ್ಸ್ಥಲಾಂತರ್ಗತ ಏಕೋತ್ತರ ಶತಸ್ಥಲವನ್ನು ಪರಿಷ್ಕರಿಸಿ ಪ್ರತಿಪಾದಿಸಿದ ಮಹಾಜ್ಞಾನಿ. ಸಂಸಾರದ ಅನಿತ್ಯತೆ ಅಸಾರತೆಯನ್ನರಿತು, ಜೀವ-ಭಾವ ಭ್ರಮೆಯನ್ನು ಕಳೆದು,

ಅಹಂಕಾರ–ಮಮಕಾರಗಳನ್ನು ಮಾಣಿಸಿ ನಿರಹಂಕಾರಿಯೆಂದೆನಿಸಯ್ಯ ಎಂದು ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವಿನಲ್ಲಿ ಪ್ರಾರ್ಥಿಸಿಕೊಳ್ಳುವ ವಿನಯಶಾಲಿ. ಆಡಂಬರದ ಭಕ್ತರನ್ನು ದಿಟ್ಟತನದಿಂದ ಖಂಡಿಸುವ ಧೈರ್ಯಶಾಲಿ. ಒಟ್ಟಿನಲ್ಲಿ ಸಕಲ ಸದ್ಗುಣಗಳ ಸಮಾವೇಶಿಯಾಗಿ ಪರಮ ಪರಂಜ್ಯೋತಿ ಸ್ವರೂಪವಾದ ಪ್ರಣವ ಸ್ವರೂಪಿ ಸಿದ್ಧಲಿಂಗ ಶಿವಯೋಗಿ. ಇವರ ಅನಂತ, ಅಮಿತ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ 'ಷಟ್ಸ್ಥಲಜ್ಞಾನ ಸಾರಾಮೃತ'ದಲ್ಲಿ ಹಿಡಿದಿಟ್ಟಿರುವ ಅವರ ಅನುಭಾವದ ನುಡಿ.

ಇಂಥ ಶಿವಯೋಗಿಗಳ ಮನಸ್ಸನ್ನು ಲೌಕಿಕ ಸಂಸಾರದ ತಾಪತ್ರಯಗಳು ಅಂಡಲೆಯುತ್ತವಂತೆ:

> ಕಾಮದಿಂದ ಕರಗಿದೆನಯ್ಯಾ, ಕ್ರೋಧದಿಂದ ಕೊಱಗಿದೆನಯ್ಯಾ;
> ಲೋಭ ಮೋಹಗಳಿಂದ ಅತಿನೊಂದೆನಯ್ಯಾ;
> ಮದ ಮತ್ಸರಗಳಿಂದ ಬೆದಬೆದನೆ ಬೆಂದೆನಯ್ಯಾ;
> ಅಹಂಕಾರ ಮಮಕಾರದಿಂದ ಮತಿ ಮಂದನಾಗಿರ್ದೆನಯ್ಯಾ;
> ಇದು ಕಾರಣ,
> ಎನ್ನ ಕಾಮಾದಿ ಷಡುವರ್ಗಂಗಳ ಕಳೆದು
> ಅಹಂಕಾರ ಮಮಕಾರಂಗಳ ಮಾಣಿಸಿ
> ನಿರಹಂಕಾರಿಯೆಂದೆನಿಸಯ್ಯಾ
> ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!

ಇವರಿಗೆ ಹಗಲು ಹಸಿವಿನ ಚಿಂತೆಯಂತೆ, ಇರುಳು ವಿಷಯದ ಚಿಂತೆಯಂತೆ, ಇವರ ಮನಸ್ಸು ಸದಾ ಹೊನ್ನು–ಹೆಣ್ಣು–ಮಣ್ಣು ನೆನೆನೆನೆದು ಶಿವನನ್ನು ನೆನೆಯಲೊಲ್ಲದಂತೆ. ಸಂಸಾರದಲ್ಲಿ ಸವೆಸವೆದು ಅವಿವೇಕಿಯಾದ ಅವರ ಅವಿವೇಕವನ್ನು ಕಳೆದು ಶಿವತತ್ತ್ವ ವಿವೇಕವನ್ನಿತ್ತು ಕರುಣಿಸಬೇಕಂತೆ. ಏಕೋಭಾವದಿಂದ ಅಂಗಲಾಚಿ ಬೇಡುತ್ತಿರುವ ಭಕ್ತನ ಪ್ರಾರ್ಥನೆಯನ್ನು ಭಕ್ತಿಪ್ರಿಯ, ಭಕ್ತ ಪರಾಧೀನ ಪರಮೇಶ್ವರ ಕೇಳದೆ ಕಿವುಡಾಗಿರಲು ಸಾಧ್ಯವೇ! ಭಕ್ತನಿಗೆ ತನ್ನನ್ನೇ ಸಮರ್ಪಿಸಿಕೊಳ್ಳುತ್ತಾನೆ. ಏಕದೇಹಿಯಾಗಿ, ಎರಡೊಂದಾಗಿ ಬೆರೆಯುತ್ತಾನೆ. ಬೆಳಗಿನ ಸುಳುಹನ್ನು ತೋರುತ್ತಾನೆ. ಬೆಳಗು ಬೆಳಗೇ ಆದ ಆ ಪರಮ ಪರಂಜ್ಯೋತಿಯ ಸಾಕ್ಷಾತ್ಕರಿಸಿಕೊಂಡ ಶಿವಯೋಗಿಗಳು:

> ಮುಚ್ಚಿದ ಕಣ್ಣು ತೆಱದುದ ಕಂಡೆ;
> ಕಿಚ್ಚಿನ ಜ್ವಾಲೆ ಕಱವುದ ಕಂಡೆ:
> ಮೃತ್ಯುಗಳ ಮೊತ್ತ ಕಿತ್ತೋಡುವುದ ಕಂಡೆ;
> ಕತ್ತಲೆ ಬೆಳಗಾದುದ ಕಂಡೆ;
> ಬಿಚ್ಚಿ ಬೇಱಲ್ಲದ ಬೆಳಗೆನ್ನನೊಳಕೊಂಡು

ನಿತ್ಯ ಪ್ರಸನ್ನನಾದೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!

ಕೊನೆಗೆ ಶಿವಯೋಗಿಗಳು ತಮ್ಮ ಹೃದಯ ಕಮಲ ಕರ್ಣಿಕಾಲಾಪದ ಮಧ್ಯದಲ್ಲಿ ಮಿಂಚಿನ ಪ್ರಭೆಯಂತೆ ಹೊಳೆವ ಪಂಚವದನನನ್ನೂ ಕಾಣುತ್ತಾರೆ. ಕಂಡು ಶಿವಯೋಗದಲ್ಲಿ ಮುಳುಗುತ್ತಾರೆ. ಶಿವಯೋಗವನ್ನು ಸಂಪಾದಿಸಿದ ಶಿವಯೋಗಿಗಳಿಗೆ ಶರಣ ಬೇರೆಯಲ್ಲ ಲಿಂಗಬೇರೆಯಲ್ಲ.

ಸ್ಫಟಿಕದ ಘಟದೊಳಗೆತ್ತಿದ ಜ್ಯೋತಿ,
ಒಳಹೊಱಗೊಂದೆ ಸ್ವಯವಾಗಿ ಪ್ರಜ್ವಲಿಸುವಂತೆ,
ಎನ್ನೊಳಗಿಪ್ಪಾತನೂ ಹೊಱಗಿಪ್ಪಾತನೂ ಒಂದೆ ವಸ್ತುವೆಂಬ
ಆದ್ಯಂತವು ಕಾಣಬಂದಿತ್ತು ನೋಡಾ.
ಆ ಪರತತ್ವವೇ ಶರಣ ತಾನೇ ನೋಡಾ.
ಬೇಱೊಂದು ಸ್ವರೂಪಲ್ಲ ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!

ಸಂದಿಲ್ಲದ ಲಿಂಗ–ಶರಣ ಭಾವವನ್ನು ಸಾಧಿಸಿಕೊಂಡು ಭವಾರ್ಣವವನ್ನು ದಾಟಿ ಬಸವನೆ ಪತಿಯಾಗಿ ತಾನೆ ಸತಿಯಾಗಿ 'ಶರಣಸತಿ ಲಿಂಗಪತಿ' ಭಾವದಲ್ಲಿ ನಿಂದ ಶಿವಯೋಗಿಗಳು:

ಪಿಂಡಕರಗಿ ಅಖಂಡಮಯನಾದೆನು.
ಅಮೃತ ಬಿಂದುವ ಸೇವಿಸಿ
ನಿತ್ಯಾನಿತ್ಯವ ಗೆದ್ದು
ನಿರ್ಮಲ ನಿರಾವರಣನಾದೆನು
ಸೀಮೆಯ ಮೀಱಿ ನಿಸ್ಸೀಮನಾದೆನು
ಪರಮ ನಿರಂಜನನೊಡಗೂಡಿ
ಮಾಯಾರಂಜನೆಯಳಿದು
ನಿರಂಜನನಾಗಿರ್ದೆನು ಕಾಣಾ
ಸಮಸ್ತ ವಿಶ್ವಪ್ರಪಂಚಿಗೆ ಹೊಱಗಾಗಿ
ನಿಃಪ್ರಪಂಚ ನಿರ್ಲೇಪನಾಗಿರ್ದೆನು ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!

ಶಿವಯೋಗದ ಸಿದ್ಧಿಯಿಂದ ನಿತ್ಯಾನಿತ್ಯವ ಗೆದ್ದು:

ಗಾಳಿ ಗಂಧವನಪ್ಪಿದಂತೆ, ಬಯಲು ಬಯಲನಪ್ಪಿದಂತೆ,
ಬೆಳಗು ಬೆಳಗನಪ್ಪಿ ಮಹಾಬೆಳಗಾದಂತೆ,

ಶರಣ ಲಿಂಗವನಪ್ಪಿ, ಮಹಾಲಿಂಗವೇ ತಾನುತಾನಾಗಿ
ನಿರ್ಣಯಲಾದೆನು ನೋಡಾ...

ಎಂದು ಅದ್ವೈತ ಪರವಸ್ತು ತಾವೇ ಆಗಿ,
ಅಂಗ ಲಿಂಗದಲ್ಲಡಗಿ, ಲಿಂಗ ಅಂಗದಲ್ಲಡಗಿ,
ಅಂಗ ಲಿಂಗವೆಂಬುಭಯ ಭಾವವಳಿತಲ್ಲಿ
ಅಱುಹು ಅಱುಹೆಂಬುದು ಬಱುದಾಯಿತ್ತು ನೋಡಾ.
ಭಾವ ನಿರ್ಭಾವ ಬಯಲಾಗಿ
ಬಚ್ಚ ಬರಿಯ ಬಯಲೆಯಾಗಿರ್ದೆನು ಕಾಣಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!

ಎಂದು ಷಟ್ಸ್ಥಲ ಚಕ್ರವನ್ನು ಪೂರೈಸಿ, ಷಟ್ಸ್ಥಲಿಗಳಾಗಿ, ಷಟ್ಸ್ಥಲ ವಲ್ಲಭರಾಗುತ್ತಾರೆ.

ಪ್ರಭುದೇವರ ಅವತಾರವೆಂದು ಪ್ರಸಿದ್ಧರಾಗಿರುವ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಶಿವಾನುಭವಿಗಳಾಗಿ, ಷಟ್ಸ್ಥಲ ಜ್ಞಾನಿಗಳಾಗಿ, ಏಕೋತ್ತರ ಶತಸ್ಥಲದ ನಿರೂಪಕರಾಗಿ, ಸಮಾಜ ವಿಮರ್ಶಕರಾಗಿ, ಸಮಾಜೋದ್ಧಾರಕರಾಗಿ, ಜನಮನದಲ್ಲಿ ಭಕ್ತಿಯ ಸಿರಿ ಬೆಳಕನ್ನು ಬೆಳೆಸಿ, ನಾಡು- ನುಡಿಗೆ ಸೇವೆ ಸಲ್ಲಿಸಿದವರು. ಶಿಥಿಲಗೊಳ್ಳುತ್ತಿದ್ದ ಷಟ್ಸ್ಥಲವನ್ನು, ವೀರಶೈವ ಧರ್ಮವನ್ನು ಪುನರುಜ್ಜೀವನಗೊಳಿಸಿ, ಏಳುನೂರು ವಿರತರನ್ನು ಕೂಡಿಕೊಂಡು ದೇಶದ ಮೂಲೆ ಮೂಲೆಗಳಲ್ಲಿ ಸಂಚರಿಸಿ, ಮಹಾಮಹಾ ಮಹಿಮೆಗಳನ್ನು ಮೆರೆದು, ಜನರಲ್ಲಿ ಧರ್ಮ ಜಾಗೃತಿಯನ್ನುಂಟು ಮಾಡಿದ ಮಹಾಮಹಿಮರು. ಮೈಸೂರರಸ ದೇವರಾಜ ಒಡೆಯರ ದಳವಾಯಿ ನಂದಿನಾಥಯ್ಯ ಶಿವಯೋಗಿಗಳ ಪ್ರಾರ್ಥನೆ ಮಾಡಿ, ಕಿಕ್ಕೇರಿಯ ಮೇಲೆ ಯುದ್ಧಮಾಡಿ ಜಯಗಳಿಸಿದುದರಿಂದ ದೇವರಾಜ ಒಡೆಯರು ತೋಂಟದ ಸಿದ್ಧೇಶ್ವರ ಸ್ವಾಮಿಗಳಿಗೆ ಗ್ರಾಮವೊಂದನ್ನು ದತ್ತಿಬಿಟ್ಟು ಶಿಲಾಶಾಸನ ನೆಡಿಸಿದರೆಂದರೆ ಅವರ ವ್ಯಕ್ತಿತ್ವದ ಮಹತ್ವಕ್ಕೆ ಮತ್ತಾವ ಸಾಕ್ಷಿ ಬೇಕು! ಇಂಥ ಮಹಿಮರು ಮೆಟ್ಟಿದ ನೆಲ ಪವಿತ್ರವಾಗಿದೆ, ಪುಣ್ಯಕ್ಷೇತ್ರವೆನಿಸಿದೆ. ಒತ್ತಿದ ಕಲ್ಲು ಕರಗಿ ಪುಣ್ಯತೀರ್ಥವಾಗಿ ಹರಿದಿದೆ. ಆಡಿದ ನುಡಿ ಮಂತ್ರವಾಗಿದೆ, ನಡೆದುದೆ ಧರ್ಮವಾಗಿದೆ. ಅಂತೆಯೇ ಜಾತಿ–ಮತ ಭೇದವಿಲ್ಲದೆ ನಾಡಿನ ಕೋಟ್ಯಾಂತರ ಜನರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಸು. ೭೫ ಪವಾಡಗಳನ್ನು ಮೆರೆದರೆಂದು ಹೇಳಲಾಗಿರುವ ತೋಂಟದ ಸಿದ್ಧಲಿಂಗ ಶಿವಯೋಗಿಗಳನ್ನು ಸು. ೪೫ ಕವಿಗಳು ನೆನೆದು ತಮ್ಮ ಕಾವ್ಯಗಳಲ್ಲಿ ಅವರ ಸ್ತೋತ್ರ ಮಾಡಿದ್ದಾರೆ. ಅಸಂಖ್ಯ ಶಿಷ್ಯ–ಪ್ರಶಿಷ್ಯ ಪರಂಪರೆಯನ್ನೇ ಪಡೆದಿದ್ದಾರೆ. ಅವರ ಮೂಲಕ ತಾವು ನಂಬಿ ಆಚರಿಸಿದ ಷಟ್ಸ್ಥಲ ಧರ್ಮ ಪ್ರಸಾರವನ್ನು ಮಾಡಿಸಿದ್ದಾರೆ.

ಯಾವುದೇ ನಾಡು ಅಥವಾ ರಾಷ್ಟ್ರದ ಚುಂಬಕ ಶಕ್ತಿ ಅದರ ಮೇಲೆ ಮೇಲಿಂದ ಮೇಲೆ ಉಂಟಾದ ಆಕ್ರಮಣಗಳಾಗಲಿ, ಅವುಗಳನ್ನು ತಡೆದು, ಹಿಮ್ಮೆಟ್ಟಿಸಿ ಸಾಮ್ರಾಜ್ಯ

ವನ್ನು ಸ್ಥಾಪಿಸಿ ಮೆರೆದ ಸಾಮ್ರಾಟರ ಚರಿತ್ರೆಯಾಗಲೀ ಅಲ್ಲ. ಶಿಲ್ಪ, ಸಂಗೀತ, ಸಾಹಿತ್ಯ, ಚಿತ್ರಕಲೆಗಳನ್ನೊಳಗೊಂಡಂತೆ ಆಯಾ ಕಾಲದ ಜನರ ನಡೆದ ಬದುಕು, ಆಚರಿಸಿದ ಧರ್ಮ, ಮಾಡಿದ ವಿಚಾರ ಸರಣಿ ಒಟ್ಟಾರೆ ಇವುಗಳಿಂದ ಮೂಡಿಬಂದ ಸಂಸ್ಕೃತಿಯ ಪ್ರತೀಕವೆನಿಸಿದ ತತ್ವಶಾಸ್ತ್ರ ಆ ನಾಡಿನ ಅಥವಾ ರಾಷ್ಟ್ರದ ಚುಂಬಕ ಶಕ್ತಿಯಾಗುತ್ತದೆ. ಆಯಾ ನಾಡಿನ ತನಿ, ಬನಿ, ಕೆನೆ ಎನಿಸುತ್ತದೆ. ಹಲವು ಮತಗಳ, ಹಲವು ಭಾಷೆಗಳ ಹಲವು ಸಂಸ್ಕೃತಿಗಳ ಆಡುಂಬೋಲವಾಗಿರುವ ಭಾರತದಲ್ಲಿ ಹಲವಾರು ಧರ್ಮಗಳು, ತತ್ವ ಸಿದ್ಧಾಂತಗಳು ಮೂಡಿ, ಅರಳಿ, ಅರಳಾಗಿ ನಿಂತಿವೆ. ಹೀಗಾಗಿ ಭಾರತೀಯ ಜನಜೀವ ನದ ಜೀವ ಜೀವಾಳ, ಬದುಕಿನ ಸಾರಸಾರಾಯವೆಂದರೆ ಅವರ ಆಧ್ಯಾತ್ಮಿಕ ಸಾಧನೆ. ಸಿದ್ಧಿ, ಪ್ರಗತಿ. ಈ ನಿಟ್ಟಿನಲ್ಲಿ ಭಾರತೀಯ ಇಡೀ ಮನುಕುಲದ ಆಲೋಚನಾ ಪರಂಪರೆಗೆ ಕರ್ನಾಟಕದ ಕೊಡುಗೆ ಅಪಾರ. ಶೈವದರ್ಶನದ ಪ್ರಗತಿಪಥದಲ್ಲಿ ೧೨ನೇ ಶ.ದ ಶಿವಶರಣರು ನವೀಕರಿಸಿದ ಷಟ್ಸ್ಥಲ ಸಿದ್ಧಾಂತ. ಅದರ ಸಾರಾಯವೆನಿಸಿದ ಲಿಂಗಾಂಗ ಸಾಮರಸ್ಯ ಅಮೂಲ್ಯ ಅಮೋಘ. ಇದೇ ಹಾದಿಯಲ್ಲಿ ನಡೆದ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅದಕ್ಕೊಂದು ಸ್ಫಟಿಕ ಸ್ಪಷ್ಟವಾದ ನೆಲೆಗಟ್ಟನ್ನು ಒದಗಿಸಿ ಕೊಟ್ಟರಲ್ಲದೆ ಜನಜೀವನದಲ್ಲಿ ಜೀವನ ಮಾರ್ಗವೆಂಬಂತೆ ಆಚರಣೆಯಲ್ಲಿ ತಂದರು. ವೀರಶೈವ ತತ್ವಶಾಸ್ತ್ರದ ಪುನರುದ್ಧಾರದ ಕಾರ್ಯದಲ್ಲಿ ತತ್ವಶಾಸ್ತ್ರ ರೂಪಣೆಯಲ್ಲಿ ಗಮನಿಸ ಬೇಕಾದ ಪ್ರಮಾಣಾಧಾರಗಳನ್ನೆಲ್ಲ ದೃಷ್ಟಿಯಲ್ಲಿಟ್ಟುಕೊಂಡು ಅದಕ್ಕೆ ತಾತ್ವಿಕ ನೆಲೆಗಟ್ಟನ್ನು ಕೊಟ್ಟರು. ಎಲ್ಲ ಧರ್ಮಗಳ ಪರಮ ಗಂತವ್ಯ ಸತ್ಯ ಸಾಕ್ಷಾತ್ಕಾರ. ಪರಶಿವ ತತ್ವವೇ ಸತ್ಯ. ಆ ಸತ್ಯ ತತ್ವವೇ ಜೀವಿಯಾಗಿ ಮೂಡಿ ಬಂದು, ತನ್ನ ಲೀಲೆಯನ್ನು ಮೆರೆದು ಪುನಃ ಆ ಸತ್ಯದಲ್ಲಿ ಬಯಲಾಗುವುದೇ ಲಿಂಗಾಂಗ ಸಾಮರಸ್ಯ. ಈ ಲಿಂಗಾಂಗ ಸಾಮ ರಸ್ಯಕ್ಕೆ ಈ ಲೋಕವೇ ಹದವಾದ ಆಡುಂಬೋಲ. ಈ ಆಡಂಬೋಲದಲ್ಲಿ ನಡಸುವಾಟ ದಲ್ಲಿ ಉಂಟಾದ ೩೬ ತತ್ವಗಳು, ಸಾದಾಖ್ಯಗಳು, ಅಷ್ಟಾವರಣಗಳು, ಪಂಚಾಚಾರಗಳು ಮುಂತಾದ ಧರ್ಮ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಸಿದ್ಧಲಿಂಗ ಶಿವಯೋಗಿಗಳು ನಿರೂಪಿ ಸಿರುವ ವೀರಶೈವ ತತ್ವಶಾಸ್ತ್ರವನ್ನು ಸ್ಥೂಲವಾಗಿ ನೋಡಬಹುದು.

ವೀರಶೈವ ಶುದ್ಧ, ವಿಶೇಷ, ನಿರ್ವಾಣ ಎಂದು ಮೂರು ತೆರನೆಂದೂ, ಆ ಮೂರು ತಾನೆ ಭಕ್ತ, ಮಹೇಶ, ಪ್ರಸಾದ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಆರು ತೆರನಾಗಿ ತೋರಿ ವರ್ತಿಸುತ್ತಿದೆ ಎಂದೂ ಹೇಳುತ್ತಾರೆ. ಮುಂದೆ ತಮ್ಮ ಷಟ್ಸ್ಥಲ ಜ್ಞಾನ ಸಾರಾ ಮೃತದಲ್ಲಿ ತಮ್ಮ ಈ ವೀರಶೈವದ ವಿವರಗಳನ್ನು ಕೊಡುತ್ತಾರೆ. ಸರ್ವಶೂನ್ಯ ನಿರಾ ಲಂಬದಿಂದ ಮೊದಲುಗೊಂಡು ಶೂನ್ಯ ಲಿಂಗಸ್ಥಲ, ನಿಃಕಲ ಲಿಂಗಸ್ಥಲ, ಮಹಾಲಿಂಗಸ್ಥಲ, ಅಂಗ ಲಿಂಗೋದ್ಭವಸ್ಥಲ, ಪಂಚಮೂರ್ತಿ ಲಿಂಗಸ್ಥಲ, ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕರುಣಸ್ಥಲ, ಲಿಂಗಧಾರಣಸ್ಥಲ, ವಿಭೂತಿಧಾರಣಸ್ಥಲ, ರುದ್ರಾಕ್ಷಿಯಸ್ಥಲ, ಪಂಚಾಕ್ಷರೀಸ್ಥಲ, ಭಕ್ತಸ್ಥಲ, ಮಾಹೇಶ್ವರಸ್ಥಲ, ಪ್ರಸಾದಿಸ್ಥಲ,

ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲ, ನಿರವಯಸ್ಥಲಗಳಲ್ಲಿ ವೀರಶೈವದ ಷಟ್ಸ್ಥಲ ಸಿದ್ಧಾಂತವನ್ನು ವಿವರಿಸುತ್ತಾರೆ. ಆರಂಭದ ವಚನಗಳಲ್ಲಿ ಸೃಷ್ಟಿಕ್ರಮ, ಅಂಗಲಿಂಗೋದ್ಭವ ಕ್ರಮ, ಅಂಗವು ಲಿಂಗದ ಚಿದಂಶವೆಂಬುದರ ಜ್ಞಾನ, ನಂತರ ಷಟ್ಸ್ಥಲ ಮಾರ್ಗದಲ್ಲಿ ಸಾಧಕನಾಗಿ ಮುನ್ನಡೆದು ಪುನಃ ಲಿಂಗಸ್ವರೂಪವನ್ನು ಪಡೆಯುವ ರೀತಿಗಳನ್ನು ವಿವರಿಸಿದ್ದಾರೆ. ಇಲ್ಲಿನ ಷಟ್ಸ್ಥಲಗಳಲ್ಲಿ ಅಂದರೆ ಭಕ್ತಿಸ್ಥಲದಲ್ಲಿ ಭಕ್ತನ ಆರೂಸ್ಥಲಗಳ ಅವಸ್ಥೆಯನ್ನು ವಿವರಿಸಿದ್ದಾರೆ. ಉದಾ: ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ ಭಕ್ತನ ಶರಣ, ಭಕ್ತನ ಐಕ್ಯ ಹೀಗೆ. ಅವರ ವೀರಶೈವ ದರ್ಶನದ ಸ್ಥೂಲ ನೋಟವನ್ನು ನೋಡಬಹುದು:

ಅನಾದಿ ಸಂಸಿದ್ಧವಾಗಿ ಶರಣಂಗೆ ವೀರಶೈವವೇ ಅಧಿಕ ಎಂದು ಪ್ರತಿಷ್ಠಿಸಿದ ಶರಣ ತನ್ನ ಪರವಸ್ತುವಿನ ಆದ್ಯಂತವನರಿದು ಸ್ಥಲ ನಿರ್ದೇಶ ಮಾಡುವಾಗ ಮೊದಲಲ್ಲಿ ಸರ್ವ ಶೂನ್ಯ ನಿರಾಲಂಬಸ್ಥಲವನ್ನು ಹೇಳುತ್ತಾರೆ:

ಆದಿ ಮಧ್ಯಾವಸಾನವಿಲ್ಲದಂದು;
ಆದಿ ಅನಾದಿ ಬಿಂದು ಕಳೆಗಳಿಲ್ಲದಂದು;
ಸಾವಯ ನಿರವಯವಿಲ್ಲದಂದು;
ತತ್ವ ಬ್ರಹ್ಮಾಂಡಾದಿ ಲೋಕಾದಿ ಲೋಕಂಗಳೇನುಯೇನೂ ಇಲ್ಲದಂದು;
ನಿತ್ಯ ನಿರಂಜನ ಪರವಸ್ತು ನೀನೋರ್ಬನೆಯಿದ್ದೆಯಲ್ಲ!
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ.

ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ ಆತ್ಮನೆಂಬ
ಅಷ್ಟತನು ಮೂರ್ತಿ ಸ್ವರೂಪುಗೊಳ್ಳದಂದು;
ನಾನು, ನೀನೆಂಬ ಭ್ರಾಂತಸೂತಕ ಹುಟ್ಟದಂದು;
ನಾಮ, ರೂಪು, ಕ್ರೀಗಳೇನುಯೇನೂ ಇಲ್ಲದಂದು;
ಸರ್ವಶೂನ್ಯನಾಗಿರ್ದೆಯಲ್ಲ ನೀನು!
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಆಗ ಉತ್ಪತ್ತಿ ಸ್ಥಿತಿ ಲಯಗಳಿರಲಿಲ್ಲ: ಸತ್ವರಜ ತಮಗಳಿರಲಿಲ್ಲ. ಅಹಂಕಾರ, ಮಮಕಾರ, ಪ್ರಕೃತಿ ಮಹತ್ತ ಇರಲಿಲ್ಲ. ಜ್ಞಾನಾಜ್ಞಾನಗಳು ಹುಟ್ಟಿರಲಿಲ್ಲ. ರೂಪು ನಿರೂಪು ಹುಟ್ಟಿರಲಿಲ್ಲ. ಕಾಮ ನಿಃಕಾಮುಗಳಾಗಲಿ, ಮಾಯಾಮಾಯೆಗಳಾಗಲಿ ಇರಲಿಲ್ಲ. ಆಗ ಸರ್ವಶೂನ್ಯವಸ್ತು ತನ್ನ ಘನತೆಯ ತಾನರಿಯದೆ, ಇದಿರನರಿಯದೆ, ಏನನೂ ಅರಿಯದೆ ತನಗೆ ತಾನಾಗಿತ್ತು. ಅಂತರ, ಬಾಹ್ಯವಿಲ್ಲದೆ, ಅಡಿ, ಮುಡಿ, ಒಡಲು, ಮತ್ತೊಂದೆಡೆಯೇನೂ ಇಲ್ಲದೆ ಸರ್ವಶೂನ್ಯ ನಿರಾಲಂಬವಾಗಿತ್ತು. ಸ್ಥೂಲ, ಸೂಕ್ಷ್ಮ, ಪರತತ್ವ ಎಂದು ಈ ಪರಾತ್ಪರ ವಸ್ತುವನ್ನು ಹೆಸರಿಟ್ಟು ಕರೆವವರು ಇರಲಿಲ್ಲ. ಆದಿ ಬಿಂದು ಹುಟ್ಟದಾಗಿ,

ಮಾಯಾಶಕ್ತಿ ಹುಟ್ಟಿದಾಗ, ಪರಶಿವತತ್ವದಲ್ಲಿ ಚಿತ್ತು ತಲೆದೋರದಾಗ, ಚಿತ್ತಿನಿಂದ ನಾದ ಬಿಂದು ಕಳೆಗಳು ಹುಟ್ಟಿರದಾಗ, ಈ ನಾದ ಬಿಂದು ಕಳೆಗಳು ಒಂದಾಗಿ ಚಿತ್ಪಿಂಡ ರೂಪು ತಳೆಯದಿರುವಾಗ, ಶೂನ್ಯ ಮಹಾಶೂನ್ಯವೆಂಬುದಿಲ್ಲದಿರುವಾಗ ನಿಃಕಲ ನಿರಾಳನೆಂದು ಕರೆಯದಿದ್ದಾಗ, ಮೂವತ್ತಾರು ತತ್ವಗಳು ಹುಟ್ಟಿರದಿದ್ದಾಗ ಅಲ್ಲಿಂದತ್ತತ್ತ ಪರಾತ್ಪರ ವಸ್ತು ತಾನೇ ತಾನಾಗಿತ್ತು ಎಂದು ಸರ್ವಶೂನ್ಯ ನಿರಾಲಂಬ ಸ್ಥಲವನ್ನು ವರ್ಣಿಸುತ್ತಾರೆ.

ಈ ಪರವಸ್ತು ಅನಿರ್ವಾಚ್ಯಮೆನಿಸಿದ ಮಹಾಶೂನ್ಯಸ್ಥಲವನ್ನು ಹೊಂದುತ್ತದೆ. ಇದು ಶೂನ್ಯಲಿಂಗವೆನಿಸಿದಾಗ ತನು ಮನಗಳಿರಲಿಲ್ಲ, ಕಾಲ ಕರ್ಮಗಳಿರಲಿಲ್ಲ, ಕರಣಗಳಿರಲಿಲ್ಲ ಇಂದ್ರಿಯ ವ್ಯವಹಾರದ ಸುಖವಿರಲಿಲ್ಲ. ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ ರೆಂಬ ಪಂಚಾಧಿದೇವತೆಗಳಿರಲಿಲ್ಲ. ಇವರು ಲಯ–ಗಮನಗಳಿಗೆ ಕಾರಣರಾದ ಶಿವಶಕ್ತಿ ಗಳಿರಲಿಲ್ಲ. ಈ ಶಿವಶಕ್ತಿಗಳಿಗೆ ಕಾರಣವಾದ ಸತ್ ಚಿತ್ ಆನಂದ ನಿತ್ಯಪರಿಪೂರ್ಣವೆಂಬ ನಿಃಕಲ ತತ್ವವಿರಲಿಲ್ಲ. ಅಂಡಜ ಪಿಂಡಜ ಬಿಂದುಜ ಉದಯವಾಗಿರದಾಗ, ಆತ್ಮತತ್ವ ವಿದ್ಯಾತತ್ವ ಶಿವತತ್ವಗಳಿರದಿದ್ದಾಗ, ಗಮನ ನಿರ್ಗಮನ ಇರದಿದ್ದಾಗ, ನಾನು ನೀನೆಂಬ ವಾಕು ಹುಟ್ಟಿರದಿದ್ದಾಗ ಆ ಪರಾತ್ಪರ ವಸ್ತು ಅನಿರ್ವಾಚ್ಯ ಮಹಾಶೂನ್ಯ ಸ್ಥಲವಾಯಿತು.

ಅನಿರ್ವಾಚ್ಯ ಮಹಾಶೂನ್ಯ ಸ್ಥಲವನೆಯ್ದಿದ ಪರವಸ್ತು ತನ್ನಿಂದ ತಾನೆ ಸ್ವಯಂಭು ವಾಗಿ ಮುಂದೆ ನಿಃಕಲ ಲಿಂಗವಾಯಿತು.

ತಂದೆಯಿಲ್ಲದ, ತಾಯಿಯಿಲ್ಲದ
ಹೆಸರಿಲ್ಲದ, ಕುಲವಿಲ್ಲದ
ಹುಟ್ಟಿಲ್ಲದ, ಹೊಂದಿಲ್ಲದ
ಅಯೋನಿ ಸಂಭವ ನೀನಾದ ಕಾರಣ
ನಿನ್ನ ನಾನು ನಿಃಕಲ ಲಿಂಗವೆಂದೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

ಸಗುಣ-ನಿರ್ಗುಣಗಳಿಗೆ ಮೀರಿ, ಪರಮಾವ್ಯಯನಾದ ಕಾರಣ ಇದು ನಿರವಯಲಿಂಗ; ನಿಃಕಲ ಪರಬ್ರಹ್ಮ; ಏಕಮೇವಾದ್ವಿತೀಯ ಪರಾತ್ಪರ. ನಿರಾಧಾರ, ನಿರಾಲಂಬ, ಸರ್ವಾಧಾರ, ಸರ್ವಜ್ಞ, ಸರ್ವಗತ, ಸರ್ವೇಶ್ವರ. ವಾಚಾತೀತ, ಮನಾತೀತ, ವರ್ಣಾತೀತ, ಭಾವಾತೀತ ಜ್ಞಾನಾತೀತ ಈ ನಿಃಕಲ ಲಿಂಗ. ಸತ್ತು ಚಿತ್ತು ಆನಂದಗಳಿಲ್ಲದಂದು ಸಚ್ಚಿದಾ ನಂದ ಪರಬ್ರಹ್ಮ ತಾನೇ ಆಗಿ, ಎಲ್ಲ ತತ್ವಗಳಿಗೆ ತಾನಾಶ್ರಯವಾಗಿ ತನಗಾಶ್ರಯವಿಲ್ಲ ದಾಗಿ, ಎಲ್ಲ ತತ್ವಗಳಿಗಾದಿಯಾದರೂ ತನಗಾದಿಯಿಲ್ಲದಾಗಿ ನಿರಾದಿಯಾದುದು ನಿಃಕಲ ಶಿವತತ್ವ. ಆರು ಅಂಗ, ಆರುಲಿಂಗ, ಆರು ಶಕ್ತಿ, ಆರು ಭಕ್ತಿಗಳನ್ನು ತನ್ನಲ್ಲಿ ಅಡಗಿಸಿ ಕೊಂಡು ಸಚ್ಚಿದಾನಂದ ನಿತ್ಯಪರಿಪೂರ್ಣ ನಿರಂಜನ ಈ ನಿಃಕಲ ಶಿವತತ್ವ. ಸ್ವಲೀಲೆಯಿಂದ ನಿಕಲಲಿಂಗ ಸ್ಥಲವನ್ನೈದಿದ ಈ ಪರವಸ್ತು ತಿಳಿದುಪ್ಪ ಗಟ್ಟಿಗೊಂಡು ಹೆರೆದುಪ್ಪವಾದ

ಹಾಗೆ ಅನಂತ ಮೂರ್ತಿಗಳನ್ನು, ಅನಂತ ತತ್ವಗಳನ್ನು, ಅನಂತ ಕೋಟಿ ಬ್ರಹ್ಮಾಂಡಗಳನ್ನು, ಸರ್ವಸಮಸ್ತವೆಲ್ಲವನ್ನು ತನ್ನಲ್ಲಿ ಹುಟ್ಟಿಸಿ, ತನ್ನಲ್ಲಿ ಗರ್ಭೀಕರಿಸಿ, ತನ್ನಲ್ಲಿ ಲಯ ಮಾಡಿಕೊಂಡು ಅಖಂಡ ಪರಿಪೂರ್ಣಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ಸ್ಥಲವಾಯಿತು.

ನಿಃಕಲ ಶಿವತತ್ವದಲ್ಲಿ ಜ್ಞಾನ ಚಿತ್ತು ಉದಯವಾಯಿತ್ತು<br>
ಆ ಚಿತ್ತಿನಿಂದ ಅಕಾರ ಉಕಾರ ಮಕಾರಂಗಳೆಂಬ ಅಕ್ಷರತ್ರಯಂಗಳಾದವು<br>
ಅಕಾರವೇ ನಾದ ಉಕಾರವೇ ಬಿಂದು ಮಕಾರವೇ ಕಳೆ<br>
ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು.<br>
ಇಂತೀ ನಾಲ್ಕು ಒಂದಾದಲ್ಲಿ ಓಂಕಾರವೆಂಬ ಪ್ರಣವದುತ್ಪತ್ತಿಯಾಯಿತ್ತು.<br>
ಆ ಓಂಕಾರವೆಂಬ ಪ್ರಣವವೆ:<br>
ಅಖಂಡ ಪರಿಪೂರ್ಣ ಗೋಳಾಕಾರ ತೇಜೋಮೂರ್ತಿಯಪ್ಪ<br>
ಮಹಾಲಿಂಗ ನೋಡಾ.<br>
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

ಸಚ್ಚಿದಾನಂದ ಸ್ವರೂಪದ ನಿಃಕಲ ಪರತತ್ವದ ಜ್ಞಾನ ವಿಲಾಸಾನಂದ ಲೀಲೆಯಿಂದ ಈ ಮಹಾಲಿಂಗ ಉದಯವಾಯಿತು. ಅಖಂಡ ಪರಿಪೂರ್ಣಗೋಳಕಾಕಾರ ಮಹಾಲಿಂಗ ತನ್ನ ಸ್ವಲೀಲೆಯಿಂದ ಲಿಂಗಸ್ಥಲ ಅಂಗಸ್ಥಲವೆಂದು ಎರಡು ಪ್ರಕಾರವಾಯಿತು. ಅಖಂಡ ಪರಿಪೂರ್ಣಗೋಳಾಕಾರ ತೇಜೋಮೂರ್ತಿಯಾದ ಮಹಾಲಿಂಗ ತನ್ನ ಸ್ವಲೀಲಾ ಸ್ವತಂತ್ರತೆಯಿಂದ ತನ್ನ ತಾನರ್ಚಿಸಿ ಪೂಜಿಸಿಕೊಳ್ಳುವ ಒಂದು ಲೀಲಾ ವಿಲಾಸದಿಂದ ತನ್ನ ಅಖಂಡ ಚಿಚ್ಛಕ್ತಿಯ ಸಹಸ್ರಾಂಶದೊಳಗೆ ಒಂದುಂಶವನ್ನು ಬೇರ್ಪಡಿಸಿತು. ಅದೇ ಆತ್ಮವಾಯಿತು. ಮುಂದೆ ಈ ಮಹಾಲಿಂಗದ ಪಂಚಮುಖಗಳಿಂದ ಉದ್ಭವಿಸಿದ ಮಹಾಸಾದಾಖ್ಯ. ಶಿವಸಾದಾಖ್ಯ, ಅಮೂರ್ತಿಸಾದಾಖ್ಯ, ಮೂರ್ತಿಸಾದಾಖ್ಯ, ಕರ್ತೃಸಾದಾಖ್ಯಗಳಿಂದ ಮೈದೋರಿದ ತತ್ವಗಳು ಆತ್ಮಗಳಿಗೆ ದೇಹವಾದವು. ಶಿವನ ಐದು ಮುಖಗಳಲ್ಲಿ ಪಂಚಭೂತಾತ್ಮ ಉತ್ಪತ್ತಿಯಾಗಿ, ಪಂಚಭೂತವೇ ದೇಹ, ಆತ್ಮನೇ ದೇಹಿಯಾದ ಕಾರಣ, ದೇಹ-ದೇಹಿಯೆಂಬೆರಡು ಸಮರಸವಾಗಿ ಪಿಂಡವೆನಿಸಿತು. ಕರಣ ಚತುಷ್ಟಯಗಳು, ಪಂಚಪ್ರಾಣವಾಯುಗಳು, ಬುದ್ಧೀಂದ್ರಿಯಗಳು, ಶಬ್ದಾದಿ ಪಂಚವಿಷಯಗಳು, ವಾಗಾದಿ ಕರ್ಮೇಂದ್ರಿಯಗಳು ಹೀಗೆ ಚತುರ್ವಿಂಶತಿ ತತ್ವಯುಕ್ತವಾಗಿ ಶರೀರ ವ್ಯಕ್ತೀಕರಿಸಿತು. ಆತ್ಮರಿಗೆ ಇಂಥ ದೇಹ ಸಂಬಂಧವುಂಟಾಗಲು ಅಹಂಕಾರ ಮಮಕಾರಗಳಿಗೆ ಒಳಗಾಯಿತು. ದೇಹಕರಣಗಳೇ ನಾನು ಎಂಬ ಭಾವನೆ ಉಂಟಾಗಿ ಆತ್ಮಕ್ಕೆ ಅಜ್ಞಾನ ಮುಸುಕಿತು, ಅಜ್ಞಾನದಿಂದ ಬದ್ಧನಾದ ಈ ಆತ್ಮನೇ ಜೀವನೆನಿಸಿದ. ಅಜ್ಞಾನದಿಂದುತ್ಪತ್ತಿಯಾದ ಆಣವ, ಮಾಯಾ, ಕಾರ್ಮಿಕ ಎಂಬ ಮಲ ತ್ರಯಗಳಿಗೆ ಬದ್ಧನಾಗಿ ಅಶುದ್ಧಾತ್ಮನಾದ. ಲೋಕದ ಮಾಯೆಯಲ್ಲಿ ತನ್ನನ್ನು ಮರೆತ. ಪರಮಾತ್ಮನ ಅಂಶವೆನಿಸಿದ ಈ ಆತ್ಮ ಸತ್ವ ರಜ, ತಮೋಗುಣಾತ್ಮಕವಾದ ಪ್ರಕೃತಿ

ಯಲ್ಲಿ ಬೆರೆತು ಅದರ ಸುಖದುಃಖಗಳನ್ನು ಅನುಭವಿಸುವ ಜೀವಾತ್ಮನಾದ. ತನ್ನ ಮೂಲಸ್ವರೂಪವನ್ನೇ ಮರೆತು ಬದ್ಧಾತ್ಮನೆನಿಸಿದ. ಅವಿದ್ಯೆಯ ಶಕ್ತಿಭೇದದಿಂದ ಈ ಬದ್ಧಾತ್ಮ ನಾನಾ ಯೋನಿಗಳಲ್ಲಿ ನಾನಾ ರೂಪಗಳಲ್ಲಿ ಹುಟ್ಟಿದ. ಸ್ವಯಂಕೃತ ಕರ್ಮ ಕಾರಣವಾಗಿ ಜನನ–ಮರಣ ದುಃಖಕ್ಕೊಳಗಾದ. ಆದರೆ ಕಾಲಾನಂತರದಲ್ಲಿ ತನ್ನೊಳಗೇ ಅಡಗಿರುವ ಶುದ್ಧಾತ್ಮ ಈ ಬದ್ಧಾತ್ಮ ಶುದ್ಧವಾಗುವವರೆಗೆ ಅಂದರೆ ಮಲತ್ರಯಗಳಿಂದ ಬಿಡುಗಡೆ ಪಡೆಯುವವರೆಗೆ ಸುಪ್ತವಾಗಿದ್ದು, ಮುಕ್ತವಾದ ಕೂಡಲೇ ನಿಜದ ಅರಿವು ಮೂಡುವಂತೆ ಮಾಡುತ್ತದೆ. ಇಲ್ಲಿಂದ ಮುಂದೆ ಪುನಃ ಬದ್ಧನಾದ ಜೀವಾತ್ಮ ಶುದ್ಧನಾದ ಪರಮಾತ್ಮನಲ್ಲಿ ಸಮರಸತೆ ಪಡೆಯುವತನಕ ಷಟ್‌ಸ್ಥಲದ ಸೋಪಾನವನ್ನೇರಿ ಮುಂದು ವರಿಯುತ್ತದೆ.

ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧ ವಿದ್ಯಾ ಎಂಬ ಐದು ಶುದ್ಧ ತತ್ವಗಳು; ಪ್ರಕೃತಿ, ಅಂತಃಕರಣ ಚತುಷ್ಟಯ, ವಾಯುಪಂಚಕ, ಪಂಚಜ್ಞಾನೇಂದ್ರಿಗಳು, ಪಂಚ ಕರ್ಮೇಂದ್ರಿಯಗಳು, ಪಂಚ ತನ್ಮಾತ್ರೆಗಳು ಹಾಗೂ ಕಾಲ, ನಿಯತಿ, ಕಲಾ, ರಾಗ, ವಿದ್ಯಾ ಪುರುಷ' ಎಂಬ ಮುವತ್ತೊಂದು ಅಶುದ್ಧ ತತ್ವಗಳು ಹೀಗೆ ಒಟ್ಟು ಮುವತ್ತಾರು ತತ್ವ ಗಳನ್ನು ಸಿದ್ಧಲಿಂಗರು ತಮ್ಮ ವಚನಗಳಲ್ಲಿ ವಿವರ ವಿವರವಾಗಿ ಕೊಟ್ಟಿದ್ದಾರೆ. ಇವುಗಳ ಜೊತೆಗೆ ಪಂಚ ಸಾದಾಖ್ಯಗಳನ್ನು ತತ್ವಗಳಿಗೆ ಮೊದಲು ವಿವರಿಸುತ್ತಾರೆ. ಪಂಚಮೂರ್ತಿ ಲಿಂಗ ಸ್ಥಲ ಮತ್ತು ಪಿಂಡಸ್ಥಲಗಳಲ್ಲಿ ಇವುಗಳ ವಿವರವನ್ನು ಕಾಣಬಹುದು. ಅವುಗಳ ಪಂಚೀಕರಣವನ್ನು ಪಿಂಡಸ್ಥಲದಲ್ಲಿ ವಿವರಿಸಿದ್ದಾರೆ. ಕರಶಿವ ತತ್ವದ ನೆನಹು ಮಾತ್ರ ದಿಂದ ಹುಟ್ಟಿದ ಜಗತ್ತಿನ ಸ್ಥಿತಿಯನ್ನು ಈ ಕೆಳಗಿನ ವಚನದಲ್ಲಿ ವಿವರಿಸಿದ್ದಾರೆ.

ಸಚ್ಚಿದಾನಂದ ನಿತ್ಯಪರಿಪೂರ್ಣ ನಿಃಕಲ ಶಿವತತ್ವವು ತನ್ನಿಂದ ತಾನೆ
ಅಖಂಡ ಪರಿಪೂರ್ಣಗೋಳಕಾಕಾರ ಪರಂಜ್ಯೋತಿ ಸ್ವರೂಪವಪ್ಪ
ಮಹಾಲಿಂಗವಾಯಿತ್ತು ನೋಡಾ.
ಆ ಲಿಂಗದ ಮಧ್ಯದಲ್ಲಿ ಬೀಜದಿಂದ ವೃಕ್ಷವು ಉದಯವಾಗುವ ಹಾಂಗೆ
ಆ ಲಿಂಗವು ತನ್ನ ಇಚ್ಛಾಶಕ್ತಿಯ ಕೂಡಿಕೊಂಡು
ಜಗದುತ್ಪತ್ತಿ ಸ್ಥಿತಿ ಲಯುಂಗಳಿಗೆ ಕರ್ತೃವಾಗಿ,
ಸಕಲ ನಿಃಕಲವಾಗಿ,
ಪಂಚಮುಖ ದಶಭುಜ ಪಂಚನೇತ್ರ ದ್ವಿಪಾದ ತನುವೇಕ
ಶುದ್ಧ ಸ್ಫಟಿಕ ವರ್ಣಧ ಧಾತಿನಿಂದ ಒಪ್ಪುತ್ತಿಪ್ಪದು ಸದಾಶಿವಮೂರ್ತಿ.
ಆ ಸದಾಶಿವನ ಈಶಾನ್ಯ ಮುಖದಲ್ಲಿ ಆಕಾಶಪುಟ್ಟಿತ್ತು;
ತತ್ಪುರುಷ ಮುಖದಲ್ಲಿ ವಾಯು ಪುಟ್ಟಿತ್ತು;
ಅಘೋರ ಮುಖದಲ್ಲಿ ಅಗ್ನಿ ಪುಟ್ಟಿತ್ತು;

ವಾಮದೇವ ಮುಖದಲ್ಲಿ ಅಪ್ಪು ಪುಟ್ಟಿತ್ತು;
ಸದ್ಯೋಜಾತ ಮುಖದಲ್ಲಿ ಪೃಥ್ವಿ ಪುಟ್ಟಿತ್ತು;
ಮನಸ್ಸಿನಲ್ಲಿ ಚಂದ್ರ, ಚಕ್ಷುವಿನಲ್ಲಿ ಸೂರ್ಯ;
ಪರಮಾತ್ಮ ಸ್ವರೂಪವಪ್ಪ ಗೋಪ್ಯ ಮುಖದಲ್ಲಿ ಆತ್ಮ ಹುಟ್ಟಿದನು.
ಇಂತು ಪೃಥ್ವಿ ಅಪ್ಪು ವಾಯು ತೇಜ ಆಕಾಶ ಚಂದ್ರ ಸೂರ್ಯ ಆತ್ಮನೆಂಬ
ಶಿವನ ಅಷ್ಟಾತನು ಮೂರ್ತಿಯೆ ಸಮಸ್ತ ಜಗತ್ತಾಯಿತ್ತು.
ಆ ಜಗತ್ತುವಾದೆಂದಡೆ;
ಚತುರ್ದಶ ಭುವನಂಗಳು, ಸಪ್ತ ಸಮುದ್ರಂಗಳು,
ಸಪ್ತ ದ್ವೀಪಂಗಳು, ಸಪ್ತ ಕಾಲಪರ್ವತಂಗಳು,
ಸಮಸ್ತ ಗ್ರಹ ರಾಶಿ ತಾರಾಪಥಂಗಳಂ ಗರ್ಭೀಕರಿಸಿಕೊಂಡು
ಬ್ರಹ್ಮಾಂಡವೆನಿಸಿತ್ತು,
ಇದು ಜಗದುತ್ಪತ್ತಿ ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಹೀಗೆ ಅವಿದ್ಯೆಯಿಂದ ಮೋಹಿತವಾದ ಜೀವ ತನ್ನ ಶುದ್ಧ ಬ್ರಹ್ಮೈಕ್ಯ ಜ್ಞಾನವನ್ನು ಕಳೆದುಕೊಂಡು ತನ್ನ ಕರ್ಮಾನುಸಾರವಾಗಿ ದೇವ, ತಿರ್ಯಕ್, ಮನುಷ್ಯ ಮುಂತಾದ ನಾನಾ ಯೋನಿಗಳಲ್ಲಿ ಹುಟ್ಟಿ ಭವರಾಟಳದಲ್ಲಿ ಸುತ್ತುತ್ತಿರುತ್ತವೆ. ಈ ಜೀವಾತ್ಮನನ್ನು ಸ್ಥೂಲ, ಸೂಕ್ಷ್ಮಕಾರಣ ತನುತ್ರಯಗಳು ಆವರಿಸಿಕೊಂಡಿರುತ್ತವೆ. ಈ ತನುತ್ರಯಗಳೇ ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರು ತೆರನಾಗುತ್ತವೆ. ಕ್ರಿಯಾಭೇದದಿಂದ ಈ ಮೂರು ಷಡಂಗಗಳಾಗುತ್ತವೆ, ಯೋಗಾಂಗವೇ ಐಕ್ಯನೆಂದು ಶರಣನೆಂದು ಎರಡು ತೆರನಾಯಿತು; ಭೋಗಾಂಗ ಪ್ರಾಣಲಿಂಗಿ ಪ್ರಸಾದಿಲಿಂಗಿ ಎಂದು ಎರಡು ತೆರನಾಯಿತು; ತ್ಯಾಗಾಂಗ ಮಾಹೇಶ್ವರ ಭಕ್ತ ಎಂದು ಎರಡು ತೆರನಾಯಿತು. ಈ ಅಂಗಷಟ್ಸ್ಥಲದಿಂದ ಪೂಜೆಗೊಳ್ಳಲು ಲಿಂಗಷಟ್ಸ್ಥಲವಾಯಿತು; ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ ಎಂದು ಮೂರು ತೆರನಾದ ಲಿಂಗ ಮತ್ತೆ ಎರಡೆರಡಾಗಿ ಆರು ತೆರನಾಯಿತು; ಭಾವಲಿಂಗವು ಮಹಾಲಿಂಗ ಪ್ರಸಾದಲಿಂಗವೆಂದೂ, ಪ್ರಾಣಲಿಂಗವು ಜಂಗಮಲಿಂಗ ಶಿವಲಿಂಗವೆಂದೂ, ಇಷ್ಟಲಿಂಗವು ಗುರುಲಿಂಗ ಆಚಾರಲಿಂಗವೆಂದೂ ಒಬ್ಬ ಶಿವ ಆರು ತೆರನಾದ. ಈ ಷಡಂಗ, ಷಡ್ಲಿಂಗಗಳ ಉತ್ಪತ್ತಿಯ ವಿವರಗಳನ್ನು ತಮ್ಮ ವಚನದಲ್ಲಿ ಶಿವಯೋಗಿಗಳು ಕೊಟ್ಟಿದ್ದಾರೆ. ಈ ಷಡಂಗಗಳು ಮತ್ತೆ ಷಡ್ಲಿಂಗಗಳಲ್ಲಿ ಬೆರೆತು ಅರತು ಹೋಗುವುದನ್ನೇ ಲಿಂಗಾಂಗ ಸಾಮರಸ್ಯ, ಇದೇ ಷಟ್ಸ್ಥಲ ಸಿದ್ಧಾಂತ ಎಂದು ಕರೆಯುವರು. ಇದನ್ನು ಸಾಧಿಸುವುದಕ್ಕಾಗಿಯೇ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಸ್ಥಲಗಳನ್ನು ನಿರೂಪಿಸಿದ್ದಾರೆ.

ಮಲತ್ರಯಗಳಿಂದ ಬದ್ಧನಾದ ಜೀವ ಪೂರ್ವಜನ್ಮಾಕೃತ ಪುಣ್ಯ ವಿಶೇಷಗಳಿಂದ

ನಿಜದತ್ತ ದೃಷ್ಟಿಹರಿಸುತ್ತದೆ. ಕ್ರಮೇಣ ತನ್ನ ನಿಜದರಿವು ಗೋಚರವಾಗತೊಡಗುತ್ತದೆ. ಇಂಥ ಮಂಗಲ ಮುಹೂರ್ತವನ್ನೇ 'ಪಿಂಡಸ್ಥಲ'ವೆಂದು ಕರೆದಿದ್ದಾರೆ. ಈ ಅವಸ್ಥೆಯಲ್ಲಿ ಪಾಪಪಲ್ಲಟವಾಗಿ ಶುದ್ಧಾಂತಃಕರಣ ಜೀವಿಯಾಗುತ್ತಾನೆ. ಆ ಆತ್ಮನಿಗೆ ಊರ್ಧ್ವಗತಿ ಪ್ರಾಪ್ತವಾಗುತ್ತದೆ. ನಿಜಸ್ವರೂಪವನ್ನು ತಿಳಿದುಕೊಳ್ಳಬೇಕೆಂಬ ಆಕಾಂಕ್ಷೆ ಬಲುಹಾಗುತ್ತದೆ. ಆ ಅವಸ್ಥೆಯನ್ನು ಸಿದ್ಧಲಿಂಗ ಶಿವಯೋಗಿಗಳ ಮಾತಿನಲ್ಲಿಯೇ ನೋಡೋಣ:

ದೇಹವ ಮಱೆಗೊಂಡಿಪ್ಪ ಆತ್ಮನಂತೆ
ಶಕ್ತಿಯ ಮಱೆಗೊಂಡಿಪ್ಪ ಶಿವನಂತೆ
ಕ್ಷೀರವ ಮಱೆಗೊಂಡಿಪ್ಪ ತುಪ್ಪದಂತೆ
ವಾಚ್ಯವ ಮಱೆಗೊಂಡಿಪ್ಪ ಅವಾಚ್ಯದಂತೆ
ಲೋಕಾರ್ಥದೊಳಡಗಿಪ್ಪ ಪರಮಾರ್ಥದಂತೆ
ಎನ್ನ ಆತ್ಮದೊಳಡಗಿಪ್ಪ ಪರಮಾರ್ಥ ತತ್ವವು
ಬೀಜದೊಳಡಗಿದ ವೃಕ್ಷದಂತೆ ಇದ್ದಿತಯ್ಯಾ.
ನಾನಱಿಯದ ಮುನ್ನ ಎನ್ನೊಳಡಗಿದ್ದಿತ್ತಯ್ಯಾ, ಶರಣ ಸಂಗಸಂಬಂಧ!
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ತಾನು ತಿಳಿಯುವುದಕ್ಕೆ ಮುನ್ನವೇ ತನ್ನೊಳಡಗಿಪ್ಪ ಶರಣ ಲಿಂಗ ಸಂಬಂಧವನ್ನು ಅರಿಯುವುದಕ್ಕೆ ಅನೇಕ ರೀತಿಯ ಸಾಧನೆಗಳನ್ನು ಮಾಡಬೇಕಾಗುತ್ತದೆ. ಅದಕ್ಕೆ ತಕ್ಕ ಸಂಸ್ಕಾರಗಳು ಬೇಕಾಗುತ್ತವೆ. ಅರಿವನ್ನು ಪಡೆಯುವ ಮಾರ್ಗದಲ್ಲಿ ಕ್ರಿಯಾತ್ಮಕವಾಗಿ ಚಲಿಸುತ್ತಿರುವಾಗ ನಿಧಾನವಾಗಿ ನಿಜ ಸ್ವರೂಪವನ್ನು ತಿಳಿದುಕೊಳ್ಳತೊಡಗುತ್ತಾನೆ. ಕಾಲಾಗ್ನಿಯೋಪಾದಿಯ ಕಾಂತಿಯುಳ್ಳ, ಅನಂತ ಕೋಟಿ ಮಿಂಚುಗಳ ಪ್ರಭೆಯ ಪ್ರಕಾಶವನ್ನುಳ್ಳ, ಅನಂತಕೋಟಿ ಸೋಮ ಸೂರ್ಯರ ಪ್ರಭೆಯ ಪ್ರಕಾಶವನ್ನುಳ್ಳ,ಮುತ್ತು ಮಾಣಿಕ್ಯ ನವರತ್ನದ ಕಿರಣಂಗಳ ಪ್ರಭೆಯ ಪ್ರಕಾಶವನ್ನುಳ್ಳ ವಸ್ತುವನ್ನು ತನ್ನ ಪಿಂಡದ ಮಧ್ಯದಲ್ಲಿ ಉದಯವಾಗಿ ತೋರುವ ಪಿಂಡಜ್ಞಾನದ ಮಹದರುಹನ್ನು ಪರಬ್ರಹ್ಮವೆಂದು ತಿಳಿಯುತ್ತಾನೆ. ತಾನು ಕಂಡುಕೊಂಡ ಆ ಪಿಂಡಜ್ಞಾನದ ಕಳೆ ವಾಕ್ಕನ್ನು ಮೀರಿತ್ತು; ಮನಸ್ಸನ್ನು ಮೀರಿತ್ತು; ಅಕ್ಷರಗಳನ್ನು ಮೀರಿತ್ತು; ಜ್ಞಾನವನ್ನು ಮೀರಿ ತೋರುವ ನಿರಂಜನ ಸೂಕ್ಷ್ಮ ವಸ್ತುವಾಗಿ ಕಂಡಿತ್ತು. ಆ ಮಿಂಚಿನ ಪ್ರಭೆಯಲ್ಲಿ ಪಂಚವದನನನ್ನು ಕಾಣುತ್ತಾನೆ. ನಿರಾಕಾರ ಸಾಕಾರವಾಗಿ, ನಿರ್ವಿಕಾರದ ಸೋಂಕಿನ ಸೊಬಗೆ ತಾನಾಗಿರುವ ಆತ್ಮಜ್ಯೋತಿ, ಮನೋಜ್ಯೋತಿ, ಸ್ವಯಂ ಜ್ಯೋತಿ, ಕೇವಲ ಪರಂಜ್ಯೋತಿ ಜ್ಞಾನಾನುದಯನನ್ನು ಕಾಣುತ್ತವೆ. ಆಗ

ಸ್ಫಟಿಕದ ಘಟದೊಳಗೆತ್ತಿದ ಜ್ಯೋತಿ,
ಒಳಹೊಱಗೊಂದೆ ಸ್ವಯವಾಗಿ ಪ್ರಜ್ವಲಿಸುವಂತೆ,
ಎನ್ನೊಳಗಿಪ್ಪಾತನೂ ಹೊಱಗಿಪ್ಪಾತನೂ ಒಂದೇ ವಸ್ತುವೆಂಬ
ಆದ್ಯಂತವು ಕಾಣಬಂದಿತ್ತು ನೋಡಾ,

ಪರತತ್ವವೇ ಶರಣ ತಾನೆ ನೋಡಾ,
ಬೇಱೊಂದು ಸ್ವರೂಪಲ್ಲಿ ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಎಂಬ ಪಿಂಡಜ್ಞಾನೋತ್ಪತ್ತಿಯಾಗುತ್ತದೆ. ತಾನು ಆ ಪರಮ ಪರಂಜ್ಯೋತಿಯ ಮಹದಾನಂದ ಸ್ವರೂಪ ತಾನೆಂಬ ಜ್ಞಾನೋದಯವಾದ ಕೂಡಲೇ ಕ್ಷಣಿಕಾನಂದದ ನೆಲೆ–ಸೆಲೆಯಾದ ಸಂಸಾರ ರತಿಯ ಬಗ್ಗೆ ಜಿಗುಪ್ಸೆಯುಂಟಾಗಿ ಭಕ್ತರತಿ ಯುಕ್ತ ಚಿತ್ತ ಹರಿದು ಸಂಸಾರದ ಬಗ್ಗೆ ಹೇಯ ಭಾವನೆಯುಂಟಾಗುತ್ತದೆ.

ಹೆಂಗಳೊಲವೆಂಬುದು ಅಂಗಜನ ಅರಮನೆ;
ಭಂಗಂ ಬಡುತ್ತಿದ್ದಾರೆ ನೋಡಾ ತ್ರೈಜಗವೆಲ್ಲಾ!
ಇದು ಕಾರಣ,
ನಿಮ್ಮ ಶರಣರು ಲಿಂಗ ನೆನಹೆಂಬ ಕಿಚ್ಚುಹಿಡಿಯಲು
ಅಂಗಜನ ಅರಮನೆ ಉರಿದು, ಭವ ಹೆಱಹಿಂಗಿತ್ತು ನೋಡಾ,
ಇದೇ ಲಿಂಗದೊಲವು; ನಿಜೈಕ್ಯಪದ
ಉಳಿದುವೆಲ್ಲಾ ಹುಸಿ ಭ್ರಮೆ ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಎಂದು ಅಂಗಸುಖಕ್ಕೆ ಗೌಣಸ್ಥಾನವನ್ನಿತ್ತು ಲಿಂಗ ಸುಖಕ್ಕೆ ಚಿತ್ತವನ್ನು ಮಾರುಗೊಡುತ್ತಾನೆ. ಸಂಸಾರವನ್ನು ತ್ಯಜಿಸದಿದ್ದರೂ ಸಂಸಾರ ಸುಖದ ಬಗ್ಗೆ ಒಲವು ಕ್ಷೀಣಿಸುತ್ತಾ ಬಂದು ನಿಜೈಕ್ಯಪದದತ್ತ ಮನಸ್ಸುವಾಲುತ್ತದೆ. ಈ ಹಂತದಲ್ಲಿ ಜೀವಾತ್ಮನಿಗೆ ಗುರು ಕರುಣೆಯ ವರ್ಷಧಾರೆ ಹರಿದು ಬರುತ್ತದೆ. ಇದು ಜೀವಾತ್ಮನ ಸಾಧಕ ಜೀವನದಲ್ಲಿ ಅತ್ಯಂತ ಮಹತ್ವದ ಘಟ್ಟ. ವೀರಶೈವದ ಪ್ರಕಾರ ಗುರುಕರುಣೆಯಿಲ್ಲದೆ ಶಿವಕರುಣೆ ದೊರಕುವುದಿಲ್ಲ, 'ಶಿವ ಪಥವನರಿವಡೆ ಗುರುಪಥವೆ ಮೊದಲು' ಎಂಬ ಶರಣವಾಣಿ ಸಾಕ್ಷಿ.

ಪರಮಜ್ಞಾನದ ದೃಷ್ಟಿಯಿಂದ ಎದುರಿಗೆ ತೋರುವ ಸಂಸಾರ ಪ್ರಪಂಚ ನಿವೃತ್ತಿಯ ಮಾಡಿದ ಶರಣನಿಗೆ ಅಂತರಂಗದ ಜ್ಞಾನಗುರುವೆ ಸಾಕಾರವಾಗಿ ಪ್ರತ್ಯಕ್ಷವಾಗಿ ಸದ್ಗುರುವಾಗಿ ಬಂದ ಭೇದವನ್ನರಿದು ಗುರುಪಾಸ್ತಿಯ ಮಾಡುತ್ತಾನೆ. ಆ ಗುರು ಅವನ ಭವಿತನವ ಕಳೆದು ಭಕ್ತನ ಮಾಡುತ್ತಾನೆ. ಪಂಚಭೂತ ಪ್ರಕೃತಿ ಕಾಯವ ಕಳೆದು ಪ್ರಸಾದ ಕಾಯವನ್ನಾಗಿ ಮಾಡುತ್ತಾನೆ. ವಾಯು ಪ್ರಾಣಿಯ ಕಳೆದು ಲಿಂಗಪ್ರಾಣಿಯನ್ನಾಗಿ ಮಾಡುತ್ತಾನೆ. ಅಂಗೇಂದ್ರಿಯವ ಕಳೆದು ಲಿಂಗೇಂದ್ರಿಯವನ್ನಾಗಿ ಮಾಡುತ್ತಾನೆ. ಅಂಗ ವಿಷಯ ಭ್ರಮೆಯನ್ನು ಕಳೆದು ಲಿಂಗ ವಿಷಯ ಭ್ರಾಂತಕನನ್ನಾಗಿ ಮಾಡುತ್ತಾನೆ. ಭವತಿಮಿರವೆಂಬ ಅಜ್ಞಾನವನ್ನು ಕಳೆದು ಜ್ಞಾನವೆಂಬ ಅಂಜನವನೆಚ್ಚಿ ಶಿವಪಥವಿದೆಂದು

ತೋರಿಸುತ್ತಾನೆ. ಹೀಗೆ ಗುರುಕರುಣೆಯನ್ನು ಪಡೆದ ಆತ್ಮನಿಗೆ ಗುರು ತ್ರಯಾದೀಕ್ಷೆಯನ್ನು ಕೊಡುತ್ತಾನೆ.

ವೇಧಾದೀಕ್ಷೆ ಮಂತ್ರದೀಕ್ಷೆ ಕ್ರಿಯಾದೀಕ್ಷೆಯೆಂಬ
ದೀಕ್ಷಾತ್ರಯಂಗಳಿಂದೆ ತನುತ್ರಯಂಗಳ ಪೂರ್ವಾಶ್ರಯವ ಕಳೆದು
ಲಿಂಗತ್ರಯಂಗಳ ಸಂಬಂಧಿಸಿದನದೆಂತೆಂದಡೆ:
ವೇಧಾದೀಕ್ಷೆಯೆಂದು ಶ್ರೀಗುರು ತನ್ನ ಹಸ್ತವ
ಶಿಷ್ಯನ ಮಸ್ತಕದಲ್ಲಿ ಸಂಯೋಗವ ಮಾಡಿದುದು;
ಮಂತ್ರ ದೀಕ್ಷೆಯೆಂದು ಶ್ರೀಗುರು ಪ್ರಣವ ಪಂಚಾಕ್ಷರಿಯ ಮಂತ್ರ
ಕರ್ಣದಲ್ಲಿ ಉಪದೇಶಿಸಿದುದು;
ಕ್ರಿಯಾದೀಕ್ಷೆಯೆಂದು ಆ ಮಂತ್ರ ಸ್ವರೂಪವನೆ
ಇಷ್ಟಲಿಂಗ ಸ್ವರೂಪವ ಮಾಡಿ ಕರಸ್ಥಲದಲ್ಲಿ ಸಂಬಂಧಿಸಿದುದು.
ಇದು ಕಾರಣ,
ವೇಧಾದೀಕ್ಷೆಯಿಂದ ಕಾರಣ ತನುವಿನ ಪೂರ್ವಾಶ್ರಯವಳಿದು
ಭಾವಲಿಂಗ ಸಂಬಂಧವಾಯಿತ್ತು.
ಮಂತ್ರ ದೀಕ್ಷೆಯಿಂದ ಸೂಕ್ಷ್ಮ ತನುವಿನ ಪೂರ್ವಾಶ್ರಯವಳಿದು
ಪ್ರಾಣಲಿಂಗ ಸಂಬಂಧವಾಯಿತ್ತು.
ಕ್ರಿಯಾದೀಕ್ಷೆಯಿಂದ ಸ್ಥೂಲ ತನುವಿನ ಪೂರ್ವಾಶ್ರಯವಳಿದು
ಇಷ್ಟಲಿಂಗ ಸಂಬಂಧವಾಯಿತ್ತು.
ಅಂಗ ತ್ರಯಂಗಳಲ್ಲಿ ಲಿಂಗತ್ರಯಂಗಳ ಧರಿಸಿದೆನಯ್ಯ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಈ ದೀಕ್ಷಾ ತ್ರಯದಿಂದ ಶಿಷ್ಯನ ತನು ಜಡತನುವಾಗಿರದೆ ಮಂತ್ರತನುವೆನಿಸುವುದೇ ಈ ದೀಕ್ಷೆಯ ಉದ್ದೇಶ:

ಶ್ರೀಗುರು ಕ್ರಿಯಾದೀಕ್ಷೆಯಿಂದ ತನುಗುಣವ ಭಸ್ಮೀಕೃತವ ಮಾಡಿದ ಬಳಿಕ
ಅದು ಜಡತನುವಲ್ಲ
ಶಿವ ಸತ್ಕ್ರಿಯಾಚಾರದ ಮೂಲ ಸೂತ್ರವೇ ತನ್ನ ತನುವೆಂದಱಿವುದು.
ಶ್ರೀಗುರು ಮಂತ್ರದೀಕ್ಷೆಯಿಂದ ಮನದ ಪೂರ್ವಾಶ್ರಯವ ಕಳೆದು
ಮನಕ್ಕೆ ಘನ ನೆನಹ ಸಂಬಂಧಿಸಿರನಾಗಿ,
ಮನ ನಿರ್ಮಲವಾಗಿ ಲಿಂಗಕ್ಕಾಶ್ರಯವೆಂದಱಿವುದು.
ಶ್ರೀಗುರು ಜ್ಞಾನದೀಕ್ಷೆಯಿಂದ ಪ್ರಾಣನ ಪ್ರಪಂಚನ ಪಶುಭಾವವ ಕಳೆದು
ಅಖಂಡಿತ ಜ್ಞಾನಲಿಂಗ ಕಳೆಯ ತನ್ನ ಪ್ರಾಣನಾಥನೆಂದು

ತಿಳಿಹಿದನಾಗಿ, ಪ್ರಾಣನ ಮಲಿನವೆಂಬುದು
ಪಶುಭಾವವಲ್ಲದೆ ಲಿಂಗಭಾವವಲ್ಲ.

ಹೀಗೆ ಆ ಪರಶಿವ ತಾನೆ ಗುರುರೂಪಾಗಿ ಬಂದು ಸಂದೇಹಕ್ಕೆ ಕಾರಣ ಲೇಶವೂ ಇಲ್ಲದಂತೆ; ಹಸ್ತಮಸ್ತಕ ಸಂಯೋಗದಂತ, ಶಿಷ್ಯನ ಮಸ್ತಕದಲ್ಲಿ ತನ್ನ ಹಸ್ತಕಮಲ ವನ್ನಿರಿಸಿ, ಲಿಂಗಕಳೆಯನ್ನು ಪ್ರತಿಷ್ಠಿಸಿ, ಆತ್ಮನಿಗೆ ಆವರಿಸಿದ್ದ ಆಣವ, ಕಾರ್ಮಿಕ, ಮಾಯಾ ಮಲತ್ರಯಗಳನ್ನು ಪರಿಚ್ಛೇದಿಸಿ ಶಿಷ್ಯನನ್ನು ಪರಿಶುದ್ಧಾತ್ಮನನ್ನಾಗಿ ಮಾಡು ತ್ತಾನೆ. ಕಾರಣ, ಸೂಕ್ಷ್ಮ, ಸ್ಥೂಲ ತನುಗಳನ್ನು ಈ ಮಲತ್ರಯಗಳಿಂದ ಬಿಡುಗಡೆ ಮಾಡುವುದಕ್ಕೆಂದೇ ಭಾವ, ಪ್ರಾಣ ಇಷ್ಟಗಳಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡುತ್ತಾನೆ. ಇದೇ ದೀಕ್ಷಾತ್ರಯದ ಉದ್ದೇಶ ಕೂಡ ಮುಂದೆ ಸದಾಚಾರದಲ್ಲಿ ನಡೆದು ಶಿವಾಚಾರವನ್ನು ಆಚರಣೆಯಲ್ಲಿ ತರಲು ಲಿಂಗ, ವಿಭೂತಿ, ರುದ್ರಾಕ್ಷಿಗಳನ್ನು ಧರಿಸಿಕೊಂಡು ಪಂಚಾಕ್ಷರೀ ಮಂತ್ರವನ್ನು ಜಪಮಂತ್ರವನ್ನಾಗಿ ಸ್ವೀಕರಿಸುತ್ತಾನೆ. ಅವನಲ್ಲಿ ಶ್ರದ್ಧಾಭಕ್ತಿ ಅಳವಡುತ್ತದೆ. ಸಂಸಾರದ ವ್ಯಾಮೋಹ ಕಳಚಿ ಲಿಂಗ ವ್ಯಾಮೋಹ ಆವರಿಸುವುದೇ ಶ್ರದ್ಧೆ, ಶ್ರದ್ಧೆಯುಳ್ಳ ವನೆ ಭಕ್ತ. ಶಿವಯೋಗಿಗಳು ಭಕ್ತನನ್ನು ಕುರಿತು ಹೇಳುತ್ತಾರೆ:

ಸದಾಚಾರದಲ್ಲಿ ನಡೆವವನ
ಶಿವನಲ್ಲಿ ಭಕ್ತಿಯಾಗಿಪ್ಪವನ
ಶಿವಲಾಂಛನವ ಕಂಡಲ್ಲಿ ವಂದನೆಗೈವುತಿಪ್ಪವನ
ಲಿಂಗ ಜಂಗಮವ ಒಂದೆ ಭಾವದಲ್ಲಿ ಕಂಡು
ಭೃತ್ಯಾಚಾರ ಸದಾಚಾರ ಮುಕ್ತನಾಗಿರಬಲ್ಲರೆ ಭಕ್ತನ ಸ್ಥಲವಿದೆಂಬೆನಯ್ಯ.
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಭಕ್ತಾದ್ಯೈಕ್ಯಾಂತವಹ ಷಡಂಗಕ್ಕೆ
ಭಕ್ತನಂಗವೆ ಆದಿಯಾಗಿ
ಆ ಭಕ್ತಂಗೆ ಪೃಥ್ವಿಯೆ ಅಂಗವಾಗಿ
ಆ ಪೃಥ್ವಿಯ ಅಂಗವನ್ನುಳ್ಳ ಭಕ್ತನಲ್ಲಿಯೆ
ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನಪ್ಪ
ಅಂಗ ಪಂಚಕವು ಗರ್ಭೀಕೃತವಾಗಿ
ಆ ಭಕ್ತನಂಗದಲ್ಲಿಯೆ ಆಚಾರಲಿಂಗ ಸ್ವಾಯತವಾಗಿ
ಆ ಆಚಾರಲಿಂಗದಲ್ಲಿಯೆ
ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗವೆನಿಸುವ
ಲಿಂಗ ಪಂಚಕವು ಗರ್ಭೀಕೃತವಾಗಿ
ಆಚಾರಲಿಂಗವೆ ಸರ್ವಕಾರಣವಾಗಿ

ಇಂತೀ ಷಡ್ವಿಧಲಿಂಗದಲ್ಲಿಯೆ ಬೆಳಸಿ ಬೇಱಿಲ್ಲದಿರಬಲ್ಲರೆ ಭಕ್ತನೆಂಬೆನಯ್ಯ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಭಕ್ತಸ್ಥಲ್ಲಿಯೇ ಉಳಿದ ಐದು ಸ್ಥಲಗಳ ಸ್ಥಿತಿಯನ್ನು ಸಾಧಿಸಬಹುದಾದರೂ ಇಲ್ಲಿ ಆಚಾರವೇ ಮುಖ್ಯ. ಭಕ್ತನಿಗೆ ಪೃಥ್ವಿಯೇ ಅಂಗ. ಶ್ರದ್ಧಾಭಕ್ತಿಯನ್ನು ಆಚರಿಸಿದ ಸದ್ಭಕ್ತನಿಗೆ ಅದರಲ್ಲಿ ಕೃತ ನಿಶ್ಚಯ ನೆಲೆಗೊಂಡು ನಿಷ್ಠಾಮುಖದಿಂದ ಮುನ್ನಡೆದು ಆ ಭಕ್ತನೇ ಮಾಹೇಶ್ವರನಾಗುತ್ತಾನೆ. ಅನೃತ, ಅನಾಚಾರ, ಪರಹಿಂಸೆ, ಪರಧನ, ಪರಸ್ತ್ರೀ ಗಮನ, ಪರನಿಂದೆಗಳನ್ನು ಬಿಟ್ಟು ಲಿಂಗ ನಿಷ್ಠೆಯಿಂದ ಶುದ್ಧಾತ್ಮನಾಗಿ ಪರಿಣಮಿಸುತ್ತಾನೆ. ಇಂಥ ಮಾಹೇಶ್ವರನ ಲಕ್ಷಣಗಳನ್ನು ಕುರಿತು ಶಿವಯೋಗಿಗಳು ಈ ರೀತಿ ಹೇಳುತ್ತಾರೆ.

ಜಲವೇ ಲಿಂಗವಾದ ಮಾಹೇಶ್ವರನಲ್ಲಿ
ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಭಕ್ತನಪ್ಪ
ಅಂಗ ಪಂಚಕವು ಗರ್ಭೀಕೃತವಾಗಿ
ಆ ಮಾಹೇಶ್ವರಂಗೆ ಗುರುಲಿಂಗ ಸಂಬಂಧವಾಗಿ
ಆ ಗುರುಲಿಂಗದಲ್ಲಿಯೆ
ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ
ಮಹಾಲಿಂಗ ಆಚಾರಲಿಂಗವೆನಿಸುವ
ಲಿಂಗ ಪಂಚಕವು ಗರ್ಭೀಕೃತವಾಗಿ
ಗುರುಲಿಂಗವೆ ಆಶ್ರಯವಾಗಿ
ಇಂತೀ ಷಡ್ವಿಧಲಿಂಗದಲ್ಲಿಯೆ
ಬೆರಸಿ ಬೇಱಿಲ್ಲದಿರಬಲ್ಲರೆ ಮಾಹೇಶ್ವರನೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಜಲವೇ ಅಂಗವಾದ ಮಾಹೇಶ್ವರ ಗುರುಲಿಂಗವನ್ನು ಪೂಜಿಸುತ್ತಾ ನೈಷ್ಠಿಕಾ ಭಕ್ತಿಯನ್ನು ಮೆರೆಯುತ್ತಾನೆ. ನೈಷ್ಠಿಕಾ ಬಲದಿಂದ ಶಿವಪ್ರಸನ್ನತೆಯನ್ನು ಪಡೆಯುತ್ತಾನೆ. ಇದರಿಂದ ಪ್ರಸಾದತ್ವವನ್ನು ಪಡೆದು ಪ್ರಸಾದಿಯಾಗುತ್ತಾನೆ. ಕಾಯಾ ವಾಚಾ ಮನಸಾ ಸತ್ಯಶುದ್ಧನಾಗಿ, ವಿಶ್ವಾಸ ಶ್ರದ್ಧೆಯೆಡೆಗೊಂಡು ಶರೀರ ಪ್ರಾಣಗಳನ್ನು ಒಡೆಯಂಗೆ ಸಮರ್ಪಿಸಿ ಪ್ರಸಾದವ ಕೈಕೊಳ್ಳಬಲ್ಲರೆ ಅವನು ಪ್ರಸಾದಿ ಎಂದು ಶಿವಯೋಗಿಗಳು ಪ್ರಸಾದಿಯ ಲಕ್ಷಣ ಹೇಳುತ್ತಾರೆ.

ಸರ್ವಾಂಗವನು ಲಿಂಗನಿಷ್ಠೆಯಿಂದ ಘಟ್ಟಿಗೊಳಿಸಿ
ಮನವ ಉನ್ಮನಿಯಾವಸ್ಥೆಯನೆಯಿಸಿ
ಶತ ತತ್ವದಲ್ಲಿ ಸ್ಥೈತಿಟ್ಟು ಲಿಂಗಕ್ಕೆ ಅರ್ಪಿಸಿದ ನೈವೇದ್ಯವ
ಲಿಂಗ ನೆನಹಿನಲ್ಲಿಯೆ ಸ್ವೀಕರಿಸುವುದು
ಲಿಂಗಾರ್ಪಿತವ ವಿಸರ್ಜಿಸುವುದಯ್ಯ!

ತಟ್ಟುವ ಮುಟ್ಟುವ ಸೋಂಕುವ ವರ್ಮವನಱಿದು
ಲಿಂಗ ಮುಖಕ್ಕೆ ನಿವೇದಿಸಿ
ಲಿಂಗ ಪ್ರಸಾದವ ಸ್ವೀಕರಿಸುತಿರಬಲ್ಲರೆ
ಪ್ರಸಾದಿಸ್ಥಲವಿದೆಂಬೆನಯ್ಯ!
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!

ಅಗ್ನಿಯೆ ಅಂಗವಾದ ಪ್ರಸಾದಿಯಲ್ಲಿ
ಪ್ರಾಣಲಿಂಗಿ ಶರಣ ಐಕ್ಯಭಕ್ತ ಮಾಹೇಶ್ವರನಪ್ಪ
ಅಂಗ ಪಂಚಕವು ಗರ್ಭೀಕೃತವಾಗಿ
ಆ ಪ್ರಸಾದಿಯಲ್ಲಿ ಶಿವಲಿಂಗ ಸಂಬಂಧವಾಗಿ
ಆ ಶಿವಲಿಂಗದಲ್ಲಿಯೆ
ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಆಚಾರಲಿಂಗ ಗುರುಲಿಂಗವೆನಿಸು
ಲಿಂಗ ಪಂಚಕವು ಗರ್ಭೀಕೃತವಾಗಿ
ಶಿವಲಿಂಗವೆ ಸರ್ವಾಶ್ರಯವಾಗಿ
ಇಂತೀ ಷಡ್ವಿಧಲಿಂಗದಲ್ಲಿ ಬೆರಸಿ ಬೇಱಿಲ್ಲದಿರಬಲ್ಲರೆ
ಪ್ರಸಾದಿಯೆಂಬೆನಯ್ಯ.
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!

ಈ ಸ್ಥಲದಲ್ಲಿ ಆಚರಣೆಗೊಳ್ಳುವ ಸಾಧಕನಿಗೆ ಭಗವಂತನ ಕೃಪಾವರ್ಷಧಾರೆ ಕರೆದಿರುತ್ತದೆ. ನಿಷ್ಠೆಗೊಂಡ ಭಕ್ತಿ ಪ್ರಸಾದಿಸ್ಥಲದಲ್ಲಿ ಅವಧಾನ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಇದರಿಂದ ಪರಮನತ್ತ ಮನಸ್ಸು ಹರಿದು ಪರಮಾತ್ಮನ ಜ್ಞಾನಪ್ರಸಾದ ಪ್ರಾಪ್ತಿಯಾಗುತ್ತದೆ. ಜ್ಞಾನ ಪ್ರಸಾದಿಗೆ ಅಗ್ನಿ ಅಂಗವಾಗುತ್ತದೆ. ಇಚ್ಛಾಶಕ್ತಿ ಸಮೇತವಾದ ಶಿವಲಿಂಗ ಪೂಜ್ಯವಸ್ತುವಾಗುತ್ತದೆ. ಸಾವಧಾನ ಸಂಬಂಧಿಯಾದ ಪ್ರಸಾದಿ ತಾನೆ ಪ್ರಾಣಲಿಂಗಿಯಾಗುತ್ತಾನೆ. ಅನುಭಾವ ಭಕ್ತಿ ತಲೆದೋರುತ್ತದೆ.

ಸುಗುಣವೆ ಲಿಂಗ ಪ್ರಾಣವಯ್ಯಾ.
ದುರ್ಗುಣವೆ ವಾಯುಪ್ರಾಣವಯ್ಯಾ.
ಸುಗುಣ ದುರ್ಗುಣವೆಂಬುಭಯವನತಿಗಳೆದು
ಸುಖದುಃಖಾದಿಗಳ ಸಮಾನಂಗಂಡು,
ಶತ್ರುಮಿತ್ರಾದಿಗಳ ಸಮಾನಂಗಂಡು,
ಸ್ತುತಿ ನಿಂದ್ಯಾದಿಗಳ ಸಮಾನಂಗಂಡು,
ಹಾಸ್ಯ ವಿಸ್ಮಯ ವಿರಹ ಕರಣಹೇಸಿಕ
ಇಂತೀ ಪ್ರಾಣನ ವಿಷಯ ಭ್ರಾಂತಿಯನತಿಗಳೆದು
ಪ್ರಾಣನ ಪೂರ್ವಾಶ್ರಯವಳಿದು

ಲಿಂಗದ ನೆನಹು ಸಂಬಂಧಿಸಿ,
ಲಿಂಗವೇ ಪ್ರಾಣವಾಗಿರಬಲ್ಲರೆ
ಪ್ರಾಣಲಿಂಗಿ ಸ್ಥಲವಿದೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ವಾಯುವೇ ಅಂಗವಾದ ಪ್ರಾಣಲಿಂಗಿಯಲ್ಲಿಯೆ
ಶರಣ ಐಕ್ಯಭಕ್ತ ಮಹೇಶ್ವರ ಪ್ರಸಾದಿಯಪ್ಪ
ಅಂಗ ಪಂಚಕವು ಗರ್ಭೀಕೃತವಾಗಿ
ಆ ಪ್ರಾಣಲಿಂಗಿಗೆ ಜಂಗಮಲಿಂಗ ಸ್ವಾಯತವಾಗಿ
ಆ ಜಂಗಮ ಲಿಂಗದಲ್ಲಿಯೇ
ಪ್ರಸಾದಲಿಂಗ ಮಹಾಲಿಂಗ ಆಚಾರಲಿಂಗ ಗುರುಲಿಂಗ ಶಿವಲಿಂಗವೆನಿಸುವ
ಲಿಂಗ ಪಂಚಕವು ಗರ್ಭೀಕೃತವಾಗಿ
ಜಂಗಮ ಲಿಂಗವೆ ಆಶ್ರಯವಾಗಿ
ಇಂತೀ ಷಡ್ವಿಧ ಲಿಂಗದಲ್ಲಿ ಬೆರಸಿ ಬೇಱಿಲ್ಲದಿರಬಲ್ಲರೆ
ಪ್ರಾಣಲಿಂಗಿಯೆಂಬೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಸುಗುಣ ದುರ್ಗುಣಗಳಳಿದು, ಸುಖದುಃಖ, ಶತ್ರುಮಿತ್ರ, ಸ್ತುತಿನಿಂದೆಗಳಲ್ಲಿ ಸುಸಮಾಧಾನ ಸ್ಥಿತಿಯನ್ನು ಸಾಧಿಸಿದ ಪ್ರಾಣಲಿಂಗಿಯಲ್ಲಿ ಪ್ರಾಣನ ಪೂರ್ವಾಶ್ರಯವಳಿದು, ಲಿಂಗದ ನೆನಹು ಸಂಬಂಧಿಸುತ್ತದೆ. ಅಗ ಲಿಂಗವೇ ಪ್ರಾಣ, ಪ್ರಾಣವೇ ಲಿಂಗವಾಗಿ ಪ್ರಾಣಲಿಂಗಿಯಾಗುತ್ತಾನೆ. ಇವನಿಗೆ ಅಂಗ, ವಾಯು, ಲಿಂಗ, ಆದಿಶಕ್ತಿ ಸಮೇತವಾದ ಜಂಗಮಲಿಂಗ. ಈ ಲಿಂಗವನ್ನು ಅನುಭಾವ ಭಕ್ತಿಯಿಂದ ಆರಾಧಿಸುತ್ತಾನೆ. ಅನುಭಾವ ಭಕ್ತಿಯಿಂದ ಪ್ರಾಣಲಿಂಗಿ ಸ್ಥಲವನಾಚರಿಸಿದ ಪ್ರಾಣಲಿಂಗಿ ತಾನೇ ಶರಣನಾಗುತ್ತಾನೆ. ಇಲ್ಲಿ ಶರಣನೇ ಲಿಂಗ; ಲಿಂಗವೇ ಶರಣ ಎರಡಕ್ಕೂ ಭಿನ್ನವಿಲ್ಲ. ಲಿಂಗಕಿಂದಲು ಶರಣನೇ ಅಧಿಕವೆನ್ನುತ್ತಾರೆ ಶಿವಯೋಗಿಗಳು.

ಲಿಂಗವೆ ಪತಿಯಾಗಿ ತಾನೆ ಸತಿಯಾಗಿ
ಅನ್ಯವನಱಿಯದೆ, ಪಂಚೇಂದ್ರಿಯ ರಹಿತನಾಗಿ
ತೆಱಹಿಲ್ಲದಱುಹು ತಾನಾಗಿ, ನೆಱೆ ಅಱುಹಿನೊಳು ನಿಬ್ಬೆಱಗಾಗಿ,
ಹೃದಯಕಮಲ ಮಧ್ಯದಲ್ಲಿ ಪರಮೇಶ್ವರನೊಳಗಣ ಸಮರಸ ಸ್ನೇಹವೆರಸಿ
ಅಗಲದಿಪ್ಪುದೀಗ ಶರಣಸ್ಥಲವಿದೆಂಬೆನಯ್ಯಾ.
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಆಕಾಶವೇ ಅಂಗವಾದ ಶರಣನಲ್ಲಿಯೆ
ಐಕ್ಯ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿಯಪ್ಪ
ಅಂಗ ಪಂಚಕವು ಗರ್ಭೀಕೃತವಾಗಿ
ಶರಣಂಗೆ ಪ್ರಸಾದ ಲಿಂಗವೆ ಸ್ವಾಯತವಾಗಿ
ಆ ಪ್ರಸಾದ ಲಿಂಗದಲ್ಲಿಯೆ
ಮಹಾಲಿಂಗ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗವೆನಿಸುವ
ಲಿಂಗ ಪಂಚಕವು ಗರ್ಭೀಕೃತವಾಗಿ
ಪ್ರಸಾದ ಲಿಂಗವೇ ಆಶ್ರಯವಾಗಿ,
ಇಂತೀ ಷಡ್ವಿಧಲಿಂಗದಲ್ಲಿ ಬೆರಸಿ, ಬೇಱಿಲ್ಲದಿರಬಲ್ಲರೆ ಶರಣನೆಂಬೆನಯ್ಯಾ.
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಒಳಗು, ಹೊರಗು, ಅರುಹು, ಮರಹು ಎಲ್ಲವೂ ತಾನಾಗಿ ತೆರಹಿಲ್ಲದ ಪರಿಪೂರ್ಣ ಪರಾಪರವು ತಾನಾದ ಸ್ಥಲ ಶರಣ ಸ್ಥಲ. ಇಲ್ಲಿ ಶರಣಸತಿ ಲಿಂಗಪತಿ ಭಾವ ಬಲಿದು ಎರಡಿಲ್ಲದ ನಿರಾಳ ತಾನಾಗುತ್ತಾನೆ. ವಾರಿ ಬಲಿದು ವಾರಿಶಿಲೆಯಾದಂತೆ, ವಾರಿಶಿಲೆ ಕರಗಿ ಉದಕವಾದಂತೆ, ತನ್ನ ವಿನೋದಕ್ಕೆ ತಾನೆ ಶರಣನಾಗಿ, ತನ್ನ ವಿನೋದಕ್ಕೆ ತಾನೆ ಲಿಂಗವಾದಾತ, ತನ್ನ ವಿನೋದ ನಿಂದಲ್ಲಿ ತಾನೆ ಶರಣ ಲಿಂಗವೆಂಬ ಉಭಯವಳಿದು ನಿರಾಳ ನಿರ್ಮಾಯನಾಗಿ ಶಬ್ದಮಯನಾದ ಸ್ಥಿತಿಯನ್ನು ವರ್ಣಿಸುತ್ತಾರೆ. ಶರಣ ವ್ಯೋಮಕಾಯನಾಗಿ ಪರಾಶಕ್ತಿಯುಕ್ತವಾದ ಪ್ರಸಾದ ಲಿಂಗವನ್ನು ಆನಂದಭಕ್ತಿಯಿಂದಾ ಚರಿಸಿದ ಶರಣನು ಶರಣಲಿಂಗವೆಂಬುಭಯನಳಿದು ಮಹಾಲಿಂಗದಲ್ಲಡಗಿ ಏಕರಸಮಯವಾದ ನಾಗಿ ಐಕ್ಯಸ್ಥಲಿಯಾಗುತ್ತಾನೆ.

ಕ್ಷುತ್ತು, ಪಿಪಾಸೆ, ಶೋಕ, ಮೋಹ, ಜರಾ, ಮರಣ ಎಂಬ
ಷಡೂರ್ಮಿಗಳು ಇಲ್ಲದೆ ಇಪ್ಪನು;
ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ
ಷಡುವರ್ಗಗಳಿಲ್ಲದೆ ಇಪ್ಪನು.
ನಾಹಂ ಕೋಹಂ ಸೋಹಂ ಎಂಬ ಭಾವರಹಿತನಾಗಿಪ್ಪನು:
ಅಷ್ಟವಿಧಾರ್ಚನೆ ಷೋಡಶೋಪಚಾರ ರಹಿತನಾಗಿಪ್ಪನು.
ಕರ್ಪೂರ ಅಗ್ನಿ ಸಂಯೋಗವಾಗಿ ಕರ್ಪೂರದ ಗುಣವಳಿದು ಅಗ್ನಿಯಾದಂತೆ
ಲಿಂಗವ ನೆನೆನೆನೆದು ಲಿಂಗವೇ ತಾನಾಗಿಪ್ಪುದೀಗ
ನಿಜೈಕ್ಯಸ್ಥಲವೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಆತ್ಮವೇ ಅಂಗವಾದ ಐಕ್ಯನಲ್ಲಿ
ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣನಪ್ಪ

ಅಂಗಪಂಚಕವು ಗರ್ಭೀಕೃತವಾಗಿ
ಆ ಐಕ್ಯಂಗೆ ಮಹಾಲಿಂಗ ಸಂಬಂಧವಾಗಿ
ಆ ಮಹಾಲಿಂಗದಲ್ಲಿಯೇ ಆಚಾರಲಿಂಗ ಗುರುಲಿಂಗ
ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗವೆನಿಸುವ
ಲಿಂಗಪಂಚಕವು ಗರ್ಭೀಕೃತವಾಗಿ
ಮಹಾಲಿಂಗವೇ ಆಶ್ರಯವಾಗಿ
ಇಂತೀ ಷಡ್ವಿಧಲಿಂಗದಲ್ಲಿ ಬೆರಸಿ ಬೇಱಿಲ್ಲದಿರಬಲ್ಲರೆ ಐಕ್ಯನೆಂಬೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಕರ್ಪೂರ ಅಗ್ನಿ ಸಂಯೋಗವಾಗಿ ಕರ್ಪೂರದ ಗುಣವಳಿದು ಅಗ್ನಿಯಾದಂತೆ ಲಿಂಗವನ್ನು ನೆನೆನೆನೆದು ಲಿಂಗವೇ ತಾನಾದುದು ನಿಜಲಿಂಗೈಕ್ಯಸ್ಥಿತಿ. ಐಕ್ಯನಿಗೆ ಆತ್ಮನೇ ಅಂಗ. ಮಹಾಲಿಂಗವೇ ಆಶ್ರಯ. ಆನಂದ ಭಕ್ತಿಯಿಂದ ಆರಾಧಿಸಿ, ಶರಣ ಲಿಂಗವೆಂಬುಭಯವನಳಿದು ಮಹಾಲಿಂಗದಲ್ಲಡಗಿ ಐಕ್ಯನೆನಿಸುತ್ತಾನೆ.

ಹೀಗೆ ಸಿದ್ಧಲಿಂಗ ಶಿವಯೋಗಿಗಳು ಷಟ್ಸ್ಥಲ ಸಿದ್ಧಾಂತವನ್ನು ಅನುಕ್ರಮವಾಗಿ ವಿವರಿಸುತ್ತ ಆರೂ ಸ್ಥಲಗಳ ವಿಷಯವನ್ನು ಹೇಳಿದ್ದರೂ, ಒಂದೇ ಸ್ಥಲದಲ್ಲಿ ಎಲ್ಲ ಸ್ಥಲಗಳೂ ಅಳವಟ್ಟಿರುವುದನ್ನು ತಮ್ಮ ವಚನಗಳಲ್ಲಿ ಸಾಂಗವಾಗಿ ನಿರೂಪಿಸಿದ್ದಾರೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಳಗಳನ್ನು ಹೇಳುವಲ್ಲಿ ಸಮಸಮುಚ್ಚಯಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ಒಂದು ಸ್ಥಲ ಪರಿಪೂರ್ಣವಾಗಬೇಕಾದರೆ ಆರೂ ಸ್ಥಳಗಳು ಅದರಲ್ಲಿ ಅಳವಡಬೇಕು ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾರೆ.

ಪ್ರಥಮದಲ್ಲಿ ಭಕ್ತನಾದನೆಂಬರು
ದ್ವಿತೀಯದಲ್ಲಿ ಮಹೇಶ್ವರನಾದನೆಂಬರು
ತೃತೀಯದಲ್ಲಿ ಪ್ರಸಾದಿಯಾದನೆಂಬರು
ನಾಲ್ಕನೆಯಲ್ಲಿ ಪ್ರಾಣಲಿಂಗಿಯಾದನೆಂಬರು
ಐದನೆಯಲ್ಲಿ ಶರಣನಾದನೆಂಬರು
ಆಱನೆಯಲ್ಲಿ ಐಕ್ಯನಾದನೆಂಬರು.

ಈ ಆಱುಸ್ಥಲವ ಮೀಱಿ ನಿರವಯನೆಯ್ದಿಹನೆಂಬರು
ಇದು ಖಂಡಿತ ಷಟ್ಸ್ಥಲ ಬ್ರಹ್ಮಜ್ಞಾನದ ನಿರ್ಣಯವಲ್ಲ.
ಆವಾವಸ್ಥಲವನಂಗಂಗೊಂಡರೂ ಆ ಸ್ಥಲದಲ್ಲಿ
ಷಡ್ವಿಧಲಿಂಗದಲ್ಲಿ ಬೆರಸಿ ಬೇಱಿಲ್ಲದಿರಬಲ್ಲದೆ
ಸದ್ಭಕ್ತನೆಂಬೆನಯ್ಯಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಎಂದು ಸಿದ್ಧಲಿಂಗ ಶಿವಯೋಗಿಗಳು ಷಟ್ಸ್ಥಲದಲ್ಲಿ ಕ್ರಮಸಮುಚ್ಚಯವನ್ನು ಖಂಡಿಸಿ ಸಮಸಮುಚ್ಚಯವನ್ನು ಎತ್ತಿಹಿಡಿದಿದ್ದಾರೆ.

ಅಭಿನ್ನ ಭಾವದಿಂದ ಸಮರಸ ಭಕ್ತಿಯನ್ನಾಚರಿಸಿದ ಲಿಂಗೈಕ್ಯ ಐಕ್ಯಸ್ಥಲವನ್ನು ಮೀರಿ ನಿರವಯಸ್ಥಲವನ್ನೈದುವವನು. ಈ ಅವಸ್ಥೆಯಲ್ಲಿ:

ಒಳಗೆ ನೋಡಿದರೆ ಒಳಗೆ ಬಯಲು,
ಹೊಱಗೆ ನೋಡಿದರೆ ಹೊಱಗೆ ಬಯಲು ನೋಡಾ.
ನೆನೆದೆನೆಂದರೆ ಮನ ಬಯಲು,
ನೆನೆಯಿಸಿಕೊಂಡೆನೆಂದರೆ ನೀ ನಿಲ್ಲವಾಗಿ ನಾನು ಬಯಲು,
ನೀನು ಬಯಲು ನೋಡಾ.
ಭಾವಿಸಿಕೊಂಬ ವಸ್ತುವಿಲ್ಲವಾಗಿ
ಭಾವ ಬಯಲೆಂಬೆನು ನೋಡಾ.
ಮಱಹು ನಷ್ಟವಾಯಿತ್ತಾಗಿ ಅಱುಹು ಶೂನ್ಯವಾಯಿತ್ತು ನೋಡಾ,
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!

ತನುವುಳ್ಳನ್ನಕ್ಕರ ನಿನ್ನ ಸಾವಯನೆಂದೆ.
ಮನಪ್ರಾಣಂಗಳುಳ್ಳನ್ನಕ್ಕರ ನಿನ್ನ ಸಾವಯ ನಿರವಯನೆಂದೆ.
ಅನುಭಾವವುಳ್ಳನ್ನಕ್ಕರ ನಿನ್ನ ನಿರವಯನೆಂದೆ.
ನಾನುಳ್ಳನ್ನಕ್ಕರ ನೀನೆಂದೆ.
ನಾ ಸತ್ತಬಳಿಕ ನೀನೆಲ್ಲಿಯವನು ಹೇಳಾ.
ಇದು ಕಾರಣ,
ಸಾವಯನೆನ್ನೆ, ಸಾವಯ ನಿರವಯನೆನ್ನೆ, ನಿರವಯನೆನ್ನೆ.
ನಿರಾಕಾರ ಬಯಲಾದ ಕಾರಣ,
ಪರಾಪರ ವಸ್ತುವೆಂದೆನಲಿಲ್ಲ ಕಾಣಾ ಎರಡಿಲ್ಲದ ನಿರಾಳನು
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ।

ಭಕ್ತಿಸ್ಥಲ ಮಾಹೇಶ್ವರ ಸ್ಥಲದಲ್ಲಿ ಅಡಗಿ
ಮಾಹೇಶ್ವರಸ್ಥಲ ಪ್ರಸಾದಿಸ್ಥಲದಲ್ಲಡಗಿ
ಪ್ರಸಾದಿಸ್ಥಲ ಪ್ರಾಣಲಿಂಗಿಸ್ಥಲದಲ್ಲಡಗಿ
ಪ್ರಾಣಲಿಂಗಿಸ್ಥಲ ಶರಣಸ್ಥಲದಲ್ಲಡಗಿ
ಶರಣಸ್ಥಲ ಐಕ್ಯಸ್ಥಲದಲ್ಲಿಡಗಿ
ಇಂತೀ ಷಡಾಂಗಯೋಗ ಸಮರಸವಾಗಿ
ಷಡುಸ್ಥಲವ ಮೀಱಿ ನಿರವಯಸ್ಥಲವನೆಯ್ದಿ
ಆ ನಿರವಯಸ್ಥಲ ನಿರಾಳದಲ್ಲಡಗಿ
ಆ ನಿರಾಳ ನಿತ್ಯ ನಿರಂಜನ ಪರವಸ್ತು ತಾನಾಯಿತ್ತಾಗಿ

ಕ್ರಿಯಾನಿಷ್ಪತ್ತಿ ಜ್ಞಾನನಿಷ್ಪತ್ತಿ ಭಾವನಿಷ್ಪತ್ತಿ
ಮಾಡುವ ಕ್ರೀಗಳೆಲ್ಲಾ ನಿಷ್ಪತ್ತಿಯಾಗಿ
ಅಱಿವ ಅಱುಹೆಲ್ಲಾ ಅಡಗಿ
ಭಾವಿಸುವ ಭಾವವೆಲ್ಲಾ ನಿರ್ಭಾವವಾಗಿ
ನಿರ್ಲೇಪಕ ನಿರಂಜನವಸ್ತು ತಾನು ತಾನಾದಲ್ಲದೆ
ಧ್ಯಾನಿಸಲಿಕೇನೂ ಇಲ್ಲ.
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭು ತಾನೆ
ಷಟ್ಸ್ಥಲಜ್ಞಾನ ಸಾರಾಯ ಸ್ವರೂಪನೆಂದು ಹೇಳಲ್ಪಟ್ಟನು.

ಆದಿ ಅನಾದಿಯಿಲ್ಲದಂದು ತಾನೇ ತಾನಾಗಿದ್ದ ಪರವಸ್ತು ಸ್ವಲೀಲೆಯಿಂದ ನೆನಹು ನಿರ್ಧರಿಸಿ ಚಿತ್ತಾಗಿ, ಆ ಚಿತ್ತ ಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾ ಲಿಂಗವಾಗಿ, ಇದೇ ಸ್ವಲೀಲೆಯಿಂದ ಅಂಗ-ಲಿಂಗವೆನಿಸಿ, ಇದೇ ಮುಂದೆ ಜಗತ್‌ಸೃಷ್ಟ್ಯರ್ಥ ಕಾರಣವಾಗಿ ಪಂಚಮೂರ್ತಿಯೆನಿಸಿ, ಇದರಿಂದ ಪಂಚಭೂತಗಳಾಗಿ, ದೇಹ-ದೇಹಿಗಳಾಗಿ ಪಿಂಡವೆನಿಸಿತು. ಪಿಂಡದೊಳಗಿದ್ದ ಶಿವತತ್ವ ಉದಯವಾಗಿ ಪಿಂಡ ಜ್ಞಾನವುಂಟಾಯಿತು. ಅಲ್ಲಿಂದ ಮುಂದೆ ಶಿವಜ್ಞಾನೋದಯವಾಗಿ ಮರತಿಯೆಂಬ ಮಾಯಾ ಪ್ರಪಂಚವನ್ನು ಅತಿ ಗಳೆಯಲು ಸಂಸಾರಹೇಯ ಭಾವ ತಲೆದೋರಿತು. ಸಂಸಾರ ನಿವೃತಿಯ ಮಾಡಿದ ಶರಣನ ಅಂತರಂಗದ ಜ್ಞಾನ ಗುರುವೆ ಸಾಕಾರವಾಗಿ, ಪ್ರತ್ಯಕ್ಷವಾಗಿ, ಸದ್ಗುರುವಾಗಿ ಗುರುಕರುಣೆ ಉಂಟಾಯಿತು. ಗುರುಕರುಣೆಯಿಂದ ಲಿಂಗಧಾರಣೆ, ವಿಭೂತಿಧಾರಣೆ, ರುದ್ರಾಕ್ಷಿಧಾರಣೆ, ಪಂಚಾಕ್ಷರೀಮಂತ್ರ ದೊರೆಯಿತು. ಇದೇ ಜೀವ ಮುಂದೆ ನಿವೃತಿಮಾರ್ಗವನ್ನು ಹಿಡಿದು ಷಟ್ಸ್ಥಲದ ಸಮಸಮುಚ್ಚಯದಿಂದ ನಿರವಯತ್ವವನ್ನೈದಿತು. ಹೀಗೆ ಆದಿಯ ಮಹಾಲಿಂಗ ಮಲತ್ರಯ ಕಾರಣ ಸಂಸಾರದಲ್ಲಿ ತೊಳಸಿ, ಶಿವಜ್ಞಾನೋದಯದಿಂದ ಅಂಗ-ಲಿಂಗ ಸಾಮ ರಸ್ಯವನ್ನು ಸಾಧಿಸುವ ಸಾಧಕನಾಗಿ ಲಿಂಗಾಂಗ ಸಾಮರಸ್ಯವನ್ನು ಹೊಂದಿ ನಿರವಯ ಸ್ಥಿತಿಗೆ ತಲುಪುತ್ತಾನೆ. ನಿಜಾನುಭವದಿಂದ ನಿಜಸ್ಥಾನದಲ್ಲಿ ನಿಜೈಕ್ಯನಾಗುತ್ತಾನೆ. ಕೆರೆಯ ನೀರನ್ನು ಕೆರೆಗೆ ಚೆಲ್ಲುವಂತೆ ಸ್ವಲೀಲಾ ಕಾರಣದಿಂದ ಧರೆಗವತರಿಸಿದ ಪರಾತ್ಪರವಸ್ತು ಪುನಃ ಅದರಲ್ಲೇ ಲೀನವಾಗುತ್ತದೆ. ಇದನ್ನೇ ಲಿಂಗಾಂಗ ಸಾಮರಸ್ಯ, ಶೂನ್ಯ ಸಂಪಾದನೆ, ಷಟ್ಸ್ಥಲ ಸಿದ್ಧಾಂತ ಎಂದು ಮುಂತಾಗಿ ಕರೆಯುತ್ತಾರೆ. ತೋಂಟದ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಬದುಕನ್ನೇ, ತಮ್ಮನ್ನೇ ಈ ಸಾಧನಾ ರಂಗದಲ್ಲಿ ತೊಡಗಿಸಿ ಕೊಂಡು, ತಾವು ಶಿವಯೋಗ ಸಾಧನೆಯಲ್ಲಿ ನಿರತರಾಗಿ, ಶಿವಯೋಗವನ್ನು ಸಾಧಿಸಿ ಶಿವಯೋಗಿಗಳಾಗುತ್ತಾರೆ. ಷಟ್ಸ್ಥಲವನ್ನಾಚರಿಸಿ ಷಟ್ಸ್ಥಲಿಗಳಾಗಿ ಷಟ್ಸ್ಥಲ ವಲ್ಲಭ ರಾಗುತ್ತಾರೆ. ತಾವು ಬದುಕಿದ, ಬದುಕನ್ನೇ, ಸಾಧಿಸಿದ ಸಿದ್ಧಿಯನ್ನೇ ಇತರರಿಗೆ ಬೋಧಿಸಿ ಅವರನ್ನು ಆ ದಾರಿಗೆ ಹಚ್ಚುತ್ತಾರೆ. ಷಟ್ಸ್ಥಲೋದ್ಧಾರ ಮಾಡುತ್ತಾರೆ. ಷಟ್ಸ್ಥಲಕ್ಕೆ ಒಂದು ನೆಲೆಯನ್ನು ಬೆಲೆಯನ್ನು ಕೊಡುತ್ತಾರೆ. ಷಟ್ಸ್ಥಲವೇ, ಷಟ್ಸ್ಥಲ ಸಿದ್ಧಾಂತವೇ

ವೀರಶೈವ ಧರ್ಮ ಎಂಬುದನ್ನು ತಮ್ಮ ಸಾಧನೆ-ಬೋಧನೆಗಳ ಮೂಲಕ ಸಾಕಾರವಾಗಿ ಪುನಃ ಪ್ರತಿಷ್ಠಾಪಿಸುತ್ತಾರೆ. ಅದಕ್ಕೆ ಸಹಜವಾದ ರೂಪನ್ನು ಕೊಡುತ್ತಾರೆ. ಹೀಗಾಗಿ ಷಟ್ಸ್ಥಲವೆಂದರೆ ವೀರಶೈವ. ವೀರಶೈವವೆಂದರೆ ತೋಂಟದ ಸಿದ್ಧಲಿಂಗ ಶಿವಯೋಗಿ. ತಾವೇ ಶಿವಯೋಗಿಗಳು, ತಾವೇ ಷಟ್ಸ್ಥಲಿಗಳು, ತಾವೇ ವೀರಶೈವ ಎಂಬಂತೆ ಬದುಕುತ್ತಾರೆ.

ಹನ್ನೆರಡನೆಯ ಶತಮಾನದ ಶಿವಶರಣರು ಷಟ್ಸ್ಥಲವನ್ನು ಆಚರಣೆಯಲ್ಲಿ ತರುತ್ತಾರೆ. ಅದಕ್ಕೆ ಹೊಸ ಚೈತನ್ಯವನ್ನಿತ್ತು ನೂತನ ರೀತಿಯಲ್ಲಿ ಚಲನಾತ್ಮಕ ಮಾನವತಾವಾದವೆಂಬಂತೆ ಬದುಕಿನಲ್ಲಿ ಅನುಷ್ಠಾನಕ್ಕೆ ತರುತ್ತಾರೆ. ಷಟ್ಸ್ಥಲವನ್ನೇ ನುಡಿಯುತ್ತಾರೆ. ಷಟ್ಸ್ಥಲವನ್ನೇ ನಡೆಯುತ್ತಾರೆ. ಷಟ್ಸ್ಥಲ ನಡೆದಾಡುವ, ಉಸಿರಾಡುವ, ಚೈತನ್ಯಾತ್ಮಕ ಮಾನವತಾವಾದ ಎಂದು ತೋರಿಸುತ್ತಾರೆ. ಇದು ಕೇವಲ ತತ್ವವಲ್ಲ, ಕೇವಲ ಸಿದ್ಧಾಂತವಲ್ಲ. ಮನುಷ್ಯನ ಉಸಿರೇ, ಮನುಷ್ಯನ ಚಲನೆಯೇ, ಮನುಷ್ಯನ ಬದುಕೇ ಷಟ್ಸ್ಥಲ ಎಂಬುದನ್ನು ಪ್ರಯೋಗದಲ್ಲಿ ಮಾಡಿ ತೋರಿಸುತ್ತಾರೆ. ಷಟ್ಸ್ಥಲ ಸಿದ್ಧಾಂತಕ್ಕೆ ಹೊಸ ಆಯಾಮವನ್ನು ತಂದು ಕೊಡುತ್ತಾರೆ. ಬಸವಣ್ಣ, ಅಲ್ಲಮಪ್ರಭು, ಚನ್ನಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಮಡಿವಾಳ ಮಾಚಿದೇವ ಮುಂತಾದ ಶರಣರ ಬದುಕೇ ಷಟ್ಸ್ಥಲವಾಗಿ ಹೊರ ಸೂಸುತ್ತದೆ. ಹೀಗೆ ಬದುಕಿನಾಟವೇ ಷಟ್ಸ್ಥಲ ದಾಟವಾದಾಗ ಅದಕ್ಕೊಂದು ತಾತ್ವಿಕ ಹಿನ್ನೆಲೆಯನ್ನು, ರೂಪ ರೇಷೆಗಳನ್ನು ಒದಗಿಸಿ ಕೊಡುವ ಕಾರ್ಯವನ್ನು ಚನ್ನಬಸವಣ್ಣ ಆಗಲೇ ಮಾಡುತ್ತಾನೆ. 'ಕರಣ ಹಸಿಗೆ' ಅದರ ಫಲವಾಗಿ ಮೂಡಿ ಬರುತ್ತದೆ.

ಅಂದಿನ ಸಮಾಜದ ಜೀವನಾಡಿಯಾಗಿ ಮಿಡಿದ ಷಟ್ಸ್ಥಲದ ರೂಪುರೇಷೆಗಳ ಆಧಾರದ ಮೇಲೆಯೇ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಷಟ್ಸ್ಥಲ ಸಿದ್ಧಾಂತವನ್ನು ರೂಪಿಸುತ್ತಾರೆ. ಅದಕ್ಕೊಂದು ಶಾಶ್ವತವಾದ ನೆಲೆಗಟ್ಟನ್ನು ನೀಡಿ, ವೀರಶೈವ ಧರ್ಮಕ್ಕೆ ತಾತ್ವಿಕ ಸ್ವರೂಪವನ್ನು ಕೊಟ್ಟು ಷಟ್ಸ್ಥಲ ವಲ್ಲಭರಾಗುತ್ತಾರೆ. ಅವರ ಷಟ್ಸ್ಥಲ ಸಿದ್ಧಾಂತದ, ವೀರಶೈವ ಧರ್ಮದ ಸಾರಸಾರಾಯವನ್ನು 'ಷಟ್ಸ್ಥಲ ಜ್ಞಾನ ಸಾರಾಮೃತ' ದಲ್ಲಿ ಸಾರವತ್ತಾಗಿ, ವಿವರ-ವಿವರವಾಗಿ ನಿರೂಪಿಸಿದ್ದಾರೆ. ಭಾರತೀಯ ತತ್ವಶಾಸ್ತ್ರದ ಸಿದ್ಧಾಂತಗಳ ಹಿನ್ನೆಲೆಯಲ್ಲಿ, ತತ್ವಶಾಸ್ತ್ರವೆನಿಸಿಕೊಳ್ಳಬೇಕಾದ ಎಲ್ಲ ಅಂಶಗಳ ಒರೆಗಲ್ಲಿಗೆ ಸಿಕ್ಕಿ, ಯಶಸ್ವಿಯಾಗುವ ರೀತಿಯಲ್ಲಿ ವೀರಶೈವ ತತ್ವಶಾಸ್ತ್ರ ನಿರೂಪಣೆ ಮಾಡಿದ್ದಾರೆ.

●

# ಮೊಗ್ಗೆಯ ಮಾಯಿದೇವ
# ವೀರಶೈವ ತತ್ತ್ವಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ

—ಡಾ. ಸಂಗಮೇಶ ಬಿರಾದಾರ

ಸಾಹಿತ್ಯವೆಂಬುದು ಶಾಸ್ತ್ರ, ಕಾವ್ಯ ಎಂದು ಎರಡು ವಿಧ. ಒಂದು ಬುದ್ಧಿಪ್ರಧಾನವಾದರೆ ಇನ್ನೊಂದು ಭಾವ ಪ್ರಧಾನ. ಭಾರತೀಯ ಸಾಹಿತ್ಯವನ್ನು-ಶಾಸ್ತ್ರ ಅಥವಾ ಕಾವ್ಯ-ಅವಲೋಕಿಸಿದರೆ ಅದು ಧರ್ಮದ ಮೇಲೆಯೇ ನಿಂತುದು ಕಂಡು ಬರುತ್ತದೆ. ಅಂತಹ ಧರ್ಮಗಳು ಅನೇಕ. ಅವುಗಳಲ್ಲಿ ವೀರಶೈವ ಧರ್ಮವೂ ಒಂದು. ಮೊಗ್ಗೆಯ ಮಾಯಿದೇವನು ಈ ವೀರಶೈವ ಧರ್ಮವನ್ನೇ ಕುರಿತು ಗ್ರಂಥಗಳನ್ನು ಕನ್ನಡ, ಸಂಸ್ಕೃತ ಎರಡೂ ಭಾಷೆಗಳಲ್ಲಿ ನಿರ್ಮಿಸಿದ್ದಾನೆ. ಈ ಧರ್ಮಶಾಸ್ತ್ರಕ್ಕೆ ಪ್ರಮಾಣ ಗ್ರಂಥಗಳನ್ನೊದಗಿಸಿದ್ದಾನೆ; ಧ್ರುವತಾರೆಯಾಗಿದ್ದಾನೆ.

ಭಾರತೀಯ ಕವಿಗಳು ಐತಿಹಾಸಿಕವಾದ, ಚಾರಿತ್ರಿಕವಾದ ಸ್ವವಿಷಯವನ್ನು ಹೇಳಿರುವುದು ಕಡಿಮೆ. ಆದರೆ ಮೊಗ್ಗೆಯ ಮಾಯಿದೇವನು ತನ್ನ ವಿಷಯವಾಗಿಯೂ ತನ್ನವರ ವಿಷಯವಾಗಿಯೂ ತನ್ನ 'ಶಿವಾನುಭವ ಸೂತ್ರ'ವೆಂಬ ಗ್ರಂಥದಲ್ಲಿ ಕೆಲವು ಮಾತುಗಳನ್ನು ಹೇಳಿಕೊಂಡಿದ್ದಾನೆ. ಈ ಗ್ರಂಥದ ಪ್ರಕಾರ ವಿಜಾಪುರ ಜಿಲ್ಲೆಯ ಐಹೊಳ್ಳಿಯು ಇವನ ಜನ್ಮಸ್ಥಳ. ಇದನ್ನು ಮಾಯಿದೇವನು 'ಐಪುರ' ಎಂದು ಕರೆದಿದ್ದಾನೆ. ಅಲ್ಲಿಯ ಗ್ರಾಮ ದೇವರು ಸೋಮೇಶ್ವರ. ಅದು ಅವನ ಆರಾಧ್ಯ ದೈವ. ಅವನ ಎಲ್ಲ ಗ್ರಂಥಗಳಲ್ಲಿಯೂ ಸೋಮೇಶ್ವರನ ಸ್ಮರಣೆಯಿರುವುದು ಗಮನಾರ್ಹ. ಈಗಲೂ ಐಹೊಳ್ಳಿಯಲ್ಲಿ ಈ ದೇವಸ್ಥಾನವಿದೆ.

ಶಿವಾನುಭವ ಸೂತ್ರದಲ್ಲಿ ಮೊಗ್ಗೆಯ ಮಾಯಿದೇವನು ತನ್ನ ವಂಶಾವಳಿಯನ್ನು ಕೊಟ್ಟಿದ್ದಾನೆ. ಅದರ ಪ್ರಕಾರ 'ಉಪಮನ್ಯು' ಎಂಬುವನು ಈ ವಂಶದ ಮೂಲಪುರುಷ. ಹಿಂದೆ ವಿಷ್ಣುವಿಗೆ ಉಪದೇಶ ಮಾಡಿದ ಆದಿಗುರುವಾದ ಆ 'ಉಪಮನ್ಯು'ವಿನ ಅವತಾರವೇ ಇವನು. ಸಾಕ್ಷಾತ್ ಶಿವಸ್ವರೂಪನು. ಜ್ಞಾನಕ್ರಿಯಾ ಚಾರಸಮನ್ವಿತನು. ಅಂತೆಯೆ ತಪೋ ಬಲನೂ ಆಗಿದ್ದನು. ಅವನಿಂದ ವಂಶವೃಕ್ಷವು ಮುಂದುವರಿಯುತ್ತದೆ. ಭೀಮನಾಥ ಅವನ ಮಗ ಕಲೇಶ್ವರ, ಅವನ ಮಗ ಬೊಪ್ಪನಾಥ, ಅವನ ಮಗ ನಾಕರಾಜ, ಅವನ ಮಗ ಸಂಗಮೇಶ್ವರ, ಅವನ ಮಗ ಮಾಯಿದೇವ. ಈ ಮಾಯಿದೇವನೆ 'ಕಲ್ಯಾಣದ'ನೆಂದೂ ಪ್ರಸಿದ್ಧನಾದ ವೀರಶೈವ ಧರ್ಮದ ಪ್ರಥಮ ಪ್ರಮಾಣ ಗ್ರಂಥವನ್ನು ನೀಡಿದ ಪುಣ್ಯ ಪುರುಷ.

ಕವಿಯು ಕಲ್ಯಾಣದ, ಮಾಯಿದೇವ ಈ ಹೆಸರುಗಳನ್ನು ಅನ್ವರ್ಥಕಾರ್ಥದಲ್ಲಿ ವಿವರಿಸಿದ್ದಾನೆ. ಕಲ್ಯಾಣ ಪದ (ಮೋಕ್ಷ) ಕಾಂಕ್ಷಿಗಳಾದ ತನ್ನ ಭಕ್ತರಿಗೆ ಕಲ್ಯಾಣ ವನ್ನುಂಟು ಮಾಡುವುದರಿಂದ 'ಕಲ್ಯಾಣದ'ನೆಂದೂ 'ಮಾಯಿ'ಯೆಂದರೆ ವಿಷ್ಣುವು. ಮಾಯಿಯಾದ ವಿಷ್ಣುವಿಗಿಂತಲೂ ಪರವಾದ ದೇವನು (ಶಿವನು) ಆದುದರಿಂದ ಶಿವ ಪರ್ಯಾಯವಾದ ಮಾಯಿದೇವನೆಂದೂ ಇವನನ್ನು ಕರೆಯಲಾಗುತ್ತಿದ್ದಿತೆಂದು ಹೇಳಿ ಕೊಂಡಿದ್ದಾನೆ.

ಮಾಯಿದೇವ ಪ್ರಭು ಮಾಯಿದೇವ ವಿಭು ಎಂದು ತನ್ನನ್ನು ತಾನು ಕರೆದು ಕೊಂಡಿರುವಂತೆ ಬೇರೆಯವರೂ ವಿರೂಪಾಕ್ಷ ಪಂಡಿತಾದಿಗಳು-ಕರೆದಿದ್ದಾರೆ. ಇದರಿಂದ ಇವನು ಒಂದು ಉಚ್ಚ ಸ್ಥಾನದಲ್ಲಿದ್ದನೆಂದೂ ಇವನನ್ನು ವಿಶೇಷ ಗೌರವದಿಂದ ಕಾಣಲಾಗು ತ್ತಿದ್ದಿತೆಂದೂ ತಿಳಿಯುತ್ತದೆ. ಶಿವಾದ್ವೈತ ಸಿದ್ಧಾಂತದಲ್ಲಿ ಅಕುಂಠಿತವಾದ ಪ್ರತಿಭಾಶಕ್ತಿ ಯುಳ್ಳವನಾಗಿದ್ದುದೇ ಇದಕ್ಕೆ ಕಾರಣವಾಗಿರಬೇಕು. 'ಷಟ್‌ಸ್ಥಲ ಬ್ರಹ್ಮವಾದಿ' ಎಂದಿರುವ ಬಿರುದು ಇದಕ್ಕೆ ನಿದರ್ಶನ. ಅಲ್ಲದೆ ಶಾಂತಲಿಂಗ ದೇಶಿಕನು (೧೬೭೨) ತನ್ನ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿಯೂ ಸಿದ್ಧನಂಜೇಶನು (೧೬೫೦) ತನ್ನ ಪಾಲ್ಕುರಿಕೆ ಸೋಮೇಶ್ವರ ಪುರಾಣದಲ್ಲಿಯೂ ವೀರಶೈವರಿಗೆ ನರಕವಿಲ್ಲೆಂದು ವಿದ್ಯಾನಗರ ದಲ್ಲಿ ನೆರಳಿಲ್ಲದ ಜಯಸ್ತಂಭವನ್ನು ಮಾಯಿದೇವನು ನಿಲ್ಲಿಸಿದ್ದನೆಂಬ ವಿಷಯವನ್ನು ನಿರೂಪಿಸಿರುವುದರಿಂದ 'ಕುಮತ ವಿಭೇದಿ' ಎಂಬ ಬಿರುದು ಇವನಿಗೆ ಬಂದಿತೆಂಬುದು ವಿದಿತ ವಾಗುತ್ತದೆ. ಜೊತೆಗೆ ಮಾಯಿದೇವನು ಪ್ರಬಾಂಡ ಪಂಡಿತನಿದ್ದನೆಂಬುದು ವೇದ್ಯ ವಾಗುತ್ತದೆ.

ಎಲೆ ರಾಮು ಕೇಳಿನ್ನು ಸಕಲಾಗಮಂಗಳಿಗೆ
ನೆಲೆಯೆನಿಸಿ ಪ್ರೌಢನಿಂ ಪೂಜೆಯುಂಕೊಂಡು ಷಟ್
ಸ್ಥಲಮಾರ್ಗಮಂ ಸಕಲ ಶಿವಭಕ್ತ ಸಂತತಿಗೆ ಕರತಲಾಮಲಕವಾಗಿ!
ತಿಳಿವೊಲನುಭವಸೂತ್ರವಾದಿ ಶಾಸ್ತ್ರಂಗಳಂ
ಗೆಲವಿನಿಂ ಪೇಳ್ದು ನಿಜಶಿವಸಮಾಧಿಯಲಿ ಮಿಗೆ
ನಲವಿನಿಂದಲ್ಲಿ ಮೊಗ್ಗೆಯ ಮಾಯಿದೇವ ಪ್ರಭುವರನಿರವೆ ಮುಕ್ತನಹನು||

ಈ ಪದ್ಯವು ವಿರೂಪಾಕ್ಷ ಪಂಡಿತನ 'ಚನ್ನಬಸವಪುರಾಣ'ದಲ್ಲಿ ಬರುತ್ತದೆ. ಇದರಿಂದ ೧) ಮೊಗ್ಗೆಯ ಮಾಯಿದೇವನು ಅನುಭವ ಸೂತ್ರಾದಿ ಶಾಸ್ತ್ರ ಗ್ರಂಥಗಳನ್ನು ಬರೆದಿರುವನೆಂಬುದು ೨) ಅವು ಸಕಲ ಶಿವಭಕ್ತರಿಗೆ ತಿಳಿಯುವಂತೆ ಷಟ್‌ಸ್ಥಲ ಮಾರ್ಗ ವನ್ನು ನಿರೂಪಿಸುತ್ತವೆಂಬುದು ೩) ಮಾಯಿದೇವನು ವಿಜಯನಗರದ ದೊರೆ ಪ್ರೌಢ ದೇವರಾಯನಿಂದ ಪೂಜೆಯನ್ನು ಪಡೆದನೆಂಬುದು ತಿಳಿದು ಬರುತ್ತದೆ. ಈ ಪ್ರೌಢದೇವ ರಾಯನಾದರೂ ಸಾಮಾನ್ಯ ದೊರೆಯಾಗಿರದೆ 'ವೀರಶೈವಾಗಮಸಾರ ಸಂಪನ್ನ' ಎಂಬ

ಬಿರುದಾಂಕಿತನು. ಇಂತಹನಿಂದ ಪೂಜೆಗೊಳ್ಳಬೇಕಾದರೆ ಮೊಗ್ಗೆಯಮಾಯಿದೇವನ ವ್ಯಕ್ತಿತ್ವವೆಂತಹದೆಂಬುದು ವೇದ್ಯವಾಗದೆ ಇರದು.

"ವಿಜಾಪುರ ಡಿಸ್ಟ್ರಿಕ್ಟಿಗೆ ಸೇರಿದ ಐವಳ್ಳಿ (ಅಯ್ಯಾ ಹೊಳೆ) ಎಂಬ ಊರಿನ ಸಮೀಪ ದಲ್ಲಿ ಹಿರಿಯ ಮೊಗೆ ಚಿಕ್ಕ ಮೊಗೆ ಎಂಬ ಎರಡು ಗ್ರಾಮಗಳಿರುವುದಾಗಿಯೂ ಅವುಗಳಲ್ಲಿ ಹಿರಿಯ ಮೊಗೆಯಲ್ಲಿ ಇರುವ ಹಿರಿಯ ಮಠದವರೇ ಇವರೆಂದು ಪ್ರತೀತಿ ಇದೆ....ಅಘೋರ ಶಿವಾಚಾರ್ಯ, ಸೋವರ ಶಂಭು ಮೊದಲಾದವರು ಕಾಶಿಗೋಳಕಿ ಮಠದ ಸಂಪ್ರದಾಯ ದವರಾಗಿ ಇದ್ದಂತೆ ತಿಳಿಯಬಂದಿದೆ. ಈ ಸಂಪ್ರದಾಯದಿಂದಲೆ ಹೊರ ಬಿದ್ದ ಕಾಶೀ ಪೀಠದ ವಿಶ್ವಾರಾಧ್ಯರಿಗೆ ಭೃಗು, ಉಪಮನ್ಯು ಎಂಬ ಶಿಷ್ಯರಿದ್ದರೆಂದು ತಿಳಿಯಬಂದಿದೆ. ಪಂಚಾಚಾರ್ಯರ ಉಗಮವು ಐವಳ್ಳಿಯಿಂದ ಆರಂಭಿಸಲ್ಪಟ್ಟಂತೆ ಮಠಸ್ಥಲ ಎಂಬ ಲೇಖನಗಳಿಂದ ತಿಳಿಯಬರುವದರಿಂದ ಈ ಉಪಮನ್ಯು ಶಿವಾಚಾರ್ಯರು ಕಾಶೀ ಪೀಠದ ಅನುಯಾಯಿಗಳೆಂದೇ ಊಹಿಸಲಿಕ್ಕೆ ಬರುವಂತೆ ಇದೆ." (ಮೊ ೧ ಮಾ-ಪ್ರ. ೨-೩) ಎಂದು ಶ್ರೀ ಮಲ್ಲಿಕಾರ್ಜುನರು ಅಭಿಪ್ರಾಯ ಪಟ್ಟಿದ್ದಾರೆ. ಈ ಅಭಿಪ್ರಾಯಕ್ಕೆ 'ಉಪಮನ್ಯು' ಎಂದಿರುವ ಹೆಸರೇ ಮೂಲ ಕಾರಣ. ಅಲ್ಲದೆ ಹಿರಿಯ ಮೊಗೆ-ಹಿರಿಯ ಮೊಗ್ಗೆ ಇದರಿಂದ ಮೊಗ್ಗೆಯ ಮಾಯಿದೇವ ಎಂದು ಆ ಊರಿನ ಹಿನ್ನೆಲೆಯಿಂದಲೂ ಅವನ್ನು ಕರೆದಿರಬಹುದು. ಇದು ಸ್ವಲ್ಪ ಮಟ್ಟಿಗೆ ಹೋಲುವ ವಿಷಯ.

ಮಾಯಿದೇವನು ತನ್ನ ಮೂಲ ಪುರುಷನಾದ ಆ ಉಪಮನ್ಯುವಿನ ವಿಷಯವಾಗಿ ಹೇಳುವಾಗ ಅವನು ವಿಷ್ಣುವಿಗೆ ಉಪದೇಶಮಾಡಿದವನೂ ಆದಿಗುರುವೂ ಆದ ಉಪ ಮನ್ಯುವಿನ ಅವತಾರನೂ ಸಾಕ್ಷಾತ್ ಶಿವ ಸ್ವರೂಪನೂ ಎಂದು ಹೇಳಿರುವನು. ಕಾಶೀ ಪೀಠದ ವಿಶ್ವಾರಾಧ್ಯರಿಗೆ ಈ ಉಪಮನ್ಯುವು ಶಿಷ್ಯನಾಗಿದ್ದರೆ ಆ ವಿಷಯವನ್ನೂ ಮಾಯಿ ದೇವ ಹೇಳದೆ ಇರುತ್ತಿರಲಿಲ್ಲ. ಕಾಶೀಪೀಠದ ವಿಷಯವಾಗಿ ತನ್ನ ಯಾವ ಗ್ರಂಥದಲ್ಲಿಯೂ ಹೇಳಿಕೊಂಡಿಲ್ಲ. ಅಲ್ಲದೆ ಐಪುರದ ಸೋಮನಾಥನ ಪ್ರಸಾದದಿಂದ ಈ ಉಪಮನ್ಯು ಹುಟ್ಟಿದನೆಂದು ಹೇಳಿ ಅವನಿಂದಲೇ ಮುಂದಿನವರ ವಿಷಯ ನಿರೂಪಿಸುತ್ತ ಹೋಗಿದ್ದಾನೆ- ಇನ್ನೂ ಆಶ್ಚರ್ಯದ ಸಂಗತಿಯೆಂದರೆ ಮಾಯಿದೇವನು ತಾನಾಗಲಿ ತನ್ನ ಹಿಂದಿನವರಾಗಲಿ ಹಿರಿಯ ಮೊಗೆ(ಗ್ಗೆ)ಯ ಹಿರಿಯ ಮಠದವರೆಂದು ಎಲ್ಲಿಯೂ ಹೇಳಿಕೊಂಡಿಲ್ಲ. ಇದಕ್ಕೂ ಹೆಚ್ಚಾಗಿ ತನ್ನ ಯಾವ ಗ್ರಂಥದಲ್ಲಿಯೂ ಪಂಚಾಚಾರ್ಯರ ಪ್ರಸ್ತಾಪ ಮಾಡಿರುವುದು ಕಂಡು ಬರುವುದಿಲ್ಲ. ಒಂದು ವೇಳೆ ಶ್ರೀ ಮಲ್ಲಿಕಾರ್ಜುನರ ಅಭಿಪ್ರಾಯದಂತೆ ಕಾಶೀ ಪೀಠದ ಅನುಯಾಯಿಗಳೇ ಆಗಿದ್ದರೆ ಅದನ್ನು ಹೆಸರಿಸದೆ ಇರಲು ಕಾರಣವಾದರೂ ಏನು? ಆದ್ದರಿಂದ ಈ ಅಭಿಪ್ರಾಯವನ್ನು ಸಮರ್ಥನೀಯವೆಂದು ಹೇಳುವದು ಕಷ್ಟಕರ.

ಮೊಗ್ಗೆಯ ಮಾಯಿದೇವ ಉಭಯಭಾಷಾವಿಶಾರದ. ಅಂದರೆ ಕನ್ನಡ, ಸಂಸ್ಕೃತ ಎರಡೂ ಭಾಷೆಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದವನು. ಎರಡೂ ಭಾಷೆಗಳು

ಅವನ ಹಸ್ತಗತ. ಆದ್ದರಿಂದ ಅವನು ತಾನು ಹೇಳಲಪೇಕ್ಷಿಸಿದ ಷಟ್‌ಸ್ಥಲ ಸಿದ್ಧಾಂತವನ್ನು ಎರಡೂ ಭಾಷೆಗಳಲ್ಲಿ ನಿರೂಪಿಸಿರುವನು. ಆದರೂ ಸಂಸ್ಕೃತದಲ್ಲಿ ಈ ಸಿದ್ಧಾಂತವನ್ನು ಸೂತ್ರರೂಪವಾಗಿ ಹೇಳಿ ಅದಕ್ಕೆ ಹೊಂದಿಕೊಳ್ಳುವ ವಿಷಯಗಳನ್ನು ಪೂರಕವಾಗುವಂತೆ ಕನ್ನಡದಲ್ಲಿ ನಿರೂಪಿಸಿರುವನು. ಹೀಗೆ ಮಾಯಿದೇವನ ಎಲ್ಲ ಗ್ರಂಥಗಳನ್ನು ಆಮೂಲಾಗ್ರವಾಗಿ ಅವಲೋಕಿಸಿದರೆ ಈ ಷಟ್‌ಸ್ಥಲ ಸಿದ್ಧಾಂತದ ತಾತ್ತ್ವಿಕಭಾಗದ ಸ್ಪಷ್ಟವಾದ ಕಲ್ಪನೆಯು ಮೂಡುವದು.

ಅವನು ಬರೆದ ಗ್ರಂಥಗಳು–೧) ಶಿವಾನುಭವ ಸೂತ್ರಂ ೨) ವಿಶೇಷಾರ್ಥ ಪ್ರಕಾಶಿಕಾ ೩) ಶತಕತ್ರಯಂ ೪) ಪ್ರಭುಗೀತೆ* ೫) ಏಕೋತ್ತರ ಶತಸ್ಥಲ ೬) ಷಟ್‌ಸ್ಥಲ ಗದ್ಯ ೭) ಶತಕತ್ರಯ ೮) ಮೊಗ್ಗೆಯ ಮಾಯಿದೇವ ವಚನ.**

ಇವುಗಳಲ್ಲಿ ಮೊದಲಿನ ಮೂರು ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿದ್ದರೆ ಮುಂದಿನವು ಕನ್ನಡ ಭಾಷೆಯಲ್ಲಿವೆ. ಈ ಗ್ರಂಥಗಳನ್ನು ಅವಲೋಕಿಸಿ ವೀರಶೈವ ತತ್ತ್ವಶಾಸ್ತ್ರದಲ್ಲಿ ಅವನ ಸ್ಥಾನವೇನೆಂಬುದನ್ನು ನಿರ್ಣಯಿಸಬಹುದಾಗಿದೆ.

**ಶಿವಾನುಭವ ಸೂತ್ರ:**

ಮೊಗ್ಗೆಯ ಮಾಯಿದೇವನ ಎಲ್ಲ ಗ್ರಂಥಗಳಲ್ಲಿ ಮಹತ್ವಪೂರ್ಣವಾದುದೆಂದರೆ ಶಿವಾನುಭವ ಸೂತ್ರ. ಇದು ಶಿವ ಸಿದ್ಧಾಂತ ತಂತ್ರ ಸ್ವರೂಪವಾದ ಷಟ್‌ಸ್ಥಲ ಸಿದ್ಧಾಂತವನ್ನು ನಿರ್ಣಯಿಸುವ ಮೂಲ ಗ್ರಂಥ. ವೀರಶೈವ ಧರ್ಮವು ಅಷ್ಟಾವರಣವೇ ಅಂಗವಾಗಿಯೂ ಪಂಚಾಚಾರವೇ ಪ್ರಾಣವಾಗಿಯೂ ಷಟ್‌ಸ್ಥಲವೇ ಆತ್ಮವಾಗಿಯೂ ಉಳ್ಳುದು. ಆದ್ದರಿಂದ ಇಂತಹ ಆತ್ಮ ಸ್ವರೂಪವಾದ ಷಟ್‌ಸ್ಥಲ ಸಿದ್ಧಾಂತವನ್ನು ನಿರ್ಣಯಿಸುವ ಗ್ರಂಥದ ಹಿರಿಮೆ ಎಷ್ಟೆಂಬುದನ್ನು ಮತ್ತೆ ಬೇರೆ ಹೇಳಬೇಕಾಗಿಲ್ಲ.

ಈ ಶಿವಾದ್ವೈತ ತತ್ತ್ವವನ್ನು ಮೂಲತಃ ಶಿವನು ಶಿವೆಗೆ ನಿರೂಪಿಸಿದನು. ಆ ರಹಸ್ಯವಾದ ಸಿದ್ಧಾಂತವನ್ನೇ ತಾನು ತನ್ನ ಶಿವಾನುಭವ ಸೂತ್ರದಲ್ಲಿ ವಿವರಿಸಿರುವುದಾಗಿ ಮಾಯಿದೇವನು ಪ್ರಾರಂಭದಲ್ಲಿ ಹೇಳಿದ್ದಾನೆ. ಅಂದರೆ ಈ ಶಿವಸಿದ್ಧಾಂತವು ಕಾಮಿಕಾದಿ ವಾತುಲ ಪರ್ಯಂತವಿರುವ ಶಿವಾಗಮಗಳಲ್ಲಿ ಅಲ್ಲಲ್ಲಿ ಬಿಡಿಬಿಡಿಯಾಗಿ ಉಕ್ತವಾಗಿವೆ. ಅದರಲ್ಲಿಯೂ ಎರಡು ಭಾಗಗಳನ್ನುಳ್ಳ ಸರ್ವೋತ್ಕೃಷ್ಟವಾದ ವಾತುಲಾಗಮದ ಉತ್ತರ ಭಾಗದಲ್ಲಿ ಈ ಸಿದ್ಧಾಂತವನ್ನು ಶಿವನು ಶಿವೆಗೆ ನಿರೂಪಿಸಿದ್ದಾನೆ. ಇದು ತಂತ್ರೋತ್ತಮ ಪ್ರದೀಪವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದೇ ಮಾಯಿದೇವನ ಶಿವಾನುಭವ ಸೂತ್ರಕ್ಕೆ ಮೂಲ ಆಧಾರ.

---

* ಪ್ರಭುಗೀತೆ ನನಗೆ ದೊರೆತಿಲ್ಲ. ಡಾ. ಎಂ. ಎಂ. ಕಲಬುರ್ಗಿಯವರ ಮಾರ್ಗ–೧ ರಲ್ಲಿ ಇದರ ವಿಷಯ ಬಂದಿರುವುದಾಗಿ ಕೇಳಿದ್ದೇನೆ.

** ವಚನಗಳು ನನಗೆ ನೋಡಲು ಸಿಕ್ಕಿಲ್ಲ.

ಶ್ರುತಿ, ಸ್ಮೃತಿ, ಇತಿಹಾಸ, ಶಿವಧರ್ಮ ಶಾಸ್ತ್ರ, ಪುರಾಣ, ಗೀತೆಯ ಸಾರ ಇವು ಇನ್ನುಳಿದ ಆಧಾರಗಳು. ಇವಲ್ಲದೆ ಪುರಾತನರ ಅಭಿಪ್ರಾಯಗಳು, ಗುರು ವಚನಗಳು, ಸ್ವಾನುಭವ ಮತ್ತು ತರ್ಕ ಇವುಗಳನ್ನು ಬಳಸಿಕೊಂಡು ಈ ಶಿವಸಿದ್ಧಾಂತ ತತ್ತ್ವವನ್ನು ತಾನು ಹೇಳಿರುವುದಾಗಿ ತನಗೆ ಆಧಾರವಾದ ಸಾಮಗ್ರಿಯನ್ನು ಮುಂದಿರಿಸಿದ್ದಾನೆ. ಇಲ್ಲಿ 'ಗೀತಾಸಾರ'ವೆಂದು ಹೇಳಿರುವುದು ಶಿವಶರಣರ ವಚನಗಳನ್ನು ಕುರಿತೇ ಆಗಿದೆ. ಈ ವಚನಗಳನ್ನು ಗೀತೆಗಳೆಂದು ಕರೆಯಲಾಗುತ್ತದೆ. ಆದ್ದರಿಂದ ಉಪನಿಷತ್ತುಗಳು, ಆಗಮ ಗಳು ಹೇಗೆ ಪ್ರಮಾಣ ಭೂತವೊ ಹಾಗೆಯೇ ಈ ವಚನಗಳೂ ಪ್ರಮಾಣ ಭೂತವಾದವು ಗಳು. ರಾಮಾನುಜಾಚಾರ್ಯರು ತಮ್ಮ ಮತವನ್ನು 'ಉಭಯ ವೇದಾಂತ ಮತ'ವೆಂದು ಕರೆದುದುಂಟು. ಇದಕ್ಕೆ ಕಾರಣ ಸಂಸ್ಕೃತದ ವೇದಾದಿಗಳಂತೆ ತಮಿಳಿನಲ್ಲಿ ಆಳ್ವಾರರೆಂಬ ಭಕ್ತರು ರಚಿಸಿದ 'ನಾಲಾಯರ ಪ್ರಬಂಧ'ವೆಂಬ ಅನುಭವ ವಾಣಿಯು ಪ್ರಮಾಣವಾಗಿದೆ. ಹಾಗೆ ಮಾಯಿದೇವನು ವಚನಗಳನ್ನು ಷಟ್‌ಸ್ಥಲ ಸಿದ್ಧಾಂತಕ್ಕೆ ಆಧಾರವಾಗಿರಿಸಿಕೊಂಡಿ ರುವುದು ಸೂಕ್ತವೆನಿಸುತ್ತದೆ. "ಷಟ್‌ಸ್ಥಲ ಸಿದ್ಧಾಂತವು ವೇದಾಗಮಾದಿಗಳಲ್ಲಿ ಅಂಕುರಿಸಿ, ಪಲ್ಲವಿಸಿ, ಪುಷ್ಪಿತವಾಗಿದ್ದರೂ ವಚನ ವಾಙ್ಮಯದಲ್ಲಿಯೇ ಅದರ ಮಧುರ ಫಲವು ಫಲಿತವಾಗಿರುವುದು" ಎಂಬ ಪಂ. ವೈ. ನಾಗೇಶ ಶಾಸ್ತ್ರಿಗಳ (ಶಿವಾನುಭವ ಸೂತ್ರ ಪ್ರಸ್ತಾವನೆ-ಪುಟ-XIV) ಈ ಅಭಿಪ್ರಾಯವು ಅರ್ಥಪೂರ್ಣವಾಗಿದೆ.

ಎಲ್ಲ ಮತ ತತ್ತ್ವಗಳ ಮೂಲ ಜೀವ, ಜಗತ್ತು ಮತ್ತು ಈಶ್ವರ ಇವುಗಳ ನಿರ್ಣಯವೇ ಆಗಿದೆ. ಶಿವಾನುಭವ ಸೂತ್ರದಲ್ಲಿಯೂ ಇದನ್ನು ಸವಿಸ್ತಾರವಾಗಿ ವಿವರಿಸಿ ಶಿವ ಸಿದ್ಧಾಂತ ತತ್ತ್ವವನ್ನು ನಿರ್ಣಯಿಸಿದ್ದಾನೆ. ಅದನ್ನು ಪ್ರವೃತ್ತಿ, ಸ್ಥಿತಿ ಮತ್ತು ನಿವೃತ್ತಿ ಈ ಕ್ರಮದಲ್ಲಿ ವಿವರಿಸಿದ್ದಾನೆ.

ವೀರಶೈವರು ಪರಾತ್ಪರ ಬ್ರಹ್ಮವನ್ನು 'ಸ್ಥಲ'ವೆಂದು ಕರೆದಿದ್ದಾರೆ. ಈ ಸ್ಥಲ ದಲ್ಲಿಯೆ ಶಿವ ಮತ್ತು ಶಕ್ತಿಗಳೆರಡೂ ಅವಿನಾಭಾವದಿಂದ ಕೂಡಿಕೊಂಡಿವೆ. ಶಕ್ತಿಯ ಸ್ಫುರಣೆಯೆ ಸೃಷ್ಟಿಗೆ ಕಾರಣೀಭೂತವಾಗುತ್ತದೆ. ಏಕೆಂದರೆ ಶಕ್ತಿಯದು ವಿಸ್ತಾರದ ಕಡೆಗೆ ಗಮನ. ಹೀಗೆ ವಿಕಾಸಗೊಳ್ಳುವುದಕ್ಕೆ "ಪ್ರವೃತ್ತಿ ಮಾರ್ಗ" ಎಂದು ಕರೆಯಲಾಗುತ್ತದೆ. ಹೀಗೆ ವಿಕಾಸಗೊಂಡುದೇ ಈ ಪ್ರಪಂಚ. 'ಸ್ಥಲ' ಸತ್ಯವಾದುದು. ಅದರಿಂದ ಆವಿರ್ಭೂತವಾದ ಈ ಪ್ರಪಂಚ ಇದೂ ಸತ್ಯವಾದುದು. ಇದನ್ನೇ 'ಸ್ಥಿತಿ' ಎಂದು ಕರೆಯಲಾಗುವುದು. ಇನ್ನು ಅಂತರ್ಮುಖಿಯಾದ ಭಕ್ತಿಯು ಈ ವಿಕಾಸವನ್ನು ತನ್ನಲ್ಲಿ ಅಡಗಿಸಿಕೊಳ್ಳುತ್ತ ಕೊನೆಗೆ 'ಸ್ಥಲ'ದಲ್ಲಿ ಐಕ್ಯವಾಗುತ್ತದೆ. ಇದೆ ಮುಕ್ತಿ. ಜೀವ ಪರಮರ ಐಕ್ಯ. ಇದೇ ನಿವೃತ್ತಿ ಮಾರ್ಗ-ಹೀಗೆ ಮಾಯಿದೇವ ಪ್ರವೃತ್ತಿ, ನಿವೃತ್ತಿ ಎರಡೂ ಮಾರ್ಗಗಳನ್ನು ಈ ಗ್ರಂಥದಲ್ಲಿ ಸವಿಸ್ತಾರವಾಗಿ ನಿರೂಪಿಸಿದ್ದಾನೆ.

'ಸ್ಥಲ' ಎನ್ನುವಲ್ಲಿಯ 'ಸ್ಥ' ಎಂಬುದು ಸ್ಥಾನವಾಚಕವಾಗಿಯೂ 'ಲ' ಎಂಬುದು

ಲಯವಾಚಕವಾಗಿಯೂ ಇರುವವು. ಚೇತನಾ ಚೇತನವಾದ ಪ್ರಪಂಚವು ಮೊದಲು ಸ್ಥಿತಿಯನ್ನು ಕೊನೆಗೆ ಲಯವನ್ನು ಈ ಸ್ಥಲದಲ್ಲಿಯೆ ಹೊಂದುತ್ತದೆ. ಇದೇ ಜಗತ್ತಿಗೆ ಅಧಿಷ್ಠಾನವಾಗಿದೆ. ಈ ಸ್ಥಲವು ಶಿವ, ರುದ್ರ ಮೊದಲಾದ ಸಂಜ್ಞೆಯುಳ್ಳುದಾಗಿದೆ.

ಇಂತಹ ಈ ಸ್ಥಲವು ತನ್ನಲ್ಲಿರುವ ಸ್ವಶಕ್ತಿ ಕ್ಷೋಭೆಯಿಂದ ಲಿಂಗಸ್ಥಲವೆಂದೂ ಅಂಗಸ್ಥಲವೆಂದೂ ಎರಡಾಯಿತು. ಆಕಾಶವು ಒಂದೇ ಆಗಿದ್ದರೂ ಕೊಡವನ್ನು ಆಶ್ರಯಿಸಿದ್ದುದು ಕೊಡದಾಕಾಶವೆಂದೂ ಉಳಿದುದು ಮಹಾಕಾಶವೆಂದೂ ಕರೆಸಿಕೊಳ್ಳುತ್ತದೆ. ಆದರಂತೆ ಒಂದೇ ಆದ ಸ್ಥಲವು ಅಂಗ ಸಂಬಂಧದಿಂದ ಅಂಗಸ್ಥಲವೆಂದೂ ಲಿಂಗ ಸಂಬಂಧದಿಂದ ಲಿಂಗಸ್ಥಲವೆಂದೂ ಕರೆಯಿಸಿಕೊಳ್ಳುವುದು. ಲಿಂಗವು ಉಪಾಸ್ಯವಾದರೆ ಅಂಗವು ಉಪಾಸಕ. ಹೀಗಿದ್ದರೂ ಇವೆರಡೂ ಒಂದೆ. ಏಕೆಂದರೆ ಅಶಿವನಾದವನಿಗೆ ಕೋಟಿ ಜನ್ಮಗಳಲ್ಲಿಯೂ ಶಿವೋಪಾಸನೆಯು ಸಾಧ್ಯವಾಗದು.

ಸ್ಥಲವು ಲಿಂಗ–ಅಂಗವೆಂದು ಎರಡಾದಂತೆ ಆ ಸ್ಥಲಗತವಾದ ಶಕ್ತಿಯೂ ಎರಡಾಯಿತು. ಒಂದು ಲಿಂಗವನ್ನಾಶ್ರಯಿಸಿ ಕಲೆಯೆಂದು ಕರೆಯಿಸಿಕೊಂಡರೆ ಇನ್ನೊಂದು ಅಂಗವನ್ನಾಶ್ರಯಿಸಿ ಭಕ್ತಿಯೆಂದು ಕರೆಯಿಸಿಕೊಳ್ಳುತ್ತದೆ. ಕಲೆಯು (ಶಕ್ತಿ) ವಾಸನಾಯುಕ್ತವಾಗಿದ್ದರೆ ಭಕ್ತಿಯು ವಾಸನಾರಹಿತ. ಆದ್ದರಿಂದ ಕಲೆ ಸೃಷ್ಟಿ ಸಾಮರ್ಥ್ಯವುಳ್ಳುದಾದರೆ ಭಕ್ತಿ ಭೋಗ–ಮೋಕ್ಷಗಳನ್ನುಂಟು ಮಾಡುವಂತಹದು. ಅಂದರೆ ಶಕ್ತಿಯು ಪ್ರವೃತ್ತಿಪರವಾದರೆ ಭಕ್ತಿಯು ನಿವೃತ್ತಿಪರ. ಸಮಾಯೆಯಾದ ಶಕ್ತಿಯು ಅಧೋಮುಖಿಯಾದರೆ ನಿರ್ಮಾಯೆಯಾದ ಭಕ್ತಿಯು ಊರ್ಧ್ವಮುಖಿ. ಒಂದರ ಗಮನ ವಿಸ್ತಾರದ ಕಡೆಗಿದ್ದರೆ ಇನ್ನೊಂದರ ಗಮನ ಲಯದ ಕಡೆಗೆ. ಸ್ಥಲವೇ ಚಿನ್ಮಾತ್ರ. ಚಿತ್‌ದಿಂದ ಶಿವ–ಆತ್ಮ. ಸ್ಥಲದಿಂದ ಲಿಂಗ–ಅಂಗ. ಅಂದರೆ ಶಿವನೆಂದರೆ ಲಿಂಗ, ಆತ್ಮನೆಂದರೆ ಅಂಗ.

ವಿಕಾಸ ಕ್ರಮದಲ್ಲಿ ಲಿಂಗ–ಅಂಗ ಎರಡೂ ಭಾಗಿಯಾಗುವವು. ಒಂದು ಲಿಂಗದ ವಿಕಾಸ ಕ್ರಮವಾದರೆ ಇನ್ನೊಂದು ಅಂಗದ ವಿಕಾಸ ಕ್ರಮ.

**ಲಿಂಗದ ವಿಕಾಸ:**

ಲಿಂಗವು ಮೊದಲು ಭಾವ, ಪ್ರಾಣ, ಇಷ್ಟ ಎಂದು ಮೂರು ಪ್ರಕಾರವಾಯಿತು. ಆ ಮೇಲೆ ಪ್ರತಿಯೊಂದರಲ್ಲಿಯೂ ಎರಡೆರಡಾಗಿ ಭಾವ ಲಿಂಗದಲ್ಲಿ–ಮಹಾಲಿಂಗ, ಪ್ರಸಾದ ಲಿಂಗ; ಪ್ರಾಣ ಲಿಂಗದಲ್ಲಿ–ಚರಲಿಂಗ, ಶಿವಲಿಂಗ; ಇಷ್ಟಲಿಂಗದಲ್ಲಿ ಗುರುಲಿಂಗ, ಆಚಾರ ಲಿಂಗ ಎಂದು ಆರಾದವು. ಲಿಂಗವು ಆರಾದಂತೆ ತದ್ಗತ ಶಕ್ತಿಯೂ ಆರಾಯಿತು. (ಲಿಂಗವು ಮೊದಲು ಮೂರಾಗಿ ನಂತರ ಆರಾಗಿದೆ. ಆದರೆ ಶಕ್ತಿಯು ಒಮ್ಮೆಲೆ ಆರಾಗಿದೆ.) ೧) ಚಿಚ್ಛಕ್ತಿ ೨) ಪರಾಶಕ್ತಿ ೩) ಆದಿ ಶಕ್ತಿ ೪) ಇಚ್ಛಾ ಶಕ್ತಿ ೫) ಜ್ಞಾನ ಶಕ್ತಿ ೬) ಕ್ರಿಯಾ ಶಕ್ತಿ ಇವೇ ಆ ಆರು ಶಕ್ತಿಗಳು. ಅದನ್ನೆ ಹೀಗೆ ರೂಪಿಸಬಹುದು.




**ಅಂಗದ ವಿಕಾಸ:**

ಲಿಂಗಸ್ಥಲದಂತೆ ಅಂಗಸ್ಥಲವೂ ಪ್ರವೃತ್ತಿ ಮಾರ್ಗದಲ್ಲಿ ವಿಕಾಸವಾಗುವದುಂಟು. ಅಂಗವೆಂದರೆ ಶಿವದೀಕ್ಷೆಯಿಂದ ಶುದ್ಧವಾದ ಜೀವವೆಂದರ್ಥ. 'ಅಂ' ಎಂಬುದು ಸದ್ರೂಪ ವಾದ ಪರಬ್ರಹ್ಮ ಬೋಧಕವು, 'ಗಂ' ಎಂಬುದು 'ಗಚ್ಛತಿ' ಎಂಬ ಅರ್ಥಬೋಧಕವು. ಅಂದರೆ ಪರಬ್ರಹ್ಮವನ್ನು ಹೊಂದಿ ತಾದಾತ್ಮ್ಯ ರೂಪದಿಂದಿರಲಪೇಕ್ಷಿಸುವದೇ ಅಂಗವೆಂದು ಪ್ರಾಜ್ಞರ ಮತ.

ಲಿಂಗವು ತ್ರಿವಿಧವಾದಂತೆ ಅವನ್ನು ಉಪಾಸಿಸುವ ಸಲುವಾಗಿ ಅಂಗವೂ ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರು ತೆರನಾಯಿತು. ಲಿಂಗಸ್ಥಲವು ಮೂರರಿಂದ ಆರಾದಂತೆ ಅಂಗಸ್ಥಲವೂ ಆರಾಯಿತು. ಯೋಗಾಂಗದಲ್ಲಿ–ಐಕ್ಯ, ಶರಣ, ಭೋಗಾಂಗದಲ್ಲಿ–ಪ್ರಾಣಲಿಂಗಿ, ಪ್ರಸಾದಿ; ತ್ಯಾಗಾಂಗದಲ್ಲಿ–ಮಹೇಶ, ಭಕ್ತ ಎಂಬಂತೆ– ಒಂದೊಂದರಲ್ಲಿ ಎರಡೆರಡಾದುವು.

ಅದರಂತೆ ಅಂಗಗತವಾದ ಶಕ್ತಿಯೂ ಐಕ್ಯಾಧಿಸ್ಥಲಗಳಲ್ಲಿ ಕ್ರಮವಾಗಿ ಸಮರಸಭಕ್ತಿ, ಆನಂದಭಕ್ತಿ, ಅನುಭವಭಕ್ತಿ, ಅವಧಾನಭಕ್ತಿ, ನೈಷ್ಠಿಕೀಭಕ್ತಿ, ಸದ್ಭಕ್ತಿ ಎಂದು ಷಡ್ವಿಧ ಭಕ್ತಿಯು ವಿರಾಜಿಸುತ್ತಿರುವದು.

ಈ ಷಡಂಗಸ್ಥಲಗಳಲ್ಲಿ ಐಕ್ಯ, ಶರಣ, ಪ್ರಾಣಲಿಂಗಿ ಇವು ಜ್ಞಾನಾತ್ಮಕವು. ಪ್ರಸಾದಿ, ಮಹೇಶ, ಭಕ್ತ ಇವು ಕ್ರಿಯಾತ್ಮಕವಾದವು. ಹೀಗೆನ್ನುವುದರಿಂದ ಮೊದಲ ಮೂರುಸ್ಥಲಗಳಲ್ಲಿ ಜ್ಞಾನದ ಮುಂದಿನ ಮೂರು ಸ್ಥಲಗಳಲ್ಲಿ ಕ್ರಿಯೆಯ ಅವಶ್ಯವಿಲ್ಲ ವೆಂದಲ್ಲ. ಜ್ಞಾನ–ಕ್ರಿಯೆಗಳೆರಡೂ ಸಮಸಮುಚ್ಚಯ ರೂಪದಿಂದ ಮುಕ್ತಿಗೆ ಸಾಧನ ವಾಗುವದಲ್ಲದೆ ಕ್ರಮಸಮುಚ್ಚಯದಿಂದಲ್ಲ.

ಇಲ್ಲಿಯವರೆಗಿನ ವಿವರವು ಪ್ರವೃತ್ತಿ ಮಾರ್ಗದ್ದಾಯಿತು.

**ದೀಕ್ಷೆ:**

ಜೀವಾತ್ಮನಿಗೆ ಅವಿದ್ಯೆಯು ಲೇಪನದಿಂದ ತಾನು ಸಂಸಾರಿಯೆಂಬ ಭ್ರಾಂತಿ ಮೂಡಿರುವದು. ಈ ಭ್ರಾಂತಿ ದೂರಾದುದಲ್ಲದೆ ಅವನಿಗೆ ತನ್ನ ಅರಿವು ಮೂಡದು. ಅರಿವು ಮೂಡಿದಲ್ಲದೆ ಸಂಯೋಗವು ಲಭಿಸದು. ಇದಕ್ಕೆ ಗುರುಕಾರುಣ್ಯವೇ ತಾರಕ. ಅದಕ್ಕಾಗಿ ದೀಕ್ಷೆಯ ಆವಶ್ಯಕತೆಯಿದೆ. ತಾನು ಯಾರು? ಎಂಬುದನ್ನು ಮರೆತ ಜೀವನಿಗೆ 'ತತ್ತ್ವಮಸಿ' ಎಂಬ ಶ್ರುತಿ ವಾಕ್ಯವನ್ನು ಹೇಳಿ, ತಿಳಿಸಿಕೊಡುವದು ಅವಶ್ಯ. ಅದನ್ನು ಮಾಡುವವನೆ ಗುರು.

'ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ'

ಅಂದರೆ ಯಾವುದು ಲಿಂಗಸಂಬಂಧವನ್ನುಂಟು ಮಾಡುವದೋ ಮತ್ತು ಶಿಷ್ಯನ ಮಲತ್ರಯವನ್ನು ಹೋಗಲಾಡಿಸುವದೋ ಅದಕ್ಕೆ 'ದೀಕ್ಷೆ' ಎಂದು ಕರೆಯಲಾಗುತ್ತದೆ.

ಈ ದೀಕ್ಷೆಯು ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ ಎಂದು ಮೂರು ವಿಧ. ಗುರುವಿನ ಹಸ್ತ, ಶಿಷ್ಯನ ಮಸ್ತಕ ಇವುಗಳ ಸಂಯೋಗವಾಗುವದೇ ವೇಧಾದೀಕ್ಷೆ. ಗುರುವಿಂದ ಶಿಷ್ಯನ ಕಿವಿಯಲ್ಲಿ ಉಪದೇಶಿಸಲ್ಪಡುವ ಮಂತ್ರವೇ ಮಂತ್ರದೀಕ್ಷೆ. ಇನ್ನು ವಿಧ್ಯುಕ್ತವಾಗಿ ಗುರುವು ಶಿಷ್ಯನಿಗೆ ಇಷ್ಟಲಿಂಗವನ್ನು ಕೊಡುವುದೇ ಕ್ರಿಯಾದೀಕ್ಷೆ.

ಈ ತ್ರಿವಿಧ ದೀಕ್ಷೆಯಿಂದ ಆಣವ, ಮಾಯಾ, ಕಾರ್ಮಿಕ ಎಂಬ ಮಲತ್ರಯುಗಳು ನಾಶವಾಗುವವು. ಆಗ ಗುರುವು ಯೋಗಾಂಗ ಸ್ವರೂಪವಾದ ಕಾರಣ ಶರೀರದಲ್ಲಿ ವೇಧಾದೀಕ್ಷೆಯಿಂದ ಭಾವಲಿಂಗವನ್ನು ಭೋಗಾಂಗ ಸ್ವರೂಪವಾದ ಸೂಕ್ಷ್ಮ ಶರೀರದಲ್ಲಿ ಮಂತ್ರದೀಕ್ಷೆಯಿಂದ ಪ್ರಾಣಲಿಂಗವನ್ನೂ ತ್ಯಾಗಾಂಗಸ್ವರೂಪವಾದ ಸ್ಥೂಲಶರೀರದಲ್ಲಿ ಕ್ರಿಯಾದೀಕ್ಷೆಯಿಂದ ಇಷ್ಟಲಿಂಗವನ್ನು ಅಳವಡಿಸುವನು. ಇದರಿಂದ ಈ ಜೀವನು ಪ್ರಾಜ್ಞ, ತೈಜಸ, ವಿಶ್ವನೆಂದು ಕರೆಯಿಸಿಕೊಳ್ಳುವನು ಮತ್ತು ಇವನಿಗೆ ಪರಮಾತ್ಮ, ಅಂತರಾತ್ಮ, ಜೀವಾತ್ಮ ಎಂದು ಹೇಳುವರು.

ಹೀಗೆ ಅಂಗತ್ರಯುಗಳಲ್ಲಿ ಲಿಂಗತ್ರಯುಗಳು ಅಳವಟ್ಟಂತೆ ಹೃದಯ, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳಲ್ಲಿ ಮಹಾಲಿಂಗಾದಿಗಳು ಬೆಳಗುವವು. ಹೀಗೆ ಸರ್ವವೂ ಲಿಂಗಮಯವಾಗುವುದರಿಂದ ಯಾವ ವಿಷಯದ ಗ್ರಹಣವೂ ಇಂದ್ರಿಯಗಳಿಂದ ನಡೆಯದೆ ಲಿಂಗಮುಖವಾಗಿಯೆ ನಡೆಯುವದು. ಆದ್ದರಿಂದ ಲಿಂಗಧಾರಿಗೆ–ವೀರಶೈವನಿಗೆ–ಲಿಂಗಭೋಗೋಪಭೋಗಿ ಎಂದು ಕರೆಯಲಾಗುತ್ತದೆ.

**ನಿವೃತ್ತಿಮಾರ್ಗ:**

ಜೀವನು ಇಷ್ಟ, ಪ್ರಾಣ, ಭಾವಲಿಂಗಗಳನ್ನು ಜಾಗೃತ್, ಸ್ವಪ್ನ, ಸುಷುಪ್ತಿ ಈ ಅವಸ್ಥೆಗಳಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಂದ ಉಪಾಸನೆ ಮಾಡುವನು. ಈ

ಉಪಾಸನೆಯಿಂದ ಜೀವಾತ್ಮನಲ್ಲಿ ಬೀಜ ಭೂತವಾಗಿರುವ ಭಕ್ತಿಯು ಭಕ್ತಾದಿ ಷಡಂಗಗಳಲ್ಲಿ ವಿಕಾಸವನ್ನು ಹೊಂದುತ್ತ ಕಡೆಗೆ ಷಡ್ವಿಧ ಭಕ್ತಿಯೆಂದು ಕರೆಯಿಸಿಕೊಂಡು ಕೊನೆಗೆ ಶಿವನನ್ನು ಸಾಧಿಸುವದು. ಅಂದರೆ ಶಿವಸ್ವರೂಪವನ್ನು ಹೊಂದುವದು. ಅದು ಹೀಗೆ-

೧. **ಭಕ್ತಸ್ಥಲ:** ಜೀವಾತ್ಮನಲ್ಲಿ ಬೀಜಭೂತವಾದ ಭಕ್ತಿಯು ಸ್ವರೂಪ ಸದ್ಭಾವವನ್ನು ಹೊಂದಲು ಸದ್ಭಕ್ತಿಯೆನಿಸಿಕೊಂಡಿತು. ಈ ಸದ್ಭಕ್ತಿಯಿಂದಲೆ ಜೀವಾತ್ಮ ನಿಗೆ ಆಚಾರಲಿಂಗಯುಕ್ತವಾದ ಭಕ್ತಸ್ಥಲವೆಂಬ ಅಂಗಸ್ಥಲವು ಪ್ರಾಪ್ತವಾದುದು.

೨. **ಮಹೇಶಸ್ಥಲ:** ಭಕ್ತಸ್ಥಲಗತವಾದ ಸದ್‌ಭಕ್ತಿಯೆ ನಿಜನಿಷ್ಠೆಯಿಂದ ಸಂಪೂರ್ಣವಾಗಲಾಗಿ ನೈಷ್ಠಿಕೀ ಭಕ್ತಿಯೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಗುರುಲಿಂಗಯುಕ್ತವಾದ ಮಹೇಶ್ವರಸ್ಥಲವುಂಟಾಯಿತು.

೩. **ಪ್ರಸಾದಿಸ್ಥಲ:** ಮಹೇಶ್ವರಸ್ಥಲದಲ್ಲಿರುವ ನೈಷ್ಠಿಕೀಭಕ್ತಿಯೆ ಅವಧಾನ (ಎಚ್ಚರಿಕೆ) ಸ್ವರೂಪದಿಂದ ಅವಧಾನ ಭಕ್ತಿಯೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಶಿವಲಿಂಗಯುಕ್ತವಾದ ಪ್ರಸಾದಿಸ್ಥಲವುಂಟಾಯಿತು.

೪. **ಪ್ರಾಣಲಿಂಗಿಸ್ಥಲ:** ಪ್ರಸಾದಿಸ್ಥಲಗತವಾದ ಅವಧಾನಭಕ್ತಿಯೆ ಸ್ವಾನುಭವದಿಂದ ಅನುಭವಭಕ್ತಿಯೆನಿಸಿಕೊಂಡಿತು. ಈ ಭಕ್ತಿಯೀದ ಆತ್ಮನಿಗೆ ಚರಲಿಂಗಯುಕ್ತ ವಾದ ಪ್ರಾಣಲಿಂಗಿಸ್ಥಲವುಂಟಾಯಿತು.

೫. **ಶರಣಸ್ಥಲ:** ಪ್ರಾಣಲಿಂಗಿಸ್ಥಲದಲ್ಲಿರುವ ಅನುಭವ ಭಕ್ತಿಯೆ ಆನಂದ ಯೋಗದಿಂದ ಆನಂದಭಕ್ತಿಯೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಪ್ರಸಾದಲಿಂಗ ಯುಕ್ತವಾದ ಶರಣಸ್ಥಲವುಂಟಾಯಿತು.

**ಐಕ್ಯಸ್ಥಲ:** ಶರಣಸ್ಥಲದಲ್ಲಿರುವ ಆನಂದಭಕ್ತಿಯು ಸಾಮರಸ್ಯದ ಪ್ರಭಾವದಿಂದ ಸಮರಸ ಭಕ್ತಿಯೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಮಹಾಲಿಂಗಯುಕ್ತವಾದ ಐಕ್ಯಸ್ಥಲವು ಸಾಧಿಸಿದುದು.

ಹೀಗೆ ಆಚಾರಲಿಂಗವು ಗುರುಲಿಂಗದಲ್ಲಿಯೂ ಗುರುವು ಶಿವಲಿಂಗದಲ್ಲಿಯೂ ಶಿವ ಲಿಂಗವು ಚರಲಿಂಗದಲ್ಲಿಯೂ ಚರಲಿಂಗವು ಪ್ರಸಾದ ಲಿಂಗದಲ್ಲಿಯೂ ಪ್ರಸಾದಲಿಂಗವು ಮಹಾಲಿಂಗದಲ್ಲಿಯೂ ಐಕ್ಯವನ್ನು ಹೊಂದುವುದೇ ನಿವೃತ್ತಿಮಾರ್ಗವು.

ಈ ರೀತಿಯಾಗಿ ಶಿವಾನುಭವ ಸೂತ್ರದಲ್ಲಿ ಮೊಗ್ಗೆಯ ಮಾಯಿದೇವ ಒಂದೇ ಆದ ಸ್ಥಲವು ಪ್ರವೃತ್ತಿ ಮಾರ್ಗದಲ್ಲಿ ಶಕ್ತಿಯ ಸ್ಫುರಣದಿಂದ ಎರಡಾಗಿ, ಎರಡು ಆರಾಗಿರುವು ದನ್ನು ವಿವರಿಸಿ, ವಿಸ್ತಾರಗೊಂಡ ಇವೆಲ್ಲವು ನಿವೃತ್ತಿ ಮಾರ್ಗದಲ್ಲಿ ಭಕ್ತಿಯ ಸಹಾಯದಿಂದ ಒಂದರೊಳಗೊಂದು ಕೂಡಿಕೊಂಡು ಮತ್ತೆ ಸ್ಥಲದಲ್ಲಿಯೇ ಐಕ್ಯವಾಗುವುದನ್ನು ಸಾಧಾರ ವಾಗಿ, ಮಾರ್ಮಿಕವಾಗಿ, ಸೋದಾಹರಣ ವಿವರಿಸಿರುವನು.

**ವಿಶೇಷಾರ್ಥ ಪ್ರಕಾಶಿಕಾ:**

ವಿಶೇಷಾರ್ಥ ಪ್ರಕಾಶಿಕೆಯು ಷಟ್‌ಸ್ಥಲ ಸಿದ್ಧಾಂತ ನಿರೂಪಣೆಯ ಎರಡನೆಯ ಭಾಗವು. ಮೊದಲನೆಯ ಭಾಗವಾದ ಶಿವಾನುಭವ ಸೂತ್ರದಲ್ಲಿ ಷಟ್‌ಸ್ಥಲ ಸಿದ್ಧಾಂತದ ಬಹುಮೂಲ್ಯವಾದ ವಿಷಯಗಳನ್ನು ಪ್ರತಿಪಾದಿಸಲಾಗಿದೆ. ಅಲ್ಲಿ ಪ್ರತಿಪಾದನೆಗೆ ಒಳಗಾಗದೆ ಇರುವ ಕೆಲವನ್ನು ಇಲ್ಲಿ ಎತ್ತಿಕೊಳ್ಳಲಾಗಿದೆ ಮತ್ತು ಅಲ್ಲಿ ಪ್ರಾಸಂಗಿಕವಾಗಿ ಬಂದ ಕೆಲ ವಿಷಯಗಳನ್ನು ವಿಶೇಷ ಅರ್ಥದೊಂದಿಗೆ ವಿವರಿಸಲಾಗಿದೆ. ಆದ್ದರಿಂದಲೆ ಇದಕ್ಕೆ 'ವಿಶೇಷಾರ್ಥ ಪ್ರಕಾಶಿಕಾ' ಎಂದು ಹೆಸರಿಡಲಾಗಿದೆ.

ಶಿವಾನುಭವ ಸೂತ್ರವನ್ನು ಶಿವನು ಶಿವೆಗೆ ಹೇಳಿದಂತೆ ನಿರೂಪಿಸಲಾಗಿದ್ದರೆ ವಿಶೇಷಾರ್ಥ ಪ್ರಕಾಶಿಕೆಯು ಶಿವನು ಷಣ್ಮುಖನಿಗೆ ತಿಳಿಸಿದಂತೆ ವಿವರಿಸಲಾಗಿದೆ. ಈ ವಿವರಣೆಯು ಗುರು-ಶಿಷ್ಯರ ಸಂವಾದರೂಪವಾಗಿ ಮೂಡಿಬಂದಿದೆ.

ಮಾಯಿದೇವನು 'ವೀರಶೈವ' ಶಬ್ದದ ನಿರುಕ್ತಿಯನ್ನು ಇಲ್ಲಿ ಎರಡು ರೀತಿಯಾಗಿ ವಿವರಿಸಿದ್ದಾನೆ. ೧) 'ವೀರ' ಶಬ್ದದಲ್ಲಿಯ 'ವಿ' ಇದು ವಿಕಲ್ಪಾರ್ಥವನ್ನು 'ರ' ಇದು ರಹಿತಾರ್ಥವನ್ನು ತಿಳಿಸುವವು. ೨) ವೀರಶೈವವು ವಿಕಲ್ಪರಹಿತವಾದುದು. ಅದ್ವಿತೀಯವಾದ ಶ್ರೇಷ್ಠಪದವು. ವೀರಶೈವೇತರವು ಸವಿಕಲ್ಪಕವು. ಆದ್ದರಿಂದ ಇದು ಶ್ರೇಷ್ಠವೆಂಬುದು ಇವನ ಅಭಿಪ್ರಾಯ.

ಶಿವಾನುಭವ ಸೂತ್ರದಲ್ಲಿ ದೀಕ್ಷಾವಿಧಾನವನ್ನು ಹೇಳಲಾಗಿದೆ. ಆದರೂ ಕ್ರಮ ವಿವರಣೆಯಿಲ್ಲ. ಅದಕ್ಕಾಗಿ ಇಲ್ಲಿ ಮತ್ತೆ ವಿವರಿಸತೊಡಗಿದ್ದಾನೆ. ಮೊದಲು ಪಂಚ ಮಹಾಮುದ್ರೆಯ ಶಿವಮಂತ್ರವನ್ನು ರಚಿಸಬೇಕು. ಆಚಾರಲಿಂಗ-ಭಕ್ತಾಂಗ ಪೂರ್ವಕ ಷಟ್‌ಸ್ಥಲಾತ್ಮಕವಾದ ಆರು ಕಲಶಗಳನ್ನು ಸ್ಥಾಪಿಸಬೇಕು. ನಂತರ ಗುರುವು ಶಿಷ್ಯನಿಗೆ ಜ್ಞಾನಾಭಿವೃದ್ಧಿಗಾಗಿ ಅನುಗ್ರಹವನ್ನು (ಶಕ್ತಿಪಾತ) ಮಾಡಬೇಕು ಮತ್ತು ಮಂತ್ರಾರ್ಥ ಪೂರ್ವಕವಾಗಿ ಶ್ರೀಮತ್ ಪಂಚಾಕ್ಷರೀ ಮಂತ್ರವನ್ನು ಶಿಷ್ಯನಿಗೆ ಉಪದೇಶ ಮಾಡಬೇಕು. ಇದೇ ಷಟ್‌ಸ್ಥಲಬ್ರಹ್ಮೋಪದೇಶ.

ಉಪದೇಶಾನಂತರ ಗುರುವು ಶಿಷ್ಯನಿಗೆ ಲಿಂಗಾರ್ಚನಾ ಕ್ರಮವನ್ನು ವಿವರಿಸುವನು. ಲಿಂಗಾರ್ಚನೆಯು ಸ್ನಾನ, ಧೂಪಾದಿ ೧೨ ವಿಧವಾದ ಪೂಜೆ ಮತ್ತು ಆಸನ, ಆಹ್ವಾನಾದಿ ೨೪ ವಿಧವಾದ ಉಪಚಾರ* ಎಂದು ೩೬ ವಿಧವಾಗಿದೆ. ಇವು ಶಿವಸಂಬಂಧವಾದ ೩೬ ತತ್ತ್ವರೂಪವಾಗಿರುವವು. ಇಲ್ಲಿರುವ ಬಾಹ್ಯಾಂತರಂಗವೆಂಬೆರಡು ಪ್ರಕಾರದ ಲಿಂಗಾರ್ಚನಾ ವಿಧಾನಗಳನ್ನು ತಿಳಿಸಿ ಅವು ವ್ಯೈಗೂಡಬೇಕೆಂದು ಮನದಟ್ಟುಮಾಡಿಕೊಡುವನು.

---

* ಉಪಚಾರಗಳಲ್ಲಿ ಯಜ್ಞೋಪವೀತವು ಒಂದೆಂದು ಹೇಳಲಾಗಿದೆ. ಇದು ಶೈವ ಸಂಪ್ರದಾಯದಲ್ಲಿ ಮಾತ್ರ. ವೀರಶೈವರು ಯಜ್ಞೋಪವೀತಕ್ಕೆ ಬದಲು ಪೂಜಾ ಸಮಯದಲ್ಲಿ ರುದ್ರಾಕ್ಷಮಾಲೆಯನ್ನು ಧರಿಸುತ್ತಾರೆ.

ಈ ಲಿಂಗಾರ್ಚನೆಯು ಷಟ್‌ಸ್ಥಲಕ್ಕನುಗುಣವಾಗಿ ನಡೆಯುವದು. ಶಿವಸಂಬಂಧ ವಾದ ಈ ಲಿಂಗಾರ್ಚನಾಕರ್ಮವು ಪಾಪವೂ ಅಲ್ಲ; ಪುಣ್ಯವೂ ಅಲ್ಲ. ಏಕೆಂದರೆ ಈ ಕರ್ಮದ ಕರ್ತೃವೂ ತಾನಲ್ಲ; ಭೋಕ್ತೃವೂ ತಾನಲ್ಲ ಎಂದು ಎಲ್ಲವನ್ನು ಶಿವನಿಗರ್ಪಿ ಸುವುದರಿಂದ ಇವನಿಗೆ ಯಾವ ಲೇಪನವೂ ಇಲ್ಲ. ಆದ್ದರಿಂದ ಇದು ಸ್ವರ್ಗ-ನರಕಗಳಿಗೆ ಒಯ್ಯದೆ ಮುಕ್ತನನ್ನಾಗಿ ಮಾಡುತ್ತದೆ.

ಹಿಂದೆ ಸೂತ್ರದಲ್ಲಿ ಪ್ರಸಾದದ ವಿಷಯವನ್ನು ಪ್ರಸ್ತಾಪಿಸಿರುವುದನ್ನೇ ಇಲ್ಲಿ ವಿಸ್ತಾರ ವಾಗಿ ವಿವರಿಸಲಾಗಿದೆ. ಪ್ರಸಾದವೆಂಬುದು ಫಲ. ಇದು ತ್ರಿವಿಧಲಿಂಗಸ್ವರೂಪರಾದ ಗುರು-ಲಿಂಗ-ಜಂಗಮರ ಉಪಾಸನೆಯಿಂದ ದೊರೆಯುವಂತಹದು. ಇಲ್ಲಿ ವೀರಶೈವರು ಅರ್ಚಿಸುವ ಲಿಂಗವೂ ಪ್ರಸಾದವಾಗಿ ಪರಿಣಮಿಸುತ್ತದೆನ್ನುವದು ಬಹುಮುಖ್ಯವಾದ ವಿಷಯು. ವೀರಶೈವನಿಗೆ ಪದಾರ್ಥಭಾವವಿಲ್ಲ. ಅವನು ಗ್ರಹಿಸುವದು ಪದಾರ್ಥವಲ್ಲ; ಪ್ರಸಾದ. ಏಕೆಂದರೆ ಅವನು ಸರ್ವಾಂಗಲಿಂಗ. ಆದ್ದರಿಂದ ಅವನು ಲಿಂಗಭೋಗೋಪ ಭೋಗಿ ಲಿಂಗಕ್ಕರ್ಪಿಸಿದ ಪದಾರ್ಥ ಅದು ಪ್ರಸಾದವಾಗುವದು. ಈ ವಿಷಯವನ್ನೇ ಮಾಯಿದೇವನು ಮೂರನೆಯ ಅಧಿಕರಣದಲ್ಲಿ ೧೯೦ ಸೂತ್ರಗಳಲ್ಲಿ ವಿಸ್ತಾರವಾಗಿ ವಿವರಿಸಿ ದ್ದಾನೆ. ಇದನ್ನು ತಾನು ಸ್ವಾನುಭವದಿಂದ ನಿರೂಪಿಸಿರುವದಾಗಿ ಹೇಳಿರುವುದು ಅವನ ಪಾಂಡಿತ್ಯದ ಜೊತೆಗೆ ಅವನಿಗಿರುವ ಅನುಭವವನ್ನು ಎತ್ತಿತೋರಿಸುತ್ತದೆ.

ನಾಲ್ಕನೆಯ ಅಧಿಕರಣದಲ್ಲಿ ಮಾಯಿದೇವನು ಷಟ್‌ಸ್ಥಲ ಬ್ರಹ್ಮಪುರಶ್ಚರಣವನ್ನು ನಿರೂಪಿಸಿರುವನು. ಮಂತ್ರ ಜಪಕ್ಕೆ ಮೊದಲು ಜಪ, ತರ್ಪಣ, ಹೋಮ, ಭೋಜನ, ಪೂಜನಗಳೆಂಬ ಪಂಚಾಂಗಗಳಿಂದ ಕೂಡಿದ ಆಚರಣೆಯೆ ಪುರಶ್ಚರಣವು. ಸೂತ್ರಕಾರನು ಪುರಶ್ಚರಣ ಕ್ರಮವನ್ನಲ್ಲದೆ ಮಂತ್ರಜಪ ಕ್ರಮವನ್ನು ಷಟ್‌ಸ್ಥಲಕ್ಕನುಸರಿಸಿ ಹೇಳಿರುವನು. ಇದೂ ಅಲ್ಲದೆ ಮಂತ್ರಜಪಕ್ಕೆ ಪೂರ್ವದಲ್ಲಿ ಮಾಡಬೇಕಾದ ನ್ಯಾಸಗಳಿಗೆ ಸಂಬಂಧಿಸಿದ ಮಂತ್ರಗಳನ್ನು ಷಟ್‌ಸ್ಥಲಕ್ಕನುಸರಿಸಿ ಸೂತ್ರಕಾರನು ತಾನೇ ವಿವರಿಸಿರುವನು. ಈ ನ್ಯಾಸ ಮಂತ್ರಗಳು ಈಗ ರೂಢಿಯಲ್ಲಿರುವ ಮಂತ್ರಗಳಿಗಿಂತ ಭಿನ್ನವಾಗಿವೆ. ಇವು ಅವನ ಸ್ವಂತಿಕೆ ಯುವೋ ಸಾಧಾರಗಳೋ ಎಂಬುದನ್ನು ಪರಿಶೋಧಿಸಬೇಕು.

ಕೊನೆಯದಾದ ಪಂಚಮಾಧಿಕರಣದಲ್ಲಿ ದೇಹಾವಸಾನಕ್ರಮವನ್ನು ಮಾಯಿದೇವನು ವಿವರಿಸಿರುವನು. ದೇಹಾವಸಾನವಾದ ಮೇಲೆ ಮಾಡುವ ಸಮಾಧಿಕ್ರಿಯೆಯಲ್ಲಿ ಇರುವ ಭಿನ್ನಕ್ರಮಗಳನ್ನು ವಿವರಿಸುವುದರ ಜೊತೆಗೆ ದೇಹದ ಮೇಲಿರುವ ಇಷ್ಟಲಿಂಗವನ್ನು ದೇಹದ ಜೊತೆಯಲ್ಲಿಯೇ ದಪನಮಾಡಬೇಕೋ ಬೇರಿಡಬೇಕೋ ಎಂಬಲ್ಲಿರುವ ಭಿನ್ನ ಅಭಿಪ್ರಾಯ ಗಳನ್ನು ಸವಿಸ್ತಾರವಾಗಿ ತಿಳಿಯಪಡಿಸಿದ್ದಾನೆ. ಅಲ್ಲದೆ ವೀರಶೈವರು ಉಳಿದವರಂತೆ ಶ್ರಾದ್ಧಾದಿ ಕರ್ಮಗಳನ್ನು ಮಾಡಬಾರದು. ಲಿಂಗೈಕ್ಯನಿಗೆ ಶವಸಂಬಂಧವಾದ ದೋಷವಿರುವುದಿಲ್ಲ ವಾದ ಕಾರಣದಿಂದ ಸೂತಕಾದಿಗಳು ಬರುವುದಿಲ್ಲ.

ಹೀಗೆ ವೀರಶೈವರಿಗೆ ಸಂಬಂಧಿಸಿದ ತಾತ್ತ್ವಿಕ ವಿಷಯುವನ್ನು ಸ್ವಾದಂತವಾಗಿ ತನ್ನ ಎರಡು ಗ್ರಂಥಗಳಲ್ಲಿ ಮಾಯಿದೇವನು ವಿವರಿಸಿದ್ದಾನೆ. ಅಲ್ಲದೆ ತನ್ನ ಅನುಭವದಿಂದಲೇ ಕೆಲವು ವಿಷಯುಗಳನ್ನು ನಿರೂಪಿಸಿದ್ದಾನೆ. ಆದ್ದರಿಂದ ಇವು ಅನುಭವಾತ್ಮಕವಾದ ಪ್ರಮಾಣಗ್ರಂಥಗಳಾಗಿವೆ.

**ಷಟ್‌ಸ್ಥಲ ಗದ್ಯ:**

ಮಾಯಿದೇವನು ಶಿವಸಿದ್ಧಾಂತ ತಂತ್ರಸ್ವರೂಪವಾದ ಷಟ್‌ಸ್ಥಲ ಸಿದ್ಧಾಂತವನ್ನು "ಶಿವಾನುಭವ ಸೂತ್ರಂ" ಮತ್ತು "ವಿಶೇಷಾರ್ಥ ಪ್ರಕಾಶಿಕಾ" ಎಂಬ ಎರಡು ಗ್ರಂಥಗಳಲ್ಲಿ ಸಾದ್ಯಂತವಾಗಿ ನಿರೂಪಿಸಿದ್ದಾನೆ. ಅಂತಹ ಆ ಸಿದ್ಧಾಂತವನ್ನು ಅವನು ಬಹುವಾಗಿ ಮೆಚ್ಚಿ ಕೊಂಡಿದ್ದಾನೆ; ಗೌರವಿಸಿದ್ದಾನೆ. ಅಲ್ಲಿರುವ ಪ್ರತಿಯೊಂದು ಸ್ಥಲವೂ ಪೂಜನೀಯ. ಅಂತೆಯೆ ಷಡ್‌ವಿಧ ಅಂಗಸ್ಥಲಗಳಾದ ಭಕ್ತಾದಿ ಐಕ್ಯಾಂತದ ಆರು ಸ್ಥಲಗಳನ್ನು ಮೊಗ ದುಂಬಿ ಕೊಂಡಾಡಿದ್ದಾನೆ ಈ ಷಟ್‌ಸ್ಥಲ ಗದ್ಯದಲ್ಲಿ. ಇದನ್ನು ಗದ್ಯವೆಂದು ಕರೆದಿದ್ದರೂ ರಗಳೆಯ ಸ್ವರೂಪವುಳ್ಳದಾಗಿದೆ. ಪ್ರತಿಯೊಂದು ಸ್ಥಲದ ರಗಳೆಯು ಭಿನ್ನವಾಗಿದೆ. ತಾನೆ ಸಮಾಪ್ತಿಯಲ್ಲಿ 'ಅಷ್ಟೋತ್ತರ ಶತವಿಧದಿಂ' ಎಂದು ಹೇಳಿರುವುದರಿಂದ ೧೦೮ ರೀತಿಯಲ್ಲಿ ಈ ಷಟ್‌ಸ್ಥಲವನ್ನು ಕೊಂಡಾಡಿರುವುದು ವಿದಿತವಾಗುವದು. ಪ್ರತಿಯೊಂದು ಸ್ಥಲದಲ್ಲಿರುವ ೧೮ ಪಾದಗಳೇ ೧೮ ವಿಧದ ಸ್ತುತಿಗಳು. (ಪ್ರಸಾದಿಯಲ್ಲಿ ಮಾತ್ರ ೨೦ ಪಾದಗಳಿವೆ.) ಶಿವನ ೧೦೮ ನಾಮಾವಳಿಗಳಂತೆ ಇಲ್ಲಿಯೂ ೧೦೮ ವಿಧದಲ್ಲಿ ಷಟ್‌ಸ್ಥಲ ವನ್ನು ಸ್ತುತಿಸಿರುವದು ವೈಶಿಷ್ಟ್ಯಪೂರ್ಣವಾಗಿದೆ.

**ಏಕೋತ್ತರ ಷಟ್‌ಸ್ಥಲ:**

ಮಾಯಿದೇವನು ಶಿವಾನುಭವ ಸೂತ್ರದಲ್ಲಿ ಲಿಂಗಾಂಗ ಸಂಬಂಧವಾದ ೬ ಸ್ಥಲ ಗಳನ್ನು ಕುರಿತು ವಿವೇಚಿಸಿದ್ದಾನೆ. ಆದರೆ ಅಲ್ಲಿ ಆ ಸ್ಥಲಾಂತರ್ಗತವಾದ ಮಿಕ್ಕ ಸ್ಥಲ ಗಳನ್ನು ವಿವರಿಸಿಲ್ಲ. ಆ ವಿಷಯುವನ್ನು ಈ 'ಏಕೋತ್ತರಶತಸ್ಥಲ'ವೆಂಬ ಗ್ರಂಥದಲ್ಲಿ ನಿರೂಪಿಸಿದ್ದಾನೆ. ಒಂದರ್ಥದಲ್ಲಿ ಇದನ್ನು ಶಿವಾನುಭವ ಸೂತ್ರದ ಮುಂದಿನ ಭಾಗವೆಂದೇ ಹೇಳಬಹುದಾಗಿದೆ.

ಇದು ಕನ್ನಡದ ವಾರ್ಧಿಕಷಟ್ಪದಿಯಲ್ಲಿದೆ. ಶಿವನು ಗಿರಿಜೆಗೆ ಈ ಏಕೋತ್ತರ ಶತಸ್ಥಲಗಳನ್ನು ದೇವಸಭೆಯಲ್ಲಿ ಹೇಳಿದನು. ಅದನ್ನೇ ಅಲ್ಲಿದ್ದ ವೃಷಭೇಶ್ವರನು ಕೇಳಿ ಕೊಂಡು ಮಂಗಳವಾಡ ರಾಷ್ಟ್ರದ ಕಲ್ಯಾಣಪಟ್ಟಣದಲ್ಲಿ ಬಸವನಾಮದಿಂದ ಅವತರಿಸಿ ಸಕಲ ಭಕ್ತರಿಗೆ ಬೋಧಿಸಿದನು ಶಿವಾನುಭವಮಂಟಪದಲ್ಲಿ ಚನ್ನಬಸವಾದಿ ಶರಣರು ಜ್ಞಾನದ ಪರಿಯನ್ನು ಕೇಳಲು, ಬಸವಣ್ಣನು ಶೀಘ್ರಗತಿ, ಮಧ್ಯಗತಿ ಮತ್ತು ಮಂದಗತಿ ಎಂಬ ಮೂರನ್ನು ಹೇಳಿ, ಮಂದಗತಿಯಲ್ಲಿಯೇ ಈ ೧೦೧ ಸ್ಥಲಗಳಿರುವುವೆಂದು ಅವನ್ನು ವಿವರಿಸಿದ್ದಾನೆ ಶೀಘ್ರಗತಿಯು ಭೃಂಗಿಮೊದಲಾದವರಿಗೂ, ಮಧ್ಯಗತಿಯು ಶರಣ

ಸಂಕುಳಕ್ಕೂ, ಮಂದಗತಿಯು ನೂತನ ಗಣಂಗಳಿಗೂ ವೇದ್ಯವಾಗುವವೆಂದಿದ್ದಾನೆ. ಅಂದರೆ ಇದು ಸರ್ವಸಾಮಾನ್ಯರಿಗೂ ತಿಳಿಯಲು ಸುಲಭವಾದ ಮಾರ್ಗವೆಂಬುದೇ ಇಲ್ಲಿಯ ಇಂಗಿತಾರ್ಥ.

ಸ್ಥಲದಿಂದಲೆ ಲಿಂಗಸ್ಥಲವೆಂದೂ ಅಂಗಸ್ಥಲವೆಂದೂ ಎರಡು ಭಾಗಗಳಾದವು. ಆ ಎರಡರಲ್ಲಿಯೆ ಮತ್ತೆ (ಅನೇಕವಾಗಿರುವದನ್ನು)–ಏಕೋತ್ತರಶತಕವಾಗಿರುವುದನ್ನು ಇಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

ಲಿಂಗಸ್ಥಲದಲ್ಲಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯವೆಂದು ಆರು ಭಾಗಗಳು. ಈ ಆರರಲ್ಲಿಯ ಭಕ್ತಸ್ಥಲದಲ್ಲಿ ೧೫, ಮಹೇಶಸ್ಥಲದಲ್ಲಿ ೯, ಪ್ರಸಾದಿ ಸ್ಥಲದಲ್ಲಿ ೭, ಪ್ರಾಣಲಿಂಗಿಸ್ಥಲದಲ್ಲಿ ೫, ಶರಣಸ್ಥಲದಲ್ಲಿ ೪ ಮತ್ತು ಐಕ್ಯ ಸ್ಥಲದಲ್ಲಿ ೪. ಹೀಗೆ ಅಂಗಸ್ಥಲದಲ್ಲಿ ಒಟ್ಟು ೪೪ ಸ್ಥಲಗಳು.

ಆದರಂತೆ ಲಿಂಗಸ್ಥಲದಲ್ಲಿ ಆಚಾರ, ಗುರು, ಶಿವ, ಜಂಗಮ, ಪ್ರಸಾದ ಮತ್ತು ಮಹಾಲಿಂಗಗಳೆಂದು. ೭ ಪ್ರಕಾರಗಳು– ಇವುಗಳಲ್ಲಿ ಮತ್ತೆ ಉಪಭೇದಗಳು. ಅವು ಆಚಾರಾದಿ ಪ್ರಸಾದಿಯುವರೆಗೆ ಪ್ರತಿಯೊಂದರಲ್ಲಿ ೯ ಉಪಭೇದಗಳನ್ನೊಳಗೊಂಡಿವೆ. ಕೊನೆಯದಾದ ಮಹಾಲಿಂಗದಲ್ಲಿ ೧೨ ಪ್ರಭೇದಗಳು. ಹೀಗೆ ಲಿಂಗಸ್ಥಲದಲ್ಲಿ ಒಟ್ಟು ೫೭ ಸ್ಥಲಗಳು.

ಈ ಅಂಗಸ್ಥಲ ಮತ್ತು ಲಿಂಗಸ್ಥಲಾಂತರ್ಗತ ಸ್ಥಲಗಳು ಕೂಡಿಕೊಂಡು (೪೪+೫೭) ೧೦೧ ಸ್ಥಲಗಳಾಗುತ್ತವೆ. ಕಾಮಿಕಾದಿ ವಾತುಲಾಂತವಾದ ೨೮ ಶಿವಾಗಮಗಳಲ್ಲಿ ಈ ೧೦೧ ಸ್ಥಲಗಳ ವಿವರ ಬರುತ್ತದೆ. ಅಲ್ಲಿಂದಲೆ ಮುಂದಿನವರು ಇವುಗಳನ್ನು ಎತ್ತಿಕೊಂಡಿದ್ದಾರೆ. ಆದರೂ ಸಂಖ್ಯಾಮಾತ್ರದಿಂದ ಅಂಗಸ್ಥಲದಲ್ಲಿ ೪೪, ಲಿಂಗಸ್ಥಲದಲ್ಲಿ ೫೭ ಎಂದು ಸರಿಮಾಡಿದರೂ ಅಂತರ್ಗತವಾದ ಸಂಖ್ಯೆಗಳು ಹೆಚ್ಚುಕಡಿಮೆಯಾಗಿರುವುದನ್ನು ಕಾಣುತ್ತೇವೆ. ಉದಾ– ಈ ಏಕೋತ್ತರ ಶತಸ್ಥಲದಲ್ಲಿ ಮಹಾಲಿಂಗದಲ್ಲಿ ೧೨ ಸ್ಥಲಗಳಿದ್ದರೆ, ಸಿದ್ಧಾಂತಶಿಖಾಮಣಿಯಲ್ಲಿ ಪ್ರಸಾದಲಿಂಗದಲ್ಲಿ (ಶರಣ ಸ್ಥಲ) ೧೨ ಸ್ಥಲಗಳಿವೆ.

ಹೀಗೆ ಮಾಯಿದೇವನು ಪಿಂಡಸ್ಥಲಾದಿ ಒಂದೊಂದು ಸ್ಥಲವನ್ನು ಒಂದೊಂದು ಪದ್ಯದಲ್ಲಿ ನಿರೂಪಿಸಿದ್ದಾನೆ. ಲಿಂಗಾಂಗ ಸ್ಥಲಗಳೆರಡಕ್ಕೂ ಪೀಠಿಕೆಯನ್ನು ಕೊಟ್ಟು ಕೊನೆಗೆ ಎರಡೂ ಕೂಡಿಕೊಂಡು ೧೦೧ ಸ್ಥಲಗಳಾಗುತ್ತವೆಂದು ತಿಳಿಸಿ ಗ್ರಂಥವನ್ನು ಮುಕ್ತಾಯಗೊಳಿಸಿದ್ದಾನೆ.

**ಶತಕತ್ರಯ:**

ಶತಕತ್ರಯವೆಂಬುದು ಹೆಸರೆ ಸೂಚಿಸುವಂತೆ ಮೂರು ಶತಕಗಳಿಂದ ಕೂಡಿದ ಗ್ರಂಥ. ಇದು ಕನ್ನಡ, ಸಂಸ್ಕೃತ ಎರಡೂ ಭಾಷೆಗಳಲ್ಲಿದೆ. ಕನ್ನಡದಲ್ಲಿ ಶಿವಾಧವ,

ಶಿವಾವಲ್ಲಭ ಮತ್ತು ಮಹದ್ಯೈಪುರೀಶ್ವರ ಶತಕವೆಂದು ಮೂರು ತೆರನಾಗಿದ್ದರೆ, ಸಂಸ್ಕೃತದಲ್ಲಿ ಭಕ್ತಿ, ಜ್ಞಾನ, ವೈರಾಗ್ಯ ಶತಕವೆಂದಿದೆ. ಈ ಶತಕಗಳಲ್ಲಿ ಆಮೂಲಾಗ್ರವಾಗಿ ಒಂದೇ ವಿಷಯದ ನಿರೂಪಣೆಯಿಲ್ಲ. ಷಟ್‌ಸ್ಥಲ ತತ್ತ್ವಪ್ರತಿಪಾದನೆಯೂ ಇದ್ದು ಅದಕ್ಕೆ ಹೊಂದಿಕೊಂಡಂತೆ ಅನೇಕ ವಿಷಯಗಳು ಇಲ್ಲಿ ಹಾಸು-ಹೊಕ್ಕಾಗಿ ಮೂಡಿಬಂದಿವೆ. ಆದ್ದರಿಂದ ಈ ಶತಕತ್ರಯವು ವೀರಶೈವಸಿದ್ಧಾಂತದ ಒಂದು ಮಹತ್ವಪೂರ್ಣವಾದ ಗ್ರಂಥವೆಂದು ಹೇಳಬಹುದಾಗಿದೆ. ಇನ್ನು ಶಿವಾಧವ ಶತಕದಲ್ಲಿ ಭಕ್ತಿಯು, ಶಿವಾವಲ್ಲಭದಲ್ಲಿ ಜ್ಞಾನವು ಮಹದ್ಯೈಪುರೀಶ್ವರದಲ್ಲಿ ವೈರಾಗ್ಯವು ಹೆಚ್ಚುಸ್ಫುಟವಾಗಿರುವುದರಿಂದ ಈ ಹೆಸರುಗಳನ್ನು ಆಯಾ ಶತಕಗಳಿಗೆ ಕೊಟ್ಟಿರಬಹುದು.

**೧) ಶಿವಾಧವ ಶತಕ:**

ಈ ಶತಕದಲ್ಲಿ ಗುರುಸ್ತೋತ್ರದಿಂದ ಗ್ರಂಥವನ್ನು ಆರಂಭಿಸಿ ವೀರಶೈವ ಸಂಪ್ರದಾಯ ಪ್ರವರ್ತಕರಾದ ಬಸವೇಶ್ವರ, ಚನ್ನಬಸವೇಶ್ವರ, ಪ್ರಭುದೇವರೆಂಬ ಪುರಾತನರನ್ನು ನೂತನ ಶರಣರನ್ನು ಸ್ತುತಿಸಿ ವಿಷಯನಿರೂಪಣೆಗೆ ತೊಡಗಿದ್ದಾನೆ ಮಾಯಿದೇವ.

ಮೊದಲಿಗೆ ಭಕ್ತಿಯ ಮಹಿಮೆಯನ್ನು ಹೇಳಿ ಅದು 'ಯೋಗೇನ ಪರಾ'. (ಈ ವಿಷಯ ಶಿವಾನುಭವ ಸೂತ್ರದಲ್ಲಿಯೂ ಬಂದಿದೆ) ಅದಕ್ಕೆ ಸಾಯುಜ್ಯ, ಮುಕ್ತಿಗಳು ಸಮಾನವಲ್ಲವೆನ್ನುತ್ತಾನೆ. ಇಂತಹ ಭಕ್ತಿಯನ್ನುಳ್ಳ ಶರಣನಿಗೆ ಜಡಕರ್ಮಗಳು ಸಲ್ಲವು. ಪ್ರಾಣವನ್ನು ಗುರುವಿಗೂ ಶರೀರವನ್ನು ಲಿಂಗಕ್ಕೂ, ದ್ರವ್ಯವನ್ನೂ ಲಿಂಗಕ್ಕೂ ಅರ್ಪಿಸಬೇಕು. ಇದರಿಂದ ಭಕ್ತಿಯು ಬೆಳೆಯುತ್ತ ಹೋಗಿ ಭಕ್ತಾದಿ ಐಕ್ಯಸ್ಥಲವನ್ನು ಮುಟುವನು. ಅವನು ಷಡ್‌ಲಿಂಗಧಾರಿಯಾಗಿರುವುದರಿಂದ ಅವನು ಮುಕ್ತಿಯನ್ನು ಪ್ರಯತ್ನ ಪೂರ್ವಕವಾಗಿ ಪಡೆಯಬೇಕಾಗಿಲ್ಲ; ಅದು ಅವನಿಗೆ ಸಹಜಸ್ಥಿತಿ ಎನ್ನುತ್ತಾನೆ.

ಸ್ವಮತ ಸ್ಥಾಪಿತವಾಗಬೇಕಾದರೆ ಪರಮತ ಖಂಡನೆಯು ಅವಶ್ಯ. ಕಸಕಿತ್ತು ಬೀಜ ಬಿತ್ತಬೇಕಲ್ಲವೆ? ಅದಕ್ಕಾಗಿ ಸಿದ್ಧಾಂತ, ವಾಗದ್ವೈತ, ವೇದಾಂತ ಮುಂತಾದ ಪರಮತಗಳನ್ನು ಖಂಡಿಸುತ್ತಾನೆ. ಅಂತೆಯೇ 'ಕುಮತ ವಿಭೇದಿ' ಎಂಬ ಬಿರುದು ಇವನಿಗೆ ಬಂದಿರಬೇಕು.

ತತ್ತ್ವಮಸ್ಯಾದಿ ಮಹಾವಾಕ್ಯಗಳು ಲಿಂಗಾಂಗ ಸಂಬಂಧವನ್ನೇ ಪ್ರತಿಪಾದಿಸುವವೆಂದು ಹೇಳಿ, ಕರ್ಮಮಾರ್ಗವನ್ನು ತ್ಯಾಗಮಾಡಿ ಯೋಗತ್ರಯ ಸಾಧನೆ ಮಾಡಲು ತಿಳಿಸುತ್ತಾನೆ. ಸಮಾರು ೩೦ ಪದ್ಯಗಳಲ್ಲಿ ಶರಣನ ವಿಷಯವಾಗಿ ಬಳಸಿದ್ದಾನೆ. ಅವನಿಗೆ ಸಂಸಾರ ಬಂಧಕವಲ್ಲ; ಉಪಾಧಿಗಳಿಲ್ಲ; ಲೌಕಿಕಾಚಾರಗಳಿಲ್ಲ. ಅವನು ಸರ್ವಾಂಗಲಿಂಗಿ ಲಿಂಗಸಂಬಂಧವು ಸ್ವಭಾವಸಿದ್ಧ. ಲಿಂಗದೀಕ್ಷೆಯಿಂದ ಸಮ್ಯಕ್‌ಜ್ಞಾನಿ. ಸಾಲೋಕ್ಯಾದಿಗಳ ಗೋಜು ಅವನಿಗಿಲ್ಲ. ಮುಕ್ತ ಎಂದು ಬಾಯ್ತುಂಬ ಹೊಗಳಿರುವಂತೆ ಕೇವಲ ಲಿಂಗಧಾರಿಗಳಾಗಿದ್ದು ಆಚರಣಾರಹಿತರಾಗಿರುವವರನ್ನು ಬಯ್ದಿದ್ದಾನೆ.

ಕೊನೆಗೆ ಭಕ್ತಿ ಮಾರ್ಗದ ಆಧಿಕ್ಯವನ್ನು ಹೇಳಿ ಈ ಶತಕವನ್ನು ಮುಗಿಸುತ್ತಾನೆ.

**೨) ಶಿವಾವಲ್ಲಭೆ ಶತಕ :**

ಭಕ್ತಿ ಪ್ರಧಾನವಾದ ಶಿವಾಧವಶತಕವನ್ನು ಮುಗಿಸಿದ ಮೇಲೆ ಜ್ಞಾನದಾಯಕವಾದ ಶಿವಾವಲ್ಲಭ ಶತಕವನ್ನು ಪ್ರತಿಪಾದಿಸುತ್ತಿದ್ದಾನೆ. ಮೊದಲಿಗೆ ಗುರುವನ್ನು, ಇಷ್ಟದೇವತೆಯಾದ ಐಪ್ಪರಸೋಮೇಶ್ವರಸನ್ನು ಸ್ತುತಿಸಿ, ನಂತರ ಬಸವ, ಚನ್ನಬಸವ ಮತ್ತು ಪ್ರಭು ದೇವರು ತನಗೆ ಪ್ರಸಾದ ಸುಖವನ್ನು ದಯಪಾಲಿಸಲೆಂದು ಬೇಡಿಕೊಳ್ಳುತ್ತಾನೆ ಮಾಯಿದೇವ.

ಮೊದಲಿಗೆ ಮಹಾಜ್ಞಾನ ಸ್ವರೂಪವನ್ನು ವಿವರಿಸಿ 'ತತ್ತ್ವಮಸಿ' ಮಹಾವಾಕ್ಯವು ಲಿಂಗಾಂಗ ಸಾಮರಸ್ಯವೆಂಬುದನ್ನು ತಿಳಿಸುತ್ತಾನೆ. ಭಕ್ತನಿಗೆ ಶಿವಯೋಗಿಯಾದ ಶಿವ ಶರಣನು ನೆಲೆಸಿದ ಸ್ಥಾನವೇ ಕ್ಷೇತ್ರ; ಅವನು ಸ್ನಾನಮಾಡಿದ ಜಲವೇ ತೀರ್ಥ. ಆದ್ದರಿಂದ ಬೇರೆ ತೀರ್ಥ-ಕ್ಷೇತ್ರಾದಿಗಳಿಂದ ಪ್ರಯೋಜನವೇನು? ಎಂದು ಅವನ್ನು ಖಂಡಿಸುತ್ತಾನೆ.

ಇಷ್ಟಲಿಂಗ ಸ್ವರೂಪವನ್ನು ವಿವರಿಸಿ ಷಟ್‌ಸ್ಥಲವು ಪರಮಾದ್ವೈತವೆಂಬುದನ್ನು ಪ್ರತಿಷ್ಠಾಪಿಸುತ್ತಾನೆ.

ಶರಣನು ಜ್ಞಾನಾಚಾರಿಯು ಅವನು ದ್ವೈತಿ, ಅದ್ವೈತಿ ಇವರಿಗಿಂತ ಬೇರೆಯಾದವನು ಅವನಿಗೆ ಅರಿಷಡ್ವರ್ಗಗಳ ಬಾಧೆಯಿಲ್ಲ; ರಾಗದ್ವೇಷಾದಿಗಳಿಲ್ಲ, ಅವನು ಲಿಂಗ ಪ್ರೀತ್ಯಾಸ್ಪದನು. ಇನ್ನು ಪಾಪ-ಪುಣ್ಯಗಳು ಪಾಶಗಳು. ಶರಣನು ಇವುಗಳಿಂದ ದೂರವಿರುವುದರಿಂದ ಅವನಿಗೆ ಇವು ಬಂಧಕಗಳಲ್ಲ ಈ ವಿಷಯವನ್ನು ಮಾಯಿದೇವ ವಿಸ್ತಾರವಾಗಿ ವಿವರಿಸಿದ್ದಾನೆ.

ಹೀಗೆ ಶಿವಭಕ್ತಿಯಿಂದ ಹುಟ್ಟಿದ ಜ್ಞಾನವು ಸಕಲ ಕರ್ಮ ಬಂಧನಗಳನ್ನು ಪರಿಹರಿಸುತ್ತದೆ. ಅಂತೆಯೆ ಮಂತ್ರಯೋಗಿಗಳು ಪರಾಪಶ್ಯಂತಿ ಮಧ್ಯಮವೈಖರಿಯೆಂಬ ಚತುರ್ವಿಧ ಶಬ್ದ ನಿಷ್ಪತ್ತಿಯಲ್ಲಿಯೆ ಪ್ರಯೋಜನವನ್ನು ಕಾಣುತ್ತಿದ್ದರೆ ಶಿವಶರಣನು ಅವನ್ನು ಭಕ್ತಿಯೊಂದರಲ್ಲಿಯೆ ಕಾಣುತ್ತಾನೆ. ಆದ್ದರಿಂದಲೇ 'ನಾನು' ಎಂಬ ಕರ್ಮಕಾಂಡ, ಕರಣಗಳು ಮಾಡುವ ಕೆಲಸಕ್ಕೆ 'ಸಾಕ್ಷೀಭೂತ'ನಾದವನು ನಾನೆಂಬುವ ಜ್ಞಾನಕಾಂಡ ಇವುಗಳಿಗಿಂತ ಕ್ರಿಯೆ, ಕರ್ತವ್ಯ ಮತ್ತು ಕರ್ತೃ 'ನೀನೆ' ಎನ್ನುವ ಭಕ್ತಿಕಾಂಡವು ಶ್ರೇಷ್ಠವೆಂದು ಮಾಯಿದೇವನು ಪ್ರತಿಪಾದಿಸುತ್ತಾನೆ. ಕೊನೆಗೆ 'ಸೋಮ' ಶಬ್ದವೂ ಲಿಂಗಾಂಗ ಸಾಮರಸ್ಯವೆಂಬುದನ್ನು ತಿಳಿಸಿ ಶತಕವನ್ನು ತಿಳಿಸುತ್ತಾನೆ.

**೩) ಮಹದೈಪುರೀಶ್ವರ ಶತಕ**

ಇದು ಮಹದೈಪುರೀಶ್ವರ ಶತಕ. ಇದನ್ನು ವೈರಾಗ್ಯ ಶತಕವೆಂದೂ ಕರೆಯಲಾಗಿದೆ. ಮಾಯಿದೇವನು ಮೊದಲಿಗೆ ಇಷ್ಟದೇವತೆಯಾದ ಐಪುರದ ಸೋಮೇಶ್ವರನನ್ನು

ಸ್ತುತಿಸಿ, ಶ್ರೀಗುರುವಿಗೆ ನಮಸ್ಕರಿಸುತ್ತಾನೆ. ಆ ಮೇಲೆ ತನ್ನಲ್ಲಿ ಕಾರುಣ್ಯವನ್ನು ತೋರಿಸಿ ಕಾಪಾಡಬೇಕೆಂದು ಲಿಂಗದಲ್ಲಿ ಮೊರೆಯಿಡುತ್ತಾನೆ.

ಪೂರ್ವಜನ್ಮದಲ್ಲಿ ಮಾಡಿದ ಕರ್ಮಫಲವನ್ನು ಅನುಭವಿಸಲೇಬೇಕೆಂಬ ಆಗಮೋಕ್ತಿ ಯಿದ್ದರೂ ಗುರುಕರ ಸಂಜಾತನಾಗಿ ಮಂತ್ರ ಶರೀರಿಯಾಗುವುದರಿಂದ ವೀರಶೈವನಿಗೆ ಈ ಕರ್ಮಫಲವು ಇಲ್ಲವೆಂದು ಅನೇಕ ದೃಷ್ಟಾಂತಗಳನ್ನಿತ್ತು, ಭಕ್ತಿಗೆ ಕರ್ಮನಾಶ ಮಾಡುವ ಶಕ್ತಿಯಿದೆಯೆಂದು ಹೇಳುತ್ತಾನೆ.

ಪರಮಾತ್ಮನ ಆಶ್ರಯದಲ್ಲಿ ತಾನಿರುವುದರಿಂದ ತನಗೆ ಬಡತನವೆಂಬುದಿಲ್ಲ. ಆದ್ದ ರಿಂದ ಸಾಮಾನ್ಯರನ್ನು ಬೇಡಿ ಲಘುತ್ವವನ್ನು ಹೊಂದದಂತೆ ಮಾಡಲು ಅನನ್ಯ ಭಾವದಿಂದ ಬೇಡಿಕೊಳ್ಳುತ್ತಾನೆ. ಅಲ್ಲದೆ ಅಹಂಕಾರ, ಮಮಕಾರ ಮತ್ತು ವಿಕಾರಗಳಿಂದ ಸಾಯದಂತೆ ತನ್ನನ್ನು ರಕ್ಷಿಸು ಎನ್ನುತ್ತಾನೆ.

ತಾನು ಅಲ್ಪನು. ಶಿವಕೃಪೆಯೆ ತನಗೆ ರಕ್ಷಾಕವಚ ಅದಿಲ್ಲದೆ ತನ್ನಿಂದೇನೂ ಸಾಧ್ಯವಿಲ್ಲ ಆದ್ದರಿಂದ ಮೋಕ್ಷಾಪೇಕ್ಷಿಯಾದ ತನ್ನ ಬರಿಯ ಜ್ಞಾನ ಕ್ರಿಯಾವಿಶ್ವಾಸಗಳಿಂದ ಏನೂ ಪ್ರಯೋಜನವಿಲ್ಲ ಅವನ ಅನುಗ್ರಹವೊಂದೇ ತಾರಕ ಎಂದು ಮನಂಬುಗುವಂತೆ ವಿವರಿಸಿದ್ದಾನೆ.

ಶಿವನು ತ್ರಿಪುರ, ಕಾಮ ಮತ್ತು ಯಮನನ್ನು ಸಂಹರಿಸಿರುವನೆಂದು ಹೇಳುವರು. ಇವು ಹೊರಗಿಲ್ಲ, ತನುತ್ರಯಗಳೇ ತ್ರಿಪುರ ಹುಟ್ಟುವಿಕೆಯೆ ಕಾಮ ಮತ್ತು ಮರಣವೇ ಯಮನೆಂದು ಬಹುಮಾರ್ಮಿಕವಾಗಿ ಮಾಯಿದೇವ ನಿರೂಪಿಸಿದ್ದಾನೆ.

ಭಕ್ತನಿಗೆ ತನ್ನದೆನ್ನುವದು ಏನೂ ಇಲ್ಲ. ಎಲ್ಲವೂ ಶಿವನದೆ ಕೊಡುವವನೂ ಅವನೆ; ಕೊಂಬುವವನೂ ಅವನೆ ಇನ್ನೂ ಭಕ್ತನು ಸರ್ವಾಂಗಲಿಂಗಿಯಾಗಿರುವನು. ಆದ್ದರಿಂದ ಕೊಡುವ, ಪಡೆಯುವ ಈ ವ್ಯವಹಾರವೆಲ್ಲವು ಲಿಂಗಮುಖವಾಗಿಯೆ ನಡೆಯುವದರಿಂದ ಶಿವಭಕ್ತನು ನಿತ್ಯತೃಪ್ತನಾಗಿರುವನು.

ಶಿವಶರಣನಿಗೆ ರುದ್ರಪದವಿ, ಪ್ರಮಥ ಪದವಿಗಳು ಬೇಕಿಲ್ಲ ಅವನು ಸರ್ವಾಂಗಲಿಂಗ ಮಯನಾಗಿರುವುದರಿಂದ ತನಗೆ ಆ ಸಾಮರಸ್ಯ ಸುಖಕ್ಕಿಂತ ಬೇರೆ ಸುಖವು ಇಲ್ಲ. ಇದು ಶಿವಭಕ್ತಿಯ ಮಹಿಮೆಯಾಗಿರುವದೆಂಬುದನ್ನು ಮಾಯಿದೇವ ಅನೇಕ ಉದಾಹರಣೆಗಳನ್ನು ಕೊಟ್ಟು ವಿವರಿಸಿದ್ದಾನೆ.

ಇದೆಲ್ಲ ಆಗಬೇಕಾದರೆ ಶಿವನ ಅನುಗ್ರಹವಲ್ಲದೆ ಬೇರೆ ಯಾವುದರಿಂದಲೂ ಸಾಧ್ಯ ವಿಲ್ಲ. ಆದ್ದರಿಂದ ತನ್ನನ್ನು ಅನುಗ್ರಹಿಸಬೇಕೆಂದು ಶಿವನಿಗೆ ತೀವ್ರವಾದ ಕಳಕಳಿಯಿಂದ ಮಾಯಿದೇವ ಬೇಡಿಕೊಂಡಿದ್ದಾನೆ.

ಬೇಡುವಾತ ಭಕ್ತನಲ್ಲ; ಬೇಡಿಸಿಕೊಂಬಾತ ದೇವರಲ್ಲ, ಇದನ್ನು ಮಾಯಿದೇವ ಬಹುರಮ್ಯವಾಗಿ ನಿರೂಪಿಸಿದ್ದಾನೆ. ಈ ಬೇಡಿಕೆಯೆ ಅರಿಷಡ್ವರ್ಗಗಳ ಉಗಮಕ್ಕೆ ನಾಂದಿ

ಯಾಗುತ್ತದೆ. ಆದ್ದರಿಂದ ದೇವರೆ, ಬೇಡದಂತೆ ಮಾಡೆಂದು ಬೇಡಿಕೊಂಡಿದ್ದಾನೆ.

ಜಲ, ಪುಷ್ಪಾದಿ ಸಕಲ ವಸ್ತುಗಳು ಶಿವನವು. ಅವನ ವಸ್ತುಗಳನ್ನು ಅವನಿಗೆ ಅರ್ಪಿಸಿ ಫಲವನ್ನು ಬಯಸುವದು ಯಾವ ಭಕ್ತಿ? ಇದು ಹೆಡ್ಡತನ ಎಂದು ವಿಡಂಬಿಸಿದ್ದಾನೆ ಮತ್ತು ಆತ್ಮಾರ್ಪಣವೆ ನಿಜವಾದ ಅರ್ಪಣವೆಂಬುದನ್ನು ತಿಳಿಸಿದ್ದಾನೆ.

ಕೂಲಿಹಚ್ಚಿ ಪೂಜೆಮಾಡಿಸುವವರನ್ನು, ಪರರಿಂದ ಪೂಜಾ ಸಾಮಗ್ರಿಯನ್ನು ತರಿಸಿ ಪೂಜೆ ಮಾಡುವವರನ್ನು ಮಾಯಿದೇವನು ಖಂಡಿಸಿದ್ದಾನೆ. ಬಸವಣ್ಣನ ತನ್ನ ಲಿಂಗಕ್ಕೆ ಮಾಡುವ ನೇಮವ ತಾ ಮಾಡಬೇಕಲ್ಲದೆ, ಬೇರೆ ಅನ್ಯರ ಕೈಯಲು ಮಾಡಿಸಬಹುದೆ? ಎಂಬ ವಚನ ಇಲ್ಲಿ ನೆನಪಿಗೆ ಬರುವಂತಿದೆ–

ಕೊನೆಗೆ ಬಸವಾದಿ ಶರಣರ ಅನುಗ್ರಹವು ತನ್ನ ಮೇಲಿರಲೆಂದು ಪ್ರಾರ್ಥಿಸಿ ಮಾಯಿದೇವನು ಈ ಶತಕವನ್ನು ಮುಗಿಸುವನು.

ಈವರೆಗಿನ ವಿವೇಚನೆಯಿಂದ ಕೆಲವು ಮಹತ್ವಪೂರ್ಣವಾದ ವಿಷಯುಗಳನ್ನು ಅರಿಯಬಹುದಾಗಿದೆ. ಇದರಿಂದ ವೀರಶೈವ ತತ್ತ್ವಶಾಸ್ತ್ರದಲ್ಲಿ ಮೊಗ್ಗೆಯ ಮಾಯಿದೇವರ ಸ್ಥಾನವೇನು ಎಂಬುದು ವ್ಯಕ್ತವಾಗುವದು.

೧) ಶಿವಾನುಭವ ಸೂತ್ರ ಮತ್ತು ವಿಶೇಷಾರ್ಥ ಪ್ರಕಾಶಿಕೆಗಳು ಒಂದೇ ಗ್ರಂಥದ ಎರಡು ಭಾಗಗಳು. ಈ ಎರಡೂ ಗ್ರಂಥಗಳಲ್ಲಿ ಶಿವಸಿದ್ಧಾಂತ ತಂತ್ರವೆಂಬ ಷಟ್‌ಸ್ಥಲ ಸಿದ್ಧಾಂತವು ಸವಿವರವಾಗಿ ಪ್ರತಿಪಾದಿಸಲ್ಪಟ್ಟಿದೆ. ಷಟ್‌ಸ್ಥಲ ಗದ್ಯವು ಶಿವಾನುಭವ ಸೂತ್ರದಲ್ಲಿ ವಿವರಿಸಲ್ಪಟ್ಟ ಷಟ್‌ಸ್ಥಲದ ವರ್ಣನಾಪೂರ್ವಕವಾದ ಸ್ತೋತ್ರವಾಗಿದೆ. ಅಂದರೆ ಮಾಯಿದೇವನು ಈ ಸಿದ್ಧಾಂತವನ್ನು ಪೂಜನೀಯವೆಂದು ಗೌರವಿಸಿದ್ದಾನೆ–ಹೃತ್‌ಪೂರ್ವಕ ಹೊಗಳಿದ್ದಾನೆ.

ಏಕೋತ್ತರ ಶತಸ್ಥಲವನ್ನು ಶಿವಾನುಭವ ಸೂತ್ರದ ಮೂರನೆಯ ಭಾಗವೆಂದೇ ಹೇಳಬಹುದು. ಆ ಎರಡು ಗ್ರಂಥಗಳಲ್ಲಿ ಹೇಳದೆ ಇರುವ ಲಿಂಗಾಂಗ ಸ್ಥಲಗಳಲ್ಲಿರುವ ೧೦೧ ಸ್ಥಲಗಳ ವಿಷಯ ಇಲ್ಲಿದೆ.

ಸಂಸ್ಕೃತ–ಕನ್ನಡ ಭಾಷೆಗಳೆರಡರಲ್ಲೂ ಇರುವ ಶತಕತ್ರಯವು ಷಟ್‌ಸ್ಥಲಾಚರಣೆಗೆ ಸಂಬಂಧಿಸಿದ ವಿಷಯುಗಳ ವಿವರವಿದೆ.

ಹೀಗೆ ಮಾಯಿದೇವನು ಷಟ್‌ಸ್ಥಲ ಸಿದ್ಧಾಂತವನ್ನು ನಿರೂಪಿಸಿದ ಒಬ್ಬ **ದಾರ್ಶನಿಕ ವ್ಯಕ್ತಿ**ಯೆಂಬುದು ತಿಳಿಯುವದು.

೨) ಮಾಯಿದೇವನು ತನ್ನ ಸಿದ್ಧಾಂತ ನಿರ್ಣಯಕ್ಕೆ ವಾತುಲಾಗಮದ ಎರಡನೆಯ ಭಾಗವಾದ 'ಪ್ರದೀಪ'ವನ್ನು ಆಧಾರವಾಗಿಸಿಕೊಂಡಿದ್ದಾನೆ– ಅದಕ್ಕೆ ಪೂರಕವಾಗಿ ಶಿವಾಗಮಗಳು, ಶ್ರುತಿ, ಸ್ಮೃತಿ, ಇತಿಹಾಸ, ಶಿವಧರ್ಮಶಾಸ್ತ್ರಗಳು, ಉಪನಿಷತ್ತುಗಳು,

ಪುರಾಣಗಳು, ಗೀತೆಗಳು (ಶಿವಶರಣರ ವಚನಗಳು), ಪುರಾತನರ ಅಭಿಪ್ರಾಯಗಳು, ಗುರುವಚನಗಳು ಇವೆಲ್ಲವುಗಳಲ್ಲಿ ಬರುವ ಷಟ್‌ಸ್ಥಲಕ್ಕೆ ಸಂಬಂಧಿಸಿದ ವಿಷಯಗಳ ಸಾರವನ್ನು ಕ್ರೋಢೀಕರಿಸಿಕೊಂಡು ತರ್ಕಬದ್ಧವಾದ ಸ್ವಾನುಭವದೊಂದಿಗೆ ಈ ಸಿದ್ಧಾಂತವನ್ನು ನಿರ್ಣಯಿಸಿದ್ದಾನೆ.

ಈ ಎಲ್ಲ ಗ್ರಂಥಗಳ ಸಾರವನ್ನು ತೆಗೆದುಕೊಂಡು ತನ್ನ ಶಿವಾನುಭವ ಸೂತ್ರವನ್ನು ರಚಿಸಬೇಕಾದರೆ ಈ ಹಿಂದೆ ಈ ಸಿದ್ಧಾಂತವು ಒಂದೆಡೆಯಲ್ಲಿ ಇರಲಿಲ್ಲವೆಂದೇ ವಿದಿತವಾಗುವದು. ಇಂತಹ ಮಹತ್ತರವಾದ ಕಾರ್ಯವನ್ನು ಅವನು ಮಾಡಿದುದರಿಂದಲೆ ಅವನಿಗೆ "ಷಟ್‌ಸ್ಥಲ ಬ್ರಹ್ಮವಾದಿ" ಎಂಬ ಬಿರುದು ಬಂದಿರಲು ಸಾಕು.

ಶಿವಾಧವ ಶತಕದಲ್ಲಿ "ಬಸವ ಪುರಾತನರಾಚರಿಸಿ ತೋರಿದ ಷಟ್‌ಸ್ಥಲ ಮಾರ್ಗ" (೬), ಗುಬ್ಬಿಯ ಮಲ್ಲಣ್ಣನ ಗಣಭಾಷ್ಯರತ್ನ ಮಾಲೆಯಲ್ಲಿ "ಬಸವರಾಜ ದೇವರು, ಚೆನ್ನಬಸವದೇವರು, ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳು ನೂಱೊಂದಱಲ್ಲಿ ನಡೆದು, ನುಡಿದ ವಚನಂಗಳು" ಎಂಬ ಮಾತುಗಳು ಬರುತ್ತವೆ. ಇದರಿಂದ ಬಸವಾದಿ ಪುರಾತನರಿಗಿಂತ ಮೊದಲು ಈ ಮಾರ್ಗದ ಆಚರಣೆಯಿರಲಿಲ್ಲವೆನ್ನುವದು ವ್ಯಕ್ತವಾಗುವದು, ಅದಕ್ಕಾಗಿಯೆ ಅವರ ವಚನಗಳನ್ನು (ಗೀತಗಳನ್ನು) ಆಧಾರವಾಗಿ ಮಾಯಿದೇವ ಹಿಡಿದುಕೊಂಡಿದ್ದಾನೆ.

ಈ ವಿವರಣೆಯಿಂದ ಅಲ್ಲಲ್ಲಿ ಚೆಲ್ಲವರಿದಿದ್ದ ತತ್ತ್ವಗಳನ್ನು ಕೂಡಿಸಿಕೊಂಡು ಶರಣರು ಅವುಗಳಂತೆ ನಡೆದು ತೋರಿಸಿದರು. ಅದು ಇನ್ನೂ ಮೂರ್ತಸ್ವರೂಪದಲ್ಲಿರುವಾಗಲೆ ಕಲ್ಯಾಣ ಕ್ರಾಂತಿಯಾಯಿತು. ಸಿದ್ಧಾಂತ, ಗ್ರಂಥರೂಪದಲ್ಲಿ ಬಾರದೆ ಹೋಯಿತು. ಮಾಯಿದೇವ ಈ ಕಾರ್ಯವನ್ನು ಪ್ರಪ್ರಥಮವಾಗಿ ಮಾಡಿ ಆದ್ಯ ವೀರಶೈವ ತತ್ತ್ವದರ್ಶಿ ಎನಿಸಿಕೊಂಡನು.

೩) ಷಟ್‌ಸ್ಥಲವನ್ನು ಸ್ಥೂಲವಾಗಿ ನಿರೂಪಿಸಿದ 'ಪ್ರದೀಪ'ವನ್ನು ಶರಣರ ಗೀತಗಳನ್ನು, ಇನ್ನುಳಿದ ಅನೇಕ ಗ್ರಂಥಗಳನ್ನು ಹೆಸರಿಸಿದ ಮಾಯಿದೇವನು ಇದೇ ಷಟ್‌ಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸಿದ ಸಿದ್ಧಾಂತ ಶಿಖಾಮಣಿಯನ್ನು ಹೆಸರಿಸಿಲ್ಲ- ಇದರಿಂದ ಮೊಗ್ಗೆಯ ಮಾಯಿದೇವನಿಗಿಂತ ಮೊದಲು ಈ ಗ್ರಂಥ ಇರಲಿಲ್ಲವೆಂದೇ ಹೇಳಬೇಕಾಗುತ್ತದೆ. ಇದರ ಕಾಲದ ವಿಷಯವಾಗಿ ಕರ್ತೃವಾದ ಶಿವಯೋಗಿ ಶಿವಾಚಾರ್ಯನು ಏನನ್ನೂ ಹೇಳಿಲ್ಲ, ರೇಣುಕರು ಅಗಸ್ತ್ಯರಿಗೆ ಈ ವಿಷಯವನ್ನು ಹೇಳಿರುವಂತೆ ಸಿದ್ಧಾಂತ ಶಿಖಾಮಣಿಯಲ್ಲಿ ಬರುವುದರಿಂದ ಕೆಲವರು ಅವರ ಕಾಲವೇ ವೀರಶೈವ ಧರ್ಮದ ಕಾಲವೆಂದು ಹೇಳುತ್ತಾರೆ. ಇದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಏಕೆಂದರೆ, ಅಗಸ್ತ್ಯ ಮತ್ತು ರೇಣುಕರ ಕಾಲಗಳಲ್ಲಿ ಹೊಂದಿಕೆಯಿಲ್ಲ. ಅಗಸ್ತ್ಯ ಪೌರಾಣಿಕ ಪುರುಷನಾದರೆ, ರೇಣುಕರು ಐತಿಹಾಸಿಕ ವ್ಯಕ್ತಿ. (ರಾಜೇಂದ್ರ ಚೋಳನ ಕಾಲ). ರೇಣುಕಾಗಸ್ತ್ಯರ ಸಂವಾದವು

ವಿಷಯ ನಿರೂಪಣದ ಒಂದು ವಿಧಾನವೇ ಹೊರತು ಅದು ಕಾಲ ನಿರ್ಣಯಕ್ಕೆ ಪೂರಕವಲ್ಲ.

ಮೊಗ್ಗೆಯ ಮಾಯಿದೇವನು ಆರೇಳು ಗ್ರಂಥಗಳಲ್ಲಿ ಹೇಳಿದ ವಿಷಯವನ್ನೇ ಇನ್ನೂ ವ್ಯವಸ್ಥಿತವಾದ ರೀತಿಯಲ್ಲಿ ಶಿವಯೋಗಿ ಶಿವಾಚಾರ್ಯನು ಹೇಳಿದ್ದಾನೆ. ಒಂದು ಮೂರ್ತ ಸ್ವರೂಪಕ್ಕೆ ಬಂದುದನ್ನು ವ್ಯವಸ್ಥೆಗೊಳಿಸುವದು ಸುಲಭ ಸಾಧ್ಯವಾದುದಾಗಿದೆ. ನಾಗ ವರ್ಮನ (೨) ಶಬ್ದಸ್ಮೃತಿ, ಕರ್ನಾಟಕ ಭಾಷಾಭೂಷಣ ಇವುಗಳ ಸಹಾಯದಿಂದ ಕೇಶಿ ರಾಜನು ಶಬ್ದಮಣಿದರ್ಪಣದಂತಹ ಪ್ರಮಾಣ ಗ್ರಂಥವನ್ನು ಬರೆಯಲು ಹಗುರವಾಯಿತು.

ಆದ್ದರಿಂದ ಷಟ್‌ಸ್ಥಲ ಸಿದ್ಧಾಂತ ಯುಕ್ತವಾದ ವೀರಶೈವ ಧರ್ಮವು ಬಸವಾದಿ ಶಿವಶರಣರಿಂದಲೇ ಆರಂಭಗೊಂಡು ಅದಕ್ಕೊಂದು ಪ್ರಮಾಣ ಗ್ರಂಥವು ವೀರಶೈವ ಧರ್ಮದ ಪುನರುತ್ಥಾನವಾದ ಪ್ರೌಢದೇವರಾಯನ ಕಾಲದಲ್ಲಿಯೇ ಅಂದರೆ ಕ್ರಿ. ಶ. ಸು. ೧೪೩೦ರಲ್ಲಿ ನಿರ್ಮಾಣವಾಯಿತೆಂದು ಹೇಳಬಹುದು.

೪) ಮಾಯಿದೇವನು ಬಸವಣ್ಣನನ್ನು "ವೀರಶೈವ ನಿರ್ಣಯ ಪರಮಾವತಾರ" (ಶಿವಾಧವ ಶತಕ-೨) ಎಂದೂ ಚೆನ್ನಬಸವಣ್ಣನನ್ನು "ಷಟ್‌ಸ್ಥಲಧೀರ" (ಅದೇ-೩) ಎಂದೂ ಕರೆದಿದ್ದಾನೆ. ಅದರಂತೆ ಗುರುಬಸವನು (೧೪೩೦) ತನ್ನ 'ಮನೋವಿಜಯ' ದಲ್ಲಿ—"ವೀರಶೈವಮತ ಸ್ಥಾಪನಾಚಾರ್ಯನಪ್ಪ ಶ್ರೀ ಮದ್ಗುರು ಬಸವೇಶ್ವರಂ" ಎಂದು ಹೇಳಿರುವುದರಿಂದ ಬಸವಣ್ಣನೇ ವೀರಶೈವಮತವನ್ನು ಸ್ಥಾಪಿಸಿದನೆಂಬುದು ಸ್ಪಷ್ಟವಾಗುತ್ತದೆ. ಇದರಿಂದ ಮೇಲಿನ ನಮ್ಮ ಹೇಳಿಕೆಯು ದೃಢಪಡುತ್ತದೆ.

ಈ ಸಮಗ್ರ ವಿವೇಚನೆಯಿಂದ ಮೊಗ್ಗೆಯ ಮಾಯಿದೇವಪ್ರಭುವು ಒಬ್ಬ ದಾರ್ಶನಿಕ ವ್ಯಕ್ತಿಯಾಗಿಯೂ ತತ್ತ್ವದರ್ಶಿಯಾಗಿಯೂ ಶಿವಸಿದ್ಧಾಂತ ತಂತ್ರಸ್ವರೂಪವಾದ ಷಟ್‌ಸ್ಥಲ ಸಿದ್ಧಾಂತದ ಆದ್ಯ ಕರ್ತೃವಾಗಿಯೂ ಮುಂದಿನವರಿಗೆ ಮಾರ್ಗದರ್ಶಕನಾಗಿಯೂ ವಿರಾಜಮಾನನಾಗಿದ್ದಾನೆ.

## ಗ್ರಂಥಋಣ


೧. ಶಿವಾನುಭವಸೂತ್ರಂ-ಸಂ. ಪಂಡಿತ ವೈ. ನಾಗೇಶಶಾಸ್ತ್ರಿಗಳು ಬಳ್ಳಾರಿ ೧೯೫೮

೨. ವಿಶೇಷಾರ್ಥ ಪ್ರಕಾಶಿಕಾ-ಸಂ. ಪಂಡಿತ ವೈ. ನಾಗೇಶಶಾಸ್ತ್ರಿಗಳು ಬಳ್ಳಾರಿ ೧೯೬೧

೩. ಮಾಯಿದೇವ ಪ್ರಭುವಾಣಿ-ಶ್ರೀ ಚೆನ್ನಮಲ್ಲಿಕಾರ್ಜುನ, ಮೈಸೂರು ೧೯೬೨

೪. ಶತಕತ್ರಯವು-ಸಂ. ಪಂಡಿತ ವೈ. ನಾಗೇಶಶಾಸ್ತ್ರಿಗಳು, ಬಳ್ಳಾರಿ ೧೯೬೪

ಈ ನಾಲ್ಕು ಗ್ರಂಥಗಳು ಶ್ರೀಮುರುಘಾಮಠ, ಧಾರವಾಡದ ಪ್ರಕಾಶನಗಳು

೫. ಕರ್ನಾಟಕ ಕವಿಚರಿತೆ-೧-೨

೬. ಸಿದ್ಧಾಂತ ಶಿಖಾಮಣಿ-ಸಂ. ವೇದಾಂತಕೇಸರಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು, ಶಿವಾನಂದಮಠ, ಗದಗ.

# ಬಸವಣ್ಣನವರು ಮತ್ತು ಅನುಭವಮಂಟಪ

—ಡಾ. ಎಚ್. ಜಿ. ಲಕ್ಕಪ್ಪಗೌಡ

ಕನ್ನಡನಾಡಿನ ಸಾಂಸ್ಕೃತಿಕ, ಸಾಹಿತ್ಯಕ ಮತ್ತು ಧಾರ್ಮಿಕ ಇತಿಹಾಸದಲ್ಲಿ ಹನ್ನೆರಡನೇ ಶತಮಾನ ಒಂದು ಮಹತ್ವದ ಅವಿಸ್ಮರಣೀಯ ಮೈಲಿಗಲ್ಲು. ಈ ಶತಮಾನ ಮುಖ್ಯವಾಗಿ ಮತ ಪ್ರಾಬಲ್ಯದ ಕಾಲವಾಗಿತ್ತು. ಜೈನ ಶೈವ ವೈಷ್ಣವ ಮತಗಳು ಒಂದರೊಡನೊಂದು ಸ್ಪರ್ಧಿಸಿ ತಮ್ಮ ತಮ್ಮ ಮತದ ಹಿರಿಮೆಗರಿಮೆಗಳನ್ನು ಪ್ರತಿಪಾದಿಸಿ ಜನಮನವನ್ನು ತಮ್ಮತ್ತ ಸೆಳೆಯಲು ಅನಾರೋಗ್ಯಕರವಾದ ಪೈಪೋಟಿಗೆ ಇಳಿದಿದ್ದವು. ಅಜ್ಞಾನ, ಡಾಂಭಿಕತೆ, ಮೂಢಾಚಾರ, ಶೋಷಣೆ ವರ್ಗ ವೈಷಮ್ಯಗಳು ಪ್ರಬಲಿಸಿ ಸಮಾಜವನ್ನು ಏಕಾಪೋಶನ ತೆಗೆದುಕೊಳ್ಳುತ್ತಿದ್ದವು. ಇಂಥ ಅವ್ಯವಸ್ಥೆಯನ್ನು ಅಳಿಸಿ, ಡಂಬಾಚಾರಗಳನ್ನು ಮುರಿದು, ಶೋಷಣೆಯನ್ನು ನಿಲ್ಲಿಸಿ, ಅಜ್ಞಾನವನ್ನು ಹರಿಸಲು, ಜನತೆಯಲ್ಲಿ ಸತ್ಸಂಪ್ರದಾಯ ಸದಾಚಾರ ಪದ್ಧತಿ ನಿಷ್ಠೆ ಸಮಾನತೆ ಸ್ವಾಭಿಮಾನ ವಿಚಾರಶಕ್ತಿಗಳನ್ನು ಬಿತ್ತಲು ಮತ್ತು ಈ ಮೂಲಕ ಸಮಾಜವನ್ನು ಪ್ರಗತಿಯ ದಾರಿಯಲ್ಲಿ ಕೊಂಡೊಯ್ಯಲು ಪ್ರಭಾವಶಾಲಿಯಾದ ಅಪೂರ್ವ ಚೇತನವೊಂದು ಅತ್ಯಗತ್ಯವಾಗಿ ಬೇಕಾಗಿತ್ತು. ಇಂಥ ಅತ್ಯುತ್ಕಟ ಪರಿಸ್ಥಿತಿಯಲ್ಲಿ ಜನಮನದ ಆಶಾಸೂರ್ಯನಾಗಿ ಮೂಡಿ ಬಂದವರು ಬಸವಣ್ಣನವರು.

ಬಸವಣ್ಣ ಮೂಲತಃ ಪ್ರತಿಭಟನೆಯ ಸಂಕೇತ. ಸಾವಿರಾರು ವರ್ಷಗಳಿಂದ ಜನ ಜನರ ನಡುವೆ ಅಸಮಾನತೆಯ ಅಡ್ಡಗೋಡೆಗಳನ್ನು ನಿರ್ಮಿಸಿ, ಬಹುಸಂಖ್ಯಾತ ಜನ ಭಾಗವನ್ನು ಅಜ್ಞಾನದಲ್ಲಿ ಕೊಳೆಸಿ, ಅವರ ವಾಣಿಯನ್ನು ವ್ಯವಸ್ಥಿತವಾಗಿ ದುರ್ಬಲಗೊಳಿಸಿ, ಅವರ ಪ್ರಗತಿಯ ಅವಕಾಶಗಳನ್ನು ನಿರ್ದಯವಾಗಿ ಚಿವುಟಿ ಹಾಕಿ ಧರ್ಮವೇಷದ ರಕ್ಕಸತನವನ್ನು ಮೆರೆದು ವಿಜೃಂಭಿಸಿದ ಅಲ್ಪಸಂಖ್ಯಾತವಾದ ಪ್ರಬಲ ವ್ಯವಸ್ಥೆಯೊಂದರಲ್ಲಿ ಜನ್ಮತಳೆದ ಬಸವಣ್ಣ ಆ ಜಡಸಂಪ್ರದಾಯ ಬದ್ಧ, ಕರ್ಮಪರ ವ್ಯವಸ್ಥೆಯ ಎಲ್ಲ ಜೀವ ವಿರೋಧಿ ಗುಣಗಳ ಮೂಲಚೂಲಗಳನ್ನು ಬಲ್ಲವರಾಗಿದ್ದರು. ಮಾನವತೆಯ ಮುಖ್ಯ ಜೀವ ಬೇರುಗಳನ್ನು ಕ್ರಮಬದ್ಧವಾಗಿ ನಿಷ್ಕರುಣವಾಗಿ ಹೊಸಕಿ ಹಾಕುವ ಈ ಅಮಾನುಷತೆಗೆ ಜಿಗುಪ್ಸೆಗೊಂಡ, ಹಂತ ಹಂತವಾಗಿ ರೋಸಿಹೋದ ಆ ಎಳೆಯ ಜೀವ, ಕೊನೆಗೊಮ್ಮೆ ಅದರ ವಿರುದ್ಧ ಸಿಡಿದೆದ್ದಿತು. ಎಂಥವರನ್ನೂ ನುಗ್ಗುನುರಿ ಮಾಡುವ ಅದರ ಕಬಂಧ ಬಾಹುಗಳಿಂದ ಕಳಚಿ ಕೊಳ್ಳುವುದಕ್ಕಾಗಿ ಜನಿವಾರವನ್ನೇ ಕಿತ್ತೆಸೆದು ಬ್ರಾಹ್ಮಣ್ಯವನ್ನು ಬಿಸುಟು ಹೊರಬಂದರು ಬಸವಣ್ಣ. ಆದರೆ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವುದು

ಪ್ರಗತಿಪರತೆಯ ಒಂದು ಪ್ರಧಾನ ಅಂಶವಾದರೂ ಅದೇ ಪ್ರಗತಿಯಾಗಲಾರದು. ಬೆಳೆ ಬೆಳೆಯುವ ಮುನ್ನ ಹೊಲದ ಗಿಡಗಂಟಿಗಳನ್ನು ಕಲ್ಲು ಮುಳ್ಳುಗಳನ್ನು ತೆಗೆಯಬೇಕು, ನೆಲವನ್ನು ಸಮತಟ್ಟು ಮಾಡಬೇಕು, ಗುಂಡಿಗೊಸರುಗಳನ್ನು ತುಂಬಿ ಅನಂತರ ಉತ್ತು ಹದ ಮಾಡಿ ಬೀಜ ಬಿತ್ತಬೇಕು. ಅಷ್ಟೇ ಅಲ್ಲ, ವ್ಯಕ್ತಿ ಎಷ್ಟೇ ಸಾಮರ್ಥ್ಯಶಾಲಿಯಾದರೂ ಅವನ ವೈಯಕ್ತಿಕ ಪ್ರತಿಭಟನೆ ಪ್ರಯತ್ನಗಳು ಹೆಮ್ಮರವಾಗಿ ನಿಂತ ವ್ಯವಸ್ಥೆಯನು ಮೂಲೋತ್ಪಾಟನೆ ಮಾಡಲಾರವು. ಆದ್ದರಿಂದ ವ್ಯಕ್ತಿ ಶಕ್ತಿ ಸಾಂಘಿಕಶಕ್ತಿಯಾಗಿ ರೂಪು ಗೊಂಡು ಬಲಗೊಳ್ಳಬೇಕಾದದ್ದು ನಿಜವಾದ ಪರಿವರ್ತನೆಯ ದೃಷ್ಟಿಯಿಂದ ಅತ್ಯ ಪೇಕ್ಷಣೀಯ. ಈ ಕಾರಣದಿಂದ ತಮ್ಮ ವೈಯಕ್ತಿಕ ಪ್ರತಿಭಟನೆಯನ್ನು ಸಾಮೂಹಿಕ ಪ್ರತಿಭಟನೆಯ ಪ್ರಬಲ ಶಕ್ತಿಯನ್ನಾಗಿ ಪರಿವರ್ತಿಸಲು ಮತ್ತು ಪ್ರಸ್ತುತ ಅವ್ಯವಸ್ಥೆಯನ್ನು ಹೋಗಲಾಡಿಸಿ ಪರ್ಯಾಯವಾದ ಆರೋಗ್ಯಕರ ಪ್ರಗತಿಪರ ವ್ಯವಸ್ಥೆಯೊಂದನ್ನು ನಿರ್ಮಾಣ ಮಾಡಲು ಜನಮನವನ್ನು ಸಿದ್ಧಗೊಳಿಸುವ ಅಗಾಧ ಹೊಣೆಯನ್ನು ಬಸವಣ್ಣ ನವರು ಹೊರಬೇಕಾಯಿತು. ಆಗಿನ ರಾಜಪ್ರಭುತ್ವದ ಕಾಲದಲ್ಲಿ ಇದಕ್ಕೆ ನೆರವಾಗಿ ಬಂತು ಬಸವಣ್ಣನವರಿಗೆ ವೈವಾಹಿಕ ಸಂಬಂಧ, ರಾಜಸಂಬಂಧ ಮತ್ತು ತತ್ಫಲವಾದ ಅಧಿಕಾರ. ಇದರಿಂದಾಗಿ ತಮ್ಮ ಅನಿಸಿಕೆಗಳಿಗೆ ಉದ್ದೇಶಗಳಿಗೆ ಜನಬಲದ ಅನುಭವಬಲದ ಬುದ್ಧಿ ಬಲದ ಹೊರಣ ತುಂಬಿ ಅವುಗಳನ್ನು ಕ್ರಿಯೆಯಾಗಿ ಮಾರ್ಪಡಿಸಲು ಅವರು ಸ್ಥಾಪಿಸಿದ ಅಥವಾ ಸಂಘಟಿಸಿದ ಸಂಸ್ಥೆಯೇ 'ಅನುಭವಮಂಟಪ'.

೨

ಶೂನ್ಯ ಸಂಪಾದನೆಯ ಕಾಲಕ್ಕೆ ಮತ್ತು ಅನಂತರ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದುಕೊಂಡ ಈ 'ಅನುಭವಮಂಟಪ'ದ ಅಸ್ತಿತ್ವದ ಬಗ್ಗೆ ಸಾಕಷ್ಟು ಜಿಜ್ಞಾಸೆ ನಡೆದಿದೆ. ಸುಮಾರು ೧೧೬೦ರಲ್ಲಿ ಬಸವಕಲ್ಯಾಣದ ತ್ರಿಪುರಾಂತಕ ಕೆರೆಯ ಮೇಲಿನ ತ್ರಿಪುರಾಂತಕ ಗುಡ್ಡದಲ್ಲಿ ಇದು ಸ್ಥಾಪಿತವಾಗಿತ್ತೆಂದೂ, ಇದರ ಅಧ್ಯಕ್ಷರಾಗಿ ಪ್ರಭುದೇವರೂ, ಕಾರ್ಯ ದರ್ಶಿಯಾಗಿ ಚನ್ನಬಸವಣ್ಣನವರೂ ಸದಸ್ಯರಾಗಿ ಭಾರತದ ನಾನಾ ಭಾಗಗಳಿಂದ ಬಂದಿದ್ದ ಶಿವಶರಣರೂ ಕಾರ್ಯನಿರ್ವಹಿಸಿದರೆಂದೂ ಅಭಿಪ್ರಾಯವಿದೆ. ಇದಕ್ಕೆ ನಾಲ್ಕು ಮಹಾ ದ್ವಾರಗಳು ಮೂವತ್ತಾರು ಕಂಬಗಳೂ ಇದ್ದವೆಂದು ಸಹ ಹೇಳಲಾಗಿದೆ. ಇದರ ಅಧ್ಯಕ್ಷ ಪೀಠವೇ ಶೂನ್ಯಸಿಂಹಾಸನ.

ಇದು ಬಸವಣ್ಣ ಸ್ಥಾಪಿಸಿದ ಸಂಸ್ಥೆಯಾಗಿದ್ದರೆ, ತಮ್ಮ ನೂರಾರು ವೈಯಕ್ತಿಕವಾದ ಮತ್ತು ಇತರ ಅನಿಸಿಕೆಗಳಿಗೆ ಅತ್ಯಂತ ಪ್ರಾಮಾಣಿಕವೂ ಪರಿಣಾಮಕಾರಿಯೂ ಆದ ಅಭಿ ವ್ಯಕ್ತಿಯನ್ನು ತಮ್ಮ ವಚನಗಳಲ್ಲಿ ನೀಡಿದ ಅವರು ಇಂಥ ಮಹತ್ವ ಪೂರ್ಣವಾದ ಸಂಸ್ಥೆಯ ಬಗ್ಗೆ ಏಕೆ ಪ್ರಸ್ತಾಪಿಸಲಿಲ್ಲ ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಹಾಗೆಯೇ ಬಸವಣ್ಣನವರ ಸಮಕಾಲೀನರ ವಚನಗಳಲ್ಲೂ ಒಬ್ಬರನ್ನು ಬಿಟ್ಟು, ಇದರ

ಉಲ್ಲೇಖಗಳು ಇರದಿರುವುದು ಮತ್ತಷ್ಟು ಸೋಜಿಗದ ಸಂಗತಿಯಾಗಿದೆ. ನೀಲಮ್ಮನ ಹೆಸರನ್ನು ಹೊಂದಿದ ವಚನವೊಂದು 'ಚನ್ನಬಸವನೆಂಬ ಪ್ರಸಾದಿಯು ಪಡೆದು, ಅನುಭವ ಮಂಟಪವನು ಮಾಡಿ, ಅನುಭವ ಮೂರ್ತಿಯಾದ ನಮ್ಮ ಬಸವಯ್ಯನು' ಎಂದು ಹೇಳುತ್ತದೆ. ನಮಗೆ ದೊರತಿರುವ ಅಪಾರ ಸಂಖ್ಯೆಯ ವಚನಗಳಲ್ಲಿ ಇದೊಂದು ಮಾತ್ರ ಸ್ಪಷ್ಟವಾಗಿ ಅನುಭವ ಮಂಟಪದ ಅಸ್ತಿತ್ವದ ಬಗ್ಗೆ ಸುಳುಹು ಕೊಡುತ್ತದೆ. ಕಾಲಜ್ಞಾನ ವಚನಗಳಲ್ಲಿ ಮಾತ್ರ ಈ ಹೆಸರು ವಿಶೇಷವಾಗಿ ಉಲ್ಲೇಖಗೊಂಡಿದೆ. ಕಾಲ ದೃಷ್ಟಿಯಿಂದ ಬಸವಣ್ಣನವರಿಗೆ ಮತ್ತು ವೀರಶೈವ ಕ್ರಾಂತಿಗೆ ತುಂಬ ಹತ್ತಿರದಲ್ಲಿ ಬದುಕಿ ಬಸವಣ್ಣನವರ ಬಗೆಗೆ ಒಂದು ಕಾವ್ಯವನ್ನು ಬರೆದಿರುವ ಹರಿಹರ ಕೂಡ ಈ ಅನುಭವಮಂಟಪದ ಬಗ್ಗೆ ಏನನ್ನೂ ಹೇಳದಿರುವುದು ನಮ್ಮನ್ನು ಮತ್ತಷ್ಟು ಸಂದೇಹಕ್ಕೆ ದೂಡುತ್ತದೆ.

ವಚನಗಳ ಕಾಲವನ್ನು ಮತ್ತು ಹರಿಹರನನ್ನು ದಾಟಿ ವೀರಶೈವ ಪುರಾಣಗಳಿಗೆ ಬಂದಾಗ 'ಅನುಭವ ಮಂಟಪ'ದ ಭವ್ಯ ಸುಂದರವಾದ ಮತ್ತು ಸ್ಪಷ್ಟವಾದ ಚಿತ್ರ ದೊರೆಯುತ್ತದೆ. ಪ್ರಭುಲಿಂಗಲೀಲೆ, ಚನ್ನಬಸವಪುರಾಣ, ಪ್ರಭುದೇವರಪುರಾಣ ಮೊದಲಾದ ಕೃತಿಗಳು ಇದರ ರೋಚಕ ವರ್ಣನೆಯನ್ನು ನೀಡುತ್ತವೆ. ಈ ಅನುಭವಮಂಟಪದಲ್ಲಿ ನಡೆಯಿತೆಂದು ಹೇಳಲಾದ ಶರಣ ಸಂದೇಹದ ಚರ್ಚೆಗೆ, ಅದರ ಅಧ್ಯಕ್ಷ ಪೀಠವಾದ ಶೂನ್ಯ ಸಿಂಹಾಸನದ ಬಗೆಗೆ ಒಂದು ಸುವ್ಯವಸ್ಥಿತ ರೂಪವನ್ನು ನೀಡಿದ್ದು ಶೂನ್ಯ ಸಂಪಾದನೆ.

'ಅನುಭವಮಂಟಪ' ವಾಸ್ತವಿಕ ಸತ್ಯವೆಂದು ಪ್ರಬಲವಾಗಿ ಪ್ರತಿಪಾದಿಸಿದವರು ದಿವಂಗತ ಉತ್ತಂಗಿ ಚನ್ನಪ್ಪನವರು. ಶರಣ ಸಮುದಾಯದ ಸಂಪರ್ಕದ ಬಗ್ಗೆ ಬಸವಣ್ಣನವರಿಗಿದ್ದ ತೀವ್ರ ಆಸಕ್ತಿ ಭಕ್ತಿಗಳನ್ನು ಮತ್ತು ವಚನಗಳಲ್ಲಿ ಮತ್ತೆ ಮತ್ತೆ ಬರುವ ಅನುಭವ, ಶಿವಾನುಭವ, ಅನುಭಾವ ಪದಗಳನ್ನು ಉಲ್ಲೇಖಿಸುತ್ತ ಹಾಗೂ ಕಾಲಜ್ಞಾನದ ವಚನಗಳನ್ನು ಉದಾಹರಿಸುತ್ತ ಅವರು ತಮ್ಮ ವಾದವನ್ನು ಮಂಡಿಸುತ್ತಾರೆ. ಡಾ. ಆರ್. ಸಿ. ಹಿರೇಮಠರವರು ಈ ಅನುಭವಮಂಟಪವು ಕ್ರಿ. ಶ. ೧೧೪೦ರಲ್ಲೂ ಮತ್ತು ಶೂನ್ಯ ಸಿಂಹಾಸವು ಕ್ರಿ. ಶ. ೧ ೫೨ ರಲ್ಲೂ ಸ್ಥಾಪಿತವಾಗಿರಬೇಕೆಂದೂ ಅಭಿಪ್ರಾಯಪಡುತ್ತಾರೆ. ಶ್ರೀ ಆರ್. ಆರ್. ದಿವಾಕರ ಅವರು ಮುಖ್ಯವಾಗಿ ಶೂನ್ಯಸಂಪಾದನೆಯನ್ನು ಮತ್ತು ಸಂಗನ ಬಸವೇಶ್ವರರ ವಚನಗಳನ್ನು ಆಧರಿಸಿ ಅನುಭವಮಂಟಪದ ಐತಿಹಾಸಿಕತೆಯನ್ನು ಸಾಧಿಸಲು ಪ್ರಯತ್ನಿಸಿದ್ದಾರೆ.

'ಅನುಭವಮಂಟಪ' ಎಂಬ ನಿರ್ದಿಷ್ಟವಾದ ಭೌತಿಕ ಕಟ್ಟಡವೊಂದು ಇದ್ದಿರಬಹುದೇ ಎಂದು ಚರ್ಚಿಸುವುದಕ್ಕಿಂತ, ಔಪಚಾರಿಕವಾಗಿಯಾದರೂ ಇಂಥ ಒಂದು ವೇದಿಕೆ ಇತ್ತೆಂಬುದನ್ನು ನಾವು ಒಪ್ಪಬೇಕಾಗುತ್ತದೆ ಎಂಬುದು ನನ್ನ ಅಭಿಪ್ರಾಯ. ಶರಣಸಮೂಹವೆಂದರೆ ಬಸವಣ್ಣನವರಿಗೆ ಅಪಾರವಾದ ಆಸಕ್ತಿ ಆದರಗಳಿದ್ದವೆಂಬುದು ವಿವಾದದ ವಿಷಯವೇ ಅಲ್ಲ. ಆದ್ದರಿಂದ ಅವರು ಸದಾ ಶರಣರ ಸಹವಾಸದಲ್ಲಿ ಇರಬಯಸುತ್ತಿದ್ದರೆಂಬುದು

ಕೂಡ ಸಹಜವೇ. ಅವರ ವಚನಗಳಲ್ಲಿ ಇದಕ್ಕೆ ಹೇರಳವಾದ ಆಧಾರಗಳು ದೊರೆಯು ತ್ತವೆ. 'ಪುರಾತನರ ಗೀತ ಗೋಷ್ಠೀ ತರಂಗಿಣಿ'ಯಲ್ಲಿ 'ಶರಣರೊಳು ಸದ್ಗೋಷ್ಠಿಯಲ್ಲಿ' ಬಸವಣ್ಣ ಇರುತ್ತಿದ್ದರೆಂದು ಹರಿಹರ ತನ್ನ ರಗಳೆಯಲ್ಲಿ ನಿರೂಪಿಸಿದ್ದಾನೆ. 'ಶರಣರ ಸದ್ಗೋಷ್ಠಿ' ಎಂಬ ಮಾತು ಅಕ್ಕನ ವಚನದಲ್ಲಿ, 'ಅನುಭಾವ ಗೋಷ್ಠಿ' ಎಂಬ ಮಾತು ಪ್ರಭುದೇವರ ವಚನಗಳಲ್ಲಿ 'ಮಹಾನುಭಾವ ಗೋಷ್ಠಿ' ಎಂಬ ಮಾತು ಸಿದ್ಧರಾಮೇಶ್ವರನ ವಚನದಲ್ಲಿ ಕಾಣಬರುತ್ತವೆ. ಬಸವಣ್ಣ ಮತ್ತು ಇತರ ಶರಣರು ಭಕ್ತಿ, ಅಧ್ಯಾತ್ಮ, ಬದುಕು, ದೈವ ಮುಂತಾದವುಗಳ ಬಗೆಗೆ ಆಗಾಗ ಸಭೆ ಸೇರಿ ಚರ್ಚಿಸುತ್ತಿದ್ದರೆಂಬುದನ್ನು ಈ ಮಾತುಗಳು ಸಾದರಪಡಿಸುತ್ತವೆ.

ಇನ್ನೊಂದು ದೃಷ್ಟಿಯಿಂದ ಕೂಡ ಈ ಸಂದರ್ಭವನ್ನು ನಾವು ಪರಿಶೀಲಿಸಬೇಕು. ವೈಯಕ್ತಿಕ ಉದ್ಧಾರಕ್ಕಾಗಿ ಮಾತ್ರವೇ ತುಡಿದ ದುಡಿದ ಜೀವವಲ್ಲ ಬಸವಣ್ಣನವರದು. ಕೇವಲ ಆತ್ಮಕಲ್ಯಾಣವೊಂದೇ ಗುರಿಯಾಗಿದ್ದರೆ ತಾವು ಜನ್ಮತಳೆದ ಧರ್ಮದಲ್ಲೇ ಇದ್ದು ಅದನ್ನು ಸಾಧಿಸಬಹುದಾಗಿತ್ತು. ಆತ್ಮೋದ್ಧಾರದ ಜೊತೆ ಜೊತೆಗೇ ಕೊಳಕು ವ್ಯವಸ್ಥೆಯ ನಾಶ, ತುಳಿತಕ್ಕೆ ಶೋಷಣೆ ಒಳಗಾದವರಲ್ಲಿ ಸ್ವಾಭಿಮಾನದ ಆಸ್ಫೋಟ, ಅಜ್ಞಾನ ರೂಢಿ ಮೌಢ್ಯ ದೈನ್ಯಗಳ ಪರಿಹರಿತ, ಜನಾಂತರಂಗದ ಸುಪ್ತಶಕ್ತಿಯ ಜಾಗೃತಿ, ಸರಳವೂ ಪ್ರಾಮಾಣಿಕವೂ ಪ್ರಶಾಂತವೂ ಕ್ರಿಯಾಪೂರ್ವವೂ ಗೌರವಯುತವೂ ಆದ ಬದುಕಿನ ಸಮಷ್ಟಿ ಸಾಧನೆ–ಇವು ಅವರ ಮುಖ್ಯ ಕಾಳಜಿಗಳಾಗಿದ್ದವು. ಈ ಆದರ್ಶಗಳನ್ನು ವಾಸ್ತವ ಸತ್ಯವಾಗಿಸಬೇಕಾದರೆ ಆ ಜನರೊಡನೆ ಬೆರೆಯುವುದು, ತಮ್ಮ ಅನಿಸಿಕೆಗಳನ್ನು ಅನುಭವ ಗಳನ್ನು ಅವರೊಡನೆ ಹಂಚಿಕೊಳ್ಳುವುದು, ಅವರ ಅನುಭವ ಬುದ್ಧಿ ಭಾವ ಆಲೋಚನೆ ಪ್ರತಿಕ್ರಿಯೆಗಳಲ್ಲಿ ಪಾಲ್ಗೊಳ್ಳುವುದು, ಆ ಮೂಲಕ ಪರಸ್ಪರರ ಅಭಿಪ್ರಾಯ ನಡೆನುಡಿ ಗಳನ್ನು ಸಂಸ್ಕರಿಸಿಕೊಂಡು ಒಮ್ಮತವನ್ನು ಸಾಧಿಸಿ ಸಂಕಲ್ಪಶಕ್ತಿಯನ್ನು ಗಟ್ಟಿಗೊಳಿಸುವುದು ಅವರಿಗೆ ತೀರಾ ಅನಿವಾರ್ಯವಾಗಿತ್ತು. ಇದಕ್ಕಾಗಿ ಪರಸ್ಪರ ಸಂಧಿಸಲು, ಸಂದರ್ಶಿಸಲು ಸಮಾನೋದ್ದೇಶದ ಒಂದು ವೇದಿಕೆ ಅತ್ಯಗತ್ಯವಾಗಿತ್ತು.

ಅಧಿಕ ಸಂಖ್ಯೆಯಲ್ಲಿ ಲಭ್ಯವಾಗಿರುವ ವಚನ ಸಂಪತ್ತನ್ನು ಸೂಕ್ಷ್ಮವಾಗಿ ಗಮನಿಸಿ ದಾಗ ಮತ್ತೊಂದು ಅಂಶ ಹೊಳೆಯುತ್ತದೆ. ೧೦೮ ಕೋಟಿ ವಚನಗಳು ರಚಿತವಾಗಿದ್ದ ವೆಂಬ ಐತಿಹ್ಯವೊಂದುಂಟು. ಇದು ಈ ವಚನಗಳ ವ್ಯಾಪ್ತಿಯನ್ನು ಸಂಕೇತಿಸುತ್ತದೆ. ಈಗ ತಿಳಿದಿರುವಂತೆ ಸುಮಾರು ೨೫೦ ಜನ ವಚನಕಾರರು ಸುಮಾರು ಹತ್ತುಸಾವಿರ ವಚನ ಗಳನ್ನು ರಚಿಸಿರುವಂತೆ ಗೊತ್ತಾಗುತ್ತದೆ. ಇದು ಪಂಡಿತರನ್ನು ಮೆಚ್ಚಿಸಿ ವರಕವಿಗಳೆಂದು ಬಿರುದುಗಳಿಸಲು ಬರೆದವುಗಳಲ್ಲ. ಅನುಭವ, ಜ್ಞಾನ ಮತ್ತು ಅಧ್ಯಾತ್ಮಗಂಗೆಯನ್ನು ಜನಮನಕ್ಕೆ ಹರಿಸಿ ಅವರ ಆತ್ಮ ಸಂಸ್ಕಾರಗೊಳಿಸಲು ಮತ್ತು ಅವರನ್ನು ಕ್ರಿಯಾಶೀಲ ಗೊಳಿಸಲು ಹೇಳಿದವುಗಳು. ಇವುಗಳಲ್ಲಿ ಬಹುಭಾಗ ಆಯಾ ಸಂದರ್ಭ ಸನ್ನಿವೇಶಗಳಲ್ಲಿ ಪರಿಸರದ ಪ್ರಭಾವ ಮತ್ತು ಪ್ರಚೋದನೆಯಿಂದ ಶರಣರ ಹೃದಯದಲ್ಲಿ ಸಹಜವಾಗಿ

ಮೂಡಿದ ಮಾತುಗಳಾಗಿರಬೇಕು. ಬಹುಶಃ ರಚನೋದ್ದೇಶದಿಂದಲೇ ಒಂದೆಡೆ ಕುಳಿತು ತಿಣುಕಿ ಬರೆದವುಗಳಾಗಿರಲಾರವು. ಏಕೆಂದರೆ ಮೆಟ್ಟು ಹೊಲೆಯುವ, ಹುಲ್ಲು ಕೊಯ್ಯುವ, ಅಕ್ಕಿ ಆಯುವ, ಹಗ್ಗ ಹೊಸೆಯುವ, ಬಟ್ಟೆ ಒಗೆಯುವ, ಗಂಧ ಅರೆಯುವ, ಕ್ಷೌರ ಮಾಡುವ, ದನ ಕಾಯುವ, ಭೂಮಿ ಉಳುವ, ಮಡಿಕೆ ಮಾಡುವ–ಮುಂತಾದ ವಿವಿಧ ಕಾಯಕದವರಾಗಿದ್ದ ಎಲ್ಲ ಶರಣರೂ ಕವಿತೆ ಬರೆಯುವಷ್ಟು ಅಕ್ಷರಜ್ಞಾನಿಗಳಾಗಿದ್ದರೆಂದು ಹೇಳುವಂತಿಲ್ಲ. ಹಿಂದುಳಿದ ಶೂದ್ರಾತಿಶೂದ್ರ ವರ್ಗದ ಜನರ ವಿದ್ಯಾಭ್ಯಾಸದ ಶೇಕಡಾವಾರು ಸ್ವತಂತ್ರ ಭಾರತದ ಈ ದಿನಗಳಲ್ಲೇ ಇಷ್ಟು ಕನಿಷ್ಠ ಪ್ರಮಾಣದಲ್ಲಿರುವಾಗ ಎಂಟು ನೂರು ವರ್ಷಗಳ ಹಿಂದಿನ ಈ ಶೂದ್ರರು ಮತ್ತು ದಲಿತರು ತಮ್ಮ ಮನೆಯಲ್ಲಿ ಎಲ್ಲೋ ಕುಳಿತು ವಚನ ರಚನೆ ಮಾಡಿದರೆಂದು ಊಹಿಸುವುದು ವಾಸ್ತವತೆಗೆ ಹತ್ತಿರವಾಗುವುದಿಲ್ಲ. ಸಂಭವನೀಯ ಊಹೆ ಎಂದರೆ ಶರಣರ ಬಾಯಿಂದ ಇಂಥ ವಚನಗಳು ಹೊರಟಾಗ ಕೇಳಿದವರು ಯಾರೋ ಬರೆದಿಟ್ಟಿರಬೇಕು. ಹೀಗೆ ಬರೆದಿಡಲು ಪ್ರತಿಯೊಬ್ಬ ವಚನಕಾರ ಅಥವಾ ವಚನಕಾರ್ತಿಯರ ಬಳಿಯೂ ಲಿಪಿಕಾರನೊಬ್ಬ ಇದ್ದನೆಂದು ಭಾವಿಸುವುದು ಅಸಹಜವಾಗುತ್ತದೆ. ಹೀಗೆ ಇರದಿದ್ದರೆ, ಅವಿದ್ಯಾವಂತ ವಚನಕಾರರ ವಚನಗಳು ನಮಗೆ ದೊರೆತ ಬಗೆ ಹೇಗೆ? ಇದಕ್ಕೊಂದೇ ಉತ್ತರ–ಇಂಥ ವಚನಕಾರರೆಲ್ಲ ಒಂದೆಡೆ ಸೇರುವ, ತಮ್ಮ ತೀವ್ರಾನುಭವಗಳಿಗೆ ಬಾಯ್ಗೊಡುವ ಮತ್ತು ಹಾಗೆ ಆಡಿದ್ದನ್ನು ಹಾಡಿದ್ದನ್ನು ಲಿಪಿಕಾರರು ಬರೆದಿಡುವ ಸಾಮಾನ್ಯ ವ್ಯವಸ್ಥೆಯೊಂದು ಅಂದು ಅಸ್ತಿತ್ವದಲ್ಲಿ ಇದ್ದಿರಬಹುದು ಎಂಬುದು. ಇಂಥ ಒಂದು ನಿಶ್ಚಿತ ನೆಲೆ ಅಥವಾ ವ್ಯವಸ್ಥೆಯೇ 'ಅನುಭವ ಮಂಟಪ' ಎಂದು ಕರೆಸಿಕೊಂಡಿತು. ಬಸವಣ್ಣ, ಪ್ರಭುದೇವ, ಚೆನ್ನಬಸವಣ್ಣ, ಮಹಾದೇವಿಯಕ್ಕ, ಸಿದ್ಧರಾಮ ಮುಂತಾದ ವಿದ್ಯಾವಂತರು ತಮ್ಮ ಮನದ ಸಹಜಸ್ಫೂರ್ತಿ ಭಾವನೆಗಳಿಗೆ ಬರವಣಿಗೆಯ ಮೂಲಕ ರೂಪುಕೊಟ್ಟಿರಲೂಬಹುದು. ಈ ವಿದ್ಯಾವಂತರ ಸಂದರ್ಶದಲ್ಲೂ ಅವರೆಲ್ಲ ವಚನಗಳನ್ನು ಅವರೇ ಬರದರೆಂದು ಹೇಳಲಾಗುವುದಿಲ್ಲ. ಆತ್ಮದ ತಲ್ಲಣ ತಳಮಳ ಮೊರೆ ಭಕ್ತಿ ಮುಂತಾದ ತೀರ ವೈಯಕ್ತಿಕ ಭಾವಗಳನ್ನುಳ್ಳ ವಚನಗಳನ್ನು ಅವರೇ ಏಕಾಂತದಲ್ಲಿ ಬರೆದಿರಬಹುದಾದರೂ, ಸಂವಾದ ಸುಬೋಧನೆಗಳನ್ನು ಗರ್ಭೀಕರಿಸಿಕೊಂಡ ವಚನಗಳು ಅವರೆದುರಿಗಿದ್ದ ವ್ಯಕ್ತಿಗಳನ್ನು ಕುರಿತವುಗಳಾಗಿದ್ದರಿಂದ, ಅವುಗಳನ್ನೆಲ್ಲ ಮೊದಲೇ ಬರೆದು ತಂದು ಹೇಳಿರಬಹುದು ಅಥವಾ ಮಾತಾಡಿದ ನಂತರ ಮನೆಯಲ್ಲಿ ಕುಳಿತು ನೆನಪಿನಿಂದ ಬರೆದಿರಬಹುದು ಎಂದು ಊಹಿಸುವುದು ಕೂಡ ಅಸಮಂಜಸವಾಗುತ್ತದೆ. ವಚನಗಳ ಭಾವ ವಿಚಾರಗಳನ್ನು ಗಮನಿಸಿ, ಅಂಥ ವಚನಗಳನ್ನು ಉಚಿತವರಿತು ಜೋಡಿಸುವ ಮೂಲಕ 'ಶೂನ್ಯ ಸಂಪಾದನೆಕಾರ ವಿವಿಧ ಘಟನಾವಳಿಗಳನ್ನು ನಿರ್ಮಿಸಿರುವನೆಂದು ಭಾವಿಸಿದರೂ, ಅವುಗಳಲ್ಲಿ ಕೆಲವಾದರೂ ವಾಸ್ತವ ಸನ್ನಿವೇಶಗಳಾಗಿದೆಯೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಪ್ರಭು–ಸಿದ್ಧರಾಮ ಭೇಟಿ, ಅಕ್ಕ–ಬಸವಣ್ಣ–ಪ್ರಭುಗಳ ಸಂದರ್ಶನ ಮರುಳ ಶಂಕರ ಪ್ರಸಂಗ ಮುಂತಾದುವುಗಳು,

ಧರ್ಮ ಜಿಜ್ಞಾಸೆ, ಜಾತಿಮತ ವಿಚಾರ, ಭಕ್ತರ ಪರೀಕ್ಷೆ ಮುಂತಾದವುಗಳನ್ನು ಒಳಗೊಂಡ ರಚನೆಗಳು ಖಂಡಿತವಾಗಿಯೂ ಕಟ್ಟಿ ಕಾಂತದಲ್ಲಿ ಕುಳಿತು ಬರೆದವುಗಳಲ್ಲವೆಂಬುದು ಅವುಗಳ ತೀಕ್ಷ್ಣತೆ ವ್ಯಂಗ್ಯ ತರ್ಕ ಸವಾಲು ಉತ್ತರಗಳ ಸ್ವರೂಪದಿಂದೇ ವೇದ್ಯವಾಗುತ್ತದೆ. ಆದ್ದರಿಂದ ಇಂಥವುಗಳ ಬೇರೆ ಬೇರೆ ಕಾಯಕದ ಶರಣರಿದ್ದಂತೆ ಲಿಪಿಕಾರ ಕಾಯಕದ ಶರಣರೂ ಇದ್ದು ಕೋಲಶಾಂತಯ್ಯ ಅಂಥ ಲಿಪಿಕಾರರಲ್ಲಿ ಒಬ್ಬನಾಗಿರಬೇಕು. ಇಂಥವುಗಳನ್ನು ದಾಖಲಿಸಿಡುವ ಪ್ರಯತ್ನ ವ್ಯವಸ್ಥಿತವಾಗಿಯೇ ನಡೆದಿರಬೇಕು. ಈ ವ್ಯವಸ್ಥೆಯ ವೇದಿಕೆಯೇ 'ಅನುಭವಮಂಟಪ' ಶರಣರು ಬಸವಣ್ಣನವರ ಮಹಾಮನೆಗೆ ಬರುವ ಪ್ರಸ್ತಾಪ ಹಲವು ವಚನಗಳಲ್ಲಿ ಬರುವುದರಿಂದ, ಈ ಮಹಾಮನೆಯೆಂಬುದು ಬಸವಣ್ಣನವರ ನಿವಾಸದ ಒಂದು ಭಾಗವಾಗಿದ್ದು ಶರಣರು ನೆರೆಯುವ ಸ್ಥಳವಾಗಿರಬಹುದು. ಇಲ್ಲಿ ಪರಸ್ಪರ ಸಂದರ್ಶನ, ವಿಚಾರ ವಿನಿಮಯ, ಅಹವಾಲು-ಸಮಾಧಾನ, ನಿವೇದನೆ-ಬೋಧನೆಗಳು ನಡೆಯುತ್ತಿದ್ದುದರಿಂದ ಇದೇ ವೇದಿಕೆ ಕ್ರಮೇಣ 'ಅನುಭವಮಂಟಪ' ಎಂದು ಕರೆಯಲ್ಪಟ್ಟಿರಬಹುದು. ಇದರ ಸ್ಥಾಪಕರಾದ ಬಸವಣ್ಣನವರು ಸ್ವತಃ ಮುಖ್ಯ ಮಂತ್ರಿಗಳಾಗಿದ್ದರಿಂದ ಮತ್ತು ಅಪಾರ ಶರಣರ ಧನಬಲ ದೇಹಬಲಗಳ ನೆರವು ಇದ್ದುದರಿಂದ ಇಂಥ ವೇದಿಕೆಗಾಗಿ ಒಂದು ಪ್ರತ್ಯೇಕ ಕಟ್ಟಡವೇ ನಿರ್ಮಾಣವಾಗಿರುವುದೂ ಅಸಂಭವವಲ್ಲ.

ಅಸಮಾನತೆ ನಮ್ಮ ದೇಶದ ದೊಡ್ಡ ಪಿಡುಗು. ನಮ್ಮ ಎಲ್ಲ ಸಂಕಷ್ಟ ಅಪಮಾನ ಆಕ್ರೋಶಗಳಿಗೆ ಮೂಲ ಕಾರಣ ಇದು. ಶತಶತಮಾನಗಳಿಂದ ಪ್ರತ್ಯಕ್ಷವಾದ ನಮ್ಮನ್ನಾಳಿದ ಪ್ರಭುಗಳು, ಅಪ್ರತ್ಯಕ್ಷವಾಗಿ ನಮ್ಮನ್ನು ಅವರನ್ನು ಕೂಡಿಯೇ ಆಳಿದ ಪುರೋಹಿತ ವರ್ಗದ ವರ್ಣಭೇದ, ವರ್ಗಭೇದ, ಲಿಂಗಭೇದಗಳನ್ನು ಸೃಷ್ಟಿಸಿ ಸಮಾಜವನ್ನು ಹೋಳು ಹೋಳಾಗಿ ಒಡೆದು ಹಾಕಿ, ನಮ್ಮ ಶಕ್ತಿಯ ಶಿಶುವನ್ನು ನಿತ್ಯ ವಧೆಗೈದು ನಮ್ಮಲ್ಲಿ ದೀನತೆ ಹೀನತೆಗಳು ಬೃಹದಾಕಾರವಾಗಿ ಬೆಳೆಯಲು ಕಾರಣವಾದವು. ಇದರಿಂದ ನಿರಂತರ ಶೋಷಣೆ ನಾನಾ ಮುಖದಲ್ಲಿ ವಿಜೃಂಭಿಸಿ ಈ ದೇಶದ ಅಂತಃ ಸತ್ಯವೇ ಸೋರಿ ಹೋಯಿತು. ಇಂಥ ಸಂದರ್ಭದಲ್ಲಿ ಬಸವಣ್ಣ ಸಂಘಟಿಸಿದ ಈ 'ಅನುಭವಮಂಟಪ' ಅಸಮತೆಯ ಈ ಮಹಾವೃಕ್ಷವನ್ನು ಸಮೂಲವಾಗಿ ಧ್ವಂಸಮಾಡಲು ಪ್ರಯತ್ನಿಸಿತು. ಬಸವಣ್ಣನವರ ಭಕ್ತಿ, ಮಾನವೀಯ ಅನುಕಂಪ, ಸರಳ ನಿರಾಡಂಬರದ ವ್ಯಕ್ತಿತ್ವ ಮನುಷ್ಯನ ಬಣ್ಣ ವೃತ್ತಿ ವೈಭವ ವಯಸ್ಸುಗಳನ್ನು ಗಣಿಸದೆ ಅವರಂತರಂಗದ ಗುಣವೊಂದನ್ನೇ ಅರಸುವ ಮನೋವೃತ್ತಿ, ಸಮಾಜ ಬದಲಾಗಬೇಕೆನ್ನುವ ಜ್ವಲಂತ ಕಳಕಳಿ, ಅದನ್ನು ನಿಜಜೀವನದಲ್ಲಿ ಸತತವಾಗಿ ಅಳವಡಿಸಿಕೊಂಡ ಕ್ರಿಯಾಶೀಲತೆಗಳನ್ನು ಕೇಳಿದ ಕರ್ನಾಟಕದ ಮಾತ್ರವಲ್ಲ, ಭಾರತದ ನಾನಾ ಮೂಲೆಗಳಿಂದ ಭಕ್ತರು ಜಿಜ್ಞಾಸುಗಳು ದನಿಯಿಲ್ಲದವರು ಅವರ ದರ್ಶನಕ್ಕಾಗಿ ಮಾರ್ಗದರ್ಶನಕ್ಕಾಗಿ ತಂಡೋಪತಂಡವಾಗಿ ಕಲ್ಯಾಣಕ್ಕೆ ಆಗಮಿಸಿದರು. ಈ 'ಅನುಭವಮಂಟಪ'ದಲ್ಲಿ ನೆರೆದು ತಮ್ಮ ಅನುಭವಗಳನ್ನು

ನಿಸ್ಸಂಕೋಚವಾಗಿ ಮಂಡಿಸಿದರು, ಇತರರ ಅನುಭವದ ಬೆಳಕಲ್ಲಿ ಮಿಂದರು. ಬುದ್ಧನ ನಂತರ ಮೊತ್ತ ಮೊದಲ ಬಾರಿಗೆ ಆಳು-ಒಡೆಯ, ಮೇಲುಜಾತಿ-ಕೀಳುಜಾತಿ, ಬಡವ-ಶ್ರೀಮಂತ, ಸ್ತ್ರೀ-ಪುರುಷ, ಜ್ಞಾನಿ-ಅಜ್ಞಾನಿ, ಅಕ್ಷರಸ್ಥ-ಅನಕ್ಷರಸ್ಥ ಎಂಬ ಯಾವುದೇ ಭೇದ ವಿಲ್ಲದೆ ಸರ್ವಸಮಾನ ಭಾವದಿಂದ ಪರಸ್ಪರ ಗೌರವಾದರಗಳಿಂದ ಜನ ಇಲ್ಲಿ ಸೇರಿದರು. ಬಟ್ಟೆ ಒಗೆಯುವ ಮಡಿವಾಳ ಮಾಚಯ್ಯ, ಬುಟ್ಟಿ ಹೆಣೆಯುವ ಮೇದಾರ ಕೇತಯ್ಯ, ಡೋಲು ಬಾರಿಸುವ ಡೋಹರ ಕಕ್ಕಯ್ಯ, ಸುಂಕವಸೂಲಿಗಾರ ಸುಂಕದ ಬಂಕಣ್ಣ, ದನಕಾಯುವ ತುರುಗಾ ರಾಮಣ್ಣ, ಅಕ್ಕಸಾಲಿಗ, ಕಿನ್ನರಿ ಬೊಮ್ಮಣ್ಣ, ಬೇಸಾಯದ ಒಕ್ಕಲು ಮುದ್ದಯ್ಯ, ಸೈನಿಕ ಬೋಧರ ಮಾದಣ್ಣ, ತೊಗಲು ಹದಮಾಡುವ ಡೋಹರ ಕಕ್ಕಯ್ಯ' ಎಕ್ಕಡ ಹೊಲೆಯುವ ಹರಳಯ್ಯ, ಮಾದಾರ ಚೆನ್ನಯ್ಯ, ತಳವಾರ ರಾಮದೇವ, ಗಾಣುಗ ಕನ್ನಯ್ಯ ವೈದ್ಯ ವೃತ್ತಿಯ ಸಂಗಯ್ಯ, ಬೇಡ ವೃತ್ತಿಯ ಕಿರಾತ ಸಂಗಯ್ಯ, ಹಗ್ಗ ಹೊಸೆ ಯುವ ಮಲಿಯ ಸಂದಯ್ಯ, ಸೂಜಿ ಕಾಯಕದ ರಾಮಿ ತಂದೆ, ಬಾಚಿ ಕಾಯಕದ ಬಸವಪ್ಪ, ಪಾತ್ರೆ ವ್ಯಾಪಾರಿ ಚಿಕ್ಕದೇವಯ್ಯ, ಸತ್ತಿಗೆ ಹಿಡಿಯುವ ರಾಮ ತಂದೆ, ಕನ್ನಡ ಕಾಯಕದ ಅಮ್ಮದೇವಯ್ಯ, ಹಕ್ಕಲು ಆರಿಸುವ ಆಯ್ದಕ್ಕಿ ಮಾರಯ್ಯ, ಕಟ್ಟಿಗೆ ಮಾರುವ ಮೋಳಿಗೆಯ ಮಾರಯ್ಯ, ಕರಣಿಕ ಸೊಡ್ಡಳ ಬಾಚರಸ, ನೂಲುವ ಕದಿರೆ ರೆಮವ್ವೆ, ಕುಟ್ಟುವ ಕಾಯಕದ ರೆಮವ್ವೆ ಹೀಗೆ ನೂರಾರು ವೃತ್ತಿ ಜಾತಿಗಳಿಗೆ ಸೇರಿದ ಜನ ಯಾವುದೇ ಭೇದವಿಲ್ಲದೆ ಒಂದೇ ವೇದಿಕೆಯಲ್ಲಿ ಸೇರಿ ತಮ್ಮ ಶತಮಾನಗಳ ಶಾಪವನ್ನು ಮರೆತು ಮುಕ್ತವಾಗಿ ತಮ್ಮ ವಿಚಾರಗಳನ್ನು ಚರ್ಚಿಸಲು ಅಪೂರ್ವ ಅವಕಾಶವನ್ನು ಒದಗಿಸಿದರು. ಬಸವಣ್ಣ ಈ ವೇದಿಕೆಯ ಮೂಲಕ ಇಲ್ಲಿ ವಿವಿಧ ವಯಸ್ಸಿನ ವಿವಿಧ ಅಂತಸ್ತಿನ ಜನ ರಿದ್ದರು. ರಾಜಭೋಗಗಳನ್ನು ತೊರೆದು ಬಂದಿದ್ದ ಕಲ್ಲು ಕುರಿಕೆಯ ಅರಸರ ಸಕಲೇಶ ಮಾದರಸ, ರಾಜ್ಯ ತ್ಯಾಗ ಮಾಡಿ ಕಟ್ಟಿಗೆ ಮಾರಿ ಜೀವಿಸುತ್ತಿದ್ದ ಕಾಶ್ಮೀರದ ಅರಸು ಮೋಳಿಗೆಯ ಮಾರಯ್ಯನಂಥವರೂ ಇಲ್ಲಿದ್ದರು. ಬಸವಣ್ಣ, ಪ್ರಭುದೇವ, ಚೆನ್ನಬಸವಣ್ಣ-ಮುಂತಾದ ಮಹಾಮೇಧಾವಿಗಳ ಭಕ್ತಿ ಮೇರುಗಳ ಅಕ್ಕಪಕ್ಕದಲ್ಲಿ ಕುಳಿತು ಚರ್ಚಿಸುವ ಚಿಂತಿಸುವ ನಿವೇದಿಸುವ ಸಲಹೆ ನೀಡುವ ಪರಿಹಾರ ಕಂಡುಕೊಳ್ಳುವ ಅಸದೃಶ ಅವಕಾಶ ಇದಾಗಿತ್ತು.

ಇಷ್ಟೇ ಅಲ್ಲ, ಪುರುಷ ಪ್ರಧಾನವಾದ ಈ ನಾಡಿನಲ್ಲಿ ಇಂದಿಗೂ ಕೆಲವು ಪ್ರದೇಶ ಗಳಲ್ಲಿ ಸ್ತ್ರೀಯರಿಗೆ ಪ್ರವೇಶ ನಿಷೇಧವಿರುವಾಗ, ಶರಣರ ಕಾಲದಲ್ಲಿ ಪುರುಷರಂತೆ ಸ್ತ್ರೀಯರೂ ಯಾವ ಮುಜುಗರವೂ ಇಲ್ಲದೆ 'ಅನುಭವಮಂಟಪ'ದಲ್ಲಿ ಕುಳಿತು ವಿಚಾರ ವಿನಿಮಯ ನಡೆಸುವ ಸ್ವಾತಂತ್ರ್ಯ ಸಮಾನತೆಗಳನ್ನು ಪ್ರಥಮ ಬಾರಿಗೆ ನೀಡಿದ ಶ್ರೇಯಸ್ಸು ಕೂಡ ಬಸವಣ್ಣನವರದು. ಇದರ ಪರಮ ಫಲವೇ ಅಕ್ಕಮಹಾದೇವಿ, ನೀಲಾಂಬಿಕೆ, ಮುಕ್ತಾಯಕ್ಕ, ಸತ್ಯಕ್ಕ, ಆಯ್ದಕ್ಕಿ, ಲಕ್ಕಮ್ಮ, ಸೂಳೆ ಸಂಕವ್ವೆ, ಹಾದರ ಗಂಗಮ್ಮ, ಕೊಟ್ಟಣದ ಸೋಮವ್ವ, ಕದರಿ ಕಾಯಕದ ಕಾಳವ್ವೆ, ಕನ್ನಡಿ ರೇವಮ್ಮ, ಸುವರ್ಣದೇವಿ,

ಲಕ್ಷ್ಮಮ್ಮ, ಲಿಂಗಮ್ಮ, ರೊಚವಮ್ಮ, ವೀರಮ್ಮ, ಗೊಗ್ಗವ್ವ, ಮಸಣಮ್ಮ, ಗಂಗಾಂಬಿಕೆ, ಗುಡ್ಡವ್ವ, ಅಕ್ಕನಾಗಾಯಿ, ಬೊಂತಾದೇವಿ ಮುಂತಾದ ವಿವಿಧ ಕಾಯಕದ ಶರಣೆಯರು ಭಕ್ತಿ ಜ್ಞಾನ ವೈರಾಗ್ಯ ವಿಚಾರಗಳಲ್ಲಿ ಪ್ರರುಷಮಾನರಾಗಿ ತಮ್ಮ ವ್ಯಕ್ತಿತ್ವವನ್ನು ವರ್ಧಿಸಿ ಕೊಂಡದ್ದು ಹೀಗಾಗಿ 'ಅನುಭವ ಮಂಟಪ' ಭಾರತದ ಪ್ರಪ್ರಥಮ ಸಮತಾ ವೇದಿಕೆಯಾಗಿ ಪರಿಣಮಿಸಿತು.

ಆಧುನಿಕ ಅರ್ಥದಲ್ಲಿ ಕೂಡ 'ಅನುಭವ ಮಂಟಪ' ಒಂದು ಯಶಸ್ಸು ವಿಚಾರ ವೇದಿಕೆಯಾಗಿ ಅದ್ಭುತ ಕಾರ್ಯ ನಿರ್ವಹಿಸಿದೆ. ಭಕ್ತಿ, ಜ್ಞಾನ, ವೈರಾಗ್ಯಳಂತಹ ವಿಚಾರ ಗಳನ್ನು ಮಾತ್ರವಲ್ಲದೆ, ಸಮಾಜವನ್ನು ಕೊರೆದು ತಿನ್ನುತ್ತಿದ್ದ ಜಾತಿಗಳ ಬಗ್ಗೆ, ವ್ಯಕ್ತಿ ತಾರತ ಮಟ್ಟದ ಬಗ್ಗೆ, ಆರ್ಥಿಕ ವಿಚಾರಗಳ ಬಗ್ಗೆ, ಸಂಪ್ರದಾಯಗಳ ಬಗ್ಗೆ ವ್ಯಕ್ತಿಯ ಶ್ರೇಷ್ಠತೆ ಕನಿಷ್ಠತೆಯು ಬಗ್ಗೆ ನಡೆ–ನುಡಿಗಳ ಬಗ್ಗೆ, ಮನುಷ್ಯನ ಸಣ್ಣತನ–ದೊಡ್ಡತನಗಳ ಬಗ್ಗೆ–ಒಟ್ಟಿನಲ್ಲಿ ಮಾನವ ಸಮಾಜದ ಸರ್ವತೋಮುಖ ಪುರೋಭಿವೃದ್ಧಿಗೆ ಸಂಬಂಧಿಸಿದ ಎಲ್ಲ ವಿಚಾರಗಳ ಬಗ್ಗೆ ಇಲ್ಲಿ ಮುಕ್ತ ಮನಸ್ಸಿನ ಚರ್ಚೆ ನಡೆಯುತ್ತಿತ್ತು. ಬಸವಣ್ಣ, ಪ್ರಭುದೇವರ ಪರಿಣತ ಪ್ರಜ್ಞೆಯ ಮಾರ್ಗದರ್ಶನ ಇಲ್ಲಿ ಎಂಥವರಿಗೂ ದೊರೆಯುತ್ತಿತ್ತು. ವ್ಯಕ್ತಿಗಳ ಅಂತರಂಗ ಬಹಿರಂಗ ಶುದ್ಧಿಯ ಬಗ್ಗೆ ಕ್ಲಿಷ್ಟ ಪರೀಕ್ಷೆಗಳು ಇಲ್ಲಿ ನಡೆಯು ತ್ತಿದ್ದವು. ಮಹಾದೇವಿಯಕ್ಕನನ್ನು ಪ್ರಭು ಪರೀಕ್ಷಿಸಿದ ಬಗೆ ಕೇವಲ ಒಂದು ನಿದರ್ಶನ ಮಾತ್ರ ವಿವಿಧ ರೀತಿಯ ಅನುಭವದ ವ್ಯಕ್ತಿಗಳ ಸಮಾವೇಶವಾಗಿದ್ದ ಈ ಅನುಭವ ಮಂಟಪದಲ್ಲಿ ವಿಚಾರ ಸ್ವಾತಂತ್ರ್ಯಕ್ಕೆ ಮುಕ್ತ ಅವಕಾಶವಿತ್ತು. ಸಂಪ್ರದಾಯ ವಿರೋಧಿ ಗಳಿದ್ದಂತೆ ಸಂಪ್ರದಾಯಪರರೂ ಇದ್ದರು. ಲಿಂಗಕ್ಕಿಂತ ಜಂಗಮ ಶ್ರೇಷ್ಠರೆಂದು ವಾದಿಸುವ ವರಿದ್ದಂತೆ, ಜಂಗಮಕ್ಕಿಂತ ಲಿಂಗ ಶ್ರೇಷ್ಠವೆಂದು ವಾದಿಸುವವರೂ; ಭಕ್ತಿ ಶ್ರೇಷ್ಠವೆಂದು ವಾದಿಸುವವರಿದ್ದಂತೆ, ಜ್ಞಾನ ಶ್ರೇಷ್ಠವೆಂದು ವಾದಿಸುವವರೂ ಇದ್ದರು. ಈ ಎಲ್ಲ ಸಂಗತಿ ಗಳೂ ಚರ್ಚಿತವಾಗಿರುವುದನ್ನು ವಚನಗಳು ಪ್ರತಿಪಾದಿಸುತ್ತವೆ. ಇಲ್ಲಿ ಚರ್ಚೆಗಳು ನಡೆದು ನಿರ್ಣಯಗಳಾದ ನಂತರ ಶರಣರು ಅವುಗಳನ್ನು ಸಾರ್ವತ್ರಿಕವಾಗಿ ಅನುಷ್ಠಾನದಲ್ಲಿ ತರು ತ್ತಿದ್ದರು. ಹೀಗೆ ದೇವರು, ಧರ್ಮ, ಭವಿ–ಭಕ್ತ, ಲಿಂಗ–ಜಂಗಮ, ಅಂತರಂಗ, ಬಹಿ ರಂಗ, ಜಾತಿ–ಅಂತಸ್ತು, ಸಂಪಾದನೆ–ಸೇವೆ, ಆಚಾರ–ವಿಚಾರ, ಶಾಸ್ತ್ರ–ಪುರಾಣ, ಕಾಯಕ–ಪೂಜೆ, ಭಾಷೆ–ಸಾಹಿತ್ಯ ಮುಂತಾದ ಹಲವು ಹತ್ತು ಸಂಗತಿಗಳು ಇಲ್ಲಿ ತೀವ್ರವಾದ ಕ್ಲಿಷ್ಟ ವಾದ ಜಿಜ್ಞಾಸೆಗೆ ಒಳಗಾಗುತ್ತಿದ್ದವು. ಅನುಭವ ಮಂಟಪದಲ್ಲಿ ಚರ್ಚಿತವಾಗಿ ಮೂರ್ತ ಗೊಂಡ ಅಪೂರ್ವ ವಿಚಾರಕ್ರಾಂತಿ ಅಂದಿನ ಸಮಾಜದ ಸಮಗ್ರ ಕ್ರಾಂತಿಗೆ ಕಾರಣ ವಾಯಿತು. ಹರಳಯ್ಯನ ಮಗ ಮತ್ತು ಮಧುವರಸರ ಮಗಳ ಅತ್ಯಂತ ವಿವಾದಾಸ್ಪದ ವಾದ ದಿಟ್ಟ ನಿರ್ಧಾರ ಕೂಡ ಈ ಅನುಭವ ಮಂಟಪದಲ್ಲೇ ಆಗಿರಬೇಕು. ಉರಿಲಿಂಗ ಪೆದ್ದಿಯಂತಹ ಅಸ್ಪೃಶ್ಯನೊಬ್ಬನನ್ನು ಮಠಾಧಿಪತಿಯನ್ನಾಗಿ ಮಾಡುವ ಅಪೂರ್ವ ಕ್ರಾಂತಿಕಾರಕ ನಿರ್ಧಾರ ಕೂಡ ಇಲ್ಲಿಂದಲೇ ರೂಪಿತವಾದದ್ದು. ಹೀಗೆ ಅನುಭವ ಮಂಟಪ

ನಿಜವಾದ ಸಾರ್ಥಕವಾದ ಅರ್ಥದಲ್ಲಿ ಒಂದು ಯಶಸ್ವಿ ಮತ್ತು ಕ್ರಾಂತಿಕಾರಕ ವಿಚಾರ ವೇದಿಕೆಯಾಗಿತ್ತು. ಇಂಥ ವಿಚಾರ ಮರೆಯಬಾರದ ವಿನಿಮಯ ನಡೆಯುತ್ತಿತ್ತೆಂದು ನಿರೂಪಿಸುವ ಒಂದು ವಚನವಿದು: ಪ್ರಭುವಿನ ವಾದದಿಂದ ವೈರಾಗ್ಯಸಂಪತ್ತು, ಬಸವನ ವಾದದಿಂದ, ಭಕ್ತಿಯ ಸಂಪತ್ತು, ಚೆನ್ನಬಸವನ ವಾದದಿಂದ ಶಿವಪ್ರಸಾದದ ಸಂಪತ್ತು, ಮಡಿವಾಳಯ್ಯನ ವಾದದಿಂದ ಜ್ಞಾನದ ಸಂಪತ್ತು, ಸಕಲೇಶನ ವಾದದಿಂದ ಶಾಂತಿಯ ಸಂಪತ್ತು, ಮೋಳಿಗೆಯ್ಯನ ವಾದದಿಂದ ದಾಸೋಹದ ಸಂಪತ್ತು, ನೀಲಮ್ಮನ ವಾದದಿಂದ ಲಿಂಗಪೂಜೆಯ ಸಂಪತ್ತು, ನಾಗಮ್ಮನ ವಾದದಿಂದ ಮಹತ್ವದ ಸಂಪತ್ತು ಇದು ಕಾರಣ ಕಿನ್ನರ ತ್ರಿಪುರಾವರ ಲಿಂಗಸಾಕ್ಷಿಯಾಗಿ ಪ್ರಮಥರ ನುಡಿಯಲ್ಲಿ ಬೇಸರಬರದು.

ಈ ಅನುಭವ ಮಂಟಪ ಸಮತಾವೇದಿಕೆ ಮತ್ತು ವಿಚಾರ ವೇದಿಕೆಯ ಮಾತ್ರ ವಲ್ಲದೆ ಒಂದು ಕಾವ್ಯ ಕಮ್ಮಟವೂ ಆಗಿತ್ತೆಂಬುದು ನಾವು ಮರೆಯಬಾರದ ಸಂಗತಿಯಾಗಿದೆ. ಶರಣರಲ್ಲಿ ಅಕ್ಷರವಿದ್ದೂ ವಿದ್ಯಾವಂತರೂ ಇದ್ದಂತೆ, ಅನಕ್ಷರಸ್ಥರೂ ಅವಿದ್ಯಾವಂತರೂ ಇದ್ದರು. ಬಸವಣ್ಣ, ಚನ್ನಬಸವಣ್ಣ, ಪ್ರಭುದೇವ ಮುಂತಾದವರು ನಾವು ಮನೆಯಲ್ಲಿ ಬಗೆದಿರಬಹುದಾಗಿದ್ದ ತಮ್ಮ ಅನುಭವ ವಿಚಾರಗಳನ್ನು ಗಮವಾದ ವಚನಗಳನ್ನು ಸಭೆ ಯಲ್ಲಿ ಓದುತ್ತಿದ್ದರೆಂದು ಕಾಣುತ್ತದೆ. ಹಾಗೆಯೇ ಸಹಜ ಪ್ರತಿಭೆಯ ಅವರು ಸಮಯ ಸ್ಫೂರ್ತಿಯಿಂದ ಸಹ ಭಾವಪೂರ್ಣವಾಗಿ ಕಾವ್ಯಮಯವಾಗಿ ತಮ್ಮ ಅನಿಸಿಕೆಗಳನ್ನು ಮಂಡಿಸುತ್ತಿದ್ದರು. ಈ ವಚನಗಳ ಅತ್ಯಂತ ಸರಳವೂ ಸಹಜವೂ ಆಕರ್ಷಕವೂ ಆದ ಭಾಷೆ, ನಿರೂಪಣೆಯ ನಾವೀನ್ಯ ನಿತ್ಯ ಪರಿಚಿತವೆನಿಸುವ ಉಪಮೆ ರೂಪಕಗಳ ವಿಶೇಷತೆ, ವಾದ ನಿರೂಪಣೆಯ ಸೊಗಸು ಆ ಅನುಭವ ಮಂಟಪದಲ್ಲಿ ಸಮಾವೇಶಗೊಂಡಿದ್ದ ಹಲವಾರು ಅನುಭವ ಶ್ರೀಮಂತರ ಪ್ರತಿಭಾಶೀಲದ ಮನಸ್ಸನ್ನು ಸೆರೆಹಿಡಿದು ಅವರ ಅಂತಃಶಕ್ತಿಯನ್ನು ಪ್ರಚೋದಿಸಿರಬೇಕು. ತಾವು ಮಂಡಿಸುವ ವಿಚಾರಗಳನ್ನು ಶುಷ್ಕವಾಗಿ ವಿಧ್ಯಾಮತವಾಗಿ ಹೇಳುವುದಕ್ಕಿಂತ ಹೀಗೆ ಭಾವಪೂರ್ಣವಾಗಿ ವಿಶಿಷ್ಟ ನುಡಿಗಳನಲ್ಲಿ ನಿರೂಪಿಸಿದಾಗ ಅದು ಕೇಳುಗರ ಮನದಲ್ಲಿ ವಿಶಿಷ್ಟ ಪರಿಣಾಮವುಂಟು ಮಾಡುತ್ತದೆ. ಆಳವಾಗಿ ಅಚ್ಚೊತ್ತುತ್ತದೆ. ಅಯ್ಯ ಅಲ್ಲ, ಆ ಮಾತುಗಳನ್ನು ಮತ್ತೆ ಮತ್ತೆ ಕೇಳಬೇಕೆನಿಸು ವಂತೆ ಮಾಡುತ್ತದೆ ಎಂದು ಅವರಿಗನಿಸಿರಬೇಕು. ಇಂಥ ಪ್ರಚೋದನಕಾರಿಯಾದ ಪರಿಸರ ದಲ್ಲಿ ತಾವೂ ಸಾಧ್ಯವಾದಷ್ಟು ಸರಳ ಮಾತಿನಲ್ಲಿ ವಿಶಿಷ್ಟಲಯದಲ್ಲಿ, ತಮ್ಮ ತಮ್ಮ ಕಾಯಕ ಮತ್ತು ಜೀವನಾನುಭವಕ್ಕೆ ಸಂಬಂಧಿಸಿದ ಭಾಷೆಯಲ್ಲಿ ತಮ್ಮ ವಿಚಾರಗಳನ್ನು ಕಾವ್ಯಮಯವಾಗಿ ಅಭಿವ್ಯಕ್ತಿಸತೊಡಗಿದರೆಂದು ಕಾಣುತ್ತದೆ. 'ಶೂನ್ಯ ಸಂಪಾದನೆ'ಯ ನಿರ್ಮಾಣ ಇಂಥದೊಂದು ಊಹೆಗೆ ಆಧಾರವನ್ನು ಒದಗಿಸುತ್ತದೆ. ವಿಚಾರ ಮಂಡನೆ ಯಲ್ಲಿ, ಭಾಷೆಯ ಬಳಕೆಯಲ್ಲಿ,ತಮ್ಮ ವಲಯಕ್ಕೆ ಸೇರಿದ ಸಂಗತಿಗಳನ್ನು ಉಪಮೆ ರೂಪಕ ಗಳಾಗಿ ನಿರ್ಮಿಸುವಲ್ಲಿ, ಅದರಲ್ಲಿ ತಮ್ಮ ವ್ಯಕ್ತಿತ್ವದ ತೇಜಸ್ಸು ಓಜಸ್ಸ್ಸುಗಳನ್ನು ತುಂಬು ವುದರಲ್ಲಿ ಅನುಭವ ಮಂಟಪದಲ್ಲಿನ ವಾತಾವರಣ ಅವರಿಗೆ ಸ್ಫೂರ್ತಿಯನ್ನು ತರಬೇತಿ

ಯನ್ನು ನೀಡಿತು. ಆದ್ದರಿಂದ ವೈವಿಧ್ಯಮಯವಾದ ಸತ್ಯಪೂರ್ಣವಾದ ವಚನಗಳ ಅರ್ಥಾತ್ ಸಾಹಿತ್ಯದ ರಚನೆಗೆ ಇದು ಪ್ರೇರಣೆಯನ್ನು ಒದಗಿಸಿತು. ಇದರಿಂದ ಸಂಸ್ಕೃತ ವ್ಯಾಮೋಹಕ್ಕೆ ಸಿಕ್ಕಿ ತನ್ನತನವನ್ನು ಕಳೆದುಕೊಂಡಿದ್ದ ಕನ್ನಡ ಈ ಅನುಭವ ಮಂಟಪದ ಸ್ಫೂರ್ತಿಯ ಬೆಳಕಿನಲ್ಲಿ ತನ್ನ ಮೂಲ ಸತ್ಯ ಕಾಯಕಗಳನ್ನು ಗುರುತಿಸಿಕೊಂಡಿತು. ಆದ್ದರಿಂದ ಸಾಹಿತ್ಯ ಜನಮನಕ್ಕೆ ಹತ್ತಿರವಾಯಿತು. ಮುಂದೆ ಹರಿಹರ ರಾಘವಾಂಕ ಮುಂತಾದ ಶ್ರೇಷ್ಠ ಕವಿಗಳಿಗೆ ಪ್ರೇರಣೆಯನ್ನು ನೀಡಿ ನಮ್ಮ ಸಾಹಿತ್ಯ ಸೋತ ನವನವೀನವೂ ಶಕ್ತಿಶಾಲಿಯೂ ಆಗುವಂತೆ ಮಾಡಿತು. ದಲಿತ ಮತ್ತು ಮಹಿಳಾ ಸಾಹಿತ್ಯ ಸೃಷ್ಟಿಯು ತಲಕಾವೇರಿಯಾಗಿ, ಬಂಡಾಯ ಸಾಹಿತ್ಯದ ಮೊದಲ ಕಾರ್ಯಾಗಾರವಾಗಿ 'ಅನುಭವ ಮಂಟಪ' ಬಸವಣ್ಣನವರ ಗುರಿ ಮೀರಿ ಯಶಸ್ವಿಯಾಯಿತು.

ಹೀಗೆ ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪ ಒಂದು ಸಮತಾವೇದಿಕೆಯಾಗಿ, ವಿಚಾರ ವೇದಿಕೆಯಾಗಿ, ಕಾವ್ಯಕಮಾಶವಾಗಿ, ಜನರ ಜ್ಞಾನವನ್ನು ಉತ್ತರಿಸುವ ವಿವಿಧ ವಿಷಯಗಳ ವಿಶ್ವವಿದ್ಯಾನಿಲಯವಾಗಿ, ಆ ಶತಮಾನದ ಕನ್ನಡ ಜನತೆಯನ್ನು ಅತ್ಯಂತ ಅಪೂರ್ವವಾದ ಕ್ರಾಂತಿಯೊಂದಕ್ಕೆ ಸಿದ್ಧಗೊಳಿಸಿದ ಮಹಾಪ್ರಯೋಗಶಾಲಿಯಾಗಿ ಪರಿಣಮಿಸಿ ನಮ್ಮ ನಾಡಿನ ಇತಿಹಾಸದಲ್ಲಿ ಮಹತ್ವಪೂರ್ಣ ಸ್ಥಾನವನ್ನು ಪಡೆದುಕೊಂಡಿದೆ.

# ವೀರಶೈವ ಮಠಗಳ ಹಿನ್ನೆಲೆ

—ಡಾ. ಬಿ. ವಿ. ಮಲ್ಲಾಪೂರ

(೧)

ಕರ್ನಾಟಕದ ಉದ್ದಗಲಕ್ಕೂ ಹಬ್ಬಿಕೊಂಡಿರುವ ಬಹುತೇಕ ಎಲ್ಲ ಹಳ್ಳಿ ಪಟ್ಟಣಗಳಲ್ಲಿಯೂ ಒಂದಿಲ್ಲೊಂದು ವೀರಶೈವ ಮಠ, ಅದು ಗುರುಸ್ಥಲ ಮಠವಿರಬಹುದು, ಇಲ್ಲವೆ ವಿರಕ್ತಮಠವಿರಬಹುದು, ಅಸ್ತಿತ್ವದಲ್ಲಿದೆ ಕೆಲವು ಊರುಗಳಲ್ಲಿ ಒಂದಕ್ಕಿಂತ ಹೆಚ್ಚು ವೀರಶೈವ ಮಠಗಳಿರುವುದೂ ಉಂಟು. ಕರ್ನಾಟಕಕ್ಕೆ ಹೊಂದಿಕೊಂಡಿರುವ ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರಗಳಲ್ಲಿಯೂ ಹಲವಾರು ವೀರಶೈವ ಮಠಗಳಿವೆ. ತಮಿಳುನಾಡು ಕೂಡ ಇದಕ್ಕೆ ಹೊರತಲ್ಲ. ಇನ್ನು ಉತ್ತರ ಭಾರತದ ಕೇದಾರ ಕಾಶಿಯಂತಹ ಕೆಲವು ಪವಿತ್ರ ಕ್ಷೇತ್ರಗಳಲ್ಲಿಯೂ ವೀರಶೈವ ಮಠಗಳಿರುವುದನ್ನು ಕಾಣಬಹುದು. ಪ್ರಾಯಶಃ ವೀರಶೈವ ಮಠಗಳಿರುವಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಬೇರಾವ ಧರ್ಮದ ಮಠಗಳೂ ಇಲ್ಲವೆಂದು ನನ್ನ ಅನಿಸಿಕೆ.

ವೀರಶೈವ ಮಠಗಳ ಮುಖ್ಯ ಉದ್ದೇಶ ಮೂಲತಃ ಒಂದೇ ಆಗಿದ್ದರೂ ಅವು ನಿರ್ವಹಿಸುವ ಕ್ರಿಯಾಭೇದದಿಂದ ಅವುಗಳನ್ನು ಗುರುಸ್ಥಲದ ಮಠಗಳು ಮತ್ತು ವಿರಕ್ತಮಠಗಳೆಂದು ವಿಂಗಡಿಸಲಾಗಿದೆ. ಗುರುಸ್ಥಲ ಮಠಗಳು ಪಂಚಪೀಠಗಳಿಗೆ ಸಂಬಂಧಿಸಿದವುಗಳಾದರೆ, ವಿರಕ್ತಮಠಗಳು ಬೇರೆ ಬೇರೆ ಸಮಯಗಳಿಗೆ ಸಂಬಂಧಿಸಿದವುಗಳಾಗಿವೆ.

ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠವು ಕುಮಾರಸಮಯಕ್ಕೆ ಶ್ರೀಕಾರ ಹಾಕಿದ ಒಂದು ಮಹತ್ವದ ಮಠವಾಗಿದೆ. ಇದು ಶ್ರೀಮಠದ ಪ್ರಾಚೀನತೆಯತ್ತ ಬೆರಳು ತೋರಿಸುತ್ತದೆ. ಜಂಗಮಪುಂಗವರಾದ ಕರ್ತೃ ಶ್ರೀ ಗುರುಸಿದ್ಧೇಶ್ವರರಿಂದ ಮೊದಲುಗೊಂಡು ಪ್ರಸ್ತುತ ಜಗದ್ಗುರುಗಳಾಗಿರುವ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರೆಗೆ ಹಲವಾರು ಜನ ಶ್ರೀಗಳು ಜಗದ್ಗುರು ಪೀಠವನ್ನಲಂಕರಿಸಿದ್ದಾರೆ. ಮೊದಲಿನಿಂದಲೂ ವ್ಯಷ್ಟಿ-ಸಮಷ್ಟಿಗಳ ಹಿತಸಾಧನೆಗಾಗಿ ಹಲವಾರು ಸತ್ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಜಗದ್ಗುರುಗಳಿಂದಾಗಿ ಮೂರುಸಾವಿರಮಠವು ಜನಮನದಲ್ಲಿ ಚಿರಸ್ಥಾಯಿಯಾದ ಸ್ಥಾನ-ಮಾನಗಳನ್ನು ಗಳಿಸಿದೆ. ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಈ ಮಠದ ಐವತ್ತನೆಯ ಪೀಠಾಧಿಕಾರಿಗಳು. ಇವರು ಮಹಾಮಠದ ಕರ್ಣಧಾರತ್ವ ವಹಿಸಿಕೊಂಡ ಮೇಲೆ ಅದಕ್ಕೊಂದು ಹೊಸ ಬಗೆಯ ಆಯಾಮ ಪ್ರಾಪ್ತವಾಗಿದೆ. ಶ್ರೀಮಠದ ಕಾರ್ಯವ್ಯಾಪ್ತಿ ವಿಸ್ತರಿಸಿರುವ ಜೊತೆಗೆ

ಅದು ನಾವೀನ್ಯಪೂರ್ಣವೂ, ವೈವಿಧ್ಯಮಯವೂ ಆಗಿದೆ. ಶ್ರೀಮಠದ ಉತ್ಕರ್ಷ ಮತ್ತು ಸಮಾಜೋದ್ಧಾರ ಎರಡೂ ಸಾಧ್ಯವಾಗುವಂತೆ ಹೊಸ ಹೊಸ ಯೋಜನೆಗಳನ್ನು ರೂಪಿಸು ವಲ್ಲಿ, ಅವುಗಳನ್ನು ಕಾರ್ಯಗತಗೊಳಿಸುವಲ್ಲಿ ಪೂಜ್ಯ ಜಗದ್ಗುರುಗಳವರು ತೋರಿರುವ ಬುದ್ಧಿಮತ್ತೆ ಮತ್ತು ಅಪಾರ ಪರಿಶ್ರಮಗಳು ಅನುಕರಣೀಯ. ಅದರ ಫಲವಾಗಿ 'ಪರಂಜ್ಯೋತಿ' ಮಾಸಪತ್ರಿಕೆ ತನ್ನ ಹೊಂಬೆಳಕನ್ನು ಬೀರಲಾರಂಭಿಸಿತು. 'ವೀರಶೈವ ಭಾರತಿ' ಮತ್ತು 'ಮೂರು ಸಾವಿರ ಗ್ರಂಥ ಮಾಲೆ' ಇವುಗಳ ಮೂಲಕ ತಿಳಿಗನ್ನಡದಲ್ಲಿ ರಚಿತವಾದ ಹಲವಾರು ವೀರಶೈವ ಶರಣ-ಶರಣೆಯರ ಚರಿತ್ರೆಗಳು, ಸಾಹಿತ್ಯ ಕೃತಿಗಳು, ಆಧ್ಯಾತ್ಮಿಕ ಗ್ರಂಥಗಳು, ವಚನ ಸಂಕಲನಗಳು, ವೀರಶೈವ ತತ್ವವಿವೇಚನೆ ಮತ್ತು ಸಾಹಿತ್ಯ ವಿಮರ್ಶೆಯನ್ನೊಳಗೊಂಡ ಮೌಲಿಕ ಗ್ರಂಥಗಳು ನೂರಾರು ಸಂಖ್ಯೆಯಲ್ಲಿ ಪ್ರಕಟಗೊಳ್ಳ ಲಾರಂಭಿಸಿದವು. 'ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರ'ಗಳನ್ನು ವ್ಯವಸ್ಥೆಗೊಳಿಸಿದ ಫಲವಾಗಿ ಹಳ್ಳಿ-ಪಳ್ಳಿ, ನಗರ-ಪಟ್ಟಣಗಳಲ್ಲಿಯ ಶ್ರೀ ಸಾಮಾನ್ಯರಿಗೂ ಕೂಡ ವೀರಶೈವ ಸಂಸ್ಕೃತಿಯ ವಿವಿಧ ಮಗ್ಗಲುಗಳನ್ನು ತಿಳಿದುಕೊಳ್ಳುವ ಸದವಕಾಶ ಒದಗಿಬಂತು. 'ಕನ್ನಡ ಗ್ರಂಥಗಳಿಗೆ ಪುರಸ್ಕಾರ' 'ವೀರಶೈವ ಗ್ರಂಥಗಳಿಗೆ ವಿಶೇಷ ಪುರಸ್ಕಾರ'-ಇಂತಹ ಹೊಸ ಹೊಸ ಯೋಜನೆಗಳು ಕನ್ನಡ ವಿದ್ವತ್ ಪ್ರಪಂಚಕ್ಕೆ ಪ್ರೋತ್ಸಾಹಕರ ಪರಿಸರವನ್ನು ನಿರ್ಮಿಸಿದವು.

ಇವೆಲ್ಲವುಗಳಿಗೆ ಕಲಶವಿಟ್ಟಂತೆ ಪೂಜ್ಯ ಜಗದ್ಗುರುಗಳವರು ಯಶಸ್ವೀ ರೀತಿಯಲ್ಲಿ ಪೂರೈಸಿದ ಒಂದು ಸ್ಮರಣಾರ್ಹ ಕಾರ್ಯವೆಂದರೆ, ಹುಬ್ಬಳ್ಳಿ ನಗರದ ಹಿಂದೂ ಮುಸ್ಲಿಂ ಜನಾಂಗಗಳಲ್ಲಿ ಏನಕೇನ ಕಾರಣ ಭುಗಿಲೆದ್ದ ಜಾತಿ ದ್ವೇಷದ ವಿನಾಶಕಾರಿ ದಳ್ಳುರಿಯನ್ನು ಶಾಂತಗೊಳಿಸಿ ಎರಡೂ ಪಂಗಡದವರು ಒಂದಾಗಿ ಸಹಬಾಳುವೆ ನಡೆಸುವಂತಹ ವಾತಾ ವರಣವನ್ನು ನಿರ್ಮಿಸುವಲ್ಲಿ ಯಶಸ್ವಿಯಾದುದು. ಹುಬ್ಬಳ್ಳಿಯ ಇತಿಹಾಸದಲ್ಲಿ ಇದೊಂದು ಮರೆತರೂ ಮರೆಯಲಾಗದ ಅಪೂರ್ವ ಘಟನೆ. ವೀರಶೈವರನ್ನೊಳಗೊಂಡು ಹುಬ್ಬಳ್ಳಿಯ ಸಮಸ್ತ ಹಿಂದೂ ಹಾಗೂ ಮುಸ್ಲಿಂ ಜನಾಂಗದವರಲ್ಲಿ ಪೂಜ್ಯ ಜಗದ್ಗುರುಗಳವರ ಮಾತಿಗೆ ಬೆಲೆ ಇರುವುದರ ದ್ಯೋತಕವಿದು. ಹುಬ್ಬಳ್ಳಿಯ ಎಲ್ಲ ಮತ, ಪಂಥ, ಧರ್ಮಗಳ ಅನುಯಾಯಿಗಳು, ವಿವಿಧ ಸಾಮಾಜಿಕ ಸಾಂಸ್ಕೃತಿಕ ಸಂಘ-ಸಂಸ್ಥೆಗಳು ತಮ್ಮ ತಮ್ಮ ಕಾರ್ಯಗಳನ್ನು ಸಾಮಾನ್ಯವಾಗಿ ಪೂಜ್ಯ ಶ್ರೀಗಳವರ ಸನ್ನಿಧಿಯಲ್ಲಿಯೆ ನೆರವೇರಿಸು ವುದನ್ನು ಕಂಡಾಗ, ಶ್ರೀಗಳವರು ಹುಬ್ಬಳ್ಳಿಯ ಸಮಸ್ತ ಜನಜೀವನದ ಒಂದು ಅವಿಭಾಜ್ಯ ಅನಿವಾರ್ಯ ಮಹತ್ವಪೂರ್ಣ ಅಂಗವಾಗಿ ಬೆಳೆದಿರುವುದು, ಬೆಳೆಯುತ್ತಿರುವುದು ಮನವರಿಕೆ ಯಾಗುತ್ತದೆ. ಈ ಬಗೆಯ ಮಹತ್ವದ ಪ್ರಭಾವ ಮುದ್ರೆಯನ್ನು ಹುಬ್ಬಳ್ಳಿಯ ಸಮಸ್ತ ನಾಗರಿಕರ ಹೃನ್ಮನಗಳ ಮೇಲೆ ಅಚ್ಚೊತ್ತಿದ ಉದಾಹರಣೆಗಳು ಇವರಿಗಿಂತ ಪೂರ್ವದ ಶ್ರೀಮಠದ ಜಗದ್ಗುರುಗಳಲ್ಲಿ ಬಹಳ ವಿರಳ.

ಸಮಾಜ ಸೇವೆಯನ್ನೇ ಲಿಂಗಪೂಜೆ ಎಂದು ಭಾವಿಸಿ, ಸಮಾಜೋದ್ಧಾರಕ್ಕಾಗಿಯೆ

ತಮ್ಮನ್ನು ತಾವು ಅರ್ಪಿಸಿಕೊಂಡ ಲಿಂ. ಹಾನಗಲ್ಲ ಕುಮಾರ ಮಹಾಸ್ವಾಮಿಗಳವರಿಂದ ಸ್ಥಾಪನೆಗೊಂಡ ಶ್ರೀ ಶಿವಯೋಗಮಂದಿರದ ಕಮ್ಮಟದಲ್ಲಿ ಸಿದ್ಧವಾಗಿ ಚಲಾವಣೆಗೆ ಬಂದ ಚೊಕ್ಕ ಚಿನ್ನದ ನಾಣ್ಯ ಇಂದಿನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು. ಲಿಂ. ಕುಮಾರ ಸ್ವಾಮಿಗಳವರ ಆದರ್ಶಗಳನ್ನು ಕಾರ್ಯ ರೂಪಕ್ಕೆ ತರುವ ಮಹಾಮಣಿಹದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವ ಪೂಜ್ಯ ಜಗದ್ಗುರುಗಳವರ ಅರವತ್ತನೆಯ ಹುಟ್ಟು ಹಬ್ಬದ ಪುಣ್ಯ ಸ್ಮರಣಾರ್ಥ ಪ್ರಕಟಗೊಳ್ಳುತ್ತಿರುವ ಗ್ರಂಥದಲ್ಲಿ 'ವೀರಶೈವ ಮಠಗಳ ಹಿನ್ನೆಲೆ'ಯಂತಹ ಲೇಖನ ಸಮುಚಿತವೆಂದು ನನ್ನ ಅನಿಸಿಕೆ. ಇದನ್ನು ನಾನು ಶ್ರೀಮಠದ ಸೇವೆಯೆಂದು ಭಾವಿಸಿದ್ದೇನೆ.

(೨)

ಛಾತ್ರಾದಿಗಳ ನಿಲಯವನ್ನು 'ಮಠ' ಎಂದು 'ಅಮರಕೋಶ' ಹೇಳುತ್ತದೆ. 'ಛಾತ್ರ' ಎಂದರೆ ಶಿಷ್ಯ ಅಥವಾ ವಿದ್ಯಾರ್ಥಿ ಎಂದರ್ಥ. ಆದುದರಿಂದ ಅಮರಕೋಶಕಾರನ ಪ್ರಕಾರ ಛಾತ್ರಾದಿಗಳು ವಾಸಿಸುವ ನಿಲಯಗಳೇ ಮಠಗಳು. ಅಷ್ಟೇ ಅವರು ಸಂಸ್ಕೃತ ಶಬ್ದ ಕೋಶದಲ್ಲಿ ಮಠಗಳೆಂದರೆ, ಸಂನ್ಯಾಸಿಗಳಾದವರು ಶಿಷ್ಯರಿಗೆ ಜ್ಞಾನಬೋಧೆ ಮಾಡುತ್ತ ವಾಸಿಸುವ ಸ್ಥಳಗಳೆಂದು ಹೇಳಿದೆ. ಮ್ಯಾಕ್ಡೋನಲ್ ಅವರ ಸಂಸ್ಕೃತ ಶಬ್ದ ಕೋಶದಲ್ಲಿಯೂ ಇದೇ ರೀತಿ ಹೇಳಲಾಗಿದೆ. ವಿದ್ಯಾರ್ಥಿಗಳು ಜ್ಞಾನಬೋಧೆ ಪಡೆಯುವ ಕೇಂದ್ರಗಳೇ ಮಠಗಳೆಂದು 'ಶಬ್ದ ಕಲ್ಪದ್ರುಮ' ತಿಳಿಸುತ್ತದೆ. ಇಂದಿಗೂ ಗ್ರಾಮಾಂತರ ಪ್ರದೇಶಗಳಲ್ಲಿ ಶಾಲೆಗಳನ್ನು 'ಮಠ', 'ಅಯ್ಯಗಳ ಮಠ' ಮುಂತಾಗಿ ಕರೆಯುವುದು ರೂಢಿಯಲ್ಲಿದೆ. 'ಸಾಲಿಮಠ', 'ಓದಸೂಮಠ' (ಓದಿಸುವ ಮಠ) ಹೆಸರಿನ ಮಠಗಳು ಇನ್ನೂ ನಮ್ಮಲ್ಲಿ ಅಸ್ತಿತ್ವದಲ್ಲಿವೆ. ಇದರಿಂದ ಮಠಗಳೆಂದರೆ ಓದಿಸುವ ಕಾರ್ಯವನ್ನು ಮುಖ್ಯವಾಗಿ ನೆರವೇರಿಸುವ ಕೇಂದ್ರಗಳೆಂಬುದು ಸ್ಪಷ್ಟವಾಗುತ್ತದೆ.

ಪ್ರಪಂಚದ ಪ್ರಮುಖ ಮತಧರ್ಮಗಳ ಆಗು-ಹೋಗುಗಳನ್ನು ರೂಪಿಸುವಲ್ಲಿ ಆಯಾ ಮತಧರ್ಮಗಳ ಮಠಗಳು ನಿರ್ವಹಿಸಿರುವ ಪಾತ್ರ ಗಮನಾರ್ಹವಾದುದು. ಮಠಗಳು ಎಂದಿನಿಂದ ಅಸ್ತಿತ್ವಕ್ಕೆ ಬಂದವೆಂಬುದನ್ನು ನಿರ್ಧರಿಸಲು ಇನ್ನೂ ಖಚಿತ ಆಧಾರಗಳು ಬೇಕೆನಿಸುತ್ತದೆ. ಆದರೂ ಮಠಗಳು ಬಹಳ ಪ್ರಾಚೀನವೆಂಬುದರಲ್ಲಿ ಸಂದೇಹವಿಲ್ಲ.

ಸಿಂಧೂ ಸಂಸ್ಕೃತಿ ಆರ್ಯ ಸಂಸ್ಕೃತಿಗಿಂತ ಪೂರ್ವದ್ದೆಂದು ಬಹು ಜನ ಭಾರತೀಯ ಮತ್ತು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯ. ಅವರ ಅಭಿಪ್ರಾಯದ ಪ್ರಕಾರ ಕ್ರಿ. ಪೂ. ಮೂರು ನಾಲ್ಕು ಸಾವಿರ ವರ್ಷ ಪ್ರಾಚೀನವಾಗಿರಬಹುದಾದ ಆ ಸಂಸ್ಕೃತಿಯಲ್ಲಿ ಮಠಗಳ ಅಸ್ತಿತ್ವದ ಬಗ್ಗೆ ನಿಖರವಾಗಿ ಏನನ್ನೂ ಹೇಳಲು ಬರುವುದಿಲ್ಲ. ಅಲ್ಲಿಯ ಉತ್ಖನನಗಳಲ್ಲಿ ದೊರೆತ ಹಲವಾರು ಪಳೆಯುಳಿಕೆಗಳಲ್ಲಿ ಯೋಗಮುದ್ರೆಯಲ್ಲಿರುವ ವ್ಯಕ್ತಿಯ ಶಿಲ್ಪ, ಲಿಂಗ ಇತ್ಯಾದಿಗಳೂ ಇವೆ. ಅಂತಹ ಯೋಗಿಗಳಾದವರು ಎಲ್ಲಿ ವಾಸವಾಗಿರುತ್ತಿದ್ದರು?

ಲಿಂಗ ಪೂಜಾದಿಗಳು ಎಲ್ಲಿ ನಡೆಯುತ್ತಿದ್ದವು? ಎಂಬ ಬಗ್ಗೆ ಆಚಾಲ್ಯ ಆಧಾರಗಳು ದೊರೆತರೆ ಮಾತ್ರ ಮಠಗಳ ಪ್ರಾಚೀನತೆಯನ್ನು ಗುರುತಿಸಲು ಸಾಧ್ಯವಾಗಬಹುದು.

ಇನ್ನು ವೇದಗಳ ಯುಗಕ್ಕೆ ಬಂದರೆ ಆಗ, ಈ ಕಾಲದ ಇಂದಿನ ಮಠಗಳನ್ನು ಹೋಲುವಂತಹ ಸಂಸ್ಥೆಗಳು ಇರಲಿಲ್ಲವೆಂದು ಹೇಳಬೇಕಾಗುತ್ತದೆ. ಅಂದಿನ ಋಷ್ಯಾಶ್ರಮ ಗಳಲ್ಲಿ ಅಧ್ಯಯನ, ಅಧ್ಯಾಪನಗಳು ವಿವಿಧ ವಿಷಯಗಳನ್ನು ಕುರಿತು ನಡೆಯುತ್ತಿದ್ದು ಅವುಗಳನ್ನು 'ಗುರುಕುಲ'ಗಳೆಂದು ಕರೆಯುತ್ತಿದ್ದರು. ಆದರೆ ಅವುಗಳ ಸ್ವರೂಪ ಇಂದಿನ ಮಠಗಳಂತಿರಲಿಲ್ಲವೆನಿಸುತ್ತದೆ. ಲೌಕಿಕ ಮತ್ತು ಪಾರಲೌಕಿಕ ವಿದ್ಯೆ ಕಲಿಯಲು ವಿದ್ಯಾರ್ಥಿ ಗಳು ಅಂತಹ ಗುರುಕುಲಾಶ್ರಮಗಳಿಗೆ ಬರುತ್ತಿದ್ದು ಅಲ್ಲಿಯೇ ಇದ್ದು ತಮ್ಮ ವಿದ್ಯಾಭ್ಯಾಸ ವನ್ನು ಪೂರೈಸುತ್ತಿದ್ದರು. ಅವರನ್ನು ಅಂತೇವಾಸಿಗಳೆಂದು ಕರೆಯಲಾಗುತ್ತಿತ್ತು.

ಆ ಕಾಲದಲ್ಲಿ ಪ್ರಯಾಣಿಕರಿಗೆ ಆತಿಥ್ಯ ನೀಡುವ ಸ್ಥಳಗಳಿದ್ದ ಬಗ್ಗೆ ಋಗ್ವೇದದ ಎಂಟನೆಯ ಅಧ್ಯಾಯದ ಇಪ್ಪತ್ತಮೂರನೆಯ ಅನುವಾಕ್ಯದಿಂದ ತಿಳಿದುಬರುತ್ತದೆ. ಯಾಜ್ಞವಲ್ಕ್ಯ ಸ್ಮೃತಿ ಕೂಡ (ಅಧ್ಯಾಯ-೧, ಶ್ಲೋಕ-೨೦೯, ೨೧೦) ಆಯಾಸದಿಂದ ಬಸವಳಿದ ಪ್ರಯಾಣಿಕರ ವಿಶ್ರಾಂತಿಗಾಗಿ ಆರಾಮ, ಸತ್ರ, ಅರವಟಿಗೆ ಇತ್ಯಾದಿಗಳನ್ನು ಏರ್ಪಡಿಸುವುದು, ರೋಗಿಗಳಿಗೆ ಔಷಧೋಪಚಾರ ಒದಗಿಸುವುದು ಧರ್ಮದ ಕಾರ್ಯ ಗಳೆಂದು ನಿರೂಪಿಸುತ್ತದೆ. ಇಂತಹ ಧರ್ಮದ ಕಾರ್ಯಗಳನ್ನು ಮಾಡುವವರಿಗೆ ಸ್ವರ್ಗ ಲಭಿಸುತ್ತದೆಂಬ ಮಾತು ಮಾರ್ಕಂಡೇಯ ಪುರಾಣದಲ್ಲಿ ಬರುತ್ತದೆ. ನಮ್ಮ ಅನೇಕ ಕನ್ನಡ ಶಾಸನಗಳು ಇದೇ ಮಾತನ್ನು ಉದ್ಘೋಷಿಸುತ್ತವೆ. ಈ ಧರ್ಮದ ಕಾರ್ಯಗಳನ್ನು ಇಂದಿನ ನಮ್ಮ ಮಠಗಳು ಈಗ ನಿರ್ವಹಿಸುತ್ತಿರುವುದನ್ನು ನೋಡಿದರೆ ಆರಂಭದಲ್ಲಿ ಅಧ್ಯಯನ, ಅಧ್ಯಾಪನಗಳಿಗೆ ಮಾತ್ರ ತಮ್ಮನ್ನು ಸೀಮಿತಗೊಳಿಸಿಕೊಂಡಿದ್ದ ಮಠಗಳು ಕಾಲ ಕಳೆದಂತೆ ಅನ್ನಸತ್ರ, ಅನಾಥಾಶ್ರಮ ಮತ್ತು ಔಷಧಾಲಯಗಳ ಕಾರ್ಯವನ್ನೂ ನಿರ್ವಹಿಸಲಾರಂಭಿಸಿದ ಫಲವಾಗಿ ಅವು ಮಹತ್ವಪೂರ್ಣ ಸಾಂಸ್ಕೃತಿಕ ಕೇಂದ್ರಗಳಾಗಿ ಅಭಿವೃದ್ಧಿ ಪಡೆದವು. ಹಲವಾರು ಶಾಸನ ಮತ್ತು ಸಾಹಿತ್ಯ ಕೃತಿಗಳು ಇದಕ್ಕೆ ಆಧಾರ ಒದಗಿಸುತ್ತವೆ. ಅದರ ವಿವರ ಮುಂದೆ ಬರುತ್ತದೆ.

ಭಾರತದಲ್ಲಿರುವ ಮಠಗಳನ್ನು ಕುರಿತು ಅಧ್ಯಯನ ನಡೆಸಿ ಆ ಬಗ್ಗೆ ಒಂದು ವಿವರವಾದ ವರದಿಯನ್ನೊಪ್ಪಿಸುವಂತೆ ಕೇಂದ್ರ ಸರಕಾರ ಇತ್ತೀಚೆಗೆ **Hindu Religious Endowment Commission** ಹೆಸರಿನ ಒಂದು ಸಮಿತಿಯನ್ನು ನೇಮಿಸಿತ್ತು. ಆ ಸಮಿತಿ ಸಿದ್ಧಪಡಿಸಿದ ವರದಿಯಲ್ಲಿ ಮಠಗಳಿಗೆ ಸಂಬಂಧಿಸಿದಂತೆ ಹಲವಾರು ಉಪಯುಕ್ತ ಮಾಹಿತಿಗಳು ದಾಖಲುಗೊಂಡಿವೆ. ಆ ವರದಿಯ ಪ್ರಕಾರ ಕೇವಲಾದ್ವೈತ ಸಿದ್ಧಾಂತದ ಪ್ರವರ್ತಕರೂ, ಬೌದ್ಧ ಮತ್ತು ಜೈನ ಧರ್ಮಗಳ ಪ್ರಭಾವವನ್ನು ಬಹುಮಟ್ಟಿಗೆ ಕಡಿಮೆ ಮಾಡಿ ವೇದೋಪನಿಷತ್ ಪ್ರತಿಪಾದಿತ ಧರ್ಮವನ್ನು ಪುನರುತ್ಥಾನಗೊಳಿಸಿದವರೂ ಆದ, ಆದಿ ಶ್ರೀ ಶಂಕರಾಚಾರ್ಯರೇ ಮೊಟ್ಟಮೊದಲು ಇಂದಿನ ಮಾದರಿಯ ಮಠಗಳನ್ನು

ಸ್ಥಾಪಿಸಲು ಆರಂಭಿಸಿದವರು. ಹಾಗೆ ಮಠಗಳನ್ನು ಸ್ಥಾಪಿಸಲು ಕಾರಣಗಳಿಲ್ಲದಿಲ್ಲ. ಬೌದ್ಧ ಧರ್ಮ ಭಾರತದ ಉದ್ದಗಲಕ್ಕೂ ಹರಡಲು; ಅದು ಜನ ಸಂಮುಖವಾಗಿ ಸಮಷ್ಟಿಯ ಉದ್ಧಾರಕ್ಕೆ ತೊಡಗಿದುದು ಒಂದು ಕಾರಣವಾದರೆ, ಬೌದ್ಧ ಧರ್ಮ ಹರಡಿದೆಡೆಗಳಲ್ಲೆಲ್ಲ, ಮಹತ್ವದ ಕೇಂದ್ರಗಳಲ್ಲಿ ಬೌದ್ಧ ವಿಹಾರಗಳನ್ನು ನಿರ್ಮಿಸಿ ಅಲ್ಲಿ ಬೌದ್ಧ ಸಂನ್ಯಾಸಿಗಳನ್ನು ನೆಲೆಗೊಳಿಸಿ, ಧಾರ್ಮಿಕವಾಗಿ ಸಾಮಾನ್ಯ ಜನತೆ ಸದಾ ಜಾಗೃತವಾಗಿರುವಂತೆ ವ್ಯವಸ್ಥೆಗೊಳಿಸಿದುದು ಇನ್ನೊಂದು ಗಮನಾರ್ಹ ಕಾರಣವಾಗಿದೆ. ಹಿಂದೂ ಮಠಗಳು ಹುಟ್ಟಿಕೊಳ್ಳಲು, ಬೌದ್ಧ ಧರ್ಮದ ಇಂತಹ ವಿಹಾರಗಳು ಪ್ರೇರಣೆ ಒದಗಿಸಿರಬಹುದೆಂಬ ವಿದ್ವಾಂಸರ ಅಭಿಪ್ರಾಯದಲ್ಲಿ ಸತ್ಯಾಂಶವಿಲ್ಲದಿಲ್ಲ. ಆದಿ ಶಂಕರಾಚಾರ್ಯರನ್ನು ಅನುಸರಿಸಿ ತದನತರ ರಾಮಾನುಜ, ಮಧ್ವ ಮತ್ತು ಶೈವ ಮೊದಲಾದ ಬೇರೆ ಬೇರೆ ಮತಧರ್ಮಗಳ ಮಠಗಳು ನಿರ್ಮಾಣಗೊಂಡವೆಂಬ ಮಾತು ಕೂಡ ವರದಿಯಲ್ಲಿ ಬರುತ್ತದೆ. ವೀರಶೈವ ಮಠಗಳು ಕೂಡ ಈ ಮೇಲ್ಪಂಕ್ತಿಯನ್ನೇ ಅನುಸರಿಸಿ, ಹುಟ್ಟಿಕೊಂಡವೆಂದೂ, ಬಸವಣ್ಣನವರ ಕಾಲದಲ್ಲಿ ಸಮಾಜ ಸಂಘಟನೆಯ ಉದ್ದೇಶದಿಂದ ಅಂತಹ ಮಠಗಳ ಸಂಖ್ಯೆಯೂ ಹೆಚ್ಚಿತೆಂದು ವರದಿ ಹೇಳುತ್ತದೆ. ಮಠಗಳ ಪ್ರಾಚೀನತೆ ಮತ್ತು ಆರಂಭವನ್ನು ಕುರಿತು ಈ ಬಗೆಯ ಅಭಿಪ್ರಾಯಕ್ಕೆ ಸಮಿತಿಯವರು ಬರಲು ಅವರಿಗೆ ಮದ್ರಾಸ ಹೈಕೋರ್ಟ ನ್ಯಾಯಾಧೀಶ ಮುತ್ತು ಸ್ವಾಮಿ ಅಯ್ಯರ್ ಎಂಬವರು ಕೊಟ್ಟ ಒಂದು ತೀರ್ಪು ಆಧಾರವಾಗಿರಬೇಕೆನಿಸುತ್ತದೆ. ಅಯ್ಯರ್ ಅವರ ಆ ತೀರ್ಪಿನಲ್ಲಿ ಸಂಸಾರ ತ್ಯಾಗ ಮಾಡಿದ ಸನ್ಯಾಸಿಗಳು ಧರ್ಮ ಜ್ಞಾನಿಗಳಾಗಿ ಧರ್ಮೋಪದೇಶ ಮಾಡುತ್ತ ಸಂಚಾರ ಮಾಡುತ್ತಿದ್ದರು: ಅವರಿಗೆ ಯಾವುದೇ ನೆಲೆ ಇಲ್ಲವೆ ಆಸ್ತಿ-ಪಾಸ್ತಿಗಳಿರಲಿಲ್ಲ. ಧರ್ಮಾಭಿಮಾನಿಗಳೇ ಅವರಿಗೆ ಅಶನ-ವಸನಗಳ ವ್ಯವಸ್ಥೆ ಮಾಡುತ್ತಿದ್ದರು. ಬ್ರಾಹ್ಮಣ ಸನ್ಯಾಸಿಗಳಿಗೆ ಇರಲು ಈ ರೀತಿಯಾಗಿ ಕೆಲವು ಗ್ರಾಮ ಪ್ರದೇಶಗಳಲ್ಲಿ ಕಟ್ಟಿಸಿಕೊಟ್ಟ ಮಂದಿರಗಳೇ ಮುಂದೆ ಮಠಗಳಾದವು. ಆಗ ಮಠಗಳೆಂದರೆ ಸಾಮಾನ್ಯವಾಗಿ ಸನ್ಯಾಸಿಗಳ ಅಥವಾ ಪರದೇಶಿಗಳ ನೆಲೆವೀಡೆಂಬ ಅರ್ಥವಿದ್ದಿತು. ಬ್ರಾಹ್ಮಣ ಧರ್ಮದ ಮೇಲೆ ಬೌದ್ಧ ಧರ್ಮವು ಪ್ರತಿರೋಧವಾದಾಗ ಅದ್ವೈತಸ್ಥಾಪಕರಾದ ಶಂಕರಾಚಾರ್ಯರು ಬ್ರಾಹ್ಮಣ ಧರ್ಮದ ಪ್ರಚಾರಕ್ಕಾಗಿ ಕೆಲವು ಮಠಗಳನ್ನು ಸ್ಥಾಪಿಸಿದರು. ತದನಂತರ ವೈಷ್ಣವ, ಮಾಧ್ವ ಮತ್ತು ಇತರ ಶೈವ ಮತೀಯರು ಸಹ ಅವರನ್ನೇ ಅನುಸರಿಸಿ ಮಠಗಳ ನಿರ್ಮಾಣಕ್ಕೆ ತೊಡಗಿದರು ಎಂಬರ್ಥ ಬರುವ ಮಾತುಗಳಿವೆ.

ಇಲ್ಲಿ ಒಂದು ಮಾತನ್ನು ಗಮನಿಸಬೇಕೆನಿಸುತ್ತದೆ. ಮೇಲಣ ಈ ತೀರ್ಪಿನಲ್ಲಿ ಆದಿಶಂಕರಾಚಾರ್ಯರೇ ಮಠಗಳನ್ನು ಪ್ರಥಮವಾಗಿ ಸ್ಥಾಪಿಸಿದರೆಂಬ ಮಾತು ಬರುತ್ತದೆ. ಆದರೆ ಅದಕ್ಕೂ ಮೊದಲು ಮಠಗಳಿದ್ದ ಬಗ್ಗೆ ವಿದ್ವಾಂಸರು ಆಧಾರಗಳನ್ನು ಒದಗಿಸಲು ಪ್ರಯತ್ನಿಸಿದ್ದಾರೆ. ಆಗಮ ಪ್ರಮಾಣದಿಂದ ವೀರಶೈವ ಮಠಗಳ ಪ್ರಾಚೀನತೆ ಕ್ರಿ. ಶ.

ಆರನೆಯ ಶತಮಾನಕ್ಕೆ ಹಿಂದೆ ಹೋಗುತ್ತದೆಂದು ಕೆಲವರು ಪ್ರತಿಪಾದಿಸುತ್ತಾರೆ.[೧] ಆದಿ ಶಂಕರಾಚಾರ್ಯರ ಕಾಲಕ್ಕಿಂತಲೂ ಪೂರ್ವದಲ್ಲಿ ಮಠಗಳ ಪರಂಪರೆ ಇದ್ದ ಬಗ್ಗೆ ಕೆಲವು ಆಧಾರಗಳನ್ನೂ ಅವರು ಒದಗಿಸುತ್ತಾರೆ. ಆದಿಶಂಕರಾಚಾರ್ಯರ ಕಾಲ ಸುಮಾರು ಕ್ರಿ.ಶ.೭, ೮ನೆಯ ಶತಮಾನ. ಬಾಣವಂಶದ ಒಬ್ಬ ದೊರೆಯ ತಾಯಿ 'ರತ್ನಾವಳಿ' ಎಂಬ ವಳು ಒಂದು ದೇವಾಲಯಕ್ಕೆ ದಾನಕೊಟ್ಟು ಬರೆಯಿಸಿದ ದಾನ ಶಾಸನದಲ್ಲಿ (ಕ್ರಿ. ಶ. ಸುಮಾರು ೬೮೦) ಶೈವ ಕಾಲಾಮುಖ ಮುನಿಯಾದ ಕಾಲಶಕ್ತಿ ಹಾಗೂ ಅವನ ಶಿಷ್ಯ ಈಶ್ವರದೇವನ ಉಲ್ಲೇಖವಿದೆ.[೨] ಪ್ರಾಯಶಃ ಅವರು ಆ ದೇವಾಲಯಕ್ಕೆ ಹೊಂದಿಕೊಂಡಿದ್ದು ಮಠದ ಆಚಾರ್ಯರಾಗಿರಬಹುದು. ಕ್ರಿ.ಶ. ೭ನೆಯ ಶತಮಾನದ ಪೂರ್ವಾರ್ಧದಲ್ಲಿ ಭಾರತಕ್ಕೆ ಭೆಟ್ಟಿಯಿತ್ತ ಚೈನಾದೇಶದ ಬೌದ್ಧಪ್ರವಾಸಿ ಹ್ಯುಯೆನ್‌ತ್ಸಾಂಗ್, ದಕ್ಷಿಣ ದೇಶ ದಲ್ಲಿ ಬ್ರಾಹ್ಮಣರು ಬೌದ್ಧರ ಮಠಗಳನ್ನು ಆಕ್ರಮಿಸಿದರೆಂದೂ ಬೌದ್ಧಧರ್ಮ ಆಗ ಖಿಲ ವಾಗುತ್ತ ನಡೆದಿತ್ತೆಂದೂ ತನ್ನ ಪ್ರವಾಸ ಕಥನದಲ್ಲಿ ಉಲ್ಲೇಖಿಸಿದ್ದಾನೆ. ಅಮರಾವತಿಯ ಶಿಲಾಶಾಸನದಲ್ಲಿ (ಸಂಖ್ಯೆ ೩೨) ಈ ಬಗ್ಗೆ ಸೂಚನೆ ದೊರೆಯುತ್ತದೆ. ಅಂತೂ ಆದಿಶಂಕರಾಚಾರ್ಯರ ಪೂರ್ವದಲ್ಲಿ ಬೌದ್ಧ ಮಠಗಳೂ ಕೆಲವಾದರೂ ಹಿಂದೂ ಮಠಗಳೂ ಇದ್ದುದು ಸರಿಯೆನಿಸುತ್ತದೆ. ಬೌದ್ಧ ಮಠಗಳು ಆ ಧರ್ಮದ ಬಗ್ಗೆ ಮಾಡುತ್ತಿದ್ದ ಕಾರ್ಯವೈಖರಿಯ ಮಹತ್ವವನ್ನು ಮನಗಂಡ ಆದಿಶಂಕರಾಚಾರ್ಯರು ಒಂದು ಧರ್ಮದ ಉಳಿವು ಮತ್ತು ಏಳಿಗೆಗೆ ಮಠಗಳು ಮುಖ್ಯವೆಂಬ ನಿರ್ಧಾರಕ್ಕೆ ಬಂದು ಅಂತಹ ಮಠ ಗಳನ್ನು ಭಾರತದ ಬೇರೆ ಬೇರೆ ಭಾಗಗಳಲ್ಲಿ ಸ್ಥಾಪಿಸಿರಬಹುದಾಗಿದೆ. ಹಿಂದೂ ಧರ್ಮದ ಮಠಗಳ ಸ್ಥಾಪನೆಗೆ ಬೌದ್ಧವಿಹಾರ ಅಥವಾ ಮಠಗಳು ಪ್ರೇರಣೆ ನೀಡಿರಬಹುದಾದ ಸಾಧ್ಯತೆಯನ್ನು ಸುಲಭವಾಗಿ ಅಲ್ಲಗಳೆಯಲಾಗುವುದಿಲ್ಲ. ಶಂಕರಾಚಾರ್ಯರ ಅನಂತರ ಹಿಂದೂ ಮಠಗಳ ಸಂಖ್ಯೆ ಅಧಿಕಗೊಂಡಿರಬಹುದು. ಆದರೆ ಶಂಕರಾಚಾರ್ಯರೇ ಮೊಟ್ಟ ಮೊದಲು ಇಂದಿನ ಸ್ವರೂಪದ ಮಠಗಳನ್ನು ಸ್ಥಾಪಿಸಿದರೆಂಬ ಬಗ್ಗೆ ಇನ್ನೂ ಸಂಶಯ ವಿಟ್ಟುಕೊಳ್ಳುವುದು ಮೇಲು. ಏನಿದ್ದರೂ ಮಠಗಳು ಮುಖ್ಯವಾಗಿ ಶೈವ ಮಠಗಳು ಏಳನೆಯ ಶತಮಾನದಲ್ಲಿಯೇ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಬಗ್ಗೆ ಶಾಸನಗಳು ಆಧಾರ ವನ್ನೊದಗಿಸುತ್ತವೆ.[೩]

ಬಸವಣ್ಣನವರ ಪೂರ್ವದಲ್ಲಿ ಮತ್ತು ಅನಂತರ ಹದಿನೈದನೆಯ ಶತಮಾನದವರೆಗೆ ಶೈವಮಠಗಳು ಮುಖ್ಯವಾಗಿ ಲಕುಲೇಶ ಪಾಶುಪತದ ಕಾಲಾಮುಖ ಮಠಗಳು ಹೆಚ್ಚಾಗಿ

---

೧ ನೋಡಿ. 'ಶ್ರೀಶೈಲ ಪೀಠದರ್ಶನ' ಪುಟ–೮೭, ೮೮.

೨ Karnataka through the Ages ಪುಟ ೧೭೫, ಕರ್ನಾಟಕ ಸರಕಾರದ ಪ್ರಕಟನೆ (೧೯೬೮).

೩. ಕರ್ನಾಟಕ ಲಾಕುಳ ಶೈವರ ಇತಿಹಾಸ, ಪುಟ–೧೦೦.

ಇದ್ದುದನ್ನು ಶಾಸನಗಳು ಖಚಿತಪಡಿಸುತ್ತವೆ. ಹದಿನೈದನೆಯ ಶತಮಾನದಿಂದ ಈ ಕಾಲಾಮುಖ ಮಠಗಳ ಆಚಾರ್ಯರ ಹೆಸರುಗಳು ಕಡಿಮೆಯಾಗುತ್ತ ಹೋಗಿ ವೀರಶೈವ ಜಂಗಮ ಸ್ವಾಮಿಗಳ ಹೆಸರುಗಳು ಹೆಚ್ಚಾಗಿ ಕಾಣಿಸಿಕೊಳ್ಳಲಾರಂಭಿಸುತ್ತವೆ. ಶಾಸನಗಳನ್ನೇ ಆಧರಿಸಿ ಹೇಳುವುದಾದರೆ ಈ ವೀರಶೈವ ಜಂಗಮಸ್ವಾಮಿಗಳು ಕೂಡ ದೇವಾಲಯಗಳ ಸಂಬಂಧವನ್ನು ಸಂಪೂರ್ಣವಾಗಿ ಕಡಿದುಕೊಂಡವರಲ್ಲ. ಹತ್ತನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದವರೆಗಿನ ಅವಧಿ ಈ ಶೈವ ಕಾಳಾಮುಖ ಮಠಗಳ ಅತ್ಯಂತ ಉಚ್ಛ್ರಾಯ ಕಾಲವೆನ್ನಬಹುದು. ಆಮೇಲೆ ಅವು ಕ್ರಮೇಣ ವೀರಶೈವ ಮಠಗಳಾಗಿ ಪರಿವರ್ತನೆಗೊಳ್ಳುತ್ತ ನಡೆದಿವೆ. ಅದೇನೇ ಇದ್ದರೂ ಬಸವಣ್ಣನವರ ಹಿಂದು ಮುಂದಣ ಮತ್ತು ಸಮಕಾಲೀನ ಕೆಲ ಶತಮಾನಗಳಲ್ಲಿ ಕಾಳಾಮುಖ ಮಠಗಳಲ್ಲಿ ಆಚಾರ್ಯರಾಗಿದ್ದ ಸ್ಥಾನಪತಿಗಳ ವಿದ್ವತ್ತು ಮತ್ತು ತಪಃಪ್ರಭಾವಗಳನ್ನು ಅವರು ತಮ್ಮ ಮಠಗಳಲ್ಲಿ ನಡೆಸುತ್ತಿದ್ದ ಅನ್ನಸತ್ರ, ಔಷಧಾಲಯಗಳನ್ನು ಮಠಗಳಲ್ಲಿದ್ದ ವಿದ್ಯಾರ್ಥಿಗಳನ್ನೂ, ಆ ಮಠಗಳಿಗೆ ರಾಜರು, ಅಧಿಕಾರಿವರ್ಗದವರು, ಆಡಳಿತಗಾರರು ಹಾಗೂ ಸಾಮಾನ್ಯರು ಕೂಡ ಅಲ್ಲಿಯ ಆಚಾರ್ಯರ 'ಕಾಲಂ ಕರ್ಚಿ' ಎಂದರೆ ಕಾಲು ತೊಳೆದು ಊರು ಭೂಮಿ, ಧನ ಕನಕಾದಿಗಳ ದಾನವಿತ್ತುದನ್ನು ಹಲವಾರು ಕನ್ನಡ ಮತ್ತು ಕೆಲವು ಸಂಸ್ಕೃತ ಶಾಸನಗಳು ಮನವಾರೆ ಬಣ್ಣಿಸುತ್ತವೆ. ಇಂತಹ ಕೆಲವು ಮಠಗಳ ಸ್ಥಾನಾಚಾರ್ಯರನ್ನು ಶಾಸನಗಳು 'ರಾಜಗುರು' ಎಂದು ಕರೆದಿವೆ. ಇದರಿಂದ ಕಾಲಾಮುಖ ಮಠಗಳ ಆಚಾರ್ಯರು ಎಂತಹ ಪ್ರಭಾವಶಾಲಿಗಳಾಗಿದ್ದರೆಂಬುದು ವಿದಿತವಾಗುತ್ತದೆ. ಕಾಲಾಮುಖ ಮಠಗಳ ಆಚಾರ್ಯರು ಪರ್ಷೆ (ಶಕ್ತಿಪರ್ಷೆ, ಸಿಂಹಪರ್ಷೆ), ಆವಳಿ (ಪರ್ವತಾವಳಿ) ಸಂತತಿ ಅಥವಾ ಸಂತಾನ (ಬೆಳ್ಳಿಯ ಸಂತಾನ, ಕಾಶ್ಮೀರದೇವಸಂತಾನ, ಮೂವರ ಕೋಣೆಯಸಂತತಿ, ಇಟ್ಟಿಗೆಯ ಸಂತತಿ, ಶ್ರೀ ಪರ್ವತದ ಅಗಸ್ತ್ಯೇಶ್ವರ ಸಂತತಿ, ಶ್ರೀ ಪರ್ವತದ ಮಲ್ಲಿಕಾರ್ಜುನ ಕಲ್ಮಠದ ಸಂತತಿ), ಅನ್ವಯ (ಎಳಮೇಲಾನ್ವಯ) ಮುಂತಾದವುಗಳಿಗೆ ಸೇರಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಕಾಳಾಮುಖ ಮಠಗಳ ಬಗ್ಗೆ ಮತ್ತು ಅವುಗಳ ಸ್ಥಾನಾಚಾರ್ಯರ ಬಗ್ಗೆ ಶಾಸನಗಳಲ್ಲಿ ಬಂದುದಕ್ಕೆ ಒಂದೆರಡು ಉದಾಹರಣೆಗಳು:

೧) ಕರ್ನೂಲು ಜಿಲ್ಲೆ ನಂದಿಕೊಟಕೂರು ತಾಲೂಕು ಕೊಟ್ಟಪಲ್ಲಿ ಗ್ರಾಮದ ಸಮೀಪದ ಗುಡ್ಡದ ಕಲ್ಲೊಂದರ ಮೇಲೆ ಒಂದು ಶಾಸನವನ್ನು ಕೊರೆಯಲಾಗಿದೆ. ಅದರ ಕಾಲ ಶಕವರ್ಷ ೯೮೦ನೆಯ ಹೇವಳಂಬಿ ಸಂವತ್ಸರ (ಕ್ರಿ.ಶ. ೧೦೫೮). ಕಲ್ಯಾಣ ಚಾಳುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲದೇವನು ತನ್ನ ರಾಣಿ ಮೈಲಾಳದೇವಿಯೊಡಗೂಡಿ ಶ್ರೀಶೈಲಕ್ಕೆ ಭೆಟ್ಟಿಯಿತ್ತು ಅಲ್ಲಿಯ ಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ಕೊಳ್ಳದ ಸ್ವಯಂಭು ಭೈರವೇಶ್ವರ ದೇವರು ಮತ್ತು ಇತರ ದೇವಾಲಯಗಳಿಗೆ ಸುರೇಶ್ವರ ಪಂಡಿತರ ಕಾಲ್ಗರ್ಚಿ ಗ್ರಾಮಗಳನ್ನು ದಾನಮಾಡಿದುದನ್ನು ಈ ಶಾಸನ೪ ಹೀಗೆ ಹೇಳುತ್ತದೆ:

೪ South Indian Inscriptions–IX Part 1 ಶಾಸನ ಸಂಖ್ಯೆ–೧೧೯.

"....ತ್ರೈಲೋಕ್ಯಮಲ್ಲದೇವರು.... ಶ್ರೀಮತ್ಪಿರಿಯರಸಿ ಮೈಳಲದೇವಿಯರುಂ.... ಶ್ರೀ ಮಲ್ಲಿಕಾರ್ಜುನ ದೇವರಲ್ಲಿಗೆ ಬಿಜಯಂಗೆಯ್ದು ಪಾತಾಳಗಂಗೆ ಯಂ ಮಿಂದು ಶ್ರೀ ಮಲ್ಲಿಕಾರ್ಜುನದೇವರ ಸನ್ನಿಧಾನದೊಳ್ । ಸ್ವಸ್ತಿ ಯಮನಿಯಮ....ಕಾಳಾಮುಖ ಸಮಯ ಸರೋವರ ರಾಜಹಂಸರ್ ಲಾಕುಳ ಸಿದ್ಧಾನ್ತನಯ್ಯಾಯಿಕ ನಳಿನೀ ದಿವಾಕರರ್, ಮಧ್ಯಾಹ್ನ ಕಲ್ಪವ್ರಿಕ್ಷರ್ ಗುರುಕುಳ ಸಮುದ್ಧರಣರ್ ಶ್ರೀಶೈಳ ಪಶ್ಚಿಮದ್ವಾರ ತೋರಣರ್ ಮಲ್ಲಿಕಾರ್ಜುನದೇವದರ್ಶನ ಕಾರಣಪ್ರುರುಷರ್ ಕಿಟ್ಟಗಾವೆಯ ಸಂಬನ್ದಿ ಮೊಸಂಗಿಯ ಬ್ರಹ್ಮೇಶ್ವರದಾಚಾರ್ಯ ಗಂಗರಾಸಿಭಟ್ಟಾರಕರ ಶಿಸ(ಷ್ಯ)ರ್, ಶ್ರೀಮತ್ ಸು ೀಶ್ವರ ಪಣ್ಡಿತ ದೇವರ್ಗೆ ಶ್ರೀಮತ್ರೈಲೋಕ್ಯ ಮಲ್ಲದೇವರ್ ಕಾಲ್ಗರ್ಚಲು ಶ್ರೀಮತ್ಪಿರಿಯರಸಿ ಮೈಳಲದೇವಿಯರ್ ಕಾಲ್ಗೆರೆಯಲು....ಕೊಳ್ಳದ ಆದಿಸ್ವಯಂಭು ಭೈರವದೇವರ್ಗ್ಗಂ ಅಲ್ಲಿಯ ವಾರಿಶ (ಸ) ತ್ರಕ್ಕಂ ಸರ್ವನಮಸ್ಯಮಾಗೆ".... .......................................

ದುದ್ದಿಯಾಲು ಹೆಸರಿನ ಗ್ರಾಮವನ್ನು ಬಿಟ್ಟರು. ಇದೇ ನಂದಿಕೊಟಕೂರು ತಾಲೂಕಿನ ಶಿವಪುರಂ ಗ್ರಾಮದ ಕ್ರಿ. ಶ. ೧೦೮೯ರ ಮತ್ತೊಂದು ಶಾಸನ[೫] ಕಲ್ಯಾಣ ಚಾಲುಕ್ಯ ಚಕ್ರವರ್ತಿ ಭುವನೈಕಮಲ್ಲದೇವನು ತನ್ನ ಪಿರಿಯರಸಿ ಕಂಚಲದೇವಿಯ ಬಿನ್ನಹದ ಮೇರೆಗೆ ಅಲ್ಲಿಯ ಮಲ್ಲಿಕಾರ್ಜುನದೇವರ ಸತ್ರಕ್ಕಾಗಿ ಅದೇ ಕಾಳಾಮುಖ ಆಚಾರ್ಯ ಸುರೇಶ್ವರ ಪಂಡಿತರ 'ಕಾಲಂ ಕರ್ಚಿ' ಒಂದು ಗ್ರಾಮವನ್ನು ದಾನವಾಗಿ ಕೊಟ್ಟಿದ್ದಾನೆ. ಇಂತಹ ಶಾಸನಗಳು, ಚಕ್ರವರ್ತಿಗಳಿಂದಲೂ ಕಾಳಾಮುಖ ಆಚಾರ್ಯರು ಗೌರವಿಸಲ್ಪಡುತ್ತಿದ್ದುದನ್ನು ಸೂಚಿಸುತ್ತವೆ.

೨) ಕ್ರಿ. ಶ. ೧೨೫೨ರ ಮುನವಳ್ಳಿಯ ಒಂದು ಶಾಸನ[೬] ಅಲ್ಲಿಯ ಜಗದೀಶ್ವರ ದೇವಾಲಯಕ್ಕೆ ರಾಯರಾಜಗುರು ಸರ್ವೇಶ್ವರ ದೇವರ ಕಾಲುತೊಳೆದು ಭೂದಾನ ಮಾಡಿದುದನ್ನು ತಿಳಿಸುತ್ತದೆ. ಅವನ ಗುರು ಮತ್ತು ಶಿಷ್ಯ ಪರಂಪರೆಯನ್ನೂ ಈ ಶಾಸನ ಕೊಡುತ್ತದೆ. ಶಾಸನದಲ್ಲಿ ಸರ್ವೇಶ್ವರದೇವನ ವರ್ಣನೆ ಹೀಗೆ ಬರುತ್ತದೆ:

"ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೋನಾನುಷ್ಠಾನ ಜಪತಪ ಸಮಾಧಿ ಶೀಲಗುಣ ಸಂಪಂನರುಂ ಯಜನಯಾಜನಾಧ್ಯಯನಾಧ್ಯಾಪನದಾನ ಪ್ರತಿಗ್ರಹ ಷಟ್ಕರ್ಮ ನಿರತರುಂ ರುಗುವೇದ ಸಾಮವೇದ ಯಥರ್ವ್ವಣ ಯಜುರ್ವೇದ ವೇದಾನ್ತ ಷಟುತರ್ಕ ವ್ಯಾಕರಣ ಛಂದಸ್ಸು ನಿಘಂಟು ಕಾಬ್ಯ ನಾಟಕ ಸಕಳ ವಿದ್ಯಾವಿನೋದರುಂ, ಬ್ಯಾಸ ಅಗಸ್ತ್ಯ ದೂರ್ಬ್ಬಾಸ ವಿಶ್ವಾಮಿತ್ರ ನಾರದಾದಿ ದಿಬ್ಯಮುನಿಚಾರಿತ್ರರುಂ ಭಸ್ಮೋದ್ಧೂಳಿತ ಗಾತ್ರರುಂ ಕಉಪೀನಾಂಜನರುಂ, ರುದ್ರಾಕ್ಷ ಮಾಲಾಧಾರರುಂ ಲಾಕುಳಾಗಮ್ವ ಸಮಯ ಸಮುದ್ಧರರುಂ ಜಂಗಮಲಿಂಗಾವತಾರರುಂ ಉಭಯಕುಲ ಸುದ್ಧರುಮಪ್ಪ

೫ ಅದೇ–ಶಾಸನ ಸಂಖ್ಯೆ–೧೩೪.

೬ Karnataka Inscriptions ಸಂಪುಟ–೧. ಶಾಸನ–೩೧.

ಶ್ರೀ ಕಾಳಾಮುಖ ಮನೆಯ ಸಮಂಧ ಶ್ರೀಮತು ರಾಯರಾಜಗುರು ಸರ್ವೇಶ್ವರ ದೇವರು".

ಇಂತಹ ಶಾಸನಗಳು ಕಾಲಾಮುಖ ಆಚಾರ್ಯರು ರಾಜಗುರುಗಳಾಗಿದ್ದ ಜೊತೆಗೆ, ಅಗಾಧ ಪಂಡಿತರಾಗಿದ್ದುದನ್ನೂ ತಿಳಿಸಿಕೊಡುತ್ತವೆ. ಮುನವಳ್ಳಿಯ ಪ್ರಸ್ತುತ ಶಾಸನ ಇನ್ನೊಂದು ಮಹತ್ವಪೂರ್ಣ ಅಂಶವನ್ನು ಕೂಡ ಮಠಗಳ ಬಗ್ಗೆ ತಿಳಿಸಿಕೊಡುತ್ತದೆ. ಮೂಲಮಠಕ್ಕೆ ಪ್ರತಿಬದ್ಧ ಮಠಗಳೂ ಇರುತ್ತಿದ್ದವೆಂಬುದೇ ಆ ಮಹತ್ವಪೂರ್ಣ ಅಂಶ. ಶಾಸನದ ಕೊನೆಯ ಭಾಗದಲ್ಲಿ ಬರುವ,

"ಯೀ ಸ್ತ್ರಳಕ್ಕೆ ಪ್ರತಿಪತ್ತುವಿನ ಸ್ತ್ರಳಮೆಂನ್ತೆಂದೊಡೆ, ಶ್ರೀ ವೇಳುಗ್ರಾಮಿಯ ಮಲ್ಲೇಶ್ವರ, ಶ್ರೀಮತು ಪಿರಿಯಗ್ರಹಾರಂ ನೇಸರಿಗೆಯ ಕಲಿದೇವರು, ಗೋಕಾಗೆಯ ಬಲ್ಲೇಶ್ವರ, ಹಲಸಿಗೆ ಪಂನ್ನಿತ್ಸಾಸಿರದ ಕೊಟ್ಟುಂಬಾಗೆಯ ವಿಜಯಮೇಶ್ವರ, ಗೋಳಿಯ ಹಳ್ಳಿಯ ಕಲಿದೇವರು-ಯಿಂತೀ ಮಠಂಗಳಿಗೆ ಇದು ಗುರು ಪೀಳಿಗೆ". ಈ ಮಾತುಗಳು ನಮ್ಮ ಮೇಲಣ ಹೇಳಿಕೆಗೆ ಉಪಷ್ಟಂಬಕಗಳಾಗಿವೆ.

೩) ಕೆಲವು ಶಾಸನಗಳಿಂದ ಕಾಳಾಮುಖ ಮಠಗಳ ಯತಿಗಳು ನೈಷ್ಠಿಕ ಬ್ರಹ್ಮ ಚಾರಿಗಳಾಗಿರಬೇಕೆಂಬುದು ಸ್ಪಷ್ಟವಾಗುತ್ತದೆ.

"ಈ ಸ್ಥಾನಮನಾಳ್ವ ಗೊರವರ್ ಅಖಣ್ಡಿತ ಬ್ರಹ್ಮಚಾರಿಯಪ್ಪುದು. ಬ್ರಹ್ಮ ಚರ್ಯಹೀನರನೀ ಸಮಯದ ಗೊರವರ್ ಕಳೆವರ್ ಈ ಪದ್ಧತಿಯಂ ಶಿಲಾಲೇಖ ಮಾಡಿ ನಿರಿಸಿದರ್"[೭]

"...ಜಪಸಮಾಧಿ ಸಂಪನ್ನರಪ್ಪ ಶ್ರೀಮತ್ ಸೋಮೇಶ್ವರ ಪಂಡಿತ ದೇವರ್ಗೆ ಕಾಲಂಕರ್ಚಿ ನೈಷ್ಠಿಕಸ್ಥಾನ ಮಾಡಿ"

ಪಳ್ಳವುರ ಗ್ರಾಮವನ್ನು ತಳವೃತ್ತಿಯಾಗಿಬಿಟ್ಟರು.[೮]

"ಇದು ನೈಷ್ಠಿಕಸ್ಥಾನಂ ನೈಷ್ಠಿಕರಲ್ಲದವರ್ ಇರಲಾಗದು. ಬ್ರಹ್ಮಚರ್ಯೆ ಕೆಟ್ಟು ನಡೆವ ತಪೋಧನರನ್ನು ನಾಡನಾಳ್ವ ಅರಸರು ಮಂನೆಯರು ಮೋರಿಂಗೇರಿಯ ಪನ್ನಿರ್ವರು ಇದ್ದು ಅವರನ್ನು ಪೊರಮಾಡಿಸಿ ಅವರ ಸಂತತಿಯ ನೈಷ್ಠಿಕರನಿರಿಸುವುದು"[೯] ಶಾಸನಗಳಲ್ಲಿ

---

೭ –ಅದೇ–ಶಾಸನ ಸಂಖ್ಯೆ–೧೩, ಶಿಗ್ಗಾಂವ್, ಕ್ರಿ.ಶ. ೭೮೭.

೮ –ಅದೇ–ಶಾಸನ ಸಂಖ್ಯೆ–೧೭, ಶಿಗ್ಗಾಂವ್, ಕ್ರಿ.ಶ. ೧೦೫೫.

೯ S.I.I. Vol. IX Part 1 No. 101 ಮೋರಗೇರಿ. ಕ್ರಿ.ಶ. ೧೦೮೫. ಹಡಗಲಿ ತಾಲೂಕಿನ ಹಲಗೊಂಡ ಗ್ರಾಮದ ಕ್ರಿ. ಶ. ೧೧೯೩ರ ಶಾಸನದಲ್ಲಿಯೂ ಈ ಮಾತನ್ನು ಹೇಳಿದೆ.

ಬರುವ ಇಂತಹ ಮಾತುಗಳಿಂದ ಕೆಲವು ಕಾಳಾಮುಖ ಮಠಗಳು ನೈಷ್ಠಿಕ ಸ್ಥಾನಗಳಾಗಿದ್ದು, ಅಂಥವುಗಳನ್ನು ಹೊಸದಾಗಿ ಸ್ಥಾಪಿಸುವ ಪದ್ಧತಿಯೂ ಇದ್ದ ಬಗ್ಗೆ ತಿಳಿದುಬರುತ್ತದೆ.

ಇಂದಿನ ವೀರಶೈವ ಮಠಗಳು ಅವು ಗುರುಸ್ಥಲ ಮಠಗಳಾಗಿರಬಹುದು, ವಿರಕ್ತ ಮಠಗಳಾಗಿರಬಹುದು–ಹೊಂದಿರುವ ಚೌಕಟ್ಟನ್ನು ಅವು ನಡೆಸಿಕೊಂಡು ಬರುತ್ತಿರುವ ಕಾರ್ಯಗಳನ್ನು ಹಾಗೂ ಅವುಗಳಲ್ಲಿ ಕೆಲವು ಮಠಗಳು ಹೊಂದಿರುವ ಶಾಖಾಮಠಗಳನ್ನೂ ನೋಡಿದಾಗ ಅವುಗಳಿಗೆ ಈ ಕಾಳಾಮುಖ ಮಠಗಳೇ ಮಾದರಿಗಳಾಗಿರಬೇಕು. ಇಲ್ಲವೆ ಆ ಕಾಳಾಮುಖ ಮಠಗಳೇ ಕೆಲವಾದರೂ ಬಸವಣ್ಣನವರ ಅನಂತರ ವೀರಶೈವ ಪ್ರಭಾವಕ್ಕೆ ಒಳಗಾಗಿ ವೀರಶೈವ ಮಠಗಳಾಗಿ ಪರಿವರ್ತನೆಗೊಂಡಿರಬೇಕೆನಿಸುತ್ತದೆ. ಸ್ಥಾವರಲಿಂಗ ಪೂಜೆಯನ್ನು ಒಪ್ಪದ ವೀರಶೈವ ಧರ್ಮದ ಪ್ರಭಾವದಿಂದಾಗಿ ಶೈವ ದೇವಾಲಯಗಳಿಗೆ ಹೊಂದಿಕೊಂಡಿರುತ್ತಿದ್ದ ಕಾಳಾಮುಖ ಮಠಗಳು ದೇವಸ್ಥಾನಗಳಿಂದ ದೂರಸರಿದು ಅವುಗಳ ಸಂಬಂಧವನ್ನು ತಪ್ಪಿಸಿಕೊಂಡು ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲಾರಂಭಿಸಿದಂತೆ ತೋರುತ್ತದೆ. ಈ ಮಾತು ಗುರುಸ್ಥಲ ಮಠಗಳಿಗೆ ಹೆಚ್ಚು ಅನ್ವಯಿಸುತ್ತದೆ. ಈಗಲೂ ಗುರುಸ್ಥಲ–ಮಠಗಳಲ್ಲಿ, ಪುತ್ರವರ್ಗದ–ಮಠಗಳಲ್ಲಿ ಗದ್ದುಗೆಯನ್ನೊಳಗೊಂಡ ಒಂದು ಕಟ್ಟಡವಿದ್ದು ಅದನ್ನೇ ಮಠವೆಂದು ಕರೆಯಲಾಗುತ್ತದೆ. ಅದಕ್ಕೆ ಹೊಂದಿಕೊಂಡೇ ಆ ಮಠದ ಸ್ವಾಮಿಗಳ ವಂಶಸ್ಥರ ಮನೆ ಇರುತ್ತದೆ. "....ಅವರ ಸಂತತಿಯ ನೈಷ್ಠಿಕರ ನಿರಿಸುವುದು" ಎಂಬ ಶಾಸನೋಕ್ತ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಪುತ್ರವರ್ಗದ ಮಠಗಳಲ್ಲಿ ಅದೇ ಸಂತತಿಯವರೇ ಆ ಮಠಗಳಿಗೆ ಸ್ವಾಮಿಗಳಾಗುವುದು ಇಂದಿನವರೆಗೂ ಮುಂದುವರಿದುಕೊಂಡು ಬಂದಿದೆ. ಇತ್ತಿತ್ತಲಾಗಿ ಆ ಮಠಗಳಿಗೆ ಸ್ವಾಮಿಗಳನ್ನು ಮಾಡುವುದು ಕಡಿಮೆಯಾಗುತ್ತಿದೆ. ಆದರೆ ಶಿಷ್ಯವರ್ಗದ ಮಠಗಳಲ್ಲಿ ಹಾಗಾಗಿಲ್ಲ.

ಹೀಗೆ ಒಂದು ಕಾಲಕ್ಕೆ ಕರ್ನಾಟಕದಲ್ಲಿ ಬಹಳ ಪ್ರಬಲವಾಗಿದ್ದ ಕಾಳಾಮುಖ ಮಠಗಳು ಬಸವಣ್ಣನವರ ಕಾಲದಲ್ಲಾದ ಧಾರ್ಮಿಕ ಕ್ರಾಂತಿಯಿಂದಾಗಿ ಕೆಲವು ಇಲ್ಲವಾದರೆ, ಇನ್ನು ಕೆಲವು ವೀರಶೈವ ಮಠಗಳಾಗಿ ಪರಿವರ್ತನೆಗೊಂಡಂತೆ ತೋರುತ್ತದೆ. ಇದಕ್ಕೆ ಇಂದಿನ ಹೂಲಿಯ ಮಠವನ್ನು ಉದಾಹರಣೆಯಾಗಿ ವಿದ್ವಾಂಸರು ಕೊಡುತ್ತಾರೆ. ಬಸವಣ್ಣನವರ ಅನಂತರ ಒಂದೆರಡು ಶತಮಾನಗಳ ಅವಧಿಯಲ್ಲಿ ಕರ್ನಾಟಕದಲ್ಲಿದ್ದ ಬೇರೆ ಬೇರೆ ಶೈವಗಳಲ್ಲಿ ಸಮನ್ವಯ ಪ್ರಕ್ರಿಯೆ ಆರಂಭಗೊಂಡು, ಪರಸ್ಪರ ಕೊಳು–ಕೊಡುವ ಮೂಲಕ ಸಂಘಟನೆ ಬಲಗೊಳ್ಳುತ್ತ ನಡೆದು, ಕಾಲ ಕಳೆದಂತೆ ಕಾಳಾಮುಖ ಮಠಗಳೇ ಇಲ್ಲವಾಗಿ ವೀರಶೈವ ಗುರು–ವಿರಕ್ತ ಮಠಗಳ ಸಂಖ್ಯೆ ಹೆಚ್ಚುತ್ತ ಹೋಗಿರುವುದನ್ನು ಶಾಸನಗಳ ಅಧ್ಯಯನದಿಂದ ತಿಳಿಯಬಹುದಾಗಿದೆ. ಅವುಗಳಿಗೆ ದಾನದತ್ತಿಗಳನ್ನೂ ಬಿಡಲಾಗಿದೆ.

"ಮಹಾರಾಜಶ್ರೀ ಯಿಂಮಡಿ ಬರಿಗೆಯ ನಾಯಕರು ಅಬ್ಬಿಗೆರೆಯ ಸ್ಥಳದಲ್ಲಿ ತಮ್ಮ

ಗುರುಸ್ವಾಮಿ ಪರುವತ್ತ ದೇವರಿಗೆ ಪುಣ್ಯವಾಗಬೇಕೆಂ"ದು ಮಠಕ್ಕೆ ದತ್ತಿ ಬಿಟ್ಟಿದ್ದಾರೆ.೧೦

"ನೌಂವಾಲಗುಂದ ಹಿರೇಮಂಟದ (ಮಠದ) ಕೆಳಗೆ"೧೧

"ಬಳಹನೂರ ಅರುವತ್ತೊಕ್ಕಲು ಮುಂತಾಗಿ ಹಂಗರಿಗೆಯ(ದೊ)ಗಿ ನಾಯಕರು ನಾಲ್ವತು ಬಾಡದ ಜಂಗಮ ಕಂಥೆಯ ವಡೆಯರಿಗೆ ಹೇಮಳಂಬಿ ಸೌತ್ಸರದಿಂ ಸಾಲಿವಾಹನ ಸಖನಾಮ ವರ್ಷ ೧೪೬೬".

ಭೂದಾನ ಮಾಡಿದ ಉಲ್ಲೇಖ.೧೨

"....ಶ್ರೀಗಿರಿಯಧೀಶ್ವರ ಶಿವನಂ ಮನ ಪ್ರಾಣಲಿಂಗ ಗೇಕಿನ ಕಟ್ಟೆಯ ಮಹತ್ತು ಮಲ್ಲಿಕಾರ್ಜುನ ದೇವರಿಗೆ" ಮುಳುಗುಂದ ವಳಿತದ ಕಲ್ಲೂರು ಗ್ರಾಮವನ್ನು ಚಲುಡಿ ಕದಂಬ ನಾಯಕನು ದಾನವಾಗಿ ಕೊಟ್ಟು ಅದರ ಉತ್ಪನ್ನದಿಂದ ಮಲ್ಲಿಕಾರ್ಜುನ ದೇವರಿಗೆ ನೈವೇದ್ಯ, ಜಂಗಮಾರ್ಚನೆ ಮಾಡುತ್ತಿರಬೇಕೆಂದು ನೇಮಿಸಿದೆ."೧೩

"ಕಪ್ಪಡಿಯ ಸಂಗಮಗೆ ಜಂಗಮದೇವರ ದಾಸೋಹ ಕಾರಣವಾಗಿ ದೇವಿ ನಾಯಕರ ಮಠದ" ಬರಿಗೆಯ ಮಲ್ಲಿನಾಯಕರು ನೈವೇದ್ಯಕ್ಕಾಗಿ ಭೂಮಿಯನ್ನು ದತ್ತಿಬಿಟ್ಟು ಲಿಂಗ ಮುದ್ರೆ ಕಲ್ಲು ಹಾಕಿಸಿದ್ದಾರೆ.೧೪

"....ಗುರುಲಿಂಗ ಜಂಗಮದ ತೀ(ರ್ಥ) ಪಡದ ಅಂದು ಸತ್ವರಯಿಂದು ಶ್ರೀ ಶರಣು ಕೆರೆ ಅರವೆ ಮೂಡಿಸಿದ"೧೫

"ಶಿವಾಚಾರ ಕುಲಾಚಾರಕ್ಕೆ ಹೊರಗು"೧೬

ಕ್ರಿ.ಶ. ೧೫೧೫ರ ಲಕ್ಷ್ಮೇಶ್ವರ ಶಾಸನದಲ್ಲಿ೧೭ ರೇವಣಸಿದ್ಧ ಮರುಳಸಿದ್ಧರ ಉಲ್ಲೇಖ ಬರುತ್ತದೆ. ಕೆಳದಿ ಸೋಮಶೇಖರ ನಾಯಕನು ಮುರಿಗೆಯ ಸಂಪ್ರದಾಯದ ಶಾಂತವೀರ

---

೧೦ S.I.I. Vol. XV ಶಾಸನ ಸಂ. ೭೧೯. ಅಬ್ಬಿಗೇರಿ ಸು. ೧೭ನೆಯ ಶತಮಾನ.

೧೧ –ಅದೇ–ಶಾ ಸಂ. ೭೧೧. ಹಾಲಕುಸೂಗಲ್, ಸು. ೧೬ನೆಯ ಶತಮಾನ.

೧೨ –ಅದೇ– ಶಾ.ಸಂ. ೬೪೯, ಬಳಗಾನೂರು (ಮುದ್ದೇಬಿಹಾಳ ತಾಲೂಕು), ಕ್ರಿ.ಶ. ೧೫೪೪.

೧೩ –ಅದೇ– ಶಾ.ಸಂ. ೬೭೨, ಕಲ್ಲೂರು (ಗದಗ ತಾಲೂಕ) ಸು. ೧೫ನೆಯ ಶತಮಾನ.

೧೪ –ಅದೇ– ಶಾ. ಸಂ. ೬೬೮, ತಂಗಡಗಿ (ಮುದ್ದೇಬಿಹಾಳ ತಾಲೂಕು). ಕ್ರಿ.ಶ. ೧೪೪೫;

೧೫ –ಅದೇ– ಶಾ.ಸಂ. ೬೧೯. ಕೊಟಗಿ (ಧಾರವಾಡ ತಾಲೂಕು) ಕ್ರಿ.ಶ. ಸು. ೧೩, ೧೪ನೆಯ ಶತಮಾನ.

೧೬ –ಅದೇ–, ಶಾ.ಸಂ ೬೯೨, ಹುಯಿಲಗೋಳ (ಗದಗ). ಕ್ರಿ.ಶ. ೧೫೬೩.

೧೭ S.I.I. Vol. XX ಶಾ.ಸಂ. ೩೯೦. ಲಕ್ಷ್ಮೇಶ್ವರ.

ಸ್ವಾಮಿಗಳಿಗೆ ಮಠ ಕಟ್ಟಿಸಿಕೊಟ್ಟುದನ್ನು ಕ್ರಿ.ಶ. ೧೭೪೧ರ ನಗರ (ಶಾ. ಸಂ. ೩೩) ಶಾಸನ ಹೇಳುತ್ತದೆ. ಸೊರಬ ತಾಲೂಕಿನ ೩೬೦ನೆಯ ಶಾಸನದಲ್ಲಿ ಕರೆಯಪ್ಪ ಗೌಡನು ಶಿವ ಪೂಜೆಯ ಮುಪ್ಪಿನಯ್ಯನಿಗೆ ಮಠ ಕಟ್ಟಿಸಿದ್ದನ್ನು ಉಲ್ಲೇಖಿಸಲಾಗಿದೆ. ಅದೇ ತಾಲೂಕಿನ ಕ್ರಿ. ಶ. ೧೬೬೫ರ ಮತ್ತೊಂದು ಶಾಸನದಲ್ಲಿ ಮಿರಾಸಿಮಠದ ಕಂಥೆಯ ವಡೆಯರಿಗೆ ಗ್ರಾಮವೊಂದನ್ನು ದಾನ ಮಾಡಿದ ಬಗ್ಗೆ ಹೇಳಿದೆ, ಚಳ್ಳಕೆರೆ ತಾಲೂಕಿನ (ಶಾ.ಸಂ. ೨) ಕ್ರಿ.ಶ. ೧೬೮೫ರ ಶಾಸನ ಜಂಗಮ ಚೆನ್ನಯ್ಯರಿಗೆ ತಮ್ಮ ಹಳ್ಳಿಯ ಮಠಕ್ಕಾಗಿ ರಾಮೊಡೆಯನ ಮಗ ದಾನಮಾಡಿದುದನ್ನು ತಿಳಿಸುತ್ತದೆ. ಸೋಮಶೇಖರ ನಾಯಕರು ವೀರೇಶ್ವರ ದೇವರ ಪೂಜಾರಿ ಭದ್ರನ ಮಗ ಬಸವನಿಗೆ ದಾನವಿತ್ತಂತೆ ಸಾಗರ ತಾಲೂಕಿನ ಒಂದು ಶಾಸನದಲ್ಲಿ (ಕ್ರಿ. ಶ. ೧೬೭೨?) ಬಂದಿದೆ. "ಶುದ್ಧ ಶಿವಾಚಾರ ಸಂಪನ್ನರಪ್ಪ ಶ್ರೀ ಮಲ್ಲಿಕಾರ್ಜುನ.... ಲಿಂಗ ದೇವರ ದಿವ್ಯ ಪಾದಾರಾಧಕರುಂ ಅಪ್ಪ ಮುಕ್ತಿನಾಥ ಒಡೆಯರು" ಎಂದು ಸೊರಬ ತಾಲೂಕು (ಶಾ.ಸಂ.೧೨೬) ಶಾಸನದಲ್ಲಿ ಬರುತ್ತದೆ. ಅದೇ ತಾಲೂಕಿನ ಇನ್ನೊಂದು ಶಾಸನದಲ್ಲಿ (ಶಾ.ಸಂ.೩೫೪) ಕೆಳದಿ ಶಿವಪ್ಪನಾಯಕನು ಹಂಚಿನ ಬಸಪ್ಪ ಒಡೆಯರಿಗೆ....ಕಟ್ಟಿಸಿಕೊಟ್ಟ ಧರ್ಮ ಎಂದು ಉಲ್ಲೇಖಿತವಾಗಿದೆ. ಎಸ್ ಐ ಐ ಸಂಪುಟ ೧೮ರಲ್ಲಿ ಹಾವೇರಿಯ ವಿರಕ್ತಮಠ ನಿರ್ಮಾಣಗೊಂಡುದನ್ನು ಹೇಳುವ ಒಂದು ಶಾಸನವಿದೆ. ಇವೆಲ್ಲ ವೀರಶೈವಕ್ಕೆ ಸಂಬಂಧಿಸಿದ ಶಾಸನಗಳೆನ್ನಬಹುದು.

ಕರ್ನಾಟಕದ ಉದ್ದಗಲಕ್ಕೂ ವಿರಕ್ತಮಠಗಳು ಹಬ್ಬಿಕೊಂಡಿವೆ. ಕರ್ನಾಟಕದ ಹೊರಗೂ ಕೂಡ ಕೆಲವು ಮಠಗಳ ಶಾಖಾಮಠಗಳಿವೆ. ವಿರಕ್ತಮಠಗಳು ಸಾಮಾನ್ಯವಾಗಿ ತಮ್ಮ ಪರಂಪರೆಯನ್ನು ವೈರಾಗ್ಯನಿಧಿ ಪ್ರಭುದೇವರಿಂದ ಇಲ್ಲವೆ ತೋಂಟದ ಸಿದ್ಧಲಿಂಗ ಯತಿಯಿಂದ ಆರಂಭಿಸುತ್ತವೆ.

# ವೀರಶೈವ ಮಠಗಳ ಕೊಡುಗೆ
## (ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ಕ್ಷೇತ್ರಗಳಲ್ಲಿ)

—ಡಾ. ಸಂಗಮೇಶ ಸವದತ್ತಿಮಠ

'ವೀರಶೈವ' ರೂಪುಗೊಳ್ಳುವ ಮೊದಲು ಎಲ್ಲೆಡೆ ಶೈವಧರ್ಮ, ಶೈವಮಠಗಳ ಒಂದು ದಿವ್ಯ ಪರಂಪರೆ ಭಾರತದಾದ್ಯಂತ ಪ್ರಾಚೀನ ಕಾಲದಿಂದ ಬೆಳೆದು ಬಂದಿತ್ತು. "ತ್ರಿಲೋಚನ ಶಿವಾಚಾರ್ಯರು ಬರೆದ ಸಿದ್ಧಾಂತ ಸಾರಾವಳಿಯಲ್ಲಿ ಶೈವ ಸಂತಾನವು ಅನಂತೇಶ್ವರ ಮೊದಲಾದ ಅಷ್ಟವಿದ್ಯೇಶ್ವರ ಕ್ರಮವಾಗಿ ಬಂದು ದೂರ್ವಾಸ ಮಹಾಮುನಿಯಿಂದ ಈ ಭೂಲೋಕದಲ್ಲಿ ಉದ್ಭವಿಸಿತು. ಆ ದೂರ್ವಾಸ ಋಷಿಯಲ್ಲಿ ದೀಕ್ಷಾದಿ ಅನುಗ್ರಹವನ್ನು ಪಡೆದ ಋಷಿಗಳಿಗೆ ಭಾರತ ವರ್ಷದಲ್ಲಿ ಭೋಗಮೋಕ್ಷಪ್ರದವಾದುದರಿಂದ ಶ್ರೇಷ್ಠವಾದ ಕದಂಬ ವೃಕ್ಷದ ಅಲಂಕಾರದೊಡನೆ ಕೂಡಿದ 'ಆಮರ್ದಕ' ಎಂಬ ಹೆಸರಿನ ಮಠವು ಉಂಟಾಗಿತ್ತು, ಎನ್ನುವ ಅರ್ಥವುಳ್ಳ ಒಂದು ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆಯುವಾಗ ವ್ಯಾಖ್ಯಾತ ಅನಂತ ಶಿವಾಚಾರ್ಯರು 'ಭೂಲೋಕದಲ್ಲಿ ಜಂಬೂದ್ವೀಪದ ಮಧ್ಯದಲ್ಲಿರುವ ಮೇರು ಪರ್ವತಕ್ಕೆ ದಕ್ಷಿಣದಲ್ಲಿರುವ ಹಿಮಾಲಯ ಪರ್ವತಕ್ಕೆ ದಕ್ಷಿಣ ಪಾರ್ಶ್ವದಲ್ಲಿ ಭಾರತವರ್ಷವೆಂಬುದು ಪ್ರಸಿದ್ಧವಾಗಿದೆ. ಅದರಲ್ಲಿರುವ ಭರತಖಂಡದಲ್ಲಿ ದೂರ್ವಾಸ ಮಹಾಮುನಿಯಿಂದ ಸ್ಥಾಪಿಸಲ್ಪಟ್ಟದ್ದು 'ಆಮರ್ದಕ ಮಠ'. ಆ ಮಠದಲ್ಲಿ ಕೌಶಿಕ ಮುಂತಾದವರು ದಕ್ಷಿಣಮೂರ್ತಿ ಸ್ವರೂಪರಾದ ಶ್ರೀಕಂಠ ಪರಮೇಶ್ವರರನ್ನು ಉಪಾಸಿಸಿ ಅವರಿಂದ ಆಗಮಜ್ಞಾನವನ್ನು ಪಡೆದುಕೊಂಡಿದ್ದರು. ಇವರುಗಳ ಶಿಷ್ಯರು ಸನತ್ಕುಮಾರ ಸನಕ, ಸನಾತನ, ಸನಂದ ಎಂಬ ನಾಲ್ವರು. ಆಮೇಲೆ ಆಮರ್ದಕ ಮಠದಿಂದ ಸರಿಯಾಗಿ ಗಣಭದ್ರ, ಗೋಳಕಿ, ಪುಷ್ಪಗಿರಿ, ಎಂಬ ಮೂರು ಮಠಗಳೂ ವಿಭಾಗವಾದವು...."೧ ಎಂದು ಸೋಮಸುಂದರಂ ಪಿಳ್ಳೆ ಅವರು ಶೈವಮಠಗಳ ಪ್ರಾಚೀನತೆಯನ್ನು ದೂರ್ವಾಸ ಮುನಿಯ ಕಾಲಕ್ಕೆ ಒಯ್ದಿದ್ದಾರೆ. ಕರ್ನಾಟಕದ ಮಟ್ಟಿಗೆ ಹೇಳಬೇಕಾದರೆ ಲಕುಲೀಶ, ಪಾಶುಪತ, ಕಾಳಾಮುಖ ಶೈವಮುನಿಗಳು ಸ್ಥಾನಪತಿಗಳಾಗಿ ಇಲ್ಲಿ ದೇವಸ್ಥಾನಗಳನ್ನು ನೋಡಿಕೊಳ್ಳುವ ಸಮಯದಲ್ಲಿ ತಾವು ವಾಸಿಸುತ್ತಿದ್ದ 'ಮನೆ'ಗಳೆ 'ಮಠ' ಎನಿಸಿಕೊಳ್ಳುತ್ತಿದ್ದವು. ಒಬ್ಬ ಆಧ್ಯಾತ್ಮ ಜೀವಿ ತನ್ನೊಡನೆ ಇತರರ ಕಲ್ಯಾಣ

---

೧ ವೀರಶೈವ ತತ್ತ್ವ ಪ್ರಕಾಶ-(ಸಂ) ಶಿ.ಶಿ.ಬಸವನಾಳ (೧೯೪೧) —ಶೈವಧರ್ಮದ ವಿಕಾಸ ಪುಟ ೨೪೭-೨೪೮.

ವನ್ನೂ ಬಯಸುತ್ತ ತನ್ನ ಮನೆಯನ್ನು ಧಾರ್ಮಿಕ-ಸಾಮಾಜಿಕ, ಶೈಕ್ಷಣಿಕ ಚಟುವಟಿಕೆಗಳಿಗೆ ತೆರೆದಿಟ್ಟರೆ ಅದು 'ಮಠ' ಎಂಬ ಅಭಿದಾನವನ್ನು ಪಡೆಯುತ್ತಿದ್ದಂತೆ ತೋರುತ್ತದೆ. ವಚನಕಾರರು ತಮ್ಮ ಮನೆಗಳನ್ನೂ ಈ ಬಗೆಯ 'ಮಠ'ಗಳನ್ನಾಗಿಸಿದ್ದರೆಂಬುದನ್ನು ಅವರ ವಚನಗಳಲ್ಲಿಯೇ ಉಲ್ಲೇಖಿಸಿರುವುದನ್ನು ಗುರುತಿಸಬಹುದು. ನಮ್ಮ ಮಠಕ್ಕೆ ನೀವು ಬನ್ನಿ ನಿಮ್ಮ ಮಠಕ್ಕೆ ನಾವು ಬರುತ್ತೇವೆಂಬ ಮಾತು ಅಲ್ಲಿ ಮೂಡಿ ಬಂದಿದೆ. ಸಾಲೋಟಿಗೆ ಮಠ, ಕೋಡಿಮಠ ಕ್ರಿ. ಶ. ಹನ್ನೊಂದು ಹನ್ನೆರಡನೆಯ ಶತಮಾನದ ವೇಳೆಗೆ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಕೇಂದ್ರಗಳಾಗಿದ್ದವೆಂದು ಶಾಸನಗಳ ಮೂಲಕ ತಿಳಿದು ಬರುತ್ತದೆ.

ಶೈವರಿಗೆ ದೇವಸ್ಥಾನ ಅನಂತರ ಮಠ ಎರಡೂ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಕೇಂದ್ರಗಳಾಗಿದ್ದರೆ, ವೀರಶೈವರಿಗೆ ಸ್ಥಾವರ ಲಿಂಗಪೂಜೆ ನಿಷಿದ್ಧವಾದ್ದರಿಂದ ಕೇವಲ ಮಠಗಳೇ ಆ ಕಾರ್ಯವನ್ನು ನಿರ್ವಹಿಸುವ ಸಂಪೂರ್ಣ ಹೊಣೆಯನ್ನು ಹೊತ್ತ ಕೇಂದ್ರಗಳಾದವು. ೧೨ನೆಯ ಶತಮಾನದಲ್ಲಿ ನಡೆದ ಶಿವಶರಣರ ಸಾಮಾಜಿಕ, ಧಾರ್ಮಿಕ ಕ್ರಾಂತಿಯಿಂದಾಗಿ ಆಗಲೇ ಕ್ಷೀಣಿಸುತ್ತಿದ್ದ ಶೈವ ಧರ್ಮ ಕರ್ನಾಟಕದಲ್ಲಿ ಸಂಪೂರ್ಣ ಮಾಯವಾಗತೊಡಗಿತು. ಪಂಚ ಪೀಠಾಧಿಪತಿಗಳು ಈ ಸಮಯವನ್ನು ಸದುಪಯೋಗಪಡಿಸಿಕೊಂಡು ದೇಶದಾದ್ಯಂತ ತಮ್ಮ ಎಲ್ಲಾ ಶಾಖಾ ಮಠಗಳ ಮೂಲಕ ವೀರಶೈವ ಧಾರ್ಮಿಕ ಸಾಮಾಜಿಕ ಶೈಕ್ಷಣಿಕ ನೆಲೆಗಟ್ಟನ್ನು ಇನ್ನಷ್ಟು ಭದ್ರಪಡಿಸಲು ಅನುಕೂಲ ಮಾಡಿಕೊಟ್ಟರು. ವೇದ, ಶಿವಾಗಮ, ಉಪನಿಷತ್ತು ಮುಂತಾದವುಗಳೊಡನೆ ಶಿವಶರಣರ ವಚನ-ವಿಚಾರ ಧಾರೆಯನ್ನು ಅಳವಡಿಸಿಕೊಳ್ಳತೊಡಗಿದರು. ಕಲ್ಯಾಣ ಕ್ರಾಂತಿಯಲ್ಲಿ ಹೊಮ್ಮಿದ ಜಂಗಮರು ಎಲ್ಲೆಡೆ ಚದುರಿ ತಾವು ಉಳಿದುಕೊಂಡಲ್ಲೆ 'ಮಠ' ನಿರ್ಮಿಸಿ ತಾವೂ ಧಾರ್ಮಿಕ ಸಾಮಾಜಿಕ ಶೈಕ್ಷಣಿಕ ಕಾರ್ಯಗಳನ್ನು ನಡೆಸತೊಡಗಿದರು. ವಿರಕ್ತರಾದ ಈ ಜಂಗಮರ ಶಿಷ್ಯ ಪರಂಪರೆಯ ಮಠಗಳು, ಪೀಠ ಸೂತ್ರದ ವಂಶ-ಪರಂಪರೆಯ ಗುರುಸ್ಥಲದ ಮಠಗಳು ವೀರಶೈವ ಧರ್ಮ, ಸಾಹಿತ್ಯ ಸಮಾಜ ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಕಾರ್ಯ ಮಾಡತೊಡಗಿದಾಗ, ಪ್ರಾಯಶಃ ಯಾರು ಯಾರು ಯಾವ ಯಾವ ಕಾರ್ಯಗಳನ್ನು ಮಾಡಬೇಕು ಎಂಬ ಬಗೆಗೆ ಹೊಂದಾಣಿಕೆ ಮೊದ-ಮೊದಲು ಇದ್ದಿರಬೇಕು. ಆದರೆ ಕಾಲ ಗತಿಸಿದಂತೆ ಈ ಎರಡೂ ಬಗೆಯ ಮಠಗಳ ಕಾರ್ಯ ನಿರ್ವಹಣೆಗೆ ಸಂಬಂಧಿಸಿದಂತೆ ಗೊಂದಲ ಉಂಟಾಯಿತು. ಈ ಬಗೆಯ ಗೊಂದಲ ಇದ್ದಾಗ್ಯೂ ವೀರಶೈವ ಮಠಗಳು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಸಾಹಿತ್ಯಿಕ ಕ್ಷೇತ್ರಗಳಲ್ಲಿ ಸಲ್ಲಿಸಿರುವ, ಸಲ್ಲಿಸುತ್ತಿರುವ ಸೇವೆ ಅಪಾರವಾಗಿದೆ. ಪ್ರಾಚೀನ ಕಾಲದಿಂದ, ಆಧುನಿಕ ಕಾಲದವರೆಗಿನ ಅವಧಿಯಲ್ಲಿ ವೀರಶೈವ ಮಠಗಳು ಮಾನವ ಕುಲದ ಉನ್ನತಿಗೆ ನೀಡಿದ ಕಾಣಿಕೆ ಅತ್ಯಮೂಲ್ಯವಾಗಿದೆ. ಅದನ್ನು ಸಾದ್ಯಂತವಾಗಿ ವಿವರಿಸುವುದು ಒಂದು ಲೇಖನ

ರೂಪದಲ್ಲಿ ಸಾಧ್ಯವಿಲ್ಲವಾದ್ದರಿಂದ ಮಹತ್ವದ ಅಂಶಗಳನ್ನು ಕೆಲವು ಮಠಗಳನ್ನು ಮಾತ್ರ ಪರಿಗಣಿಸಿ ಅವುಗಳ ಆಧಾರದ ಮೇಲೆ ಅವು ನೀಡಿದ ಕಾಣಿಕೆಯ ಒಟ್ಟು ಸ್ವರೂಪವನ್ನು ಗುರುತಿಸಲು ಇಲ್ಲಿ ಪ್ರಯತ್ನ ಮಾಡಲಾಗಿದೆ.

ಕ್ರಿ. ಶ. ಹನ್ನೊಂದನೆಯ ಶತಮಾನಕ್ಕಿಂತ ಮುಂಚೆ ವೀರಶೈವ ಮಠಗಳಲ್ಲಿ ವೇದ, ಶಿವಾಗಮ, ಉಪನಿಷತ್ತು, ಮೀಮಾಂಸೆ, ದರ್ಶನಗಳು, ಯೋಗ, ಕಾವ್ಯ, ನಾಟಿಕಾ (ದೃಶ್ಯ ಕಾವ್ಯ) ಮುಂತಾದವುಗಳನ್ನು ಕಲಿಸಲಾಗುತ್ತಿತ್ತು. ಶೈವ ಮಠಗಳೂ, ದೇವಸ್ಥಾನಗಳಲ್ಲಿರುತ್ತಿದ್ದ ವಿದ್ಯಾ ಕೇಂದ್ರಗಳಲ್ಲಿಯೂ ಈ ಬಗೆಯ ವಿದ್ಯಾಭ್ಯಾಸವನ್ನು ಮಾಡಿಸಲಾಗುತ್ತಿತ್ತು. ಬಸವಣ್ಣನವರೂ ಕಪ್ಪಡಿ ಸಂಗಮದ ಇಂಥದೇ ಒಂದು ವಿದ್ಯಾ ಕೇಂದ್ರದಲ್ಲಿ ಅಧ್ಯಯನ ಮಾಡಿದರು. ಸಂಸ್ಕೃತದ ಮೂಲಕ ಶಿಕ್ಷಣವನ್ನು ಪಡೆಯಬೇಕಾಗುತ್ತಿತ್ತು. ಋಷಿ, ಮುನಿ, ಆಚಾರ್ಯರು ತಾವು ಆಯ್ದ ವಿದ್ಯಾರ್ಥಿಗಳಿಗೆ ಕಟ್ಟುನಿಟ್ಟಾಗಿ ವಿದ್ಯಾದಾನಗೈಯ್ಯುತ್ತಿದ್ದರು. ಉಚ್ಚವರ್ಗದ-ವಿದ್ಯಾರ್ಥಿಗಳಿಗೆ ಪ್ರಾಶಸ್ತ್ಯ ಇತ್ತು. ಆದರೆ ಇತರ ಜಾತಿಯ ವಿದ್ಯಾರ್ಥಿಗಳಿಗೂ ಶಿಕ್ಷಣ ದೊರೆಯುತ್ತಿತ್ತು. ಚಾಲುಕ್ಯ ವಿಕ್ರಮಾದಿತ್ಯನ ದಂಡಾಧೀಶನಾಗಿದ್ದ ಮಹಾದೇವನು ಇಟ್ಟಿಗೆಯಲ್ಲಿ ವಿದ್ಯಾದಾನಕ್ಕಾಗಿಯೇ ಮಠವೊಂದನ್ನು ಕಟ್ಟಿಸಿ 'ಸರಸ್ವತಿ ಮಠ'ವೆಂದು ಹೆಸರಿಸಿದ್ದನಂತೆ. ಬೆಳಗಾವಿ ಜಿಲ್ಲೆಯ ಹೂಲಿಮಠ, ಶಿವಮೊಗ್ಗ ಜಿಲ್ಲೆಯ ಕೋಡಿಮಠ, ವಿಜಾಪುರ ಜಿಲ್ಲೆಯ ಸಾಲೋಟಗಿ ಮಠ ಇವು ಅತ್ಯಂತ ಪ್ರಾಚೀನ ಶೈಕ್ಷಣಿಕ ಮಠಗಳೆನಿಸಿದ್ದವು. ವ್ಯಾಕರಣ, ಭಾಷೆ, ಧರ್ಮ, ಕಾವ್ಯ, ನಾಟಕ ಮುಂತಾದ ವಿಷಯಗಳಿಗೆ ಸಂಬಂಧಪಟ್ಟ ಶಿಕ್ಷಣ ಈ ಮಠಗಳಲ್ಲಿ ನಡೆಯುತ್ತಿತ್ತು. ಹದಿಮೂರು, ಹದಿನಾಲ್ಕನೆಯ ಶತಮಾನಗಳ ಅನಂತರ ವಿದ್ಯಾಭ್ಯಾಸಕ್ಕಾಗಿಯೇ ಕೆಲ ಮಠಗಳನ್ನು ಸ್ಥಾಪಿಸಿದಂತೆ ತೋರುತ್ತದೆ. 'ಓದಿಸೋಮಠ', 'ಟೀಕಿನಮಠ', 'ಟಿಪ್ಪಣಿ ಮಠ', 'ಓಲೆಮಠ', 'ಸಾಲಿಮಠ' ಇಂತಹ ಹಲವಾರು ಮಠಗಳು ವಿದ್ಯಾದಾನಕ್ಕಾಗಿಯೇ ಮೀಸಲಾದ ಮಠಗಳಿದ್ದಂತೆ ತಿಳಿದು ಬರುತ್ತದೆ. ಹನ್ನೆರಡನೆಯ ಶತಮಾನದಲ್ಲಿ ಕಾಯಕಕ್ಕೆ ಒಂದು ವಿಶೇಷ ಸ್ಥಾನ ಲಭಿಸಿದ ಮೇಲೆ ಶಿಕ್ಷಣ ನೀಡುವುದನ್ನೇ ಒಂದು ಪ್ರಮುಖ ಕಾಯಕವೆಂದು ಈ ಮಠಾಧೀಶರು ಭಾವಿಸಿದರು. ವಿದ್ಯಾ ದಾನದೊಂದಿಗೇ ಧಾರ್ಮಿಕ ಶಿಕ್ಷಣವನ್ನೂ ನೀಡಲಾಗುತ್ತಿತ್ತು. ಸಮಾಜದ ಆರೋಗ್ಯಕರ ಸರ್ವತೋಮುಖ ಬೆಳವಣಿಗೆಗೆ ಶಿಕ್ಷಣ-ಧರ್ಮ ಇವೆರಡೂ ತೀರಾ ಅವಶ್ಯಕ ಎಂದು ವೀರಶೈವ ಮಠಾಧೀಶರು ನಂಬಿದ್ದರು. ಅಜ್ಞಾನ, ಮೂಢ ನಂಬಿಕೆಗಳನ್ನು ಕಳೆದು, ಧರ್ಮ-ತತ್ತ್ವಾಚರಣೆಯ ಮೂಲಕ ಮಾನಸಿಕ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಸರ್ವ ಸಮಾನತೆಯ ಸಹ ಬಾಳ್ವೆ ನಡೆಸಿ ಆತ್ಮೋನ್ನತಿಯನ್ನು ಸಾಧಿಸಲು ವಿದ್ಯೆಯ ಅವಶ್ಯಕತೆ ತೀವ್ರವಾಗಿರುವುದನ್ನು ಮಠಗಳು ಕಂಡುಕೊಂಡವು. ಕೆಲವು ವೀರಶೈವ ಮಠಗಳಲ್ಲಿ ಕೇವಲ ಜ್ಞಾನಾರ್ಜನೆಗೆ ಅಷ್ಟೇ ಅಲ್ಲ ಜೀವನೋಪಾಯಕ್ಕೆ ಅನುಕೂಲವಾಗುವ ೧೦೧ ಕಸಬುಗಳನ್ನೂ ಕಲಿಸುವ ಏರ್ಪಾಟು ಇತ್ತೆಂದು ತಿಳಿದು ಬರುತ್ತದೆ. "ವೀರಶೈವ

ಮಠಗಳು ಕೇವಲ ಧಾರ್ಮಿಕ ಕೇಂದ್ರಗಳೆಂದು ಹೆಸರಾಗಿರದೆ ಅವು ಶಿಕ್ಷಣ ಪ್ರಸಾರದ ಗುರಿಯನ್ನುಳ್ಳವೆಂದು ಜನಪ್ರಿಯವಾಗಿದ್ದವು."೧

ವಿಜಯನಗರ ಅರಸರಲ್ಲಿ ಪ್ರೌಢದೇವರಾಯನ ದಂಡೇಶನಾಗಿದ್ದ ಲಕ್ಕಣ್ಣ, ಅನಂತರದ ಕೆಳದಿ, ಮೈಸೂರು-ಸ್ವಾಧಿ, ಬೀಳಗಿ ರಾಜ ಮನೆತನಗಳು, ವೀರಶೈವ ಸಂಸ್ಥಾನಿಕರು; ಮಠಗಳಲ್ಲಿ ಶಿಕ್ಷಣ ಮುಂದುವರಿಯುವಂತೆ ಪ್ರೋತ್ಸಾಹಿಸಿದರು. ವಿಪುಲ ವಚನ ಸಾಹಿತ್ಯ ಲಭ್ಯವಾಗುತ್ತಿದ್ದಂತೆ ಅದನ್ನು ಅಭ್ಯಸಿಸುವ ಪ್ರವೃತ್ತಿಯನ್ನು ಬೆಳೆಸಲಾಯಿತು. ಸಂಸ್ಕೃತದ ಮೇಲಿನ ವ್ಯಾಮೋಹ ಕಡಿಮೆಯಾಗಿ ಆಗಮ ಉಪನಿಷತ್ತು ಇತ್ಯಾದಿ ಅಧ್ಯಯನ ಕಠಿಣವಾಗತೊಡಗಿತು. ಮರಾಠಿ, ಇಂಗ್ಲೀಷ ಉರ್ದು ಪ್ರಭಾವದಿಂದ ಕನ್ನಡವೂ ಸೊರಗತೊಡಗಿತು. ಇದನ್ನರಿತ ಮಠಾಧೀಶರು ತಮ್ಮ ಪ್ರಾಚೀನ ಪರಂಪರೆಯನ್ನು ಉಳಿಸಿಕೊಂಡು ಬರಬೇಕೆಂದು ತಮ್ಮ ಮಠಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ತೆರೆಯಲಾರಂಭಿಸಿದರು.

ಬ್ರಿಟಿಶ್ ಆಳ್ವಿಕೆ ಆರಂಭವಾದ ಮೇಲೆ ಶಿಕ್ಷಣ ಪದ್ಧತಿಯಲ್ಲಿ ತೀವ್ರ ಬದಲಾವಣೆಗಳು ಆದವು. ಮಠದಯ್ಯನವರ ಶಾಲೆಗಳ ಬದಲಾಗಿ ಸರಕಾರಿ ಶಾಲೆಗಳು ಬಂದವು. ನೌಕರಿ ಆಕರ್ಷಣೆ, ಜನಸಂಖ್ಯಾ ಹೆಚ್ಚಳ, ರಾಜಕೀಯ ಸಾಮಾಜಿಕ ಬದಲಾವಣೆಗಳು ಇವುಗಳಿಂದಾಗಿ ಮಠದ ಶಾಲೆಗಳು ಮಹತ್ವವನ್ನು ಕಳೆದುಕೊಂಡವು. ಈ ಹಂತದಲ್ಲಿ ಮಠಗಳು ಬೇರೊಂದು ರೀತಿಯಲ್ಲಿ ಶೈಕ್ಷಣಿಕ ಸೇವೆಯನ್ನು ಮುಂದುವರಿಸಲು ಅಣಿಯಾದವು.

೧) ಭಕ್ತರ ಸಹಾಯ-ಸಹಕಾರದಿಂದ ಮಠದಿಂದಲೆ ಅಂತಹ ಸಾರ್ವಜನಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದು.

೨) ಸರಕಾರ ಅಥವಾ ಇನ್ನಾವುದೇ ಸಂಸ್ಥೆಯಿಂದ ಸ್ಥಾಪನೆಗೊಂಡ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಬಯಸುವ ವೀರಶೈವ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ-ವಸತಿ ನಿಲಯಗಳನ್ನು ನಡೆಸಿದ್ದು.

ಇದರಿಂದ ಬಡ, ಜಾಣ ವಿದ್ಯಾರ್ಥಿಗಳು ಉನ್ನತ ವಿದ್ಯೆಯನ್ನು ಪಡೆಯಲು ಸಾಧ್ಯವಾಗಿ ಇಡೀ ವೀರಶೈವ ಸಮಾಜ ಶೈಕ್ಷಣಿಕವಾಗಿ ಮುಂದುವರಿಯಲು ಸಹಾಯಕಾರಿಯಾಯಿತು. ವೀರಶೈವ ಮಠಗಳು ವೀರಶೈವ ವಿದ್ಯಾರ್ಥಿಗಳಿಗೆ ಪ್ರಾಶಸ್ತ್ಯವನ್ನು ನೀಡಿದರೂ ಬಸವಾದಿ ಪ್ರಮಥರ ಪ್ರಗತಿಪರ ವಚನ ಚಳುವಳಿಯ ಪ್ರಭಾವದಿಂದಾಗಿ ದಲಿತ ವರ್ಗದ ವಿದ್ಯಾರ್ಥಿಗಳಿಗೂ ವೀರಶೈವ ಮಠಗಳ ಪ್ರಸಾದ ನಿಲಯಗಳಲ್ಲಿ ಪ್ರವೇಶ ನೀಡಿದವು. ಅವರೂ

---

೧ Dr. B. S. Gadgimath-The Kayaka System-studies in education and culture. Ed: G. S. Halappa (K U D) 1919.

ಮೇಲೆ ಬರಲು ಸಹಾಯಕಾರಿಯಾಯಿತು. ಒಂದು ಕಾಲದಲ್ಲಿ ಬ್ರಾಹ್ಮಣರು ಮಾತ್ರ ವಿದ್ಯೆ ಪಡೆಯಲು ಅರ್ಹರು ಎಂಬ ಭಾವನೆಯನ್ನು ಬಿತ್ತಲಾಗಿತ್ತು. ಉತ್ತರ ಕರ್ನಾಟಕ ದಲ್ಲಿಂತೂ "ಉಳ್ಳಾಗಡ್ಡಿ ತಿಂಬೋ ಈ ಲಿಂಗಾಯತ ಮಕ್ಕಳಿಗೆ ವಿದ್ಯಾ ಹತ್ತುತ್ತದೆಯೆ? ಹೆಗಲ ಮೇಲೆ ಬಾರಕೋಲು ಹಾಕಿಕೊಂಡು ದುಡ್ಯೋದೇ ಇವ್ರಿಗೆ ಒಳ್ಳೇದು" ಎಂದು ಶಾಲೆ ಕಲಿಯಲು ಬಯಸಿದ ವೀರಶೈವ ಮಕ್ಕಳನ್ನು ಹೀಯಾಳಿಸಿದ್ದೂ ಉಂಟು. ಈ ಬಗೆಯ ಅಣಕ ವೀರಶೈವ ಮಕ್ಕಳಿಗೆ ಇನ್ನೆಂದೂ ಬಾರದಿರಲೆಂದು ವೀರಶೈವ ಮಠಗಳು ಅವರ ಆಧುನಿಕ ಶಿಕ್ಷಣಕ್ಕೆ ಅನುಕೂಲ ಮಾಡಿಕೊಡಲು ಕಂಕಣ ಬದ್ಧವಾದವು. ಶೈಕ್ಷಣಿಕ ಕ್ಷೇತ್ರದಲ್ಲಿ ವೀರಶೈವ ಮಠಗಳು ಈಗಲೂ ಮಾಡುತ್ತಿರುವ ಸೇವೆ ಅನುಪಮವಾದುದು. ಕೆಲವು ಉದಾಹರಣೆಗಳ ಮೂಲಕ ವೀರಶೈವ ಮಠಗಳು ಈ ಕ್ಷೇತ್ರದಲ್ಲಿ ಹೇಗೆ ಕೆಲಸ ಮಾಡುತ್ತಿವೆಯೆಂಬುದನ್ನು ಇಲ್ಲಿ ಸಂಕ್ಷೇಪದಲ್ಲಿ ನಿರೂಪಿಸಲಾಗಿದೆ—

೧೯೦೯ರಲ್ಲಿ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ವಿಜಾಪುರ ಜಿಲ್ಲೆಯ ಬಾದಾಮಿ ಹತ್ತಿರ 'ಶಿವಯೋಗ ಮಂದಿರ' ಎಂಬ ಧಾರ್ಮಿಕ ಶಿಕ್ಷಣ ಕೇಂದ್ರವನ್ನು ಸ್ಥಾಪಿಸಿದರು. ವೀರಶೈವ ಮಠಾಧೀಶರು ಕಾಶಿಗೆ ಹೋಗಿ ವೇದಾಂತವನ್ನು ಅಧ್ಯಯನ ಮಾಡುವುದಕ್ಕಿಂತ ಇಲ್ಲಿಯೇ ವೀರಶೈವ ತತ್ತ್ವ-ವಚನ ಶಾಸ್ತ್ರ ಅಧ್ಯಯನ ಮಾಡುವಂತಾದರೆ ಒಳಿತು ಎಂದು ಭಾವಿಸಿ ಸಮಗ್ರ ಯೋಜನೆಯೊಂದನ್ನು ಹಾಕಿಕೊಂಡು ಹಿರಿಯ ಮಠಾಧೀಶರ, ಭಕ್ತರ ಸಹಕಾರದಿಂದ ಅದನ್ನು ಕಾರ್ಯರೂಪಕ್ಕೆ ತಂದರು. ಶಿವಯೋಗ ಮಂದಿರದಲ್ಲಿ ಕಲಿಯುವ ವಟುಗಳಿಗೆ, ಭಾವಿ ಮಠಾಧೀಶರಿಗೆ ಶಿಕ್ಷಣದ ಮಹತ್ವವನ್ನು ಒತ್ತಿ ಹೇಳಿ ತಮ್ಮ ತಮ್ಮ ಮಠಗಳ ಮೂಲಕ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಲು ಅದು ಸಾಧ್ಯವಿಲ್ಲದಿದ್ದಲ್ಲಿ ಉಚಿತ ಪ್ರಸಾದ ನಿಲಯಗಳನ್ನು ಸ್ಥಾಪಿಸಲು ಸಲಹೆ ನೀಡಿದರು. ಇದರಿಂದ ಶಿವಯೋಗ ಮಂದಿರದಲ್ಲಿ ಶಿಕ್ಷಣ ಪಡೆದು ಹೊರ ಬಂದ ವೀರಶೈವ ಮಠಾಧೀಶರಲ್ಲಿ ಅನೇಕರು ಆ ಕಾರ್ಯವನ್ನು ಅತ್ಯಂತ ಯಶಸ್ವಿಯಾಗಿ ನಡೆಸಿಕೊಂಡು ಬಂದರು. ವೀರಶೈವ ಸಾಹಿತ್ಯ, ಧರ್ಮ, ಸಂಸ್ಕೃತಿಯ ಸರಿಯಾದ ಅಧ್ಯಯನಕ್ಕೆ ಅವಶ್ಯಕವಾದ ಒಳ್ಳೆಯ ಗ್ರಂಥಾಲಯವನ್ನೂ ಅಲ್ಲಿ ಸ್ಥಾಪಿಸಿದರು. ಉತ್ತಮ ಹಸ್ತಪ್ರತಿ ಭಾಂಡಾರ, ಗ್ರಂಥ ಪ್ರಕಟನೆಗೆ ಬೇಕಾಗುವ ಮುದ್ರಣಾಲಯ, ಉತ್ತಮ ನೈಸರ್ಗಿಕ ಪರಿಸರ ಇತ್ಯಾದಿ ಅಂಶಗಳು ಶಿವಯೋಗ ಮಂದಿರದ ವೈಶಿಷ್ಟ್ಯವನ್ನೂ ಮಹತ್ವವನ್ನೂ ಎತ್ತಿ ತೋರುತ್ತವೆ.

ಶಿಕ್ಷಣ ಕ್ಷೇತ್ರದಲ್ಲಿ ಶ್ರೀ ಸಿದ್ಧಗಂಗಾ ಮಠದ ಕಾಣಿಕೆ ಅತ್ಯಮೂಲ್ಯವಾದುದು. ೧೯೧೭ರಲ್ಲಿ ಸಂಸ್ಕೃತ ಪಾಠಶಾಲೆ, ಉಚಿತ ಪ್ರಸಾದ ನಿಲಯ ಸ್ಥಾಪಿಸುವುದರ ಮೂಲಕ ಪ್ರಾರಂಭವಾದ ಶೈಕ್ಷಣಿಕ ಚಟುವಟಿಕೆ ಇಂದಿಗೂ ಅನೂಚಾನವಾಗಿ ಬೆಳೆಯುತ್ತ ಸಾಗಿವೆ. ೧೯೩೭ರಲ್ಲಿ ಸಂಸ್ಕೃತ ಪಾಠಶಾಲೆ ಕಾಲೇಜಾಗಿ ಪರಿವರ್ತನೆಗೊಂಡಾಗ ಇಡೀ ದೇಶದ ಗಮನ ಸೆಳೆಯುವಂತಾಯಿತು. ೧೯೩೦ರಲ್ಲಿ ಶ್ರೀ ಮ. ನಿ. ಪ್ರ. ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಶ್ರೀ ಸಿದ್ಧಗಂಗಾ ಮಠಕ್ಕೆ ಅಧಿಪತಿಗಳಾಗಿ ಬಂದ ಅನಂತರದ

ಅವಧಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ನೀಡಿದ ಕೊಡುಗೆ ಅಪಾರ. ವೀರಶೈವರಿಗಷ್ಟೇ ಅಲ್ಲದೆ ಹರಿಜನ–ಗಿರಿಜನ ವಿದ್ಯಾರ್ಥಿಗಳಿಗೂ ಯಾವ ಭೇದ–ಭಾವವಿಲ್ಲದೆ ಪ್ರವೇಶ ನೀಡಲಾಗಿದೆ. ಶಿಶುಶಾಲೆ, ಪ್ರಾಥಮಿಕ, ಮಾಧ್ಯಮಿಕ, ಪದವಿಪೂರ್ವ, ಪದವಿಕಾಲೇಜು, ಸಂಜೆ ಕಾಲೇಜು, ಕುರುಡರ ಶಾಲೆ, ವೃತ್ತಿ ಶಾಲೆ ಇತ್ಯಾದಿ ಒಟ್ಟು ೭೦ ಶಿಕ್ಷಣ ಸಂಸ್ಥೆಗಳನ್ನು ಶ್ರೀಮಠ ಈಗ ನಡೆಸುತ್ತಿರುವುದು ಸಾಮಾನ್ಯ ಸಂಗತಿಯಲ್ಲ. ಸಹಸ್ರಾರು ವಿದ್ಯಾರ್ಥಿಗಳು ಉಚಿತ ಪ್ರಸಾದ–ವಸತಿ ನಿಲಯಗಳಲ್ಲಿದ್ದು ವಿವಿಧ ಬಗೆಯ ಶಿಕ್ಷಣ ಪಡೆಯುತ್ತಿದ್ದಾರೆ. ಶ್ರೀಮಠದ ಇನ್ನೊಂದು ವಿಶೇಷ ಕೊಡುಗೆ: ಗ್ರಾಮಾಂತರ ಪ್ರದೇಶಗಳಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಪ್ರತಿಶತ ೯೦ ರಷ್ಟು ಶಿಕ್ಷಣ ಸಂಸ್ಥೆಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ನಡೆಸುತ್ತಿರುವುದು. ಇಂಥ ಸಂಸ್ಥೆಗಳಲ್ಲಿ ಸುಮಾರು ೪೫೦೦ ವಿದ್ಯಾರ್ಥಿಗಳಿಗೆ ಅಶನ, ವಸತಿ ಸೌಕರ್ಯಗಳೊಂದಿಗೆ ಅನಾಥ ಮಕ್ಕಳಿಗೆ ವಿದ್ಯಾಭ್ಯಾಸದ ಖರ್ಚು ಮತ್ತು ಉಚಿತ ಬಟ್ಟೆಯನ್ನು ಒದಗಿಸಲಾಗುತ್ತಿದೆ. ಕುರುಡ ಮಕ್ಕಳಿಗೆ, ಅಂಗವಿಕಲ ಮಕ್ಕಳಿಗೆ ಪಾಠಶಾಲೆ, ಸ್ವ ಉದ್ಯೋಗ ತರಬೇತಿ ಸಂಸ್ಥೆಗಳನ್ನು ಶ್ರೀ ಮಠ ನಡೆಸುತ್ತಿದೆ. ಸಂಗೀತ, ನೃತ್ಯ, ಗಮಕ ವಾದ್ಯಸಂಗೀತ, ನಾಟಕ, ವೀರಭದ್ರನೃತ್ಯ ಮುಂತಾದ ಕಲೆಗಳಲ್ಲಿ ತರಬೇತಿ ನೀಡಲಾಗುತ್ತಿದೆ. ಗ್ರಂಥ ಭಂಡಾರ, ವಾಚನಾಲಯಗಳಿವೆ. ಶೈಕ್ಷಣಿಕ ಕ್ಷೇತ್ರಕ್ಕೆ ಮಠಗಳು ಹೇಗೆ ಸೇವೆ ಸಲ್ಲಿಸಬಹುದೆಂಬುದಕ್ಕೆ ಮಾದರಿಯಾಗಿ ಸಿದ್ಧಗಂಗಾಮಠ ನಿಂತಿದೆ.

ಇಪ್ಪತ್ತನೆಯ ಶತಮಾನದ ಮಧ್ಯಕಾಲದವರೆಗೆ ಪ್ರಸಾದನಿಲಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ನಡೆಸುವುದರ ಮೂಲಕ ವೀರಶೈವ ಶೈಕ್ಷಣಿಕ ಕ್ರಾಂತಿಯ ರೂವಾರಿಗಳೆನಿಸಿದ ಶ್ರೇಷ್ಠರಲ್ಲಿ ಧಾರವಾಡ ಮುರುಘಾಮಠದ ಶ್ರೀ ಮೃತ್ಯುಂಜಯಪ್ಪಗಳು ಹಾಗೂ ಶ್ರೀ ನಿ. ಪ್ರ. ಮಹಾಂತ ಶಿವಯೋಗಿಗಳು, ಹಾಲಕೆರೆ ಶ್ರೀ ಅನ್ನದಾನ ಮಹಾಸ್ವಾಮಿಗಳು, ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು, ಸಿದ್ಧಗಂಗೆಯ ಡಾ|| ಶ್ರೀ ಶಿವಕುಮಾರ ಸ್ವಾಮಿಗಳು ಮುಂತಾದ ಶ್ರೀಗಳನ್ನು ಹೆಸರಿಸಬಹುದು. ೧೯೫೦ರ ಸುಮಾರಿಗೆ ಹಾಗೂ ಅನಂತರ ಕರ್ನಾಟಕದಾದ್ಯಂತ ಹಲವು ಮಠಗಳು ಈ ಬಗೆಯ ಶೈಕ್ಷಣಿಕ ಸೇವೆಗೈಯತೊಡಗಿವೆ. ಇತ್ತೀಚಿನ ಎರಡು ಮೂರು ದಶಕಗಳಲ್ಲಿ ಹುಬ್ಬಳ್ಳಿಯ ಮೂರುಸಾವಿರಮಠದ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಗದುಗಿನ ಶ್ರೀ ತೋಂಟದಾರ್ಯ ಮಠದ ಜಗದ್ಗುರು ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಇವರೀರ್ವರೂ ಈ ನಿಟ್ಟಿನಲ್ಲಿ ಸಮಾಜಕ್ಕೆ ಕೊಟ್ಟ ಕೊಡುಗೆ ಗಮನಾರ್ಹವಾದುದು. ಹುಬ್ಬಳ್ಳಿ ಮೂರುಸಾವಿರಮಠ ಸ್ತ್ರೀ ಶಿಕ್ಷಣಕ್ಕೆ ನೀಡಿದ ಆದ್ಯತೆ, ಕೀರ್ತನ ಮಹಾವಿದ್ಯಾಲಯ, ಹಿಂದಿ ಮಹಾವಿದ್ಯಾಲಯ ಮುಂತಾದವು ವಿಶೇಷವೆನಿಸಿದರೆ, ಗದುಗಿನ ತೋಂಟದಾರ್ಯಮಠ ಕೈಗಾರಿಕಾ ತರಬೇತಿ ಮುಂತಾದ ತಾಂತ್ರಿಕ ಶಿಕ್ಷಣಕ್ಕೆ ನೀಡಿದ ಆದ್ಯತೆ, ಒಕ್ಕಲುತನ ಯೋಗ ತರಬೇತಿ ಶಾಲೆಗಳು ವಿಶೇಷವೆನಿಸಿವೆ. ಸಾಮಾನ್ಯ ಶಿಕ್ಷಣವಲ್ಲದೆ ಈ ಬಗೆಯ ವಿಶಿಷ್ಟ ಶಿಕ್ಷಣ ನೀಡುವ ಸಂಸ್ಥೆಗಳನ್ನು ಈ ಮಠಗಳು ನಡೆಸುತ್ತಿವೆ. ಮೂರುಸಾವಿರಮಠ ಒಟ್ಟು ೩೫ ಕ್ಕೂ ಹೆಚ್ಚು

ಶಿಕ್ಷಣ ಸಂಸ್ಥೆಗಳನ್ನು ತೋಂಟದಾರ್ಯಮಠ ಒಟ್ಟು ೨೧ ಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳನ್ನು, ೧೧ ಪ್ರಸಾದ ನಿಲಯಗಳನ್ನು ನಡೆಸುತ್ತಿದೆ. ಒಂದು ಸ್ಥೂಲ ಸಮೀಕ್ಷೆಯಿಂದ ವೀರಶೈವ ಮಠಗಳಲ್ಲಿ ಪ್ರತಿಶತ ೮೦ ಕ್ಕೂ ಹೆಚ್ಚು ಸಂಖ್ಯೆಯ ಮಠಗಳು ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿವೆ ಹಾಗೂ ಶಿಕ್ಷಣ ಸಂಸ್ಥೆಗಳಿಗೆ ಪೂರಕವಾಗುವಂತೆ ಉಚಿತ ಪ್ರಸಾದ ನಿಲಯಗಳನ್ನು ನಡೆಸುತ್ತಿವೆ. ಕರ್ನಾಟಕದಲ್ಲಿ ಬೇರೆ ಯಾವ ಧರ್ಮದವರ ಮಠಗಳೂ ಇಷ್ಟು ವ್ಯಾಪಕ, ವ್ಯವಸ್ಥಿತ ರೀತಿಯಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಕೊಡುಗೆ ನೀಡಿಲ್ಲ, ನೀಡುತ್ತಿಲ್ಲ ವೆಂಬುದು ಗಟ್ಟಿ ಅಂಶ.

ಧಾರ್ಮಿಕ ಕ್ಷೇತ್ರದಲ್ಲಿ ವೀರಶೈವ ಮಠಗಳು ಸಾಮಾನ್ಯವಾಗಿ ಒಂದೇ ಬಗೆಯ ಚಟುವಟಿಕೆಗಳನ್ನು ನಡೆಸುತ್ತ ಬಂದಿವೆ. ವೀರಶೈವ ಧರ್ಮ ತತ್ತ್ವಗಳ ಅಧ್ಯಯನ-ಅಧ್ಯಾಪನ-ಸಂಶೋಧನೆಗೆ ಸಂಬಂಧಪಟ್ಟಂತೆ ಅಧ್ಯಯನ ಸಂಸ್ಥೆಗಳನ್ನು ಸ್ಥಾಪಿಸಿದ್ದು, ವೀರಶೈವಕ್ಕೆ ಸಂಬಂಧಿಸಿದ ಶ್ರೇಷ್ಠ ಹಾಗೂ ಸಾಧಾರಣ ಕೃತಿಗಳನ್ನು ಪ್ರಕಟಿಸಿದ್ದು, ಪುರಾಣ ಪ್ರವಚನ, ಕೀರ್ತನೆ, ಜಾತ್ರೆ, ಉತ್ಸವ, ಸಮ್ಮೇಳನ, ಗೋಷ್ಠಿ ವಿಚಾರ ಸಂಕಿರಣ ಇತ್ಯಾದಿಗಳ ಮೂಲಕ ಧರ್ಮ ತತ್ತ್ವಗಳನ್ನು ಜನರ ಮೇಲೆ ಬಿಂಬಿಸಲು ಯತ್ನಿಸಿದ್ದು, ದೀಕ್ಷೆ, ಲಿಂಗಧಾರಣ, ಧಾರ್ಮಿಕ ಸ್ಥಳಗಳ ಜೀರ್ಣೋದ್ಧಾರ ಮಾಡಿಸಿದ್ದು, ಧರ್ಮಜಾಗ್ರತಿಗಾಗಿ ಅನುಷ್ಠಾನ, ಪಾದಯಾತ್ರೆ, ಜ್ಯೋತಿ ಸಂಚಾರ ಮಾಡಿಸಿದ್ದು, ಧಾರ್ಮಿಕ ಪತ್ರಿಕೆ, ನಿಯತಕಾಲಿಕಗಳನ್ನು ನಡೆಸಿದ್ದು, ವೀರಶೈವ ಬೋಧಕ ತರಬೇತಿ ಶಿಬಿರ, ವೀರಶೈವ ಧರ್ಮ ಪರಿಚಯ ಪರೀಕ್ಷೆಗಳನ್ನೇರ್ಪಡಿಸಿದ್ದು, ಮಾಸಿಕ ಶಿವಾನುಭವ ಗೋಷ್ಠಿ, ವೀರಶೈವ ಧರ್ಮದ ಬಗೆಗೆ ವಿದ್ವಜ್ಜನರ ಉಪನ್ಯಾಸ ಇತ್ಯಾದಿ ಏರ್ಪಡಿಸಿದ್ದು ಇವೇ ಮೊಂತಾದ ಕಾರ್ಯಕ್ರಮಗಳನ್ನು ವೀರಶೈವ ಮಠಗಳು ಜರುಗಿಸುತ್ತ ಬಂದಿವೆ. ಸಣ್ಣಮಠ ಇರಲಿ ದೊಡ್ಡಮಠ ಇರಲಿ ತಮ್ಮ ತಮ್ಮ ಅನುಕೂಲತೆಗಳಿಗೆ ತಕ್ಕಂತೆ ನಿರಂತರವಾಗಿ ಧಾರ್ಮಿಕ ಚಟುವಟಿಕೆಗಳನ್ನು ನಡೆಸುತ್ತ ಬಂದಿವೆ. ಈ ನಿಟ್ಟಿನಲ್ಲಿ, ಶಿವಯೋಗಮಂದಿರ, ಧಾರವಾಡ ಮುರುಘಾಮಠ, ಹುಬ್ಬಳ್ಳಿ ಮೂರುಸಾವಿರಮಠ, ಗದಗ ತೋಂಟದಾರ್ಯಮಠ, ಮುಂಡರಗಿ ಅನ್ನದಾನೀಶ್ವರಮಠ, ಹೊಸಪೇಟೆ ಕೊಟ್ಟೂರುಸ್ವಾಮಿಮಠ, ನಿಡಸೋಸಿ ದುರದುಂಡೀಶ್ವರಮಠ, ಮುರಗೋಡ ಮಹಾಂತೇಶ್ವರಮಠ, ಬೆಳಗಾವಿ ನಾಗನೂರ ಸ್ವಾಮಿಮಠ, ಇಲಕಲ್ಲ ವಿಜಯ ಮಹಾಂತೇಶ್ವರಮಠ, ಭಾಲ್ಕಿ ಹಿರೇಮಠ, ಮೈಸೂರು ಸುತ್ತೂರುಮಠ, ಬೆಂಗಳೂರು ಸರ್ಪಭೂಷಣಮಠ, ಹಾನಗಲ್ಲ ವಿರಕ್ತಮಠ. ಸಿರಿಗೆರೆಮಠ, ಶ್ರೀಶೈಲ, ಉಜ್ಜಯನಿ ಜಗದ್ಗುರು ಮಠಗಳು, ನಿಡುಮಾಮಿಡಿಮಠ, ನವಲಗುಂದ, ಕೊಪ್ಪಳ ಗವಿಮಠಗಳು ಹೀಗೆ ನೂರಾರು ಸಂಖ್ಯೆಯ ಮಠಗಳು ಹಲವಾರು ಧಾರ್ಮಿಕ ಕಾರ್ಯಕ್ರಮಗಳನ್ನು ನಿರಂತರವಾಗಿ ನಡೆಸುತ್ತ ಬಂದಿವೆ. ಒಂದು ಸಮೀಕ್ಷೆಯಂತೆ ನೂರಕ್ಕೆ ನೂರರಷ್ಟು ವೀರಶೈವ ಮಠಗಳು ಧಾರ್ಮಿಕ ಚಟುವಟಿಕೆಗಳನ್ನು ಶ್ರಾವಣ ಮಾಸದಲ್ಲಿ ಮೇಲೆ ಸೂಚಿಸಿದ ಕಾರ್ಯಕ್ರಮಗಳಲ್ಲಿ ಅರ್ಧದಷ್ಟನ್ನು ನಡೆಸುತ್ತವೆ.

ವೀರಶೈವ ಮಠಗಳು ಹೊರಡಿಸುವ ನಿಯತಕಾಲಿಕೆಗಳ ಸಂಖ್ಯೆ ಕರ್ನಾಟಕದಲ್ಲಿ ಬೇರೆ ಧರ್ಮೀಯ ಮಠಗಳು ಹೊರಡಿಸುವ ನಿಯತಕಾಲಿಕೆಗಳ ಸಂಖ್ಯೆಗಿಂತ ತೀರ ಹೆಚ್ಚಿಗಿದೆ. ಅವುಗಳ ಪ್ರಸಾರ ಸಂಖ್ಯೆಯೂ ಹೆಚ್ಚಿಗಿದೆ. ವೀರಶೈವ ಮಠಗಳು ವೀರಶೈವ ಧರ್ಮ-ತತ್ತ್ವ, ಸಾಹಿತ್ಯ, ಪುಣ್ಯಪುರುಷರು ಮುಂತಾದವುಗಳಿಗೆ ಸಂಬಂಧಿಸಿದಂತೆ ಹೊರಡಿಸುತ್ತಿರುವ ಪುಸ್ತಕಗಳ ಸಂಖ್ಯೆಯೂ ಗಮನಾರ್ಹವಾಗಿ ಅಧಿಕ ಪ್ರಮಾಣದಲ್ಲಿದೆ. ವೀರಶೈವಕ್ಕೆ ಇರುವ ಭವ್ಯ ಪರಂಪರೆ, ವಿಪುಲ ಸಾಹಿತ್ಯವೇ ಇದಕ್ಕೆ ಕಾರಣ. ವೀರಶೈವ ಮಠಗಳು ತಮ್ಮ ಧರ್ಮ-ತತ್ತ್ವ, ಸಾಹಿತ್ಯ ಪರಂಪರೆಯನ್ನು ಎಚ್ಚರಿಕೆಯಿಂದಲೆ ಕಾಯ್ದುಕೊಂಡು ಬಂದಿರುವುದು ಸ್ಪಷ್ಟವಾಗಿದೆ. ಒಟ್ಟಿನಲ್ಲಿ ಧಾರ್ಮಿಕ ಕ್ಷೇತ್ರದಲ್ಲಿಯೂ ವೀರಶೈವ ಮಠಗಳ ಕಾಣಿಕೆ ಸಣ್ಣದೇನಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಕೆಲವು ಮಠಾಧೀಶರ ನೇತೃತ್ವದಲ್ಲಿ ನಡೆಯುತ್ತಿರುವ ಧಾರ್ಮಿಕ ಚಟುವಟಿಕೆಗಳಲ್ಲಿ, ಮೂಲತತ್ತ್ವ ಪ್ರತಿಪಾದನಾತ್ಮಕ ಪ್ರಚಾರಕ್ಕಿಂತ ಸ್ವಪ್ರಚಾರ ಪ್ರಿಯತೆ, ಒಂದೇ ನಿರ್ದಿಷ್ಟ ದೃಷ್ಟಿಕೋನದಿಂದ ವೀರಶೈವ ಧರ್ಮ ಪ್ರಸಾರ, ತಮ್ಮದೆ ಸರಿ ಎನ್ನುವ ಹಟಮಾರಿಗಳ ಗುಂಪುಗಾರಿಕೆ ಮುಂತಾದ ಅನಾವಶ್ಯಕ ಅಹಿತಕರ ಬೆಳವಣಿಗೆ ಕಾಣುತ್ತಿವೆ. ವಸ್ತುನಿಷ್ಠವಾದ, ಸಾಧಾರಣವಾದ, ಸಂಶೋಧನಾತ್ಮಕ ದೃಷ್ಟಿಯಿಂದ ವಿವೇಚಿಸುವ ಹಾಗೂ ಸಾಮಾನ್ಯರನ್ನು ಗೊಂದಲಕ್ಕೆ ಈಡುಮಾಡದ ಧಾರ್ಮಿಕ ವಿಚಾರ ಧಾರೆಯ ಪ್ರಸಾರದ ಅಗತ್ಯತೆ ಇದೆ. ಹಿರಿಯ ಮಠಾಧೀಶರು ಈ ನಿಟ್ಟಿನಲ್ಲಿ ಇಡೀ ವೀರಶೈವ ಮಠಾಧೀಶರು ಒಮ್ಮುಖವಾಗಿ ಧರ್ಮ ತತ್ತ್ವ ಪ್ರಚಾರ ಪ್ರಣಾಲಿಯ ಮೂಲಭೂತ ಸೂತ್ರಗಳನ್ನು ನಿರ್ಮಿಸಿ ಎಲ್ಲರೂ ಅದೇ ವಿಚಾರಗಳನ್ನು ಪ್ರತಿಪಾದಿಸಲು ಕ್ರಮ ಕೈಕೊಳ್ಳಬೇಕಾಗಿದೆ. ಹೀಗಾಗದಿದ್ದಲ್ಲಿ ಒಬ್ಬೊಬ್ಬರೂ ಒಂದೊಂದು ಗುಂಪಾಗಿ ತಮತಮಗೆ ತಿಳಿದದ್ದನ್ನೇ ಹೇರುತ್ತ ಮೂಲ ಸತ್ಯವನ್ನು ತತ್ತ್ವವನ್ನು ಮರೆಮಾಚಿಬಿಡುವ ಅಪಾಯವಿದೆ. ಮಠ-ಮಠಗಳ ಅಥವಾ ಮಠಾಧೀಶರ ನಡುವೆ ಏನೇ ವೈಯಕ್ತಿಕ ಭಿನ್ನಾಭಿಪ್ರಾಯಗಳಿದ್ದರೂ ಧಾರ್ಮಿಕ ವಿಚಾರ-ಆಚಾರಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಅವರ ಅಭಿಪ್ರಾಯಗಳೆಲ್ಲ ಒಂದೇ ಆಗಿರಬೇಕಾದುದು ಸಾಮಾನ್ಯ ಭಕ್ತನ ದೃಷ್ಟಿಯಿಂದ ಹೆಚ್ಚು ಸಮಂಜಸವಾಗಿದೆ.

ಇನ್ನು ವೀರಶೈವ ಮಠಗಳ ಸಾಮಾಜಿಕ ಕೊಡುಗೆಯ ವಿಷಯಕ್ಕೆ ಬಂದರೆ-ಭಕ್ತರಿಗೆ ಮಠಗಳ ಬಗೆಗೆ ತುಂಬ ಗೌರವ ಭಾವ ಉಂಟಾಗುವಂತೆ ಅವು ಸಾಮಾಜಿಕ ಕಾರ್ಯ ಕೈಗೊಳ್ಳುತ್ತಿರುವುದು ಹೆಮ್ಮೆಯ ಅಂಶವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರರು ಗೈದ ಸಾಮಾಜಿಕ ಕ್ರಾಂತಿಯ ಬೇರುಗಳು ಇನ್ನೂ ವೀರಶೈವರಲ್ಲಿ ಉಳಿದುಕೊಂಡು ಬಂದಿರುವುದಕ್ಕೆ, ಕಾಲಕಾಲಕ್ಕೆ ಮಠಗಳು ಬಸವತತ್ತ್ವ ಪ್ರಚಾರ, ಅನುಷ್ಠಾನ ನಡೆಸಿಕೊಂಡು ಬಂದಿರುವುದೇ ಕಾರಣವಾಗಿದೆ. ಬಸವಪುರಾಣವನ್ನು ಮಠದಲ್ಲಿ ಹಚ್ಚುವುದೆಂದರೆ ಮಠಾಧೀಶರಿಗೆ ಒಂದು ಬಹು ದೊಡ್ಡ ಹೆಮ್ಮೆ, ಅಂತೆಯೆ ಅದ್ದೂರಿಯಿಂದ

ಬಸವ ಪುರಾಣವನ್ನು ಹಚ್ಚಿ ತನ್ಮೂಲಕ ಜನರಲ್ಲಿ ಬಸವಭಕ್ತಿ, ಬಸವ ತತ್ತ್ವಾಚರಣೆ ನೆಲೆಯೂರುವಂತೆ ಮಾಡಲಾಗಿದೆ.

ವೀರಶೈವ ಹಾಗೂ ಇತರ ಸಮಾಜದವರೆಲ್ಲರಿಗೆ ಉಪಯುಕ್ತವಾದ ಅನೇಕ ಬಗೆಯ ಸಾಮಾಜಿಕ ಕಾರ್ಯಗಳನ್ನು ಕಾಲಕಾಲಕ್ಕೆ ನೆರವೇರಿಸಿ ವೀರಶೈವ ಮಠಗಳು ಗಮನಾರ್ಹವಾಗಿ ಸಾಮಾಜಿಕ ಕೊಡುಗೆಯನ್ನು ನೀಡಿವೆ. ಅಂಥ ಕೆಲವು ಕಾರ್ಯಗಳೆಂದರೆ—

೧. ಕಲ್ಯಾಣಮಂಟಪಗಳನ್ನು ಕಟ್ಟಿಸಿ ಎಲ್ಲ ಸಮಾಜದವರಿಗೂ ಲಗ್ನ ಸಮಾರಂಭಗಳನ್ನು ಹೆಚ್ಚು ಆಯಾಸವಿಲ್ಲದೆ ಏರ್ಪಡಿಸಿಕೊಳ್ಳಲು ಅನುಕೂಲಮಾಡಿಕೊಟ್ಟದ್ದು. ಉತ್ತರ ಕರ್ನಾಟಕದಲ್ಲಿಯೇ ಅತ್ಯಾಧುನಿಕ ಭವ್ಯ ವಾಸ್ತುಶಿಲ್ಪದಿಂದ ಕೂಡಿದ ಸುಮಾರು ೩೦ ಲಕ್ಷ ರೂ.ಗಳ ವೆಚ್ಚದಲ್ಲಿ ಗದಗ ಶಹರದಲ್ಲಿ ಜ. ತೋಂಟದಾರ್ಯ ಮಠದ ಸಿದ್ಧಲಿಂಗೇಶ್ವರ ಕಲ್ಯಾಣಮಂಟಪ ಇದಕ್ಕೆ ತಕ್ಕ ಉದಾಹರಣೆಯಾಗಿದೆ. ಕಲ್ಯಾಣಮಂಟಪಗಳು ಇಲ್ಲದಲ್ಲಿಯೂ ವೀರಶೈವ ಮಠಗಳಲ್ಲಿಯೇ ಲಗ್ನ ಸಮಾರಂಭಗಳು ಜರುಗುತ್ತವೆ. ಕೆಲವು ಮಠಗಳಲ್ಲಿ ವೀರಶೈವರಲ್ಲದೆ ಬೇರೆ ಯಾವುದೇ ಧರ್ಮ, ಜಾತಿಯ ಜನರೂ ಮದುವೆ ಮಾಡಿಕೊಳ್ಳುತ್ತಾರೆ. ದೀನ–ದಲಿತ, ಬಡವರ್ಗದ ಜನರಿಗಾಗಿ ಮಠಗಳು ಸಾಮೂಹಿಕ ವಿವಾಹ ಸಮಾರಂಭಗಳನ್ನು ಏರ್ಪಡಿಸಿ ಎಲ್ಲ ವೆಚ್ಚವನ್ನೂ ಮಠಗಳೇ ನೋಡಿಕೊಂಡಿವೆ. ಹೊಸಪೇಟೆಯ ಜಗದ್ಗುರು ಶ್ರೀ ಕೊಟ್ಟೂರು ಮಠದ ಜಗದ್ಗುರುಗಳು ಒಮ್ಮೆಲೆ ಇಂಥ ಸಾವಿರಗಟ್ಟಲೆ ಲಗ್ನಗಳನ್ನು ಏರ್ಪಡಿಸಿದ ದಾಖಲೆ ಇದೆ! ವೀರಶೈವ ಮಠಗಳಲ್ಲಿ ಬಹುತೇಕ ಎಲ್ಲ ಮಠಗಳೂ ಈ ಬಗೆಯ ಸಾಮೂಹಿಕ ವಿವಾಹಗಳನ್ನು ಏರ್ಪಡಿಸಿವೆ.

೨. ಸಾಮೂಹಿಕ ವಿವಾಹಗಳಂತೆಯೆ ಸಾಮೂಹಿಕ ಲಿಂಗಧಾರಣೆ, ಲಿಂಗದೀಕ್ಷೆ, ದಾಸೋಹ ಮುಂತಾದವುಗಳನ್ನು ನಿಯಮಿತವಾಗಿ ನಡೆಸಿಕೊಂಡು ಬರುತ್ತಿವೆ.

೩. ಸೃಷ್ಟಿಯ ಅಸ್ತವ್ಯಸ್ತತೆಯಿಂದ, ಅಂದರೆ ಬರಗಾಲ, ಅತಿವೃಷ್ಟಿ, ಮಹಾಪೂರ, ಭೂಕಂಪ ಇತ್ಯಾದಿಗಳಿಂದಾಗಿ ಬಳಲಿದ ಜನರಿಗೆ ವೀರಶೈವ ಮಠಗಳು ಸಹಾಯಕ್ಕೆ ಬಂದ ಅನೇಕ ಉದಾಹರಣೆಗಳಿವೆ. ಗದುಗಿನ ಜ. ತೋಂಟದಾರ್ಯ ಮಠದ ಶ್ರೀಗಳು ೧೯೭೭ ರಲ್ಲಿ ಆಂಧ್ರಪ್ರದೇಶದಲ್ಲಿ ಭೀಕರ ಬರಗಾಲ ಸಂಭವಿಸಿದಾಗ ಲಾರಿಗಟ್ಟಲೆ ಬಟ್ಟೆಬರೆ, ದವಸ ಧಾನ್ಯಗಳನ್ನು ಪಾದಯಾತ್ರೆಯ ಮೂಲಕ ಸಂಗ್ರಹಿಸಿ ಹಂಚಿ ಬಂದಿದ್ದಾರೆ.

೪. ವೀರಶೈವ ಮಠಗಳು ಪ್ರಗತಿಶೀಲ ಯುವಕ ಸಂಘ, ಅಕ್ಕಮಹಾದೇವಿ ಮಹಿಳಾ ಸಂಘಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ಯುವಕ ಯುವತಿಯರು ಧಾರ್ಮಿಕ, ಸಾಮಾಜಿಕ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡಿವೆ. ಇದರಿಂದ ಯುವಕರಲ್ಲಿ ಸಹಕಾರ ಪರಸ್ಪರ ಗೌರವ ಭಾವ, ಸಾಂಘಿಕ ಶಕ್ತಿಯಲ್ಲಿ ವಿಶ್ವಾಸ ಬೆಳೆದು

ಸಮಾಜದ ಯುವಜನಾಂಗದಲ್ಲಿ ಒಂದು ಬಗೆಯ ಸೌಶಿಲ್ಯ ಬೆಳೆಯುವಲ್ಲಿ ಸಹಾಯಕಾರಿ ಯಾಗಿದೆ.

೫. ಧಾರ್ಮಿಕ–ಆಧ್ಯಾತ್ಮಿಕ ಚಟುವಟಿಕೆಗಳ ಮೂಲಕ ಮನಸ್ಸು ಬುದ್ಧಿಗಳನ್ನು ಶುದ್ಧಗೊಳಿಸುವ ಕಾರ್ಯದೊಂದಿಗೆ ಜನರ ದೇಹಾರೋಗ್ಯದ ಕಡೆಗೂ ವೀರಶೈವ ಮಠ ಗಳು ಗಮನಹರಿಸಿದ್ದು ಮೆಚ್ಚುವಂತಹದು. ತಜ್ಞ ವೈದ್ಯರುಗಳನ್ನು ಕರೆಸಿ ಆರೋಗ್ಯ ತಪಾಸಣೆಯ ಶಿಬಿರಗಳನ್ನು ಏರ್ಪಡಿಸುವುದು ಕ್ಯಾನ್ಸರ ಮುಂತಾದ ವಿಶಿಷ್ಟ ಆಸ್ಪತ್ರೆಗಳಿಗೆ ಧನಸಹಾಯ ಒದಗಿಸುವುದು. ಕಣ್ಣಿನ ಶಸ್ತ್ರಚಿಕಿತ್ಸಾ ಶಿಬಿರಗಳನ್ನು ನಡೆಸುವುದು ಇವೇ ಮೊದಲಾದ ಕಾರ್ಯಗಳನ್ನು ಹಲವಾರು ವೀರಶೈವ ಮಠಗಳು ಹಮ್ಮಿಕೊಳ್ಳುತ್ತಿವೆ. ಹುಬ್ಬಳ್ಳಿ ಜ. ಮೂರುಸಾವಿರಮಠದ ಕೊಡುಗೆ ಈ ನಿಟ್ಟಿನಲ್ಲಿ ಒಂದು ಅತ್ಯುತ್ತಮ ಉದಾಹರಣೆಯಾಗಿದೆ. ಬೆಳಗಾವಿ ಜಿಲ್ಲೆಯ ಘಟಪ್ರಭೆಯಲ್ಲಿ ಕ್ಷಯರೋಗ ನಿವಾರಣಾ ಅತ್ಯುತ್ತಮ ಆಸ್ಪತ್ರೆಯೊಂದನ್ನು ಪ್ರಾರಂಭ ಮಾಡಿದ್ದು ಸಣ್ಣ ಸಾಧನೆಯಲ್ಲ. ಸುಮಾರು ಅರ್ಧಕೋಟಿ ರೂಪಾಯಿಗಳ ವೆಚ್ಚದಲ್ಲಿ ೬೫ ಎಕರೆ ವಿಶಾಲ ಸಹಜ ಪ್ರಕೃತಿ ಸೌಂದರ್ಯದ ಮಡಿಲಲ್ಲಿ ಅತ್ಯಾಧುನಿಕ ಸಲಕರಣೆಗಳನ್ನು, ಉತ್ತಮ ವೈದ್ಯರನ್ನು, ರೋಗಿಗಳಿಗೆ ಬೇಕಾಗುವ ಉಚಿತ ಸೌಲಭ್ಯಗಳನ್ನು ಇಲ್ಲಿ ಕಲ್ಪಿಸಲಾಗಿದೆ. ಕಳೆದ ೨೫ ವರ್ಷಗಳಿಂದ ಈ ದವಾಖಾನೆ ನಡೆಯುತ್ತಿದ್ದು ಸುಮಾರು ಆರು ಲಕ್ಷಕ್ಕೂ ಹೆಚ್ಚು ರೋಗಿಗಳು ಇಲ್ಲಿ ಚಿಕಿತ್ಸೆ ಪಡೆದಿದ್ದಾರೆ. ಈ ಆಸ್ಪತ್ರೆಯಲ್ಲಿ ಬಡರೋಗಿಗಳಿಗೆ ಹಾಗೂ ಅವರನ್ನು ನೋಡಿಕೊಳ್ಳಲು ಬಂದ ಸಹಚರರಿಗೆ ಉಚಿತ ಊಟದ ವ್ಯವಸ್ಥೆ ಇದೆ. ೨೫ ಲಕ್ಷ ರೂ.ಗಳನ್ನು ಠೇವಣಿ ಯಾಗಿಟ್ಟು ಅದರ ಬಡ್ಡಿಯಲ್ಲಿ ನಿರಂತರವಾಗಿ ಈ ಉಚಿತ ಪ್ರಸಾದ ವ್ಯವಸ್ಥೆ ಮಾಡಲಾ ಗಿದೆ. ಅಲ್ಲದೆ ಧರ್ಮಶಾಲೆ, ವೃದ್ಧಾಶ್ರಮ, ಸಹಕಾರಭವನ, ವಸತಿಗೃಹ, ವೈದ್ಯ ಕೀಯ ಮ್ಯೂಜಿಯಂ, ಗ್ರಂಥಾಲಯ ಚಲನಚಿತ್ರಮಂದಿರ ಮುಂತಾದ ವ್ಯವಸ್ಥೆಗೆ ಯೋಜನೆ ಹಾಕಿಕೊಂಡು ಕಾರ್ಯಪ್ರವೃತ್ತರಾಗಿದ್ದಾರೆ. ಹುಬ್ಬಳ್ಳಿಯ ಮೂರುಸಾವಿರ ಮಠದ ಲಿಂ. ಜಗದ್ಗುರು ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳಿಂದ ಕಟ್ಟಿಸ ಲ್ಪಟ್ಟು ಈಗಿನ ಜಗದ್ಗುರುಗಳಿಂದ ಪ್ರಾರಂಭಿಸಲ್ಪಟ್ಟ ಶ್ರೀ ಜ. ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯ ಆವರಣದಲ್ಲಿ ಈ ಕ್ಷಯರೋಗ ಆಸ್ಪತ್ರೆ ಕಟ್ಟಡ ಇದೆ. ಇದೇ ರೀತಿ ಗದುಗಿನ ಜ. ತೋಂಟದಾರ್ಯಮಠವು ಹುಬ್ಬಳ್ಳಿಯ ಕ್ಯಾನ್ಸರ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆವ ಬಡ ರೋಗಿಗಳಿಗೆ ಉಚಿತ ಪ್ರಸಾದ ವ್ಯವಸ್ಥೆ ಮಾಡಿದ್ದಾರೆ.

೬. ದಲಿತ ವರ್ಗದ ಸುಧಾರಣೆಯಲ್ಲಿ ವೀರಶೈವ ಮಠಗಳು ಯಾವಾಗಲೂ ಮುಂಚೂಣಿಯಲ್ಲಿವೆ. ಮಠಗಳ ಉತ್ಸವಗಳಲ್ಲಿ ಹರಿಜನ ಗಿರಿಜನರಾದಿಯಾಗಿ ಎಲ್ಲರೂ ಪಾಲ್ಗೊಳ್ಳುತ್ತಾರೆ. ಸಾಮೂಹಿಕ ವಿವಾಹಾದಿಗಳಲ್ಲಿ ಹರಿಜನ–ಗಿರಿಜನರೂ ಸೌಲಭ್ಯ ಪಡೆಯುತ್ತಾರೆ. ಕೆಲವು ಮಠಾಧೀಶರು ಹರಿಜನ ಕೇರಿಗಳಿಗೂ ಹೋಗಿ ಅವರನ್ನು ಉದ್ಧರಿಸಿದ್ದಾರೆ. ಈ ನಿಟ್ಟಿನಲ್ಲಿ ಗದುಗಿನ ಜಗದ್ಗುರುಗಳು ಪ್ರತಿವರ್ಷ ಸಿದ್ಧರಾವು

ಜಯಂತಿಯಂದು ಹರಿಜನ-ಗಿರಿಜನರನ್ನು ಮಠಕ್ಕೆ ಆಹ್ವಾನಿಸಿ ಅವರಿಗೆ ಸಾಮೂಹಿಕ ಅನ್ನಸಂತರ್ಪಣೆ ಮಾಡುವರು. ಆ ವೇಳೆಯಲ್ಲಿ ಅವರ ಊಟದ ತಟ್ಟೆಗಳನ್ನು ಮೇಲ್ಜಾತಿಯವರೆನಿಸಿಕೊಳ್ಳುವ ಭಕ್ತರು ತೆಗೆಯುವರು. ಸಮಾಜದ ಎಲ್ಲ ವರ್ಗಗಳ ಜನತೆಯ ಸಮೀಪಕ್ಕೆ ತಾವೇ ಸ್ವತಃ ಹೋಗಿ ಸಮಾಜಕ್ಕೆ ಕಳಂಕವಾಗುವ ಅವರ ಕೆಟ್ಟ ಚಟಗಳನ್ನು ತಮ್ಮ ಜೋಳಿಗೆಗೆ ಹಾಕಿಕೊಂಡು ಇನ್ನೆಂದೂ ಅವರು ಆ ಚಟಕ್ಕೆ ಬಲಿಯಾಗದಂತೆ ಒಂದು ನವೀನತಮ 'ಮಹಾಂತ ಜೋಳಿಗೆ' ಕಾರ್ಯಕ್ರಮವನ್ನು ವಿಜಾಪೂರ ಜಿಲ್ಲೆಯ ಇಲಕಲ್‌ನ ಶ್ರೀ ನಿ.ಪ್ರ.ಮಹಾಂತಸ್ವಾಮಿಗಳವರು ೧೯೭೫ ರಿಂದ ಪ್ರಾರಂಭಿಸಿದ್ದಾರೆ. ಚಹಾ ಚಟದಿಂದ ಹಿಡಿದು ಶಬ್ದದಿಂದ ಹೇಳಲಾಗದ ಮಹಾಚಟಗಳನ್ನೆಲ್ಲ ನೂರಾರು ಜನರು ಮಹಾಂತ ಜೋಳಿಗೆಗೆ ಅರ್ಪಿಸಿದ್ದಾರೆ. ಇದೊಂದು ಸಾಮಾಜಿಕ ಸುಧಾರಣೆಯ ಪವಿತ್ರ ಕೈಂಕರ್ಯವೇ ಸರಿ.

ಹೀಗೆ ವೀರಶೈವಮಠಗಳು ಕೇವಲ ವೀರಶೈವರಿಗಷ್ಟೇ ಅಲ್ಲದೆ ವೀರಶೈವೇತರ ಜನರಿಗೂ ಅದರಲ್ಲೂ ದೀನ-ದಲಿತ, ಹರಿಜನ ಗಿರಿಜನರನ್ನೊಳಗೊಂಡು ಮಾನವ ಸಮಾಜದ ಎಲ್ಲ ವರ್ಗಗಳ ಜನರಿಗೂ ಲೇಸಾಗುವ ಸಾಮಾಜಿಕ ಸುಧಾರಣಾ ಕಾರ್ಯಗಳನ್ನು ಹಮ್ಮಿಕೊಂಡು ಯಶಸ್ವಿಗೊಳಿಸುತ್ತ ಬಂದಿವೆ. ಕರ್ನಾಟಕದ ಒಳಗೂ ಹೊರಗೂ ನೂರಾರು ಮಠಗಳು ಈ ಬಗೆಯ ಸಾಮಾಜಿಕ ಕಾರ್ಯಗಳನ್ನು ಮಾಡುತ್ತ ಬಂದಿರುವುದರಿಂದಲೇ ಇಂಥ ಕಾರ್ಯಗಳನ್ನು ಹಮ್ಮಿಕೊಂಡಾಗ ಉಳ್ಳವರು ಉದಾರವಾಗಿ ಧನ-ಧಾನ್ಯಾದಿ ಕಾಣಿಕೆಗಳನ್ನು ಸಲ್ಲಿಸುತ್ತಲೇ ಬಂದಿದ್ದಾರೆ.

ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿಯೂ ವೀರಶೈವ ಮಠಗಳ ಕೊಡುಗೆ ಗಣನೀಯವಾಗಿದೆ. ಶಿವಶರಣರು ರಾಜಾಶ್ರಯವನ್ನು ಧಿಕ್ಕರಿಸಿ ನಿಂತವರು. ಆನಂತರದ ಕಾಲದಲ್ಲಿ ಕೆಲವು ರಾಜಮನೆತನಗಳನ್ನು ಬಿಟ್ಟರೆ ಸಾಮಾನ್ಯವಾಗಿ ವೀರಶೈವ ಸಾಹಿತ್ಯಕ್ಕೆ ಬೆಂಬಲವಾಗಿ ನಿಂತ ಸಂಸ್ಥೆಗಳೆಂದರೆ ಮಠಗಳೇ ಎನ್ನಬಹುದು. ಮಠಗಳು ಶಿಕ್ಷಣಕ್ಕೆ ಎಷ್ಟೊಂದು ಮಹತ್ವವನ್ನು ನೀಡಿದವೊ ಅಷ್ಟೇ ಮಹತ್ವವನ್ನು ವೀರಶೈವ ಸಾಹಿತ್ಯ ರಚನೆ-ಅಧ್ಯಯನ-ಅಧ್ಯಾಪನಗಳಿಗೆ ನೀಡಿದವು. ವೀರಶೈವ ಮಠಗಳಲ್ಲಿ ಸಾಹಿತ್ಯ ಚಟುವಟಿಕೆ ೧) ಸೃಜನ ೨) ವಿಮರ್ಶೆ-ಟೀಕೆ ೩) ಅಧ್ಯಯನ, ಸಂಕಲನ, ಸಂಪಾದನೆ ಈ ಮೂರು ಮುಖ್ಯ ವಿಭಾಗಗಳಲ್ಲಿ ನಡೆದಿದೆ.

ವೀರಶೈವಮಠಗಳು ಮಾಡಿದ ಅತಿ ದೊಡ್ಡ ಮಹತ್ವದ ಕಾರ್ಯವೆಂದರೆ ಕರ್ನಾಟಕದ ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದ ತಾಡೋಲೆಯ ಗ್ರಂಥಗಳನ್ನು ಶರಣರ ವಚನಗಳ ಕಟ್ಟುಗಳನ್ನು, ಕೋರಿ ಕಾಗದದಲ್ಲಿದ್ದ ಗ್ರಂಥ-ವಚನ ಇತ್ಯಾದಿಗಳನ್ನು ಸುರಕ್ಷಿತವಾಗಿ ಕಾಯ್ದಿಟ್ಟದ್ದು. ಮಠಗಳು ಈ ಕಾರ್ಯವನ್ನು ಮಾಡಿರದಿದ್ದರೆ ಕನ್ನಡದ ಒಂದು ಅಮೌಲ್ಯ ಭಾಗವೇ ಇಲ್ಲದಾಗುತ್ತಿತ್ತು. ಮಠಗಳಲ್ಲಿ ಈಗಲೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ

ಹಸ್ತಪ್ರತಿಗಳು ಲಭ್ಯವಿವೆ. ತಮ್ಮ ಮಠಗಳಲ್ಲಿ ಈ ರೀತಿ ಸಂಗ್ರಹಗೊಂಡ ಗ್ರಂಥಗಳನ್ನು ಅಧ್ಯಯನ, ಅಧ್ಯಾಪನ, ಸಂಪಾದನೆ, ವಿಮರ್ಶೆ-ಟೀಕೆ ಮುಂತಾದವುಗಳಿಗೆ ಬಳಸಿಕೊಳ್ಳಲಾಯಿತು. ತಮ್ಮ ಮಠದಲ್ಲಿ ಈ ಕೆಲಸ ಸಾಧ್ಯವಾಗದಾದಾಗ ಬೇರೆ ಮಠಗಳಿಗೆ, ಸಂಸ್ಥೆಗಳಿಗೆ, ವಿಶ್ವವಿದ್ಯಾಲಯಗಳಿಗೆ, ಹಿರಿಯ ವಿದ್ವಾಂಸರಿಗೆ ಅವುಗಳನ್ನು ನೀಡಲಾಯಿತು.

ತೋಂಟದ ಸಿದ್ಧಲಿಂಗಯತಿಗಳ ನೇತೃತ್ವದಲ್ಲಿ ನೂರೊಂದು ವಿರಕ್ತರು ವೀರಶೈವ ಸಾಹಿತ್ಯ-ಧರ್ಮಕ್ಕೆ ಸಂಬಂಧಿಸಿದಂತೆ ಬಹು ವ್ಯವಸ್ಥಿತ ರೀತಿಯಲ್ಲಿ ಸಂರಕ್ಷಣೆ-ಬೆಳವಣಿಗೆಯ ಯೋಜನೆಗಳನ್ನು ಹಾಕಿಕೊಂಡು ಅವರಿಂದ ಸ್ಥಾಪಿತವಾದ ಮಠಗಳಲ್ಲೆಲ್ಲ ಇಂತಹ ಕಾರ್ಯಕ್ಕೆ ಆದ್ಯತೆ ನೀಡಿದರು. ಅವರಲ್ಲಿ ಹಾಗೂ ವೀರಶೈವ ಮಠಾಧೀಶರಲ್ಲಿ ಅನೇಕರು ವೀರಶೈವ ಸೃಜನ, ಟೀಕೆ, ಸಂಪಾದನೆ ಕ್ಷೇತ್ರಗಳಿಗೆ ಮೌಲಿಕ ಕಾಣಿಕೆಗಳನ್ನು ನೀಡಿದ್ದಾರೆ. ತೋಂಟದ ಸಿದ್ದಲಿಂಗಯತಿಗಳು ಸ್ವತಃ ವಚನಗಳನ್ನು ರಚಿಸಿದ್ದಾರೆ. ಷಣ್ಮುಖಸ್ವಾಮಿಗಳು ಶ್ರೇಷ್ಠ ವಚನಕಾರರಾಗಿದ್ದರು. ಶೂನ್ಯಸಂಪಾದನೆ ಎಂಬ ವೈಶಿಷ್ಟ್ಯಪೂರ್ಣ ಕೃತಿಯನ್ನು ಕನ್ನಡಕ್ಕೆ ನೀಡಿದವರು ಮಠಾಧೀಶರು. ಕಲ್ಲುಮಠದ ಪ್ರಭುದೇವ, ಸ್ವತಂತ್ರ ಸಿದ್ಧಲಿಂಗೇಶ್ವರ, ಘನಮಠದ ನಾಗಭೂಷಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ ಮುಂತಾದ ಹಲವಾರು ಸ್ವಾಮಿಗಳಲ್ಲದೆ ಆಧುನಿಕ ಕಾಲದ ಡಾ. ಜ.ಚ.ನಿ.ಹುಬ್ಬಳ್ಳಿ ಮೂರು ಸಾವಿರ ಮಠದ ಶ್ರೀಗಳು, ಮುಂಡರಗಿ ಜ. ಅನ್ನದಾನೀಶ್ವರ ಸ್ವಾಮಿಗಳು ಹೀಗೆ ಇಂದಿಗೂ ಹಲವಾರು ಸ್ವಾಮಿಗಳು ವೀರಶೈವ ಸಾಹಿತ್ಯ ಕ್ಷೇತ್ರದಲ್ಲಿ ಶ್ರೇಷ್ಠರಾಗಿದ್ದಾರೆ.

ಸೃಜನಸಾಹಿತ್ಯದಲ್ಲಿ ವಚನ, ಸ್ವರವಚನ, ಅನುಭಾವಗೀತೆ ಮುಂತಾದವುಗಳು, ವೀರಶೈವಧರ್ಮ-ತತ್ತ್ವವಿವೇಚನೆ, ವಿಮರ್ಶೆ, ಸಂಶೋಧನೆಗಳು ಇವರಿಂದ ರಚಿತವಾದ ಸಾಹಿತ್ಯ. ವೀರಶೈವ ತತ್ತ್ವಾರ್ಥ ವಿವೇಚನೆ, ಕೃತಿ ವಿಮರ್ಶೆ, ಟೀಕೆ ಇಂತಹ ಸಾಹಿತ್ಯಿಕ ಚಟುವಟಿಕೆಗಳಿಗೆ ಮೀಸಲಾದ ವೀರಶೈವಮಠಗಳು ಒಂದು ಕಾಲಕ್ಕೆ ಇದ್ದವು. ಉದಾಹರಣೆಗೆ ಬಾಗಿಲುಕೋಟೆಯ ಹಾಗೂ ನರಗುಂದ ಟೀಕಿನ ವಿರಕ್ತಮಠಗಳು ಹಸ್ತಪ್ರತಿಗಳನ್ನು ಸಂಗ್ರಹಿಸಿ ಪ್ರತಿಮಾಡುವ ಕಾರ್ಯವನ್ನು ಪ್ರಮುಖವಾಗಿ ಕೈಕೊಳ್ಳುತ್ತಿದ್ದ ಓಲೆಯ ಮಠಗಳೂ ಇದ್ದವು. ವೀರಶೈವ ಧರ್ಮ–ಸಾಹಿತ್ಯ–ಸಂಸ್ಕೃತಿಗಳನ್ನು ರಕ್ಷಿಸಿ ಬೆಳೆಸುವ ಈ ಬಗೆಯ ಕಾರ್ಯವನ್ನು ಮಠಗಳು ಕೈಕೊಂಡಿರದಿದ್ದಲ್ಲಿ ಅಪಾರವಾದ ವೀರಶೈವ ಸಾಹಿತ್ಯ ಲಭ್ಯವಾಗುತ್ತಿರಲಿಲ್ಲ.

ಆಧುನಿಕ ಕಾಲದಲ್ಲಿಯೂ ವೀರಶೈವಮಠಗಳು ಸಾಹಿತ್ಯಾಭಿವೃದ್ಧಿಗೆ ಎದ್ದುಕಾಣುವ ರೀತಿಯಲ್ಲಿ ಶ್ರಮಿಸುತ್ತಿರುವುದನ್ನು ಕಾಣಬಹುದು. ವೀರಶೈವ ಮಠಗಳು ಸಾಹಿತ್ಯಕೃತಿಗಳನ್ನು ಪ್ರಕಟಿಸುವುದು, ಸಾಹಿತಿಗಳಿಗೆ ಸನ್ಮಾನ, ಸಾಹಿತ್ಯ ಕೃತಿಗಳಿಗೆ ಬಹುಮಾನ, ಸಂಸ್ಮರಣ, ಸಂಭಾವನಾ ಗ್ರಂಥಗಳ ಪ್ರಕಟನೆ ಮುಂತಾದ ಹಲವಾರು ಬಗೆಯ ಚಟುವಟಿಕೆಗಳನ್ನು ಈಗಿನ ವೀರಶೈವ ಮಠಗಳು ಒಂದಿಲ್ಲೊಂದು ರೀತಿಯಲ್ಲಿ ನಡೆಸುತ್ತಿವೆ. ಸಾಹಿತ್ಯ

ಕ್ಷೇತ್ರದಲ್ಲಿ ಮಠಗಳು ಹೇಗೆ ಕಾರ್ಯಮಾಡಿ ತೋರಿಸಬಲ್ಲವು ಎಂಬುದಕ್ಕೆ ಧಾರವಾಡ ಮುರುಘಾಮಠ, ಹುಬ್ಬಳ್ಳಿ ಮೂರುಸಾವಿರಮಠ, ಗದುಗಿನ ತೋಂಟದಾರ್ಯಮಠ, ಮುಂಡರಗಿ ಅನ್ನದಾನೀಶ್ವರಮಠ ಮುಂತಾದವು ಸಾಕ್ಷಿಯಾಗಿವೆ. ಗದುಗಿನ ತೋಂಟ ದಾರ್ಯಮಠ ೧೯೭೭ ರಿಂದ ಈವರೆಗೆ ಅಂದರೆ ಕೇವಲ ೧೩ ವರ್ಷಗಳ ಅವಧಿಯಲ್ಲಿ ವೀರಶೈವ ಪುಣ್ಯಪುರುಷರ ಮಾಲಿಕೆಯಲ್ಲಿ ೧೧೩, ವೀರಶೈವ ಅಪ್ರಕಟಿತ ಗ್ರಂಥಮಾಲೆಯಲ್ಲಿ ೫೭ ಹೀಗೆ ಒಟ್ಟು ೧೭೦ಕ್ಕೂ ಹೆಚ್ಚು ಸಂಖ್ಯೆಯ ೨೫ ಸಾವಿರ ಪುಟಗಳ ೭ ಲಕ್ಷ ರೂ.ಗಳ ವೆಚ್ಚದ ಪುಸ್ತಕಗಳನ್ನು ಮಠದಿಂದ ಪ್ರಕಟಿಸಲಾಗಿದೆ. ಈ ಮಠದ ಇನ್ನೊಂದು ದಾಖಲೆ ಎಂದರ ೧೨ ಲಕ್ಷ ವೆಚ್ಚ ತಗಲಬಹುದಾದ ೬ ಸಾವಿರ ಪುಟಗಳ ವೀರಶೈವ ವಿಶ್ವಕೋಶ ವನ್ನು ೧೨ ಸಂಪುಟಗಳಲ್ಲಿ ಪ್ರಕಟಿಸಲು ಉದ್ಯುಕ್ತವಾದುದು ಹುಬ್ಬಳ್ಳಿ ಮೂರುಸಾವಿರ ಮಠದಿಂದ ಕನ್ನಡ, ಸಂಸ್ಕೃತ, ಹಿಂದಿ, ಇಂಗ್ಲೀಷ ಭಾಷೆಗಳಲ್ಲಿ ಮುನ್ನೂರಕ್ಕೂ ಹೆಚ್ಚು ಸಂಖ್ಯೆಯ ಗ್ರಂಥಗಳು ಹೊರಬಂದಿವೆ. ಅಲ್ಲಿಯ ಹಸ್ತಪ್ರತಿ ಭಂಡಾರ ಸಂಶೋಧಕರಿಗೆ ಒಂದು ಉತ್ತಮ ಕೊಡುಗೆ. ಕೆಲವು ಮಠಾಧೀಶರು ತಮ್ಮ ಪ್ರಚಾರಕ್ಕಾಗಿ ಗ್ರಂಥಗಳನ್ನು ಪ್ರಕಟಿಸಿ ಸುಪ್ರಭಾತದ ಕ್ಯಾಸೆಟ್ಟು, ಚರ್ವಿತಚರ್ವಣದ ಧರ್ಮ ತತ್ತ್ವದ ಶುಷ್ಕ ಪ್ರಮಾಣ ಬದ್ಧವೆನಿಸದ ಪುಸ್ತಕ ಪ್ರಕಟನೆ, ಜಾತ್ರೆ, ಅಡ್ಡಪಲ್ಲಕ್ಕಿ ಉತ್ಸವ ಹೀಗೆ ಅನಾವಶ್ಯಕ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ. ತಮ್ಮ ಪ್ರಚಾರಕ್ಕಾಗಿ ಅಥವಾ ತಮ್ಮ ವಿಚಾರಗಳನ್ನು ಹೇರುವುದಕ್ಕಾಗಿ ಅಥವಾ ತಮಗೆ ಆಗದವರನ್ನು ತೆಗಳುವುದಕ್ಕಾಗಿ ತಮ್ಮ ತಮ್ಮ ಮಠ ದಿಂದ ಪತ್ರಿಕೆ ನಿಯತಕಾಲಿಕೆಗಳನ್ನು ಹೊರಡಿಸುತ್ತಿದ್ದಾರೆ. ಆದರೆ ಸಾಹಿತ್ಯಕ್ಷೇತ್ರ ದಲ್ಲಿ ಮೌಲಿಕವೆನಿಸುವಂತಹ ಯೋಜನೆಗಳನ್ನು ಕೆಲವೇ ಮಠಗಳು ಮಾತ್ರ ಕಾರ್ಯಗತ ಗೊಳಿಸಿವೆ. ಜೊಳ್ಳು ಬಹುಬೇಗ ಹಾರಿಹೋಗಿ ಕೊನೆಗೆ ಉಳಿಯುವಂಥವು ಗಟ್ಟಿಕಾಳು ಮಾತ್ರ ಎಂಬಂತೆ ಮಠಗಳು ಈ ನಿಟ್ಟಿನಲ್ಲಿ ಹೆಚ್ಚು ದೂರದರ್ಶಿಯಾದ, ವ್ಯವಸ್ಥಿತ ಯೋಜನೆಗಳನ್ನು ಕಾರ್ಯಗತಗೊಳಿಸುವ ಆವಶ್ಯಕತೆ ಇದೆ. ಅದಕ್ಕೆ ಗದಗ-ಹುಬ್ಬಳ್ಳಿ ಮಠಗಳು ಮಾದರಿಯಾಗಿವೆ. ವೀರಶೈವ ಮಠಾಧೀಶರು ತಾವೇ ಇಂಥ ಮೌಲಿಕ ಯೋಜನೆಗಳನ್ನು ಹಾಕಿಕೊಳ್ಳಲು ಸಾಧ್ಯವಿಲ್ಲದಿದ್ದರೆ, ಅಂತಹ ಪ್ರತ್ಯೇಕ ಸಂಸ್ಥೆಗಳನ್ನು ಸ್ಥಾಪಿಸಿ ಅಥವಾ ವಿಶ್ವವಿದ್ಯಾಲಯ, ಸಂಶೋಧನ ಕೇಂದ್ರಗಳಿಗೆ ಅಗತ್ಯ ಸೌಕರ್ಯ ಒದಗಿಸುವುದರ ಮೂಲಕವೂ ಕಾರ್ಯಮಾಡಬಹುದು. ಬೆಳಗಾವಿ ಜಿಲ್ಲೆಯ ಮುರಗೋಡ ದುರದುಂಡೀಶ್ವರಮಠದ ಲಿಂ. ಮಹಾಂತ ಶಿವಯೋಗಿಗಳು ಕರ್ನಾಟಕ ವಿಶ್ವವಿದ್ಯಾಲ ಯದಲ್ಲಿ ವೀರಶೈವ ಅಧ್ಯಯನ ಸಂಶೋಧನೆ ಪ್ರಕಟನೆ ಇತ್ಯಾದಿಗಳಿಗಾಗಿ 'ಬಸವೇಶ್ವರ ಪೀಠ'ವನ್ನು ಸ್ಥಾಪಿಸಿದ್ದಾರೆ. ಚಿತ್ರದುರ್ಗದ ಶ್ರೀ ನಿ.ಪ್ರ.ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳು ಬೃಹನ್ಮಠ ಅವರು ಮೈಸೂರು ವಿಶ್ವವಿದ್ಯಾಲಯಕ್ಕೆ ವಚನಗಳನ್ನು ಹಿಂದಿ ಭಾಷೆಗೆ ಅನುವಾದಿಸಲು ಒಂದು ಲಕ್ಷ ರೂಪಾಯಿ ದೇಣಿಗೆ ನೀಡಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಕನ್ನಡದಲ್ಲಿ ಹೊರಬರುತ್ತಿರುವ ಪ್ರಕಟನೆಗಳಲ್ಲಿ ವೀರಶೈವಕ್ಕೆ ಸಂಬಂಧಪಟ್ಟ ಪ್ರಕಟನೆಗಳ ಸಂಖ್ಯೆಯು ಗಮನಾರ್ಹವಾಗಿ ಹೆಚ್ಚಿಗಿದ್ದು ಅವುಗಳಲ್ಲಿ ಪ್ರತಿಶತ ೭೫ರಷ್ಟು ವೀರಶೈವ ಮಠಗಳಿಂದಲೆ ಪ್ರಕಟಿತವಾಗಿರುತ್ತವೆ. ರಾಜಾಶ್ರಯದಿಂದ ವಂಚಿತರಾಗಿರುವ ವೀರಶೈವರಿಗೆ ಸಾಹಿತ್ಯದ ದೃಷ್ಟಿಯಿಂದ ಮಠಗಳೇ ಆಶ್ರಯಸ್ಥಾನಗಳಾಗಿವೆ. ಒಟ್ಟಿನಲ್ಲಿ ವೀರಶೈವ ಮಠಗಳು ಸಾವಿರಾರು ವರ್ಷಗಳಿಂದಲೂ ಧಾರ್ಮಿಕ ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ನಿರಂತರವಾಗಿ ಗಮನಾರ್ಹವಾದ ಸೇವೆ ಸಲ್ಲಿಸಿ ಮಾನವ ಸಮಾಜಕ್ಕೆ ಅಮೂಲ್ಯ ಕಾಣಿಕೆಯನ್ನು ಸಲ್ಲಿಸಿವೆ.

●

---

ಪ್ರಸ್ತುತ ಲೇಖನದಲ್ಲಿ ನನಗೆ ಹೆಚ್ಚು ಪರಿಚಯವಿದ್ದ ಉತ್ತರ ಕರ್ನಾಟಕದ ವೀರಶೈವ ಮಠಗಳ ಸಾಧನೆಯನ್ನು ಲೇಖನಕ್ಕೆ ಮುಖ್ಯವಾಗಿ ಬಳಸಿಕೊಂಡಿದ್ದೇನೆ. ಕರ್ನಾಟಕದ ಇತರ ಭಾಗದ ಅನೇಕ ಮಠಗಳೂ ಇದೇ ರೀತಿಯ ಸಾಧನೆಯನ್ನು ಮಾಡಿರಬಹುದು. ನನಗೆ ದೊರೆತ ಮಾಹಿತಿ ಆಧಾರದಿಂದ ಇಲ್ಲಿ ವಿವೇಚಿಸಿದ್ದೇನೆ. ಇನ್ನೊಂದು ವಿಶೇಷ ಅಂಶವೆಂದರೆ–ಬೀದರ ಜಿಲ್ಲೆಯ ಭಾಲ್ಕಿ ಹಿರೇಮಠದಂತಹ ಕೆಲವು ಮಠಗಳನ್ನು ಬಿಟ್ಟರೆ ಗುರುಸ್ಥಲದ ಮಠಗಳು ಧಾರ್ಮಿಕ ಕ್ಷೇತ್ರವನ್ನುಳಿದು ಬೇರೆ ಕ್ಷೇತ್ರಗಳಲ್ಲಿ ಅಂದರೆ ಶೈಕ್ಷಣಿಕ, ಸಾಹಿತ್ಯಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಎದ್ದು ತೋರುವ ಸಾಧನೆಯನ್ನು ಮಾಡಿಲ್ಲ. ವಿರಕ್ತಮಠಗಳೇ ಎಲ್ಲ ಕ್ಷೇತ್ರಗಳಿಗೆ ವಿಶೇಷ ಕಾಣಿಕೆ ನೀಡಿವೆ. —ಲೇಖಕ

# ಶರಣರ ದೃಷ್ಟಿಯಲ್ಲಿ–ವೀರಶೈವ–ಲಿಂಗವಂತ–ನಿರಾಭಾರಿ ವೀರಶೈವ–ಅಜಾತಿಶೈವ–ಪದಗಳು: ಒಂದು ವಿಶ್ಲೇಷಣೆ

—ಡಾ. ಎಸ್. ವ್ಹಿ. ಅಯ್ಯನಗೌಡರ

'ವೀರಶೈವ' ಎಂಬ ಪದವು ಮತವಾಚಿಯಾಗಿ–ಮಾರ್ಗವಾಚಿಯಾಗಿ, ತತ್ತ್ವವಾಚಿಯಾಗಿ–ಸಮಾಜವಾಚಿಯಾಗಿ–ಬಳಕೆಗೊಂಡಿದೆ. ೧೨ನೆಯ ಶತಮಾನದ ಶರಣರು ತಮ್ಮ ತಮ್ಮ ವಚನಗಳಲ್ಲಿ ವಿವಿಧ ದೃಷ್ಟಿಕೋನಗಳಿಂದ ವಿವಿಧ ದಿಕ್ಕುಗಳಲ್ಲಿ ನಿಂತು ಅಳೆದು ಅದರ ಸರ್ವಮಗ್ಗಲುಗಳ ಅರ್ಥವನ್ನು ಚಿತ್ತರಿಸಿದ್ದುಂಟು. ಈಗಾಗಲೇ ಅನೇಕ ವಿದ್ವಾಂಸರು, 'ವೀರಶೈವ'ವು ಶೈವದ ಪರಿಪಕ್ವ ಫಲ, ಇದಕ್ಕೆ ಪುರಾತನ ಪರಂಪರೆಯಿದೆ' ವೀರಶೈವವು ಶೈವ ಧರ್ಮಿಯರಲ್ಲಿ ಕಾಲಕಾಲಕ್ಕೆ ಉಂಟಾದ ಉತ್ಕ್ರಾಂತಿಯ ಪರಿಣಾಮ' ಇದು ವೇದ ಉಪನಿಷತ್ತುಗಳಲ್ಲಿಯ ಪರಬ್ರಹ್ಮವಿಚಾರ, ಆಗಮುಗಳಲ್ಲಿ ಉಕ್ತಗೊಂಡಿರುವ ಆಚಾರ ಪದ್ಧತಿ, ಷಟಸ್ಥಲಗಳಲ್ಲಿ ಯೋಗಾಭ್ಯಾಸದ ಮೂಲ ತತ್ತ್ವ, ಕರಣಹಸಿಗೆಯಲ್ಲಿ ಸಾಂಖ್ಯರ ತತ್ತ್ವ, ಪ್ರಸಾದಿ ಸ್ಥಲಗಳಲ್ಲಿ ಭಗವದ್ಗೀತೆಯ ನಿಷ್ಕಾಮ ಕರ್ಮ–ಮೊದಲಾದವುಗಳ ಸತ್ವ ಹೀರಿ ಪರಿಪಕ್ವಫಲ ಪಡೆದುದಾಗಿದೆಯೆಂದು ಅಭಿಪ್ರಾಯ ಪಡುತ್ತಿರುವುದ ಸರ್ವಶ್ರುತವಾಗಿದೆ. ಆದರೆ ಪ್ರಸ್ತುತ ಲೇಖನದಲ್ಲಿ ಚನ್ನಬಸವ–ಅಲ್ಲಮ–ಸಿದ್ಧರಾಮ–ಅಕ್ಕಮಹಾದೇವಿ ಮೊದಲಾದವರ ವಚನಗಳು 'ವೀರಶೈವ–ಲಿಂಗವಂತ–ನಿರಾಭಾರಿ ವೀರಶೈವ–ಅಜಾತಿ ಶೈವ' ಎಂಬ ಪದಪ್ರಯೋಗಗಳನ್ನು ಯಾವ ಯಾವ ಅರ್ಥದಲ್ಲಿ ಬಳಸಿವೆಯೆಂಬುದನ್ನು ಅವರ ವಚನಗಳ ಉಲ್ಲೇಖದೊಂದಿಗೆ ಗಮನಿಸುವುದು ಇಲ್ಲಿನ ಪ್ರಮುಖ ಉದ್ದೇಶವಾಗಿದೆ.

ಶೈವ ಶಾಖೆಯಾಗಿ ಬೆಳೆದ ವೀರಶೈವವನ್ನು 'ಅಜಾತಿ ಶೈವ'ವೆಂದೂ, ನಿರಾಭಾರಿ ವೀರಶೈವವೆಂದೂ ಕರೆದು, ನಿರಾಭಾರಿ ವೀರಶೈವನ ಮಾರ್ಗದ ಧೋರಣೆಯ ಲಕ್ಷಣಗಳನ್ನು ಬಸವಾದಿ ಪ್ರಮಥ ಗಣಂಗಳು ಸನ್ಮಾರ್ಗವಿಧಿಚಾಚರಿಸಿ "ಒಳಗೂ ಕಲ್ಯಾಣ–ಹೊರಗೂ ಕಲ್ಯಾಣ" ಸಾಧಿಸಿದ್ದನ್ನು ಚರ್ಚಿಸಿದ್ದುಂಟು. ಹಾಗೆಯೇ ಹಣವಂತ, ಬುದ್ಧಿವಂತ, ಗುಣವಂತ ಪದಗಳ ಬಳಕೆಯಂತೆ 'ವೀರಶೈವ'ವನ್ನು 'ಲಿಂಗವಂತ' ಎಂದು ಕರೆದು ಲಿಂಗವಂತರು ಯಾರು? ಅವರ ಶೀಲ–ನಡತೆ ಎಂಥದು? ಎಂಬ ವಿವರಣೆಯನ್ನು ಅರ್ಥ

ವಿ. ಸೂ: ಈ ಲೇಖನಕ್ಕಾಗಿ ಬಳಸಿಕೊಂಡ ವಚನಕಾರರ ಗ್ರಂಥಗಳು ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ ಗ್ರಂಥಗಳಾಗಿವೆ.

ವತ್ತಾಗಿ, ತುಂಬಾ ವ್ಯಾಪಕಾರ್ಥದಲ್ಲಿ ವಿಶ್ಲೇಷಿಸಿದ್ದಾರೆ. ಈಗ ಅವುಗಳನ್ನು ಒಂದೊಂದಾಗಿ ಅವಲೋಕಿಸಬಹುದು.

I. ೧) ವೀರಶೈವ:

ಕನ್ನಡ ಸಾಹಿತ್ಯದಲ್ಲಿ ೧೨ನೆಯ ಶತಮಾನವು ಶರಣಯುಗ: ಭಕ್ತಿಯುಗ, ಈ ಭಕ್ತಿ ಯುಗದ ಪ್ರಮುಖ ಫಲ–ಬಸವ–ಚನ್ನಬಸವ, ಅಲ್ಲಮ–ಸಿದ್ಧರಾಮ–ಅಕ್ಕಮಹಾದೇವಿ ಮೊದಲಾದವರು. ಕರ್ಮಯೋಗಿಯಾಗಿದ್ದ ಸಿದ್ಧರಾಮ ವೀರಶೈವವನ್ನು ಕುರಿತು–

"....ಚತುರ್ವರ್ಣಾತೀತನೆ ವೀರಶೈವ ನೋಡಾ" (ಸಿ.ರಾ.ವ. ೪೫೦)

"....ಕುಲದಲ್ಲಿ ಶೂದ್ರನಾದಡೇನು? ಮನದಲ್ಲಿ ಮಹಾದೇವ ನೆಲೆಗೊಂಡವನೆ ವೀರಶೈವ ನೋಡಾ" (ಸಿ.ರಾ.ವ. ೫೧೭)

"....ತಿಳಿದನುಭಾವಿಯೇ, ಸಂಸ್ಕಾರಿಯೇ ಪರಮ ವೀರಶೈವ ನೋಡಾ" (ಸಿ.ರಾ.ವ. ೧೨೭೪)

"....ತನ್ನ ತಾ ತಿಳಿದವ ವೀರಶೈವ" (ಸಿ.ರಾ.ವ. ೧೧೬೦)

"ನಿತ್ಯವೆಂದಡೆ ಲಿಂಗ, ಅನಿತ್ಯವೆಂದಡೆ ಅಂಗ
ನಿತ್ಯವೆಂದಡೆ ಜ್ಞಾನ ಅನಿತ್ಯವೆಂದಡೆ ಅಜ್ಞಾನ
ನಿತ್ಯಕಾರ್ಯವು ಸತ್ಕರ್ಮ, ಅನಿತ್ಯಕಾರ್ಯಗಳೆ, ವಿಷಯಂಗಳು
ವಿಷಯಂಗಳೆ ನಿತ್ಯಂಗಳಾಗಲು, ಜ್ಞಾನಿಯೆಂದು ಐಕ್ಯನೆಂದು
ಪ್ರಮಥನೆಂದು, ವೀರಶೈವನೆಂದು, ಕಪಿಲಸಿದ್ಧ ಮಲ್ಲಿಕಾರ್ಜುನನೆಂದು
ಬೇರೆ ಉಂಟೇನೊ ಹಾವಿನಹಾಳ ಕಲ್ಲಯ್ಯಾ?" (ಸಿ.ರಾ.ವ. )

ಎಂದು ಪ್ರಶ್ನಿಸಿದ್ದುಂಟು, ಅಲ್ಲದೆ

"ತನ್ನ ತಾ ತಿಳಿದ ನಿಯಮದವರು ನೋಡಯ್ಯಾ ವೀರಶೈವಾಗ್ರಗಣ್ಯರು" (ಸಿ.ರಾ.ವ. ೪೮೮)

"ಶರಣಸತಿ ಲಿಂಗಪತಿವೆಂಬ" ವೀರತ್ವ (ಸಿ.ರಾ.ವ. ೧೨೦೮)

"ತನ್ನ ತಾ ತಿಳಿದಲ್ಲಿ ಎರಡನೆಯ ಶಂಭುವೆನಿಸಿದ" (....ವ. ೧೧೨)

ಸಿದ್ಧರಾಮನ ಈ ವಚನಗಳು ವೀರಶೈವನಾರು? ಎಂಬ ಪ್ರಶ್ನೆಗೆ ತುಂಬಾ ವ್ಯಾಪಕ ವಾದ ಅರ್ಥದಲ್ಲಿ ವ್ಯಾಖ್ಯಾನಿಸಿದುದನ್ನು ಕಾಣುತ್ತೇವೆ. ವೀರಶೈವನು–ತನ್ನ ತಾ ತಿಳಿದವ, ಚತುರ್ವರ್ಣಾತೀತ, ಮನದಲ್ಲಿ ಮಹದೇವ ನೆಲೆಗೊಂಡವ, ತಿಳಿದನುಭಾವಿ, ಸಂಸ್ಕಾರಿ– ಎಂದು ಪರಿಚಯಿಸುತ್ತೇವೆ. ಅಲ್ಲದೆ ವೀರಶೈವವನ್ನು 'ಜ್ಞಾನಿ'ಯೆಂದು, ಐಕ್ಯನೆಂದು, ಪ್ರಮಥನೆಂದು, ಮಲ್ಲಿಕಾರ್ಜುನನೆಂದು, ಎರಡನೆಯ ಶಂಭುವೆಂದು ಕರೆದು ಬೇರೆ ಇನ್ನೇನೋ ಎಂದು ಉದ್ಗಾರ ತೆಗೆಯುವದುಂಟು.

ಸಿದ್ಧರಾಮನ ಈ ಎಲ್ಲ ಮಾತುಗಳು ವರ್ಣ, ಕುಲ-ಕಿತ್ತುಹಾಕಿ **ಸಂಸ್ಕಾರಗೊಂಡವನು, ಅನುಭಾವಿ, ತನ್ನ ತಾ ತಿಳಿದವ**-ಎಂದು ಅರ್ಥೈಸಿದುದು ವಚನಕಾರರಲ್ಲಿಯೇ ಉದಾತ್ತವಾದ ನಿಲುವೆಂಬುದು ನಮಗೆ ಮನವರಿಕೆಯಾಗುತ್ತದೆ. ಈ ವಿಷಯಗಳ ಮನವರಿಕೆ ಮಾಡಿಕೊಳ್ಳದವರನ್ನು, 'ಶರಣಸತಿ ಲಿಂಗಪತಿ'ಯೆಂಬ ವೀರತ್ವದಿಂದ ಮುನ್ನಡೆಯದವರನ್ನು ತನ್ನ ತಾ ತಿಳಿದವರನ್ನು-ಕುರಿತು, 'ತನ್ನ ತಾ ತಿಳಿಯುವ ನಿಯಮದವರು ಒಬ್ಬರೂ ಇಲ್ಲ'ವಲ್ಲಾ ಎಂಬ ಕೊರಗನ್ನು ಜನತೆಯು ಮುಂದಿಡುತ್ತಾನೆ. ಹಾಗೆಯೇ-

ತಿಳಿನೀರೆಂಬೆ ತಿಳಿನೀರೆಂಬೆ
**ತಿಳಿನೀ ಎಂದು ಒಂದು ದಿನ ಎಂದಿಲ್ಲೆಲೆ ಮಾನವಾ**
**ಕ್ಷಣಕ್ಷಣಕ್ಕೂ ತಿಳಿನೀ ಎಂದಡೆ**
ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧ ಮಲ್ಲೇಂದ್ರ?(ಸಿ.ರಾ.ವ.೧೪೧)

ಎಂದು ಎಚ್ಚರಿಕೆ ನೀಡಿ ತಿಳಿನೀ (**Know thyself**) 'ನಿನ್ನನ್ನು ನೀ ತಿಳಕೋ' ಇದೇ ವೀರಶೈವದ ಪರಮಚರಮ ಗುರಿ ಎಂದು ಜನತೆಯು ಕಿವಿಗೆ ಎಚ್ಚರಿಕೆಯ ಡಂಗುರ ಬಾರಿಸುತ್ತಾನೆ.

ಭಕ್ತಿಗೆ ಬಸವ-ವೈರಾಗ್ಯಕ್ಕೆ ಅಲ್ಲಮ ಪ್ರಮುಖರಾದಂತೆ ಜ್ಞಾನಕ್ಕೆ ಚನ್ನಬಸವನು ಪ್ರಮುಖನು, ವೀರಶೈವವನ್ನು ಚನ್ನಾಗಿ ಅರಿತು ಕರಗತ ಮಾಡಿಕೊಂಡ ಜ್ಞಾನಿ. ವೀರಶೈವವನ್ನು ಕುರಿತು **ಚನ್ನಬಸವನು**

"ಅಯ್ಯಾ ಆದಿಸೃಷ್ಟಿಯಿಂದ ಇಂದು ಪರ್ಯಂತರವೂ
ನಾನಾ ಯೋನಿಯಲ್ಲಿ ಹುಟ್ಟಿ ಹುಟ್ಟಿ ಬಳಲಿ ಬಾಯಾಱಿದವಂಗೆ,
ಅಂಧ ಟಿಟ್ಟಭ ನ್ಯಾಯದಂತೆ,
**ಅಕಸ್ಮಾತ ಅರಿವುಳ್ಳ ನರಜನ್ಮವು ದೊರೆವುದೆ ದುರ್ಲಭ,**
ಅದರಲ್ಲಿಯೂ ಶೈವಕುಲದಲ್ಲಿ ಜನ್ಮವೆತ್ತಿರ್ಪುದು ಅತಿದುರ್ಲಭ,
ಅದಕ್ಕಿಂತಲೂ **ವೀರವಂಶದಲ್ಲಿ** ಜನಿಸಿಹುದು
ಅತ್ಯಂತ ದುರ್ಲಭವಾಗಿರ್ಪುದು ಕಾಣಾ,
ಶ್ಲೋಕ........................
**ಸಕಲ ಪ್ರಾಣಿಗಳಲ್ಲಿ ವೀರಶೈವನೆ ಸರ್ವೋತ್ತಮನಯ್ಯಾ,**
ಕೂಡಲಚನ್ನಸಂಗಮದೇವಾ. (ಚ.ಬ.ವ. ೪೮೩)

೨) **ವೀರಶೈವನಾದಡೆ** ಪರಧನವ ಪರಸತಿಯುರ ಮುಟ್ಟದಿರಬೇಕು.
ಎಂತೂ ಪರಹಿಂಸೆಯನೆಸಗದಿರಬೇಕು.
ಒಡಲಳಿದಡೆಯೂ ಹಿಡಿದಾಚಾರವ ಬಿಡದಿರಬೇಕು.
ಇಂತೀ **ವೀರಾಚಾರವು** ನೆಲೆಗೊಳ್ಳದೆ

**ವೀರವಂಶ**ದಲ್ಲಿ ಹುಟ್ಟಿದ ಮಾತ್ರಕ್ಕೆ **ವೀರಶೈವನೆಂತಪ್ಪ**ನಯ್ಯಾ
ಕೂಡಲಚನ್ನಸಂಗಮದೇವ. (ಚ.ಬ.ವ. ೨೨೮)

೩) **ವೀರಶೈವ ಸಂಪನ್ನರಾದ ಸದ್ಭಕ್ತ** ಶರಣಗಣಂಗಳಾದಡೆಯೂ
ವೀರಮಾಹೇಶ್ವರರಾದಡೆಯೂ ಕ್ರಿಯಾಪಾದೋದಕ ಮಾಡಬೇಕು....
(ಚ.ಬ.ವ. ೧೬೩)

೪) ........ಶೈವ ಗುರುಪಿನ ಕೈಯ **ಲಿಂಗಸಾಹಿತ್ಯವಾದಡೇ**ನಯ್ಯಾ?
**ವೀರಶೈವ ಶರಣರು** ಮಚ್ಚರು. (ಚ.ಬ.ವ. ೪೫೩)

೫) ........**ಶಿವಕಳಾತ್ಮಂಗೆ ಪೂರ್ವದಜಡಶೈವ ಮಾರ್ಗವ ಬಿಡಿಸಿ**
**ನಿಜವೀರಶೈವ ದೀಕ್ಷೆ**ಯನ್ನಿತ್ತು ಹಸ್ತಮಸ್ತಕ ಸಂಯೋಗವ ಮಾಡಿ....
(ಲಿಂಗವ) ಕರಸ್ಥಲಕ್ಕೆ ತಂದುಕೊಟ್ಟನು. (ಚ.ಬ.ವ. ೭೧೬)

ಚನ್ನಬಸವಣ್ಣನವರ ಈ ವಚನಗಳು 'ವೀರಶೈವಕ್ಕೆ' ವೀರವಂಶದಲ್ಲಿ ಜನಿಸಿದವ, ವೀರಾಚಾರ ನೆಲೆಗೊಂಡವ, ದೀಕ್ಷೆ ಪಡೆದವ, ಸಂಸ್ಕಾರವುಳ್ಳವ, ಶಿವಕಳಾತ್ಮ, ಸದ್ಭಕ್ತ, ಶರಣ, ವೀರಮಹೇಶ್ವರ–ಎಂದು ಸೂಚಿಸಿ ವೀರಶೈವನನ್ನು–ಸರ್ವ ಪ್ರಾಣಿಗಳಲ್ಲಿ ಅರಿವುಳ್ಳ ಜನ್ಮ ಪಡೆದ ಸರ್ವೋತ್ತಮನೆಂದು ಬಿತ್ತರಿಸುತ್ತಾನೆ. ಮುಂದುವರೆದು **ವೀರಶೈವ–ಶುದ್ಧಶೈವ—ವಿಶೇಷ ವೀರಶೈವರ** ಭೇದ ಹೇಳಿ ಆಚರಣೆ ಸಂಬಂಧ ಕುರಿತು ಚರ್ಚಿಸುತ್ತಾನೆ.

"........ಶಿಕ್ಷಾ ಪಾದೋದಕವನೆ ವಿಭೂತಿಯಲ್ಲಿ ಸಮ್ಮಿಶ್ರಮಾಡಿ,
ಲಲಾಟ ಮೊದಲಾದ ನಾಲ್ವತ್ತೆಂಟು ಸ್ಥಾನಂಗಳಲ್ಲಿ ಧಾರಣವ ಮಾಡುವುದು.
ಇದು **ವೀರಶೈವ**ರಿಗೆ ಸಲ್ಲುವ ನಡತೆ.
**ಶುದ್ಧಶೈವ**ರಿಗೆ ಗಿಂಡಿಯಲ್ಲಿ ತುಂಬುವ ನಡತೆ.
**ವಿಶೇಷ ವೀರಶೈವರು** ಗಿಂಡಿಯ ಮಾಡಲಾಗದು.
ಅದೇನು ಕಾರಣವೆಂದಡೆ, ಅವರಿಗೆ ತ್ರಿವಿಧ ಪಾದೋದಕವು
ನಿತ್ಯದ **ಸಂಬಂಧ**ವಾಗುವುದೆಂದು, ಅರಿದಾಚರಿಸುವಾತನೆ
ನಿತ್ಯಮುಕ್ತನಯ್ಯಾ, ಕೂಡಲಚನ್ನಸಂಗಮದೇವಾ" (ಚ.ಬ.ವ. ೬೦೭)
ಎಂದು ವಿಶ್ಲೇಷಿಸಿ ವಿವರ ನೀಡುತ್ತಾನೆ.

ಮತ್ತೊಂದು ವಚನದಲ್ಲಿ ಸಾಧಕ ಗುರು–ಸಿದ್ಧಗುರು–ಅವತಾರಿಕಗುರು ಎಂದು ವಿಭಜಿಸಿ ಅವರ ಲಕ್ಷಣ ಸೂಚಿಸುತ್ತಾನೆ. ಸಿದ್ಧಗುರುವಿನ ಆಚರಣೆ ಕುರಿತು ***ಷಟ್‌ಸ್ಥಲ ಜ್ಞಾನ**ದಲ್ಲಿ* ಸಿದ್ಧನಾದ ಸದ್ಗುರು.

* ಷಟ್‌ಸ್ಥಲದಿರವೇ ಮಹದೇವ.

ತಾನು ನಿತ್ಯ ನಿರ್ಮಲನಾದಡೆಯೂ
**ವೀರಶೈವ ಕ್ರಮಾಚರಣೆ** ಆಚರಿಸುತ್ತ....ಇರಬೇಕೆಂದು ತನ್ನ ಶಿವಭಕ್ತಿ
ಶಕ್ತಿಯನ್ನು ಬಿತ್ತರಿಸಲು–ಮುಂದಾಗಬೇಕೆನ್ನುತ್ತಾನೆ. (ವಚನ ೧೨೧)

**೨) ವೀರಶೈವ ಮಾರ್ಗದ ಬಾವನ್ನ (೫೨) ವಿವರ:**

"ಎಲ್ಲ ಎಲ್ಲವನರಿದು ಫಲವೇನಯ್ಯಾ ತನ್ನ ತಾನಱಿಯಬೇಕಲ್ಲದೆ"
ಎಂದ ಅಕ್ಕಮಹಾದೇವಿ 'ಒಳಗೂ ಕಲ್ಯಾಣ–ಹೊರಗೂ ಕಲ್ಯಾಣ' ಸಾಧಿಸಿದವಳು. ವಿದ್ಯಾಮದವಿಲ್ಲದೆ–ತುಂಬಿದ ಕೊಡವಾಗಿದ್ದವಳು. ಇವಳು ಬಸವಣ್ಣನ ಜನನದ ಉದ್ದೇಶ ಕುರಿತು ಹೇಳುತ್ತ ವೀರಶೈವಮಾರ್ಗದ (೫೨) ಬಾವನ್ನ ವಿವರ ನೀಡುತ್ತಾಳೆ. ಅದು ಹೀಗಿದೆ—

ಶಿವಶಿವಾ,
ಆದಿಅನಾದಿಗಳೆಂಬೆರಡಿಲ್ಲದ ನಿರವಯ ಶಿವ,
ನಿಮ್ಮ ನಿಜವನಾರಯ್ಯಾ ಬಲ್ಲವರು?
ವೇದಂಗಳಿಗಭೇದ್ಯನು, ಶಾಸ್ತ್ರಂಗಳಿಗಸಾಧ್ಯನು, ಪುರಾಣಕ್ಕೆ ಪುಣ್ಯನು,
ಆಗಮಕ್ಕೆ ಅಗೋಚರನು, ತರ್ಕಕ್ಕೆ ಅತರ್ಕನು
ವಾಙ್ಮನಾತೀತವಾಗಿಪ್ಪ ಪರಶಿವಲಿಂಗವನು.
ಕೆಲಂಬರು ಸಕಲನೆಂಬರು, ಕೆಲಂಬರು ನಿಷ್ಕಲನೆಂಬರು,
ಕೆಲಂಬರು ಸೂಕ್ಷ್ಮನೆಂಬರು, ಕೆಲಂಬರು ಸ್ಥೂಲನೆಂಬರು
ಈ ಬಗೆಯ ಭಾವದಿಂದ ಹರಿ ಬ್ರಹ್ಮ ಇಂದ್ರ ಚಂದ್ರ ರವಿ
ಕಾಲ ಕಾಮ ದಕ್ಷ ದೇವ ದಾನವ ಮಾನವರೆಲ್ಲರೂ
ಕಾಣಲರಿಯದೆ ಅಜ್ಞಾನದಿಂದ **ಭವಭಾರಿ**ಗಳಾದರು
ಈ ಪರಿಯಲ್ಲಿ ಬಯಲಾಗಿ ಹೋಗಬಾರದೆಂದು **ನಮ್ಮ ಬಸವಣ್ಣನು**
**ಜಗದ್ಧಿತಾರ್ಥವಾಗಿ** ಮರ್ತ್ಯಕ್ಕೆ ಅವತರಿಸಿ
**ವೀರಶೈವ ಮಾರ್ಗವನರಿಪುವುದಕ್ಕೆ ಬಾವನ್ನ (೫೨)**
**ವಿವರವನೊಳಕೊಂಡು** ಚರಿಸಿದನದಂತೆಂದಡೆ–
ಗುರು: ಕಾರುಣ್ಯವೇದ್ಯನು, ವಿಭೂತಿ ರುದ್ರಾಕ್ಷಿಧಾರಕನು
ಪಂಚಾಕ್ಷರಿ ಭಾಷಾ ಸಮೇತನು, **ಲಿಂಗಾಂಗ ಸಂಬಂಧಿ,**

---

ಭವಭಾರಿ < ನಿರಾಭಾರಿ–ಬ್ರಹ್ಮ, ವಿಷ್ಣು, ಇಂದ್ರ, ಚಂದ್ರ, ಮನು, ಮುನಿದೇವ ದಾನವ ಮಾನವರೆಲ್ಲ ಬಿದ್ದ ಭವಪಾಶಂಗಳ ದಾಂಟಿ **ಸರ್ವಸಂಗ ಪರಿತ್ಯಾಗತ್ವದಿಂದಿರ್ಪರು** ಭಕ್ತ ಮಾಹೇಶ್ವರರೆಂಬುದೀಗ 'ನಿರಾಭಾರಿ' ಎಂಬ ಶಬ್ದಕ್ಕರ್ಥ. **(ಚಿ. ಚಿ. ಭ. ಪುಟ ೨೨೬)**

ನಿತ್ಯಲಿಂಗಾರ್ಚಕನು, ಅರ್ಪಿತದಲ್ಲಿ ಅವಧಾನಿ,
ಪಾದೋದಕ ಪ್ರಸಾದ ಗ್ರಾಹಕನು,
**ಗುರುಭಕ್ತಿ ಸಂಪನ್ನನು, ಏಕಲಿಂಗನಿಷ್ಠಾಪರನು,**
ಚರಲಿಂಗಲೋಲುಪ್ತನು, ಶರಣ ಸಂಗಮೇಶ್ವರನು ತ್ರಿವಿಧಕ್ಕಾಯತನು.
ತ್ರಿಕರಣ ಶುದ್ಧನು, ತ್ರಿವಿಧಿ ಲಿಂಗಾಂಗ ಸಂಬಂಧಿ,
ಅನ್ಯದೈವಸ್ಮರಣೆಯ ಹೊದ್ದ, ಭವಿಸಂಗವ ಮಾಡ,
ಭವಿಪಾಕವ ಕೊಳ್ಳ, ಪರಸತಿಯ ಬೆರಸ,
ಪರಧನವನೊಲ್ಲ, ಪರನಿಂದೆಯ ಮಾಡ, ಅನೃತವ ನುಡಿಯ,
ಹಿಂಸೆಯ ಮಾಡ, ತಾಮಸ ಭಕ್ತ ಸಂಗವ ಮಾಡ
ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನ ಮುಂತಾದವೆಲ್ಲವಂ
ಸಮರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ, ಜಂಗಮ ನಿಂದೆಯ ಸೈರಿಸ,
ಪ್ರಸಾದ ನಿಂದೆಯ ಕೇಳ, ಅನ್ಯರನಾಸೆಯಗೆಯ್ಯಾ,ಪಾತ್ರಾಪಾತ್ರವನರಿದೀವ,
ಚತುರ್ವಿಧ ಪದವಿಯ ಹಾರ, ಅರಿಷಡ್ವರ್ಗಕ್ಕೆ ಅಳುಕ,
ಕುಲಾದಿ ಮದಂಗಳ ಒಗೆಗೊಳ್ಳ, ದ್ವೈತಾದ್ವೈತವ ನುಡಿವನಲ್ಲ,
ಸಂಕಲ್ಪ ವಿಕಲ್ಪವ ಮಾಡುವನಲ್ಲ, ಕಾಲೋಚಿತವ ಬಲ್ಲ,
ಕ್ರಮಯುಕ್ತನಾಗಿ **ಷಟ್‌ಸ್ಥಲಭರಿತ, ಸರ್ವಾಂಗಲಿಂಗಿ,**
**ದಾಸೋಹ ಸಂಪನ್ನ**
ಇಂತಿ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆಱೆದ ನಮ್ಮ ಬಸವಣ್ಣನು.
ಆ ಬಸವಣ್ಣನ ಶ್ರೀಪಾದಕ್ಕೆ ಅಹೋ ರಾತ್ರಿ
ನಮೋ ನಮೋ ಎಂದು ಬದುಕಿದೆನು ಕಾಣಾ ಚನ್ನಮಲ್ಲಿಕಾರ್ಜುನಾ.

(ಅ.ಮ.ವ. ೨೦೫)

ಈ ವಚನದಲ್ಲಿ ಅಕ್ಕಮಹಾದೇವಿಯು 'ವೀರಶೈವ ಮಾರ್ಗ'ವು ಒಳಗೊಳ್ಳುವ ೫೨ ವಿವಿಧ ವಿವರ ನೀಡುತ್ತಾಳೆ. ವೀರಶೈವ ಮಾರ್ಗವನರುಹಲು ಬಂದ ಬಸವಣ್ಣನು ೫೨ ವಿಧಗಳಲ್ಲಿ ನಿಪುಣನಾಗಿ ಮೆರೆದಾತನೆನ್ನುವಳು. ವೀರಶೈವನು ಏಕಲಿಂಗ ನಿಷ್ಠಾಪರನು, ಲಿಂಗಾಂಗ ಸಂಬಂಧಿ, ಪ್ರಸಾದಕಾಯನು, ಷಟ್‌ಸ್ಥಲ ಭರಿತನು, ಸರ್ವಾಂಗಲಿಂಗಿ, ದಾಸೋಹ ಸಂಪನ್ನ ಎಂದು ಪ್ರತಿಪಾದಿಸಿದುದು 'ವೀರಶೈವ ಮಾರ್ಗ'ದ ವಿವರಣೆಗೆ ವ್ಯಾಖ್ಯಾನ ಬರೆದಂತಿದೆ–ಈ ವಚನ.

## II. ೧. ಲಿಂಗವಂತ—ಲಿಂಗವಂತನ ಶೀಲ—ಲಿಂಗವಂತನ ನಡೆ

ಲಿಂಗವಂತ, ಲಿಂಗಧಾರಿ, ಲಿಂಗಪ್ರೇಮಿ, ಲಿಂಗಪ್ರಾಣಿ, ಲಿಂಗನಿವಾಸಿ–ಎಂಬರ್ಥದಲ್ಲಿ ವಿಚಾರಿಸಿದ ಚನ್ನಬಸವ ಲಿಂಗವಂತನಾರೆಂಬುದನ್ನು ಕೆಳಗಿನ ವಚನಗಳಲ್ಲಿ ಸೂತ್ರೀಕರಿಸುತ್ತಾನೆ.

"ಕರಸ್ಥಲದಲಿ ಲಿಂಗವಧರಿಸಿ **ಅನ್ಯದೈವಕ್ಕೆ** ತಲೆವಾಗದಾತ
ಲಿಂಗವಂತನೆಂಬೆನಯ್ಯಾ
ಕರಸ್ಥಲದಲಿ ಲಿಂಗವಧರಿಸಿ **ಭವಿಸಂಗವ ಮಾಡ**ದಾತ ಲಿಂಗವಂತನೆಂಬೆನಯ್ಯಾ
ಕರಸ್ಥಲದಲಿ ಲಿಂಗವ ಧರಿಸಿದಾತ **ಜಡಶೈವರ ಹೊದ್ದಲಾಗದು**
**ಶೈವರು** ಹೇಳಿದ ಶಾಸ್ತ್ರವ ಓದಲಾಗದು.
ಅನ್ಯಮಂತ್ರ ಅನ್ಯಜಪಮಾಲಿಕೆಯ ಮಾಡಲಾಗದು.
ಲಿಂಗಬಾಹ್ಯ ಸತಿ–ಸುತರ ಸೋಂಕಲಾಗದು.
ಕರಸ್ಥಲದಲಿ **ಲಿಂಗವ ಧರಿಸಿದಾತ ಉದಯಾಸ್ತಮಾನವೆನ್ನದೆ**
**ಶಿವಪೂಜೆ, ಶಿವಮಂತ್ರ, ಶಿವಾರ್ಪಣ, ಶಿವಶಾಸ್ತ್ರ,**
**ಶಿವಯೋಗ**ದಲ್ಲಿರುವಾತನೆ **ಲಿಂಗವಂತನೆಂಬೆನಯ್ಯಾ**........"

(ಕೂ.ಚ.ಸಂ.ದೇವ ವಚನ ೨೦೭)

ಅನ್ಯದೈವಕ್ಕೆ ತಲೆವಾಗದ, ಭವಿಸಂಗ ಮಾಡದ, ಜಡಶೈವ ಹೊದ್ದದ–ಲಿಂಗವಂತನು ಲಿಂಗಧಾರಿ ಸದಾ ಶುಚಿಃ (ಲಿಂಗಧಾರಿಯಾಗಿ ಸದಾ ಶುಚಿಯು) ಶಿವಪೂಜೆ, ಶಿವಮಂತ್ರ, ಶಿವಾರ್ಪಣ, ಶಿವಶಾಸ್ತ್ರ, ಶಿವಯೋಗದಲ್ಲಿರುವ ನಡತೆಯುವನೆಂದು ಸ್ಪಷ್ಟಪಡಿಸಿದುದು ಮಹತ್ವ ಪೂರ್ಣವಾಗಿದೆ. ಲೀಗಧಾರಿಯಾದ ಈ ಲಿಂಗವಂತ ಧರಿಸಿದ ಲಿಂಗ, ಎಮ್ಮೆ ಕೊರಳೊಳಗೆ ಗಂಟೆ ಕಟ್ಟಿದಂತಾಗಬಾರದೆಂದು ಎಚ್ಚರಿಸುವ ಆ ವಚನ ಇಂತಿದೆ.

"ವೇಶಿ–ದಾಸಿ–ಸುಂಕಿಗ–ಮಣಿಹಗಾಜಿ–ವಿದ್ಯಾವಂತ–ಇಂತೀ ಐವರಿಗೆ
ಲಿಂಗವ ಕಟ್ಟಿದಡೆ ಗುಡಿಯ ಮುಂದಣ ಸಿಂಗಾರ ಗಂಟೆ,
ಎಮ್ಮೆಯ ಕೊರಳ ಗಂಟೆ, ಕೊಟ್ಟಿಯ ಮೆಳೆಯೊಳಗೆ ಇಟ್ಟು ಸಿಕ್ಕಿದ ಕಲ್ಲು
ಲಿಂಗ, ವಿಭೂತಿ, ರುದ್ರಾಕ್ಷಿ ಇವ ಮಾರಾಟಕ್ಕೆ ಹೇರಿಕೊಂಡು ತಿರುಗುವ
ಎತ್ತು ಕತ್ತೆಗೆ ಮುಕ್ತಿಯುಂಟೆ? (ಕೂ. ಚ. ಸಂ. ದೇವಾ. ವಚನ ೨೦೮) ಎಂದು
ಪ್ರಶ್ನೆಯೊಡ್ಡಿ ಉಗ್ಘಡಿಸುತ್ತಾನೆ–ಚನ್ನಬಸವ.

## ೨. ಲಿಂಗವಂತನ ಶೀಲ:

"ಲಿಂಗವಂತನ ಲಿಂಗವೆಂಬುದೇ ಶೀಲ
ಲಿಂಗವಂತನ ರಾಣಿವಾಸದ ಲಿಂಗದ ರಾಣಿವಾಸವೆಂಬುದೆ ಶೀಲ
ಲಿಂಗವಂತನ ಅರ್ಥ–ಪ್ರಾಣ—ಅಭಿಮಾನಕ್ಕೆ ತಪ್ಪದಿಪ್ಪದೆ ಶೀಲ
ಲಿಂಗವಂತನ ಪಾದೋದಕ ಪ್ರಸಾದ ಸೇವನೆಯ ಮಾಡುವುದೆ ಶೀಲ
ಇಂತಪ್ಪ ಶೀಲವೆ ಶೀಲ, ಉಳಿದ ಶೀಲಕ್ಕೆ ಮೆಚ್ಚುವನೆ
ಕೂಡಲಸಂಗಮದೇವಾ" (ವ–೪೦೦) ಎಂಬ ವಚನ ಮತ್ತು
'ಲಿಂಗಸಾರಾಯ' ಸುಖಸಂಗಿಗಳನುಭಾವ ಲಿಂಗವಂತರಿಗಲ್ಲದೆ
ಕಾಣಬಾರದು"...(ವ. ೫೯೫) ಎಂಬ ವಚನ–

ಲಿಂಗವಂತನ ಚಾರಿತ್ರ್ಯ, ಗುರು–ಲಿಂಗ–ಜಂಗಮಕ್ಕರ್ಪಿಸಿ ಪಡೆದ ಪ್ರಸಾದದ, ಲಿಂಗ ಸಾರಾಯದ, ಸುಖಸಂಗಿಗಳನುಭಾವದ–ವಿವರಕ್ಕೆ ಸೂತ್ರ ನೀಡಿದೆಯೆಂದು ಹೇಳಬೇಕಾಗುತ್ತದೆ.

**೩. ಲಿಂಗವಂತನ ನಡೆ:**

"ಲಿಂಗವಂತರು ತಾವಾದ ಬಳಿಕ
ಅಂಗನೆಯರ ನಡೆ–ನುಡಿಗೊಮ್ಮೆ ಲಿಂಗದ ರಾಣಿಯರೆಂದು ಭಾವಿಸಬೇಕು.
ಲಿಂಗವಂತರು ತಾವಾದ ಬಳಿಕ
**ಅನುಭವ ವಚನಗಳ ಹಾಡಿ**
**ಸುಖದುಃಖಗಳಿಗಭೇದ್ಯವಾಗಿರಬೇಕು.**
ಲಿಂಗವಂತರು ತಾವಾದ ಬಳಿಕ
ಜಂಗಮವ ಪೂಜಿಸಿ, ಸದಾ **ಲಿಂಗೈಕ್ಯ ಸುಖಿ**ಗಳಾಗಿರಬೇಕು. ನೋಡಾ
ಕಪಿಲಸಿದ್ಧ ಮಲ್ಲಿಕಾರ್ಜುನಾ" (ಸಿ. ರಾ. ವ. ೩೩೭)

'ಸುಖ ದುಃಖೇ ಸಮೇಕೃತ್ವಾ' ಎಂದು ಭಾವಿಸಿ ಸುಖದುಃಖಗಳಿಗಭೇದ್ಯರಾಗಿ, ಅನುಭವ ವಚನಗಳ ಹಾಡಿ, ಲಿಂಗೈಕ್ಯ ಸುಖಿಗಳಾಗಿರುವವರೇ ಲಿಂಗವಂತರು ಎಂದು ಕರ್ಮಯೋಗಿ ಸಿದ್ಧರಾಮ ನುಡಿಯುತ್ತಾನೆ. 'ಲಿಂಗಧಾರಿ ಸದಾ ಶುಚಿಃ' ಎಂಬ ಧೋರಣೆಯ ಸಿದ್ಧರಾಮ ಮುಂದುವರೆದು–

"ಸರ್ವರು ಲಿಂಗವಂತರೆಂದು ಮನದಲ್ಲಿ ಭಾವಿಸಿ ನಡೆಯಬೇಕಲ್ಲದೆ
ನಡೆ ನುಡಿಯಲ್ಲಿ ಭಾವಿಸಿ ನಡೆಯಬಾರದು ನೋಡಯ್ಯಾ"

ಎಂದು ಎಚ್ಚರಿಕೆ ಕೊಡುವಲ್ಲಿ ಲಿಂಗವಂತನ ನಡೆ ನುಡಿ ಸೂಚಿಸಿದು ಗಮನಾರ್ಹವಾಗಿದೆ.

ವೀರಶೈವ–ವೀರಶೈವ ಮಾರ್ಗ–ಲಿಂಗವಂತ–ನಡೆ–ನುಡಿ ಎಲ್ಲವನ್ನೂ 'ಕಿರಿದರಲ್ಲಿ ಪಿರಿದರ್ಥ'ವಿಟ್ಟಂತೆ, ೧೯ನೆಯ ಶತಮಾನದ ಮೈಲಾರ ಬಸವಲಿಂಗ ಶರಣರು ಹೀಗೆ ಹೇಳಿದ್ದಾರೆ–

ಗುರು ಲಿಂಗ ಚರ ಪ್ರಸಾದಂ
ನಿರುಪಮ ಸಾರಾಯ ಪದದಿ ನಾಲ್ಕುವರೊಳಗಂ
ಪರಿಪೂರ್ಣನಾದ ಭಕ್ತನಂ
ವರ **ವೀರಶೈವನೆನಿಸಂ** ಬಸವ ಪ್ರಭುವೆ. (ಷ. ಜ್ಞಾ. ಭಾ–ಪದ್ಯ ೨೧೯)
ಶೈವ ಸುಮಾರ್ಗದೊಳೆಲ್ಲಂ
ಶ್ರೀ ವೀರಶೈವ ಷಟಸ್ಥಲ ಮಾರ್ಗವಿದಧಿಕಂ
ಈ ವೀರಶೈವವೊಂದನೆ
ನೀವರುಹಿ ಪಾಲಿಸೆನ್ನಂ ಬಸವ ಪ್ರಭುವೆ (ಷ. ಜ್ಞಾ. ಭಾ. ಪದ್ಯ–೭)

ಎಂಬ ಪದ್ಯಗಳಲ್ಲಿ 'ವೀರಶೈವ ಶೈವದ ಪರಿಪಕ್ವ ಫಲ, ಅದರ ಮಾರ್ಗ ಷಟಸ್ಥಲ ಮಾರ್ಗ, ಅದರಾಚರಣೆ. ಚತುರ್ವಿಧ ಸಾರಾಯ ಸಂಪತ್ತಿನದು, ಪ್ರಸಾದಕಾಯನಾಗಿ ಪರಿಪೂರ್ಣ ಭಕ್ತನಾಗಿ ವೀರಶೈವನಾಗುವ ನಿಲುವನ್ನು ಶರಣರು ಸರಳವಾಗಿ, ಸಂಕ್ಷೇಪವಾಗಿ ಸೂತ್ರಿಕರಿಸಿದುದು ತುಂಬಾ ಅರ್ಥಪೂರ್ಣವಾಗಿದೆ; ವೀರಶೈವದ ಕೇಂದ್ರ ಬಿಂದುವಾಗಿದೆ.

## III. ೧. ನಿರಾಭಾರಿ ವೀರಶೈವ:

"ಅಷ್ಟಾವರಣಂಗಳಂತರಂಗ, ಬಹಿರಂಗದಲ್ಲಿ ಸಂಬಂಧಾಚರಣೆಗಳಿಂದ ಆಚ್ಛಾದಿಸಿ ಕೊಂಡು ತನ್ನ ತಾನೆ ಪೂಜ್ಯ–ಪೂಜ್ಯಕತ್ವದಿಂದ ಇರುವುದೇ ನಿರಾಭಾರಿ ವೀರಶೈವವು" (ವಿವರಕ್ಕಾಗಿ ನೋಡಿ ಚಿ. ಚಿ. ಭ. ಪುಟ ೨೨೭) ವೀರಶೈವ, ಲಿಂಗವಂತ ಎಂದು ಗುರುತಿಸಿದ ಲಿಂಗಧಾರಿಯನ್ನು 'ನಿರಾಭಾರಿ ವೀರಶೈವ'ನೆಂದು ಕರೆದು ಅವನ ಗುಣಲಕ್ಷಣ ಗಳನ್ನು, ಅವನಾಚರಿಸುವ ವೀರಶೈವ ಮಾರ್ಗವನ್ನು ಚನ್ನಬಸವ, ಅಕ್ಕಮಹಾದೇವಿ ಮೊದಲಾದ ಪ್ರಮಥ ಗಣಂಗಳೆಲ್ಲ–ನಿರಾಭಾರಿ ವಿ ರಶೈವ ಸನ್ಮಾರ್ಗವಿಡಿದಾಚರಿಸಿದರೆಂದು ಬತ್ತೀಸ ಕಳೆಗಳ ಯಾದಿಯನ್ನೇ ಕೊಡುವದುಂಟು. ಈಗ ಅವುಗಳನ್ನು ಕುರಿತು ನೋಡ ಬಹುದು.

ಚನ್ನಬಸವಣ್ಣನು ತನ್ನ ವಚನಗಳಲ್ಲಿ 'ನಿರಾಭಾರಿ ವೀರಶೈವ' ಕುರಿತು ಇಂತು ಉಲ್ಲೇಖಿಸಿದ್ದಾನೆ.

೧) "........ಅರ್ಥ ಪ್ರಾಣ ಅಭಿಮಾನವೆಂಬ ತ್ರಿಸ್ಥಾನವ ಶುದ್ಧವ ಮಾಡುವಲ್ಲಿ **ನಿರಾಭಾರಿಯು ಕೂಡಿಕೊಂಡಿಪ್ಪ** ಕೂಡಲ ಚನ್ನಸಂಗಯ್ಯ...." (ಚ. ಬ. ವ. ೨೬೭)

೨) **"........ನಿರಾಭಾರಿಯು ತೋರಿ ಬದುಕಿಸಾ........"** ವಚನ ೯೩.

೩) **"........ನಿರಾಭಾರಿ ವೀರಶೈವ ನಿರ್ವಾಣ ಸದ್ಭಕ್ತ ಜಂಗಮ ಗಣಂಗಳು"**

ಶುದ್ಧಪ್ರಸಾದವ ಹನ್ನೆರಡು, ಸಿದ್ಧಪ್ರಸಾದವ ಹನ್ನೆರಡು,
ಪ್ರಸಿದ್ಧಪ್ರಸಾದ ಪ್ರಣವ ಹನ್ನೆರಡು.
ಇಂತು ವಿಚಾರದಿಂದ ಮೂವತ್ತಾರು ಪ್ರಣವವನೊಡಗೂಡಿ
ಶುದ್ಧಪ್ರಸಾದ ಪ್ರಣವ ಆಚಾರಲಿಂಗ ಗುರುಲಿಂಗ ಇಷ್ಟಲಿಂಗ ಪರಿಯಂತರ
ತ್ರಿವಿಧ ಲಿಂಗಕ್ಕೆಂದು ಮಾಡುವುದಯ್ಯಾ. (ವಚನ ೧೫೫)

ಈ ಮೂರು ವಚನಗಳು, 'ನಿರಾಭಾರಿ ವೀರಶೈವ' ನಿರ್ವಾಣ ಸದ್ಭಕ್ತ ಜಂಗಮನ ಅರ್ಚನ–ಅರ್ಪಣ–ಅನುಭವದ ಮೂಲಕ ಪ್ರಸಾದ ಕಾಯನಾಗಿ 'ನಿರಾಭಾರಿ'ಯಾದ ನಿಲುವಿಗೆ ಸಾಕ್ಷಿಗಳಾಗಿವೆಯೆನಿಸುತ್ತದೆ.

### ೨. ನಿರಾಭಾರಿ ವೀರಶೈವ ಸನ್ಮಾರ್ಗ:

ಬತ್ತೀಸ ಕಳೆಗಳ ನೆಲೆಯನ್ನು ಸದ್ಗುರು ಮುಖದಿಂದ ಅರಿತ ಬಸವ ಮೊದಲಾದ ಸಮಸ್ತ ಪ್ರಮಥ ಗಣಂಗಳು ನಿರಾಭಾರಿ ವೀರಶೈವ ಸನ್ಮಾರ್ಗವಿಡಿದಾಚರಿಸಿದ, ನಿಲುವನ್ನು **ಅಕ್ಕಮಹಾದೇವಿಯು** ತನ್ನ ವಚನದಲ್ಲಿ ಇಂತು ನಿರೂಪಿಸಿದ್ದಾಳೆ.

"ಅಯ್ಯಾ, ಸದಾಚಾರ ಸದ್ಭಕ್ತಿ ಸತ್ಕ್ರಿಯಾ ಸಮ್ಯಕ್‌ಜ್ಞಾನ ಸದ್ವರ್ತನೆ
ಸದ್ಗುಣ ನಿರ್ಗುಣ ಸಚ್ಚರಿತ್ರ ಸದ್ಭಾವ ಕ್ರೋಧ ಸತ್ಯವಚನ
ಕ್ಷಮೆ ದಮೆ ಭವಿ-ಭಕ್ತ ಭೇದ ಸತ್ಪಾತ್ರ ದ್ರವ್ಯಾರ್ಪಣ
ಗೌರವ ಬುದ್ಧಿ ಲಿಂಗಲೀನತ್ವ ಜಂಗಮಾನುಭಾವ
ದಶವಿಧ ಪಾದೋದಕ ಏಕಾದಶ ಪ್ರಸಾದ ಷೋಡಶ ಭಕ್ತಿ ನಿರ್ವಾಹ
ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ, ತ್ರಿವಿಧ ಷಡ್ವಿಧ ನವವಿಧಜಪ
ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಣೆ, ಚಿದ್ವಿಭೂತಿ ಸ್ನಾನ ಧೂಳನ ಧಾರಣ
ಸರ್ವಾಂಗದಲ್ಲಿ ಚಿದ್ರುದ್ರಾಕ್ಷಿ ಧಾರಣ, ತಾ ಮಾಡುವ ಸತ್ಯಕಾಯಕ
ತಾ ಬೇಡುವ ಸದ್ಭಕ್ತಿ, ಭಿಕ್ಷೆ ತಾ ಕೊಟ್ಟುಕೊಂಬ ಭೇದ
ತಾನಾಚರಿಸುವ ಸತ್ಯ ನಡೆ ನುಡಿ, ತಾ ನಿಂದ ನಿರ್ವಾಣ ಪದ-
ಇಂತೀ **ಬತ್ತೀಸ** ಕಳೆಗಳ ನೆಲೆಯ ಸದ್ಗುರು ಮುಖದಿಂದರಿದ
**ಬಸವ ಮೊದಲಾದ ಸಮಸ್ತ ಪ್ರಮಥ ಗಣಂಗಳೆಲ್ಲ**
**ನಿರಾಭಾರಿ ವೀರಶೈವ ಸನ್ಮಾರ್ಗವಿಡಿದಾಚರಿಸಿದರು ನೋಡಾ.**
ಇಂತು ಪ್ರಮಥ ಗಣಂಗಳಾಚರಿಸಿದ ಸತ್ಯಸನ್ಮಾರ್ಗವನರಿಯದ
ಮೂಢ ಅಧಮರನೆಂತು ಶಿವಶಕ್ತಿ ಶಿವಭಕ್ತಿ ಶಿವಜಂಗಮ
ಎಂಬೆನಯ್ಯಾ ಚೆನ್ನಮಲ್ಲಿಕಾರ್ಜುನಾ." (ವಚನ-೧೯೮)

ಇಲ್ಲಿ ಸದ್ಭಕ್ತಿ-ಸಮ್ಯಕ್ ಕ್ರಿಯೆ-ಸಮ್ಯಕ್ ಜ್ಞಾನಗಳು, ಲಿಂಗಪೂಜೆ-ಕಾಯಕ-ಜಂಗಮ ದಾಸೋಹ ಪ್ರಸಾದ ಸಿದ್ಧಿಯನ್ನು ಸೂಚಿಸಿ ನಿರಾಭಾರಿ ವೀರಶೈವನ ಲಕ್ಷಣಗಳನ್ನು ಎತ್ತಿಹೇಳಿದುದನ್ನು, ಈ ಮಾರ್ಗದಲ್ಲಿ ಬಸವಾದಿ ಪ್ರಮಥ ಗಣಂಗಳು ಇವುಗಳನ್ನರಿತು ಸಾಧಿಸಿ ನಿರಾಭಾರಿಗಳಾದರೆಂದು ನಿರೂಪಿಸುತ್ತವೆ. ಇಂಥ ಸನ್ಮಾರ್ಗವನರಿಯದ ಮೂಢರು ಶಿವಶಕ್ತಿ-ಶಿವಭಕ್ತಿ-ಶಿವಜಂಗಮದ ಮಹತ್ವನರಿಯರು ಎಂದು ಅಕ್ಕ-ನಿರಾಭಾರಿಗಳ, ಮೂಢರ, ಗುಣವಿಶೇಷಗಳನ್ನು ತೂಗಿ ನೋಡಿದ್ದಾಳೆ; ನಿರಾಭಾರಿ ಪ್ರಮಥ ವೀರಶೈವ ಗಣವನ್ನು ಎತ್ತಿಹಿಡಿದಿದ್ದಾಳೆ.

### IV. ಜಾತಿಶೈವ-ಅಜಾತಿ ಶೈವ:

**ಜಾತಿ ಶೈವರೆಂದು-ಅಜಾತಿ ಶೈವರೆಂದು ಎರಡು ಪ್ರಕಾರವಾಗಿಹರಯ್ಯಾ**
**ಜಾತಿಶೈವರೆಂಬವರು ಶಿವಂಗೆ ಭೋಗಸ್ತ್ರೀಯರಯ್ಯಾ**

ಅಜಾತಿಶೈವರೆಂಬುವರು ಶಿವಂಗೆ **ಕುಲಸ್ತ್ರೀಯರಯ್ಯಾ**
**ಜಾತಿಶೈವರೆಂಬುವರು ಸರ್ವಭೋಗಂಗಳ ಬಯಸಿ ಮಾಡುವರಾಗಿ**
ಶ್ಲೋಕ..................................................
...........................................

**'ಅಜಾತಿಶೈವರು' ಗುರುಲಿಂಗಜಂಗಮಕ್ಕೆ ತನುಮನಧನವ**
**ನಿವೇದಿಸಿ ಸರ್ವಸೂತಕರಹಿತರಾಗಿಹರಯ್ಯಾ.**
ಶ್ಲೋಕ........................
ಇದು ಕಾರಣ ಸರ್ವೇಶ್ವರ ಚೆನ್ನಮಲ್ಲಿಕಾರ್ಜುನಯ್ಯನು
**ಭಕ್ತಕಾಯನೆಂಬೈಕ್ಯ ಪದವನು ಅಜಾತಿಶೈವರಿಗೆ**
**ಕೊಡುವನಯ್ಯಾ.** (ಅ. ಮ. ವ. ೧೭೦)

ಅಕ್ಕನ ಈ ವಚನ **ಜಾತಿಶೈವ, ಅಜಾತಿಶೈವರ** ಭೇದ ಹೇಳಿ ಭವಿಭಕ್ತರ ನಿಲುವನ್ನು ಚರ್ಚಿಸಿ ಗುರುಲಿಂಗಜಂಗಮಕ್ಕೆ ತನುಮನಧನವ ಸಮರ್ಪಿಸಿ ಸೂತಕರಹಿತರಾದ ಅಜಾತಿಶೈವನ (ವೀರಶೈವ-ನಿರಾಭಾರಿ ವೀರಶೈವ-ಲಿಂಗವಂತ) ಮಹತಿಯನ್ನು ಎತ್ತಿ ಹೇಳುತ್ತದೆ. ಪುನರ್ಜನ್ಮ ಹೊಂದಿದ, ಫಲಾಪೇಕ್ಷೆಯುಳ್ಳ, ಸೂತಕ ಪಾತಕಗಳನ್ನೊಳಗೊಂಡ **ಜಾತಿಶೈವವು** ಒಂದು ಮುಖ್ಯವಾದರೆ, ಏಕೇನ ಜನ್ಮದಲ್ಲಿ ಮುಕ್ತಿಪಡೆವ, ಫಲಾಪೇಕ್ಷೆಯಿಲ್ಲದ, ಸೂತಕ ರಹಿತನ, ಅರ್ಪಣ ತತ್ತ್ವದ, ಭಕ್ತಕಾಯನಾದ **ಅಜಾತಿ ಶೈವನ** ಐಕ್ಯಪದವಿಯನ್ನು ಎತ್ತಿ ತೋರಿಸುತ್ತದೆ. ಇಲ್ಲಿ ಜಾತಿಶೈವರನ್ನು ಭೋಗಸ್ತ್ರೀಗೆ ಅಜಾತಿಶೈವರನ್ನು ಕುಲಸ್ತ್ರೀಗೆ ಹೋಲಿಸಿ ಅಜಾತಿಶೈವನ ಪಾವಿತ್ರತೆಯನ್ನು ಎತ್ತಿಹಿಡಿದುದು ಕಂಡು ಬರುತ್ತದೆ.

ಒಟ್ಟಿನಲ್ಲಿ ಶರಣರು 'ವೀರಶೈವ'ಕ್ಕೆ **ಲಿಂಗವಂತ-ನಿರಾಭಾರಿ-ವೀರಶೈವ-ಅಜಾತಿಶೈವ**-ಎಂಬ ಮುಂತಾದ ಪದಗಳನ್ನು ಬಳಸಿದುದು, ವೀರಶೈವನಾರು? ಲಿಂಗವಂತನ ನಡೆನುಡಿಗಳೇನು? ನಿರಾಭಾರಿ ವೀರಶೈವನ ಲಕ್ಷಣಗಳೇನು? ಎಂದು ಸ್ಪಷ್ಟಪಡಿಸಿದುದು-ಲಿಂಗವಂತ-ನಿರಾಭಾರಿ-ಶರಣ, ಜ್ಞಾನಿ, ಪ್ರಮಥ, ಅಜಾತಿಶೈವ ಎಂಬ ಪರ್ಯಾಯ ಪದಗಳನ್ನು ಬಳಸಿದುದು ಈ ಲೇಖನದಿಂದ ತಿಳಿದುಬರುತ್ತದೆ. ವಚನಕಾರರು 'ವೀರಶೈವ'ವನ್ನು ಕುರಿತು ವಚನಗಳಲ್ಲಿ ಏನನ್ನು ವಿವರಣೆ ನೀಡಿದ್ದಾರೆಂದು ಎತ್ತಿ ತೋರಿಸಲು ಮಾಡಿದ ಇದೊಂದು ಚಿಕ್ಕ ಪ್ರಯತ್ನವೆಂದು ನಾನು ಭಾವಿಸುತ್ತೇನೆ. 'ವೀರಶೈವ'ದ ಪಾರಿಭಾಷಿಕ ಪದಗಳನ್ನಾಯ್ದುಕೊಂಡು ವಚನಗಳಾಧಾರದಿಂದ ಒಂದೊಂದನ್ನು ಸಂಗ್ರಹಿಸಿ ವಿಶ್ಲೇಷಿಸಿದರೆ, ಹೊಸ ದಿಗಂತಗಳನ್ನು ನೋಡಲು ಸಾಧ್ಯವಾದೀತೆನಿಸುತ್ತದೆ.

## ಸಹಾಯಕ ಗ್ರಂಥಗಳು:

೧. ಬಸವಣ್ಣನವರ ಷಟಸ್ಥಲದ ವಚನಗಳು: ಸಂ. ಆರ್. ಸಿ. ಹಿರೇಮಠ. ಕ. ವಿ. ವಿ. ಪ್ರಕಟಣೆ. ೧೯೬೮.

೨. ಶ್ರೀ ಸಿದ್ಧರಾಮೇಶ್ವರ ವಚನಗಳು: ಸಂ. ಆರ್. ಸಿ. ಹಿರೇಮಠ. ೧೯೬೮.

೩. ಅಲ್ಲಮಪ್ರಭುದೇವರ ವಚನಗಳು: ಸಂ. ಆರ್. ಸಿ. ಹಿರೇಮಠ ಮತ್ತು ಎಮ್. ಎಸ್. ಸುಂಕಾಪೂರ ೧೯೭೬.

೪. ಶಿವಶರಣೆಯರ ವಚನಗಳು: ಸಂ. ಆರ್. ಸಿ. ಹಿರೇಮಠ. ೧೯೬೮.

೫. ಚನ್ನಬಸವಣ್ಣನವರ ವಚನಗಳು: ಸಂ. ಆರ್. ಸಿ. ಹಿರೇಮಠ. ಕ.ವಿ.ವಿ. ಪ್ರಕಟಣೆ. ೧೯೭೧.

೬. ಮೈಲಾರ ಬಸವಲಿಂಗ ಶರಣರ ಸಮಗ್ರ ಸಾಹಿತ್ಯ: ಸಂ. ಎಸ್. ವ್ಹಿ. ಅಯ್ಯನಗೌಡರ. ವೀರಶೈವ ಅಧ್ಯಯನ ಸಂಸ್ಥೆ ಗದಗ.

೭. ಚಿದೈಶ್ವರ್ಯ ಚಿದಾಭರಣ–ಸಂ. ಗಿರಿರಾಜು.

# ಶರಣರ ದೃಷ್ಟಿಯಲ್ಲಿ ವೀರಶೈವ ಶೀಲಗಳು

—ಡಾ. ವೀರಣ್ಣ ರಾಜೂರ

**ಶೀಲ:**

'ಶೀಲ' ಭಾರತೀಯ ಸಂಸ್ಕೃತಿಯ ಒಂದು ಪ್ರಮುಖ ಜೀವನಮೌಲ್ಯ. ಈ ಸಂಪತ್ತು ಇದ್ದಲ್ಲಿ ಪ್ರೀತಿ, ವಿಶ್ವಾಸ, ನ್ಯಾಯ, ಧರ್ಮ, ಸತ್ಯ, ನೀತಿ, ನಿರ್ಮಲತೆ, ಗೌರವಾದರಗಳು ತಾವಾಗಿಯೇ ನೆಲೆಸಿರುತ್ತವೆ. ವ್ಯಕ್ತಿಯ ವಿಕಾಸ, ಸಮಾಜದ ಸ್ವಾಸ್ಥ್ಯ ಹಾಗೂ ನಾಡಿನ ನೆಮ್ಮದಿಗೆ ಶೀಲವೇ ಕಾರಣ. ಅದಕ್ಕಾಗಿ ಮೊದಲಿನಿಂದಲೂ ನಮ್ಮ ನಾಡಿನ ಆಧ್ಯಾತ್ಮವಾದಿಗಳು ಹಾಗೂ ಅನುಭಾವಿಗಳು ಇದನ್ನು ತಮ್ಮ ಜೀವರತ್ನದಂತೆ ಕಾಪಾಡಿಕೊಂಡು, ಅದರಿಂದ ದೊರೆಯುವ ಪರಮಾನಂದವನ್ನು ಅನುಭವಿಸುತ್ತ, ಇತರರೂ ಆ ಆನಂದವನ್ನು ಪಡೆಯಲಿ ಎಂದು ಬೋಧಿಸುತ್ತ ಬಂದಿದ್ದಾರೆ.

'ಶೀಲ' ಎಂಬ ಪದ ವಿವಿಧ ಅರ್ಥಸಂಪತ್ತಿಯನ್ನು ಪಡೆದುಕೊಂಡಿದೆ. ಸಂಸ್ಕೃತದಲ್ಲಿ, 'ಶೀಲ್' ಎಂಬುದು ಉಭಯಪದಿಧಾತು, ಇದರ ಅರ್ಥ ಆಚರಿಸು, ಉಟ್ಟುಕೊಳ್ಳು, ಆವರಿಸಿಕೊಳ್ಳು, ಹೊದೆ ಎಂದು.[೧] ಕನ್ನಡದಲ್ಲಿ ಇದು ನಾಮಪದ. ನಡತೆ, ರೀತಿ, ಚಾರಿತ್ರ್ಯ, ಒಳ್ಳೆಯ ಗುಣ, ಸದಾಚಾರ, ಚೆಲುವು, ಸೌಂದರ್ಯ,[೨] ಸ್ವಭಾವ, ರೂಢಿ[೩] ಎಂದು ಇದರ ಅರ್ಥ.

ಪಾಣಿನಿ 'ಶೀಲಂ ಸ್ವಭಾವೇ'[೪]: ಸ್ವಭಾವ ಸಹಜ ಆಚರಣೆಯೇ ಶೀಲ ಎಂದರೆ, ಅಮರಸಿಂಹ 'ಶುಚೌ ತು ಚರಿತೇ ಶೀಲಂ'–'ಶುಚೌ ಶುದ್ಧೇ ಚರಿತೇ ಆಚರಣೇ ಶೀಲಂ'[೫] ಶುಚಿಯಾದ ಶುದ್ಧವಾದ, ಚರಿತೆ ಆಚರಣೆಯೇ ಶೀಲ ಎಂದೂ, 'ಶೀಲಂ ಸ್ವಭಾವೇ ಸದ್ವೃತ್ತೇ'–'ಸ್ವಭಾವೇ–ಪ್ರಕೃತೌ, ಸದ್ವೃತ್ತೇ–ಸಚ್ಚರಿತೇ ಶೀಲಂ'[೬] : ಶೀಲಪದ ಸದ್ವೃತ ಮತ್ತು ಸ್ವಭಾವಗಳೆಂಬ ಎರಡು ಅರ್ಥಗಳಿಂದ ಕೂಡಿದೆ ಎಂದೂ ತಿಳಿಸುತ್ತಾನೆ.

---

೧ ಅರವತ್ತು ನಾಲ್ಕು ಶೀಲಗಳು: ಗೌ. ಮ. ಉಮಾಪತಿಶಾಸ್ತ್ರೀ (ಸಿದ್ಧಗಂಗಾಶ್ರೀ ಪು. ೬೧೪)

೨ ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ–ಕನ್ನಡ ನಿಘಂಟು: ಪು. ೮೧೦

೩ ಕನ್ನಡ ಕಸ್ತೂರಿ ಕೋಶ: ಚ. ಅ. ಕವಲಿ ಪು. ೮೫೧.

೪ ಅಷ್ಟಾಧ್ಯಾಯೀ: ೪–೪–೬೧

೫ ಮಾಹೇಶ್ವರ ಟೀಕೆ: ಅ.ಕೋ., ಪ್ರಥಮಕಾಂಡ, ನಾಟ್ಯವರ್ಗ, ಶ್ಲೋಕ ೨೬.

೬ ಅದೇ, ತೃತೀಯಕಾಂಡ, ನಾನಾರ್ಥವರ್ಗ, ಶ್ಲೋಕ ೨೦೦.

ಹಲಾಯುಧ 'ಚರಿತ್ರಂ ಚರಿತಂ ಶೀಲಂ ಚಾರಿತ್ರ್ಯಂ ಚ ಸಮಂ ಸ್ಮೃತಂ'೭: ಚರಿತ್ರ ಚರಿತ ಶೀಲ ಮತ್ತು ಚಾರಿತ್ರ್ಯ ಇವು ಸಮಾನಾರ್ಥವಾಚಿ ಪದಗಳು ಎಂದು ಹೇಳುತ್ತಾನೆ.

ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ 'ಸಂಯಮಶೀಲವಾದ ಆಚರಣೆಯೇ ಶೀಲ' ಎಂದು ತಿಳಿಸಿದರೆ, 'ನೀತಿಯುತ ಸದಾಚಾರವೇ ಶೀಲ' ಎಂದು ಬುದ್ಧ, 'ಸಮ್ಯಕ್ ಚಾರಿತ್ರ್ಯವೇ ಶೀಲ'ವೆಂದು ಜೈನರು, 'ಪರಸ್ಪರ ಪ್ರೀತಿ–ವಿಶ್ವಾಸವೇ ಶೀಲ' ಎಂದು ಕ್ರೈಸ್ತರು, 'ವ್ಯಕ್ತಿಯ ಆಚರಣೆಯೇ ಟಾವೊ (ಶೀಲ)' ಎಂದು ಚೀನದ ಕನ್‌ಫ್ಯೂಸಸ್, 'ಸಂಪ್ರದಾಯಕ್ಕೆ ಹೊಂದಿಕೊಂಡು ಹೋಗುವುದೇ ಶೀಲ; ನಾಲ್ಕು ಜನರ ಅಭಿಮತಕ್ಕೆ ವಿರೋಧವಿಲ್ಲದಂತೆ ಇರುವುದೇ ಶೀಲ' ಎಂದು ಡಾ. ಎಸ್. ರಾಧಾಕೃಷ್ಣನ್ ಅಭಿಪ್ರಾಯ ಪಡುತ್ತಾರೆ.೮

ಮೇಲಿನ ವ್ಯಾಖ್ಯೆಗಳಿಂದ ಶೀಲವೆಂದರೆ ಸ್ವಭಾವಸಹಜ ಆಚರಣೆ, ಶುದ್ಧವಾದ ಶುಚಿಯಾದ ಸಚ್ಚರಿತ್ರೆ, ಸದಾಚಾರ, ಪ್ರೀತಿ ವಿಶ್ವಾಸ ಸದ್ಗುಣಗಳಿಂದ ಕೂಡಿದ ನಡತೆ, ಸಾಮಾಜಿಕವಾದ ನಡವಳಿಕೆ ಎಂಬ ಅರ್ಥಗಳು ಹೊರಡುತ್ತವೆ. ಡಾ. ರಾಧಾಕೃಷ್ಣನ್ ಅವರು ಶೀಲಪದ ವ್ಯಾಖ್ಯೆಯನ್ನು ಸಾಮಾಜಿಕ ದೃಷ್ಟಿಯಿಂದ ರಚಿಸಿದ್ದರೆ, ಉಳಿದವರು ಆಧ್ಯಾತ್ಮಿಕ ರೀತಿಯಲ್ಲಿ ಸೂತ್ರಿಸಿದ್ದಾರೆ.

ಧಾರ್ಮಿಕ ಪರಿಭಾಷೆಯಲ್ಲಿ 'ಶೀಲವೆಂದರೆ ವ್ರತ ನೇಮ ಸಂಪ್ರದಾಯ ಆಚಾರ ಪದ್ಧತಿಗಳಿಗೆ ಸಂಬಂಧಿಸಿದ ಒಂದು ಕಟ್ಟಳೆ, ವಿಧಿನಿಷೇಧಗಳ ಸಂವಿಧಾನ' (ಕೋಡ ಆಫ್ ಕಂಡಕ್ಟ). ವಿಶಾಲಾರ್ಥದಲ್ಲಿ 'ಎಲ್ಲ ಮಾನವರನ್ನು ಒಂದು ನೈತಿಕ ನೆಲೆಗಟ್ಟಿನ ಮೇಲೆ ನಿಲ್ಲಿಸುವ ಸಮಾನ ಸೂತ್ರಗಳ, ಸುಂದರ ಪ್ರವೃತ್ತಿಗಳ ಸದ್ಗುಣ ಸಮ್ಮಿಳಿತವಾದ ಸಚ್ಚರಿತ್ರ ಬೋಧಕವಾದ ಮಾನವೀಯ ಮೌಲ್ಯ (ಮೋರಲ್ ವ್ಯಾಲ್ಯು)'.೯

ಅಮರಸಿಂಹನ ವ್ಯಾಖ್ಯೆಯಲ್ಲಿ ಸೇರಿದ 'ಸದ್‌ವೃತ್ತಿ' ಎಂಬ ಪದ ಮಾನವನ ಬಹಿರಂಗದ ಆಚರಣೆಗೆ ಸಂಬಂಧಿಸಿದರೆ, 'ಸ್ವಭಾವ' ಎಂಬುದು ಅವನ ಅಂತರಂಗದ ಚಿತ್ತವೃತ್ತಿಗೆ ಅನ್ವಯಿಸುತ್ತದೆ. ಈ ಬಹಿರಂಗ ಅಂತರಂಗ ಶುದ್ಧವಾದ ಸತ್ಯ ನಡೆನುಡಿ, ಸದಾಚಾರ–ಸುವಿಚಾರ, ಸತ್ಕ್ರಿಯೆ–ಸುಜ್ಞಾನಗಳೇ ಶೀಲವೆಂಬುದು ಶರಣರ ಅಭಿಮತ. ಅದರಲ್ಲಿಯೇ ಬಹಿರಂಗದ ಆಚರಣೆಗಿಂತ ಅಂತರಂಗದ ಅರಿವಿಗೆ ಅವರು ಹೆಚ್ಚಿನ ಮಹತ್ವ ಕೊಟ್ಟುದು ಎದ್ದು ಕಾಣುತ್ತದೆ. ಶೀಲ ಕುರಿತ ಅವರ ವ್ಯಾಖ್ಯೆಗಳು ಕೆಳಗಿನಂತಿವೆ:

"ಬಂದುದ ಕೈಕೊಳ್ಳಬಲ್ಲರೆ ನೇಮ, ಇದ್ದುದ ವಂಚನೆ ಮಾಡದಿದ್ದರೆ ನೇಮ,

---

೭ ಹಲಾಯುಧಕೋಶ: ದ್ವಿತೀಯಕಾಂಡ ಶ್ಲೋಕ ೩೯೬.

೮ ವೀರಶೈವ ಶೀಲಗಳು: ಡಾ. ವಿ. ಶಿವಾನಂದ. (ಜಗಜ್ಯೋತಿ, ಪು. ೬೭–೮೧)

೯ ವೀರಶೈವ ಶೀಲಗಳು: ಡಾ. ವಿ. ಶಿವಾನಂದ. (ಜಗಜ್ಯೋತಿ ಪು. ೬೭)

ನಡೆದು ತಪ್ಪದಿದ್ದರೆ ನೇಮ, ನುಡಿದು ಹುಸಿಯದಿದ್ದರೆ ನೇಮ"೧೦ "ಸತ್ಯವೆಂಬುದೇ ಸತ್‌ಶೀಲ"೧೧ "ಪರಧನ ಪರಸತಿಗಳುಪದಿಪ್ಪುದೇ ಶೀಲ; ಪರದೈವ ಪರಸಮಯಕ್ಕೆ ಎಳೆಸದಿಪ್ಪುದೇ ಶೀಲ; ಗುರು ನಿಂದೆ, ಶಿವನಿಂದೆ ಕೇಳದಿಪ್ಪುದೇ ಶೀಲ"೧೨ "ಚಿತ್ತದ ಕಳವಳವಳಿದು ಮನವು ಮಹಾಘನದಲ್ಲಿ ನೆಲೆಗೊಂಡುದೇ ಶೀಲ"೧೩ "ಪಂಚೇಂದ್ರಿಯ ಷಡ್ವರ್ಗ ಸಪ್ತಧಾತು ಅಷ್ಟಮದಂಗಳ ತಡೆಯಬಲ್ಲಡೆ ಅದೇ ಅಚ್ಚಶೀಲ"೧೪ "....ಸರ್ವ ಜೀವ ಕೊಲ್ಲದಿಪ್ಪುದೆ ನೇಮ, ತಥ್ಯಮಿಥ್ಯವನಳಿದಿಪ್ಪುದೇ ನಿತ್ಯನೇಮ"೧೫ "ಹೊರಗಣಕ್ರೀ ಶುದ್ಧವಾಗಿ ಒಳಗಣ ಆತ್ಮಶುದ್ಧವಾಗಿ ಉಭಯ ಶುದ್ಧವಾಗಿಪ್ಪುದೇ ಶೀಲ"೧೬ "ಸತ್ಯದಲ್ಲಿ ನಡೆವುದು ಶೀಲ, ಸತ್ಯದಲ್ಲಿ ನುಡಿವುದು ಶೀಲ, ಸಜ್ಜನ ಸದಾಚಾರದಲ್ಲಿ ವರ್ತಿಸಿ ನಿತ್ಯ ವನರಿವುದೇ ಶೀಲ"೧೭ "ಅಂಗವಾಚಾರಲಿಂಗವಾಗಿ ಮನವು ಅರಿವು ಸಂಬಂಧವಾಗಿ ಸರ್ವ ದುರ್ಭಾವಚರಿತ್ರವೆಲ್ಲ ಕೆಟ್ಟು ಸತ್ಯ ಸದ್ಭಾವ ನೆಲೆಗೊಂಡ ಸದ್ಭಕ್ತನ ಸುಶೀಲಕ್ಕೆ ನಮೋ"೧೮ "ಪರಸ್ತ್ರೀ ಪರಧನಂಗಳಲ್ಲಿ ನಿಂದೆಗೆ ಒಡಲಾಗದಿದ್ದುದೆ ವ್ರತ. ಸರ್ವಭೂತಹಿತನಾಗಿ ದಯವಿದ್ದುದೇ ಆಚಾರ"೧೯ "ಅಂತರಂಗದಲ್ಲಿ ವ್ರತ, ಬಹಿರಂಗದಲ್ಲಿ ಆಚಾರ. ಇಂತೀ ಉಭಯ ಸಿದ್ಧವಾಗಿ ನಡೆಸುವುದೇ ವ್ರತಾಚಾರ"೨೦ "ನಿಜವನರಿದು ಸರ್ವಾಂಗವೂ ಜ್ಞಾನ ಮೂರ್ತಿಯಾದ ಶರಣಂಗೆ ಮಹಾಜ್ಞಾನವೇ ಚರಿತ್ರವಲ್ಲದೆ ಉಳಿದ ದುಶ್ಶೀಲ ಚರಿತ್ರಂ ಗಳು ಇಲ್ಲ."೨೧

---

೧೦ ಬಸವಣ್ಣನವರ ವಚನಗಳು: ಸಂ. ಶಿ. ಶಿ. ಬಸವನಾಳ ವ. ೫೩೧

೧೧ ಅಲ್ಲಮಪ್ರಭುದೇವರ ವಚನಗಳು: ಸಂ. ಡಾ. ಆರ್. ಸಿ: ಹಿರೇಮಠ ವ. ೩೫೮.

೧೨ ಚೆನ್ನಬಸವಣ್ಣನವರ ವಚನಗಳು: ಸಂ. ಡಾ. ಆರ್. ಸಿ. ಹಿರೇಮಠ ವ. ೫೭೧.

೧೩ ಅದೇ ವ. ೧೦೮೫.

೧೪ ಅದೇ ವ. ೧೧೩೭.

೧೫ ಸಕಲಪುರಾತನರ ವಚನಗಳು ಸಂಪುಟ-೧ (ಶಿವಲೆಂಕಮಂಚಣ್ಣನ ವಚನ ಪು. ೧೯೩ ವ. ೭೪೦)

೧೬ ಶಿವಶರಣೆಯರ ವಚನಗಳು-ಸಮಗ್ರಸಂಪುಟ (ಅಕ್ಕಮ್ಮನ ವಚನ ಪು. ೫೨೨ ವ. ೧೪೯)

೧೭ ಷಟ್‌ಸ್ಥಲಜ್ಞಾನಸಾರಾಮೃತ: (ತೋಂಟದಸಿದ್ಧಲಿಂಗ) ವ. ೩೦೮.

೧೮ ಷಟ್‌ಸ್ಥಲಜ್ಞಾನಸಾರಾಮೃತ: (ತೋಂಟದಸಿದ್ಧಲಿಂಗ) ವ. ೩೧೧.

೧೯ ಶಿವಶರಣೆಯರ ವಚನಗಳು (ಅಕ್ಕಮ್ಮನವಚನ) ಪು. ೫೧೪ ವ. ೧೨೧.

೨೦ ಶಿವಶರಣೆಯರ ವಚನಗಳು (ಅಕ್ಕಮ್ಮನವಚನ) ಪು. ೪೯೯ ವ. ೧.

೨೧ ಏಕೋತ್ತರಶತಸ್ಥಲ (ಮಹಲಿಂಗದೇವ): ಸಂ. ಎಸ್. ಎಸ್. ಭೂಸನೂರಮಠ ಪು. ೧೭೯.

## ಶೀಲ ಪ್ರಕಾರಗಳು:

ವೀರಶೈವ ಶೀಲಪರಂಪರೆ ಪುರಾತನವಾದುದು. ಶಿವಾಗಮಗಳಲ್ಲಿ ಅದರ ಮೂಲ ವನ್ನು ಗುರುತಿಸಬಹುದು. ಆಗಮೋಕ್ತ ಆಚಾರಲಿಂಗಸ್ಥಲದಲ್ಲಿ ಸದಾಚಾರ ನಿಯತಾಚಾರ ಹಾಗೂ ಗಣಾಚಾರ ಎಂದು ಮೂರು ವಿಧ. ಗಣಾಚಾರ ನಿಷ್ಠೆಯ ನಿಬ್ಬೆರಗಿನಿಂದ ಕೂಡಿದುದು. ಇದರಲ್ಲಿ ೬೪ ಶೀಲಗಳನ್ನು ಹೇಳಲಾಗಿದೆ.[೨೨] ಜ್ಞಾನೇಂದ್ರಿಯ, ಕರ್ಮೇಂದ್ರಿಯ ಮತ್ತು ಅಂತಃಕರಣಚತುಷ್ಟಯಗಳಿಂದ ನಡೆಯುವ ಕ್ರಿಯೆಗಳೆಲ್ಲವೂ ಶಿವಮಯವಾಗಿರಬೇಕೆಂಬುದು ಈ ಶೀಲಗಳ ಪರಮಗುರಿ. ವಾಚಿಕ–ಕಾಯಿಕ–ಮಾನಸಿಕ ಪರಿಶುದ್ಧತೆ ಇವುಗಳಿಂದ ಪ್ರಾಪ್ತ.[೨೩]

ಕೊಂಡಗುಳಿ ಕೇಶಿರಾಜ ತನ್ನ 'ಶೀಲಮಹತ್ವದಕಂದ'ದಲ್ಲಿ ಮೊದಲು ೬೪ ಶೀಲ ಗಳನ್ನು ವಿವರಿಸಿ,[೨೪] ಕೊನೆಗೆ ಮತ್ತೆ ಆರು ಶೀಲಗಳನ್ನು ತಿಳಿಸುತ್ತಾನೆ.[೨೫] (ಅಕ್ರೋಧ, ಸತ್ಯ, ಕ್ಷಮೆ, ಭವಿಭಕ್ತಭೇದ, ಅನುಗ್ರಹ ಮತ್ತು ಸತ್ಪಾತ್ರ ದ್ರವ್ಯಾರ್ಪಣ) ಇದರಿಂದ ಕೇಶಿರಾಜ ಎರಡು ರೀತಿಯ ಶೀಲಗಳನ್ನು ತಿಳಿಸಿದಂತಾಗಿದೆ. ಮೊದಲಿನ ೬೪ ಶೈವ ಪರಂಪರೆಯಿಂದ ಬಂದುವು. ಅವುಗಳನ್ನು ವೀರಶೈವಕ್ಕೂ ಅನ್ವಯಿಸಿದ್ದಾನೆ. ಅವುಗಳ ಜೊತೆಗೆ ಮತ್ತೆ ಆರನ್ನು ಸೇರಿಸಿ ಒಟ್ಟು ೭೦ ಶೀಲಗಳನ್ನು ಪಟ್ಟಿ ಮಾಡಿದ್ದಾನೆ.

ಚೆನ್ನಬಸವಣ್ಣನವರ ಒಂದು ವಚನದಲ್ಲಿ ೬೪ ಆಚಾರಗಳ ವಿವರಣೆ ಬಂದಿದೆ.[೨೬] ಮತ್ತೊಂದು ವಚನದಲ್ಲಿ 'ಅರವತ್ತು ನಾಲ್ಕು ಶೀಲದಲ್ಲಿ ನಡೆದು ತೋರಿದ ಬಸವಣ್ಣ ನೋಡಯ್ಯಾ' ಎಂದು ಹೇಳಲಾಗಿದೆ.[೨೭] ಅಕ್ಕಮ್ಮ 'ಅರವತ್ತು ನಾಲ್ಕು ಶೀಲ', ಐವತ್ತಾರು ನೇಮ, ಮೂವತ್ತೆರಡು ಕೃತ್ಯ ಇಂತಿವು ಕಟ್ಟಳೆಗೊಳಗಾದವು.[೨೮] "....ಕಟ್ಟಳೆ

---

೨೨ 'ಸರ್ವೋತ್ತಮೋ ಗಣಾಚಾರೇ ಸದ್ಯಃ ಸಿದ್ಧಕರೇಪರೇ ಶೀಲಾನಿತು ಚತುಃಷಷ್ಟ ವರ್ತಂತೇ ತಾನಿ ಸಂಶೃಣು॥'–ಚಂದ್ರಜ್ಞಾನಾಗಮ (ಜಗಜ್ಯೋತಿ ಪು. ೬೮ ಅ. ಟಿ.)

೨೩ ಅರವತ್ತು ನಾಲ್ಕು ಶೀಲಗಳು: ಸಿದ್ಧಗಂಗಾಶ್ರೀ ಪು. ೬೧೯.

೨೪ ಕೊಂಡಗುಳಿ ಕೇಶಿರಾಜನ ಕೃತಿಗಳು: ಸಂ. ಡಾ. ಎಂ. ಎಂ. ಕಲಬುರ್ಗಿ. (ಶೀಲಮಹತ್ವದ ಕಂದ ಪದ್ಯ ೨೨ ರಿಂದ ೮೬ರ ವರೆಗೆ)

೨೫ ಅದೇ, ಪದ್ಯ ೮೯, ೯೧.

೨೬ ಚೆನ್ನಬಸವಣ್ಣನವರ ವಚನಗಳು: ಸಂ. ಡಾ. ಆರ್. ಸಿ. ಹಿರೇಮಠ ವ. ೧೦೫ (ಇದರಲ್ಲಿ ೫೦ ಶೀಲಗಳನ್ನು ಮಾತ್ರ ಹೇಳಲಾಗಿದೆ. ೬೪ರ ವಿವರ ವಚನಶಾಸ್ತ್ರ ಸಾರ ಭಾಗ–೩ ಉತ್ತರಾರ್ಧ ಪು. ೩೬೯–೭೦ರಲ್ಲಿ ಸಂಗ್ರಹಿಸಿದ ವಚನದಲ್ಲಿದೆ)

೨೭ ಚೆನ್ನಬಸವಣ್ಣನವರ ವಚನಗಳು ವ. ೪೪೬.

೨೮ ಶಿವಶರಣೆಯರ ವಚನಗಳು: ಪು. ೪೬೪ ವ. ೧೦

ಗೊಳಗಾದವು ಅರುವತ್ತಾರು ಶೀಲ"[೨೯], "ನಾನಾ ವ್ರತ ನೇಮ ಭೇದಂಗಳಲ್ಲಿ ಅರುವತ್ತು ನಾಲ್ಕು ವ್ರತ, ಐವತ್ತಾರು ಶೀಲ, ಮೂವತ್ತೆರಡು ನೇಮ, ನಿತ್ಯಕೃತ್ಯ ಲೆಕ್ಕಕ್ಕೆಯಿಲ್ಲ"[೩೦], "ಎಂಬತ್ತು ನಾಲ್ಕು ಲಕ್ಷ ವ್ರತದೊಳಗಾದ ಶೀಲ ಸಂಭವಿಸಿ ನಿಂದುದು ಅರುವತ್ತು ನಾಲ್ಕು"[೩೧], "ಅರುವತ್ತು ನಾಲ್ಕು ಶೀಲಕ್ಕೆ ಸಂಬಂಧಿಯಲ್ಲ"[೩೨] ಎಂದು ಮೂರು (೫೬, ೬೪, ೬೬) ಬಗೆಯಾಗಿ ಹೇಳುತ್ತಾಳೆ. ಶಿವಲೆಂಕಮಂಚಣ್ಣ "ಅರುವತ್ತುನಾಲ್ಕು ವ್ರತ, ಅಯಿವತ್ತಾರು ಶೀಲ, ಮೂವತ್ತೆರಡು ನೇಮ ಸಂದಿತ್ತು"[೩೩] ಎಂಬಲ್ಲಿ ಶೀಲಗಳ ಸಂಖ್ಯೆ ೫೬ ಎಂದು ತಿಳಿಸುತ್ತಾನೆ. ಪಾಲ್ಕುರಿಕೆ ಸೋಮನಾಥ ತನ್ನ 'ಶೀಲಸಂಪಾದನೆ' ಎಂಬ ಕೃತಿಯಲ್ಲಿ ಶರಣರು ಅರಿತು ಆಚರಿಸಿದ ೬೬ ಶೀಲಗಳ ವಿವರಣೆಯನ್ನು ನೀಡಿದ್ದಾನೆ.[೩೪] ವಿರಕ್ತ ತೋಂಟದಾರ್ಯ 'ಪಾಲ್ಕುರಿಕೆ ಸೋಮೇಶ್ವರ ಪುರಾಣದಲ್ಲಿ' ಸೋಮೇಶ್ವರನು ನಿಷ್ಠೆಯಿಂದ ಆಚರಿಸಿದ ೬೪ ಶೀಲಗಳನ್ನು ವರ್ಣಿಸಿದ್ದಾನೆ.[೩೫] ವಿರೂಪಾಕ್ಷ ಪಂಡಿತನೂ ಇವನ ಶೀಲಸಂಪನ್ನತೆಯನ್ನು ಮುಕ್ತಕಂಠದಿಂದ ಕೊಂಡಾಡಿದ್ದಾನೆ.[೩೬] ಗುಬ್ಬಿ ಮಲ್ಲಣಾರ್ಯ 'ವೀರಶೈವಾಮೃತ ಮಹಾಪುರಾಣ'ದಲ್ಲಿ ೬೪ ಶೀಲಗಳ ವಿವರ ನೀಡಿದ್ದಾನೆ.[೩೭]

ಅಕ್ಕಮಹಾದೇವಿ ತನ್ನ ಒಂದು ವಚನದಲ್ಲಿ "ಜಗದ್ಧಿತಾರ್ಥವಾಗಿ ಮರ್ತ್ಯ ಲೋಕಕ್ಕೆ ಬಂದು ಅಂಗಲಿಂಗ ಸಂಬಂಧವುಳ್ಳ ಘನವೀರಶೈವಾಚಾರ ಮಾರ್ಗವನರುಪುವುದಕ್ಕೆ ಬಾವನ್ನ ವಿವರವನೊಳಕೊಂಡು ಚರಿಸಿದನದೆಂತೆಂದೊಡೆ"[೩೮] ಎಂದು ಬಸವಣ್ಣನವರು ಆಚರಿಸಿದ ೫೨ ಶೀಲಗಳನ್ನು ಪಟ್ಟಿ ಮಾಡುತ್ತಾಳೆ. ಹರಿಹರ 'ಬಸವರಾಜದೇವರ ರಗಳೆ'ಯಲ್ಲಿ

---

೨೯ ಅದೇ ಪು. ೫೧೦ ವ. ೧೧೨.

೩೦ ಅದೇ ಪು. ೪೯೫, ವ. ೭೮.

೩೧ ಅದೇ ಪು. ೪೬೯, ವ. ೨೨.

೩೨ ಅದೇ ಪು. ೪೬೩, ವ. ೮.

೩೩ ಸಕಲಪುರಾತನರ ವಚನಗಳು (ಸಂಪುಟ: ಒಂದು) ಪು. ೧೯೪, ವ. ೭೪೮.

೩೪ ಕನ್ನಡ ಅಧ್ಯಯನ ಪೀಠದ ಕಾಗದಪ್ರತಿ: ೩೦–೪೧.

೩೫ ಸಿದ್ಧಗಂಗಾಶ್ರೀ: ಪುಟ ೬೨೦–೨೪.

೩೬ "ವಿಮಲಚರಿತಂ ಪಾಲ್ಕುರಿಕೆ ಸೋಮೇಶ್ವರ ಕ್ರಮದಿಂದಲರುವತ್ತುನಾಲ್ಕು ಶೀಲವ ನಡೆಸಿ ಸುಮನದಿಂದಾಕಳಿಕೆ ಬಂದಲ್ಲಿ ಶಿವಸಮಾಧಿಯಲಿ ನಿಜಮುಕ್ತನಹನು"–ಚೆನ್ನಬಸವಪುರಾಣ ಸಂ. ೬೨ ವ. ೫೯.

೩೭ ಶ್ರೀವತ್ಸ ನಿಘಂಟು ಸಂ. ಟಿ.ವಿ. ನೆಂಕಟಾಚಲಶಾಸ್ತ್ರಿ, ಪು. ೪೯–೫೨.

೩೮ ಶೀಲಸಂಪಾದನೆ: ಸಂ. ಡಾ. ವೀರಣ್ಣ ರಾಜೂರ ವ. ೨೧.

ಬಸವಣ್ಣನವರ ೩೭ ಸದ್ಗುಣಗಳನ್ನು ಹೊಗಳುತ್ತಾನೆ.[೩೯] ಭೀಮಕವಿ 'ಬಸವ ಪುರಾಣ, ದಲ್ಲಿ ಬಸವಣ್ಣನವರು ಮೆರೆದ ೩೫ ಭಾಷೆಗಳನ್ನು ಬಣ್ಣಿಸುತ್ತಾನೆ.[೪೦]

ಈ ಉಲ್ಲೇಖಗಳು ಶೀಲ ಸಂಖ್ಯೆಯಲ್ಲಿ ೬, ೩೫, ೩೭, ೫೨, ೫೬, ೬೪, ೬೬ ಹೀಗೆ ಹೆಚ್ಚು ಕಡಿಮೆ ಇರುವುದನ್ನು ವ್ಯಕ್ತಪಡಿಸುತ್ತವೆ. ಕೊಂಡಗುಳಿ ಕೇಶಿರಾಜ ಆಗಮೋಕ್ತ ೬೪ ಶೀಲಗಳನ್ನೂ ಜೊತೆಗೆ ಪ್ರತ್ಯೇಕವಾವ ೬ನ್ನು ತಿಳಿಸಿದರೆ, ಪಾಲ್ಕುರಿಕೆ ಸೋಮನಾಥ ೬೪ನ್ನು ಆಚರಿಸಿ ೬೬ನ್ನು ವಿವರಿಸಿದ್ದಾನೆ. ಚೆನ್ನಬಸವಣ್ಣ ೬೪ನ್ನು ಸಂಗ್ರಹಿಸಿದ್ದಾನೆ. ಅಕ್ಕಮ್ಮ ಒಮ್ಮೆ ೬೪ನ್ನು ಮತ್ತೊಮ್ಮೆ ೬೬ನ್ನು ಮಗದೊಮ್ಮೆ ೫೬ನ್ನು ಹೇಳುತ್ತಾಳೆ. ಶಿವಲೆಂಕಮಂಚಣ್ಣ ೫೬ನ್ನು ಮಾತ್ರ ಸೂಚಿಸುತ್ತಾನೆ. ಅಕ್ಕಮಹಾದೇವಿ, ಹರಿಹರ, ಭೀಮಕವಿಗಳು ಬಸವಣ್ಣನವರು ಆಚರಿಸಿದ ೫೨, ೩೭, ೩೫ ಶೀಲಗಳನ್ನು ಗುರುತಿಸುತ್ತಾರೆ. ಇವುಗಳಲ್ಲಿ ೬, ೩೫, ೩೭, ೫೨, ೬೪, ೬೬ ಶೀಲಗಳು ಸ್ಪಷ್ಟವಿದ್ದರೆ, ೫೬ ಶೀಲಗಳ ವಿವರ ತಿಳಿಯುವುದಿಲ್ಲ. ಈ ಹೆಚ್ಚು ಕಡಿಮೆಗಳನ್ನು ಗಮನಿಸಿದರೆ ವೀರಶೈವರು ಆಚರಿಸಬೇಕಾದ ಶೀಲಗಳ ಸಂಖ್ಯೆ ಇಷ್ಟೇ ಎಂದು ಖಚಿತವಾಗಿಲ್ಲ ಎಂಬುದು ವೇದ್ಯವಾಗುತ್ತದೆ.

ಕೊಂಡಗುಳಿ ಕೇಶಿರಾಜ 'ಸದಾಚಾರದಲ್ಲಿ ನಿಷ್ಠೆಗೊಂಡ ವೀರಶೈವರಿಗೆ' ೬೪ ಶೀಲಗಳು ಅನ್ವಯಿಸುತ್ತವೆ ಎಂದು ತಿಳಿಸುತ್ತಾನೆ. ಪಾಲ್ಕುರಿಕೆ ಸೋಮನಾಥ 'ಶ್ರೀಗುರು ಕಾರುಣ್ಯದಿಂದ ವೀರಮಾಹೇಶ್ವರ ತತ್ವದಲ್ಲಿ ಸರ್ವಾಚಾರಸಂಪನ್ನರಾಗಿರ್ದ ಶರಣರು ಅರುವತ್ತಾರು ಶೀಲಗಳನ್ನು ಆಚರಿಸಿದರು' ಎಂದು ಹೇಳುತ್ತಾನೆ. ಬಸವಣ್ಣನವರು ೬೪ ಶೀಲಗಳನ್ನು ಅಳವಡಿಸಿಕೊಂಡಿದ್ದರು ಎಂದು ಚೆನ್ನಬಸವಣ್ಣ ನುಡಿಯುತ್ತಾನೆ. ಹೀಗಿದ್ದೂ ಶರಣರು ಈ ಸಂಖ್ಯೆಗೆ ಅಷ್ಟೊಂದು ಮಹತ್ವ ಕೊಟ್ಟಂತೆ ಕಂಡುಬರುವುದಿಲ್ಲ. ಅವರ ದೃಷ್ಟಿಯಲ್ಲಿ ಸತ್ಯಶುದ್ಧವಾದ ಅಂತರಂಗದ ಅರಿವು, ಭಾವಶುದ್ಧವಾದ ನಡೆ ಹಾಗೂ ಕ್ರಿಯಾಸಮನ್ವಿತವಾದ ಸುಜ್ಞಾನ ಇವೇ ನಿಜವಾದ ಶೀಲಗಳು. ಸುಜ್ಞಾನದಿಂದ ಆಚರಿಸುವ ಆಚರಣೆಗಳೆಲ್ಲ ಶೀಲಗಳೇ. 'ನಿತ್ಯ ಕೃತ್ಯ ಲೆಕ್ಕಕ್ಕೆ ಇಲ್ಲ' ಎಂಬ ಅಕ್ಕಮ್ಮನ ಮಾತಿನಂತೆ ಅವುಗಳಿಗೆ ಲೆಕ್ಕದ ಕಟ್ಟಿಲ್ಲ. ಅದರಂತೆ ಅವು ಕೇವಲ ಒಂದು ಸೀಮಿತ ಕೃತಕ ತಾತ್ವಿಕ ಕಟ್ಟಿಗೆ ಒಳಗಾದುವೂ ಅಲ್ಲ;[೪೧] ಪ್ರಾಯೋಗಿಕ ಕ್ರಿಯೆಗೆ ಪಕ್ಕಾದ ಧಾರ್ಮಿಕ,

---

೩೯ ಬಸವರಾಜದೇವರ ರಗಳೆ: ಸಂ. ಟಿ. ಎಸ್. ವೆಂಕಣ್ಣಯ್ಯ ಸ್ಥಲ–೮.

೪೦ ಬಸವಪುರಾಣ: ಸಂ. ಡಾ. ಆರ್. ಸಿ. ಹಿರೇಮಠ ಸಂಧಿ ೬ ಪದ್ಯ ೧ ರಿಂದ ೭.

೪೧ 'ಪ್ರಮಥರೆಲ್ಲರೂ ಸ್ವತಂತ್ರಶೀಲರು' (ವ. ೧೦), "ಏಳುನೂರೆಪ್ಪತ್ತು ಅಮರಗಣಂಗಳಿಗೆಲ್ಲಕ್ಕೂ ತಮ್ಮ ತಮ್ಮ ಭಾವದ ಶೀಲ" (ವ. ೨೭) ಎಂಬ ಅಕ್ಕಮ್ಮನ ಈ ನುಡಿಗಳು ಶರಣರು ಲೆಕ್ಕದ ಕಟ್ಟಿಗೊಳಗಾದವರಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತವೆ.

ಸಾಮಾಜಿಕ, ನೈತಿಕ ವಿಶಾಲ ನೆಲೆಗಟ್ಟಿನ ಮೇಲೆ ನಿಂತ, ಸರ್ವಮಾನ್ಯವಾದ ನೈಜಾಚರಣೆಗಳು. ಇಂಥ ಆಚರಣೆಗಳನ್ನು ಬೋಧಿಸುವ ಕೃತಿ ಶೀಲಸಂಪಾದನೆ.[೪೨]

**ಶೀಲಸಂಪಾದನೆ:**

ಶೀಲಸಂಪಾದನೆ ವಿವಿಧ ಶರಣರ ವಚನಗಳಿಂದ ದೂಡಿದ ಒಂದು ನೂತನ ಸ್ಥಲ ಕಟ್ಟಿನ ಕೃತಿ. ೫೯ ವಚನಕಾರರ ೪೪೩ ವಚನಗಳು ಇಲ್ಲಿ ಸಂಗ್ರಹಗೊಂಡಿವೆ. ಒಟ್ಟು ೪೦ ಸ್ಥಲಗಳು. ಅವುಗಳಲ್ಲಿ ೧೫ ಪ್ರಮುಖ: ಉಳಿದವು ಅವುಗಳ ಉಪವಿಭಾಗಗಳು. ಶರಣರು ಆಚರಿಸಿದ, ತಾವು ಆಚರಿಸಿ ಇತರರಿಗೆ ಆಚರಿಸಲು ತಿಳಿಸಿದ ಶೀಲ, ವ್ರತ, ನೇಮಗಳ ವಿವರಣೆ ಇವುಗಳ ಕೇಂದ್ರವಸ್ತು. ಕೃತಿ ಬಸವಣ್ಣನವರ ವ್ಯಕ್ತಿ ವೈಶಿಷ್ಟ್ಯವನ್ನು ಎತ್ತಿ ತೋರಿಸುವ ಸ್ತುತಿರೂಪದ ವಚನಗಳಿಂದ ಆರಂಭವಾಗಿ, ವ್ರತಾಚರಣೆಗಳ ಮಹತಿಯನ್ನು ಮೆರೆಯುವ ಎಲ್ಲ ಪುರಾತೆಯರ ವಚನಗಳಿಂದ ಮುಕ್ತಾಯಗೊಳ್ಳುತ್ತದೆ. ಪ್ರತಿಸ್ಥಲದಲ್ಲಿ ಅಳವಟ್ಟ ವಿಷಯವನ್ನು ಹೀಗೆ ಸಂಗ್ರಹಿಸಬಹುದು.

೧

ಬಸವಣ್ಣ ಶೀಲಸಂಪನ್ನ, ಶೀಲ-ವ್ರತ-ನೇಮ-ಆಚಾರ-ವಿಚಾರಗಳಿಗೆ ಗುರು ಸ್ವರೂಪ, ಅವನ ನಡೆನುಡಿಸಾಮರಸ್ಯ, ಭಕ್ತಿಸಂಪದ, ಸತ್ಯಶುದ್ಧಕಾಯಕಪ್ರೇಮ, ಗುರುಲಿಂಗಜಂಗಮ ದಾಸೋಹಭಾವ, ಇಷ್ಟಲಿಂಗನಿಷ್ಠೆ, ಪ್ರಾಣಿದಯೆ, ಸರ್ವಸಮತಾ ದೃಷ್ಟಿ, ಸಕಲಜೀವಾತ್ಮರಿಗೆ ಲೇಸಬಯಸುವ ಹಿರಿಯಗುಣ ಎಲ್ಲವೂ ಮಾರ್ಗದರ್ಶಿಯಾಗುವು. ಬಸವಣ್ಣನ ಈ ಆದರ್ಶಗುಣಗಳಿಂದ ಪ್ರಭಾವಿತರಾಗಿ ಜೀವನ ಸಾರ್ಥಕಪಡಿಸಿಕೊಂಡ ವ್ಯಕ್ತಿಗಳು ಅನೇಕ.[೪೩] ಅದನ್ನರಿತ ಈ ಕೃತಿಸಂಪಾದಕ ಆರಂಭದಲ್ಲಿ ಬಸವಣ್ಣನ ಸ್ತುತಿರೂಪದ ವಚನಗಳನ್ನು ಸಂಗ್ರಹಿಸಿದ್ದಾನೆ; ಬಸವಣ್ಣನಿಗೆ ಅಗ್ರಪೂಜೆ ಸಲ್ಲಿಸಿದ್ದಾನೆ. ಬೇರೆ ಬೇರೆ ಬಸವಸಮಕಾಲೀನ ಶರಣರು ತಾವು ಕಂಡು ಆತನ ವ್ಯಕ್ತಿ ವೈಶಿಷ್ಟ್ಯಗಳನ್ನು ಇಲ್ಲಿ ಕೊಂಡಾಡಿದ್ದಾರೆ. ಅವರ ದೃಷ್ಟಿಯಲ್ಲಿ ಬಸವಣ್ಣ ಪ್ರಮಥಾಚಾರ್ಯ, ಜಂಗಮಾಚಾರ್ಯ ಪ್ರಸಾದಾಚಾರ್ಯ, ಸರ್ವಾಚಾರ್ಯ. ಅವನು ಅಷ್ಟಾವರಣದ ಆದಿಗುರು, ಲಿಂಗಕ್ಕೂ ಪೂರ್ವದ ಅನಾದಿಪುರುಷ. ಷಡಕ್ಷರಮಂತ್ರ ರೂಪ. ಲಿಂಗ

---

೪೨ ಇದು ಗದುಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯಿಂದ ಪ್ರಕಟವಾಗಿದೆ. ಸಂಪಾದಕರು: ಡಾ. ವೀರಣ್ಣ ರಾಜೂರ (೧೯೮೪).

೪೩ ಬಸವಣ್ಣನೂ ತನಗಿಂತ ಹಿಂದಿನ ಪುರಾತನ ಶರಣರ ನಡೆನುಡಿ ಆಚಾರ ವಿಚಾರಗಳಿಂದ ಪ್ರಭಾವಿತನಾಗಿದ್ದಾನೆ, ಬೇರೆ ಬೇರೆ ವ್ರತ ಹಿಡಿದು ಸಾಧಿಸಿದ ಶರಣರ ವಿವರಗಳಿಗಾಗಿ ನೋಡಿ: ವೀರಶೈವ ಶೀಲಗಳು-ಡಾ. ವಿ. ಶಿವಾನಂದ (ಜಗಜ್ಯೋತಿ ಪು. ೭೦-೭೨) ಹಾಗೂ ಶಿವಶರಣರ ಕಥಾರತ್ನಕೋಶ: ತ. ಸು. ಶಾಮರಾಯ.

ಜಂಗಮ ಪ್ರಸಾದ ಈತನ ಉದರದಲ್ಲಿಯೇ ಹುಟ್ಟಿದವು. ಜೀವಿಯ ಪೂರ್ವಾಶ್ರಯವ ಕಳೆದು ಭಕ್ತನ ಮಾಡಿ ಸತ್ಯ ಭಕ್ತಿಸ್ಥಲಕ್ಕೆ ಭಾಂಡಾರಿಯಾಗಿ, ಲಿಂಗಾಂಗಸಾಮರಸ್ಯದ ಹಾದಿ ತೋರಿದ ಪರಮಗುರು ಈತನೇ. ಗುರುಲಿಂಗ ಜಂಗಮ ಪ್ರಸಾದ ರೂಪಿಯಾದ ಇವನ ನೆನಹೇ ಮುಕ್ತಿ. ಜಗದೋದ್ಧಾರಕ್ಕಾಗಿ ಅವತರಿಸಿದ ಈತ ಅನೇಕ ಶೀಲಗಳನ್ನು ಸಹಜ ವಾಗಿಯೇ ಆಚರಿಸಿ ತೋರಿದ.೪೪ ಇವನ ಈ ಆಚರಣೆಯಲ್ಲಿ ಕೆಲಕೆಲವನ್ನು ಇತರರೂ ಅಳವಡಿಸಿಕೊಳ್ಳಲು ಪ್ರಯತ್ನಿಸಿ ಸಫಲರಾದರು. ಅದಕ್ಕಾಗಿ ಈತ ಶೀಲಕ್ಕೆ ಒಡೆಯು ತವರು, ತಂದೆ, ಗುರು. ಇಂಥ ಗುರುವಿನ ಸ್ತುತಿಯೊಂದಿಗೆ ಈ ಕೃತಿ ಆರಂಭವಾದುದು ಅನನ್ಯವಾಗಿದೆ.

೨

ಶೀಲಸಂಪಾದನೆ ಶೀಲಕ್ಕೆ ಒಡೆಯನಾದ ಗುರುವಿನ ಮಾರ್ಗದರ್ಶನದಿಂದ ಮಾತ್ರ ಸಾಧ್ಯ. ಅದಕ್ಕಾಗಿ ಮುಂದೆ ಗುರುವಿನ ಮಹಾತ್ಮೆಯನ್ನು ಬಣ್ಣಿಸಿ, ಶೀಲಮಾರ್ಗವನ್ನು ತೋರಿಸಬೇಕೆಂದು ಕೇಳಿಕೊಳ್ಳಲಾಗಿದೆ. ಪರಶಿವನೆ ಗುರು ರೂಪತಾಳಿ ಶಿಷ್ಯನಿಗೆ ದೀಕ್ಷೆ ಮಾಡಬೇಕೆಂದು ಮರ್ತ್ಯಕ್ಕೆ ಬಂದಿದ್ದಾನೆ. ಆ ಸದ್ಗುರುವಿನಿಂದ ಲಿಂಗೋತ್ಪತ್ತಿ, ಲಿಂಗ ದಿಂದ ಜಂಗಮೋತ್ಪತ್ತಿ, ಜಂಗಮದಿಂದ ಪ್ರಸಾದೋತ್ಪತ್ತಿ, ಪ್ರಸಾದದಿಂದ ಭಕ್ತ್ಯೋತ್ಪತ್ತಿ, ಭಕ್ತಿಯಿಂದ ಸಕಲೋತ್ಪತ್ತಿಯಾಗಿದೆ. ಗುರು ಕರುಣಿಸಲು ಮಾಯಾಮರವೆ, ಪ್ರಪಂಚ ಪಾಶ, ಅಜ್ಞಾನ ಎಲ್ಲವೂ ಹರಿದುಹೋಗುತ್ತವೆ. ಇವನು ಮೂರು ಲಿಂಗಕ್ಕೆ ಮೂಲ ಮಂತ್ರನಾಗಿ, ಮೂರು ವಿದ್ಯೆಗೆ ವಿದ್ಯಾರೂಪನಾಗಿ, ಲೋಕತ್ರಯಕ್ಕೆ ಒಡೆಯನಾಗಿ, ಲಿಂಗ ಜಂಗಮಪ್ರಸಾದದ ಮಹತಿಯನ್ನು ತಿಳಿಸುತ್ತಾನೆ. ಪರಮಾತ್ಮನ ಇರವನ್ನು ಅರಹುತ್ತಾನೆ. ಇವನ ಕಾರುಣ್ಯದಿಂದಲೇ ಸದಾಚಾರ, ಶಿವಾಚಾರ, ಪ್ರಸಾದರುಚಿ ಪ್ರಾಪ್ತ. ಇಂಥ ಪರಂಜ್ಯೋತಿಸ್ವರೂಪದ ಸದ್ಗುರುಲಿಂಗವ ಸೋಂಕಿದ ಸದ್ಭಕ್ತನ ಅಂತರಂಗ ಬಹಿರಂಗ ಸರ್ವಾಂಗ ಪರಂಜ್ಯೋತಿಲಿಂಗವಾಗುವುದು. ಹೀಗೆ ಅಂಗವನ್ನು ಲಿಂಗವಾಗಿಸುವ ಹಾದಿ ಯನ್ನು ತೋರುವ ಈ ಗುರುವನ್ನು ಸೇವಿಸುವುದು, ಅವನಾಜ್ಞೆಯಂತೆ ನಡೆಯುವುದು ಶರಣರ ದೃಷ್ಟಿಯಲ್ಲಿ ಪ್ರಥಮಶೀಲವೆನಿಸಿದೆ.

೩

ಲಿಂಗಾಂಗಸಾಮರಸ್ಯ ರಹಸ್ಯಮಾರ್ಗವನ್ನು ತೋರಿಸುವ ಗುರು ಒಬ್ಬನಲ್ಲದೆ ಹಲವ ರಿಲ್ಲ. ಅದಕ್ಕಾಗಿ ಒಬ್ಬ ಗುರುವನ್ನೇ ನಂಬಿ ಅವನಿಂದ ದೀಕ್ಷೆ, ಉಪದೇಶಗಳನ್ನು ಪಡೆದು ಕೊಳ್ಳಬೇಕು. ಲಿಂಗ ಒಂದೇ; ಹಾಗೆಯೇ ಗುರುವೂ ಒಬ್ಬನೆ "ಅಂಗಲಿಂಗ ಸಂಬಂಧವ

೪೪ ಹಿಂದೆ ಸೂಚಿಸಿದ ಚೆನ್ನಬಸವಣ್ಣ, ಅಕ್ಕಮಹಾದೇವಿ, ಹರಿಹರ, ಭೀಮಕವಿಗಳ ಉಲ್ಲೇಖಗಳನ್ನು ಗಮನಿಸಿ.

ನುಳ್ಳ ನಿಜವೀರಶೈವಸಂಪನ್ನರಾದ ಭಕ್ತ ಜಂಗಮಕ್ಕೆ ಗುರು ಒಬ್ಬನೆ ಆದಲ್ಲಿ ಲಿಂಗ ಒಂದೇ, ಲಿಂಗ ಒಂದೇ ಆದಲ್ಲಿ ದೀಕ್ಷೆ ಒಂದೇ, ದೀಕ್ಷೆ ಒಂದೆ ಆದಲ್ಲಿ ಪ್ರಸಾದ ಒಂದೇ, ಪ್ರಸಾದ ಒಂದೇ ಆದಲ್ಲಿ ಸತ್ಯ ಸದಾಚಾರ ಸತ್ಕ್ರಿಯೆ ಸಮ್ಯಜ್ಞಾನಯುಕ್ತವಾದ ಸದ್ಭಕ್ತಿ ಸದ್ಯೋನ್ಮುಕ್ತಿ ಒಂದಹುದು. ಕಾರಣ ಪತಿಗೊಂದು ಲಿಂಗ, ಸತಿಗೊಂದು ಲಿಂಗ, ಸುತಗೊಂದು ಲಿಂಗ, ಪಿತಗೊಂದು ಲಿಂಗ, ಮಾತೆಗೊಂದು ಲಿಂಗ ಎಂದು ಬೇರ್ಪಡಿಸಬಾರದು. ಗುರುಲಿಂಗ ಜಂಗಮಪ್ರಸಾದ ಒಂದೇ ಎಂದು ಅರಿಯದೆ, 'ಗುರುವ ಅನ್ಯವಿಟ್ಟು ಕಲ್ಪಿಸಿ, ಲಿಂಗವ ಭಿನ್ನ ವಿಟ್ಟು ಕಂಡು, ಜಂಗಮದ ಜಾತಿವಿಡಿದು ನುಡಿದು, ಪ್ರಸಾದವ ಎಂಜಲೆಂದು ಅತಿಗಳೆದು ದಾಸಿವೇಶಿಯರೆಂಜಲ ಹೇಸದೆ ಭುಂಜಿಸುವ ದೇಶಿಗಳು ಗುರುದ್ರೋಹಿ'ಗಳು ಎನಿಸುತ್ತಾರೆ.

ಗುರು, ನಂಬಿದ ಶಿಷ್ಯನಿಗೆ ಲಿಂಗ ಜಂಗಮ ಪ್ರಸಾದ ಪಾದೋದಕ ಈ ಚತುರ್ವಿಧದಲ್ಲಿ ಅನುರಕ್ತನಾಗಿರು; ಹುಸಿ, ಕಳವು, ವೇಶ್ಯಾಗಮನ, ಪರದ್ವಾರ, ಪರದ್ರವ್ಯ, ಪರನಿಂದೆ, ಪರದೋಷ-ಈ ಸಪ್ತಗುಣವಿರಹಿತನಾಗಿರು; ಅನ್ಯದೈವ, ಭವಿಮಿಶ್ರನಾಸ್ತಿಯಾಗಿ ಮಜ್ಜನಕ್ಕೆರೆ, ಅದೇ ಶಿವಪಥ ಎಂದು ಬೋಧಿಸುತ್ತಾನೆ. ಈ ಉಪದೇಶವಿಡಿದು, ಆಹ್ವಾನ, ವಿಸರ್ಜನ, ದುರ್ಭಾವ, ದುರ್ಬುದ್ಧಿ ಲಯವಾಗಿ, ಪಂಚಭೂತದ ಹಂಗಡಗಿಸಿ ಲಿಂಗಪೂಜೆಯಲ್ಲಿ ಅಂಗಗುಣ ಅಳಿದ ಶಿಷ್ಯ ನಿತ್ಯಮುಕ್ತನೆನಿಸುತ್ತಾನೆ.

ಗುರುವಾದವನು, ಏಕಗುರುವಿನಲ್ಲಿ ನಿಷ್ಠೆ ನಿಬ್ಬೆರಗು ಗಟ್ಟಿಗೊಂಡ ವ್ಯಕ್ತಿಗೆ ಮಾತ್ರ ದೀಕ್ಷೆ, ಉಪದೇಶ ಮಾಡಬೇಕು. ಸತ್ಯ ಸದಾಚಾರವ ನಂಬದ, ಗುರುಲಿಂಗ ಜಂಗಮವ ಅರಿಯದ, ಸ್ವಾನುಭಾವ ವಿವೇಕ ಸಿದ್ಧಾಂತ ನಿರ್ಣಯವಿಲ್ಲದ ಮನಹೀನರೆಂದೂ ಭಕ್ತರಾಗಲಾರರು. ಅಂಥವರಿಗೆ ಮಾಡಿದ ದೀಕ್ಷೆ, ನೀಡಿದ ಉಪದೇಶ ವ್ಯರ್ಥ. ಒಡಲ ಕಕ್ಕುಲತೆಗೆ, ಪರರ ದಾಕ್ಷಿಣ್ಯಕ್ಕೆಬಿದ್ದು ಅನ್ಯದೈವ, ಭವಿನೇಮಸ್ತರ ಮನೆಯಲ್ಲಿ ಲಿಂಗಾರ್ಚನೆ ಮಾಡಿಕೊಳ್ಳಲಾಗದು. ಮನ ಬುದ್ಧಿ ಭಾವ ಶೀಲ ಏಕಾರ್ಥವಾಗದವರ ಸಮುಗಡಣದಲ್ಲಿ ಕೂಡಲಾಗದು. ಸಾತ್ವಿಕ ಸದ್ಭಕ್ತಿ ಸಚ್ಚಾರಿತ್ರ್ಯವರಿಯದವರ ಸಂಗದಿಂದ ದೂರವಿರಬೇಕು ಸತ್ಯ ಸದಾಚಾರ ಹೀನರ ಸಂಗಡ ನಡೆ-ನುಡಿ ಬೆರಸಬಾರದು. ಲಿಂಗನಿಷ್ಠೆ ಇಲ್ಲದವರ ಅಂಗಳ ಮೆಟ್ಟಲಾಗದು. ಜಂಗಮಪ್ರೇಮ ಇಲ್ಲದವರೊಡನೆ ಮಾತನಾಡಲಾಗದು. ಪ್ರಸಾದ ಪ್ರಸನ್ನಿಕೆ ಇಲ್ಲದವರ ಸಮಪಂತಿಯಲ್ಲಿ ಕೂಡಲಾಗದು. ಲಿಂಗಜಂಗಮ ಪ್ರಸಾದ ವಿಶ್ವಾಸವಿಲ್ಲದವರ, ಸಜ್ಜನ ಸದ್ಭಾವ ನಂಬುಗೆ, ಭಕ್ತಿಯ ಬೆಸುಗೆ ಇಲ್ಲದವರ ಒಡನಾಟ ಸಲ್ಲದು. ಆಡಿದೊಡೆ, ನುಡಿದೊಡೆ, ಕೂಡಿದೊಡೆ ಸದಾಚಾರಿಗಳೊಡನೆ ಆಡು, ನುಡಿ, ಕೂಡು. ಸತ್ಯ ಸದಾಚಾರ ಭಕ್ತಿಹೀನರ ಕಂಡರೆ ಮನ ಮುನಿಸ ತಾಳು. ಅರೆಭಕ್ತರಾದವರ ನೆರೆ-ಹೊರೆ, ದಾರಿಸಂಗ, ಒಡನುಡಿ ಬೇಡ. ಅಚ್ಚ ಶಿವೈಕ್ಯಂಗೆ ತೊತ್ತಾಗಿರು.

ಶರಣರ ಸಂಗದಿಂದ ಭವಿತನ ನಾಶ. ಕಾರಣ ದುರ್ಜನರು ಸಜ್ಜನರ ಸಂಗದಿಂದ ಸಜ್ಜನರಾಗಬೇಕು. ಶರಣರ ಒಡನಾಟದಿಂದ ಗುರು ಲಿಂಗ ಜಂಗಮ ಪ್ರಸಾದ ಆಚಾರ

ಜೊತೆಗೆ ತನ್ನ ತಾನು ಕಾಣಬಹುದು. ಜ್ಞಾನದ ಬಲದಿಂದ ಅಜ್ಞಾನ, ಸತ್ಯದ ಬಲದಿಂದ ಅಸತ್ಯ ಕೆಡುವಂತೆ, ಶರಣರ ಸಂಗದಿಂದ ಭವಿಯ ಭವ ಕೆಡುತ್ತದೆ. ಶರಣರ ಅನುಭಾವ–ತಪಸ್ಸು, ಗುರುಸೇವೆ, ಲಿಂಗಾರ್ಚನೆ, ಜಂಗಮತೃಪ್ತಿಗಿಂತ ಮಿಗಿಲು. ಅದೇ ಮುಕ್ತಿ ಸೋಪಾನ. ಇಂಥ ಏಕಗುರೂಪದೇಶ ಪಡೆದ ಶರಣರ ಅನುಭಾವದಿಂದ ಸದಾಚಾರಿಯಾಗುವುದು ದ್ವಿತೀಯ ಶೀಲ.

೪

ಏಕಗುರುವಿನ ಉಪದೇಶ ಪಡೆದ ಭಕ್ತ ತನುಮನಧನ ವಂಚನೆಯಿಲ್ಲದೆ ಗುರುಲಿಂಗ ಜಂಗಮ ದಾಸೋಹ ಮಾಡುವುದು ಮತ್ತೊಂದು ಶೀಲ. 'ಭಕ್ತಿ–ಯುಕ್ತಿಯನರಿದು, ಮುಕ್ತಿಮಾರ್ಗವ ತಿಳಿದು ತನುಮನಧನಂಗಳು ಕೆಟ್ಟುಹೋದಾ'ವೆಂಬ ವಿಚಾರದಿಂದ ಮರ್ಮಜ್ಞನಾಗಿ, ವಂಚಿಸುವ ಸತಿ–ಸುತ–ಲೋಕವ ವಂಚಿಸಿ ನಿರ್ವಂಚಕರಾಗಿ ಗುರುಲಿಂಗ ಜಂಗಮಕ್ಕೆ ದಾಸೋಹವ ಮಾಡಲು ತನು ಕೆಡದು, ಮನ ಕೆಡದು, ಧನ ಕೆಡದು. ಭಕ್ತಿಯುಂಟು, ಯುಕ್ತಿಯುಂಟು, ಮುಕ್ತಿಯುಂಟು. ನಿರುಪಾಧಿಕನಾಗಿ ನಿರ್ವಂಚಕತ್ವದಿಂದ ದಾಸೋಹವ ಮಾಡುವವನೇ ಷಟ್‌ಸ್ಥಲಬ್ರಹ್ಮಿ ಎನಿಸುತ್ತಾನೆ; ಇಹಲೋಕ ಪರಲೋಕ ಪೂಜ್ಯನಾದ ಸುಜ್ಞಾನಿ ಎನಿಸುತ್ತಾನೆ.

ಮಾಡುವ ದಾಸೋಹ ಸತ್ಯಶುದ್ಧಕಾಯಕದಿಂದ ಬಂದುದಾಗಿರಬೇಕು. ಅದು ಸತ್ಪಾತ್ರಕ್ಕೆ ಸಲ್ಲಬೇಕು. ಡಂಬಿನದಾಸೋಹ, ಅಪಾತ್ರದಾನ ಸರಿಯಲ್ಲ. ಪಾಪಿಯಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದು. ಜಂಗಮದಾಸೋಹ ಶ್ರೇಷ್ಠವಾದುದು. ಜಂಗಮ ಕುಲ ಛಲ ಫಲ ಪದ ಭವಗಳನ್ನು ಮೀರಿ ನಿಂತವನು. ಅವನೇ ಲಿಂಗದಮುಖ. ಅವನಿಗೆ ಅರ್ಪಿಸಿದರೆ ಲಿಂಗಕ್ಕರ್ಪಿಸಿದಂತೆಯೆ. ಅದಕ್ಕಾಗಿ ಶಿವನ ಸೊಮ್ಮಾದ ಸಾಕಾರ ದ್ರವ್ಯಪದಾರ್ಥಂಗಳನ್ನೆಲ್ಲ ಅರ್ಥ ಪ್ರಾಣ ಅಭಿಮಾನ ಸಹಿತ ಅಹಂಕಾರವಳಿದು ಅರ್ಪಿಸಬೇಕು. ಮಾಡಿದೆನೆಂಬುದು ಮನದಲ್ಲಿ ಸುಳಿದರೆ ಏಡಿಸಿ ಕಾಡುತ್ತದೆ. ಶಿವನ ಡಂಗುರ; ಜಂಗಮದಲ್ಲಿ ಜಾತಿಯನರಸಬಾರದು. ಅವನು ಸತ್ಕುಲಜ. ಪುರಾತರ ಚಾರಿತ್ರ್ಯದಲ್ಲಿ ನಡೆದ ಮಹಾತ್ಮನಿಗೆ ಜಾತಿಯೆಂಬುದಿಲ್ಲ. ಅವನಿಗೆ ಬಾಗಿದ ತಲೆ, ಮುಗಿದ ಕೈಯಾಗಿ ಶುದ್ಧಮನಸ್ಸಿನಿಂದ ದಾಸೋಹ ಮಾಡಿದರೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಪದವಿಗಳು ಪ್ರಾಪ್ತವಾಗುತ್ತವೆ.

೫

ತನುದಂಡನೆಯ ಕರ್ಮಿಗಳ ಅಷ್ಟಾಂಗಯೋಗಕ್ಕಿಂತ ಗುರುಕಾರುಣ್ಯದಿಂದ ಬಂದ ಕಲಸ್ಥಲದ ಇಷ್ಟಲಿಂಗದಲ್ಲಿ ದೃಷ್ಟಿನಟ್ಟು, ಮನಮುಟ್ಟಿ, ಭಾವಬಲಿದು, ಲಿಂಗ ಮನೋವೇದ್ಯರಾಗಿ ತಿಳಿದು ನಿರ್ಧರಿಸಿ ಮಾಡುವ ಓಂಕಾರಸ್ವರೂಪವಾದ ಲಿಂಗಾಂಗಯೋಗ ಸರ್ವಶ್ರೇಷ್ಠವಾದುದು. ಪೂರ್ವ ನವನಾಥಸಿದ್ಧರ ಮತೋಕ್ತವಾದ ಕಾಪಾಲಿಕಾಚರಣೆ, ಬಿನುಗು

ದೃಷ್ಟ, ಭೂತಚೇಷ್ಟೆ, ಕಾಕು, ಸಟೆ, ಭ್ರಾಂತಿಯ ಹಿಡಿಯಲಾಗದು. ಹಠ, ಲಂಬಿಕೆ ಯೆಂದು ಆಕುಂಚನಮಾಡಿ, ವಜ್ರ ಅಮರಿಕಲ್ಪವೆಂದು ಮಲಮೂತ್ರ ಸೇವಿಸುತ್ತ, ತಲೆ ಯೊಳಗಣ ವಾತ ಪಿತ್ತ ಶ್ಲೇಷ್ಮವ ತೆಗೆದು ಅಮೃತವೆಂದು ಸ್ವೀಕರಿಸುತ್ತ, ಅಪ್ಪು, ಫಲರಸ, ಕ್ಷೀರ, ಘೃತ ಮೊದಲಾದವುವನ್ನು ತೆಗೆದುಕೊಂಡು ಅನ್ನವ ಬಿಟ್ಟೆವೆಂದು ನುಡಿಯುತ್ತ, ಈಡಾಪಿಂಗಳ ಸುಷುಮ್ನ ನಾಳವ ಬಲಿದು ಪವನಮುಖದಿಂದ ಲಿಂಗವ ಕಂಡೆ ನೆಂದು ಹೇಳುವವರು ಕ್ರೂರಕರ್ಮಿಗಳು. ಅವರಿಗೆ ಲಿಂಗ ದೊರಕದು. ಕಾಯಾನುಭಾವಿ ಗಳು, ಜೀವಾನುಭಾವಿಗಳು, ಪವನಾನುಭಾವಿಗಳು, ಯೋಗಾನುಭಾವಿಗಳು ಲಿಂಗಾನುಭಾವಿ ಗಳಿಗೆ ಎಂದೂ ಸರಿಯಾಗಲಾರರು.

"ಆರುವನೊಲ್ಲೆನೆಂದು ಅರಣ್ಯಕ್ಕೆ ಹೋಗುವುದು ಕಾರಿಯವಲ್ಲ". ಆರ ಹಂಗಿಲ್ಲದೆ ಬಂದ ಪದಾರ್ಥವ ಲಿಂಗಕ್ಕರ್ಪಿಸಿ ಕೊಂಬ ಶರಣನೆ ಜಾಣ. ಹಸಿವ ಮುಂದಿಟ್ಟುಕೊಂಡು ಸುಳಿವಾತ ಜಂಗಮನಲ್ಲ. ಹಸಿವು ತನುಗುಣ, ಅದನ್ನು ಹಿಂಗಿಸುವುದು ಧರ್ಮ. ಅನುವರಿತು ಉಂಡರೆ ಹಂಗಿಗನಲ್ಲ. ಭಕ್ತನ ಹರುಷವ ಮುರಿದು, ಭ್ರಮೆಗೊಳಿಸಿ, ಕೋಪ ಹುಟ್ಟಿಸಿ ಉಣ್ಣದೆ, ಭಕ್ತರ ಮನೆಯ ಹೊಕ್ಕು ಲಿಂಗಾರ್ಚನೆಯ ಮಾಡಿ, ಪಾದೋದಕಪ್ರಸಾದ ವಿಶ್ವಾಸ ಭಕ್ತಿಯುಳ್ಳವರೆಂದು ತಿಳಿದು ಅವರ ತಾಮಸಕಳೆದು ಸತ್ಯಭಕ್ತಿಯ ಮುಂದು ಮಾಡಿ, ಭಕ್ತಿಮುಖದಿಂದ ಬಂದ ಪದಾರ್ಥವ ಸೇವಿಸಿ ಒಕ್ಕುಮಿಕ್ಕುದ ಭಕ್ತಂಗಿಕ್ಕುವ ಜಂಗಮ ಜಗತ್ಪಾವನ. ಇಂಥ ಜಂಗಮನಿಗೆ ದಾಸೋಹ ಮಾಡಿ ಲಿಂಗಾಚಾರದಲ್ಲಿ ನಡೆವುದೇ ನಿಜಾಚರಣೆ. ಅದೇ ಶಿವಯೋಗಸಾಧನೆ. ಅದೇ ಶರಣನ, ಸದ್ಭಕ್ತನ ಸತ್‌ಶೀಲ.

೬

ಕರ್ಮಯೋಗ ತೊರೆದ ಶರಣ ಪಂಚಸೂತಕಗಳನ್ನು ನೀಗಿ, ಪಂಚಾಚಾರಗಳನ್ನು ಅಳವಡಿಸಿಕೊಳ್ಳಬೇಕು. ಅಂಗಲಿಂಗ ಸಂಬಂಧಿಗಳಾದ ಲಿಂಗಭಕ್ತರು ಜನನಸೂತಕ, ಕುಲ ಸೂತಕ, ರಜಸೂತಕ, ಎಂಜಲಸೂತಕ, ಪ್ರೇತಸೂತಕಗಳನ್ನು ಮಾಡಲಾಗದು. "ಪೂರ್ವಾ ಚಾರವಳಿದು ಪುನರ್ಜಾತನಾಗಿ ಅಂಗದಮೇಲೆ ಲಿಂಗಸಾಹಿತ್ಯನಾದ ಭಕ್ತಂಗೆ ಜನನಸೂತಕ ವೆಂಬುದೇ ಪಾತಕ; ಶಿವಭಕ್ತರಾದಬಳಿಕ ಭವಿನೇಮಸ್ತರ ಕಳೆದು ಶಿವಕುಲವೇ ಕುಲವಾದ ಭಕ್ತರಿಗೆ ಕುಲಸೂತಕವೆಂಬುದೇ ಪಾತಕ; ಗುರುಪಾದತೀರ್ಥ, ಜಂಗಮಪಾದತೀರ್ಥ ಆದಿಯಾದ ಲಿಂಗೋದಕ, ಪಾದೋದಕ, ಪ್ರಸಾದೋದಕ ಎಂಬ ತ್ರಿವಿಧೋದಕದಲ್ಲಿ ಸರ್ವಪಾಕಪ್ರಯತ್ನ, ನಾನಾಕ್ರೀಯವಿಧಾನ, ಸ್ನಾನ ಪಾನಂಗಳಿಂದ ಬಾಹ್ಯಾಭ್ಯಂತರ ಶುಚಿಯಾದ, ಶುದ್ಧ ನಿರ್ಮಲದೇಹಿಯಾದ ಭಕ್ತಂಗೆ ರಜಸೂತಕವೆಂಬುದೇ ಪಾತಕ; ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಯುಕ್ತವಾದ ಸದಾ ಸನ್ನಹಿತ ಭಕ್ತಂಗೆ ಎಂಜಲಸೂತಕ ವೆಂಬುದೇ ಪಾತಕ; ಗುರುವಿನಿಂದ ಜನನ, ಚರಲಿಂಗದಿಂದ ಸ್ಥಿತಿ, ಘನಮಹಾಲಿಂಗ

ದೊಳೈಕ್ಯವಾದ ಸದ್ಭಕ್ತಂಗೆ ಪ್ರೇತಸೂತಕವೆಂಬುದೇ ಪಾತಕ." ಈ ಪಂಚಸೂತಕ ವನ್ನುಳ್ಳ ಪಾತಕಂಗಳ ಪಂಚಾಚಾರಯುಕ್ತನಾದ ಸದ್ಭಕ್ತಂಗೆ ಕಲ್ಪಿಸುವವರು ಪಂಚಮಹಾ ಪಾತಕರೆನಿಸುತ್ತಾರೆ.

ಸೂತಕವಿದ್ದರೆ ಲಿಂಗಾರ್ಚನೆಯಿಲ್ಲ; ಪಾತಕವಿದ್ದರೆ ಜಂಗಮಾರ್ಚನೆಯಿಲ್ಲ. ಶರಣನಿಗೆ ಸೂತಕ ಪಾತಕ ಎರಡೂ ಇಲ್ಲ. ಲಿಂಗವಿದ್ದೆಡೆಯಲ್ಲಿ ಹೊಲೆ, ಜಂಗಮವಿದ್ದೆಡೆಯಲ್ಲಿ ಕುಲ, ಪ್ರಸಾದವಿದ್ದೆಡೆಯಲ್ಲಿ ಎಂಜಲ ಇದೆ ಎಂಬ ಅಪವಿತ್ರದ ನುಡಿಯೇ ಸೂತಕ. ಭಕ್ತರಲ್ಲಿ ಹೊಲೆಸೂತಕ ಕಲ್ಪಿಸುವಾತ ಗುರುದ್ರೋಹಿ, ಜಂಗಮದಲ್ಲಿ ಜಾತಿಸೂತಕ ಅರಸುವಾತ ಲಿಂಗದ್ರೋಹಿ, ಪ್ರಸಾದದಲ್ಲಿ ಎಂಜಲಸೂತಕ ಭಾವಿಸುವಾತ ಜಂಗಮ ದ್ರೋಹಿ, ಪಾದೋದಕದಲ್ಲಿ ಸಂಕಲ್ಪಸೂತಕ ನೆನೆವಾತ ಪ್ರಸಾದದ್ರೋಹಿ. ಈ ಚತುರ್ವಿಧ ದಲ್ಲಿ ಭಯ-ಭಕ್ತಿ, ಪ್ರೀತಿ-ಪ್ರೇಮ ವಿಶ್ವಾಸವುಳ್ಳಾತನೆ ಭಕ್ತ; ಛಲ ನಿಷ್ಠೆ ದೃಢಕರಿಯಾ ದಾತನೆ ಮಾಹೇಶ್ವರ; ನಿಜಾವಧಾನವುಳ್ಳಾತನೇ ಪ್ರಸಾದಿ; ತದ್ಗತಾನುಭಾವವುಳ್ಳಾತನೆ ಪ್ರಾಣಲಿಂಗಿ; ನಿರ್ಣಯಾನಂದ ಉಳ್ಳಾತನೆ ಶರಣ; ಸ್ಥಿರೀಕರಿಸಿ ಸಂದಳಿದೊಂದಾಗಿ ಕೂಡಿ ದಾತನೆ ಲಿಂಗೈಕ್ಯ.

ಈ ಸೂತಕರಹಿತನಾದ ಭಕ್ತ ಪಂಚಾಚಾರದ ಆಚರಣೆಯಲ್ಲಿ ನಿರತನಾಗಿರುತ್ತಾನೆ. ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ, ಗಣಾಚಾರ-ಎಂಬುವೇ ಆ ಪಂಚಾ ಚಾರಗಳು. ಗುರುಕಾರುಣ್ಯವಿಡಿದು ಅಂಗಸಂಬಂಧಿಯಾಗಿ ಲಿಂಗವಂತನಾದ ಬಳಿಕ, ತನ್ನ ಲಿಂಗಸಂಬಂಧಕ್ಕೆ ಅನ್ಯವಾದ ಭೂಪ್ರತಿಷ್ಠೆಯುಳ್ಳ ಭವಿಶೈವದೈವವ ಭಾವಿಸದಿಹುದೇ ಲಿಂಗಾಚಾರ; ಸಜ್ಜನ ಸದುಹೃದಯ ಸಾತ್ವಿಕನಾಗಿ ತನ್ನ ಸುಕಾಯಕದಲ್ಲಿ ತನುಮನ ಬಳಲಿ, ಧನವ ಗಳಿಸಿ ತಂದು ಗುರುಲಿಂಗಜಂಗಮಕ್ಕೆ ಮಾಡಿ ನೀಡಿ ಸತ್ಯ ಸದ್ಯೈವನಾಗಿಹುದೇ ಸದಾಚಾರ; ಶಿವಭಕ್ತರಿಂದ ಮೇಲೆ ಹಿರಿಯರಿಲ್ಲ, ತನ್ನಿಂದ ಬಿಟ್ಟು ಕಿರಿಯರಿಲ್ಲವೆಂದರಿದು, ಅಹಂಕಾರವಳಿದು ಭಯ, ಭಕ್ತಿ ಕಿಂಕುರ್ವಾಣದಿಂದ ಭಕ್ತ ಜಂಗಮಕ್ಕೆ ಪ್ರೀತಿ ಪ್ರೇಮದಿಂದ ತನಗುಳ್ಳ ಪದಾರ್ಥವ ವಂಚಿಸದೆ ಸಮರ್ಪಿಸಿ ವಿಶ್ವಾಸದಿಂದ ದಾಸೋಹವ ಮಾಡುವುದೇ ಭೃತ್ಯಾಚಾರ; ಭಕ್ತದೇಹಿಕದೇವನೆಂದು ಅವರು ಒಕ್ಕುದ ಕೊಂಬುದೇ ಶಿವಾಚಾರ; ಗುರು ಲಿಂಗಜಂಗಮ ಪಾದೋದಕ ಪ್ರಸಾದ ಭಕ್ತಾಚಾರಂಗಳ ನಿಂದ್ಯವ ಕೇಳದಿಹುದೇ ಗಣಾಚಾರ. ಈ ಪಂಚಾಚಾರಪಾಲನೆ ಗುರು ಲಿಂಗ ಜಂಗಮಕ್ಕೂ ಅನ್ವಯಿಸುತ್ತದೆ. ಭವಿಮಿಶ್ರ ಮಕ್ಕಳು, ಭವಿಶೈವದೈವ ಪೂಜಿಪ ಮಡದಿಯರನ್ನು ಮನೆಯೊಳಗಿಟ್ಟುಕೊಂಡು ಅನ್ಯದೈವ ಭವಿಮಿಶ್ರವೆಂದು ನುಡಿವವ ಭಕ್ತನಲ್ಲ; ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಮತ್ತೆ ಭವಿಸಂಗ ಭಂಗ. ಹಸಿವು ತೃಷೆ ವಿಷಯ ವ್ಯಸನದಲ್ಲಿ ಭವಿಯ ಬೆರಸಿದರೆ ಶಿವಾಚಾರಭ್ರಷ್ಟ. ಅನ್ಯದೈವ ಭವಿ ಶಿಥಿ ಮಾಟ ಕೂಟ ಮಾಡುವಲ್ಲಿ ಹೋಗಿ ಲಿಂಗಾರ್ಚನೆ ಮಾಡುವವ ಜಂಗಮನಲ್ಲ.

ಭವಿಪಾಕಸೇವನೆ, ಪರಸ್ತ್ರೀಗಳುಪ್ಪುವುದು, ಸ್ಥಾವರಲಿಂಗಕ್ಕೆರಗುವುದು, ಗುರುವಿನಾಜ್ಞೆ ಮೀರುವುದು, ಶಿವನಿಂದೆ ಮಾಡುವುದು–ಇವೇ ಪಂಚಮಹಾಪಾತಕಗಳು. ಈ ಪಾತಕ ಸೂತಕ ಅಳಿದಾಗಲೇ ನಿಜಮುಕ್ತಿ. ಅಳಿದವನೇ ನಿಜಶರಣ; ಅವನೇ ಶೀಲವಂತ.

೭

ಪಂಚಸೂತಕವಿರಹಿತನಾಗಿ ಪಂಚಾಚಾರದಲ್ಲಿ ನಡೆವ ಭಕ್ತ ಭವಿಶೈವದೈವಗಳಾದ ಸ್ಥಾವರಪ್ರತಿಷ್ಠೆಗಳಿಗೆ ಎರಗಬಾರದು. ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ ಇಷ್ಟಲಿಂಗದಲ್ಲಿಯೇ ನಿಷ್ಠೆ ನೆಲೆಗೊಳ್ಳಬೇಕು. ನಂಬಿದ ಹೆಂಡತಿಗೆ ಗಂಡನೊಬ್ಬನೆ; ಹಾಗೆಯೇ ನಂಬಿದ ಭಕ್ತನಿಗೆ ಲಿಂಗದೇವನೊಬ್ಬನೆ. ಹಲವು ಪುರುಷರ ಸಂಗ ಹಾದರ: ಅಂತೆಯೇ ಹಲವು ದೈವದ ಭಜನೆ ಹಾದರ. ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ ಇದ್ದರೂ ಅಷ್ಟೆ, ಇಲ್ಲದಿದ್ದರೂ ಅಷ್ಟೆ. ಪ್ರಸಂಗಕ್ಕೆ ತಕ್ಕಂತೆ ವೇಷ ಬದಲಿಸುವವನಿಗೆ, ತನ್ನಲಿಂಗದ ಪ್ರಸಾದವನುಂಡು ಅನ್ಯದೈವವ ಕೊಂಡಾಡುವವನಿಗೆ ಹುಳಗೊಂಡ ತಪ್ಪಿದ್ದಲ್ಲ. ಗಂಡ ಹೆಂಡತಿ ಒಂದೇ ದೈವದ ಭಕ್ತರಾಗಿರಬೇಕು. 'ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿಮಸಣೆಯ ಭಕ್ತೆ, ಗಂಡ ಕೊಂಬುದು ಪಾದೋದಕ ಪ್ರಸಾದ, ಹೆಂಡತಿ ಕೊಂಬುದು ಸುರೆ ಮಾಂಸ' ಆದರೆ ಶಿವಕೃಪೆ ದೊರೆಯದು. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪದು ಶಿವನಿಗೆ' ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ ಅವನಿಗೆ ಸಲ್ಲದು.

ಶಿವಭಕ್ತನಾದ ಮೇಲೆ ಅಷ್ಟಮಿ, ನವಮಿ ಎಂಬುದನ್ನು ಕಲ್ಪಿಸಬಾರದು. ಭವಿಶೈವದೈವ, ಭವಿತಿಥಿ, ಮಾಟಕೂಟ, ಭತಿವರ್ತನಕ್ರಿಯೆಯನೊಡಗೂಡಿ ನಡೆಯಲಾಗದು. ಅನ್ಯದೈವದ ನೆನಕೆ, ಸ್ತುತಿ, ಪೂಜೆ, ಪ್ರಸಾದಸೇವನೆ, ನಮಸ್ಕಾರಗಳನ್ನು ಮಾಡಬಾರದು. ಪುಣ್ಯಕ್ಷೇತ್ರ, ತೀರ್ಥಸ್ನಾನಗಳೆಂದು ಅಲೆಯಬಾರದು. ಪರ್ವತಕ್ಕೆ ಕಂಬಿ ಕಾವಡಿಯ ಹೊತ್ತು ಹೋಗಬಾರದು. ದಿನ, ತಿಥಿ, ವಾರ, ಹರಕೆ, ಹುಣ್ಣಿಮೆ, ಅಮವಾಸ್ಯೆ ಸಂಕ್ರಾಂತಿ ಶಿವರಾತ್ರಿ ಮೊದಲಾದವುಗಳನ್ನು ನಂಬಿ ಉಪವಾಸ ವ್ರತಗಳನ್ನು ನಡೆಸಲಾಗದು. ಲಿಂಗಶ್ರೇಷ್ಠವಲ್ಲದೆ ದಿನಶ್ರೇಷ್ಠವಲ್ಲ. ಗುರುಪಾದ, ಗುರುಮುದ್ರೆಯನ್ನು ಅಂತರಂಗ ಬಹಿರಂಗದಲ್ಲಿ ಧರಿಸಿ, ಗುರುಲಿಂಗಜಂಗಮ ಪಾದತೀರ್ಥ ಪ್ರಸಾದವ ಸೇವಿಸುತ್ತಿರಬೇಕಲ್ಲದೆ, ದಂಡ, ಕಮಂಡಲ, ಕಂಥೆ, ಕಕ್ಷದಾರ, ಭಿಕ್ಷಾಪಾತ್ರೆ, ಹಾವುಗೆ, ತೀರ್ಥಕುಂಭ, ಭಸ್ಮದುಂಡೆ ಮೊದಲಾದವುಗಳನ್ನಿಟ್ಟು ಪೂಜಿಸಕೂಡದು. ರೋಗ, ರುಜಿನ, ನೋವು ಸಾವು ಬಂದಾಗ ಅವುಗಳಿಂದ ಪಾರಾಗಲು ಕ್ಷುದ್ರ ದೈವಗಳಾದ ಮಾರಿ ಮಸಣಿಯರ ಮೊರೆ ಹೋಗಬಾರದು; 'ಅದ್ದನ ಜೋಳ ಅರಪಾವು ಎಣ್ಣೆಯ ಕೊಂಡು ಮಾಟಕಾರ್ತಿಯ ಮನೆಗೆ ಹೋಗಿ ಅವಳು ಹೇಳಿದ ತಾತುಭೂತದ ಕೋಟಲೆಯ ಕೈಕೊಂಡು ಬಂದು ಅವಕೂಟವನಟ್ಟಿಕ್ಕಿ ಮಿಕ್ಕಿನ ಕೂಳ ತನ್ನಿಷ್ಟಲಿಂಗಕ್ಕೆ ತೋರಬಾರದು.' ದೇವ

ನೊಬ್ಬನೆ ಜಗವ ಕಾವಾತ, ಕೊಲುವಾತ; ಆತನೆ ಶಿವ; ಅವನ ಕರುಣವಾದಲ್ಲದೆ ಈ ಕಷ್ಟಗಳು ಪರಿಹಾರವಾಗವು ಎಂದು ತಿಳಿಯಬೇಕು. ತನುವಿನಲ್ಲಿ ಆಚಾರ, ಮನದಲ್ಲಿ ಅರಿವು, ಪ್ರಾಣದಲ್ಲಿ ಪ್ರಸಾದ ಸಾಹಿತ್ಯವಾಗಿ, ತನು–ಮನ–ಪ್ರಾಣವಲ್ಲಿ ಸತ್ಯ ಸದಾಚಾರ ಸತ್ಕ್ರಿಯೆ ಸಮ್ಯಜ್ಞಾನ ಭಕ್ತಿ ವರ್ತನೆಯಲ್ಲದೆ ಮತ್ತೊಂದನರಿಯದಂತೆ ಇರಬೇಕು.

೮

ಸ್ಥಾವರಲಿಂಗವನತಿಗಳೆದು ಇಷ್ಟಲಿಂಗದಲ್ಲಿ ದೃಷ್ಟಿ, ಭಾವ, ನಿಷ್ಠೆ ನೆಲೆಗೊಂಡ ಭಕ್ತ ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿಗಳನ್ನು ಅಳವಡಿಸಿಕೊಂಡು, ಅವುಗಳ ಮಹಾತ್ಮೆಯನ್ನು ಕೊಂಡಾಡುತ್ತ, ಇಷ್ಟಲಿಂಗದ ಅರ್ಚನೆಯನ್ನು ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ನೆರವೇರಿಸಬೇಕು.

ಭಕುತಿಯ ಬೆಳಗಿನೋಪಾದಿಯ ಭಸ್ಮವನ್ನು ಒಲಿದು ಧರಿಸಿದರೆ ದುರಿತ ಸಂಕುಳ ಹರಿದು, ಭವಬಂಧನ ಬಿಡಿಸಿ, ಹರಗಣಂಗಳ ಸಂಗದಲ್ಲಿ ಇರಿಸುವುದು. ರುದ್ರಾಕ್ಷಿ ಧಾರಣೆಯಿಂದ ಇರವು, ಪರವು, ಗತಿ, ಮತಿ, ಮೋಕ್ಷವನ್ನು ಕಾಣಬಹುದು. ಸಕಲ ಮಂತ್ರಗಳಲ್ಲಿ 'ನಮಃಶಿವಾಯ' ಎಂಬ ಶಿವಪಂಚಾಕ್ಷರಿ ಸರ್ವಶ್ರೇಷ್ಠವಾದುದು. ಇತರ ಜಾಳುಮಂತ್ರಕ್ಕೆ ಭ್ರಮಿಸಿ ಚಿತ್ತವ್ಯಾಕುಲನಾಗಿ ಕೆಟ್ಟು ಹೋಗದೆ ಇದನ್ನು ನೆನೆದು ಘನಪದವನ್ನು, ಶಿವಲಿಂಗದ ನಿತ್ಯದ ನೆಲೆಯನ್ನು ಕಂಡುಕೊಳ್ಳುವುದು ಒಳ್ಳೆಯದು. ಪಂಚಾಕ್ಷರಿಯನುಳ್ಳ ಸದ್ಭಕ್ತನೇ ವೇದವಿತ್ತು, ಶಾಸ್ತ್ರವಾನ್, ಆಗಮಿಕ, ಸರ್ವಜ್ಞ ಎನಿಸುತ್ತಾನೆ.

ಇಷ್ಟಲಿಂಗ ನಿತ್ಯನಿರಂಜನ ಪರಂಜ್ಯೋತಿಸ್ವರೂಪ. ಅದು ಗುರು ಜಂಗಮ ಪ್ರಸಾದ ಮಂತ್ರ ಯಂತ್ರ ಸಕಲವಿದ್ಯಾಪರಿಪೂರ್ಣವಾಗಿದೆ. ಅದನ್ನು ನೆನೆದು, ಅರ್ಚಿಸಿ, ಧ್ಯಾನಿಸಿ, ಸ್ತುತಿಸಿ ಬದುಕಬೇಕು. ಲಿಂಗದಲ್ಲಿ ಸ್ನೇಹ ಮೋಹ ಬಲಿದು, ಲಿಂಗಪ್ರೇಮಿಯಾಗಿ, ಲಿಂಗಭಾವದಲ್ಲಿ ತನ್ನ ಭಾವ ಬೆರೆದ ಬಳಿಕ ಅನ್ಯವಿಷಯವ್ಯಾಪ್ತ ವ್ಯವಹಾರ ಭ್ರಾಂತಿ ಇರಕೂಡದು. ಮುಖದಲ್ಲಿ ಶಿವಮಂತ್ರ, ಹೃದಯದಲ್ಲಿ ಲಿಂಗಧ್ಯಾನ, ಪ್ರಾಣದಲ್ಲಿ ಲಿಂಗದ ನೆನಹು ಕರಿಗೊಂಡ ಶಿವಾತ್ಮಶರಣನ ದೇಹವೇ ದೇವಾಲಯವೆನ್ನಿಸುತ್ತದೆ; ಹೃದಯವೇ ಶಿವನಿಗೆ ಪೀಠವಾಗುತ್ತದೆ. ಈ ಶಿವನನ್ನು ಜ್ಞಾನಕ್ರಿಯೋಪಚಾರಗಳಿಂದ ಸೇವಿಸಿದರೆ ಅಂಗ, ಲಿಂಗಸ್ವರೂಪವಾಗುತ್ತದೆ. ಹೀಗಾದಮೇಲೆ ಇಂದ್ರಿಯಗಳ ಭೋಗೋಪಭೋಗಗಳೆಲ್ಲವು ಲಿಂಗಮುಖವಾಗಿಯೇ ನಡೆಯಬೇಕು.

ಇಷ್ಟಲಿಂಗವನ್ನು ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಪೂಜಿಸಬೇಕು. 'ಅಷ್ಟವಿಧಾರ್ಚನೆ ಮಾಡಿ, ಮಾಡಿದ ಪೂಜೆಯ ನೋಡಿ, ಶಿವಭಕ್ತಿಗೀತವ ಹಾಡಿ ಶಿವನ ಮುಂದೆ ನಲಿನಲಿದಾಡಿ, ಭಕ್ತಿಸಂಭಾಷಣೆಯ ಮಾಡಬೇಕು? ಮುಂಜಾವದಲೆದ್ದು ಲಿಂಗ ದಂಘ್ರಿಯ ಪೂಜಿಸಿ, ಶರಣರ ಮುಖ ನೋಡಿದರೆ ಹುಟ್ಟಿದುದಕ್ಕೆ ಸಫಲ. ಹೊತ್ತು

ಹೋಗದ ಮುನ್ನ, ಮೃತ್ಯುಮುಟ್ಟದ ಮುನ್ನ, ಅಂದಂದಿನ ಕೃತ್ಯವ ಅಂದಂದಿಗೆ ಮಾಡಿ ಶುದ್ಧನಾಗಬೇಕು. ಅಂದರೆ ಕಾಲ ಕರ್ಮ ಅಪಮೃತ್ಯು ದೂರವಾಗುತ್ತವೆ.

ಸದ್ಭಕ್ತ ಲಿಂಗಾರ್ಪಿತ ಪ್ರಸಾದವನ್ನು ಮಾತ್ರ ಸ್ವೀಕರಿಸಬೇಕು. ಕಾಯದ ಕೈಮುಟ್ಟಿ ಕ್ರಿಯಾರ್ಪಣ, ಮನದ ಕೈಮುಟ್ಟಿ ಜ್ಞಾನಾರ್ಪಣ, ಭಾವದ ಕೈಮುಟ್ಟಿ ಪರಿಣಾಮಾರ್ಪಣ ಸಲ್ಲಿಸಬೇಕು. ಈ ತ್ರಿವಿಧಾರ್ಪಣ ಒಂದನ್ನು ಬಿಟ್ಟು ಒಂದಿಲ್ಲ. ಮೂರನ್ನೂ ಏಕಮುಖವಾಗಿ ಅರ್ಪಿಸಬೇಕು. ಅಂಗವೇ ಲಿಂಗವಾದ ಮೇಲೆ ಲಿಂಗದ ಜೊತೆ ಏಕಭಾಜನ ಮಾಡಬೇಕು. ತನಗೆ ಬೇರೆ, ಲಿಂಗಕ್ಕೆ ಬೇರೆ ಎಂದು ಹೆಚ್ಚಿಗೆ ನೀಡಿಸಿಕೊಂಡು ಒಡಲ ಆಶೆಗೆ ತಿಂಬ ಪದಾರ್ಥ ಪ್ರಸಾದವೆನಿಸದು. ಹಾಗೆ ತಿನ್ನುವವ ಶರಣನಲ್ಲ ತನುವಿನಲ್ಲಿ ಗುರು, ಮನದಲ್ಲಿ ಲಿಂಗ, ಧನದಲ್ಲಿ ಜಂಗಮ ಭರಿತವಾದುದೆ ನಿಜವಾದ ಭರಿತಾರ್ಪಣ. ಲಿಂಗದೊಡನೆ ಸಹಭೋಜನ ಮಾಡುವುದರಿಂದ ಶರಣನ ಕಾಯ ಪ್ರಸಾದ ಕಾಯವಾಗುತ್ತದೆ. ಕಾರಣ ಹೆಚ್ಚಿಗೆ ನೀಡಿಸಿಕೊಳ್ಳದಿರುವುದು, ಲಿಂಗಸಹಿತ ಉಣ್ಣುವುದು ಶರಣನ ಶೀಲವೆನಿಸಿವೆ.

೯

ಲಿಂಗಭಕ್ತ ಶೈವರು ಮಾಡುವ ನೇಮ ನಿತ್ಯ ಎಂಬ ಜಡಕರ್ಮಗಳನ್ನು ಅನುಸರಿಸಬಾರದು. 'ಹಾಲನೇಮವ ಹಿಡಿದವರು ಬೆಕ್ಕಾಗಿ ಹುಟ್ಟುವರು, ಕಡಲೆಯ ನೇಮವ ಹಿಡಿದವರು ಕುದುರೆಯಾಗಿ ಹುಟ್ಟುವರು, ಪುಷ್ಪದ ನೇಮವ ಹಿಡಿದವರು ತುಂಬಿಯಾಗಿ ಹುಟ್ಟುವರು, ಅಗ್ಗವಣಿಯ ನೇಮವ ಹಿಡಿದವರು ಕಪ್ಪೆಯಾಗಿ ಹುಟ್ಟುವರು'. ಅದಕ್ಕಾಗಿ ಶರಣ ಇಂಥ ಹಲವು ನೇಮವ ಹಿಡಿದು ಹೊಲಬುಗೆಡದೆ ಅಂದಂದಿನ ಪದಾರ್ಥವ ಅಂದೇ ಲಿಂಗಸಹಿತವಾಗಿ ಸ್ವೀಕರಿಸಿ ಶುದ್ಧನೆನಿದ್ದಾನೆ.

'ದ್ವೈತಾದ್ವೈತ'ವೆಂಬ ಉಭಯಕರ್ಮವನತಿಗಳೆದ ಅಂಗಲಿಂಗಸಂಬಂಧವನುಳ್ಳ ನಿಜವೀರಶೈವಸಂಪನ್ನರು ತಮ್ಮ ಸ್ವಯಾಂಗಲಿಂಗವನ್ನು ಅರ್ಚಿಸುವಲ್ಲಿ ಭವಿಶೈವ ಭಿನ್ನ ಕರ್ಮಿಗಳಂತೆ ಅರ್ಘ್ಯಪಾದ್ಯ ಆಚಮನಾದಿಯಾದ ಉಪಪಾತ್ರೆಗಳಲ್ಲಿ ನೀರನೆರೆದು, ಪಂಚಮ ಶುದ್ಧಿ, ಪಂಚಾಮೃತಾಭಿಷೇಕವ ಲಿಂಗಕ್ಕೆ ಮಾಡಕೂಡದು. ಗುರುವಾಕ್ಯವ ಮೀರಿ ಕುಲ ಗೋತ್ರ ಆಶ್ರಮ ಸ್ಥಲವ ಹೇಳಿ ಕಳಸಪಂಚಕವಿಟ್ಟು ಹಲವು ಮಂತ್ರವ ಹಿಡಿದು ಭವಿಶೈವ ದೀಕ್ಷೆಯ ಮಾಡಲಾಗದು. ಅಂಗದ ಮೇಲೆ ಲಿಂಗಸಾಹಿತ್ಯವುಳ್ಳ ಭಕ್ತ ತನ್ನ ನಿಜಾಂಗದ ಮೇಲೆ ಅನ್ಯ ಮಣಿಮಾಲೆ, ನಂದಿಯುಂಗುರ, ನಾಗಕುಂಡಲ ಮೊದಲಾದ ಭವಿಶೈವದ ಮುದ್ರೆಗಳ ಧರಿಸಬಾರದು. ಗುರು ಉಪದೇಶಿಸಿದ ಜಪ ಧ್ಯಾನ ಅರ್ಚನೆ ಉಪಚರಿಯ ಅರ್ಪಿತ ಪ್ರಸಾದಭೋಗವಾದಿಯಾದ ವೀರಶೈವೈಕ್ಯ ಸಾವಧಾನ ಸತ್ಕ್ರಿಯಾಚಾರಗಳ ಬಿಟ್ಟು ಭವಿಶೈವ ಭಿನ್ನಕರ್ಮಿಗಳಂತೆ ಅಂಗನ್ಯಾಸ, ಕರನ್ಯಾಸ, ಶ್ರೀರುದ್ರ ಪಂಚಬ್ರಹ್ಮಸ್ಥಲಾದಿ ಶೈವಪಂಚಾಕ್ಷರಿ, ಭೂತಾದಿ ದೇವತಾ ಗಣಿಕಾಜನನಿಕರ, ಅಕ್ಷಮಣಿ, ಭವಮಾಲಿಕಾ ಜಪ ಉಪರಿಚಯುಂಗಳಾದಿಯಾದ ಶೈವಪಾಷಂಡಕೃತ ಕರ್ಮವ ಮಾಡುವುದು ಸದಾಚಾರವಲ್ಲ.

೧೦

ಹುಸಿ, ಹಿಂಸೆ, ಕಳವು, ಪರದ್ವಾರ, ದಾಸಿವೇಶಿಯರ ಸಂಗ– ಎಂಬ ಪಂಚಮಹಾ ಪಾತಕಗಳನ್ನು ಮಾಡದಿರುವುದು ಶರಣಧರ್ಮದ ಐದು ಮಹತ್ವದ ನೈತಿಕ ಶೀಲಗಳು.

'ಮಾತಿನಲ್ಲಿ ದಿಟ, ಮನದಲ್ಲಿ ಸಟೆ ಸಲ್ಲದು; ಮನ ವಚನ ಕಾಯಕ ಒಂದಾಗದಿದ್ದರೆ ಕೂಡಲಸಂಗಯ್ಯ ಒಲಿಯಲಾರ.' ಲೋಕ ಸಟೆ-ದಿಟ ಎರಡನ್ನೂ ಹಿಡಿದು ನಡೆಯುವುದು. ಆದರೆ ಶರಣ ಅವುಗಳಲ್ಲಿ ಭೇದ ಕಲ್ಪಿಸ. ಸತ್ಯವೊಂದೇ ಅವನ ನುಡಿ. 'ಹುಸಿಯನಾಡಿ ಲಿಂಗವ ಪೂಜಿಸಿದರೆ ಹೊಳ್ಳ ಭಿತ್ತಿ ಫಲವನರಸಿದಂತೆ.' ಹುಸಿ ಹೊಲೆಯ, ಮಾದಿಗ, ಸಮ್ಮಗಾರ, ಅಗಸ, ಬೆವಹಾರಿ, ಹಾದರಿಗ, ಮಧುಪಾನಿ, ಜೂಜುಗಾರ, ಡೊಂಬರಾದಿಯಾದ ಯಾಚಕರು, ಅಕ್ಕಸಾಲಿಗ, ಸೂಳೆ, ಅರಸರಲ್ಲಿ ಮನೆಮಾಡಿದೆ. ಭಕ್ತನಾಗಲಿ, ಜಂಗಮನಾಗಲಿ ಹುಸಿ ನುಡಿದರೆ ಅವನಿಗೆ ಗುರುವಿಲ್ಲ. ಲಿಂಗವಿಲ್ಲ, ಜಂಗಮವಿಲ್ಲ, ಪಾದತೀರ್ಥವಿಲ್ಲ, ಪ್ರಸಾದವಿಲ್ಲ, ಮೋಕ್ಷವಿಲ್ಲ.

ಪ್ರಾಣಿಹಿಂಸೆ ಮಾಡದಿರುವುದು, ಸಕಲಜೀವಾತ್ಮರಿಗೆ ಲೇಸಬಯಸುವುದು ಧರ್ಮ. ದಯವಿಲ್ಲದ್ದು ಧರ್ಮವಲ್ಲ. 'ಕೊಲ್ಲುವವ ಮಾದಿಗ,' ಕಳವು ಮಾಡಬಾರದು. 'ಲೊಗರರ್ಥವ ಕಳುವು ಕಳ್ಳಹಾದರಿಗರ ಕೈಯ ಪೂಜೆಯ ಕೂಡಲಸಂಗಮದೇವನೊಲ್ಲ'. ಪರಧನದಾಸೆ ತೊರೆದು ತೊರೆಯಮಿಂದರೆ ಸಾರ್ಥಕ. 'ಬಟ್ಟೆಯಲ್ಲಿ ಹೊನ್ನು ವಸ್ತ್ರ ಮೊದಲಾದ ಪರದ್ರವ್ಯ ಬಿದ್ದಿದ್ದರೆ ಕೈಮುಟ್ಟಿ ಎತ್ತಿದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ' ಎಂದು ಪ್ರತಿಜ್ಞೆಗೈದು ಲಿಂಗದೇವನಿಕ್ಕಿದ ಭಿಕ್ಷೆಯಲ್ಲಿರಬೇಕು ಶರಣ. ಅದನ್ನು ಬಿಟ್ಟು ಆಳಿಮನದಿಂದ ಪರದ್ರವ್ಯಕ್ಕೆ ಆಸೆಮಾಡಿದರೆ ಅವನಿಗೆ ನರಕ ಬಿಟ್ಟಿದ್ದಲ್ಲ.

ಸ್ವಸ್ತ್ರೀಯಿದ್ದಂತೆ ಪರಸ್ತ್ರೀಗಳುಪ್ಪುವುದು ಪಾತಕ. ಹೋಗಬಿಟ್ಟು ಹಿಂದೆ ಮರಳಿ ನೋಡಿ ಆಗಬೇಕೆಂಬಾಸೆಯುಳ್ಳುದೇ ಪರದ್ವಾರ. ಅದರಿಂದ ನಾಯಕನರಕ. ಪರಸ್ತ್ರೀಯೆಂಬುದು ಕೂಡಲಸಂಗನ ರಾಣೀವಾಸ ಎಂದು ಅರಿತು ನಡೆಯುವವನೆ ನಿಜವಾದ ಶರಣ. ಈಶಭಕ್ತರು ದಾಸಿ–ವೇಶಿಯರ ಸಂಗ ಮಾಡಲಾಗದು. ದಾಸಿ ವೇಶಿಮದ್ದು ಮಾಂಸ ಸುರೆ ಭಂಗಿಹೊಗೆ ಅನ್ಯದೈವ ಭವಿಸಂಗ ಇಷ್ಟುಳ್ಳನ್ನಕ ಅವ ಭಕ್ತನಲ್ಲ; ಜಂಗಮವಲ್ಲ. 'ನಿತ್ಯಲಿಂಗಾರ್ಚನೆ ಮಾಡದೆ ಒಡಲ ಹೊರೆವವ, ಹತ್ತು ನುಡಿದರೆ ಒಂದು ನಿಜವಿಲ್ಲದವ, ಅರ್ಥದಾಸೆಗೆ ಪ್ರಾಣವ ಹತವ ಮಾಡುವವ,ಸತ್ಯಸದ್ಗುರು ನಿತ್ಯಾಚಾರ ಧರ್ಮವಿಲ್ಲವೆಂಬವ, ಭಕ್ತಿಮುಕ್ತಿಯ ಪಥವ ಹುಸಿಯೆಂಬುವ ನಿತ್ಯ ಗುರುಲಿಂಗಜಂಗಮ ಪಾದತೀರ್ಥ ಪ್ರಸಾದ ವಿಲ್ಲವೆಂಬವ, ಪಶುಘಾತಕವ ಮಾಡುವವ ಹೊಲೆಯ, ಹೊಲೆ ಹದಿನೆಂಟು ಜಾತಿ ಎಂಜಲ ಹೇಯವಿಲ್ಲದ ತಿಂಬ ಭವಭಾರಿಗಳಿಗೆ ಶಿವಪ್ರಸಾದ ದೊರಕದು. ದಾಸಿ ವೇಸಿ ಪರಸ್ತ್ರೀ ಸಂಗ ಪಂಚಮಹಾಪಾತಕ. ಇದನ್ನು ಬಿಡದ ಗುರುವಾಗಲಿ, ಚರವಾಗಲಿ, ಭಕ್ತನಾಗಲಿ, ಪತಿತರು. ದಾಸಿಯ ಸಂಗವ ಮಾಡುವ ಪಾಪಿಗೆ ಈಶ್ವರನ ಪೂಜೆ,

ವೇಶಿಯ ಸಂಗ ಮಾಡುವ ದ್ರೋಹಿಗೆ ಶಿವಪ್ರಸಾದ, ಪರಸ್ತ್ರೀಸಂಗವ ಮಾಡುವ ಪಾತಕರಿಗೆ ಪರಬ್ರಹ್ಮದ ಮಾತಿನ ಮಾಲೆ ಸಲ್ಲವು.

೧೧

ಪಂಚಮಹಾಪಾತಕಗಳೆಂಬ ದುರಾಚಾರಗಳ ಬಿಟ್ಟ ಭಕ್ತ ಸದಾಚಾರಗಳಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು. ಸದಾಚಾರ ಸರ್ವರಿಗೂ ಸಮನಾದುದು. 'ಆಚಾರವುಳ್ಳರೆ ಗುರು, ಇಲ್ಲದಿರೆ ನರ. ಆಚಾರವುಳ್ಳರೆ ಲಿಂಗ, ಇಲ್ಲದಿರೆ ಶಿಲೆ. ಆಚಾರವುಳ್ಳರೆ ಜಂಗಮ, ಇಲ್ಲದಿರೆ ವೇಷಧಾರಿ. ಆಚಾರವುಳ್ಳರೆ ಪಾದೋದಕ, ಇಲ್ಲದಿರೆ ನೀರು. ಆಚಾರವುಳ್ಳರೆ, ಪ್ರಸಾದ, ಇಲ್ಲದಿರೆ ಅನ್ನ. ಆಚಾರವುಳ್ಳರೆ ಭಕ್ತ, ಇಲ್ಲದಿರೆ ಭೂತಪ್ರಾಣಿ, ಆಚಾರವುಳ್ಳರೆ ದಾಸೋಹದ ಮನೆ, ಇಲ್ಲದಿರೆ ವೇಶಿಯ ಗುಡಿಸಲು.'

ಭಕ್ತ ಜಂಗಮಕ್ಕೆ ತೆತ್ತ, ಪಗಡೆ, ಚದುರಂಗ, ಜೂಜು, ಕಳವು, ತರ್ಕ, ಕರ್ಕಶ, ಪರಿಹಾಸ, ಸರಸ, ವಿನೋದ, ಕುಚಿತ್ತ, ಕುಹಕ, ಕುಟಿಲ, ಅಟಮಟ, ಸಟೆ, ಸಂಕಲ್ಪ, ಉದಾಸೀನ, ನಿರ್ದಯ, ದಾಕ್ಷಿಣ್ಯ, ದಾಸಿ, ಪರಸತಿ, ಪರಧನ, ಅನ್ಯದೈವ, ಭವಿಸಂಗ ಇವು ಸಲ್ಲವು. ಅಂಗದ ಮೇಲೆ ಲಿಂಗಸಾಹಿತ್ಯವನುಳ್ಳ ಭಕ್ತಾಂಗನೆಯರು ತಮ್ಮ ಲಿಂಗ ಶರೀರಂಗಳ ಮಧ್ಯದಲ್ಲಿ ಪರಭಕ್ತಿಗೆ ಹೊರಗಾದ ಅಸುರಾಸಿಕವಪ್ಪ ಹಸಿರು ಹಚ್ಚೆಗಳೆಂಬ ಪತಿತ ಲೇಖನವಾದಿಯಾದ ಅನ್ಯ ಚಿಹ್ನೆಗಳ ಅಂಕಿತಧಾರಣ ಹಾಕಿಸಿಕೊಳ್ಳಬಾರದು. ಪರದೈವದ ಪಾದಮುದ್ರೆಗಳನೊತ್ತಿದ ತಾಳಿಯು ಸರಗೊಳಿಸಿ ಕೊರಳಲ್ಲಿ ಕಟ್ಟಿಕೊಳ್ಳಬಾರದು. ಗುರುವಾದಡಾಗಲಿ, ಜಂಗಮವಾದಡಾಗಲಿ, ಭಕ್ತನಾದಡಾಗಲಿ ಸತ್ಯ ಸದಾಚಾರ ಸದ್ವರ್ತನೆಯು ತಪ್ಪಿ ನಡೆದವರಿಗೆ ಭಕ್ತಿ ವಿರಕ್ತಿ ಮುಕ್ತಿ ಇಲ್ಲ.

೧೨

ಶರಣನಲ್ಲಿ ಸದಾಚಾರ ನೆಲೆಗೊಂಡ ಮೇಲೆ ಆದಿವ್ಯಾಧಿಯ ತವರು, ಪಾಪದ ಪುಂಜ, ದುಃಖದ ಆಗರವೆನಿಸಿದ, ತೋರಿ ಕೆಡುವ ದೇಹದ ಮೇಲಿನ ಮಮಕಾರ ಮೋಹಗಳನ್ನು ಬಿಡಬೇಕು. 'ನಾಹಂ ಮಮತೆ ಎಂಬ ದೇಹದಿಚ್ಛೆಯ ಬಿಟ್ಟು ಸೋಹಂ ಬ್ರಹ್ಮಾಸಿಯೆಂಬ ಕೇಡಿಲ್ಲದ ಪದವಿಯ ಪಡೆದುಕೊಳ್ಳಬೇಕು.'

ಚಂಚಲವಾದ ಮನಸ್ಸು ಮರ್ಕಟನಂತೆ ನಾನಾದೆಸೆಗೆ ಜಿಗಿದು ನಿಂದಲ್ಲಿ ನಿಲಲೀಯದೆ, ಕುಳಿತಲ್ಲಿ ಕುಳ್ಳಿರಲೀಯದೆ ಅಳಲಿಸಿ ಬಳಲಿಸಿ ಕಾಡುತ್ತದೆ. ಅದರ ವಿಕಾರತೆಯನ್ನು ನಿಲ್ಲಿಸಿದಾಗ ಮಾತ್ರ ನಿತ್ಯತ್ವ ಸಾಧ್ಯ. ಲೋಕಾದಿಲೋಕಗಳೆಲ್ಲ ಪಂಚೇಂದ್ರಿಯಗಳೆಂಬ ಚಕ್ರದಲ್ಲಿ ಸುತ್ತುತ್ತಿವೆ. ಇವುಗಳ ಉಪಟಳವನ್ನು ತಡೆಯಲು ಮನೋ ನಿಗ್ರಹ ಮುಖ್ಯ. ಅಚಲ ಮನದಿಂದ ಇಂದ್ರಿಯಗಳನ್ನು ಹತೋಟಿಯಲ್ಲಿ ತೆಗೆದುಕೊಂಡ ಮೇಲೆ ನಾನು ನನ್ನದು ನನ್ನವರು ತನ್ನವರು ಎಂಬ ಮಾಯೆಯನ್ನು ದೂರಮಾಡಿ, ಸಂಸಾರದ ಮೇಲಿನ ಇಚ್ಛೆಯನ್ನು ತೊರೆಯಬೇಕು. ಸಂಸಾರವೆಂಬ ಸರ್ಪನ ಬಾಯಿಂದ ಬಿಡುಗಡೆ ಹೊಂದ

ಬೇಕು. ಸಂಸಾರದಲ್ಲಿ ಸಿಲುಕಲು ಆಸೆಯೇ ಕಾರಣ. ಪರರಾಸೆಯೆಂಬ ಜ್ವರಹತ್ತಿ ಕಳವಳಿಸುವ ಜೀವನಿಗೆ ನಿರಾಸೆಯೆಂಬ ತಂಪು ನೀರನ್ನೆರೆದು ತೃಪ್ತಿಪಡಿಸಬೇಕು. ಬ್ರಹ್ಮ ವಿಷ್ಣು ಮೊದಲಾದ ದೇವ ದಾನವ ಮಾನವರೆಲ್ಲರೂ ಈ ಆಸೆಯಿಂದಲೇ ಘಾಸಿಗೊಂಡಿದ್ದಾರೆ. ಶರಣರು ಇದಕ್ಕೆ ಸಿಲುಕದ ನಿರಾಶಾ ಸಂಪನ್ನರು. ಆಸೆ ತೊಲಗಿದ ಮೇಲೆ ಸುಖ ದುಃಖ ಎಂಬ ದ್ವಂದ್ವ ಕರ್ಮ ಇಲ್ಲದಂತಾಗುತ್ತದೆ. ಸಂಸಾರ ಹಾಗೂ ವಿಷಯಗಳಿಂದೊದಗುವ ಈ ಸುಖ-ದುಃಖಗಳನ್ನು ಮೀರಿ, ಮೆಟ್ಟಿ ಮುಂದೆ ಸಾಗಿದಾಗ, ಭೂಮಿ ನನ್ನದಲ್ಲ, ಹೇಮ ನನ್ನದಲ್ಲ, ಕಾಮಿನಿ ನನ್ನವಳಲ್ಲ; ಇದು ಜಗಕ್ಕಿಕ್ಕಿದ ವಿಧಿ ಎಂಬ ಅರಿವು ಮೂಡಿ, ಹೆಣ್ಣು ಹೊನ್ನು ಮಣ್ಣೆಂಬ ತ್ರಿಬಂಧಗಳಿಂದ ಬಿಡುಗಡೆ ಹೊಂದಿ, ಗುರುಲಿಂಗಜಂಗಮಕ್ಕೆ ದಾಸೋಹ ಮಾಡಿದೆನೆಂಬ ಜ್ಞಾನರತ್ನವೆ ನನ್ನ ನಿಜವಾದ ಒಡವೆ, ಆ ರತ್ನವನಲಂಕರಿಸಿದವನಿಗಿಂತ ಹೆಚ್ಚಿನ ಸಿರಿವಂತ ಈ ಲೋಕದಲ್ಲಿ ಮತ್ತಾರೂ ಇಲ್ಲ ಎಂದು ತಿಳಿದು, ಆ ಜ್ಞಾನರತ್ನದ ಪ್ರಕಾಶದಲ್ಲಿ ತೊಳಗಿ ಬೆಳಗಬೇಕು.

೧೩

ಜ್ಞಾನಪ್ರಕಾಶದ ಬೆಳಕಿನಲ್ಲಿ ಮುನ್ನಡೆದ ಶರಣ ಈ ಸಂಸಾರ, ಮಾಯೆ, ಭವ ಬಂಧನ, ಸುಖ ದುಃಖಗಳೆಲ್ಲ ಶಿವನು ಒಡ್ಡಿದ ಜಾಲ ಎಂದು ಕಂಡುಕೊಳ್ಳುತ್ತಾನೆ. ಇದು ಯಾರನ್ನೂ ಬಿಟ್ಟಿದ್ದಲ್ಲ. ಮೂರು ಲೋಕದ ದೇವದಾನವಮಾನವರೆಲ್ಲ ಇದರಲ್ಲಿ ಸಿಲುಕಿ ಸಂಕಟಪಡಲೇಬೇಕು. ಅಂಜಿ ಯಾವ ಲೋಕದಲ್ಲಿ ಅಡಗಿದರೂ, ಯಾವ ಜನ್ಮದಲ್ಲಿ ಅವತರಿಸಿದರೂ ಯಾರ ಮೊರೆ ಹೊಕ್ಕರೂ ಬಿಡದೆ ಬೆಂಬತ್ತಿ ಕಾಡುತ್ತದೆ. ಇದರಿಂದ ಬಿಡುಗಡೆ ಹೊಂದಲು ಶಿವನ ನೆನವೊಂದೇ ತಾರಕ ಎಂದು ತಿಳಿಯುತ್ತಾನೆ. ಅದಕ್ಕಾಗಿ ಶರಣ ಜನನ ಮರಣ ಸಂಸಾರ ಬಂಧನಕ್ಕೆ ಹೆದರಿ ಶಿವನಲ್ಲಿ ಮೊರೆಯಿಡುತ್ತಾನೆ. 'ಬಾರದ ಭವಂಗಳಲ್ಲಿ ಬಂದು ನಾನಾ ಸುಖ ದುಃಖಗಳನ್ನು ಉಂಡಿದ್ದೇನೆ. ಇದಕ್ಕೆ ಪುಣ್ಯ ಪಾಪ ಅರಿಯದ ನನ್ನ ಅಜ್ಞಾನವೇ ಕಾರಣ. ಈ ಅಜ್ಞಾನದಿಂದ ಇಲ್ಲಿಯವರೆಗೆ ತಾಳಿದ ಜನನದ ದುಃಖವೇ ಸಾಕು. ಮುಂದಿನ ಜನನದ ಘೋರ ತಾಪಕ್ಕೆ ನನ್ನನ್ನು ಗುರಿ ಮಾಡಬೇಡ' ಎಂದು ಮೊರೆಯಿಡುತ್ತಾನೆ.

೧೪

ಅಜ್ಞಾನದ ಕತ್ತಲೆ ಹರಿದು ಅರಿವಿನ ಬೆಳಕು ಮೂಡಿದಾಗ, ಬಾಹ್ಯ ದೃಷ್ಟಿಗೆ ಕಾಣುವ ವಸ್ತುಗಳೆಲ್ಲ ತೃಣವೆನಿಸುತ್ತವೆ. ನಾವು ಸ್ಥಿರ ಶಾಶ್ವತ ಎಂದು ನಂಬಿದ ಹರೆಯ, ಚೆಲುವು, ಜಾಣ್ಮೆ, ಸಿರಿತನ, ಸಂತೋಷ, ಪದವಿ, ಸತಿ, ಸುತ, ಬಂಧುಬಳಗ, ಕುಲ, ಛಲ, ಕಾಯ ಸುಖ, ರಾಜ್ಯಲಕ್ಷ್ಮಿ, ಧನ-ಕನಕ, ಮನೆ-ಮಾರು-ಇವೆಲ್ಲ ಅಭ್ರಚ್ಛಾಯೆ, ಮರೀಚಿಕಾ ಜಲ, ಮಹೇಂದ್ರ ಜಾಲ, ಇರುಳು ಕಂಡ ಕನಸು ಎಂದು ಗೊತ್ತಾಗುತ್ತದೆ. ಸಾವು ಎಂದಾದರೂ ನಿಶ್ಚಿತ. ಅದು ಸುಳ್ಳೆಂದು ಮೇಲಿನ ವಸ್ತುಗಳೇ ನಿಜವೆಂದು

ನಂಬಿದರೆ ಅವು ವಂಚಿಸಿ ಅನ್ಯರ ಸೇರುತ್ತವೆ. ಅನ್ಯರು ಕದಿಯದ ವಸ್ತುವೆಂದರೆ ಶಿವ ಕಾರುಣ್ಯವೊಂದೆ. ಅದಕ್ಕಾಗಿ ಶರಣ ದೃಷ್ಟನಷ್ಟಗೊಳಿಸಿ ತನಗೆ ಭಕ್ತಿ ಜ್ಞಾನ ವೈರಾಗ್ಯ ವಿತ್ತು ರಕ್ಷಿಸೆಂದು ಶಿವನಲ್ಲಿ ಕೇಳಿಕೊಳ್ಳುತ್ತಾನೆ. ಅನುರಕ್ತಿ ಅಳಿದು, ದೇಹದಿಚ್ಛೆ ಹರಿದು ಪರಮ ವಿರಕ್ತಿಯನಿತ್ತು ಕರುಣಿಸೆಂದು ಬೇಡಿಕೊಳ್ಳುತ್ತಾನೆ.

ಭಕ್ತಿ ಜ್ಞಾನ ವೈರಾಗ್ಯ ಗಟ್ಟಿಗೊಂಡಾಗ ಶಿವನಲ್ಲದೆ ಅನ್ಯದೈವಗಳು ಅವನ ಮನದಲ್ಲಿ ಸುಳಿಯುವುದಿಲ್ಲ. ಈ ಜೀವಿತದ ಅನರ್ಥವನ್ನು ನೀಗಲು ಶಿವನೊಬ್ಬನೆ ಯೋಗ್ಯನೆಂದು ದೃಢವಾಗಿ ನಂಬಿ 'ಶಿವನನ್ನು ಓದದ ಓದು, ಆರಾಧಿಸದ ಮನೆ, ನೋಡದ ಕಣ್ಣು, ಹಾಡದ ಬಾಯಿ, ಹೊಗಳದ ನಾಲಗೆ ವ್ಯರ್ಥ' ಎನ್ನುತ್ತಾನೆ. ಅಲ್ಲ ಎನಿಸಿಕೊಂಡು ಹದ್ದು ಕಾಗೆ ಹಾವು ಗೂಗೆಗಳಂತೆ ಅನಂತ ಕಾಲ ಬದುಕುವುದಕ್ಕಿಂತ ಲೇಸೆನಿಸಿಕೊಂಡು ಶಿವಭಕ್ತನಾಗಿ ಭಕ್ತಿವಿಡಿದು ಒಂದು ದಿನ ಬದುಕಿದರೂ ಸಾಕು ಎಂಬ ನಿರ್ಧಾರಕ್ಕೆ ಬರುತ್ತಾನೆ. ತಾಮಸಶೀಲಸಮಯಾಚಾರ ಕಾಯಕವನ್ನು ತೊರೆದು ಸತ್ ಶೀಲ, ಸದಾಚಾರ, ಸತ್‌ಕಾಯಕದಲ್ಲಿ ನಿರತನಾಗಿ, ಕ್ರಿಯಾ ಜ್ಞಾನ ಸಾಮರಸ್ಯದಿಂದ ನಡೆದು ಶಿವನ ಕಾರುಣ್ಯಕ್ಕೆ ಪಾತ್ರನಾಗಿ ಲಿಂಗಾಂಗ ಸಾಮರಸ್ಯದ ಸಿದ್ಧಿಯನ್ನು ಪಡೆಯುತ್ತಾನೆ.

೧೫

ಇಲ್ಲಿಯವರೆಗೆ ಯಾವ ಯಾವ ಶೀಲ–ಸದಾಚಾರಗಳನ್ನು ಅಳವಡಿಸಿಕೊಂಡರೆ ಶಿವಕಾರುಣ್ಯ–ಲಿಂಗಾಂಗ ಸಾಮರಸ್ಯ ಸಾಧ್ಯ ಎಂಬುದನ್ನು ಕೆಲವು ಸ್ಥಲಗಳಡಿಯಲ್ಲಿ ಹೇಳುತ್ತ ಬಂದ ಸಂಪಾದಕ, ಕೊನೆಯಲ್ಲಿ ಮೇಲೆ ಹೇಳಿದ ಶೀಲವ್ರತ ನೇಮಗಳನ್ನು ತಮ್ಮಲ್ಲಿ ಅಳವಡಿಸಿಕೊಂಡು, ಅವುಗಳನ್ನು ಸ್ವಾನುಭವದಿಂದ ತಿಳಿಸಿದ, ಆ ಶೀಲವ್ರತಗಳಂತೆ ನಡೆಯದವರನ್ನು ಕಟುವಾಗಿ ಟೀಕಿಸಿದ, ಶೀಲಸಂಪನ್ನೆಯರಾದ ಪುರಾತನ ಶರಣೆಯರ–ಶೀಲಕ್ಕೆ ಸಂಬಂಧಿಸಿದ–ವಚನಗಳನ್ನು ಇಲ್ಲಿ ಸಂಗ್ರಹಿಸಿದ್ದಾನೆ. ಹಿಂದೆ ಹೇಳಿದ ಸ್ಥಲಗಳ ವಿಷಯಗಳಿಗೆಲ್ಲ ಇದು ಉಪಸಂಹಾರದಂತಿದೆ.

ಒಟ್ಟಿನಲ್ಲಿ ಗುರುಕಾರುಣ್ಯದಿಂದ ಏಕಲಿಂಗನಿಷ್ಠಾ ಪರನಾಗಿ, ಜಂಗಮ ದಾಸೋಹ ಮಾಡಿ, ಕರ್ಮಯೋಗವ ಕಳೆದು, ಶಿವಯೋಗಮಾರ್ಗ ಹಿಡಿದು, ಪಂಚಾಚಾರಗಳನ್ನು ಅಳವಡಿಸಿಕೊಂಡು, ಭವಿಶೈವದೈವ ಭಜನೆಯ ಬಿಟ್ಟು, ಪಂಚಮಹಾಪಾತಕಗಳ ದೂಡಿ, ಸದಾಚಾರದಲ್ಲಿ ನಿಂದು, ದೇಹ ಮನ ಇಂದ್ರಿಯ ಸಂಸಾರ ನಿರಸನ ಮಾಡಿ, ಮಾಯೆ ಯನ್ನು ಮೀರಿ, ಶಿವಕಾರುಣ್ಯವನ್ನು ಪಡೆಯುವ ಶರಣನ ಸುಜ್ಞಾನದ ನಡೆಯೇ ನಿಜವಾದ ಶೀಲ. ಈ ಶೀಲವನ್ನು ಸಂಪಾದಿಸುವವನೇ ಶಿವನಾಗುತ್ತಾನೆ. ಹೀಗೆ ಶಿವ–ಜೀವರ (ಅಂಗ–ಲಿಂಗ) ಸಾಮರಸ್ಯರಹಸ್ಯವನ್ನು ಸರಳ ಸುಂದರವಾಗಿ ಬೋಧಿಸುವ ಗುರಿಯನ್ನು ಇಟ್ಟುಕೊಂಡು ರಚಿತವಾದ ಕೃತಿಯೇ ಈ 'ಶೀಲಸಂಪಾದನೆ'.

ವಿವಿಧ ವಚನಗಳಲ್ಲಿ ಚೆಲ್ಲವರಿದ ಈ ಶೀಲಗಳನ್ನು ಅಂತರಂಗದ ಶೀಲಗಳು ಮತ್ತು ಬಹಿರಂಗದ ಶೀಲಗಳು ಎಂದೂ, ಮತ್ತೆ ಧಾರ್ಮಿಕ ಶೀಲಗಳು, ಸಾಮಾಜಿಕ ಶೀಲಗಳು ಹಾಗೂ ನೈತಿಕ ಶೀಲಗಳು ಎಂದೂ ವಿಭಾಗಿಸಬಹುದು.

ಒಬ್ಬನೆ ಗುರುವಿನಿಂದ ದೀಕ್ಷೆ-ಉಪದೇಶ ಪಡೆಯುವುದು, ಸಮಶೀಲದವರ ಜೊತೆಗೆ ವ್ಯವಹರಿಸುವುದು, ಜಂಗಮದಾಸೋಹ ಮಾಡುವುದು, ಕರ್ಮಯೋಗವನ್ನು ಬಿಡುವುದು, ಪಂಚಸೂತಕನಿರಸನಮಾಡಿ ಪಂಚಾಚಾರಗಳನ್ನು ಪಾಲಿಸುವುದು, ಸ್ಥಾವರಪೂಜೆಯನ್ನು ಮಾಡದಿರುವುದು, ಇಷ್ಟಲಿಂಗದ ಪೂಜೆಯನ್ನು ಮಾತ್ರ ಮಾಡುವುದು, ಲಿಂಗದೊಡನೆ ಸಹಭೋಜನಮಾಡುವುದು, ಶೈವರ ಜಡಕರ್ಮ ನಿತ್ಯನೇಮಗಳನ್ನು ಅನುಸರಿಸದಿರುವುದು, ಪಂಚಮಹಾಪಾತಕಗಳನ್ನು ಮಾಡದಿರುವುದು, ಸದಾಚಾರವನ್ನು ಅಳವಡಿಸಿಕೊಳ್ಳುವುದು-ಮೊದಲಾದವು ಬಹಿರಂಗದ ಶೀಲಗಳೆನಿಸಿದರೆ, ದೇಹಮೋಹ ತ್ಯಜಿಸುವುದು, ಮನೋವಿಕಾರ ದೂರ ಮಾಡುವುದು, ಇಂದ್ರಿಯಗಳನ್ನು ನಿಗ್ರಹಿಸುವುದು, ಸಂಸಾರದಲ್ಲಿ ನಿರ್ಲಿಪ್ತ ಭಾವ ತಾಳುವುದು, ಸುಖದುಃಖಗಳನ್ನು ಸಮಭಾವದಿಂದ ಕಾಣುವುದು. ಹೆಣ್ಣು ಹೊನ್ನು ಮಣ್ಣು-ಈ ತ್ರಿಬಂಧಗಳ ಆಸೆ ಬಿಡುವುದು, ಮಾಯೆಯನ್ನು ಗೆಲ್ಲುವುದು, ಜನನ ಮರಣ ಭಯ ನೀಗುವುದು, ವೈರಾಗ್ಯ ತಾಳುವುದು, ಅನರ್ಥವಾದ ಜೀವಿತವನ್ನು ಅಲ್ಲಗಳೆಯುವುದು, ತಾಮಸಶೀಲಸಮಾಯಾಚಾರಕಾಯಕ ಮಾಡದಿರುವುದು, ಶಿವಕಾರುಣ್ಯವನ್ನು ಬಯಸುವುದು-ಇವು ಅಂತರಂಗದ ಶೀಲಗಳೆನಿಸುತ್ತವೆ.

ಇವುಗಳಲ್ಲಿ ವೀರಶೈವ ಧರ್ಮಕ್ಕೆ ಅನ್ವಯಿಸುವ ಭಸ್ಮ ರುದ್ರಾಕ್ಷಿ ಧರಿಸಬೇಕು, ಪಂಚಾಕ್ಷರಿ ಪಠಿಸಬೇಕು, ಅನ್ಯ ದೈವ ನಂಬಬಾರದು; ಇಷ್ಟಲಿಂಗವನ್ನು ಮಾತ್ರ ಅರ್ಚಿಸಬೇಕು ಜಂಗಮದಾಸೋಹ ಮಾಡಬೇಕು, ಇಷ್ಟಲಿಂಗ ಧರಿಸಿದವರು ಅನ್ಯ ಲಾಂಛನ ಧರಿಸಬಾರದು. ಹಸಿರು, ಹಚ್ಚೆ ಇತ್ಯಾದಿ ಪತಿತ ಲೇಖನಗಳನ್ನು ಹಾಕಿಸಿಕೊಳ್ಳಬಾರದು, ಶೈವರು ಮಾಡುವ ಜಡಕರ್ಮಗಳನ್ನು ಮಾಡಬಾರದು-ಮೊದಲಾದವು ಧಾರ್ಮಿಕ ಶೀಲಗಳೆನಿಸಿದರೆ, ಕಳವು, ಹುಸಿ, ಹಿಂಸೆ, ವೇಶ್ಯಾಗಮನ, ಪರದ್ವಾರ ಮೊದಲಾದವುಗಳನ್ನು ಮಾಡಬಾರದು; ಸಜ್ಜನರ ಸಂಗ ಮಾಡಬೇಕು, ಸುಖ ದುಃಖಗಳನ್ನು ಸಮನಾಗಿ ಕಾಣಬೇಕು. ಕುಲಗೋತ್ರ ಜಾತಿಭೇದ ಕಲ್ಪಿಸಬಾರದು, ಸದಾಚಾರದಲ್ಲಿ ನಡೆಯಬೇಕು, ಸತ್ಯಶುದ್ಧ ಕಾಯಕದಿಂದ ಬಂದುದನ್ನು ಮಾತ್ರ ಸ್ವೀಕರಿಸಬೇಕು, ನಡೆ-ನುಡಿ ಸಾಮರಸ್ಯ ಸಾಧಿಸಬೇಕು-ಮೊದಲಾದವು ಸಾಮಾಜಿಕ, ನೈತಿಕಶೀಲಗಳೆಂದು ಗಣಿಸಲ್ಪಡುತ್ತವೆ.

ಈ ಶೀಲಗಳಲ್ಲಿ ಸತ್ಯ ನಿಷ್ಠೆ, ಸದಾಚಾರ ಶ್ರದ್ಧೆ, ಅಂತರಂಗದ ನಿರೀಕ್ಷಣೆ, ಅಂಧಶ್ರದ್ಧೆಯ ಉಚ್ಚಾಟನೆ ಎದ್ದು ಕಾಣುವ ಅಂಶಗಳಾಗಿವೆ. ಕಾರಣ ಇವು ಕೇವಲ ವೀರಶೈವರಿಗಷ್ಟೇ ಅಲ್ಲ, ಇಡೀ ಮಾನವಜನಾಂಗದ ಸುಖಜೀವನಕ್ಕೆ, ನೆಮ್ಮದಿಯ ಬಾಳಿಗೆ ಮಾರ್ಗದರ್ಶಕ ಸೂತ್ರಗಳೆನಿಸಿವೆ. ಮಾನವನ ಧಾರ್ಮಿಕ-ಸಾಮಾಜಿಕ-ನೈತಿಕ ಜೀವನವನ್ನು

ಎತ್ತರಿಸುವ, ಶುದ್ಧಗೊಳಿಸುವ ಸಂಜೀವಿನಿಗಳಾಗಿವೆ. ವ್ಯಕ್ತಿ, ಸಮಾಜ, ರಾಷ್ಟ್ರದ ಸರ್ವಾಂಗೀಣ ಪ್ರಗತಿಗೆ ಪೂರಕವಾಗಿವೆ. ನೈತಿಕ ಅಧಃಪತನ, ಸಾಮಾಜಿಕ ಅಸಮಾನತೆ, ಧಾರ್ಮಿಕ ಗೊಡ್ಡು ಸಂಪ್ರದಾಯಗಳಿಂದ ತುಂಬಿದ ಇಂದಿನ ವಿಷಮ ಸಂದರ್ಭದಲ್ಲಿ ಶರಣರ ಈ ಶೀಲವಿಚಾರಗಳು ಅತ್ಯಂತ ಪ್ರಸ್ತುತವೆನಿಸುತ್ತವೆ. ಇವುಗಳನ್ನು ಅಳವಡಿಸಿಕೊಂಡು ಅನುಸರಿಸುವುದು ಇಂದಿನ ಮಾನವರ ಅತಿ ಅವಶ್ಯವಾದ ಕರ್ತವ್ಯಗಳಲ್ಲಿ ಒಂದಾಗಿದೆ.

●

# ಜೈನಧರ್ಮ ಮತ್ತು ವೀರಶೈವಧರ್ಮ– ಒಂದು ಸಾಂಕಲ್ಪಿಕ ಅಧ್ಯಯನ

—ಡಾ. ಟಿ. ಜಿ. ಕಲಘಟಗಿ

ಸುಮಾರು ಶತಮಾನಗಳಿಂದಲೂ ಜೈನಧರ್ಮ ಮತ್ತು ವೀರಶೈವಧರ್ಮಗಳು ಕರ್ನಾಟಕದಲ್ಲಿ ಸಾಂಸ್ಕೃತಿಕ ಬಲವನ್ನು ಹೊಂದಿದ್ದವು. ಅವು ಕರ್ನಾಟಕದ ಜನರ ಧ್ಯೇಯ ಗಳನ್ನು ಒಳಗೊಂಡಿದ್ದವು ಮತ್ತು ಜೀವನ ದಾರಿಗೆ ಒಕ್ಕಟ್ಟನ್ನು ಮತ್ತು ಪ್ರತ್ಯೇಕತೆಯನ್ನು ಕೊಟ್ಟಿದ್ದವು. ನಾನು ಈ ಪ್ರಬಂಧದಲ್ಲಿ ಎರಡೂ ಧರ್ಮಗಳ ಆಳವಾದ ವಿಚಾರವನ್ನು ಮಂಡಿಸಲು ಇಚ್ಛಿಸುತ್ತೇನೆ.

ಜೈನಧರ್ಮ ಪುರಾತನ ಧರ್ಮ. ಇದು ಅಂತಿಮ ಧರ್ಮಗುರುಗಳಾದ ವರ್ಧಮಾನ ಮತ್ತು ಪಾರ್ಶ್ವನಾಥರ ಪೂರ್ವದಲ್ಲಿಯೇ ಭಾರತದಲ್ಲಿ ಪ್ರಚಲಿತವಿತ್ತು.[೧] ಜೈನ ಸಂಪ್ರ ದಾಯದ ನಂಬಿಕೆ ಏನೆಂದರೆ, ಜೈನ ಧರ್ಮವು ಸನಾತನವಾದದ್ದು ಮತ್ತು ಪ್ರತಿಯೊಂದು ಯುಗದಲ್ಲಿ ಇದು ಧರ್ಮಗುರುಗಳಿಂದ ಉಪದೇಶಿಸಲ್ಪಡುತ್ತದೆ. ಪ್ರಥಮ ತೀರ್ಥಂಕರ ನೆಂದು ಕರೆಯಲ್ಪಡುವ ವೃಷಭನು ಈ ಯುಗದಲ್ಲಿ ಪ್ರಪ್ರಥಮವಾಗಿ ಉಪದೇಶಿಸಿದನು. ಇವನ ನಂತರ ೨೩ ತೀರ್ಥಂಕರರು ಮತ್ತು ಕೊನೆಯವನು ಹಾಗೂ ೨೪ನೆಯ ತೀರ್ಥಂಕರ ನಾದ ಮಹಾವೀರನು ಆಗಿಹೋದನು.

ವೀರಶೈವ ಧರ್ಮವು ಶೈವಸಂಸ್ಕೃತಿಗೆ ಸೇರಿದ ಮತ್ತು ಅದಕ್ಕೆ ಸಮಾನವಾದ ಪ್ರಾಚೀನ ಧರ್ಮವೆಂಬ ನಂಬಿಕೆ ಇತ್ತು. ಇದು ಶೈವ ವಿಚಾರ ಧಾರೆಗೆ ಸೇರಿದ ಒಂದು ಪ್ರಕಾರದ ಶೈವಧರ್ಮ. ಇದು ಶಕ್ತಿ ವಿಶಿಷ್ಟಾದ್ವೈತವೆಂದು ಕರೆಯಲ್ಪಡುತ್ತದೆ.

ವೀರಶೈವ ತತ್ವಜ್ಞಾನಿಗಳು ಹೇಳಿದ ಪ್ರಕಾರ ಶಿವಯೋಗದ ಮತ್ತು ಜೈನಯೋಗದ ತುಲನಾತ್ಮಕ ಟಿಪ್ಪಣಿಯನ್ನು ನಾನು ಇಲ್ಲಿ ಸೇರಿಸಿದ್ದೇನೆ. ಈ ಅಧ್ಯಯನದ ಮುಖ್ಯ ಉದ್ದೇಶ. ಪೂರ್ಣತೆಯ ಮಾರ್ಗದ ಸಾರಾಂಶವನ್ನು ಮತ್ತು ಅನೇಕಾಂತವು ಈ ತತ್ವಕ್ಕೆ ಹೇಗೆ ಅನ್ವಯಿಸುತ್ತದೆ ಎಂಬುದನ್ನು ತಿಳಿಯುವುದು.

ನಾಗರಿಕತೆ ಮುಂದುವರೆದಂತೆ, ಜನರ ವಿಚಾರ ಮತ್ತು ಕ್ರಿಯೆಗಳಲ್ಲಿ ಕ್ರಮವಾಗಿ ಬದಲಾವಣೆಯಾಗುತ್ತಾ ಹೋಯಿತು. ನಾಗರಿಕತೆಯ ಪೂರ್ವದಲ್ಲಿ ಜನರ ಜೀವನಕ್ರಮ ಸರಳವಿತ್ತು ಮತ್ತು ಕೆಲವೇ ಜನರೊಡನೆ ಸಂಪರ್ಕಿಸುವ ಪ್ರತಿಬಂಧನೆಯಿತ್ತು. ಆಗಿನ

---

೧ ಎಸ್. ರಾಧಾಕೃಷ್ಣನ್ ಇಂಡಿಯನ್ ಫಿಲಾಸಫಿ Vol I ೯೪ಳಲ

ವಾತಾವರಣ ಸಣ್ಣದಾಗಿತ್ತು ಮತ್ತು ಅವಶ್ಯಕ ವಸ್ತುಗಳೂ ಸಹ ಬಡಕಲಾಗಿದ್ದವು. ಹೊರಗಿನ ವಾತಾವರಣದಿಂದ ಮನಸ್ಸು ಹಿಂದೆಗೆಯಲ್ಪಟ್ಟು ಅವರ ಜೀವನದ ನೆಲೆ ಸಂಕುಚಿತಗೊಂಡಿತ್ತು. ಮಾನಸಿಕ ಶಾಂತಿಯನ್ನು ಪಡೆಯಲು ಯೋಗವು ಒಂದು ಸಾಧನೆಯಾಗಿತ್ತು. ಆದರೆ ನಾಗರಿಕತೆ ಮುಂದುವರೆದಂತೆ ಜನಜೀವನ ಸಂಕೀರ್ಣಗೊಂಡಿತು ಮತ್ತು ಮಾನವನು ಹೊರಗಿನ ಚಟುವಟಿಕೆಗಳಲ್ಲಿಯೇ ಲೀನನಾದನು. ಜೀವನ ಸರಳ ಮತ್ತು ಅಲ್ಪ ಸಮಸ್ಯೆಗಳು ಇದ್ದ ನಾಗರಿಕತೆಯು ಪೂರ್ವದಲ್ಲಿರುವಂತೆ ಅವನಿಗೆ ಶಾರೀರಿಕ ಮತ್ತು ಮಾನಸಿಕ ಶಾಂತಿಯನ್ನು ಪಡೆಯಲು ತೊಂದರೆಯಾಗತೊಡಗಿತು. ಸಂಕೀರ್ಣಗೊಂಡ ಸಮಾಜದ ಸ್ವರೂಪವನ್ನು ತಿಳಿಯುವ ಆತ್ಮಸಾಧನೆಯು ಹೊಸ ಮಾರ್ಗಗಳು ಹುಡುಕಲ್ಪಟ್ಟವು. ಇದು ಆತ್ಮನನ್ನು ತಿಳಿದುಕೊಳ್ಳುವ ಭಕ್ತಿ ಮಾರ್ಗಕ್ಕೆ (ಭಕ್ತಿಯೋಗ) ಪ್ರಾಮುಖ್ಯತೆಯನ್ನು ಕೊಟ್ಟಿತು. ಭಕ್ತಿಮಾರ್ಗವನ್ನು ಪುನರುಜ್ಜೀವನಗೊಳಿಸುವ ಉದ್ದೇಶ, ಶುದ್ಧತೆ ಮತ್ತು ಪ್ರೀತಿಯನ್ನು ತಿಳಿಯುವುದು, ಉನ್ನತದಲ್ಲಿ ಲೀನವಾಗುವುದು ಇವು ಆತ್ಮನನ್ನು ಉದ್ಧಾರಗೊಳಿಸುವ ಮುಖ್ಯ ಮೆಟ್ಟಿಲುಗಳಾಗಿವೆ. ವೀರಶೈವ ಸಾಧುಗಳಿಂದ ಉಪದೇಶಿಸಲ್ಪಟ್ಟ ಭಕ್ತಿಯೋಗವು ಶಿವಯೋಗದಲ್ಲಿ ಸಮಾವೇಶಗೊಳ್ಳುತ್ತದೆ. ಶಿವಯೋಗದ ಎರಡನೆಯ ತತ್ವ 'ಶಕ್ತಿ'. ಕೆಲ ವಿದ್ವಾಂಸರ ಸಲಹೆಯಂತೆ ಯೋಗದ ಮೂಲವು 'ಹಿರಣ್ಯಗರ್ಭ' ಮತ್ತು 'ರುದ್ರ'ದಲ್ಲಿದೆ.೧

ವೀರಶೈವರ ಅಂತಿಮ ಗುರಿ ಜೀವನದ ಬಂಧನಗಳಿಂದ ಮುಕ್ತಗೊಳ್ಳುವುದು. ಇದು ಐಕ್ಯವೆಂದು ವರ್ಣಿಸಲ್ಪಡುವ ಅಂತಿಮದಲ್ಲಿ ಕೂಡಿಕೊಳ್ಳುವುದು. ಈ ಅಂತಿಮವನ್ನು ತಿಳಿಯುವುದು ಆತ್ಮನನ್ನು ಗೆಲ್ಲುವುದು ಮತ್ತು ಆತ್ಮನನ್ನು ದೇವರಲ್ಲಿ ಲೀನಗೊಳಿಸುವುದರಿಂದ ಸಾಧ್ಯವಿದೆ. ಇದುವೇ ಶಿವತ್ವ. ಅಂತಿಮವನ್ನು ತಲುಪುವುದು ಕೇವಲ ಜೀವನದ ಆಗುಹೋಗುಗಳನ್ನು ತ್ಯಾಗ ಮಾಡುವುದರಿಂದಾಗಲೀ ಅಥವಾ ದಾಟುವುದರಿಂದಾಗಲೀ ಸಾಧ್ಯವಿಲ್ಲ. ಆದರೆ ಮಾನವೀಯತೆಯನ್ನು ತಿಳಿದು, ಪ್ರಾಪಂಚಿಕವನ್ನು ಆಧ್ಯಾತ್ಮಿಕಗೊಳಿಸುವುದರಿಂದ ಸಾಧ್ಯವಿದೆ.೨ ಈ ಒಂದು ಕೊನೆಯನ್ನು ತಿಳಿಯುವುದರ ಮಾರ್ಗ ಮಾನವೀಯತೆಯನ್ನು ಆಧ್ಯಾತ್ಮಿಕಗೊಳಿಸುವುದರ, ಮತ್ತು ಉನ್ನತದಲ್ಲಿ ಭಕ್ತಿಯನ್ನಿಡುವುದರ ಮುಖಾಂತರವಾಗುತ್ತದೆ. ಇದು ವಿಶಿಷ್ಟ ರೀತಿಯ ಯೋಗವೆಂದು ಕರೆಯುವ ಶಿವಯೋಗದ ಮುಖಾಂತರ ಸಾಧಿಸಲ್ಪಡುತ್ತದೆ.

ಯೋಗವು ಸಾಧನೆಯಿಂದ ಗುರುತಿಸಲ್ಪಡುತ್ತದೆ. ಬೇರೆ ಬೇರೆ ಸಂಪ್ರದಾಯದ

---

೧ ವೀರಶೈವ ತ್ರೈಮಾಸಿಕ ಪತ್ರಿಕೆ, ಆಲ್ ಇಂಡಿಯ ವೀರಶೈವ ಮಹಾಸಭಾ ಧಾರವಾಡ

೨ ಶ್ರೀ ಕುಮಾರಸ್ವಾಮಿ, ನವಕಲ್ಯಾಣಮಠ, ಧಾರವಾಡ ವೀರಶೈವ ಫಿಲಾಸಫಿ ಆ್ಯಂಡ ಮಿಸ್ಟಿಸಿಸಮ್

ವಿಚಾರಗಳ ವಿಧಾನಗಳು ಬೇರೆ ಬೇರೆಯಾಗಿ ಗುರುತಿಸಲ್ಪಟ್ಟಿವೆ. ವೀರಶೈವ ತತ್ವಜ್ಞಾನಿಗಳು ಯೋಗದ ಬೇರೆ ರೀತಿಗಳನ್ನು ತಮ್ಮದೇ ಆದ ಮಾರ್ಗದಲ್ಲಿ ಗುರುತಿಸುತ್ತಾರೆ. ಆದರೆ ಶಿವಯೋಗ ಪ್ರತ್ಯೇಕವಾದ ಲಕ್ಷಣಗಳನ್ನು ಹೊಂದಿದೆ. ಯಾವುವು ಆತ್ಮಸಾಧನೆಯ ಮಾರ್ಗವನ್ನು ಸುಗಮವಾಗಿ ಮಾಡುತ್ತವೆಯೋ. ಆತ್ಮಸಿದ್ಧಿಯು–ಆತ್ಮಜಯ (ಶರಣ) ಮತ್ತು ಶ್ರದ್ಧೆ (ಭಕ್ತಿ) ಯನ್ನು ಅವಲಂಬಿಸಿದೆ. ಇವೆರಡೂ ಸೇರಿ ಆತ್ಮಸಿದ್ಧಿಗೆ ಹೆಚ್ಚಿನ ಪುಷ್ಟಿಯನ್ನು ಕೊಡುತ್ತವೆ. (ಶಕ್ತಿ). ಇದು ಶಿಸ್ತು ಮತ್ತು ಶ್ರದ್ಧೆಯ ಸಂಯೋಗವನ್ನು ಒತ್ತಿಹೇಳುತ್ತದೆ. ಸರ್ಪಭೂಷಣ ಶಿವಯೋಗಿಯು ತಮ್ಮ ಕೈವಲ್ಯಕಲ್ಪವಲ್ಲರಿ ಪದ್ಯದಲ್ಲಿ ನಾಲ್ಕು ಪ್ರಕಾರದ ಯೋಗಗಳನ್ನು ಅವುಗಳ ಸ್ವಾಭಾವಿಕ (ಅಂತರ್ಗತ) ಅವಗುಣಗಳನ್ನು ತೋರಿಸುತ್ತಾ ಈ ರೀತಿ ಹೇಳುತ್ತಾರೆ.೪

ಹಠಯೋಗದಿಂದ ಶಾರೀರಿಕ ಮತ್ತು ಮಾನಸಿಕ ಕ್ರಿಯೆಗಳನ್ನು ಹಿಡಿತದಲ್ಲಿಟ್ಟುಕೊಂಡು ಅತೀಸಾಮಾನ್ಯ ಶಕ್ತಿಯನ್ನು ಪಡೆಯಲು ಸಾಧ್ಯವಾಗುತ್ತದೆ. ಆದರೆ ಇದು ಧಾರ್ಮಿಕ ಮುನ್ನಡೆಗೆ ಎಡೆಕೊಡುವದಿಲ್ಲ. ಅಲ್ಲಮಪ್ರಭು ತನ್ನ 'ಗೋರಕ್ಷ'ದಲ್ಲಿ ಉಪದೇಶಿಸಿದಂತೆ, ಶಾರೀರಿಕ ಮತ್ತು ಮಾನಸಿಕ ಡೊಂಬರಾಟವನ್ನು ತ್ಯಜಿಸಲು ಎಚ್ಚರಿಸುತ್ತಾನೆ. ಯಾವುವು ಮಾನವನ ಕ್ರಿಯೆಗಳನ್ನು ಮಂಕುಗೊಳಿಸುತ್ತವೆಯೋ ಮತ್ತು ಧಾರ್ಮಿಕ ಮುನ್ನಡೆಗೆ ದಾರಿಯನ್ನು ಮಾಡಿಕೊಡುವದಿಲ್ಲವೋ, ಹಠಯೋಗವು ತನ್ನ ಮೌಢ್ಯವನ್ನು ತಿಳಿಹೇಳುವದಿಲ್ಲ. ಯಾವ ರೀತಿ ಕುರುಡನು ತನ್ನ ಪ್ರತಿಬಿಂಬವನ್ನು ಕನ್ನಡಿಯಲ್ಲಿ ನೋಡುವದಿಲ್ಲವೋ ಹಾಗೆ.೫

ಮಂತ್ರಯೋಗದ ಆಚರಣೆಯಲ್ಲಿರುವವರಿಗೂ ಇದೇ ರೀತಿ ಹೇಳಿದೆ. ಯಾರು ಮಂತ್ರ ಯೋಗವನ್ನು "ಓಂ, ಓಂ, ನಮಃ ಶಿವಾಯ" ಇತ್ಯಾದಿ ಮಂತ್ರಗಳನ್ನು ಪಠಿಸುತ್ತ ದಿನದ ನಿಶ್ಚಿತ ವೇಳೆಯಲ್ಲಿ ಆಸನಗಳನ್ನು ಹಾಕುತ್ತ ರೂಢಿಯಲ್ಲಿಟ್ಟಿರುತ್ತಾರೆ. ಆದರೆ ಇದು ಧಾರ್ಮಿಕ ಪ್ರಗತಿಯನ್ನು ಮಾಡದೇ ಮನಸಿನ ಯಾಂತ್ರಿಕ ಕ್ರಿಯೆಗಳನ್ನು ಬೆಳವಣಿಗೆ ಮಾಡುತ್ತದೆ.೬ ಲಯಯೋಗದಲ್ಲಿ, ಯಾವನು ದೇವರ ಮೂರ್ತಿಯ ಮೇಲೆ ಮನಸ್ಸನ್ನು

೪ ಶ್ರೀ ಸರ್ಪಭೂಷಣ ಶಿವಯೋಗಿ. ಕೈವಲ್ಯಕಲ್ಪ ವಲ್ಲರಿ III ಯೋಗಪ್ರಸ್ಥಾನ.

೫ ಚಾಮರಸನ ಪ್ರಭುಲಿಂಗಲೀಲೆ Ed. ಬಸವನು, ಗೋರಕ್ಷನ ಗತಿ ೧೯ ಶ್ಲೋಕ ೨೦ (ಕನ್ನಡ) "ತನ್ನನರಿಯದ ಮಂದ ಮತಿಗಳಿಗಿನ್ನು ಪೆರಂತಸ್ಥವೆಂಬುದು ಕಣ್ಣು ಕಾಣದ ಕುರುಡ ಕಣ್ಣದಿವಿದಿದತೆರನಂತೆ."

೬ ಗತಿ ೧೯ ಶ್ಲೋಕ ೨೦ "ನೋಹದಲಿ ಮಾಯಪ್ರಪಂಚಿನ ದೇಹ ಸ್ಥಿತಿಯ ಪಡೆದೆನೆಂಬಿ ಗರ್ವದಿಂದಲಿ ವರ್ಜಿ ಪಿಂಡ ಶರೀರ ಫಲಿಸಿದೊಡೆ ಊಹಿಸುವುದು ಪುಲಯಾನು ಸಂದೇಹವಿಲ್ಲದೇ ಗೆಲುವೆಯೋ ಸುಡುದೇಹ ಸಿದ್ಧಿಯಸೆನುತಲು ಪ್ರಭು ಕಂಡೆಯವಾ ಬಿಸುಟು."

ಕೇಂದ್ರೀಕರಿಸಿ ಯಾವುದೇ ಶಾರೀರಿಕ ಗತಿಯಿಂದ, ಯಾವುದೇ ವಸ್ತುವಿನ ಮೇಲೆ ಮನಸ್ಸನ್ನು ಕೇಂದ್ರೀಕರಿಸುತ್ತಾನೋ ಅದೇ ಲಯಯೋಗ. ಇದು ಮೂರು ಪ್ರಕಾರ ವಾಗಿದೆ. ಇಡಾ, ಪಿಂಗಳಾ ಮತ್ತು ನಾಡಿ[೭] ಇದು ಜೈನರ ಅರ್ಥ–ಧ್ಯಾನವನ್ನು ಹೋಲುವ ಕೀಳುದರ್ಜೆಯ ಚಿತ್ತೈಕಾಗ್ರತೆ. ಆದರೆ ಈ ರೀತಿಯ ಯೋಗ ಮತ್ತು ಚಿತ್ತೈಕಾಗ್ರತೆ ಆತ್ಮಸಿದ್ಧಿಯನ್ನು ಬೆಳೆಸಿಕೊಳ್ಳಲು ಸಹಾಯಕವಾಗುವದಿಲ್ಲ.[೮] ಅಲ್ಲಮ ಪ್ರಭು ಅಡವಿಯಲ್ಲಿರುವ ಸನ್ಯಾಸಿಗಳಿಗೆ, ಸ್ವವನ್ನು ನೋಯಿಸುವ ಚಿತ್ತಾಕರ್ಷಕ ಆಚರಣೆ ಗಳನ್ನು ಮಾಡದಂತೆ ಎಚ್ಚರಿಸಿದ್ದಾನೆ.[೯]

ಪತಂಜಲಿಯ ಯೋಗವು ರಾಜಯೋಗವೆಂದು ಮನ್ನಿಸಲ್ಪಡುತ್ತದೆ. ಈ ಯೋಗದ ಪ್ರಕಾರ ಆತ್ಮಸಿದ್ಧಿಯು ಮನಸ್ಸಿನ ಬಾಹ್ಯ ಕ್ರಿಯೆಗಳಿಂದ ಆಗದೇ ಮಾನಸಿಕ ಕ್ರಿಯೆಗಳನ್ನು ಒತ್ತಿಡುವದರಿಂದ ಆಗುತ್ತದೆ. ಮನಸ್ಸಿನ ಎಲ್ಲ ಸ್ಥಿತಿಗಳನ್ನು ಮತ್ತು ಸಂದರ್ಭಗಳನ್ನು ಹಿಡಿದಿಡುವದರಿಂದ ಎಲ್ಲ ಅಡೆತಡೆಗಳು ತೆಗೆದುಹಾಕಲ್ಪಡುತ್ತವೆ. ಪತಂಜಲಿಯು ಸಾರಿ ಹೇಳುವ ಎಂಟುಪ್ರಕಾರದ ಯೋಗವು ಸಮಾಧಿಯ ಕೊನೆಯ ಹಂತವನ್ನು ತಲುಪುವ ಸಾಧನೆಗಳಾಗಿವೆ. ಇದು ಮಾನಸಿಕ ಹಿಡಿತವನ್ನು ಬೆಳವಣಿಗೆಗೊಳಿಸುತ್ತದೆ. ಪತಂಜಲಿಯ ಯೋಗದ ಪ್ರಕಾರ ಮತ್ತು ಜೈನರ ಯೋಗದ ಪ್ರಕಾರ ಶಾರೀರಿಕ ಆರೋಗ್ಯವು ಜೀವದ ಅಂತಿಮವಲ್ಲ ಆದರೆ ಇದು ಅವಶ್ಯಕ ಗುಣ ಮತ್ತು ಅಂತಿಮಕ್ಕೆ ಇದು ಒಂದು ಮಾರ್ಗ ವಾಗಿದೆ. ಆಧ್ಯಾತ್ಮಿಕ ಶಕ್ತಿಯನ್ನು ದೇವರಂತೆ ಜಯಿಸಿಕೊಳ್ಳುವುದೂ ಸಹ ಚಿತ್ತೈಕಾಗ್ರ ತೆಯು ಉಪಯುಕ್ತ ಹಂತವಾಗಿದೆ. ಆದರೆ ಇದರಲ್ಲಿಯೇ ಕೊನೆಯಿಲ್ಲ. ದೇವರ ಭಾವನೆ ಪತಂಜಲಿಗೆ ಉಪಯುಕ್ತ ಸಿದ್ಧಾಂತವಾಗಿದೆ.[೧೦]

---

೭ ಜ್ಞಾನಜ್ಯೋತಿ Ed, ಶ್ರೀ ಶಾಂತಲಿಂಗಸ್ವಾಮಿ ಮತ್ತು ಪ್ರೊ. ಬಿ ಸಿ. ಜವಳಿ (೧೯೬೩) ಪು. ೨೪ ಯೋಗ ಮತ್ತು ಶಿವಯೋಗ (ಕನ್ನಡ) ಮತ್ತು ಶ್ರೀ ಚನ್ನಸದಾಶಿವಯೋಗೀಂದ್ರ, ಶಿವಯೋಗ ಪ್ರದೀಪಿಕೆ–ವೀರಶೈವ ಗ್ರಂಥ ಪ್ರಕಾಶಿಕೆ ನಂ. ೯ (೧೯೧೩) ಪುಟ ೧೪ ವಿಮರ್ಶೆ.

೮ ಕೈವಲ್ಯ ಕಲ್ಪವಲ್ಲರಿ ಸರ್ಪಭೂಷಣ ಶಿವಯೋಗಿ ೧೨. ಯೋಗಪ್ರತಿಪಾದನಾ ಸ್ಥಲಾಪಲ್ಲವಿ.

೯ ಪ್ರಭುಲಿಂಗಲೀಲೆ ಅಲ್ಲಮಪ್ರಭು, ಗತಿ ೨೦–೩೨ ಪದ್ಯಾನುವಾದ ಪ್ರೊ. ಬಿ. ಸಿ. ಜವಳಿ ಮತ್ತು ಮಲಾಬಾದಿ (೧೯೬೨) "ಸ್ನಾನ-ಜಪ, ತಪ, ಧ್ಯಾನ, ವೇದಾಧ್ಯಯನ ಏನು ಮಾಡಿದೊಡೆನು? ನುದ ತೊರೆದು ಕದ ಹೊಕ್ಕು ಫಲ ವೇನು? ಸುಡಲಿ ನಿಮ್ಮ ಕರ್ಮವ." ಶಿವಯೋಗ ದರ್ಪಣ (ಕನ್ನಡ), ಸದ್ಧರ್ಮಗ್ರಂಥಮಾಲಾ ೧೪ (೧೯೩೩) ೯–೧೨ ಪು. ೩–೫.

೧೦ ಸ್ಟಾಕರ (ಗೆರಾಲ್ಡಿನ್) ಯೋಗ ಆ್ಯಂಡ ವೆಸ್ಟರ್ನ ಸೈಕಾಲಜಿ ಪು. ೮೨.

ಶಿವಯೋಗವು ಇದುವರೆಗೆ ವರ್ಣಿಸಿದ ನಾಲ್ಕು ಪ್ರಕಾರದ ಯೋಗಕ್ಕಿಂತ ಬೇರೆಯಾಗಿದೆ. ಶಿವಯೋಗದ ಪ್ರಧಾನ ತತ್ವಗಳು ಇಂತಿವೆ—

೧. ಶ್ರೇಷ್ಠಜೀವಿಗಳಾದ ದೇವರಲ್ಲಿ ನಂಬಿಕೆ ಇಡುವುದು ಮತ್ತು ಉನ್ನತದಲ್ಲಿ ಕೂಡಿಕೊಳ್ಳುವುದು (ಐಕ್ಯ) ಮಾನವನ ಅಂತಿಮ ಧ್ಯೇಯ.

೨. ಶ್ರದ್ಧೆ ಮತ್ತು ಉನ್ನತ ಆತ್ಮವನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಮುಖವಾದ ಮಾರ್ಗವೆ ಭಕ್ತಿಯ ಕೊನೆ. ನಾವು ಇಲ್ಲಿ ಶರಣನನ್ನೇ ಆತ್ಮ ಸ್ವಾಧೀನನೆಂದು ಅರ್ಥೈಸಿದ್ದೇವೆ.

೩. ಶಕ್ತಿ (ಮಾನಸಿಕ ಮತ್ತು ಅಧ್ಯಾತ್ಮಿಕ) ಯು ಅಂತಿಮಗುರಿಯನ್ನು ತೋರಿಸುತ್ತದೆ. ಮೊದಲೇ ಹೇಳಿದಂತೆ ಶಿವಯೋಗ, ಶ್ರದ್ಧೆ ಮತ್ತು ಕ್ರಿಯಾವೃತ್ತಿಯ ಸಂಯೋಗವಾಗಿದೆ. ಇವು ಆತ್ಮಸಿದ್ಧಿಗೆ ಪ್ರಯತ್ನಿಸುವ ವಸ್ತುಗಳಾಗಿವೆ.

೪. ಪತಂಜಲಿಯ ಅಷ್ಟಾಂಗಯೋಗವು ವಿಸ್ತಾರವಾಗಿದೆ. ಇದರ ಅಂತಿಮ ಘಟ್ಟ ಐಕ್ಯಸ್ಥಲ. ಇದು ಭಕ್ತನಿಂದ ಕೈಗೂಡಿಸಲ್ಪಡುತ್ತದೆ. ಈ ಗುರಿಯನ್ನು ತಲುಪಲು ಶಾರೀರಿಕ ಮತ್ತು ಮಾನಸಿಕ ಶಿಸ್ತನ್ನು ವಿಶಾಲವಾಗಿ ಆಚರಿಸಬೇಕಾಗುತ್ತದೆ.

ಶಿವಯೋಗದ ಮೊದಲನೆಯ ತತ್ವ ದೇವರ ಅಸ್ತಿತ್ವದಲ್ಲಿ ಶ್ರದ್ಧೆಯನ್ನಿಡುವುದು ಮತ್ತು ಅಂತಿಮಗುರಿ ದೇವರಲ್ಲಿ ಕೂಡಿಕೊಳ್ಳುವುದು (ಐಕ್ಯ) ಪತಂಜಲಿಯ ಯೋಗದ ಪ್ರಕಾರ, ಅಂತಿಮ ಗುರಿ ಆತ್ಮನನ್ನು ಪ್ರಕೃತಿಯ ಬಂಧನಗಳಿಂದ ಮುಕ್ತಗೊಳಿಸುವದಾಗಿದೆ. ಸಾಂಖ್ಯರ ಪ್ರಕಾರ ದೇವರು ಸಮಗ್ರವಾದ ಭಾಗವೆಲ್ಲ ಮತ್ತು ಯೋಗ ತತ್ವದ್ದು ಇದೇ ವಿಚಾರವಾಗಿದೆ. ಭಕ್ತಿ ಮತ್ತು ಆತ್ಮ ಸ್ವಾಧೀನತೆ ಶಿವಯೋಗದ ಪರಿಪೂರ್ಣ ವಸ್ತುಗಳಾಗಿವೆ. ಆದರೆ ಆತ್ಮಸ್ವಾಧೀನತೆ ದೇವರಿಗೆ ಆತ್ಮಸಮರ್ಪಣೆಯನ್ನು ಒಳಗೊಂಡಿರದೇ ಆತ್ಮನನ್ನು ತಿಳಿಯುವದಾಗಿದೆ. ಪ್ರಾಚೀನ ಆತ್ಮ ಸ್ವಾಧೀನತೆಯ ವಿಧಾನವು ಒಬ್ಬರ ಶರೀರ, ಒಬ್ಬರ ಮಗು ಇತ್ಯಾದಿಗಳನ್ನು ಬಲಿಕೊಡುವದನ್ನು ಒಳಗೊಂಡಿತ್ತು. ಪೂರ್ವದ ಭಕ್ತಿ ಸಾಹಿತ್ಯದಲ್ಲಿ ಬರುವ ಬೇಡರಕಣ್ಣಪ್ಪನ ಕತೆಯು ಆತ್ಮಸ್ವಾಧೀನತೆಯನ್ನು ತೋರಿಸುತ್ತದೆ. ಆದರೆ ಶಿವಯೋಗವು ಇಂತಹ ಶಬ್ದಪ್ರಯೋಗಗಳನ್ನು ಒಪ್ಪಿಕೊಳ್ಳುವುದಿಲ್ಲ. ಅಲ್ಲಮಪ್ರಭು ಗೊಗ್ಗವ್ವನಿಗೆ ಮಾರ್ಗವನ್ನು ತೋರಿಸುತ್ತಾ ಪ್ರಸಾದವು ಸತ್ಯಮಾರ್ಗ ಮತ್ತು ಆಹುತಿ ಮಿಥ್ಯ ಮಾರ್ಗವೆಂದು ಹೇಳಿದ್ದಾನೆ.೧೧ ಈ ಒಂದು ಮನೋಭಾವ ಅಹಿಂಸೆಯು ವೀರಶೈವರ ಮೂಲತತ್ವವಾಗಿತ್ತೆಂಬುದಕ್ಕೆ ಒತ್ತನ್ನು ಕೊಡುತ್ತದೆ ಆತ್ಮಸ್ವಾಧೀನತೆಯುಲ್ಲಿ. ಆತ್ಮನಿಗೆ ಅಂಟಿದ ಮಲಗಳನ್ನು ತೊಡೆಯುವಿಕೆ ಮತ್ತು ಅಹಂ ಪ್ರಜ್ಞೆಯನ್ನು ತ್ಯಜಿಸುವದಿದೆ. ಈ ಒಂದು ಸ್ಫುಟವಾದ ನಮ್ರತೆಯನ್ನು ಬಸವೇಶ್ವರನು ಅಲ್ಲಮಪ್ರಭುವಿಗೆ ತೋರಿಸಿದನು.೧೨

---

೧೧ ಪ್ರಭುಲಿಂಗಲೀಲೆ ಎಸ್. ಎಸ್. ಬಸವನಾಳ. ೧೯೫೬ II ಪು. ೧೩೧–೧೩೬.

೧೨ Ibid.

ಶಿವಯೋಗದಲ್ಲಿ ಸಂಕಲ್ಪಶಕ್ತಿಯು ಆಧ್ಯಾತ್ಮಿಕ ಉನ್ನತಿಯ ಪರಿಣಾಮವಾದ ಮುಕ್ತಿಯನ್ನು ತಿಳಿಯಲು ಮುಖ್ಯ ವಸ್ತುವಾಗಿದೆ. ಇಲ್ಲಿ ಶಾರೀರಿಕ ಮತ್ತು ಮಾನಸಿಕ ಕ್ರಿಯೆಗಳ ನಿಷೇಧವಿಲ್ಲ. ಆದರೆ ಅವು ರೂಪಾಂತರಗೊಂಡಿವೆ ಮತ್ತು ಅತಿಕ್ರಮಿಸಿವೆ. ಶಾರೀರಿಕ ಮತ್ತು ಮಾನಸಿಕ ಕ್ರಿಯೆಗಳು ಚಿತ್‌ಶಕ್ತಿ ಮುಖಾಂತರ ನಿರ್ಮಲ ಮತ್ತು ದೈವಿಕ ವಾಗಿಸಲ್ಪಡುತ್ತದೆ. ಸಂಕಲ್ಪಶಕ್ತಿಯ ಬಲ ಪಿಯೂಸಗ್ರಂಥಿ, ಶಂಕುರೂಪಿಗ್ರಂಥಿಯ ಮುಖಾಂತರ ಅಭಿವ್ಯಕ್ತಗೊಳಿಸಲ್ಪಡುತ್ತದೆ. ಶಂಕುರೂಪಿಗ್ರಂಥಿಯ ಅಂತರ್ಗತಶಕ್ತಿಯ ಅಭಿವ್ಯಕ್ತವು ವ್ಯಕ್ತಿಗೆ ಕೇವಲ ಜ್ಞಾನವನ್ನು ಪಡೆಯಲು ಮತ್ತು ಪರಿಪೂರ್ಣತೆಯನ್ನು ಕೂಡಿಕೊಳ್ಳಲು ಕಾರಣವಾದ ಆಧ್ಯಾತ್ಮಿಕ ಶಕ್ತಿಯನ್ನು ನೀಡುತ್ತದೆ.[೧೩]

ಮಹರ್ಷಿ ಅರವಿಂದರ 'ಸಮಗ್ರಯೋಗ'ವೂ ಸಹ ಆತ್ಮಸಾಧನೆಗೆ ಕಾರಣವಾದ ಸಂಕಲ್ಪಶಕ್ತಿಗೆ ಪ್ರಮುಖ ಒತ್ತನ್ನು ಕೊಡುತ್ತದೆ. ಶಿವಯೋಗ ಹಾಗೂ ಸಮಗ್ರಯೋಗ ದಲ್ಲಿ ಶಾರೀರಿಕ ಮತ್ತು ಮಾನಸಿಕ ಕ್ರಿಯೆಗಳು ನಿರಾಕರಿಸಲ್ಪಟ್ಟಿಲ್ಲ. ಇದಕ್ಕಾಗಿ ನಾವು ಪತಂಜಲಿಯ ಯೋಗದ ವಿಧಾನವನ್ನು ಆತ್ಮಶುದ್ಧಿಗಾಗಿ ಉಪಯೋಗಿಸಬೇಕು. ಪತಂಜ ಲಿಯ ಎಂಟೂಪ್ರಕಾರದ ರಾಜಯೋಗದ ಕಾಠಿಣ್ಯತೆಯ ಮಜಲುಗಳನ್ನು ತಿಳಿಯುವುದು ಅಸಾಧ್ಯವಾದದ್ದು. ಇದು ನಮ್ಮನ್ನು ದೇವರಲ್ಲಿ ಒಂದಾಗುವಿಕೆಯನ್ನು ತಲುಪುವ ಪ್ರಮುಖ ಹಾದಿ ಎಡೆ ಮನಸ್ಸನ್ನು ತಿರುಗಿಸುತ್ತದೆ. ಸಾಮಾನ್ಯ ಮನುಷ್ಯನಿಗೂ, ಮಹಿಳೆಗೂ ಮತ್ತು ಮಕ್ಕಳಿಗೂ ಅವಶ್ಯವಾದ, ಸಾಧ್ಯವಾದ ಯೋಗದ ಸರಳ ಪದ್ಧತಿ ಅಗತ್ಯವಾಗಿದೆ. ಈ ರೀತಿಯ ಸಾಧನೆಯು ಇಷ್ಟಲಿಂಗ ಪೂಜೆ ಕರ್ಮದಿಂದ ಮತ್ತು ತ್ರಾಟಕದಿಂದ ಚಿತ್ತೈ ಕಾಗ್ರತೆಯನ್ನು ಮಾಡುವುದರಿಂದ ಸಾಧ್ಯವಾಗುತ್ತದೆ.[೧೪]

ಶಿವಯೋಗ ದರ್ಪಣದಲ್ಲಿ ನಾವು ಶಿವಯೋಗದ ವಿಶಿಷ್ಟಗುಣಗಳ ವರ್ಣನೆಯನ್ನು ನೋಡುತ್ತೇವೆ. ಅದರಲ್ಲಿ ಐದು ಪ್ರಕಾರದ ಶಿವಯೋಗಗಳು ಹೇಳಲ್ಪಟ್ಟಿವೆ. ೧) ಶಿವ ಜ್ಞಾನ, ೨) ಶಿವಧ್ಯಾನ, ೩) ಶಿವಪೂಜಾ, ೪) ಶಿವವ್ರತ ಮತ್ತು ೫) ಶಿವಚಾರ. ಶಿವಯೋಗವನ್ನು ತಲುಪುವುದು 'ಸಮ್ಯಗ್‌ನಾದಾನುಸಂಧಾನ'ದಿಂದ ಸಾಧ್ಯವಿದೆ. ಯಾವುದು ಸತ್ಯ ಆಚರಣೆ ಮತ್ತು ಚಿತ್ತೈಕಾಗ್ರತೆಯನ್ನು ಒಳಗೊಂಡಿದೆ. ನಾ ಗಳು ಐದು ಪ್ರಕಾರವಾಗಿವೆ. ಇಲ್ಲಿ 'ಓಂ' ಚಿನ್ಹೆ ಮುಖ್ಯವಾಗಿದೆ. ಸಂಭಾವಿಮುದ್ರೆಯ

---

೧೩ ವೀರಶೈವ ತ್ರೈಮಾಸಿಕ (ಕನ್ನಡ) Vol II ನಂ. ೭.
ಕುಮಾರ ಸ್ವಾಮೀಜಿ ನವಕಲ್ಯಾಣಮಠ.

೧೪ Ibid ಮತ್ತು ಪ್ರೊ. ವೃಷಭೇಂದ್ರಸ್ವಾಮಿ ಕರ್ನಾಟಕ ವಿಶ್ವವಿದ್ಯಾಲಯ Vol II ನಂ. ೬. ವೃಷಭೇಂದ್ರಸ್ವಾಮಿಯು 'ಗರಗಸ' ಶಬ್ದಕ್ಕೆ ಹೊಸ ಅರ್ಥವಿವರಣೆ ಯನ್ನು ಸೂಚಿಸಿದ್ದಾರೆ. ಮಸ್ತಿಷ್ಕದ ಕೇಂದ್ರಕ್ಕೆ ವಿಸ್ತಾರವಾದ ಕಾಲುವೆಯನ್ನು ಕಂಠದ ಮುಖಾಂತರ ಮಾಡುವುದು.

ಮುಖಾಂತರ ಸಾಧಿಸಲ್ಪಡುವ ಯೋಗವು ಶಿವಯೋಗದ ಪ್ರಮುಖ ಮೆಟ್ಟಿಲಾಗಿದೆ. ಕಣ್ಣಿನಲ್ಲಿ ಸೂರ್ಯನ, ಚಂದ್ರನ ಮತ್ತು ಜ್ವಾಲೆಯ ಅನಂತಶಕ್ತಿ ಇದೆಯೆಂದು ತಿಳಿಯುವುದು ಸಂಭಾವಿಮುದ್ರೆ. ಶಿವಯೋಗ ದರ್ಪಣದಲ್ಲಿ ಕೊಟ್ಟಂತಹ ಯೋಗ ಪದ್ಧತಿಯ ಸಂಪೂರ್ಣ ವರ್ಣನೆಯು ಈ ಕೃತಿಯ ವ್ಯಾಪ್ತಿಗೆ ಆಚೆ ಇದೆ.

ಏನೆ ಆದರೂ ಶಿವಯೋಗದ ಪ್ರಾಮುಖ್ಯತೆಯು ಶಿವನಿಂದಲೇ ತಿಳಿಯಲ್ಪಡುತ್ತದೆ. ಬೇರೆಯವರಿಂದಲ್ಲ. ಈ ಒಂದು ಯೋಗದ ಗತಿಯು ಉಚ್ಚ ಅನುಭವಕ್ಕೆ ದಾರಿ ಮಾಡಿ ಕೊಡುತ್ತದೆ.[೧೫] ಆದ್ದರಿಂದ ಇದೂ ಸಹ ಶಿವಯೋಗವೆಂದು ಕರೆಯಲ್ಪಡುತ್ತದೆ.

ಈ ವಿಚಾರದಲ್ಲಿ, ಶಿವಯೋಗ ಮತ್ತು ಪತಂಜಲಿಯ ಯೋಗದಲ್ಲಿ ಸ್ವಲ್ಪ ಸಾಮ್ಯವಿದೆಯೆಂದು ನಾವೂ ಸಹ ಹೇಳಬಹುದು. ಇವೆರಡರಲ್ಲಿ ಮೂಲ ಮೆಟ್ಟಿಲುಗಳು ಸ್ವೀಕರಿಸಲ್ಪಟ್ಟಿವೆ. ಆದರೆ ನಾನು ಹೇಳುವದೇನೆಂದರೆ, ಶಿವಯೋಗವು ಪತಂಜಲಿಯ ಯೋಗವನ್ನು ಪ್ರಜಾಪ್ರಭುತ್ವವಾದಿಯನ್ನಾಗಿ ಮಾಡಿದೆ. ಇದರ ಉದ್ದೇಶವಿಷ್ಟೆ ಇದು ಮನುಷ್ಯನಿಗೆ ಗುರಿಯನ್ನು ಮುಟ್ಟಲು ಅವಶ್ಯಕತೆಗಳನ್ನು ಒದಗಿಸುತ್ತದೆ. ಯೋಗದ ಅತ್ಯುನ್ನತ ಸ್ಥಿತಿಗೇರುವ ಗೂಢವಸ್ತುವಾದ ಅನುಭವದ ಪ್ರಾಮುಖ್ಯತೆಯನ್ನು ಇದು ಒತ್ತಿ ಹೇಳುತ್ತದೆ.[೧೬]

ಇದುವರೆಗೆ ಮಾಡಿದ ವಿಶ್ಲೇಷಣೆಯು ಜೈನಯೋಗ ಮತ್ತು ಶಿವಯೋಗದ ಗುರಿ ಪರಿಪೂರ್ಣವೆಂದು ತೋರಿಸುತ್ತದೆ. ಇಂದ್ರಿಯಾನುಭವಾತ್ಮಕ ಮತ್ತು ಆಕಸ್ಮಿಕದಿಂದ ಮುಕ್ತವಾಗುವುದು ಮತ್ತು ಪರಿಪೂರ್ಣತೆಯನ್ನು ತಲುಪುವುದು ಅಂತಿಮ ಗುರಿಯಾದ ಆತ್ಮ ಸಾಧನೆಯಲ್ಲಿ ನಕಾರಾತ್ಮಕ ಮತ್ತು ಸಕಾರಾತ್ಮಕ ವಸ್ತುಗಳಾಗಿವೆ.

ಆದರೆ ಜೈನರ ಮಾರ್ಗ ವ್ಯಕ್ತಿನಿಷ್ಠ ಮತ್ತು ನಿಷ್ಠುರವಾಗಿದೆ. ಅನುಭವಾತ್ಮಕ ಅಧೀನವಸ್ತುಗಳಾದ ಶಾರೀರಿಕ ಮತ್ತು ಮಾನಸಿಕ ಕ್ರಿಯೆಗಳು ಸಾಧ್ಯವಾದರೆ ತ್ಯಜಿಸಬೇಕು. ಮತ್ತು ಉನ್ನತಗತಿಯನ್ನು ಮುಟ್ಟುವುದಕ್ಕಾಗಿ ಇವುಗಳನ್ನು ಉಪಯೋಗಿಸಬೇಕು. ಹೇಗೆ ನದಿಯನ್ನು ದಾಟಲು ಉಪಯೋಗಿಸುವ ಹರಿಗೋಲು ನಾವೆಯನ್ನು ನದಿಯ ಇನ್ನೊಂದು ದಡವನ್ನು ತಲುಪಿದ ಮೇಲೆ ಕೃತಜ್ಞತೆಯ ಸಲುವಾಗಿಯೂ ಸಹ ನಾವೆಯನ್ನು ತನ್ನೊಂದಿಗೆ ಒಯ್ಯುವದಿಲ್ಲವೋ ಹಾಗೆ. ಆದ್ದರಿಂದ ಇದನ್ನು ಹೇಳುವುದು ಯುಕ್ತವಾಗಿದೆ. ಏನೆಂದರೆ–ಜೈನರು ಶರೀರವನ್ನು ನಿರ್ಲಕ್ಷಿಸುವದಿಲ್ಲ. ಕೇವಲ ಅದರ ನಾಶದಲ್ಲಿ ಗುರಿ ಇಟ್ಟಿರುತ್ತಾರೆ. ಅವರಿಗಾಗಿ ಮತ್ತು ಬೇರೆಯವರಿಗಾಗಿ ಶರೀರ ಮತ್ತು

---

೧೫ ಪ್ರಭುಲಿಂಗ ಲೀಲೆ ಪು. ೨೦೦

೧೬ ಷಣ್ಮುಖ ಶಿವಯೋಗಿ: ಜ್ಞಾನಜ್ಯೋತಿಯಲ್ಲಿರುವಂತೆ
"ನಭೇದಃ ಶಿವಯೋಗಸ್ಯ ರಾಜಯೋಗಸ್ಯ ತತ್ತ್ವತಃ"

ಶರೀರದ ಆರೋಗ್ಯ ಯೋಗಕ್ಕೆ ಎಷ್ಟು ಅವಶ್ಯವೋ ಮಾನಸಿಕ ಚಟುವಟಿಕೆಗಳನ್ನು ತ್ಯಜಿಸುವುದು (ಚಿತ್ತವೃತ್ತಿನಿರೋಧ) ಅಷ್ಟೇ ಅವಶ್ಯವಾಗಿದೆ.

ವೀರಶೈವರ ಅಂತಿಮಗುರಿ ಪೂರ್ಣತೆಯಲ್ಲಿ ಒಂದಾಗುವುದು, ದೇವರಲ್ಲಿ ನಂಬಿಕೆ ಇಡುವುದು ಮತ್ತು ದೇವರಿಗೆ ಶರಣು ಬರುವುದು ಆಗಿದೆ ಮತ್ತು ಇವೇ ಅವರ ಮುಖ್ಯ ತತ್ವಗಳಾಗಿವೆ. ಜೈನರು ದೇವರಂತೆ ಇರುವ ಪರಮಶ್ರೇಷ್ಠ ದೈವತ್ವದ ಮೇಲೆಯೇ ಸಂಪೂರ್ಣ ಅವಲಂಬಿಸಿರುವದಿಲ್ಲ. ಇಲ್ಲಿ ದೇವರ ಕೃಪೆ ಪದಕ್ಕೆ ಸ್ಥಳವೇ ಇಲ್ಲ. ಪ್ರತಿಯೊಂದು ಆತ್ಮದೈವಿಕವೆಂದು ತಿಳಿದು ನಮ್ಮ ಪ್ರಯತ್ನಗಳ ಮೇಲೆಯೇ ನಾವು ಅವಲಂಬಿಸಿರಬೇಕು. ಮೋಕ್ಷದಲ್ಲಿ ವ್ಯಕ್ತಿಯ ಆತ್ಮದ ಜೀವಸತ್ವಸ್ಥಿತಿಯು ಎರಡೂ ಧರ್ಮಗಳಲ್ಲಿ ಬೇರೆಬೇರೆಯಾಗಿದೆ. ವೀರಶೈವರದು, ಪೂರ್ಣತೆಯಲ್ಲಿ ಕೂಡುವುದು (ಐಕ್ಯ). ಆದರೆ ಜೈನರಲ್ಲಿ ಪ್ರತಿಯೊಂದು ಆತ್ಮ ತನ್ನ ವ್ಯಕ್ತಿತ್ವವನ್ನು ಉನ್ನತಮಟ್ಟದಲ್ಲಿಟ್ಟುಕೊಂಡಿರುತ್ತದೆ. ಅಷ್ಟಾಂಗಯೋಗದ ವಿಧಾನಗಳಾದ ಶಿಸ್ತು ಮತ್ತು ವಿಧಾನ ಜೈನರಿಗೆ ಮಹತ್ವವಾಗಿವೆ.

ನಾವು ಈ ರೀತಿ ಹೇಳಬಹುದು, ಮಾನವ ಜೀವನದ ಕೊನೆ ಭಾರತೀಯ ತತ್ವಜ್ಞಾನಿಗಳ ಪ್ರಕಾರ, ಚಾರ್ವಾಕರನ್ನು ಹೊರತುಪಡಿಸಿ, ವ್ಯವಹಾರಿಕ ಅಸ್ತಿತ್ವದ ಬಂಧನದಿಂದ ಮುಕ್ತಿ ಪಡೆಯುವುದು ಮತ್ತು ಮೋಕ್ಷವೇ ಆದರ್ಶವೆಂದು ತಿಳಿಯುವುದು. ಇದು ತಲುಪಲು ಬಹಳ ಕಠಿಣವಾಗಿದೆ. ಕೆಲವೊಬ್ಬರು ಮಾತ್ರ ಇದನ್ನು ತಲುಪಿದ್ದಾರೆ ಮತ್ತು ಇಂತಹ ಅಚೇತನ ಅನುಭವಾತ್ಮಕ ಕೊನೆಯನ್ನು ಸಮಾಜದಲ್ಲಿ ಬಳಕೆಯಲ್ಲಿರುವ ವ್ಯಕ್ತಿಯ ಅವಶ್ಯಕತೆಗಳಿಗನುಸಾರವಾಗಿ ನಾವು ತಲುಪಬೇಕಾಗುತ್ತದೆ. ಆದ್ದರಿಂದ ಪೂರ್ಣ ಹಿನ್ನಲೆಯನ್ನು ಅರಿಯದೇ ಒಂದು ರೀತಿಯ ಯೋಗವನ್ನು ಇನ್ನೊಂದು ರೀತಿಯ ಯೋಗಕ್ಕೆ ಹೋಲಿಸುವುದು ತೀರ್ವತರ ಪ್ರಮಾದವಾಗಿದೆ. ಈ ಒಂದು ಸಮಸ್ಯೆಯನ್ನು ನಾವು ಜೀವನದ ಸಂಪೂರ್ಣ ದೃಶ್ಯದೊಂದಿಗೆ ನೋಡಬೇಕು. ಅದನ್ನು ತಿಳಿಯದ ಹೊರತು ಯೋಗದ ತುಲನಾತ್ಮಕ ಪ್ರಾಮುಖ್ಯತೆಯನ್ನು ತಿಳಿದುಕೊಳ್ಳುವುದು ಇನ್ನೂ ಕಠಿಣವಾಗಿದೆ.[೧೭]

ಆತ್ಮವು ಮೊದಲು ಅಧ್ಯಾತ್ಮಿಕ ನೋಟವನ್ನು ಕರ್ಮಾಣುಗಳ ಉಪಶಮದಿಂದ ಮತ್ತು ಮಿಥ್ಯಾತ್ವವನ್ನು ಬಿಡುವುದರಿಂದ ಪಡೆಯುತ್ತದೆ. ಆದರೆ ಈ ಅಧ್ಯಾತ್ಮಿಕ ನೋಟದ ಪ್ರಾರಂಭ ಅಂತಿಮವರೆಗೆ ಅಲ್ಲ. ಆದರೆ ಆತ್ಮವು ಅವಿಶ್ರಾಂತವಾಗಿ ಉಳಿದು ಈ ಒಂದು ದೃಷ್ಟಿಯನ್ನು ಕಾಯಂ ಆಗಿ ಉಳಿಸಿಕೊಳ್ಳಲು ಬೇರೆ ಬೇರೆ ಮಾರ್ಗದಿಂದ ಪ್ರಯತ್ನಿಸು

---

೧೭ ಷಣ್ಮುಖ ಶಿವಯೋಗಿ ಅಖಂಡೇಶ್ವರವಚನ, ರತ್ನಾಕರವರ್ಣಿಯು, ಯೋಗವನ್ನು ರೂಢಿಯಲ್ಲಿ ತರದೇ ಅದನ್ನು ತಿಳಿದುಕೊಳ್ಳುವುದರ ಅಸಾಧ್ಯತೆಯನ್ನು ಹೇಳುತ್ತಾನೆ.

ತ್ತಿರುತ್ತದೆ. ಈ ಹೋರಾಟವು ದೀರ್ಘವಾದದ್ದು ಮತ್ತು ಕಷ್ಟವಾದದ್ದು. ಇದು ಕ್ರಮವಾಗಿ ಐದು ಪ್ರಕಾರದ ಬಂಧನಗಳನ್ನು ತೆಗೆಯಬೇಕಾಗುವುದು. ಮಿಥ್ಯಾತ್ವ, ಅವಿರತ, ಪ್ರಮಾದ, ಕಷಾಯ ಮತ್ತು ತ್ರಿಗುಪ್ತಿ (ಮನ, ವಚನ, ಕಾಯ). ಕಷಾಯ ಗಳನ್ನು ನಿಗ್ರಹಗೊಳಿಸುವುದು ಅಧ್ಯಾತ್ಮಿಕ ಮುನ್ನಡೆಗೆ ಮಹತ್ವವಾದದ್ದು. ಈ ಒಂದು ಕ್ರಿಯೆಯು ಯಥಾಪ್ರವೃತ್ತಕರಣವು ಅಪೂರ್ವಕರಣ ಮತ್ತು ಅನಿವೃತ್ತಿಕರಣವನ್ನು ಪ್ರಕ ಟಿಸುವುದರಿಂದ ಮಾತ್ರ ಸಾಧ್ಯವಿದೆ. ಹದಿನಾಲ್ಕು ಗುಣಸ್ಥಾನಗಳಲ್ಲಿ ಆತ್ಮನ ಉದ್ಧಾರ ಎರಡು ರೀತಿಯಿಂದ ಆಗುತ್ತದ.

೧) ಯಾವ ಸಮಯದಲ್ಲಿ ಕರ್ಮಾಣುಗಳು ಶಾಂತಪರಿಣಾಮವನ್ನು ಹೊಂದಿರುತ್ತವೆಯೋ ಆಗ ಆತ್ಮವು ಕಷಾಯಗಳನ್ನು ಒತ್ತಿಡಬೇಕಾಗುತ್ತದೆ. ಇದುವೆ ಶಾಂತಮಾಡುವಿಕೆ ಅಥವಾ ಒತ್ತುವಿಕೆಯ ಮಾರ್ಗ. ಇದು ಉಪಶಮಶ್ರೇಣಿಯೆಂದು ಕರೆಯಲ್ಪಡುತ್ತದೆ.

೨) ಆತ್ಮವು ಕರ್ಮಗಳನ್ನು ಒಟ್ಟಿಗೆ ನಿರ್ನಾಮ ಮಾಡುವ ದಾರಿಯನ್ನು ಹಿಡಿಯುತ್ತದೆ. ಈ ಆಧ್ಯಾತ್ಮಿಕ ಮಾರ್ಗ ಕ್ಷಯಶ್ರೇಣಿ ಎಂದು ಕರೆಯಲ್ಪಡುತ್ತದೆ. ಆಗ ಆತ್ಮವು ಕರ್ಮದ ಪರದೆಯನ್ನೂ ಕ್ಷಯ ಮತ್ತು ಉಪಶಮಗೊಳಿಸಿ ಆತ್ಮಸಾಧನೆಯ ಮಾರ್ಗವನ್ನು ಹಿಡಿಯುತ್ತದೆ. ಆತ್ಮಸಾಧನೆಯ ಉನ್ನತ ಶ್ರೇಣಿಯಲ್ಲ ಆತ್ಮವು ಪರಿಪೂರ್ಣತೆಯನ್ನು ಮತ್ತು ಕೇವಲ ಜ್ಞಾನದ ಶ್ರೇಣಿಯನ್ನು ತಲುಪುತ್ತದೆ. ಇದುವೇ ೧೪ನೇ ಗುಣಸ್ಥಾನ ಮತ್ತು ಹೋರಾಟದ ಸಂಪೂರ್ಣತೆ.

ಪರಿಪೂರ್ಣತೆಯನ್ನು ಹೊಂದಲು ಮನುಷ್ಯನು ಮಾಡಬೇಕಾದ ಇದು ಒಂದು ಯಾತ್ರೆ. ಆತ್ಮ ಉನ್ನತಿಗಾಗಿ ಹೋರಾಡುವ ಈ ಶ್ರೇಣಿಗಳು ಮನೋವೈಜ್ಞಾನಿಕವಾಗಿ ತುಂಬಾ ಮುಖ್ಯವಾಗಿವೆ. ಇಲ್ಲಿ ಸಮಾನ ಅರ್ಥವುಳ್ಳ ಮನೋವೈಜ್ಞಾನಿಕ ಪದಗಳನ್ನು ಕೊಡುವುದು ಸಾಧ್ಯವಿಲ್ಲ. ಅನುಭವಿಕ ಮನೋವಿಜ್ಞಾನವು ಅನುಭವಿಕ ವ್ಯಕ್ತಿತ್ವದ ಸ್ವಭಾವ ಮತ್ತು ಉನ್ನತಿಯ ವಿಶ್ಲೇಷಣೆಗೆ ಸಂಬಂಧಪಟ್ಟಿದೆ. ಬಹಿರಾತ್ಮನನ್ನು ವಿಲಿಯಂ ಜೇಮ್ಸನು 'ನನಗೆ' (Me) ಎಂಬ ಪದಕ್ಕೆ ಹೋಲಿಸಿದ್ದಾನೆ. ಅದೇ ರೀತಿ ಅಂತರಾತ್ಮನ ವಿವರಣೆಯನ್ನು ವಿಲಿಯಂ ಜೇಮ್ಸನ 'ನಾನು' (I) ಪದದಿಂದ ಕೊಡುವುದು ಸಾಧ್ಯವಿದೆ. ವಿವೇಕಯುಕ್ತ ಮನೋವಿಜ್ಞಾನಿಗಳು ಇಂತಹ ಅಧ್ಯಯನದ ಸಾಧ್ಯತೆಯನ್ನು ತೋರಿ ದ್ದಾರೆ. ಆದರ ಮನೋವಿಜ್ಞಾನವು ಅನುಭವಾತೀತ ಆತ್ಮ, ಪರಮಾತ್ಮನ ಸ್ವರೂಪವನ್ನು ಮತ್ತು ಅನುಭವಿಕ ಆತ್ಮನ ಸ್ವರೂಪದ ಉನ್ನತಿಯ ಕೊನೆಯ ಶ್ರೇಣಿಯನ್ನು, ಅನುಭವಾ ತೀತ ಆತ್ಮನು ಅನೇಕ ಶ್ರೇಣಿಗಳ ಮುಖಾಂತರ ತಲುಪಬೇಕಾಗುತ್ತದೆಂಬುದನ್ನು ತಿಳಿದು ಕೊಂಡಿಲ್ಲ. ಮನಃಶಾಸ್ತ್ರವು ಒಂದು ವಿಜ್ಞಾನವಿದ್ದಾಗಲೂ ಸಹ ಈ ಭಾಷೆ ಅದಕ್ಕೆ ಪರ ಭಾಷೆಯಾಗಿದೆ. ಆದರ ಗುಣಸ್ಥಾನದ ದೃಷ್ಟಿಯಿಂದ ಹೇಳುವದಾದರೆ, ನನಗೆ (Me) ಇದು ಕರ್ಮಗಳನ್ನು ತುಂಡರಿಸುವುದಕ್ಕಿಂತ ಪೂರ್ವದಲ್ಲಿ ಮತ್ತು ನಾಲ್ಕನೇ ಶ್ರೇಣಿಯ

ಪ್ರಾರಂಭ ದೃಷ್ಟಿಯನ್ನು ಅನುಭವಿಸುವದಕ್ಕಿಂತ ಪೂರ್ವದಲ್ಲಿ ಆತ್ಮವು ಅನುಭವಾತ್ಮಕ ಶ್ರೇಣಿಯಲ್ಲಿರುತ್ತದೆ. ಅದು ಆ ದೃಷ್ಟಿಯನ್ನು ಪಡೆದನಂತರ ಉನ್ನತವಾದ ಪರಿಪೂರ್ಣತೆಯನ್ನು ತಲುಪಲು ನೈತಿಕ ಪ್ರಯತ್ನಗಳನ್ನು ಮಾಡುತ್ತದೆ. ಐದನೇ ಶ್ರೇಣಿಯ ನಂತರ ಚಂದಮಸ್ಥಶ್ರೇಣಿಯಿಂದ ನೈತಿಕ ಪ್ರಯತ್ನಗಳು ಪ್ರಮುಖವಾಗಿವೆ. ಈ ಒಂದು ಶ್ರೇಣಿಯಲ್ಲಿರುವ ಆತ್ಮವು, ಅಂತರಾತ್ಮ, ಆಧ್ಯಾತ್ಮಿಕ ಆತ್ಮ ಅಥವಾ ವಿಲಿಯಂ ಜೇಮ್ಸನ 'ನಾನು' (I) ಎಂದು ಕರೆಯಲ್ಪಡುತ್ತದೆ. ಕೇವಲ ಜ್ಞಾನವನ್ನು ಪಡೆಯಲು ತನ್ನಷ್ಟಕ್ಕೆ ತಾನು ಮುಕ್ತಗೊಳ್ಳಲು ಸಂಸಾರಿಕ ಜೀವನದಿಂದ ಹೋರಾಡಬೇಕಾಗುತ್ತದೆ. ಇದುವೇ ಉನ್ನತ ಪರಿಪೂರ್ಣತೆಯನ್ನು ಹೊಂದುವ ಹೋರಾಟ. ಉನ್ನತ ಪರಿಪೂರ್ಣತೆಯನ್ನು ಹೊಂದಿದ ಆತ್ಮವು ೧೪ನೇ ಶ್ರೇಣಿಯಲ್ಲಿರುತ್ತದೆ. ಇದುವೇ ಅಯೋಗ ಕೇವಲ ಗುಣಸ್ಥಾನ. ಯಾವುದು ಆತ್ಮಸಾಧನೆಯಲ್ಲಿ ಸಂಪೂರ್ಣತೆಯನ್ನು ಹೊಂದಿದೆಯೋ ಅದುವೇ ಅನುಭವಾತೀತ ಆತ್ಮ, ಆತ್ಮನ ಆಧ್ಯಾತ್ಮವಿದ್ಯೆಯ ಕಲ್ಪನೆ. ಅನುಭವಾತೀತ ಆತ್ಮನನ್ನು ಅಥವಾ ಪರಮಾತ್ಮನನ್ನು ತಲುಪಲು ಅನುಭವಿಕ ಆತ್ಮ ಮತ್ತು ಆಂತರಿಕ ಆತ್ಮನ ಶ್ರೇಣಿಯನ್ನು ದಾಟಬೇಕಾಗುತ್ತದೆ.

ಪ್ರೊ. ಎಸ್. ಜಿ. ನಂದಿಮಠರವರು ಗುಣಸ್ಥಾನಗಳನ್ನು ವೀರಶೈವರ ಷಟಸ್ಥಲಗಳೊಂದಿಗೆ ಹೋಲಿಸಿದ್ದಾರೆ. ಸ್ಥಲ ಮತ್ತು ಸ್ಥಾನ ಇವು ಪರ್ಯಾಯ ಪದಗಳು ವೀರಶೈವರು ಆತ್ಮ ಉನ್ನತಿಯ ಆರು ಶ್ರೇಣಿಗಳನ್ನು ಮತ್ತು ಹದಿನಾಲ್ಕು (೧೪) ಶ್ರೇಣಿಗಳನ್ನು ಹೇಳಿದ್ದಾರೆ. ಆತ್ಮಪರಿಪೂರ್ಣತೆಯನ್ನು ಹೊಂದಲು ಈ ಶ್ರೇಣಿಗಳನ್ನು ದಾಟಬೇಕಾಗುತ್ತದೆ. ಏನೇ ಆದರೂ ಇವೆರಡರ ತತ್ವ ಒಂದೇ ಆಗಿದೆ.೧೮ ವೀರಶೈವ ವಿಚಾರದ ಪ್ರಕಾರ ಆತ್ಮವು ಅವಿದ್ಯೆಯ ಆವರಣದಿಂದ ಅಜ್ಞಾನವನ್ನು ಹೊಂದುತ್ತದೆ. ಸ್ಥಲಗಳು, ಆತ್ಮನ ಜೊತೆಗೆ ಸಂಸಾರಿಕ ವಸ್ತುಗಳೆಲ್ಲ ಕೊನೆಯುತನಕವಿರುವದಿಲ್ಲವೆಂದು ಗುರುತಿಸುತ್ತದೆ. ಈ ಒಂದು ವಿಚಾರವು ಉಚ್ಚಶಕ್ತಿಯಲ್ಲಿ ನಂಬಿಕೆಯನ್ನಿಡುವದನ್ನು ಹೆಚ್ಚಿಸುತ್ತದೆ. ಇದುವೇ ಪ್ರಾರಂಭ ಹಂತ ಮೊದಲನೆಯ ಶ್ರೇಣಿಗಳು– ಭಕ್ತಿಸ್ಥಲ, ಮಹೇಶ್ವರಸ್ಥಲ ಮತ್ತು ಪ್ರಸಾದ ಸ್ಥಲಗಳು ಆತ್ಮ ಉನ್ನತಿಯ ಶ್ರೇಣಿಗಳಾಗಿವೆ. ಇಲ್ಲಿ ಆತ್ಮ ಮತ್ತು ಈಶ್ವರನ ನಡುವೆ ವ್ಯತ್ಯಾಸ ಕಾಣುತ್ತದೆ. ನಂತರದ ೩ ಶ್ರೇಣಿಗಳು– ಪ್ರಾಣಲಿಂಗಸ್ಥಲ, ಆತ್ಮಶರಣ (ಶರಣಸ್ಥಲ) ಮತ್ತು ಐಕ್ಯಸ್ಥಲ ಇವು ಅಂತಿಮ ಮಿಲನಕ್ಕೆ ದಾರಿಕೊಡುತ್ತವೆ. ಕ್ರಮವಾಗಿ ಜೀವ ಮತ್ತು ಈಶ್ವರ ನಡುವಿನ ಅಂತರವನ್ನು ತ್ಯಜಿಸಿ ಕೊನೆಗೆ ಜೀವವು ಅನುಭವಾತೀತ ಆತ್ಮನಲ್ಲಿ ಬೆರೆತುಕೊಳ್ಳುತ್ತದೆ. ಪ್ರೊ. ಕೆ. ಜಿ. ಕುಂದನಗಾರ ಆದಿಪುರಾಣದ ಪೀಠಿಕೆಯಲ್ಲಿ ಈ ರೀತಿ ಹೇಳಿದ್ದಾರೆ. ಏನೆಂದರೆ, "ಜೈನರ ಗುಣಸ್ಥಾನಗಳು ವೀರಶೈವರ ಷಟಸ್ಥಲಗಳೊಂದಿಗೆ ಹೋಲಿಸಲ್ಪಟ್ಟಿವೆ." ಎಸ್. ಜಿ. ನಂದಿಮಠ

---

೧೮ ಎಸ್. ಸಿ. ನಂದಿಮಠ ಎ ಹ್ಯಾಂಡಬುಕ್ ಆಫ್ ವೀರಶೈವಿಜಮ್.

ಮತ್ತು ಕೆ. ಜಿ. ಕುಂದನಗಾರ ಇವರ ಅರ್ಥವಿವರಣೆ ಸ್ವೀಕರಿಸಲು ತುಂಬಾ ಕಠಿಣವಾಗಿದೆ. ಏಕೆಂದರೆ ಜೈನರ ಮತ್ತು ವೀರಶೈವರ ಮನೋಭಾವದಲ್ಲಿ ಅನುಭವಾತೀತ ಆತ್ಮನ ಸಮಸ್ಯೆಗಳ ಬಗ್ಗೆ ವ್ಯತ್ಯಾಸ ಕಂಡುಬರುತ್ತದೆ. ಷಟ್‌ಸ್ಥಲವು ದೇವರಲ್ಲಿ ಒಂದಾಗುವದನ್ನು ಅಥವಾ ಐಕ್ಯಸ್ಥಲವನ್ನು ತೋರಿಸುತ್ತದೆ. ಆದರೆ ಜೈನರಲ್ಲಿ, ಜೀವಿಯು ಆತ್ಮಸಾಧನೆಯ ಉನ್ನತ ಮಟ್ಟದಲ್ಲಿದ್ದಾಗಲೂ ಸಹ ಅನಂತರದಲ್ಲಿ ಒಂದಾಗುವದನ್ನು ಹೇಳುವುದಿಲ್ಲ. ಜೈನರು ಬಹುವಾದಿಗಳು. (ಅನೇಕಾಂತ). ಅವರು ಸತ್ಯತೆಯನ್ನು ವ್ಯಕ್ತಿಯ ಆಚೆಗೆ ಒಪ್ಪಿಕೊಳ್ಳುವದಿಲ್ಲ. ವೀರಶೈವರಲ್ಲಿ ಭಕ್ತಿಯು ಆತ್ಮಸಾಧನೆಗೆ ಪ್ರಮುಖವಾದ ವಸ್ತು ಯಾವುದು ದೇವರಲ್ಲಿ ಕೂಡಿಕೊಳ್ಳುವಿಕೆಯನ್ನು ಉನ್ನತಸ್ಥಿತಿಗೇರಿಸುತ್ತದೆಯೋ ಇದರಿಂದ ಭಕ್ತಿಯ ಮುಖಾಂತರ ವ್ಯಕ್ತಿಯು ಯಾತ್ರೆಯನ್ನು ಪ್ರಾರಂಭಿಸಿ ಆತ್ಮಶುದ್ಧತೆಯ ಶ್ರೇಣಿಯ ಮುಖಾಂತರ ಆತ್ಮಸಾಧನೆಯು ಮತ್ತು ಅಂತಿಮಶ್ರೇಣಿಯಾದ ದೇವರಲ್ಲಿ ಒಂದಾಗುವುದು ಸಾಧ್ಯವಾಗುತ್ತದೆ. ಆದರೆ ಜೈನರಲ್ಲಿ ಆತ್ಮಸಾಧನೆಗೆ ಹೋರಾಡಲು ಕೇವಲ ಭಕ್ತಿಗೆ ಪ್ರಥಮಸ್ಥಾನವನ್ನು ಕೊಟ್ಟಿಲ್ಲ. ಆತ್ಮಸಾಧನೆಯಲ್ಲಿ ಸರಿಯಾದ ನೆಲೆಯು ನೈತಿಕ ಪ್ರಯತ್ನಗಳೊಂದಿಗೆ ಜೊತೆಗೂಡುತ್ತದೆ. ಇದುವೇ ವ್ಯಕ್ತಿಯ ಆತ್ಮ–ಸ್ಥೈರ್ಯ. ಜೈನರ ಪ್ರಕಾರ ಇದು ಪರಿಪೂರ್ಣತೆಯ ಉನ್ನತಿಗೆ ದಾರಿಕೊಡುತ್ತದೆ. ವೀರಶೈವ ವಿದ್ವಾಂಸರೊಂದಿಗೆ ಚರ್ಚಿಸಿದಂತೆ ಈ ಸಂಪ್ರದಾಯಗಳ ನಡುವಿನ ವ್ಯತ್ಯಾಸವನ್ನು ಹೇಳುತ್ತೇನೆ. ಈ ಸಮಸ್ಯೆಗೆ ಹೆಚ್ಚಿನ ಪರಿಶೀಲನೆ ಅವಶ್ಯವಾಗಿದೆ. ಈ ಒಂದು ಸಮಸ್ಯೆಯನ್ನು ಆಳವಾಗಿ ಚರ್ಚಿಸುವುದು ಈ ಅಧ್ಯಯನದ ಚೌಕಟ್ಟಿನಲ್ಲಿ ಸಾಧ್ಯವಿಲ್ಲ.

ಈ ಬೆಳವಣಿಗೆಯ ಶ್ರೇಣಿಗಳನ್ನು ತಿಳಿದುಕೊಳ್ಳುವುದು ಕೇವಲ ಪುಸ್ತಕದ ಬೋಧನೆಯಿಂದ ಸಾಧ್ಯವಿಲ್ಲ. ಧರ್ಮದ ಸಂಪ್ರದಾಯದಲ್ಲಿ ತಲ್ಲೀನತೆಯನ್ನು ಹೊಂದಿದಾಗಲೇ ಉತ್ತಮರೀತಿಯ ತಿಳಿವಳಿಕೆ ಬರುತ್ತದೆ. ಉದಾಹರಣೆಗಾಗಿ ಜೈನರಿಗೆ ಗುಣಸ್ಥಾನಗಳ ಪ್ರಾಮುಖ್ಯತೆಯನ್ನು ತಿಳಿಯುವುದು ಅಜೈನರಿಗಿಂತ ಸರಳವಾಗಿದೆ. ಅದೇ ರೀತಿ ವೀರಶೈವರು ಬೇರೆಯವರಿಗಿಂತ ಷಟ್‌ಸ್ಥಲಗಳನ್ನು ಅರ್ಥೈಸಿಕೊಳ್ಳುತ್ತಾರೆ.[೧೯]

ಈ ಶ್ರೇಣಿಗಳು ಅಥವಾ ಗುಣಸ್ಥಾನಗಳು ಆಧ್ಯಾತ್ಮಿಕ ಉನ್ನತಿಯ ಮೊತ್ತಗಳಾಗಿವೆ. ಆಧ್ಯಾತ್ಮಿಕ ಉನ್ನತಿಯ ಶ್ರೇಣಿಗಳು ಮನೋವೈಜ್ಞಾನಿಕವಾಗಿ ಪ್ರಮುಖವಾಗಿವೆ. ಆದಾಗ್ಯೂ ಅನುಭವಿಕ ಮನೋವಿಜ್ಞಾನ ಶ್ರೇಣಿಗಳ ಪ್ರಾಮುಖ್ಯತೆಯನ್ನು ತಿಳಿಯುವುದರಲ್ಲಿ ಅಸಮರ್ಥವಾಗಿದೆ. 'ಮನುಷ್ಯನು ಪರಿಪೂರ್ಣನಲ್ಲ, ಅವನು ಇನ್ನೂ ಇದ್ದಾನೆ' ಎಂದು ತಿಳಿದುಕೊಳ್ಳಬೇಕು. 'ಅವನು ಏನು ಇದ್ದಾನೆ ಅದಕ್ಕಿಂತಲೂ ಚಿಕ್ಕವನಿದ್ದಾನೆ.

---

೧೯ ಆದಿಪುರಾಣ Ed. ಕೆ. ಜಿ. ಕುಂದನಗಾರ ಮತ್ತು ರಾವಬಹಾದ್ದೂರ ಚೌಗಲೆ (ಕನ್ನಡ) ಪೀಠಿಕೆ.

ಅವನು ಪ್ರತಿಯೊಂದು ಕ್ಷಣದಲ್ಲಿ ಯಾವುದರಲ್ಲಿ ವಾಸವಾಗಿರುತ್ತಾನೋ ಅದನ್ನೇ ಪಡೆಯುತ್ತಾನೆ. ಅದಕ್ಕಿಂತ ಹೆಚ್ಚಿಗೆ ಪಡೆಯಲು ಹಂಬಲಿಸುತ್ತಿದ್ದಾನೆ.'

ರವೀಂದ್ರನಾಥ ಠಾಗೋರರ ಹೇಳಿಕೆಯಂತೆ,—"ನಮ್ಮ ಮನೆ ಮತ್ತು ಕೆಲಸದ ಮಧ್ಯದಲ್ಲಿ ಪ್ರಾರ್ಥನೆ ಏಳುತ್ತದೆ, 'ನನಗೆ ದಾರಿತೋರಿಸು', ಇಲ್ಲಿ ಸಮುದ್ರವು ಹರಿಯುತ್ತಿದ್ದಾಗ್ಯೂ ಸಹ ಇನ್ನೊಂದು ದಡವನ್ನು ತಲುಪುವ ನೀರಿಕ್ಷಣೆಯಲ್ಲಿಯೇ ಬಿದ್ದಿರುತ್ತದೆ.[೨೦]

೨೦ ಠಾಗೋರ (ಆರ್) ಸಾಧನಾ, ದ ರಿಯಲೈಜೇಶನ್ ಆಫ್ ದಿ ಇನಫಿನಿಟ್.

# ಬುದ್ಧ ಮತ್ತು ಬಸವ
## (ಒಂದು ತೌಲನಿಕ ವಿವೇಚನೆ)

---

—ಟಿ.ಆರ್.ಮಹಾದೇವಯ್ಯ

ಪ್ರಾಚೀನ ಭಾರತದ ಬುದ್ಧ ಮತ್ತು ಮಧ್ಯಕಾಲಿನ ಬಸವ- ಇವರು ಮಾನವ ಕಲ್ಯಾಣವನ್ನು ಸಾಧಿಸಿ, ವಿಶ್ವವನ್ನು ಬೆಳಗಿದ ಎರಡು ಜಗಜ್ಜ್ಯೋತಿಗಳು. ಅವರಿಬ್ಬರ ಜೀವನ, ಸಾಧನೆ, ಸಿದ್ಧಿಗಳನ್ನು ಒಂದರಪಕ್ಕದಲ್ಲಿ ಇನ್ನೊಂದನಿಟ್ಟು ಅಧ್ಯಯನ ಮಾಡುವುದು ನಮಗಿಂದು ಅನೇಕ ದೃಷ್ಟಿಗಳಿಂದ ಉಪಯುಕ್ತವೆನ್ನಿಸುತ್ತದೆ.

ಲೋಕೋತ್ತರ ಸಾಧನೆಗೈದ ಮಹಾತ್ಮರ ಜೀವನವನ್ನು ಕುರಿತು ಬರೆಯುವವರಿಗೆ ಎದುರಾಗುವ ಮೊದಲ ಸಮಸ್ಯೆಯೆಂದರೆ ಅವರ ಜನನದ ಹಿನ್ನೆಲೆ. ಮಹಾನುಭಾವರನ್ನು ಪೂಜ್ಯಭಾವದಿಂದ ನೋಡುವ ಜನ. ಅಸಾಮಾನ್ಯವಾದುದನ್ನೂ ಸಾಧಿಸಿದ ಅವರನ್ನು ದೈವಾಂಶ ಸಂಭೂತರೆಂದು ಆದರಿಸುತ್ತಾರೆ; ಪೂಜಿಸುತ್ತಾರೆ. ಆಗ ಅವರ ಬಗೆಗಿನ ಐತಿಹಾಸಿಕ ಅಂಶಗಳು ಹಿಂದೆ ಸರಿದು ಅಥವಾ ಪ್ರಾಮುಖ್ಯತೆ ಕಳೆದುಕೊಂಡು ಪೌರಾಣಿಕ ಕಲ್ಪನೆಗಳು ಗರಿಗೆದರಿ ನಾಟ್ಯವಾಡತೊಡಗುತ್ತವೆ. ತಮ್ಮ ಆರಾಧ್ಯದೈವದ ವೈಭವೀಕರಣ ಸಾಗುತ್ತದೆ.

ಜನರ ಇಂಥ ಪೌರಾಣಿಕ ಮನೋಭಾವದಿಂದ ಬುದ್ಧ-ಬಸವರೂ ಹೊರತಾಗಿಲ್ಲ. ಬುದ್ಧನನ್ನು ವಿಷ್ಣುವಿನ ಅವತಾರವೆಂದೂ, ಬೌದ್ಧಾವತಾರವೆಂದರೆ ಆತನ ದಶಾವತಾರ ಗಳಲ್ಲಿನ ಒಂಬತ್ತನೆಯವೆಂದೂ ನಂಬಲಾಗಿದೆ. ಬಸವನೂ ಸಹ ನಂದೀಶನ ಅವತಾರ ವೆಂದೂ, ಧರ್ಮೋದ್ಧಾರಕ್ಕಾಗಿ ಧರೆಯಲ್ಲಿ ಅವತರಿಸಿದ ಕಾರಣಿಕನೆಂದೂ ಪುರಾಣಗಳು ಹೇಳುತ್ತವೆ. 'ಅವತಾರದ ಕಲ್ಪನೆ' ಹಬ್ಬಿಸಿದ ಜನರ ವಾಣಿಗೆ, ಅದನ್ನೇ ಕಾವ್ಯಗಳಲ್ಲಿ ಬಿಂಬಿಸಿದ ಕವಿಯವಾಣಿಗೆ ಒಂದು ಸದುದ್ದೇಶವಿತ್ತು. ಅದನ್ನು ಕೇಳಿದ, ಓದಿದ ಜನ ಆ ಧರ್ಮೋದ್ಧಾರಕರ ಬಗ್ಗೆ ಪೂಜ್ಯಭಾವ ತಳೆಯಲಿ, ಆದರಿಸಲಿ, ಆ ಮೂಲಕ ಉದ್ಧಾರದ ಮಾರ್ಗ ಕಾಣಲಿ ಎಂಬುದು ಅವರ ಬಯಕೆ. ಆದರೆ ಆದುದೇನು? ಜನ ಆ ಮಹಾತ್ಮರನ್ನು ದೇವರ ಅವತಾರವೆಂದು ಕೈಮುಗಿದು ಪೂಜೆಮಾಡಿದರು, ನಿಜ. ಶ್ರದ್ಧೆ ತಳೆಯುವುದರ ಬದಲು ದೂರ ಸರಿದು ನಿಂತರು. ಬಹುಶಃ ಜನರ ವಿಚಾರಸರಣಿ ಹೀಗಿರಬಹುದು: "ದೈವೀಶಕ್ತಿ ಸಂಪನ್ನರಾದ ಆ ಮಹಾತ್ಮರು ಅಂಥ ಅದ್ಭುತಗಳನ್ನು ಸಾಧಿಸಿದರು. ಅದು ಅವರಿಗೆ ಸಾಧ್ಯವಿತ್ತು. ನಾವು ಸಾಮಾನ್ಯರು. ಅಸಹಾಯಕರಾದ

ನಮಗೆ ನಮ್ಮವೇ ಆದ ದೌರ್ಬಲ್ಯಗಳಿಗೆ; ಅಡ್ಡಿ ಆತಂಕಗಳಿವೆ. ನಾವು ಏನನ್ನೂ ತಾನೇ ಸಾಧಿಸಲಾದೀತು?" ಎಂದು ಸೌಜನ್ಯದಿಂದಲೇ ತಮ್ಮ ಮನಗಳ್ಳತನವನ್ನೂ ಮುಚ್ಚಿಕೊಳ್ಳ ತೊಡಗಿದರು. ಮುಲೋದ್ದೇಶಕ್ಕೇ ಕೊಡಲಿಪೆಟ್ಟುಬಿದ್ದಂತಾಯಿತಲ್ಲಾ!

ಇದರ ಜೊತೆಗೆ ಮನುಷ್ಯನಿಗೆ ವಸ್ತುಸ್ಥಿತಿಯ ಅರಿವು ಮೂಡಲು ಪೂರ್ವಗ್ರಹಿಕೆ ಮತ್ತು ಪಕ್ಷಪಾತ ಬುದ್ಧಿಗಳೆಂಬುವು ಶಾಪಗಳಂತೆ ಕಾಡುತ್ತವೆ. ಇವು ದೊಡ್ಡವರ ಬದುಕಿನ ನಿಜವಾದ ಸತ್ತ್ವ-ಸಂದೇಶಗಳನ್ನು ತಿಳಿಯಲು ಅಡ್ಡಿಯಾಗುತ್ತವೆ. ಬುದ್ಧ, ಬಸವ ಮೊದಲಾದ ಮಾನವಹಿತ ಸಾಧಕರ ಬಗ್ಗೆ ಎರಡು ಅನಾರೋಗ್ಯಕರ ಪ್ರವೃತ್ತಿಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಕೆಲವರು ಅವರನ್ನು ಯಾವುದೋ ಒಂದು ಗುಂಪಿಗೆ, ಬಣಕ್ಕೆ ಸೇರಿದವರೆಂದು ಭಾವಿಸುತ್ತಾರೆ. ಅವರು ತಮಗೆ ಸಂಬಂಧಪಟ್ಟವರಲ್ಲವೆಂದು, ಅವರ ಸಂದೇಶದ ಬಗ್ಗೆ ಕಿವುಡಾಗುತ್ತಾರೆ. ಮತ್ತೆ ಕೆಲವರು ಅವರನ್ನು ಅತಿಅಭಿಮಾನ ದಿಂದ ನೋಡುತ್ತಾರೆ. ಭಕ್ತಿಯ ಅತಿಶಯದಿಂದ ಅಂಥ ಮಹಾನುಭಾವಿಗಳನ್ನು ದೇವ ರನ್ನಾಗಿಮಾಡಿ ದೇಗುಲದೊಳಗೆ ಕೂಡಿಬಿಡುತ್ತಾರೆ. 'ಸಂಕಟ ಬಂದಾಗ ವೆಂಕಟರಮಣ' ಎನ್ನುವಂತೆ ತಮಗೆ ಕಷ್ಟ ಬಂದಾಗ ಅದರ ನಿವಾರಣೆಗೆ ಆತನ ಮೊರೆಹೋಗುತ್ತಾರೆ. ದೇವಸ್ಥಾನಕ್ಕೆ ಹೋಗಿ ದೇವರ ಸನ್ನಿಧಿಯಲ್ಲಿ ಒಂದು ಬಗೆ, ಹೊರಗೆ ಬಂದಾಗ ಇನ್ನೊಂದು ಬಗೆ! ಈ ಇಬ್ಬಂದಿತನದಿಂದ ಯಾವ ಪುರುಷಾರ್ಥವನ್ನೂ ಸಾಧಿಸಲಾದೀತು, ಲೋಕಹಿತ ಸಾಧಿಸಿದ ಮಹಾನುಭಾವರ ಬದುಕನ್ನು, ಅವರ ಜೀವನ ಸಂದೇಶವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ನಾವು ಹೇಗೆ ತಪ್ಪುತ್ತಿದ್ದೇವೆ ಎಂಬುದಕ್ಕೆ ಇದು ನಿದರ್ಶನ. ಆದ್ದ ರಿಂದ ನಾವು ಇಂಥ ದೃಷ್ಟಿದೋಷದಿಂದ ಮುಕ್ತರಾಗಿ, ನಿರಾಳಮನದಿಂದ ಅವರ ಬದುಕನ್ನು ಅರ್ಥಮಾಡಿಕೊಂಡು ಅನುಸರಣೆ ಮಾಡಬೇಕಾಗಿದೆ.

ಬುದ್ಧ, ಬಸವರಂಥ ವಿಶ್ವಕುಟುಂಬಿಗಳನ್ನು ಯಾವುದೋ ಒಂದು ಗುಂಪಿಗೆ, ಒಂದು ದೇಶಕ್ಕೆ, ಒಂದು ಕಾಲಕ್ಕೆ ಸೀಮಿತಗೊಳಿಸುವುದು ಅವಿವೇಕದ ಪರಮಾವಧಿ. ಅವರು ಬಣ, ದೇಶ, ಕಾಲಗಳ ಸಂಕುಚಿತ ಎಲ್ಲೆಗಳನ್ನೂ ಮೀರಿ ಇಡೀ ಮಾನವಕುಲವನ್ನು ತಮ್ಮ ಅಸೀಮ ಮಾನವಾಂತಃಕರಣದಿಂದ ಆಲಿಂಗಿಸಿ ನಿಂತ ಪುಣ್ಯಾತ್ಮರು. ಅವರು ಸ್ವರ್ಗದಿಂದ ಅವತರಿಸಿದವರಲ್ಲ. ಇದೇ ಮಣ್ಣಿನಲ್ಲಿ ಅರಳಿದ ಮಾನವರೇ ಸಹಜವಾದ ದೌರ್ಬಲ್ಯಗಳು ಅವರಿಗೂ ಇದ್ದವು. ಅವರು ಅವನ್ನು ಗುರುತಿಸಿ, ಪೂರ್ಣವಾಗಿ ನಿವಾರಿಸಿಕೊಂಡು ಬೆಳೆದರು. ತಮ್ಮಲ್ಲಿದ್ದ ದೇವಗುಣಗಳನ್ನು ಉತ್ಕರ್ಷಗೊಳಿಸಿಕೊಂಡು ದೇವಮಾನವ ರಾದರು. ಅವರಂತೆ ನಾವೂ ಮನಸ್ಸುಮಾಡಿ ಪ್ರಯತ್ನಶೀಲರಾದರೆ ಅವರು ಏರಿದ ಎತ್ತರಕ್ಕೆ ಹೋಗುವುದು ಸಾಧ್ಯ. ಆದ್ದರಿಂದ ಅಂಥ ದೊಡ್ಡವರನ್ನು ದೇವರೆಂದು ದೂರ ವಿಟ್ಟು ಕೈಮುಗಿದು ನಿಲ್ಲುವುದಕ್ಕಿಂತ, ಅವರನ್ನು ಆದರ್ಶಮಾನವರೆಂದು ನಮ್ಮೊಡನೆಯೇ ಇಟ್ಟುಕೊಳ್ಳುವುದು; ಅವರು ನಡೆದು ತೋರಿದ ದಾರಿಯಲ್ಲಿ ಕ್ರಮಿಸಯತ್ನಿಸುವುದು ಯುಕ್ತ. ಆಗ ಅವರ ನುಡಿ ನಮಗೆ ತಾರಕಮಂತ್ರ; ಅವರ ನಡೆ ನಮಗೆ ದಾರಿದೀಪವಾಗುತ್ತವೆ.

ಹೀಗೆ ಈ ಇಬ್ಬರು ಮಹಾ ಪುರುಷರು ಮಾನವತೆಯ ಮೇಲೆ ಅರಳಿದ ಮಂದಾರಗಳು; ಮಾನವರಾಗಿ ಹುಟ್ಟಿ ಮಹಾ ಮಾನವರಾಗಿ ಬೆಳೆದ ಸಾಧಕರು ಎಂಬ ಭಾವನೆಯಿಂದ ನಾವು ಅವರ ಜೀವನವನ್ನು ಅಧ್ಯಯನ ಮಾಡಿದರೆ ಮಾತ್ರ ನಾವು ಅವರನ್ನು ಯಥಾರ್ಥ ವಾಗಿ ಅರ್ಥಮಾಡಿಕೊಳ್ಳಲು ಸಾಧ್ಯ.

ಜಗತ್ತಿನಲ್ಲಿ ಅಧರ್ಮ, ಅಂಧ ಶ್ರದ್ಧೆ, ಅಜ್ಞಾನ, ಅಮಾನುಷತೆಗಳ ಕಸ ತುಂಬಿ ಉಸಿರು ಕಟ್ಟಿಸುವ ವಾತಾವರಣ ಉಂಟಾಗಿ ಬದುಕು ಅಸಹನೀಯವೆನಿಸಿ ಜನಮನದಲ್ಲಿ ಆರೋಗ್ಯಕರ ಸನ್ನಿವೇಶದ ಆಸೆ ತೀವ್ರಗೊಂಡಾಗ ಅಲ್ಲಿನ ಯಾವನೋ ಒಬ್ಬ ಮಹಾನು ಭಾವಿಯ ಮೂಲಕ ಈ ಮಹಾಮಣಿಹ ನೆರವೇರುತ್ತಾ ಬಂದಿರುವುದನ್ನು ಮಾನವ ಇತಿಹಾಸ ಸಾದರ ಪಡಿಸುತ್ತಾ ಬಂದಿದೆ. ನಮ್ಮ ದೇಶದಲ್ಲಿ ಇಂಥ ಅನೇಕ ಸತ್ಪುರುಷರು ಆಗಿ ಹೋಗಿದ್ದಾರೆ; ವಿಶ್ವಮಾನವರೆನಿಸಿ ಇಡೀ ಮಾನವ ಸಮುದಾಯಕ್ಕೆ ಅಮರ ಸಂದೇಶವನ್ನು ಬಿತ್ತರಿಸಿದ್ದಾರೆ. ಬುದ್ಧ ಮತ್ತು ಬಸವ ಅಂಥ ಲೋಕೋದ್ಧಾರ ಕಾರ್ಯ ವೆಸಗಿದ ಮಾನವ ಹಿತೈಷಿ ಪ್ರವಾದಿಗಳು. ಅವರು ಧರ್ಮದ ಪ್ರಗತಿಪರ ಧೋರಣೆ ಗಳನ್ನು ಎತ್ತಿ ಹಿಡಿದ ಭಾರತದ ಮಹಾನ್ ಧಾರ್ಮಿಕ ಜ್ಯೋತಿಗಳು.

ಕಾಲದ ದೃಷ್ಟಿಯಿಂದ ಬುದ್ಧ ಮತ್ತು ಬಸವರ ನಡುವೆ ಶತ ಶತಮಾನಗಳ ಅಂತರ ವಿದ್ದರೂ, ಆಯಾ ಕಾಲದಲ್ಲಿದ್ದ ಸಾಮಾಜಿಕ ಸ್ಥಿತಿಗತಿಗಳಲ್ಲಿ ಸಾಮ್ಯವಿದೆ. ಅಲ್ಲದೆ ಅವರಿಬ್ಬರ ಮನೋ ಧರ್ಮಗಳಲ್ಲಿ, ತಮ್ಮ ಕಾಲದ ಜನ ಜೀವನದ ಬಗ್ಗೆ ಅವರು ಸ್ಪಂದಿಸಿದ ರೀತಿಯಲ್ಲಿ, ತಳೆದ ಕ್ರಾಂತಿಕಾರಕ ದೃಷ್ಟಿಗಳಲ್ಲಿ ಸಮಾನ ಲಕ್ಷಣಗಳಿವೆ. ಆ ಕಾಲಗಳಲ್ಲಿ ಹಿಂದೂ ಧರ್ಮ ತನ್ನ ನಿಜವಾದ ಮಾನವೀಯ ಮೌಲ್ಯಗಳನ್ನು ನೀಗಿಕೊಂಡು ಶುಷ್ಕ ಆಚರಣೆಗಳ, ಕಂದಾಚಾರಗಳ, ಮೂಢ ನಂಬಿಕೆಗಳ ಆಗರವಾಗಿತ್ತು. ಅಂತರಂಗ ಶುದ್ಧವಿಲ್ಲದ ಬಾಹ್ಯ ಆಚರಣೆ, ನಡೆ-ನುಡಿಗಳಲ್ಲಿ ಹೊಂದಾಣಿಕೆಯಿಲ್ಲದ ಘೋರ ಸ್ಥಿತಿ, ನೈತಿಕ ಪತನ, ಯಜ್ಞ ಯಾಗಾದಿಗಳ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸೆ, ಅತ್ಯಾಚಾರಗಳು ಸಮಾಜದ ಪ್ರತಿಷ್ಠಿತರಿಂದ ದೀನ ದಲಿತರ ಶೋಷಣೆ-ಇವು ಅವರ ಹೃದಯದ ತಂತಿ ಯನ್ನು ಮೀಟಿದವು. ಅವರು ಆಗ ರೂಢಿಯಲ್ಲಿದ್ದ ಅರ್ಥಹೀನವಾದ ಆಚರಣೆಗಳನ್ನು ಕಂಡು ಕೊರಗಿದರು; ಮಾನವ-ಮಾನವರ ನಡುವೆ ಇದ್ದ ತಾರತಮ್ಯಗಳನ್ನು ಕಂಡು ಮರುಗಿದರು. 'ಬಹು ಜನರಿಗೆ ಬಹು ಒಳಿತನ್ನುಂಟುಮಾಡುವ, ಸತ್ಸಂಕಲ್ಪದಿಂದ ಅವರು ತರ-ತಮ ಭೇದವಿಲ್ಲದ ಸಮಾನತೆಯ ಸುಂದರ ಸಮಾಜವನ್ನು ನಿರ್ಮಿಸಲು ನಿರ್ಧರಿಸಿದರು.

ಇದಕ್ಕಾಗಿ ಅವರು ಕಂದಾಚಾರ, ಅಂಧಾನುಕರಣೆ, ದೇವರ ಹೆಸರಿನಲ್ಲಿ ನಡೆಯು ತ್ತಿದ್ದ ಶೋಷಣೆಗಳ ವಿರುದ್ಧ ಸಮರವನ್ನೇ ಸಾರಿದರು. ದಯೆ, ಕರುಣೆಗಳೇ ಧರ್ಮದ ಹೃದಯವೆಂದು ಒತ್ತಿ ಹೇಳಿದರು. ಧರ್ಮದ ತಳಹದಿಯಾಗಿರಬೇಕಾದುದು ಕುರುಡು ನಂಬಿಕೆಯಲ್ಲ, ಸುಜ್ಞಾನದ ವಿವೇಚನೆ ಎಂಬುದನ್ನು ಅವರು ಮನವರಿಕೆ ಮಾಡಿದ ರೀತಿ

ಅನನ್ಯ. ಬಹು ಪಾಲು ಜನರಿಂದ ದೂರ ಉಳಿದಿದ್ದ ಆಧ್ಯಾತ್ಮ ವಿದ್ಯೆಯನ್ನು ಸಾರ್ವತ್ರಿಕ ವಾಗಿಸಲು ಶ್ರಮಿಸಿದ ಅವರು ಮೋಕ್ಷದ ಬಾಗಿಲನ್ನು ಎಲ್ಲರಿಗೂ ತೆರೆದಿಟ್ಟರು. ಏಕೆಂದರೆ ಧರ್ಮಕ್ಕೆ ಬೆಲೆ ಬರುವುದು ಅದು ಜನರನ್ನು ಬದುಕಿಸುವ ಮಹಾ ಗುಣದಿಂದ ಎಂಬುದು ಅವರಿಗೆ ಚೆನ್ನಾಗಿ ಗೊತ್ತಿತ್ತು.

ಈ ಇಬ್ಬರು ಧರ್ಮ ವೀರರೂ ವಿಗ್ರಹಾರಾಧನೆ, ಯಜ್ಞ ವಿಧಿಗಳು, ಅಸ್ಪೃಶ್ಯತೆ ಮತ್ತು ಹೆಣ್ಣಿನ ಬಗೆಗಿನ ಹೀನ ನಡವಳಿಕೆಗಳನ್ನು ನೇರವಾಗಿ ಎದುರಿಸಿದರು. ಅವರ ಕಾಲಕ್ಕೆ ಅವರ ನಿಲವು ಅತ್ಯಂತ ದಿಟ್ಟತನದ್ದಾಗಿತ್ತು. ಅವರಿಬ್ಬರು ಜನತೆಗೆ ನೀಡಿದ ಬಹು ದೊಡ್ಡ ಅನುಗ್ರಹವೆಂದರೆ ಸ್ವತಂತ್ರವಾಗಿ ಆಲೋಚಿಸಲು ಕಲಿಸಿದ್ದು; ಮನಶ್ಶುದ್ಧಿ ಮತ್ತು ನೈತಿಕ ಜೀವನದ ಮೇಲ್ಮೆಯನ್ನು ಎತ್ತಿ ಹಿಡಿದು ಜ್ಞಾನೋದಯವೇ ಜೀವನದ ಪರಮ ಗುರಿಯಾಗಬೇಕೆಂದು ಅವರು ತಿಳಿ ಹೇಳಿದ್ದು. ಮೂಲೆ ಗುಂಪಾಗಿ ಹೋಗಿದ್ದ ಶೋಷಿತ ರಿಗೆ, ಬಿನ್ನಹಕೆ ಬಾಯಿಲ್ಲವಾಗಿದ್ದ ದೀನ ದಲಿತರಿಗೆ ಸ್ಥಾನ ಮಾನ ದೊರಕಿಸಿದರು; ಮಾತು ಕಲಿಸಿದರು. ಅಷ್ಟೇ ಅಲ್ಲ, ಬದುಕುವ ಕಲೆಯನ್ನೆ ಕಲಿಸಿದರು.

ಬುದ್ಧ ಮತ್ತು ಬಸವರು ತಮ್ಮ ಪರಿಶ್ರಮದಿಂದ ಸಾಕ್ಷಾತ್ಕರಿಸಿಕೊಂಡ ದಿವ್ಯಾನು ಭವಗಳನ್ನು, ಬದುಕುವ ರೀತಿ ನೀತಿಗಳನ್ನು ಜನ ಸಾಮಾನ್ಯರ ಆಡು ಮಾತಿನಲ್ಲಿ–ಒಬ್ಬ ಪಾಳಿ ಭಾಷೆಯಲ್ಲಿ, ಇನ್ನೊಬ್ಬ ಕನ್ನಡ ಭಾಷೆಯಲ್ಲಿ ಬೋಧಿಸಿದರು. ಅವರ ರಚನೆಗಳು ಸಾಹಿತ್ಯ ಚರಿತ್ರೆಯಲ್ಲಿ ಹೊಸ ಅಧ್ಯಾಯವನ್ನೇ ತೆರೆದಿವೆ. ಅವರು ಬದುಕನ್ನು ಮಥಿಸಿ ತೆಗೆದ ಮಾನವೀಯ ಆಣಿ ಮುತ್ತುಗಳು, ತೆರೆದು ತೋರಿದ ಜ್ಞಾನದ ಗಣಿಗಳು, ನೀಡಿದ ಮಾನವ ಹಿತಾಕಾಂಕ್ಷಿಯಾದ ಸಂದೇಶಗಳು ಇಡೀ ಮಾನವ ಕೋಟಿಯ ದಿವ್ಯ ಸಂಪದ. ಬುದ್ಧನು ಸ್ಥಾಪಿಸಿದ ಧರ್ಮವು ಸಾಮ್ರಾಟ ಅಶೋಕನೇ ಮೊದಲಾದ ಧರ್ಮ ಪ್ರಚಾರಕರ ಶ್ರದ್ಧೆ ಹಾಗೂ ಉತ್ಸಾಹಗಳಿಂದಾಗಿ ಬೆಳೆಯಿತು; ಭಾರತವನ್ನೂ ದಾಟಿ ದೂರ ಪ್ರಾಚ್ಯ ಮತ್ತು ಆಗ್ನೇಯ ದೇಶಗಳಿಗೂ ಸಾಗಿತು. ಅದೇ ಬಸವನು ಎತ್ತಿ ಹಿಡಿದ ವೀರಶೈವ ಧರ್ಮವು, ಅದರಲ್ಲಿ ಸ್ವಾತಂತ್ರ್ಯ ಹಾಗೂ ಮಾನವೀಯ ದೃಷ್ಟಿಯಿದ್ದರೂ, ಉತ್ಸಾಹ ಪೂರ್ಣ ಪ್ರಚಾರದ ಅಭಾವದಿಂದಾಗಿ ಭಾರತದಲ್ಲಿಯೇ ಸರಿಯಾಗಿ ಹಬ್ಬದೆ, ಕರ್ನಾಟಕಕ್ಕೇ ಸೀಮಿತವಾಯಿತು.

**ಬುದ್ಧ :**

ಬುದ್ಧನು ಕ್ರಿಸ್ತ ಪೂರ್ವ ೫೬೦ರಲ್ಲಿ ಕಪಿಲ ವಸ್ತುವಿನ ಶುದ್ಧೋದನ ಮಹಾರಾಜನ ಸುಪುತ್ರನಾಗಿ ಜನಿಸಿದನು. ಆತ ಭೋಗ–ಭಾಗ್ಯಗಳ ನಡುವೆ ಕೊರತೆಯನ್ನೇ ಕಾಣದೆ ಬೆಳೆದನು. ಅವನಿಗೆ ಅರಸೊತ್ತಿಗೆಯ ಅರೆಯಾಗದ ಸುಖ, ಮೋಹದ ಮಡದಿ, ಮುದ್ದಿನ ಮಗ, ಯಾವುದಕ್ಕೂ ಕಡಿಮೆಯಿಲ್ಲ. ಒಮ್ಮೆ ಆತ ಆಕಸ್ಮಿಕವಾಗಿ ಕಂಡ ಒಬ್ಬ ರೋಗಿ, ಒಬ್ಬ ಮುದುಕ, ಒಂದು ಹೆಣ ಬದುಕಿನ ನಶ್ವರತೆಯನ್ನು, ಜೀವದ ಕ್ಷಣಿಕತೆ

ಯನ್ನು ಸಾರಿ, ಮನಸ್ಸನ್ನು ಕಲಕಿದವು. ಜೀವಿಗಳ ದುಃಖಕ್ಕೆ ಕಾರಣವನ್ನು ಅವನ ಕರುಣಾರ್ದ್ರ ಹೃದಯ ಚಿಂತಿಸ ತೊಡಗಿತು. ಅವನ ಬದುಕಿನ ಮಾರ್ಗದಲ್ಲಿ ಕವಲೊಡೆದದ್ದು ಹೀಗೆ. ಸಂನ್ಯಾಸಿಯಾಗಿ ಕೇವಲ ಧ್ಯಾನ ಯೋಗದಿಂದ ಸಾಧನೆ ಮಾಡಲು ನಿರ್ಧರಿಸಿದ ಆತನಿಗೆ ಸರ್ವ ಸಂಗ ಪರಿತ್ಯಾಗವೊಂದೇ ಮಾರ್ಗವಾಗಿ ಕಂಡಿತು. ಅಂತೆಯೇ ಆ ದಿನ ಅರ್ಧ ರಾತ್ರಿಯಲ್ಲಿ ಎಲ್ಲವನ್ನೂ ತೊರೆದು ಹೊರಟನು. ವರ ಕವಿ ಬೇಂದ್ರೆಯವರು ಹಾಡಿರುವಂತೆ,

ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ  
ಮಡದಿ, ಮಗು, ಮನೆ ಮಾರು, ರಾಜ್ಯಗೀಜ್ಯ  
ಹೊತ್ತಿರುವ ಉರಿಯಲ್ಲಿ ಆಯಿತಾಜ್ಯ....  
ಕಾಮ-ಕ್ರೋಧವ ದಾಟಿ, ಮದ-ಮತ್ಸರವ ತುಳಿದು  
ಮೋಹ-ಲೋಭವ ಮೆಟ್ಟಿ ಅಡಿ ಕಿತ್ತಿ ಇಟ್ಟ....ನೆಲ ಕೆಳಗೆ ಬಿಟ್ಟ

ಸತ್ಯಾನ್ವೇಷಣೆಯ ಹಾದಿಯಲ್ಲಿ ಸಾಗಿದ ಗೌತಮನು ನಿರಂತರ ಧ್ಯಾನ-ತಪಗಳಿಂದ ಕೊನೆಗೊಮ್ಮೆ ಬೆಳಕನ್ನು ಕಂಡುಕೊಂಡನು. ಜ್ಞಾನೋದಯವಾದ ಗೌತಮ ಬುದ್ಧನಾದ; ಮಹಾ ಜ್ಞಾನಿಯಾದ. ಬಹು ಎತ್ತರಕ್ಕೆ ಏರಿ ನಿಂತ ಬುದ್ಧ ಕೆಳಕ್ಕೆ ಒಮ್ಮೆ ನೋಡಿದ. ಆಗ ಅವನು ಕಂಡಿದ್ದೇನು?

ಅಲ್ಲಿಂದ ಇಲ್ಲಿವರೆ ಹೊರಳಿ ನೋಡಿ  
ಇದ್ದುದಿದ್ದಂತಿತ್ತು ಜನನ-ಮರಣದ ಜೋಡಿ  
ಗೆದ್ದುದೇನುತ ಮರಳಿ ಜಿಗಿದ.

ಆತ ಕೇವಲ ಸಹಾನುಭೂತಿಯಿಂದ ಕೆಳಗೆ ಇಳಿದು ಬಂದು ತನ್ನಂತೆಯೇ ತನ್ನ ಸಹ ಜೀವಿಗಳೂ ಸಹ ಜ್ಞಾನವಂತರಾಗಲೆಂದು ಶ್ರಮಿಸತೊಡಗಿದನು. ತನ್ನ ಇಳಿವಯಸ್ಸಿನವರೆಗೆ ಜನರೊಡನೆ ಬೆರೆತು ಅವರಿಗೆ ಮಾರ್ಗದರ್ಶನ ನೀಡಿದನು. ತನ್ನ ಆದರ್ಶ ನಡೆಯಿಂದ, ಹೃದಯ ಸ್ಪರ್ಶಿಯಾದ ಸರಳ ಆಡುನುಡಿಯ ಮೂಲಕ ಜನರ ಬಾಳನ್ನು ತಿದ್ದಲು ಯತ್ನಿಸಿದನು. ತನ್ನ ಅನುಭವಗಳನ್ನು ತರ್ಕ ಸಮ್ಮತವಾಗಿ ಹೇಳಿದ್ದು ಆತನ ವೈಶಿಷ್ಟ್ಯ. ಹಿಂದಿನವರು ಆಗುಮಾಡಲು ತಪ್ಪಿದ, ಒಂದು ರೀತಿಯಲ್ಲಿ ಧರ್ಮವನ್ನು ಜೀವನದೊಂದಿಗೆ ಹೊಂದಿಸುವ ನಿಜವಾದ ಪ್ರಯತ್ನವನ್ನು ಆತ ಮಾಡಿದ್ದರಿಂದ ಭಾರತೀಯರು ಆತನಲ್ಲಿ ಒಬ್ಬ ಧರ್ಮವೀರನನ್ನು ಗುರುತಿಸಿದರು. ಸಂನ್ಯಾಸಿಗಳಿಗೆ ವಿಮೋಚನೆಗಾಗಿ ಲೋಕ ಜೀವನದಿಂದ ವಿಮುಖರಾಗಿರೆಂದೂ, ಜನಸಾಮಾನ್ಯರಿಗೆ ಪ್ರಪಂಚದಲ್ಲೆ ಉಳಿದು ವಿಷಯ ಲಂಪಟತನ ಮತ್ತು ಮೂಢ ನಂಬಿಕೆಯ ಜಾಲದಿಂದ ದೂರವಿರಬೇಕೆಂದೂ ಉಪದೇಶಿಸಿದನು. ಬುದ್ಧನು ತನ್ನ ಉಜ್ವಲವಾದ ವಿವೇಕ, ಭವ್ಯವಾದ ದಯೆ ಮತ್ತು ನಿಷ್ಠೆಗಳಿಂದ 'ಏಷ್ಯಾದ ಸಾಕ್ರಟೀಸ್' ಎನ್ನಿಸಿಕೊಂಡನು.

ಅಶೋಕನ ಕಾಲಕ್ಕೆ ಬೌದ್ಧ ಮತದಲ್ಲಿ ಅನೇಕ ಮಾರ್ಪಾಟುಗಳಾದವು. ಅದನ್ನು ಜನಪ್ರಿಯಗೊಳಿಸುವ ಉತ್ಸಾಹದಲ್ಲಿ ಅದು ಆತನಿಗೆ ಅನಿವಾರ್ಯವಾಗಿರಬೇಕು. ಅವನ ನಂತರವಂತೂ ಅದರಲ್ಲಿ ಅಗಾಧ ಬದಲಾವಣೆಗಳಾದವು. ಬುದ್ಧ ಕೆಲವನ್ನು ಖಚಿತವಾಗಿ ಹೇಳಿದ್ದ. ಮತ್ತೆ ಕೆಲವನ್ನು ಜನರ ಸ್ವಾನುಭವಕ್ಕೆ ಬಿಟ್ಟಿದ್ದನು. ಗುರು ಹೇಳದೆ ಇದ್ದುದನ್ನು ಶಿಷ್ಯರು ಊಹಿಸಿದರು–ತಮ್ಮ ಯೋಗ್ಯಾನುಸಾರ. ಪರಿಣಾಮವಾಗಿ 'ಬುದ್ಧನ ಧರ್ಮ ಒಂದು; ಬೌದ್ಧರ ಧರ್ಮ ಹಲವು' ಎಂದಾಯಿತು. ಬೌದ್ಧ ಧರ್ಮದ ಬೆಳವಣಿಗೆಯಲ್ಲಿ ನಾಲ್ಕು ಹಂತಗಳನ್ನು ಗುರುತಿಸಿದ್ದಾರೆ.

ನಾಲ್ಕು ಧರ್ಮ ಸಭೆಗಳು:–

೧. ಬುದ್ಧನು ನಿರ್ವಾಣ ಹೊಂದಿದ ನಂತರ: ರಾಜಗೃಹದಲ್ಲಿ

೨. ಆತನ ನಿರ್ವಾಣದ ಒಂದು ಶತಕದ ನಂತರ: ವೈಶಾಲಿಯಲ್ಲಿ

೩. ದೇವನಾಂಪ್ರಿಯ ಪ್ರಿಯದರ್ಶಿ ಅಶೋಕನ ಕಾಲದಲ್ಲಿ: ಪಾಟಲೀಪುತ್ರದಲ್ಲಿ

೪. ಕ್ರಿ. ಶ. ೧೦೦ರ ಸುಮಾರಿಗೆ ಕಾನಿಷ್ಕನ ಕಾಲದಲ್ಲಿ: ಕಾಶ್ಮೀರ ಅಥವಾ ಜಲಂಧರ್‌ನಲ್ಲಿ

ಹೀಗೆ ಹಂತ ಹಂತವಾಗಿ ಬೌದ್ಧ ಮತ ಅನುಕೂಲಕ್ಕೆ ತಕ್ಕಂತೆ ಮಾರ್ಪಡುತ್ತ ಹೋಯಿತು.

ಕ್ರಮೇಣ ಮಾನವ ಬುದ್ಧ, ಅತಿ ಮಾನವನಾಗಿ ಪರಿಗಣಿಸಲ್ಪಟ್ಟನು. ಆತನ ಆಧ್ಯಾತ್ಮ ತತ್ತ್ವವು ತಾನು ಮೂಡಿದ ಹಿಂದೂ ಧರ್ಮದಂತೆಯೇ ದೇಗುಲವನ್ನು ಸೇರಿತು. ವ್ಯಕ್ತಿಯು ತನ್ನ ಸತತ ಶ್ರದ್ಧೆಯ ಸಾಧನೆಯಿಂದ ಮೋಕ್ಷ ದೊರಕಿಸಿಕೊಳ್ಳುತ್ತಾನೆಂಬುದು ಹೋಗಿ ಮಾನವ ಕುಲೋದ್ಧಾರಕನಾದ ಬೋಧಿಸತ್ವನ ಕರುಣೆಯಿಂದ, ಅನುಗ್ರಹದಿಂದ ಅದು ಸಾಧ್ಯವಾಗುತ್ತದೆ ಎಂಬ ಭಾವನೆ ಬಲಿಯಿತು. ಧರ್ಮ ಒಡೆಯಿತು–ಹೀನಯಾನ, ಮಹಾಯಾನ ಎಂದು. ಪರಿಣಾಮವಾಗಿ ಬೌದ್ಧ ಧರ್ಮ ಸಂಸ್ಥೆಯಲ್ಲಿನ ವ್ಯವಸ್ಥೆ ಸಡಿಲವಾಯಿತು. ಭಾರತದಲ್ಲಿ ಅದರ ಅವನತಿಗೆ ಅದೇ ಕಾರಣವಾಯಿತು.

ಬುದ್ಧನ ವಿಚಾರ ಪ್ರಣಾಳಿಕೆಯೆಲ್ಲವನ್ನು ಒಳಗೊಂಡಿರುವ ಗ್ರಂಥ ಸಮುದಾಯವನ್ನು 'ಬುದ್ಧ ವೇದ'ವೆನ್ನುತ್ತಾರೆ. ಅವೇ ತ್ರಿಪಿಟಕಗಳು: ೧. ವಿನಯ ಪಿಟಕ ೨. ಸುತ್ತ ಪಿಟಕ ೩. ಅಭಿಧರ್ಮ ಪಿಟಕ ಇವಲ್ಲದೆ ಬುದ್ಧನ ಜಾತಕ ಕಥೆಗಳು ಪ್ರಸಿದ್ಧವಾಗಿವೆ. ಬುದ್ಧನ ಉದಾತ್ತ ವಿಚಾರಗಳಲ್ಲಿ ಆರ್ಯ ಸತ್ಯಗಳು ಮುಖ್ಯ. ಆ ಆರ್ಯ ಸತ್ಯಗಳು ನಾಲ್ಕು:

ಅ) ಜಗತ್ತಿನಲ್ಲಿ ದುಃಖವಿದೆ: ಮುಪ್ಪು, ರೋಗ, ಸಾವು, ನಿರಾಶೆ ಮೊದಲಾದವುಗಳಿಂದ ಉಂಟಾಗುವ ಅಸಂತೋಷ.

ಆ) ದುಃಖಕ್ಕೆ ಕಾರಣವಿದೆ: ಜೀವಿಗಳ ದುಃಖಕ್ಕೆ ಕಾರಣ ತೃಷ್ಣೆ, ಆಸೆ.

ಇ) ದುಃಖನಿರೋಧ ಸಾಧ್ಯವಿದೆ: ತೃಷ್ಣೆ ಅಥವಾ ಬಯಕೆ ಇಂಗಿದರೆ ದುಃಖ ಅಳಿಯುತ್ತದೆ.

ಈ) ದುಃಖನಿರೋಧ ಮಾರ್ಗ: ಇದು ನಿರ್ವಾಣದ ಕಡೆಗೆ ಒಯ್ಯುವ ದಾರಿ.

ನಿರ್ವಾಣವೆಂದರೆ ಆರಿಹೋಗುವುದು, ಇಲ್ಲವಾಗುವುದು ಎಂದರ್ಥ. ತೃಷ್ಣೆ ಅಥವಾ ವಾಸನೆಗಳು ಶಾಂತವಾಗುವುದು. ಸರ್ವದಾ ದುಃಖದಿಂದ ಬಿಡುಗಡೆ ಹೊಂದುವುದೇ ನಿರ್ವಾಣ.

ಇದಕ್ಕೆ ಬುದ್ಧನು **ಅಷ್ಟಾಂಗಮಾರ್ಗ**ಗಳನ್ನು ಸೂಚಿಸಿದ್ದಾನೆ:

i) ಸಮ್ಯಕ್ ದೃಷ್ಟಿ (Right belief): ಆರ್ಯಸತ್ಯಗಳ ನಿರ್ದಿಷ್ಟ ಜ್ಞಾನ.

ii) ಸಮ್ಯಕ್ ಸಂಕಲ್ಪ (Right aspiration): ದೃಢನಿಶ್ಚಯ.

iii) ಸಮ್ಯಕ್ ವಚನ (Right speech): ಸತ್ಯನುಡಿ.

iv) ಸಮ್ಯಕ್ ಕರ್ಮ (Right action): ಹಿಂಸೆ, ದ್ರೋಹ, ದುರಾಚಾರಣೆಗಳನ್ನು ಮಾಡದಿರುವುದು.

v) ಸಮ್ಯಕ್ ಆಜೀವ (Right living): ನ್ಯಾಯಪೂರ್ಣವಾದ ಜೀವನವನ್ನು ನಡೆಸುವುದು.

vi) ಸಮ್ಯಕ್ ವ್ಯಾಯಾಮ (Right effort): ಸತ್ಕರ್ಮಕ್ಕಾಗಿ ಸತತ ಉದ್ಯೋಗ.

vii) ಸಮ್ಯಕ್ ಸ್ಮೃತಿ (Right thought): ಲೋಭವೇ ಮೊದಲಾದವುಗಳಿಂದ ಉಂಟಾದ ಚಿತ್ತಸಂತಾಪದಿಂದ ಬಿಡುಗಡೆಯಾಗುವುದು.

viii) ಸಮ್ಯಕ್ ಸಮಾಧಿ (Right tranquility): ರಾಗದ್ವೇಷಗಳಿಲ್ಲದ ಚಿತ್ತದ ಏಕಾಗ್ರತೆ.

ಈ ಅಷ್ಟಾಂಗ ಮಾರ್ಗವನ್ನು ಅನುಸರಿಸಿದರೆ ಮನುಷ್ಯನಲ್ಲಿ ಪ್ರಜ್ಞೆ ಉದಯಿಸುತ್ತದೆ. ಪ್ರಜ್ಞೆ ಹುಟ್ಟಿದ ಮೇಲೆ ನಿರ್ವಾಣ ಲಭಿಸುತ್ತದೆ ಎಂದು ಬುದ್ಧನು ಸಾರಿದನು. ಭಗವಾನ್ ಬುದ್ಧನ ಬೋಧನೆಗಳಲ್ಲಿ ಮುಖ್ಯವಾದದ್ದು ಜನರಿಗೆ ಸ್ವತಂತ್ರವಾಗಿ ಆಲೋಚನೆ ಮಾಡುವ ಶಕ್ತಿ ಬೇಕು ಎಂಬುದು. ಧರ್ಮದ ಬುನಾದಿಯಾಗಿರಬೇಕಾದುದು ತಿಳಿದುಕೊಳ್ಳದೆ ಅನುಸರಿಸುವುದಲ್ಲ; ಅರಿತು ಆಚರಿಸುವುದು. ಅದಕ್ಕೇ ಆತ ಹೀಗೆ ಹೇಳಿರುವುದು:

"ನೀವು ಕೇಳಿದುದನ್ನೆಲ್ಲಾ ನಂಬಬೇಡಿ. ಸಂಪ್ರದಾಯಗಳನ್ನು ನಚ್ಚಬೇಡಿ. ಬಹುಜನರ ಅಭಿಪ್ರಾಯವಿದೆಂದು, ಬಹುಜನರ ವಾಡಿಕೆ ಇದು ಎಂದು ಅನುಸರಿಸಹೋಗಬೇಡಿ. ಮಹರ್ಷಿಯೊಬ್ಬನು ಮಂಡಿಸಿದ ಸಿದ್ಧಾಂತವೆಂಬ ಕಾರಣದಿಂದಲೇ ಶ್ರದ್ಧೆ ಬೆಳೆಸಿಕೊಳ್ಳಬೇಕಾಗಿಲ್ಲ. ಉಪಾಧ್ಯಾಯರು ಹೇಳಿದ್ದು ಎಂದು ಹಿರಿಯರ ಹೇಳಿಕೆ ಎಂಬ ಕಾರಣಕ್ಕೆ

ವಿಶ್ವಾಸವಿಡಬೇಡ. ಸ್ವತಃ ಪರಿಶೀಲಿಸಿ, ವಿಶ್ಲೇಷಿಸಿ ಅದು ವಿವೇಕಯುತವಾಗಿದ್ದು, ಸರ್ವರಿಗೂ ಹಿತ ಹಾಗೂ ಲಾಭದಾಯಕವಾಗಿದ್ದರೆ ಮಾತ್ರ ಒಪ್ಪಿ; ಅದಕ್ಕಾಗಿ ಜೀವಿಸಿ."

ಬುದ್ಧನ ಬೋಧನೆಯ ಆಣಿಮುತ್ತುಗಳು:

'ನಿನ್ನನ್ನು ನೀನು ಗೆಲ್ಲು', 'ನಿನ್ನ ಉದ್ಧಾರ ನಿನ್ನ ಕೈಯಲ್ಲೇ', 'ಹಗೆಯಿಂದ ಹಗೆ ನಂದದು, ಪ್ರೀತಿಯಿಂದ ವೈರ ಅಳಿಯುತ್ತದೆ', 'ಪ್ರೇಮದಿಂದ ಸಿಟ್ಟನ್ನು ಗೆಲ್ಲು', 'ಸತ್ಯವ ನುಡಿ, ನುಡಿವಂತೆ ಮಾಡು', 'ಯಾರ ದೋಷವನ್ನೂ ನೋಡಬೇಡ'.

ಇದು ಬುದ್ಧನು ಭಿಕ್ಷುಗಳಿಗೆ ನೀಡಿದ ಸಂದೇಶ:

"ಬಹು ಜನರ ಹಿತಕ್ಕಾಗಿ, ಬಹುಜನರ ಸುಖಕ್ಕಾಗಿ, ಸಕಲ ಲೋಕದ ಮೇಲಿನ ಅನುಕಂಪದಿಂದ ದೇವತೆಗಳಿಗೂ ಮನುಷ್ಯರಿಗೂ ಅರ್ಥವೃದ್ಧಿಯಾಗಲೆಂದೂ, ಹಿತವಾಗ ಲೆಂದೂ, ಸುಖವಾಗಲೆಂದೂ ಧರ್ಮವನ್ನು ಸಾರುತ್ತಾ ಸಂಚಾರಮಾಡಿರಿ."

ನಿಜ. ೨೫೦೦ ವರ್ಷಗಳುರುಳಿದರೂ ಆ ಧರ್ಮ ಇನ್ನೂ ಮೈತ್ರಿಯನ್ನು ಸಾಧಿಸು ತ್ತಿದೆ; ಜನರನ್ನು ಉದ್ಧರಿಸುತ್ತಲೇ ಇದೆ.

**ಬಸವ:**

ಕರ್ನಾಟಕದ ವಿಜಾಪುರ ಜಿಲ್ಲೆಯ ಬಾಗೇವಾಡಿ ಅಗ್ರಹಾರದ ಮಾದರಸ-ಮಾದಲಾಂಬೆಯರ ಸುಪುತ್ರನಾಗಿ ಬಸವನು ಕ್ರಿಸ್ತಶಕ ೧೧೩೧ರಲ್ಲಿ ಜನಿಸಿದನು. ಆತ ಜನ್ಮ ತಳೆದದ್ದು ಮಧ್ಯಮ ವರ್ಗದ ಸಂಪ್ರದಾಯನಿಷ್ಠ ಶೈವಬ್ರಾಹ್ಮಣ ಮನೆತನ. ಬಾಲಕ ನಿರುವಾಗಲೇ ಬಸವನಿಗೆ ಸುತ್ತಣ ಸಾಮಾಜಿಕ ವಾತಾವರಣ ಉಸಿರು ಕಟ್ಟುವಂತೆ ಕಾಣ ಸಿತು. ಆಗಲೇ ಆತ ಬೇಸರಪಟ್ಟುಕೊಳ್ಳುತ್ತಿದ್ದ. ಆತನ ಅತೃಪ್ತಿ-ಅಸಮಾಧಾನಗಳು ಸ್ಫೋಟಗೊಂಡದ್ದು ಆತನ ಉಪನಯನದ ಸಂದರ್ಭದಲ್ಲಿ. ಆತ ಕರ್ಮಲತೆಯಂತಿದ್ದ ಜನಿವಾರವನ್ನು ಕಿತ್ತು ಬಿಸುಟು ಹೊರಡುವ ಸನ್ನಿವೇಶ ನಿಂತ ನೀರಿನಂತೆ ಮಲೆತು ಹೋಗಿದ್ದ ಧಾರ್ಮಿಕ ಸಂಪ್ರದಾಯದಿಂದ ಸಿಡಿದು ನಿಂತ ಆತನ ದಿಟ್ಟ ನಿಲವನ್ನು ಸೂಚಿಸುತ್ತದೆ.

ಮನೆಯಿಂದ ಹೊರಬಿದ್ದ ಆತನನ್ನು ವಿಧಿ ಕೂಡಲ ಸಂಗಮಕ್ಕೆ ಕರೆತಂದಿತು. ಅಲ್ಲಿ ಬಸವನು ಸಂಗಮನಾಥನ ಪೂಜೆಯಲ್ಲಿ ನಿರತನಾಗಿರುತ್ತಾನೆ. ಮುಂದೇನು ಎಂಬುದು ತಿಳಿ ಯದೆ ಅಲ್ಲಿದ್ದ ಅವನಿಗೆ ಅವನ ಅಂತರಾಳದಲ್ಲಿ ಬೋಧೆಯಾಗುತ್ತದೆ. ಅವನು ಆ ಒಳ ದನಿಗೆ ಓಗೊಟ್ಟು ಬಿಜ್ಜಳ ಮಹಾರಾಜ ಆಳುತ್ತಿದ್ದ ಕಲ್ಯಾಣ ಪಟ್ಟಣಕ್ಕೆ ಹೋದನು. ಇದು ಅವನ ಜೀವನದ ಬಹುಮುಖ್ಯವಾದ ಘಟನೆ. ಸಾಮಾನ್ಯ ಲೆಕ್ಕಿಗನಾಗಿ ಉದ್ಯೋ ಗಕ್ಕೆ ಸೇರಿದ ಬಸವ ಸ್ವಸಾಮರ್ಥ್ಯದಿಂದ ರಾಜ್ಯದ ಮಂತ್ರಿಪದವಿಗೇರುತ್ತಾನೆ. ಹಂತ ಹಂತವಾಗಿ ಆತನ ವ್ಯಕ್ತಿತ್ವ ವಿಕಾಸವಾಗುತ್ತಾ ಹೋಗುತ್ತದೆ. ಲೌಕಿಕ ಪ್ರಜ್ಞೆ, ರಾಜಕಾರಣ ನೈಪುಣ್ಯ, ಪ್ರಚಂಡ ಬುದ್ಧಿ ಶಕ್ತಿಗಳಿಂದ ಬಸವನು ಚತುರ ಹಾಗೂ ದಕ್ಷ ಆಡಳಿತಗಾರ

ನೆನಿಸುತ್ತಾನೆ. ಈ ಲೌಕಿಕ ಉದ್ಯೋಗದ ಜೊತೆಗೆ ಪಾರಮಾರ್ಥಿಕ ಸಾಧನೆಯನ್ನೂ ಸಮರ್ಥವಾಗಿ ನೆರವೇರಿಸಿದುದರಲ್ಲಿ ಬಸವನ ಹೆಚ್ಚುಗಾರಿಕೆ ಇದೆ. ಇದಕ್ಕಾಗಿ ಹತ್ತು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅವನ್ನು ಯಶಸ್ವಿಗೊಳಿಸಿದ ಕೀರ್ತಿ ಆತನದು.

ಬಸವನಂತೆಯೇ ಇನ್ನೂ ಅನೇಕ ಶರಣರು ತಮ್ಮ ಬಾಳನ್ನೇ ಪ್ರಯೋಗ ಶಾಲೆಯನ್ನಾಗಿ ಮಾಡಿ ಜೀವನದ ಮೌಲ್ಯಗಳನ್ನು ಕಂಡುಕೊಂಡರು. ಸಮಷ್ಟಿ ಚೇತನವನ್ನು ಮೇಲೆತ್ತುವ ಘನಕಾರ್ಯ ಉತ್ಸಾಹದಿಂದ ನಡೆಯಿತು. ಭರತಖಂಡದ ವಿವಿಧ ಭಾಗಗಳಿಂದ ಜನರನ್ನು ಆಕರ್ಷಿಸಿತು. ಕರ್ನಾಟಕದ ಕಲ್ಯಾಣ ಆಧ್ಯಾತ್ಮಿಕ ಅಕಾದಮಿ ಎನ್ನಿಸಿದ ಅನುಭವಮಂಟಪದ ಸ್ಥಾಪನೆ ಅಂದಿನ ಮಹಾಸಾಧನೆ. ಅದು ಬಸವನ ಚಿಂತನ ಶೀಲತೆಯ, ಸಾಹಸ ಪ್ರವೃತ್ತಿಯ ದ್ಯೋತಕ. ಇದರ ಕೃಪಾಛತ್ರದಡಿ ಯಾವ ತಾರತಮ್ಯವಿಲ್ಲದೆ ಜನರು ಒಟ್ಟುಗೂಡಿ ಇಹ-ಪರಸಾಧನೆಯ ಬಗ್ಗೆ ಮುಕ್ತಮನಸ್ಸಿನಿಂದ ಚರ್ಚಿಸುತ್ತಿದ್ದರು. ಈ ಜನತಾ ವಿಶ್ವವಿದ್ಯಾಲಯ ಒದಗಿಸಿದ ಅಪೂರ್ವ ಅವಕಾಶದಿಂದಾಗಿ ಸಹಸ್ರಗಟ್ಟಲೆ ಗಂಡಸರು, ಹೆಣ್ಣುಮಕ್ಕಳು ತಮ್ಮ ಜ್ಞಾನಾನುಭವಗಳನ್ನು 'ವಚನ'ಗಳಲ್ಲಿ ಉಸುರಿದರು. ಒಂದೇ ಕಾಲ ಮತ್ತು ಸ್ಥಳದಲ್ಲಿ, ಬೇರೆ ಬೇರೆ ವೃತ್ತಿಯ ಜನ. ಸಾವಿರ ಮಿಕ್ಕಿದ ಸಂಖ್ಯೆಯಲ್ಲಿ ತಮ್ಮ ತಮ್ಮ ಅನುಭವಗಳನ್ನು ವ್ಯಕ್ತಪಡಿಸಲು ಸಾಹಿತ್ಯ ಸೃಷ್ಟಿಗೈದ ನಿದರ್ಶನ ಜಾಗತಿಕ ಇತಿಹಾಸದಲ್ಲಿ ನಾವಿನ್ನೂ ಹುಡುಕಿ ನೋಡಬೇಕಾಗಿದೆ! ಸಕಲರೂ ತಮ್ಮ ವೃತ್ತಿಯನ್ನು, ಅದರಲ್ಲಿ ಮೇಲು-ಕೀಳೆಂಬುದು ಇಲ್ಲ, ಮಾಡುತ್ತಲೇ ಇಹ-ಪರಗಳನ್ನು ಸಾಧಿಸಬಹುದೆಂಬುದನ್ನು ಬದುಕಿ ತೋರಿ ಬದುಕಿನ ಬಗ್ಗೆ ಪ್ರೀತಿ ಹಾಗೂ ನಿಷ್ಠೆಯನ್ನುಂಟುಮಾಡಿದ್ದು ಬಸವನ ಗಮನಾರ್ಹ ಸಾಧನೆ. ಆತನ 'ಕಾರ್ಯ'ದ ಕಲ್ಪನೆ ಲೋಕದ ಅರ್ಥಶಾಸ್ತ್ರಕ್ಕೆ ಅಪೂರ್ವವಾದ ಕೊಡಿಗೆ ಎಂದರೆ ಅತಿಶಯೋಕ್ತಿಯಾಗಲಾರದು.

ಬಸವ ಒಬ್ಬ ಧರ್ಮೋಪದೇಶಕನಿದ್ದಂತೆ, ಶ್ರೇಷ್ಠ ದರ್ಜೆಯ ಕಾರ್ಯಕರ್ತ. ಆತನದು ಬಹುಮುಖದ ವ್ಯಕ್ತಿತ್ವ. ಆತನ ಕಾರ್ಯಕ್ಷೇತ್ರವೂ ವಿಶಾಲವಾದದ್ದು, ವೈವಿಧ್ಯಪೂರ್ಣವಾದದ್ದು. ಬಸವನು ಒಬ್ಬ ಅನುಭಾವಿ, ದಾರ್ಶನಿಕ, ರಾಜನೀತಿಜ್ಞ, ಸಮಾಜ ಹಿತಚಿಂತಕ, ಮಾನವತಾವಾದಿ; ಮೇಲಾಗಿ ಆತ ಮೇಲ್ಮಟ್ಟದ ಕವಿ. ಆತನು ರಚಿಸಿರುವ ವಚನಗಳು ಆತನ ಬದುಕನ್ನು ಬಿಂಬಿಸುತ್ತವೆ; ಅವನ ಸಂದೇಶಗಳನ್ನು ಒಳಗೊಂಡಿವೆ. ತಿಳಿಯಾದ ಸರಳ ನುಡಿಗಳಲ್ಲಿ ಹೊಮ್ಮಿದ ಅವನ ವಚನಗಳು ಅನುಭಾವದಿಂದ, ಗಾಢ ಚಿಂತನೆಯಿಂದ, ಗೂಢ ಆಧ್ಯಾತ್ಮ ವಿಚಾರಗಳಿಂದ ತುಂಬಿವೆ. ಮನುಷ್ಯನು ತಾನು ಹಸನಾಗಿ ಬಾಳಿ, ಉಳಿದ ತನ್ನ ಸಹಜೀವಿಗಳನ್ನು ಹೇಗೆ ಬಾಳಗೊಡಬಹುದು ಎಂಬ ಜೀವನ ಸೂತ್ರ ಆತ್ಮೀಯವಾಗಿ ನಿರೂಪಿತವಾಗಿದೆ.

ಮನುಷ್ಯನಿಗೆ ಜಾತಿ ಮುಖ್ಯವಲ್ಲ, ಮಾನವಧರ್ಮ ಮುಖ್ಯವೆಂದು ಸಾರಿದನು. ಒಬ್ಬನ ಯೋಗ್ಯತೆಯ ಅಳತೆಗೋಲು ಆತನ ಹುಟ್ಟಲ್ಲ, ಆತನ ಆಚಾರ-ವ್ಯವಹಾರ

ಎಂದು ತಿಳಿಸಿದನು. ವರ್ಣ ಸಂಕರ ಮಹಾಪಾಪವೆಂದು ನಂಬಿದ್ದ ಆ ಕಾಲದಲ್ಲೇ ಬ್ರಾಹ್ಮಣ ಕನ್ಯೆ ಹೊಲೆಯರ ವರ ಇವರ ಮದುವೆಯನ್ನು ನಡೆಸಿ ಬಿಟ್ಟನು. ಇದು ಅವರ ಕ್ರಾಂತಿಕಾರಕ ಪ್ರಾಯೋಗಿಕ ಶಕ್ತಿಗೆ ಜ್ವಲಂತ ನಿದರ್ಶನ. ಬಸವನ ಇಂಥ ವೈಚಾರಿಕ ನಿಲವನ್ನು ಅರಗಿಸಿಕೊಳ್ಳುವಷ್ಟು ಹನ್ನೆರಡನೆ ಶತಮಾನ ಹದವಾಗಿರಲಿಲ್ಲ. ಜನ ಮನ ಇನ್ನೂ ಆ ಮಟ್ಟಕ್ಕೆ ಏರಿರಲಿಲ್ಲವಾಗಿ ಆ ನಿಟ್ಟಿನಲ್ಲಿ ಸಾಧನೆ ಮುಂದುವರಿಯಲಿಲ್ಲ ಅರಸನ ಕೋಪಕ್ಕೆ, ಸನಾತನಿಗಳ ಕ್ರೋಧಕ್ಕೆ ಆ ಮಾನವ ಹಿತಸಾಧಕರ ಗುಂಪು ಬಲಿಯಾಗಬೇಕಾದುದು ದುರ್ದೈವ.

ಬಸವನ ದೃಷ್ಟಿಯಲ್ಲಿ ತತ್ತ್ವಶಾಸ್ತ್ರವೆಂದರೆ ದಿಟ್ಟ ಹೋರಾಟವೇ ಹೊರತು, ಸೋಮಾರಿತನದ ಧ್ಯಾನಾಸಕ್ತತೆಯಲ್ಲ. ಅವನೆಂದುದು ಹೀಗೆ: "ಟೊಂಕಕಟ್ಟಿ ಇಳಿ, ಶರಣಾಗತನಾಗದೆ ಹೋರಾಡುವುದೇ ನಿನ್ನ ಸರದಿ. ಜೀವನ ಒಂದು ಹೋರಾಟ; ಕಷ್ಟ ಪಡದೆ ಗೆಲವು ಸಾಧ್ಯವಿಲ್ಲ." ಶಕ್ತಿವಿಶಿಷ್ಟಾದ್ವೈತ ತತ್ತ್ವಪ್ರತಿಪಾದಕನಾದ ಬಸವನು ಪರಿಪೂರ್ಣತೆಯ ಕಡೆಗೆ ಸಾಗುವ ಮನುಷ್ಯ ನಿಧಾನವಾಗಿ ಹಲವು ಮಜಲುಗಳನ್ನೇರಿ ಸಾಗಬೇಕು ಎಂಬುದನ್ನು ನಂಬಿದ್ದನು. ಅದೇ ಷಟ್‌ಸ್ಥಲಮಾರ್ಗ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಆರುಸ್ಥಲಗಳಲ್ಲಿ ಸಾಧಕ ಸಾಗಬೇಕು. ದಿಢೀರ್ ಫಲವನ್ನು ಬಯಸಿದರಾಗದು. ಸಾಧನೆಯಿಂದ ಅದು ಸಹಜವಾಗಿ ದೊರಕುತ್ತದೆ. ಆದಕ್ಕೇ ಆತ ಹೀಗೆ ಪ್ರಾರ್ಥಿಸಿದ್ದು:

ಭಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ
ಯುಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ.
ಸಾರಿ ಶರಣನೆನಿಸುವೆನಯ್ಯ ಮೆಲ್ಲಮೆಲ್ಲನೆ
ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯ
ಕೂಡಲಸಂಗಮದೇವಾ, ನಿಮ್ಮಿಂದಧಿಕನೆನಿಸುವೆನಯ್ಯ.

ಬಸವನು ಶ್ರೇಷ್ಠ ವಚನಕಾರನಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಿಗಿಲಾದ ಸ್ಥಾನವನ್ನು ದೊರಕಿಸಿಕೊಂಡಿದ್ದಾನೆ. ಆತನ ಅನುಭಾವದ ಆಣಿಮುತ್ತುಗಳು ಅಮೌಲ್ಯವಾದವು. ಇಹ-ಪರಗಳೆರಡನ್ನೂ ಸಾಧಿಸಬೇಕೆನ್ನುವವರಿಗೆ ದಾರಿದೀಪಗಳು.

'ಅಯ್ಯ' ಎಂದಡೆ ಸ್ವರ್ಗ, 'ಎಲವೋ' ಎಂದಡೆ ನರಕ, 'ದಯೆಯಿಲ್ಲದ ಧರ್ಮವದಾವುದಯ್ಯ', 'ಆಚಾರವೇ ಸ್ವರ್ಗ, ಅನಾಚಾರವೇ ನರಕ', 'ಕೊಲುವವನೇ ಮಾದಿಗ, ಹೊಲಸು ತಿಂಬವನೇ ಹೊಲೆಯ', 'ಸದುವಿನಯವೇ ಸದಾಶಿವನೊಲುಮೆ', 'ದೇವನೊಬ್ಬ ನಾಮ ಹಲವು', 'ಅರಿದರೆ ಶರಣ, ಮರೆತರೆ ಮಾನವ'.

ಇಡೀ ಮನುಕುಲಕ್ಕೆ ನೀಡಿದ ಬಸವ ಸಂದೇಶ ಈ ವಚನದಲ್ಲಿ ಘನೀಭೂತವಾಗಿದೆ ಎನ್ನಬಹುದು:

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ
ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವನನೊಲಿಸುವ ಪರಿ.

**ಸಾಮ್ಯಗಳು:**

ಬುದ್ಧ-ಬಸವ ಇಬ್ಬರೂ ಸಂತರು, ಪ್ರವಾದಿಗಳು, ಮಹಾಮಾನವತಾ ವಾದಿಗಳು. ಇಬ್ಬರೂ ಜಿಡ್ಡುಗಟ್ಟಿದ್ದ ಸಂಪ್ರದಾಯದಿಂದ ಸಿಡಿದೆದ್ದವರು. ತಾವು ಸ್ವತಃ ಸ್ವತಂತ್ರ ಆಲೋಚಕರಾಗಿದ್ದು ಉಳಿದವರನ್ನೂ ವಿಚಾರವಂತರಾಗಲು ಪ್ರೇರಿಸಿದವರು. ಸಕಲ ಉದ್ಧಾರಕ್ಕಾಗಿ ತಮ್ಮ ಬಾಳನ್ನೇ ಸಮರ್ಪಿಸಿಕೊಂಡವರು.

೧. ಜನಸಾಮಾನ್ಯರನ್ನು ಮೇಲೆತ್ತುವ ಮಹಾಕಾರ್ಯ: ಇಬ್ಬರೂ ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ಜನರ ಹೃನ್ಮನವನ್ನು ಸುಜ್ಞಾನ ದೀಪ್ತಿಯಿಂದ ಬೆಳಗಿದರು. ರೂಢಮೂಲವಾಗಿದ್ದ ಮೂಢನಂಬಿಕೆ ಮತ್ತು ಅಂಧ ಶ್ರದ್ಧೆಗಳನ್ನು ಹೋಗಲಾಡಿಸಿ ಜನರನ್ನು ಸನ್ಮಾರ್ಗದಲ್ಲಿ ಕೈಹಿಡಿದು ನಡೆಸಿದರು.

೨. ಸಂಸ್ಕೃತ ಭಾಷೆ ಗೊತ್ತಿದ್ದವರಿಗೆ ಮಾತ್ರ ದೊರೆಯುತ್ತಿದ್ದ ಗಹನವಾದ ಆಧ್ಯಾತ್ಮ ವಿದ್ಯೆಯನ್ನು, ಧಾರ್ಮಿಕ ಆಚಾರ-ವಿಚಾರಗಳನ್ನು ಸಾಮಾನ್ಯರಿಗೂ ಸರಳವಾಗಿ ತಿಳಿಯುವ ಆಡುಮಾತಿನಲ್ಲಿ ಹೇಳಿದರು. ಜನವಾಣಿಯನ್ನು ದೇವವಾಣಿಯ ಮಟ್ಟಕ್ಕೇರಿಸಿದ ಪುಣ್ಯ ಅವರದು.

೩. ಯಜ್ಞ ಯಾಗಾದಿಗಳಲ್ಲಿ, ದೇವರ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸೆ, ಶೋಷಣೆಗಳನ್ನು ತಪ್ಪಿಸಲು ಈರ್ವರೂ ಶ್ರದ್ಧೆಯಿಂದ ಶ್ರಮಿಸಿದರು. ಅಪಾರ ಅನುಕಂಪ ಅವರದು. 'ಜಗದ ಜೀವಾವಳಿಗೆ ಹಿಂಸೆ ಮಾಡಬಾರದು' ಎಂದು ಬುದ್ಧ ಹೇಳಿದರೆ, 'ದಯೆಯೇ ಧರ್ಮದ ಮೂಲ' ಎಂದು ಬಸವ ನುಡಿದಿದ್ದಾನೆ.

೪. ಅವರ ಬೋಧೆಗಳ ಮೇಲೆ ವೈಯಕ್ತಿಕ ಪ್ರಭಾವ ಅಚ್ಚೊತ್ತಿರುತ್ತಿತ್ತು. ಅವರಿಬ್ಬರೂ ತಮ್ಮ ಆತ್ಮಶಕ್ತಿಯನ್ನು ಎಷ್ಟು ಉಜ್ವಲಗೊಳಿಸಿಕೊಂಡಿದ್ದರೆಂದರೆ ಅದಕ್ಕೆ ಪರುಷಶಕ್ತಿ ಪ್ರಾಪ್ತವಾಗಿತ್ತೆನ್ನಿಸುತ್ತದೆ. ಅವರ ಸಂಪರ್ಕ ಹೊಂದಿದ ದುಷ್ಟಶಕ್ತಿಗಳು ತಮ್ಮ ರಾಜಸ ಹಾಗೂ ತಾಮಸ ಗುಣಗಳನ್ನು ಕಳೆದುಕೊಂಡು ಆಶ್ಚರ್ಯಕರ ರೀತಿಯಲ್ಲಿ ಪರಿವರ್ತನೆ ಹೊಂದುತ್ತಿದ್ದವು. ಮಾನವರನ್ನು ನಿರ್ದಯವಾಗಿ ಬೇಟೆಯಾಡಿ ಅವರ ರಕ್ತಸಿಕ್ತ ಬೆರಳುಗಳನ್ನು ಮಾಲೆಯಾಗಿ ಪೋಣಿಸಿಕೊಂಡು ಧರಿಸುವ ರಾಕ್ಷಸೇಚ್ಛೆಯ ಅಂಗುಲಿಮಾಲ ಬುದ್ಧನನ್ನು ಕಂಡಾಗ, ನುಡಿಸಿದಾಗ ಅವನ ರೂಕ್ಷ ಹೃದಯದಲ್ಲೂ

ಮಾನವತೆಯ ಕಾರಂಜಿ ಪುಟಿಯುತ್ತದೆ. ಹಿಂಸೆಯ ಸಾಕಾರ ಮೂರ್ತಿಯಾಗಿದ್ದ ಆತ ಕರುಣಾಳು ಸಂನ್ಯಾಸಿಯಾಗುತ್ತಾನೆ.

ಬಸವನ ಜೀವನದಲ್ಲೂ ಇಂಥದೇ ಪ್ರಸಂಗ ನಡೆಯುತ್ತದೆ. 'ಲಾಂಛನಕ್ಕೆ ಶರಣೆಂಬೆ' ಎಂಬ ಬಸವನ ಮಾತಿನ ಹಿಂದಿರುವ ಜಂಗಮರನ್ನು ಕುರಿತ ಆವನ ಶ್ರದ್ಧೆಯನ್ನೇ ಬಂಡವಾಳ ಮಾಡಿಕೊಂಡು ಒಬ್ಬ ಕಳ್ಳ ಅವನನ್ನು ಮೋಸಗೊಳಿಸಲು ಬರುತ್ತಾನೆ. ಸಣ್ಣ ಗುಂಡನೆಯ ಬದನೆಕಾಯನ್ನೇ ಲಿಂಗವೆಂದು ವಸ್ತ್ರದಲ್ಲಿ ಸುತ್ತಿ ಕೊರಳಲ್ಲಿ ಧರಿಸಿ, ಜಂಗಮ ವೇಷದಲ್ಲಿ ಬಂದಾಗ ಬಸವನ ಮನೆಯಲ್ಲಿ ಸಾಮೂಹಿಕ ಲಿಂಗಪೂಜೆ ನಡೆದಿತ್ತು. ಬಸವ ಅವನಿಗೆ ವಂದಿಸಿ, ಕೈಹಿಡಿದು ಕರೆದೊಯ್ದು ಕೂರಿಸಿ ಪೂಜೆ ಮಾಡಿಕೊಳ್ಳಲು ವಿಜ್ಞಾಪಿಸಿ ದನು. ವೇಷಧಾರಿಗೆ ಪೇಚಾಟಕ್ಕಿಟ್ಟುಕೊಂಡಿತು. ಬಸವನ ಸ್ಪರ್ಶ ಮಾತ್ರದಿಂದಲೇ ಅವನಲ್ಲಿ ಹೊಸ ಅನುಭವವಾಗತೊಡಗಿತ್ತು. ಅಳುಕುತ್ತಲೇ ವಸ್ತ್ರ ಬಿಚ್ಚಿದರೆ ಅಲ್ಲಿ ನಿಜವಾದ ಲಿಂಗವೇ ಇತ್ತು. ಆತ ಮೆಲ್ಲನೆ ಭಕ್ತನಾಗಿ ಬಿಟ್ಟಿದ್ದ. ಈ ಪರಿವರ್ತನೆ ಕ್ಷಣ ಮಾತ್ರದಲ್ಲಿ ಘಟಿಸಿತ್ತು. ಇಂಥದ್ದು ಸಾಧ್ಯವಾಗುವುದು ಅಪೂರ್ವ ಸಿದ್ಧಿಯಿಂದ ಮಾತ್ರ. ಬುದ್ಧ–ಬಸವರಿಬ್ಬರೂ ಅಂಥ ಅಪೂರ್ವ ಸಿದ್ಧರಾಗಿದ್ದರು.

**ವೈಷಮ್ಯಗಳು:** ಬುದ್ಧ ಮತ್ತು ಬಸವರಲ್ಲಿ ಅನೇಕ ಹೋಲಿಕೆಗಳು, ಸಾಮ್ಯಗಳು ಕಂಡುಬಂದಂತೆ ಕೆಲವು ಗಮನಾರ್ಹವಾದ ವೈಷಮ್ಯಗಳೂ ಇವೆ. ಅವರಿಬ್ಬರ ಗುರಿ ಒಂದೇ ಆದರೂ, ಮಾರ್ಗ ಸ್ವಲ್ಪ ಬೇರೆ ಬೇರೆ ತಿರುವನ್ನು ಪಡೆದಿವೆ.

೧. ಬುದ್ಧನು ದೇವರ ಬಗ್ಗೆ ಎಲ್ಲಿಯೂ ಪ್ರಸ್ತಾಪ ಮಾಡಿಲ್ಲ. ಆತ್ಮದ ಬಗೆಗೂ, ನಾವು ಈ ದಿನ ಬಳಸುವ ಅರ್ಥದಲ್ಲಿ ಹೇಳಿಲ್ಲ. ಆತನು ನಿರೀಶ್ವರವಾದ. ಅವನ ದೃಷ್ಟಿಯಲ್ಲಿ ಜೀವನದ ಗುರಿ ಸ್ವರ್ಗವಲ್ಲ; ದೇವರಲ್ಲಿ ಐಕ್ಯವಾಗುವುದಲ್ಲ; ಬೌದ್ಧಿಕ ಮತ್ತು ನೈತಿಕ ಸಾಮರಸ್ಯ ಜೀವನದಿಂದ ಲೋಕದ ಸಂಕಷ್ಟಗಳಿಂದ ರಕ್ಷಣೆ ಪಡೆಯುವುದು. ಹೀಗಾಗಿ ಬೌದ್ಧ ಧರ್ಮ ವ್ಯಕ್ತಿಯ ಆತ್ಮ ಮತ್ತು ವಿಕಾಸಗತಿಗೆ ಅತೀತವಾದ ದೇವರನ್ನು ಕಡೆಗಣಿಸುತ್ತದೆ.

ಬಸವನಾದರೋ ಆತ್ಮ, ಪರಮಾತ್ಮಗಳೆರಡನ್ನೂ ನಂಬಿದ್ದನು. ಆತನು ಶುದ್ಧ ಏಕೇಶ್ವರವಾದಿ. ಅವನು 'ಅಂಗ'ವು ತನ್ನ ದೌರ್ಬಲ್ಯಗಳನ್ನು ನೀಗಿಕೊಂಡು 'ಲಿಂಗ' ವಾಗುತ್ತದೆ ಎಂಬ ಸಿದ್ಧಾಂತದ ಪ್ರತಿಪಾದಕ. ಅಂದರೆ ಆತ್ಮವು ನೈತಿಕ ಆಚರಣೆಯಿಂದ ಪರಮಾತ್ಮನಲ್ಲಿ ಮಿಲನಗೊಳ್ಳುತ್ತದೆ ಎಂದು ಸಾರಿದನು.

೨. 'ಶೂನ್ಯ'ವೆಂದರೆ ಬುದ್ಧನಿಗೆ ಏನೂ ಇಲ್ಲದ್ದು; ನಿರರ್ಥಕ ಬಸವ ಅದರಲ್ಲಿ ವಿಶೇಷವಾದ ಅರ್ಥವನ್ನು ಕಂಡುಕೊಂಡನು. ಅದೇ 'ಪರಮಾತ್ಮ ಗುರಿ' ಎಂಬ ಅರ್ಥ. 'ಶೂನ್ಯ ಸಂಪಾದನೆ' ಎಂದರೆ ಪರಮಾತ್ಮನೊಡನೆ ಬೆರೆಯುವುದು. ಶೂನ್ಯವೆಂದರೆ ಅಹಂ ಅನ್ನು ಕಡಿಮೆ ಮಾಡಿ, ಆಸೆಯನ್ನು ಸೊನ್ನೆ ಅಂಶಕ್ಕೆ ತರುವುದು. ಅಹಂನ ತಗ್ಗುವಿಕೆ

ಯಿಂದ ಉನ್ನತಮಟ್ಟದ ಆತ್ಮವಿಕಾಸವು ಸಾಧಿಸಿ ಜೀವಾತ್ಮವು (ಅಂಗ) ಪರಮಾತ್ಮನಲ್ಲಿ (ಲಿಂಗ) ಏಕೀಭವಿಸುತ್ತದೆ. ವ್ಯಕ್ತಿತ್ವವನ್ನು ಕಳೆದುಕೊಳ್ಳದೆ ವಿಶ್ವವ್ಯಾಪಕತೆಯನ್ನು ಪಡೆದು ಸಮರಸವಾಗುತ್ತದೆ ಎಂದು ಆತ ದೃಢವಾಗಿ ನಂಬಿದ್ದನು.

೩. ಬುದ್ಧನಿಗೆ ಬಾಳು ಭ್ರಮೆ; ಮಾಯೆ. ಆತ ಪ್ರಾಪಂಚಿಕ ಬಾಳನ್ನು 'ಕಣ್ಣೀರಿನ ಕಣಿವೆ' ಎಂದಿದ್ದಾನೆ.

"ಜೀವನವು ಒಂದು ಸೇತುವೆ; ಅದರ ಮೇಲೆ ಮನೆ ಕಟ್ಟಬೇಡ.
ಜೀವನವು ಒಂದು ನದಿ; ಅದರ ದಡಕ್ಕೆ ಅಂಟಿಕೊಳ್ಳಬೇಡ.
ಜೀವನವು ಒಂದು ಗರಡಿಮನೆ;
ಅಲ್ಲಿನ ಸಾಧನ ಸಂಪತ್ತಿನಿಂದ ವ್ಯಕ್ತಿತ್ವ ವಿಕಾಸ ಮಾಡಿಕೋ
ಜೀವನವು ಒಂದು ಪ್ರವಾಸ; ಕೈಗೊಳ್ಳು, ಸಾಗು"

–ಎಂದಿದ್ದಾನೆ ಆತ.

ಬಸವನಿಗೆ ಬಾಳು ವಾಸ್ತವವಾದದ್ದು; ಪ್ರಚಂಡ ಸತ್ಯ. ಇಹದ ಬಾಳು ಸೃಷ್ಟಿಕರ್ತನ ಕರ್ಮಶಾಲೆ. ಇಲ್ಲಿ ನಾವು ಸಚ್ಚಾರಿತ್ರ್ಯದಿಂದ ಬಾಳಿದರೆ ನಮ್ಮ ವ್ಯಕ್ತಿತ್ವದ ಮೇಲೆ ಚೊಕ್ಕ ಮುದ್ರೆ ಬೀಳುತ್ತದೆ. ಆಗ ಸಲುವಣೆಯ ನಾಣ್ಯವಾಗುತ್ತೇವೆ. ಎಲ್ಲಿ ಬೇಕಾದರೂ ನಡೆಯುವ ನಾಣ್ಯವೆನಿಸುತ್ತೇವೆ. ಹೀಗೆ ಬಸವ ಬದುಕಿನ ಬಗ್ಗೆ, ಇಹ ಲೋಕದ ಬಗ್ಗೆ ಪ್ರೀತಿಯನ್ನು ಶ್ರದ್ಧೆಯನ್ನು ಬೆಳೆಸಿಕೊಂಡನು; ಅಂತೆಯೇ ಎಲ್ಲರ ಹೃದಯದಲ್ಲೂ ಅದನ್ನೇ ಬಿತ್ತಿದನು.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ
ಕೂಡಲಸಂಗಮದೇವಾ.

೪. ಬುದ್ಧನದು ನಿವೃತ್ತಿ ಮಾರ್ಗ, ಬಸವನದು ಪ್ರವೃತ್ತಿ ಮಾರ್ಗ. ಬುದ್ಧನು ಒಬ್ಬ ಸಂನ್ಯಾಸಿ, ಲೌಕಿಕ ಜೀವನಕ್ಕೆ ಹೇಸಿ ವಿರಾಗಿಯಾದವನು. ಆತ ಭೂಮಿಕಾಣಿ, ಸಂಪತ್ತಿನ ಬಗ್ಗೆ ಒತ್ತಾಸೆ ನೀಡಲಿಲ್ಲ. ಅಲ್ಲದೆ ಅವನು ಉದ್ಯೋಗ ಅಥವಾ ದೇಹ ಶ್ರಮವನ್ನು ಅನುಮೋದಿಸಲಿಲ್ಲ. ಅವನಿಗೆ ಕ್ರಿಯೆಗಿಂತ ಧ್ಯಾನದ ಕಡೆ ಒಲವು.

"ಗೃಹಸ್ಥಾಶ್ರಮವೆಂದರೆ ತೊಂದರೆಯು ಮತ್ತು ಹೊಲಸಿನ ಸ್ಥಾನ
ಪ್ರವ್ರಜ್ಯೆ ಎಂದರೆ ಬಯಲು ಹವೆ"
"ಕಾಮೋಪಭೋಗದಲ್ಲಿ ನನಗೆ ದೋಷ ಕಾಣುತ್ತಿದೆ ಮತ್ತು
ಏಕಾಂತವಾಸದಲ್ಲಿ ನನಗೆ ಸುಖ ಎನಿಸುತ್ತದೆ"

—ಇದು ಬುದ್ಧನ ಹೇಳಿಕೆ.

ಬಸವನು ಲೌಕಿಕ ವ್ಯಕ್ತಿ. ರಾಜನ ಆಸ್ಥಾನದಲ್ಲಿ ಜವಾಬ್ದಾರಿ ಸ್ಥಾನದಲ್ಲಿದ್ದು ಆಡಳಿತ ನಡೆಸುತ್ತಿದ್ದವನು. ಆತನದು ಬಹುಮುಖದ ವ್ಯಕ್ತಿತ್ವ; ವೈವಿಧ್ಯಮಯವಾದ ಬದುಕು. ಆತ ಭಕ್ತ, ಗೃಹಸ್ಥ, ಮಂತ್ರಿ, ಸಮಾಜ ಸುಧಾರಕ, ಧರ್ಮವೀರ, ಶ್ರೇಷ್ಠ ವಚನಕಾರ, ಅನುಭಾವಿ, ದಾರ್ಶನಿಕ, ಮಾನವ ಹಿತಸಾಧಕ, ಅಪೂರ್ವ ಸಂಘಟಕ ಇತ್ಯಾದಿ ಬಸವನಿಗೆ ಬಾಳು ಭ್ರಮೆಯಲ್ಲ, ಮಾಯೆಯೂ ಅಲ್ಲ. ಆತ ಆಶಾವಾದಿ, ಬದುಕು ಒಡ್ಡುವ ಸವಾಲನ್ನು ಎದುರಿಸಲು ಸದಾ ಸಿದ್ಧರಿರಬೇಕೆಂಬ ಛಲಗಾರ. ಅವನಿಗೆ ದೇಹ ತ್ಯಾಜ್ಯವಲ್ಲ, ಜೀವನ ದೂಷ್ಯವಲ್ಲ. "ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವವು ದೋಷಂಗಳು" ಎಂದು ಸಾರಿದವನಾತ.

೫. ಸಂನ್ಯಾಸತ್ವವನ್ನು ಎತ್ತಿ ಹಿಡಿದ ಬುದ್ಧನು ಭಿಕ್ಷಾವೃತ್ತಿಯನ್ನು ಪ್ರೋತ್ಸಾಹಿಸಿದನು. ಅದು ಅಹಂಕಾರ ನಿರ್ಮೂಲನಕ್ಕೆ ಕಾರಣವಾಗುವುದೆಂಬುದು ಆತನ ಉದ್ದೇಶ. ಆದರೆ ಪರಿಣಾಮ ಸಾಮಾಜಿಕವಾಗಿ ಪ್ರತಿಕೂಲವಾಯಿತು. ಆಲಸ್ಯ ಭಾವವು ಬೆಳೆಯಿತು. ಕೆಲಸಗಳ್ಳತನ ಹೆಚ್ಚಾದಂತೆ ಉತ್ಪಾದಕ ಶಕ್ತಿ ಕುಂಠಿತವಾಯಿತು.

ಬಸವನದು ದುಡಿದು ತಿನ್ನುವ ಸಂಕಲ್ಪ. 'ದುಡಿಯದೆ ತಿನ್ನುವ ಅನ್ನ ವಿಷ' ಎಂದು ಆತ ಎಚ್ಚರಿಸಿದನು. ಅಷ್ಟೇ ಅಲ್ಲ, ಸತ್ಯ ಶುದ್ಧವಾದ ಕಾಯಕಷ್ಟದ ದುಡಿಮೆಯನ್ನು ಕಾಯಕವೆಂದನು. 'ಕಾಯಕವೇ ಕೈಲಾಸ'ವೆಂದು ಸಾರಿ ದುಡಿಮೆಗೆ ಪೂಜೆಯಸ್ಥಾನ ದೊರಕಿಸಿದನು. ವೃತ್ತಿಯಲ್ಲಿ ತರತಮವೆಣಿಸದೆ ಸಮಾನತೆಯನ್ನು ಸಾರಿದ್ದರ ಪರಿಣಾಮವಾಗಿ ಎಲ್ಲಾ ಕಸುಬಿನವರು ತಮ್ಮ ತಮ್ಮ ವೃತ್ತಿಯನ್ನು ಮಾಡಿ ಗೌರವಯುತ ಜೀವನ ನಡೆಸಿದರು. ಇದರಿಂದ ಎಲ್ಲಾ ವೃತ್ತಿಗಳ, ಕಲೆಗಳ ಕಸುಬುಗಳ ಸರ್ವಾಂಗೀಣ ಪ್ರಗತಿ ಸಾಧ್ಯವಾಯಿತು. ಆರ್ಥಿಕ ಪ್ರಪಂಚದಲ್ಲಿ ಬಸವನ 'ಕಾಯಕತತ್ತ್ವ' ವಿಶಿಷ್ಟ ಸ್ಥಾನ ಹೊಂದಿದೆ.

೬. ಹೆಣ್ಣುಮಕ್ಕಳ ಬಗ್ಗೆ ಬುದ್ಧನ ನಿಲವು ಒಂದು ರೀತಿಯಲ್ಲಿ ನಿಷೇಧಾತ್ಮಕವೇ ಎನ್ನಬಹುದು. ಲೋಕ ಜೀವನದಿಂದ ವಿಮುಖನಾದ ಆತನಿಗೆ, ಗೃಹಸ್ಥಾಶ್ರಮವನ್ನು ತೊರೆದು ಬಂದ ಆತನಿಗೆ, ಅದು ಬಂಧವೆನ್ನಿಸಿತ್ತು. ಆತನ ಪ್ರಿಯ ಶಿಷ್ಯ ಆನಂದನು ಒಮ್ಮೆ "ಭಗವಂತ, ಹೆಂಗಸರೊಡನೆ ಎಂತು ವರ್ತಿಸಲಕ್ಕು?" ಪ್ರಶ್ನಿಸಿದಾಗ ಬುದ್ಧನು ಕೊಟ್ಟ ಉತ್ತರ ಆತನ ನಿಲವನ್ನು ಸ್ಪಷ್ಟಪಡಿಸಿದೆ:

'ನೋಡದಿರಿ, ನೋಡಬೇಕಾಗೆ ಮಾತಾಡದಿರಿ'.
ಅವರೆ ನಮ್ಮೊಡನೆ ಮಾತಾಡೆ?
'ಹಿರಿಯರಂ ತಾಯಿಯೆಂದು, ಸರಿಯರನಕ್ಕ ತಂಗಿಯರೆಂದು
ಕಿರಿಯರಂ ಕೂಸೆಂದು ಭಾವಿಸುತ ಕಟ್ಟೆಚ್ಚರಿರಿ'.

ಗೋತಮಿ ಒಮ್ಮೆ ಬುದ್ಧನನ್ನು 'ಭದಂತರೆ, ತಮ್ಮ ಸಂಪ್ರದಾಯದಲ್ಲಿ ಪ್ರವ್ರಜ್ಞೆಯನ್ನು ಸ್ವೀಕರಿಸಲು ಸ್ತ್ರೀಯರಿಗೂ ಅಪ್ಪಣೆ ಕೊಡಬೇಕು' ಎಂದು ಪ್ರಾರ್ಥಿಸಿದಾಗ ಬುದ್ಧನು ಆಕೆಯ ಬೇಡಿಕೆಯನ್ನು ಮೂರುಸಲ ನಿರಾಕರಿಸಿದನು. 'ಸ್ತ್ರೀಯರಿಗೆ ದೀಕ್ಷೆ ಕೊಡುವಡೆ ನಾನು ಮೊಳೆಯಿಟ್ಟ ಧರ್ಮದಾಯುಷ್ಯದಲಿ ಅರ್ಧ ಅಳಿವುದು'-ಇದು ಆತನ ನಿಲವಾದರೂ ಅವನು ಕೊನೆಗೆ ಅದನ್ನು ಸಡಿಲಿಸಿ ಹೆಣ್ಣುಮಕ್ಕಳಿಗೂ ದೀಕ್ಷೆ ಕೊಟ್ಟದ್ದು ತಿಳಿದು ಬರುತ್ತದೆ.

ಬಸವ ಸ್ವತಃ ಸಂಸಾರಿ. ಒಬ್ಬರಲ್ಲ, ಇಬ್ಬರು ಹೆಂಡಂದಿರನ್ನು ಕಟ್ಟಿಕೊಂಡಿದ್ದನು. ಆತನಿಗೆ ಒಬ್ಬ ಮಗನಿದ್ದನು. ಒಳ್ಳೆಯ ಕೌಟುಂಬಿಕ ಜೀವನವನ್ನು ನಡೆಸಿದ್ದನು. ಆತನಿಗೆ ಹೆಣ್ಣು ಮಾಯೆಯೆನಿಸಲಿಲ್ಲ. ಸಾಧನೆಗೆ ಆಕೆ ಅಡ್ಡಿಯೆನಿಸಲಿಲ್ಲ. ಹೆಣ್ಣನ್ನು ಕೇವಲ ಭೋಗದ ವಸ್ತುವೆಂದು ಭಾವಿಸಿದ್ದಂತಹ ಸನ್ನಿವೇಶದಲ್ಲಿ, ಆಕೆಯನ್ನು ಶೂದ್ರರ ಸ್ಥಾನಕ್ಕಿಳಿಸಿದ್ದ ಅಂದಿನ ಪರಿಸ್ಥಿತಿಯಲ್ಲಿ ಆಕೆಯನ್ನು ಮೇಲೆತ್ತಿ, ಆಕೆಗೆ ದೇವತೆಯ ಸ್ಥಾನವನ್ನು ನೀಡಿದನು. ಅವನ ಈ ಔದಾರ್ಯದಿಂದಾಗಿ ಅಕ್ಕಮಹಾದೇವಿಯಂಥ ಶರಣೆಯರು, ಬಸವನೇ ಅಚ್ಚರಿಗೊಳ್ಳುವಂತೆ, ಬೆಳೆದು ನಿಂತರು. ಜಾಗತಿಕ ಜ್ಞಾನ ಹಾಗೂ ಅನುಭಾವ ಭಂಡಾರಕ್ಕೆ ಅವರಿಂದ ಉತ್ತಮ ಕಾಣಿಕೆ ಸಂದಾಯವಾಯಿತು.

ಬುದ್ಧ ಮತ್ತು ಬಸವ—ಈ ಇಬ್ಬರು ಮಹಾನುಭಾವರ ಜೀವನಕ್ಕೆ ಸಂಬಂಧಿಸಿದಂತೆ ಎರಡು ಘಟನೆಗಳು ಮಾನವ ಇತಿಹಾಸದಲ್ಲಿಯೇ ಅತ್ಯಂತ ದುರ್ದೈವದ ಘಟನೆಗಳು ಎಂದು ವಿಚಾರವಂತರು ಗುರುತಿಸಿದ್ದಾರೆ.

ಒಂದನೆಯದು ಬುದ್ಧನು ಸ್ಥಾಪಿಸಿದ ಬೌದ್ಧಮತಕ್ಕೆ ಭಾರತದಲ್ಲೇ ಸರಿಯಾದ ನೆಲೆಯಿಲ್ಲವಾದದ್ದು. ಇದಕ್ಕೆ ಕಾರಣವೇನಿರಬಹುದು? ಭಾರತೀಯರ ಮನೋಧರ್ಮವೇ ಎನ್ನಬೇಕು. ಹಿಂದೂಧರ್ಮವು ಭಾರತೀಯರ ಜೀವದ ಜೀವವಾಗಿ ಬಿಟ್ಟಿದೆ. ಅದನ್ನುಳಿದು ಯಾವುದೇ ಹೊಸ ಧರ್ಮವನ್ನು ಅವರು ಒಪ್ಪಲಾರರು. ಹೀಗಾಗಿ ಬೌದ್ಧ ಧರ್ಮವು ಹಿಂದೂ ಧರ್ಮದಿಂದ ಪ್ರತ್ಯೇಕತೆಯನ್ನು ಕಾಯ್ದುಕೊಳ್ಳಲಾಗದೆ ಹೋಯಿತೆನ್ನಬಹುದು. ಸಾಮಾನ್ಯವಾಗಿ ಮನುಷ್ಯ ಯಾವ ಕೆಲಸ ಮಾಡಿದರೂ ಶೀಘ್ರ ಫಲವನ್ನು ನಿರೀಕ್ಷಿಸುತ್ತಾನೆ. ಕೆಲಸದಲ್ಲಿ ಆಸಕ್ತನಾಗಲು ಆ ಫಲಾಪೇಕ್ಷೆ ಕಾರಣವಾಗುತ್ತದೆ. ಬೌದ್ಧಧರ್ಮ ಉಳಿದ ಧರ್ಮಗಳಂತೆ ಸ್ವರ್ಗದ ಆಕರ್ಷಣೆಯನ್ನು, ಮೋಕ್ಷದ ಆಸೆಯನ್ನು ತೋರಲಿಲ್ಲ; ದೇವರ ಕಲ್ಪನೆಯನ್ನು ನೀಡಲಿಲ್ಲ. ಬುದ್ಧಿ ಮತ್ತು ನೀತಿ ಇವುಗಳಿಂದ ಕೂಡಿದ ಸಮರಸ ಜೀವನದಿಂದ ಲೋಕದ ಸಂಕಟದಿಂದ ಪಾರಾಗಬಹುದೆಂದು ಆತ ಹೇಳಿದನು. ಇದರಿಂದಾಗಿ ಅದು ಜನಮನವನ್ನು ಗೆಲ್ಲಲಿಲ್ಲ. ಅಲ್ಲದೆ ಬೌದ್ಧ ಧರ್ಮವು ವ್ಯಕ್ತಿನಿಷ್ಠವಾದದ್ದು. ಬುದ್ಧನ ನಂತರ ಕಾರ್ಯಕ್ಷಮತೆಯ ಅಭಾವದಿಂದಾಗಿ ಅದು ನೆಲೆನಿಲ್ಲುವ ಆಸ್ಪದವನ್ನು ಕಳೆದು ಕೊಂಡಿತು. ಇದು ದುರದೃಷ್ಟದ ವಿಚಾರವೇ ಸರಿ.

ಇನ್ನು ಎರಡನೆಯದು ಬಸವ ಆರಂಭಿಸಿದ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಆಂದೋಲನವು ದೀರ್ಘಕಾಲ ನಡೆಯದೆ ಹೋದದ್ದು. ಬಸವ ಮಿಂಚಿನಂತೆ ಸಂಚಲಿಸಿದನು; ಮತ್ತೆ ಕುರುಡುದಟ್ಟೈಸಿತು. ಆತ ಮಾಡಿದ ಪ್ರಯತ್ನ, ತೆತ್ತ ಬೆಲೆ ಅಸಾಧಾರಣ; ಆದರೆ ಸಮಷ್ಟಿ ಚೇತನವು ನಿರೀಕ್ಷಿಸಿದ ಮಟ್ಟದಲ್ಲಿ ವಿಕಾಸವಾಗಲಿಲ್ಲ; ಜನ ಜಾಗೃತಿಯುಂಟಾಗಲಿಲ್ಲ. ಪ್ರಬುದ್ಧ ವಿಚಾರವಾದಿ, ಅಪ್ರತಿಮ ಸಂಘಟಕ ಬಸವ ಸ್ವಲ್ಪ ಮುಂಚೆ ಹುಟ್ಟಿಬಂದನೇನೋ ಎಂದು ಯಾರಿಗಾದರೂ ಅನ್ನಿಸುತ್ತದೆ. ಜನತೆ ಬಸವನ ದೂರದೃಷ್ಟಿಯನ್ನು, ವಿಶ್ವ ವಿಶಾಲ ಮನೋಭಾವವನ್ನು ಸರಿಯಾಗಿ ಅರ್ಥಮಾಡಿಕೊಂಡು, ಆತನನ್ನು ಮನಃಪೂರ್ವಕವಾಗಿ ಅನುಸರಿಸಿ ಸಹಕರಿಸಿದ್ದರೆ ದೇಶದ, ರಾಷ್ಟ್ರದ ಇತಿಹಾಸವೇ ಬದಲಾಗುತ್ತಿತ್ತು. ಆ ಭಾಗ್ಯ ನಮಗಿಲ್ಲವಾಯಿತು.

ಬುದ್ಧ ಮತ್ತು ಬಸವ ಇವರು ಹೀಗೆ ಭಾರತೀಯ ಸಂಸ್ಕೃತಿಯನ್ನು ತಮ್ಮ ಆಚಾರ ವಿಚಾರಗಳ ಪರಿಶುದ್ಧತೆಯಿಂದ, ತಮ್ಮ ದಿವ್ಯ ಬೋಧೆಗಳಿಂದ ಕಳೆಗೊಳಿಸಿ, ಜನಮನವನ್ನು ಸೂರೆಗೊಂಡವರು. ಅವರಿಬ್ಬರೂ ಭಾರತದ ಮುಂದೆ, ಅಷ್ಟೇ ಏಕೆ, ಇಡೀ ವಿಶ್ವದ ಮುಂದೆ ಸಾಮೂಹಿಕ ವಿಮೋಚನೆಯ ಆದರ್ಶವನ್ನು ಇಟ್ಟಿದ್ದಾರೆ. ವ್ಯಕ್ತಿ ತಾನೂ ಒಳ್ಳಿತಾಗಿ ಬದುಕಿ, ತನ್ನ ಸಹಜೀವಿಗಳನ್ನು ಹೇಗೆ ಬದುಕಗೊಡಬಹುದೆಂಬುದನ್ನು ದೃಷ್ಟಾಂತಪೂರ್ವಕವಾಗಿ ಇರಿಸಿದ್ದಾರೆ.

ಶಾಂತಿಯುತವಾದ ಕ್ರಿಯಾತ್ಮಕ ಜೀವನವನ್ನು, ಪ್ರೀತಿಭಾವ ಹಾಗೂ ಪ್ರಸನ್ನತೆ ಗಳಿಂದ ಮಾನವ–ಮಾನವರ ಮಧ್ಯೆ ಅಷ್ಟೇ ಅಲ್ಲ, ಮಾನವ–ಇತರ ಜೀವಿಗಳೊಂದಿಗೆ ಹೇಗೆ ಸಾಧಿಸಬಹುದೆಂಬುದನ್ನು ಅವರು ತೋರಿದ ರೀತಿ ಅನನ್ಯ. ಕಳವಳ, ಗಲಿಬಿಲಿಯ ಆಧುನಿಕ ಜೀವನದ ನಡುವೆ ಬಾಳುವ ನಮಗೆ ಆತ್ಮೋನ್ನತಿಗೆ ಸಾಧಕವಾದ, ಮನೋ ವಿಕಾರರಹಿತವಾದ ಶಾಂತಿ ಹಾಗೂ ಪ್ರೀತಿಯ ಬಾಳುವೆಯ ಹೊಸ ಯುಗವನ್ನು ಕಾಣಲು ಬುದ್ಧ ಮತ್ತು ಬಸವರ ನಡೆ–ನುಡಿಗಳು ನಮಗೆ ಆದರ್ಶವಾಗಬೇಕು. ಏಕೆಂದರೆ ಆ ಮಹಾನುಭಾವರಿಬ್ಬರೂ ಧರ್ಮವನ್ನು ಪ್ರಜ್ಞಾಯುಕ್ತವಾಗಿಸಿದ್ದಾರೆ ಮತ್ತು ತತ್ತ್ವಶಾಸ್ತ್ರ ವನ್ನು ಮಾನವೀಕರಿಸಿದ್ದಾರೆ. ಸಕಲ ಜೀವಾವಳಿಗೆ ಲೇಸ ಬಯಸಿದ ಅವರ ದಿವ್ಯಬೋಧೆ ನಮಗಿಂದು ತೀರ ಪ್ರಸ್ತುತವಾಗಿದೆ. ಅವನ್ನು ಅರಿತು, ಆಚರಿಸಿ ನಾವು ಧನ್ಯರಾಗಬೇಕು. ಅಂಥ ಆ ಎರಡು ಜಗಜ್ಜ್ಯೋತಿಗೆ ಸಹಸ್ರ ಸಹಸ್ರ ಪ್ರಣಾಮಗಳು.

●

# ವೀರಶೈವ ಸಿದ್ಧಾಂತ ಹಾಗೂ ಬೌದ್ಧ ಸಿದ್ಧಾಂತ

—ಡಾ. ಎ. ಎಲ್. ಶಿವರುದ್ರಪ್ಪ

I

**ಪ್ರಸ್ತಾವನೆ:**

ವೀರಶೈವ ಸಿದ್ಧಾಂತ ಮತ್ತು ಬೌದ್ಧ ಸಿದ್ಧಾಂತಗಳನ್ನು ಸ್ಥೂಲವಾಗಿ ಬಲ್ಲವರು ಈ ಎರಡು ಸಿದ್ಧಾಂತಗಳ ನಡುವೆ ಹೆಚ್ಚಿನ ಸಾಮ್ಯ ಇರಲು ಸಾಧ್ಯವಿಲ್ಲ ಎಂದು ತಿಳಿಯುತ್ತಾರೆ. ಆದರೆ ಈ ಎರಡು ಧರ್ಮಗಳ ಮೂಲ ತತ್ವಗಳು ಮತ್ತು ಅವುಗಳಲ್ಲಿ ನಿರೂಪಿತವಾದ ಸಾಧನಮಾರ್ಗವನ್ನು ಕುರಿತು ಆಳವಾಗಿ ವಿಶ್ಲೇಷಿಸಿ ನೋಡಿದಾಗ ಈ ಎರಡು ಧರ್ಮಗಳ ನಡುವಿನ ತುಲನಾತ್ಮಕ ಚಿಂತನೆ ಅಪ್ರಕೃತವೆನಿಸದೆ, ಅದು ಪರಸ್ಪರ ಲಾಭದಾಯಕ ಎಂಬ ಅರಿವು ನಮಗೆ ಮೂಡುತ್ತದೆ.

ವೈದಿಕ ಧರ್ಮದ ದೃಷ್ಟಿಯಲ್ಲಿ ಬೌದ್ಧ ಧರ್ಮವು ಕೇವಲ ಅವೈದಿಕ ಮಾತ್ರವಲ್ಲದೆ ಅದು ನಾಸ್ತಿಕ ಧರ್ಮವೂ ಅಹುದು. ಬೌದ್ಧಧರ್ಮ ಪ್ರವರ್ತಕನಾದ ಬುದ್ಧನು ಹುಟ್ಟಿನಿಂದ ಕ್ಷತ್ರಿಯನಾಗಿ ಹಿಂದೂ ಧರ್ಮೀಯನಾಗಿದ್ದರೂ, ಬುದ್ಧನು ಬೋಧಿಸಿದ ಧರ್ಮವನ್ನು ಹಿಂದೂ ಧರ್ಮವು ಮನ್ನಿಸಲಿಲ್ಲ. ವೈದಿಕರ ದೃಷ್ಟಿಯಲ್ಲಿ ವಿನಾಶವಾದದ ಶ್ರೇಣಿಯಲ್ಲಿ ಚಾರ್ವಾಕ ಧರ್ಮವನ್ನು ಬಿಟ್ಟರೆ ಎರಡನೇ ಸ್ಥಾನ ಬೌದ್ಧ ಧರ್ಮಕ್ಕೆ. ಬೌದ್ಧ ಧರ್ಮವು ದೇವರ ಅಸ್ತಿತ್ವ ಮತ್ತು ಆತ್ಮದ ಅಮರತ್ವದ ವಿಚಾರದಲ್ಲಿ ವೈದಿಕರು ಹೇಳಿದ ಮಾರ್ಗವನ್ನು ತುಳಿಯದೆ ತನ್ನದೇ ಆದ ಸ್ವತಂತ್ರವಾದ ನಿಲುವನ್ನು ಪಡೆದಿದ್ದರಿಂದ ವೈದಿಕರು ಬೌದ್ಧ ಧರ್ಮವನ್ನು ನಿರಾಕರಿಸಬೇಕಾಯಿತು. ಅಷ್ಟೇ ಅಲ್ಲದೆ ವೈದಿಕ ಧರ್ಮದಲ್ಲಿ ಬಹುಪ್ರಾಮುಖ್ಯತೆಯನ್ನು ಪಡೆದ ಅವರ ಸಾಮಾಜಿಕ ಸಿದ್ಧಾಂತ ಮತ್ತು ಕರ್ಮಾಚರಣೆಗಳ ವಿಚಾರದಲ್ಲಿ ಬೌದ್ಧ ಧರ್ಮವು ಅವರೊಂದಿಗೆ ಯಾವ ರೀತಿಯ ಹೊಂದಾಣಿಕೆಗೂ ಸಿದ್ಧವಿರಲಿಲ್ಲ.

ವೈದಿಕ ಧರ್ಮದಲ್ಲಿ ರೂಢಿಯಲ್ಲಿದ್ದ ಆಚಾರ ವಿಚಾರ, ರೀತಿ ನೀತಿಗಳನ್ನು ವಿರೋಧಿಸಿದ ಭಾರತೀಯ ಧರ್ಮಗಳಲ್ಲಿ ಬೌದ್ಧ ಮತ್ತು ಜೈನಧರ್ಮಗಳಿಗೆ ಮೊದಲ ಸ್ಥಾನವಾದರೆ, ಅನಂತರದ ಸ್ಥಾನ ವೀರಶೈವ ಧರ್ಮಕ್ಕೆ ಸಲ್ಲುತ್ತದೆ. ವೀರಶೈವ ಧರ್ಮವನ್ನು ನಾಸ್ತಿಕ ಧರ್ಮವೆಂದು ಹೇಳುವಂತಿಲ್ಲವಾದರೂ, ಇದನ್ನು ವೈದಿಕ ಧರ್ಮವೆಂದು ಒಪ್ಪಲು ವೀರಶೈವ ಪಂಡಿತರಲ್ಲಿಯೇ ಅನೇಕರು ಸಿದ್ಧರಿಲ್ಲ. ಈ ವಾದಕ್ಕೆ ಪೋಷಕವಾದ

ವಚನಗಳು ಶರಣ ಸಾಹಿತ್ಯದಲ್ಲಿ ನಮಗೆ ಹೇರಳವಾಗಿ ದೊರೆಯುತ್ತವೆ. ನಿದರ್ಶನವಾಗಿ ಅಂತಹ ಒಂದು ವಚನವನ್ನು ನಾವಿಲ್ಲಿ ನೋಡಬಹುದು.

ವೇದ ವೇದಿಸಲರಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು.
ಶಾಸ್ತ್ರ ಸಾಧಿಸಲರಿಯದೆ ಅಸಾಧಲಿಂಗವೆಂದು ಸಾರುತ್ತೈದಾವೆ.
ತರ್ಕತರ್ಕಿಸಲರಿಯದೆ ಅತರ್ಕ್ಯಲಿಂಗವೆಂದು ಮನಂಗೊಳ್ಳವು.
ಆಗಮಗಮಿಸಲರಿಯದೆ ಅಗಮ್ಯಲಿಂಗವೆಂದು ಹೋದವು.
ನರರು ಸುರರು ಅಂಕುವ ಕಾಣರು;
ನಮ್ಮ ಕೂಡಲಸಂಗನ ಪ್ರಮಾಣ ಶರಣಬಲ್ಲ.

ವೀರಶೈವ ಧರ್ಮದ ಉಗಮದ ವಿಚಾರದಲ್ಲಿ ಮೇಲೆ ಕಂಡ ವಾದದ ಜೊತೆಗೆ ಅದಕ್ಕೆ ವಿರುದ್ಧವಾದ ಮತ್ತೊಂದು ವಿವರಣೆಯೂ ಇದೆ. ವೀರಶೈವ ಧರ್ಮವನ್ನು ವೈದಿಕ ಧರ್ಮವೆಂದು ವಿವರಿಸಲು ಋಗ್ವೇದದಲ್ಲಿ ಬರುವ ರುದ್ರನ ಕಲ್ಪನೆ, ಶ್ವೇತಾಶ್ವತರ ದಲ್ಲಿ ಬರುವ ಶಿವನನ್ನು ಕುರಿತಾದ ಮಾತುಗಳು ಮತ್ತು ಶಿವಾಗಮದಲ್ಲಿ ಬರುವ ಷಟ್‌ಸ್ಥಲ, ಅಷ್ಟಾವರಣಕ್ಕೆ ಸಂಬಂಧಿಸಿದ ಕೆಲವು ನಿರೂಪಣೆಗಳನ್ನು ಸಂಪ್ರದಾಯವಾದಿಗಳೆನಿಸಿದವರು ಮುಂದಿಡುತ್ತಾರೆ. ಆದರೆ ಈ ಮಾತುಗಳನ್ನು ಒಪ್ಪದ ಪ್ರೊ. ಬಸವನಾಳರಂತಹ ಪಂಡಿತರು, ಋಗ್ವೇದದಲ್ಲಿ ಕಂಡ 'ರುದ್ರ'ನು ವಿನಾಶಕಾರಕನೆನಿಸಿದ್ದು ಮುಂದೆ ಶುಭಕಾರಕ ನೆನಿಸಿ 'ಶಿವ'ನಾದದ್ದು ಮತ್ತು ಮೊದಲಿನ ಹಲವು ಉಪನಿಷತ್ತುಗಳಲ್ಲಿ ಕಾಣದ ಶಿವನ ಕಲ್ಪನೆ ಶ್ವೇತಾಶ್ವತರದಲ್ಲಿ ಕಂಡುಬರುವುದು, ನಾನಾ ರೀತಿಯ ಸಂಶಯಗಳಿಗೆ ಕಾರಣ ವಾಗುತ್ತದೆ ಎಂಬುದಾಗಿ ತಿಳಿಯುತ್ತಾರೆ. ವೇದೋಪನಿಷತ್ತಿನಲ್ಲಿ ಬರುವ ಶಿವನ ಕಲ್ಪನೆ ಯನ್ನು ಕುರಿತು ಅವರು ಈ ರೀತಿ ವಿವರಿಸುತ್ತಾರೆ. ಆರ್ಯರು ಭಾರತಕ್ಕೆ ಬರುವ ಮುನ್ನ ಈ ನಾಡಿನಲ್ಲಿ ಪ್ರಸಿದ್ಧವಿದ್ದ ಶೈವಧರ್ಮದ ಗುಣಾಂಶಗಳನ್ನು ಕಂಡ ವೈದಿಕ ಧರ್ಮವು ಅದನ್ನು ತನ್ನಲ್ಲಿ ಹೀರಿಕೊಂಡು ಅದನ್ನು ಸಮನ್ವಯಗೊಳಿಸಲು ಮಾಡಿದ ಒಂದು ಪ್ರಯತ್ನ ಇದು ಎಂದು ಬಸವನಾಳರಂತಹವರು ತಿಳಿಯುತ್ತಾರೆ. ಈ ವಿಚಾರದಲ್ಲಿ ಇನ್ನು ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ.

ದ್ರಾವಿಡ ಮೂಲದಿಂದ ಬಂದ ಶೈವಧರ್ಮ ಮತ್ತು ಆರ್ಯರ ಮೂಲದಿಂದ ಬಂದ ವೈದಿಕ ಧರ್ಮ ಇವುಗಳ ಸಹ ಬಾಳ್ವೆಯಿಂದಾಗಿ, ಇವು ನಾನಾರೀತಿಯ ಸಂಘರ್ಷಕ್ಕೊಳ ಗಾಗಿ ಶೈವ ಧರ್ಮವು ಮುಂದೆ ಶಾಖೆಗೊಂಡು ಕಾಶ್ಮೀರಶೈವ, ಪಾಶುಪತಶೈವ, ಶಾಕ್ತ, ಗಾಣಪತ್ಯ, ಕಾಪಾಲಿಕ, ಕಾಳಾಮುಖರೆಂಬ ವಿವಿಧ ಶೈವಪಂಥಗಳ ರೂಪದಲ್ಲಿ ಬಹುಕಾಲ ಉಳಿದುಬಂದದ್ದು ಒಂದು ಐತಿಹಾಸಿಕ ಸತ್ಯ ಮತ್ತು ಅವುಗಳ ಅವಶೇಷಗಳನ್ನು ಇಂದಿಗೂ ನಾವು ಕಾಣಬಹುದು. ಕ್ರಿ. ಶ. ಹನ್ನೆರಡನೇ ಶತಮಾನದ ವೇಳೆಗೆ ಕಾಳಾಮುಖ ಶೈವದ ಹೊರತು ಉಳಿದ ಶೈವಧರ್ಮಗಳು ವೈದಿಕ ಧರ್ಮದ ಪ್ರಭಾವಕ್ಕೆ ಮಣಿದು ವೈದಿಕ ಧರ್ಮದಲ್ಲಿ ಸಮನ್ವಯಗೊಂಡಂತೆ ಕಾಣುತ್ತದೆ. ಆದರೆ ಕಾಳಾಮುಖ ಶೈವವು ಮಾತ್ರ,

ವೈದಿಕ ಧರ್ಮದ ಪ್ರಭಾವವನ್ನು ಸಮರ್ಥವಾಗಿ ವಿರೋಧಿಸಿ ತಾನು ಸ್ವತಂತ್ರವಾಗಿ ಉಳಿದು, ವೀರಶೈವ ಎಂಬ ಹೆಸರಿನಲ್ಲಿ ತನ್ನ ಸ್ವಂತಿಕೆಯನ್ನು ಕಾಪಾಡಿಕೊಂಡು ಬಂದಿರಬಹುದು ಎಂಬುದು ಒಂದು ಸಂಭವನೀಯವಾದ ಕಲ್ಪನೆ.

ಇಷ್ಟೆಲ್ಲ ದೀರ್ಘಕಾಲದ ಇತಿಹಾಸವುಳ್ಳ ವೀರಶೈವ ಧರ್ಮವು, ಹನ್ನೆರಡನೇ ಶತಮಾನವನ್ನು ಮುಟ್ಟುವ ವೇಳೆಗೆ, ಈ ನಾಡಿನಲ್ಲಿ ಪ್ರಚಲಿತವಿದ್ದ ಜೈನ ಮತ್ತು ಬೌದ್ಧ ಧರ್ಮಗಳ ಪ್ರಭಾವ ಮತ್ತು ಪ್ರಕೋಪಗಳಿಗೂ ತುತ್ತಾಗಿರುವುದು ಸಾಧ್ಯ. ಅಂದಮೇಲೆ ಶೈವಧರ್ಮದ ಶಾಖೆಯಾದ ವೀರಶೈವ ಧರ್ಮವು ವೈದಿಕ, ಜೈನ ಮತ್ತು ಬೌದ್ಧ ಈ ಮೂರೂ ಧರ್ಮಗಳ ಸಂಘರ್ಷವನ್ನು ಸಹಿಸಿ ಉಳಿದುಬಂದಿದೆ ಎಂದಂತಾಯಿತು. ಅನೇಕಾಂತ ಧರ್ಮವೆನಿಸಿದ ಜೈನ ಧರ್ಮವನ್ನು ಸಮರ್ಥವಾಗಿ ವಿರೋಧಿಸಿದ ಶಿವಶರಣ ಏಕಾಂತದ ರಾಮಯ್ಯನು, ಅನೇಕಾಂತ ಧರ್ಮಕ್ಕೆ ತನ್ನ ಅಸಮ್ಮತಿಯನ್ನು ಸೂಚಿಸಲು 'ಏಕಾಂತದ' ಎಂಬ ಉಪಸರ್ಗವನ್ನು ತನ್ನ ಹೆಸರಿನೊಂದಿಗೆ ಸೇರಿಸಿಕ್ಕೊಂಡನಂತೆ. ವೀರಶೈವ ಧರ್ಮವು ವೈದಿಕ, ಜೈನ ಮತ್ತು ಬೌದ್ಧ ಧರ್ಮಗಳ ವಿರೋಧವನ್ನು ಸಹಿಸಿ ಬದುಕಬೇಕಾಗಿ ಬಂದ ಸ್ಥಿತಿಯನ್ನು ಸೂಚಿಸುವ ಬಸವಣ್ಣನ ವಚನ ಹೀಗಿದೆ–

ಭಕ್ತರ ಕಂಡರೆ ಬೋಳಪ್ಪಿರಯ್ಯಾ;
ಸವಣರ ಕಂಡರೆ ಬತ್ತಲೆಯಪ್ಪಿರಯ್ಯಾ;
ಹಾರುವರ ಕಂಡರೆ ಪರಿನಾಮವೆಂಬಿರಯ್ಯಾ;
ಅವರವರ ಕಂಡಡೆ ಅವರವರಂತೆ,
ಸೂಳೆಗೆ ಹುಟ್ಟಿದವರ ಎನಗೆತೋರದಿರಯ್ಯಾ;
ಕೂಡಲ ಸಂಗಮದೇವರ ಪೂಜಿಸಿ ಅನ್ಯದೈವಂಗಳಿಗೆರಗಿ
ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯಾ ।

ಸವಣರು ಎಂಬ ಮಾತು ಜೈನ ಮತ್ತು ಬೌದ್ಧ ಸಂತರಿಬ್ಬರನ್ನೂ ಸೂಚಿಸುತ್ತದೆ. ಬಸವಣ್ಣನ ಕಾಲದಲ್ಲಿಯೂ ಅನ್ಯ ಧರ್ಮೀಯರ ಅನುಕರಣೆ ಮತ್ತು ಆಕರ್ಷಣೆ ವೀರಶೈವ ಧರ್ಮಿಯರಿಗಿದ್ದಿತು ಎಂದಾದಮೇಲೆ, ಇನ್ನು ಹನ್ನೆರಡನೇ ಶತಮಾನದವರೆಗೂ ಈ ಧರ್ಮವು ಉಳಿದುಬರಬೇಕಾದರೆ ಇದರ ಹೋರಾಟ ಅದೆಷ್ಟಿದ್ದಿರಬಹುದು ಎಂಬುದನ್ನು ನಾವು ಊಹಿಸಿಯೇ ತಿಳಿಯಬೇಕು. ಧಾರ್ಮಿಕವಾಗಿ ದೃಢತೆ ಇಲ್ಲದೆ ಕಂಡ ಕಂಡ ಧರ್ಮಗಳನ್ನು ಅನುಕರಣೆ ಮಾಡುವ ಜನರನ್ನು ಬಸವಣ್ಣನು ಧಾರ್ಮಿಕ ವ್ಯಭಿಚಾರಿಗಳು, ಸೂಳೆಗೆ ಹುಟ್ಟಿದವರು, ಅಜ್ಞಾನಿಗಳು ಎಂದು ನಿಂದಿಸುತ್ತಾನೆ. ಅವನು ಬಯಸುವ ಧಾರ್ಮಿಕ ನಿಷ್ಠೆ ಎಂತಹುದು ಎಂಬುದನ್ನು ಇದು ಸೂಚಿಸುತ್ತದೆ.

II

**ಬೌದ್ಧಧರ್ಮದ ದಿಗ್ವಿಜಯ:**

ಭಗವಾನ್ ಬುದ್ಧನಿಗೆ ಲಭಿಸಿದ ಬೋಧಿಜ್ಞಾನದಿಂ ಮೂಡಿ ಬಂದ ಧರ್ಮವನ್ನು

ಬೌದ್ಧಧರ್ಮಯೆಂದು ಕರೆಯಲಾಗಿದೆ. ಇದು ಒಬ್ಬ ಸಾಧಕನ ಅನುಭಾವದ ಫಲವಾಗಿ ದೊರೆತ ಒಂದು ಧರ್ಮ. ಇಂತಹ ಧರ್ಮಗಳನ್ನು ಪ್ರವಾದಿ ಧರ್ಮಗಳೆಂದು ಕರೆಯುತ್ತಾರೆ. ಕ್ರೈಸ್ತಧರ್ಮ, ಮಹಮದೀಯಧರ್ಮ, ಜಾರಕೂಷ್ಟ್ರಧರ್ಮ ಈ ಮೊದಲಾದ ಧರ್ಮಗಳು ಪ್ರವಾದಿ ಧರ್ಮಗಳ ಶ್ರೇಣಿಗೆ ಸೇರುತ್ತವೆ. ವೀರಶೈವ ಧರ್ಮವು ಯಾವ ಒಬ್ಬ ಪ್ರವಾದಿಯಿಂದ ಒಂದು ನಿರ್ದಿಷ್ಟವಾದ ಕಾಲದಲ್ಲಿ ಮೂಡಿ ಬಂದ ಧರ್ಮವಲ್ಲ. ಶರಣರ ಪೂರ್ವಯುಗದಲ್ಲಾಗಲಿ ಅಥವಾ ಶರಣರ ಕಾಲದಲ್ಲಿಯೇ ಆಗಲಿ ಯಾವ ಒಬ್ಬ ವ್ಯಕ್ತಿಯನ್ನು ಈ ಧರ್ಮದ ಮೂಲಪುರುಷ ಎಂದು ಬೆರಳೆತ್ತಿ ತೋರಿಸಲು ಸಾಧ್ಯವಿಲ್ಲ. ಈ ಧರ್ಮವು ಪಂಚಾಚಾರ್ಯರಿಂದ ಮೂಡಿಬಂದಿತೆಂದು ತಿಳಿಯುವವರು ಪರೋಕ್ಷವಾಗಿ ಇದು ಪರಶಿವನಿಂದಲೇ ಮೂಡಿ ಬಂದಿತೆಂಬ, ಅಪೌರುಷೇಯ ವಾದದಲ್ಲಿ ಬಂದು ನಿಲ್ಲುತ್ತಾರೆ. ಹನ್ನೆರಡನೇ ಶತಮಾನದಲ್ಲಿ ಬಂದ ಬಸವಣ್ಣನ ಕಾಲದಲ್ಲಿ ವೀರಶೈವ ಧರ್ಮವು ತನ್ನ ಪರಿಪೂರ್ಣಸ್ಥಿತಿಯನ್ನು ಮುಟ್ಟಿತೆಂಬ ಕಾರಣದಿಂದ, ಕೆಲವರು ಬಸವಣ್ಣನನ್ನೇ ಈ ಧರ್ಮದ ಕಾರಣಪುರುಷ ಎಂದು ತಿಳಿಯುವ ಮತ್ತೊಂದು ಅತಿರೇಕಕ್ಕೆ ಹೋಗುತ್ತಾರೆ. ಬಸವಣ್ಣನು ಹುಟ್ಟಿನಲ್ಲಿ ಶೈವಬ್ರಾಹ್ಮಣನಾಗಿದ್ದು ವೀರಶೈವ ಧರ್ಮದ ಶ್ರೇಷ್ಠತೆಯನ್ನರಿತು ಈ ಧರ್ಮವನ್ನು ಸ್ವೀಕರಿಸಿದನು. ಅಂದಮೇಲೆ ಬಸವಣ್ಣನ ಕಾಲಕ್ಕೆ ಮೊದಲೇ ಈ ಧರ್ಮ ಅಸ್ತಿತ್ವದಲ್ಲಿದ್ದಿತು ಎಂಬಂತಾಯಿತು. ಅಲ್ಲದೆ ಕೊಂಡಗುಳಿ ಕೇಶಿರಾಜ, ಜೇಡರ ದಾಸಿಮಯ್ಯ, ಏಕಾಂತದ ರಾಮಯ್ಯ ಮುಂತಾದ ಶರಣರು ಬಸವಣ್ಣನ ಹಿರಿಯ ಸಮಕಾಲೀನರಾಗಿದ್ದರೂ ಅವರು ಬಸವಣ್ಣನಿಗೆ ಮೊದಲೇ ವೀರಶೈವ ಧರ್ಮದಲ್ಲಿ ಬದುಕಿ ಬಂದವರು. ಜೊತೆಗೆ, ಬಸವಣ್ಣನ ಸಮಕಾಲೀನರಾದ ಅಲ್ಲಮಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣ ಮುಂತಾದ ಶರಣರು ವೀರಶೈವಧರ್ಮ ತಾತ್ವಿಕ ನಿರೂಪಣೆಯಲ್ಲಿ ಬಸವಣ್ಣನಷ್ಟೇ ಸಮರ್ಥರೆಂಬುದನ್ನು ಅನುಭವಮಂಟಪದಲ್ಲಿ ನಡೆದ ಧಾರ್ಮಿಕ ಚರ್ಚೆಯಿಂದ ನಾವು ಕಾಣುತ್ತೇವೆ. ಆದ್ದರಿಂದ ಬಸವಣ್ಣನನ್ನು ವೀರಶೈವಧರ್ಮದ ಕಾರಣ ಪುರುಷ ಎನ್ನುವುದು ಸುಸಂಗತವೆನಿಸುವುದಿಲ್ಲ. ಜಂಗಮದಾಸೋಹಿ ಬಸವಣ್ಣನು ಈ ಧರ್ಮಕ್ಕೆ ಆಶ್ರಯವಿತ್ತು ಈ ಧರ್ಮದ ಪ್ರಗತಿಗೆ ಕಾರಣನಾದನೆಂಬುದಂತೂ ನಿರ್ವಿವಾದದ ಮಾತು.

ಬೌದ್ಧಧರ್ಮವನ್ನು ವಿಶ್ವದ ಅನೇಕ ಧರ್ಮಗಳೊಂದಿಗೆ ಹೋಲಿಸಿ ನೋಡಿದಾಗ, ಈ ಧರ್ಮವು ಒಂದಲ್ಲ ಹಲವು ರೀತಿಯ ವಿಕ್ರಮಗಳನ್ನು ಸ್ಥಾಪಿಸಿರುವುದು ನಮಗೆ ತಿಳಿಯುತ್ತದೆ. ಬೌದ್ಧಧರ್ಮವು ಮೊಟ್ಟಮೊದಲಿಗೆ ತಾನು ಜನಿಸಿದ ನಾಡಿನಿಂದ ಹೊರಗೆ ಹೋಗಿ, ಅನ್ಯರಾಷ್ಟ್ರಗಳಲ್ಲಿ ತನ್ನ ಪ್ರಭಾವವನ್ನು ಬೀರಿ ಧಾರ್ಮಿಕವಾಗಿ ದಿಗ್ವಿಜಯವನ್ನು ಸ್ಥಾಪಿಸಿತು. ಆಮೇಲೆ ಬಂದ ಕ್ರೈಸ್ತ ಮತ್ತು ಮಹಮದೀಯ ಧರ್ಮಗಳು ಇಂಥದೇ ದಿಗ್ವಿಜಯವನ್ನು ಸ್ಥಾಪಿಸಿದರೂ, ಆ ಧರ್ಮಗಳು ಆಕ್ರಮಣಕಾರರನ್ನು ಅನುಸರಿಸಿ ಅನ್ಯ ರಾಷ್ಟ್ರಗಳನ್ನು ಪ್ರವೇಶಿಸಿದುವಷ್ಟೆ. ಬೌದ್ಧಧರ್ಮವು ಮಾತ್ರ ಯಾವ ಕತ್ತಿಯ ಬಲವನ್ನು

ಆಶ್ರಯಿಸದೆ ಕೇವಲ ತನ್ನ ನೈತಿಕ ಮತ್ತು ಮಾನವೀಯ ಮೌಲ್ಯಗಳ ಪ್ರಭಾವದಿಂದ ಸಿಲೋನ್, ಬರ್ಮ, ಥೈಲಾಂಡ್, ಜಪಾನ್, ಚೈನ ಮುಂತಾದ ರಾಷ್ಟ್ರಗಳನ್ನು ಪ್ರವೇಶಿಸಿ ವಿಶ್ವದ ನಾಲ್ಕನೇ ಒಂದರಷ್ಟು ಜನರನ್ನು ತನ್ನ ಧಾರ್ಮಿಕ ಪ್ರಭಾವಕ್ಕೆ ಒಳಪಡಿಸಿತು. ಅಲ್ಲದೆ ಕ್ಷತ್ರಿಯನೋರ್ವನಿಂದ ಆರಂಭಗೊಂಡ ಬೌದ್ಧಧರ್ಮವು, ಅನಾರ್ಯರಾದ ದ್ರಾವಿಡರು, ಸುಮೇರಿಯನರು, ಮಂಗೋಲರೆ ಮೊದಲಾದ ಅನ್ಯ ಜನಾಂಗೀಯರನ್ನು ತನ್ನ ಧರ್ಮಕ್ಕೆ ಸೇರಿಸಿತು.

ವೀರಶೈವ ಧರ್ಮವು ಇಂತಹ ವಿಕ್ರಮಗಳೇನನ್ನೂ ಸ್ಥಾಪಿಸಲಿಲ್ಲವಾದರೂ ಹಿಂದೂ ಧರ್ಮದ ವರ್ಣ ಭೇದವನ್ನು ಮರೆತು ಎಲ್ಲ ವರ್ಣೀಯರನ್ನೂ ತನ್ನ ಧರ್ಮಕ್ಕೆ ಆಕರ್ಷಿಸಿತು. ಬೌದ್ಧ ಧರ್ಮದಂತೆ ವೀರಶೈವ ಧರ್ಮವೂ ಸಹ, ಕೇವಲ ತನ್ನ ಧಾರ್ಮಿಕ ಶ್ರೇಷ್ಠತೆ ಮತ್ತು ನೈತಿಕ ಪ್ರಭಾವದಿಂದ ಕರ್ಣಾಟಕದ ಮೇರೆಯನ್ನು ಮೀರಿ ದಕ್ಷಿಣ ಭಾರತದ ಹಲವು ಪ್ರಾಂತಗಳಲ್ಲಿ ಪ್ರಸಾರಗೊಂಡಿತು. ಈ ಧರ್ಮವು ಭಾರತದ ಗಡಿಯನ್ನು ದಾಟಿ, ಹೊರನಾಡುಗಳಲ್ಲಿ ಪ್ರಸಾರಗೊಂಡ ನಿದರ್ಶನಗಳು ಇಲ್ಲವೆಂದೇ ಹೇಳಬೇಕು.

## III

### ಬೌದ್ಧ ಮತ್ತು ವೀರಶೈವ ಧರ್ಮಗಳ ಸಾಮಾನ್ಯ ಲಕ್ಷಣ:

ಬೌದ್ಧ ಧರ್ಮದ ಗುಣಲಕ್ಷಣಗಳನ್ನು ಸಮಗ್ರವಾಗಿ ಪರಿಶೀಲಿಸಿದ ಪಾಶ್ಚಾತ್ಯ ಮತ್ತು ಪೌರಾತ್ಯ ದಾರ್ಶನಿಕರು ಮತ್ತು ಪಂಡಿತರು ಈ ಧರ್ಮವನ್ನು ಪ್ರಮುಖವಾಗಿ, ನಿರಾಶಾವಾದವನ್ನು ಪ್ರತಿಪಾದಿಸುವ ಧರ್ಮ ಎಂದೂ, ಪ್ರಯೋಜನ ಪ್ರಮಾಣವಾದ ಮತ್ತು ವಸ್ತುನಿಷ್ಟವಾದ (Pessimism, Pragmatism and Positivism) ಎಂದೂ ಗುರುತಿಸಿದ್ದಾರೆ. ಈ ಮಾತಿನ ಸತ್ಯತೆಯನ್ನು ತಿಳಿಯಲು ಈ ಮೂರು ಲಕ್ಷಣಗಳನ್ನು ಒಂದೊಂದಾಗಿ ಪರಿಶೀಲಿಸಿ ಈ ಸಾಮಾನ್ಯ ಲಕ್ಷಣಗಳು ವೀರಶೈವ ಧರ್ಮದಲ್ಲಿಯೂ ಕಂಡುಬರುತ್ತವೆಯೇ ಎಂಬುದನ್ನು ಗಮನಿಸಬೇಕು.

#### i) ನಿರಾಶಾವಾದ:

ಬೌದ್ಧ ಧರ್ಮದ ಪ್ರಕಾರ ಈ ಜಗತ್ತು ದುಃಖಮಯವಾದದ್ದು. ಸುಖ ಎಂಬುದು ಈ ಜಗತ್ತಿನಲ್ಲಿ ಇಲ್ಲವೇ ಇಲ್ಲ. ಕಡಿಮೆ ಪ್ರಮಾಣದ ದುಃಖವನ್ನು ಸುಖ ಎಂದು ಹೆಸರಿಸುತ್ತಾರೆ ಅಷ್ಟೆ. ಈ ಜಗತ್ತಿನಲ್ಲಿ ಹುಟ್ಟಿದ ಜೀವಜಂತುಗಳು ದುಃಖದಿಂದ ತಾವು ಸುರಿಸಿದ ಕಣ್ಣೀರನ್ನೆಲ್ಲಾ ಸಂಗ್ರಹಿಸಿಟ್ಟಿದ್ದರೆ, ಆ ಕಣ್ಣೀರಿನ ಪ್ರಮಾಣ ಸಪ್ತ ಸಾಗರಗಳ ನೀರಿಗಿಂತಲೂ ಹೆಚ್ಚಾಗುತ್ತಿದ್ದಿತು. ಅಲಂಕಾರಿಕವಾದ ಈ ಮಾತು ಸ್ವಲ್ಪ ಉತ್ಪ್ರೇಕ್ಷೆಯಂತೆ ಕಂಡರೂ, ಈ ಮಾತಿನ ಹಿಂದೆ ಅಡಗಿರುವ ಸತ್ಯವನ್ನು ನಾವು ಉಪೇಕ್ಷಿಸುವಂತಿಲ್ಲ. ಈ

ಬದುಕಿನಲ್ಲಿ ಎಲ್ಲಿಯೂ ಇಲ್ಲದ ಸುಖವನ್ನು ಅರಸಿ ತಪಿಸುತ್ತಿರುವ ಮಾನವನು ವಿವೇಕ ಶೂನ್ಯನೇ ಸರಿ. ಈ ರೀತಿ ಬದುಕಿನಲ್ಲಿ ಕಾಣುವ ದುಃಖದ ಪ್ರಮಾಣವನ್ನು ಮತ್ತೆ ಅದರ ಗಾಢ ಸ್ವರೂಪವನ್ನು ಕುರಿತು ಒತ್ತಿ ಹೇಳುವುದರಿಂದ ಈ ಧರ್ಮವನ್ನು, ನಿರಾಶಾವಾದ ವನ್ನು ಪ್ರತಿಪಾದಿಸುವ ಧರ್ಮ ಎಂದು ಕರೆಯಲಾಗಿದೆ.

ವೀರಶೈವ ಧರ್ಮವು ಬದುಕಿನಲ್ಲಿ ಕಂಡುಬರುವ ಸಾವು ನೋವು ದುಃಖ ದುಮ್ಮಾನ ಗಳ ಸತ್ಯತೆಯನ್ನು ಒಪ್ಪುತ್ತದೆ ನಿಜ. ಆಣವ, ಕಾರ್ಮಿಕ ಮತ್ತು ಮಾಯೆ ಎಂಬ ಮಲತ್ರಯಗಳಿಂದಾಗಿ ಶಿವಶಕ್ತಿಯು ಸಂಕುಚಿತಗೊಂಡು ಜೀವಭಾವಕ್ಕೆ ಎಡೆಗೊಡುತ್ತದೆ. ಇಚ್ಛಾಶಕ್ತಿ, ಕ್ರಿಯಾಶಕ್ತಿ ಮತ್ತು ಜ್ಞಾನಶಕ್ತಿಗಳ ಆವಿರ್ಭಾವದಿಂದ ಈ ಮಲತ್ರಯಗಳನ್ನು ನೀಗಿ ಜೀವಿಯಾದವನು ಶಿವಭಾವವನ್ನು ಪುನಃ ಗಳಿಸುವುದು ವೀರಶೈವ ಧರ್ಮದ ಪರಮ ಗುರಿ. ಆದ್ದರಿಂದ ಈ ಜಗತ್ತು ಭೋಗಭೂಮಿಯೂ ಅಹುದು, ಯೋಗ ಭೂಮಿಯೂ ಅಹುದು. ಅರಿತು ಬಾಳುವವನಿಗೆ ಮರಣವೂ ಮಹಾನವಮಿಯೆಂದೆನಿಸುತ್ತದೆ. ಸುಖ ದುಃಖಗಳ ದ್ವಂದ್ವಮಯವಾದ ಈ ಜಗತ್ತಿನಲ್ಲಿ ಬರುವ ದುಃಖಕ್ಕೆ ಅಂಜಿ, ಬದುಕನ್ನು ನಿರಾಕರಿಸುವುದು ಈ ಧರ್ಮಕ್ಕೆ ಸಮ್ಮತವಲ್ಲ. ಮಾನವನು ತನ್ನ ಈ ಬದುಕನ್ನು ತನ ಗೊದಗಿದ ಒಂದು ಅವಕಾಶ ಎಂದರಿತು ಅದನ್ನು ವಿವೇಚನೆಯಿಂದ ಬದುಕಲು ಕಲಿಯ ಬೇಕು ಎಂಬುದು ವೀರಶೈವ ಧರ್ಮದ ಸಂದೇಶ.

### ii) ಪ್ರಯೋಜನ ಪ್ರಮಾಣವಾದ:

ಬದುಕನ್ನು ದುಃಖಮಯವಾದದ್ದು ಎಂದರಿತ ಬೌದ್ಧ ಧರ್ಮವು ಈ ದುಃಖದಿಂದ ಪಾರಾಗುವ ಬಗೆ ಹೇಗೆ ಎಂಬುದನ್ನೂ ಕುರಿತು ತನ್ನ ಚಿಂತನೆಯನ್ನು ಕೇಂದ್ರೀಕರಿಸಿತು. ದುಃಖಮಯವಾದ ಈ ಬದುಕಿನೊಂದಿಗೆ ಯಾವ ರೀತಿಯ ಹೊಂದಾಣಿಕೆಗೂ ಬೌದ್ಧ ಧರ್ಮ ಸಿದ್ಧವಿರಲಿಲ್ಲ. ದೇವರ ಅಸ್ತಿತ್ವವನ್ನು ನಂಬದ ಬೌದ್ಧ ಧರ್ಮವು ಸಾಧಕನನ್ನು ಈ ದುಃಖಸಾಗರದಿಂದ ಪಾರುಮಾಡಲು ಯಾವ ದಿವ್ಯ ಶಕ್ತಿಯನ್ನೂ ಆಶ್ರಯಿಸುವಂತಿಲ್ಲ. ಪ್ರಜ್ಞಾವಂತನಾಗಿ ಕೇವಲ ತನ್ನ ಸ್ವಪ್ರಯತ್ನದಿಂದ ಸಾಧಕನು ದುಃಖಮುಕ್ತನಾಗಲು ಕಲಿಯ ಬೇಕು ಎಂಬುದು ಬೌದ್ಧಧರ್ಮದ ಸಂದೇಶ. ಬುದ್ಧನು ಅನುಸರಿಸಿದ ಮಾರ್ಗವೂ ಅಂತಹುದೇ. ಸಾಧಕನು ತನ್ನ ಧಾರ್ಮಿಕ ಪ್ರಗತಿಗೆ ದೇವರ ಕೃಪೆಯನ್ನು ನಂಬಿ ಕೂರು ವಂತಿಲ್ಲ. ಸಾಧನೆಯಲ್ಲಿ ತಾನು ಸೋತಾಗ ಸಾಧಕನು ದೇವರಲ್ಲಿ ಮೊರೆಯಿಡುವಂತಿಲ್ಲ. ಅಂದಮೇಲೆ ಬೌದ್ಧ ಧರ್ಮವನ್ನು ನಂಬಿದ ಸಾಧಕನಿಗೆ ಎಲ್ಲಿಲ್ಲದ ಹೊಣೆಗಾರಿಕೆಯಿದೆ ಎಂದಂತಾಯಿತು. ಆಸ್ತಿಕ ಮತ್ತು ನಾಸ್ತಿಕ ಧರ್ಮಗಳ ನಡುವೆ, ಸಾಧನೆಯ ಹಂತದಲ್ಲಿ ಕಾಣಬರುವ ಮೂಲ ವ್ಯತ್ಯಾಸ, ಇದು.

ವೀರಶೈವಧರ್ಮವು ಆಸ್ತಿಕ ಧರ್ಮವಾದ್ದರಿಂದ ದೇವರ ಅಸ್ತಿತ್ವದಲ್ಲಿ ಶ್ರದ್ಧೆ ಇದ್ದು, ಅವನನ್ನು ಅಂತರಂಗ ಬಹಿರಂಗದಲ್ಲೆಲ್ಲಾ ಗುರುತಿಸುತ್ತದೆ. ಭಗವಂತನು

ಸರ್ವಶಕ್ತ ಮತ್ತು ಕರುಣಾಮಯಿ ಎಂದು ನಂಬುವ ಈ ಭಕ್ತನು ತಾನು ತನ್ನ ಸಾಧನೆಯಲ್ಲಿ ಸೋತಾಗ ಭಗವಂತನ ನೆರವನ್ನು ಬೇಡುತ್ತಾನೆ. ಬದುಕಿನಲ್ಲಿ ಕಾಣುವ ಸುಖದುಃಖಗಳೆರಡೂ ಭಗವಂತನ ಇಚ್ಛೆಗೆ ಅಧೀನವಾಗಿವೆ ಎಂದು ತಿಳಿಯುವ ಈ ಭಕ್ತನಿಗೆ ಸಾವು ನೋವುಗಳು ಸಹ್ಯವೆನಿಸುತ್ತವೆ. ಅವನ ಶ್ರದ್ಧೆಯೇ ಅವನಿಗೆ ಸಂಜೀವಿನಿಯೆನಿಸಿ ಬದುಕಿನ ಎಲ್ಲ ನೋವುಗಳನ್ನು ಸಹಿಸುವ ಶಕ್ತಿಯನ್ನು ಅದು ತಂದು ಕೊಡುತ್ತದೆ. ಅದರಿಂದಾಗಿ ಅವನಲ್ಲಿ ಅಭಯತ್ವ ಮೈಗೂಡಿಬರುತ್ತದೆ. ಹೀಗಾಗಿ ಬೌದ್ಧ ಮತ್ತು ವೀರಶೈವ ಧರ್ಮಗಳು ತಮ್ಮ ದೃಷ್ಟಿ ಭೇದದಿಂದಾಗಿ ಧರ್ಮದ ಸ್ವರೂಪ ಮತ್ತು ಸಾಧನೆಯನ್ನು ಭಿನ್ನರೀತಿಯಲ್ಲಿ ಅರ್ಥೈಸುತ್ತವೆ.

### iii) ವಸ್ತುನಿಷ್ಠವಾದ :

ಬೌದ್ಧ ಧರ್ಮದ ಪ್ರಕಾರ ವಿವೇಕಿಯಾದ ಮನುಷ್ಯನು, ತನ್ನ ಬದುಕಿನ ಮುಂದೆ ಚಾಚಿನಿಂತಿರುವ ನೋವಿನ ಸ್ವರೂಪ ಮತ್ತು ಅದರ ಪರಿಹಾರವನ್ನು ಕುರಿತು ಚಿಂತಿಸಬೇಕೇ ಹೊರತು ಮುಂದೆ ಎಂದೋ ದೊರೆಯಬಹುದಾದ ಸ್ವರ್ಗದ ಸುಖ ಅಥವ ಮೋಕ್ಷದ ಸ್ವರೂಪವನ್ನು ಕುರಿತಂತಲ್ಲ. ಹೊಟ್ಟೆಹಸಿದವನು ಮೃಷ್ಟಾನ್ನದ ಸವಿ ಹೇಗಿರಬಹುದು ಎಂಬುದನ್ನು ಕುರಿತು ಚಿಂತಿಸುವುದರಿಂದ ಅವನ ಹಸಿವು ನೀಗುವುದಿಲ್ಲ. ಬುದ್ಧನು ನಿರ್ವಾಣದ ಸ್ವರೂಪವನ್ನು ಕುರಿತು ಹೆಚ್ಚು ವಿವರಣೆ ಕೊಟ್ಟವನಲ್ಲ. ಬುದ್ಧನ ಪರಮ ಶಿಷ್ಯನಾದ ಆನಂದನು ನಿರ್ವಾಣದ ಸ್ಥಿತಿಯಲ್ಲಿ ಲಭಿಸುವ, ಅನುಭವದ ಸ್ಪಷ್ಟ ನಿರೂಪಣೆಯನ್ನು ನೀಡುವಂತೆ ಬುದ್ಧನನ್ನು ಬೇಡುತ್ತಾನೆ. ಇದಕ್ಕೆ ಬುದ್ಧನಿಂದ ದೊರೆತ ಉತ್ತರ ಕೇವಲ ಮೌನವಷ್ಟೆ. ಆಸ್ತಿಕ ಧರ್ಮಗಳಲ್ಲಿ ಕಾಣುವ ಸ್ವರ್ಗ ಮತ್ತು ಮೋಕ್ಷಗಳನ್ನು ಕುರಿತ ಆಕರ್ಷಕ ವಿವರಣೆಗಳನ್ನು ಬಲ್ಲ ಈ ಶಿಷ್ಯರು, ಬೌದ್ಧ ಧರ್ಮದಲ್ಲಿ ಈ ಕುರಿತಾದ ವಿವರಣೆಯನ್ನು ಬಯಸಿದುದು ಸಹಜವೇ ಸರಿ. ಬುದ್ಧನನ್ನು ಕುರಿತು ಈ ಪ್ರಶ್ನೆಯನ್ನು ಮತ್ತೆ ಮತ್ತೆ ಕೇಳಿದಾಗ ಅವನು–"ನೋಡಿ, ನೀವು ದಿನ ನಿತ್ಯದ ನಿಮ್ಮ ಬದುಕಿನಲ್ಲಿ ನೀವು ಅನುಭವಿಸುತ್ತಿರುವ ನೋವಿನ ಸ್ವರೂಪವೇನೆಂಬುದನ್ನೇ ತಿಳಿದಿಲ್ಲ. ಮುಂದೆ ಲಭಿಸಬಹುದೆಂಬ ನಿರ್ವಾಣವನ್ನು ಕುರಿತು ಚಿಂತಿಸುತ್ತಾ ವ್ಯರ್ಥವಾಗಿ ಕಾಲಕಳೆಯುತ್ತಿದ್ದೀರಿ. ಈಗ ನೀವು ನಿಮ್ಮ ಬದುಕಿನ ವಸ್ತುಸ್ಥಿತಿಯನ್ನು ತಿಳಿಯಲು ಕಲಿಯಿರಿ". ಈ ರೀತಿ, ಬುದ್ಧನು ಜಾತ್ಯಾತೀತ ಸಮಸ್ಯೆಗಳೆನಿಸಿದ (Metaphysical Problems) ದೇವರು, ಆತ್ಮ ಮತ್ತು ಮೋಕ್ಷದ ಸ್ವರೂಪವನ್ನು ಕುರಿತು, ವ್ಯರ್ಥವೆನಿಸಿದ ಚಿಂತನೆಯಲ್ಲಿ ಹೆಚ್ಚುಕಾಲವನ್ನು ವ್ಯಯಿಸಲು ಬಯಸಲಿಲ್ಲ.

ಬದುಕಿನ ಈ ಸಾವು ನೋವುಗಳ ಸಮಸ್ಯೆಯನ್ನು ಹೊತ್ತು, ಅವುಗಳ ಪರಿಹಾರಕ್ಕಾಗಿ, ಬುದ್ಧನ ಬಳಿಗೆ ಬರುತ್ತಿದ್ದವರ ಸಂಖ್ಯೆ ಕಡಿಮೆಯೇನಿರಲಿಲ್ಲ. ಆ ರೀತಿ ನೋವಿನ

ಭಾರದಿಂದ ನೊಂದು ಬಂದವರಿಗೆ, ಬುದ್ಧನು ಸ್ವಾಂತನವೀಯುವ ಕ್ರಮ ಬಹು ಅಪರೂಪವಾದದ್ದು. ಬಂದ ಜನರ, ಆ ಸಮಸ್ಯೆಗಳಿಗೆ ಬುದ್ಧನು ವಸ್ತುನಿಷ್ಟವಾದ ಪರಿಹಾರಗಳನ್ನು ಸೂಚಿಸುತ್ತಿದ್ದನೇ ಹೊರತು, ಕೇವಲ ಆದರ್ಶದ ಕಲ್ಪನೆಗಳಲ್ಲಿ ವಿರಹಿಸುತ್ತಿರಲಿಲ್ಲ. ಒಮ್ಮೆ ಬುದ್ಧನ ಶಿಷ್ಯಳಾದ ಕಿಸಾಗೌತಮಿ ಎಂಬುವವಳು ತನ್ನ ಸತ್ತ ಮಗುವನ್ನು ತಂದು ಅದನ್ನು ಬದುಕಿಸಿ ಕೊಡಲು ಬುದ್ಧನನ್ನು ಬೇಡುತ್ತಾಳೆ. ಇದ್ದ ಮಗುವೊಂದನ್ನು ಕಳೆದುಕೊಂಡ ಈ ತಾಯಿಯ ಹೃದಯುದ ನೋವೆಷ್ಟೆಂಬುದನ್ನು ಅರಿತ ಬುದ್ಧನು, ಅವಳಿಗೆ ಬದುಕಿನ ವಸ್ತುಸ್ಥಿತಿಯನ್ನು ತಿಳಿಸಲು, ಒಂದು ಕಾರ್ಯಸಾಧುವಾದ ಮಾರ್ಗವನ್ನು ಹುಡುಕುತ್ತಾನೆ. ಸಾವನ್ನು ಕಾಣದ ಮನೆಯೊಂದರಿಂದ ಸ್ವಲ್ಪ ಸಾಸುವೆಯನ್ನು ತಂದುಕೊಟ್ಟರೆ ನಾನು ಆ ಮಗುವನ್ನು ಬದುಕಿಸಿ ಕೊಡುತ್ತೇನೆ ಎಂಬುದಾಗಿ ಆ ತಾಯಿಗೆ ತಿಳಿಸುತ್ತಾನೆ. ದುಃಖಾತಿರೇಕದಿಂದಾಗಿ ಯುಕ್ತಾಯುಕ್ತತೆಯ ಪರಿಜ್ಞಾನವನ್ನೇ ಕಳೆದುಕೊಂಡಿದ್ದ ಕಿಸಾಗೌತಮಿ, ಮನೆಯಿಂದ ಮನೆಗೆ ಓಡಿ ಸಾಸುವೆಗಾಗಿ ಬೇಡುತ್ತಾಳೆ. ನಾಲ್ಕಾರು ಮನೆಗಳನ್ನು ಸುತ್ತಿ ಬಂದ ಮೇಲೆ, ಅವಳಿಗೆ ತಿಳಿಯುತ್ತದೆ, ಎಲ್ಲರ ಮನೆಯಲ್ಲಿಯೂ ಒಂದಲ್ಲ ಒಂದು ದಿನ ಒಬ್ಬರಲ್ಲ ಒಬ್ಬರು ಸತ್ತಿರುವುದು ನಿಜ ಎಂಬ ನೈಜಸತ್ಯ. ಈ ಸತ್ಯಸ್ಥಿತಿ ಅರಿವಾದಂತೆಲ್ಲಾ, ಕಿಸಾಗೌತಮಿಯು ದುಃಖದ ಉಮ್ಮಳ ತಗ್ಗುತ್ತದೆ. ಬುದ್ಧನು ತಾನು ಅರಿತ ಸತ್ಯವನ್ನು ಜನತೆಗೆ ತಿಳಿಸುತ್ತಿದ್ದ ರೀತಿ ಎಂತಹದು ಎಂಬುದಕ್ಕೆ ಇದು ಒಂದು ನಿದರ್ಶನ.

ವೀರಶೈವ ಸಿದ್ಧಾಂತವೂ ಸಹ, ಬದುಕಿನ ವಸ್ತುಸ್ಥಿತಿ ಮತ್ತು ಆದರ್ಶಗಳ ನಡುವೆ ಹೆಚ್ಚಿನ ಅಂತರವನ್ನು ಕಲ್ಪಿಸಿಕೊಳ್ಳಲಿಲ್ಲ. ಸಾಮಾನ್ಯವಾಗಿ ಆಸ್ತಿಕ ಧರ್ಮಗಳು ಸ್ವರ್ಗ ಮತ್ತು ಮರ್ತ್ಯಲೋಕಗಳನ್ನು ಪರಸ್ಪರ ವಿರುದ್ಧ ಧ್ರುವಗಳಂತೆ ಚಿತ್ರಿಸುತ್ತವೆ. ಮಾನವ ಲೋಕದಲ್ಲಿ ಕಾಣಲಾರದ ಶ್ರೇಷ್ಠತೆಯನ್ನೆಲ್ಲಾ ತೀವ್ರಗೊಳಿಸಿ, ಅವುಗಳ ಸಾಕಾರ ರೂಪವನ್ನೇ ಸ್ವರ್ಗ ಅಥವಾ ಮೋಕ್ಷವೆಂಬಂತೆ ಅವರು ಚಿತ್ರಿಸುತ್ತಾರೆ. ಇಂತಹ ಆಸ್ತಿಕ ಧರ್ಮಗಳಿಗೆ ಅಪವಾದವೊ ಎಂಬಂತೆ, ವೀರಶೈವ ಧರ್ಮವು ಮರ್ತ್ಯಲೋಕವನ್ನೇ ಶಿವಲೋಕವನ್ನಾಗಿ ಮಾಡುವ ಒಂದು ಜೀವನ ಕ್ರಮವನ್ನು ಸಾಧಿಸಿ ತೋರಿಸುತ್ತದೆ. ಶರಣರ ಕಲ್ಪನೆಯ ಮೋಕ್ಷ ಸ್ಥಿತಿಯು, ರೂಪಾಂತರಗೊಂಡ ಬದುಕಿನ ವಸ್ತು ಸ್ಥಿತಿಯಂತೆ, ನಮ್ಮ ಮುಂದೆ ನಿಲ್ಲುತ್ತದೆ. ಅದರ ವಿವರಣೆಯನ್ನು ನೋಡಿ–

ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ?
ಈ ಲೋಕದೊಳಗೆ ಮತ್ತೆ ಅನಂತ ಲೋಕ!
ಶಿವಲೋಕ ಶಿವಾಚಾರವಯ್ಯಾ.
ಶಿವಭಕ್ತನಿದ್ದಠಾವೆ ದೇವಲೋಕ
ಭಕ್ತನಂಗಣವೆ ವಾರಣಾಸಿ; ಕಾಯಕವೇ ಕೈಲಾಸ!
ಇದು ಸತ್ಯ ಕೂಡಲಸಂಗಮದೇವಾ.

IV

**ಬೌದ್ಧ ಧರ್ಮದ ದಾರ್ಶನಿಕ ಸಿದ್ಧಾಂತಗಳು:**

ದಾರ್ಶನಿಕ ದೃಷ್ಟಿಯಲ್ಲಿ ನೋಡಿದರೆ ಬೌದ್ಧ ಧರ್ಮವು ಅತ್ಯಂತ ಕ್ರಾಂತಿಕಾರಿ ಹಾಗೂ ವೈಜ್ಞಾನಿಕ ಧರ್ಮವೆಂದು ತಿಳಿದು ಬರುತ್ತದೆ. ಈ ಧರ್ಮದ ಜೀವನಾಡಿ ಯಂತಿರುವ ಕ್ಷಣಿಕವಾದದಿಂದಾಗಿ, ಈ ಧರ್ಮಕ್ಕೆ ಸೈದ್ಧಾಂತಿಕ ಶ್ರೇಷ್ಠತೆ ಲಭಿಸಿದೆ. ಈ ಕ್ಷಣಿಕವಾದವನ್ನು ಸರಿಯಾಗಿ ತಿಳಿಯದ ಹೊರತು ಬೌದ್ಧ ಸಿದ್ಧಾಂತದ ಪೂರ್ಣ ಪರಿಚಯು ನಮಗೆ ಲಭಿಸುವುದಿಲ್ಲ ಎಂಬುದು ಈ ಧರ್ಮವನ್ನು ಚೆನ್ನಾಗಿಬಲ್ಲ ಆ್ಯನಿಬೆಸೆಂಟರ ಮಾತು. ಈ ಕ್ಷಣಿಕವಾದದಿಂದಾಗಿಯೇ ಬೌದ್ಧ ಧರ್ಮವು ನಿರೀಶ್ವರವಾದ ಮತ್ತು ಅನಾತ್ಮವಾದ ಎಂದೆನಿಸಿತು. ಆದ್ದರಿಂದ ಈ ಧರ್ಮವನ್ನು ಸಮರ್ಪಕವಾಗಿ ತಿಳಿಯಲು ಕ್ಷಣಿಕವಾದ, ನಿರೀಶ್ವರವಾದ ಮತ್ತು ಅನಾತ್ಮವಾದ, ಈ ಮೂರು ಸಿದ್ಧಾಂತಗಳ ಸ್ಪಷ್ಟ ನಿರೂಪಣೆ ನಮಗೆ ಅತ್ಯವಶ್ಯಕವೆನಿಸಿದೆ.

**(i) ಬೌದ್ಧ ಸಿದ್ಧಾಂತದ ಕ್ಷಣಿಕವಾದ:**

ಬೌದ್ಧ ಸಿದ್ಧಾಂತದ ಈ ಕ್ಷಣಿಕ ವಾದವು ಆಸ್ತಿಕ ಧರ್ಮದಲ್ಲಿ ಕಾಣುವ ನಿತ್ಯತೆ ಮತ್ತು ಅನಂತತೆಯ ಕಲ್ಪನೆಗೆ ತದ್ವಿರುದ್ಧವಾದ ಒಂದು ನಿಲುವು. ಈ ವಾದದ ಪ್ರಕಾರ, ಜಗತ್ತಿನಲ್ಲಿ ಅಸ್ತಿತ್ವದಲ್ಲಿರುವ ಪ್ರತಿಯೊಂದು ವಸ್ತುವೂ ಪ್ರತಿಕ್ಷಣದಲ್ಲಿಯೂ ಮಾರ್ಪಾಡು ಹೊಂದುತ್ತಲೇ ಇರುತ್ತದೆ. ಎರಡು ವಿಭಿನ್ನ ಕ್ಷಣಗಳಲ್ಲಿ ಯಾವ ವಸ್ತುವೂ ಮಾರ್ಪಾಡು ಹೊಂದದೆ ಒಂದೇ ರೀತಿಯಲ್ಲಿ ಇರಲಾರದು. ಒಂದು ವಸ್ತುವು ಎರಡು ಕ್ರಮಾಗತ ಕ್ಷಣ ಗಳಲ್ಲಿ ಒಂದೇ ಆಗಿರುವುದು ನಿಜವಾದರೆ, ಅಂತಹ ವಸ್ತುವಿಗೆ ವಿನಾಶವೆಂಬುದೇ ಬರ ಲಾರದು. ಈ ಮಾತಿನ ಪೂರ್ಣಪಾತ ತಿಳಿಯಬೇಕಾದರೆ ಅದನ್ನು ಕುರಿತು ದೀರ್ಘವಾದ ಚಿಂತನೆ ಬೇಕಾಗುತ್ತದೆ.

ನಮ್ಮ ದೈನಂದಿನ ಅನುಭವದಲ್ಲಿ ಕಾಣುವ ವಸ್ತುಗಳು ವಿಭಿನ್ನಕ್ಷಣಗಳಲ್ಲಿ ಒಂದೇ ಆಗಿರುವಂತೆ ಕಾಣುತ್ತವೆ ನಿಜ. ಆದರೆ ಅವು ಸ್ಥೂಲದಲ್ಲಿ ಹಾಗೆ ಕಾಣುತ್ತವೆಯೇ ಹೊರತು ಆಳದಲ್ಲಿ ಮಾರ್ಪಾಡು ಹೊಂದುತ್ತಲೇ ಇರುತ್ತವೆ. ನಾವು ನೆಟ್ಟಬೀಜವು ಗಿಡವಾಗಿ ಮರವಾಗಿ ಹೂವಾಗಿ ಹಣ್ಣು ಬಿಡುವುದು ನಮ್ಮ ಅನುಭವ. ಗಿಡದಲ್ಲಿ ಕಾಣುವ ಈ ಪ್ರತಿಕ್ರಿಯೆಯಲ್ಲಿ ಬೀಜದಿಂದ ಮೊದಲುಗೊಂಡು ಹಣ್ಣು ಬಿಡುವವರೆಗೂ ಪ್ರತಿಕ್ಷಣದಲ್ಲಿಯೂ ಬದಲಾವಣೆ ನಡದೇ ಇರುತ್ತದೆ. ಗಿಡದಲ್ಲಿ ನಡೆಯುವ ಈ ಬದಲಾವಣೆಗಳು ವಿಭಿನ್ನ ಕ್ಷಣಗಳಲ್ಲಿ ನಡೆದು ಬರುತ್ತವೆಯೇ ಹೊರತು ಅವು ಏಕ ಕಾಲದಲ್ಲಿ ನಡೆಯಲಾರವು. ಬದಲಾವಣೆಯೆಂಬುದು ಪ್ರಗತಿಯ ಕಡೆಗಾದರೂ ಸಾಗಬಹುದು ಇಲ್ಲವೆ ವಿನಾಶದ ದಿಕ್ಕಿನಲ್ಲಿಯೂ ಹೋಗಬಹುದು, ವಿಕಾಸಗೊಳ್ಳಬಹುದು ಅಥವ ಸಂಕುಚಿತಗೊಳ್ಳ ಬಹುದು, ಹಿಗ್ಗಬಹುದು ಇಲ್ಲವೆ ಕುಗ್ಗಬಹುದು. ಅಂತೂ ಬದಲಾವಣೆ ಎಂಬುದು

ಎರಡು ಕ್ಷಣಗಳ ಸಂಕ್ರಮಣಾವಸ್ಥೆಯಲ್ಲಿ ನಡೆಯುವ ಒಂದು ಪ್ರಕ್ರಿಯೆ. ಬೌದ್ಧ ಸಿದ್ಧಾಂತದ ಪ್ರಕಾರ ಕಾಲದ ಪ್ರವಾಹಕ್ಕೆ ಸಿಕ್ಕಿದ ಜೀವ ಮತ್ತು ಜಡ ಎಂಬ ಎಲ್ಲ ವಸ್ತುಗಳೂ ಪ್ರತಿಕ್ಷಣದಲ್ಲಿಯೂ ಬದಲಾವಣೆಗೊಂಡು, ರೂಪಾಂತರಗೊಳ್ಳುವುದು ಅನಿವಾರ್ಯ. ಹಾಗೆಯೇ ಅಸ್ತಿತ್ವ ಎಂಬುದು ಕಾಲದಲ್ಲಿ ಮಾತ್ರ ಸಾಧ್ಯವೇ ಹೊರತು, ಕಾಲಾತೀತದಲ್ಲಿ ಅಲ್ಲ.

ಬೌದ್ಧರ ಈ ಕ್ಷಣಿಕ ವಾದದ ಮತ್ತೊಂದು ಆಯಾಮವೆಂದರೆ, ಕಾಲ ಮತ್ತು ದೇಶಕ್ಕೆ ಅಧೀನವಾದ ಈ ಜಗತ್ತಿನಲ್ಲಿ ಸ್ಥಿರತೆ ಅಥವ ಅಚಲತೆ ಎಂಬುದು ಎಲ್ಲಿಯೂ ಇರಲು ಸಾಧ್ಯವಿಲ್ಲ. ಸ್ಥಿರತೆ ಎಂಬುದು ಕೇವಲ ಒಂದು ಕಾಲ್ಪನಿಕ ಸ್ಥಿತಿಯೇ ಹೊರತು, ಅದು ವಸ್ತುಸ್ಥಿತಿಯಲ್ಲ. ಉರಿಯುವ ಜ್ವಾಲೆ ಸ್ಥಿರವೆನಿಸುವಂತೆ ತೋರುತ್ತದೆ, ಆದರೆ ಅದರ ಅಂತರಂಗದಲ್ಲಿ ಸದಾಚಲನೆ ನಡೆದೇ ಇರುತ್ತದೆ. ತುಂಬಿದ ಪಾತ್ರೆಯಲ್ಲಿರುವ ನೀರು ನಿಂತಂತೆ ಕಂಡರೂ, ಅದು ಅಂತರಂಗದಲ್ಲಿ ಸದಾ ಚಲಿಸುತ್ತಿರುತ್ತದೆ. ಈ ಚಲನೆ ಕೇವಲ ಅನಿಲ ಅಥವ ದ್ರವವಸ್ತುಗಳಿಗೆ ಮಾತ್ರ ಸೀಮಿತವಲ್ಲ. ಘನವಸ್ತುಗಳಾದ ಕಲ್ಲು, ಲೋಹ ಮುಂತಾದವೂ ಸಹ ನಿರಂತರವಾದ ಚಲನೆಗೆ ಒಳಗಾಗಿರುತ್ತವೆ. ಬೌದ್ಧರ ಈ ಚಿಂತನೆ ಆಧುನಿಕ ವಿಚಾರವಂತರನ್ನು ಬೆರಗುಗೊಳಿಸುವಂತಿದೆ.

ಬೌದ್ಧ ಸಿದ್ಧಾಂತದ ಈ ಕ್ಷಣಿಕ ವಾದದಿಂದಾಗಿ ಮಾನವನ ಪ್ರಜ್ಞಾವಂತಿಕೆಗೆ ಒಂದು ಸಿದ್ಧಾಂತದ ನೆಲೆ ದೊರಕಿದಂತಾಯಿತು. ಬುದ್ಧೀಂದ್ರಿಯ ಯುಕ್ತವಾದ ನಮ್ಮ ಅರಿವಿಗೆ, ಕೇವಲ ವಸ್ತುಗಳ ಅಸ್ತಿತ್ವ ಗೋಚರಿಸುತ್ತದೆಯೋ ಹೊರತು, ಆ ವಸ್ತುಗಳ ಅಸ್ತಿತ್ವಕ್ಕೆ ಕಾರಣವಾದ ಕಾಲ ಮತ್ತು ದೇಶಗಳು ಅಗೋಚರವೆನಿಸುತ್ತವೆ. ಹಾಗೆಯೇ ಈ ವಸ್ತುಗಳು ಬೆಳೆಯುವಾಗ ಅಥವ ಅಳಿಯುವಾಗ, ಆ ವಸ್ತುಗಳಲ್ಲಿ ನಡೆಯುವ ರೂಪಾಂತರ ನಮಗೆ ಕಾಣುತ್ತದೆಯೇ ಹೊರತು ಆ ರೂಪಾಂತರಕ್ಕೆ ಕಾರಣವಾದ ಕ್ಷಣಾಂತರದ ಸಂಕ್ರಮಣ ನಮಗೆ ಕಾಣುವುದಿಲ್ಲ. ಹೀಗಾಗಿ ನಾವು ಈ ಜಗತ್ತನ್ನು, ಅದು ಇರುವಂತೆ ತಿಳಿಯುತ್ತಿಲ್ಲ ಕೇವಲ ಅದು ತೋರುವಂತೆ ತಿಳಿಯುತ್ತಿದ್ದೇವೆ. ಆದ್ದರಿಂದ ನಮ್ಮ ಅರಿವು ಕೇವಲ ಭ್ರಮಾತ್ಮಕವಾದದ್ದೇ ಹೊರತು ಸತ್ಯಾತ್ಮಕವಾದದ್ದಲ್ಲ.

ಮಾನವನ ಅನುಭವಕ್ಕೆ ಆಧಾರವಾದ ಕಾಲದ ಸ್ವರೂಪವನ್ನು ಕುರಿತಂತೆ, ಇಷ್ಟೊಂದು ಆಳವಾಗಿ ಬೌದ್ಧ ಧರ್ಮದ ಹೊರತು ಬೇರೆ ಯಾವ ಧರ್ಮವೂ ವಿಶ್ಲೇಷಿಸಿರುವುದು ನಮಗೆ ಕಾಣುವುದಿಲ್ಲ. ವೀರಶೈವ ಧರ್ಮವು ಮಿಕ್ಕೆಲ್ಲ ಆಸ್ತಿಕ ಧರ್ಮಗಳಂತೆ, ವಿಶ್ವದ ಆಗು ಹೋಗುಗಳನ್ನು ಕ್ಷಣಿಕವೆಂದರಿತು ಇಂಥಹ ಕ್ಷಣಿಕವಾದ ಅಥವ ಅನಿತ್ಯವಾದ ಜಗತ್ತಿಗೆ ಆಧಾರವಾಗಿ, ನಿತ್ಯವಾದ ಒಂದು ದಿವ್ಯ ತತ್ವವಿರಲೇಬೇಕು ಎಂದು ತಿಳಿಯುತ್ತದೆ. ಅಂತಹ ದಿವ್ಯ ತತ್ವವನ್ನೇ ಆ ಧರ್ಮವು ಪರಶಿವನೆಂದು ಕರೆಯುವುದು. ಆದರೆ ಬೌದ್ಧ ತತ್ವವು ಈ ಜಗತ್ತಿನ ಸ್ಥಿತ್ಯಂತರಗಳನ್ನು ಕೇವಲ ಕ್ಷಣಿಕವಾದದ ನೆರವಿನಿಂದಲೇ ವಿವರಿಸುವ ಅವರ ಪ್ರಯತ್ನ ಬಹು ವಿಶಿಷ್ಟವಾದದ್ದು.

ii) ಅನಾತ್ಮ ವಾದ:

ಬೌದ್ಧ ಸಿದ್ಧಾಂತವನ್ನು ಅನಾತ್ಮ ವಾದದ ಸಿದ್ಧಾಂತ ಎಂದು ಕರೆಯಲಾಗಿದೆ. ಜೀವಿಯ ಅಸ್ತಿತ್ವವನ್ನು ವಿವರಿಸಲು ಆತ್ಮ ಎನ್ನುವ ಮಾತನ್ನು ಬೌದ್ಧ ಧರ್ಮದಲ್ಲಿಯೂ ಬಳಸಲಾಗಿದೆಯಾದರೂ, ಆ ಮಾತಿನ ಅರ್ಥ ಸ್ವಲ್ಪ ವಿಶಿಷ್ಟವಾಗಿದೆ. ಈ ಸಿದ್ಧಾಂತದಲ್ಲಿ ಮಹತ್ವ ಪಡೆದ, ಕ್ಷಣಿಕ ವಾದದ ಪಾರಮ್ಯದಿಂದಾಗಿ, ಬೌದ್ಧ ಧರ್ಮದಲ್ಲಿ ಬರುವ ಆತ್ಮದ ಕಲ್ಪನೆ ವೀರಶೈವ ಧರ್ಮದಲ್ಲಿ ಬರುವ ಆತ್ಮದ ಕಲ್ಪನೆಯಂತೆ ನಿತ್ಯ, ಶಾಶ್ವತ, ಅನಂತ ಎಂದೆನಿಸುವುದಿಲ್ಲ. ಬೌದ್ಧ ಧರ್ಮದ ಪ್ರಕಾರ ಆತ್ಮ ಎನ್ನುವುದು, ರೂಪ ವೇದನ ಸಂಜ್ಞಾ ಸಂಸ್ಕಾರ ಮತ್ತು ವಿಜ್ಞಾನ ಎಂಬ ಪಂಚಸ್ಕಂದಗಳ ಒಂದು ಸಂಘಾತ. ಉಪನಿಷತ್ತಿನಲ್ಲಿ ಜೀವಿಯ ಸತ್ಯತೆಯನ್ನು ನಿರ್ಣಯಿಸಲು ಜೀವಿಯ ಸ್ವರೂಪವನ್ನು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಪಂಚಕೋಶಗಳಾಗಿ ವಿಶ್ಲೇಷಿಸಿ, ಪಂಚಕೋಶ ಯುಕ್ತವಾದ ಈ ಪುರದಲ್ಲಿ ವಾಸಿಸುವವನನ್ನು ಪುರುಷ ಅಥವ ಆತ್ಮ ಎಂದು ಹೆಸರಿಸಲಾಗಿದೆ. ಈ ಆತ್ಮನನ್ನು ನಿತ್ಯನೂ ಅನಂತನೂ ಶಾಶ್ವತನೂ ಎಂದು ಕರೆದು, ಅವನನ್ನು ಸಚ್ಚಿದಾನಂದ ಸ್ವರೂಪಿ ಎಂಬುದಾಗಿ ಉಪನಿಷತ್ತುಗಳು ಗ್ರಹಿಸಿದುವು. ಆದರೆ ಬೌದ್ಧ ಸಿದ್ಧಾಂತವು, ನಿತ್ಯನೆನಿಸಿದ ಈ ಆತ್ಮನನ್ನು ಮತ್ತೆ ವಿಶ್ಲೇಷಿಸಿ, ಆತ್ಮ ಎನ್ನುವುದು ಪಂಚಸ್ಕಂದ ಯುಕ್ತವಾದ ಒಂದು ಸಂಘಾತ ಎಂಬ ನಿರ್ಣಯಕ್ಕೆ ಬಂದಿತು.

ಬೌದ್ಧ ಸಿದ್ಧಾಂತದ ಪ್ರಕಾರ ಆತ್ಮದ ಸ್ವರೂಪವೇನೆಂಬುದನ್ನು ಸ್ಪಷ್ಟಪಡಿಸುವ ಸಾಂದರ್ಭಿಕವಾದ ನಿರೂಪಣೆಯೊಂದು ಈ ರೀತಿ ಇದೆ. ಒಮ್ಮೆ ಯವನಾಧಿಪತಿಯಾದ ಮಿಲಿಂದನೆಂಬ ರಾಜನು ನಾಗಸೇನನೆಂಬ ಬೌದ್ಧ ಸನ್ಯಾಸಿಯ ಬಳಿಗೆ ಬಂದು, ಆತ್ಮದ ಸ್ವರೂಪವನ್ನು ವಿವರಿಸಲು ಅವನನ್ನು ಪ್ರಾರ್ಥಿಸುತ್ತಾನೆ. ಆಗ ಆ ಭಿಕ್ಷುವು ರಾಜನನ್ನು ಕುರಿತು ನೀನು ಇಲ್ಲಿಗೆ ಹೇಗೆ ಬಂದೆ ಎಂಬುದಾಗಿ ಕೇಳುತ್ತಾನೆ. ಆಗ ರಾಜನು ತಾನು ರಥದಲ್ಲಿ ಬಂದೆ ಎಂಬುದಾಗಿ ಹೇಳುತ್ತಾನೆ. ಪ್ರತಿಯಾಗಿ ಆ ಭಿಕ್ಷುವು ರಥ ಎಂದರೆ, ಕುದುರೆಯೇ, ಚಕ್ರವೆ, ಆಸನವೆ ಎಂದೆಲ್ಲಾ ವಿವರವಾಗಿ ಪ್ರಶ್ನಿಸಿ, ಕೊನೆಗೆ ರಥ ಎಂಬುದು ಚಕ್ರ, ಆಸನ, ಕುದುರೆ ಮುಂತಾದ ವಿವಿಧ ಅಂಗಗಳ ಒಂದು ಸಂಯೋಗವೆನಿಸುವಂತೆ, ಆತ್ಮ ಎಂಬುದು ಪಂಚಸ್ಕಂದಗಳ ಒಂದು ಸಂಯೋಗ ಎಂಬುದಾಗಿ ಈ ಗಹನತತ್ವವನ್ನು ರಾಜನಿಗೆ ಮನ ಮುಟ್ಟುವಂತೆ ವಿವರಿಸಿ ಹೇಳುತ್ತಾನೆ.

ಇತ್ತೀಚಿನ ದಿನಗಳಲ್ಲಿ ಬೌದ್ಧ ಧರ್ಮವನ್ನು ಚೆನ್ನಾಗಿ ಅಧ್ಯಯನ ಮಾಡಿದ ಪಾಶ್ಚಿಮಾತ್ಯ ಮತ್ತು ಪೌರಾತ್ಯ ಪಂಡಿತರಲ್ಲಿ ಪ್ರಮುಖರೆನಿಸಿದ ರಾಯಸ್ ಡೇವಿಡ್ ಅನಿಬೆಸೆಂಟ್, ಕೊಸಾಂಬಿ, ಡಾ|| ರಾಧಾಕೃಷ್ಣನ್, ಪ್ರೊ|| ಹಿರಿಯಣ್ಣ ಮೊದಲಾದವರು ಬೌದ್ಧ ಸಿದ್ಧಾಂತವನ್ನು ಅನಾತ್ಮ ತತ್ವ ಎಂದು ಒಪ್ಪಲು ಸಿದ್ಧರಿಲ್ಲ. ಬುದ್ಧನು ತನ್ನ ಜಾತಕ ಕಥೆಗಳಲ್ಲಿ ಹೇಳುವಂತೆ, ಅವನಿಗೆ ಬೋಧಿ ಜ್ಞಾನ ಲಭಿಸುವ ಮುನ್ನ ಅವನಿಗೆ ತನ್ನ

ಪೂರ್ವ ಜನ್ಮದ ಸ್ಮರಣೆಯು ಸಾಧ್ಯವಾಯಿತಂತೆ. ಬುದ್ಧನಿಗೆ ದೊರೆತ ಈ ಜನ್ಮಾಂತರದ ಸ್ಮರಣೆ ನಿಜವೆನಿಸುವುದಾದರೆ, ಈ ಎಲ್ಲ ಭವಾಂತರಗಳನ್ನು ದಾಟಿ ಬಂದ ಒಂದು ಆತ್ಮ ತತ್ವ ಎಂಬುದು ಇರಲೇಬೇಕೆಂದಾಗುತ್ತದೆ. ಅಷ್ಟೇ ಅಲ್ಲದೆ, ಅರ್ಹಂತನಾದವನು, ಬೋಧಿಸತ್ವನೆನಿಸಲು ಮತ್ತಷ್ಟು ಜನ್ಮಾಂತರಗಳನ್ನು ಪಡೆಯಬೇಕೆಂದು ಬುದ್ಧನೂ ನಂಬುತ್ತಾನೆ. ಆದ್ದರಿಂದ ಬೌದ್ಧ ಸಿದ್ಧಾಂತವನ್ನು ಅನಾತ್ಮ ಸಿದ್ಧಾಂತ ಎಂದು ನಂಬುವುದು ಸಲ್ಲದು, ಎಂಬುದು ಈ ಪಂಡಿತರ ಮತ. ಜೊತೆಗೆ, ಬೌದ್ಧ ಸಿದ್ಧಾಂತದಲ್ಲಿ ಬರುವ ಹೀನಯಾನ ಮತ್ತು ಮಹಾಯಾನ ಎಂಬ ಎರಡು ಶಾಖೆಗಳಲ್ಲಿ, ಈ ವಿಚಾರದಲ್ಲಿ ಮತ ಭೇದವಿದೆ. ಹೀನಯಾನ ಪಂಥವು ಅನಾತ್ಮ ವಾದವನ್ನು ಅಕ್ಷರಶಃ ನಂಬುವುದಾದರೆ, ಮಹಾಯಾನ ಪಂಥವು ಆತ್ಮ ತತ್ವದ ನಿತ್ಯತೆಯನ್ನು ನಂಬುತ್ತದೆ. ಜೊತೆಗೆ ಈ ಎರಡು ಶಾಖೆಗಳೂ ಆತ್ಮನ ಜನ್ಮಾಂತರವನ್ನು ವಿವರಿಸಲು ಕರ್ಮ ಸಿದ್ಧಾಂತವನ್ನು ಒಪ್ಪುತ್ತವೆ.

### iii) ನಿರೀಶ್ವರ ವಾದ:

ಬೌದ್ಧ ಧರ್ಮದ ಕ್ಷಣಿಕ ವಾದದಿಂದಾಗಿ, ಆ ಧರ್ಮವು ನಿರೀಶ್ವರ ವಾದವಾಗಿ ಪರಿಣಾಮಗೊಳ್ಳುವುದು, ಅನಿವಾರ್ಯವಾಯಿತು. ಈಶ್ವರ ವಾದಿಗಳನ್ನು ನಾವು ಆಸ್ತಿಕರೆಂದರೆ, ನಿರೀಶ್ವರ ವಾದಿಗಳನ್ನು ನಾಸ್ತಿಕರೆನ್ನುತ್ತೇವೆ. ಬೌದ್ಧರ ಕ್ಷಣಿಕ ವಾದ ಮತ್ತು ಅವರ ಕಾರ್ಯಕಾರಣ ವಾದವೆನಿಸಿದ ಪ್ರತೀತ್ಯಾ ಸಮುತ್ಪಾದ, ಈ ಎರಡು ಸಿದ್ಧಾಂತಗಳ ನೆರವಿನಿಂದ ವಿಶ್ವದ ಅಸ್ತಿತ್ವ ಮತ್ತು ಅದರ ಕಾರ್ಯ ಸ್ವರೂಪವನ್ನು ಯಾವ ದಿವ್ಯ ಶಕ್ತಿಯ ನೆರವೂ ಇಲ್ಲದೆ ವಿವರಿಸಬಹುದು ಎಂಬುದಕ್ಕೆ ಬೌದ್ಧ ಧರ್ಮ ಒಂದು ನಿದರ್ಶನ. ಜೀವಿಯ ಭವಾಂತರವನ್ನು ನಂಬಿದ ಈ ಧರ್ಮವು, ಜನ್ಮಾಂತರವನ್ನು ವಿವರಿಸಲು ಆಸ್ತಿಕ ಧರ್ಮಗಳು ನಂಬುವಂತೆ ಕರ್ಮ ಸಿದ್ಧಾಂತವನ್ನು ತಾನೂ ನಂಬುತ್ತದೆ. ಹೀಗಾಗಿ ಜೀವ ಮತ್ತು ಜಗತ್ತಿನ ಅಸ್ತಿತ್ವ ಮತ್ತು ಜಗದ್ವ್ಯಾಪಾರವನ್ನು ನಿಯಂತ್ರಿಸಲು ನಿಯತಿಕಾಕನೆನಿಸಿದ ಭಗವಂತನ ನೆರವಿಲ್ಲದೆ, ರೂಪಗೊಂಡ ಸಿದ್ಧಾಂತ ಈ ಬೌದ್ಧ ಧರ್ಮ.

ಅನಾತ್ಮ ವಾದವನ್ನು ಕುರಿತಂತೆ ವಿಚಾರ ಭೇದವಿರುವ ಹಾಗೆ, ನಿರೀಶ್ವರ ವಾದದ ವಿಚಾರದಲ್ಲಿಯೂ ಪಂಡಿತರಲ್ಲಿ ವಿಚಾರ ಭೇದ ಕಂಡು ಬಂದಿದೆ. ಬೌದ್ಧ ಧರ್ಮವನ್ನು ನಾಸ್ತಿಕ ಧರ್ಮವೆಂದು ಸ್ವೀಕರಿಸಲು ಬಹಳ ಜನ ಆಸ್ತಿಕರು ಸಿದ್ಧರಿಲ್ಲ. ಬುದ್ಧನ ಕಾಲಕ್ಕೆ ಮೊದಲು ವೈದಿಕ ಧರ್ಮದಲ್ಲಿ ಕಂಡ ಅನೇಕ ದೇವತಾರಾಧನೆ ಮತ್ತು ಯಜ್ಞ ಯಾಗಾದಿ ಹಿಂಸಾಚಾರಗಳನ್ನು ಕಂಡು ಬೇಸತ್ತ ಬುದ್ಧನು, ಅನೇಕ ದೇವತಾ ವಾದವನ್ನು ಖಂಡಿಸಿದನೇ ಹೊರತು, ನಿರಾಕಾರನೂ ನಿರ್ಗುಣನೂ ಆದ ಆ ಪರ ತತ್ವದ ಅಸ್ತಿತ್ವವನ್ನು ಅಲ್ಲ, ಎಂಬುದು ಆಸ್ತಿಕ ವಾದಿಗಳ ಮತ. ಬುದ್ಧನ ಬೋಧನೆಗಳನ್ನು ಅವನ ಕಾಲದಲ್ಲಿ ಬರೆದಿಡಲಿಲ್ಲವಾಗಿ, ಮುಂದೆ ತ್ರಿಪಿಟಕಗಳು ರಚನೆಗೊಳ್ಳುವ ವೇಳೆಗೆ, ಬುದ್ಧನ ಮೂಲ

ತತ್ವಗಳು ಪ್ರಕ್ಷಿಪ್ತಗೊಂಡು, ಇಂತಹ ತಪ್ಪು ಕಲ್ಪನೆಗೆ ಕಾರಣವಾಗಿರಬೇಕೆಂಬುದು, ಈ ಆಸ್ತಿಕರು ನಂಬುತ್ತಾರೆ. ದೇವರ ಔಚಿತ್ಯವನ್ನು ಈ ಧರ್ಮವು ಮನಗಂಡಿದ್ದರಿಂದಲೇ, ಮುಂದೆ ಬೌದ್ಧ ಧರ್ಮಿಯರು, ಭಗವಾನ್ ಬುದ್ಧನನ್ನೇ ದೇವರೆಂದು ಪೂಜಿಸಿದರು ಎಂದು ಇವರು ತಿಳಿಯುತ್ತಾರೆ. ಬುದ್ಧನನ್ನು ಆರಾಧಿಸುವ ಈ ಆಚರಣೆ ಮತ್ತಷ್ಟು ತೀವ್ರಗೊಂಡು ಮುಂದೆ ಬುದ್ಧನನ್ನು ವಿಷ್ಣುವಿನ ಅವತಾರ ಎಂದು ತಿಳಿಯಲಾಯಿತು. ಈ ಆಚರಣೆಯನ್ನು ಕುರಿತು ಡಾ|| ರಾಧಾಕೃಷ್ಣನ್ ಹೀಗೆ ಹೇಳುತ್ತಾರೆ–"ಬುದ್ಧನನ್ನು ವಿಷ್ಣುವಿನ ಅವತಾರ ಎಂದು, ಹಿಂದೂ ಧರ್ಮವೂ ಸಹ ಒಪ್ಪಿದ್ದರಿಂದ ಬೌದ್ಧ ಧರ್ಮದ ನಾಸ್ತಿಕ ವಾದದ ಬುನಾದಿ ಸಡಿಲಗೊಂಡು, ಅದರ ವಿನಾಶದ ಗಂಟೆ ಬಾರಿಸಿದಂತಾಯಿತು." ಹೀಗಾಗಿ ಬೌದ್ಧ ಧರ್ಮವನ್ನು ಆಸ್ತಿಕ ಧರ್ಮವೆಂದು ವ್ಯಾಖ್ಯಾನಿಸುವ ಪ್ರಯತ್ನ, ಬೌದ್ಧೇತರ ಪಂಡಿತರ ಜೊತೆಗೆ, ಬೌದ್ಧ ಧರ್ಮಿಯರಿಂದಲೂ ನಡೆಯಿತು.

ದೇವರ ಅಸ್ತಿತ್ವದ ವಿಚಾರದಲ್ಲಿ ವೀರಶೈವ ಧರ್ಮದ ನಿಲುವು ಅತ್ಯಂತ ಸ್ಪಷ್ಟವಾಗಿ ರುವುದರಿಂದ, ಈ ವಿಚಾರದಲ್ಲಿ ವೀರಶೈವ ಧರ್ಮವನ್ನು ಬೌದ್ಧ ಧರ್ಮದೊಂದಿಗೆ ಹೋಲಿಸುವಂತಿಲ್ಲ. ಬೌದ್ಧ ಧರ್ಮವನ್ನು ಆಸ್ತಿಕ ಧರ್ಮವೆಂದೇ ನಂಬಿದ ಗಾಂಧೀಜಿ ಯಂತಹ ಉದಾರವಾದಿಗಳು ಈ ಧರ್ಮವನ್ನು ಹಿಂದೂ ಧರ್ಮದ ಸುಧಾರಕ ಧರ್ಮ ಎಂಬುದಾಗಿ ಕರೆದಿದ್ದಾರೆ. ಗಾಂಧೀಜಿಯವರ ಈ ನಿಲುವು ಸಮರ್ಥನೀಯವೆನಿಸು ವುದಾದರೆ, ಆಗ ವೀರಶೈವ ಧರ್ಮವನ್ನು ಹಿಂದೂ ಧರ್ಮದ ಸುಧಾರಕ ಧರ್ಮ ಎನ್ನಲು ಸಾಧ್ಯ. ಹಿಂದೂ ಧರ್ಮದ ಅಂದರೆ ವೈದಿಕ ಧರ್ಮದ, ಆಚಾರ ವಿಚಾರಗಳಲ್ಲಿ ಕಂಡ ನ್ಯೂನತೆಗಳನ್ನು ಪರಿಷ್ಕರಿಸುವುದರಲ್ಲಿ ಬೌದ್ಧ ಮತ್ತು ವೀರಶೈವ ಧರ್ಮಗಳು ಸಮಾನ ವಾದ ಆಸಕ್ತಿಯನ್ನು ತೋರಿಸಿದ್ದಾರೆಂಬುದನ್ನು ನಾವು ಮುಂದೆ ಮನಗಾಣಬಹುದು.

## V

### ಬೌದ್ಧ ಮತ್ತು ವೀರಶೈವ ಧರ್ಮದ ಸಾಧನ ಸಮನ್ವಯ:

ಬುದ್ಧನು ತನ್ನ ಧಾರ್ಮಿಕ ಸಾಧನೆಯಲ್ಲಿ ಬಳಸಿದ ಮಾರ್ಗವನ್ನು ಮಧ್ಯಮ ಮಾರ್ಗ (**Path of Moderation**) ಎಂದು ಕರೆಯಲಾಗಿದೆ. ಧಾರ್ಮಿಕ ಸಾಧನೆಯಲ್ಲಿ ನಿರತನಾದವನು ಅತಿಯಾಗಿ ಶರೀರವನ್ನು ದಂಡಿಸಬಾರದು ಇಲ್ಲವೆ ಭೋಗಾಸಕ್ತಿಯಲ್ಲಿಯೂ ತೊಡಗಿಸಬಾರದು. ರಾಗವಿರಾಗ, ಪ್ರವೃತ್ತಿ ನಿವೃತ್ತಿ ಇವುಗಳ ನಡೆ ಒಂದು ರೀತಿಯ ಸಂಯಮದ ಸಾಮರಸ್ಯವಿರಬೇಕು ಎಂಬುದು, ಈ ಮಧ್ಯಮ ಮಾರ್ಗದ ಸ್ವರೂಪ. ಪ್ರಯೋಗ ಶೀಲನಾದ ಸಿದ್ಧಾರ್ಥನು, ಅಂದಿಗೆ ಪ್ರಚಲಿತವಿದ್ದ ಎಲ್ಲ ಸಾಧನ ಮಾರ್ಗ ಗಳನ್ನು ಶ್ರದ್ಧೆಯಿಂದ ತಾನು ಆಚರಿಸಿ ನೋಡಿದನು. ವೈದಿಕ ಧರ್ಮದಲ್ಲಿ ಹೇಳಿರುವಂತೆ ಜಪತಪಾದಿ ಸಾಧನೆಯಲ್ಲಿ ಹಲವು ವರ್ಷಗಳ ಕಾಲ ನಿರತನಾದನು. ಆದರೆ ಈ ಸಾಧನೆ ಯಿಂದ ಸಿದ್ಧಾರ್ಥನಿಗೆ ಸತ್ಯದ ದರ್ಶನವಾದಂತಾಗಲಿಲ್ಲ. ನಂತರ ಹಲವು ವರ್ಷಗಳವರೆಗೆ

ಜೈನ ಸಂತರು ಅನುಸರಿಸುತ್ತಿದ್ದ ಮಿತಾಹಾರ, ನಿರಾಹಾರದಿಂದ ಶರೀರವನ್ನು ಬಹಳವಾಗಿ ದಂಡಿಸಿ ಸತ್ಯದ ಸಾಕ್ಷಾತ್ಕಾರಕ್ಕಾಗಿ ಅವನು ತಪಿಸಿದನು. ಕೊನೆಗೆ ಈ ಮಾರ್ಗವೂ ಸರಿಯಲ್ಲವೆನಿಸಿತು. ಹೀಗಾಗಿ ತನ್ನ ಸ್ವಾನುಭವದಿಂದ, ತನಗೆ ಸರಿಯೆನಿಸಿದ ಮಧ್ಯಮ ಮಾರ್ಗವನ್ನು ಅನುಸರಿಸಿ, ಧ್ಯಾನಾಸಕ್ತನಾಗಿ ಜ್ಞಾನೋದಯವನ್ನು ಕಂಡನು. ತಾನು ಅನುಸರಿಸಿದ ಈ ಸಾಧನ ಮಾರ್ಗದ ಸ್ವರೂಪವನ್ನು ಬುದ್ಧನು ತನ್ನ ಶಿಷ್ಯರಿಗೆ ವೈಣಿಕನ ಸಾದೃಶ್ಯದೊಂದಿಗೆ ವಿವರಿಸಿದನು. ಧಾರ್ಮಿಕ ಸಾಧನೆಯಲ್ಲಿ ತೊಡಗಿದವನಿಗೆ ಶರೀರ ವೆಂಬುದು ವೈಣಿಕನ ವೀಣೆಯಿದ್ದಂತೆ. ವೈಣಿಕನು ವೀಣೆಯಿಂದ ಮಧುರ ನಾದವನ್ನು ಮಿಡಿಸುವ ಮುನ್ನ ಅದರ ತಂತಿಯನ್ನು ಶೃತಿಗೊಳಿಸುತ್ತಾನೆ. ಈ ರೀತಿ ವೀಣೆಯನ್ನು ಶೃತಿಗೊಳಿಸುವಾಗ ತಂತಿಯನ್ನು ಅತಿಯಾಗಿ ಸಡಿಲಗೊಳಿಸುವುದಾಗಲಿ ಇಲ್ಲವೆ ಅತಿಯಾಗಿ ಬಿಗಿ ಮಾಡುವುದಾಗಲಿ ಸಲ್ಲದು. ತಂತಿಯನ್ನು ಸಡಿಲಗೊಳಿಸಿದರೆ ಅದರಿಂದ ನಾದ ಮೂಡಿ ಬರುವುದಿಲ್ಲ, ಬಿಗಿಗೊಳಿಸಿದರೆ ತಂತಿಯೇ ಹರಿದು ಹೋಗುತ್ತದೆ. ಆದ್ದರಿಂದ ವೀಣೆಯ ತಂತಿಯನ್ನು ಹದವರಿತು ಶೃತಿಗೊಳಿಸಬೇಕು. ಅಂತೆಯೆ ಸತ್ಯಾನ್ವೇಷಕನೆನಿಸಿದ ಸಾಧಕನು ತನ್ನ ಶರೀರ ಮನಸ್ಸು ಇಂದ್ರಿಯಗಳನ್ನು ಪ್ರಜ್ಞಾ ಪೂರ್ವಕವಾಗಿ ಸಂಯಮ ಗೊಳಿಸಿ, ಅಂತರ್ಮುಖಿಯಾಗಲು ಕಲಿಯಬೇಕು. ಇದು ಬುದ್ಧನು ತನ್ನ ಧಾರ್ಮಿಕ ಸಾಧನೆಯಲ್ಲಿ ಬಳಸಿದ ಮಧ್ಯಮ ಮಾರ್ಗದ ಸ್ವರೂಪ.

ಬುದ್ಧನಿಗೆ ಲಭಿಸಿದ ಬೋಧಿಜ್ಞಾನವನ್ನು 'ಚತ್ವಾರಿ ಆರ್ಯ ಸತ್ಯಾನಿ' ಅಂದರೆ ಶ್ಲಾಘನೀಯವಾದ ನಾಲ್ಕು ಸತ್ಯಗಳು ಎಂದು ಕರೆಯಲಾಗಿದೆ. ಆ ನಾಲ್ಕೂ ಆರ್ಯ ಸತ್ಯಗಳ ಸ್ಥೂಲ ಪರಿಚಯ ಈ ರೀತಿ ಇದೆ.

೧. ಬದುಕು ಕೇವಲ ದುಃಖಮಯವಾದದ್ದು. ನಮ್ಮ ಹುಟ್ಟಿನಿಂದ ಸಾವಿನವರೆಗೂ ನಾವು ಒಂದಲ್ಲ ಒಂದು ರೀತಿಯ ನೋವನ್ನು ಅನುಭವಿಸುತ್ತಲೇ ಇರುತ್ತೇವೆ. ಈ ಬದುಕಿನಲ್ಲಿ ಸುಖವನ್ನು ಬಯಸುವುದು ಕೇವಲ ಮರೀಚಿಕೆಯನ್ನು ಬೆನ್ನತ್ತಿ ದಂತೆ ಅಷ್ಟೆ.

೨. ಈ ದುಃಖಕ್ಕೆ ಕಾರಣವಿದೆ. ಕಾರಣ ತಿಳಿಯದಿದ್ದಾಗ ಅದರಿಂದಾದ ಕಾರ್ಯವನ್ನು ಪರಿಹರಿಸಲಾಗುವುದಿಲ್ಲ. ಆಶೆಯೇ ನಮ್ಮ ದುಃಖಕ್ಕೆ ಕಾರಣ. ಈ ರೀತಿ ಕಾರಣ ವರಿತು ದುಃಖದ ಪರಿಹಾರದಲ್ಲಿ ತೊಡಗಿದ ಬುದ್ಧನನ್ನು, ಭವರೋಗ ವೈದ್ಯ ಎಂದು ಕರೆಯುವುದುಂಟು.

೩. ದುಃಖವನ್ನು ಪರಿಹರಿಸುವುದು ಸಾಧ್ಯ. ಹೇಗೆಂದರೆ ದುಃಖಕ್ಕೆ ಕಾರಣವಾದ ಆಶೆ ಯನ್ನು ಗೆದ್ದರೆ, ಅದರಿಂದುದಿಸಿದ ದುಃಖವು ತಾನಾಗಿಯೇ ನೀಗಿಹೋಗುತ್ತದೆ.

೪. ಆಶೆಯನ್ನು ಗೆಲ್ಲಲು ಅಷ್ಟಾಂಗ ಯುಕ್ತವಾದ ಸಾಧನ ಮಾರ್ಗವನ್ನು ಅನುಸರಿಸ

ಬೇಕು. ಪ್ರಜ್ಞಶೀಲ ಸಮಾಧಿಯುಕ್ತವಾದ ಈ ಸಾಧನಮಾರ್ಗವು ಅರಿವಿನಿಂದ ಆಚರಣೆಗೂ ಆಚರಣೆಯಿಂದ ಸಿದ್ಧಿಗೂ ನಮ್ಮನ್ನು ಕೊಂಡೊಯ್ಯುತ್ತದೆ.

**ಶೂನ್ಯತತ್ವದ ಕಲ್ಪನೆ:**

ಬೌದ್ಧ ಸಿದ್ಧಾಂತದಲ್ಲಿ ದೊರೆಯುವ ಸಿದ್ಧಿಯನ್ನು ನಿರ್ವಾಣ ಅಥವಾ ಶೂನ್ಯಸ್ಥಿತಿ ಎಂದು ಕರೆಯಲಾಗಿದೆ. ನಿರ್ವಾಣವೆಂದರೆ ಊದಿಬಿಡುವುದು (To blow out) ಎಂದರ್ಥ. ಪಂಚಸ್ಕಂದಗಳ ಸಂಘಾತದಿಂದಾದ ಆತ್ಮನು ಆಶೆಯ ಬೆನ್ನುಹತ್ತಿದ ಕಾರಣ ಕರ್ಮದ ಬಂಧನಕ್ಕೆ ಸಿಕ್ಕಿ, ಜನ್ಮಾಂತರದ ಸುಳಿಯಲ್ಲಿ ತೊಳಲುತ್ತಿದ್ದಾನೆ. ಆಶೆಯನ್ನು ನೀಗಿದ ಆತ್ಮನು, ಕರ್ಮದಿಂದ ಮುಕ್ತನಾಗಿ ತನ್ನ ಅಸ್ತಿತ್ವವೇ ಇಲ್ಲದಷ್ಟು ಶೂನ್ಯನಾಗಿ ಬಿಡುತ್ತಾನೆ. ಇದು ಬೌದ್ಧರ ನಿರ್ವಾಣ ಸ್ಥಿತಿ. ಈ ನಿರ್ವಾಣ ಸ್ಥಿತಿಯನ್ನು ಕುರಿತು ಬೌದ್ಧ ಧರ್ಮದಲ್ಲಿ ಸ್ಪಷ್ಟವಾದ ವಿವರಣೆ ಇಲ್ಲದ ಕಾರಣ, ನಿರ್ವಾಣ ಎಂಬುದು ಭಾವಾತ್ಮಕ ಸ್ಥಿತಿಯೇ ಅಥವಾ ಅಭಾವಾತ್ಮಕ ಸ್ಥಿತಿಯೇ ಎಂಬ ಜಿಜ್ಞಾಸೆ ಇಂದಿಗೂ ನಡೆದು ಬರುತ್ತಿದೆ.

ಶೂನ್ಯ ಎನ್ನುವ ಮಾತು ವೀರಶೈವ ವಚನ ವಾಙ್ಮಯದಲ್ಲಿ ಅದರಲ್ಲಿಯೂ ಹೆಚ್ಚಾಗಿ ಅಲ್ಲಮಪ್ರಭುವಿನ ವಚನಗಳಲ್ಲಿ ನಮಗೆ ಕಾಣುತ್ತದೆ. ಅನುಭವಮಂಟಪದಲ್ಲಿ ನಡೆಯಿತೆಂಬ ಧಾರ್ಮಿಕ ಸಂವಾದವನ್ನು ಶಿವಗಣ ಪ್ರಸಾದಿ ಮಹದೇವಯ್ಯಗಳು ಮೊದಲಾದ ಸಂಪಾದನಕಾರರು 'ಶೂನ್ಯಸಂಪಾದನೆ' ಎಂಬ ಶೀರ್ಷಿಕೆಯಲ್ಲಿ ಸಂಪಾದಿಸಿಟ್ಟಿದ್ದಾರೆ. ಶೂನ್ಯ ಎಂಬ ಮಾತು ಶರಣರ ಸಾಧನೆಯ ಗಮ್ಯಸ್ಥಿತಿಯನ್ನು ಸೂಚಿಸುವಂತಿದೆ. ಶರಣ ಧರ್ಮದಲ್ಲಿ ಕಾಣುವ ಈ ಶೂನ್ಯದ ಕಲ್ಪನೆ ಬೌದ್ಧಧರ್ಮದಲ್ಲಿ ಬರುವ ಶೂನ್ಯದ ಕಲ್ಪನೆಯಿಂದ ಪ್ರಭಾವಿತವಾಗಿದೆ ಎಂದು ತಿಳಿಯುವವರು ಕೆಲವರುಂಟು. ಇವರ ಈ ಅನಿಸಿಕೆಯನ್ನು ಕುರಿತು ಸ್ವಲ್ಪ ವಿವೇಚಿಸುವುದು ಅವಶ್ಯಕ.

ವೀರಶೈವ ಶರಣರು ಶೂನ್ಯ ಎಂಬ ಪದವನ್ನು ಪರಶಿವನ ಅವ್ಯಕ್ತಾವಸ್ಥೆಯನ್ನು ಸೂಚಿಸುವಂತೆಯೂ ಮತ್ತು ಆತ್ಮದ ಮೋಕ್ಷಸ್ಥಿತಿಯನ್ನು ನಿರೂಪಿಸುವಂತೆಯೂ ಬಳಸಿದ್ದಾರೆ. ಉದಾಹರಣೆಗೆ–ಅಲ್ಲಮಪ್ರಭುವಿನ ಈ ಕೆಳಗಿನ ವಚನವನ್ನು ಅವಲೋಕಿಸಿ ನೋಡಿ–

ವಾರಿಬಲಿದು ವಾರಿಕಲ್ಲಾದಂತೆ ಶೂನ್ಯವೇ ಸ್ವಯಂಭು,
ಆ ಸ್ವಯಂಭುಲಿಂಗದಿಂದಾಯಿತು ಮೂರ್ತಿವತ್ತು,
ಆ ಮೂರ್ತಿಯಿಂದಾಯಿತ್ತು ವಿಶ್ವೋತ್ಪತ್ತಿ,
ಆ ವಿಶ್ವೋತ್ಪತ್ತಿಯಿಂದಾಯಿತ್ತು ಸಂಸಾರ,
ಆ ಸಂಸಾರದಿಂದಾಯಿತ್ತು ಮರವೆ,
ಆ ಮರವೆಯೆಂಬ ಮಹಾಮಾಯೆ ವಿಶ್ವವ ಮುಸುಕಿದಲ್ಲಿ

ನಾ ಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲ ತಾಮಸಕ್ಕೊಳಗಾಗಿ
ಮೀನಕೇತನನ ಬಲೆಗೆ ಸಿಕ್ಕಿ
ಮಾಯೆಯ ಬಾಯ ತುತ್ತಾದರಲ್ಲಾ ಗುಹೇಶ್ವರ.

ಪರಶಿವನ ಅವ್ಯಕ್ತ ಸ್ಥಿತಿಯನ್ನು ಅವನ ಸ್ವಯಂಭುಸ್ಥಿತಿಯೆಂದು ಅಲ್ಲಮಪ್ರಭು ಕರೆಯುತ್ತಾನೆ. ಶಿವನ ಶಕ್ತಿಯು ಅವನಲ್ಲಿ ಸಮರಸಗೊಂಡು ಸಾಮ್ಯಾವಸ್ಥೆಯಲ್ಲಿರುವ ಈ ಸ್ಥಿತಿಯನ್ನು ಸ್ವಯಂಭು ಸ್ಥಿತಿಯೆಂದು ಹೆಸರಿಸಲಾಗಿದೆ. ಈ ಸ್ಥಿತಿಯಲ್ಲಿ ಪರಶಿವನು ತಾನೊಬ್ಬನೇ ಇದ್ದು ಅವನು ಇದ್ದೂ ಇಲ್ಲದಂತಿರುತ್ತಾನೆ. ಈ ಸ್ಥಿತಿಯನ್ನು ಶಿವನ ಶೂನ್ಯ ಸ್ಥಿತಿಯೆಂದು ವೀರಶೈವ ಸಿದ್ಧಾಂತದಲ್ಲಿ ಕರೆಯಲಾಗಿದೆ. ಆದ್ದರಿಂದ ಈ ಸ್ಥಿತಿಯು ಸರ್ವ ಭಾವಾತ್ಮಕಸ್ಥಿತಿ. ಇದು ಯಾವ ಕಾರಣದಿಂದಲೂ ಅಭಾವಾತ್ಮಕವೆನಿಸುವುದಿಲ್ಲ. ಸರ್ವವನ್ನೂ ತನ್ನಲ್ಲಿ ಒಳಗೊಂಡಂತಹ ಪರಶಿವನ ಪರಿಪೂರ್ಣ ಸ್ಥಿತಿ ಇದು. ಬೌದ್ಧ ಸಿದ್ಧಾಂತದಲ್ಲಿ ಪರತತ್ವದ ಅಸ್ತಿತ್ವದ ಕಲ್ಪನೆಗೆ ಅವಕಾಶವೇ ಇಲ್ಲ. ಅಂದಮೇಲೆ ಬೌದ್ಧರಲ್ಲಿ ಬರುವ ಶೂನ್ಯದ ಮಾತು, ಯಾವ ಕಾರಣದಿಂದಲೂ ಭಗವಂತನ ಸ್ವರೂಪವನ್ನು ಸೂಚಿಸಲು ಸಾಧ್ಯವಿಲ್ಲ. ಆದ್ದರಿಂದ ಬೌದ್ಧಧರ್ಮದ ಶೂನ್ಯಕ್ಕೂ ವೀರಶೈವಧರ್ಮದಲ್ಲಿ ಕಾಣುವ ಶೂನ್ಯಕ್ಕೂ ಈ ವಿಚಾರದಲ್ಲಿ ಯಾವ ಹೋಲಿಕೆಯೂ ಇಲ್ಲವೆಂದಂತಾಯಿತು.

ಇನ್ನು, ಶೂನ್ಯ ಎನ್ನುವ ಪದವನ್ನು ಆತ್ಮನ ಮೋಕ್ಷ ಸ್ಥಿತಿಯನ್ನು ಸೂಚಿಸುವಂತೆಯೂ ವೀರಶೈವ ಧರ್ಮದಲ್ಲಿ ಬಳಸಲಾಗಿದೆ ಎಂದು ಹಿಂದೆ ಹೇಳಿದೆನಷ್ಟೆ. ವೀರಶೈವ ಧರ್ಮದಲ್ಲಿ ಆತ್ಮನನ್ನು ಅಂಗನೆಂತಲೂ ಪರಶಿವನನ್ನು ಲಿಂಗವೆಂತಲೂ ಕರೆದು ಆತ್ಮದ ಮೋಕ್ಷ ಸ್ಥಿತಿಯನ್ನು ಲಿಂಗಾಂಗ ಸಾಮರಸ್ಯ ಎಂದು ಹೆಸರಿಸಿದ್ದಾರೆ. ಲಿಂಗಾಂಗ ಸಾಮರಸ್ಯದ ಈ ಐಕ್ಯ ಸ್ಥಿತಿಯನ್ನು ಬಯಲು ಅಥವಾ ಶೂನ್ಯಸ್ಥಿತಿ ಎಂದು ಈ ಧರ್ಮದಲ್ಲಿ ತಿಳಿಯಲಾಗಿದೆ. ಈ ಮಾತನ್ನು ಸೂಚಿಸುವ ವಚನ ಹೀಗಿದೆ—

ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು,
ಬಯಲು ಬಯಲಾಗಿ ಬಯಲಾಯಿತ್ತಯ್ಯ,
ಬಯಲು ಜೀವನ ಬಯಲು ಭಾವನೆ,
ಬಯಲು ಬಯಲಾಗಿ ಬಯಲಾಯಿತ್ತಯ್ಯಾ,
ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು.
ನಾ ನಿನ್ನ ನಂಬಿ ಬಯಲಾದೆ ಗುಹೇಶ್ವರ.

ಈ ರೀತಿ, ಜೀವನ್ಮುಕ್ತಾವಸ್ಥೆಯನ್ನು ಮುಟ್ಟಿದ್ದ ಅಲ್ಲಮಪ್ರಭು, ತಾನು ಲಿಂಗಾಂಗ ಸಾಮರಸ್ಯವನ್ನು ಗಳಿಸಿ ಬಯಲಾದ ಸ್ಥಿತಿಯನ್ನು ಈ ವಚನದಲ್ಲಿ ನಿರೂಪಿಸಿದ್ದಾರೆ. ಆತ್ಮನ ಐಕ್ಯಸ್ಥಿತಿಯನ್ನು ಶೂನ್ಯಸ್ಥಿತಿಯೆಂದು ಕರೆದ ಈ ಶಿವಶರಣರು ತಮ್ಮ ಈ ಕಲ್ಪನೆಯನ್ನು ಮತ್ತಷ್ಟು ಸ್ಪಷ್ಟಗೊಳಿಸಲು, ಕೆಲವು ಉಪಮಾನಗಳನ್ನು ಕೊಡುತ್ತಾರೆ. ಈ

ಉಪಮಾನಗಳ ನೆರವಿನಿಂದ ನಮಗೆ ಶರಣರ ಶೂನ್ಯದ ಅರಿವು ಮನಮುಟ್ಟುತ್ತದೆ. ಲಿಂಗಾಂಗ ಸಾಮರಸ್ಯ ಎಂಬುದು ಕೆಂಡದ ಗಿರಿಯನ್ನು ಅರಗಿನ ಬಾಣದಿಂದ ಹೊಡೆದಂತೆ, ಮಂಜಿನ ಗೋಪುರಕ್ಕೆ ಬಿಸಿಲಿನ ಕಳಶವಿಟ್ಟಂತೆ, ಕರ್ಪೂರದ ಗಿರಿಯ ಉರಿಯು ತಾಗಿದಂತೆ, ಒಂದು ಮತ್ತೊಂದರಲ್ಲಿ ಲೀನಗೊಳ್ಳುವ ಒಂದು ವಿಶಿಷ್ಟವಾದ ಅನುಭವ. ಐಕ್ಯಸ್ಥಿತಿಯನ್ನು ಗಳಿಸಿದ ಮೇಲೆ ಅಂಗವು ಅಂಗವಾಗಿ ಉಳಿಯದ ಲಿಂಗದಲ್ಲಿ ಲೀನಗೊಳ್ಳುವ ಈ ಅನುಭವ, ಬೌದ್ಧರಲ್ಲಿ ಬರುವ ನಿರ್ವಾಣ ಸ್ಥಿತಿಯೊಂದಿಗೆ ಹೊಂದಿಕೊಳ್ಳಲಾರದು. ಪಂಚ ಸ್ಕಂದಗಳ ಸಂಘಾತವೆನಿಸಿದ ಬೌದ್ಧಧರ್ಮದ ಆತ್ಮನು ತಾನು ನಿರ್ವಾಣ ಸ್ಥಿತಿಯನ್ನು ಮುಟ್ಟಿದಾಗ ಸ್ಕಂದಗಳ ಸಂಘಾತವು ಸಡಿಲಗೊಂಡು, ಉರಿಯುವ ದೀಪವು ಊದಿಹೋಗುವಂತೆ ಆತ್ಮನು ಶೂನ್ಯಗೊಳ್ಳುತ್ತಾನೆ. ಆದ್ದರಿಂದ ಬೌದ್ಧರ ಶೂನ್ಯವು ವೀರಶೈವ ಧರ್ಮದ ಮೋಕ್ಷದೊಂದಿಗೆ ಹೊಂದಿಕೆಯಾಗುವುದಿಲ್ಲ. ಏಕೆಂದರೆ ಒಂದು ಅಭಾವಾತ್ಮಕ ಶೂನ್ಯವಾದರೆ ಮತ್ತೊಂದು ಭಾವಾತ್ಮಕ ಶೂನ್ಯವೆನಿಸುತ್ತದೆ.

**ಸಾಧನ ಮಾರ್ಗದಲ್ಲಿ ಕಾಣುವ ಸಮನ್ವಯ:**

ವೀರಶೈವ ಮತ್ತು ಬೌದ್ಧಸಿದ್ಧಾಂತಗಳು ತಮ್ಮ ತಾತ್ವಿಕ ಸ್ವರೂಪದಲ್ಲಿ ಹೆಚ್ಚಿನ ಹೊಂದಾಣಿಕೆಯನ್ನು ತೋರಿಸದಿದ್ದರೂ, ಅವುಗಳು ಬಳಸಿದ ಸಾಧನ ಮಾರ್ಗದಲ್ಲಿ ಬಹುಮಟ್ಟಿನ ಸಮನ್ವಯ ನಮಗೆ ಕಾಣುತ್ತದೆ. ಬೌದ್ಧಧರ್ಮವು ನಾಸ್ತಿಕಧರ್ಮವಾಗಿದ್ದು ವೀರಶೈವವು ಆಸ್ತಿಕ ಧರ್ಮವಾದ ಕಾರಣ ದೇವರು, ಆತ್ಮ ಮತ್ತು ಮೋಕ್ಷದ ವಿಚಾರದಲ್ಲಿ ಈ ಎರಡು ಧರ್ಮಗಳ ನಡುವೆ ಹೆಚ್ಚಿನ ಹೊಂದಾಣಿಕೆ ಇಲ್ಲ ಎಂಬುದು ಈ ವೇಳೆಗೆ ನಮಗೆ ಚೆನ್ನಾಗಿ ಮನವರಿಕೆಯಾಗಿದೆ. ಆದರೆ ಈ ಎರಡು ಧರ್ಮಗಳೂ ಅತ್ಯಂತ ಮಾನವೀಯ ಧರ್ಮಗಳು ಎಂದೆನಿಸಿದ ಕಾರಣ, ಅವುಗಳ ನಡುವೆ ನೈತಿಕ, ಸಾಮಾಜಿಕ ಮತ್ತು ಭಾವನಾತ್ಮಕ ವಿಚಾರಗಳಲ್ಲಿ ಬಹುಮಟ್ಟಿನ ಸಾಮೀಪ್ಯ ನಮಗೆ ಗೋಚರಿಸುತ್ತದೆ. ಇವುಗಳ ನಡುವೆ ಇರಬಹುದಾದ ಈ ಸಮಾನ ಧರ್ಮಗಳನ್ನು ಕುರಿತು ನಾವು ಈಗ ಸ್ವಲ್ಪ ವಿವೇಚಿಸೋಣ.

ಧರ್ಮದಲ್ಲಿ ಸಾಮಾನ್ಯವಾಗಿ ಶ್ರದ್ಧೆಯ ಪಾತ್ರ ಹೆಚ್ಚಾಗಿರುವುದರಿಂದ ಅಲ್ಲಿ ವೈಚಾರಿಕತೆಗೆ ಹೆಚ್ಚಿನ ಸ್ಥಾನವಿರುವುದಿಲ್ಲ. ಆ ಕಾರಣದಿಂದ ಶ್ರದ್ಧೆಯ ಹೆಸರಿನಲ್ಲಿ ಅವೈಚಾರಿಕವಾದ ಅಂಧಶ್ರದ್ಧೆಗಳೂ ಧಾರ್ಮಿಕ ಬದುಕನ್ನೂ ಪ್ರವೇಶಿಸಿ ನಾನಾರೀತಿಯ ಅನಾಚಾರಗಳಿಗೆ ಕಾರಣವಾಗಿವೆ. ಬೌದ್ಧ ಮತ್ತು ವೀರಶೈವ ಧರ್ಮಗಳು ಧಾರ್ಮಿಕ ಬದುಕಿನಲ್ಲಿ ವೈಚಾರಿಕತೆಗೆ ಕೊಟ್ಟ ಮಹತ್ವದಿಂದಾಗಿ ಅವು ವೈದಿಕ ಧರ್ಮದಲ್ಲಿ ಕಂಡ ಅಂಧಶ್ರದ್ಧೆ ಮತ್ತು ಅನಾಚಾರಗಳನ್ನು ಸಮಾನ ರೀತಿಯಲ್ಲಿ ವಿರೋಧಿಸಿದುವು. ಪುರೋಹಿತಶಾಹಿ ಧರ್ಮವಾದ ವೈದಿಕ ಧರ್ಮದಲ್ಲಿ ಯಜ್ಞಯಾಗಾದಿ ಕರ್ಮಗಳ ಮಹತ್ವ ಹೆಚ್ಚಿ ಅದಕ್ಕೆ ಪೋಷಕವಾದ ನಾನಾರೀತಿಯ ಸಂಪ್ರದಾಯಗಳು ಬೆಳೆದುಬಂದಿದ್ದುವು. ಧರ್ಮ

ದಲ್ಲಿ ಬೆಳೆದುಬಂದ ಪುರೋಹಿತರ ಪ್ರಾಧಾನ್ಯತೆಯನ್ನು ಕಂಡ ಬುದ್ಧನು "ಪುರೋಹಿತರು ಪ್ರಾರ್ಥನೆಯನ್ನು ಓದುತ್ತಾರೆಯೇ ಹೊರತು ಅವರು ಪ್ರಾರ್ಥನೆಯನ್ನು ಮಾಡುವುದಿಲ್ಲ" ಎಂದು ನುಡಿದನು. ಪ್ರಾರ್ಥನೆ ಎಂಬುದು ಓದುವಂತಹ ಆಚರಣೆಯಲ್ಲ. ಅದು ಸಾಧಕ ನಾದವನು ನೇರವಾಗಿ ಮಾಡಬೇಕಾದ ಆತ್ಮ ನಿವೇದನೆ ಅಥವಾ ಆತ್ಮದ ಕರೆ. ಪುರೋಹಿತನ ಮಧ್ಯಸ್ಥಿಕೆಯಿಂದ ಮಾಡುವ ಪ್ರಾರ್ಥನೆ ನಿಜವಾದ ಪ್ರಾರ್ಥನೆಯಲ್ಲ. ಅದು ಕೇವಲ ಯಾಂತ್ರಿಕ ಕ್ರಿಯೆಯೆನಿಸಿ, ಅದು ಪತಣವೆಂದಾಗುತ್ತದೆ. ಬುದ್ಧನ ಈ ಮಾತನ್ನೇ ಮಾರ್ದನಿಸುವಂತಿರುವ ಬಸವಣ್ಣನ ವಚನ ಹೀಗಿದೆ–

ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲಿ ಮಾಡಿಸಬಹುದೆ?
ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವ ತಾ ಮಾಡಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲಿ ಮಾಡಿಸಬಹುದೆ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ
ನಿಮ್ಮನೆತ್ತಬಲ್ಲರು ಕೂಡಲಸಂಗಮದೇವಾ.

ನಮಗೆ ಹಸಿವಾದಾಗ ನಾವು ನೇರವಾಗಿ ಊಟ ಮಾಡಿ ಹಸಿವನ್ನು ಹಿಂಗಿಸುತ್ತೇವೆ. ಅಂತೆಯೇ ನಮ್ಮ ಧಾರ್ಮಿಕ ಹಸಿವನ್ನು ಅಥವಾ ಆತ್ಮದ ಹಸಿವನ್ನು ನಾವು ಮಾಡುವ ಪ್ರಾರ್ಥನೆಯಿಂದ ತೃಪ್ತಿಪಡಿಸಿಕೊಳ್ಳಬೇಕು. ನಾವು ಮಾಡಬೇಕಾದ ಪ್ರಾರ್ಥನೆಯನ್ನು ನಮಗಾಗಿ ಅನ್ಯರು ಮಾಡುತ್ತಾರೆ ಎಂಬುದು ಕೇವಲ ಲೋಕದ ಮೆಚ್ಚಿಗೆಗಾಗಿ ಮಾಡುವ ಯಾಂತ್ರಿಕ ಕ್ರಿಯೆಯೆಂದೆನಿಸುತ್ತದೆ.

ಯಜ್ಞ ಯಾಗಾದಿ ಕರ್ಮಗಳಲ್ಲಿ ಮಾಡುವ ಪ್ರಾಣಿವಧೆಯನ್ನು ಬುದ್ಧನು ಅತ್ಯಂತ ನಿಷ್ಠುರವಾಗಿ ಪ್ರತಿಭಟಿಸಿದನು. ಯಜ್ಞದಲ್ಲಿ ನಡೆಯುವ ಪ್ರಾಣಿವಧೆಯನ್ನು ಸಮರ್ಥಿಸಲು ವೈದಿಕರು ಕೊಡುವ ವಿವರಣೆ ಬುದ್ಧನಿಗೆ ತುಂಬಾ ಬಾಲಿಶವೆನಿಸಿತು. ಯಜ್ಞದಲ್ಲಿ ಬಲಿಯಾದ ಪ್ರಾಣಿಯು ನೇರವಾಗಿ ಸ್ವರ್ಗಕ್ಕೆ ಹೋಗುತ್ತದೆ ಎಂಬುದು ನಿಜವಾದರೆ, ತಮ್ಮ ತಂದೆ ತಾಯಿಗಳಿಗೆ ಸ್ವರ್ಗ ಲಭಿಸಲೆಂದು ಹಾರೈಸುವ ವೈದಿಕರು ತಮ್ಮ ತಂದೆ ತಾಯಿಗಳನ್ನೇ ಯಜ್ಞದಲ್ಲಿ ಬಲಿಕೊಟ್ಟು ಅವರನ್ನು ನೇರವಾಗಿ ಸ್ವರ್ಗಕ್ಕೆ ಕಳುಹಿಸಬಾರ ದೇಕೆ ಎಂದು ಬುದ್ಧನು ಪ್ರಶ್ನಿಸಿದನು. ಇಂತಹ ವಿಚಾರಪೂರಿತವಾದ ಬುದ್ಧನ ಪ್ರಶ್ನೆ ವೈದಿಕರನ್ನು ಕೆರಳಿಸಿರುವುದು ಸಾಧ್ಯ.

ಧರ್ಮದ ಹಸರಿನಲ್ಲಿ ನಡೆಯುತ್ತಿದ್ದ ಈ ಹಿಂಸೆಯನ್ನು ವೀರಶೈವ ಶರಣರು ಬುದ್ಧನಷ್ಟೇ ತೀವ್ರವಾಗಿ ವಿರೋಧಿಸಿದರು. ಯಜ್ಞದ ಆಹುತಿಗಾಗಿ ತಂದ ಕುರಿ ತೋರಣಕ್ಕೆಂದು ತಂದ ಮಾವಿನತಳಿರನ್ನು ತಿನ್ನುತ್ತಿದ್ದಿತು. ಆ ದೃಶ್ಯವನ್ನು ಕಂಡು ಮನನೊಂದ ಬಸವಣ್ಣನು ಆ ಹರಕೆಯ ಕುರಿಯನ್ನು ಸಂಬೋಧಿಸಿ ಹೇಳುವ ಮಾತು

ಅವನ ಅಂತರಾಳದ ನೋವು ಆದೆಷ್ಟಿರಬಹುದೆಂಬುದನ್ನು ಸೂಚಿಸುವಂತಿದೆ. ಬಸವಣ್ಣನ ಈ ವಚನವನ್ನು ನೋಡಿ—

ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು
ಎಲೆಹೋತ ಅಳು ಕಂಡಾ!
ವೇದವನೋದಿದವರ ಮುಂದೆ ಅಳು ಕಂಡಾ।
ಶಾಸ್ತ್ರವ ನೋದಿದವರ ಮುಂದೆ ಅಳುಕಂಡಾ।
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ.

ವೇದ ಶಾಸ್ತ್ರಪಾರಂಗತರೆನಿಸಿದ ವೈದಿಕರಿಂದ ನಡೆಯುವ ಈ ಧಾರ್ಮಿಕ ಹಿಂಸೆಯನ್ನು, ಆಸ್ತಿಕ ಪ್ರಧಾನವಾದ ಅಂದಿನ ಸಮಾಜದಲ್ಲಿ ಯಾರು ತಾನೆ ವಿರೋಧಿಸಲು ಸಾಧ್ಯ? ಆ ಬಲಿಪಶು ಮತ್ತೆ ಯಾರ ಮೊರೆ ಹೋಗಬೇಕು? ಆ ಮುಗ್ಧ ಜೀವಿಯ ಕಣ್ಣೀರನ್ನು ಕಂಡು ಮನಕರಗದ ವೈದಿಕರನ್ನು ಬಸವಣ್ಣನು ಕ್ಷಮಿಸಲು ಸಿದ್ಧನಿಲ್ಲ. ಆದ್ದರಿಂದ ಆ ವೈದಿಕರನ್ನು ಕೂಡಲಸಂಗಮದೇವನೇ ಸೂಕ್ತ ರೀತಿಯಲ್ಲಿ ಶಿಕ್ಷಿಸಲಿ ಎಂದು ಹಾರೈಸುತ್ತಾನೆ.

ಧಾರ್ಮಿಕ ಬದುಕಿನಲ್ಲಿ ದಯೆ, ಅಂದರೆ ಪ್ರೀತಿಯ ಪಾತ್ರ ಬಹಳ ಮಹತ್ವಪೂರ್ಣವಾದದ್ದೆಂದು ಬೌದ್ಧರು ಮತ್ತು ವೀರಶೈವ ಧರ್ಮೀಯರು ಒಮ್ಮತದಿಂದ ತಿಳಿಯುತ್ತಾರೆ. ಬಹು ಕ್ಲಿಷ್ಟಕರವಾದ ಸಿದ್ಧಾಂತಗಳನ್ನುಳ್ಳ ಬೌದ್ಧ ಧರ್ಮವು, ಜನಸಾಮಾನ್ಯರ ಮನವನ್ನು ಗೆಲ್ಲಲು, ಅದರಲ್ಲಿದ್ದ ಸಿದ್ಧಾಂತಕ್ಕಿಂತಲೂ ಹೆಚ್ಚಾಗಿ ಬುದ್ಧನಲ್ಲಿ ಕಂಡ ಪ್ರೀತಿ ಮತ್ತು ಅನುಕಂಪೆಯೇ ಕಾರಣವಾಯಿತು. ಅತ್ಯಂತ ಸಹನಶೀಲನಾದ ಬುದ್ಧನು ತನ್ನನ್ನು ನಿಂದಿಸಿದವರನ್ನೂ ವಂದಿಸಬಲ್ಲನು. ದೂಷಿಸಿದವರನ್ನೂ ಪ್ರೀತಿಸಬಲ್ಲನು. ಇವನನ್ನು ವಾದದಿಂದ ಸೋಲಿಸಲೆಂದು ಬಂದ ಪಂಡಿತರು ವಾದಿಸಿ ಸೋತು ಇವನ ಪ್ರೀತಿಗೆ ಶರಣಾಗುತ್ತಾರೆ. ವೀರಶೈವ ಶರಣರೂ ಸಹ ಧರ್ಮದಲ್ಲಿ ಪ್ರೀತಿಯ ಪಾತ್ರವೇನು ಎಂಬುದನ್ನು ಚೆನ್ನಾಗಿ ಬಲ್ಲವರಾಗಿದ್ದರು. ಜೀವದಯೆ ಇಲ್ಲದವನನ್ನು ದೇವನು ಮೆಚ್ಚಲಾರ ಎಂಬ ತತ್ತ್ವವನ್ನು ಸಾರಿ ಹೇಳುವ ಬಸವಣ್ಣನ ವಚನ ಹೀಗಿದೆ—

ದಯವಿಲ್ಲದ ಧರ್ಮವದೇವುದಯ್ಯಾ,
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ;
ದಯವೇ ಧರ್ಮದ ಮೂಲವಯ್ಯಾ,
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

ಧರ್ಮದ ಹೆಸರಿನಲ್ಲಿ ವೈದಿಕ ಧರ್ಮದಲ್ಲಿ ಬೆಳೆದು ಬಂದ ಸಾಮಾಜಿಕ ವಿಷಮತೆಯನ್ನು ಬೌದ್ಧ ಮತ್ತು ವೀರಶೈವ ಧರ್ಮಗಳೆರಡೂ ಸಮಾನವಾಗಿ ಪ್ರತಿಭಟಿಸಿದವು. ವೈದಿಕ ಧರ್ಮೀಯರಲ್ಲಿ ಕಂಡ ವರ್ಣಧರ್ಮ ಪದ್ಧತಿಯು, ಮೊದಲು ವ್ಯಕ್ತಿ ವೈವಿಧ್ಯತೆಯ

ಹೆಸರಿನಲ್ಲಿ ಆರಂಭಗೊಂಡು, ಮುಂದೆ ಅದು ತನ್ನ ಲಾಲಿತ್ಯವನ್ನು ಕಳೆದುಕೊಂಡು, ಜಾತಿ ಪದ್ಧತಿಯ ರೂಪವನ್ನು ಹೊಂದಿ, ಹಿಂದೂ ಸಮಾಜವನ್ನು ಛಿದ್ರಗೊಳಿಸಿತು. ಇದರಿಂದಾಗಿ ಬ್ರಾಹ್ಮಣ ಮೇಲು ಶೂದ್ರ ಕೀಳು ಎಂಬ ತರತಮ ಭಾವನೆ ಬೆಳೆದು ಇದು ಸಾಮಾಜಿಕ ವಿಷಮತೆಗೆ ಕಾರಣವಾಯಿತು. ಬೌದ್ಧ ಮತ್ತು ವೀರಶೈವ ಧರ್ಮಗಳು ಹಿಂದೂ ಸಮಾಜದ ಈ ಅಸಮತೆಯನ್ನು ವಿರೋಧಿಸಿದ್ದು ಮಾತ್ರವಲ್ಲದೆ, ಸರ್ವ ಸಮಾನತೆಯ ಆಧಾರದ ಮೇಲೆ ನಿಲ್ಲುವಂತಹ ನೂತನ ಧಾರ್ಮಿಕ ಬದುಕನ್ನು ಬಾಳಿ ತೋರಿಸಿದವು. ವೈದಿಕ ಧರ್ಮದ ವರ್ಣ ವ್ಯವಸ್ಥೆಯಿಂದ ಬೇಸತ್ತ ಜನ, ಈ ಹೊಸ ಧರ್ಮಗಳ ಕಡೆ ಆಕರ್ಷಿತರಾದದ್ದು ಆಶ್ಚರ್ಯವೇನಲ್ಲ. ಅಷ್ಟೇ ಅಲ್ಲದೆ ಸ್ತ್ರೀಯರಿಗೆ ಧಾರ್ಮಿಕ ಸಮಾನತೆಯನ್ನು ನಿರಾಕರಿಸಿದ್ದ ವೈದಿಕ ಧರ್ಮಕ್ಕೆ ಸವಾಲೆನಿಸುವಂತೆ, ಬೌದ್ಧ ಮತ್ತು ವೀರಶೈವ ಧರ್ಮಗಳೆರಡೂ ಸ್ತ್ರೀಯರನ್ನು ಧಾರ್ಮಿಕವಾಗಿ ಪುರುಷರಿಗೆ ಸರಿಸಮ ರೆಂದು ಗುರುತಿಸಿ ಗೌರವಿಸಿದರು. ಬುದ್ಧನು ತನಗೆ ಜ್ಞಾನೋದಯವಾದ ತರುಣದಲ್ಲಿ ಸ್ತ್ರೀಯರನ್ನು ಬೌದ್ಧ ಭಿಕ್ಷುಗಳಾಗಿ ಸ್ವೀಕರಿಸಲು ಸ್ವಲ್ಪ ಹಿಂಜರಿದನಾದರೂ, ಅನಂತರ ತನ್ನ ಚಿಕ್ಕಮ್ಮನೇ ಮೊದಲಾಗಿ ಅನೇಕ ಸ್ತ್ರೀಯರನ್ನು ಭಿಕ್ಷು ಧರ್ಮಕ್ಕೆ ಸ್ವೀಕರಿಸಿದನು.

ಅಸ್ಪೃಶ್ಯತೆ ಎಂಬುದು ಹಿಂದೂ ಧರ್ಮದ ಕಳಂಕ ಪ್ರಾಯವಾದ ಒಂದು ಆಚರಣೆ ಎಂಬುದನ್ನು ಮನಗಂಡ ಬುದ್ಧನು, ಅಸ್ಪೃಶ್ಯತೆಯನ್ನು ನಿವಾರಿಸಲೋಸುಗ ಬೌದ್ಧ ಧರ್ಮದಲ್ಲಿ, ಸಮಾನವಾದ ಸ್ಥಾನಮಾನಗಳನ್ನು ಅವರಿಗೆ ಕಲ್ಪಿಸಿಕೊಟ್ಟನು. ವೀರಶೈವ ಧರ್ಮವು ಸ್ಪೃಶ್ಯ ಅಸ್ಪೃಶ್ಯರೆನ್ನದೆ, ಶಿಕ್ಷಿತ ಅಶಿಕ್ಷಿತರೆನ್ನದೆ ಸ್ತ್ರೀ–ಪುರುಷರ ನಡುವೆ ಭೇದವೆಣಿಸದೆ, ಎಲ್ಲರನ್ನೂ ಧಾರ್ಮಿಕವಾಗಿ ಸರಿಸಮಾನರೆಂದು ಪರಿಗಣಿಸಿತು. ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ ಈ ಮೊದಲಾದ ವಿವಿಧ ಜಾತಿಯ ಮತ್ತು ವಿವಿಧ ವ್ಯಕ್ತಿಯ ಜನರು ಮಾತ್ರ ವಲ್ಲದ, ಲಕ್ಕವ್ವ, ಸಂಕವ್ವ, ಅಕ್ಕನಾಗಮ್ಮ, ಅಕ್ಕಮಹಾದೇವಿ, ನೀಲಾಂಬಿಕೆ, ಗಂಗಾಂಬಿಕೆ ಮೊದಲಾದ ಅನೇಕ ಸ್ತ್ರೀಯರನ್ನು ವೀರಶೈವ ಧರ್ಮದ ಪ್ರತಿಷ್ಠಿತ ಸಂತರೆಂದು ಈ ಧರ್ಮವು ಗೌರವಿಸಿತು. ವೀರಶೈವ ಧರ್ಮದಲ್ಲಿ ದೊರೆತ ಅಭಿವ್ಯಕ್ತಿ ಸ್ವಾತಂತ್ರ್ಯ ದಿಂದಾಗಿ ಇವರು ತಮ್ಮ ಧಾರ್ಮಿಕ ಅನುಭವಗಳನ್ನು ವಚನಗಳ ಮೂಲಕ ಹಾಡಿದರು. ಈ ಧರ್ಮದಲ್ಲಿ ಕಂಡ ಸಾಮಾಜಿಕ ಸಮಾನತೆಯನ್ನು ನಿರೂಪಿಸುವ ಬಸವಣ್ಣನ ವಚನ ಈ ರೀತಿಯಿದೆ.

ಸೆಟ್ಟಿಯೆಂಬೆನೆ ಸಿರಿಯಾಳನ?
ಮಡಿವಾಳನೆಂಬೆನೆ ಮಾಚಯ್ಯನ?
ಡೋಹರನೆಂಬೆನೆ ಕಕ್ಕಯ್ಯನ?
ಮಾದರನೆಂಬೆನೆ ಚನ್ನಯ್ಯನ?
ಆನು ಹಾರುವನೆಂದಡೆ ಕೂಡಲಸಂಗಯ್ಯ ನಗುವನಯ್ಯ.

ಶಿವಭಕ್ತರಾದವರಲ್ಲಿ ಜಾತಿ ಹುಡುಕುವುದು ಧರ್ಮದ್ರೋಹವೆಂದು ವೀರಶೈವ ಧರ್ಮ ತಿಳಿದಿದ್ದಿತು. ವ್ಯಕ್ತಿ ಅದು ಯಾವುದೇ ಆದರೂ, ಅವರು ಲಿಂಗಧಾರಿಗಳಾದ ಮೇಲೆ ಅವರಲ್ಲಿ ಭೇದಮಾಡುವಂತಿಲ್ಲ, ಏಕೆಂದರೆ ಸ್ಪರ್ಶಮಣಿ ಸೋಂಕಿದ ಮೇಲೆ ಲೋಹದ ಅವಗುಣವಳಿಯುವಂತೆ ಲಿಂಗಧಾರಿಯಾದ ಮೇಲೆ ಜಾತಿಯ ಭೇದ ಅಳಿದು ಹೋಗುತ್ತದೆ. ಆದ್ದರಿಂದ ಸಜ್ಜನರಲ್ಲಿ ಜಾತಿಯನ್ನು ಹುಡುಕಬಾರದು ಎಂಬತತ್ತ್ವವನ್ನು ಬಸವಣ್ಣನು ತನ್ನ ವಚನದಲ್ಲಿ ಈ ರೀತಿ ಹೇಳುತ್ತಾನೆ.

ಕೊಲ್ಲುವನೇ ಮಾದಿಗ ಹೊಲಸು ತಿಂಬುವನೇ ಹೊಲೆಯ!
ಕುಲವೇನೋ ಅವಂದಿರ ಕುಲವೇನೋ?
ಸಕಲ ಜೀವಾತ್ಮರಿಗೆ ಲೇಸ ಬಯಸುವ
ನಮ್ಮ ಕೂಡಲಸಂಗನ ಶರಣರೇ ಕುಲಜರು.

ಯಾವುದೇ ಒಂದು ಧರ್ಮದ ಸಿದ್ಧಾಂತಗಳು ಜನಸಾಮಾನ್ಯರಿಗೆ ತಿಳಿಯದ ಮತ್ತೊಂದು ಭಾಷೆಯಲ್ಲಿ ಮೈಗೂಡಿ ನಿಂತಿರುವವರೆಗೂ, ಆ ಧರ್ಮದ ಅನುಯಾಯಿಗಳಿಗೆ ಧಾರ್ಮಿಕವಾಗಿ ಸ್ವಾವಲಂಬನೆ ಎಂಬುದು ಇರಲು ಸಾಧ್ಯವಿಲ್ಲ. ವೈದಿಕ ಧರ್ಮದ ಶಾಸ್ತ್ರ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿ ಬರೆಯಲ್ಪಟ್ಟಿದ್ದರಿಂದ ಸಂಸ್ಕೃತವನ್ನು ಬಲ್ಲ ಪುರೋಹಿತರ ಪ್ರಭಾವ ವೈದಿಕ ಧರ್ಮದಲ್ಲಿ ಹೆಚ್ಚಲು ಕಾರಣವಾಯಿತು. ಬುದ್ಧನು ಮೊಟ್ಟಮೊದಲಿಗೆ ತನ್ನ ಧಾರ್ಮಿಕ ಬೋಧನೆಗೆ, ಪಾಳಿ ಭಾಷೆಯನ್ನು ಮಾಧ್ಯಮವಾಗಿ ಬಳಸಿದ್ದರಿಂದ ಜನರಿಗೆ ಆ ಧರ್ಮ ಅತ್ಯಂತ ಆಕರ್ಷಕವೆನಿಸಿತು. ಭಾಷೆ ತಮ್ಮದಾದ್ದರಿಂದ ಆ ಭಾಷೆಯು ಹೊತ್ತು ತಂದ ಧರ್ಮವೂ ತಮ್ಮದೆನಿಸಿತು. ಇದರಿಂದಾಗಿ ಬದುಕಿನ ಒಂದು ಹೊಸ ಆಯಾಮವನ್ನೇ ಜನಸಾಮಾನ್ಯರ ಮುಂದೆ ತೆರೆದಿಟ್ಟಂತಾಯಿತು. ಅವರಲ್ಲಿ ಬತ್ತಿಹೋಗಿದ್ದ ಆತ್ಮವಿಶ್ವಾಸ ಮತ್ತೆ ಚಿಗುರುವಂತಾಯಿತು. ಕ್ರೈಸ್ತ ಧರ್ಮದ ಧಾರ್ಮಿಕ ಗ್ರಂಥವಾದ ಬೈಬಲ್ಲನ್ನು ಫ್ರೆಂಚ್, ಜರ್ಮನ್ ಮುಂತಾದ ಐರೋಪ್ಯ ಭಾಷೆಗಳಿಗೆ ಭಾಷಾಂತರಿಸಿದ್ದರಿಂದ ಅದು ಮುಂದೆ ಫ್ರೆಂಚ್ ಕ್ರಾಂತಿಗೆ ನಾಂದಿಯಾಯಿತಂತೆ. ಪಾಳಿಭಾಷೆಯಲ್ಲಿ ಮೂಡಿ ಬಂದ ಬೌದ್ಧ ಧರ್ಮವು ತಕ್ಕಮಟ್ಟಿಗಾದರೂ ಹಿಂದೂ ಧರ್ಮದಲ್ಲಿ ಕ್ರಾಂತಿಕಾರಿ ಎಂದೆನಿಸಿತು.

ಜನಸಾಮಾನ್ಯರ ಭಾಷೆಯಲ್ಲಿ ಧರ್ಮಬೋಧೆ ಸಾಧ್ಯ ಎಂಬುದನ್ನು ಬೌದ್ಧಧರ್ಮದ ನಂತರ, ತಾನೂ ಮಾಡಿ ತೋರಿಸಿದ ಮತ್ತೊಂದು ಧರ್ಮವೆಂದರೆ ಅದು ವೀರಶೈವ ಧರ್ಮ. ಕ್ರಿ. ಶ. ಎಂಟನೇ ಶತಮಾನದ ಸರಿ ಸುಮಾರಿನಲ್ಲಿ ಬೌದ್ಧ ಧರ್ಮವು ಭಾರತದಿಂದ ಹೊರದೂಡಲ್ಪಟ್ಟ ಮೇಲೆ ಸಂಸ್ಕೃತ ಭಾಷೆಯು ಧರ್ಮಪ್ರಸಾರದ ಮಾಧ್ಯಮವಾಗಿ ಮತ್ತೊಮ್ಮೆ ಪ್ರಬಲಗೊಳ್ಳುವ ಸೂಚನೆ ಭಾರತದಲ್ಲಿ ಕಂಡುಬಂದಿತು. ಆ ವೇಳೆಗೆ ವೀರಶೈವ ಧರ್ಮದ ಪ್ರಾಬಲ್ಯ ಹೆಚ್ಚಿ ಶಿವಶರಣರು ತಮ್ಮ ವಚನ ಸಾಹಿತ್ಯದ ಮೂಲಕ ಕನ್ನಡದಲ್ಲಿ ಧರ್ಮಬೋಧೆಯಲ್ಲಿ ತೊಡಗಿದರು. ವೇದೋಪನಿಷತ್ತುಗಳಲ್ಲಿ ಕಂಡುಬಂದ

ಆಧ್ಯಾತ್ಮ ತತ್ತ್ವಗಳನ್ನು ಶರಣರು ಬಹು ಸರಳವಾದ ರೀತಿಯಲ್ಲಿ ವಚನಗಳ ಮೂಲಕ ಜನ ಸಾಮಾನ್ಯರಿಗೂ ತಿಳಿಯುವಂತೆ ಅಭಿವ್ಯಕ್ತಗೊಳಿಸಿದರು. ಶರಣರ ಈ ವಚನಗಳನ್ನು ಕನ್ನಡದ ಉಪನಿಷತ್ತು ಎಂದು ಗೌರವಿಸಲಾಗಿದೆ. ಬಹು ಕ್ಲಿಷ್ಟವಾದ ತತ್ತ್ವವನ್ನು ಸರಳಗೊಳಿಸಿ ಸಾಧಾರಣ ಜನರಿಗೂ ತಿಳಿಯುವಂತೆ ಹೇಳಬೇಕಾದರೆ, ಆ ರೀತಿ ಹೇಳುವ ವರಿಗೆ ಆ ವಿಷಯದ ಮೇಲೆ ಪ್ರಭುತ್ವ ಸಾಧಿಸಿರಬೇಕು. ಆಧ್ಯಾತ್ಮ ಜ್ಞಾನದ ನೈಪುಣ್ಯತೆ ಮತ್ತು ಸಾಹಿತ್ಯದ ವಿಚಾರದಲ್ಲಿ ಪ್ರಾವೀಣ್ಯತೆ ಇವು ವಚನಕಾರರಿಗೆ ಸಿದ್ಧಿಸಿದ್ದರಿಂದ ಅವರು ಅನುಭಾವಯುಕ್ತವಾದ ಈ ಆಧ್ಯಾತ್ಮ ತತ್ವಗಳನ್ನು ಸಮರ್ಥ ರೀತಿಯಲ್ಲಿ ವಚನಗಳ ಮೂಲಕ ಬೋಧಿಸಿದರು. ವಚನ ಸಾಹಿತ್ಯದ ಹಿರಿಮೆಯನ್ನು ಕುರಿತು ಬಸವಣ್ಣನು ತನ್ನ ವಚನ ಒಂದರಲ್ಲಿ ಈ ರೀತಿ ಹೇಳುತ್ತಾನೆ.

ಹಾಲಿನ ತೊರೆಗೆ ಬೆಲ್ಲದ ಕೆಸರು ಸಕ್ಕರೆಯು ಮರಳು
ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು
ಬೇರೆ ಬಾವಿಯ ತೋಡಿ ಉಪ್ಪನೀರ ನುಂಬವರ ವಿಧಿಯಂತೆ
ಆಯಿತ್ತೆನ್ನಮತಿ ಕೂಡಲಸಂಗಮದೇವಾ.

ಸಂಸ್ಕೃತದ ಮೂಲಕ ಶಾಸ್ತ್ರಾಧ್ಯಯನವನ್ನು ಮಾಡಿರಬಲ್ಲ ಬಸವಣ್ಣನು, ವಚನ ಸಾಹಿತ್ಯದ ಆಧ್ಯಾತ್ಮ ಸೌರಭವನ್ನು ವಿವರಿಸುವ ರೀತಿ ಅತ್ಯಮೋಘವಾಗಿದೆ. ವಚನ ಸಾಹಿತ್ಯದಲ್ಲಿ ಆಧ್ಯಾತ್ಮದ ತಿರುಳಿದೆ. ಸಂಗೀತದ ಮಾಧುರ್ಯವಿದೆ, ಸಾಹಿತ್ಯದ ರಸ ತುಂಬಿ ಬಂದಿದೆ. ಅಂದ ಮೇಲೆ, ವಚನ ಸಾಹಿತ್ಯದಿಂದ ಲಭಿಸುವ ಸುಖ ಸಂತೋಷ ಗಳಿಗೆ ಸರಿಸಮವಾದ ಭೋಗ ಭಾಗ್ಯ ಬೇರೊಂದಿಲ್ಲ ಎಂಬುದನ್ನು ಕೆಲವು ಶಿವಶರಣರು ಹೃದಯ ತುಂಬಿ ಹೇಳಿದ್ದಾರೆ. ಅದಕ್ಕೆ ನಿದರ್ಶನವಾಗಿ ದೇವರದಾಸಿಮಯ್ಯನ ಒಂದು ವಚನ ಹೀಗಿದೆ—

ಕರಿಯನಿತ್ತಡೆ ಒಲ್ಲೆ
ಸಿರಿಯ ನಿತ್ತಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ ನುಡಿಯ ನರಗಳಿಗೆ ಇತ್ತಡೆ
ನಿಮ್ಮ ನಿತ್ತೆ ಕಾಣಾ ರಾಮನಾಥ.

ಸಿರಿ, ಸಂಪತ್ತು ಆನೆ ಅಂಬಾರಿ ಚಕ್ರಾಧಿಪತ್ಯದಿಂದ ಲಭಿಸುವ ಕೀರ್ತಿ ಗೌರವ, ಇವು ಗಳನ್ನು ಶರಣರ ಸೂಳ್‌ನುಡಿಯೊಂದಿಗೆ ತೂಗಿ ನೋಡಿದ ದೇವರದಾಸಿಮಯ್ಯನು, ಶರಣರ ವಚನಗಳೊಂದಿಗೆ ಇವು ಯಾವುವೂ ಸರಿದೂಗಲಾರವು ಎಂದು ಅವುಗಳನ್ನೆಲ್ಲಾ ನಿರಾಕರಿಸುತ್ತಾನೆ. ಅವನಿಗೆ ವಚನಗಳಿಂದ ದೊರೆಯುವ ಆಧ್ಯಾತ್ಮದ ಸುಖವು ಶಿವಾನು ಭವಕ್ಕೆ ಸರಿಸಮವೆನಿಸುತ್ತದೆ. ಅದಕ್ಕಾಗಿಯೇ, ಶರಣರ ಸೂಳ್ ನುಡಿಯನ್ನು ಅರೆಕ್ಷಣ ವಾದರೂ ಕೇಳುವ ಅವಕಾಶ ದೊರೆತರೆ ಸಾಕೆಂದು ದಾಸಿಮಯ್ಯನು ತಪಿಸುತ್ತಾನೆ.

ಬೌದ್ಧ ಮತ್ತು ವೀರಶೈವ ಧರ್ಮಗಳು ಅನುಸರಿಸಿದ ಸಾಧನ ಮಾರ್ಗದಲ್ಲಿ ಇಷ್ಟೆಲ್ಲ ಸಾದೃಶ್ಯವಿದ್ದರೂ ಸಹ, ಈ ವಿಷಯದಲ್ಲಿಯೂ ಅವುಗಳ ನಡುವೆ ಗಮನೀಯ ವಾದ ಒಂದೆರಡು ಭಿನ್ನಾಭಿಪ್ರಾಯಗಳು ನಮಗೆ ಕಾಣುತ್ತವೆ. ಬೌದ್ಧ ಧರ್ಮದಲ್ಲಿ ಸನ್ಯಾಸ ಧರ್ಮಕ್ಕೆ ಬಹಳ ಮಹತ್ವವಿರುವುದರಿಂದ ಬುದ್ಧನ ಕಾಲದಲ್ಲಿಯೇ ಅನೇಕ ಜನ ಬೌದ್ಧಭಿಕ್ಷುಗಳೆನಿಸಿ ಬೌದ್ಧ ಸಂಘವನ್ನು ಸೇರಿದರು. ಸತ್ಯಾನ್ವೇಷಕನಾದ ಬುದ್ಧನು ತುಳಿದ ಈ ಸನ್ಯಾಸದ ಮಾರ್ಗವೇ ಸರ್ವಶ್ರೇಷ್ಠವಾದ ಮಾರ್ಗವೆಂದು ತಿಳಿದು ಮುಂದೆ ಬಂದ ಅವನ ಅನುಯಾಯಿಗಳೂ ಸಹ ಅದೇ ಮಾರ್ಗವನ್ನು ಅನುಸರಿಸಿದರು. ಗೃಹಸ್ಥ ಧರ್ಮವನ್ನು ತ್ಯಜಿಸಿ ಸನ್ಯಾಸದ ಮಾರ್ಗವನ್ನು ತುಳಿಯುವುದು ಬುದ್ಧನಿಗೆ ಅನಿವಾರ್ಯ ವೆಂದೆನಿಸಿದರೆ, ಅವನ ಅನೇಕ ಅನುಯಾಯಿಗಳಿಗೆ ಅದು ಕೇವಲ ಅನುಕರಣೆಯಾಯಿತು. ಆದರಿಂದಾಗಿ ದಿನದಿನಕ್ಕೂ ಬೌದ್ಧ ಸನ್ಯಾಸಿಗಳ ಸಂಖ್ಯೆ ಹೆಚ್ಚುತ್ತಾ ಬಂದಿತು. ಸಮರ್ಥರು ಅಸಮರ್ಥರೆನ್ನದೆ ಎಲ್ಲ ರೀತಿಯ ಜನರೂ ಬೌದ್ಧ ಭಿಕ್ಷುಗಳಾಗಲು ಮುಂದೆ ಬಂದದ್ದರಿಂದ ಇವರ ಸಂಖ್ಯೆಯನ್ನು ನಿಯಂತ್ರಿಸುವುದು ಬುದ್ಧನಿಗೆ ಅವಶ್ಯಕವೆನಿಸಿತು. ಬೌದ್ಧರ ಧಾರ್ಮಿಕ ಗ್ರಂಥವಾದ ತ್ರಿಪಿಟಿಕದಲ್ಲಿ ಬರುವ ವಿನಯಪಿಟಿಕವು ಬೌದ್ಧ ಸನ್ಯಾಸಿಗಳು ಅನುಸರಿಸ ಬೇಕಾದ ನೀತಿ ಸಂಹಿತೆಯನ್ನು ವಿವರವಾಗಿ ಉಲ್ಲೇಖಿಸುತ್ತದೆ, ಬೌದ್ಧ ಧರ್ಮದಲ್ಲಿ ಅದರ ಧರ್ಮ ಗುರುವಾದ ಬುದ್ಧ, ಅವನು ಬೋಧಿಸಿದ ಧರ್ಮ ಮತ್ತು ಅವನು ಮನ್ನಿ ಸಿದ ಸಂಘ, ಈ ಮೂರು ಬಹಳ ಪವಿತ್ರವೆನಿಸಿದುವು. ಅದರಿಂದಾಗಿ ಬೌದ್ಧರ ಪ್ರಾರ್ಥನೆ ಯಲ್ಲಿ ಈ ಮೂರು ಪವಿತ್ರ ತತ್ವಗಳಿಗೂ ಶರಣಾಗತಿಯನ್ನು ಸೂಚಿಸಲಾಗುತ್ತದೆ.

ವೀರಶೈವ ಧರ್ಮದಲ್ಲಿ ಸನ್ಯಾಸ ಧರ್ಮಕ್ಕೆ ಬೌದ್ಧ ಧರ್ಮದಲ್ಲಿರುವಷ್ಟು ಮಹತ್ವದ ಸ್ಥಾನ ಇಲ್ಲವೆಂದರೆ ಅದು ತಪ್ಪಾಗಲಾರದು. ಅಷ್ಟಾವರಣಗಳಲ್ಲಿ ಬಹಳ ಮಹತ್ವವೆನಿಸಿದ ಗುರು ಮತ್ತು ಜಂಗಮರ ಬದುಕಿನಲ್ಲಿ ವಿರಕ್ತಿಗೆ ಪ್ರಾಧಾನ್ಯತೆ ಇದೆ ನಿಜ. ಆದರೆ ಅವರು ಸಮಾಜದಿಂದ ದೂರ ಸರಿದು ಕೇವಲ ತಮ್ಮ ವೈಯಕ್ತಿಕ ಧಾರ್ಮಿಕ ಸಾಧನೆಯಲ್ಲಿ ನಿರತ ರಾಗುವಂತಿಲ್ಲ. ಭಕ್ತರಿಗೆ ಬೇಕಾದ ಧಾರ್ಮಿಕ ದೀಕ್ಷೆ ಮತ್ತು ಆಧ್ಯಾತ್ಮ ಸಾಧನೆಯ ಮಾರ್ಗದರ್ಶನ ಈ ಧರ್ಮದಲ್ಲಿ ಗುರು ಮತ್ತು ಜಂಗಮರಿಂದಲೇ ದೊರೆಯಬೇಕು. ಆದ್ದರಿಂದ ಗುರು ಮತ್ತು ಜಂಗಮರಿಗೆ ಕೆಲವು ನಿರ್ದಿಷ್ಟವಾದ ಸಾಮಾಜಿಕ ಹೊಣೆಗಾರಿಕೆ ಗಳು ವೀರಶೈವ ಧರ್ಮದಲ್ಲಿ ನಿರುಕ್ತವಾಗಿವೆ. ಅಲ್ಲದೆ ಬೌದ್ಧ ಧರ್ಮದಲ್ಲಿ ಬರುವ ಭಿಕ್ಷು ಗಳ ಸಂಖ್ಯೆಗೆ ಹೋಲಿಸಿ ನೋಡಿದರೆ, ವೀರಶೈವ ಧರ್ಮದಲ್ಲಿ ಬರುವ ಈ ರೀತಿಯ ವಿರಕ್ತರ ಸಂಖ್ಯೆ ಅಷ್ಟೊಂದು ಹೆಚ್ಚಿನ ಪ್ರಮಾಣದಲ್ಲಿದೆ ಎಂದೆನಿಸುವುದಿಲ್ಲ. ವೀರಶೈವ ಧರ್ಮದಲ್ಲಿ ಗೃಹಸ್ಥ ಧರ್ಮಕ್ಕೆ ಸನ್ಯಾಸ ಧರ್ಮಕ್ಕಿಂತಲೂ ಹೆಚ್ಚಿನ ಮಹತ್ವ ಕೊಟ್ಟು, ಅದು ಸನ್ಯಾಸ ಧರ್ಮದಷ್ಟೇ ಪವಿತ್ರವಾದದ್ದು ಎಂದು ಗುರುತಿಸಲಾಗಿದೆ. ಗೃಹಸ್ಥ ಧರ್ಮವು ಆಧ್ಯಾತ್ಮ ಸಾಧನೆಗೆ ಯಾವ ರೀತಿಯಿಂದಲೂ ತೊಡಕಾಗುವುದಿಲ್ಲ ಎಂದು ಈ

ಧರ್ಮವು ನಂಬಿದ್ದರಿಂದ, ಆಧ್ಯಾತ್ಮ ಸಾಧನೆಯ ಹೆಸರಿನಲ್ಲಿ ಗೃಹಸ್ಥ ಧರ್ಮವನ್ನು ತ್ಯಜಿಸಬೇಕೆಂಬ ಕಲ್ಪನೆಗೆ ಇಲ್ಲಿ ಚಾಲನೆ ದೊರೆಯಲಿಲ್ಲ. ಈ ಧರ್ಮವು ಪ್ರವೃತ್ತಿ ನಿವೃತ್ತಿಗಳ ನಡುವೆ ಅಷ್ಟೊಂದು ವ್ಯತಿರಿಕ್ತ ಮನೋಭಾವವನ್ನೂ ಬೆಳೆಸಲಿಲ್ಲ. ಸತಿ ಪತಿಗಳು ಒಂದಾಗಿ ಮಾಡುವ ಭಕ್ತಿಯು ಭಗವಂತನಿಗೆ ಪ್ರಿಯವಾಗುತ್ತದೆ ಎಂದೂ ಈ ಧರ್ಮವು ನಂಬಿತು. ಪುರುಷನಿಗೆ ಸ್ತ್ರೀಯಾಗಿ ಕಾಡುವ ಮಾಯೆ ಸ್ತ್ರೀಗೆ ಪುರುಷನಾಗಿ ಕಾಡುತ್ತದೆ. ಆದ್ದರಿಂದ ಈ ಮಾಯೆಯನ್ನು ಗೆಲ್ಲಲು ಕೇವಲ ಭೌತಿಕವಾಗಿ ಪರಸ್ಪರ ದೂರ ಸರಿದರೆ ಸಾಲದು, ಅವರು ಮಾನಸಿಕವಾಗಿ ದೂರವಿರುವುದನ್ನು ಕಲಿಯಬೇಕು. ವೀರಶೈವ ಧರ್ಮದ ದೃಷ್ಟಿಯಲ್ಲಿ ಸನ್ಯಾಸಿಯಾದವನು ಉಂಡು ಉಪವಾಸಿಯಾಗಿರಬೇಕು. ಬಳಸಿ ಬ್ರಹ್ಮಚಾರಿಯಾಗಿರಬೇಕು. ಆದ್ದರಿಂದ ಸನ್ಯಾಸಿಯಾದರೂ ಸಹ, ಶರಣನು ಸಮಾಜದ ಹಂಗನ್ನು ತೊರೆದು ಸಮಾಜದಿಂದ ದೂರ ಸರಿಯಬೇಕಾಗಿಲ್ಲ. ವೀರಶೈವ ಧರ್ಮದಲ್ಲಿ ಗೃಹಸ್ಥನೆಂದರೆ ಕೇವಲ ಭೋಗಾಸಕ್ತನಾಗಿ ಸ್ವಾರ್ಥದಿಂದ ಹೆಂಡತಿ ಮಕ್ಕಳ ಹಿತವನ್ನು ಮಾತ್ರ ಗಮನಿಸುವ ಲೌಕಿಕ ಜೀವಿಯಲ್ಲ. ಅವನು ಸತ್ಯ ಶುದ್ಧ ಕಾಯಕದಲ್ಲಿ ನಿರತನಾಗಿದ್ದು, ಪರಧನ ಮತ್ತು ಪರಸತಿಯರೆಂಬ ಜೂಬಿಂಗಂಜುವವನಾಗಿ, ತನುಮನಧನವನ್ನು ಗುರು ಲಿಂಗ ಜಂಗಮರ ಸೇವೆಗಾಗಿ ಸವೆಸುತ್ತಾ, ಮೆಲ್ಲಮೆಲ್ಲನೆ ಭಕ್ತನಾಗಿ ಷಟ್‌ಸ್ಥಲ ಸೋಪಾನವನ್ನೇರುವ ಸಾಹಸಿ. ಅಂತಹ ಗೃಹಸ್ಥನ ಅಂಗಣವೆ ವಾರಣಾಸಿ, ಅವನು ಮೆಟ್ಟಿದ ಧರೆಯೆ ಪಾವನ.

ಧಾರ್ಮಿಕ ಸಾಧನೆಗಾಗಿ ಗೃಹಸ್ಥ ಧರ್ಮವನ್ನು ತೊರೆದು ಸನ್ಯಾಸವನ್ನು ಸ್ವೀಕರಿಸಿದ ಬೌದ್ಧ ಭಿಕ್ಷುಗಳು ಗೃಹಸ್ಥ ಧರ್ಮವು ಪಾಲಿಸಿಕೊಂಡು ಬಂದ ಕಾಯಕ ಧರ್ಮವನ್ನು ಅನಾದರಿಸಿದರೆಂಬುದು ಒಂದು ಕಟು ಸತ್ಯ. ಈ ರೀತಿ ಗೃಹ ತ್ಯಾಗಮಾಡಿ ಕಾಯಕವನ್ನು ತೊರೆದ ಬಹುಸಂಖ್ಯೆಯ ಬೌದ್ಧ ಸನ್ಯಾಸಿಗಳಿಂದಾಗಿ ಅನೇಕ ಗೃಹಿಣಿಯರು ಮತ್ತು ಮಕ್ಕಳು ಅಸಹಾಯಕರೆನಿಸಿ,ದುಡಿಯುವವರ ಸಂಖ್ಯೆ ಕ್ಷೀಣಿಸಿ, ಅವರನ್ನವಲಂಬಿಸಿ ಬದುಕುವವರ ಸಂಖ್ಯೆ ವರ್ಧಿಸಿತಂತೆ. ಆಧ್ಯಾತ್ಮ ಸಾಧನೆಯನ್ನೇ ಒಂದು ಜೀವನ ಕ್ರಮವೆಂದು ತಿಳಿದ ಈ ಬೌದ್ಧ ಸನ್ಯಾಸಿಗಳು. ತಾವು ದುಡಿಯುವುದನ್ನೇ ಮರೆತು ತಮ್ಮ ಜೀವನ ನಿರ್ವಹಣೆಗಾಗಿ ಭಿಕ್ಷಾಟನೆಯಲ್ಲಿ ತೊಡಗಿ ಭಿಕ್ಷುಗಳಾದರು. ಸತ್ಯಾನ್ವೇಷಕರಾದ ಭಿಕ್ಷುಗಳ ಜೊತೆಗೆ ಸುಖಾಪೇಕ್ಷಿಗಳಾದ ಸಾಧಾರಣ ಜನರೂ ಈ ಧಾರ್ಮಿಕ ತಂಡವನ್ನು ಸೇರಿದರು. ಈ ರೀತಿ ದುಡುಮೆಯ ವಿಚಾರದಲ್ಲಿ ಉಪೇಕ್ಷೆ ಬೆಳೆದಿದ್ದರಿಂದ ಮುಂದೆ ಸಮಾಜದಲ್ಲಿ ಆರ್ಥಿಕ ಅಸಮತೋಲನವುಂಟಾಯಿತೆಂದು ಕೆಲವು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ.

ಈ ವಿಚಾರದಲ್ಲಿ ವೀರಶೈವ ಧರ್ಮವು ಬೌದ್ಧ ಧರ್ಮಕ್ಕಿಂತಲೂ ಭಿನ್ನವೆನಿಸುತ್ತದೆ. ದುಡುಮೆಯನ್ನು ಕೇವಲ ಆರ್ಥಿಕ ಉತ್ಪಾದನೆಯ ಮಾಧ್ಯಮ ಎಂದು ತಿಳಿಯದೆ ಅದು ಒಂದು ಧಾರ್ಮಿಕ ವ್ರತ ಎಂದು ತಿಳಿದ ಧರ್ಮಗಳಲ್ಲಿ, ವೀರಶೈವ ಧರ್ಮವೇ ಮೊದಲನೆಯದು. 'ಕಾಯಕವೇ ಕೈಲಾಸ' ಎಂಬ ಈ ಶರಣರ ನುಡಿ ದುಡುಮೆಗೆ ಅವರು ಕೊಟ್ಟ

ಮಹತ್ವವೆಂತಹುದು ಎಂಬುದನ್ನು ಸೂಚಿಸುತ್ತದೆ. ದುಡುಮೆಯನ್ನು ಪವಿತ್ರವೆಂದು ತಿಳಿದ ಶರಣರು, ದುಡಿಯುವವನ ಘನತೆಯನ್ನು ಹೆಚ್ಚಿಸಿದರು. ದುಡುಮೆಯನ್ನು ಕೀಳೆಂದು ತಿಳಿದು ದುಡಿಯುವವನನ್ನು ಶೂದ್ರನೆಂದು ಅನಾದರಿಸಿದ ಸಮಾಜದಲ್ಲಿ, ಶರಣರು ತಂದು ಕೊಟ್ಟ ಈ ಮಾರ್ಪಾಡು ತುಂಬಾ ಗಮನಾರ್ಹವಾದದ್ದು. ಧಾರ್ಮಿಕ ಸಮಾನತೆಯನ್ನು ಬಯಸುವ ಬುದ್ಧನಂತಹ ಧಾರ್ಮಿಕ ಸುಧಾರಕರೂ ಸಹ ಸಮಾಜದಲ್ಲಿ ಕಾಣುವ ಆರ್ಥಿಕ ಅಸಮತೆಯನ್ನು ಉಪೇಕ್ಷಿಸಬಾರದು ಎಂಬುದನ್ನು ಶರಣ ಧರ್ಮ ತೋರಿಸಿಕೊಟ್ಟಿತು. ಇದರಿಂದ ಜಾತಿರಹಿತ ಮತ್ತು ವರ್ಗರಹಿತ ಸಮಾಜವನ್ನು ರೂಪಿಸಲು ಬಯಸಿದ ವಿಚಾರ ವಂತ ಜನರಿಗೆ ಒಂದು ಹೊಸ ಮಾರ್ಗದರ್ಶನ ದೊರೆಯಿತು. ಒಟ್ಟಿನಲ್ಲಿ ಹೇಳುವುದಾದರೆ ಮಿಕ್ಕೆಲ್ಲ ಆಸ್ತಿಕ ಧರ್ಮಗಳಿಗೆ ಹೋಲಿಸಿದರೆ ವೀರಶೈವ ಧರ್ಮವು ಬೌದ್ಧ ಧರ್ಮಕ್ಕೆ ಹೆಚ್ಚು ಸಮೀಪವಿರುವುದು ನಮಗೆ ಕಾಣುತ್ತದೆ. ಈ ಎರಡು ಧರ್ಮಗಳ ನಡುವಿನ ಭಿನ್ನತೆಯು ಸಾದೃಶ್ಯದಷ್ಟೇ ಗಮನಾರ್ಹವಾಗಿದೆ.

# ಕ್ರೈಸ್ತ ಹಾಗೂ ವೀರಶೈವ ಸಿದ್ಧಾಂತ

—ಫಾದರ್. ಗ್ರೆಗರಿ ಡಿಸೋಜ

ಮಾನವ ಜೀವನದಲ್ಲಿ ಧರ್ಮವು ಅತೀ ಪುರಾತನ ಮತ್ತು ವಿಶ್ವವ್ಯಾಪಿಯಾದ ಸಾಮಾಜಿಕ ಪ್ರಕ್ರಿಯೆಯಾಗಿದೆ. ಧರ್ಮವು ಮಾನವನಷ್ಟೇ ಪುರಾತನವಾಗಿದ್ದು ಎಲ್ಲಾ ಸಮಾಜಗಳಲ್ಲೂ ಗುರ್ತಿಸಲ್ಪಟ್ಟಿದೆ. ಧಾರ್ಮಿಕ ಭಾವನೆ ಒಂದೇ ಆದರೂ ಧರ್ಮಗಳು ಅನೇಕ ಮತ್ತು ವಿಭಿನ್ನವಾಗಿವೆ, ಮಾತ್ರವಲ್ಲ ದುರಾದೃಷ್ಟವಶಾತ್ ಕೆಲವು ಸಲ ಪರಸ್ಪರ ವೈಷಮ್ಯವನ್ನೂ ತೋರಿಸುತ್ತವೆ. ಈ ವೈಷಮ್ಯವು ಪರಧರ್ಮವನ್ನು ಕುಂಠಿತಗೊಳಿಸುವ ಸಲುವಾಗಿಯೇ ಆಗಿದ್ದರೂ ಸಹಜವಾಗಿ ತನ್ನ ಧರ್ಮವನ್ನೇ ಕುಂಠಿತಗೊಳಿಸಿದಂತಾಗು ತ್ತದೆ, ಮಾತ್ರವಲ್ಲ ಧಾರ್ಮಿಕ ಸಂಸ್ಕೃತಿಯನ್ನೇ ಅವನತಿಗೊಳಿಸಿದಂತಾಗುತ್ತದೆ. ಆಧ್ಯಾ ತ್ಮಿಕ ಮಾನವ ಧಾರ್ಮಿಕ ಜೀವಿಯಾಗಿದ್ದು ಧರ್ಮದ ಭಾವನೆಯನ್ನೇ ನಾಶಗೊಳಿಸುವು ದಾದರೂ ಹೇಗೆ? ಧಾರ್ಮಿಕ ಭಾವನೆಯ ಪೋಷಣೆ ಮತ್ತು ರಕ್ಷಣೆ ಆಧ್ಯಾತ್ಮಿಕ ಮಾನವನ ಆದ್ಯ ಕರ್ತವ್ಯವಲ್ಲವೆ? ಈ ಕರ್ತವ್ಯವನ್ನು ಪೂರೈಸಬೇಕಾದರೆ ಸಮಾಜದಲ್ಲಿರುವ ತನ್ನ ಮತ್ತು ಇತರ ಧರ್ಮಗಳ ತತ್ವ ಮತ್ತು ನಿಯಮಗಳ ತಿರುಳನ್ನು ತಿಳಿದುಕೊಳ್ಳುವುದು ಅತ್ಯಾವಶ್ಯಕ. ವಿಶೇಷವಾಗಿ ಬಹುಧರ್ಮಗಳ ಸಮಾಜವನ್ನುಳ್ಳ ಭಾರತದಲ್ಲಿ ಇದು ಅನಿವಾರ್ಯ. ಆಧ್ಯಾತ್ಮಿಕ ಮಾನವನು ಪರಧರ್ಮಗಳ ತತ್ವಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿದರೂ ಅನೇಕ ಸಮಸ್ಯೆಗಳನ್ನೆದುರಿಸಬೇಕಾಗುತ್ತದೆ. ಏಕೆಂದರೆ ಧರ್ಮವು ಮುಖ್ಯವಾಗಿ ಬಾಹ್ಯಾಚರಣೆಯೂ ಅಲ್ಲ, ತತ್ವ ಬೋಧನೆಯೂ ಅಲ್ಲ. ಅದು ಪ್ರತ್ಯೇಕ ವಾಗಿ ಆಂತರಿಕ ಆಧ್ಯಾತ್ಮ ಅನುಭವವಾಗಿದೆ. ಆದರೆ ಒಂದು ಧರ್ಮವನ್ನು ಪಾಲಿಸು ತ್ತಿರುವವನಿಗೆ ಮತ್ತೊಂದು ಧರ್ಮದ ಆಧ್ಯಾತ್ಮಿಕ ಅನುಭವವಾಗುವುದಾದರೂ ಹೇಗೆ? ಎರಡು ಧರ್ಮಗಳ ತತ್ವ, ಆಚರಣೆಗಳ ಜ್ಞಾನ ಮತ್ತು ವಿಶೇಷವಾಗಿ ಧರ್ಮಗಳ ಅನುಭವ ವಿಲ್ಲದೆ ಅವುಗಳ ತಾರತಮ್ಯವನ್ನು ಕಂಡುಕೊಳ್ಳುವುದಾದರೂ ಹೇಗೆ? ಕ್ರೈಸ್ತ ಮತ್ತು ವೀರಶೈವ ಧರ್ಮಗಳ ಸಿದ್ಧಾಂತದ ತಾರತಮ್ಯವನ್ನು ತಿಳಿಸಲು ಪ್ರಯತ್ನಿಸುವ ನನಗೆ ಈ ಪರಿಮಿತಿಯ ಅರಿವಿದೆ.[೧]

ಹೆಸರೇ ಸೂಚಿಸುವಂತೆ ಕ್ರೈಸ್ತ ಧರ್ಮವು ಎರಡು ಸಾವಿರ ವರ್ಷಗಳ ಹಿಂದೆ ಪಾಲೆಸ್ತೀನ್ ದೇಶಕ್ಕೆ ಸೇರಿದ ಬೆತ್ಲೆಹೇಂ ಎಂಬ ನಗರದಲ್ಲಿ ಜನಿಸಿದ ಯೇಸುಕ್ರಿಸ್ತರಿಂದ

೧ Cf. GREGORY D'SOUZA, "Religious Experience" in Sharing Worship, NBCLC, Bangalore, 1988, pp. 79-87.

ಸ್ಥಾಪಿಸಲ್ಪಟ್ಟಿತು. ಯೆಹೂದಿ ವಂಶಕ್ಕೆ ಸೇರಿದ್ದ ಯೇಸುಕ್ರಿಸ್ತರು ಆ ಧರ್ಮವನ್ನೇ ಪಾಲಿಸುತ್ತಿದ್ದು, ಅದರ ಪರಿಮಿತಿಗಳನ್ನರಿತಿದ್ದ ಅವರು ಆ ಧರ್ಮವನ್ನು ಪರಿವರ್ತಿಸಲು ಮಾಡಿದ ಪ್ರಯತ್ನದ ಫಲವಾಗಿ ಕ್ರೈಸ್ತಧರ್ಮವು ರೂಪುಗೊಂಡಿತು. ಯೇಸುಕ್ರಿಸ್ತರ ಕಾಲದ ಯೆಹೂದಿಗಳು ಬಾಹ್ಯಾಚರಣೆ ಮತ್ತು ನಿಯಮಪಾಲನೆಗೆ ಪ್ರಾಮುಖ್ಯತೆಯನ್ನಿತ್ತರೆ, ಯೇಸುಕ್ರಿಸ್ತರು ಆಂತರಿಕ, ಆಧ್ಯಾತ್ಮಿಕ ಜೀವನಕ್ಕೆ, ಸತ್ಯ, ಪ್ರೀತಿ, ನೀತಿಯುಜೀವನಕ್ಕೆ ಪ್ರಾಧಾನ್ಯತೆಯನ್ನಿತ್ತರು.[೨]

ವೀರಶೈವ ಧರ್ಮದ ಉಗಮದ ವಿಷಯವು ವಿವಾದಾಸ್ಪದವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಕೆಲವರು ಈ ಧರ್ಮವು ಐದು ಮಂದಿ ಆಚಾರ್ಯರಿಂದ ಸ್ಥಾಪಿತವಾಯಿತು. ಅಂದರೆ ಉಳಿದವರು ಶ್ರೀ ಬಸವೇಶ್ವರರೇ ಈ ಧರ್ಮದ ಸ್ಥಾಪಕರೆನ್ನುವರು.[೩] ವೀರಶೈವ ಧರ್ಮವು ಹಿಂದೂಧರ್ಮದ ಮೂಲವನ್ನೇ ಹೊಂದಿ ಮುಖ್ಯವಾಗಿ ಸಾಮಾಜಿಕ ತತ್ವದಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿದೆ. ಹಿಂದೂಧರ್ಮದಲ್ಲಿ ಬೇರೂರಿದ್ದ ಜಾತೀಯತೆ, ಮಹಿಳೆಯರ ಶೋಷಣೆ, ಪುರೋಹಿತ ಮತ್ತು ಪೌರೋಹಿತ್ಯದ ಪ್ರಾಮುಖ್ಯತೆ ಇತ್ಯಾದಿಗಳನ್ನು ತೊಡೆದು ಹಾಕುವ ಪ್ರಯತ್ನದ ಫಲವಾಗಿ ವೀರಶೈವ ಧರ್ಮ ಉದಯಿಸಿತು.

ಯೆಹೂದಿ ಧರ್ಮದ ಮೂಲವನ್ನು ಹೊಂದಿದ ಕ್ರೈಸ್ತಧರ್ಮವು ಯೆಹೂದಿ ಧಾರ್ಮಿಕ ಗ್ರಂಥವನ್ನು ತನ್ನ ಧಾರ್ಮಿಕ ಗ್ರಂಥ ಬೈಬಲಿನ ಒಂದು ಭಾಗವನ್ನಾಗಿ ಸ್ವೀಕರಿಸಿ ಇದನ್ನು ಹಳೆಯ ಒಡಂಬಡಿಕೆ ಎಂದೂ, ಮತ್ತೊಂದು ಭಾಗವನ್ನು ಹೊಸಒಡಂಬಡಿಕೆ ಎಂದೂ ಕರೆದಿದೆ. ಈ ಹೊಸ ಒಡಂಬಡಿಕೆಯಲ್ಲಿ ಯೇಸುಕ್ರಿಸ್ತರ ಜೀವನದರ್ಶನ ಮತ್ತು ಬೋಧನೆ ಅಡಗಿದೆ. ಈ ಹೊಸ ಒಡಂಬಡಿಕೆಯು ಹಳೆ ಒಡಂಬಡಿಕೆಯ ಪೂರ್ಣತೆಯನ್ನೂ ಸಫಲತೆಯನ್ನೂ ಯೇಸುಕ್ರಿಸ್ತರ ಜೀವನದಲ್ಲಿ ಕಾಣಿಸುತ್ತದೆ. ವೀರಶೈವ ಧರ್ಮದಲ್ಲಿ ವಚನ ಸಾಹಿತ್ಯವೇ ಮುಖ್ಯವಾದ ಧರ್ಮಗ್ರಂಥವಾಗಿದೆ.[೪] ಈ ವಚನ ಸಾಹಿತ್ಯದಲ್ಲಿ ವೇದ ಮತ್ತು ವಿಶೇಷವಾಗಿ ಉಪನಿಷತ್ತುಗಳ ಪ್ರಭಾವವನ್ನು ಕಾಣಬಹುದು.

ಧರ್ಮವು ಅತೀ ಸಾಮಾನ್ಯವಾದ ಪ್ರಕ್ರಿಯೆಯಾದರೂ ಅದರ ಮೂಲಲಕ್ಷಣವನ್ನು ಸ್ಪಷ್ಟೀಕರಿಸುವುದು ಕಷ್ಟ. ಎಲ್ಲಾ ಧರ್ಮಗಳಲ್ಲಿ ಧಾರ್ಮಿಕ ಗ್ರಂಥ, ತತ್ವ, ಸಂಪ್ರದಾಯಗಳು, ಆರಾಧನಾ ವಿಧಿಗಳು, ನೈತಿಕತೆ, ಸಾಹಿತ್ಯ, ಸಾಮಾಜಿಕ ತತ್ವ ಇತ್ಯಾದಿಗಳಿದ್ದರೂ

---

೨ Cf.NINIAN SMART, The Religious Experience of Mankind, Great Britain, 1970, p. 1.

೩ Cf. M. R. SAKHARE, History and Philosophy of Lingayat Religion, Dharwar, 1978, pp. 232-275.

೪ Cf. Ibid. pp. 434-439.

ಇವುಗಳ ಪ್ರಾಧಾನ್ಯತೆಯನ್ನು ಗುರ್ತಿಸುವುದು ಸುಲಭವಲ್ಲ. ಆದರೂ ಪರಮಾತ್ಮನ ಪ್ರಾಮುಖ್ಯತೆಯನ್ನು ಯಾರೂ ಅಲ್ಲಗಳೆಯುವದಿಲ್ಲ.[೫] ಜೀವಾತ್ಮ ಮತ್ತು ಪರಮಾತ್ಮನ ಸಂಬಂಧವೇ ಪ್ರತಿಯೊಂದು ಧರ್ಮದ ಮೂಲಗುಣವಾಗಿದೆ.[೬] ಎಲ್ಲಾ ಧರ್ಮಗಳ ಮೂಲ ದೇವರೇ ಆಗಿದ್ದರೂ ಅವರಿಗೆ ಧರ್ಮದ ಅವಶ್ಯಕತೆಯಿಲ್ಲ. ಧರ್ಮದ ಈ ಅವಶ್ಯಕತೆಯಿರುವುದು ಮಾನವನಿಗೆ ತನ್ನ ಮುಕ್ತಿಯ ಸಲುವಾಗಿ. ಆದುದರಿಂದ ನಾನು ಈ ಲೇಖನದಲ್ಲಿ ಮುಖ್ಯವಾಗಿ ಧಾರ್ಮಿಕ ಜೀವನದಲ್ಲಿ ಮಾನವನ ಕಲ್ಯಾಣವನ್ನು ಕುರಿತು ತರ್ಕಿಸಲಿದ್ದೇನೆ. ಮಾನವನೇ ಎಲ್ಲಾ ವಿಷಯುಗಳ ಮೂಲಮಾನವಾಗಿದ್ದಾನಲ್ಲವೇ? ಅವನೇ ಎಲ್ಲಾ ವಸ್ತುಗಳ ಕೇಂದ್ರ ಮತ್ತು ಕಳಸಪ್ರಾಯನಾಗಿದ್ದಾನೆ.[೭] ಈ ತತ್ವವು ವಿಶೇಷವಾಗಿ ಭಾರತದ ಧರ್ಮಗಳಿಗೆ ಅನ್ವಯಿಸುತ್ತದೆ; ಏಕೆಂದರೆ ಮಾನವನ ಮುಕ್ತಿ, ಮೋಕ್ಷಾನಂದವೇ ಭಾರತದ ಎಲ್ಲಾ ಧರ್ಮಗಳ ಮುಖ್ಯ ಉದ್ದೇಶ.

ಆದರೆ ಕ್ರೈಸ್ತಧರ್ಮದಲ್ಲಾಗಲೀ, ವೀರಶೈವಧರ್ಮದಲ್ಲಾಗಲೀ ಪರಮಾತ್ಮನ ಹೊರತು ಜೀವಾತ್ಮನನ್ನು ಅರಿಯುವುದು ಅಸಾಧ್ಯ. ಕ್ರೈಸ್ತಧರ್ಮಕ್ಕನುಸಾರವಾಗಿ ದೇವರ ಪ್ರತಿಬಿಂಬವೇ ಮಾನವ. "ನಮ್ಮ ಸ್ವರೂಪದಲ್ಲಿ, ನಮ್ಮ ಹೋಲಿಕೆಗೆ ಸರಿಯಾಗಿ ಮನುಷ್ಯರನ್ನು ಉಂಟುಮಾಡೋಣ, ಹೀಗೆ ದೇವರು ಮನುಷ್ಯನನ್ನು ತನ್ನ ಸ್ವರೂಪದಲ್ಲಿ ಮಾಡಿದರು, ದೇವಸ್ವರೂಪ ಸ್ವರೂಪದಲ್ಲಿ ಅವನನ್ನು ಉಂಟುಮಾಡಿದರು"[೮] ಎಂದು ಬೈಬಲಿನಲ್ಲಿ ನಾವು ಓದುತ್ತೇವೆ. ಹೇಗೆ ರೂಪವಿಲ್ಲದೆ ಪ್ರತಿಬಿಂಬ ಮತ್ತು ವಸ್ತುವಿಲ್ಲದೆ ಅದರ ನೆರಳು ಗೋಚರಿಸುವುದಿಲ್ಲವೋ ಹಾಗೆಯೇ ಪರಮಾತ್ಮನ ರಹಿತ ಜೀವಾತ್ಮ ಅರ್ಥ ಹೀನ. ಆದುದರಿಂದ ಕ್ರೈಸ್ತ ಮತ್ತು ವೀರಶೈವಧರ್ಮಗಳಲ್ಲಿ ಪರಮಾತ್ಮನ ಅರಿವಿಲ್ಲದೆ ಜೀವಾತ್ಮನನ್ನು ಅರಿಯುವುದು ಅಸಾಧ್ಯ. ವೀರಶೈವ ಧರ್ಮದಲ್ಲಿ ಪರಮಾತ್ಮ ಜೀವಾತ್ಮ ಗಳ ಸಂಬಂಧ ಬೆಂಕಿ ಮತ್ತು ಅದರ ಕಿಡಿಗೆ ಹೋಲಿಸಲಾಗಿದೆ.

ಕ್ರೈಸ್ತಧರ್ಮವು ಆಸ್ತಿಕ ಮಾತ್ರವಲ್ಲ ಏಕದೇವರಲ್ಲಿ ನಂಬಿಕೆಯುಳ್ಳ ಧರ್ಮವಾಗಿದೆ. ಬೈಬಲಿನ ಪ್ರಕಾರ "ನಮ್ಮ ದೇವರಾದ ಯೆಹೋವನು ಒಬ್ಬನೇ ದೇವರು. ನೀವು ನಿಮ್ಮ ದೇವರಾದ ಯೆಹೋವನನ್ನು ಪೂರ್ಣ ಹೃದಯದಿಂದಲೂ, ಪೂರ್ಣಪ್ರಾಣದಿಂದಲೂ, ಪೂರ್ಣಶಕ್ತಿಯಿಂದಲೂ ಪ್ರೀತಿಸಬೇಕು."[೯] ಈ ದೇವರು ನಾಮರೂಪಗಳ ಹಿಂದಿನ

---

೫ Cf. W. JAMES, The Varieties of Religious Experience, NewYork, 1929, p. 31.

೬ Cf. Ibid.

೭ Cf. AUSTIN FLANNERY (ed), Vatican Council II, Dublin, 1975, pp. 913-924. (G. S. No. 12-21).

೮ Genesis, 1; 26-27.

೯ Deuteronomy, 6: 4-5.

ಅಸ್ತಿತ್ವವಾಗಿದೆ. ಪರಲೋಕವನ್ನು ಭೂಲೋಕವನ್ನೂ ಸೃಷ್ಟಿಸಿದವರೇ ಅವರು. ಅವರು ಮಹೋನ್ನತರೂ, ಸರ್ವಶಕ್ತರು; ಅನಾದಿ, ಅನಂತ, ಅಪರಿಮಿತ, ಸಚ್ಚಿದಾನಂದ. ಅವರ ಇಚ್ಛೆಯೇ ಸರಿತಪ್ಪುಗಳ ತೀರ್ಮಾನ.

ಕ್ರೈಸ್ತಧರ್ಮದ ಪ್ರಕಾರ ದೇವರು ಪ್ರೀತಿಯಾಗಿದ್ದಾರೆ. "ದೇವರು ಪ್ರೀತಿ ಸ್ವರೂಪಿ; ಪ್ರೀತಿಯಲ್ಲಿ ನೆಲೆಗೊಂಡಿರುವವನು ದೇವರಲ್ಲಿ ನೆಲೆಗೆಂಡಿದ್ದಾನೆ. ದೇವರು ಅವನಲ್ಲಿ ನೆಲೆಗೊಂಡಿದ್ದಾರೆ" ಎಂದು ಅನೇಕ ಸಲ ಬೈಬಲ್ಲಿನ ಹೊಸ ಒಡಂಬಡಿಕೆಯಲ್ಲಿ ಹೇಳಲಾಗಿದೆ.[೧೦] ಈ ಪ್ರೀತಿಯಿಂದಲೇ ದೇವರು ಪರಲೋಕವನ್ನೂ, ಭೂಲೋಕವನ್ನೂ, ಮಾನವನನ್ನೂ ಎಲ್ಲಾ ವಸ್ತುಗಳನ್ನೂ ಸೃಷ್ಟಿಸಿದರು. ಮಾತ್ರವಲ್ಲ ಅದೇ ಪ್ರೀತಿಯಿಂದ ಮನುಕುಲವನ್ನು ದಿನಂಪ್ರತಿ ರಕ್ಷಿಸುತ್ತಾ ಬಂದಿದ್ದಾರೆ. ಅಲ್ಲದೆ ಮೋಕ್ಷಾನಂದಕ್ಕೆ ದಾರಿ ತೋರಿಸುತ್ತಾರೆ; ದೇವರ ಪ್ರತಿಬಿಂಬವಾದ ಮಾನವನ ಮುಖ್ಯಲಕ್ಷಣ ಪ್ರೀತಿಯೇ ಆಗಿರಬೇಕು. ಪ್ರೀತಿಯ ಜೀವನವೇ ಧರ್ಮ. ಈ ಪ್ರೀತಿಧರ್ಮದ ಮೂಲಕವೇ ಮೋಕ್ಷಾನಂದದ ಪ್ರಾಪ್ತಿ. "ಪ್ರಿಯರೇ, ದೇವರು ನಮ್ಮನ್ನು ಹೀಗೆ ಪ್ರೀತಿಸಿದ ಮೇಲೆ ನಾವು ಒಬ್ಬರನ್ನೊಬ್ಬರು ಪ್ರೀತಿಸುವ ಹಂಗಿನಲ್ಲಿದ್ದೇವೆ. ದೇವರನ್ನು ಯಾರೂ ನೋಡಿಲ್ಲ; ನಾವು ಒಬ್ಬರನ್ನೊಬ್ಬರು ಪ್ರೀತಿಸಿದರೆ ದೇವರು ನಮ್ಮಲ್ಲಿ ನೆಲೆಗೊಂಡಿದ್ದಾರೆ ಮತ್ತು ಆತನಲ್ಲಾಗುವ ಪ್ರೀತಿಯು ನಮ್ಮಲ್ಲಿ ಸಿದ್ಧಿಗೆ ಬರುತ್ತದೆ. ದೇವರು ನಮಗೆ ತನ್ನ ಆತ್ಮದಲ್ಲಿ ಪಾಲನ್ನು ಅನುಗ್ರಹಿಸಿದ್ದರಿಂದಲೇ ನಾವು ಆತನಲ್ಲಿ ನೆಲೆಗೊಂಡಿದ್ದೇವೆಂತಲೂ ಆತನು ನಮ್ಮಲ್ಲಿ ನೆಲೆಗೊಂಡಿದ್ದಾನೆಂತಲೂ ತಿಳಿದುಕೊಳ್ಳುತ್ತೇವೆ" ಎಂಬುದು ಹೊಸ ಒಡಂಬಡಿಕೆಯ ಸಂದೇಶವಾಗಿದೆ.[೧೧]

ದೇವರು ಸತ್ಯ; ಸ್ವಪ್ರಕಾಶವುಳ್ಳ ಸತ್ಯ. ಆದ್ದರಿಂದ ಕ್ರೈಸ್ತ ಜೀವನದಲ್ಲಿ ಸತ್ಯಪಾಲನೆ ಅತ್ಯವಶ್ಯಕ. ಯೇಸುಕ್ರಿಸ್ತರು ತಮ್ಮ ತಂದೆಯಾದ ಪರಮಪಿತನ ವಿಷಯವಾಗಿ "ನಾನು ಸತ್ಯದ ವಿಷಯದಲ್ಲಿ ಸಾಕ್ಷಿ ಹೇಳುವುದಕ್ಕೋಸ್ಕರ ಹುಟ್ಟಿದವನು. ಅದಕ್ಕೋಸ್ಕರವೇ ಈ ಲೋಕಕ್ಕೆ ಬಂದಿದ್ದೇನೆ. ಸತ್ಯಪರರೆಲ್ಲರೂ ನನ್ನ ಮಾತಿಗೆ ಕಿವಿಗೊಡುತ್ತಾರೆ"[೧೨] ಎಂದಿದ್ದಾರೆ. ತಮ್ಮ ವಿಷಯವಾಗಿ "ನಾನೇ ಮಾರ್ಗವೂ, ಸತ್ಯವೂ, ಜೀವವೂ ಆಗಿದ್ದೇನೆ. ನನ್ನ ಮೂಲಕವಾಗಿ ಹೊರತು ಯಾರೂ ತಂದೆಯ ಬಳಿಗೆ ಬರುವುದಿಲ್ಲ. ನೀವು ನನ್ನನ್ನು ಅರಿತಿದ್ದರೆ ನನ್ನ ತಂದೆಯನ್ನು ಅರಿಯುತ್ತಿದ್ದೀರಿ"[೧೩] ಎಂದು ನುಡಿದಿದ್ದಾರೆ.

---

೧೦ 1 John, 4, 16.
೧೧ Ibid. 4: 11-13.
೧೨ John, 18: 37.
೧೩ Ibid. 14; 6.

ಸತ್ಯವನ್ನು ಎಲ್ಲಿ ಕಂಡರೂ ಅದನ್ನು ಅನುಸರಿಸಲೇಬೇಕು. ನಾವು, ನಮ್ಮದೆನಿಸಿದ್ದೆಲ್ಲವೂ ದೇವರ ದಾನ. ಇದನ್ನು ದೃಢೀಕರಿಸಿ ಜೀವಿಸುವುದೇ ಸತ್ಯದ ಧರ್ಮ. ಎಲ್ಲಿ ಈ ಸತ್ಯ ಗೋಚರಿಸುವುದಿಲ್ಲವೋ ಅಲ್ಲಿ ಅಹಂಕಾರದ ಅಧರ್ಮವೇ ಪರಿಣಮಿಸುತ್ತದೆ.[೧೪] ದೇವರು ನಾಮರೂಪ ರಹಿತ, ಮಾನವ ಸಾಂಪ್ರದಾಯಿಕವಾಗಿ ಅವುಗಳನ್ನು ಕೊಟ್ಟಿದ್ದಾನೆ. ಮಾನವನಿಂದ ದೇವರಿಗೆ ಹೆಸರನ್ನಿಡಲು ಸಾಧ್ಯವಿಲ್ಲ. ಏಕೆಂದರೆ ಅವರು ನುಡಿಗೆ ನಿಲುಕದವರಾಗಿದ್ದಾರೆ. ಅದು ಸಾಧ್ಯವೆಂದು ಯಾರಾದರೂ ಹೇಳುವುದಾದರೆ ಅದು ಬರೀ ಭ್ರಮೆಯಾಗಿದೆ ಎಂದು ಸಂತ ಜಸ್ಟಿನ್ ಹೇಳಿದ್ದಾರೆ.[೧೫] ನೇತಿಮಾರ್ಗವೇ ಅನಿರ್ವಚನೀಯವಾದ ದೇವರ ವಿಷಯವನ್ನು ಅರುಹಲು ಉತ್ತಮ ವಿಧಾನ.

ಕ್ರೈಸ್ತರು ತ್ರಿತ್ವವುಳ್ಳ ಏಕ ದೇವರನ್ನು ನಂಬುತ್ತಾರೆ. ಏಕದೇವರಲ್ಲಿ ಪಿತ, ಸುತ ಮತ್ತು ಪವಿತ್ರಾತ್ಮರೆಂಬ ಮೂರು ವ್ಯಕ್ತಿಗಳಿರುವರೆಂದು ನಂಬುತ್ತಾರೆ. ಮೂರು ವ್ಯಕ್ತಿಗಳಿದ್ದರೂ ಮೂರು ದೇವರಿಲ್ಲ ಒಬ್ಬರೇ ದೇವರು. ಒಬ್ಬರೇ ದೇವರಲ್ಲಿನ ನಂಬಿಕೆ ಕ್ರೈಸ್ತ ಧರ್ಮದ ಮೂಲ ತತ್ವ. ಈ ತತ್ವಕ್ಕೆ ವಿರುದ್ಧವಾಗಿ ಯಾರಿಗೂ ಕ್ರೈಸ್ತ ಜೀವನವನ್ನು ನಡೆಸಲು ಸಾಧ್ಯವಿಲ್ಲ. ಏಕದೇವರಲ್ಲಿರುವ ತ್ರಿತ್ವದ ಸತ್ಯವು ಒಂದು ರಹಸ್ಯವಾಗಿದೆ. ಮಾನವನಿಗೆ ಅದನ್ನು ತಿಳಿಯಲು ಅಸಾಧ್ಯವಾಗಿರುವುದರಿಂದ ಇದು ಸತ್ಯವೇ ಅಲ್ಲ ಎಂದು ಹೇಳುವುದು ಮೂರ್ಖತೆ. ದೇವರು ಸರ್ವಶಕ್ತರು. ಮಾನವನಿಂದ ತಿಳಿಯಲಾರದ ಸತ್ಯವು ಅವರಲ್ಲಡಗಿದೆ ಎಂಬುದು ಅಸಾಧ್ಯವೇ? ಇದು ಅಸಾಧ್ಯವಾದರೆ ದೇವರನ್ನು ಸರ್ವಶಕ್ತರೆಂದು ಹೇಳುವುದು ಮಾನವನ ಮೂಢತನವಲ್ಲವೆ? ಇದಲ್ಲದೆ ನಮ್ಮ ಜ್ಞಾನದ ಪರಿಮಿತಿ ನಮಗೆಲ್ಲರಿಗೂ ಗೊತ್ತು. ಆದುದರಿಂದ ತ್ರಿತ್ವದ ರಹಸ್ಯವನ್ನು ತಿಳಿಯಲು ಅಸಾಧ್ಯವೆಂಬುದರಲ್ಲಿ ಆಶ್ಚರ್ಯವಿಲ್ಲ. ದೇವರಲ್ಲಿ ತ್ರಿತ್ವರಹಸ್ಯವಿದೆಯೆಂಬುದು ದೈವಪ್ರೇರಣೆಯಿಂದಲೇ ಮಾನವನಿಗೆ ಪ್ರಕಟಿತವಾಗಿದೆ. ಯೇಸುಕ್ರಿಸ್ತರು ತ್ರಿತ್ವದ ವಿಷಯವನ್ನು ಬೋಧಿಸುತ್ತಾ "ಆದರೆ ತಂದೆಯು ಬಳಿಯಿಂದ ನಾನು ನಿಮಗೆ ಕಳುಹಿಸಿಕೊಡುವ ಸಹಾಯಕನು, ಅಂದರೆ ತಂದೆಯ ಬಳಿಯಿಂದ ಹೊರಡುವ ಸತ್ಯದ ಆತ್ಮನು ಬಂದಾಗ ಆತನು ನನ್ನನ್ನು ಕುರಿತು ಸಾಕ್ಷಿ ಹೇಳುವನು"[೧೬] ಎಂದರು.

ಮಾನವನ ತಿಳುವಳಿಕೆಯ ಪ್ರಕಾರ ಹೇಳುವುದಾದರೆ ಪರಮಪಿತನಿಂದ ಅನಂತ ಜೀವನದಲ್ಲಿ ಉದಯಿಸಿದವರೇ ಪರಮ ಸುತನು. ಪರಮಪಿತ ಮತ್ತು ಸುತನ ನಡುವಿನ

---

೧೪ Cf. GREGORY D'SOUZA, Teresian Mysticism and Yoga, Divya Jyothi Publications, Mangalore, 1981, pp. 26–38.

೧೫ Cf. JUSTIN THE MARTYR, First Apology in Defence of Christians, Ch. 61. As quoted in the Divine Office, Vol II, London, 1974, p. 540.

೧೬ John, 15; 26.

ಅನಂತವಾದ ಪ್ರೀತಿಯೇ ಪವಿತ್ರಾತ್ಮ. ಪಿತ ಸುತ ಮತ್ತು ಪವಿತ್ರಾತ್ಮರು ತಮ್ಮ ಅನಂತ ಜೀವನದಲ್ಲಿ ಸಚ್ಚಿದಾನಂದರಾಗಿದ್ದಾರೆ.

ಯೇಸುಕ್ರಿಸ್ತರಲ್ಲಿನ ನಂಬಿಕೆಯೇ ಕ್ರೈಸ್ತಧರ್ಮದ ಬೆನ್ನೆಲುಬು. ಯೇಸುಕ್ರಿಸ್ತರ ಅನುಚರರೇ ಕ್ರೈಸ್ತರು. ದೇವಸುತನಾದ ಯೇಸುಕ್ರಿಸ್ತರ ಮಾನವಕುಲದ ರಕ್ಷಣೆಗಾಗಿ ಮಾನವನಾಗಿ ಜನಿಸಿದರು. ಅವರು ಮಾನವ ರೂಪದಲ್ಲಿದ್ದರೂ ನಿಜವಾಗಿಯೂ ಅವರು ದೇವರು. ಏಕೆಂದರೆ ಅವರು ಜನಿಸಿದ್ದು ಮಾನವ ಇಚ್ಛೆಯಿಂದಲ್ಲ; ಪವಿತ್ರಾತ್ಮರ ಶಕ್ತಿಯಿಂದ. ದೇವದೂತನು ಯೇಸುಕ್ರಿಸ್ತರ ಜನನದ ಸಂದೇಶವನ್ನು ಹೇಳುತ್ತಾ, ಯೇಸುಕ್ರಿಸ್ತರ ತಾಯಿಯಾಗಲಿರುವ ಕನ್ಯಾಮರಿಯಮ್ಮನವರನ್ನು ಕುರಿತು. "ಮರಿಯಳೇ, ಹೆದರಬೇಡ; ನಿನಗೆ ದೇವರದಯೇ ದೊರಕಿತು. ಇಗೋ, ನೀನು ಗರ್ಭಿಣಿಯಾಗಿ ಒಬ್ಬ ಮಗನನ್ನು ಹೆರುವಿ; ಆತನಿಗೆ ಯೇಸು ಎಂದು ಹೆಸರಿಡಬೇಕು. ಆತನು ಮಹಾಪುರುಷನಾಗಿ ಪರಾತ್ಪರನ ಕುಮಾರನೆನಿಸಿಕೊಳ್ಳುವನು; ಇದಲ್ಲದೆ ದೇವರಾಗಿರುವ ಕರ್ತನು ಆತನ ಮೂಲಪಿತನಾದ ದಾವೀದನ ಸಿಂಹಾಸನವನ್ನು ಆತನಿಗೆ ಕೊಡುವನು. ಆತನು ಯಾಕೋಬನ ವಂಶವನ್ನು ಸದಾಕಾಲ ಆಳುವನು; ಆತನ ರಾಜ್ಯಕ್ಕೆ ಅಂತ್ಯವೇ ಇಲ್ಲ, ಎಂದು ಹೇಳಿದನು. ಮರಿಯಳು ಆ ದೂತನನ್ನು– ಇದು ಹೇಗಾದೀತು? ನಾನು ಪುರುಷನನ್ನು ಅರಿತವನಲ್ಲವಲ್ಲ ಎಂದು ಹೇಳಿದ್ದಕ್ಕೆ ದೂತನು– ನಿನ್ನ ಮೇಲೆ ಪವಿತ್ರಾತ್ಮ ಬರುವುದು; ಪರಾತ್ಪರನ ಶಕ್ತಿಯು ನೆರಳು ನಿನ್ನ ಮೇಲೆ ಬೀಳುವುದು; ಆದುದರಿಂದ ಹುಟ್ಟುವ ಆ ಪವಿತ್ರ ಶಿಶು ದೇವರ ಮಗನೆನಿಸಿಕೊಳ್ಳುವುದು" ೧೭ ಎಂಬ ವಿಷಯವನ್ನು ಹೊಸ ಒಡಂಬಡಿಕೆಯಲ್ಲಿ ಕಾಣಬಹುದು.

ಮಾನವನಾಗಿರುವ ಯೇಸುಕ್ರಿಸ್ತರು ದೇವರಾಗಿರುವುದು ಹೇಗೆ? ಎಂದು, ಅಂದು ಯೆಹೂದಿಯರು ಕೇಳಿದ ಪ್ರಕಾರ ಇಂದು ಅನೇಕರು ಕೇಳಬಹುದು, ಅರ್ಥಾತ್ ಸರ್ವಶಕ್ತ ದೇವರಿಗೆ ಮಾನವರೂಪ ಹೊಂದುವುದು ಅಸಾಧ್ಯವೆಂದಾಯಿತು. ಇದು ಅಸಾಧ್ಯವಾದರೆ ಸರ್ವಶಕ್ತ ದೇವರು ನಿಜವಾಗಿಯೂ ಸರ್ವಶಕ್ತರೇ? ಮಾನವರೂಪದಲ್ಲಿದ್ದ ದೇವಕುಮಾರರ ಜೀವನದ ಗೂಢಾರ್ಥವನ್ನು ತಿಳಿದುಕೊಳ್ಳುವುದು ನಮಗೆ ಅಸಾಧ್ಯವಾದರೂ ಗೂಢಾರ್ಥವೇ ಇಲ್ಲವೆಂದು ಹೇಳುವುದು ವಿಚಾರಹೀನತೆ.

ದೇವಕುಮಾರನು ಮಾನವ ರೂಪದಲ್ಲಿ ಯೇಸುಕ್ರಿಸ್ತರಾಗಿ ಜನಿಸಿದ್ದು ದೇವರ ಜ್ಞಾನವನ್ನು ಮಾನವ ಕುಲಕ್ಕೆ ಕೊಡುವುದಕ್ಕಾಗಿ ಮನುಷ್ಯರಾಗಿ ಜನಿಸಿದ ಅವರು ಪಿತನೊಂದಿಗೆ ಒಂದೇ ದೇವರಾದ ಕಾರಣ ಯೇಸುಕ್ರಿಸ್ತರ ಜ್ಞಾನವೇ ದೇವರ ಜ್ಞಾನ. ಇದಕ್ಕಾಗಿಯೇ ಅವರು ಫಿಲಿಪ್ಪನಿಗೆ ಹೇಳಿದ್ದು "ಫಿಲಿಪ್ಪನೇ ನಾನು ಇಷ್ಟು ದಿವಸ ನಿಮ್ಮ ಸಂಗಡ ಇದ್ದರೂ ನೀನು ಇನ್ನೂ ನನ್ನನ್ನು ಅರಿತುಕೊಳ್ಳಲಿಲ್ಲವೇ. ನನ್ನನ್ನು ನೋಡಿದ

---

೧೭ Luke, 1: 30–35

ವನು ತಂದೆಯನ್ನು ನೋಡಿದ್ದಾನೆ"[೧೮]; ಯೇಸು, ದೇವರ ಜ್ಞಾನವನ್ನು ಮಾನವನಿಗೆ ಕೊಡುವುದಕ್ಕಾಗಿ ಮಾತ್ರವಲ್ಲ ಅವನಿಗೆ ಮಾದರಿಯಾಗಿ ಜೀವಿಸುವುದಕ್ಕಾಗಿಯೂ ಮನುಷ್ಯ ರಾದರು.

ಯೇಸುವಿನಂತೆ ಜೀವಿಸುವುದು ಕ್ರೈಸ್ತರ ಆದ್ಯಕರ್ತವ್ಯ. "ದೇವರು ಪ್ರೀತಿ ಸ್ವರೂಪಿ; ಪ್ರೀತಿಯಲ್ಲಿ ನೆಲೆಗೊಂಡಿರುವವನು ದೇವರಲ್ಲಿ ನೆಲೆಗೊಂಡಿದ್ದಾನೆ, ದೇವರು ಅವನಲ್ಲಿ ನೆಲೆಗೊಂಡಿದ್ದಾನೆ"[೧೯]. ಪ್ರೀತಿಯ ಜೀವನವೇ ಕ್ರೈಸ್ತಜೀವನದ ರೂಪ, ಮಾನವ ದೇವರನ್ನು ಪ್ರೀತಿಸುವುದು ಮಾತ್ರವಲ್ಲ ಪರರನ್ನೂ ತನ್ನಂತೆಯೇ ಪ್ರೀತಿಸಬೇಕು. "ನಿಮ್ಮ ನೆರೆಯವರನ್ನು ನಿಮ್ಮಂತೆಯೇ ಪ್ರೀತಿಸಬೇಕು. ನಾನು ಯೆಹೋವನು ನನ್ನ ಆಜ್ಞೆ ಗಳನ್ನು ನೀವು ಅನುಸರಿಸಿ ನಡೆಯಬೇಕು"[೨೦] ಎಂದು ಬೈಬಲಿನ ಯಾಜಕ ಕಾಂಡದಲ್ಲಿ ನಾವು ಓದುತ್ತೇವೆ. ಮಾತ್ರವಲ್ಲ ದೇವರು ಮಾನವಕುಲವನ್ನು ಪ್ರೀತಿಸಿದ ಹಾಗೆ ನಾವೂ ಪರರನ್ನು ಪ್ರೀತಿಸಬೇಕು. "ನಾನು ನಿಮ್ಮನ್ನು ಪ್ರೀತಿಸಿದ ಮೇರೆಗೆ ನೀವೂ ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬುದೇ ನಾನು ಕೊಡುವ ಆಜ್ಞೆಯಾಗಿದೆ. ಪ್ರಾಣವನ್ನೇ ಸ್ನೇಹಿತರಿಗೋಸ್ಕರ ಕೊಡುವ ಪ್ರೀತಿಗಿಂತ ಹೆಚ್ಚಿನ ಪ್ರೀತಿಯು ಯಾವುದೂ ಇಲ್ಲ. ನಾನು ನಿಮಗೆ ಕೊಟ್ಟ ಆಜ್ಞೆಗಳಿಗೆ ಸರಿಯಾಗಿ ನೀವು ನಡೆದರೆ ನೀವು ನನ್ನ ಸ್ನೇಹಿತರು[೨೧] ಎಂದು ಯೇಸುಕ್ರಿಸ್ತರೇ ಒತ್ತಿ ಹೇಳಿದ್ದಾರೆ. "ಒಬ್ಬನು ತಾನು ದೇವರನ್ನು ಪ್ರೀತಿಸುತ್ತೇನೆಂದು ಹೇಳಿ ತನ್ನ ಸಹೋದರನನ್ನು ದ್ವೇಷಿಸಿದರೆ ಅವನು ಸುಳ್ಳುಗಾರನಾಗಿದ್ದಾನೆ. ತಾನು ಕಂಡಿರುವ ತನ್ನ ಸಹೋದರನನ್ನು ಪ್ರೀತಿಸದವನು ತಾನು ಕಾಣದಿರುವ ದೇವರನ್ನು ಪ್ರೀತಿ ಲಾರನು"[೨೨] ಎಂದು ಸುಸಂದೇಶಕಾರನಾದ ಸಂತ ಯೋಹಾನನು ಬೈಬಲಿನಲ್ಲಿ ಹೇಳಿದ್ದಾನೆ.

ಯೇಸುಕ್ರಿಸ್ತರು ದೇವರು ಪ್ರೀತಿ, ಧರ್ಮದ ಜೀವನವು ಪ್ರೀತಿ ಎಂದು ಪ್ರವಚಿ ಸಿದ್ದು ಮಾತ್ರವಲ್ಲ ಅದರ ಪ್ರಕಾರ ತಾವು ಜೀವಿಸಿ ತೋರಿಸಿದರು. ಸಹಜವಾದ ಪ್ರೀತಿಯು ಯೋಚನೆಯಲ್ಲಿ ಮತ್ತು ನುಡಿಯಲ್ಲಿ ಮಾತ್ರ ಅಡಗಿಲ್ಲ ಕ್ರಿಯಾರೂಪದಲ್ಲೂ ಕಾಣಬೇಕು. ಪರಸ್ನೇಹದ ಸಲುವಾಗಿ ಪರೋಪಕಾರವನ್ನೇ ಮಾಡುತ್ತಾ ಯೇಸುಕ್ರಿಸ್ತರು ಜೀವಿಸಿದರು. ಈ ಪರೋಪಕಾರದ ಜೀವನವೇ ಅವರ ಮರಣಕ್ಕೆ ಕಾರಣವಾಯಿತು. ಯೆಹೂದಿ ಧರ್ಮದ ಪುರೋಹಿತರು, ತತ್ವಪಾರಂಗತರು ಬಡಬಗ್ಗರಾದ ಜನರಿಗೆ ಮಾಡುವ ಅನ್ಯಾಯವನ್ನು ಖಂಡಿಸಿದ ನಿಮಿತ್ತ ಅವರು ಯೇಸುಕ್ರಿಸ್ತರನ್ನು ದ್ವೇಷಿಸಿದರು

---

೧೮ John, 14, 9.
೧೯ 1 John 4, 16.
೨೦ Leviticus, 19:18.
೨೧ John 15:12.
೨೨ 1 John, 4:20-21.

ಮಾತ್ರವಲ್ಲ ಶಿಲುಬೆಯ ಮರಣಕ್ಕೆ ಗುರಿಮಾಡಿದರು ಹಾಗೂ ಶಿಲುಬೆಯ ಮೇಲೆ ತೂಗುತ್ತಿರುವಾಗಲೂ ಯೇಸುಕ್ರಿಸ್ತರು ಅವರನ್ನು ಕ್ಷಮಿಸುತ್ತಾ "ತಂದೆಯೇ, ಅವರಿಗೆ ಕ್ಷಮಿಸು; ತಾವು ಏನು ಮಾಡುತ್ತೇವೆಂಬುದನ್ನು ಅರಿಯರು"೨೩ ಎಂದು ತಮ್ಮ ಮರಣಕ್ಕೆ ಕಾರಣರಾದವರಿಗಾಗಿ ಪ್ರಾರ್ಥಿಸಿದರು. ದ್ರೋಹಿಗಳನ್ನು ಕ್ಷಮಿಸುವುದು ಸಹಜ ಪ್ರೀತಿಯ ಲಕ್ಷಣವಲ್ಲವೇ? ಪರಸ್ನೇಹಕ್ಕಾಗಿ ತನ್ನ ತನುಮನಧನವನ್ನು ಮಾತ್ರವಲ್ಲ ತನ್ನ ಪ್ರಾಣವನ್ನೂ ಅರ್ಪಿಸುವಂತಹ ಜೀವನವು ಪರಮಶ್ರೇಷ್ಠವಾಗಿದೆ.

ಸತ್ಯನೀತಿ ಮತ್ತು ಪ್ರೀತಿಗಾಗಿ ಹೋರಾಡಿ ಮರಣ ಹೊಂದಿದ ಯೇಸುಕ್ರಿಸ್ತರು ತಮ್ಮ ಮರಣದ ಮೂರನೇ ದಿವಸ ಪುನರ್ಜೀವಿತರಾದರು. ನಂತರ ನಲವತ್ತು ದಿವಸಗಳ ವರೆಗೆ ಹಲವಾರು ಸಲ ತಮ್ಮ ಅಪೋಸ್ತಲರಿಗೆ ಅನೇಕ ಹಿಂಬಾಲಿಕರಿಗೂ ಕಾಣಿಸಿಕೊಂಡು ನಿಜ ಧರ್ಮದ ದಾರಿಯನ್ನು ತೋರಿಸಿದರು೨೪. ಇದರ ನಿದರ್ಶನದಂತೆ ಸತ್ಯನೀತಿ ಪ್ರೀತಿಗಾಗಿ ಜೀವಿಸಿದವನು ಮರಣ ಹೊಂದಿದರೂ ಪುನರ್ಜೀವಿತನಾಗುತ್ತಾನೆಂಬ ಸತ್ಯದ ಸಾಕ್ಷಿಯನ್ನಿತ್ತರು.

ಸಂಪೂರ್ಣ ಪ್ರೀತಿಯ ಜೀವನ ಸ್ವಾರ್ಥ ಮಾನವನಿಗೆ ಬಲುಕಷ್ಟವಾದರೂ ಪ್ರೀತಿಯಾದ ಪರಮಾತ್ಮನಿಗೆ ಸ್ವಾಭಾವಿಕ. ಯೇಸುಕ್ರಿಸ್ತರು ತಾನು ಪುನರ್ಜೀವತರಾದ ನಲವತ್ತನೇ ದಿವಸ ಸ್ವರ್ಗಾರೋಹಣವಾದರು೨೫. ಅಲ್ಲದೆ ಪವಿತ್ರಾತ್ಮರನ್ನು ತಮ್ಮ ಅನುಯಾಯಿಗಳಿಗೆ ಕಳುಹಿಸಿದರು೨೬. ಯಾರ ಜೀವನದಲ್ಲಿ ಪವಿತ್ರಾತ್ಮರು ಪ್ರವೇಶಿಸುತ್ತಾರೆ, ಅವರು ಸತ್ಯನೀತಿ ಪ್ರೀತಿಯ ಜೀವನವನ್ನು ನಡೆಸಲು ಶಕ್ತರಾಗುತ್ತಾರೆ.

ವೀರಶೈವ ಧರ್ಮದ ಸಿದ್ಧಾಂತದ ಪ್ರಕಾರ ಪರಶಿವನೇ ಮಹೋನ್ನತನೂ, ಅನಂತನೂ ಆಗಿದ್ದಾನೆ. "ಹುಟ್ಟುಮೆಟ್ಟೆಂಬುದು ನಿಮ್ಮಲ್ಲಿಲ್ಲ. ನಿಮ್ಮಿಂದ ನೀವೇ ಸ್ವಯಂಭುವಯ್ಯ ಇಂತಾದಿರಯ್ಯ, ಇಂತಾದಿರಯ್ಯ, ನೀವಿಂತಾದಿರಯ್ಯ ನಿಮ್ಮ ಮಹಾತ್ಮೆಯ ನೀವೇ ಬಲ್ಲಿರಿ. ನಿಜಗುರು ಕಪಿಲಸಿದ್ಧ ಮಲ್ಲಿನಾಥಯ್ಯ".೨೭ ಅವನು ಸರ್ವಶಕ್ತನೂ, ಸಚ್ಚಿದಾನಂದನೂ ಆಗಿದ್ದು ಅದ್ವಿತೀಯನಾಗಿದ್ದಾನೆ. "ಇಬ್ಬರು ಮೂವರು ದೇವರೆಂದು ಉಬ್ಬಿ ಮಾತಾಡಬೇಡ, ದೇವನೊಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿ ನೋಡಾ, ಕೂಡಲ

---

೨೩ Luke, 23:34.

೨೪ John, 21

೨೫ Cf Luke 24:50

೨೬ Cf. Acts, 2;1-4.

೨೭ The Vachana Sastra Sara, p. 13 as quoted by S. C. NANDIMATH, A Hand book of Veerasaivism, Dharwar, 1942, p. 251.

ಸಂಗಮದೇವನೊಬ್ಬನೇ ಅಲ್ಲದೆ ಇಬ್ಬರಿಲ್ಲವೆಂದಿತ್ತುದಾವೇದವು"೨೮. ಆತನೇ ಸಕಲಕ್ಕೂ ಪರಮಕಾರಣನಾಗಿರುವನು. ಸ್ವಶಕ್ತಿಯಿಂದಲೇ ಜಗತ್ತನ್ನು ಸೃಷ್ಟಿಸಿದನು. ಅವನು ಅಪರಿಮಿತನು. "ಆದಿಯಿಲ್ಲದ ಬಯಲು, ಅನಾದಿಯಿಲ್ಲದ ಬಯಲು, ಶೂನ್ಯವಿಲ್ಲದ ಬಯಲು, ನಿಶ್ಶೂನ್ಯವಿಲ್ಲದ ಬಯಲು, ಸುರಾಳವಿಲ್ಲದ ಬಯಲು, ನಿರಾಳವಿಲ್ಲದ ಬಯಲು, ಸಾವಯವಿಲ್ಲದ ಬಯಲು, ನಿರವಯವಿಲ್ಲದ ಬಯಲು ಅಖಂಡೇಶ್ವರನೆಂಬ ಬಯಲಲ್ಲಿಯ ಬಯಲು ಮಹಾಘನ ಬಚ್ಚಬರಿಯ ಬಯಲೊಳಗೆ ಎಚ್ಚರವಡಗಿ, ನಾನೆತ್ತಹೋದೆನೆಂದರಿಯೆ"೨೯ ಮತ್ತೊಂದು ವಚನದಲ್ಲಿ ಈ ವಿಷಯವನ್ನು ಮಡಿವಾಳ ಮಾಚಯ್ಯನು ಹೀಗೆ ಹೇಳಿರುವನು "ಆದಿ ಅನಾದಿ ಇಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶೂನ್ಯವಿಲ್ಲದಂದು, ಸಚರಾಚರವೆಲ್ಲಾ ರಚನೆಗೆ, ಬಾರದಂದು ಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ". ಪರಶಿವನು ಸರ್ವಾಂತರ್ಯಾಮಿಯಾಗಿದ್ದಾನೆ. "ಗಿರಿಗಳ ಗುಹೆಗಳ ಗುಹೆಗಳ ಕಂದರದಲ್ಲಿ ನೆಲಹೊಲದಲ್ಲಿ ಇಪ್ಪೆ, ದೇವಾ, ಎಲ್ಲಿ ನೋಡಿದರಲ್ಲಿ ಇಪ್ಪೆ, ದೇವಾ. ಮನಕ್ಕಗಗಮ್ಯ ಅಗೋಚರನಾಗಿ, ಅಲ್ಲಲ್ಲಿ ಎಲ್ಲಿಯೂ ನೀನೇ ಇಪ್ಪೆಯಯ್ಯ, ನಿಮ್ಮನಗಲಕ್ಕೆ ಹರಿವರಿದು ಕಂಡೆ ನಾನು".೩೦

ಮಾನವನು ದೇವರ ಪ್ರತಿಬಿಂಬದಂತೆ ಸೃಷ್ಟಿಸಲ್ಪಟ್ಟಿದ್ದಾನೆಂಬುದು ಕ್ರೈಸ್ತರ ನಂಬಿಕೆ. ದೇವರನ್ನೂ ಪರರನ್ನೂ ಪ್ರೀತಿಸುವುದಕ್ಕಾಗಿಯೂ, ಆ ಪ್ರೀತಿಯ ಜೀವನದ ಫಲವಾಗಿ ಪರಮಾತ್ಮನಲ್ಲಿ ಐಕ್ಯಗೊಳ್ಳುವುದಕ್ಕಾಗಿ ಅವನು ಸೃಷ್ಟಿಸಲ್ಪಟ್ಟನು. ಪರಮಾತ್ಮ ಮತ್ತು ಜೀವಾತ್ಮರ ನಡುವೆ ಅಜಗಜಾಂತರವಿದೆ. ಪರಮಾತ್ಮನು ಸರ್ವಶಕ್ತನಾದರೆ ಜೀವಾತ್ಮ ನಿಶ್ಶಕ್ತ. ಪರಮಾತ್ಮ ಅನಂತನಾದರೆ ಜೀವಾತ್ಮ ಸೃಷ್ಟಿಸಲ್ಪಟ್ಟವನು. ಪರಮಾತ್ಮ ಸರ್ವಾಂತರ್ಯಾಮಿಯಾದರೆ ಜೀವಾತ್ಮ ದೇಹಕ್ಕೆ ಮಾತ್ರ ಸೀಮಿತನು. ಮರಣದಲ್ಲಿ ದೇಹವು ನಶ್ವರವಾದರೆ, ಆತ್ಮವು ಅಮರವಾಗುತ್ತದೆ. ಇಹಲೋಕದಲ್ಲಿ ಸತ್ಯನೀತಿಪ್ರೀತಿಯ ಜೀವನವನ್ನು ನಡೆಸಿದವನು ಪರಲೋಕದಲ್ಲಿ ಸ್ವರ್ಗೀಯ ಆನಂದಕ್ಕೆ ಪಾತ್ರನಾದರೆ ಸ್ವಾರ್ಥಿಯು ಇದಕ್ಕೆ ಅಪಾತ್ರನು.

ಮಾನವನ ಜೀವನಕ್ಕೆ ಪರಮಾತ್ಮನ ಕೃಪೆಯು ಅತ್ಯಧಿಕ. ದೇವರ ಕೃಪೆಯಿಲ್ಲದೆ ಪುಣ್ಯಜೀವನವನ್ನು ನಡೆಸುವುದೂ, ಮೋಕ್ಷಾನಂದವನ್ನು ಪಡೆಯುವುದು ಅಸಾಧ್ಯ.

ದೇವರ ಪ್ರತಿಬಿಂಬಕ್ಕನುಸಾರವಾಗಿ ಮಾನವ ಸೃಷ್ಟಿತನಾಗಿದ್ದರೂ, ಸತ್ಯಕ್ಕೆ ವಿರುದ್ಧವಾಗಿ ದೇವರ ಕೃಪೆಯನ್ನು ಅನುಗ್ರಹವನ್ನು ತ್ಯಜಿಸಿ ಅಹಂಕಾರದಿಂದ ಅವಿಧೇಯ ಪಾಪ

---

೨೮ Ibid. p. 26 as quoted by S. C. NANDIMATH, Op. Cit. p. 250.

೨೯ Ibid. p. 271 as quoted by S. C. NANDIMATH, Op. Cit. p. 254-255.

೩೦ Ibid. p. 9 as quoted by S. C. NANDIMATH, Op. Cit. p. 250

ವನ್ನೆಸಗಿದನು. ಆದರ ಫಲವಾಗಿ ತನಗೂ ತನ್ನ ಸಂತತಿಗೂ ದೇವರ ಕೃಪೆಯನ್ನು ಕಳೆದುಕೊಂಡನು. ಮಾತ್ರವಲ್ಲದೆ, ಸ್ವಾರ್ಥ, ಅಹಂಕಾರದ ಅನುಭವವನ್ನು ಗಳಿಸಿಕೊಂಡನು. ಇದೇ ಜನ್ಮಪಾಪ[೩೧] ಆದುದರಿಂದಲೇ ಮಾನವ ಕುಲದಲ್ಲಿ ಜನಿಸಿದ ಪ್ರತಿಯೊಬ್ಬನಿಗೂ ಸ್ವಾರ್ಥ ಮತ್ತು ಅಹಂ ಹುಟ್ಟುಗುಣವಾಗುತ್ತದೆ. ಇದು ಸತ್ಯ ಮತ್ತು ಪ್ರೀತಿಗೆ ವಿರುದ್ಧ ವಾಗಿದೆ. ಆ ದುರ್ಗುಣಗಳನ್ನು ತ್ಯಜಿಸಿ ಸದ್ಗುಣಗಳ ಮಾರ್ಗದಲ್ಲಿ ಜೀವಿಸುವುದೇ ಮಾನವನ ಆದ್ಯ ಕರ್ತವ್ಯ. ಯೇಸು ಕ್ರಿಸ್ತರು ಈ ಸದ್ಗುಣಗಳ ಮೇಲ್ಪಂಕ್ತಿ. ಇವರಲ್ಲಿ ದೇವರ ಮತ್ತು ಮನುಷ್ಯನ ಸ್ವಭಾವಗಳ ಐಕ್ಯತೆಯ ಫಲವಾಗಿ ಎಲ್ಲಾ ಸದ್ಗುಣಗಳೂ ಸಂಪೂರ್ಣತೆ ಪಡೆದಿವೆ. ಈ ಐಕ್ಯತೆಯೇ ಮಾನವನಲ್ಲಿ ಜೀವಾತ್ಮ ಪರಮಾತ್ಮಗಳ ಐಕ್ಯತೆಯ ಮೇಲ್ಪಂಕ್ತಿ. ಈ ಐಕ್ಯತೆಯನ್ನು ಭೂಲೋಕದಲ್ಲಿರುವಾಗಲೇ ಮನುಷ್ಯನು ದೇವರ ಕೃಪೆಯಿಂದ ಪಡೆದುಕೊಂಡರೆ ಅದು ಜೀವನ್ಮುಕ್ತಿ. ಮರಣದ ನಂತರ ಪಡೆದು ಕೊಂಡರೆ ಅದು ವಿದೇಹನ್ಮುಕ್ತಿ, ಜೀವನ್ಮುಕ್ತಿ ಮತ್ತು ವಿದೇಹನ್ಮುಕ್ತಿ ಪಡೆದರೂ ಮಾನವ ಎಂದಿಗೂ ದೈವತ್ವವನ್ನು ಪಡೆಯಲಾರ. ಆದರೂ ದೇವರ ಪ್ರತಿಬಿಂಬದ ಸಂಪೂರ್ಣತೆಯನ್ನು ಹೊಂದಿ ಪ್ರಜ್ವಲಿಸುತ್ತಾನೆ.

ವೀರಶೈವ ಧರ್ಮದ ಪ್ರಕಾರ ಜೀವಾತ್ಮ ಪರಮಾತ್ಮನ ಒಂದು ಅಂಶ. ಪರಮಾತ್ಮ ನಿಂದಲೇ ಜೀವಾತ್ಮನ ಪ್ರಾರಂಭ. ಭೇದ–ಅಭೇದ ತರ್ಕದ ಪ್ರಕಾರ ಜೀವಾತ್ಮವು ಸಂಪೂರ್ಣವಾಗಿದೆ. ಅಥವಾ ಪರಮಾತ್ಮನಿಂದ ಸಂಪೂರ್ಣ ವಿಭಿನ್ನವಾಗಿದೆಯೆಂದು ಹೇಳಲು ಅಸಾಧ್ಯ. ಬೆಂಕಿಯಿಂದ ಹೊರಬಿದ್ದ ಒಂದು ಕಿಡಿಯು ಹೇಗೆ ಬೆಂಕಿಯ ಸತ್ವ ವನ್ನೇ ಒಳಗೊಂಡಿರುವುದೋ ಹಾಗೆಯೇ ಪರಮಾತ್ಮನಿಂದ ಪ್ರಾರಂಭವಾದ ಜೀವಾತ್ಮಕ್ಕೆ ಪರಮಾತ್ಮನ ಅದೇ ಸತ್ವವಿರುತ್ತದೆ. ಶಾಖ, ಶಕ್ತಿ ಮತ್ತು ಬೆಳಕು ಬೆಂಕಿಯಲ್ಲೂ ಅದರ ಕಿಡಿಯಲ್ಲೂ ಇದ್ದರೂ ಬೆಂಕಿಯಲ್ಲಿರುವಷ್ಟು ಪ್ರಮಾಣದಲ್ಲಿ ಅದರ ಕಿಡಿಯಲ್ಲಿರಲಾರದು. ಅಂತೆಯೇ ಜೀವಾತ್ಮನು ಪರಮಾತ್ಮನ ಒಂದಂಶವಾದರೂ ಪರಮಾತ್ಮನ ಸರ್ವಶಕ್ತಿ, ಸದ್ಗುಣಗಳು ಜೀವಾತ್ಮದಲ್ಲಿ ಆ ಪ್ರಮಾಣದಲ್ಲಿರಲಾರದು ಅಜ್ಞಾನದ ಫಲವಾಗಿ ಜೀವಾತ್ಮನು ಪರಮಾತ್ಮನಿಂದ ವಿಭಿನ್ನನಾಗಿದ್ದಾನೆ. ಈ ಅಜ್ಞಾನವನ್ನು ತ್ಯಜಿಸಿದರೆ ಪರಮಾತ್ಮನ ಪ್ರಕಾರವೇ ಸದ್ಗುಣಿಯಾಗುತ್ತಾನೆ, ಇದೇ ಜೀವಾತ್ಮನ ಮುಕ್ತಿ.

ಕ್ರೈಸ್ತ ಸಿದ್ಧಾಂತದ ಪ್ರಕಾರ ಜಗತ್ತು ಮಾಯೆಯೂ ಅಲ್ಲ, ಕೆಟ್ಟದೂ ಅಲ್ಲ, ಮಾನವನಿಗಾಗಿ ದೇವರಿಂದ ಅದು ಸೃಷ್ಟಿಸಲ್ಪಟ್ಟಿದೆ. ಜಗತ್ತಿನಲ್ಲಿರುವ ಎಲ್ಲಾ ವಸ್ತು ಗಳೂ ಮಾನವನ ಸುಖ ಸಂತೋಷಕ್ಕಾಗಿ ದೇವರು ನೀಡಿರುವ ಕೃಪೆ. ಈ ಸೃಷ್ಟಿಯನ್ನು ರೂಪಾಂತರಗೊಳಿಸಿ ತನ್ನ ಸೌಲಭ್ಯಕ್ಕೆ ಅನುಗುಣವಾಗಿ ಮಾರ್ಪಡಿಸಿಕೊಳ್ಳುವುದು ಮಾನವನ ಕರ್ತವ್ಯ. ಈ ಕರ್ತವ್ಯದ ಫಲವೇ ಇಂದು ನಾವು ಅನುಭವಿಸುತ್ತಿರುವ ಸಾಂಸ್ಕೃತಿಕ, ವೈಜ್ಞಾನಿಕ, ತಾಂತ್ರಿಕ ಅಭಿವೃದ್ಧಿಗಳು. ದೇವರು ಜಗತ್ತನ್ನು ಜನಾಂಗಕ್ಕಾಗಿ

೩೧ Cf. Genesis, 3.

ಸೃಷ್ಟಿಸಿದರೂ, ಮಾನವನನ್ನು ಮಾತ್ರ ತನಗಾಗಿ ಸೃಷ್ಟಿಸಿದನು. ಜಗತ್ತಿನ ಸೃಷ್ಟಿಗಳನ್ನು ಅನುಭವಿಸಿ ಆನಂದಿಸುವಾಗ ಪರಮಾತ್ಮನನ್ನು ಮರೆತು ಬಿಡಲು ಮಾನವನು ಪ್ರೇರಿತನಾಗ ಬಹುದು. ಆದರೆ ಸತ್ಯದಿಂದ ಪ್ರೇರಿತವಾದ ಧರ್ಮ ಪ್ರಜ್ಞೆಯು ತನ್ನನ್ನು ಪರಮಾತ್ಮನಿಗೆ ಸಮರ್ಪಿಸಲು ಉತ್ತೇಜಿಸುತ್ತದೆ.

ವೀರಶೈವ ಸಿದ್ಧಾಂತದ ಪ್ರಕಾರವೂ ಜಗತ್ತು ದೇವರಿಂದ ಸೃಷ್ಟಿಸಲ್ಪಟ್ಟದ್ದು. ಅಲ್ಲಮಪ್ರಭುವಿನ ೨೯ ನೇ ವಚನವು ಮಾಯೆಯ ಸ್ವರೂಪವನ್ನು ಖಚಿತವಾಗಿ ಗುರ್ತಿಸು ತ್ತದೆ. ಹೊನ್ನು, ಹೆಣ್ಣು ಮಣ್ಣನ್ನು ಮಾಯೆ ಎಂದುಕೊಳ್ಳುವುದನ್ನು ಕ್ರಮವಾಗಿ ಅಲ್ಲಗಳೆದು "ಮನದ ಮುಂದಣ ಆಸೆಯೇ ಮಾಯೆ" ಎಂಬುದನ್ನು ಸ್ಪಷ್ಟೀಕರಿಸಿದ್ದಾನೆ. ಆಸೆಯೇ ಇಲ್ಲದಿದ್ದಲ್ಲಿ ಈ ಮೂರೂ, ವ್ಯಕ್ತಿಯನ್ನು ಸ್ವಲ್ಪವೂ ಚಲಿಸಲಾರದೆಂಬುದು ಅಭಿವ್ಯಕ್ತವಾಗಿದೆ. ಮಾಯೆಯನ್ನು ನಿಯಂತ್ರಿಸುವ ಶಕ್ತಿ ನಮ್ಮಲ್ಲಿಯೇ ಇದೆಯೆಂಬ ಸೂಚನೆ ಇಲ್ಲಿದೆ. ಹೇಗೆ ಅಶ್ವಥ ವೃಕ್ಷವು ಅದರ ಒಂದು ಸಣ್ಣ ಬೀಜದಲ್ಲಡಗಿದೆಯೋ ಹಾಗೆಯೇ ಇಡೀ ಸೃಷ್ಟಿಯು ಬ್ರಹ್ಮನಲ್ಲಡಗಿದೆ.

ಪ್ರತಿಯೊಂದು ಧರ್ಮವು ಮಾನವ ಸಮಾಜದ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ. ಮಾನವನಿಗಾಗಿಯೇ ಸ್ಥಾಪಿಸಲ್ಪಟ್ಟ ಧರ್ಮದ ಉದ್ದೇಶ ಅವನ ಮುಕ್ತಿ ಸಮಾಜ ಜೀವಿಯಾದ ಮಾನವನು ತನ್ನ ಮುಕ್ತಿಯನ್ನು ಪಡೆಯುವುದಾದರೂ ತನ್ನ ಸಮಾಜದಲ್ಲಿಯೇ ಅಲ್ಲವೆ? ಆದುದರಿಂದ ಧಾರ್ಮಿಕ ಮತ್ತು ಸಾಮಾಜಿಕ ಜೀವನಗಳು ನಿಕಟ ಸಂಪರ್ಕವನ್ನು ಹೊಂದಿರುತ್ತವೆ. ಮಾತ್ರವಲ್ಲ ಇತಿಹಾಸದ ಪ್ರಕಾರ ನೋಡುವು ದಾದರೆ ಎಲ್ಲಾ ಧರ್ಮಗಳೂ ಸಾಮಾಜಿಕ ಜೀವನವನ್ನು ಉದ್ಧರಿಸಿ ಮಾನವನ ಮುಕ್ತಿ ಗಾಗಿಯೇ ಸ್ಥಾಪಿಸಲ್ಪಟ್ಟಿವೆ. ಧರ್ಮವು ಬರೀ ಸಾಹಿತ್ಯವಲ್ಲ-ಜೀವನದ ರೀತಿಯಾಗಿದೆ. ಜೀವನದ ರೀತಿಯನ್ನು ಅರಿಯುವುದು ಧಾರ್ಮಿಕ ತತ್ವವನ್ನು ತಿಳಿದುಕೊಳ್ಳುವಷ್ಟು ಸುಲಭವಲ್ಲ. ಆದರೂ ಈ ತತ್ವಗಳನ್ನು ತಿಳಿದುಕೊಂಡಾಗ ಜೀವನದ ರೀತಿಯಲ್ಲಿ ಬದಲಾವಣೆ ಮಾಡಿಕೊಳ್ಳಲು ಸಾಧ್ಯ.

ಸಮಾಜದ ಉದ್ಧಾರವೇ ವೀರಶೈವ ಧರ್ಮದ ಉಗಮ ಮತ್ತು ಉದ್ದೇಶ. ಈ ಧರ್ಮದ ಉಗಮದ ಕಾಲದಲ್ಲಿ ವೈದಿಕ ಧರ್ಮದಲ್ಲಿ ಅನೇಕ ಕುಂದು ಕೊರತೆಗಳಿದ್ದವು- ಜಾತೀಯತೆ, ಸ್ತ್ರೀಯರ ಶೋಷಣೆ ಮೂಢನಂಬಿಕೆಗಳು, ಯಜ್ಞ ಯಾಗಾದಿಗಳಲ್ಲಿ ನಡೆಸುವ ಹಿಂಸೆ, ಡಂಬಾಚಾರಗಳು ಇತ್ಯಾದಿ. ಅದರಂತೆ ವರ್ಣಾಶ್ರಮ ಧರ್ಮದ ಪ್ರಕಾರ ಹುಟ್ಟಿನ ವೃತ್ತಿಗಳನ್ನೇ ಮಾಡಬೇಕಾಗಿತ್ತು. ಅಂತೆಯೇ ಬ್ರಾಹ್ಮಣನು ವೇದ ಪಾರಾಯಣಕ್ಕಾಗಿಯೂ, ಕ್ಷತ್ರಿಯನು ಯುದ್ಧ ಮಾಡುವುದಕ್ಕಾಗಿಯೂ ವೈಶ್ಯನು ವ್ಯಾಪಾರ ಮಾಡುವುದಕ್ಕಾಗಿಯೂ, ಶೂದ್ರನು ಸೇವೆ ಮಾಡುವುದಕ್ಕಾಗಿಯೂ ಜನಿಸಿರು ವನು. ಈ ತತ್ವವನ್ನು ಖಂಡಿಸಿ ಪ್ರತಿಯೊಬ್ಬನೂ ತನ್ನ ಅರ್ಹತೆ ಮತ್ತು ಅವಶ್ಯಕತೆ

ಗಳಿಗನುಸಾರವಾಗಿ ಯಾವ ವೃತ್ತಿಯನ್ನಾದರೂ ಕೈಗೊಳ್ಳಬಹುದೆಂದು ವೀರಶೈವ ಧರ್ಮವು ಬೋಧಿಸುತ್ತದೆ. ನಿಮ್ಮ ಮತ್ತು ನಿಮ್ಮ ಶರಣರ ನಾಮದಲ್ಲಿ ನಾನು ನಿಮ್ಮನ್ನು ಪ್ರಾರ್ಥಿಸುವುದೇನೆಂದರೆ ನಿಮ್ಮ ಭಕ್ತಾದಿಗಳು ನನ್ನಲ್ಲಿಗೆ ಬಂದಾಗ ಅವರ ಕುಲವನ್ನು ಕೇಳುವ ನೀಚತನವನ್ನು ಕೊಡಬೇಡಿ ಬ್ರಾಹ್ಮಣನಿಂದ ಶೂದ್ರನವರೆಗೆ ಎಲ್ಲರೂ ಸರಿ ಸಮಾನರು ಎಂಬ ಬಸವೇಶ್ವರರ ಮೊರೆ ನಮಗೆಲ್ಲರಿಗೂ ಕೇಳಿಸುತ್ತದೆ.

ಸ್ತ್ರೀಯರಿಗೆ ಪುರುಷರೊಂದಿಗೆ ಸರಿಸಮಾನವಾದ ಹಕ್ಕಿರಲಿಲ್ಲ. ಅವರು ಏನಿದ್ದರೂ ನಾಲ್ಕು ಗೋಡೆಗಳ ಮಧ್ಯೆ ಮನೆಯೊಳಗೇ ಇರಬೇಕಾಗಿತ್ತು. ತಾಯಿಯನ್ನು ಅಸ್ಪೃಶ್ಯ ಳೆಂದು ಪರಿಗಣಿಸಲಾಗಿತ್ತು. ಪೂಜೆ ಆರಾಧನೆಗಳಿಗೆ ಅವಳಿಗೆ ಅನುಮತಿ ಇರಲಿಲ್ಲ. ಆದರೆ ವೀರಶೈವ ಧರ್ಮವು ಇವುಗಳನ್ನೆಲ್ಲಾ ಪ್ರತಿಭಟಿಸಿ ಸ್ತ್ರೀ ಪುರುಷರಿಗೆ ಸರಿಸಮಾನ ವಾದ ಗೌರವ, ಪ್ರಾಶಸ್ತ್ಯ ಶಿಕ್ಷಣ ಮತ್ತು ಧಾರ್ಮಿಕ ಬೋಧನೆಯ ಅವಕಾಶವು ದೊರೆಯ ಬೇಕೆಂದು ಸಾರುತ್ತದೆ.

ವೈದಿಕ ಧರ್ಮದಲ್ಲಿದ್ದ ಮೂಢನಂಬಿಕೆ, ಆಚರಣೆಗಳು, ಯಜ್ಞಯಾಗಾದಿಗಳಲ್ಲಿ ನಡೆಸುವ ಹಿಂಸೆ, ಢಂಬಾಚಾರಗಳನ್ನು ವೀರಶೈವ ಧರ್ಮವು ಖಂಡಿಸುತ್ತದೆ.

ಕ್ರೈಸ್ತ ಧರ್ಮದ ಉಗಮದ ಕಾಲದಲ್ಲಿ ಯೆಹೂದಿ ಧರ್ಮವು ಪೌರೋಹಿತ್ಯ ಪ್ರಧಾನವಾಗಿಯೂ, ಆಚರಣಾ ವಿಧಿಗಳಿಂದಲೂ, ಸ್ತ್ರೀ ಶೋಷಣೆಯಿಂದಲೂ ಕೂಡಿತ್ತು. ಈ ಪೌರೋಹಿತ್ಯವು ಬಾಹ್ಯಾಚರಣೆಗಳನ್ನು ಹೊಂದಿತ್ತಲ್ಲದೆ ಆಂತರಿಕ ಆಚರಣೆಗಳನ್ನು ಒಳಗೊಂಡಿರಲಿಲ್ಲ. ಯೇಸುಕ್ರಿಸ್ತರು ಆಂತರಿಕ ಜೀವನಕ್ಕೆ ಪ್ರಾಮುಖ್ಯತೆಯನ್ನು ನೀಡಿ ದೇವರು ಅಂತರ್ಯಾಮಿಯಾಗಿದ್ದಾರೆ, ಮಾನವ ದೇಹವು ದೇವರ ಆಲಯ. ಆಂತರಿಕ ಸತ್ಯ ನೀತಿ ಪ್ರೀತಿ ಇಲ್ಲದ ಧರ್ಮವು ವಂಚನೆಯಾಗಿದೆ ಎಂದು ಬೋಧಿಸಿದರು.[೩೨] ಸ್ತ್ರೀಯರು ಶೋಷಿತರಾಗುತ್ತಿದ್ದರು ಮಾತ್ರವಲ್ಲ ಸಕಾರಣವಿಲ್ಲದೆ ವಿಚ್ಛೇದಿಸಲ್ಪಡುತ್ತಿದ್ದರು. ಇವುಗಳ ವಿರುದ್ಧವಾಗಿ ಕ್ರೈಸ್ತ ಧರ್ಮವು ಸ್ತ್ರೀಯರಿಗೆ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ನೀಡಿತು. "ಆಗ ಫರಿಸಾಯರು ಆತನ ಹತ್ತಿರಕ್ಕೆ ಬಂದು ಆತನನ್ನು ಪರೀಕ್ಷಿಸಬೇಕೆಂಬ ಯೋಚನೆಯಿಂದ–ಒಬ್ಬನು ಯಾವುದಾದರೂ ಒಂದು ಕಾರಣದಿಂದ ತನ್ನ ಹೆಂಡತಿಯನ್ನು ಬಿಟ್ಟು ಬಿಡುವುದು ಧರ್ಮವೋ ಹೇಗೆ ಎಂದು ಕೇಳಿದ್ದಕ್ಕೆ ಆತನು–ಮನುಷ್ಯರನ್ನು ನಿರ್ಮಾಣ ಮಾಡಿದವನು ಆದಿಯಿಂದಲೇ ಅವರನ್ನು ಗಂಡು ಹೆಣ್ಣಾಗಿ ನಿರ್ಮಿಸಿ ಅವರ ವಿಷಯದಲ್ಲಿ ಈ ಕಾರಣದಿಂದ ಪುರುಷನು ತಂದೆ–ತಾಯಿಗಳನ್ನು ಬಿಟ್ಟು ತನ್ನ ಹೆಂಡತಿ ಯನ್ನು ಸೇರಿಕೊಳ್ಳುವನು. ಅವರಿಬ್ಬರೂ ಒಂದೇ ಶರೀರವಾಗಿರುವರು ಎಂದು ಹೇಳಿದ ನೆಂಬುದಾಗಿ ನೀವು ಓದಲಿಲ್ಲವೋ? ಹೀಗಿರುವಲ್ಲಿ ಅವರು ಇನ್ನು ಇಬ್ಬರಲ್ಲಿ ಒಂದೇ ಶರೀರವಾಗಿದ್ದಾರೆ. ಆದುದರಿಂದ ದೇವರು ಕೂಡಿಸಿದ್ದನ್ನು ಮನುಷ್ಯರು ಅಗಲಿಸ

---

೩೨ Cf. Mathew, ]5-6.

ಬಾರದು ಅಂದನು."[೩೩] ಈ ವಿಷಯವು ಸಂತ ಮತ್ತಾಯ ಬರೆದಿರುವ ಸುಸಂದೇಶದಲ್ಲಿ ದೊರೆಯುತ್ತದೆ.

ಈ ಸುಧಾರಣೆಗಳಿಗಾಗಿ ಸ್ಥಾಪಿಸಲ್ಪಟ್ಟ ಕ್ರೈಸ್ತ ಮತ್ತು ವೀರಶೈವ ಧರ್ಮಗಳಲ್ಲಿ ಯಾವ ಕೆಡಕೂ ಇಲ್ಲವೇ ಎಂದು ಯಾರಾದರೂ ಕೇಳಬಹುದು ಅಥವಾ ಕ್ರೈಸ್ತ ಮತ್ತು ವೀರಶೈವ ಧರ್ಮಗಳು ಈ ಕೆಡುಕುಗಳ ರಹಿತವಾಗಿದೆಯೇ? ದುರಾದೃಷ್ಟವಶಾತ್ ಇಲ್ಲವೆಂದೇ ಹೇಳಬಹುದು. ನಿಜ ಕ್ರೈಸ್ತ ಧರ್ಮವಾಗಲೀ ವೀರಶೈವ ಧರ್ಮವಾಗಲೀ ಈ ಕೆಡುಕುಗಳನ್ನು ಉತ್ತೇಜಿಸುವುದಿಲ್ಲ. ಆದರೆ ಈ ಎರಡೂ ಧರ್ಮಗಳಲ್ಲೂ ಅಂತಹ ಕೆಡುಕುಗಳನ್ನುಳ್ಳ ಜನರನ್ನು ಕೆಲವು ಸಲ ಕಾಣಬಹುದು. ಇಂತಹ ಜನರೇ ಸಹಜವಾದ ಧಾರ್ಮಿಕ ತತ್ವದ ಸಾರವನ್ನು ಮತ್ತು ತಮ್ಮದೇ ಧರ್ಮವನ್ನು ಅವನತಿಗೊಳಿಸುತ್ತಾರೆ.

ಈ ಕೆಡುಕುಗಳ ನಿವಾರಣೆಯಾದರೂ ಹೇಗೆ? ಧಾರ್ಮಿಕ ಸಮಾಜವನ್ನುಳಿಸಿ ಕೊಳ್ಳಲು ರಾಜಕೀಯ ಬದಲಾವಣೆಗಳಿಂದ ಅಸಾಧ್ಯ. ಏಕೆಂದರೆ ಧರ್ಮವು ಮುಖ್ಯವಾಗಿ ಆಂತರಿಕ ಜೀವನಕ್ಕೆ ಸಂಬಂಧಪಟ್ಟದ್ದು. ರಾಜಕೀಯ ಬಾಹ್ಯ ಜೀವನಕ್ಕೆ ಸಂಬಂಧ ಪಟ್ಟದ್ದು. ರಾಜಕೀಯ ಜೀವನದಲ್ಲೂ ಆಂತರಿಕ ಧರ್ಮದ ಅವಶ್ಯಕತೆ ಇದೆ. ಆದರೆ ಈ ಆಂತರಿಕ ಧರ್ಮವನ್ನು ಪಾಲಿಸದಿದ್ದಲ್ಲಿ ರಾಜಕೀಯ ನಿಯಮಗಳ ಪ್ರಭಾವ ಬಲು ಕಡಿಮೆ. ಆದುದರಿಂದ ಧಾರ್ಮಿಕ ಜೀವನವನ್ನು ರಾಜಕೀಯ ತತ್ವಗಳಿಂದ ಬದಲಾಯಿಸು ವುದು ಕಷ್ಟಸಾಧ್ಯ. ಒಂದು ವೇಳೆ ಹಾಗೆ ಪ್ರಯತ್ನಿಸಿದರೂ ಜನರು ವಂಚನೆಯ ಜೀವನ ವನ್ನು ನಡೆಸುವ ಸಂದರ್ಭವೇರ್ಪಡಬಹುದು. ಹತ್ತು ಮಂದಿ ಕೊಲೆಗಾರರಿಗಿಂತಲೂ ಒಬ್ಬ ಠಕ್ಕ ಅಪಾಯಕಾರಿಯಲ್ಲವೇ? ಇದರಿಂದ ಧರ್ಮವು ಅಸಹಾಯಕಾರಿ ಎಂದು ಹೇಳಲಾಗುವುದಿಲ್ಲ. ಆದರೆ ಕಾಲಕ್ರಮೇಣ ಧರ್ಮವು ತನ್ನ ಬೋಧನೆಗಳನ್ನು ಜನರಿಗೆ ನೀಡುತ್ತಾ ನಿಧಾನವಾಗಿ ಅವರನ್ನು ಪರಿವರ್ತಿಸಬಹುದು. ಈ ಪರಿವರ್ತನೆಯನ್ನು ಕ್ರೈಸ್ತ ಮತ್ತು ವೀರಶೈವ ಧರ್ಮಗಳೆರಡರಲ್ಲೂ ಕಾಣಬಹುದು. ಧಾರ್ಮಿಕ ಜೀವನ ಬರೇ ನಿಯಮ ಪಾಲನೆಗೋ ಭಜನೆಯ ಕ್ರಮಕ್ಕೋ ಹೋಲಿಸಲಾಗದು. ಅದು ಮುಖ್ಯವಾಗಿ ಒಂದು ಅನುಭವ. ಈ ಅನುಭವ ಸಾಧಾರಣ ಮಟ್ಟವನ್ನು ಬಿಟ್ಟು ಅನುಭಾವ ಪ್ರಜ್ಞೆ ಯನ್ನು ತಲುಪಲು ಸಾಧ್ಯ. ವೀರಶೈವ ಮತ್ತು ಕ್ರೈಸ್ತ ಧರ್ಮಗಳ ಮೌಲ್ಯವು ಅವುಗಳ ತತ್ವಗಳಲ್ಲಿ ಮಾತ್ರವಲ್ಲ ಆ ಧರ್ಮಗಳ ಅನುಭಾವಿಗಳ ಜೀವನದಲ್ಲೂ ಪ್ರತಿಬಿಂಬಿಸುತ್ತದೆ. ಕ್ರೈಸ್ತ ಮತ್ತು ವೀರಶೈವ ಧರ್ಮಗಳೆರಡರಲ್ಲೂ ಮಾನವನನ್ನು ಒಬ್ಬ ಪ್ರಯಾಣಿಕನಿಗೆ ಹೋಲಿಸಲಾಗಿದೆ. ಅವನ ಪ್ರಯಾಣವು ಧಾರ್ಮಿಕ ಮತ್ತು ಆಂತರಿಕ. ಸಾಮಾನ್ಯ ಜೀವನದಿಂದ ಸಂಪೂರ್ಣ ಜೀವನವೇ ಅವನ ಧ್ಯೇಯ, ಪರಮಾತ್ಮನೇ ಆ ಪ್ರಯಾಣದ ಗುರಿ. ಈ ಪ್ರಯಾಣದಲ್ಲಿ ಹಲವಾರು ನಿಲ್ದಾಣಗಳಿವೆ. ವೀರಶೈವ ಧರ್ಮವು ಈ

---

೩೩ *Ibid.* 19: 3-6.

ನಿಲ್ದಾಣಗಳನ್ನು ಷಟ್‌ಸ್ಥಲ ಸಿದ್ಧಾಂತದಲ್ಲಿ ಸ್ಪಷ್ಟೀಕರಿಸಿದೆ. ಕ್ರೈಸ್ತಧರ್ಮದಲ್ಲಾದರೂ ಹಲವಾರು ಸಂತರು, ಅನುಭಾವಿಗಳೂ ವಿಭಿನ್ನ ಹಂತಗಳಲ್ಲಿ ತಮ್ಮ ದೈವಕೃತೆಯ ಅನುಭವ ಗಳನ್ನು ವಿವರಿಸಿದ್ದಾರೆ. ಕ್ರೈಸ್ತ ಧರ್ಮದಲ್ಲಾಗಲೀ ಅಥವಾ ವೀರಶೈವ ಧರ್ಮದಲ್ಲಾ ಗಲೀ ಒಬ್ಬ ಅನುಭಾವಿ ತನ್ನ ಜೀವನದಲ್ಲಿ ಎಷ್ಟು ವೃದ್ಧಿಗೊಳ್ಳುತ್ತಾನೋ ಅಷ್ಟೇ ಪ್ರಮಾಣದಲ್ಲಿ ಅವನ ಆಂತರಿಕ ಧಾರ್ಮಿಕ ಜೀವನದಲ್ಲೂ ಬದಲಾವಣೆಯಾಗಿ ಪರಮಾತ್ಮನ ದರ್ಶನಕ್ಕೆ ಪಾತ್ರನಾಗುತ್ತಾನೆ. ಅಲ್ಲದೆ ಈ ಬದಲಾವಣೆ ಪರರ ಸೇವೆಯಲ್ಲಿಯೂ ಸತ್ಯ ನೀತಿ ಪ್ರೀತಿಯ ಜೀವನದಲ್ಲಿಯೂ ಅವಿರತವಾಗಿ ಸಾಗುತ್ತದೆ.

ವೀರಶೈವ ಧರ್ಮದ ಷಟ್‌ಸ್ಥಲ ಸಿದ್ಧಾಂತದ ಪ್ರಕಾರ ಅನುಭಾವ ಪ್ರಜ್ಞೆಯಲ್ಲಿ ಆರು ನಿಲ್ದಾಣಗಳಿವೆ; ಭಕ್ತಸ್ಥಲ, ಮಹೇಶಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಸ್ಥಲ, ಶರಣ ಸ್ಥಲ ಮತ್ತು ಐಕ್ಯಸ್ಥಲ.

ಷಟ್‌ಸ್ಥಲ ಸಿದ್ಧಾಂತದ ಪ್ರಕಾರ ಪರಮಾತ್ಮ ಜೀವಾತ್ಮಗಳ ಐಕ್ಯತೆಯೇ ಎಲ್ಲಾ ಸ್ಥಲಗಳ ಮೂಲ ಲಕ್ಷಣ. ಭಕ್ತಸ್ಥಲದಲ್ಲಿ ಅನುಭಾವಿಯು ತನ್ನ ತನುಮನಧನವನ್ನು ಪರಮಾತ್ಮನಿಗೆ ಸಮರ್ಪಿಸುತ್ತಾನೆ ಮತ್ತು ನಿಷ್ಕಳಂಕವಾದ ಭಕ್ತಿಯ ಜೀವನವನ್ನು ಸಾಗಿಸಲು ಬಯಸುತ್ತಾನೆ. ಮಹೇಶಸ್ಥಲದಲ್ಲಿ ತನ್ನ ಭಕ್ತಿಯ ಫಲವಾಗಿ ಪಾಪಗಳಿಂದ ನಿವಾರಿಸಲ್ಪಟ್ಟು ಪಾವನನಾದ ಭಕ್ತನು ಪೂರ್ಣ ಸಂತೃಪ್ತಿಯಿಂದ ವ್ರತ, ನಿಯಮ ಸದ್ಗುಣಗಳನ್ನು ಪಾಲಿಸುತ್ತಾನೆ. ನೈತಿಕತೆ, ಕರ್ತವ್ಯನಿಷ್ಟತೆ, ಸೇವಾ ಮನೋಭಾವನೆ ಮತ್ತು ಅನುಪಮ ಪ್ರೇಮವೇ ಮಹೇಶಸ್ಥಲದಲ್ಲಿರುವ ಅನುಭಾವಿಯ ಸದ್ಗುಣಗಳು. ಪ್ರಸಾದಿಸ್ಥಲದಲ್ಲಿ ಭಕ್ತನು ಕ್ರಿಯಾತ್ಮಕನಾಗಿರುತ್ತಾನೆ. ಪರಮಾತ್ಮನ ಪ್ರೇಮಕ್ಕಾಗಿಯೇ ತನ್ನೆಲ್ಲಾ ಕರ್ತವ್ಯಗಳನ್ನು ಫಲಾಪೇಕ್ಷೆಯಿಲ್ಲದೆ ಪಾಲಿಸುತ್ತಾನೆ. ಈ ಮೂರು ಸ್ಥಲಗಳನ್ನು ಕ್ರಿಯಾತ್ಮಕ ಸ್ಥಲಗಳೆಂದು ಹೇಳಿದರೆ ಇನ್ನುಳಿದ ಮೂರು ಸ್ಥಲಗಳನ್ನು ಜ್ಞಾನಾತ್ಮಕ ಸ್ಥಲ ಗಳೆಂದು ಹೇಳಬಹುದು. ಪ್ರಾಣಲಿಂಗಸ್ಥಲದಲ್ಲಿ ಪರಮಾತ್ಮನೇ ಜೀವಾತ್ಮನ ಪ್ರಾಣವಾಗಿ ರುವುದರಿಂದ ಶಿವನನ್ನು ಪ್ರಾಣಲಿಂಗವೆಂದು ಭಜಿಸುತ್ತಾನೆ. ಶಾಂತಿ, ಸತ್ಯ, ಅಹಿಂಸೆ, ವೈರಾಗ್ಯ, ಧ್ಯಾನ, ಮತ್ತು ವಿಶ್ವಭ್ರಾತೃತ್ವವೇ ಈ ಸ್ಥಲದ ಲಕ್ಷಣ.

ಶರಣಸ್ಥಲದಲ್ಲಿ ಜೀವಾತ್ಮನು ಪರಮಾತ್ಮನಿಗೆ ಸಂಪೂರ್ಣ ಶರಣಾಗುತ್ತಾನೆ ಮತ್ತು ಪರಮಾತ್ಮನನ್ನು ತನ್ನ ಪತಿಯೆಂದು ಭಾವಿಸಿ, ಅವನಲ್ಲೇ ಜೀವಿಸುತ್ತಾನೆ. ಪರಮಾತ್ಮನ ಸಾನ್ನಿಧ್ಯವನ್ನು ಸಂಪೂರ್ಣವಾಗಿ ಅನುಭವಿಸುತ್ತಾ ನಿಸ್ವಾರ್ಥ ಮನೋಭಾವದಿಂದ ಜಾತ್ಯಾತೀತನಾಗಿ ಪರರ ಸೇವೆಯನ್ನು ಮಾಡುತ್ತಾನೆ. ಐಕ್ಯಸ್ಥಲದಲ್ಲಿ ಜೀವಾತ್ಮ ಪರಮಾತ್ಮರ ನಡುವೆ ಅಂತರವಿರುವುದಿಲ್ಲ, ಏಕತ್ವವಿರುತ್ತದೆ. ಪಾಪರಹಿತನಾದ ಜೀವಾತ್ಮ ಅನಂತನಾದ ಪರಮಾತ್ಮನನ್ನು ಸೇರಿ ಸಚ್ಚಿದಾನಂದನಾಗುತ್ತಾನೆ. ಇದೇ ಜೀವನ್ಮುಕ್ತಿ. ಈ ನಿಷ್ಕಳಂಕ, ಪ್ರೇಮಾನಂದಭರಿತ ದಿವ್ಯಜೀವನದಲ್ಲಿ ಪರಮಾತ್ಮನನ್ನು ಅನುಭವಿಸುತ್ತಾ

ಇದ್ದಾಗ ಲೌಕಿಕ ದೇಹದಿಂದ ಬಿಡುಗಡೆಯಾಗಿ ಪರಮಾತ್ಮನ ಅನಂತತೆಯನ್ನು ಹೊಂದುವುದೇ ವಿದೇಹಮುಕ್ತಿ[೭೪].

ಕ್ರೈಸ್ತ ಧರ್ಮಾನುಭಾವಿಯಾದ ಸಂತ ತೆರೇಸ ಈ ಧಾರ್ಮಿಕ ಪ್ರಯಾಣವನ್ನು ಏಳುಸುತ್ತಿನ ಕೋಟೆಗೆ ಹೋಲಿಸಿದ್ದಾಳೆ[೭೫]. ಈ ಕೋಟೆಯೇ ಜೀವಾತ್ಮ. ಆಂತರಿಕ ಜೀವನವೇ ಪ್ರಯಾಣ. ಏಳುಸುತ್ತಿನ ಕೋಟೆಯ ಕೇಂದ್ರವೇ ಪರಮಾತ್ಮ. ಹೀಗೆ ಆತ್ಮದ ಕೇಂದ್ರವೇ ಪರಮಾತ್ಮ. ಆಂತರಿಕ ಮತ್ತು ಧಾರ್ಮಿಕ ಜೀವನವು ಹೊರಗಿನ ಕೋಟೆಯಿಂದ ಒಳಗಿನ ಕೋಟೆಗೆ ಅಭಿಮುಖವಾಗಿ ಪ್ರಯಾಣಿಸುತ್ತದೆ. ಧ್ಯಾನವೇ ಈ ಕೋಟೆಯ ಹೆಬ್ಬಾಗಿಲು. ಪರಮಾತ್ಮನ ಸಾನ್ನಿಧ್ಯ ಸೇರಿ ಅವನಂತೆ ಜೀವಿಸಬೇಕಾದರೆ ಧ್ಯಾನವೇ ಮುಖ್ಯ ಸಾಧನ. ಆದರೆ ದೈನ್ಯತೆ, ವೈರಾಗ್ಯ, ಮತ್ತು ಪ್ರೀತಿಯಿಲ್ಲದೆ ಧ್ಯಾನ ಅಸಾಧ್ಯ[೭೬].

ಮೊದಲ ಮೂರು ಕೋಟೆಗಳನ್ನು ಸಾಧಾರಣವಾದ ಧ್ಯಾನಾನುಭವಕ್ಕೆ ಹೋಲಿಸಿದರೆ ನಾಲ್ಕನೇ ಕೋಟೆಯನ್ನು ಅನುಭಾವ ಪ್ರಜ್ಞೆಯ ಪ್ರಥಮ ಹಂತಕ್ಕೆ ಹೋಲಿಸಲಾಗಿದೆ. ಇಲ್ಲಿ ಪರಮಾತ್ಮನೇ ಜೀವಾತ್ಮನ ಪ್ರೇರಣೆ. ದೇವರ ಪ್ರೀತಿಯೇ ಜೀವಾತ್ಮನ ಆಗ್ರಹ. ಅದಕ್ಕನುಗುಣವಾದ ಬದಲಾವಣೆಗಳನ್ನು ಅನುಭಾವಿಯ ಬಾಹ್ಯ ಜೀವನದಲ್ಲೂ ಕಾಣಬಹುದು. ಈ ಬದಲಾದ ಜೀವನದಲ್ಲಿ ತ್ಯಾಗ, ವಿನಯತೆ, ಪರಸ್ನೇಹಗಳನ್ನು ಬೆಳೆಸಿಕೊಂಡಂತೆ, ಅನುಭಾವ ಪ್ರಜ್ಞೆಯು ವೃದ್ಧಿಸುತ್ತದೆ.

ಉಳಿದ ಮೂರು ಕೋಟೆಗಳನ್ನು ಸ್ತ್ರೀ ಪುರುಷರ ಪ್ರೇಮಕ್ಕೆ ಸಂತ ತೆರೇಸಾ ಹೋಲಿಸಿರುವಳು. ಹೇಗೆ ಸ್ತ್ರೀ ಅಥವಾ ಪುರುಷ ಒಬ್ಬರನ್ನೊಬ್ಬರು ಪ್ರೀತಿಸಿ ಪರಸ್ಪರ ಮಿಲನಕ್ಕೆ ತವಕಿಸುತ್ತಾರೋ ಹಾಗೆಯೇ ಜೀವಾತ್ಮ ಪರಮಾತ್ಮನನ್ನು ಸೇರಲು ಹಂಬಲಿಸುತ್ತದೆ. ಐದನೇ ಕೋಟೆಯನ್ನು ಸದ್ಗುಣಭರಿತವಾದ ಅನುಭಾವ ಪ್ರಜ್ಞೆಗೆ ಹೋಲಿಸಿ ಹೇಗೆ ಪುರುಷನು ತನ್ನ ಪ್ರೇಯಸಿಯನ್ನು ಸಂದರ್ಶಿಸುತ್ತಾನೋ ಹಾಗೆಯೇ ಪರಮಾತ್ಮನು ಈ ಹಂತದಲ್ಲಿ ತನ್ನನ್ನು ಆಗ್ರಹಿಸುವ ಜೀವಾತ್ಮನನ್ನು ದರ್ಶಿಸುತ್ತಾನೆ. ಈ ದರ್ಶನದ ಫಲವಾಗಿ ಆಗಿರುವ ಬದಲಾವಣೆಯನ್ನು ರೇಷ್ಮೆ ಹುಳು ಚಿಟ್ಟೆಯಾಗುವ ಪರಿವರ್ತನೆಗೆ ಹೋಲಿಸಲಾಗಿದೆ. ರೇಷ್ಮೆ ಹುಳು ನಿಧಾನವಾಗಿ ಹರಿದರೆ ಚಿಟ್ಟೆಯು ವೇಗವಾಗಿ ಹಾರುತ್ತದೆ. ಹಾಗೆಯೇ ಈ ಅನುಭಾವಕ್ಕೆ ಮೊದಲು ಜೀವಾತ್ಮದ ಪ್ರಭಾವವು, ನಿಧಾನವಾದರೆ ಅನುಭಾವದ ನಂತರ ತನ್ನ ಪ್ರಿಯಕರನ ಮಿಲನಕ್ಕೆ ವೇಗವಾಗಿ ಹಾರುತ್ತದೆ. ರೇಷ್ಮೆ ಹುಳು

---

೭೪ Cf. S. C. NANDIMATH, Op. Cit. pp. 163-176.

೭೫ Cf. TERESA OF JESUS, **The Complete Works**, Vol. II, pp. 199–351.

೭೬ Cf. Ibid.

ಒರಟು ಎಲೆಯನ್ನು ತಿಂದು ಜೀವಿಸಿದರೆ ಚಿಟ್ಟೆಯು ಕೋಮಲ ಹೂವಿನ ಪರಿಮಳವಾದ ಮಧುರಸವನ್ನು ಹೀರುತ್ತದೆ. ಅದರ ಪ್ರಕಾರ ಈ ಪ್ರಜ್ಞೆಯ ಮೊದಲು ಮಾನವನು ಪ್ರಾಪಂಚಿಕ ಸಂತೋಷದಲ್ಲಿ ಮಗ್ನನಾಗಿದ್ದರೆ ಈ ಪ್ರಜ್ಞೆಯ ನಂತರ ಪರಮಾನಂದದಲ್ಲಿ ಪಾಲ್ಗೊಳ್ಳುತ್ತಾನೆ. ರೇಷ್ಮೆ ಹುಳುವು ನೋಡಲು ಕುರೂಪವಾಗಿದ್ದರೆ ಚಿಟ್ಟೆಯು ಬಣ್ಣ ಬಣ್ಣದ ಚಿತ್ತಾರದಿಂದ ಕೂಡಿ ಸುಂದರವಾಗಿರುತ್ತದೆ. ಅದರಂತೆಯೇ ಅನುಭಾವ ಪ್ರಜ್ಞೆಯ ಮೊದಲು ಜೀವಾತ್ಮವು ಸೃಷ್ಟಿಯ ಸೌಂದರ್ಯವನ್ನು ಗಳಿಸಿದ್ದರೆ ಪ್ರಜ್ಞೆಯ ನಂತರ ದೈವಿಕ ಸೌಂದರ್ಯದಿಂದ ಕಂಗೊಳಿಸುತ್ತದೆ. ರೇಷ್ಮೆ ಹುಳು ಎಲೆ ತಿನ್ನುವುದರಲ್ಲೇ ತೃಪ್ತಿಹೊಂದಿದ್ದರೆ, ಚಿಟ್ಟೆ ಅತೃಪ್ತಿಯಿಂದ ಹೂವಿಂದ ಹೂವಿಗೆ ಹಾರಾಡುತ್ತದೆ. ಅದೇ ಪ್ರಕಾರ ಅನುಭಾವ ಪ್ರಜ್ಞೆ ಹೊಂದುವ ಮೊದಲು ಒಬ್ಬನು ತನ್ನ ಜ್ಞಾನ ಜೀವನದಲ್ಲಿ ತೃಪ್ತಿಹೊಂದಿದ್ದರೆ, ಈ ಪ್ರಜ್ಞೆಯಲ್ಲಿ ದೇವರನ್ನು ಸವಿದ ನಂತರ ಬೇರೆ ಯಾವುದರಲ್ಲಿಯೂ, ಆನಂದವೂ ತೃಪ್ತಿಯೂ ಇಲ್ಲದೆ ದೇವರನ್ನು ಅರಸುತ್ತಾ ಹಾರಾಡುತ್ತಿರುತ್ತದೆ೩೭.

ಅನುಭಾವ ಪ್ರಜ್ಞೆಯ ಆರನೇ ಕೋಟೆಯನ್ನು ಸಂತ ತೆರೇಸಳು ವಿವಾಹ ಪೂರ್ವದ ನಿಶ್ಚಿತಾರ್ಥಕ್ಕೆ ಹೋಲಿಸುತ್ತಾಳೆ. ಹೇಗೆ ಮದುವೆಯಾಗಲಿರುವ ವಧುವರರು ಒಬ್ಬರಿಗೊಬ್ಬರು ವಿವಾಹ ಜೀವನಕ್ಕೆ ಸಮ್ಮತಿಯನ್ನು ನೀಡುತ್ತಾರೆಯೋ ಹಾಗೆಯೇ ಪರಮಾತ್ಮನು ಜೀವಾತ್ಮನನ್ನು,ಜೀವಾತ್ಮನು ಪರಮಾತ್ಮನನ್ನು ಪರಸ್ಪರ ತಮ್ಮದಾಗಿಸಿಕೊಳ್ಳಲು ಪ್ರಮಾಣ ಮಾಡುತ್ತಾರೆ.

ಈ ಐದನೇ ಮತ್ತು ಆರನೇ ಅನುಭಾವ ಪ್ರಜ್ಞೆಯ ಕೋಟೆಗಳಲ್ಲಿ ಜೀವಾತ್ಮನು ಪರಮಾತ್ಮನನ್ನು ಹಂಬಲಿಸಿ ಅನೇಕ ಎಡರುತೊಡರುಗಳನ್ನು ಎದುರಿಸಬೇಕಾಗಿದೆಯಾದರೆ, ಪರಮಾತ್ಮನು ಜೀವಾತ್ಮನನ್ನು ಅನುಗ್ರಹಿಸಿ ಅನೇಕ ವರಪ್ರಸಾದಗಳನ್ನು ನೀಡುತ್ತಾನೆ. ಮಾತ್ರವಲ್ಲ ಕೆಲವು ಸಲ ಅತಿಶಯುವಾದ ದರ್ಶನಗಳಿಂದ ಜೀವಾತ್ಮನನ್ನು ಸಂತೈಸುತ್ತಾನೆ. ಆದರೆ ಪರಮಾತ್ಮನನ್ನೇ ಬಯಸುವ ಜೀವಾತ್ಮನಿಗೆ ಇದರಿಂದ ತೃಪ್ತಿ ಹೊಂದಲು ಅಸಾಧ್ಯ. ಈ ಅನುಗ್ರಹಗಳಿಂದ ತೃಪ್ತಿ ಹೊಂದದ ಜೀವಾತ್ಮ ಸತ್ಯ, ತ್ಯಾಗ, ಪ್ರೀತಿ ಮತ್ತಿತರ ಸದ್ಗುಣಗಳ ಸಂಪೂರ್ಣತೆಯನ್ನು ಹೊಂದಿ ದೇವರನ್ನು ಅಪೂರ್ವ ಪ್ರೇಮದಿಂದ ಆಗ್ರಹಿಸುತ್ತಿರುವಾಗ ಪರಮಾತ್ಮನು ಜೀವಾತ್ಮನನ್ನು ತನ್ನ ಪತ್ನಿಯಾಗಿ ಸ್ವೀಕರಿಸುತ್ತಾನೆ. ಇದೇ ಅನುಭಾವ ಪ್ರಜ್ಞೆಯ ಏಳನೆಯ ಕೋಟೆ. ಇಲ್ಲಿ ಜೀವಾತ್ಮ ಪರಮಾತ್ಮನೊಡನೆ ಏಕತ್ವವನ್ನು ಹೊಂದಿ ಪರಮಾನಂದವನ್ನು ಅನುಭವಿಸುತ್ತದೆ. ಇದೇ ಜೀವನ್ಮುಕ್ತಿ. ಈ ಸ್ಥಿತಿಯಲ್ಲಿ ಜೀವಾತ್ಮ ಸಮಗ್ರ ನಿಷ್ಕಳಂಕವಾಗಿ ತಮ್ಮ ದೈವೀಪತಿಯ ರೂಪವನ್ನು ಸಂಪೂರ್ಣವಾಗಿ ಪ್ರತಿಬಿಂಬಿಸುತ್ತದೆ. ಇದರಿಂದಾಚೆಗೆ ಯಾವ ಪಾಪವನ್ನಾಗಲೀ,

೩೭ Cf. Ibid. pp. 247-268

ಕಳಂಕವನ್ನಾಗಲೀ ಎಸೆಗಲು ಅಸಾಧ್ಯ. ಇಂತಹ ಸ್ಥಿತಿಯಲ್ಲಿರುವಾಗ ಜೀವಾತ್ಮನ ಆಶಾ ಕಾಂಕ್ಷೆ ಒಂದೇ- ಈ ಲೌಕಿಕ ದೇಹವನ್ನು ತೊರೆದು ಪರಮಾತ್ಮನ ಅಲೌಕಿಕ ಜೀವನದಲ್ಲಿ ಲೀನವಾಗುವುದು. ಈ ಸ್ಥಿತಿಯಲ್ಲಿ ಪರಮಾತ್ಮನನ್ನು ಪ್ರೇಮದಿಂದ ಆಗ್ರಹಿಸುತ್ತಿದ್ದಾಗ; ದೈವೀಕ ಪತಿಯಾದ ಪರಮಾತ್ಮನು ತನ್ನ ದೀನ ಪತ್ನಿಯನ್ನು ಅನಂತ ಜೀವನದಲ್ಲಿ ಸ್ವೀಕರಿಸುತ್ತಾನೆ. ಇದೇ ಒಬ್ಬ ಅನುಭಾವಿಯ ನಿಧನ-ವಿದೇಹಮುಕ್ತಿಯ ಪ್ರಾರಂಭ[೩೮].

ಇದೇ ಭಾವನೆಯನ್ನೂ ಸತ್ಯವನ್ನೂ ಅನೇಕ ಕ್ರೈಸ್ತಾನುಭಾವಿಗಳು ತಮ್ಮ ಲೇಖನ ಗ್ರಂಥಗಳಲ್ಲೂ ಜೀವನದ ರೀತಿಗಳಲ್ಲೂ ಕಾಣಿಸಿದ್ದಾರೆ. ಇಂತಹ ಅನುಭಾವಿಗಳಲ್ಲಿ ಸಂತ ಜಾನ್ ಆಫ್‌ದ್ ಕ್ರಾಸ್, ಸಂತ ಪೌಲರು, ತ್ರಿತ್ವದ ಎಲಿಜಬತ್ ಮುಂತಾದವರು ಪ್ರಾಧಾನ್ಯರು[೩೯].

ಪರಮಾತ್ಮ ಜೀವಾತ್ಮರ ಐಕ್ಯತೆಯ ಫಲವಾಗಿ ಪರಿವರ್ತನೆಯನ್ನು ಹೊಂದುವ ಭರವಸೆಯಿಂದ ತಮ್ಮ ಅಂತ್ಯಕ್ರಿಯೆಯ ಸಮಯದಲ್ಲಿ ಕ್ರೈಸ್ತರು ಈ ಪ್ರಾರ್ಥನೆಯನ್ನು ಹೇಳುತ್ತಾರೆ-ಓ, ಪರಮಾತ್ಮನೇ ನಿನ್ನ ಅನುಭಾವಿಗಳ ಮರಣದಲ್ಲಿ ಅವರ ಜೀವವು ನಾಶ ವಾಗುವುದಿಲ್ಲ, ಪರಿವರ್ತಿಸಲ್ಪಡುತ್ತದೆ[೪೦]. ಅಂತಹ ಪರಿವರ್ತನೆ ಹೊಂದಬೇಕಾದರೆ ತನ್ನ ಜೀವನವನ್ನೇ ಪರಮಾತ್ಮನಿಗೂ, ಪರರಿಗೂ ಅರ್ಪಿಸುವುದು ಅವಶ್ಯ. ಹೇಗೆ ಒಂದು ಧಾನ್ಯ ನೆಲದಲ್ಲಿ ಬಿದ್ದರೆ ಮಾತ್ರ ಮೊಳೆತು ಸಸಿಯಾಗಿ ಗಿಡವಾಗಿ ಫಲಕೊಡು ವುದೋ ಅದೇ ಪ್ರಕಾರ ನಿಸ್ವಾರ್ಥದಿಂದ, ದೀನತೆಯಿಂದ ತನ್ನನ್ನೇ ಪರರಿಗಾಗಿ ಪರಿತ್ಯಾಗ ಮಾಡುವ ಅನುಭಾವಿಗಳೇ ಪರಮಾತ್ಮನಲ್ಲಿ ಫಲಭರಿತರಾಗುತ್ತಾರೆ. ಇದೇ ಯೇಸುಕ್ರಿಸ್ತರ ಶಿಲುಬೆಯಮರಣದ ಮತ್ತು ಪುನಃರುತ್ಥಾನದ ಅರ್ಥ.

ಯೇಸು ಕ್ರಿಸ್ತರಂತೆ ಪ್ರತಿಯೊಬ್ಬನೂ ತನ್ನ ಮರಣದಿಂದ ಪುನಃರುತ್ಥಾನವಾಗುವ ನೆಂಬುದು ಕ್ರೈಸ್ತ ಧರ್ಮದ ನಂಬಿಕೆ. ಇಹಲೋಕದಲ್ಲಿ ಸತ್ಯ ನೀತಿ ಪ್ರೀತಿಯಲ್ಲಿ ಪರ ರೊಡನೆ ಮತ್ತು ಪರಮಾತ್ಮರೊಡನೆ ಐಕ್ಯವಾಗಿ ಜೀವಿಸಿದವರು ಸ್ವರ್ಗೀಯ ಜೀವನದ ಸಚ್ಚಿದಾನಂದವನ್ನು ಅನುಭವಿಸಿದರೆ ಅಹಂ, ವಂಚನೆ, ಮೋಸ, ಲೋಭ, ಮೋಹ, ಮದಮಾತ್ಸರ್ಯಗಳಿಂದ ಇಹಲೋಕದಲ್ಲಿ ದುರ್ಮಾರ್ಗದಲ್ಲಿ ಜೀವಿಸಿದವರಿಗೆ ಆ ಪರಮಾ ನಂದದ ಭಾಗ್ಯ ದಕ್ಕುವುದಿಲ್ಲ. ಆದರೆ ತಮ್ಮ ಜೀವನ ದರ್ಶನದಿಂದ ದುಷ್ಟರನ್ನು ಪರಿವರ್ತಿಸಲು ಪ್ರಯತ್ನಿಸುವುದು ಶಿಷ್ಟರ ಕರ್ತವ್ಯ.

ಧಾರ್ಮಿಕ ತತ್ವಗಳ ತರ್ಕವನ್ನು ಬಿಟ್ಟರೂ ಒಬ್ಬ ವೀರಶೈವ ಮತಾವಲಂಬಿಯ

---

೩೮ Cf Ibid. pp. 329-351

೩೯ Cf. GREGORY D'SOUZA, *Transforming Flame*, Divya Jyothi Publications, Mysore, 1988.

೪೦ Cf. *Romman Missal*, NBCLC, Bangalore, p. 453

ಅಂತ್ಯ ಸಂಸ್ಕಾರವನ್ನು ನೋಡಿದರೆ ಸಾಕು, ನಿಧನವಾದ ವ್ಯಕ್ತಿಯ ಪಾರ್ಥಿವ ಶರೀರ ವನ್ನು ಹೂಗಳಿಂದ ಅಲಂಕರಿಸಿ ವಿಜೃಂಭಣೆಯಿಂದಲೂ, ಸಂತೋಷದಿಂದಲೂ ಅಂತ್ಯ ಸಂಸ್ಕಾರಕ್ಕೆ ಮೆರವಣಿಗೆಯಲ್ಲಿ ಕೊಂಡುಹೋಗುವ ಅರ್ಥವಾದರೂ ಏನು? ಪಾಪ ಗಳನ್ನೂ, ಸಂಕಷ್ಟಗಳನ್ನೂ ತೊರೆದು ಪರಮಾತ್ಮನಲ್ಲಿ ಲೀನವಾದ ಅನುಭಾವಿಯ ಆನಂದದಲ್ಲಿ ಪಾಲುಗೊಳ್ಳುವ ಸಂತೋಷವಲ್ಲವೆ?

ಈ ಲೇಖನದಲ್ಲಿ ವೀರಶೈವ ಮತ್ತು ಕ್ರೈಸ್ತ ಧರ್ಮಗಳನ್ನು ಕುರಿತು ಬರೆಯು ಲಾಗಿದೆ. ಈ ಧರ್ಮಗಳ ಅನೇಕ ವಿಷಯಗಳು ಸಾಮಾನ್ಯವಾಗಿ ಹೋಲಿಕೆಯಾಗಿದೆ ಯಾದರೂ ಕೆಲವು ವ್ಯತ್ಯಾಸಗಳೂ ಕಂಡು ಬರುತ್ತವೆ. ಈ ವ್ಯತ್ಯಾಸಗಳ ಬಗ್ಗೆ ಇಲ್ಲಿ ಹೆಚ್ಚು ಚರ್ಚಿಸಿಲ್ಲ. ಏಕೆಂದರೆ ಇಂದು ವಿಶೇಷವಾಗಿ ಭಾರತದಲ್ಲಿ ವಿಭಿನ್ನ ಧರ್ಮಗಳ ವ್ಯತ್ಯಾಸಕ್ಕಿಂತಲೂ ಹೊಂದಾಣಿಕೆಯೇ ಬಹು ಮುಖ್ಯ ಅಂಶವಾಗಿದೆ. ಕ್ರೈಸ್ತ ಮತ್ತು ವೀರಶೈವ ಧರ್ಮಗಳ ಸಿದ್ಧಾಂತಗಳಲ್ಲಿ ಪರಮಾತ್ಮ, ಜೀವಾತ್ಮ, ಜಗತ್ತು, ಸಾಮಾಜಿಕ ತತ್ವ, ಅನುಭಾವ ಪ್ರಜ್ಞೆಯ ವಿಷಯಗಳನ್ನು ಚರ್ಚಿಸಿದ್ದೇವೆ. ಈ ಎರಡೂ ಧರ್ಮ ಗಳೂ ಒಬ್ಬನೇ ದೇವರೆಂದು ಪ್ರತಿಪಾದಿಸುತ್ತವೆ. ಮಾತ್ರವಲ್ಲ ಪರಮಾತ್ಮನಲ್ಲಿ ಜೀವಾತ್ಮನ ಐಕ್ಯತೆಯೇ ಮಾನವ ಮುಕ್ತಿ. ಈ ಮುಕ್ತಿಯನ್ನು ಪಡೆಯಲು ನಿಸ್ವಾರ್ಥ ವಾದ ಪರಸೇವೆಯೇ ಏಕೈಕ ಮಾರ್ಗ–ಜನಸೇವೆಯೇ ಜನಾರ್ಧನ ಸೇವೆ. ಪ್ರೀತಿ ಯಿಂದಲೂ, ನಿಸ್ವಾರ್ಥದಿಂದಲೂ ಪರಸೇವೆಯನ್ನು ಮಾಡುವಾಗ ಆ ಪ್ರೀತಿಯು ನೈಸರ್ಗಿಕವಾಗಿಯೂ, ಫಲದಾಯಕವಾಗಿಯೂ ಅನುಭವವಾಗುತ್ತದೆ. ದೇವರೇ ಪ್ರೀತಿ ಯಾಗಿರುವ ಕಾರಣ ಆ ಪ್ರೀತಿಯ ಜೀವನವನ್ನು ನಡೆಸಿದ ಮಾನವ ಅನುಭಾವ ಪ್ರಜ್ಞೆ ಯನ್ನು ಪಡೆದು ಪರಿವರ್ತಿತನಾಗುತ್ತಾನೆ. ಈ ಸ್ಥಿತಿಯಲ್ಲೇ ಮುಂದುವರಿದಂತೆ ಜೀವಾತ್ಮ ಪರಮಾತ್ಮನ ಸಾನ್ನಿಧ್ಯವನ್ನು ಹೊಂದಿ ಅವನ ರೂಪವನ್ನು ಪ್ರತಿಬಿಂಬಿಸಿ ಅವನಲ್ಲೇ ಐಕ್ಯ ನಾಗುತ್ತಾನೆ. ಇದೇ ಮಾನವ ಮುಕ್ತಿ.

# ಸಂಸ್ಕಾರಗಳು: ಜ್ಞಾನದೀಕ್ಷೆ ಮತ್ತು ಇಷ್ಟಲಿಂಗ ಧಾರಣ
## (ತೌಲನಿಕ ಅಧ್ಯಾಯನ)

—ವಿಲ್ಯಂ ಮಾಡ್ತ

ಸ್ವಭಾವತಃ ಪರಾವಲಂಬಿ (Ens ab alio) ಯಾಗಿರುವ ಮಾನವನ ಸ್ಥಲ/ಅಂತಃಸ್ತರ (Depth-dimension), ಸ್ವಯಂಭೂ ಲಿಂಗ (Ens a Se) ಪರಮಾತ್ಮ. ಪರಮಾತ್ಮನ ಬಹಿರ್ಮುಖೀ ಅಭಿವ್ಯಕ್ತಿಯಾಗಿರುವ ಸೃಷ್ಟಿಯಲ್ಲಿ ಆತನ ಬಹಿಃಸ್ತರವಾಗಿ (Surface-dimension) ಮಾನವನ ಸ್ಥಾನಮಾನ. ಅಸ್ತಿತ್ವ (Being) ದ ಈ ಎರಡು ಸ್ತರಗಳ ಸಾಮರಸ್ಯ (Integration) ಮಾನವನ ಪ್ರಜ್ಞಾಪಾತಳಿ (Consciousness) ಯಲ್ಲಿ ನಡೆದಾಗ ಅದು ಆತನ ಜೀವನದ ಸಾರ್ಥಕತೆ (Raison d'etre) ಯಾಗಿ/ಮುಕ್ತಿ (Liberation/Salvation)ಯಾಗಿ ಪರಿಣಮಿಸುತ್ತದೆ.

ಈ ಲಿಂಗಾಂಗ ಸಾಮರಸ್ಯದ ಅನುಭಾವ (Depth experience) ಪಡೆದುಕೊಳ್ಳಲು ಪ್ರತಿಯೊಂದು ಸಾಮಾಜಿಕ ಧರ್ಮ(Religion)ಕೆಲವೊಂದು ಸಂಕೇತ(Symbol)ಗಳನ್ನು ಕಲ್ಪಿಸಿಕೊಟ್ಟು ಅವುಗಳನ್ನು ವಿಶಿಷ್ಟ ವಿಧಿಕ್ರಿಯೆ (Rite/Ritual) ಗಳ ಮೂಲಕ ತಮ್ಮ ಆಧ್ಯಾತ್ಮಿಕ ವಿಕಾಸದ ವಿವಿಧ ಹಂತಗಳಲ್ಲಿ ಧಾರ್ಮಿಕವಾಗಿ ಆಚರಿಸಲು ಅವಕಾಶ ಕಲ್ಪಿಸಿಕೊಡುತ್ತದೆ. ಈ ವಿಶಿಷ್ಟ ವಿಧಿಯಾತ್ಮಕ ಧಾರ್ಮಿಕ ಸಂಕೇತಗಳನ್ನು ಸಂಸ್ಕಾರ (Sacrament) ಗಳೆಂದು ಪಾರಿಭಾಷಿಕವಾಗಿ ಕರೆಯುತ್ತಾರೆ. ಈ ಕಾರಣದಿಂದಾಗಿ ವಿಧಿಕ್ರಿಯೆಗಳೆಲ್ಲವನ್ನೂ ಸಂಸ್ಕಾರಗಳೆಂದು ಕರೆಯುವುದು ಪಾರಿಭಾಷಿಕ ದೃಷ್ಟಿಯಿಂದ ತಪ್ಪಾಗುತ್ತದೆ.

ಧಾರ್ಮಿಕ ಸಂಸ್ಕಾರಗಳು (Sacraments of Faith) ಆಯಾಯ ಧರ್ಮದ ಪರಂಪರೆಯಲ್ಲಿ ವಿಶಿಷ್ಟವಾದ ಇತಿಹಾಸ ಹಾಗೂ ಅರ್ಥವನ್ನು ಪಡೆದುಕೊಳ್ಳುತ್ತವೆಯಾದರೂ ಅವುಗಳಿಗೆಲ್ಲ ತಳಪ್ರಾಯವಾದ ಒಂದು ಸಾಮಾನ್ಯ ಸ್ತರ ಇದ್ದೇ ಇರುತ್ತದೆ. ಧರ್ಮಗಳ ತೌಲನಿಕ ಅಧ್ಯಯನ (Comparative Religious Studies)ದಲ್ಲಿ ಈ ಸಾಮಾನ್ಯ ಸ್ತರ (Universal dimension) ದ ಅರಿವು ಅತ್ಯಗತ್ಯ. ತಾವು ಒಪ್ಪಿಕೊಂಡ ಸಂಸ್ಕಾರಗಳ ಸಂಖ್ಯೆ ವಿಭಿನ್ನ ಧರ್ಮಗಳಲ್ಲಿ ವಿಭಿನ್ನವಾಗಿರುತ್ತವೆ. ಉದಾಹರಣಾರ್ಥವಾಗಿ ಕೆಥೋಲಿಕ ಕ್ರೈಸ್ತ ಧರ್ಮ ಸಭೆ: ೧) ಜ್ಞಾನದೀಕ್ಷೆ (Baptism), ೨) ದೃಢೀಕರಣ (Confirmation), ೩) ಸಾಮರಸ್ಯ (Reconciliation), ೪) ರೋಗಿ ಅಭ್ಯಂಜನ (Anointing of the sick), ೫) ವಿವಾಹ (Marriage),

೬) ಗುರುದೀಕ್ಷೆ (Holy Orders) ಮತ್ತು ೭) ಕ್ರಿಸ್ತಭೋಜನಾ ವಿಧಿ (Eucharist) ಎಂಬ ಸಪ್ತ ಸಂಸ್ಕಾರಗಳನ್ನು ಒಪ್ಪಿಕೊಂಡಿದೆ. ಇವುಗಳಲ್ಲಿ ಜ್ಞಾನದೀಕ್ಷೆ ಹಾಗೂ ಕ್ರಿಸ್ತ ಭೋಜನಾ ವಿದಿ ಪ್ರಮುಖವಾದವುಗಳು, ಉಳಿದವುಗಳು ಇವುಗಳ ವಿಸ್ತೃತ ಸ್ವರೂಪ (Extension) ಗಳೆಂದರೆ ತಪ್ಪಾಗಲಾರದು. ಕಾರಣ, ಸರ್ವ ಕ್ರೈಸ್ತ ಸಭೆಗಳಲ್ಲಿ ಈ ಎರಡು ಸಂಸ್ಕಾರಗಳಿಗೆ ಮಾನ್ಯತೆ ಇದೆ. ಇದೇ ರೀತಿಯಲ್ಲಿ ವೀರಶೈವರಲ್ಲಿ ಲಿಂಗಧಾರಣ, ಲಿಂಗದೀಕ್ಷೆ, ವಿವಾಹ ಮತ್ತು ಅಂತ್ಯೇಷ್ಟಿ ಸಂಸ್ಕಾರಗಳಿಗೆ ಖಚಿತವಾದ ಸಂಸ್ಕಾರದ ಸ್ಥಾನ ವಿದೆ. ಇವುಗಳಲ್ಲಿ ಲಿಂಗಧಾರಣ ಅತ್ಯಂತ ಪ್ರಮುಖವೆಂದರೆ ತಪ್ಪಾಗಲಾರದು.

ಪ್ರಸ್ತುತ ಅಧ್ಯಯನ ಕ್ರೈಸ್ತ ಮತ್ತು ವೀರಶೈವಗಳ ಜ್ಞಾನದೀಕ್ಷೆ ಹಾಗೂ ಇಷ್ಟ ಲಿಂಗಧಾರಣ ಸಂಸ್ಕಾರಗಳಿಗೆ ಮಾತ್ರ ಸೀಮಿತವಾಗಿದೆ. ಈ ಎರಡು ಸಂಸ್ಕಾರಗಳ ಬಗೆಗೆ ಯಾವ ಆಕ್ಷೇಪಣೆಯೂ ಇರಲಿಕ್ಕಿಲ್ಲವೆಂಬ ಭಾವನೆಯೇ ಇದಕ್ಕೆ ಮೂಲ ಕಾರಣ. ಅಷ್ಟೇ ಅಲ್ಲದೆ ಈ ಸಂಸ್ಕಾರ ಆಯಾಯ ಧರ್ಮದಲ್ಲಿ ಅತ್ಯಂತ ಪ್ರಾಥಮಿಕ ಹಾಗೂ ಅನಿವಾರ್ಯ.

## ೧.೦ ಜ್ಞಾನದೀಕ್ಷಾ ಸಂಸ್ಕಾರ

### ೧.೧ ಪ್ರಾಸ್ತಾವಿಕ:

ಕ್ರೈಸ್ತ ಧರ್ಮಸಭೆ (People of God) ಯಲ್ಲಿ ತನ್ನ ಸದಸ್ಯರಿಗೆ ನೀಡಲಾಗುವ ಪ್ರಪ್ರಥಮ ಸಂಸ್ಕಾರವೆಂದರೆ ಜ್ಞಾನದೀಕ್ಷೆ (Baptisma Lat.) / Baptein / Baptizein / (Gk.) ಇದರ ಶಬ್ದಾರ್ಥ: 'ಮುಳುಗು / ಮುಳುಗಿಸು (ತೊಳೆ)'. ಯೇಸುಕ್ರಿಸ್ತ ತಾನು ಪಡೆದುಕೊಂಡ ಅನುಭಾವದ ಫಲವಾಗಿ ಆರಂಭಿಸಿದ ಧಾರ್ಮಿಕ ಆಂದೋಲನದಲ್ಲಿ ಅರ್ಥಾತ್ ಮಾನವನ ಸಮಗ್ರ ವಿಮೋಚನಾ ಕಾರ್ಯ (Liberative praxis)ದಲ್ಲಿ ಸಂಪೂರ್ಣವಾಗಿ ಕ್ರಿಯಾಶೀಲನಾಗಲು ಆತ ನೀಡುವ ಆಮಂತ್ರಣ (Invitation) ಹಾಗೂ ದೀಕ್ಷೆ (Initiation)ಯೇ ಜ್ಞಾನದೀಕ್ಷಾ ಸಂಸ್ಕಾರವೆಂಬುದು ಕ್ರೈಸ್ತ ನಿಲುವು. ಯೇಸುಕ್ರಿಸ್ತ, ಆಂತರಿಕ ಪರಿವರ್ತನೆ (Metanoia) ಹಾಗೂ ಸಾಮರಸ್ಯ (Integration through Reconciliation) ಗಳನ್ನು ಕುರಿತು ಪದೇ ಪದೇ ಹೇಳುತ್ತಿದ್ದರೂ (ಯೋಹಾ ೩.೫+) ತಾನು ಸ್ವತಃ ಅವುಗಳ ಸಂಕೇತವೆನಿಸಿಕೊಂಡ ಜ್ಞಾನದೀಕ್ಷೆಯನ್ನು ದೀಕ್ಷಾವಿಧಿ (Initiation rite)ಯನ್ನಾಗಿ ಯಾರಿಗೂ ಕೊಟ್ಟ ಸ್ಪಷ್ಟ ಉಲ್ಲೇಖವಿಲ್ಲ. ಸುವಾರ್ತೆ (Gospel)ಗಳಲ್ಲಿಯೂ ಈ ದೀಕ್ಷೆಯನ್ನು ಕುರಿತ ಉಲ್ಲೇಖಗಳು ಕೆಲವೇ ಕೆಲವು. ಅಷ್ಟೇ ಅಲ್ಲದೆ ಸಂಸ್ಕಾರ (Sacrament) ಎಂಬ ಪದ ಪಾರಿಭಾಷಿಕವಾಗಿ ಹೊಸ ಒಡಂಬಡಿಕೆ (NT)ಯಲ್ಲಿ ಬಳಕೆಯಾಗಿಲ್ಲ (Boyd, 327).

ವಸ್ತುಸ್ಥಿತಿ ಹೀಗಿದ್ದರೂ ಯೇಸುವಿನ ಶಿಷ್ಯಂದಿರಿಂದ ಹಿಡಿದು, (ಯೋಹಾ ೪.೧-೩+, ಅಕೃ ೨.೩೮+) ಇಂದಿನವರೆಗೂ ಜ್ಞಾನದೀಕ್ಷೆ ಸಂಸ್ಕಾರವಾಗಿ ಕ್ರೈಸ್ತ

ಧರ್ಮಸಭೆಯಲ್ಲಿ ಸಮಗ್ರವಾಗಿ ಬೇರೂರಿ ನಿಂತಿದೆ. ಮಾನವನ ದೈವೀಕರಣಕ್ಕೆ ಈ ಸಂಸ್ಕಾರ ಅತ್ಯಗತ್ಯ (ಯೋಹಾ ೩.೫); ಯೇಸು ತನ್ನ ಶಿಷ್ಯಂದಿರ ಮೂಲಕ ಜ್ಞಾನದೀಕ್ಷೆ ಕೊಡಿಸುತ್ತಿದ್ದನು (೩.೨೨, ೪.೨) ಮಾತ್ರವಲ್ಲದೆ ಹೀಗೆ ಮಾಡಲು ಅಪ್ಪಣೆಯನ್ನಿತ್ತನು (ಮತ್ತಾ ೨೮.೧೯) ಎಂಬ ಕ್ರೈಸ್ತ ನಂಬಿಕೆಗಳಲ್ಲದೆ (Boyd 327–8, 333) ಯೆಹೂದಿ (ವಿಮೋ ೪೦.೧೨; ಯಾಜ ೮ ೬, ೧೩.೬; ೧೪ ೪–೯, ೧೬.೪, ೨೪; ಎಸ್ರ ೩೬.೨೪–೨೮; QS, ೬.೧೬f, ೩.೪–೯; ಮತ್ತಾ ೩.೬; ಅಕೃ ೧.೫) ಹಾಗೂ ಅನ್ಯ (Pagan) ಧರ್ಮಗಳ ದೀಕ್ಷಾಸ್ನಾನ ವಿಧಿ ಕ್ರಿಯೆಗಳು ಪ್ರಸ್ತುತ ಕ್ರೈಸ್ತ ಸಂಸ್ಕಾರಕ್ಕೆ ಪ್ರೇರಕವಾಗಿರಬಹುದು ಎಂಬುದು ನನ್ನ ವೈಯಕ್ತಿಕ ಅನಿಸಿಕೆ.

### ೧.೨ ಜ್ಞಾನದೀಕ್ಷಾ ಸಂಸ್ಕಾರದ ರಚನಾ ನಿರೂಪಣೆ (Syntactics):

ವಯಸ್ಕರಿಗೆ ಜ್ಞಾನದೀಕ್ಷೆ ಕೊಡುವ ಮೊದಲು ಪೂರ್ವಭಾವಿ ಸಿದ್ಧತೆಯಾಗಿ ದೀರ್ಘಕಾಲದ ಗುರೂಪದೇಶ (Catechetical preparation) ಇರುತ್ತದೆಯಲ್ಲದೆ (ಇಬ್ರಿ ೬.೨) ಅವರು ವಿಶೇಷವಾಗಿ ಜಪತಪಗಳಿಂದ ಸಿದ್ಧರಾಗಿ ತಮ್ಮ ಸದಿಚ್ಛೆಯನ್ನು/ವಾಗ್ದಾನವನ್ನು ಧರ್ಮ ಗುರುವಿಗೆ ತಿಳಿಸಬೇಕಾಗುತ್ತದೆ. ಕ್ರೈಸ್ತ ಸಂಪ್ರದಾಯದಲ್ಲಿ ಪುರಾತನ ಕಾಲದಿಂದಲೂ ಕ್ರೈಸ್ತ ದಂಪತಿಗಳಿಗೆ ಹುಟ್ಟಿದ ಎಳೆಯ ಮಕ್ಕಳಿಗೆ ಜ್ಞಾನದೀಕ್ಷೆ ನೀಡುವ ಪರಂಪರೆಯೂ ಇದೆ (Rahner 69; Boyd 337).

ಪ್ರಸ್ತುತದಲ್ಲಿ ಕೆಥೋಲಿಕ ಕ್ರೈಸ್ತ ಸಂಪ್ರದಾಯದಲ್ಲಿಯ ಜ್ಞಾನದೀಕ್ಷಾ ಸಂಸ್ಕಾರದ ರಚನಾಂಗಗಳನ್ನು ಕ್ರಮವಾಗಿ ನಿರೂಪಿಸಲಾಗಿದೆ:

**೧. ಸೂಕ್ತ ಬೈಬಲ್ ವಾಚನ:** ಬೈಬಲಿನಿಂದ ಅದರಲ್ಲಿಯೂ ಹೊಸ ಒಡಂಬಡಿಕೆ (NT)ಯಿಂದ ಸಂದರ್ಭೋಚಿತವಾದ ಭಾಗವನ್ನು ಭಕ್ತಿಯಿಂದ ಓದುತ್ತಾರೆ. (ಉದಾ: ಮಾರ್ಕ ೧.೯–೧೧, ೧೦.೧೩–೧೬; ಯೋಹಾ ೩.೫ ಮತ್ತಾ ೨೮.೧೩–೧೬ ಇತ್ಯಾದಿ). ಬಳಿಕ ಈ ವಾಚನವನ್ನು ಆಧರಿಸಿ ಧರ್ಮಗುರು ಪ್ರವಚನ ನೀಡುತ್ತಾನೆ.

**೨. ಪ್ರಾರ್ಥನೆ:** ಜ್ಞಾನದೀಕ್ಷೆ ಪಡೆಯುವ ಮಗುವಿನ ಹೆತ್ತವರು ಮಗುವಿನ ಆಧ್ಯಾತ್ಮಿಕ ಬೆಳವಣಿಗೆಯಲ್ಲಿ ವಿಶೇಷ ಜವಾಬ್ದಾರಿ ಹೊಂದಿರಬೇಕು. ಇದಕ್ಕಾಗಿ ದೈವೀ ಕೃಪೆ (Grace) ಅತ್ಯಗತ್ಯ. ಈ ಕೃಪೆಗೋಸ್ಕರ ಸಂತಭಕ್ತರ (Saints) ಮೂಲಕ ದೇವರಿಗೆ ಸಾಮೂಹಿಕ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

**೩. ದುಷ್ಟಶಕ್ತಿಗಳ ಉಚ್ಚಾಟನಾ ಮಂತ್ರ** (Prayer of Exorcism): ಅವಿದ್ಯೆ (Original sin) ಮತ್ತಿತರ ದುಷ್ಟ ಪ್ರಭಾವಗಳಿಂದ ಮಗುವನ್ನು ಪಾರು ಮಾಡಬೇಕೆಂದು ದೇವರಲ್ಲಿ ಮೊರೆಯಿಡುತ್ತಾರೆ.

**೪. ಉಪದೇಶಿ ತೈಲ** (Oil of Catechumens) **ದಿಂದ ಅಭ್ಯಂಜನ:** ಕ್ರೈಸ್ತ ಅಭ್ಯರ್ಥಿಗಳಿಗಾಗಿ ಮಂತ್ರಿಸಿದ ತೈಲದಿಂದ ಮಗುವಿನ ಅಭ್ಯಂಜನವಾಗುತ್ತದೆ.

**೫. ಜ್ಞಾನದೀಕ್ಷಾ/ಸ್ನಾನ:**

ಅ) ಜ್ಞಾನದೀಕ್ಷಾ ಸ್ನಾನಕ್ಕೆ ತೀರ್ಥವನ್ನು (ಶುದ್ಧ ಜಲವನ್ನು ಮಂತ್ರಿಸಿ) ಸಿದ್ಧಗೊಳಿಸುವುದು;

ಆ) ಸೈತಾನ(Satan)ನ ಉಚ್ಚಾಟನೆ;

ಇ) ಕ್ರೈಸ್ತ ವಿಶ್ವಾಸದ ಬಹಿರಂಗ ಸಾಮೂಹಿಕ ಘೋಷಣೆ;

ಉ) ಹೆತ್ತವರ ಮತ್ತು ಧರ್ಮೀಯ ಪಿತೃಗಳ (God parents)[೧] ಒಪ್ಪಿಗೆಯನ್ನು ಪಡೆದುಕೊಂಡು ಮಗುವಿನ ಹೆಸರನ್ನು ಉಚ್ಚರಿಸಿ ಅದರ ಹಣೆಯ ಮೇಲೆ ಪ್ರಯೇಕ ದೇವ(Triune God)ನ-ಪಿತ, ಸುತ, ಪವಿತ್ರಾತ್ಮನ-ಹೆಸರಿನಲ್ಲಿ ಮೂರು ಸಲ ತೀರ್ಥಧಾರೆಯನ್ನು ಎರೆಯುವುದು (Affusion) ಅಥವಾ ನೀರಿನಲ್ಲಿ ಮುಳುಗಿಸಿ ತೆಗೆಯುವುದು (Immersion) ಅಥವಾ ನೀರನ್ನು ಚಿಮುಕಿಸುವುದು (Aspersion).

**೬. ಪವಿತ್ರಾಭ್ಯಂಜನ:** ವಿಶೇಷವಾಗಿ ಮಂತ್ರಿಸಿದ ತೈಲದಿಂದ ಕ್ರೈಸ್ತ ಮಗುವನ್ನು ಅಭ್ಯಂಜಿಸುವುದು.

**೭. ಶುಭ್ರ ವಸ್ತ್ರಧಾರಣೆ:** ಶುಭ್ರವಾದ ಬಿಳಿಯ ಬಟ್ಟೆಯನ್ನು ಕ್ರೈಸ್ತ ಮಗುವಿಗೆ ಉಡಿಸುವುದು.

**೮. ಮೇಣದ ಬತ್ತಿಯನ್ನು ಉರಿಸುವುದು:** ಮೇಣದ ಬತ್ತಿ(Candle)ಯೊಂದನ್ನು ಉರಿಸಿ ಕ್ರೈಸ್ತ ಮಗುವಿನ ಕೈಯಲ್ಲಿ ಗುರು ಕೊಡುತ್ತಾನೆ. ಆ ಬತ್ತಿಯನ್ನು ಹೆತ್ತವರೂ ಧರ್ಮೀಯ ಪಿತೃಗಳೂ ಹಿಡಿದುಕೊಳ್ಳುತ್ತಾರೆ.

**೯. ಕಿವಿ ಬಾಯಿಗಳಲ್ಲಿ ಮಂತ್ರೋಚ್ಚಾರಣೆ:** ಗುರು, ಕ್ರೈಸ್ತ ಮಗುವಿನ ಕಿವಿಯಲ್ಲಿಯೂ ಬಾಯಿಯಲ್ಲಿಯೂ, ತನ್ನ ಬಾಯಿಯನ್ನು ಸಮೀಪಿಸಿ, ಮಂತ್ರೋಚ್ಚಾರಣೆ ಮಾಡುತ್ತಾನೆ.

**೧೦. ಜ್ಞಾನದೀಕ್ಷಾ ಹಾಡು:** ಜ್ಞಾನದೀಕ್ಷೆಯ ಅರ್ಥವನ್ನು ಸ್ಫುಟಗೊಳಿಸುವ ಹಾಡನ್ನು ನೆರೆದವರೆಲ್ಲರೂ ಸಂತೋಷದಿಂದ ಲಯಬದ್ಧವಾಗಿ ಹಾಡುತ್ತಾರೆ.

**೧೧. "ಪರಲೋಕದಲ್ಲಿರುವ ನಮ್ಮ ತಂದೆಯೇ" ಮಂತ್ರವನ್ನು ಜಪಿಸುವದು:** ನೆರೆದವರೆಲ್ಲರೂ ದೀಕ್ಷೆ ಪಡೆದ ಮಗುವಿನೊಂದಿಗೆ ತಾವೆಲ್ಲರೂ ಒಂದೇ ತಂದೆಯ-ದೇವರ-ಮಕ್ಕಳೆಂದು ಈ ಜಪದ ಮೂಲಕ ಸಾರುತ್ತಾರೆ.

---

೧ ಮಗುವನ್ನು ಕ್ರಿಸ್ತಶರಣ/ಶರಣೆಯಾಗಿ ಬೆಳೆಯಿಸುವ ಜವಾಬ್ದಾರಿ ಪ್ರಪ್ರಥಮವಾಗಿ ಹೆತ್ತವರದ್ದು. ಯಾವುದೇ ಕಾರಣದಿಂದಾಗಿ ಇದರಲ್ಲಿ ಅವರು ವಿಫಲರಾದಾಗ ಕ್ರೈಸ್ತ ಧರ್ಮಸಭೆಯ ವತಿಯಿಂದ ಆ ಜವಾಬ್ದಾರಿಯನ್ನು ಹೊತ್ತುಕೊಳ್ಳಲು ಧರ್ಮೀಯ ಪಿತೃಗಳ ವ್ಯವಸ್ಥೆ ಇರುತ್ತದೆ.

೧೨. **ಆಶೀರ್ವಾದ:** ನೆರೆದವರೆಲ್ಲರನ್ನೂ ಗುರು ಪ್ರಯೇಕದೇವನ ಹೆಸರಿನಲ್ಲಿ ಆಶೀರ್ವದಿಸುತ್ತಾನೆ. ಇಲ್ಲಿಗೆ ಜ್ಞಾನಸಂಸ್ಕಾರದ ವಿಧಿಕ್ರಿಯೆ ಮುಗಿಯುತ್ತದೆ.

ಸಾಮಾನ್ಯವಾಗಿ ಜ್ಞಾನದೀಕ್ಷೆಯನ್ನು ಕ್ರೈಸ್ತ ದೇವಾಲಯದೊಳಗೆ ಸಾಮೂಹಿಕ ಉಪಾಸನೆ(Liturgy)ಯ ಸಂದರ್ಭದಲ್ಲಿ, ಕ್ರೈಸ್ತ ವಿಶ್ವಾಸಿಗಳ ಸಮ್ಮುಖದಲ್ಲಿ, ಧರ್ಮಗುರು ನೆರವೇರಿಸುತ್ತಾನೆ. ಆದರೆ ಕೆಲವೊಂದು ಅನಿವಾರ್ಯ ಪ್ರಸಂಗಗಳಲ್ಲಿ ಕ್ರಿಸ್ತನಲ್ಲಿ ನಂಬಿಕೆಯುಳ್ಳ ಯಾವುದೇ ವ್ಯಕ್ತಿ ಶುದ್ಧ ಜಲವನ್ನು ಬಳಸಿ ನೇರವಾಗಿ ೫(ಉ) ಹಂತಕ್ಕೆ ವಿಧಿಕ್ರಿಯೆಯನ್ನು ಸೀಮಿತಗೊಳಿಸಿ ಪ್ರಸ್ತುತ ಸಂಸ್ಕಾರವನ್ನು ಕೊಡಬಹುದು. ಈ ಕಾರಣದಿಂದಾಗಿ ಈ ಸಂಸ್ಕಾರದ ವಿಧಿಕ್ರಿಯೆ ನೆರವೇರಿಸಲು ಗುರುವರ್ಗ(Clerics)ದವರು ಅತ್ಯವಶ್ಯಕವಲ್ಲ.

ಜ್ಞಾನದೀಕ್ಷೆ ಪಡೆದ ಮಗುವಿನ ಹೆಸರು, ಜನನ ದಿನಾಂಕ, ದೀಕ್ಷೆಯ ದಿನಾಂಕ, ಹೆತ್ತವರ ಹಾಗೂ ಧರ್ಮೀಯ ಪಿತೃಗಳ ಹೆಸರು ಇತ್ಯಾದಿ ಮಾಹಿತಿಗಳನ್ನು ವಿಚಾರಣೆಯ ಗುರುಗಳು (Parish Priest) ದಾಖಲ ಮಾಡಿಕೊಳ್ಳುತ್ತಾರೆ. ಆ ವಿಚಾರಣೆಗೆ ಸೇರಿದ ಪ್ರತಿಯೊಬ್ಬ ಕ್ರೈಸ್ತನ ಮಾಹಿತಿಯ ದಾಖಲೆ (Documentation) ಅಲ್ಲಿರುತ್ತದೆ.

ಕೆಲವೊಂದು ಸಂಪ್ರದಾಯದಲ್ಲಿ ಜ್ಞಾನದೀಕ್ಷೆ ಪಡೆದ ಮಗುವನ್ನು ಅದರ ತಾಯಿ ಪೂಜಾ ಪೀಠ(Altar)ದ ಅಥವಾ ದೇವಮಾತೆಯ ಪೀಠದ ಬಳಿ ಇಟ್ಟು ದೇವಮಾತೆಗೆ ಅದನ್ನು ಸಮರ್ಪಿಸಿ ಅದನ್ನು ಕ್ರಿಸ್ತನಂತೆ ಬೆಳೆಯಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತಾಳೆ. ಆ ಬಳಿಕ ಸಾಂಕೇತಿಕವಾಗಿ ಆ ಮಗುವನ್ನು ಅಲ್ಲಿಯೇ ಬಿಟ್ಟು ಹೊರಟುಹೋಗುತ್ತಾಳೆ. (ಧರ್ಮೀಯ ತಾಯಿ ಅಥವಾ ಬೇರೊಬ್ಬರು ಮಗುವನ್ನು ಎತ್ತಿಕೊಂಡು ಮಗುವಿನ ಮನೆಗೆ ತೆರಳುತ್ತಾರೆ.)

### ೧.೩ ಜ್ಞಾನದೀಕ್ಷಾ ಸಂಸ್ಕಾರದ ಅರ್ಥನಿರೂಪಣೆ (Semantics):

ಸಂಕೇತ ವಿಜ್ಞಾನ(Semiotics)ದ ಪರಿಭಾಷೆಯಲ್ಲಿ ಹೇಳುವುದಾದರೆ ಜ್ಞಾನದೀಕ್ಷೆ ಅನೇಕ ಅರ್ಥಗಳನ್ನು (Significates/Significata) ಅಭಿವ್ಯಕ್ತಗೊಳಿಸುವ ಧಾರ್ಮಿಕ ಸಂಕೇತ (Significant/Signifie).

ದೀಕ್ಷಾಭ್ಯರ್ಥಿ (Catechumen) ತನ್ನ ಸ್ವಾಭಾವಿಕವಾದ ಸ್ವಕೇಂದ್ರೀಯ ಪ್ರಜ್ಞೆಗೆ (Ego-centric consciousness) ಸತ್ತು (Dying: ಮತ್ತಾ ೧೦.೩೯; ಮಾರ್ಕ ೮.೩೫; ಲೂಕ ೯.೨೪; ಯೋಹಾ ೧೨.೨೩–೨೫; ರೋ. ೬.೩–೫; ಎಫೆ ೨.೪–೬; ೨ ತಿಮೊ ೨.೧೧), ಕ್ರಿಸ್ತ ಕೇಂದ್ರೀಯ ಪ್ರಜ್ಞೆ(Christo-centric consciousness) ಯಲ್ಲಿ ಏಳಬೇಕು (Rising: ರೋ ೬.೧೧–೧೪; ಎಫೆ ೩.೧೬–೧೯; ಕೊಲೊ ೩.೧; ಫಿಲಿ ೩.೧೦–೧೨) ಎಂಬುದೇ ಈ ದೀಕ್ಷೆಯ ಪ್ರಧಾನಾಶಯ (Primary motif).

ಈ 'ಸತ್ತೇಳುವ' ಅನುಭಾವದಿಂದಾಗಿ ಭವಿ (Natural man), ಭಕ್ತ (Spiritual man)ನಾಗುತ್ತಾನೆಯಾದುದರಿಂದ ಈ ಸಂಸ್ಕಾರದಿಂದ ಆತ ಎರಡನೆಯ ಜನ್ಮ ಪಡೆಯುತ್ತಾನೆ, ದ್ವಿಜನಾಗುತ್ತಾನೆ (ಯೋಹಾ ೩.೫).

ಭಕ್ತನ ಪ್ರಸ್ತುತ ರೂಪಾಂತರ (Radical change/Metanoia, ಕ್ರಿಸ್ತನ ದಿವ್ಯಶಕ್ತಿ(Holy Spirit)ಯ ಮೂಲಕ ನಡೆಯುತ್ತದೆಯಾದರೂ ಸ್ವತಂತ್ರನಾಗಿರುವ ವ್ಯಕ್ತಿ ತನ್ನ ವಿಶ್ವಾಸ[೨](Faith: ಅಕ್ಕೃ ೮.೩೭; Rahner 69)ದ ಮೂಲಕ ತನ್ನನ್ನೇ ತಾನು ತೆರೆದಿಟ್ಟುಕೊಳ್ಳಬೇಕಾಗುತ್ತದೆ (Open to Grace); ದಿವ್ಯಶಕ್ತಿಯನ್ನು ಆಹ್ವಾನಿಸಬೇಕಾಗುತ್ತದೆ. ಕಾರಣ, ಜ್ಞಾನದೀಕ್ಷೆ–ಅಂತೆಯೇ ಯಾವುದೇ ಇತರ ಸಂಸ್ಕಾರ–ಭಾನಾಮತಿ (Magical/Ex opere operato/Automatic) ಕ್ರಿಯೆಯಲ್ಲ (Smyth, 254, 255; Rehner 70, 73; Leon–Dufour 43). ಜ್ಞಾನದೀಕ್ಷೆಯ ಸಂಸ್ಕಾರ, ಮಾನವನ ಆಧ್ಯಾತ್ಮಿಕ ವಿಕಾಸದಲ್ಲಿ ಆಗಬೇಕಾದ, ಮೇಲೆ ಪ್ರಸ್ತಾಪಿಸಲಾದ ಮೂಲಭೂತ ಪರಿವರ್ತನೆಯ[೩] ಸಂಕೇತ ಹಾಗೂ ಅದಕ್ಕಾಗಿ ನೀಡುವ ಕರೆ.

ಪರಿವರ್ತನೆಗೊಂಡ ಕ್ರಿಸ್ತ ಶರಣರು ಮತ್ತು ಕ್ರಿಸ್ತ ಇವರು ಭಿನ್ನ (Different)ರಾದರೂ ದ್ವೈತ(Separate)ರಲ್ಲ. ಕ್ರೈಸ್ತರು ಶರೀರವಾದರೆ/ಬಹಿಃಸ್ತರವಾದರೆ, ಕ್ರಿಸ್ತನೇ ಜೀವ/ಅಂತಃಸ್ತರ (ರೋ ೧೨.೪; ೧ ಕೊರಿ ೧೨.೧೩, ೨೭; ೨ ಕೊರಿ ೧೩.೫; ಗಲಾ ೨.೧೬, ೨೦; ೩.೨೭; ಎಫ್ ೫.೩೦). ಈ ಲಂಬಿಕ (Vertical) ಸಾಮರಸ್ಯವನ್ನು ಕ್ರಿಸ್ತಾದ್ವೈತ(Christ–integration)ವೆಂದು ಪಾರಿಭಾಷಿಕವಾಗಿ ಕರೆಯಬಯಸುತ್ತೇನೆ. ಈ ಕ್ರಿಸ್ತಾದ್ವೈತದಿಂದಾಗಿ ಕ್ರಿಸ್ತಶರಣರಲ್ಲಿಯೂ ಸಾಮರಸ್ಯವುಂಟಾಗುತ್ತದೆ. ಈ ಅಡ್ಡ (Horizontal) ಸಾಮರಸ್ಯವನ್ನು ಕ್ರೈಸ್ತ ಸಮಾಜ (Christian Brotherhood/Koinonia) ಅಥವಾ ಕ್ರಿಸ್ತನ ಧರ್ಮಕಾಯ (Christ's Mystical Body) ಎಂದು ಕರೆಯುತ್ತಾರೆ. ರೋಮಿಯರ(Romans)ಜಾನಪದ(Folklore)ವನ್ನು ಗಮನಿಸಿ ಹೇಳುವುದಾದರೆ ಜ್ಞಾನದೀಕ್ಷೆಯ ಸಂಸ್ಕಾರದಲ್ಲಿ ಬಳಸುವ ನೀರು ನೀರಿನಕೊಳ 'ಸತಿ'ಗೆ(Female principle) ಸಂಕೇತವಾದರೆ, ಆ ನೀರನ್ನು ಮಂತ್ರಿಸುವ ಸಂದರ್ಭದಲ್ಲಿ ಅದರಲ್ಲಿ ಹೊಗಿಸುವ ಬೆಳಗಿದ ಮಯಣದ ಬತ್ತಿ 'ಪತಿ'ಗೆ (Male principle) ಸಂಕೇತ. ಲಗ್ನದಲ್ಲಿ ಸತಿಪತಿಯರು ಸಮರಸಗೊಳ್ಳುವಂತೆ ಪ್ರಸ್ತುತ ಜ್ಞಾನದೀಕ್ಷೆಯ ಸಂಸ್ಕಾರದ ಮೂಲಕ

---

೨ 'ವಿಶ್ವಾಸ'ವೆಂದರೆ ಅಹಂಕೇಂದ್ರೀಯವಲ್ಲದ ಅರ್ಥಾತ್ ಕ್ರಿಸ್ತ ಕೇಂದ್ರೀಯವಾದ ಮನೋಧರ್ಮ ಹಾಗೂ ಜೀವನ ಶೈಲಿ (ರೋ ೩.೨೭; ಎಫೆ ೨.೯).

೩ ಪರಿವರ್ತನೆ (Metanoiein LGK) ಎಂಬ ಪದ ಮತ್ತಾಯನಲ್ಲಿ ೭ ಸಲ, ಮಾರ್ಕನಲ್ಲಿ ೩ ಸಲ, ಲೂಕನಲ್ಲಿ ೧೪ ಸಲ, ಅಪೋಸ್ತಲರ ಕೃತ್ಯದಲ್ಲಿ ೧೧ ಸಲ, ಪೌಲನಲ್ಲಿ ೫ ಸಲ ಬಂದರೆ ಯೋಹಾನನಲ್ಲಿ ಅದು ಕಂಡುಬರುವುದೇ ಇಲ್ಲ.

ಜೀವಾತ್ಮ ಪರಮಾತ್ಮರುಗಳು ಅದ್ವೈತ ಸಮರಸಗೊಳ್ಳುತ್ತಾರೆಂಬುದೇ (ಲಿಂಗಾಂಗ ಸಾಮರಸ್ಯ) ಇಲ್ಲಿಯ ಸಂಕೇತಾರ್ಥ ಲಕ್ಷ್ಯಾರ್ಥ.

ಪವಿತ್ರ ತೈಲದ ಅಭ್ಯಂಜನದಿಂದ ಕ್ರಿಸ್ತ ಭಕ್ತನ ಅವಿಭಾಜ್ಯಾಂಗವಾದ ಶರೀರ, ಪ್ರಸಾದಕಾಯ; ಆತನ ಕೈಗೆ ಕೊಟ್ಟಂತಹ ಬೆಳಗಿದ ದೀಪ, ತಾನು ಕ್ರಿಸ್ತನಂತೆ ಜಗತ್ತನ್ನು ಬೆಳಗಿಸುವ ಜ್ಯೋತಿ ಎಂಬ ಅರ್ಥಗಳನ್ನು (Semioses) ಸ್ಫುಟಿಸುತ್ತವೆ. ಒಟ್ಟಿನಲ್ಲಿ ಕ್ರಿಸ್ತ ಶರಣನ ಪ್ರಜ್ಞೆಯಲ್ಲಿ ತಾನೆಂಬುದು ಅಳಿದು ಸರ್ವಸ್ವವೂ ಕ್ರಿಸ್ತಮಯಗೊಳ್ಳುತ್ತದೆ, ಕ್ರಿಸ್ತಮಯಗೊಳ್ಳಬೇಕೆಂಬ ನಿಜಾರ್ಥವನ್ನು ಈ ಸಂಸ್ಕಾರ ಪ್ರಕಟಗೊಳಿಸುತ್ತದೆ.

**೧.೪ ಜ್ಞಾನದೀಕ್ಷಾ ಸಂಸ್ಕಾರದ ಫಲನಿರೂಪಣೆ (Pragmatics):**[೪]

೧. ಜ್ಞಾನದೀಕ್ಷಾ ಸಂಸ್ಕಾರವನ್ನು ಅರ್ಥೈಸಿಕೊಂಡು ಅದನ್ನು ತನ್ನ ಜೀವನ-ಶೈಲಿ(Life-style/Praxis)ಯನ್ನಾಗಿ ಮಾಡಿಕೊಂಡ ವ್ಯಕ್ತಿ ತನ್ನ ದ್ವೈತಭಾವ (Dual-consciousness)ವನ್ನು ಕಳೆದುಕೊಂಡು ಕ್ರಿಸ್ತನಲ್ಲಿ ಅದ್ವೈತ-ಸಮರಸಗೊಳ್ಳುತ್ತಾನೆ (೧ ಕೊರಿ ೬.೧೭+, ೧೨.೧೩+; ಎಫ್ ೪.೪+; ST III q.62, 5 ad 1; Flannery 355: Integrated life).

೨. ಸ್ವಭಾವತಃ ಅಹಂಕೇಂದ್ರೀಯಾಗಿರುವ ವ್ಯಕ್ತಿ ಪರಕೇಂದ್ರೀಯ ಹಾಗೂ ಸಮಾಜಮುಖೀ ವ್ಯಕ್ತಿ(Man for others)ಯಾಗಿ ಬಾಳುತ್ತಾನೆ(ರೋ ೬.೧೧; ಎಫ್ ೩.೧೬-೧೯).

೩. ಆಧ್ಯಾತ್ಮಿಕ ಹಾಗೂ ಸಾಮಾಜಿಕ ಸಾಮರಸ್ಯತೆಯಿಂದಾಗಿ ಇಹದಲ್ಲಿ ಸ್ಥಿತಪ್ರಜ್ಞನಾಗಿ (Indifferent/Unperturbed) ಬಾಳಲು ಆತನಿಗೆ ಸಾಧ್ಯವಾಗುತ್ತದೆ (ಕೀ ೨೩).

೪. ಇಂಥ ವ್ಯಕ್ತಿಗೆ ಸಮರ್ಪಣಾ ಭಾವದಿಂದ ತನ್ನ ಕಾಯಕವನ್ನು ಮಾಡಲು, ಜವಾಬ್ದಾರಿಗಳನ್ನು ನಡೆಯಿಸಲು ಸಾಧ್ಯವಾಗುತ್ತದೆ. (ಕ್ರಿಸ್ತಶರಣ ಹಾಗೂ ಶರಣೆಯರ ಜೀವನವನ್ನು ಗಮನಿಸಿ).

೫. ಈ ವ್ಯಕ್ತಿಗಳಿಂದಾಗಿ ಹೊಸ ಸಮಾಜ ನಿರ್ಮಾಣಗೊಳ್ಳುತ್ತದೆ (Flannery 469,870). ಲೌಕಿಕ ಕುಟುಂಬಗಳು 'ವಸುದೇವ' ಅರ್ಥಾತ್ ದೈವಿಕ ಕುಟುಂಬ(People of God)ವಾಗಿ ರೂಪಾಂತರಗೊಳ್ಳುತ್ತದೆ (೧ ಯೋಹಾ ೩.೧), ಇಹಪರಭೇದ ಅಳಿಯುತ್ತದೆ. ವ್ಯಕ್ತಿಗಳು ಸ್ಥಲಕ್ಕೆ ಸಾಕ್ಷಿಯಾಗಿ ಜೀವಿಸುತ್ತಾರೆ. (ಯೋಹಾ ೧೮.೩೭; ೧ ತಿಮೊ ೬.೧೩).

---

೪ ನೋಡಿ: Walker, 89-92.

| | |
|---|---|
| Gk. | Greek (ಗ್ರೀಕ್ ಭಾಷೆ) |
| Lat. | Latin (ಲತೀನ್ ಭಾಷೆ) |
| NT | New Testament (ಹೊಸ ಒಡಂಬಡಿಕೆ–ಬೈಬಲಿನ ಪ್ರಧಾನ ಭಾಗ) |
| q | question |
| QS | Qumran Scrolls (ಖುಮ್ರಾನ್ ಸುರುಳಿಗಳು) |
| SS | Sunya Sampadane (1965–72) |
| ST | St. Thomas |

**೪.೨ ಬೈಬಲ್ ಗ್ರಂಥಗಳ ಸೂಚಿ**

| | | |
|---|---|---|
| ಆಕೃ | ಆಪೊಸ್ತಲರ ಕೃತ್ಯಗಳು | Acts |
| ಇಬ್ರಿ | ಇಬ್ರಿಯರಿಗೆ | Hebrews |
| ಎಫೆ | ಎಫೆಸದವರಿಗೆ | Ephesians |
| ಎಸ್ರ | ಎಸ್ರನು | Ezra |
| ಕೀ | ಕೀರ್ತನೆ | Psalm |
| ೧ ಕೊರಿ | ೧ ಕೊರಿಂಥದವರಿಗೆ | ೧ Corinthians |
| ೨ ಕೊರಿ | ೨ ಕೊರಿಂಥದವರಿಗೆ | ೨ Corinthians |
| ಕೊಲೊ | ಕೊಲೊಸ್ಸೆಯವರಿಗೆ | Colossians |
| ಗಲಾ | ಗಲಾತ್ಯದವರಿಗೆ | Galatians |
| ೧ ತಿಮೊ | ೧ ತಿಮೊಥೆಯನಿಗೆ | ೧ Timothy |
| ಫಿ | ಫಿಲಿಪ್ಪಿಯವರಿಗೆ | Philippians |
| ಮತ್ತಾ | ಮತ್ತಾಯ | Matthew |
| ಯಾಜ | ಯಾಜಕ ಕಾಂಡ | Leviticus |
| ಯೋಹಾ | ಯೋಹಾನ | John |
| ರೋ | ರೋಮಾಪುರದವರಿಗೆ | Romans |
| ವಿಮೋ | ವಿಮೋಚನಾ ಕಾಂಡ | Exodus |

**೪.೩ ಆಕರ ಸೂಚಿ:**

**೪.೩.೧ ಕ್ರೈಸ್ತ ಸಾಹಿತ್ಯ:**

೧. ಮಾಡ್ತ, ವಿಲ್ಯಂ; "ಕ್ರೈಸ್ತೋಪಾಸನೆ ಮತ್ತು ಸಂಸ್ಕಾರಗಳು (ಜಾನಪದ ವೈಜ್ಞಾನಿಕ ಭಾಷ್ಯ)", ಕರ್ನಾಟಕ ಭಾರತಿ (೧೫.೧–೨ : ೧೨೧–೧೩೬), ಧಾರವಾಡ : ಕರ್ನಾಟಕ ವಿಶ್ವವಿದ್ಯಾಲಯ, ೧೯೮೨.

2. Boyd, Robin H. S. Kristadvaita : A Theology for India, Madras : The Christian Literature Society, 1977.

3 Flannery (D.P), Austin. (Gen.Ed.) Vatican Council II, Collegeville/Minnesota : The Liturgical Press, 1975.

4. Greeley, Andrew M. The Great Mysteries : An Essential Catechism (A Crossroad Book) No. Y : The Seabury Press.

5. Jones, Alexander (Ed) The Jerusalem Bible, London : Darton, Longman & Todd, 1966.

6. Leon-Dufour, Xavier (Ed). Dictionary of Biblical Theology, Bangalore : Theological Publications in India, 1973.

7. Lindsell, Harold (Ed.) Lindsell Study Bible : The Living Bible Paraphrased, Wheatan Illinois : Tyndale House Publishers, Ine, 1980.

8. long (C.Ss.R.), T.K. The Mass and the Scraments according to their New Rites, Bombay : St. Paul Publications, 1983.

9. Mckenzie (S.J.) John L. Dictionery of the Bible, Bangalore : Asian Trading Corporation, 1984.

10. Rahner, Karl (Ed.) Encyclopedia of Theology : A Concise Sacramentum Mundi, London : Burns & Octes, 1975.

11. Smyth, Kevin (Tr.) A New Catechism, London : Search Press, 1980.

12. Walker (O.F.M.), John Baptist. New Theology for Plain Christians, London : Darton, Langman & Todd, 1970.

### ೪.೩.೨ ವೀರಶೈವ ಸಾಹಿತ್ಯ :

೧೩. ಗುಬ್ಬಣ್ಣನವರ, ಶಿವಾನಂದ. ಲಿಂಗಾಯತ ಸಂಸ್ಕಾರಗಳು, ಧಾರವಾಡ : ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ೧೯೮೪.

೧೪. ಜ.ಚ.ನಿ. (ಡಾ. ಶ್ರೀ) ಸಂಪಾದನೆಯ ಸೊಂಪು (ಎಸಳೆರಡು), ಬಾಗಲಕೋಟೆ : ಶಿವಾನುಭವ ಸಂಘ, ೧೯೭೮.

೧೫. ಮಾಡ್ತ, ವಿಲ್ಯಂ; "ಕಾಯಕ ಮತ್ತು ಸತ್ಕರ್ಮ" ಎಂ. ಎಂ. ಕಲಬುರ್ಗಿ (ಸಂ), ಶಿವಶರಣರ ಕಾಯಕ ಸಿದ್ಧಾಂತ, ಧಾರವಾಡ : ಶ್ರೀ ಬಸವೇಶ್ವರಪೀಠ, ಕರ್ನಾಟಕ ವಿಶ್ವವಿದ್ಯಾಲಯ, ೧೯೮೫.

16. Kumaraswamiji (Shree) "Virasaivism" Haridas Bhattacharya (Ed.) The Cultural Heritage of India, Vol. IV, The Religious, Calcutta : The Ramakrishna Mission, Institute of Culture, 1969 (Reprint).
17. Lingananda (Swami). Emblem of God, S.M. Angadi (Tr.) Dharwad : Jaganmata Akkamahadevi Ashrama, 1973.
18. Madtha, William. "Virasaivism and Christinity : A Dialogue on Doctrines" Journal of Dharma, Bangalore : Dharma Research Association, Centre for the study of World Religions, (July-Sept; 1983)
19. Mahedevi (Jagadgure Mata). A Guide to Lingayatism, Dharwar : Jaganmata Akkamahadevi Ashrama, 1973.
20. Michael, Randall Blake. Astavarna in the Sunya Sampadane A Thesis presented to the Committee on the study of Religion in partial fulfillment of the requirements for the degree of Doctor of Philosophy in the subject of Camparative Relgion. Cambridge, Massachusets : Harvard University 1979. (unpublished).
21. Nandimath. S.C. A Hand book of Virasaivism, Dharwar : L.E. Association, 1942.

●

# ಶಿವಯೋಗ ಮತ್ತು ಪೂರ್ಣಯೋಗ

—ಕೋ. ಚೆನ್ನಬಸಪ್ಪ

ಯೋಗ ಅಂದರೇನು? ಈ ಮಾತು ಈಗ ಅನೇಕ 'ಅರ್ಥ'ಗಳನ್ನು ಹೊಂದಿದೆ. ಜ್ಞಾನಯೋಗ, ಭಕ್ತಿಯೋಗ ಕರ್ಮಯೋಗ, ಹಠಯೋಗ ರಾಜಯೋಗ ಎಂಬ ಪ್ರಖ್ಯಾತ ಯೋಗಗಳಲ್ಲದೆ, ದೇಹಾರೋಗ್ಯಕ್ಕೆ ಸಂಬಂಧಿಸಿದ ಅಂಗ ಸಾಧನೆಯನ್ನು ಯೋಗಾಭ್ಯಾಸ ಎಂದು ಕರೆಯುವ ವಾಡಿಕೆಯೂ ಉಂಟು. ಭಗವದ್ಗೀತೆ ಅರ್ಜುನನ ವಿಷಾದ ಯೋಗದಿಂದ ಪ್ರಾರಂಭವಾಗುತ್ತದೆ! ಅಂದರೆ ವಿಷಾದವೂ ಒಂದು ಯೋಗ ಮಾರ್ಗ ಎಂದಂತಾಯಿತು. ಗೀತೆಯಲ್ಲಿ ಸಂನ್ಯಾಸಯೋಗ, ಅಕ್ಷರ ಬ್ರಹ್ಮಯೋಗ, ರಾಜವಿದ್ಯಾ-ರಾಜ್ಯಗುಹ್ಯ ಯೋಗ,ವಿಭೂತಿಯೋಗ, ಕ್ಷೇತ್ರ ಕ್ಷೇತ್ರಜ್ಞಯೋಗ, ಜ್ಞಾನವಿಜ್ಞಾನಯೋಗ, ಪುರುಷೋತ್ತಮಯೋಗ, ಶ್ರದ್ಧಾತ್ರಯ ವಿಭಾಗಯೋಗ, ಮೋಕ್ಷ ಸಂನ್ಯಾಸಯೋಗ- ಎಂಬ ವಿವಿಧ ಯೋಗಗಳಿಗಾಗಿ ಮೀಸಲಾದ ಅಧ್ಯಾಯಗಳೂ ಇವೆ. ಈ ಅಧಿಕೃತ ಅಂಗೀಕೃತ ಯೋಗ ಪದ್ಧತಿಗಳಲ್ಲದೆ ವಿದೇಶಗಳಲ್ಲಿ ಪ್ರಚಾರದಲ್ಲಿರುವ ಲಾಭದಾಯಕ ವ್ಯಾಪಾರೀ ದೃಷ್ಟಿಯ ಯೋಗಗಳೂ ಅನೇಕ! ಅಂಗ ಸಾಧನೆಯಿಂದ ಹಿಡಿದು ಆಧ್ಯಾತ್ಮ ಸಾಧನೆಯವರೆಗೆ ವ್ಯಾಪಿಸಿರುವ ಯೋಗಗಳು ಸಾಧಾರಣ ಜನರಿಗೆ ದಿಗ್ಭ್ರಮೆಯನ್ನು ಉಂಟು ಮಾಡುತ್ತಿವೆ. ಯೋಗ ಎಂದರೆ ಗೊಂದಲವುಂಟಾಗುವಂತಾಗಿದೆ! ಆದರೂ ಎಲ್ಲರ ನಾಲಗೆಯ ಮೇಲೂ ಯೋಗ ಎಂಬ ಮಾತು ಬಳಕೆಯಲ್ಲಿದೆ. ಹೆಚ್ಚು ಹೆಚ್ಚು ಜನ ಯೋಗವನ್ನು ಬಯಸುವಂತೆ ಕಾಣುತ್ತದೆ. ಸ್ಪಷ್ಟವಾಗಿ ತಿಳಿಯದಿದ್ದರೂ ತಮತಮಗೆ ತೋಚಿದ ಯಾವುದೊ ಗುರಿ ಸಾಧನೆಗಾಗಿ ಯೋಗ ಪಥವನ್ನು ಅನುಸರಿಸುವುದಾಗಿ, ಯೋಗಾಭ್ಯಾಸ ಮಾಡುವುದಾಗಿ ಜನ ಭಾವಿಸುತ್ತಾರೆ.

ಯೋಗ ಎಂಬ ಮಾತಿನ ನಿಜವಾದ ಅರ್ಥವೇನು? ಆ ಸಂಸ್ಕೃತ ಪದ ಹೇಗೆ ಹುಟ್ಟಿತು ಎಂಬ ನಿಷ್ಪತ್ತಿ ವ್ಯಾಖ್ಯಾನದಿಂದಲೂ ಹೆಚ್ಚಿನ ಬೆಳಕು ದೊರೆಯ-ಲಾರದು. ಇದರ ವಿರುದ್ಧ ಪದ-ವಿಯೋಗ ಎಂದರೇನೆಂಬುದನ್ನು ತಿಳಿಯುವುದರ ಮೂಲಕ 'ಯೋಗ'ದ ಅರ್ಥವನ್ನು ಗ್ರಹಿಸುವುದು ಸುಲಭವಾಗಬಹುದು. ಪತಿವಿಯೋಗ, ಪತ್ನಿವಿಯೋಗ, ಭ್ರಾತೃವಿಯೋಗ ಮುಂತಾದ ಮಾತುಗಳನ್ನು ಕೇಳುತ್ತೇವೆ. ಅವುಗಳ ಅರ್ಥ ಥಕ್ಕನೆ ಹೊಳೆಯುತ್ತದೆ. ರಾವಣ ಸೀತಾಪಹರಣ ಮಾಡಿ ಆಕೆಯನ್ನು ಅಶೋಕವನದಲ್ಲಿಟ್ಟಾಗ ಸೀತೆಗೆ ಪತಿವಿಯೋಗ ದುಃಖ; ಶ್ರೀರಾಮನಿಗೆ ಪತ್ನಿ ವಿಯೋಗ ದುಃಖ. ಪತಿ-ಪತ್ನಿಯರು ಅಗಲಿದಾಗ ಆಗುವ ಸಂಕಟವನ್ನು ಸೀತಾರಾಮರ ವಿಯೋಗ ದುಃಖದಿಂದಲೆ ತಿಳಿಯ

ಬೇಕಾಗಿಲ್ಲ. ಮದುವೆಯಾದ ಎಲ್ಲರಿಗೂ ಆ ವಿಯೋಗ ಅನುಭವವಾಗುತ್ತದೆ ಹಾಗೆಯೇ ಧನಿಕನಿಗೆ ಧನಹಾನಿ ಆದಾಗ ಧನವಿಯೋಗದ ದುಃಖ. ದುಃಖವುಂಟಾಗಲು ವಸ್ತುಕಳೆದು ಹೋಗಲೆಬೇಕಾಗಿಲ್ಲ. ಎಲ್ಲಿಯಾದರೂ ಇಟ್ಟು ಮರೆತು ಹೋದರೂ ವಿಯೋಗ ದುಃಖ ವುಂಟಾಗುತ್ತದೆ. ಒಟ್ಟು ಹಿಂದೆ ಇದ್ದು ಈಗ ಇಲ್ಲದಂತೆ ಆದಾಗ ಅಥವಾ ಇದ್ದರೂ ಇಲ್ಲ ಎಂಬ ಆಭಾಸವುಂಟಾದಾಗ ವಿಯೋಗ ದುಃಖ ತಪ್ಪಿದ್ದಲ್ಲ.

ಈಗ ಸ್ವಲ್ಪಮಟ್ಟಿಗೆ 'ಯೋಗ' ಎಂದರೇನೆಂಬುದು ಅರ್ಥವಾಗಬಹುದು. ಹಿಂದೆ ಇದ್ದು ಈಗ ಇಲ್ಲದಂತೆ ಭಾಸವಾಗುವ, ಇಲ್ಲವೆ ವಾಸ್ತವವಾಗಿ ಕಳೆದು ಹೋಗಿರುವ ಅಥವಾ ಮರೆತು ಹೋಗಿರುವ, ಮರೆಯಾಗಿರುವ ಯಾವುದೇ ವಸ್ತುವನ್ನು ಮರಳಿ ಪಡೆಯಲು ಮಾಡುವ ಪ್ರಯತ್ನ, ಪರಿಶ್ರಮ ಯೋಗ ಸಾಧನೆ ಎನ್ನಬಹುದು. ಅಂದರೆ ಹಿಂದೊಮ್ಮೆ ಕೂಡಿದ್ದು ಇಂದು ಬೇರೆಯಾಗಿರುವ—ಯುಕ್ತವಾಗಿದ್ದುದು ವಿಮುಕ್ತವಾಗಿ ರುವ-ಸ್ಥಿತಿಯಿಂದ ಮುಕ್ತವಾಗಿ ಮತ್ತೆ ಹಿಂದಿದ್ದ ಸಂಯುಕ್ತ ಸ್ಥಿತಿಗೆ ಹಿಂದಿರುಗಲು, ಮತ್ತೆ ಕೂಡಿಕೊಳ್ಳಲು ಮಾಡುವ ಸಾಧನೆಯೆ ಯೋಗ ಸಾಧನೆ. ಯೋಗ ಎಂಬ ಸಂಸ್ಕೃತ ಶಬ್ದ 'ಯುಜ್' ಧಾತುವಿನಿಂದ ಬಂದಿದೆ. ಯೋಗ ಎಂದರೆ ಒಂದರೊಡನೆ ಇನ್ನೊಂದು ಕೂಡುವಿಕೆ.

ಹಾಗಾದರೆ ಹಿಂದಿದ್ದ ಸ್ಥಿತಿ ಯಾವುದು? ವಿಯೋಗ ಹೇಗಾಯಿತು? ಏಕಾಯಿತು? ಬಂದಿರುವ ದುಃಖವೇನು? ಅದರಿಂದ ಪಾರಾಗುವುದು ಹೇಗೆ? ಇದೇ ಇಡೀ ಸಚರಾಚರ ಸೃಷ್ಟಿಯ ಸಮಸ್ಯೆ. ಈ ಸಮಸ್ಯೆ ಕೇವಲ ಮಾನವ ಜೀವಿಗೆ ಮಾತ್ರ ಸೀಮಿತವಲ್ಲ, ಮಾನವ ಜೀವಿ ಸೃಷ್ಟಿಯ ಮುಕುಟಮಣಿ ಎಂಬ ಕಾರಣದಿಂದ ಅವನು ತನ್ನ ವಿಯೋಗ ದುಃಖವನ್ನು ಸೃಷ್ಟಿಯ ಇನ್ನಿತರ ಯಾವುದೇ ಸಜೀವ ಪ್ರಾಣಿಗಿಂತ ಸ್ಪಷ್ಟವಾಗಿ ತೀವ್ರವಾಗಿ ಅನುಭವಿಸುತ್ತಾನೆ. ಅಂದಮಾತ್ರಕ್ಕೆ ನಿರ್ಜೀವ ಎಂದು ನಾವು ಭಾವಿಸಿರುವ ಸೃಷ್ಟಿ-ನೆಲ, ನೀರು, ಗಿಡಮರ, ಬೆಟ್ಟ, ಕಾಡು ದುಃಖವನ್ನು ಅನುಭವಿಸುತ್ತಿಲ್ಲ ಎಂದಲ್ಲ, ಪಶು ಪಕ್ಷಿ ಪ್ರಾಣಿ ಕ್ರಿಮಿ ಕೀಟಗಳು ದುಃಖವನ್ನು ಅನುಭವಿಸುತ್ತಿಲ್ಲ ಎಂದಲ್ಲ, ಅದರಿಂದ ಬೇರೆ ಯಾಗಿ ಬಂದಿರುವ ಇದೆಲ್ಲವೂ ಅದರ ವಿಯೋಗದಿಂದ ತಪ್ತವಾಗಿದೆ. ಅಷ್ಟೇಕೆ? ಅದೇ—ತತ್—ಇದಾಗಿರುವುದರಿಂದ, ಅದೇ ಇದಾಗಿ ದುಃಖವನ್ನು ಅನುಭವಿಸುತ್ತಿದೆ. ಆದ್ದರಿಂದ ಇದನ್ನು ಸೃಷ್ಟಿ ಮಾಡಿದ ಅದು, ಇದನ್ನು ದುಃಖಕ್ಕೆ ಈಡುಮಾಡಿ ತಾನು ಮಾತ್ರ ತನ್ನ ಆನಂದದಲ್ಲಿ ತಾನೆ ತಲ್ಲೀನವಾಗಿದೆ ಎಂದಲ್ಲ, ಅದೂ ಇದಾಗಿ ವಿಯೋಗ ದುಃಖವನ್ನು ಅನುಭವಿಸುತ್ತಿದೆ. ಈ ವಿಯೋಗ ದುಃಖದಿಂದ ಪಾರಾಗಲು ಇದು ಮತ್ತೆ ತನ್ನ ಸ್ವಸ್ಥಾನ ಅದರೊಳಗೆ ಒಂದುಗೂಡಬೇಕು—ಯೋಗ ಯುಕ್ತವಾಗಬೇಕು.

೨

ಸೃಷ್ಟಿಗೆ— ಅದರ ಅವಿಭಾಜ್ಯ ಅಂಗ, ಅಂಶವಾದ ಜಗತ್ತು ಮತ್ತು ಜೀವಕ್ಕೆ

ಒದಗುವ ಈ ವಿಪತ್ತನ್ನು ನಮ್ಮ ಪುರಾಣಗಳಲ್ಲಿ ವಿಭೂತಿ ಪುರುಷರ, ಅವತಾರಗಳ ಜನನದ ಕಟ್ಟು ಕತೆಯಲ್ಲಿ ಕವಿಗಳು ತೋರಿಸುತ್ತಾರೆ. ಬಸವಣ್ಣನ ಜನನ ವೃತ್ತಾಂತವನ್ನು ಹರಿಹರ ಕವಿ ಕೈಲಾಸದಲ್ಲಿ ಅಭವ ಗಿರಿಜೆಯೊಡನೆ ಒಡ್ಡೋಲಗದಲ್ಲಿದ್ದಾಗ ವೃಷಭ ಮುಖನಿಗೆ ಧರೆಯೊಳಗೆ ಹುಟ್ಟೆಂದು ಆಜ್ಞೆಮಾಡುತ್ತಾನೆ. ಆಗ ವೃಷಭಮುಖ

"ಕೊರಗಿ ಕಳೆಗುಂದಿ ಬಿನ್ನೈಸಿದಂ ಕೇಳುತಿರೆ
ಇಂದುಧರ ಚಿತ್ತೈಸೆನುತ್ತಂದು ಕೈಮುಗಿದು
..........................................
ಕಾಮಾರಿ ಪಡುವರ್ಗದುಬ್ಬರು ಧರೆಯಲ್ಲಿ
ಸೋಮಧರ ತಾಪತ್ರಯದ ಬೇಗೆ ಪಿರಿದಲ್ಲಿ
ಅಲ್ಲಿ ಜನಿಯಿಸಿ ಬಳಿಕ್ಕೆಂದುಬರ್ಪೆಂ ದೇವ
ಎಲ್ಲ ತೆರದಿಂ ದೂರವಪ್ಪೆಂ ದೇವ...."

ಎಂದು ವೃಷಭಮುಖ ತನ್ನ ಸಂಕಟವನ್ನು ತೋಡಿಕೊಳ್ಳುತ್ತಾನೆ. ಈ ಕಟ್ಟುಕತೆಯ ದಾರ್ಶನಿಕ ಸತ್ಯ— ಶಿವನಿಂದಲೆ ಜೀವ ಬೇರೆಯಾಗಿ ಬರುತ್ತದೆ. ಹಾಗೆ ಬೇರೆಯಾಗಿ ಸೃಷ್ಟಿಯಾಗುವುದೆ ಜೀವಕ್ಕೆ ಬಡಿದ ಸಂಕಟ, ಶಿವನಿಂದ ದೂರವಾಗುವ ಬೇಗೆ-ದುಃಖ-ಜೀವನವನ್ನು ಸುಡುತ್ತದೆ. ಆ ದುಃಖವೆ ಬಳಿಕ ಸ್ವಸ್ಥಾನಕ್ಕೆ ಹಿಂದಿರುಗಲು ಅಗತ್ಯವಾಗಿ ಬೇಕಾದ ಸಹಾಯಕ ಶಕ್ತಿ, ಆದ್ದರಿಂದ ದುಃಖ ಜೀವಕ್ಕೆ ಅನಿವಾರ್ಯ, ನಮ್ಮನ್ನು ಮತ್ತೆ ಅವನತ್ತ ಕೊಂಡೊಯ್ಯುವ ನಿಮಿತ್ತ ಮತ್ತು ಹೆದ್ದಾರಿ, ಈ ದುಃಖದಲ್ಲಿ ಅವನೂ ಭಾಜನನೆ. ವೃಷಭಮುಖನಿಗೆ ಅಭವ ಅಭಯ ನೀಡುತ್ತಾನೆ.

"ಎನೆ ಶಿವಂ ನಸುನಗುತ್ತಂಜಬೇಡೆಲೆ ಮಗನೆ
ನಿನಗೆ ಹಿತನಾಗಿ ಸಖನಾಗಿ ಒಪ್ಪೆಂ ಮಗನೆ"

ಹೀಗೆ ಜೀವ ಶಿವನಿಂದ ಬೇರೆಯಾಗಿ ಇಹಕ್ಕೆ ಬಂದರೂ ಶಿವನೇನೂ ಜೀವವನ್ನು ಬಿಟ್ಟಿರುವುದಿಲ್ಲ. ಜೀವನ ಜೊತೆಗೆ ಶಿವನೂ ಬರುತ್ತಾನೆ. ಜೊತೆಗಿದ್ದರೂ ಜೀವ ಶಿವನನ್ನು ಮರೆತು, ಮರುಳಾಗಿ ವಿಕಳಾವಸ್ಥೆ ಹೊಂದಿ ಮತ್ತೆ ಅರಿತು ಮರಳಿ ಪಡೆಯಬೇಕು. ತಾನು ಅದೇ ಆಗಿದ್ದರೂ, ತಾನಾರೆಂಬ ಅರಿವಿಲ್ಲದೆ ಪರಿತಪಿಸುತ್ತದೆ ಜೀವ; ಲಿವಿಲಿವಿ ಒದ್ದಾಡುತ್ತದೆ. ಸ್ವಸ್ವರೂಪದ ಅರಿವು ಉಂಟಾದರೆ ನಾನು ನೀನೆಂಬ ಭೇದವು ಅಳಿಯುತ್ತದೆ. ಶಿವ ಜೀವರ ಸಾಮರಸ್ಯವುಂಟಾಗುತ್ತದೆ. ಇದನ್ನು ಲಿಂಗಾಂಗ ಸಾಮರಸ್ಯ ಎಂದು ವೀರಶೈವ ದರ್ಶನದಲ್ಲಿ ಕರೆಯಲಾಗಿದೆ. ಶಿವಯೋಗವೆಂದೂ ಹೇಳುತ್ತಾರೆ.

ಯಾವುದೊ ಒಂದು ಅನಾದಿ ಏಕಮೇವಾ ದ್ವಿತೀಯ ಚಿದ್ವಸ್ತು ಇದೆ. ಅದು ವಾಙ್ಮನಕ್ಕಗೋಚರ. ಅದು ಏನೆಂದು ನಿರ್ವಚಿಸಲು ಸಾಧ್ಯವಿಲ್ಲ, ಅವರ್ಣನೀಯ. ಅದಕ್ಕೆ ಯಾವ ವರ್ಣವೂ ಇಲ್ಲ. ವರ್ಣಾತೀತ, ಅದು ಗಂಡೂ ಅಲ್ಲ; ಹೆಣ್ಣೂ ಅಲ್ಲ; ಲಿಂಗಾತೀತ.

ಅದೇ ಎಲ್ಲದಕ್ಕೂ ಆದಿಮೂಲ. ಏನೆಂದು ಹೇಳಲು ಬಾರದ ಅದನ್ನು ಉಪನಿಷತ್‌ಕಾರರು 'ತತ್' ಎಂದು ನಿರ್ದೇಶಿಸಿದರು. ಅದರಿಂದಲೇ ಇದು (ಸೃಷ್ಟಿ) ಆಗಿರುವುದು. ಜೀವ ಜಗತ್ತು ಸಕಲ ಸೃಷ್ಟಿ ಅದರ ಗರ್ಭದಿಂದಲೆ ಬಂದಿದೆ. ಈ ಸತ್ಯವನ್ನು ಪ್ರಭುದೇವರು ಮುಕ್ತಾಯಕ್ಕಗಳಿಗೆ ತಮ್ಮ ಕುರುಹು ಹೇಳುವ ವಚನದಲ್ಲಿ ಹೀಗೆ ನಿರೂಪಿಸಿದ್ದಾರೆ.

"ಧರೆಯಾಕಾಶ ಮನೆಗಟ್ಟದಂದು, ಹರಿವನಿಲ ಅಗ್ನಿ ಜಲಮೊಳೆದೋರದಂದು ಹುಟ್ಟಿದಳೆಮ್ಮವ್ವೆ. ಅದಕ್ಕೆ ಮುನ್ನವೆ ಹುಟ್ಟಿ ಬೆಳೆದೆನೆಮ್ಮಯ್ಯ. ಈ ಇಬ್ಬರ ಬಸುರಲ್ಲಿ ಬಂದೆ ನಾನು."

ಶೂನ್ಯ ಸಂಪಾದನೆಯಲ್ಲಿ ಅಜಗಣ್ಣ (ಬ್ರಹ್ಮನ ವಿಯೋಗದಿಂದ ದುಃಖಿಸುವ ಅವನ ತಂಗಿ ಮುಕ್ತಾಯಕ್ಕ ಲೋಕದ ತಪ್ತ ಜೀವರ ಪ್ರತಿಮಾ ಪಾತ್ರ, ಅಂಥ ನಿಜವಾದ ಐತಿಹಾಸಿಕ ವ್ಯಕ್ತಿಗಳು (ಅಜಗಣ್ಣ–ಹುಟ್ಟಿದ, ಹುಟ್ಟಿಲ್ಲದ ಅಜ ಬ್ರಹ್ಮ; ಅವನ ತಂಗಿ ಮುಕ್ತಾಯಕ್ಕ) ಇದ್ದರೊ ಇಲ್ಲವೊ ಹೇಳಲುಬಾರದು. ಲಕ್ಕುಂಡಿಯ ಬಳಿ ಅಂಥ ಮಹಿಳೆಯೊಬ್ಬಳಿದ್ದಳೆಂಬುದನ್ನು ನಂಬಿದರೆ ನಂಬಿ; ಬಿಟ್ಟರೆ ಬಿಡಿ. ಆದರೆ ಅಜಗಣ್ಣ ಮುಕ್ತಾಯಕ್ಕಗಳ ಪ್ರತಿಮಾ ರೂಪಕ ವ್ಯಕ್ತಿಗಳು ಶಿವನಿಂದ ಬೇರೆಯಾಗಿ ಬಂದ ಜೀವರು ಗಳ ಪ್ರತಿಮಾ ರೂಪಗಳೆಂದು ನಿಸ್ಸಂದೇಹವಾಗಿ ಹೇಳಬಹುದು. ಅಜಗಣ್ಣನ ಸಾವಿನಿಂದ (ಹುಟ್ಟಿದವನು ಸತ್ತನೆಂಬುದು ಪರಸ್ಪರ ವಿರುದ್ಧ) ಮುಕ್ತಾಯಕ್ಕ ಪರಿತಪಿಸುತ್ತಿದ್ದಳು ಎಂಬ ಉಪಮಾ ರೂಪಕದ ಹಿಂದಿರುವ ದರ್ಶನ ಸತ್ಯವನ್ನು ಗಮನಿಸಬಹುದು.

ಶಿವನಿಂದ ಬೇರೆಯಾಗಿ ದೂರ ಬಂದಿರುವ ಜೀವನ ಮರುಪಯಣ ದುಃಖದಿಂದಲೆ ಮೊದಲಾಗಬೇಕು. ಮರಣಕ್ಕಿಂತ ದುಃಖದಾಯಕವಾದ ಸಂಗತಿ ಮತ್ತೊಂದಿಲ್ಲ. ಆದ್ದ ರಿಂದಲೆ ದುಃಖವನ್ನು ಮುಂದಿಟ್ಟು ಯೋಗಪಾಠದ ಶ್ರೀಕಾರ ಪ್ರಾರಂಭವಾಗುತ್ತದೆ. ಗೀತೆ ವಿಷಾದ ಯೋಗದಿಂದ ಮೊದಲಾಗುತ್ತದೆ. ಸಂಕೇತ ಮೃತ್ಯು ದೇವತೆ ಯಮನ ಬಾಗಿಲಿಗೆ ಹೋಗಿಯೆ ಆತ್ಮಜ್ಞಾನವನ್ನು ಪಡೆಯುತ್ತಾನೆ. ಬುದ್ಧನ ಸಂನ್ಯಾಸ ಯೋಗಕ್ಕೆ ನಾಂದಿಯೂ ಆ ದಿನ ಅರಸುಕುಮಾರ ಸತ್ತ ಹೆಣವನ್ನು ಕಂಡದ್ದೇ. ಶೂನ್ಯ ಸಂಪಾದನೆ ಅಜಗಣ್ಣನ ಸಾವಿನಿಂದ ದುಃಖಿತಳಾದ ಮುಕ್ತಾಯಕ್ಕನ ಪ್ರಲಾಪದಿಂದಲೆ ಮೊದ ಲಾಗುತ್ತದೆ.

ಪ್ರಾಪಂಚಿಕ ದೃಷ್ಟಿಯಿಂದಲೂ ದುಃಖವೆ ಮಾನವನನ್ನು ಆಧ್ಯಾತ್ಮ ಮುಖಿಯನ್ನಾಗಿ ಮಾಡುವುದು ನಿತ್ಯ ಲೋಕಾನುಭವ. ದೇಹದ ಅನಾರೋಗ್ಯ, ದಾರಿದ್ರ್ಯದ ಬೇಗೆ, ಆಗದವರ ವೈಷಮ್ಯ, ಮಾತ್ಸರ್ಯ, ಬಂಧು ಬಳಗದವರಲ್ಲಿ ಕಲಹ, ವಿರಸ, ಇ....ಇ.... ಅನೇಕ ಕಾರಣಗಳಿಂದ ಜೀವ ಬೇಸತ್ತು–'ಶಿವನೆ, ಸಾಕು ಮಾಡು ತಂದೆ' ಎಂದು ಮೊರೆ ಯಿಡುವಾಗಲೂ, ಈ ದಾರಿದ್ರ್ಯ, ಅನಾರೋಗ್ಯ, ದ್ವೇಷ, ಮದ, ಮತ್ಸರ, ಕಾಮ ಕ್ರೋಧಗಳಿಂದ ಬಿಡುಗಡೆ ಹೊಂದಿ ಇವು ಯಾವುದರಿಂದಲೂ ಬಾಧಿಸಲಾಗದ ಆ ಶಾಂತಿ

ಯಲ್ಲಿ ನೆಲೆಸುವ ಹಂಬಲವೆ ಹುದುಗಿದೆ. ಅದರಂತೆಯೆ ಈ ಪ್ರಾಪಂಚಿಕ ಸುಖ ಸಂಪತ್ತನ್ನು ಕೆಟ್ಟರೆಯಾಗುವಂತೆ ಸವಿದರೂ ಪಾಶ್ಚಾತ್ಯ ಲೋಕದಲ್ಲಿ ಪ್ರಾಪಂಚಿಕ ಸುಖ ಬೇಕಾದಷ್ಟು ಇದ್ದರೂ ಅವರಿಗೆ ಏನೋ ಒಂದು ಕೊರತೆ. ಎಲ್ಲ ಇದ್ದರೂ ಏನೂ ಇಲ್ಲದವರಂತೆ ತಡಕಾಡುತ್ತಿದ್ದಾರೆ. ಯಾವುದೊ ಒಂದು ಕೊರಗು. ಇದೂ ದುಃಖವೆ. ಆ ದುಃಖ ನಿವಾರಣೆಗಾಗಿಯೆ ಯೋಗಕ್ಕೆ ತಿರುಗುತ್ತಾರೆ ಅಲ್ಲಿಯ ಜನ. ಅಂದರೆ ಅದೇನೊ ಒಂದು ಇದೆಯಲ್ಲ, ಅದರೊಡನೆ ಅನುಸಂಧಾನ ಮಾಡಲು, ಕೊನೆಗೆ ಅದರೊಡನೆ ಒಂದಾಗಲು ಮಾಡುವ ಪ್ರಯತ್ನವೆ ಯೋಗ.

ಅದರೊಡನೆ ಒಂದಾದ ಮಾತ್ರಕ್ಕೆ ಜೀವರ ಈ ಕೊರಗು, ಕೊರತೆ ನೀಗುವುದೆ? ಅದು ಆನಂದ ಸ್ವರೂಪಿ. 'ಆನಂದಂ ಬ್ರಹ್ಮೇತಿ ವ್ಯಜನಾತ್' ಆ ಆನಂದದಲ್ಲಿ ತಲ್ಲೀನ ವಾದರೆ ಸುಖದುಃಖ, ಶೀತೋಷ್ಣ, ಮಾನಪಮಾನ, ಜಯಾಪಜಯ ಎಂಬ ಯಾವ ಬಾಧೆಯೂ ತಟ್ಟದು ಎಂದು ಅದರ ಸ್ಪರ್ಶವುಂಟಾದವರ ಅನುಭವ, ಅನುಭವಿಗೆ ಮಾತ್ರ ವೇದ್ಯ ಆ ತಾದಾತ್ಮ್ಯೆಯ ಸುಖ ಅಂಥ ಅನುಭವ ಅನುಭವ ಮಂಟಪದ ಅನುಭಾವಿ ಗಳಿಗೆ ಉಂಟಾಗಿತ್ತು. ಆ ಅನುಭವ ಅವರಿಗೆ ಹೇಗೆ ಉಂಟಾಯಿತು? ಅದನ್ನು ಪಡೆಯಲು ಅವರು ಅನುಸರಿದ ಮಾರ್ಗವೇನು?

೩

ಪರಿತಪಿಸುವ ಜೀವಕ್ಕೆ ದಾರಿ ತೋರಿಸುವವರು ಯಾರು? ಗುರಿಯನ್ನು ಬಲ್ಲವರು ಗುರಿಯನ್ನು ಮುಟ್ಟಿದವರು, ಗುರಿಮುಟ್ಟುವ ದಾರಿ ತಿಳಿದವರೊಬ್ಬರು ಹಾರೈಸುವ ಜೀವಕ್ಕೆ ನೆರವಾಗಬೇಕು. ಗೊತ್ತಿಲ್ಲದ ಊರಿಗೆ ಕರೆದೊಯ್ಯುವ ಮಾರ್ಗದರ್ಶಿ ಬೇಕು. ಅವನೆ ಗುರು. ಗುರಿಯೂ ದಾರಿಯೂ ಗೊತ್ತಿದ್ದವನೆ ಗುರುವಾಗ ಬಲ್ಲ. ಗುರು ಬೇಕೆ ಬೇಡವೆ ಎಂಬ ವಾದವಿವಾದ ಪ್ರಭುದೇವ ಮುಕ್ತಾಯಕ್ಕಗಳ ಸಂವಾದದಲ್ಲಿ ಬಹು ಸ್ವಾರಸ್ಯವಾಗಿ ನಿರೂಪಣೆ ಆಗಿದೆ. ಆ ತರ್ಕ ಏನೇ ಇದ್ದರು ಕೊನೆಗೆ ಗುರು ಬೇಕೆಂಬುದೆ ಸಿದ್ಧಾಂತ. ದಾರಿ ತೋರಿದ ಮೇಲೆ ಕೊನೆಯಲ್ಲಿ 'ತನ್ನ ತಾನರಿದವಂಗೆ ಅರಿವೆ ಗುರು' ಎಂಬುದೂ ಸತ್ಯ, ಶಿವಯೋಗ ಸಾಧಕನಿಗೆ ಅಗತ್ಯವಾದ ಆವರಣಗಳಲ್ಲಿ ಗುರುವಿಗೆ ಪ್ರಥಮ ಸ್ಥಾನ. ಅವನಿಲ್ಲದೆ ಮುಂದುವರಿಯುವುದು ಕಷ್ಟ. ಅಸಾಧ್ಯವೆಂದರೂ ಸಲ್ಲು ತ್ತದೆ ಅವನನ್ನು ಪಡೆಯುವುದು ಹೇಗೆ? ಯಾರ ಹಾರೈಕೆ ಪ್ರಬಲವಾಗಿರುತ್ತದೆಯೊ ಅವರನ್ನು ಹುಡುಕಿಕೊಂಡು ಗುರು ತಾನಾಗಿಯೆ ಬರುತ್ತಾನೆ. ಗುರು ಕೇವಲ ಉಪದೇಶಕ ನಲ್ಲ. ತನ್ನ ಶಕ್ತಿಯನ್ನು ಶಿಷ್ಯನಿಗೆ ಪ್ರವಹಿಸಿಸಿ ಅವನನ್ನು ಕರೆದೊಯ್ಯುತ್ತಾನೆ.

ಎಲ್ಲಿಗೆ ಕರೆದೊಯ್ಯುತ್ತಾನೆ? ಹಿಂದೆ ಹೇಳಿರುವಂತೆ, ಶಿವನಿಂದ ದೂರವಾದ ಜೀವರನ್ನು ಶಿವನತ್ತ ಕರೆದೊಯ್ದು ಅವನ ಸ್ವಸ್ಥಾನದಲ್ಲಿ ಕುಳ್ಳಿರಿಸುತ್ತಾನೆ. ಶಿವನೆಂದರೆ ಪುರುಷರೂಪೀ ದೈವವಲ್ಲ. ಯಾವುದು ಸಕಲ ಚರಾಚರ ಸೃಷ್ಟಿ ಬ್ರಹ್ಮಾಂಡಕ್ಕೆ ಆದಿಯೂ,

ಮೂಲವೂ ಆಗಿದೆಯೊ ಯಾವುದು ಸರ್ವವನ್ನು ವ್ಯಾಪಿಸಿದೆಯೋ ಯಾವುದು ಇದೆಲ್ಲಕ್ಕೂ ಆಧಾರವಾಗಿದಿಯೊ ಅದು–ತತ್–ಜೀವದ ಲಕ್ಷ್ಯ. ಅದರ ಲಕ್ಷಣವೇನು ?

"ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ:
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ!
ಅಗಮ್ಯ ಅಗೋಚರ ಅಪ್ರತಿಮ"

ಅದನ್ನು ಉಪಮಿಸಲುಬಾರದು.

"ಸಾಕಾರನಲ್ಲ ನಿರಾಕಾರನಲ್ಲ ನೋಡಾ
ಆದಿಯಲ್ಲ ಅನಾದಿಯಲ್ಲ; ಇಹದವನಲ್ಲ ಪರದವನಲ್ಲ,
ಸುಖಿಗವನಲ್ಲ, ದುಃಖಿದವನಲ್ಲ........"
"ಆದಿ ಅನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡ ಇಲ್ಲದಂದು
ನಾದ ಬಿಂದು ಕಳಾತೀತನು....ನಾಮರೂಪ ಕ್ರಿಯಾತೀತನು........
ಅಖಂಡ ಪರಿಪೂರ್ಣನು, ಅಪ್ರಮಾಣ, ಅಗಮ್ಯ ಅಗೋಚರ......."

ಇಂಥ ಎಷ್ಟೋ ಸಾವಿರ ಸುಂದರ ಮಾತುಗಳಲ್ಲಿ ಅದನ್ನು ಕುರಿತು ಹೊಗಳಬಹುದು. ವ್ಯಾಖ್ಯಾನಿಸಬಹುದು. ಆದರೆ ಅರಿಯದ ಜೀವಕ್ಕೆ ಅದೆಲ್ಲ 'ಬಾಯ ಬ್ರಹ್ಮ'. ಗುರುವಿನ ಕೆಲಸ ಉಪದೇಶವಲ್ಲ. ಕರೆದೊಯ್ದು ಗುರಿತೋರಿಸುವುದು. ಆ ಗುರಿಯ ಒಂದು ಕುರುಹು ಸಹಾಯಕ್ಕೆ ಬೇಕು. ಅದನ್ನು ಗುರು ಲಿಂಗರೂಪದಲ್ಲಿ ಕರುಣಿಸುತ್ತಾನೆ. ಆ "ಅಗೋಚರ ಅಗಮ್ಯ ಅಪತ್ರಿಮ. ಅಖಂಡ ಪರಿಪೂರ್ಣನು, ಅಪ್ರಮಾಣ ಅಗೋಚರ" ಬ್ರಹ್ಮವನ್ನು ಶಿಷ್ಯನ ಕರಸ್ಥಲಕ್ಕೆ ತಂದಿರಿಸುತ್ತಾನೆ. ಆ ಕುರುಹೆ ಇಷ್ಟಲಿಂಗ. ಅದು ಶಿವನತ್ತ ಹೋಗಲು ಗುರುಕೊಟ್ಟ ರಹದಾರಿ ಚೀಟಿ. ಲಿಂಗ ಶಿವಯೋಗಿಯ ಎರಡನೆ ಆವರಣ.

ಶಿವಯೋಗ ಪಥವಿಡಿದವನಿಗೆ ಎಂಟು ಸಹಾಯಕ ಸಾಧನಗಳು–ಅಷ್ಟಾವರಣಗಳು ಅಗತ್ಯ ಎಂಬುದಾಗಿ ಶಿವಶರಣರು ಕಂಡ ಅನುಭವ. ಅವು ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ಜಂಗಮ ಎಂಬ ಮಾತಿಗೆ ಈಗ ಎಲ್ಲ ಆಧ್ಯಾತ್ಮಿಕ ಮಾತುಗಳಿಗೆ ಬಂದೊದಗಿದ ವಿಪತ್ತೇ ಬಂದಿವೆ. ಆ ಮಾತನ್ನು ಶಿವ ಶರಣರು ಮೊದಲು ಯಾವ ಅರ್ಥದಲ್ಲಿ ಬಳಸಿದರೊ, ಅದು ಬರಬರುತ್ತಾ ಹಳಸಿ ಮೊದಲಿದ್ದ ಅರ್ಥ ಕಣ್ಮರೆಯಾಗಿ ಹೋಗಿ ವೀರಶೈವ ಧರ್ಮ ವಿರೂಪಗೊಂಡಿದೆ. ಜಂಗಮ ಎಂದರೆ ಇಂದು ಪ್ರಚಲಿತವಾಗಿರುವ 'ಜಂಗಮ'ರ ಮನೆಯಲ್ಲಿ ಹುಟ್ಟಿದವನಲ್ಲ, ಬಿನ್ನಹ ತೀರಿಸಲು ಬರುವ ಅಯ್ಯನವರಲ್ಲ. ಹಾಗಾದರೆ ಯಾರು ಅವನು ?

"ಅಯ್ಯ ಜಂಗಮನೆಂದೆಡೆ ಬಾಯಿಲೆಕ್ಕವೆ? ಜಂಗಮವೆಂದಡೆ ಉಪಾಧಿಕವೆ?
ಜಂಗಮವೆಂದಡೆ ಉಪಾಧಿಕನೆ? ಸ್ತ್ರೀ ಲಂಪಟನೆ? ಈ ಗುಣವುಳ್ಳವನ

ಚರ ಜಂಗಮವೆಂಬೆನೆ? ಎನ್ನೆನು, ಈ ಪಾತಕನ ನುಡಿಯು ಕೇಳಲಾಗದು,
ಜಂಗಮವೆಂತವನೆಂದೊಡೆ ನಿರ್ಲೇಪ, ನಿರುಪಾಧಿಕ, ನಿರ್ಬೋಧ,
ನಿರಾಶ್ರಿತ, ನಿಷ್ಕಾರಣ, ನಿರ್ಲಂಪಟ, ಜಂಗಮ ಈ ಷಡ್ಗುಣಭರಿತನಾದಡೆ
ಜಂಗಮವೆಂಬೆನಯ್ಯಾ........ಸಂಗನ ಬಸವೇಶ್ವರಾ."

ಇಂಥವನು ಜಂಗಮ. ಅವನು ಸಾಕ್ಷಾತ್ 'ಸುಳಿದಾಡುವ ಲಿಂಗ'. ಇಷ್ಟಲಿಂಗವೆ ಮೈದಳೆದು ನಿಂತ ಮಹಂತನವನು, ಗುರುವಿಗೂ ಜಂಗಮನಿಗೂ ವ್ಯತ್ಯಾಸವಿಲ್ಲ. ಗುರು ಇದ್ದೆಡೆಯಿದ್ದು ಶಿಷ್ಯನಿಗೆ ದಾರಿತೋರಿಸುವ ಆಚರಬ್ರಹ್ಮ. ಜಂಗಮ ನಡೆದಾಡುವ ದೈವ. ಎಲ್ಲೆಲ್ಲಿಯೂ, ಎಲ್ಲರಲ್ಲೂ ಸರ್ವಾಂತರ್ಯಾಮಿಯಾಗಿರುವ ಅದನ್ನು ಸಾಕ್ಷಾತ್ಕರಿಸಿಕೊಂಡು ಅದೇ ತಾನಾಗಿ ಅದನ್ನು ಎಲ್ಲೆಲ್ಲಿಯೂ ಎಲ್ಲರಿಗೂ ತೋರಿಸುವ ನಡೆದಾಡುವ ಲಿಂಗವೆ ಜಂಗಮ. ಶಿವಯೋಗಿ ಗುರುಲಿಂಗ ಜಂಗಮರನ್ನು ಒಂದೇ ಎಂದು ಕಾಣುತ್ತಾನೆ. ಇಷ್ಟಲಿಂಗ ಪೂಜೆಯಲ್ಲಿ ನಿರತನಾಗಿದ್ದ ಬಸವಣ್ಣ, ಜಂಗಮ ರೂಪಿಯಾಗಿ ಬಂದ ಅಲ್ಲಮ ಪ್ರಭುವನ್ನು ಲಿಂಗಕ್ಕಿಂತ ಬೇರೆಯಾಗಿ ಕಂಡ ತಪ್ಪನ್ನು ಶೂನ್ಯ ಸಂಪಾದನಕಾರರು ಬಹು ಸುಂದರವಾಗಿ ನಿರೂಪಿಸಿದ್ದಾರೆ. ಅದರ ವಿಸ್ತೃತ ವ್ಯಾಖ್ಯಾನವನ್ನು ಪ್ರೊ. ಭೂಸನೂರು ಮಠರ ಪರಾಮರ್ಶೆಯಲ್ಲಿ ನೋಡಬಹುದು

ಅಷ್ಟಾವರಣದ ಒಂದೊಂದನ್ನೂ ವಿವರವಾಗಿ ಹೇಳುವ ಅಗತ್ಯವಿಲ್ಲ. ಶಿವಯೋಗ ಪಥ ಹಿಡಿದ ಸಾಧಕನು ಗುರುಕರುಣೆಯೆಂಬ ಪಾದೋದಕವನ್ನು ಪಡೆದುಕೊಳ್ಳಲೇಬೇಕು ಗುರುಕಾರುಣ್ಯವಾಗದೆ ಒಂದೆ ಒಂದು ಹೆಜ್ಜೆ ಮುಂದುವರಿಯಲಾರ. ಗುರುಕರುಣೆ ಆದಾಗ ಏನೆಲ್ಲವೂ ಪ್ರಸಾದ ರೂಪದಲ್ಲಿ ಸಿದ್ಧಿಸುತ್ತದೆ. ಮಂತ್ರವಂತೂ ಶಿವಯೋಗಿಯ ಅನಿವಾರ್ಯ ಆವರಣ. ಗುರು ಕರುಣಿಸಿದ ಮಂತ್ರ ಭಕ್ತ ಭಗವಂತನ ನಡುವಿನ ಸಂಪರ್ಕ ತಂತು. ಕೊನೆಗೆ ಮಂತ್ರವೆ ಮಹಾಲಿಂಗವಾಗುವುದು. ನಾಮ–ನಾಮಿಗೆ ಅವಿನಾಭಾವ ಸಂಬಂಧ. ಶಬ್ದರೂಪಿಯಾದ ಬ್ರಹ್ಮವೆ ಮಂತ್ರ. ಜಂಗಮ ನಡೆದಾಡುವ ಲಿಂಗವಾದರೆ ಮಂತ್ರ ಶಬ್ದರೂಪಿ ಲಿಂಗ. ಆ ಮಂತ್ರವನ್ನು ಪಠಿಸಿಯೆ ಭಕ್ತ ಮಂತ್ರವೆ ಆಗಿ ಹೋಗುತ್ತಾನೆ.

೪

ಅಷ್ಟಾವರಣಗಳ ಸಹಾಯ ಪಡೆದಮಾತ್ರಕ್ಕೆ ಶಿವಯೋಗ ಸಾಧನೆ ಮಾಡಿದಂತಲ್ಲ. ಅವುಗಳನ್ನು ಪಡೆದವರೆಲ್ಲ ಶಿವಯೋಗಿಗಳಲ್ಲ. ಮೈತುಂಬ ವಿಭೂತಿ ಬಳಿದುಕೊಂಡು ರುದ್ರಾಕ್ಷಿ ಧರಿಸಿಕೊಂಡ ಆಷಾಢ ಭೂತಿಗಳಿಗೇನೂ ಕೊರತೆಯಿಲ್ಲ. ಬಾಯಲ್ಲಿ ಮಟಮಟ ಮಂತ್ರ ಜಪಿಸುವವರೆಲ್ಲರೂ ಸಾಧಕರಲ್ಲ. ಅಷ್ಟಾವರಣ ಅಂಥವರ ಪಾಲಿಗೆ ಇತ್ತೀಚೆಯ ಅಜ್ಞಾತ ಕವಿಗಳೊಬ್ಬರು* ಹೇಳುವಂತೆ—

---

* ಲಿಂ. ಸಿದ್ಧಾಂತಿ ತಿಪ್ಪೇರುದ್ರ ಶಾಸ್ತ್ರಿ, ನಾಯ್ಕನಹಟ್ಟಿ, ಚಿತ್ರದುರ್ಗ ಜಿಲ್ಲೆ. "ಕಲಿ ಮಠಾಧೀಶರ ಕರ್ತವ್ಯ ಕಲಾಪ, (ಭಾಮಿನಿಷಟ್ಪದಿ) ಪ್ರ: ಮ.ವೀ.ಸಿ. ಪ್ರಕಾಶನ ಮತ್ತಕೂರು ಬೆಂಗಳೂರು (ಉ.ತಾ) (೧೯೮೨)

"ಕಾಮಿನಿಯರಾಲಿಂಗ ಲಿಂಗವು,
ಪ್ರೇಮಗುರು, ಸವಿನುಡಿಯ ಮಂತ್ರವು,
ಕಾಮಹಿತ ಚುಂಬನ ಪ್ರಸಾದವು, ಸ್ಪರ್ಶ ಭಸ್ಮವದು।
ತಾಮಸದಿ ಚರಿಸುವುದೆ ಜಂಗಮ
ಕಾಮ ಕ್ರೀಡೆಯ ದೈತ್ಯದುದಕವು
ಭಾಮಿನಿಯ ಚಂಚಲನ ದಕ್ಷಿಯೆ ಶುದ್ಧ ರುದ್ರಾಕ್ಷಿ॥"

ಇಂಥವರು ಬೇಕಾದಷ್ಟು 'ಶಿವಯೋಗಿ'ಗಳು ಸಿಕ್ಕಾರು. ಇವರು ಯೋಗಿಗಳಲ್ಲ ಅಷ್ಟಾವರಣ ಗಳ ಸಹಾಯದಿಂದ ಜೀವಾತ್ಮವು ನಿರಂತರ ಊರ್ಧ್ವಮುಖವಾಗಿ ಪಯಣಿಸಬೇಕು. ಮರ್ತ್ಯ ಬಾಳಿನ ಸೀಮೆಯನ್ನು ಉತ್ತರಿಸಿ, ಉತ್ತರಾಯಣ ಮಾಡಿ, ಉತ್ತರ ಶಕ್ತಿಯನ್ನು ಆಧಾರದೊಳಗೆ ಬರಮಾಡಿಕೊಳ್ಳಬೇಕು. ಅಷ್ಟಾವರಣಗಳೆಂಬ ಸಾಧನೋಪಕರಣಗಳನ್ನು ಉಪಯೋಗಿಸಿಕೊಂಡು ಜೀವ ಮುಂದುವರಿಯಬೇಕು. ಅದು ಹೇಗೆ?

ಚೆನ್ನಬಸವಣ್ಣನಂತೆ ಸತ್ಯ–ಮಿಥ್ಯೆಯ ವಿಶ್ಲೇಷಣೆ ಮಾಡುವ ಜ್ಞಾನಮಾರ್ಗವೆ? ಬಸವಣ್ಣನಂತೆ ಶರಣರ ಕಿಂಕರರ ಕಿಂಕರನಾಗಿ, ಸಕಲ ಜೀವಾವಳಿಗಳ ಲೇಸನೆ ಬಯಸಿ ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ ಎಲ್ಲರಲ್ಲೂ ಕೂಡಲ ಸಂಗಮನನ್ನು ಕಂಡು ತನ್ನ ಅಪ್ಪುಗೆ ಯಲ್ಲಿ ಸೆಳೆದುಕೊಂಡು ಪ್ರೀತಿಸಿದ ಭಕ್ತಿಮಾರ್ಗವೇ? ಇಲ್ಲವೆ ಗುಡಿಗುಂಡಾರಗಳನ್ನು, ಕೆರೆ ಕಾಲುವೆಗಳನ್ನು ಕಟ್ಟಿಸುವುದರಲ್ಲಿ ನಿರತನಾಗಿದ್ದ ಸಿದ್ಧರಾಮನ ಕರ್ಮಯೋಗವೆ? ಅಥವಾ ಉದಮುಲದದ ಯೌವನವ ಕಡೆಗಣಿಸಿ, ದೇಹಾಭಿಮಾನವನ್ನೂ ತೊರೆದು, ಅಷ್ಟೈಶ್ವರ್ಯ ವನ್ನೂ ಕಡೆಗಣಿಸಿ ದಿಗಂಬರೆಯಾಗಿ ಚೆನ್ನಮಲ್ಲಿಕಾರ್ಜುನನ ಅರಸಿಕೊಂಡು ಹೋದ ವೀರ ವೈರಾಗಿಣಿ ಅಕ್ಕಮಹಾದೇವಿಯ ಸಂನ್ಯಾಸಯೋಗವೆ? ಯಾವುದು ಲೋಕದ ಜೀವರು ಗಳಿಗೆ ಸುಲಭ ಮತ್ತು ಯೋಗ್ಯವಾದ ಯೋಗ? ಅಲ್ಲಮಪ್ರಭು ಈ ಮಹಾಯೋಗಿ ಗಳನ್ನು ಕಂಡು ಮೆಚ್ಚಿದರೂ, ಅವರವರ ಅಭಿರುಚಿಗೆ ತಕ್ಕಪಥವನ್ನು ಅನುಸರಿಸಿ ಅವರು ಅನುಭಾವದ ತುತ್ತತುದಿಯನ್ನು ಮುಟ್ಟಿದ್ದರೂ, ಆಯಾ ಯೋಗಗಳು ಅವರವರಿಗೆ ಉಚಿತವಾದರೂ, ಅವುಗಳಲ್ಲಿರುವ ಅಪೂರ್ಣತೆಯನ್ನು ಎತ್ತಿ ತೋರಿಸುತ್ತಾನೆ. ಯಾರ ಹುಟ್ಟುಗುಣಕ್ಕೆ ಯಾವುದು ಉಚಿತವೊ, ಸುಲಭವೊ, ಶ್ರೇಷ್ಠವೊ ಆ ಯೋಗಪಥವನ್ನು ಅವರವರು ಅನುಸರಿಸುವುದೆ ಶ್ರೇಯಸ್ಕರ. ಸ್ವಧರ್ಮಾವಲಂಬನೆಯೇ ಶ್ರೇಷ್ಠ. ಈ ಮಾತನ್ನು ಒಪ್ಪದಿರಲು ಸಾಧ್ಯವಿಲ್ಲ. ಯಾವುದೇ ಒಂದು ಪಥವನ್ನು–ಪಂಥವನ್ನು– ಎಲ್ಲರಿಗೂ ತೋರಿಸುವುದು ಸಾಧುವೂ ಅಲ್ಲ, ಶ್ರೇಯಸ್ಕರವೂ ಅಲ್ಲ. ಹಾಗೆಯೆ ಯಾವುದೋ ಒಂದು ಪಥವೇ ಶ್ರೇಷ್ಠ ಎಂದು ಇನ್ನುಳಿದ ಯೋಗ ಪಥಗಳನ್ನು ತಿರಸ್ಕರಿ ಸುವುದೂ ಶ್ರೇಯಸ್ಕರವಲ್ಲ. ಹಾಗೆ ಐಕಾಂತಿಕ ಮಾರ್ಗಾನುಸರಣೆ ಪೂರ್ಣ ಫಲದಾಯಕ

ವಲ್ಲ ಎಂಬುದನ್ನು ಅಲ್ಲಮಪ್ರಭು ತೋರಿಸುತ್ತಾರೆ. ಎಲ್ಲರೂ ಒಂದೇ ಯೋಗ ಪದ್ಧತಿಯನ್ನು ಅನುಸರಿಸುವುದು ಸಾಧ್ಯವಿಲ್ಲ. ಹಾಗಾದರೆ ಎಲ್ಲ ಯೋಗಗಳನ್ನು ಎಲ್ಲರೂ ಅನುಸರಿಸುವುದು ಸಾಧ್ಯವೋ? ಎಲ್ಲ ಯೋಗಗಳ ಸಮನ್ವಯಮಾಡಿ ಸಾಧನೆ ಮಾಡಲು ಸಾಧ್ಯವೊ?

ಎಲ್ಲ ಯೋಗಗಳೂ ಒಳ್ಳೆಯವೆ ಎಂಬುದನ್ನು ಗೀತಾಚಾರ್ಯನೆ ಹೇಳುತ್ತಾನೆ. ಜ್ಞಾನ ಯೋಗದ ಬಗ್ಗೆ ಹೇಳುವಾಗ 'ನಹಿ ಜ್ಞಾನೇನ ಸದೃಶಂ' ಎನ್ನುತ್ತಾನೆ. ಕರ್ಮ ಯೋಗದ ಬಗ್ಗೆ ಹೇಳುವಾಗ 'ಯೋಗಃ ಕರ್ಮಸು ಕೌಶಲಂ' ಎನ್ನುತ್ತಾನೆ. 'ತಸ್ಮಾತ್ ಯೋಗೀ ಭವಾರ್ಜುನ' ಎಂದು ಯೋಗದ ಶ್ರೇಷ್ಠತೆಯನ್ನು ಹೇಳುತ್ತಾನೆ. ಎಲ್ಲವೂ ಒಳ್ಳೆಯವೆ ಎಂದು ಹೇಳಿದಾಗ ಅರ್ಜುನನಿಗೆ ತಬ್ಬಿಬ್ಬಾಗುತ್ತದೆ. ಆ ಸಂದೇಹವನ್ನೂ ಗೀತಾಚಾರ್ಯ ನಿವಾರಿಸುತ್ತಾನೆ. ಒಟ್ಟಿನ ಮೇಲೆ ಸರ್ವಯೋಗಗಳ ಸಮನ್ವಯವೆ ಶ್ರೇಷ್ಠವೆಂಬ ಸುಳುಹು ಗೀತೆಯಲ್ಲೂ ತೋರುತ್ತದೆ. ಆದರೆ ಅದು ಅನುಷ್ಠಾನದಲ್ಲಿ ಬಂದದ್ದು ವಿರಳವೆಂದೇ ಹೇಳಬೇಕು.

೫

ಇಷ್ಟೆಲ್ಲ ಯೋಗ ಪದ್ಧತಿಗಳಿದ್ದರೂ, ಎಲ್ಲ ಯೋಗಗಳು ಮಾನವನನ್ನು ತನ್ನ ಅಲ್ಪತ್ವದಿಂದ ಮೇಲೆತ್ತಲು ಸಹಾಯಕವಾಗಿದ್ದರೂ, ಅವನ ಸ್ವೋತ್ತರಣ ಆಕಾಂಕ್ಷೆ, ಅಭೀಪ್ಸೆಯನ್ನು ಈಡೇರಿಸಲು ನೆರವಾಗಿದ್ದರೂ ಈ ಯಾವುದೊಂದು ಯೋಗದಿಂದಲೂ ಪೂರ್ಣಸಿದ್ಧಿ ಪ್ರಾಪ್ತವಾಗಿಲ್ಲವೆಂದೇ ಕಾಣುತ್ತದೆ. ಬಹುಶಃ ಈ ಯಾವುದೆ ಒಂದು ಯೋಗ ಪಥದ ಅನುಸರಣೆಯಿಂದ ಆ ಪರಿಪೂರ್ಣಸಿದ್ಧಿ ಸಾಧ್ಯವಿಲ್ಲ ಆದರೆ ಆಯಾ ಯೋಗ ಪಥವನ್ನು ಅನುಸರಿಸಿದವರಿಗೆ ಅವರ ಮಟ್ಟಿಗೆ ಅದು ಪರಮಾನುಭವ ಎಂಬಂತೆ ಕಂಡೀತು. ಹಠಯೋಗವೆ ಸರ್ವಶ್ರೇಷ್ಠವೆಂದು ಬಗೆದಿದ್ದ ಗೋರಕ್ಷನಿಗೆ ಅಲ್ಲಮಪ್ರಭು ಅದರ ಅಪೂರ್ಣತೆಯನ್ನು ತೋರಿಸಿಕೊಟ್ಟರು. ಹಠಯೋಗದಿಂದ ದೇಹವನ್ನು ಜರಾಮರಣದಿಂದಲೂ ರಕ್ಷಿಸಿಕೊಳ್ಳಲು ಸಾಧ್ಯವಾಗಬಹುದು. ವಜ್ರದೇಹಿಯಾಗಿ ಖಡ್ಗದಿಂದಲೂ ಕತ್ತರಿಸಲಾಗದ ಸಿದ್ಧಿಯನ್ನು ಪಡೆದಿದ್ದ ಗೋರಕ್ಷ. ಆದರೆ ಖಡ್ಗ ಮುಟ್ಟಲಾರದ ಏನೋ ಒಂದಿದೆ. ಅದು ಬಯಲು. ಆ ಬಯಲನ್ನು ಗಳಿಸಿಕೊಳ್ಳುವುದು ವಜ್ರದೇಹ ಸಿದ್ಧಿಗಿಂತಲೂ ಕಷ್ಟ ಎಂಬುದನ್ನು ಅಲ್ಲಮಪ್ರಭು ತೋರಿಸಿಕೊಡುತ್ತಾರೆ. ಮೈಯನ್ನು ಮನಸ್ಸಿಗೆ ಬಂದಂತೆ ಬಗ್ಗಿಸುವುದು ಅಂಕೆಯಲ್ಲಿಟ್ಟುಕೊಳ್ಳುವುದು ಯೋಗವಲ್ಲ. ಒಂಟಿಕಾಲು ಮೇಲೆ ನಿಲ್ಲುವುದು, ತಲೆಕೆಳಗಾಗಿ ನಿಲ್ಲುವುದು...... ಮುಂತಾದ ಕಸರತ್ತು ಯೋಗವಲ್ಲ. ಹಠಯೋಗ ಅಪೂರ್ಣ ಯೋಗ.

ಇನ್ನು ರಾಜಯೋಗವಾದರೂ ಪೂರ್ಣಯೋಗವಲ್ಲ, ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳುವ ಸಾಧನ ರಾಜಯೋಗ. ಯೋಗಿಗಳಾಗುವವರು ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳಲೇಬೇಕು. ಮನವೆಂಬ ಮರ್ಕಟದ ಚಪಲ ಚೇಷ್ಟೆಯನ್ನು ನಿಗ್ರಹಿಸುವುದು ಕಷ್ಟ. ಚಂಚಲ ಮನಸ್ಸನ್ನು ನಿಲ್ಲಿಸುವುದು ವಾಯುವನ್ನು ಹಿಡಿತದಲ್ಲಿಟ್ಟುಕೊಳ್ಳುವುದಕ್ಕಿಂತ ಕಷ್ಟ

ಎಂದು ಅರ್ಜುನನೇ ಮೊರೆಯಿಡುತ್ತಾನೆ. ಚಿತ್ತವೃತ್ತಿ ನಿರೋಧದಿಂದ ಬಾಹ್ಯಪ್ರಪಂಚ ದಿಂದ ಆಚೆ ಜಗಳುವುದು ಅತೀತದ ಅನುಭವಕ್ಕೆ ಅಗತ್ಯ. ಧ್ಯಾನದಿಂದ ಧ್ಯೇಯುಗ್ವಸ್ತು ಪ್ರಾಪ್ತವಾಗಬಹುದು. ಆದರೆ ಚಿತ್ತವೃತ್ತಿ ನಿರೋಧದಿಂದ ಪರಮಾನುಭವ ಬೋಧೆ ಆದರೆ ಸಾಕೆ? ಹಾಗೆ ಎಷ್ಟುಕಾಲ ಇರಲು ಸಾಧ್ಯ? ಎಷ್ಟೇ ಕಾಲ ಇದ್ದರೂ ಸಾರ್ಥಕ ವೇನು? ಈ ಬಾಹ್ಯಪ್ರಪಂಚದಿಂದ ಮೈಮರೆಯಬೇಕಾದರೆ ಯಾವುದಾದರೂ ಮಾದಕ ಪದಾರ್ಥದ ಸೇವನೆಯೆ ಸಾಕು! ಕೆಲವು ಪಾಶ್ಚಾತ್ಯ ದೇಶಗಳಲ್ಲಿ ಯೋಗಾಭ್ಯಾಸದ ಹೆಸರಿನಲ್ಲಿ ಮೈಮರೆಯಲು ಮಾದಕ ಪದಾರ್ಥ ಸೇವನೆ ಮಾಡುವುದು ವ್ಯಾಪಕವಾಗಿ ಹಬ್ಬಿದ ದುಶ್ಚಟ. ಒಂದು ವೇಳೆ ಮಾದಕ ಪದಾರ್ಥ ಸೇವಿಸದೆ ಬಹುಕಾಲ ಬಾಹ್ಯಪ್ರಜ್ಞೆ ಇಲ್ಲದ ಸ್ಥಿತಿ ಪಡೆದರೂ ಅದರಿಂದ ಪ್ರಯೋಜನವೇನು? ಹಾಗೆ ಆನಂದದಲ್ಲಿ ಮೈಮರೆತು ಇಹಲೋಕದಿಂದ ದೂರವಾಗುವುದು ಜೀವನದ ಗುರಿಯಲ್ಲ. ಆದ್ದರಿಂದ ರಾಜಯೋಗವೂ ಪೂರ್ಣಯೋಗವಲ್ಲ.

ಹಾಗೆಯೆ ಭಕ್ತಿಯೋಗ, ಕರ್ಮಯೋಗ, ಜ್ಞಾನಯೋಗಗಳು ಅವರವರ ಸ್ವಭಾವ, ಸ್ವಧರ್ಮಕ್ಕೆ ನೆರವಾಗುವವು. ಕರ್ಮಯೋಗವು ಸಾಧರ್ಮಮುಕ್ತಿಯನ್ನು, ಭಕ್ತಿಯೋಗವು ಸಾಮೀಪ್ಯ ಮುಕ್ತಿ, ಸಾಲೋಕ್ಯ ಮುಕ್ತಿಯನ್ನು ಕೊಡಬಹುದು. ಜ್ಞಾನಯೋಗವು ಸಾಯುಜ್ಯ ಮುಕ್ತಿಯನ್ನು ಕೊಟ್ಟು ಸಾಧಕನಿಗೆ ಪರಮಾತ್ಮನಲ್ಲಿ ಅವಿನಾಭಾವದಿಂದ ವಿರಮಿಸಲು ಸಹಾಯ ಮಾಡಿತಾದರೂ ಈ ಬಗೆಯ 'ಮುಕ್ತಿ'ಯಿಂದ ಜೀವದ ಪರಮೋ ದ್ದೇಶ ಈಡೇರಿದಂತೆಯೆ? ಜೀವಜಗತ್ತಿಗೆ ಬಂದಿರುವುದು ಅದರಿಂದ ವಿಮುಖವಾಗಿ ಹೋಗ ಲಿಕ್ಕಾಗಿಯೆ? ಜೀವ ಶಿವನೊಡನೆ ಅನುಸಂಧಾನ ಮಾಡಬೇಕಾದುದು ಜೀವದ ಗುರಿ ಯಾದರೂ, ಜಗತ್ತಿನೊಡನೆ ಜೀವದ ಸಂಬಂಧವೇನು? ಇದುವರೆಗೆ ಪ್ರಚಲಿತದಲ್ಲಿರುವ ಎಲ್ಲ ಯೋಗಗಳಲ್ಲೂ ಇಹಲೋಕ ಜೀವನವನ್ನು ಕಡೆಗಣಿಸಿ, ತುಚ್ಛವಾಗಿ ಕಂಡು, ತಿರಸ್ಕರಿಸುವ ಪರಿಣಾಮದಲ್ಲಿ ಕೊನೆಗಂಡಿದೆ. ಪರವನ್ನು ಬಯಸಿದವನು ಇಹವನ್ನು ಕೈಬಿಡಬೇಕು. ಇಹವನ್ನು ಅಪ್ಪಿಕೊಂಡವನು 'ಪರ'ವನ್ನು ಕೈಬಿಡಬೇಕು. 'ಇಹ ಇಹವೆ; ಪರ ಪರವೆ. ಅವೆರಡೂ ಎಂದಿಗೂ ಒಂದುಗೂಡವು' ಎಂಬುದೆ ಸರ್ವಸಾಧಾರಣವಾಗಿ ಆಧ್ಯಾತ್ಮ ಸಾಧಕರ ನಂಬುಗೆಯಾಗಿದೆ. ಜೀವ ಜಗತ್ತಿನಲ್ಲಿ ಜನಿಸಿರುವುದು. ಕಣ್ಣಿಗೆ ಕಾಣುವ ಕೈಗೆ ತಾಕುವ ಮನಸ್ಸಿಗೆ ತಟ್ಟುವ ಎಂದೆಂದಿಗೂ ಅಲ್ಲಗಳೆಯದ ಘನನಿಬಿಡ ಸತ್ಯ. ಈ ಜೀವ ಶಿವನಿಂದ ಬಂದಿದೆ ಎಂಬುದಕ್ಕಿಂತಲೂ ದಿಟವಾದ ಸತ್ಯ ಈ ಇಹಜೀವನ. ಜಗತ್ತು ಮಿಥ್ಯ ಎಂದು ಆತ್ಮವಂಚನೆ ಮಾಡಿಕೊಳ್ಳಬಹುದಷ್ಟೆ. ಒಂದು ವೇಳೆ ಇದು ಅಲ್ಲಗಳೆಯಲಾರದ ವಾಸ್ತವ ಸತ್ಯ ಎಂದು ಬಿಡಲಾರದೆ ಒಪ್ಪಿಕೊಂಡರೂ, ಇಲ್ಲಿ ಜೀವ ಬಾಳಲೇಬೇಕಾದರೂ ಕೆಸರಿನಲ್ಲಿರುವ ಕುಂಬಾರ ಹುಳದಂತೆ, ಪದ್ಮಪತ್ರದ ಮೇಲಿರುವ ನೀರಹನಿಯಂತೆ, ಇಲ್ಲಿದ್ದರೂ ಇದರ ಮಾಲಿನ್ಯ ಸೋಂಕದಂತೆ ಬಾಳುವುದು ಆಧ್ಯಾತ್ಮ

ಜೀವನ ಎನ್ನುತ್ತಾರೆ. ಅಂತೂ ಈ ಇಹವೆಂಬುದು ತ್ಯಾಜ್ಯವಸ್ತು. ಇದರಲ್ಲಿದ್ದು ಅದನ್ನು ಪಡೆಯುವುದು ಅಸಾಧ್ಯ.

ಶಿವಶರಣರು 'ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣರೋ' ಎಂದು ಸಾರಿದ್ದು ನಿಜ. 'ಬಿದ್ದುಹೋಗುವ ಈ ದೇಹಕ್ಕೆ ಹಿಗ್ಗುವೆಯಾಕೊ?' ಎಂದು ಅಂಗವನ್ನು ಶರಣರು ತಿರಸ್ಕರಿಸಲಿಲ್ಲ. 'ಹಾವ ಹಲ್ಲ ಕಳೆದು ಹಾವಿನೊಡನಾಡಿದರೆ ಅಪಾಯವಿಲ್ಲ' ಎಂದಿದ್ದಾಳೆ ಅಕ್ಕಮಹಾದೇವಿ. ಹೀಗೆ ಶಿವಯೋಗದಲ್ಲಿ ಇಹಜೀವನದ ಅನಿವಾರ್ಯತೆಯನ್ನು ಒಪ್ಪಿಕೊಂಡಿದ್ದಾರೆ. ಉಂಡು ಉಪವಾಸಿಯಾಗಿ ಬಳಸಿದ ಬ್ರಹ್ಮಚಾರಿಯಾಗಿ ಬದುಕುವ ಶರಣಮಾರ್ಗವನ್ನು ಸೂಚ್ಯವಾಗಿ ತೋರಿಸಿದ ಶ್ರೇಯಸ್ಸು ಶಿವಶರಣರಿಗೆ ಸಲ್ಲುತ್ತದೆ. ಆದರೆ ಶೂನ್ಯ ಸಂಪಾದನೆಯಲ್ಲಿ ಅಲ್ಲಮಪ್ರಭುದೇವರೇ ಎತ್ತಿತೋರಿಸಿರುವಂತೆ, ಇಹಪರಗಳನ್ನು ಸಮನಿಸಿ, ಇಲ್ಲಿ ಇಲ್ಲದ್ದು ಇನ್ನೆಲ್ಲಿಯೂ ಇಲ್ಲ ಎಂಬ ಪೂರ್ಣಸತ್ಯ ದರ್ಶನಮಾಡಿಕೊಂಡವರು ವಿರಳ. ಅದಕ್ಕಿನ್ನೂ ಆಗ ಕಾಲ ಪಕ್ವ ಆಗಿರಲಿಲ್ಲವೇನೊ?

೬

ಜಗತ್ತಿಗೆ ಪರಿಪೂರ್ಣ ಜೀವನಸಿದ್ಧಿಯ ಮಾರ್ಗದರ್ಶನ ಬೇಕಾಗಿತ್ತು. ಶ್ರೀ ಅರವಿಂದರು ಪಾಂಡಿಚೇರಿಗೆ ಬರುವುದಕ್ಕಿಂತ ಮೊದಲು ಒಬ್ಬ ಯೋಗಿವರ್ಯರು ಉತ್ತರದಿಂದ ಒಬ್ಬ ಮಹಾಪುರುಷರು ದಕ್ಷಿಣಕ್ಕೆ ಬರುವರೆಂದು, ತಮ್ಮ ಶಿಷ್ಯರೊಬ್ಬರಿಗೆ ಹೇಳಿದರಂತೆ. ಅವರನ್ನು ಗುರುತಿಸುವುದು ಹೇಗೆ ಎಂದು ಕೇಳಿದಾಗ, "ಆ ಯೋಗಿವರ್ಯರು; ಪೂರ್ಣಯೋಗವೆಂಬ ಮಾತನ್ನು ಅವರು ಆಡುತ್ತಾರೆ. ಯಾರು ಈ ಮಾತನ್ನು ಆಡುವರೊ ಅವರೆ ಆ ಮಹಾಮಹಿಮರೆಂದು ಗುರುತುಹಿಡಿಯಬಹುದು" ಎಂದು ಉತ್ತರಿಸಿದರು. ಶ್ರೀ ಅರವಿಂದರು 'ಪೂರ್ಣಯೋಗ' ಎಂಬ ಮಾತನ್ನು ಆಡಿದಾಗ, ಅದರ ಬಗ್ಗೆ ಬರೆದಾಗ ಆ ಅಜ್ಞಾತ ಯೋಗಿ ಹೇಳಿದ ಮಾತನ್ನು ನೆನಪು ಮಾಡಿಕೊಂಡರು. 'ಪೂರ್ಣಯೋಗ' ಎಂಬ ಈ ಮಾತಿನಲ್ಲಿ ಇತರ ಪ್ರಚಲಿತ ಯೋಗಗಳು ಅಪೂರ್ಣ ಎಂಬುದು ಅಡಕವಾಗಿದೆ. ಅವು ಹೇಗೆ ಅಪೂರ್ಣ ಎಂಬುದನ್ನು ಮೇಲೆ ಸ್ಥೂಲವಾಗಿ ಪ್ರಸ್ತಾಪಿಸಲಾಗಿದೆ.

ಶ್ರೀ ಅರವಿಂದರು ಮಾನವನ ಆತ್ಯಂತಿಕ ಆಕಾಂಕ್ಷೆ ಏನು? ಎಂಬುದರಿಂದಲೇ ತಮ್ಮ ಉದ್ಗ್ರಂಥ "ದಿವ್ಯಜೀವನ"ವನ್ನು ಪ್ರಾರಂಭಿಸುತ್ತಾರೆ:-

"ಬಹಿರ್ ಪ್ರಕೃತಿಯನ್ನು ಯಶಸ್ವಿಯಾಗಿ ವಿಶ್ಲೇಷಣೆ ಮಾಡಿ ಅದರಿಂದ ದೊರೆಯುವ ಸುಖದಿಂದ ಕಟ್ಟರೆಯಾದ ಮಾನವ ಮನಃಶಾಂತಿ ಪಡೆಯದೆ....ಜ್ಯೋತಿ, ಮುಕ್ತಿ, ಅಮೃತತ್ತ್ವ, ದೇವರು-ಎಂಬ ಆ ಮೊತ್ತಮೊದಲಿನ ಜ್ಞಾನಸೂತ್ರವನ್ನು" ಅವಲಂಬಿಸಿದ್ದಾನೆ. ಅದೇ ಅವನ ಕೊನೆಯದೂ ಆಗುವ ಸಂಭವ ಕಾಣುತ್ತಿದೆ...."ಅವನ ಮನೋಧರ್ಮವು ಭಗವತ್ ತತ್ತ್ವದ ಅನುಸಂಧಾನವಾಗಿಯೂ, ಪೂರ್ಣತ್ವಪರವಾದ ಅಭೀಪ್ಸೆ

ಯಾಗಿಯೂ ಶುದ್ಧಸತ್ಯ ಮತ್ತು ಅಬಾಧಿತ ಆನಂದ ದೀಪ್ತಿಯ ಅನ್ವೇಷಣೆಯಾಗಿಯೂ.... ಕಾಣಿಸಿಕೊಳ್ಳುತ್ತದೆ." ('ದಿವ್ಯಜೀವನ' ಪುಟ ೨)

ತಮ್ಮ ತತ್ತ್ವಜ್ಞಾನ, ಯೋಗದೃಷ್ಟಿ, ದರ್ಶನ, ಸಾಧನ ಪದ್ಧತಿಯನ್ನು ವಿವರ ವಿವರವಾಗಿ ಪ್ರತಿಪಾದಿಸಿ ಕೊನೆಗೆ ಶ್ರೀ ಅರವಿಂದರು 'ದಿವ್ಯಜೀವನ' ಗ್ರಂಥವನ್ನು ಹೀಗೆ ಮುಗಿಸುತ್ತಾರೆ:– "ಜೀವ ಚೇತನವು ಕೊನೆಗೊಳ್ಳುವುದು ನಿರ್ವಿಶೇಷ. ಚೈತನ್ಯದಲ್ಲಿ ಮರಳಿ ಸೇರುವುದರಿಂದಲೇ ಆ ಮರುಪಯಣವನ್ನು ಅದು ಕೈಗೊಂಡು ಮುಗಿಸುವುದು. ಆದರೆ ಅದರ ಪೂರ್ಣ ಸಾರ್ಥಕವಾಗುವುದು. "ಜೀವನ ಭಗ್ನತೆಯಿಂದಲ್ಲ. ಇದೇ ಜೀವನ ದಲ್ಲಿಯೇ ಅದರ ಸ್ವರೂಪಶಕ್ತಿಯ ಚಿನ್ಮಯ ಪೂರ್ಣತೆಯಿಂದ ಆತ್ಮಸ್ವರೂಪ ಲಾಭ ಮತ್ತು ವಿಶ್ವಸ್ವರೂಪ ಲಾಭದ ಅವಿಶ್ರಾಂತ ಪ್ರಯತ್ನದ ವಿಘ್ನ ವಿಪತ್ತುಗಳ ನೋವು– ನಲಿವುಗಳಿಂದ" ಕೂಡಿದ ನಮ್ಮ ಅವಿದ್ಯಾ ಪರಿಣಾಮದ ವಿಚಿತ್ರ ದ್ವಂದ್ವ....ಕೇವಲ ಆದಿಪರ್ವ; ಮೊದಲ ಹೆಜ್ಜೆ" (ದಿವ್ಯಜೀವನ ೧೪೭೪–ಕೊನೆಯ ಪುಟ)

ನಮ್ಮ ಆರ್ಷೇಯ ಸನಾತನ ದಾರ್ಶನಿಕರು ಯಾವ ಆದರ್ಶವನ್ನು ಮಾನವನ ಮುಂದಿಟ್ಟರೊ ಅದೇ ಆದರ್ಶವನ್ನೇ ದೃಢಪಡಿಸಿದ್ದಾರೆ. ಮಾನವನ ನಿರಂತರ ಅನ್ವೇಷಣೆ– ಭಗವತ್ ತತ್ತ್ವದ ಅನುಸಂಧಾನ; ಪೂರ್ಣತ್ವಪರವಾದ ಅಭೀಪ್ಸೆ, ಅಬಾಧಿತ ಆನಂದದ ಅನ್ವೇಷಣೆ. ಆ ಅಬಾಧಿತ ಆನಂದ ಪ್ರಾಪ್ತಿಯಾಗುವುದು ಜೀವಚೇತನ ವಿಶ್ವಚೈತನ್ಯದಲ್ಲಿ ಮರಳಿ ಸೇರುವುದರಿಂದ. ಇದು ಸರ್ವದರ್ಶನಗಳಿಗೂ ಸಮಾನ. ಸರ್ವಯೋಗಿ ಸಾರ್ವಭೌಮರೂ ಕಂಡ ದರ್ಶನ.

ಆದರೆ ವ್ಯತ್ಯಾಸ ಇರುವುದು–ಜೀವಚೇತನ ವಿಶ್ವಚೇತನದಲ್ಲಿ ಮರಳಿ ಸೇರುವ ಮಾರ್ಗ ಯಾವುದು ಎಂಬ ವಿಚಾರದಲ್ಲಿ ಮಾಳಿಗೆಯ ಮೇಲಕ್ಕೆ ಹೋಗಲು ಮೆಟ್ಟಿಲು ಗಳನ್ನು ಹತ್ತಿ ಹೋಗಬಹುದು. ಏಣಿ ಹತ್ತಬಹುದು ಅಥವಾ ಹಗ್ಗದ ನೆರವಿನಿಂದ ಹೋಗಬಹುದು. ತ್ರಾಣ ಇದ್ದರೆ ನೆಲದಿಂದ ಜಿಗಿದು ಒಂದೇ ನೆಗೆತಕ್ಕೆ ಮಾಳಿಗೆ ಏರ ಬಹುದು. ಅವರವರ ಶಕ್ತಿ, ಸಾಮರ್ಥ್ಯ ಅನುಕೂಲತೆ ಸ್ವಭಾವ ಸ್ವಧರ್ಮ ಮುಂತಾದವು ಗಳನ್ನು ಅವಲಂಬಿಸಿ ಗುರಿ ಸಾಧಿಸಬಹುದು. ಒಟ್ಟು ಗುರಿ ಮುಟ್ಟಬೇಕು. ಸಾಧನ ಗೌಣ. ಸಿದ್ಧಿ ಮುಖ್ಯ. ಆದರೆ ಒಂದೊಂದು ಸಾಧನವೂ ಗುರಿಗೆ ಕೊಂಡೊಯ್ಯುವುದಾದರೂ ಯಾವುದು ಕ್ಷೇಮ? ಯಾವುದು ಸರ್ವಶ್ರೇಷ್ಠ? ಯಾವುದು ಪರಿಪೂರ್ಣ?

ಈ ಹಿಂದೆ ನಾವು ಗಮನಿಸಿದಂತೆ ಪ್ರಾಚೀನ ಯೋಗ ಮಾರ್ಗಗಳಲ್ಲಿ, ಸಾಧನೆ ಮಾಡುವಾಗಲೂ, ಸಿದ್ಧಿ ಪಡೆದ ಮೇಲೆಯೂ ಇಹದ ಬಾಳಿಗೆ ಗಮನವನ್ನು ಕೊಡದೆ, ಇಹವನ್ನು ಅಸಾರ್ಥಕವೆಂದು ತುಚ್ಛೀಕರಿಸಿ, ತಿರಸ್ಕರಿಸಿ ಅದರಿಂದ ತಪ್ಪಿಸಿಕೊಂಡು ಹೋಗುವುದೇ ಜೀವನದ ಪರಮಗುರಿ ಎಂದು ತೋರುತ್ತದೆ. ಅಂದರೆ ಜೀವನದ ಗುರಿ ಜೀವನದಿಂದ ಪಾರಾಗಿ ಹೋಗುವುದು! ಹಾಗಾದರೆ ಹುಟ್ಟಬೇಕಾದರೂ ಏಕೆ? ಅದು ನಮ್ಮ ಕೈಯಲ್ಲಿಲ್ಲದ ಕಾರಣ ಕಡ್ಡಾಯಕ್ಕಾಗಿ ಒತ್ತಾಯದಿಂದ ಹುಟ್ಟಿಬಂದು,

ಕಾಟಾಚಾರಕ್ಕಾಗಿ ಹೇಗೋ ವಿಧಿಯಿಲ್ಲದೆ ಬದುಕಿ, ಯಾವಾಗ ಈ ಬಾಳು ಮುಗಿದೀತೋ ಎಂದು ಹಲುಬಿ ಹಂಬಲಿಸಿ ಒಂದು ದಿನ ಕೊನೆಗೊಂಡಾಗ–ಹಾಯ್ ಎಂದು ನಿಟ್ಟುಸಿರು ಬಿಟ್ಟು ಕಣ್ಮುಚ್ಚುವುದೆ? ಹೀಗಾದರೆ ಜೀವನದ ಗುರಿ ಮರಣವೇ ಎಂದಾಗುತ್ತದೆ! ಅಂದರೆ ಸಾಯಲಿಕ್ಕಾಗಿಯೇ ಬಾಳು ಎಂದಂತಲ್ಲವೆ?

ಶ್ರೀ ಅರವಿಂದರ ಅಭಯವಾಣಿ ಮೊಳಗುತ್ತದೆ–'ಜೀವನಪೂರ್ಣ ಸಾರ್ಥಕ ವಾಗುವುದು ಜೀವನ ಭಗ್ನತೆಯಿಂದಲ್ಲ!' ಮಾನವನ ಜೀವನೋದ್ದೇಶ ಅಬಾಧಿತ ಆನಂದದ ಅನ್ವೇಷಣೆ ನಿಜ. ಜ್ಯೋತಿ ಮುಕ್ತಿ ಅಮೃತತ್ತ್ವವೆ ಅವನ ಪರಮ ಗುರಿ. ಇದೂ ಸತ್ಯ. ಜೀವ ಆ ಆನಂದದಲ್ಲಿ ಸೇರಿದರೂ, ಅಮೃತತ್ತ್ವ ಪಡೆದರೂ ಈ ಜೀವನದಿಂದ ವಿಮುಖ ವಾಗಕೂಡದು. ಜೀವನವನ್ನು ತ್ಯಜಿಸಕೂಡದು. ಇದೇ ಜೀವಸಹಿತ, ಇದೇ ಜೀವನ ದಲ್ಲಿದ್ದು, ಈ ಜಗನ್ನಾಟಕ ರಂಗದ ಮೇಲಿದ್ದುಕೊಂಡೇ ಆ ಆನಂದವನ್ನು ಸವಿಯಬೇಕು. ಆ ಅಮೃತತ್ವ ಪಡೆದ ಮೇಲೂ ಈ ಜೀವನ ನಾಟಕದಲ್ಲಿ ಅಭಿನಯಿಸಬೇಕು. ಇದು ಸಾಹಸದ ಕೆಲಸ. ಶೂರನ ಪರಾಕ್ರಮ.

ಇದುವರೆಗೆ ಯೋಗ ಪಥವನ್ನು ಅನುಸರಿಸಿ ಸಿದ್ಧಿ ಪಡೆದವರು–ಮರೆತು ಹೋಗಿದ್ದ ತಮ್ಮ ಸ್ವಸ್ವರೂಪವನ್ನು ಮರಳಿ ದರ್ಶನಮಾಡಿಕೊಂಡರು. ಯಾವುದರಿಂದ ಬಂದಿದ್ದರೊ ಆ ನೆಲೆಯನ್ನು ಕಂಡುಕೊಂಡರು. ಆ ಸ್ವಸ್ಥಾನದಲ್ಲಿ ಸ್ಥಿರವಾಗಿ ನೆಲೆಸಿದರು. ಕಂಡ ಆ ಮಹಾಬೆಳಗಿನಿಂದ ನಿಬ್ಬೆರಗಾಗಿ ಹೋದರು. ಅಲ್ಲಿಯೇ ನಿಂತುಬಿಟ್ಟರು. ಅಲ್ಲಿಗೆ ಸೇರ ಬೇಕು ನಿಜ. ಆದರೆ ಅಲ್ಲಿಯೇ ನಿಲ್ಲಬಾರದು. ಇಲ್ಲಿಗೆ ಮತ್ತೆ ಇಳಿಯಬೇಕು. ಪ್ರಾಪ್ತಿ ಯಾದ ಸಿದ್ಧಿಯನ್ನು ಪಡೆದ ಬೆಳಕನ್ನು ತನ್ನ ಪ್ರಾಣ, ಮನ, ಭಾವದಲ್ಲಿ ತುಂಬಿಕೊಂಡಂತೆ ಅದರಿಂದ ತುಂಬಿ ತುಳುಕಿ ತುಂದಿಲನಾದಂತೆ–ಈ ತನುವಿನಲ್ಲೂ ಜೀವನದಲ್ಲೂ ಜಗತ್ತಿನಲ್ಲೂ ತಂದುಹರಿಸಬೇಕು. ಇದು ಶ್ರೀ ಅರವಿಂದರು ತೋರಿಸಿದ ಮುಂದಿನ ಹೆಜ್ಜೆ. ದಿಟ್ಟ ಹೆಜ್ಜೆ. ಸಾಪಸದ ಹೆಜ್ಜೆ.

೭

ಶ್ರೀ ಅರವಿಂದರ ದರ್ಶನದ ಸಾರ ಸರ್ವಸ್ವವನ್ನು ಬಹು ಹಿಂದೆ* ಒಂದೆ ಒಂದು ವಾಕ್ಯದಲ್ಲಿ ಹೀಗೆ ಹೇಳಿದರು: "ಸ್ವರ್ಗವನ್ನು ನಾವು ಪಡೆದಿದ್ದೇವೆ; ಆದರೆ ಮರ್ತ್ಯವನ್ನಲ್ಲ. ಆದರೆ ಯೋಗದ ಪೂರ್ಣತ್ವವು–ಸ್ವರ್ಗ ಮರ್ತ್ಯಗಳನ್ನು ಸಮ ಮತ್ತು ಏಕೆ ಮಾಡ ಬೇಕು" ಶ್ರೀ ಅರವಿಂದರ ಈ ಸೂತ್ರವನ್ನು ಶ್ರೀಮಾತೆ =1 ಎಂಬ ಚಿಹ್ನೆಯಿಂದ ಸೂಚಿಸಿದರು. ಈ ಚಿಹ್ನೆ =1 ಯ 'ಹೆಸರಿ'ನ ಒಂದು ಪತ್ರಿಕೆಯನ್ನು ಹೊರಡಿಸಲು ಶ್ರೀಮಾತೆ ಆಶೀರ್ವದಿಸಿದರು.

---

* ಮೇ ೨೦, ೧೯೧೫. ಶ್ರೀಮಾತೆಗೆ ಬರೆದ ಒಂದು ಪತ್ರದಲ್ಲಿ:
"Iteaven we have possessed, but not the earth; But the fulness of the yoga is to make...." Iteaven and Earth equal and one."

ಸ್ವರ್ಗ ಮತ್ತು ಮರ್ತ್ಯ ಸಮ ಮತ್ತು ಒಂದೆ ಎಂಬ ಈ ಮಾತಿನಲ್ಲಿ (=1 ಚಿಹ್ನೆಯಲ್ಲಿ) ಸಕಲ ವೇದೋಪನಿಷತ್ತುಗಳ ಸತ್ಯವೆ ಅಡಕವಾಗಿದೆ. ಮರ್ತ್ಯ ಅಖಂಡಬ್ರಹ್ಮನ ಅಪರಾರ್ಧವಾದರೆ ಸ್ವರ್ಗ ಅದರ ಪರಾರ್ಧ. ಪರಾರ್ಧ ಅಪರಾರ್ಧ ಕೂಡಿದರೆ ಮಾತ್ರ ಗೋಳ (O=ಪೂರ್ಣ) ಪೂರ್ಣವಾಗುತ್ತದೆ. ಪರಾರ್ಧವನ್ನೇ ನಂಬಿ ಅದನ್ನೇ ಅವಲಂಬಿಸಿ ಅದಕ್ಕೆ ಪೂರ್ತಿ ಜೋತು ಬಿದ್ದರೆ ಏಕದ ಅರ್ಧವನ್ನು ಮಾತ್ರ ಪಡೆದಂತಾಗುತ್ತದೆ. ಹಿಂದಿನ ಯೋಗಿಗಳು ಸ್ವರ್ಗದ ಪರಾರ್ಧವನ್ನು ಪಡೆದಿದ್ದರು. ಅದು ಮಾನವನಿಗೆ ಪ್ರಾಪ್ತಿಯಾಗಿದೆ. ಆದರೆ ಮರ್ತ್ಯದ ಅಪರಾರ್ಧವನ್ನು ಮರೆತು, ಅಥವಾ ಕೈಬಿಟ್ಟು ಇಲ್ಲವೆ ತುಚ್ಛೀಕರಿಸಿ ಪೂರ್ಣತ್ವದಿಂದ ವಂಚಿತರಾಗಿದ್ದೇವೆ. ಇದು ವಿಚಿತ್ರವಾಗಿ ಕಾಣುತ್ತದೆ. ಈ ಪ್ರಪಂಚದಲ್ಲಿಯ ಬಿದ್ದು ಸಾಯುತ್ತಿರುವಾಗ ನಮಗಿನ್ನು ಮರ್ತ್ಯದಕ್ಕಿಲ್ಲ ಎನ್ನುವುದು ವಿರುದ್ಧವಾಗಿ ಕಾಣುತ್ತದೆ. ಆದರೆ ಇದು ನಿಜ. ಅಂದರೆ ಈಗಿರುವ ಜೀವನ ಈಗ ಇರುವಂಥ ಮರ್ತ್ಯವೇ 'ಸರ್ವ'ದ ಶುದ್ಧ ಸ್ವರೂಪವಲ್ಲ. ಜೀವ ಹೇಗೆ ತನ್ನ ಸ್ವಸ್ವರೂಪವನ್ನು ಮರೆತಿದೆಯೋ ಹಾಗೆಯೇ ಈ ಮರ್ತ್ಯವೂ ತನ್ನ ಬ್ರಹ್ಮಸ್ವರೂಪವನ್ನು ಮರೆತಿದೆ. ಬ್ರಹ್ಮನಷ್ಟೇ ಸತ್ಯ. ಬ್ರಹ್ಮನ ಜಡರೂಪವೇ ಈ ಮರ್ತ್ಯ. ಆದರೆ ದುರ್ದೈವದಿಂದ ಅದರ ವಿಸ್ಮೃತ ಸ್ಥಿತಿಯೇ ಅದರ ನಿಜಸ್ವರೂಪವೆಂದು ಭ್ರಮಿಸಿ ಅದನ್ನು ತಿರಸ್ಕರಿಸುತ್ತಿದ್ದೇವೆ. ಶ್ರೀ ಅರವಿಂದರ ದೃಷ್ಟಿಯಲ್ಲಿ ಸೃಷ್ಟಿ, ಈ ಜಗತ್ತು ತಿರಸ್ಕಾರ ಯೋಗ್ಯವಲ್ಲ. ಈ ಮೃಣ್ಮಯ ಮರ್ತ್ಯಬಾಳನ್ನು ಚಿನ್ಮಯವನ್ನಾಗಿ ಮಾಡಬೇಕು.

ಮೊದಲು ಜೀವ ಚೇತನ ವಿಶ್ವಚೈತನ್ಯದೊಡನೆ ಒಂದಾಗುವ ಮಾರ್ಗ ಯಾವುದು? ಒಮ್ಮೆ ಜೀವನದಲ್ಲಿ ಬೇಸತ್ತು ಜಿಗುಪ್ಸೆಗೊಂಡ ಒಬ್ಬಾತ ಶ್ರೀ ಅರವಿಂದ ಆಶ್ರಮಕ್ಕೆ ಬಂದು ತನಗೆ ಆಶ್ರಯ ಕೊಡಬೇಕೆಂದು ಮಾತೆಯಲ್ಲಿ ಮೊರೆಯಿಟ್ಟ. 'ಯಾಕೆ ಬಂದಿರಿ?' ಎಂದು ಕೇಳಿದರು ಮಾತೆ "ಮನಶ್ಶಾಂತಿಗಾಗಿ" ಎಂದರು. ಆ ಸಾಧಕರು. "ಹಾಗಾದರೆ ಇಲ್ಲಿಂದ ಹೊರಡಿ, ಸಾಧ್ಯವಿಲ್ಲ. ಇಲ್ಲಿ ಎಡೆಯಿಲ್ಲ" ಎಂದರು ಮಾತೆ.*

"ಯೋಗ ಯಾಕೆ ಬೇಕು? ಪ್ರಶಾಂತಿ ಮತ್ತು ಪ್ರಸನ್ನತೆಗಾಗಿಯೇ? ಮಾನವ ಸೇವೆಗಾಗಿಯೇ? ಸಿದ್ಧಿಗಳನ್ನು ಪಡೆಯಲಿಕ್ಕಾಗಿಯೇ? ಇವು ಯಾವುವೂ ಯೋಗಕ್ಕೆ ತಿರುಗಲು ಸಕಾರಣವಾಗಲಾರವು" ಎನ್ನುತ್ತಾರೆ ಶ್ರೀಮಾತೆ. ಒಮ್ಮೆ ತಮ್ಮ ಸುತ್ತ ಕುಳಿತಿದ್ದ ಮಕ್ಕಳನ್ನು ಕುರಿತು ಒಬ್ಬೊಬ್ಬರನ್ನೇ ಕೇಳುತ್ತಾರೆ:

'ಯೋಗಾಭ್ಯಾಸವನ್ನು ಏಕೆ ಮಾಡಬಯಸುತ್ತಿ?'

'ದೈವ ಸಾನಿಧ್ಯವನ್ನು ಅನುಭವಿಸಲು' ಎನ್ನುತ್ತದೆ ಒಂದು ಮಗು.

'ನೀನು?'

---

* The Great Adventure P, 158

'ದೈವ ಸಾಕ್ಷಾತ್ಕಾರಕ್ಕಾಗಿ'
ಮತ್ತೆ ನೀನು? 'ಯೋಗದಲ್ಲಿ ನಿನಗೇಕೆ ಆಸಕ್ತಿ?'
'ನನ್ನನ್ನು ನಾನು ಅರಿಯಲು ಸಹಾಯ ಮಾಡುತ್ತದೆ'

ಹೀಗೆ ಒಬ್ಬೊಬ್ಬರನ್ನೇ ಕೇಳಿದ ಮೇಲೆ ತಾವೇ ಉತ್ತರಕೊಡುತ್ತಾರೆ:

'ಕೆಲವರು ಮಾನವ ಸೇವೆಗಾಗಿ, ಮಾನವ ಪ್ರೇಮಕ್ಕಾಗಿ, ಪರೋಪಕಾರಕ್ಕಾಗಿ ಯೋಗಾಭ್ಯಾಸ ಮಾಡುವುದಾಗಿ ಹೇಳುತ್ತಾರೆ. ಮತ್ತೆ ಕೆಲವರು ದುಃಖಿಗಳನ್ನು ಸುಖಿಗಳನ್ನಾಗಿ ಮಾಡುವುದಕ್ಕಾಗಿ' ಎಂದು ಹೇಳುತ್ತಾರೆ. ಆದರೆ ಒಬ್ಬ ವೃದ್ಧ ಅಲೌಕಿಕ ಸಿದ್ಧ ಪುರುಷ "ಈ ದುಃಖದಲ್ಲಿಯೆ ಸುಖವಾಗಿರ ಬಯಸುವವರು ಇರುವಾಗ....ಲೋಕದಲ್ಲಿ ದುಃಖವೆಲ್ಲಿ ಉಳಿದಿದೆ? ಎಂದು ತಮಾಷೆ ಮಾಡುತ್ತಿದ್ದರು........ದೈವಕ್ಕಾಗಿಯೇ ಯೋಗಾಭ್ಯಾಸ ಮಾಡುವ ಇಚ್ಛೆಯಿದ್ದರೆ ಮಾತ್ರ ನೀನು ಈ ದಾರಿತುಳಿಯಲು ಯೋಗ್ಯ" ಎಂದು ಹೇಳಿದ್ದಾರೆ. ಮೊದಲು ಬೇಕಾದುದು ಅತೀವ ದೈವಾಕಾಂಕ್ಷೆ. ದೈವದ ಹೊರತು ಇನ್ನೇನೂ ಬೇಡ ಎಂಬ ಸ್ಥಿತಿ ಉಂಟಾಗಬೇಕು. ಈ ಉತ್ಕಟೇಚ್ಛೆಯನ್ನು ಪೂರೈಸಲು ದೀರ್ಘಕಾಲ ಧ್ಯಾನದಲ್ಲಿ ಕುಳಿತುಕೊಳ್ಳುವ ಆಲೋಚನೆ ಬಂತು ಒಬ್ಬ ಸಾಧಕನಿಗೆ ಆಗ ತಾಯಿ ಹೇಳುತ್ತಾರೆ:

'ಎಷ್ಟೋ ದೀರ್ಘಕಾಲ ಧ್ಯಾನದಲ್ಲಿ ಮಗ್ನವಾದರೂ ಧ್ಯಾನದಿಂದ ಮೇಲೆದ್ದ ಮೇಲೆ ಯಥಾ ಪ್ರಕಾರ ಅದೇ ಹಿಂದಿನ ಬಾಳ್. ಬಹುಶಃ ಹೊಲಸು ಅಂಗಿಯನ್ನು ಬಿಚ್ಚಿಟ್ಟು ಕುಳಿತು ಧ್ಯಾನ ಮಾಡಿದಂತೆ. ಧ್ಯಾನದಿಂದ ಹೊರಗೆ ಬಂದ ಮೇಲೆ ಅದೇ ಹೊಲಸಂಗಿಯನ್ನು, ಬಹುಶಃ ಹಿಂದಿಗಿಂತ ಹೊಲಸಾದ ಅಂಗಿಯನ್ನು ಮತ್ತೆ ತೊಟ್ಟು ಕೊಂಡಂತೆ'.

ಆದ್ದರಿಂದ ಕೋಣೆಯ ಬಾಗಿಲು ಮುಚ್ಚಿಕೊಂಡು ಕಣ್ಮುಚ್ಚಿ ಮೂಗು ಮುಚ್ಚಿ ಅಖಂಡ ಧ್ಯಾನದಲ್ಲಿ ಕುಳಿತುಕೊಳ್ಳುವುದು ಜೀವನವನ್ನು ಪರಿವರ್ತಿಸಿದಂತೆ ಅಲ್ಲ. ದಿನಕ್ಕೆ ಇಂತಿಷ್ಟು ಸಂಖ್ಯೆಯಲ್ಲಿ ದೇವರನಾಮ ಸ್ಮರಣೆ ಮಾಡಿ, ಇಗೋ ತೆಗೆದುಕೋ ನಿನ್ನ ಸಾಲ ತೀರಿಸಿದ್ದೇನೆ ಎಂದು ದೇವರಿಗೆ ಹೇಳುವುದರಿಂದ ಅವನನ್ನು ಸಾಕ್ಷಾತ್ಕರಿಸಿಕೊಂಡಂತೆ ಆಗಲಾರದು. ಹಾಗೆ ಹೇಳುವುದಾದರೆ ಧ್ಯಾನಮಾಡುವುದಕ್ಕಾಗಿ ಕುಳಿತುಕೊಳ್ಳಲೇ ಬೇಕಾಗಿಲ್ಲ. ಶ್ರೀ ಅರವಿಂದರು ದಿನಕ್ಕೆ ಹದಿನಾಲ್ಕು ಹದಿನಾರು ತಾಸು ನಡೆದಾಡುತ್ತ ಧ್ಯಾನಮಾಡುತ್ತಿದ್ದರು. ಅವರು ಹದಿನಾಲ್ಕು ವರ್ಷ ಎಡೆಬಿಡದೆ ತಮ್ಮ ಕೋಣೆಯ ಮುಂದೆ ಅತ್ತಿಂದ ಇತ್ತ ಓಡಾಡಿ ಆ ನೆಲವೆ ಸವೆದು ಹೋಗಿತ್ತು! ಯೋಗಾಭ್ಯಾಸಕ್ಕೆ ಇಂಥ ಆಸನ ಎಂಬುದೇನೂ ಖಚಿತವಿಲ್ಲ. ನಿಂತೊ. ಕುಳಿತೊ, ಓಡಾಡುತ್ತಲೋ, ಪುಸ್ತಕ ಓದುತ್ತಲೋ, ಬರೆಯುತ್ತಲೋ;ಹೂವಿನ ಗಿಡಕ್ಕೆ ನೀರು ಹಾಕುತ್ತಲೋ,ಕಸಗುಡಿಸುತ್ತಲೋ ಯಾವುದೋ ಕಾಯಕದಲ್ಲಿ ತೊಡಗಿದ್ದರೂ ಯೋಗಾಭ್ಯಾಸ ಮಾಡಬಹುದು. ಇದು ಶ್ರೀ ಅರವಿಂದರ ದೃಷ್ಟಿ. "ನೀವು ಅತ್ಯಂತ ಚಟುವಟಿಕೆಯ ಕೆಲಸದಲ್ಲಿ ತೊಡಗಿರಬಹುದು. ಉದಾಹರಣೆಗೆ

ಬಾಸ್ಕೆಟ್‌ಬಾಲ್ ಆಡುತ್ತಿರಬಹುದು. ಆ ಆಟದಲ್ಲಿ ಬಹು ಚುರುಕಾಗಿರಬೇಕು. ಆದಾಗ್ಗೂ ಅಂತರಂಗದಲ್ಲಿ ನಡೆಯುವ ಧ್ಯಾನಕ್ಕೆ ಚ್ಯುತಿಬಾರದಿರಬೇಕು. ದೈವದ ಬಗ್ಗೆ ಅವಿರತ ಏಕಾಗ್ರತೆ ಇರಬಹುದು. ಅಂಥ ಸ್ಥಿತಿಗೆ ತಲುಪಿದಾಗ ನೀನು ಮಾಡುವ ಕೆಲಸದ ಗುಣದಲ್ಲಿಯೇ ವ್ಯತ್ಯಾಸವಾಗಿರುವುದನ್ನು ಕಾಣುತ್ತೀ" ಎನ್ನುತ್ತಾರೆ ಶ್ರೀಮಾತೆ. ಮತ್ತೆ ಹೇಳುತ್ತಾರೆ; "ಧ್ಯಾನದಲ್ಲಿ ಕಳೆಯುವ ಘಂಟೆಗಳ ಮೇಲೆ ಅಧ್ಯಾತ್ಮ ಪ್ರಗತಿ ಅವಲಂಬಿಸಿಲ್ಲ. ನೀವು ಧ್ಯಾನ ಮಾಡಲು ಪ್ರಯತ್ನವನ್ನೇ ಮಾಡದಿರುವುದು ನಿಮ್ಮ ಆಧ್ಯಾತ್ಮ ಪ್ರಗತಿಯ ಕುರುಹು. ಆ ಸ್ಥಿತಿ ತಲುಪಿದಾಗ ನೀವು ಧ್ಯಾನವನ್ನು ನಿಲ್ಲಿಸಲು ಪ್ರಯತ್ನ ಮಾಡಬೇಕಾಗುತ್ತದೆ. ಧ್ಯಾನವನ್ನು ನಿಲ್ಲಿಸುವುದೇ ಕಠಿಣವಾಗುತ್ತದೆ". ಆಗ ಅಕ್ಕಮಹಾದೇವಿಗಾದ ಅನುಭವ—

"ವನವೆಲ್ಲಾ ನೀನೆ ವನದೊಳಗಣ ದೇವ ತರುವೆಲ್ಲಾ ನೀನೆ
ತರುವಿನೊಳಗಾಡುವ ಖಗಮೃಗವೆಲ್ಲಾ ನೀನೆ"

ಉಂಟಾಗುತ್ತದೆ. ಅಕ್ಕನಿಗೆ ಈ ಅನುಭವ ಆದದ್ದು ಸರ್ವಸಂಗ ಪರಿತ್ಯಕ್ತಳಾಗಿ ಹುಟ್ಟಿದ ಊರು ಬಿಟ್ಟು, ಕೊಟ್ಟ ಮನೆಯಿಂದ ಹೊರಬಿದ್ದು ಅರಮನೆಯ ಅಷ್ಟೈಶ್ವರ್ಯವನ್ನು ಕೀಪದಾರ್ಥವೆಂದು ತಿರಸ್ಕರಿಸಿ, ದೇಹಾಭಿಮಾನವನ್ನು ತೊರೆದು ಶಿವಶರಣರ ಸಂದರ್ಶನ ಸಂಭಾಷಣೆಯ ಅಮೃತ ಸರೋವರದಲ್ಲಿ ಮಿಂದು ಶ್ರೀಗಿರಿಯ ನೆತ್ತಿಯ ಮೇಲೆ ನಿಂತಾಗ ಶ್ರೀ ಅರವಿಂದ ಯೋಗದಲ್ಲಿ ಈ ಕಡು ವೈರಾಗ್ಯಕ್ಕೆ ಎಡೆಯಿಲ್ಲ, "ಒಂದೆಡೆ ಕುಳಿತು ಧ್ಯಾನ ಮಗ್ನರಾಗಿರಬಹುದು ಇಲ್ಲವೆ ಅಡ್ಡಾಡುತ್ತ ಏನಾದರೂ ಕಾಯಕದಲ್ಲಿ ತೊಡಗಿರಬಹುದು." ಬೇಕಾದ ಒಂದೇ ಅವಶ್ಯಕತೆ "ದೈವದ ಅವಿರತ ಅರಿವು." ಇದು ಶಿವಯೋಗದ ಕಾಯಕ ಯೋಗಕ್ಕೆ ಬಹು ಹೋಲುತ್ತದೆ.

ಹೀಗೆ ಅವಿರತವಾಗಿ ದೈವದೊಡನೆ ಅನುಸಂಧಾನ ಮಾಡಲು ಜೀವನವನ್ನು ಅನಾಮತ್ತಾಗಿ ತ್ಯಾಗ ಮಾಡಬೇಕಾಗಿಲ್ಲ. ಶ್ರೀಮಾತೆ ಹೇಳುವಂತೆ: "ಸ್ವರ್ಗ ಪ್ರಾಪ್ತಿಗೆ ಇಹವನ್ನು ತ್ಯಜಿಸಬೇಕಾಗಿಲ್ಲ. ಇಹವನ್ನೇ ಸ್ವರ್ಗವಾಗಿ ಪರಿವರ್ತಿಸಬೇಕು." ಮಾಡುವ ಕೆಲಸದಲ್ಲಿಯ ಒಳ್ಳೆಯದು ಕೆಟ್ಟದ್ದು ಎಂಬುದಿಲ್ಲ. ಆದರೆ ಮಾಡುವ ಮನದ ಸ್ಥಿತಿಯನ್ನು ಅವಲಂಬಿಸಿದೆ. ಕರ್ಮದ ಒಳಿತು ಕೆಡಕು. ಧರ್ಮವ್ಯಾಧನ ಕಥೆಯಲ್ಲಿ ಈ ಸತ್ಯವನ್ನು ಸುಂದರವಾಗಿ ಎತ್ತಿ ತೋರಿಸಲಾಗಿದೆ. ಮಾಂಸಮಾರಿ ಜೀವನ ಮಾಡುತ್ತಿದ್ದ ಅವನು ಮಹಾಭಕ್ತನಾಗಿದ್ದ. ನೇಯ್ಗೆ ಕಾಯಕ ಮಾಡುತ್ತಿದ್ದ ಕಬೀರ ಅದ್ವಿತೀಯ ಭಕ್ತ ಶಿರೋಮಣಿ. ಇಂಥ ಕರ್ಮ (ಕಾಯಕ) ಯೋಗಿಗಳು ಸಹಸ್ರಾರು ಸಂಖ್ಯೆಯ ಶಿವ ಶರಣರಲ್ಲಿ ಆಗಿ ಹೋದರು. ಮೋಳಿಗೆ ಮಾರಯ್ಯ, ನುಲಿಯ ಚಂದಯ್ಯ, ಕದಿರೆ ರೆಮ್ಮವ್ವೆ ಬಹುರೂಪಿ ಚೌಡಯ್ಯ....ಅಂಥವರ ಸಹಸ್ರಗಣ ನಾಮಾವಳಿ ವೀರಶೈವರ ಪಾರಾಯಣ ಗ್ರಂಥವಾಗಿದೆ. ಶಿವಯೋಗದ ಸಾಧಕರಲ್ಲಿ ಶ್ರೀ ಅರವಿಂದರ ಪೂರ್ಣಯೋಗದ ಅನುಷ್ಠಾನ ಮಾಡಿದವರೆಂದರೆ ಕಾಯಕ ಯೋಗಿಗಳಾಗಿದ್ದ ಶಿವಶರಣರೆಂದು ಹೇಳಬಹುದು.

ಇಂಥ ಸ್ಥಿತಿಪ್ರಾಪ್ತವಾಗುವುದು ಹೇಗೆ? ಶ್ರೀ ಅರವಿಂದರು ತಮ್ಮ ಪ್ರಥಮ ಕಿರು ಹೊತ್ತಗೆ "ಶ್ರೀಮಾತೆ"ಯ ಪ್ರಾರಂಭದಲ್ಲಿಯ ದಾರಿ ತೋರಿದ್ದಾರೆ—ಸರ್ವ ಸಮರ್ಪಣ ಭಾವವೆ ಆ ದಾರಿ:

"ನಮ್ಮ ಪರಿಶ್ರಮದ ಗುರಿಯಾದ ಆ ಕಷ್ಟದಾಯಕ ಹಾಗೂ ಮಹತ್ವದ ಸಂಘಟನೆ ಸಿದ್ಧಿಸಲು ಕೆಳಗಿನಿಂದ ಕರೆಯುವ ಅಚಲವಾದ ಮತ್ತು ನಿರಂತರ ಹಾರೈಕೆಯೂ ಮೇಲಿಂದ ಓಗೊಡುವ ಆ ಪರಮಕೃಪೆಯೂ ಸಂಧಿಸಬೇಕು" ಕಾತರಪೂರ್ಣ ಅಭೀಪ್ಸೆ ಈಡೇರಲು ಸಂಪೂರ್ಣ ಶರಣಾಗತಿಬೇಕೆಂಬುದಾಗಿ ಹೇಳುತ್ತಾರೆ. ಅಂಥ ವ್ಯಾಕುಲತೆ ಹೇಗೆ ಉಂಟಾಗುತ್ತದೆ? ಮೈಯನ್ನು ಬೇಕಾದಂತೆ ಅಂಕೆಯಲ್ಲಿಟ್ಟುಕೊಳ್ಳುವ ಕೇವಲ ಹಠಯೋಗದಿಂದ ಉಂಟಾಗದು. ಮತ್ತೆ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುವ ಕೇವಲ ರಾಜಯೋಗದಿಂದ ದೊರೆಯದು. "ಪ್ರಾಚೀನ ಯೋಗಪದ್ಧತಿ ಪರಂಪರೆಗಳು ತಮ್ಮ ತಮ್ಮ ಸ್ಥಾನದಲ್ಲಿ ಆಯಾ ಕಾಲದಲ್ಲಿ ದೊಡ್ಡವೆ. ಆದರೂ ಮತ್ತೆ ಮತ್ತೆ ಅವುಗಳನ್ನೇ ನಾವು ಯಾಕೆ ಅನುಸರಿಸಬೇಕೋ ನಾಕಾಣೆ" ಎನ್ನುತ್ತಾರೆ ಶ್ರೀಅರವಿಂದರು. ಮತ್ತೆ ಹೇಳುತ್ತಾರೆ: "ನಾನು ಹೊಚ್ಚ ಹೊಸ ಯೋಗಪದ್ಧತಿಯನ್ನು ಕಂಡು ಹಿಡಿದನೆಂದು ಹೇಳಲಾರೆ. ಹೊಸದೆಂದು ಕರೆಯದಿದ್ದರೂ ಚಿಂತೆಯಿಲ್ಲ. ಹಿಂದಿನ ಯೋಗ ಪದ್ಧತಿಗಳಲ್ಲಿ ಬಹು ತಥ್ಯಾಂಶ ಇದ್ದರೂ ನನ್ನ ದೃಷ್ಟಿಯಲ್ಲಿ ಪ್ರಾಚೀನ ಯೋಗಪದ್ಧತಿಗಳ ಗುರಿ ಮತ್ತು ಅಭಿಪ್ರಾಯ ಸಮರ್ಪಕವಲ್ಲ ಎಂಬುದನ್ನು ಎತ್ತಿ ತೋರಿಸಲು ಅದನ್ನು ಹೊಸತೆಂದು ಒಂದು ಪತ್ರದಲ್ಲಿ ಬರೆವೆ."

ಆ ಹೊಸತನ ಎಲ್ಲಿದೆ ಎಂಬುದನ್ನು ಹೀಗೆ ಕ್ರೋಢೀಕರಿಸಿದ್ದಾರೆ:–

೧) "ನನ್ನ ಯೋಗದ ಗುರಿ ಜಗತ್ತಿನಿಂದ ಜಾರಿಕೊಂಡು, ಸ್ವರ್ಗ ಅಥವಾ ನಿರ್ವಾಣದಲ್ಲಿ ಸೇರುವುದಲ್ಲ. ಆದರೆ ಈ ಬಾಳು ಮತ್ತು ಭುವಿಯನ್ನೇ ಬದಲಾಯಿಸುವುದು ಅದರ ಗುರಿ. ಈ ಬದಲಾವಣೆ, ಪರಿವರ್ತನೆ ಎಂಬುದು ಏನೋ ಗೌಣವಾಗಿ ಆಗಂತುಕವಾಗಿ ಆಗಬೇಕಾದ ಮಾರ್ಪಾಟಲ್ಲ. ಅದೇ ಈ ಪರಿವರ್ತನೆಯ ಒಳ ತಿರುಳು; ಮುಖ್ಯ ಗುರಿ........ಇತರ ಯೋಗ ಪದ್ಧತಿಗಳಲ್ಲಿ ಜೀವ. ಆರೋಹಣ ಕ್ರಮದಿಂದ ಮೇಲಕ್ಕೆ ಹೋಗಿ ಒಂದಾಗಿ ಬಿಡುವುದು. (ಒಮ್ಮೆ ಬ್ರಹ್ಮವನ್ನು ಮುಟ್ಟಿದ ಮೇಲೆ) ಅವರೋಹಣ ಅಂಥವರಿಗೆ ಕೇವಲ ಗೌಣ. ಅವರಿಗೆ ಆರೋಹಣವೇ ನಿಜ ಸ್ಥಿತಿ. ಆದರೆ ನನ್ನ ಯೋಗಪದ್ಧತಿಯಲ್ಲಿ ಆರೋಹಣ ಮೊದಲ ಹೆಜ್ಜೆ. ಅದು ಅವರೋಹಣಕ್ಕೆ ಸಾಧನ ಮಾತ್ರ....ಇದರಲ್ಲಿ ಗುರಿ, ಬಾಳಿನ ದೈವೀ ಸಾರ್ಥಕತೆಯೇ."

೨) ಕೇವಲ ವೈಯಕ್ತಿಕ ಮುಕ್ತಿ ನನ್ನ ಗುರಿಯಲ್ಲ. ಆದರೆ ಜಗತ್ತಿನ ಪ್ರಜ್ಞಾ ಮಟ್ಟವನ್ನೇ ಎತ್ತರಿಸುವುದು. ಇದುವರೆಗೆ ಜಗತ್ತಿನ ಸ್ವಭಾವದಲ್ಲಿ ನೇರವಾಗಿ ಕೆಲಸ ಮಾಡುತ್ತಿಲ್ಲದಿರುವ ಅತಿಮಾನಸ ಶಕ್ತಿಯನ್ನು ತಿರೆಗೆಳೆದು ತರುವ ಪ್ರಯತ್ನ ಈ ಯೋಗದ ಗುರಿ.

೩) "ಹಿಂದಿನ ಪ್ರಾಚೀನ ಪದ್ಧತಿಗಳ ಸಹಾಯದಿಂದ ಈ ಮೃತ್‌ಪ್ರಜ್ಞೆಯನ್ನು ಸಂಪೂರ್ಣ ಮತ್ತು ಪರಿಪೂರ್ಣವಾಗಿ ಪರಿವರ್ತನೆಗೊಳಿಸುವುದೇ ಆಗಿದೆ........ನಮ್ಮ ಯೋಗ ಹಿಂದಿನ ಪಥಗಳಲ್ಲಿ ಹೆಜ್ಜೆ ಹಾಕುವುದಲ್ಲ. ಅದೊಂದು ಆಧ್ಯಾತ್ಮಿಕ ಸಾಹಸ ಯಾತ್ರೆ".

ಶ್ರೀ ಅರವಿಂದರ ಈ ಪೂರ್ಣಯೋಗ, ಶ್ರೀ ಶಂಕರರ ಮಾಯಾವಾದಕ್ಕೂ ವೈಷ್ಣವರ ಭಕ್ತಿ ಮತ್ತು ಪ್ರೇಮ ಮಾರ್ಗಕ್ಕೂ ಬಿಡುತ್ತದೆ. ಗೀತೆಯ ಕರ್ಮಯೋಗಕ್ಕೂ ಈ ಪೂರ್ಣ ಯೋಗಕ್ಕೂ ಬಹಳ ಸಾಮ್ಯವಿದ್ದರೂ ಶ್ರೀ ಅರವಿಂದರು ಹೇಳುತ್ತಾರೆ:

"ಈ ಲೋಕದ ಕ್ಷಣಿಕತೆಯನ್ನು, ಇದು ದುಃಖದಾಯಕವಾದುದೆಂದೂ ಗೀತೆಯು ಹೇಳುತ್ತದೆ. ನಿಷ್ಕಾಮ ಕರ್ಮದ ತತ್ವವನ್ನು ಗೀತೆ ಬೋಧಿಸಿದರೂ ಈ ಲೋಕವನ್ನು ಬಿಟ್ಟುಬಿಡುವುದೇ ಅತ್ಯಂತ ಶ್ರೇಷ್ಠ ಉಪಾಯ ಎಂದು ಒಪ್ಪಿಕೊಳ್ಳುತ್ತದೆ".

೮

ಶ್ರೀ ಅರವಿಂದರ ಪೂರ್ಣಯೋಗದ ಪ್ರಥಮ ಆವಶ್ಯಕತೆ ಪರಿಪೂರ್ಣ ಸಮರ್ಪಣ ಭಾವ, ಸಂಪೂರ್ಣ ಪ್ರಪತ್ತಿ, ಶರಣಾಗತಿ. "ಸಂಪೂರ್ಣ ಮತ್ತು ನಿಷ್ಠಾಪೂರ್ಣ ಶರಣಾಗತಿ ಬೇಕು. ಆ ಶರಣಾಗತಿ ಆಧಾರದ (ಸತ್ತೆಯ) ಸರ್ವಾಂಗವನ್ನು ಆವರಿಸಿಕೊಳ್ಳಬೇಕು.... ಆಧಾರದ ಕೆಲವು ಭಾಗ ಮಾತ್ರ ಶರಣಾಗಿ ಇತರ ಭಾಗಗಳು ತಮ್ಮಿಚ್ಛೆಯಂತೆ ಇದ್ದರೆ, ತಮ್ಮ ದಾರಿಯಲ್ಲಿಯೆ ಮುಂದುವರಿದರೆ ಇಲ್ಲವೆ ತಮ್ಮ ಷರತ್ತುಗಳನ್ನೆ ವಿಧಿಸಿದರೆ ದೈವೀ ಕೃಪೆ ಕೆಲಸಮಾಡುವುದಿಲ್ಲ" ಎನ್ನುತ್ತಾರೆ. ಶ್ರೀ ಅರವಿಂದರು ತಮ್ಮ ದರ್ಶನ ಸಾರ ಪಿಟಕ ದಂತಿರುವ ಶ್ರೀ ಮಾತಾ ಎಂಬ ಕಿರು ಪೊತ್ತಗೆಯಲ್ಲಿ. ಆ ಶರಣಾಗತ ಸ್ಥಿತಿ ಹೊಸದಾಗಿ ಹುಟ್ಟಿದ ಬೆಕ್ಕಿನ ಮರಿಯಂತೆ ಇರಬೇಕೆಂದೂ ಮಂಗಮರಿಯಾಗಬಾರದೆಂದು ಹೇಳುತ್ತಿದ್ದ ಶ್ರೀ ರಾಮಕೃಷ್ಣರ ಉಪಮೆಯನ್ನು ಶ್ರೀಮಾತೆ ಆಗಾಗ ಶಿಷ್ಯರಿಗೆ ನೆನಪು ಮಾಡುತ್ತಿದ್ದರು. ಬೆಕ್ಕಿನಮರಿಯನ್ನು ತಾಯಿಬೆಕ್ಕು ಬಾಯಲ್ಲಿ ಕಚ್ಚಿಕೊಂಡು ಸುರಕ್ಷಿತ ಸ್ಥಳದಲ್ಲಿ ಇಡುತ್ತದೆ. ಮರಿ ಸಂಪೂರ್ಣ ತಾಯಿಯ ಆಶ್ರಯವನ್ನೆ ನುಬುತ್ತದೆ. ಮಂಗನಮರಿ ತಾಯಿಯ ಎದೆಗವಚಿಕೊಳ್ಳುತ್ತದೆ. ತಾಯಿಮಂಗ ಕೊಂಬೆಯಿಂದ ಕೊಂಬೆಗೆ ಹಾರುವಾಗ ಮರಿ ಕೆಳಗೆ ಬಿದ್ದು ಮೈ ಮುರಿದುಕೊಳ್ಳಬಹುದು. ಸತ್ತೂ ಹೋಗಬಹುದು. ಬೆಕ್ಕಿನಮರಿಗೆ ಆ ಭಯವಿಲ್ಲ. ತಾಯಿಯೆ ಎಲ್ಲ ರಕ್ಷಣೆ ಮಾಡುತ್ತದೆ. ಹಾಗೆಯೆ ಸಾಧಕ ಭಗವಂತನಿಗೆ ಸಂಪೂರ್ಣ ಶರಣಾಗುವುದೆ ಸುಕ್ಷೇಮ. ಅದರಲ್ಲಿ ಅಪಾಯ ಇಲ್ಲವೆ ಇಲ್ಲ. ಬೇಕಾದದ್ದು ಶ್ರದ್ಧಾಪೂರ್ಣ ನಿಷ್ಠಾಪೂರ್ಣ ಸಂಪೂರ್ಣ ಶರಣಾಗತಿ. 'ಹಾಲಲ್ಲದ್ದು, ನೀರಲ್ಲದ್ದು, ನಾನು ನಿನ್ನ ಸೆರಗಿನಲ್ಲಿದ್ದೇನೆ' ಎಂಬ ಸಂಪೂರ್ಣ ನಂಬಿಕೆ. ತಾಯಿ ಉಳಿದದ್ದನ್ನೆಲ್ಲ ನೋಡಿಕೊಳ್ಳುತ್ತಾಳೆ. ತಾಯಿಕೃಪೆ ಆಗದೆ ಸಾಧಕ ಏನು ತಿಣುಕಿದರೂ, ಎಷ್ಟು ಲಾಗ

ಹಾಕಿದರೂ ಏನೂ ಆಗುವುದಿಲ್ಲ ಆದ್ದರಿಂದ ಶರಣಾಗು ಇದೇ ಶ್ರೀ ಅರವಿಂದ ಯೋಗದ ಬೀಜಮಂತ್ರ.

ಆ ಶರಣಾಗತ ಸ್ಥಿತಿ ಹೇಗೆ ಬರುತ್ತದೆ? ಒಂಟಿಕಾಲಿನಿಂದ ನಿಂತುಕೊಂಡರೆ, ತಲೆ ಕೆಳಗಾಗಿ ನಿಂತರೆ, ತೀರ್ಥಯಾತ್ರೆ ಮಾಡಿದರೆ, ಗಂಗಾ ಕಾವೇರಿಯಲ್ಲಿ ಮುಳುಗೆದ್ದರೆ ಉಸಿರಾಟವನ್ನು ನಿಲ್ಲಿಸಿ ಭ್ರೂಮಧ್ಯದಲ್ಲಿ ದೃಷ್ಟಿ ನೆಟ್ಟು ಕಣ್ಣಾಲಿಗಳ ಚಾಂಚಲ್ಯ ನೀತರೆ, ಹಠಯೋಗದಿಂದ ವಜ್ರದೇಹಿಯಾದರೆ, ತತ್ತ್ವಶಾಸ್ತ್ರ ಗ್ರಂಥಗಳ ಅಧ್ಯಯನದಿಂದ ಸತ್ಯ ಮಿಥ್ಯೆಯನ್ನು ಕುರಿತು ಚಿಂತನೆಮಾಡುವುದರಿಂದ ಮುಂತಾದ ದೈಹಿಕ ಇಲ್ಲವೆ ಮಾನಸಿಕ ಕಸರತ್ತಿನಿಂದ ಶರಣಾಗತ ಸ್ಥಿತಿ ಪ್ರಾಪ್ತವಾಗುವುದಿಲ್ಲ. ಶ್ರೀರಾಮಕೃಷ್ಣರು ಓದು ಕಲಿಯದೆ, ಸತ್ಯಮಿಥ್ಯೆಯ ವಿಚಾರ ಮಂಥನ ಮಾಡದೆ, ನಾವು ತಿಳಿದಿರುವ ಯಾವ ಯೋಗ ಪಥವನ್ನೂ ಅನುಸರಿಸದೆ ಇನ್ನೂ ಚಿಕ್ಕವರಿದ್ದಾಗಲೆ ಭೂಮಾನುಭೂತಿಯ ಅನುಭವ ಆಗಿತ್ತು. ಅವರಿಗೆ ಪೂಜಾವಿಧಾನವೂ ಗೊತ್ತಿರಲಿಲ್ಲ. 'ತಾಯಿ ನನ್ನ ಜ್ಞಾನ ವನ್ನು ತೆಗೆದುಕೊ; ನನ್ನ ಅಜ್ಞಾನವನ್ನು ತೆಗೆದುಕೊ. ನನ್ನ ಒಳ್ಳೆಯದನ್ನು ತೆಗೆದುಕೊ. ಕೆಟ್ಟದ್ದನ್ನೂ ತೆಗೆದುಕೊ' ಎಂದು ಎಲ್ಲವನ್ನೂ ತಾಯಿಯ ಮಡಿಲಲ್ಲಿ ಹಾಕಿ ನಿಶ್ಚಿಂತ ರಾಗಿದ್ದರು. ಆದರೂ ಅವರ ಕಾತರ ಇಷ್ಟೆಂದು ಹೇಳಲುಬಾರದು. ಮೊದಲು ಸಾಕ್ಷಾತ್ಕಾರ ಮಾಡಿಕೊಂಡರು. ಅವರಿಗೆ ಸಾಕ್ಷಾತ್ಕಾರವಾದದ್ದು ಏನು ಎಂಬುದೆ ಅವರಿಗೆ ತಿಳಿದಿರಲಿಲ್ಲ. ಬ್ರಾಹ್ಮಣಿ ಭೈರವಿ ಎಂಬ ಸಕಲಶಾಸ್ತ್ರ ಪ್ರವೀಣೆ ಶ್ರೀ ರಾಮಕೃಷ್ಣರಿಗಾದ ಅನುಭವಗಳನ್ನು ವಿವರಿಸಿ ಹೇಳಿದರು. ಒಟ್ಟು ಸಾಧಕನಿಗೆ ಬೇಕಾದದ್ದು ಪ್ರಪತ್ತಿ ಶರಣಾ ಗತಿ. ಇದನ್ನೆ ಶ್ರೀ ಅರವಿಂದರು ತಮ್ಮ ಪೂರ್ಣಯೋಗ ಸಾಧನೆಯ ಪ್ರಥಮ ಅನಿವಾರ್ಯ ಆವಶ್ಯಕತೆ ಎನ್ನುತ್ತಾರೆ.

ಇಂಥ ಶರಣಾಗತ ಸ್ಥಿತಿಯಲ್ಲಿ ಬಾಳೆಲ್ಲ ಯೋಗವಾಗಿ ಪರಿವರ್ತಿತವಾಗುತ್ತದೆ. ಪ್ರಾಪಂಚಿಕ ಪಾರಮಾರ್ಥ ಎಂಬ ಭೇದವೆ ಉಳಿಯುವುದಿಲ್ಲ ಪೂರ್ಣಯೋಗದಲ್ಲಿ. ಪ್ರಾಚೀನ ದರ್ಶನಗಳಲ್ಲಿ ಮಾನವ ಜೀವನದಲ್ಲಿ ಪ್ರಾಪಂಚಿಕ ಪಾರಮಾರ್ಥಿಕ ಎಂಬ ಭೇದ ವನ್ನು ಕಲ್ಪಿಸಿ ಈ ಇಹಜೀವನದ ಬಗ್ಗೆ ತಿರಸ್ಕಾರ ದೃಷ್ಟಿಯನ್ನು ಬೆಳೆಸಿದರು. ಅದರಿಂದ ಪರವನ್ನೆ ನಂಬಿ ಇಹವನ್ನು ತ್ಯಜಿಸಿದರು. ಇಹವನ್ನೆ ನಂಬಿದವರು ಕತ್ತಲನ್ನು ಪ್ರವೇಶಿ ದರೆ ಕೇವಲ ಪರವನ್ನೆ ನಂಬಿದವರು ಅದಕ್ಕಿಂತ ಕುರುಡು ಕಗ್ಗತ್ತಲೆಯನ್ನು ಪ್ರವೇಶಿಸಿದರೂ ಈ ಅಪಾಯದಿಂದ ಪಾರಾಗಬೇಕಾದರೆ ಪರದ ಪರಮ ಶಕ್ತಿಯನ್ನು–ಶ್ರೀ ಅರವಿಂದ ಅದನ್ನು ಅತಿಮಾನಸ ಎಂಬ ವಿಶಿಷ್ಟ ಹೆಸರಿನಿಂದ ಕರೆಯುತ್ತಾರೆ–ಇಹದಲ್ಲಿ ತಂದಿಳಿಸಬೇಕು ಇಹವನ್ನು ಪರಿವರ್ತಿಸಬೇಕು. ರೂಪಾಂತರ ಮಾಡಬೇಕು. ಅದನ್ನು ಸಾಧಿಸುವುದು ಹೇಗೆ? ಸಕಲ ಕಾರ್ಯಾಚರಣೆಯನ್ನು, ಚಟುವಟಿಕೆಯನ್ನು (ಗೀತೆಯಲ್ಲಿ ಕರ್ಮ ಎಂದು ಹೇಳಿರುವುದನ್ನು) ಅವನ ಅಥವಾ ಅದರ ಉಪಕರಣವಾಗಿ ಕೇವಲ ನಿಮಿತ್ತಮಾತ್ರನಾಗಿ

ನೆರವೇರಿಸಿಕೊಂಡು ಬಾಳುವುದೆ ಏಕಮಾತ್ರ ಉಪಾಯ. ಆಗ ಮಾಡುವ ಕೆಲಸ ಯಾವುದಾದರೇನು? ಮಹಾಕಾವ್ಯ ರಚನೆಯಿಂದ ಹಿಡಿದು ಕಸಗುಡಿಸುವ ಅತ್ಯಂತ ಹೀನ ಎಂದು ಭಾವಿಸಿರುವ ಕೆಲಸದವರೆಗೆ ಎಲ್ಲದೂ ಯೋಗವೆ ಆಗುತ್ತದೆ. ಆದ್ದರಿಂದಲೆ ಶ್ರೀ ಅರವಿಂದರು "ಬಾಳೆಲ್ಲವೂ ಯೋಗವೆ" ("All life is yoga") ಎಂದಿದ್ದಾರೆ.

ಹಾಗಾದರೆ ಶ್ರೀ ಅರವಿಂದರ ಪೂರ್ಣಯೋಗ ಗೀತಾಚಾರ್ಯನ ಕರ್ಮಯೋಗ ಶಿವಶರಣರ ಕಾಯಕಯೋಗವೆ ಆಯಿತಲ್ಲ? ಮೇಲ್ನೋಟಕ್ಕೆ ಹಾಗೆ ಕಾಣುತ್ತದೆ. ಆದರೆ ಪೂರ್ಣಯೋಗ, ಕರ್ಮಯೋಗದ ಪಡಿಯಚ್ಚಲ್ಲ. ಈಗ ಮತ್ತೊಮ್ಮೆ ಯೋಗದ ಉದ್ದೇಶವೇನು ಎಂಬುದನ್ನು ಪುನಶ್ಚರಣೆ ಮಾಡೋಣ. ಜೀವಾತ್ಮ ಪರಮಾತ್ಮನೊಡನೆ ಒಂದುಗೂಡುವುದೆ ಯೋಗ. ಅಪರ ಪ್ರಕೃತಿಯಿಂದ ಪರಾಪ್ರಕೃತಿಗೆ ಉಲ್ಲಂಘನೆ ಮಾಡುವುದು ಯೋಗದ ಗುರಿ. ಈ ಉತ್ತರಣವು ಕೆಳಗಿನದನ್ನು—ಅಪರ ಸ್ಥಿತಿಯನ್ನು—ಸುಮ್ಮನೆ ತಿರಸ್ಕರಿಸಿ ಪರದಲ್ಲಿ ಲಂಘಿಸಿ ಲಯವಾಗಿ ಹೋಗುವುದರಿಂದ ಸಾಧ್ಯ. ಇದೆ ಸರ್ವಸಾಧಾರಣ ದೃಷ್ಟಿ. ಆದರೆ ಪೂರ್ಣಯೋಗದ ಗುರಿ. ಇಹದ ಅಪರವನ್ನು ತಿರಸ್ಕರಿಸುವುದಿಲ್ಲ. ಅಪರಾ ಪ್ರಕೃತಿಯನ್ನು ಅಂಗೀಕರಿಸಿ ಅದನ್ನು ರೂಪಾಂತರಗೊಳಿಸಿ, ಪರಿವರ್ತಿಸಿ ಪರಾ ಪ್ರಕೃತಿಯನ್ನು ಮಾಡುವುದು. ದೈವ ನಮ್ಮನ್ನು ತನ್ನ ಅಪ್ಪುಗೆಯಲ್ಲಿ ಹಿಡಿದು ಆಕ್ರಮಿಸುವಂತೆ ನಾವು ಅವನನ್ನು ನಮ್ಮಲ್ಲಿಯೆ ಆಹ್ವಾನ ಮಾಡಿಕೊಳ್ಳುವುದು ಪೂರ್ಣಯೋಗದ ಗುರಿ. ಈ ಮಾನವ ಜೀವಾತ್ಮವನ್ನು ದಿವ್ಯಾತ್ಮವನ್ನಾಗಿ ಈ ಪ್ರಾಕೃತ ಬಾಳನ್ನು ಅಪ್ರಾಕೃತ ದಿವ್ಯ ಜೀವನವನ್ನಾಗಿ ರೂಪಾಂತರಿಸುವುದು ಪೂರ್ಣಯೋಗದ ಗುರಿ.

ಪ್ರಚಲಿತ ಕರ್ಮಯೋಗದಲ್ಲಿ, ಜೀವಾತ್ಮ ಪರಮಾತ್ಮನೊಡನೆ ಒಂದುಗೂಡಲು ಕರ್ಮವನ್ನು ಸಾಧನವನ್ನಾಗಿ, ಇಹಜೀವನವನ್ನು ಕರ್ಮಕ್ಷೇತ್ರವನ್ನಾಗಿ ಉಪಯೋಗಿಸಿಕೊಳ್ಳುವರು. ಒಮ್ಮೆ ಆ ಐಕ್ಯ ಸಾಧನೆಯಾದ ಮೇಲೆ ಕರ್ಮ ನಿಂತು ಹೋಗುವುದು. ಪಕ್ವವಾದ ಹಣ್ಣು ಮರದಿಂದ ಕಳಚಿ ಬೀಳುವಂತೆ ಕರ್ಮ ಬಿದ್ದುಹೋಗುವುದು. ಆದರೆ ಪೂರ್ಣಯೋಗದಲ್ಲಿ ಇಹಜೀವನ ವಿಧಿಯಿಲ್ಲದೆ ಸಹಿಸಿಕೊಳ್ಳಲೇಬೇಕಾದ ಕರ್ಮಭೂಮಿಯಲ್ಲ. ಪೂರ್ಣಯೋಗ ಸಾಧಕನಿಗೆ ಕರ್ಮ ಅತೀತಕ್ಕೆ ನೆಗೆಯಲು ಅಗತ್ಯವಾದ ಸಾಧನ ಮಾತ್ರವಲ್ಲ. ಸಂಪೂರ್ಣ ಸಮರ್ಪಣದಿಂದ ಅತೀತದ ಸ್ಪರ್ಶವಾದ ಮೇಲೆ ಅಪರ ಪ್ರಕೃತಿ ಪರಿವರ್ತಿತವಾಗಿ, ಅದನ್ನು ಪರಾಪ್ರಕೃತಿಯ ಸ್ಥಿತಿಗೆ ತಿರುಗಿಸುತ್ತಾನೆ. ಅಂಥ ಸ್ಥಿತಿಯಲ್ಲಿ ಸಾಧಕ ಕರ್ಮದಲ್ಲಿ ತೊಡಗಿರುವುದು ಸಹಜವಾಗುತ್ತದೆ. ಆಗ ಅವನು ಇಹದಿಂದ ತಿರೋಹಿತನಾಗುವ ಮಾತೇಯಿಲ್ಲ. ಯಾಕೆಂದರೆ ಸ್ವರ್ಗ ಮರ್ತ್ಯ ಅವನ ಪಾಲಿಗೆ ಒಂದೇ ಸಮ. ಇದೆ ಪೂರ್ಣಯೋಗದ ವೈಶಿಷ್ಟ್ಯ; ಇತರ ಯೋಗಗಳಿಗಿಂತ ಭಿನ್ನ. ಕೊನೆಗೆ ಪೂರ್ಣಯೋಗಿ ಮರ್ತ್ಯವನ್ನೆ ಸ್ವರ್ಗವನ್ನಾಗಿ ಪರಿವರ್ತಿಸುವನು. ಭೂಮಿಯಲ್ಲಿ ಸ್ವರ್ಗ ಸ್ಥಾಪನೆ ಮಾಡಬೇಕೆಂಬ ಎಲ್ಲ ದಾರ್ಶನಿಕರ ಕನಸನ್ನು ನನಸನ್ನಾಗಿಸುವುದು ಪೂರ್ಣ

ಯೋಗಿಯಿಂದಲೆ. ಪೂರ್ಣಯೋಗಿ ತಾನೊಬ್ಬ ಉದ್ಧಾರವಾದರೆ ಸಾಕೆಂದು ಆತ್ಮಲಾಭದಿಂದ ವಿರಮಿಸಲಾರ. ತನ್ನ ನಡತೆಯಿಂದ ಆದರ್ಶದಿಂದ ಇತರ ಜೀವರುಗಳನ್ನೂ ಪರಿವರ್ತಿಸಿ ಇಹವನ್ನು ರೂಪಾಂತರಿಸುವನು. ಇದು ಅವನು ಲೋಕೋದ್ಧಾರದ ದೃಷ್ಟಿಯಿಂದ ಮಾಡುವ ಕೆಲಸವಲ್ಲ. ಮಾನವರ ಬಗ್ಗೆ ಅವನಿಗಿರುವ ಅನುಕಂಪದಿಂದಲ್ಲ. ಶ್ರೀಮಾತೆ ಹೇಳಿದಂತೆ ದೈವಕ್ಕಾಗಿ ಮಾಡುವ ಸಹಜ ಯೋಗ.

ಶಿವಯೋಗದ ಗುರಿಯೂ ಲಿಂಗಾಂಗ ಸಾಮರಸ್ಯ ಎಂಬುದನ್ನು ಪ್ರಾರಂಭದಲ್ಲಿಯೆ ಗಮನಿಸಿದ್ದೇವೆ. ಭಕ್ತಸ್ಥಲದಿಂದ ಪ್ರಾರಂಭಿಸಿದ ಸಾಧಕ ಐಕ್ಯಸ್ಥಲವನ್ನು ಮುಟ್ಟಿ ಲಿಂಗಾಂಗ ಸಾಮರಸ್ಯ ಪಡೆಯುತ್ತಾನೆ. ಐಕ್ಯಸ್ಥಲ ಮುಟ್ಟಿದ ಸಾಧಕ ಉರಿನುಂಗಿದ ಕಪ್ಪುರದಂತೆ, ನೀರೊಳಗೆ ಬಿದ್ದ ಆಲಿಕಲ್ಲಿನಂತೆ, ಸಮುದ್ರದಲ್ಲಿಳಿದ ಉಪ್ಪಿನ ಬೊಂಬೆಯಂತೆ ಜೀವಾತ್ಮ ಲಯವಾಗಿ, ಬಯಲಿನಲ್ಲಿ ಬಯಲಾಗಿ ಹೋಗುವನೆಂದು ಶಿವಶರಣರು ತಮ್ಮ ಅನುಭವವನ್ನು ತಾವೆ ತಮ್ಮ ಮಾತಿನಲ್ಲಿಯೆ ಹೇಳಿದ್ದಾರೆ. ಅಂದಮೇಲೆ ಅಂಥ ಐಕ್ಯಸ್ಥಲದಲ್ಲಿ ಐಕ್ಯವಾದಾತನು ಮರಳಿ ಕೆಳಗಿಳಿದು ಬಂದು, ತಮ್ಮ ದೃಷ್ಟಿಯಲ್ಲಿ ಕೆಸರಿನ ಮಡುವಾದ ಇದರಲ್ಲಿ ಬೀಳುವುದು ಅವನ ಪಾಲಿಗೆ ಅಧಃಪತನ. ಪಡೆದ ಆತ್ಮಸಂಪತ್ತನ್ನು ಸೂರೆಮಾಡುವ ಬೀಳುಗೆಲಸ; ಹಾಳುಗೆಲಸ. ಅನೇಕ ಎಡರು ಗುಣಿಗಳನ್ನು ದಾಟಿ ಏರಿದ ಶ್ರೀಗಿರಿಯ ನೆತ್ತಿಯಿಂದ ಕೆಳಗಿಳಿದು ಬರಲೊಲ್ಲ. ಕದಳಿಯಲ್ಲಿ ಕಣ್ಮರೆಯಾಗುವನು. ಅಲ್ಲಮಪ್ರಭುವೂ ಕೊನೆಗೆ ಹಾಗೆಯೆ ಆಗಿಹೋದ.

ಆದರೆ ಆಗಿಹೋದ ಶಿವಯೋಗಿಗಳಲ್ಲಿ–ಅರ್ಥಾತ್ ಲಿಂಗಾಂಗ ಸಾಮರಸ್ಯ ಪಡೆದು ಐಕ್ಯಸ್ಥಲವನ್ನು ಮುಟ್ಟಿದ ಮಹಾನುಭಾವರಲ್ಲಿ–ಬಸವಣ್ಣನೊಬ್ಬಾತ ಮಾತ್ರ ಮತ್ತೆ ಈ 'ಕೆಸರಿನ ಕುಣಿಗೆ' ಇಳಿದು ಈ ಮರ್ತ್ಯದಲ್ಲಿ ಸ್ವರ್ಗ ಸ್ಥಾಪನೆಯ ಪ್ರಯತ್ನ ಮಾಡಿದ ಮಹಾನುಭಾವಿಯಾಗಿ ನನಗೆ ಕಾಣುತ್ತಾನೆ. ಶ್ರೀಗಿರಿಯ ಶ್ರೀ ಶಿಖರದಲ್ಲಿ ನಿಂದು ಬಟ್ಟಬಯಲನ್ನು ಗಳಿಸಿದ ಆ ಮಹಾನುಭಾವಿ ಮತ್ತೆ ಈ ಮರ್ತ್ಯದ ಕಡೆ ಕಣ್ಣು ಹಾಯಿಸಿ, ಕಾಲೂರಿ ನಿಂತು ಇದನ್ನು ಮೇಲೆತ್ತಲು ಪ್ರಯತ್ನ ಮಾಡಿದ ತಂದೆ ಬಸವಣ್ಣನೆಂದು ಕಾಣುತ್ತದೆ. "ಪೃಥ್ವಿವೆ ಪರಮಾತ್ಮನ ಪಾದಪೀಠ" ಎಂಬ ವೇದೋಪನಿಷತ್ತಿನ ಸತ್ಯವನ್ನು ಆಗಿನ ಸನ್ನಿವೇಶದಲ್ಲಿ ಸಾಧ್ಯವಾದಷ್ಟು ಆಚರಣೆಯಲ್ಲಿ ತಂದ ಶ್ರೇಯಸ್ಸು ಬಸವಣ್ಣನದು. ಬಸವಣ್ಣ ಇನ್ನೂ ಕೆಲವು ಕಾಲ ಬದುಕಿದ್ದಿದ್ದರೆ ತನ್ನ ದರ್ಶನವನ್ನು ಸಿದ್ಧಿಯನ್ನು ಧರೆಯಲ್ಲಿ ಇನ್ನೂ ದಿಟಮಾಡಿ ತೋರಿಸಿ ಭದ್ರಪಡಿಸುತ್ತಿದ್ದನೊ ಏನೊ. ಆತ ಲಿಂಗಾಂಗ ಸಾಮರಸ್ಯ ಸಾಧಿಸಿದ್ದನೆಂಬುದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಐಕ್ಯಸ್ಥಲ ಮುಟ್ಟಿದ್ದನೆಂಬುದು ಆತನ ವಚನಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಆ ಪರಮಪದವಿ ಪ್ರಾಪ್ತಿ ಆದ ಮೇಲೆ ಮತ್ತೆ ಈ ಮರ್ತ್ಯಕ್ಕಿಳಿದು ಇತರ ಜೀವರುಗಳನ್ನು ಆತ್ಮಸಾಕ್ಷಾತ್ ಮಾಡಲು ಹವಣಿಸಿದ ಆತನ ತ್ಯಾಗ, ಸಾಹಸ ಅನುಪಮ. ಆತನ ಈ ಮಹತ್ತನ್ನು ಕಂಡೇ ಆತನ ಬಗ್ಗೆ ಕಾವ್ಯ ಪುರಾಣಗಳು ಹುಟ್ಟಿದವು! ಆಗಿನ ಕಾಲದ ಇತರ ಶಿವಶರಣರಿಗಿಲ್ಲದ ಖ್ಯಾತಿ

ಬಸವಣ್ಣನಿಗೆ ದೊರೆಯಿತು. ಬಸವ ಮಹಿಮೆಯನ್ನು ಹಾಡಿದ ಅಂದಿನವರಿಗೆ ಬಸವಣ್ಣನ ಅಂತರ್ಯದ ಮಹಿಮೆಗಿಂತ ಅವನ ಬಹಿರಂಗ ಲೀಲಾ ಪ್ರಸಂಗವೆ ಹೆಚ್ಚು ಮನವರಿಕೆ ಆಗಿತ್ತು. ಆತ ಒಂದು ರಾಜ್ಯದ ಎಂಥದೊ ದೊಡ್ಡ ಅಧಿಕಾರ ಪಡೆದಿದ್ದನೆಂದು ಅವನನ್ನು ಓಲೈಸಲಿಲ್ಲ, ಆದರೆ ಆತನೂ ಸ್ಪಷ್ಟವಾಗಿ ನುಡಿಯದ ಆತನ ಪೂರ್ಣಯೋಗ ದೃಷ್ಟಿಯೆ ಆತ ಅಷ್ಟೊಂದು ಪ್ರಕಾಶಮಾನವಾಗಿ ಬೆಳಗಿದನೆಂದು ಕಾಣುತ್ತದೆ. ಬಸವ ಮಹಿಮೆಯನ್ನು ಕೊಂಡಾಡಿದವರು ಯಾರೂ ಆತನ ಈ ತ್ಯಾಗ ಮತ್ತು ಸಾಹಸವನ್ನು ಗಮನಿಸಿದರೆಂದು ತೋರುವುದಿಲ್ಲ.

ಬಸವಣ್ಣ ಏರಿದ ಎತ್ತರದಿಂದ ಇಳಿದು ಬಂದು ಈ ಲೌಕಿಕ ಬಾಳನಲ್ಲಿ ಬೆರೆತನೆಂಬುದನ್ನೆ ಕಾಣುವ ಪಂಡಿತೋತ್ತಮರು ಅವನು ದೀನಬಂಧು, ದಲಿತೋದ್ಧಾರಕ, ಸಕಲ ಜೀವಾತ್ಮರಿಗೆ ಲೇಸನೆ ಬಯಸಿದ ಸಮಾಜೋದ್ಧಾರಕ ಎಂಬ ಗೌಣ ಪಟ್ಟ ಕಟ್ಟಿ ಅವನ ಹಿರಿಮೆಯನ್ನು ಕಡೆಗಣಿಸಿದ ಅಪಚಾರ ಮಾಡಿದ್ದಾರೆ ಬಹುಶಃ ಬಸವಣ್ಣ-ತನ್ನ ತ್ಯಾಗವನ್ನೆ ತ್ಯಾಗ ಮಾಡಿ ಇಹದಲ್ಲಿ ಬದುಕಿದ ಮಹಾಶಿವಶರಣ.

# ಇತರ ಸಾಹಿತ್ಯ ಪ್ರಕಾರಗಳಲ್ಲಿ ವೀರಶೈವ ಸಿದ್ಧಾಂತ

—ಡಾ. ಚೆನ್ನಕ್ಕ ಎಲಿಗಾರ

ಧರ್ಮ ಯಾವುದೇ ಇರಲಿ, ಅದರ ಉಗಮದ ಮೂಲ ಬೇರುಗಳಿರುವದು ಮಾನವ ಚೇತನದ ಅದಮ್ಯವಾದ ದೈವಿಕ ಪರಿಭಾವನೆಯಲ್ಲಿ, ಲೌಕಿಕ ಸುಖ ಸಂತೃಪ್ತಿಯಲ್ಲಿ ಅರಕೆಯನ್ನು ಮನಗಂಡ ಮಾನವ ಅದನ್ನು ತುಂಬಿಕೊಳ್ಳಲೋಸುಗ ವಿಕಾಸದ ಅನ್ವೇಷಣೆಯಲ್ಲಿ ತೊಡಗುವದು, ಸೃಷ್ಟಿ ರಹಸ್ಯವನ್ನು ಅರಿಯಲು ಪ್ರಯತ್ನಿಸುವದು ವಿಜ್ಞಾನವೆನಿಸಿತು. ಇದೇ ಅಂತರ್ ಮುಖವಾಗಿ ಒಳಜಗತ್ತಿನ ಕಡೆಗೆ ತಿರುಗಿದರೆ ಧರ್ಮವೆನಿಸಿಕೊಳ್ಳುತ್ತದೆ. ಮಾನವನ ಪೂರ್ಣ ವಿಕಾಸಕ್ಕೆ ವೈಚಾರಿಕತೆಯ ಪೂರ್ಣ ಬೆಳವಣಿಗೆಗೆ ಇವೆರಡೂ ಅವಶ್ಯಕವಾದ ಅಂಶಗಳು. ಅದಕ್ಕೆ ಮಹಾವಿಜ್ಞಾನಿ ಐನ್‌ಸ್ಟನ್ ಹೇಳುವದು **'Science without religion is blind, & Religion without Science is lame'** ಎಂದು ಅಂದರೆ ಧರ್ಮವಿಲ್ಲದ ವಿಜ್ಞಾನ ಕುರುಡು; ವಿಜ್ಞಾನವಿಲ್ಲದ ಧರ್ಮ ಕುಂಟು ಎಂದು ಇವು ಒಂದಕ್ಕೊಂದು ಪೂರಕವಾಗಿ, ಪೋಷಕವಾಗಿ ಬೆಳೆದಾಗ ವ್ಯಕ್ತಿತ್ವದ ಪೂರ್ಣವಿಕಾಸ ಸಾಧ್ಯವಾಗುತ್ತದೆ. ಅಂತರಂಗ ಬಹಿರಂಗಗಳೆರಡರ ಸಮನ್ವಯ ಮತ್ತು ಸಾಮರಸ್ಯಗಳಿಂದ ಜೀವನ ಸುಗಮವಾಗುತ್ತದೆ.

ಈ ದೃಷ್ಟಿಯಿಂದ ಧರ್ಮಗಳ ಅಧ್ಯಯನ ಇಂದು ತುಂಬ ಆವಶ್ಯಕವಾಗಿದೆ. ಮಾನವನಿಗೆ ಹಸಿವು ತೃಷೆಗಳಿಂದ ಆಗುವ ಬಿಡುಗಡೆ ಆನಂದವೆನಿಸಿದರೂ ಇದು ಪೂರ್ಣ ತೃಪ್ತಿಯನ್ನು ಕೊಡದೇ ಹೋಗುವದು. ಇದು ಇನ್ನೂ ಹೆಚ್ಚಿನ ಆನಂದಕ್ಕೆ ಅವಕಾಶ ಮಾಡಿಕೊಡುವಂತೆ ಆತ ಅನ್ವೇಷಣೆಗೆ ತೊಡಗುವದು ಕಂಡು ಬರುತ್ತದೆ. ಇದು ಅವನ ದೈಹಿಕ ಮಾನಸಿಕ ಬೌದ್ಧಿಕ ಮೊದಲಾದ ಎಲ್ಲ ಹಂತಗಳಿಗೂ ಅನ್ವಯಿಸುತ್ತದೆ. ಈ ಪ್ರಯತ್ನದ ಸತ್ಫಲವೆಂಬಂತೆ ಕಲೆ ಸಾಹಿತ್ಯ ವಿಜ್ಞಾನ ತತ್ವಜ್ಞಾನಗಳು ಹುಟ್ಟಿಕೊಳ್ಳುತ್ತವೆ.

ವಿಜ್ಞಾನದಂತೆ ಧರ್ಮವೂ ಇಂದು ಹೊಸ ಹೊಸ ಪ್ರಯೋಗಗಳನ್ನು ಅಳವಡಿಸಿಕೊಳ್ಳುತ್ತ ಬೆಳೆದು ಬಂದಿದೆ. ಹಿಂದಿನ ಅನುಭವದಿಂದ ಹೊಸ ಸಿದ್ಧಾಂತಗಳು ವಿಜ್ಞಾನದಲ್ಲಿ ಹೊಸರೂಪವನ್ನು ಪಡೆದುಕೊಳ್ಳುವಂತೆ ಧರ್ಮದಲ್ಲಿಯೂ ಹೊಸ ಹೊಸ ಮಾರ್ಗಗಳು ತಲೆ ಎತ್ತತೊಡಗಿವೆ. ಹೀಗಾಗಿ ಕಾಲದಿಂದ ಕಾಲಕ್ಕೆ ಹುಟ್ಟಿ ಬರುವ ಮಹಾತ್ಮರು, ಅನುಭಾವಿಗಳು ಧರ್ಮದಲ್ಲಿ ಹೊಸ ಆಯಾಮ ತರುತ್ತಿದ್ದಾರೆ. ಪ್ರತಿಯೊಂದು ಜನಾಂಗವೂ ಅಂತಹ ಪ್ರಯೋಗಶೀಲರನ್ನೂ ತಾತ್ವಿಕ ಜಿಜ್ಞಾಸುಗಳನ್ನು ಮತ್ತೆ ಮತ್ತೆ ಕಾಣುತ್ತಲೇ ಬಂದಿದೆ. ಆ ಧರ್ಮದ, ಚಿಂತನದ, ಅನುಭವದ ರಸಘಟ್ಟಿಯೋಪಾದಿಯಲ್ಲಿ ಹೊರಹೊಮ್ಮಿದ ಸಾಹಿತ್ಯ ವೈವಿಧ್ಯಮಯವಾಗಿ ರೂಪಗೊಳ್ಳುತ್ತ ಬರುತ್ತದೆ.

ಧರ್ಮದಲ್ಲಿ ಒಂದು ತಾತ್ವಿಕಸಿದ್ಧಾಂತ ಇನ್ನೊಂದು ಆಚರಣೆಯ ಮಾರ್ಗ ತಾತ್ವಿಕ ಸಿದ್ಧಾಂತದಲ್ಲಿ ಅಂತರಂಗ ಬಹಿರಂಗಗಳನ್ನು ಕುರಿತ ಬೌದ್ಧಿಕ ವಿವೇಚನೆ ಕಂಡುಬಂದರೆ, ಈ ವಿವೇಚನೆ ಸಾರ್ಥಕತೆ ಪಡೆಯುವದು ತತ್ವ ಜಿಜ್ಞಾಸೆಯ ಆದರ್ಶವನ್ನು ಆಚರಣೆ ಯಿಂದ ಮುಟ್ಟಿ ಆನಂದದ ನಿಲುವನ್ನು ಪಡೆದುಕೊಂಡಾಗ ಹೀಗಾಗಿ ವೀರಶೈವಧರ್ಮ ಈ ಎರಡೂ ದೃಷ್ಟಿಗಳಿಂದ ಪರಿಪುಷ್ಟವಾಗಿ ಬೆಳೆದಿದೆ.

ವೀರಶೈವದ ಉಗಮ ಪ್ರಾಚೀನವಾಗಿದ್ದರೂ ಹನ್ನೆರಡನೆಯ ಶತಮಾನದ ಶಿವಶರಣರ ಕೈಯಲ್ಲಿ ಪರಿವರ್ತನೆಯ ಪ್ರಬಲ ಮಾಧ್ಯಮವಾಗಿ ಹೊಸ ಆಯಾಮ ಪಡೆ ಯಿತು. ಅದುವರೆಗೂ ಹಿಂದೂ ಧರ್ಮ ಕಂಡರಿಯದಿದ್ದ ಕೇವಲ ತಾತ್ವಿಕವಾಗಿ ಪ್ರತಿ ಪಾದನೆಗೊಂಡ ಮಾನವತೆಯ ಏಕತೆಯನ್ನು ಸರ್ವಸಮಾನತೆಯ ಆಧಾರದ ಜೀವನದ ಎಲ್ಲ ರಂಗಗಳಲ್ಲಿ ಕಾರ್ಯಗತಗೊಳಿಸುವ ಕಾರ್ಯ ಮುನ್ನಡೆಯಿತು. ಈ ಧರ್ಮದ ತಾತ್ವಿಕ ದರ್ಶನ ಮತ್ತು ಆಚರಣೆಯ ಮಾರ್ಗಗಳು ವೈಚಾರಿಕ ನಿಲುವಿನ ಮೇಲೆ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಬಲ್ಲ ಸತ್ವ ಪಡೆದುದೇ ಇದಕ್ಕೆ ಕಾರಣವೆನಿಸಿತು. ಇದನ್ನು ಗುರುತಿ ಸಿದ ಬಸವಣ್ಣ ತಾನು ಮೊದಲು ಅದನ್ನು ಅಂಗೀಕರಿಸಿದ ಅನಂತರ ತನ್ನ ಪ್ರಾಮಾಣಿಕ ಸಾಧನೆಯಿಂದ ಅವುಗಳಲ್ಲಿದ್ದ ಸುಪ್ತಶಕ್ತಿಯನ್ನು ಜಾಗೃತಗೊಳಿಸಿ ಅಂದಿನ ವಿಷಯ ವಾತಾವರಣದ ಮೇಲೆ ಪ್ರಯೋಗಿಸಿದ, ಹೊಸ ಸಮಾಜ ನಿರ್ಮಾಣಕ್ಕೆ ಕಾರಣವೆನಿಸಿದೆ.

ಈ ಹಿನ್ನೆಲೆಯಲ್ಲಿ ರಚನೆಗೊಂಡ ವೀರಶೈವ ತಾತ್ವಿಕದರ್ಶನವನ್ನು 'ಶಕ್ತಿ ವಿಶಿಷ್ಟಾ ದ್ವೈತ' ಎಂದು ಕರೆಯಲಾಗುತ್ತದೆ. ಎಲ್ಲ ಸಿದ್ಧಾಂತಗಳಲ್ಲಿ ಒಂದಲ್ಲ ಒಂದು ರೂಪದಲ್ಲಿ ಇದು ಇದ್ದೇ ಇರುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ ಅದ್ವೈತ ಸಿದ್ಧಾಂತದಲ್ಲಿ ಬೆಳೆದು ಬಂದ ಮಾಯೆಯೆ ಬೇರೆ, ವೀರಶೈವ ಅಳವಡಿಸಿಕೊಂಡಿರುವ ಶಕ್ತಿ ತತ್ವವೇ ಬೇರೆ. ಶಂಕರಾಚಾರ್ಯರು ಜಗತ್ತಿನ ಅಸ್ತಿತ್ವಕ್ಕೆ ಕಾರಣವಾದ ಭ್ರಾಂತಿಯನ್ನು ಮಾಯೆ ಎಂದು ಕರೆದರು. ಶಿವನಲ್ಲಿ ಅವಿನಾಭಾವ ಸಂಬಂಧ ಪಡೆದು ಸೃಷ್ಟಿ ನಿರ್ಮಾಣಕ್ಕೆ ಕಾರಣವಾಗುವ ಮೂಲಶಕ್ತಿ ಇದೆಂದು ವೀರಶೈವ ಹೇಳುತ್ತದೆ. ಕಾಳಿದಾಸನ ರಘುವಂಶದ ಮಂಗಳಶ್ಲೋಕ ಈ ಶಿವಶಕ್ತಿಯರ ಸಂಬಂಧ ಕುರಿತು ಹೀಗೆ ಹೇಳುತ್ತದೆ.

'ವಾಗರ್ಥಾವಿವ ಸಂಪೃಕ್ತಾ ವಾಗರ್ಥ ಪ್ರತಿಪತ್ತಯೇ
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ'

ಜಗತ್ತಿನ ತಂದೆ ತಾಯಿಗಳಾದ ಪಾರ್ವತಿ ಪರಮೇಶ್ವರರ ಸಂಬಂಧ ವಾಕ್ ಮತ್ತು ಅರ್ಥ ದಂತೆ ಎಂದು ಹೇಳಿರುವ ಈ ಮಾತು ಅವರ ಅವಿನಾಭಾವ ಸಂಬಂಧದ ಕಲ್ಪನೆ ಮಾಡಿ ಕೊಡುತ್ತದೆ. ಈ ಶಕ್ತಿ ಇಲ್ಲದ ಶಿವನು ಜಡನೆನಸಿಕೊಳ್ಳುತ್ತಾನೆ. ನವಿಲಿನ ಮೊಟ್ಟೆಯಲ್ಲಿ ರುವ ರಸದಲ್ಲಿ ನವಿಲಿನ ಎಲ್ಲ ಬಣ್ಣಗಳೂ ಅಡಕವಾಗಿರುವಂತೆ ಈ ವಿಮರ್ಶ ಶಕ್ತಿಯಲ್ಲಿ ಜಗತ್ತು ಅಡಕವಾಗಿದೆ. ಇದು ಸತ್ವರಜಸ್ತಮೋಗುಣದಿಂದ ಬಂಧಿತವಾಗಿ ಪ್ರಕೃತಿ ಎನಿಸಿ

ಕೊಳ್ಳುತ್ತದೆ. ಈ ಶಕ್ತಿ ವಿಶಿಷ್ಟನಾದಾಗ ಶಿವ ತನ್ನ ಸರ್ವಜ್ಞತಾದಿ ಗುಣಗಳನ್ನು ಕಳೆದು ಕೊಂಡು ಜೀವರುಗಳಾಗಿ ಪರಿಣಮಿಸುತ್ತಾನೆ–ಇದು ವೀರಶೈವ ಸಿದ್ಧಾಂತದಲ್ಲಿ ಕಂಡು ಬರುವ ಶಕ್ತಿತತ್ವ.

ಶಕ್ತಿವಿಶಿಷ್ಟನಾದ ಶಿವನಿಂದ ಹೊರಹೊಮ್ಮಿದ ಶಕ್ತಿವಿಶಿಷ್ಟವಾದ ಜೀವಗಳೂ ಈ ಶಕ್ತಿ ಸಾಂಗತ್ಯದಿಂದ ಶಿವಸ್ವರೂಪವೇ ಆಗುತ್ತವೆ. ಹೀಗಾಗಿ ಶಿವನ ಸಾಕಾರರೂಪ ಕೇವಲ ಕಲ್ಪಿತಲೀಲೆ ಎನಿಸುತ್ತದೆ. ಈ ಲೀಲೆ ತಪ್ಪಿದಡೆ ಆತ ಸ್ವಯಂಭು. ಇಲ್ಲಿ ಶಕ್ತಿಯ ಸ್ವರೂಪವೂ ಬೇರೆ ಬೇರೆ ಆಗಿಯೇ ಪರಿಣಮಿಸುತ್ತದೆ. ಜೀವನೂ ಶಕ್ತಿವಿಶಿಷ್ಟನೇ ಆಗಿದುದರಿಂದ ತಾನೂ ಶಿವಸ್ವರೂಪನೇ ಆಗಿ ಪರಿವರ್ತಿತನಾಗುತ್ತಾನೆ. ಇದು ಲಿಂಗಾಂಗ ಸಾಮರಸ್ಯದಲ್ಲಿ ಪರ್ಯವಸನಗೊಳ್ಳುತ್ತದೆ. ವೀರಶೈವ ದ್ವೈತ ಅದ್ವೈತಗಳಲ್ಲಿ ಸಮನ್ವಯ ಸಾಧಿಸಿ ಲಿಂಗಾಂಗ ಸಾಮರಸ್ಯದ ಘಟ್ಟ ತಲುಪಿದೆ. ತತ್ವದರ್ಶನದಲ್ಲಿ ಕಂಡ ಆದರ್ಶವನ್ನು ಕಾರ್ಯಗತಗೊಳಿಸುವ ಅನುಭಾವ ಮಾರ್ಗವನ್ನು ರೂಪಿಸಿದೆ.

ಸಾಮಾನ್ಯವಾಗಿ ತತ್ವಗಳು ಆಚರಣೆಯಲ್ಲಿ ಇಳಿಯುವಂತಾದಾಗ ಮಾತ್ರ ಸಾರ್ಥಕತೆ ಪಡೆಯುತ್ತವೆ. ಯಾವುದೇ ಧರ್ಮದಲ್ಲಿ ತಾತ್ವಿಕ ಜಿಜ್ಞಾಸೆ ಧರ್ಮವನ್ನು ಗಟ್ಟಿ ತಳಹದಿ ಯನ್ನಾಗಿಸಬೇಕು. ಆಚಾರ ವಿಚಾರಗಳ ಸುಂದರ ಸಮನ್ವಯ ಅಲ್ಲಿದ್ದರೆ ಮಾತ್ರ ಈ ತಳಹದಿ ಭದ್ರವಾಗಿರುತ್ತದೆ. ಈ ಆಚರಣೆಯ ಮಾರ್ಗವನ್ನು ವೀರಶೈವ 'ಷಟ್‌ಸ್ಥಲ ಸಿದ್ಧಾಂತ' ಎಂದು ಕರೆಯಿತು. ಇದು ಒಂದು ಸಿದ್ಧಾಂತವೂ ಹೌದು. ಆಚರಣೆಯ ಪ್ರಾಯೋಗಿಕ ವಿಧಾನವೂ ಹೌದು. ಭಕ್ತಿ ಜ್ಞಾನ ಕರ್ಮಗಳು ಇಲ್ಲಿ ಮುಪ್ಪುರಿಗೊಂಡು ಸಾಮರಸ್ಯಕ್ಕೇರುವ ಮೆಟ್ಟಿಲುಗಳೆನಿಸಿವೆ. ಜೀವ ದೇವನತ್ತ ಸಾಗುವ ಈ ಯಾತ್ರೆಯ ಮಾರ್ಗದಲ್ಲಿ ಏರಬೇಕಾದ ಆರು ಮೆಟ್ಟಿಲುಗಳು ಷಟ್‌ಸ್ಥಲಗಳೆನಿಸಿಕೊಂಡಿವೆ. ತನ್ನ ನಿಜ ರೂಪ ಮರೆತು ತಲ್ಲಣಗೊಳ್ಳುವ ಭಕ್ತನ ಮನಸ್ಸಿನ ತಳಮಳದಿಂದ ಹಿಡಿದು ವಿಶ್ವವನ್ನು ವ್ಯಾಪಿಸಿರುವ ಚೈತನ್ಯ ಸ್ವರೂಪ ಶಕ್ತಿ ತಾನೆಂಬ ಮುಕ್ತಿಯ ಶಾಂತಭಾವದವರೆಗಿನ ಎಲ್ಲ ಬೆಳವಣಿಗೆಯ ಹಂತದ ಪೂರ್ಣ ಚಿತ್ರಣವನ್ನು ನಾವು ಇಲ್ಲಿ ಕಾಣುತ್ತೇವೆ.

ಶರಣರ ಭಕ್ತಿ ಇದು ಅಂತರ್ಗತ ಶಕ್ತಿ. ಅದು ಆರುಸ್ಥಲಕ್ಕನುಗುಣವಾಗಿ ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ, ಸಮರಸಾತ್ಮಕ ಭಕ್ತಿ ಎನಿಸಿತು. ಕೈಲಾಸ ಮುಕ್ತಿ ಎಂಬ ಕಲ್ಪಿತ ಪದಗಳು ಇವರ ಸಾಧನೆಯ ಎದುರಿನಲ್ಲಿ ಮಸುಕುಗೊಂಡವು. ತಮ್ಮ ಪ್ರಾಮಾಣಿಕ ಪ್ರಯತ್ನ ಸತ್ಯ ಶುದ್ಧ ಆಚಾರ ವಿಚಾರಗಳಿಂದ ತಾವು ವಾಸಿಸುವ ಪ್ರಪಂಚ ದೇವಪ್ರಪಂಚವಾಗಬೇಕೆಂದು, ಶುದ್ಧಕ್ರಿಯೆಯೆ ಕೈಲಾಸವಾಗಬೇಕೆಂದು ಶರಣರು ಸಾರಿ ದರು. ಲಿಂಗಗತ ಶಕ್ತಿಯನ್ನವಲಂಬಿಸಿ ಮಾಡುವ ಮಾಟವೆಲ್ಲ ಭಕ್ತಿಯ ಕೂಟವಾಗಬೇಕು. ಅಂತರಂಗ ಬಹಿರಂಗಗಳ ಶೀಲಸಂಪಾದನೆಗೆ ಈ ಮರ್ತ್ಯವೊಂದು ಮಹಾಮನೆಯಾಗ ಬೇಕು ಎಂಬ ಶರಣರ ಪ್ರಯತ್ನ ಯಶಸ್ವಿಯಾಯಿತು.

ಶಿವಶರಣರು ಕ್ರಾಂತಿಯನ್ನು ಮಾಡಬೇಕೆಂದು ಹೊರಟವರಲ್ಲ. ಧರ್ಮದ ಹಿಡಿತಕ್ಕೆ ಸಿಲುಕಿ ಸಮಾಜದ ವಿಷಮ ವ್ಯವಸ್ಥೆಗೆ ಗುರಿಯಾದವರ ಕಂಡು ಅವರ ಮಾನವೀಯ ಅನುಕಂಪೆ ಮಿಡಿಯಿತು. ಸಾಮಾಜಿಕ, ಧಾರ್ಮಿಕ ವಿಷಮತೆಯ ಈ ವಾತಾವರಣ ಚಿಂತನಶೀಲರಾದ ಶರಣರನ್ನು ಸಿಡಿದೇಳುವಂತೆ ಮಾಡಿತು. ಮಾನವನ ಶಾಶ್ವತ ಸಮಸ್ಯೆಗಳಾದ ಮುಪ್ಪು, ರೋಗ, ಮರಣ, ನಿರಂತರ ದುಃಖ ಇವುಗಳಿಗೆ ಕೊನೆಯನ್ನು ಕಂಡುಕೊಳ್ಳುವ, ಬೆಳಕಿನ ಅನ್ವೇಷಣೆಗೆ ಅವರು ತೊಡಗಿದರು. ತಮ್ಮ ಅವಿರತ ಪ್ರಯತ್ನದಿಂದ ಆ ಬೆಳಕನ್ನು ತಾವು ಕಂಡುದಲ್ಲದೆ ಆ ಬೆಳಕು ಪಡೆವ ಮಾರ್ಗವನ್ನು ಜಗತ್ತಿಗೆ ಬೋಧಿಸಿದರು. ಅದು ಸಹಜವಾಗಿಯೇ ಧಾರ್ಮಿಕ ಸಮಾನತೆಯನ್ನು ಸಾಧಿಸುವ ಕ್ರಾಂತಿಕಾರಕ ಸಾಧನೆಯಾಗಿ ಪರಿಣಮಿಸಿತು. ಅವರು ವ್ಯಕ್ತಿ ಮತ್ತು ಸಮಾಜದ ಸಮಸ್ಯೆಗಳನ್ನು ಪರಿಶೀಲಿಸಿ ಪೂರ್ಣದೃಷ್ಟಿಯ ಇಹಪರ ಸಮನ್ವಯ-ಧರ್ಮವನ್ನು ಕಂಡುಕೊಂಡು ಜನತೆಗೆ ಅರ್ಪಿಸಿದುದು ಮಹತ್ವದ ಸಂಗತಿ.

ಅವರು ಸಿಡಿದೇಳಲು ಕಾರಣವಿರದೇ ಇರಲಿಲ್ಲ. ಸಮಾಜದ ವರ್ಣವ್ಯವಸ್ಥೆ, ಅವುಗಳ ಬೆನ್ನಿಗಂಟಿದ ನೂರಾರು ಜಾತಿಗಳ ತಾರತಮ್ಯ, ಅಸ್ಪೃಶ್ಯತೆ, ಕೈಕೊಳ್ಳುವ ಯಜ್ಞಯಾಗಾದಿಗಳು ಪುಣ್ಯಾರ್ಜನೆಗಾಗಿ ಕೈಕೊಳ್ಳುವ ಪ್ರಾಣಬಲಿ ಪಶುಬಲಿಗಳು. ಅವನ್ನು ಕೇಂದ್ರವಾಗಿಸಿಕೊಂಡ ಪುರೋಹಿತಶಾಹಿ ಮತ್ತು ಕರ್ಮಠಭಕ್ತಿಯ ಕೇಂದ್ರ ದೇವಸ್ಥಾನಗಳು ಅವರ ಮನಸ್ಸನ್ನು ಬಡಿದೆಬ್ಬಿಸಿದವು. ಧರ್ಮದ ಮೇಲು ಕೀಳು ಶರಣರ ಮನಸ್ಸನ್ನು ಅಸ್ತವ್ಯಸ್ತಗೊಳಿಸಿದವು. ಧರ್ಮದಲ್ಲಿ ಸರ್ವರೂ ಸಮಾನರು ಎಂಬ ಉಪನಿಷತ್ತಿನ ತತ್ತ್ವ ಕಾರ್ಯತಃ ಬಳಕೆಗೊಳ್ಳಬೇಕಾಯಿತು. ಇಂಥ ಸಂದರ್ಭಕ್ಕೆ ತಾತ್ವಿಕವಾಗಿ ವಿಕಾಸಗೊಳ್ಳುತ್ತ ಬರುತ್ತಿದ್ದ ಇಷ್ಟಲಿಂಗ ಒಂದು ಪರಿಣಾಮಕಾರಿ ಮಾಧ್ಯಮವೆನಿಸಿತು. ಧರ್ಮದ ಹೆಸರಿನಲ್ಲಿ ಬೆಳೆದಿದ್ದ ಕೊಳೆಯನ್ನು ಕತ್ತರಿಸಿ ತೆಗೆಯುವ, ಸಾಮಾಜಿಕ ಸಮತೆ ಮತ್ತು ವೈಯಕ್ತಿಕ ಉದ್ಧಾರ ಎರಡನ್ನು ಸಾಧಿಸುವ ಶಕ್ತಿಕೇಂದ್ರವನ್ನು ಬಸವಣ್ಣ ಇಷ್ಟಲಿಂಗದಲ್ಲಿ ಗುರುತಿಸಿದ. ಇದರಿಂದ ಧಾರ್ಮಿಕ ಉಪಾಸನೆ ವೈಯಕ್ತಿಕ ಸಾಧನೆಯಾಯಿತು. ಮಾರಿ ಮಸಣಿ ನೂರಾರು ಕ್ಷುದ್ರದೇವತೆಗಳ ಹೆಸರಿನಲ್ಲಿ ನಡೆಯುತ್ತಿದ್ದ ಅಂಧಶ್ರದ್ಧೆ, ತಾಮಸಿಕ ಆರಾಧನೆ ಸರಿದು ಅಲ್ಲಿ ಸಾತ್ವಿಕ ಭಕ್ತಿ ಏಕದೇವೋಪಾಸನೆ ಜಾಗೃತಗೊಳ್ಳತೊಡಗಿತು. ಧಾರ್ಮಿಕ ಉಪಾಸನೆಯ ಕೇಂದ್ರವೆನಿಸಿದ ದೇವಾಲಯ ಮೇಲು ಕೀಳು, ಶೋಷಣೆ, ಭ್ರಷ್ಟಾಚಾರಕ್ಕೆ ಮೂಲವೆಂಬುದನ್ನು ಶರಣರು ಮನಗಂಡರು. ಹೀಗಾಗಿ ಸ್ಥಾವರಭಕ್ತಿಯನ್ನು ಆಮೂಲಾಗ್ರ ಬದಲಾವಣೆ ಮಾಡಿ ಭಕ್ತಿ ವೈಯಕ್ತಿಕ, ಅದರ ಶಕ್ತಿ ಸಾರ್ವತ್ರಿಕ ಎಂದು ಇಷ್ಟಲಿಂಗದ ಮೂಲಕ ಅದನ್ನು ಸಾರ್ವತ್ರಿಕಗೊಳಿಸುವ ಮಾರ್ಗವನ್ನು ಶರಣರು ಸಾರಿದರು. ಧರ್ಮಾಧರ್ಮಗಳ ಸ್ಥೂಲ ಕ್ರಿಯಾಚರ್ಯೆ, ಅನ್ಯಮತ ಅನ್ಯದೈವಗಳ ವಿಡಂಬನೆ, ಸ್ವತಂತ್ರ ವಿಚಾರಧಾರೆ ಮೊನಚಾದ, ನೇರವಾದ, ಹೃದಯಕ್ಕೆ ತಾಗುವ ಕಳಕಳಿಯ ಪ್ರಸಾದ

ವಾಣಿ, ದೃಷ್ಟಾಂತ ಗಾದೆಗಳಿಂದ ಕೂಡಿದ ಅನುಭಾವ ಸಾಹಿತ್ಯ ಇದರ ಪ್ರತಿಫಲವೆಂಬಂತೆ ಮೂಡಿ ಬಂದಿತು.

ಹನ್ನೆರಡನೆಯ ಶತಮಾನದ ಈ ಕ್ರಾಂತಿ ಧಾರ್ಮಿಕ ಪ್ರಪಂಚಕ್ಕೆ ಮಾತ್ರ ಸಂಬಂಧಿಸದೇ ಸಮಾಜ ಮತ್ತು ಸಾಹಿತ್ಯಗಳೆರಡರ ಮೇಲೂ ತುಂಬು ಪ್ರಭಾವ ಬೀರಿದವು. ಅನುಭಾವ ನೀತಿ ಮತ, ತತ್ವವಿಚಾರಗಳಿಂದ ವಚನಸಾಹಿತ್ಯ ಶ್ರೀಮಂತಗೊಂಡಿತು. ತಾವು ಕಂಡುಕೊಂಡ ಸಂಗತಿಗಳನ್ನು ಸ್ವಾನುಭಾವದ ಒರೆಗಲ್ಲಿಗೆ ಉಜ್ಜಿ ಹೊರಹೊಮ್ಮಿದ ದಾರ್ಶನಿಕರ ಅನುಭಾವಿಗಳ, ಕಾಯಕ-ಜೀವಿಗಳ ಅಂತರಂಗ ಅನಿಸಿಕೆ ಬೆಡಗಿನ ಸಾಹಿತ್ಯ ರಾಶಿಯಾಗಿ, ಮೂಡಿಬಂದಿತು. ಬಸವಣ್ಣ, ಪ್ರಭುದೇವ, ಮಹಾದೇವಿಯಕ್ಕಗಳು ವೈಚಾರಿಕ ಸ್ವಾತಂತ್ರ್ಯ, ಅನುಭಾವಿಗಳ ನೂತನ ದೃಷ್ಟಿ ಪಡೆದುದು ಈ ಯುಗದ ವೈಶಿಷ್ಟ್ಯ. ಇಂಥ ಮಹಾಸೆಳವಿಗೆ ಬಸವಪೂರ್ವದ ಕಾಳಾಮುಖ ಪಾಶುಪತಗಳೂ ಸಿಲುಕಿ ಇದರಲ್ಲಿ ಒಂದಾದುದು ವಿಶೇಷ. ಈ ಕ್ರಾಂತಿಯ ಅಧ್ವರ್ಯುಗಳೆನಿಸಿದ ಶಿವ ಶರಣರು ಸಮಾಜವನ್ನು ಗಮನದಲ್ಲಿರಿಸಿಕೊಂಡು ಅನುಭವವನ್ನು ವಚನಗಳನ್ನಾಗಿ ಹೆಣೆದಾಗ ಇದು ಹೊಸಗಾಳಿಯನ್ನೇ ಉಂಟುಮಾಡಿತು. ಭಕ್ತಿ ಜ್ಞಾನ, ವೈರಾಗ್ಯ, ನಡೆ ನುಡಿ ಧರ್ಮ ಮುಂತಾದ ಗಂಭೀರ ವಿಷಯಗಳೂ ಇಲ್ಲಿ ಚರ್ವಿತಚರ್ವಣವಾಗಿ ಧರ್ಮ ಸರ್ವರ ಸೊತ್ತಾಯಿತು.

ಹೀಗೆ ಧಾರ್ಮಿಕ ಪರಿಷ್ಕರಣ ಕಾರ್ಯ ಕೈಕೊಂಡ ಶರಣರ ಬಗೆಗೆ ಅವರ ಸಮಗ್ರ ವಚನ-ರಾಶಿಯ ಬಗೆಗೆ ಮಾಡುವ ವಿವರಣೆ ಬೇಕಾದಷ್ಟಿದ್ದರೂ ಇಲ್ಲಿಯ ವಿವೇಚನೆಯೆ ಬೇರೆ. ಶಾಸ್ತ್ರೀಯವಾಗಿ ಸಿದ್ಧಾಂತ ನಿರೂಪಣೆಯ ದೃಷ್ಟಿಯಿಂದ ಹೇಳಿದ ಸೃಷ್ಟಿಯ ವಚನ, ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯ, ಶತಕ, ತ್ರಿಪದಿ, ಅನುಭಾವ, ಪದ್ಯ ಗದ್ಯ ಸಾಹಿತ್ಯ ಮುಂತಾದವುಗಳಲ್ಲಿ ಅಭಿವ್ಯಕ್ತಿಗೊಳ್ಳುವ ವೀರಶೈವ ಸಿದ್ಧಾಂತದ ರೂಪರೇಷಗಳ ಅಧ್ಯಯನವಿದು.

**ಉದ್ಧರಣೆ ಸಾಹಿತ್ಯ:**

ವೀರಶೈವ ಸಾಹಿತ್ಯ ವಿವಿಧ ಮುಖಗಳನ್ನು ಹೊಂದಿದೆ. ವಡಬು, ವಚನ, ರಗಳೆ ಷಟ್ಪದಿ, ಕಂದ ಸಾಂಗತ್ಯ ತ್ರಿಪದಿ, ಚೌಪದಿಗಳು ಮುಖ್ಯವಾದವು. ಇವಲ್ಲದೆ ವಿಷಯ ಪ್ರಧಾನವಾದ ಇನ್ನೂ ಕೆಲವು ಪ್ರಕಾರಗಳಲ್ಲಿ ಅರ್ಚನ ಸಾಹಿತ್ಯ ಅರ್ಪಣ ಸಾಹಿತ್ಯ, ಅನುಭಾವ ಸಾಹಿತ್ಯ, ಅಷ್ಟಾವರಣ ಸಾಹಿತ್ಯ ಪಂಚಾಚಾರ ಮತ್ತು ಷಟಸ್ಥಲ ಸಾಹಿತ್ಯ ಸಶೀಲ ಸಾಹಿತ್ಯಗಳೂ ಎಂಬವು. ಇವುಗಳಲ್ಲಿ ಇನ್ನೊಂದು ಗಮನಿಸಬೇಕಾದ ಸಾಹಿತ್ಯ ಪ್ರಕಾರವೆಂದರೆ ಉದ್ಧರಣೆ ಸಾಹಿತ್ಯ. ಇದನ್ನು ಅಂಗಲಿಂಗ ಸಾಹಿತ್ಯವೆಂದು ಕರೆಯುತ್ತಾರೆ. ಇಲ್ಲಿ ಅಂಕಿ, ಅಕ್ಷರ, ವರ್ಣಗಳು ಪ್ರಧಾನ ಪಾತ್ರ ವಹಿಸುತ್ತವೆ. ಅಂತರಂಗದ ಅರಿವನ್ನು ಉದ್ದೀಪನಗೊಳಿಸಿಕೊಳ್ಳಲು ಅವಕಾಶ ಮಾಡಿಕೊಡುವ ಸಾಂಕೇತಿಕ ದೃಶ್ಯ

ಸಾಹಿತ್ಯವೆಂದು ಹೇಳುತ್ತಾರೆ. ಸಾಂಖ್ಯ ಯೋಗ ಮೀಮಾಂಸೆ ಮತ್ತು ಜೋತಿಷ್ಯಗಳ ಸಮನ್ವಯ ಈ ಉದ್ಧರಣೆಯ ಸಾಹಿತ್ಯದಲ್ಲಿ ಕಂಡುಬರುತ್ತದೆ.

ಉದ್ಧರಣ ಅಂದರೆ ಗುರುತು, ಚಿಹ್ನ ಎಂದರ್ಥ ಧಾರ್ಮಿಕ ಪರಿಭಾಷೆಯಲ್ಲಿ ಇದು ಕೇವಲ ಚಿಹ್ನೆಯ ಪ್ರತೀಕವಾಗಿ ಉಳಿಯದೆ ಶಿವಾದ್ವೈತ ಅಧ್ಯಾತ್ಮಿಕದ ರೂಪದರ್ಶನ ವೆನಿಸುತ್ತದೆ. ಅಧ್ಯಾತ್ಮಿಕ ಅನುಭವವನ್ನು ಒಳಗೊಂಡಿರುತ್ತದೆ. ಅಂಗರೂಪ ಲಿಂಗ ರೂಪಗಳೆರಡನ್ನೂ ಅಭಿವ್ಯಕ್ತಿಗೊಳಿಸುವ ಸಂವಹನಶೀಲಸಾಹಿತ್ಯವಿದು. ಉದ್ಧರಣೆ ಉಪಾಸನೆಯ ಒಂದು ತಂತ್ರವಾಗಿದ್ದು ಮನ-ಭಾವ, ಕಾಯ, ಕರಣಗಳನ್ನು ಕೇಂದ್ರಿ ಕರಿಸುವ ಸೂಚ್ಯಸೂತ್ರವೆನಿಸಿದೆ. ನವಚಕ್ರಗಳ ನಿರ್ಣಯಕ್ಕೆ ಬೇಕಾದ ದೃಶ್ಯಸಂಕೇತ ತತ್ವಗಳ ಪಂಚೀಕರಣವನ್ನು ಉದಾಹರಿಸುವ ಸೂತ್ರ ಇದಾಗಿದೆ. ಅಂತೆಯೆ ಅಂಗ-ಲಿಂಗ, ಶಕ್ತಿ-ಭಕ್ತಿ, ಅರ್ಪಣ-ಮಿಶ್ರಾರ್ಪಣ, ಕ್ರಿಯಾಜ್ಞಾನ, ಸೃಷ್ಟಿ-ದೃಷ್ಟಿ, ಪದಾರ್ಥ ಪ್ರಸಾದ, ಹಸ್ತಮುಖಗಳ ಪಂಚೀಕರಣವನ್ನು ಬೋಧಿಸುವ ಸಾಹಿತ್ಯ ಉದ್ಧರಣ ಸಾಹಿತ್ಯವೆನಿಸಿದೆ.

ಉದ್ಧರಣೆಗೆ ತನ್ನದೇ ಆದ ಭಾವ ಭಾಷೆ, ಅಂಗ ಲಿಂಗಗಳ ಅನುಭಾವವನ್ನುಂಟು, ಮಾಡುವ ಸೂಚ್ಯಶಕ್ತಿ ಇರುತ್ತದೆ. ಉದ್ಧರಣೆಯಲ್ಲಿಯ ತಾತ್ತ್ವಿಕನಿರೂಪಣನೆ ಕಲಾತ್ಮಕ ತತ್ವಜ್ಞಾನ, ತತ್ವಾನುಭಾವ ಮೂಲತತ್ವಪ್ರಜ್ಞೆಗಳು ಅಧ್ಯಯನ ಆರಾಧಗ ಗಳಲ್ಲಿ ನೇತ್ರ ಮನ ಪ್ರಾಣಗಳ ಧಾರಣ ಆಗಿ ಉದಾತ್ತೀಕರಣಗೊಳ್ಳುತ್ತವೆ. ಆ, ಉದ್ಧರಣೆ ಎಂಬ ಹೆಸರು ಸಾರ್ಥಕವಾಗುತ್ತದೆ. ಹೀಗಾಗಿ ಅಧ್ಯಾತ್ಮ ತತ್ವಗಳನ್ನು ಶಿವಾದ್ವೈತ ಸಿದ್ಧಾಂತಗಳನ್ನು ಉದ್ಧರಿಸುವದೇ ಉದ್ಧರಣೆಯ ಗುರಿ ಎನಿಸಿದೆ. ಅಂಗ ದೊಳಗಿರುವ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳನ್ನು ಅರ್ಚನ, ಅರ್ಪಣ ಅನು ಭವಗಳನ್ನು ಇವಕ್ಕೆಲ್ಲ ಆಕರವಾದ ಸತ್ಯ ವಸ್ತುವನ್ನು ಕಂಡುಕೊಂಡು ಸಮಾಧಾನಿ, ಸಮರಸಚಿತ್ತರೂ ಆಗಬೇಕೆಂಬ ಉದ್ದೇಶವೆ ಉದ್ಧರಣೆಯ ಯೋಜನೆ ಎಂದು ಹೇಳುತ್ತಾರೆ.

ಲೋಕದ ಉದ್ಧಾರಕ್ಕಾಗಿ ಉದ್ಧರಣವಿಧಿ ನಿರೂಪಿತವಾದುದರಿಂದ ಇದನ್ನು ಉದ್ಧರಣಾ ಸಾಹಿತ್ಯ ಎಂದು ಕರೆದಿರುವದುಂಟು. ವಾತುಲತಂತ್ರ, ಪಾರಮೇಶ್ವರತಂತ್ರ, ಸೂಕ್ಷ್ಮತಂತ್ರ, ಮಂತ್ರಮಹೋದಧಿ ಶಿವರಹಸ್ಯ, ಅನಾದಿವೀರಶೈವಸಾರಸಂಗ್ರಹ, ವೀರ ಶೈವಾಚಾರ ಪ್ರದೀಪಿಕೆ ಮೊದಲಾದ ಕೃತಿಗಳು ಚಕ್ರವಿಧಿವಿಧಾನಗಳಿಗೆ ಸಾಕ್ಷಿಯಾಗಿವೆ.

ಅನಾದಿಭಕ್ತನ ಉದ್ಧರಣೆಗೆ ವಾಚ್ಯವನ್ನು ಬರೆಯುತ್ತ ಶ್ರೀ ವೀರಶೈವಸಿದ್ಧಾಂತ ಸ್ಥಾಪನಾಚಾರ್ಯರಪ್ಪ ಆದ್ಯರನುಪಮಮತದಿಂದ ಉದ್ಧರಿಸಿದ ಕುಟಿಲ, ಕುಹಕ ಯಂತ್ರ ತಂತ್ರಗಳಿಲ್ಲದ ಶಿವಜ್ಞಾನ ಸಾಧನವಪ್ಪ ಶಿವಮಂತ್ರನ್ಯಾಸ, ಶಿವತತ್ವಸ್ಥಾಪಿತ ಶಿವ ಲಿಂಗಾಂಗ ಸಂಬಂಧಪ್ರತಿ ಪಾದಕಾಗಮಗ್ರಂಥಾರ್ಥವಾಚ್ಯಂಗಳಂ ಕೆಲವು ವಚನಂಗಳಂ

ಸಂಗ್ರಹಿಸಿದ ಉದ್ಧರಣೆ ಪಟಲವಿದು, ಶಿವಲಿಂಗಾಂಕಿತ ಶಾಸನವಿದು, ಶಿವಶರಣರವಧರಿಪುದು, ಶಿವಲಿಂಗಾಂಗಸಂಬಂಧವನ್ನು ಪ್ರತಿಪಾದಿಸುವ ಆಗಮಗ್ರಂಥದ ಅರ್ಥ್ಯವಾಚ್ಯಗಳೆಂದು ತನ್ನ ಸಂಗ್ರಹಕ್ಕೆ ಉದ್ಧರಣೆ ಪಟಲ, ಎಂದು ಉಲ್ಲೇಖಿಸಿದ್ದಾನೆ. ಇದನ್ನು 'ವಾಚ್ಯಶಿವಲಿಂಗಾಂಕಿತ ಶಾಸನ'ವೆಂದು ಹೇಳಲಾಗಿದೆ. ಶ್ರೀ ಪ. ಬ್ರ. ಸದಾಶಿವ ಶಿವಾಚಾರ್ಯರು ಆತ್ಮೋದ್ಧರಣೆ ಸಾಹಿತ್ಯ ಗ್ರಂಥದಲ್ಲಿ ಉದ್ಧರಣೆಗಳ ಮೂಲ, ಉಗಮ ಅನಾದಿಭಕ್ತತ್ವವನ್ನು ನಿರೂಪಿಸುವ ಶಿವಾಗಮಶ್ಲೋಕಗಳ ಬಗೆಗೆ ಬರೆದಿರುವರು.

ಸದ್ರೂಪವೆ ಗುರು, ಚಿದ್ರೂಪವೆ ಲಿಂಗ, ಆನಂದರೂಪವೆ ಜಂಗಮ, ನಿತ್ಯರೂಪವೆ ಪ್ರಸಾದ, ಸಂಪೂರ್ಣರೂಪವೆ ಪಾದೋದಕ, ಅಖಂಡರೂಪವೆ ಭಕ್ತಿ ಇವು ಷಡಕ್ಷರ ಸ್ವರೂಪಗಳು. ಇವನ್ನು ಸೂಚ್ಯರೂಪದ ಉದ್ಧರಣೆಯಲ್ಲಿ ಹೇಳಲಾಗಿದೆ. ಪರಿಪೂರ್ಣತ್ವವೆ ಗುರು, ನಿತ್ಯತ್ವವೆ ಲಿಂಗ, ಚಿತ್ಪ್ರಕಾಶವೆ ಜಂಗಮ, ಪರಮಾನಂದವೆ ಪ್ರಸಾದ, ಚಿದ್ರಸವೆ ಪಾದೋದಕ, ಅಖಂಡತ್ವವೆ ಭಕ್ತಿ, ಇವನ್ನು ಭಕ್ತನು ತನ್ನ ಷಡಂಗಗಳಲ್ಲಿ ಷಡ್ವ್ರತಾಚಾರಗಳಿಂದ ಸಂಬಂಧಿಸಿಕೊಂಡಲ್ಲಿ ಅನಾದಿಭಕ್ತನೆನಿಸುತ್ತಾನೆ. ಆತನಲ್ಲಿ ಆಗ ಜ್ಞಾನಷ್ಟಾವರಣಗಳು ಸನ್ನಿಹಿತವಾಗುತ್ತವೆ. ಅಷ್ಟಾವರಣಗಳಲ್ಲಿ ಒಂದೊಂದರಲ್ಲಿಯೂ ಗುರುಲಿಂಗಜಂಗಮರಿರುವರೆಂಬ ಅರಿವು ಇದೆ. ಸಮರಸಭಾವದಲ್ಲಿರುವ ಅವರು ಪ್ರಸಾದ, ಪಾದೋದಕ, ವಿಭೂತಿ, ರುದ್ರಾಕ್ಷಿ ಮಂತ್ರಗಳಲ್ಲಿ ಸತ್‌ಚಿತ್ ಆನಂದ ಸ್ವರೂಪದಲ್ಲಿರುವರು. ಒಟ್ಟಿನಲ್ಲಿ ಮಕುಟೋದ್ಧರಣೆಯು ವಾಚ್ಯದಲ್ಲಿ ಸೃಷ್ಟಿಯ: ಉತ್ಪತ್ತಿ ಷಡ್ಬ್ರಹ್ಮೋದ್ಧರಣೆ ವಾಚ್ಯದಲ್ಲಿ ಮೂವತ್ತಾರು ತತ್ವೋತ್ಪತ್ತಿಗಳ ರಹಸ್ಯ ಕಂಡುಬರುತ್ತದೆ. ಇಂಥ ಉದ್ಧರಣೆ ಸಾಹಿತ್ಯ ದೃಷ್ಟಿ ಮನ, ಬುದ್ಧಿ ಭಾವಗಳ ಕೇಂದ್ರೀಕರಣವೆನಿಸಿದೆ.

**ಮಂತ್ರಗೋಪ್ಯ ಸಾಹಿತ್ಯ:**

ಪ್ರಾಚೀನ ವೀರಶೈವ ಶಾಸ್ತ್ರಗ್ರಂಥಗಳಲ್ಲಿ ಮಂತ್ರಗೋಪ್ಯ ಹೆಸರಿನ ಗ್ರಂಥಗಳು ಕೆಲವಿವೆ. ಬಸವಾದಿ ಪ್ರಮಥರು ಲಿಂಗಾಂಗ ಸಾಮರಸ್ಯ ಶಿವಯೋಗವೆಂಬ ಸಮ್ಯಗ್ದರ್ಶನ ಸತ್ಕ್ರಿಯಾ, ಸಮ್ಯಕ್‌ಚಾರಿತ್ರ, ಸುಜ್ಞಾನ ಸಮ್ಯಕ್‌ಜ್ಞಾನಗಳನ್ನು ಸಂಪಾದಿಸಿದುದನ್ನು ಮಂತ್ರಗೋಪ್ಯ ಹೇಳುತ್ತದೆ.

ಮಂತ್ರಗೋಪ್ಯಗಳಿಗೆ ಧಾರ್ಮಿಕರಂಗದಲ್ಲಿ ತುಂಬ ಪೂಜ್ಯವಾದ ಸ್ಥಾನವಿದೆ. ವೀರಶೈವ ನಿವೃತ್ತಿಮಾರ್ಗ, ವಿರಕ್ತಸಂಪ್ರದಾಯದಲ್ಲಿ ನಿರಾಭಾರಿ ದೀಕ್ಷೆಯನ್ನು 'ಸಂಪಾದನೆಯ ಚರಂತಿಗೆ' 'ಶಿವಾನುಭವ ಚರಂತಿಗೆ', 'ಮಂತ್ರಾನುಭಾವ ಚರಂತಿಗೆ' ಮುಂತಾದ ವಿವಿಧ ಕರ್ತೃತ್ವಗಳಲ್ಲಿ ನೀಡಲಾಗುತ್ತಿತ್ತು. ಆಗ ಸಂಪ್ರದಾಯ, ಪರಂಪರೆಗನುಗುಣವಾಗಿ ಧರ್ಮಶಾಸ್ತ್ರಗಳನ್ನು ಧರ್ಮಾಧಿಕಾರದ ಕುರುಹಾಗಿ ಆ ವಿರಕ್ತರುಗಳಿಗೆ ನೀಡಲಾಗುತ್ತಿತ್ತು. ಅವು ಶೂನ್ಯ ಸಂಪಾದನೆಯ ಕಟ್ಟು, ಏಕೋತ್ತರ ಶತಸ್ಥಲದ ಕಟ್ಟು,

ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯಕಟ್ಟು, ಮೂವತ್ತಾರು ಉದ್ಧರಣೆಗಳ ಕಟ್ಟು ಇತ್ಯಾದಿ. ಇವು ಧರ್ಮಶಾಸ್ತ್ರಗಳಾದುದರಿಂದ ಇವುಗಳಿಗೆ ಸಾಕಷ್ಟು ಟಿಪ್ಪಣೆ, ವಿವರಣೆ, ವ್ಯಾಖ್ಯಾನಗಳಿದ್ದು ಮಂತ್ರಗೋಪ್ಯಗಳಿಗೆ ಇಂಥ ಮಹತ್ವದ ಸ್ಥಾನ ಸಂದಿದೆ.

**ಮಿಶ್ರಾರ್ಪಣ ಸಾಹಿತ್ಯ:**

ವೀರಶೈವರ ಚರಮಗುರಿ ಲಿಂಗಾಂಗ ಸಾಮರಸ್ಯ. ಶಿವಶರಣರು ಷಟ್‌ಸ್ಥಲ ಸಿದ್ಧಾಂತವನ್ನು ವೀರಶೈವ ಸಿದ್ಧಾಂತವನ್ನಾಗಿಸಿಕೊಂಡರು. ಅರ್ಚನ, ಅರ್ಪಣ, ಅನುಭಾವಗಳೆಂಬ ಮೂರು ಪಾರಿಭಾಷಿಕ ಪದಗಳು ಕ್ರಮವಾಗಿ ಅಷ್ಟಲಿಂಗಾರ್ಚನ, ಲಿಂಗಾನುಭಾವಿಗಳೊಡನೆ ಆಲೋಚನೆ ಎನಿಸಿವೆ. ಈ ಮೂರನ್ನು ಹಿಡಿದು ನಡೆದ ಸಾಧಕನು ಷಟ್‌ಸ್ಥಲ ಸಿದ್ಧಾಂತದ ಅನುವಿಡಿದು ಅದು ಸೂಚಿಸುವ ಮಾರ್ಗದಲ್ಲಿಯೆ ನಡೆಯಬೇಕಾಗುತ್ತದೆ.

ವೀರಶೈವ ಸಿದ್ಧಾಂತದ ಅಧ್ಯಯನ ದೇಹದ ಸಂಸ್ಕರಣ ಉದಾತ್ತೀಕರಣಕ್ಕೆ ಹೆಚ್ಚಿನ ಮಾನ್ಯತೆ ನೀಡಿದೆ. 'ತನುವ ತೋಂಟವ ಮಾಡಿ ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯಾ ಭ್ರಾಂತಿಯ ಬೇರ' ಎಂದು ಶರಣರು ಹಾಡುವಲ್ಲಿ ದೇಹವನ್ನು ಸಂಸ್ಕರಿಸಿ ಉದಾತ್ತೀಕರಣಗೊಳಿಸಿಕೊಳ್ಳುವ ವಿಧಾನವನ್ನು ಸೂಚ್ಯವಾಗಿ ವಿವರಿಸಿರುವರು.

ಅರಿಷಡ್ವರ್ಗಕ್ಕೆ ಸಿಕ್ಕು ಬಳಲುವ ಕಾಯವಿಕಾರದಿಂದ ಮುಕ್ತನಾಗಿ ಕಾಯದಲ್ಲಿದ್ದರೆ 'ಕಾಯದ ಸಂಗವೇ ಲೇಸು' ಎಂದು ಸಾರಿದ ಅಕ್ಕ ವಿಕಾರರಹಿತ ಕಾಯದ ಸಂಗ ಲೇಸೆಂದು ಸಾರಿರುವದು ಇದರ ಮಹತ್ವಕ್ಕೆ ಸೂಚನೆ ಎನಿಸಿದೆ. ಈ ದೇಹ ಆತ್ಮನ ಆವಾಸಸ್ಥಾನ. ದೇಹ ಆರೋಗ್ಯ ಆತ್ಮವಿಕಾಸಕ್ಕೆ ಅನುಕೂಲಕಾರಿ. ಇಂಥ ವಿಕಾಸವಾಗಬೇಕಾದರೆ ಅಂಗ ಗುಣಗಳು ಲಿಂಗಗುಣಗಳಾಗಿ ಮಾರ್ಪಾಡಾಗಬೇಕು. ಹೀಗೆ ಮಾಡಿದರೆ ಕಾಯಕ ಕೈಲಾಸವಾಗುತ್ತದೆ, ದೇಹ ದೇವಾಲಯವೆನಿಸುತ್ತದೆ.

ವೀರಶೈವದ ಪಾರಿಭಾಷಿಕ ಅರ್ಪಣದಿಂದ ಅಂಗಭೋಗ ಲಿಂಗಭೋಗವಾಗುತ್ತದೆ. ಪದಾರ್ಥ ಪ್ರಸಾದವಾಗುತ್ತದೆ. ಅಂಗನಲ್ಲಿಯ ಲಿಂಗಕಳೆಗಳು ಸುಳಿದೆಗೆದು ಬೆಳೆದು ಲಿಂಗಾಂಗ ಸಾಮರಸ್ಯಕ್ಕೆ ಅನುವು ಮಾಡಿಕೊಡುತ್ತದೆ. ಆದ್ದರಿಂದ 'ಅರ್ಪಣ'ಕ್ಕೆ ವೀರಶೈವದಲ್ಲಿ ವಿಶಿಷ್ಟಸ್ಥಾನವಿದೆ. ಅರ್ಪಣದಲ್ಲಿ ಮುಖ್ಯವಾಗಿ ಕಾರ್ಯನಿರ್ವಹಿಸುವದು ಅಂಗ ಮತ್ತು ಲಿಂಗ.

ಶಕ್ತಿವಿಶಿಷ್ಟಾದ್ವೈತವಾದ ಶಕ್ತಿಯೊಂದಿಗೆ ಶಿವ ಅವಿನಾಭಾವ ಸಂಬಂಧ ಹೊಂದಿದುದನ್ನು ಒಪ್ಪಿಕೊಳ್ಳುವ ವೀರಶೈವಧರ್ಮ ಆ ಪೂಜ್ಯ ಪೂಜಕ ಲೀಲೆಗಾಗಿ ಆ ಪರವಸ್ತುವೇ ಲಿಂಗ ಅಂಗವೆಂದು ಎರಡು ಭಾಗವಾಗುತ್ತದೆ. ಲಿಂಗನಲ್ಲಿರುವ ಈ ಶಕ್ತಿಯನ್ನು ಕಳೆ ಎಂದೂ, ಅಂಗನಲ್ಲಿರುವ ಶಕ್ತಿಯನ್ನು 'ಭಕ್ತಿ' ಎಂದು ಕರೆಯಲಾಗುತ್ತದೆ.

ಅಂಗಕ್ಕೆ ಕಾರತನು, ಸೂಕ್ಷ್ಮತನು, ಸ್ಥೂಲತನುಗಳೆಂಬ ತನುತ್ರಯಗಳಿವೆ. ಇವಕ್ಕೆ ಸಮವಾಗಿ ಲಿಂಗ ಭಾವಲಿಂಗ ಪ್ರಾಣಲಿಂಗ ಇಷ್ಟಲಿಂಗವೆಂದು ಮೂರು ಭಾಗವಾಗುತ್ತದೆ.

ಅಂಗ ಆತ್ಮ, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ ಮತ್ತು ನಾಸಿಕ ಎಂದು ಆರು ಇಂದ್ರಿಯಗಳನ್ನು ಹೊಂದಿದರೆ ಲಿಂಗ ಯೋಗಾಂಗ, ಭೋಗಾಂಗ, ತ್ಯಾಗಾಂಗಗಳು ಎರಡೆರಡಾಗಿ ಐಕ್ಯ-ಶರಣ, ಪ್ರಾಣಲಿಂಗ-ಪ್ರಸಾದಿ, ಮಹೇಶ-ಭಕ್ತ ಎಂದು ಆರಾದಾಗ ಅವುಗಳಿಂದ ಪೂಜೆಗೊಳ್ಳಲು ಲಿಂಗವು ಕೂಡ ಮಹಾಲಿಂಗ-ಪ್ರಸಾದಲಿಂಗ, ಜಂಗಮಲಿಂಗ-ಶಿವಲಿಂಗ, ಗುರುಲಿಂಗ ಆಚಾರಲಿಂಗವೆಂದು ಆರಾಗಿ ಅಂಗನಲ್ಲಿ ನೆಲೆಗೊಳ್ಳುತ್ತದೆ. ಇವನ್ನೇ ಲಿಂಗಷಟ್‌ಸ್ಥಲ ಮತ್ತು ಅಂಗಷಟ್‌ಸ್ಥಲಗಳೆಂದು ಕರೆಯುತ್ತಾರೆ. ಆಚಾರಾದಿ ಷಡ್‌ಲಿಂಗ ಗಳಲ್ಲಿ ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ ಮತ್ತು ಚಿಚ್ಛಕ್ತಿಗಳಿದ್ದರೆ ಷಡಂಗದಲ್ಲಿ ಕ್ರಮವಾಗಿ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭಾವಭಕ್ತಿ, ಆನಂದ ಭಕ್ತಿ ಮತ್ತು ಸಮರಸಭಕ್ತಿಗಳಿರುತ್ತವೆ. ಅಂಗನ ತನುತ್ರಯ ಮತ್ತು ಷಡಿಂದ್ರಿಯಗಳ ಪ್ರಕಾರ ಲಿಂಗವೂ ಮೂರು, ಆರಾಗುತ್ತದೆಂದು ವೀರಶೈವ ಹೇಳುವುದು ತರ್ಕಸಮ್ಮತವಾಗಿದೆ. ಶಿವಶರಣರು ಇನ್ನೂ ಆಳವಾಗಿ ಯೋಚಿಸಿ ಭಕ್ತಾದಿ ಅಂಗಷಟ್‌ಸ್ಥಲದಲ್ಲಿ ಭಕ್ತನಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ ಮುಂತಾಗಿ ಆರು ಅವಾಂತರಸ್ಥಲಗಳನ್ನು ಕಲ್ಪಿಸಿದ್ದಾರೆ. ಇನ್ನೂ ಮುಂದುವರೆದು ಭಕ್ತನಭಕ್ತ ಮುಂತಾದ ಒಂದೊಂದೂ ಅವಾಂತರಸ್ಥಲದಲ್ಲಿ ಭಕ್ತನಭಕ್ತನಭಕ್ತ ಭಕ್ತನಭಕ್ತನಮಹೇಶ ಮುಂತಾಗಿ ಮತ್ತೆ ಆರು ಸ್ಥಲಗಳನ್ನು ಕಲ್ಪಿಸ ಲಾಗಿದೆ. ಇದಕ್ಕನುಗುಣವಾಗಿ ಲಿಂಗಸ್ಥಲಗಳೂ ಬರುತ್ತವೆ. ಹೀಗಾಗಿ ಸ್ಥಲಗಳು ಅರ್ಪಣಾ ದೃಷ್ಟಿಯಿಂದ ಆರು, ಆರರಿಂದ ಮೂವತ್ತಾರು, ಮೂವತ್ತಾರರಿಂದ ಇನ್ನೂರ ಹದಿನಾರು ಆಗುತ್ತವೆ.

ಈ ವಿಭಜನೆಯಲ್ಲಿ ವ್ಯವಸ್ಥಿತ ಯೋಜನೆ ಇದ್ದುದರಿಂದ ಚೆನ್ನಬಸವಣ್ಣ ವೀರಶೈವ ಷಟ್‌ಸ್ಥಲಸಿದ್ಧಾಂತವನ್ನು ಸಮಸಮುಚ್ಚಯವೆಂದು ಕರೆದಿರುವದುಂಟು.

ಷಟ್‌ಸ್ಥಲ ಸಿದ್ಧಾಂತ ಸಮಸಮುಚ್ಚಯವಾದುದರಿಂದ ಒಂದೊಂದು ಸ್ಥಲದಲ್ಲೂ ಉಳಿದ ಸ್ಥಲಗಳು ಆಳವಟ್ಟು ಮಿಶ್ರಣವಾಗುತ್ತದೆ. ಹೀಗಾಗಿ ಅರ್ಪಣದಲ್ಲಿಯೂ ಈ ಮಿಶ್ರಣವಾಗುವುದರಿಂದ ಇದನ್ನು ಮಿಶ್ರಾರ್ಪಣವೆಂದು ಕರೆಯಲಾಗುತ್ತದೆ.

ಈ ಅರ್ಪಣದಲ್ಲಿ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣವೆಂಬ ಮೂರು ಭಾಗವಾಗುತ್ತವೆ. ಕಾಯಾರ್ಪಣ ಸ್ಥೂಲತನುವಿಗೆ ಸಂಬಂಧಿಸಿದ್ದು, ಅಲ್ಲಿ ಇಷ್ಟಲಿಂಗ ಹೆಚ್ಚು ಪ್ರಾಧಾನ್ಯತೆ ಹೊಂದುತ್ತದೆ. ಕರಣಾರ್ಪಣ ಸೂಕ್ಷ್ಮ ತನುವಿಗೆ ಸಂಬಂಧಿಸಿದ್ದು, ಅಲ್ಲಿ ಪ್ರಾಣಲಿಂಗಕ್ಕೆ ಹೆಚ್ಚು ಪ್ರಾಧಾನ್ಯತೆ, ಭಾವಾರ್ಪಣ ಕಾರಣತನುವಿಗೆ ಸಂಬಂಧಿಸಿದ್ದು, ಅಲ್ಲಿ ಭಾವಲಿಂಗಕ್ಕೆ ಹೆಚ್ಚು ಪ್ರಾಧಾನ್ಯತೆ ಇರುತ್ತದೆ. ಒಂದೇ ಲಿಂಗದಲ್ಲಿ ಉಳಿದ ಲಿಂಗಗಳ ಸಂಬಂಧವಿರುವದನ್ನು ಇಲ್ಲಿ ಮರೆಯಲಾಗದು.

ವೀರಶೈವ ಸಿದ್ಧಾಂತದಲ್ಲಿ ಪದಾರ್ಥವನ್ನು ಪ್ರಸಾದವನ್ನಾಗಿಸುವದು ಅರ್ಪಣ ವಿಧಾನದ ಕ್ರಿಯೆ. ಅರ್ಪಣವಿಧಾನ ಮತ್ತು ಪ್ರಸಾದ ಮಹಿಮೆಯನ್ನು ನಿರೂಪಿಸುವ ಶರಣರ ವಚನ, ಹಾಡು ಅವುಗಳಿಗೆ ಬರೆದ ಟೀಕಾಗ್ರಂಥಗಳು ಮಿಶ್ರಾರ್ಪಣ ಸಾಹಿತ್ಯದಲ್ಲಿ ಒಳಗೊಳ್ಳುತ್ತವೆ. ಹೀಗಾಗಿ ಮಿಶ್ರಾರ್ಪಣ ಸಾಹಿತ್ಯದಲ್ಲಿ ವೀರಶೈವ ಸಿದ್ಧಾಂತ ವ್ಯವಸ್ಥಿತ ವಾಗಿ ನೆಲೆಗೊಂಡಿದೆ.

**ಏಕೋತ್ತರ ಶತಸ್ಥಲ-ಸಾಹಿತ್ಯ:**

ಹದಿಮೂರನೆಯ ಶತಮಾನದಲ್ಲಿ ಶಿವಶರಣರ ಉತ್ತರಾಧಿಕಾರಿಗಳೆಂಬಂತೆ ಬಂದವರು ಶಿವಕವಿ ಹರಿಹರ ಮತ್ತು ರಾಘವಾಂಕರು. ವಚನ ಸಾಹಿತ್ಯದ ಸತ್ವವನ್ನುಂಡು ಬೆಳೆದ ಈ ಉತ್ತರಾಧಿಕಾರಿಗಳು ವಚನಸಾಹಿತ್ಯಕ್ಕೆ ವ್ಯಾಖ್ಯಾನ ಕೊಡುವ ಪ್ರಯತ್ನ ಕೈಕೊಂಡರು. ಹದಿನೈದನೆಯ ಶತಮಾನದಲ್ಲಿ ಕರ್ನಾಟಕದ ಮೇಲೆ ಏರಿಬರತೊಡಗಿದ್ದ ಪರಕೀಯ ದಾಳಿ ಯಿಂದ ವೀರಶೈವವನ್ನು ರಕ್ಷಿಸಲೋಸುಗವೋ ಎಂಬಂತೆ ವಿಜಯನಗರ ಸಾಮ್ರಾಜ್ಯ ಉದಯಿಸಿತು. ಪ್ರೌಢದೇವರಾಯ ವಿಜಯನಗರದ ಗದ್ದುಗೆಯನ್ನೇರುವಲ್ಲಿ ವೀರಶೈವಕ್ಕೆ ಆನೆಯ ಬಲ ಬಂದಂತಾಯಿತು. ಇದರ ಫಲವಾಗಿ ಕಲ್ಯಾಣಕ್ರಾಂತಿಯಿಂದ ಚದುರಿ ಹೋದ ವೀರಶೈವಕ್ಕೂ, ವಚನಸಾಹಿತ್ಯಕ್ಕೂ ಒಂದು ನಿಶ್ಚಿತ ನೆಲೆ ದೊರೆತಂತಾಯಿತು. 'ಕಲ್ಯಾಣ ಮಂಡಲದ ಶಿವಭಕ್ತಿ ಸಂತಾನ'ವೆನಿಸಿ 'ಜಂಗಮಸ್ಥಲವಾಂತು ಪರಮ ಷಟ್ ಸ್ಥಲ'ವನುದ್ಧರಿಸಿದ ನೂರೊಂದು ವಿರಕ್ತರ ಧರ್ಮರಕ್ಷೆ ಇವರ ಪಾದಯುಗವ ನೆರೆನಂಬಿ ಭಜಿಸುತ ಜ್ಞಾನ ಪಲ್ಲವಿಸೆ ಅಘದಬೇರಂ ಪರಿದು ಅತಿಧರ್ಮದಿಂದ ರಾಜ್ಯವಾಳುತ್ತಿದ್ದು, ಪ್ರೌಢದೇವರಾಯನ ಮಂತ್ರ ವರ್ಗದ 'ಲಕ್ಕಣ್ಣ ದಣ್ಣಾಯಕರು ಮುನ್ನ ಭಂಡಾರಿ ಜಕ್ಕಪ್ಪ ಕಲ್ಲೆಹದ ಕೇತಿಶೆಟ್ಟಿ' ಮುಂತಾದವರ ನಿಷ್ಠಾಪೂರ್ಣ ಸೇವೆಯಿಂದ 'ಪರತರ ಶಿವಾನುಭವಿಗಳ ಪರಿಮಿತ ಗೃಹಂ ಪರಿಕಿಪರಿಗಿದು ವಿಜಯಕಲ್ಯಾಣ'ವೆಂಬಂತೆ ಹಂಪೆ ಅಭಿನವಕಲ್ಯಾಣವೆನಿಸಿತು. ಚೆಲ್ಲುವರಿದು ಹೋಗಿದ್ದ ವಚನಸಾಹಿತ್ಯವನ್ನು ಸಂಗ್ರಹಿಸುವ, ಸಂಪಾದಿಸುವ, ಸಂಕಲಿಸುವ ಅವುಗಳ ಮೂಲಕ ಶಿವಶರಣರ ವ್ಯಕ್ತಿತ್ವವನ್ನು ಮರಳಿ ಕಟ್ಟುವ, ಆ ಕೃತಿಗೆ ಟೀಕೆ ಟಿಪ್ಪಣಿ ವ್ಯಾಖ್ಯಾನ ರಚಿಸುವ ಗಂಭೀರಕಾರ್ಯ ಭರದಿಂದ ಮುಂದುವರೆಯಿತು. ಎಡೆಯೂರಿನಲ್ಲಿ ಏಳು ನೂರೊಂದು ವಿರಕ್ತರ ಅಧಿಪತಿ ತೋಂಟದ ಸಿದ್ಧಲಿಂಗನ ನೇತೃತ್ವದಲ್ಲಿ ಈ ಕಾರ್ಯ ವ್ಯವಸ್ಥಿತವಾಗಿ ರೂಪುಗೊಂಡಿತು. ಅಲ್ಲಿ ನೂರೊಂದು ವಿರಕ್ತರು ವಚನಸಾಹಿತ್ಯದ ಟೀಕೆ, ವ್ಯಾಖ್ಯಾನಗಳ ಕಾರ್ಯವನ್ನೇ ತಮ್ಮ ಮೂಲ ಮುಖ್ಯ ಆಶಯವನ್ನಾಗಿಸಿಕೊಂಡರು. ಇದರ ಸತ್ಫಲವೆಂಬಂತೆ ಕಲ್ಲುಮಠದ ಪ್ರಭುದೇವ 'ಲಿಂಗಲೀಲಾವಿಲಾಸಚಾರಿತ್ರ' ಮಹಾಲಿಂಗದೇವನ 'ಏಕೋತ್ತರ ಶತಸ್ಥಲ ಗಳು' ಹುಟ್ಟಿಬರುವಲ್ಲಿ ನೂರೊಂದು ವಿರಕ್ತರ ಸಂಪಾದನಾ ಸಾಹಿತ್ಯ ಒಂದು ಘಟ್ಟ ಪಡೆಯುತ್ತದೆ.

ಒಮ್ಮೆ ಭಕ್ತಿಭಂಡಾರಿ ಜಕ್ಕಣಾರ್ಯರು ಮಹಾನುಭಾವಿ ಮಹಾಲಿಂಗದೇವರನ್ನು 'ಪರಮಗುರುವೆ ನಿಮ್ಮಡಿಗಳು ಎನ್ನ ಪೂರ್ವಜನ್ಮ ನಿವೃತ್ತಿಯ ಮಾಡಿ ಪುನರ್ಜಾತನೆನಿಸಿ' ಅಂಗದಲ್ಲಿ ಲಿಂಗಪ್ರತಿಷ್ಠೆಯ ಮಾಡಿ ಪ್ರಣವ ಪಂಚಾಕ್ಷರಿಯ ಪ್ರಾಣಸ್ಥಲದಲ್ಲಿ ಸ್ಥಾಪಿಸಿ, ಎನ್ನ ಕೃತಾರ್ಥನ ಮಾಡಿದಿರಿ. ದೇವಾ, ಎನ್ನ ಷಡಂಗವು ಲಿಂಗದಲ್ಲಿ ಲೀಯವಹ ಭೇದವ ನಿರೂಪವ ಕೊಟ್ಟು ಪಾಲಿಸುವದು ಎನಲು ಆಗ ಮಹಾಲಿಂಗದೇವರು ತಮ್ಮ ಪರಮಜ್ಞಾನಾನುಭವ ಪ್ರಸನ್ನ ಪ್ರಕಾಶದಿಂದ ಷಡುಸ್ಥಲವನು–ಬಸವರಾಜದೇವರು, ಚನ್ನಬಸವರಾಜದೇವರು, ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಪರಮ ವಾಕ್ಯಾಮೃತವಪ್ಪ ವಚನಂಗಳಿಂದ–ಆ ತತ್‌ಶಿಷ್ಯಂಗೆ ಬೋಧಿಸುತ್ತಿರಲು.... ಎಂದರೆ ಈ ಉಪದೇಶವು ಏಕೋತ್ತರ ಶತಸ್ಥಲೋಪದೇಶ ಎನಿಸಿತು.

ಮಗ್ಗೆಯ ಮಾಯಿದೇವನು ವೀರಶೈವ ಸಿದ್ಧಾಂತವನ್ನು 'ಶಿವಾನುಭವಸೂತ್ರ'ವೆಂಬ ಹೆಸರಿನಿಂದ ಸಂಸ್ಕೃತದಲ್ಲಿ ರಚಿಸಿದವರು. ಏಕೋತ್ತರ ಶತಸ್ಥಲದ ಉಗಮಕ್ಕೆ ಬಸವಾದಿ ಪ್ರಮಥರೇ ಪ್ರವರ್ತಕರೆಂದು ನಂಬಿರುವನು. ಆದ್ಯ ವಚನಕಾರ ದೇವರ ದಾಸಿಮಯ್ಯನ ಒಂದು ವಚನ ಈ ರೀತಿಯಾಗಿದೆ.

ಸಾಗರದೊಳಗಣ ಕಿಚ್ಚಿನ ಸಾಕಾರದಂತೆ
ಸಸಿಯೊಳಗಣ ಫಲಪುಷ್ಪಂಗಳ ರುಚಿ ಪರಿಮಳದಂತೆ
ಮನದ ಮರೆಯ ಮಾತು–ನೆನಹಿನಲ್ಲಿರಿದು
ನಾಲಗೆ ನುಡಿವಾಗಲಲ್ಲದೆ–ಕಾಣಬಾರದು ಕೊಳಬಾರದು
ಒಂದಂಗದೊಳಡಗಿದ ನೂರೊಂದರ ಪರಿ ರಾಮನಾಥ||

ದೇವರ ದಾಸಿಮಯ್ಯನವರ ಕಾಲಕ್ಕಾಗಲೆ ನೂರೊಂದು ಸ್ಥಲದ ಪರಿಚಯವು ಶಿವಶರಣರಿಗಾಗಿತ್ತು ಎಂಬುದು ಈ ವಚನದಿಂದ ಸ್ಪಷ್ಟವಾಗುತ್ತದೆ. ನೂರೊಂದು ಸ್ಥಲದ ಸ್ವರೂಪಕ್ಕೆ ಸ್ಪಷ್ಟವಾಗಿ ತಳಹದಿ ಹಾಕಿಕೊಟ್ಟವ ಷಟ್‌ಸ್ಥಲಜ್ಞಾನಿ ಚನ್ನಬಸವಣ್ಣ. ನೂರೊಂದು ಸ್ಥಲದ ವಿಧಿವಿಧಾನಗಳನ್ನು ತಮ್ಮ ವಚನದಲ್ಲಿ ತಿಳಿಸಿ, 'ವಚನೈಕೋತ್ತರಶತಸ್ಥಲ'ವೆಂಬ ಕೃತಿಯನ್ನು ರಚಿಸುವದರ ಮೂಲಕ ವೀರಶೈವದ ನೂರೊಂದು ಸ್ಥಲ ನಿರ್ದೇಶನ ಮಾಡಿರುವರು.

ಲಿಂಗಸ್ಥಲದ ಅವಾಂತರಸ್ಥಲವನ್ನು ನಿರೂಪಿಸುವ ಚನ್ನಬಸವಣ್ಣನವರ ವಚನ ಹೀಗಿದೆ.

**ಗುರುಲಿಂಗ ತ್ರಿವಿಧ:** ಕ್ರಿಯಾಗಮ, ಭಾವಾಗಮ, ಜ್ಞಾನಾಗಮ.

**ಕಾಯಲಿಂಗ ತ್ರಿವಿಧ:** ಸಕಾಯ, ಅಕಾಯ ಪರಕಾಯ. ಆಚಾರಲಿಂಗ ತ್ರಿವಿಧ: ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ ಇಂತು ಗುರುಲಿಂಗಸ್ಥಲ ಒಂಬತ್ತು, ಅಂತು ಉಭಯಸ್ಥಲ ಹದಿನೆಂಟು.

**ಅನುಗ್ರಹಲಿಂಗ ತ್ರಿವಿಧ:** ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನು ಗ್ರಹ: ಅರ್ಪಿತಲಿಂಗತ್ರಿವಿಧ : ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ : ತನುಗುಣ ಲಿಂಗತ್ರಿವಿಧ : ಶಿಷ್ಯ, ಶುಶ್ರೂಷಾ, ಸೇಸ್ಯ–ಇಂತು ಶಿವಲಿಂಗಸ್ಥಲ ಒಂಬತ್ತು ಅಂತು ತೃತೀಯ ಸ್ಥಲ ಇಪ್ಪತ್ತೇಳು.

**ಒಲವುಲಿಂಗ ತ್ರಿವಿಧ:**ಜೀವಾತ್ಮ, ಅಂತರಾತ್ಮ; ಪರಮಾತ್ಮನಿರೂಪಲಿಂಗ ತ್ರಿವಿಧ; ನಿರ್ದೇಹಾಗಮ, ನಿರ್ಭಾವಾಗಮ, ಅಷ್ಟಾಗಮ, ಪ್ರಸಾದಲಿಂಗ ತ್ರಿವಿಧ : ಆದಿಪ್ರಸಾದಿ ಅಂತ್ಯ ಪ್ರಸಾದಿ, ಸೇವ್ಯಪ್ರಸಾದಿ, ಪಾದೋದಕಲಿಂಗ ತ್ರಿವಿಧ; ದೀಕ್ಷಾಪಾದೋದಕ, ಶಿಕ್ಷಾ ಪಾದೋದಕ, ಜ್ಞಾನಪಾದೋದಕ–ಇಂತು ಜಂಗಮಸ್ಥಲ ಹನ್ನೆರಡು ಅಂತು ಚತುರ್ಥಸ್ಥಲ ಮೂವತ್ತೊಂಬತ್ತು.

ಮೀಱಿದ ಶ್ರೀ ದೀಕ್ಷಾಕ್ರಮದಿಂದತ್ತಲು ನಿಃಪತಿಲಿಂಗತ್ರಿವಿಧ : ಕ್ರಿಯಾಗಿ : ಪತಿ, ಭಾವನಿಃಪತಿ, ಜ್ಞಾನನಿಃಪತಿ; ಆಕಾಶಲಿಂಗತ್ರಿವಿಧ : ಪಿಂಡಾಕಾಶ, ಬಿಂದ್ವಾಕಾಶ, ಮಹದಾ ಕಾಶ; ಪ್ರಕಾಶಲಿಂಗತ್ರಿವಿಧ : ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ ಇಂತು ಪ್ರಸಾದಲಿಂಗ ಒಂಬತ್ತು. ಅಂತು ಪಂಚಮಸ್ಥಲ ನಾಲ್ವತ್ತೆಂಟು.

ಆ ಲಿಂಗೈಕ್ಯನು ಕೊಂಡುದು ಪ್ರಸಾದ, ನಿಂದುದೋಗರ, ಚರಾಚರನಾಸ್ತಿ ಇಂತೀ ತ್ರಿವಿಧ, ಭಾಂಡ, ಭಾಜನ, ಅಂಗಲೇಪನ–ಇಂತೀ ತ್ರಿವಿಧ. ಸ್ವಯಂಪರಱಿಯಾದ ಸ್ಥಲ, ಭಾವಾಭಾವನಷ್ಟಸ್ಥಲ, ಜ್ಞಾನಶೂನ್ಯಸ್ಥಲ–ಇಂತು ಮಹಾಲಿಂಗ ಸ್ಥಲ ಒಂಬತ್ತು. ಅಂತೂ ಷಡುಸ್ಥಲ ಐವತ್ತೇಳು. ಇಂತಿವೆಲ್ಲ ಸ್ಥಲಂಗಳನೊಳಕೊಂಡ ಮಹಾಮಹಿಮನು ಜ್ಞಾನಿಯಲ್ಲ; ಅಜ್ಞಾನಿಯಲ್ಲ, ಶೂನ್ಯನಲ್ಲ, ನಿಃಶೂನ್ಯನಲ್ಲ, ಉಭಯಾಚಾರವು ತಾನೆಂದ ಱಿದ ಪರಮಜ್ಞಾನಿಗೆ ಕೊಳುಕೊಡೆಯಿಲ್ಲ. ಸಾಕಾರ ಸಂಬಂಧವನಱಿದು ನಿತ್ಯಮುಕ್ತ, ನಿರವಯ, ಉಭಯಾತ್ಮಕ ತಾನು ಕೂಡಲ ಚೆನ್ನಸಂಗಯ್ಯನೆಂದೂ ಎನ್ನದ ಸುಯಿಧಾನಿ. (ಮಹಾಲಿಂಗದೇವರ ಏಕೋತ್ತರಶತಸ್ಥಲ–ಸರ್ವಾಚಾರಸಂಪತ್ತುಸ್ಥಲದ ೨೧ ನೆಯ ವಚನ ಸಂ. ಪ್ರೊ. ಸಂ. ಶ್ರೀ ಭೂಸನೂರಮಠ ೧೯೭೪)

ಈ ವಚನದಲ್ಲಿ ಲಿಂಗಸ್ಥಲದೊಳಗಿನ ಸೂಕ್ಷ್ಮಸ್ಥಲಗಳನ್ನು ತಿಳಿಸಿರುವರು. ಅಂಗ ಸ್ಥಲದ ಮತ್ತು ಲಿಂಗಸ್ಥಲದ ಸಂಬಂಧ ಸ್ವರೂಪವನ್ನು ಮತ್ತೊಂದು ವಚನದಲ್ಲಿಯೂ ನಿರೂಪಿಸಿರುವರು.

ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾ ಲಿಂಗ–ಈ ಆರು ಲಿಂಗಸ್ಥಲಗಳು. ಭಕ್ತ ಮಾಹೇಶ್ವರ, ಪ್ರಸಾದಿ ಪ್ರಾಣಲಿಂಗಿ, ಶರಣ ಐಕ್ಯನೆಂದಿಂತು ಆರುಲಿಂಗಸ್ಥಲಗಳು. ಅವರವರ ಸಂಬಂಧವಾವಾವೆಂದರೆ ಘಣದಲ್ಲಿ ಆಚಾರಲಿಂಗಸಂಬಂಧ ಜಿಹ್ವೆಯಲ್ಲಿ ಗುರುಲಿಂಗ ಸಂಬಂಧ, ನೇತ್ರದಲ್ಲಿ ಪ್ರಾಣಲಿಂಗ ಸಂಬಂಧ. ಭಾವದಲ್ಲಿ ಮಹಾಲಿಂಗಸಂಬಂಧ, ತತ್‌ಪದವೆಂಬುದು ಲಿಂಗ, ತ್ವಂ ಪದ ವೆಂಬುದು ಅಂಗ. ಅಸಿಪದವೆಂಬುದುಭಯ ಸಂಬಂಧ.

### ೨. ಮಹೇಶಾಂಗನ ಗುರುಲಿಂಗಾರ್ಚನೆ:

ಮಹೇಶಾಂಗನು ತನ್ನ ಆರುದಳದ ಸ್ವಾಧಿಷ್ಠಾನ ಸಿಂಹಾಸನದಲ್ಲಿ ಜಿಹ್ವೆಗೆ ಜಿಹ್ವೆಯಾದ ಮಕಾರಮಯವಾದ ಲಿಂಗವನು ಪ್ರತಿಷ್ಠಾಪಿಸಿ ಜ್ಞಾನಾಚಾರಜಲದಿಂದ ಅಭಿಷೇಕಗೈದು ಸುಜ್ಞಾನ ವಿಭೂತಿಯು ಧರಿಸಿ, ಸ್ವಪ್ನವೆಂಬ ಗಂಧವನ್ನಿಟ್ಟು ನಿಷ್ಕ್ರೋಧವೆಂಬ ಅಕ್ಷತೆಯನಿಟ್ಟು ತ್ರಿಕರಣವೆಂಬ ತ್ರಿದಲಪತ್ರಿಯನ್ನೇರಿಸಿ ಬ, ಭ, ಮ, ಯ, ರ, ಲ ಎಂಬ ಆರು ಅಕ್ಷರ ಪುಷ್ಪವ ಧರಿಸಿ ಸಲಿಲದ ಶ್ವೇತವರ್ಣವೆಂಬ ಜ್ಯೋತಿಯು ಬೆಳಗಿ ಸುಬುದ್ಧಿಯೆಂಬ ಹಸ್ತದಿಂದ ಸುರುಚಿಯೆಂಬ ಪ್ರಸಾದವನು ಜಿಹ್ವೆಯ ಮುಖದಲ್ಲಿ ಸಮರ್ಪಿಸಿ ನಿಷ್ಕಾಮಭಕ್ತಿಯಿಂದ ಮಂತ್ರವ ಜಪಿಸುವದೆ ಗುರುಲಿಂಗಾರ್ಚನೆಯೆನಿಸುವದು.

### ೩. ಪ್ರಸಾಧ್ಯಂಗನ ಶಿವಲಿಂಗಾರ್ಚನೆ:

ಪ್ರಸಾಧ್ಯಂಗನು ಹತ್ತುದಳದ ಮಣಿಪೂರಕ ಮಂಗಳಾಸನದಲ್ಲಿ ನೇತ್ರಕ್ಕೆ ನೇತ್ರವಾದ ಶಿಕಾರಮಯ ಶಿವಲಿಂಗವನ್ನು ಸಂಸ್ಥಾಪಿಸಿ ಸದ್ವಿಚ್ಛಾನಿರ್ಮಲಜಲದಿಂದ ಸ್ನಾನವ ಮಾಡಿಸಿ ಪ್ರಕಾಶರೂಪವಿಭೂತಿಯ ಧರಿಸಿ ಸುಷುಪ್ತಿಗಂಧಲೇಪಿಸಿ, ನಿರ್ಲೋಭವೆಂಬ ಅಕ್ಷತೆಯನ್ನಿಟ್ಟು, ತ್ರಿನೇತ್ರವೆಂಬ ತ್ರಿದಳಪತ್ರಿಯನ್ನು ಧರಿಸಿ, ಡ, ಢ, ಣ, ತ, ಥ, ದ, ಧ, ನ, ಪ, ಫ,ಹತ್ತೆಸಳದಳದ ಕಮಲವನ್ನಲಂಕರಿಸಿ ಅಗ್ನಿಯ ರಕ್ತವರ್ಣನೆಂಬ ಜ್ಯೋತಿಯ ಬೆಳಗಿ ನಿರಹಂಕಾರ ಹಸ್ತದಿಂದ ಸುರೂಪವೆಂಬ ಪ್ರಸಾದವನು ನೇತ್ರಮುಖದಲ್ಲಿ ನೈವೇದ್ಯವ ಮಾಡಿ, ಅವಧಾನಭಕ್ತಿಯಿಂದ ನಿರೀಕ್ಷಿಸುವುದೇ ಶಿವಲಿಂಗಾರ್ಚನೆಯೆನಿಸುವದು.

### ೪. ಪ್ರಾಣಲಿಂಗಾಂಗ್ಯನ ಜಂಗಮಲಿಂಗಾರ್ಚನೆ:

ಹನ್ನೆರಡು ದಳದ ಅನಾಹತಾಸನದಲ್ಲಿ ತ್ವಕ್ಕಿಗೆ ತ್ವಕ್ಕಾದ ವಾಕಾರಮಯ ಜಂಗಮಲಿಂಗವನ್ನು ಮೂರ್ತಗೊಳಿಸಿ ಆದಿಶಕ್ತಿರೂಪಜಲದಿಂದ ಅಭಿಷೇಕ ಮಾಡಿ,ಜನನಮರಣ ಸಾಹಿತ್ಯರೂಪ ಭಸ್ಮವ ಧರಿಸಿ, ತುರೀಯ ಗಂಧವ ಧರಿಸಿ, ನಿರ್ಮೋಹ ಅಕ್ಷತೆಯನಿಟ್ಟು, ತ್ರಿಗುಣವೆಂಬ ತ್ರಿದಲವನೇರಿಸಿ ಕವರ್ಗ, ಚವರ್ಗ, ಟವರ್ಗ ಎಂಬ ಹನ್ನೆರಡೆಸಳಿನ ಕುಸುಮವನ್ನು ಧರಿಸಿ ವಾಯುವಿನ ಮಾಜಿಷ್ಠವರ್ಣರೂಪ ಕರ್ಪೂರವ ಹಚ್ಚಿ, ಸುಮನಹಸ್ತದಿಂದ ಸುಸ್ಪರ್ಶ ಪ್ರಸಾದವನು ತ್ವಕ್‌ಮುಖದಲ್ಲಿ ಅನುಭವಮುಖದಿಂದ ಅರ್ಪಿಸುವದೇ ಜಂಗಮಲಿಂಗಾರ್ಚನೆಯೆನಿಸುವದು.

### ೫. ಶರಣನ ಪ್ರಸಾದಲಿಂಗಾರ್ಚನೆ:

ಶರಣಾಂಗನು ತನ್ನ ಹದಿನಾರುದಳದ ವಿಶುದ್ಧಿಪೀಠದಲ್ಲಿ ಶ್ರೋತ್ರಕ್ಕೆ ಶ್ರೋತ್ರವಾದ ಯಕಾರಮಯ ಪ್ರಸಾದಲಿಂಗವನ್ನು ಪ್ರತಿಷ್ಠಾಪಿಸಿ ಪರಾಶಕ್ತಿರೂಪಜಲದಿಂದ ಅಭಿಷೇಕಗೈದು, ನಾದರೂಪ ವಿಭೂತಿಯನ್ನಿಟ್ಟು, ತುರ್ಯಾತೀತಗಂಧವ, ಲೇಪಿಸಿ ನಿರ್ಮಲದ ಅಕ್ಷತೆಯನ್ನು ಧರಿಸಿ, ತ್ರಿವೇದರೂಪತ್ರಿದಲವನೇರಿಸಿ, ಹದಿನಾರುಸ್ವರಗಳೆಂಬ ಪುಷ್ಪಗಳ

ಧರಿಸಿ, ಆಕಾಶದ ನೀಲಾರತಿಯ ಬೆಳಗಿ, ಸುಜ್ಞಾನಹಸ್ತದಿಂದ ಸುಶಬ್ದಪ್ರಸಾದವನು ಶ್ರೋತ್ರ ಮುಖದಲ್ಲಿ ಆನಂದ ಭಕ್ತಿಯಿಂದ ಅರ್ಪಿಸಿ ಕೇಳುವದೇ ಪ್ರಸಾದ ಲಿಂಗಾರ್ಚನೆ ಯೆನಿಸುವದು.

೬. ಐಕ್ಯಾಂಗನ ಮಹಾಲಿಂಗಾರ್ಚನೆ:

ಐಕ್ಯಾಂಗನು ತನ್ನ ಎರಡು ದಳದ ಆಜ್ಞಾಚಕ್ರವೆಂಬ ಕಮಲಾಸನದಲ್ಲಿ ಮನಕ್ಕೆ ಮನವಾದ ಪ್ರಾಣಮಯ ಮಹಾಲಿಂಗವನ್ನು ಮುಹೂರ್ತಗೊಳಿಸಿ ಚಿಚ್ಛಕ್ತಿರೂಪಜಲ ದಿಂದ ಅಭಿಷೇಕಗೈದು, ಚಿದ್ಭಸಿತವ ಧರಿಸಿ, ನಿರವಸ್ಥೆಯೆಂಬ ಗಂಧವಪೂಸಿ ನಿರ್ಮತ್ಸರ ಅಕ್ಷತೆಯನ್ನಿಟ್ಟು ತ್ರಿಕಾಪವೆಂಬ ತ್ರಿಧಳವಧರಿಸಿ ಹಂ, ಸಂ ಹೂಗಳನೇರಿಸಿ, ಆತ್ಮ ಪ್ರಕಾಶದ ಆರತಿಯ ಬೆಳಗಿ ಸದ್ಭಾವಹಸ್ತದಿಂದ ಸಂತೃಪ್ತಿ ಪ್ರಸಾದವನು ಮನೋಮುಖದಲ್ಲಿ ಸಮರಸ ಭಕ್ತಿಯಿಂದ ಅರ್ಪಿಸಿ ಅವಿರಳವಾಗುವುದೆ ಮಹಾಲಿಂಗಾರ್ಚನೆಯೆನಿಸುವದು.

ಭಕ್ತಾಂಗನು ಕ್ರಿಯಾಪ್ರಧಾನನಾಗಿ ಇಷ್ಟ ಪ್ರಾಣ ಭಾವ ಎಂಬ ತ್ರಿವಿಧ ಲಿಂಗಪೂಜಾ ಸಕ್ತನಾಗುವನು. ಇಲ್ಲಿ ಅಂಗ–ಲಿಂಗ–ಭಕ್ತಿ ಇವು ಮೂರು ಮತ್ತು ಆರು ಒಂಬತ್ತು ಸಕೀಲ ಸಂಬಂಧಾಚರಣೆಯೆನಿಸುವಗು. ಭಕ್ತನೆ ಮಹೇಶನಾಗಿ, ನಿಷ್ಠಾಪ್ರಧಾನವಾಗಿ, ಷಡ್ವಿಧಲಿಂಗಾರ್ಚನಾ ತತ್ಪರನಾಗುವನು. ಆಗ ಆತನಿಗೆ ಅಂಗ ಲಿಂಗ, ಭಕ್ತ ಶಕ್ತಿ, ಹಸ್ತ, ಮುಖ ಈ ಆರು ಹನ್ನೆರಡು, ಹದಿನೆಂಟು,ಇಪ್ಪತ್ನಾಲ್ಕು, ಮೂವತ್ತುಮೂವತ್ತಾರು ಸಕೀಲ ಸಂಬಂಧಾರ್ಚನೆ ಘಟಿಸುವದು. ಮಹೇಶನೆ ಪ್ರಸಾದಿಯಾಗಿ ಅವಧಾನ ಪ್ರಧಾನನಾಗಿ ನವ ಲಿಂಗಪೂಜಾನಿರತನಾಗುವನು. ಭಕ್ತಮಾಹೇಶ್ವರರು ಮೂರು–ಆರುಲಿಂಗಗಳನ್ನು ನವಚಕ್ರ ಗಳಲ್ಲಿ ಪೂಜಿಸುವನು.ಇವನಿಗೆ ಅಷ್ಟವಿಧ ಸಕೀಲಗಳು ಮುಖ್ಯವಾದ ಕಾರಣ ಇವುಗಳೊಡನೆ ಹದಿನಾರು, ಇಪ್ಪತ್ನಾಲ್ಕು, ಮೂವತ್ತೆರಡು, ನಾಲ್ವತ್ತು, ನಾಲ್ವತ್ತೆಂಟು ಸಕೀಲಗಳು ಸಂಬಂಧಾಚರಣೆಯ ಅರ್ಚನೆ ಹೊಂದುವದು. ಅಂಗ–ಲಿಂಗ–ಭಕ್ತಿ–ಶಕ್ತಿ–ಹಸ್ತ–ಮುಖ ಪದಾರ್ಥ–ಪ್ರಸಾದ ಇವೆ ಎಂಟು ಸಕೀಲಗಳು. ಈ ಸಕೀಲಗಳನ್ನು ಕುರಿತ

೧. ಆಧಾರಚಕ್ರ

ಭಕ್ತಸ್ಥಲವುಳ್ಳವರುಗಳ
ಆಧಾರಚಕ್ರದ ನಾಲ್ಕೆಸಳ ಕಂಜದ ಮಧ್ಯದಲ್ಲಿ
ಭಕ್ತನೆಂಬ ಅಂಗ ಆಚಾರವೆಂಬ ಲಿಂಗ
ಕ್ರಿಯೆಯೆಂಬ ಶಕ್ತಿ, ಶ್ರದ್ಧೆಯೆಂಬ ಭಕ್ತಿ
ಸುಚಿತ್ತವೆಂಬ ಹಸ್ತ
ಘ್ರಾಣವೆಂಬ ಮುಖ, ಸುಗಂಧವೆಂಬ ಪದಾರ್ಥ
ಪ್ರಸನ್ನ ಪ್ರಸಾದರೂಪಿನಿಂದ ನೆಲೆಗೊಂಡಿಪ್ಪುದು.

೨. **ಸ್ವಾಧಿಷ್ಠಾನಚಕ್ರ**

ಮಹೇಶ್ವರಸ್ಥಲವುಳ್ಳವರ
ಸ್ವಾಧಿಷ್ಠಾನಚಕ್ರದ ಆರೆಸಳ ಕಂಜದ ಮಧ್ಯದಲ್ಲಿ
ಮಾಹೇಶ್ವರನೆಂಬ ಅಂಗ, ಗುರುವೆಂಬ ಲಿಂಗ
ಜ್ಞಾನಯೆಂಬ ಶಕ್ತಿ, ನಿಷ್ಠೆಯೆಂಬ ಭಕ್ತಿ,
ಸುಬುದ್ಧಿಯೆಂಬ ಹಸ್ತ, ಜಿಹ್ವೆಯೆಂಬ ಮುಖ
ಸುರಸವೆಂಬ ಪದಾರ್ಥ
ಪ್ರಸನ್ನ ಪ್ರಸಾದರೂಪಿನಿಂದ ನೆಲೆಗೊಂಡಿಪ್ಪುದು.

೩. **ಮಣಿಪೂರಕಚಕ್ರ**

ಪ್ರಸಾದಿಸ್ಥಲವುಳ್ಳವರುಗಳ
ಮಣಿಪೂರಕಚಕ್ರದ ಹತ್ತೆಸಳ ಕಂಜದ ಮಧ್ಯದಲ್ಲಿ
ಪ್ರಸಾದಿಯೆಂಬ ಅಂಗ, ಶಿವನೆಂಬ ಲಿಂಗ,
ಇಚ್ಛೆಯೆಂಬ ಶಕ್ತಿ, ಸಾಮಧಾನವೆಂಬ ಭಕ್ತಿ
ನಿರಹಂಕಾರವೆಂಬ ಹಸ್ತ, ನೇತ್ರವೆಂಬ ಮುಖ
ಪ್ರಸನ್ನ ಪ್ರಸಾದರೂಪಿನಿಂದ ನೆಲೆಗೊಂಡಿಪ್ಪುದು.

೪. **ಅನಾಹತಚಕ್ರ**

ಪ್ರಾಣಲಿಂಗಸ್ಥಲವುಳ್ಳವರುಗಳ
ಅನಾಹತಚಕ್ರದ ಹನ್ನೆರಡೆಸಳ ಕಂಜದ ಮಧ್ಯದಲ್ಲಿ
ಪ್ರಾಣಲಿಂಗಿಯೆಂಬ ಅಂಗ, ಜಂಗಮವೆಂಬ ಲಿಂಗ
ಆದಿಯೆಂಬ ಶಕ್ತಿ, ಅನುಭಾವವೆಂಬ ಭಕ್ತಿ
ಸುಜ್ಞಾನವೆಂಬ ಹಸ್ತ, ತ್ವಕ್ಕೆಂಬ ಮುಖ
ಸ್ಪರ್ಶವೆಂಬ ಪದಾರ್ಥ
ಪ್ರಸನ್ನ ಪ್ರಸಾದರೂಪಿನಿಂದ ನೆಲೆಗೊಂಡಿಪ್ಪುದು.

೫. **ವಿಶುದ್ಧಚಕ್ರ**

ಶರಣಸ್ಥಲವುಳ್ಳವರುಗಳ
ವಿಶುದ್ಧಿಚಕ್ರದ ಹದಿನಾರೆಸಳ ಕಂಜದ ಮಧ್ಯದಲ್ಲಿ
ಶರಣನೆಂಬ ಅಂಗ, ಪ್ರಸಾದವೆಂಬ ಲಿಂಗ
ಪರಾಯೆಂಬ ಶಕ್ತಿ ಆನಂದವೆಂಬ ಭಕ್ತಿ
ಸುಜ್ಞಾನವೆಂಬ ಹಸ್ತ, ಶ್ರವಣೇಂದ್ರಿಯವೆಂಬ ಮುಖ,

ಸುಶಬ್ದವೆಂಬ ಪದಾರ್ಥ
ಪ್ರಸನ್ನ ಪ್ರಸಾದರೂಪಿನಿಂದ ನೆಲೆಗೊಂಡಿಪ್ಪುದು.

೬. **ಆಜ್ಞಾ ಚಕ್ರ**

ಐಕ್ಯಸ್ಥಲವುಳ್ಳವರುಗಳ
ಆಜ್ಞಾಚಕ್ರದ ಎರಡೆಸಳ ಕಂಜದ ಮಧ್ಯದಲ್ಲಿ
ಐಕ್ಯನೆಂಬ ಅಂಗ, ಮಹವೆಂಬ ಲಿಂಗ
ಚಿತ್ತೆಂಬ ಶಕ್ತಿ, ಸಮರಸವೆಂಬ ಭಕ್ತಿ
ಸದ್ಭಾವವೆಂಬ ಹಸ್ತ, ಹೃದಯುವೊಬ ಮುಖ
ಸಂತೃಪ್ತಿಯೆಂಬ ಪದಾರ್ಥ
ಪ್ರಸನ್ನ ಪ್ರಸಾದರೂಪಿನಿಂದ ನೆಲೆಗೊಂಡಿಪ್ಪುದು.

ಪರಮಾತ್ಮನಿಂದ ಅಗಲಿಬಂದ ಈ ಆತ್ಮ ಆ ಪರಮಾತ್ಮನೊಡನೆ ಒಂದಾಗುವುದೇ ಈ ವೀರಶೈವ ಸಿದ್ಧಾಂತದ ಗುರಿ. 'ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ' ಅಂದರೆ ಈ ಧರ್ಮಪಥದಲ್ಲಿ ನಡೆಯುವವನು ಶರೀರ ವಿಮೋಕ್ಷಕ್ಕಿಂತ ಮೊದಲು ಮುಕ್ತನಾಗುವನು. ಅದಕ್ಕೆ ವೀರಶೈವನಿಗೆ ಚರಮದೇಹಿ ಎಂದು ಕರೆದಿರುವದು.

ಈ ಕೆಳಗೆ ಕಾಣಿಸಿದ ಸಕೀಲಗಳ ಕ್ರಿಯಾಚರಣೆ ಮಾನವನನ್ನು ದೇವ ಮಾನವನನ್ನಾಗಿಸುವಿಕೆ ಎಂದು ಶರಣರು ಹೇಳಿರುವದುಂಟು.

೧. ಕಲೆಗಳು: ನಿವೃತ್ತಿ–ಪ್ರತಿಷ್ಠಾ–ವಿದ್ಯಾ–ಶಾಂತಿ–ಶಾಂತ್ಯತೀತ–ಶಾಂತ್ಯತೀತ್ತೋರ
೨. ತತ್ತ್ವಗಳು: ಪೃಥಿವಿ–ಅಪ್ಪು–ತೇಜ–ವಾಯು–ಆಕಾಶ–ಆತ್ಮ
೩. ಶಕ್ತಿಗಳು: ಕ್ರಿಯಾ–ಜ್ಞಾನ–ಇಚ್ಛಾ–ಆದಿ–ಪರಾ–ಚಿಚ್ಛಕ್ತಿ
೪. ಭಕ್ತಿಗಳು: ಶ್ರದ್ಧಾ–ನಿಷ್ಠಾ–ಅವಧಾನ–ಅನುಭವ–ಆನಂದ–ಸಮರಸ
೫. ಹಸ್ತಗಳು: ಸುಚಿತ್ತ -ಸುಬುದ್ಧಿ–ನಿರಹಂಕಾರ–ಸುಮನ–ಸುಜ್ಞಾನ- ಸದ್ಭಾವ
೬. ಮುಖಗಳು: ಘ್ರಾಣ–ಜಿಹ್ವೆ–ನೇತ್ರ–ತ್ವಕ್–ಶ್ರೋತ್ರ–ಹೃದಯ
೭. ಪದಾರ್ಥಗಳು: ಗಂಧ–ರಸ–ರೂಪ–ತೂಪ–ಶಬ್ದ–ತೃಪ್ತಿ
೮. ಪ್ರಸಾದಗಳು: ಸುಗಂಧ–ಸುರಸ–ಸುರೂಪ–ಸುಸ್ಪರ್ಶ–ಸುಶಬ್ದ–ಸಂತೃಪ್ತಿ
೯. ಅರ್ಪಿತಲಿಂಗಗಳು: ಆಚಾರಲಿಂಗ–ಗುರುಲಿಂಗ–ಶಿವಲಿಂಗ–ಜಂಗಮಲಿಂಗ–ಪ್ರಸಾದ ಲಿಂಗ–ಮಹಾಲಿಂಗ
೧೦. ತ್ರಿವಿಧಾಂಗ: ಇಷ್ಟಲಿಂಗ–ಪ್ರಾಣಲಿಂಗ–ಭಾವಲಿಂಗ
ತ್ಯಾಗಾಂಗ–ಭೋಗಾಂಗ–ಯೋಗಾಂಗ

ಟೀಕಾಕಾರರು ಈ ಸಕೀಲ ಸಂಪ್ರದಾಯವನ್ನು ಈ ರೀತಿ ವಿವರಿಸಿರುವರು.

"....ಮತ್ಪ್ರಾಣಕಳಾ ಚೈತನ್ಯ ಸ್ವರೂಪ ಅನಿಮಿಷಾರಾಧ್ಯ ಪ್ರಭುದೇವರಿಂದ ಅಲ್ಲಮ

ಪ್ರಭುಸ್ವಾಮಿಗಳು ಗೊಗ್ಗಯ್ಯನೆಂಬ ಶಿವಶರಣ ಸಾಕ್ಷಿಯಾಗಿ ಆ ಇನ್ನೂರ ಹದಿನಾರು ಸಕೀಲದೊಳಗೆ ಹುದುಗಿರುವ ನೂರೆಂಟು ಸಕೀಲು ಬೆಸಗೊಂಡು ಆ ಇನ್ನೂರ ಹದಿನಾರು ಸಕೀಲವ ಚಿಕ್ಕದಣ್ಣಾಯಕರ ಮುಖ ವಚನದಿಂದ ಬಸವದಂಡನಾಥ ಪ್ರಮಥರು ಸಾಕ್ಷಿಯಾಗಿ ಆ ಇನ್ನೂರ ಹದಿನಾರು ಸಕೀಲದೊಳಗೆ ಹುದುಗಿರುವ ನೂರೆಂಟು ಸಕೀಲು, ತ್ತೊಂಬತ್ತಾರು ಸಕೀಲು, ಅರವತ್ತಾರು ಸಕೀಲು ಐವತ್ತಾರು ಸಕೀಲು, ನಾಲ್ವತ್ತೆಂಟು ಸಕೀಲು, ಮೂವತ್ತಾರು ಸಕೀಲು, ಷಡ್ವಿಧ ಸಕೀಲು ಮೊದಲಾದ ಅರ್ಥ, ಅನ್ವಯ, ಆಕಾಂಕ್ಷೆ ಸ್ವರೂಪರ್ಥ, ಸಂಬಂಧರ್ಥ, ನಿಶ್ಚಯಾರ್ಥಗಳಿಂದ ತಮ್ಮ ಚಿದಂಗಸ್ವರೂಪರಾದ ಮರ್ತ್ಯಲೋಕದ ಮಹಾಜ್ಞಾನ ಶಿವಶರಣಗಣಂಗಳು ಅರಿದಾನಂದಿಸಿ, ನಿತ್ಯ ಶಿವಪ್ರಸಾದ ಸುಖಿಗಳಾಗಲೆಂದು ಅಕ್ಕಮಹಾದೇವಿಯರ ಮುಖವಚನದಿಂದ ನಿರೂಪಿಸಿದ ಟಿಪ್ಪಣಾರ್ಥದ ಸೂತ್ರ" ಎಂದೂ ಮತ್ತು ಅಲ್ಲಲ್ಲಿ 'ಕಲ್ಯಾಣಪಟ್ಟಣದ ಅನುಭವಮಂಟಪದಲ್ಲಿ ಚೆನ್ನಮಲ್ಲ ಪ್ರಭುವೆಂಬ ಗುರುವರನು ಉಡುತಡಿಯ ಮಹಾದೇವಿಯೆಂಬ ಶಿವಶರಣೆಯು ಮುಖವಚನದಿಂದ ಮರ್ತ್ಯಲೋಕದ ಮಹಾಗಣಂಗಳಿಗರ್ಪಿತವಾಗಲೆಂದು ಬೋಧಿಸುವಂತಾದ ಸಕೀಲದ ಟಿಪ್ಪಣಾರ್ಥವು....' ಎಂದೂ ಕೊನೆಯಲ್ಲಿ '....ನಿರ್ವಾಣ ವೀರಶೈವ ಸಂಪನ್ನೆ ಅಕ್ಕಮಹಾದೇವಿಯೆಂಬ ಶಿವಶರಣೆಗೆ ಚೆನ್ನಮಲ್ಲಪ್ರಭು ಇನ್ನೂರ ಹದಿನಾರು ಸಕೀಲದ ಟಿಪ್ಪಣಾರ್ಥವ ಬೋಧಿಸುವ ಸಮಯದಲ್ಲಿ ವೋಲೆಶಾಂತಯ್ಯನು ಲಿಖಿತವ ಮಾಡಿದ ಟಿಪ್ಪಣಾರ್ಥವು ಸಮಾಪ್ತ....' ಎಂದಿದೆ. ಇಲ್ಲಿ ಸಕೀಲ ಸಾಹಿತ್ಯ ಮೂರು ರೀತಿಯಲ್ಲಿ ಬೆಳವಣಿಗೆಯಾದುದು ಕಂಡುಬರುತ್ತದೆ. 'ಅನಿಮಿಷರ್ಯಾಪ್ರಭುಗೊಗ್ಗಯ್ಯಗಳ ಸಾಕ್ಷಿಯಾಗಿ ಪ್ರಭುವಿಗೆ ಬೋಧಿಸಿದುದು ಚನ್ನಮಲ್ಲಪ್ರಭು ಸ್ವಾಮಿಗಳು ಅಕ್ಕಮಹಾದೇವಿಗೆ ಬೋಧಿಸಿದುದು. ಇದನ್ನು ಓಲೆಶಾಂತಯ್ಯ ಲಿಖಿತವ ಮಾಡಿದುದು. ಅದೇ ಪ್ರತಿಯಲ್ಲಿ 'ಕಲಿದೇವರದೇವಾ' ಎಂಬ ಅಂಕಿತದಲ್ಲಿ 'ಮೂವತ್ತಾರು ಸಕೀಲದ ವಿವರ' ವಿದ್ದರೆ 'ಕೂಡಲಚೆನ್ನಸಂಗನ' ಅಂಕಿತದಲ್ಲಿ ಅರವತ್ತಾರು ಸಕೀಲದ ಹನ್ನೊಂದು ತೆರೆ'ವನ್ನು ಹೇಳಲಾಗಿದೆ. ಇವುಗಳ ಮಧ್ಯೆ ಅಂಕಿತವಿಲ್ಲದ 'ನಾಲ್ವತ್ತೆಂಟು ತೆರ ಅಷ್ಟವಿಧ ಸಕೀಲು'ಗಳ ವಿವರಣೆಯೂ ಬಂದಿದೆ. ತೋಂಟದ ಸಿದ್ಧಲಿಂಗಯತಿಗಳು ಜ್ಞಾನಕಲಾತ್ಮರಾದ ಶಿವಗಣಂಗಳಿಗೆ ಬೋಧಿಸಿದ 'ನೂರೆಂಟು ಸಕೀಲದ ವಚನ'ದ ಕಟ್ಟು ಒಂದು ದೊರೆಯುತ್ತದೆ. ಹೀಗೆ ವೀರಶೈವ ಸಿದ್ಧಾಂತವನ್ನು ನಿರ್ಧರಿಸುವಲ್ಲಿ ಸಕೀಲಗಳ ಪಾತ್ರ ತುಂಬ ಮಹತ್ವದ್ದೆನಿಸಿದೆ.

ತೋಂಟದ ಸಿದ್ಧಲಿಂಗಯತಿಗಳ ನೇತೃತ್ವದಲ್ಲಿ ಇನ್ನು ಅನೇಕ ವಿರಕ್ತಯತಿಗಳು ಸಕೀಲಗಳ ಅಧ್ಯಯನ ಮಾಡಿದುದುಂಟು. ಈ ನಿಟ್ಟಿನಲ್ಲಿ ಗಮನಿಸಬೇಕಾದ ಕೃತಿ ಜಕ್ಕಣಯ್ಯನ 'ನಿರಾಳಮಂತ್ರ ಗೋಪ್ಯ' ಈ ರೀತಿ ದೊರೆಯುವ ಸಮಗ್ರ ಸಕೀಲಗಳ ವ್ಯವಸ್ಥಿತ ಅಧ್ಯಯನ ಆವಶ್ಯಕತೆ ಇಂದು ತುಂಬ ಕಂಡುಬರುತ್ತಿದೆ.

**ಕರಣಹಸಿಗೆ ಸಾಹಿತ್ಯ:**

ಕರಣಹಸಿಗೆ ಹಸರೇ ಸೂಚಿಸಲ್ಪಡುವಂತೆ ಇಂದ್ರಿಯಗಳ ವಿಭಜನೆಯ ಮೂಲಕ

ದೇಹದ ಜ್ಞಾನ ಮಾಡಿಕೊಳ್ಳುವದು ಎಂದು ಹೇಳಬಹುದು. ಡಾ. ಹಳಕಟ್ಟಿಯವರು ತಮ್ಮ ವಚನಶಾಸ್ತ್ರಸಾರದಲ್ಲಿ ಕರಣವೆಂದೊಡೆ ತತ್ತ್ವಂಗಳು, ಹಸಿಗೆ ಎಂದೊಡೆ ವಿಭಾಗವು.... ಬ್ರಹ್ಮಾಂಡವೆಂಬ ಕ್ಷೇತ್ರಕ್ಕಧಿಪತಿಯಾದ ಹಲಾಯುಧನು ಈ ಪಂಚಭೂತಂಗಳ ತಾರತಮ್ಯದಿಂ ಇಪ್ಪತ್ತೈದು ತತ್ತ್ವಂಗಳ ಪುಟ್ಟಿಸಿ, ಆ ಇಪ್ಪತ್ತೈದು ತತ್ತ್ವಯುಕ್ತವಾದ ಶರೀರವನ್ನು ತನ್ನ ಗೋಪ್ಯ ಮುಖದಲ್ಲಿ ಆತ್ಮನಂ ಪುಟ್ಟಿಸಿ, ಆ ಆತ್ಮನಿಗೆ ಸಂಬಂಧವಂ ಮಾಡಿಕೊಳಲು ಆ ಆತ್ಮನು ದೇಹೋಹಂಭಾವದ ಮರವೆಯಿಂದ ತನ್ನ ನಿಜವಂ ಮರೆದು ಅಜ್ಞಾನಿಯಾಗಿ, ಅನೇಕ ಜನ್ಮಂಗಳೊಳಗೆ ಹುಟ್ಟಿ ಹುಟ್ಟಿ ಬರುವಲ್ಲಿ ಪುಣ್ಯದಿಂದ ದೇವತಾ ಜನ್ಮ ಪಾಪದಿಂದ ಸ್ಥಾವರ ಜನ್ಮ ಪುಣ್ಯ ಪಾಪಂಗಳ ಸಮಾನತ್ವದಿಂದ ಮನುಷ್ಯ ಜನ್ಮವಂ ಪಡೆದನು. ಅಂತಪ್ಪ ಮಾನುಷಜನ್ಮ ಸಂಬಂಧಿಯಾದಾತ್ಮನ ಸ್ಥೂಲವಲ್ಲದ ಸೂಕ್ಷ್ಮವಲ್ಲದ ಪ್ರಮಾಣವಾದ ದೇಹದಲ್ಲಿಯ 'ಸಕಲ ತತ್ವಂಗಳು ಬೇರೆ ಬೇರೆ ಹಸಿಗೆಯಂ ಮಾಡಿ, ವಿಸ್ತರಿಸಿ ಹೇಳುತಿಹುದಾದ ಕಾರಣ ಈ ಶಾಸ್ತ್ರಕ್ಕೆ ತತ್ತ್ವವಿಭಾಗವೆಂಬಭಿದಾನವು ಪ್ರಸಿದ್ಧವಾಯಿತೆಂಬುದೀಗ 'ಕರಣಹಸಿಗೆ'ಯೆಂಬ ಶಬ್ದಕ್ಕರ್ಥವು' ಎಂದಿರುವುದು.

ಪಂಚ ಭೂತಾತ್ಮಕವಾದ ಪೃಥ್ವಿ, ಅಪ್ ತೇಜ್ ವಾಯು ಆಕಾಶಗಳಿಂದ ಕೂಡಿದ ದೇಹದಲ್ಲಿ ದೈವಿಗುಣಗಳು, ಈ ದೇಹದ ಗುಣಧರ್ಮ, ಅಂಗಕ್ರಿಯೆಗಳೆಲ್ಲ ಲಿಂಗಕ್ರಿಯೆಗಳಾಗಿ ಬದಲಾವಣೆ ಹೊಂದುವುದರ ಬಗೆಗೆ ವಿಷಯಗಳ ವಿವೇಚನೆ ಇದೆ.

ಪದಾರ್ಥವನ್ನು ಪ್ರಸಾದಮಯವಾಗಿ ಪರಿವರ್ತಿಸಿ ಸ್ವೀಕರಿಸುವ ಪದ್ಧತಿ ವೀರಶೈವರದು. ಈ ಪ್ರಸಾದ ಸೇವಿತ ದೇಹವೂ ಪವಿತ್ರವಾದುದು. ಅಂತೆಯೆ 'ಕೂಡಲಸಂಗಮದೇವರನೊಲಿಸಲು ಬಂದ ಪ್ರಸಾದಕಾಯವ ಕೆಡಿಸಲಾಗದು' ಎಂದು ಶರಣರು ಹೇಳಿದುದು. ವಚನಶಾಸ್ತ್ರದ ಹಿನ್ನೆಲೆಯಲ್ಲಿ 'ಎಳ್ಳನೊಳಗಣ ಎಣ್ಣೆ ಉದಕದೊಳಗೆ ಬಯಚಿಟ್ಟ ಬಯುಕೆಯ ಕಿಚ್ಚಿನಂತೆ, ಸಸಿಯೊಳಗಣ ರಸದ ರುಚಿಯಂತೆ ನನೆಯೊಳಗಣ ಪರಿಮಳ'ದಂತ ಈ ದೇಪದಲ್ಲಿದ್ದ ಪರಮಾತ್ಮನ ಇರವು ಹೀಗಾಗಿ ಈ ದೇಹ ದೇವಾಲಯವೆನಿಸಿತು. ಇದರಿಂದ ಉತ್ತಮ ಸಂಸ್ಕಾರ ಈ ದೇಹಕ್ಕೆ ಆವಶ್ಯಕ ಎಂಬ ಭಾವ ಬಲಿಯಿತು. ಇದನ್ನೇ "ಪಂ. ನಾಗಭೂಷಣಶಾಸ್ತ್ರಿಗಳು ಬೀಜಗತಶಕ್ತಿಯು ವಿಕಾಸಗೊಂಡು ಫಲಪ್ರದವಾಗ ಬೇಕಾದರೆ ಬೀಜವು ಒಳ್ಳೆಯ ಭೂಮಿಯ ಆಶ್ರಯ ಪಡೆದು ನೀರು ಬೆಳಕು ಗಾಳಿ ಮುಂತಾದವುಗಳನ್ನು ಅಪೇಕ್ಷಿಸುವಂತೆ, ಆತ್ಮಶಕ್ತಿಯ ವಿಕಾಸ ಪಡೆಯಲು ಶರೀರ ಹಾಗೂ ತತ್ಪೋಪಕವರ್ಗದ ಅಪೇಕ್ಷೆಯನ್ನು ಮಾಡುವದು, ಕಾಯವಿಲ್ಲದಿದ್ದರೆ ಯಾವುದನ್ನೂ ಸಾಧಿಸುವದು ಆಗುವದಿಲ್ಲ.... ಲೋಕಾಯುತ ಸಂಪ್ರದಾಯದ ಜನರುತೂ ಚೆನ್ನಾಗಿಯೆ ಅರಿತವರಾಗಿದ್ದಾರೆ. ಗೌತಮ ಮತ್ತು ಕಣಾದ ಋಷಿಗಳ ದೃಷ್ಟಿಯಲ್ಲಿ ಈ ಶರೀರ ಭೋಗಾಯತನ ಎಂದಿದೆ. ಅಂದರೆ ತಾನು ಕೈಕೊಂಡ ಪೂರ್ವಕರ್ಮಗಳ ಫಲಭೋಗ ಈ ದೇಹದ ಆಶ್ರಯದಲ್ಲಿಯೆ ಜರುಗಬೇಕೆಂಬುದು ಅದರ ಸೂಚ್ಯಾರ್ಥ ಇದನ್ನೇ

ನಾಗಭೂಷಣ ಶಾಸ್ತ್ರಿಗಳು ಜ್ಯೋತಿಯು ತೈಲಬತ್ತಿಗಳನ್ನು ಆಧರಿಸಿ ಬೆಳಗುವಂತೆ ಆತ್ಮ ದೇಹವನ್ನಾಕ್ರಮಿಸಿ ತನ್ನ ಪ್ರಕಾಶವನ್ನು ಪಡೆಯುವನು ಎಂದಿರುವರು.

ಬಹುಶಃ ಶರಣರು 'ಕೂಡಲಸಂಗಮದೇವನೊಲಿಸಬಂದ ಪ್ರಸಾದಕಾಯವ ಕೆಡಿಸಲಾಗದು' ಎಂದುದು ಇದಕ್ಕಾಗಿಯೆ, ಆ ಮಹಿಮರ ದೃಷ್ಟಿಯಲ್ಲಿ ಈ ದೇಹವೇ ದೇವಾಲಯ, ಇದರಿಂದ ಲಿಂಗದ ದರುಶನ, ಜಂಗಮ ದರುಶನ ಪ್ರಸಾದ ಸಂಪತ್ತು. ಬೀಜದೊಳಗಣ ವೃಕ್ಷವನ್ನರಸುವಂತೆ ಉದರದೊಳಗಣ ಬೈಚಿಟ್ಟ ಬಯಕೆಯ ಕಿಚ್ಚಿನಂತೆ ಇರುವ ಆ ಇರುವನ್ನು ಕಾಣುವ ಭಾಗ್ಯದ ಬಾಗಿಲು ಈ ದೇಹ.

ಇಂಥ ಪವಿತ್ರತಮ ಪ್ರಸಾದಫಲವೆನಿಸಬೇಕಾದ ಈ ದೇಹ ಭ್ರಾಂತಿಯ ಬೆನ್ನ ಹತ್ತಿದಾಗ ತನ್ನ ತಾನು ಮರೆಯುತ್ತದೆ. ತಾನು ಹುಟ್ಟಿಬಂದ ಉದ್ದೇಶವನ್ನು ಮರೆತು ವ್ಯಾಮೋಹದಲ್ಲಿ ಮುಳುಗಿದಾಗ ಇದರಿಂದ ಎಚ್ಚರಿಸುವ ಕಾರ್ಯ ನಡೆಯಬೇಕಾಗುತ್ತದೆ. ಅಲ್ಲಮಪ್ರಭುದೇವರು ಹೇಳುವಂತೆ ತನುವ ತೋಂಟವ ಮಾಡಿ ಮನವ ಗುದ್ದಲಿಯ ಮಾಡಿ ಭ್ರಾಂತಿ ಬೇರ ಅಗೆದು ತೆಗೆಯಬೇಕು. ಅದಕ್ಕಾಗಿ ಶಿವಶರಣರು ಅಂಗಗುಣಗಳನ್ನು ಲಿಂಗಗುಣಗಳನ್ನಾಗಿ ಪರಿವರ್ತನೆ ಮಾಡಲು ೪೪ ನಿರಾಮಯ ಷಟ್‌ಸ್ಥಲಗಳನ್ನು ಲಿಂಗಗುಣಗಳಿಗಾಗಿ ೫೭ ನಿರವಯ ಸ್ಥಲಗಳನ್ನು ರೂಪಿಸಿದ್ದಾರೆ.

ಈ ದೇಹವೆಂಬ ಹೊಲವನ್ನು ಕೃಷಿ ಮಾಡಬೇಕಾದರೆ ದೇಹದ ಸ್ವರೂಪ ಅದರ ರಚನೆಯ ಅರಿವಿರಬೇಕು. ಅದಕ್ಕಾಗಿ ವೀರಶೈವ ಷಟ್‌ಸ್ಥಲ ಶಾಸ್ತ್ರದಲ್ಲಿ ಕರಣಹಸಿಗೆ ಮಹತ್ವದ ಸ್ಥಾನ ಹೊಂದಿದೆ.

ವೀರಶೈವ ಧರ್ಮದಲ್ಲಿ 'ಕರಣಹಸಿಗೆ ದೇಹದ ರಚನೆ ಅದರಲ್ಲಿರುವ ಅಂಗಕ್ಕಿರುವ ಲಿಂಗವ್ಯವಸ್ಥೆಯನ್ನು ವಿವರಿಸಿದರೆ ಏಕೋತ್ತರ ಶತಸ್ಥಲ ಲಿಂಗಗಳ ಮೂಲಕ ಸಾಧಿಸಬಹುದಾದ ಷಟ್ಸ್ಥಲಗಳಿಗೆ ಸಂಬಂಧಿಸಿದ ಕ್ರಿಯೆಯನ್ನು ಹೇಳುತ್ತದೆ. ಮಂತ್ರಗೋಪ್ಯ ಈ ಹಂತವನ್ನು ಏರಲು ಮಾಡಬೇಕಾದ ಪ್ರಯತ್ನವನ್ನು ವಿವರಿಸುತ್ತದೆ. ಮಿಶ್ರಾರ್ಪಣ ಅದಕ್ಕೆ ಬೇಕಾದ ಮನಶ್ಶಾಸ್ತ್ರವನ್ನು ಪ್ರತಿಪಾದಿಸಿದರೆ, ಶೂನ್ಯಸಂಪಾದನೆ ವೀರಶೈವನಾದವನು ತಲುಪಬೇಕಾದ ಪರಮಗುರಿಯನ್ನು ಹೇಳುತ್ತದೆ. ಆದ್ದರಿಂದ ಕರಣಹಸಿಗೆ ವೀರಶೈವನ ತತ್ವಶಾಸ್ತ್ರಕ್ಕೆ ತಳಪಾಯದಂತಿದೆ ಎಂಬುದು ಡಾ. ಬಿ. ವಿ. ಶಿರೂರ ಅವರ ಹೇಳಿಕೆ. ಹೀಗಾಗಿ ಕರಣಹಸಿಗೆ ಶಾಸ್ತ್ರೀಯ ಕ್ರಮಬದ್ಧ ನಿರೂಪಣಾ ವಿಧಾನದಿಂದ ಮಹತ್ವದ ಗ್ರಂಥವೆನಿಸಿದೆ.

ಡಾ. ಫ. ಗು. ಹಳಕಟ್ಟಿಯವರು ಕರಣಹಸಿಗೆಗೆ ಸಂಬಂಧಪಟ್ಟಂತೆ ನಮಗೆ ದೊರೆತ ಗ್ರಂಥಗಳು ಐದು ಮಾತ್ರ. ಅವುಗಳನ್ನು ರಚಿಸಿದವರ ಹೆಸರುಗಳು ನಮಗೆ ತಿಳಿದಿರುವದಿಲ್ಲ. 'ಆದರೆ ಚನ್ನಬಸವೇಶ್ವರನ ಕರಣಹಸಿಗೆಯ ಪದ್ಧತಿಯನ್ನೇ ಅವೆಲ್ಲವೂ ಮುಖ್ಯವಾಗಿ ಅವಲಂಬಿಸಿವೆ. ಆದರೆ ಅವುಗಳಲ್ಲಿಯ ಅನೇಕ ವಿಷಯಗಳು ಮಹತ್ವದ ಪುನರುಕ್ತಿ

ಗಳಿಂದ ಬಹಳ ಕೂಡಿಕೊಂಡಿರುತ್ತವೆ. ಆದ್ದರಿಂದ ಇಂಥ ಅನಾವಶ್ಯಕ ಭಾಗಗಳನ್ನು ತೆಗೆದುಹಾಕಿ ಮುಖ್ಯವಾದ ಭಾಗಗಳನ್ನು ಮಾತ್ರ ವಾಚಕರೆದುರಿಗೆ ನಾವು ಇಲ್ಲಿ ಇಟ್ಟಿರುತ್ತೇವೆ' ಎಂದಿರುವರು. ಇವು ಚೆನ್ನಬಸವಣ್ಣನವರ ಕರುಣಹಸಿಗೆಯೊಂದು ಸಿಕ್ಕಿದೆ. ಅದರ ಮೇಲಿನ ಟೀಕೆಯು ವಾಚ್ಯ, ಟೀಕಾ, ವ್ಯಾಖ್ಯಾನರೂಪದಲ್ಲಿ ಮೂಡಿ ಬಂದಿರಬೇಕು.

ವೀರಶೈವ ತತ್ವಶಾಸ್ತ್ರದ ಈ ಮಹಾಸೊತ್ತು ಆಗಮಗಳಿಂದ ತೆಗೆದುಕೊಂಡಿದ್ದು. ಕರಣಹಸಿಗೆಯಲ್ಲಿ ವಿವೇಚನೆಗೊಂಡ ಎಲ್ಲ ವಿಷಯಗಳೂ ಭಾರತೀಯ ಆಧ್ಯಾತ್ಮಶಾಸ್ತ್ರದಲ್ಲಿವೆ. ಇದರ ಕರ್ತೃ ಚೆನ್ನಬಸವಣ್ಣನವರು ವ್ಯಕ್ತಪಡಿಸಿದ "ಷಟ್‌ಸ್ಥಲ ಸಿದ್ಧಾಂತವು ವೇದಗಳಲ್ಲಿ ಮೊಳಕೆವೊಡೆದು ಪುರಾಣಗಳಲ್ಲಿ ಚಿಗುರಿ ಆಗಮಗಳಲ್ಲಿ ಹೂವಾಗಿ, ವಚನಂಗಳಲ್ಲಿ ಮಾಗಿದ ಹಣ್ಣಾಗಿ, ಎಲ್ಲರಿಗೂ ಬೇಕಾಗುವ ವಸ್ತುವಾಗಿ ಬೆಲೆ ಪಡೆದಿದೆ. ಅದನ್ನು ಕಲ್ಯಾಣದ ಅನುಭವಮಂಟಪದಲ್ಲಿ ಎಲ್ಲರಿಗೂ ಒಪ್ಪಿಕೊಳ್ಳುವ ರೀತಿಯಲ್ಲಿ ನಿರೂಪಿಸಿ ಈ ಸಿದ್ಧಾಂತಕ್ಕೊಂದು ವಿಶಿಷ್ಟ ಸ್ಥಾನವನ್ನು ಜಗತ್ತಿನ ತತ್ವಶಾಸ್ತ್ರದಲ್ಲಿ ಒದಗಿಸಿ ಕೊಟ್ಟಿದ್ದಾನೆ. ಅಂತೆಯೇ ಈತನಿಗೆ ಷಟ್‌ಸ್ಥಲ ಚಕ್ರವರ್ತಿಯೆಂಬ ಬಿರುದು ಅಕ್ಷರಶಃ ಒಪ್ಪುತ್ತದೆ" ಎಂದು ಸಿದ್ಧಗಂಗಾಶ್ರೀಯಲ್ಲಿ ಪ್ರೊ. ವಸಂತ ಕುಷ್ಟಗಿಯವರು ತಿಳಿಸಿದ್ದಾರೆ.

ಮಾನವನ ಇಂದ್ರಿಯಗಳು ಪಂಚೇಂದ್ರಿಯಗಳಾದುದರಿಂದ ಇವು ಪಂಚಮಹಾಭೂತಗಳಿಂದಾಗಿವೆ ಎಂದು ಕರಣಪಸಿಗೆ ತಿಳಿಸಿದೆ. ಇದು ಪ್ರಾರಂಭವಾಗುವದು ಓಂಕಾರದಿಂದ. ಭಾರತೀಯ ತತ್ವಶಾಸ್ತ್ರದಲ್ಲಿ ಓಂಕಾರ ಬ್ರಹ್ಮದ ಲಕ್ಷ್ಯವೆಂದೆನಿಸಿದೆ. ಓಂ ಎಂಬ ಅಕ್ಷರವೇ ಬ್ರಹ್ಮವೆನ್ನುವದು ಗೀತೆ. ದಾಸಸಾಹಿತ್ಯದಲ್ಲಿಯೂ ಪ್ರಣವ ಮಂತ್ರದ ವಿಚಾರವಿದೆ. ಇಂಥ ಓಂಕಾರದ ಬಗೆಗೆ ಚೆನ್ನಬಸವಣ್ಣನವರ ಶಕ್ತಿವಿಶಿಷ್ಟಾದ್ವೈತಪರ ವಿವರಣೆ ಓಂಕಾರವೆಂಬ ಪ್ರಣವದಲ್ಲಿ ಅಕಾರ ಉಕಾರ ಮಕಾರ ಇವು ಮೂರು ಬೀಜಾಕ್ಷರ ಅಕಾರವೆ ನಾದ, ಉಕಾರವೆ ಬಿಂದು, ಮಕಾರವೆ ಕಳೆ ಮತ್ತು ಅಕಾರವೆ ರುದ್ರ, ಉಕಾರವೇ ಈಶ್ವರ, ಮಕಾರವೇ ಸದಾಶಿವ ಇಂತೀ ಅಕಾರ ಉಕಾರ ಮಕಾರಕ್ಕೆ ನಾದ ಬಿಂದು ಕಳೆಯ ಆಧಾರ, ಈ ನಾದಬಿಂದು ಕಳೆಗಳಿಗೆ ಪ್ರಕೃತಿಯ ಆಧಾರ. ಪ್ರಕೃತಿಗೆ ಪ್ರಾಣವೇ ಆಧಾರ, ಪ್ರಾಣಕ್ಕೆ ಲಿಂಗವೇ ಆಧಾರ, 'ಅ' ಎಂದರೆ ಅನಾಹತ, 'ಉ' ಎಂದರೆ ನಾದ ಉಳಿಯಿತ್ತು 'ಮ' ಎಂಬಲ್ಲಿ ಬಿಂದು ಬಂದು ಕೂಡಲು ಶಿವಶಕ್ತಿಯಾಗುತ್ತ ಇಂತಹ ಓಂಕಾರವಾಯಿತ್ತು ಹೀಗೆ ಅಕಾರ ಉಕಾರ ಮಕಾರಗಳ ಸ್ವರೂಪ ಒಟ್ಟಾರೆ ಕರಣಹಸಿಗೆಯಲ್ಲಿ ಪ್ರಣವೋತ್ಪತ್ತಿ, ಪಂಚಭೂತಗಳುತ್ಪತ್ತಿ, ಜಗದುತ್ಪತ್ತಿ ಪಿಂಡಸಂಗ್ರಹ, ಪಂಚಮಹಾಭೂತಗಳ ಪಂಚೀಕೃತಿ, ಬುದ್ಧೀಂದ್ರಿಯಗಳು, ಕರ್ಮೇಂದ್ರಿಯಗಳು, ದಶ ವಾಯುಗಳು, ಕರಣಚತುಷ್ಟಯು, ದೇಹ ದೇಹಿಕರಗಳ ಉತ್ಪತ್ತಿ, ಪಂಚವಿಂಶತಿ ತತ್ತ್ವಂಗಳು ದಶನಾಡಿಗಳು, ಅಷ್ಟಾತ್ಮಂಗಳು, ಅಷ್ಟತನುಗಳು, ಪಂಚ ವಿಂಶತಿ ತತ್ತ್ವಂಗಳು

ದಶನಾಡಿಗಳು, ಅಷ್ಟಾತ್ಮಗಳು, ಅಷ್ಟತನುಗಳು, ಅಂತರಂಗದ ಅಷ್ಟಮದಗಳು, ಬಹಿರಂಗದ ಅಷ್ಟಮದಗಳು, ಅಷ್ಟಮೂರ್ತಿಮದಗಳು, ಸಪ್ತಧಾತುಗಳುತ್ಪತ್ತಿ ಮತ್ತು ವರ್ಣಾಂಶಿಕದ ಭೇದ ತನುಚೇಷ್ಟೆಗಳು, ಸಪ್ತವ್ಯಸನಗಳು, ಷಡೂರ್ಮಿಗಳು, ಅರಿಷಡ್ವರ್ಗಗಳು ಷಡ್ಭ್ರಮೆಗಳು, ಷಡ್ಭಾವವಿಕಾರಂಗಳು, ಪಂಚಕೋಶಗಳು, ಪಂಚ್ಯಕ್ಲೇಶಗಳು, ಅಂಗ ಚತುಷ್ಟಯಂಗಳು, ಗುಣತ್ರಯ, ಅಹಂಕಾರ ತ್ರಯಂಗಳು, ಇಹಲೋಕದ ತಾಪತ್ರಯ ಗಳು, ಸ್ವರ್ಗಲೋಕದ ತಾಪತ್ರಯಂಗಳು, ತನುತ್ರಯಂಗಳು, ಜೀವತ್ರಯಂಗಳು, ಆತ್ಮತ್ರಯಂಗಳು, ಅವಸ್ಥಾತ್ರಯಂಗಳು, ತ್ರಿದೋಷಂಗಳು, ಸದ್ಭಾವತ್ರಯಂಗಳು, ದುರ್ಭಾವತ್ರಯಂಗಳು, ಮನತ್ರಯಂಗಳು, ತ್ರಿಕರಣಂಗಳು, ಪಂಚಾಗ್ನಿಗಳು ಹೀಗೆ ಕರಣಹಸಿಗೆಯಲ್ಲಿ ಹೇಳಿದ ತತ್ವಂಗಳು ಅವುಗಳ ಪರಿಜ್ಞಾನ ಎಲ್ಲರಿಗೂಬೇಕು. ಇವುಗಳ ಸ್ಪಷ್ಟ ಕಲ್ಪನೆ ಇದ್ದರೆ ಸಾಧಕ ತನ್ನ ಸಾಧನೆಯಲ್ಲಿ ಯಶಸ್ವಿಯಾಗುವನು.

ಈ ಎಲ್ಲ ವಿವರಗಳು ಶ್ರೀ ಫ. ಗು. ಹಳಕಟ್ಟಿಯವರು ಮೂರು ಭಾಗವಾಗಿ ವಿಂಗಡಿಸಿ ಸಂದರ್ಭಾನುಸಾರ ವಿವರಿಸಿರುವರು. ಅವು ಕ್ರಮವಾಗಿ ೧ ದೇಹದ ಜ್ಞಾನ ೨ ಮನುಷ್ಯನ ದುರ್ವ್ಯಾಪಾರಗಳ ವಿವರಣೆ ೩ ಕರಣಹಸಿಗೆ ಮತ್ತು ಲಿಂಗಾಂಗ ಸಾಮರಸ್ಯ.

ಈ ವಿವರಗಳನ್ನು ಅವಲೋಕಿಸಿದರೆ ಪಿಂಡಮಯ ಶರೀರ ಶಿವಜ್ಞಾನಭರಿತವಾಗ ಬೇಕು. ಗುರುಕಾರುಣ್ಯ ಪಡೆದು ಮಾಂಸ ಪಿಂಡ ಮಂತ್ರ ಪಿಂಡವಾಗಿ ಲಿಂಗಾರ್ಪಿತವಾಗ ಬೇಕು. ಅರ್ಚನ, ಅರ್ಪಣ ತತ್ವಕ್ಕಾಗಿ ಮಿಶ್ರಾರ್ಪಣ ವಿಧಿ, ಅನುಭಾವಕ್ಕೆ ಮಂತ್ರ ಗೋಪ್ಯಗಳೆಂದು ಸ್ಥಲ ನಿರ್ಣಯ ಮಾಡಬಹುದು.

**ಶತಕ ಸಾಹಿತ್ಯ:**

ಶತಕದ ಗಾತ್ರ ಚಿಕ್ಕದಾದರೂ ಹೆಸರಂತೂ ತುಂಬ ದೊಡ್ಡದಾದುದು. ಕನ್ನಡ ಸಾಹಿತ್ಯದಲ್ಲಿ ಶತಕ ಸಾಹಿತ್ಯಕ್ಕೆ ಅಮೂಲ್ಯ ಸ್ಥಾನವಿದೆ. ಕ್ರಿ. ಶ. ೧೦೭೦ ರಲ್ಲಿ ರಚಿತ ವಾದ ನಾಗವರ್ಮನ ಚಂದ್ರ ಚೂಡಾಮಣಿ ಶತಕದಿಂದ ಪ್ರಾರಂಭಗೊಂಡು ಇಂದಿನವರೆಗೆ ೪೦೦ ಕ್ಕಿಂತ ಅಧಿಕ ಶತಕಗಳು ರಚನೆಯಾಗಿರುವದಕ್ಕೆ ಅದರ ಜನಪ್ರಿಯತೆಯ ಸಾಕ್ಷಿ. ಅದರಲ್ಲೂ ವೀರಶೈವ ಕವಿಗಳು ಶತಕ ಸಾಹಿತ್ಯಕ್ಕೆ ತುಂಬ ಮಹತ್ವದ ಸ್ಥಾನ ಕೊಟ್ಟರು. ಹರಿಹರ, ಮಗ್ಗೆಯ ಮಾಯಿದೇವ, ಕರಸ್ಥಲದ ವೀರಣ್ಣೊಡೆಯ, ಸಿದ್ಧನಂಜೇಶ, ಗುರುಬಸವ, ವಿರಕ್ತತೋಂಟದಾರ್ಯರಂಥ ಪ್ರಮುಖ ಕವಿಗಳು ಶತಕ ಸಾಹಿತ್ಯದಲ್ಲಿ ಮಹತ್ವದ ಕೃತಿ ರಚಿಸಿದುದುಂಟು ಕೊಂಡುಗುಳಿ ಕೇಶಿರಾಜ ಮೊದಲ ಶತಕಕಾರನೆಂಬ ಪ್ರತೀತಿ ಇದೆ.

ಹರಿಹರನ ಪಂಪಾಶತಕ–ರಕ್ಷಾಶತಕಗಳು ಶಿವಭಕ್ತಿ, ಅಂತರಂಗದ ತೀವ್ರತೆ ಹರಸೇವೆಯ ನಿಷ್ಠೆಯನ್ನು ಮೆರೆದ ಕೃತಿಗಳು. 'ಮೃಡನಿರ್ದಂತಿರೆ ಕೋಟಿ ಕೂಟ ಕುರುಡು

ದೈವಕ್ಕಾಸೆಯಂ ಮಾಡದಿರ್ ಕಿಡದಿರ್ ಮಾನವಾ, ನಡೆ, ನೋಡು ಅರ್ಚಿಸು, ಕೀರ್ತಿಸು, ಆದರಿಸು, ಆನಂದದಿಂ ಬೇಡು ಬಲ್ಪಿಡಿ ನಂಬು ವಿರೂಪಾಕ್ಷನಂ' "ಎಸುಮಂ ಪಾರದೆ ಅರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನ" ಎಂದುಸುರುವಲ್ಲಿ ಆತನ ಶಿವಭಕ್ತಿ ಮಡುಗಟ್ಟಿ ನಿಂತಂತೆ ಭಾಸವಾಗುತ್ತದೆ.

ರಕ್ಷಾಶತಕ ಆತ್ಮಪರಮಾತ್ಮನಿಗಾಗಿ ಹಾರೈಸುವ ಭವಸಾಗರ ದಾಟಲು ಭಕ್ತಿಮಾರ್ಗ ವನ್ನು ತೋರಿಸಿಕೊಡುವ ಕೃತಿಯೆನಿಸಿದೆ. ಮಗ್ಗೆಯ ಮಾಯಿದೇವ ಐಪುರಿ ಸೋಮನಾಥನ ಭಕ್ತ. ಭಕ್ತಿ ಜ್ಞಾನ ವೈರಾಗ್ಯಗಳ ತ್ರಿವೇಣಿ ಸಂಗಮ ಈತನ ಕೃತಿಗಳು. ಷಟ್ಸ್ಥಲ ಬ್ರಹ್ಮವಾದಿಯಾದ ಮಗ್ಗೆಯ ಮಾಯಿದೇವ ವೀರಶೈವ ಸಿದ್ಧಾಂತಕ್ಕೆ ಅನುಗುಣವಾಗಿ ಶಿವಾಧವ, ಶಿವಾವಲ್ಲಭ, ಮಹದೈಪುರೀಶ್ವರ ಶತಕ ರಚಿಸಿರುವನು.

ಪುಲಿಗೆರೆಯ ಸೋಮ 'ಶ್ರೀ ಚೆನ್ನಸೋಮೇಶ್ವರ' ಎಂಬ ಅಂಕಿತದಲ್ಲಿ ಚಂದ್ರಕವಿ 'ಗುರುಮೂರ್ತಿ ಶಂಕರಾ' ಅಂಕಿತದಲ್ಲಿ ಗುಮ್ಮಟಾರ್ಯ 'ಅರ್ದೇಂದುಮೌಳೀ, ಅತ್ಯಂತ ಶುದ್ಧಾಂಕಿತದಲ್ಲಿ ಶತಕಗಳನ್ನು ವೀರಶೈವ ಸಿದ್ಧಾಂತಕ್ಕೆ ಅನುರೂಪವಾಗಿ ರಚಿಸುದುದುಂಟು. ೧೬ನೆಯ ಶತಮಾನದಲ್ಲಿ ವಿರಕ್ತ ತೋಂಟದಾರ್ಯ ಶತಕಸಾಹಿತ್ಯದಲ್ಲಿ ಗಮನಿಸಬೇಕಾದ ಕವಿ. ಸರ್ವಮಂಗಳ ಶತಕ, ಸಿದ್ಧಲಿಂಗೇಶ್ವರ ಶತಕಗಳು ಈತನವು, ಸಿದ್ಧಲಿಂಗ ಶತಕ ಅನುಭಾವಕಾವ್ಯ. ಈತನೇ ರಚಿಸಿದ ನಿರಂಜನ ಲಿಂಗಶತಕ, ನಿರಂಜನ ಶತಕಗಳು ವೀರಶೈವ ತತ್ವ ಹಾಗೂ ನೀತಿಯನ್ನು ಸೂಚಿಸಿವೆ.

ಹೀಗೆ ಸುಮಾರು ೧೯ನೆಯ ಶತಮಾನದ ವರೆಗೆ ಅನೇಕ ಕನ್ನಡ ಕವಿಗಳು ಶತಕ ಸಾಹಿತ್ಯದ ಮೂಲಕ ವೀರಶೈವ ಸಿದ್ಧಾಂತವನ್ನು ಪ್ರಚಾರಪಡಿಸುವ ಕಾರ್ಯ ಕೈಕೊಂಡರು, ಮಹತ್ತರ ಸೇವೆ ಸಲ್ಲಿಸಿರುವರು.

**ತ್ರಿಪದಿ ಸಾಹಿತ್ಯ:**

ಕನ್ನಡ ಸಾಹಿತ್ಯದ ಹೊಕ್ಕುಳ ಹುರಿ ಎನಿಸಿದುದು ತ್ರಿಪದಿ ಸಾಹಿತ್ಯ ಕ್ರಿ.ಶ.೭ ನೆಯ ಶತಮಾನದ ಬಾದಾಮಿ ಶಾಸನ ಪ್ರಥಮ ಬಾರಿಗೆ ತ್ರಿಪದಿಯನ್ನು ಪರಿಚಯಿಸಿಕೊಟ್ಟಿದೆ. ಅಲ್ಲಿಂದ ಮುಂದೆ ಅನೇಕ ವೀರಶೈವ ಕವಿಗಳ ಅನುಭವ ಸಾಹಿತ್ಯಕ್ಕೆ ತ್ರಿಪದಿ ಅತ್ಯುತ್ತಮ ಮಟ್ಟವೆನಿಸಿತು. ಮಹಾದೇವಿಯಕ್ಕನ ಯೋಗಾಂಗ ತ್ರಿವಿಧಿ ಈ ಮಾಲಿಕೆಯಲ್ಲಿ ಗಮನಿಸ ಬೇಕಾದ ಕೃತಿ. ಆಧ್ಯಾತ್ಮಿಕ ರಸಘಟ್ಟಿಯೋಪಾದಿಯಲ್ಲಿ ಉಕ್ಕಿಹರಿದ ಈ ಅನುಭವಗೀತೆ ಗಳು ಅವಳ ಹೃದಯದಾಳದ ಪರಿಪಾಕದಂತಿವೆ.

ಅಷ್ಟದಳಕಮಲದಾ ಬಟ್ಟಬಯಲೊಳಗೊಂದು
ಮುಟ್ಟಬಾರದ ಘನವಿಹುದು ಮನದೊಳಗೆ
ದೃಷ್ಟಿಯಿಟ್ಟವನೆ ಕಡುಜಾಣ!! ದಂತಹ ಸುಂದರ ಪದ್ಯಗಳು ಅವಳ ಅನುಭವ ಮಹತಿಗೆ ಸಾಕ್ಷಿಯೆನಿಸಿವೆ.

ನಿಜಗುಣ ಶಿವಯೋಗಿಗಳು ರಚಿಸಿದ ಕೈವಲ್ಯಪದ್ಧತಿ, ಪರಮಾನುಭವಬೋಧೆ, ಪರಮಾರ್ಥಗೀತೆ, ವಿವೇಕಚಿಂತಾಮಣಿಗಳು ಅನುಭಾವ ಸಾಹಿತ್ಯಕ್ಕೆ ನೀಡಿದ ಚಿರಂತನ ಕೊಡುಗೆಗಳು. ಅವರೇ ರಚಿಸಿದ ಅನುಭಾವಸಾರ ನಿಜವಾಗಿಯೇ ವೀರಶೈವ ಸಿದ್ಧಾಂತದ ಅನುಭವಸಾರವೇ. ಕವಿ ಸರ್ವಜ್ಞ ತ್ರಿಪದಿಯ ಮೂಲಕ ವೀರಶೈವ ಸಾಹಿತ್ಯದ ಜೊತೆಗೆ ವಿಶ್ವಸಾಹಿತ್ಯವನ್ನು ಬೆಳಗಿದ ಕವಿವರ ಚೆನ್ನಬಸವ ಶಿವಯೋಗಿಗಳ ಆಚರಣೆಯ ತ್ರಿಪದಿ, ವೀರಶೈವ ಮತದ ಶ್ರೇಷ್ಠತೆಯನ್ನು ಸಾರಿದ ಕೃತಿ. ತ್ರಿಪದಿ ಸಾಹಿತ್ಯದಲ್ಲಿ ಮೈಲಾರದ ಬಸವಲಿಂಗ ಶರಣರ ಮಹತ್ವದ ಕಾವ್ಯ ಬಂಧ, 'ಗುರುಕರುಣ ತ್ರಿವಿಧಿ (೧೮೦೦) ವೀರಶೈವ ಧರ್ಮತತ್ವಗಳ ಮೇರುಕೃತಿ. ಲಿಂಗಾಂಗ ಸಾಮರಸ್ಯ ಸಾಧನೆಗೆ ಅಷ್ಟಾವರಣ ಪಂಚಾಚಾರಗಳಿಂದೊಡಗೂಡಿದ ಷಟ್ಸ್ಥಲಾಚರಣೆಯ ಪ್ರಾಮುಖ್ಯತೆಯನ್ನು ಈ ರೀತಿ ಸಾರುತ್ತದೆ.

ಈ ನಿಟ್ಟಿನಲ್ಲಿ ಜಯದೇವಿತಾಯಿಯವರ ಸಿದ್ಧರಾಮಪುರಾಣ (೧೯೬೫) ಗಮನಿಸ ಬೇಕಾದ ಕೃತಿ.

೧೨ನೆಯ ಶತಮಾನದಲ್ಲಿ ವೀರಶೈವಸಾಹಿತ್ಯದ ವಿಶಿಷ್ಟ ಛಂದೋಬಂಧಗಳಾಗಿ ತ್ರಿಪದಿಗಳು ಮೂಡಿಬಂದವು. ಇವುಗಳಲ್ಲಿ ಸಿದ್ಧರಾಮನ 'ಬಸವಸ್ತೋತ್ರದ ತ್ರಿಪದಿ', ಮಿಶ್ರಸ್ತೋತ್ರದ ತ್ರಿಪದಿ, ಗುರು ಲಿಂಗ ಜಂಗಮ ಪಾದೋದಕ, ಪ್ರಸಾದ ವಿಭೂತಿ, ರುದ್ರಾಕ್ಷಿ, ಲಿಂಗತ್ರಯಗಳು ಪ್ರಸಾದತ್ರಯಗಳು, 'ಭಕ್ತಿ, ಜ್ಞಾನ ಕರ್ಮದವರೆಗೆ ಆಧ್ಯಾತ್ಮ ತತ್ವದ ತ್ರಿವಳಿಕೆಯನ್ನು ಮೂರುಮೂರಾಗಿ ವಿಂಗಡಿಸಿ ವಿವರಿಸಿರುವ ಪದ್ಯ ಧಾಟಿಗೆ ತ್ರಿವಿಧಿ ಎಂದು ಕರೆದಿರಲು ಸಾಕು....ಅವರು ತಮ್ಮ ಉಪದೇಶಾಮೃತಕ್ಕೆ ವಚನ' ಸ್ವರೂಪವನ್ನು ಕೊಟ್ಟಂತೆ, ಆಧ್ಯಾತ್ಮಾದಿ ಬೋಧನೆಗಳ ವಿವರಣೆಗೆ ತ್ರಿವಿಧಿಯೆಂಬ ರೂಪಕೊಟ್ಟರು' ಎಂಬ ವಿದ್ವಾಂಸರ ಉಲ್ಲೇಖ ಮಹತ್ವದ್ದು.

**ಟೀಕಾ ಸಾಹಿತ್ಯ:**

ವಿಮರ್ಶನ ಸಾಹಿತ್ಯವರ್ಗಕ್ಕೆ ಸೇರಿದ ಪ್ರಕಾರಗಳಲ್ಲಿ ಟೀಕಾಸಾಹಿತ್ಯವೂ ಒಂದು. ಸಾಹಿತ್ಯಮತ್ತು ಧರ್ಮಪ್ರಸಾರದ ಸಾಧನವಾದ ವೀರಶೈವ ಟೀಕಾಸಾಹಿತ್ಯವನ್ನು ಅನ್ಯಭಾಷಾ ಸಾಹಿತ್ಯಕ್ಕೆ ಬರೆದ ಕನ್ನಡ ಟೀಕೆ, ಕನ್ನಡ ಭಾಷಾ ಸಾಹಿತ್ಯಕ್ಕೆ ಬರೆದ ಕನ್ನಡ ಟೀಕೆ ಎಂದು ವಿಭಾಗಿಸಬೇಕಾಗುತ್ತದೆ. ವೀರಶೈವಧರ್ಮ ತತ್ವ ಮೌಲ್ಯಗಳ ಪ್ರಸಾರಕ್ಕಾಗಿ ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಟೀಕಾಸಾಹಿತ್ಯವನ್ನು ಬಳಸಿಕೊಂಡರು. ಟೀಕಾಸಾಹಿತ್ಯ ವ್ಯವಸ್ಥಿತವಾಗಿ ನಡೆದುದು ೧೫-೧೬ನೆಯ ಶತಮಾನಗಳಲ್ಲಿ ಹದಿನಾರನೆಯ ಶತಮಾನದ ನೂರೊಂದು, ಏಳುನೂರೊಂದು ವಿರಕ್ತರು, ವಚನಸಾಹಿತ್ಯದ ಸಂಗ್ರಹ, ಸಂಕಲನ, ಸಂಪಾದನೆಯ ಜೊತೆಗೆ ಟೀಕಾಸಾಹಿತ್ಯವನ್ನು ಉಳಿಸಿ ಬೆಳೆಸಿಕೊಂಡು ಬಂದರು.

ನೂರೊಂದು ವಿರಕ್ತರ ಕಾಲದಲ್ಲಿ ಪ್ರಭುದೇವರ ಷಟ್‌ಸ್ಥಲ ಜ್ಞಾನ ಚಾರಿತ್ರ

ವಚನದ ಟೀಕೆ (೧೪೨೫) ಲಿಂಗಲೀಲಾವಿಲಾಸಚಾರಿತ್ರ, ಪ್ರಭುದೇವರ ಮಂತ್ರ ಗೋಪ್ಯ ಟೀಕೆ, (೧೪೩೦), ಮಹಾಲಿಂಗ ದೇವನ ಏಕೋತ್ತರ ಶತಸ್ಥಲಟೀಕೆ (೧೪೩೦) ಷಟ್‌ಸ್ಥಲೋಪದೇಶ (೧೪೪೯–೫೩) ಮುಂತಾದ ಕೃತಿಗಳು ರಚನೆಯಾದವು.

ಏಳುನೂರೊಂದು ವಿರಕ್ತರ ಅಧಿಪತಿ ತೋಂಟದ ಸಿದ್ಧಲಿಂಗ ತನ್ನ ಸಮಸ್ತ ಶಿಷ್ಯ ಬಳಗದೊಂದಿಗೆ ವ್ಯಾಖ್ಯಾನ ರಚನಾ ಕಾರ್ಯ ಕೈಕೊಂಡರು. ಈ ಸಂದರ್ಭದಲ್ಲಿ ಟೀಕೆ ವ್ಯಾಖ್ಯಾನ ಸಾಹಿತ್ಯದ ಬೆಳವಣಿಗೆಗೆ ಬೆಂಬಲವಾಗಿ ನಿಂತವು. ಇವುಗಳ ಜೊತೆಯಲ್ಲಿ ಕನ್ನಡ ಕೃತಿಗಳಿಗೆ ಅಜ್ಞಾನಕವಿಕೃತ ಅಧಿಕಸಂಖ್ಯೆಯ ಟೀಕೆಗಳು ಸಿಗುತ್ತವೆ. ಏಕೋತ್ತರ ಶತಸ್ಥಲ, ಮಂತ್ರಗೋಪ್ಯ ಪಾದೋದಕ ಪ್ರಸಾದ ಲಿಂಗಾರ್ಪಣಕ್ರಮ, ಕರಣಹಸಿಗೆಯ ಬಯಲುನುಡಿ, ಲಿಂಗಸ್ತೋತ್ರ ಷಟ್ಪದಿ, ಬಸವೇಶ್ವರನ ವರ್ಣಕಾವ್ಯದ ನಾಂದ್ಯದ ನುಡಿ, ಪರವಾದಿ ಗಜಾಂಕುಶನ ತಾರಾವಳಿ, ಬಸವಸ್ತೋತ್ರದ ತ್ರಿವಿಧಿ, ಇಮ್ಮಡಿ ಗುರುಸಿದ್ಧನ ಮಿಶ್ರಾರ್ಪಣ, ನಿಜಗುಣಶಿವಯೋಗಿಗಳ ಕೈವಲ್ಯಪದ್ಧತಿ, ಜಕ್ಕಣನ ಏಕೋತ್ತರಶತಸ್ಥಲ, ಕಟ್ಟಿಗೆಸ್ವಾಮಿ ಏಕೋತ್ತರ ಶತಸ್ಥಲಸಾರ ಸಂಪಾದನೆಯ ವಚನದ ಸಾರಾಮೃತಗಳಿಗೂ, ಪರ್ವತಶಿವಯೋಗಿ ಬಸವೇಶ್ವರದೇವರ ವಚನ ಮುಂತಾದ ಕೃತಿಗಳಿಗೆ ಟೀಕೆ ಬರೆದು ವೀರಶೈವ ಸಿದ್ಧಾಂತದ ಮಹತಿಯನ್ನು ಜನಸಾಮಾನ್ಯರಿಗೆ ತಿಳಿಯಪಡಿಸಿರುವರು.

ಮೊದಮೊದಲು ಸಂಸ್ಕೃತಿ ಗ್ರಂಥಗಳಿಗೆ ಕನ್ನಡ ಟೀಕೆ ಬರೆಯುತ್ತಿದ್ದರು, ವೀರಶೈವ ದಾರ್ಶನಿಕ ಹಾಗೂ ಸಾಹಿತ್ಯಿಕ ಕೃತಿಗಳು ಮೊದಲು ಸಂಸ್ಕೃತದಲ್ಲಿದ್ದು ಜನಸಾಮಾನ್ಯರಿಗೆ ಅವು ತಲುಪಬೇಕೆಂಬ ದೃಷ್ಟಿಯಿಂದ ಕನ್ನಡದಲ್ಲಿ ಅವುಗಳಿಗೆ ಟೀಕೆ ಟಿಪ್ಪಣಿ ಬರೆಯತೊಡಗಿದರು. ಪಾಲ್ಕುರಿಕೆ ಸೋಮನಾಥ, ಮಗ್ಗೆಯ ಮಾಯಿದೇವ ಈ ಮಾಲಿಕೆಯಲ್ಲಿ ಮೊದಲಿಗರು. ಕಾಲದಿಂದ ಕಾಲಕ್ಕೆ ವೇದೋಪನಿಷತ್ತುಗಳಿಗೆ ಕನ್ನಡ ಟೀಕೆ, ಶೈವಾಗಮ, ಧರ್ಮಗ್ರಂಥ, ಅಲಂಕಾರ ಮತ್ತು ಕಾವ್ಯ, ವೈದಿಕ ಮತ್ತು ಆಗಮಿಕ ಗ್ರಂಥಗಳಿಗೆ ಕನ್ನಡ ಟೀಕೆಯನ್ನು ಬರೆಯುವದರ ಮೂಲಕ ಸಂಸ್ಕೃತ ಸಾಹಿತ್ಯದ ಶ್ರೀಮಂತಿಕೆ ಕನ್ನಡ ಸಾಹಿತ್ಯಕ್ಕೆ ದೊರಕುವಂತೆ ಮಾಡಿದರು. ಇದರಿಂದ ವೀರಶೈವ ಸಿದ್ಧಾಂತವನ್ನೊಳಗೊಂಡ ಟೀಕಿನ ಸಾಹಿತ್ಯ ಒಂದು ಮಹತ್ವದ ಸಾಹಿತ್ಯ ಪ್ರಕಾರವಾಯಿತು.

**ಬೆಡಗಿನ ವಚನಗಳು :**

ಹೆಸರೇ ಸೂಚಿಸುವಂತೆ ಬೆಡಗು ವೀರಶೈವ ಸಾಹಿತ್ಯಕ್ಕೊಂದು ಬೆಡಗೇ, ವೀರಶೈವ ವಚನಸಾಹಿತ್ಯದಲ್ಲಿಯೇ ಒಂದು ವಿಶಿಷ್ಟವಾದ ಪ್ರಕಾರ. 'ರಹಸ್ಯ ಪೂರ್ಣಬುದ್ಧಿ ಕಸರತ್ತು ಗಳ ಜಾಣ್ಮೆ, ದೇವೀರಪ್ಪ ಬೆಡಗಿನ ಬಗೆಗೆ ಬರೆಯುತ್ತ 'ಶರಣರಿಗೆ ವಚನಗಳು ನೆನಪಿನಲ್ಲಿರ ಬೇಕು. ಆ ತತ್ವಾರ್ಥ ಮನವರಿಕೆಯಾಗಬೇಕಾದರೆ ವಿರುದ್ಧಾರ್ಥಕ ಮಾತುಗಳಲ್ಲಿ ಹೇಳ ಬೇಕೆಂದು ವಚನಕಾರರು ಈ ಬೆಡಗಿನ ರೀತಿಯನ್ನು ಬಳಸಿರಬೇಕು. ಒಡೆದು ನೋಡಿದಾಗ

ವಿಶಿಷ್ಟಾರ್ಥ ಹೊಳೆಯುತ್ತದೆ. ಇಲ್ಲಿ ಪ್ರತಿ ಮಾತಿಗೂ ಸಂಕೇತಿಕ ಅರ್ಥವಿರುತ್ತದೆ' ಎಂದಿರುವರು. ತಿಪ್ಪೇರುದ್ರಸ್ವಾಮಿಯವರು 'ಬೆಡಗಿನ ವಚನಗಳಲ್ಲಿ ಬರುವದು ಶ್ಲೇಷೆಯ ಚಮತ್ಕಾರವಲ್ಲ, ಶ್ಲೇಷೆ ಎಂದರೆ ಒಂದು ಪದಕ್ಕೆ ಎರಡು ಅರ್ಥಗಳು ಅಥವಾ ಹೆಚ್ಚಿನ ಅರ್ಥವನ್ನುಂಟುಮಾಡುವ ಚಮತ್ಕಾರ ಆದರೆ ಬೆಡಗಿನ ವಚನಗಳಲ್ಲಿ ಪದದ ತೋರಿಕೆಯ ಅರ್ಥವೇ ಒಂದಾದರೆ ಅವು ವಚನದಲ್ಲಿ ಪ್ರತಿನಿಧಿಸುವ ಅರ್ಥವೇ ಇನ್ನೊಂದು' ಎಂದಿರುವರು.

ಮೇಲಿನ ಮಹನೀಯರ ಅಭಿಪ್ರಾಯಗಳನ್ನು ಗಮನಿಸಿದರೆ ಶಿವಶರಣರು ತಾತ್ವಿಕ ವಿಚಾರಗಳನ್ನು ಅನುಭಾವವನ್ನೂ ರಹಸ್ಯ ರೀತಿಯಲ್ಲಿ ನಿರೂಪಿಸಲು ಬೆಡಗಿನ ರೀತಿಯನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡುದು ಕಂಡುಬರುತ್ತದೆ.

ಸುಮಾರು ೪೭ ಜನ ವಚನಕಾರರು ಬೆಡಗಿನ ವಚನಗಳನ್ನು ಬರೆದಿರುವದುಂಟು. ಅಲ್ಲಮಪ್ರಭು ಬೆಡಗಿನ ವಚನಕಾರರಲ್ಲಿ ಶ್ರೇಷ್ಠ ವ್ಯಕ್ತಿ. ಹಠಯೋಗ ಪಡೆದು ರಾಜಯೋಗ ದಲ್ಲಿ ನಡೆದು ಶಿವಯೋಗದ ಮಹತಿಯನ್ನು ಸಂಪಾದಿಸಿದ ಶರಣನೀತ. ತಾನು ಬದುಕಿನಲ್ಲಿ ಅಳವಡಿಸಿಕೊಂಡ ಆಧ್ಯಾತ್ಮಿಕ ಅನುಭವವನ್ನು ಬೆಡಗಿನರೂಪದಲ್ಲಿ ತಿಳಿಸಿದ ಕೆಲವು ಶರಣರಲ್ಲಿ ಇವರೊಬ್ಬ.

ರಕ್ಕಸಿಗಿಬ್ಬರು ಮಕ್ಕಳು, ತೊಟ್ಟಿಲಮೇಲೈವರು
ರಕ್ಕಸಿ ಬಾಣತಿಯಾದರೆ ಮಕ್ಕಳಿಗೆನ್ನೇಂತೋ?
ತೊಟ್ಟಿಲ ತೂಗುವೆ, ಜೋಗುಳ ಹಾಡುವೆ
ರಕ್ಕಸಿ ಬಾಣತಿ ತೊಟ್ಟಿಲ ನುಂಗಿತ್ತು
ಇದೇನು ಹೇಳು ಗುಹೇಶ್ವರಾ||

ಈ ವಚನದ ಬೆಡಗನ್ನು ಬಿಡಿಸಿದರೆ ಅವಿದ್ಯೆಯೆಂಬುದು ಇಲ್ಲಿಯ ಮಾಯೆ. ಇವಳು ರಕ್ಕಸಿ, ಇವಳು ತನ್ನ ಸಂಕಲ್ಪ ಬಲದಿಂದ ಜೀವ ಮತ್ತು ಪ್ರಾಣ ಎಂಬ ಎರಡು ಮಕ್ಕಳನ್ನು ಪಡೆದು ಬಾಣಂತಿಯಾಗಿರುವಳು. ಈ ಮೊದಲೇ ಅವಳಿಂದ ಹುಟ್ಟಿದ ಪಂಚಭೂತ ಗಳೆಂಬ ಐವರು ಮಕ್ಕಳು ಆದೇ ತೊಟ್ಟಿಲಲ್ಲಿದ್ದಾರೆ. ಹೀಗಾಗಿ ಏಳುಮಕ್ಕಳ ತಾಯಿಯಾದ ಆಕೆಗೆ ತನ್ನ ಮಕ್ಕಳನ್ನೇ ನುಂಗುವಾಸೆ, ಆದರೆ ಇಲ್ಲಿ ಜೀವಾತ್ಮ ತೊಟ್ಟಿಲತೂಗಿ ಜೋಗುಳ ಹಾಡಿ ಸಂತೈಸುತ್ತಿದ್ದಾನೆ. ಆ ಮಾಯಾ ರಕ್ಕಸಿ ತೊಟ್ಟಿಲ ಸಹಿತ ಆ ಏಳುಮಕ್ಕಳನ್ನು ನುಂಗುವದೇ ದೊಡ್ಡ ಚೋದ್ಯ. ಈ ವಿವರಣೆಯಿಂದ ಇಲ್ಲಿ ದೇಹವೇ ನಾನೆಂಬ ಮಾಯೆ, ಇದನ್ನು ನುಂಗಿ ನೀರು ಕುಡಿಯುವ ರಾಕ್ಷಸಿ ಅದರಿಂದ ಮಾಯೆಯನ್ನು ತೊರೆದು ತಾನು ಯಾರೆಂದು ಅರಿತು ಆಚರಿಸಬಲ್ಲವನೇ ಪರಮಾತ್ಮನಾಗುತ್ತಾನೆ ಎಂಬುದು ಈ ಬೆಡಗಿನ ಮರ್ಮಾರ್ಥ. ಇದೇ ರೀತಿಯಲ್ಲಿ ಅರಿವಿನಮಾರಿತಂದೆ, ಶರಣ ಆದಯ್ಯ, ಮೋಳಿಗೆ ಮಾರಯ್ಯ ಕದಿರೆರೆಮ್ಮವ್ವೆ ಮುಂತಾದವರ ಬೆಡಗಿನ ವಚನಗಳು ತುಂಬ ಅರ್ಥ

ಗರ್ಭಿತವಾಗಿ ಮೂಡಿಬಂದಿವೆ. ವಚನಕಾರರು ತತ್ತ್ವ ಸಿದ್ಧಾಂತಗಳ ವಿಷಯವನ್ನು ಬೆಡಗಿನ ರೂಪದಲ್ಲಿ ನಿರೂಪಿಸಿದುದು ಗಮನಾರ್ಹ, ವೀರಶೈವ ಧರ್ಮ ಸಿದ್ಧಾಂತಗಳು ಜನಸಾಮಾನ್ಯ ಮಟ್ಟಕ್ಕೆ ಮುಟ್ಟಬೇಕಾದರೆ ಅವು ಸತ್ವಪೂರ್ಣ, ಅರ್ಥಪೂರ್ಣವಾಗಿರ ಬೇಕಾದಂತೆ ಬೆಡಗಿನ ವಚನಗಳು ಈ ಮಾಲಿಕೆಯ ಮಹತ್ವದ ಸಾಹಿತ್ಯ ಪ್ರಕಾರವೆನಿಸಿದೆ.

**ಗದ್ಯ ಸಾಹಿತ್ಯ:**

ಪ್ರಾಚೀನ ಕಾಲದಿಂದ "ಗದ್ಯಂ ಹೃದ್ಯಂ" ಎನಿಸಿಕೊಂಡು ಬೆಳೆದು ಬಂದ ಸಾಹಿತ್ಯ ಪ್ರಕಾರವಿದು ಗದ್ಯ ಪದ್ಯಕ್ಕಿಂತ ಅರ್ಥಕ್ಕೆ ಸರಳ. ವೀರಶೈವ ಕವಿಗಳು ಭಾವತೀವ್ರತೆಗೆ ಗದ್ಯವೂ ಪ್ರಮುಖ ಮಾಧ್ಯಮವಾಯಿತು. ಗೊಳೂರು ಸಿದ್ಧವೀರಣಾಚಾರ್ಯರ ಶಿಷ್ಯ ತೋಂಟದಾರ್ಯ ತನ್ನ ಪಾಲ್ಕುರಿಕೆ ಸೋಮೇಶ್ವರ ಪುರಾಣದಲ್ಲಿ, ಪಾಲ್ಕುರಿಕೆ ಸೋಮೇಶ್ವರ ಬಸವಣ್ಣನನ್ನು ೩ ಪದ್ಯದಲ್ಲಿ ಸ್ತುತಿಸಿದ್ದಲ್ಲದೆ ೧ ಅಕ್ಷರಾಂಶಗದ್ಯ ೨ ಅಕ್ಷರ ಮಾಲಿಕಾಗದ್ಯ ೩ ಉದಾಹರಣಗದ್ಯ ೪ ನಮಸ್ಕಾರಗದ್ಯ ೫ ಉತ್ತರಗದ್ಯ ಈ ಐದು ರೀತಿಯ ಗದ್ಯ ಪ್ರಕಾರದಲ್ಲಿ ಸ್ತುತಿಸಿದನೆಂದಿದೆ. ಡಾ. ಎಲ್. ಬಸವರಾಜು ಅವರು ಈ ಗದ್ಯದ ವಿವರಣೆಯ ಬಗೆಗೆ ಆಳವಾದ ವಿವೇಚನೆ ಮಾಡಿರುವರು ಸಾಮಾನ್ಯವಾಗಿ ಈ ಗದ್ಯ ಸಾಹಿತ್ಯವನ್ನು ಸರಳಗದ್ಯ ಸಾಹಿತ್ಯಕ ಗದ್ಯವೆಂದು ವಿಂಗಡಿಸಬಹುದಾಗಿದೆ.

ವೀರಶೈವ ಗದ್ಯಸಾಹಿತ್ಯ ಮೊದಲು ಕಂಡಬರುವದು ವಚನ ಸಾಹಿತ್ಯದಲ್ಲಿ. ಹರಿಹರನ ರಗಳೆಗಳು, ಶೂನ್ಯಸಂಪಾದನೆಗಳು ವಚನಗಳ ಟೀಕೆಯಲ್ಲಿ ಗದ್ಯ ತಲೆದೋರಿದೆ. ಈ ಗದ್ಯ ಇಂದು ಕಾವ್ಯಮಯವಾಗಿ ಬೆಳೆದಿದೆ.

ಗೇಯತೆಗಿಂತ ವಾಚ್ಯತೆ ಗದ್ಯದ ಮುಖ್ಯಗುಣ. ವೀರಶೈವ ಸಾಹಿತ್ಯದಲ್ಲಿ ಗದ್ಯದ ಬಹುಪಾಲು ವಚನವಾಙ್ಮಯವೇ ಸಾಹಿತ್ಯದ ವಿಶಿಷ್ಟ ರೂಪವೆಂಬಂತೆ ಬೆಳೆದು ನಿಂತಿದೆ. ಪ್ರಭುದೇವರ ಬೆಡಗು, ಬಸವಣ್ಣನ ನಾವಿನ್ಯತೆ ಅಕ್ಕನ ಭಾವತೀವ್ರತೆ, ಇನ್ನಿತರ ಶಿವಶರಣರ ಗುಣಗಳನ್ನು ಗದ್ಯ ತುಂಬ ಚೆನ್ನಾಗಿ ವ್ಯಕ್ತಪಡಿಸಿದೆ.

ವಚನಕಾರರು ವಚನ, ಹಾಡು, ಗೀತೆಗಳನ್ನು ಬರೆದಿರುವರು. ಇವರೇ ಬರೆದ ಇನ್ನೊಂದು ಪ್ರಕಾರ ಸ್ವರ ವಚನವೆಂದು ಹೆಸರಾಗಿದೆ. ವಚನಗಳಲ್ಲಿಯ ಗದ್ಯವನ್ನು ವೈಚಾರಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಬೇಕಾಗುತ್ತದೆ. ಸೃಷ್ಟಿಯ ವಚನಗಳು ಶರಣರ ತಾರ್ಕಿಕ ನಿಲುವನ್ನು, ಬೆಡಗಿನ ವಚನಗಳು ಬೌದ್ಧಿಕ ಮಟ್ಟವನ್ನೂ, ಕಾಲ ಜ್ಞಾನ ವಚನಗಳಲ್ಲಿ ಭವಿಷ್ಯತ್ತಿನ ಮರ್ಮವನ್ನು ಈ ವಚನಗಳು ತಿಳಿಸಿವೆ.

'ಹುಲ್ಲು ಕಿಚ್ಚುವ, ಕಲ್ಲ ಬೀಜವ, ನೀರನೆಳಲ, ಗಾಳಿಯ ನಾರುವ ಅಗ್ನಿಯ ಹಗಿನುವ, ಬಿಸಲಿನ ರುಚಿಯು, ತನ್ನ ಬೆಳಗುವನಾರು ಬಲ್ಲರು ಗುಹೇಶ್ವರ' ನಿಮ್ಮ ಶರಣರಲ್ಲದೇ ಈ ವಚನ ಗಮನಿಸಿದರೆ ಗದ್ಯವೇ ಮಡುಗಟ್ಟಿ ನಿಂತಂತಿದೆ. ಮಹಾದೇವಿಯಕ್ಕನ ವಚನಗಳಲ್ಲಿ ಗದ್ಯ ಕಡಿಮೆ ಜೇಡರ ದಾಸಿಮಯ್ಯನ ವಚನಗಳು ದೇಸಿಯ ಬೆಡಗಿನಿಂದ ಆಳವಾದ ಅರ್ಥದಿಂದ ಮೊನಚಾದ ನುಡಿಗಳಿಂದ ಪರಿಣಾಮಕಾರಿ ಎನಿಸಿವೆ.

ಶೂನ್ಯಸಂಪಾದನೆಗಳಲ್ಲಿ ಗದ್ಯ ಕೊಂಡಿಯಂತೆ ಕೆಲಸ ನಿರ್ವಹಿಸಿದೆ. ಶಿವಗಣ ಪ್ರಸಾದಿ ಮಹಾದೇವಯ್ಯ ಶೂನ್ಯಸಂಪಾದನೆಯ ಪ್ರಾರಂಭದಲ್ಲಿಯೆ 'ಪ್ರಭುದೇವರ ಗದ್ಯ' ಶೀರ್ಷಿಕೆಯಲ್ಲಿ ಪ್ರಭುದೇವರ ಚರಿತ್ರೆ ರಚಿಸಿದುದುಂಟು.

"ಇಂತು ಅನಿಮಿಷ ದೇವರು ನಿಜವನೆಯ್ದಲು, ಅನುತಾಪಿಸುತ್ತಿರ್ದ ಪ್ರಭುದೇವರು ತಮ್ಮ ತಾವು ಸಂತೈಸಿಕೊಂಡು ತಿಳಿದು ನೋಡಿ ಆ ಗುರುವಿನ ಚೈತನ್ಯವು ಆ ಲಿಂಗದಲ್ಲಿ ಅಡಗಿತ್ತು. ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು. ಅದು ಕಾರಣ ಈ ಶ್ರೀಗುರುವೆನ್ನ ಕರ ಸ್ಥಲದಲ್ಲಿ ತನುಸ್ಥಲದಲ್ಲಿ ಸಂಪೂರ್ಣವಾಗಿ ನೆಲಗೊಂಡನಲ್ಲದೆ ಅನ್ಯಭಾವ ವಿಷಯದಿಂದಿ ಳಿದುದಲ್ಲವೆಂದು ನಿಶ್ಚಯಿಸಿಕೊಂಡು ಪ್ರಸ್ತಾವದ ವಚನ."

ಶೂನ್ಯಸಂಪಾದನೆಗಳಲ್ಲಿ ಬರುವ ಗದ್ಯ ಸೂಕ್ತ ಪದಗಳನ್ನೊಳಗೊಂಡು ಭಾವಪುಷ್ಪ ಗೊಳ್ಳುತ್ತ, ವಿಭಿನ್ನ ಜಾತಿಯ ಪದ್ಯಗಳ ಮಧ್ಯದಲ್ಲಿ ಕೊಂಡಿಯಂತೆ ಗದ್ಯ ಬಳಕೆಯಾಗಿ ವ್ಯಾಖ್ಯಾನಕಾರರಿಗೂ ಗದ್ಯ ತುಂಬ ಚೆನ್ನಾಗಿ ಅನುಕೂಲವಾಗಿದೆ. ಮುಂದೆ ಬಂದಂತೆ ಶಾಂತಲಿಂಗ-ದೇಸಿಕನ ಭೈರವೇಶ್ವರ ಕಥಾಮಣಿಸೂತ್ರ ರತ್ನಕರ ವಿವೇಕ ಚಿಂತಾಮಣಿಯೂ ಹದವರಿತ ಗದ್ಯದಿಂದ ಕೂಡಿಕೊಂಡಿವೆ ಎಂಬುದನ್ನು ಮರೆಯಲಾಗದು

ಹೀಗೆ ಗದ್ಯ ಶಿವಭಕ್ತರ ಭಾವುಕರ ಉದ್ದೇಶ ಸಾಧನೆಗಾಗಿ ಬರೆದುದರಿಂದ ಇದೊಂದು ಮಹತ್ವದ ಸಾಹಿತ್ಯ ಪ್ರಕಾರವೆನ್ನಬಹುದು. ಹೀಗೆ ಪ್ರಮುಖವಾದ ವಚನ ಸಾಹಿತ್ಯದಲ್ಲಿಯ ವೀರಶೈವ ಸಿದ್ಧಾಂತ ಇನ್ನಿತರ ಕೃತಿಗಳಲ್ಲಿ ಮಡುಗಟ್ಟಿ ನಿಂತುದು ಈ ಲೇಖನದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

**ಆಧಾರಿತ ಗ್ರಂಥಗಳು:**

೧. ಗೌರವ: ಪ್ರೊ. ಎಸ್. ಎಸ್. ಭೂಸನೂರಮಠ ಅಭಿನಂದನ ಗ್ರಂಥ

೨. ವೀರಶೈವ ವೈಚಾರಿಕ ವಿವೇಚನೆ: ಡಾ. ಎಚ್. ತಿಪ್ಪೇರುದ್ರಸ್ವಾಮಿ

೩. ಶತಕತ್ರಯ ಪ್ರವಚನ: ಡಾ. ಜ. ಚ. ನಿ.

೪. ಶೂನ್ಯಸಂಪಾದನೆ ಪರಾಮರ್ಶೆ: ಪ್ರೊ. ಸಂ. ಶಿ. ಭೂಸನೂರಮಠ ನಿಂ. ಶಿ. ಕಾ.

## ಶ್ರೀ ನಿಜಗುಣರ ಕೃತಿಗಳು:

# ವೀರಶೈವ ತಾತ್ತ್ವಿಕ ಹಿನ್ನೆಲೆಯಲ್ಲಿ ಒಂದು ಅಧ್ಯಯನ

—ಯೋಗೀಶ ಯಡ್ರಾವಿ

**ಪ್ರಾಸ್ತಾವಿಕತೆ:**

ಕನ್ನಡ ಸಾಹಿತ್ಯ ಪ್ರಪಂಚವನ್ನು, ಸುಂದರಗೊಳಿಸಿದ, ಸಮೃದ್ಧಗೊಳಿಸಿದ, ಉಜ್ವಲಗೊಳಿಸಿದ ಆರ್ಷಕವಿ ಶ್ರೀ ನಿಜಗುಣ ಶಿವಯೋಗಿಗಳು. ಅವರು ಕನ್ನಡ ಸಾರಸ್ವತ ಲೋಕಕ್ಕೆ "ಕೈವಲ್ಯ ಪದ್ಧತಿ"ಯ ಮೂಲಕ ಮೊದಲ ಹಾಡುಗಬ್ಬವನ್ನೂ, "ವಿವೇಕ ಚಿಂತಾಮಣಿ"ಯ ಮೂಲಕ ಮೊದಲ ವಸ್ತುಕೋಶವನ್ನೂ, "ಪಾರಮಾರ್ಥ ಪ್ರಕಾಶಿಕೆ"ಯ ಮೂಲಕ ಮೊದಲ ಯೋಗ ಗ್ರಂಥವನ್ನೂ, "ಪರಮಾನುಭವ ಬೋಧೆ", "ಅನುಭವ ಸಾರ", "ಪರಮಾರ್ಥ ಗೀತೆ"ಗಳ ಮೂಲಕ ಮೊದಲ ವೇದಾಂತ ಬೋಧಕ ಗ್ರಂಥಗಳನ್ನೂ ನೀಡಿದ ಪರಮ ಶ್ರೇಯಸ್ಸಿಗೆ ಬಾಧ್ಯಸ್ಥರು ಅವರ "ಅರವತ್ತುಮೂರು ಪುರಾತನರ ತ್ರಿವಿಧಿ" ಸಾಹಿತ್ಯದ ಆತ್ಮವೆನಿಸಿದ ಸಂಕ್ಷೇಪತೆಗೆ ಒಂದು ಉತ್ತಮ ಉದಾಹರಣೆ. ಇದಲ್ಲದೆ, ಅವರೇ ರಚಿಸಿದವೆಂದು ಹೇಳಲಾಗುತ್ತಿರುವ "ಸಿದ್ಧರಿ" ಅಥವಾ "ಸಿದ್ಧಾರಿ", "ದರ್ಶನ ಸಾರಂ", "ಆತ್ಮತರ್ಕ ಚಿಂತಾಮಣಿಃ" (ಎರಡೂ ಸಂಸ್ಕೃತದಲ್ಲಿ), "ಸ್ವರೂಪ ಸಿದ್ಧಿ ಟೀಕಾ" ಮತ್ತು "ತಾರಾವಲೀ" (ಇವೆರಡೂ ಮುದ್ರಣಗೊಂಡಿವೆ) ಎಂಬ ಇನ್ನೈದು ಗ್ರಂಥಗಳುಂಟು. ಈ ಐದರಲ್ಲಿ ಮೊದಲ ಮೂರು ಇನ್ನೂವರೆಗೆ ಸಿಕ್ಕಿಲ್ಲ. "ಸ್ವರೂಪಸಿದ್ಧಿ ಟೀಕಾ" ಎಂಬುದು ಕ್ರಿ. ಶ. ೧೪೫೦ರ ಸುಮಾರಿಗೆ ಜೀವಿಸಿರಬಹುದಾದ ಪರಂಜ್ಯೋತಿಯತಿಗಳೆಂಬ ಸ್ಮಾರ್ತ ಕವಿಗಳಿಂದ ವಿರಚಿತ "ಅನುಭವ ಮುಕುರಂ" (ತ್ರಿಪದಿ) ಎಂಬ ಗ್ರಂಥದ ಕೊನೆಯ ಹಾಗೂ ಮೂರನೆಯ "ಅನುಭವ ಮುಕುರಂ" (ಇನ್ನೆರಡು ಭಾಗಗಳು– ಸಾಧನ ವಿವೇಕ ಮತ್ತು ಅನುಭವ ವಿವೇಕ) ಎಂಬ ಭಾಗಕ್ಕೆ ಶ್ರೀ ನಿಜಗುಣ ಶಿವಯೋಗಿಗಳು ರಚಿಸಿದ ಟೀಕಾಗ್ರಂಥ. "ತಾರಾವಲೀ" ಒಂದು ಅಧ್ಯಾತ್ಮ ಗ್ರಂಥ.

ಶ್ರೀ ನಿಜಗುಣ ಶಿವಯೋಗಿಗಳು ರಾಜ ಮನೆತನದಲ್ಲಿ ಜನಿಸಿ, ಕೆಲಕಾಲ ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದು, ರಾಜಭೋಗ–ರಾಜವೈಭವ–ದಾಂಪತ್ಯ ಜೀವನವನ್ನು ನಡೆಸಿದವರು. ಅವರು ದಾರ್ಶನಿಕ ಕವಿಗಳೆಂದೂ, ಸೀಮಾಪುರುಷರೆಂದೂ, ಕನ್ನಡ ಸಾಹಿತ್ಯಾಕಾಶದಲ್ಲಿ ಮಿನುಗುವ ಧ್ರುವತಾರೆಯೆಂದೂ ಹೆಸರುವಾಸಿಯಾದವರು. ಅವರು ತಮ್ಮ ತುಂಬು ಜೀವನವನ್ನು ಬಾಳಿಬೆಳಗಿದ ಕಾಲ ಹದಿನೈದನೆಯ ಶತಮಾನ. ರಸಋಷಿಗಳಾದ ಅವರ ಅಮರ ಕೃತಿಗಳಲ್ಲಿ ಸಾಹಿತ್ಯ ಗಂಗೆ ರಾಗರಸ ತರಂಗಿಣಿಯಾಗಿ ಗಂಭೀರ ಪ್ರವಾಹ

ರೂಪದಿಂದ ಹರಿದಿದೆ. ಸಾಹಿತ್ಯದಲ್ಲಿ ಆಧ್ಯಾತ್ಮ ಬೆರಿಸಿ, ಸಂಗೀತ ಜೋಡಿಸಿ, ಸಮಸ್ತ ಕನ್ನಡ ಕುಲಕೋಟಿಗೆ ಹಾಲು–ಜೇನಿನ ಸವಿಯನ್ನು ಉಣಬಡಿಸಿದ್ದಾರೆ. ನಿಜಕ್ಕೂ ಅವರ ಕಾವ್ಯ ಕಬ್ಬಿನ ಮೇಲೆ ಜೇನಿಟ್ಟಂತಾಗಿದೆ. ಅದು ವಿಶ್ವಸಾಹಿತ್ಯದ ಸಾರಸರ್ವಸ್ವದ ಅಮೃತ ವಾಹಿನಿ. ವಿಶ್ವಕಲ್ಯಾಣಕ್ಕಾಗಿ ವೇದೋಪನಿಷತ್ತು ಮತ್ತು ಶಿವಾಗಮಗಳಲ್ಲಿ ಉದ್ಘೋಷಿತ ವಾಗಿರುವ ಅಮೂಲ್ಯ ಅಧ್ಯಾತ್ಮ ಸಂದೇಶವೇ ಅವರ ಕಾವ್ಯಸಂದೇಶ. ಇಂತಹ ಅಮೂಲ್ಯ ಹಾಗೂ ಅಮರ ಸಂದೇಶವನ್ನು ಲೋಕಕ್ಕೆ ನೀಡಿದ ಶ್ರೀ ನಿಜಗುಣ ಶಿವಯೋಗಿಗಳು ಸರ್ವಾರ್ಥದಲ್ಲೂ ಮನುಕುಲದ ಅನಿಮಿತ್ತ ಬಂಧುಗಳು; "ಕರುಣರಸದಕೋಡಿವರಿವ ಕಟಾಕ್ಷದ, ಪರತತ್ವವರುಷವಾಲಾಪದ, ವರಪುಣ್ಯಮಯ ಶರೀರದ, ನಿರಾಭಾರಿ ಸದ್ಗುರು ಗಳು!" ಅವರ ಲೋಕೋತ್ತರ ವ್ಯಕ್ತಿತ್ವ ಹಾಗೂ ಬಹುಮುಖ ಪ್ರತಿಭೆಗೆ ಅವರ ವಿಪುಲ ಕಾವ್ಯನಿರ್ಮಿತಿಯೇ ಸಾಕ್ಷಿ ಅವರ "ವಿವೇಕಚಿಂತಾಮಣಿ"ಯಂತೂ ನಿಜವಾದ ಅರ್ಥ ದಲ್ಲಿಯೇ 'ಮಹಾಮೇರು ಕೃತಿ ತೆಲಗು, ತಮಿಳು, ಮರಾಠಿ ಮತ್ತು ಸಂಸ್ಕೃತ ಭಾಷೆಗಳಿಗೆ ಅನುವಾದಗೊಂಡ ಪ್ರಪ್ರಥಮ ಜನಪ್ರಿಯ ಕನ್ನಡ ಗ್ರಂಥವಿದು.

### ಶ್ರೀ ನಿಜಗುಣರ ಮತವಾವುದು?

ಇಂತಹ ಅನುಪಮ ವ್ಯಕ್ತಿತ್ವವನ್ನು ಪಡೆದ ಶ್ರೀ ನಿಜಗುಣ ಶಿವಯೋಗಿಗಳ ಸುತ್ತಲೂ ಒಂದೆರಡು ಲೌಕಿಕ ಸಮಸ್ಯೆಗಳು ಮುಸುಕು ಹಾಕಿವೆ. ಆದರೆ, ಆ ಮುಸುಕು ಒಂದು ದೃಷ್ಟಿಯಿಂದ ತೀರ ತೆಳುವಾಗಿದೆ. ಆದರಿಂದ ಅವರಾ ಲೋಕೋತ್ತರವಾದ ವ್ಯಕ್ತಿತ್ವದ ದಿವ್ಯತೆಗಾಗಲಿ, ಭವ್ಯತೆಗಾಗಲಿ ಯಾವುದೇ ಬಗೆಯ ಭಂಗಬಂದಿಲ್ಲ ಎಂದೇ ಹೇಳಬೇಕು. ಆದು ತನ್ನ ನಿತ್ಯನೂತನವಾದ ನವನವೋನ್ಮೇಷಶಾಲಿನಿಯಾದ ಅಪೂರ್ವ ಕಳೆಯಿಂದ ಏಕಪ್ರಕಾರವಾಗಿ ಕಂಗೊಳಿಸುತ್ತದೆ. ಇರಲಿ ಇಲ್ಲಿ ಆ ಸಮಸ್ಯೆಗಳಾವವು? ಅವುಗಳಲ್ಲಿ ಪ್ರಸ್ತುತ ಪ್ರಬಂಧಕ್ಕೆ ನೇರವಾದ ಸಂಬಂಧವನ್ನು ಹೊಂದಿದ ಸಮಸ್ಯೆ ಯಾವುದು? ಎಂಬಿವೇ ಮೊದಲಾದ ಪ್ರಶ್ನೆಗಳನ್ನು ನೋಡಿಕೊಳ್ಳುವದು ಪ್ರಾಮುಖ್ಯ ವಾಗಿದೆ. ಶ್ರೀ ನಿಜಗುಣ ಶಿವಯೋಗಿಗಳ ತಂದೆ–ತಾಯಿ–ಹೆಂಡತಿ ಮೊದಲಾದವರ ಹೆಸರುಗಳಾಗಲಿ, ಅವರ ಗುರುಗಳಾರೆಂಬುದಾಗಲಿ ಖಚಿತವಾಗಿ ಹೇಳುವಷ್ಟು ಗಟ್ಟಿಯಾದ ಆಧಾರಗಳು ದೊರಕಿಲ್ಲ. ಅವರ ಕಾಲದ ಬಗೆಗೂ ಅಷ್ಟೇ; ಅವರ ಒಟ್ಟು ಕೃತಿಗಳ ಸಂಖ್ಯೆಯ ವಿಷಯದಲ್ಲೂ ಅಷ್ಟೇ. ಅಲ್ಲದೆ, ಅವರು ಯಾವ ಮತಕ್ಕೆ ಸೇರಿದವರು? ಎಂಬುದನ್ನೂ ಅನೇಕರು ದೊಡ್ಡ ಸಮಸ್ಯೆಯೆಂಬಂತೆ ಕಂಡಿದ್ದಾರೆ. ಅದಕ್ಕೆ ಉತ್ತರವನ್ನು ತಮ್ಮದೆ ಆದ ರೀತಿಯಲ್ಲಿ ಕೊಟ್ಟು ಸಮಾಧಾನ ಹೊಂದಲು ಹೆಣಗಿದ್ದಾರೆ. "ಶ್ರೀ ನಿಜಗುಣ ಶಿವಯೋಗಿಗಳು" ಎಂಬ ಹೆಸರೇ ಸೂಚಿಸುವಂತೆ ಅವರು ನಿರ್ವಿವಾದವಾಗಿಯೂ ವೀರಶೈವ ಶಿವಯೋಗಿ ಪುಂಗವರೇ.[೧] ಆದರೆ, ಇತ್ತಿತ್ತಲಾಗಿ "ಶ್ರೀ ಶರೀಫ ಶಿವಯೋಗಿ" ಮುಂತಾಗಿ

೧ ಪುರಾತನರ ತ್ರಿವಿಧಿ: ಶ್ರೀ ಬ. ಶಿವಮೂರ್ತಿಶಾಸ್ತ್ರಿಗಳು, ಬೆಂಗಳೂರು (೧೯೪೧): ಅನುಬಂಧ–೩. ಪುಟ–೨.

ಕರೆಯುವ ಪರಿಪಾಠ ಬೆಳೆದುಬಂದಿರುವದನ್ನು ಗಮನಿಸಿದರೆ, ಹಾಗೆಯೇ ಶ್ರೀ ನಿಜಗುಣ ರನ್ನೂ ಶಿವಯೋಗಿಗಳೆಂದು ಏಕೆ ಸಂಬೋಧಿಸಿರಬಾರದು? ಎಂಬ ಶಂಕೆ ಕೆಲವರ ಮನಸ್ಸಿ ನಲ್ಲಿ ಮೂಡಿ ನಿಲ್ಲುತ್ತದೆ. ಅಂತೆಯೆ, ಈಗಲೂ ಕೂಡ ಶ್ರೀ ನಿಜಗುಣರ ಷಟ್‌ಶಾಸ್ತ್ರಗಳ ಪ್ರೇಮಿಗಳೂ, ನಿತ್ಯ ಬೋಧಕರೂ ಆದ ಕೆಲವರು ಉದ್ದೇಶಪೂರ್ವಕವಾಗಿಯೋ, ಅಜ್ಞಾನದಿಂದಲೋ ಶ್ರೀ ನಿಜಗುಣರು ವೀರಶೈವರೇ ಅಲ್ಲ ಎಂದು ದೊಡ್ಡ ದೊಡ್ಡ ಸಭೆಗಳಲ್ಲಿ ಹೇಳದಿದ್ದರೂ ತಮ್ಮ ಆತ್ಮೀಯರೆನಿಸಿಕೊಂಡವರ ಮುಂದೆ ಬಹು ಧಾರಾಳ ವಾಗಿ ಸಾರಿ ಸಾರಿ ಹೇಳುತ್ತಾರೆ. ಆದ್ದರಿಂದ ಅವರ ಮತ ಯಾವುದು ಅನ್ನುವದನ್ನು ಇಲ್ಲಿ ಸ್ವಲ್ಪದರಲ್ಲಿ ವಿವೇಚಿಸಲಾಗಿದೆ.

ಯಾವುದೇ ಒಂದು ಸಂದಿಗ್ಧ ವಿಷಯದ ಬಗೆಗೆ ಒಂದು ಖಚಿತವಾದ ನಿರ್ಣಯ ವನ್ನು ನಿರಾಧಾರವಾಗಿ ಹೇಳುವದು ಉಚಿತವಲ್ಲ. ಅದು ಸುಸಂಸ್ಕೃತ ಅಭಿರುಚಿಯೆನಿಸದು. ಇನ್ನು ಆಧಾರಗಳು ಎರಡು ಪ್ರಕಾರ: ಬಾಹ್ಯ ಆಧಾರಗಳು ಹಾಗೂ ಆಂತರಿಕ ಆಧಾರಗಳು ಶ್ರೀ ನಿಜಗುಣ ಶಿವಯೋಗಿಗಳು ವೀರಶೈವರು ಎಂಬುದಕ್ಕೂ ಸಾಕಷ್ಟು ಬಾಹ್ಯ ಮತ್ತು ಆಂತರಿಕ ಸಾಕ್ಷ್ಯಾಧಾರಗಳನ್ನು ಸಮರ್ಥನೀಯವಾದ ರೀತಿಯಲ್ಲಿ ಇಲ್ಲಿ ಎತ್ತಿ ಹೇಳಬಹುದು. ಆ ರೀತಿಯಲ್ಲಿ ಮಾಡಿದ ಹಿರಿಯರ ಮಾರ್ಗದರ್ಶನವೂ ನಮಗೆ ಬೆಂಬಲವಾಗಿ ನಿಲ್ಲುತ್ತದೆ. ಬಾಹ್ಯಾಧಾರಗಳಲ್ಲಿ ನಮಗೆ ಎರಡು ಬಗೆಯ ಆಧಾರಗಳು ಸಿಕ್ಕುತ್ತವೆ. ಒಂದು, ಅವರನ್ನು ಸ್ತುತಿಸಿದ ಹಿಂದಿನ ಕವಿಗಳ ಹೇಳಿಕೆಗಳು; ಎರಡು, ಆಧುನಿಕ ಸಾಹಿತ್ಯ ಚರಿತ್ರೆಕಾರರ ಅಭಿಪ್ರಾಯಗಳು. ಹಿಂದಿನ ಕವಿಗಳಲ್ಲಿ ಪ್ರಸ್ತುತ ಉದ್ದೇಶದ ದೃಷ್ಟಿಯಿಂದ ಮೂರು ಜನ ಕವಿಗಳು ನಮಗೆ ಸಿಕ್ಕುತ್ತಾರೆ. ವೀರಶೈವ ಮಹಾಕವಿಗಳಾದ ಎಳಂದೂರು ಷಡಕ್ಷರ ದೇವರು, ಬಿಜ್ಜಾವರದ ವಿರಕ್ತ ತೋಂಟದಾರ್ಯರು ಮತ್ತು ಅರವತ್ತು ಮೂವರ ಪುರಾಣ ವನ್ನು ಬರೆದ ರಾಯಚೂರು ಪ್ರಾಂತದ ವೀರಭದ್ರ ಕವಿ. ಈ ಮೂವರೂ ಕೂಡ ವೀರಶೈವರಲ್ಲದವರನ್ನು ಸ್ಮರಿಸದಿರುವ ಪಂಥವನ್ನು ಅನುಸರಿಸಿದವರು. ಇಂಥವರು ಶ್ರೀ ನಿಜಗುಣರನ್ನು ಮನವಾರೆ ಸ್ತುತಿಸಿರುವುದು ಶ್ರೀ ಶಿವಯೋಗಿಗಳು ೧೦೦ಕ್ಕೆ ೧೦೧ ರಷ್ಟು ವೀರಶೈವರಾಗಿದ್ದರೆಂಬುದಕ್ಕೆ ಗಟ್ಟಿಯಾದ ಆಧಾರವಾಗಿದೆ. ಅದರಲ್ಲೂ ಒಬ್ಬ ಮಠಾಧೀಶರಾಗಿದ್ದ ಷಡಕ್ಷರ ದೇವರು "ನಿರುಪಮ ನಿಜಗುಣಯೋಗಿಯ ಪದಾಬ್ಜ ಕಾನತನಪ್ಪೆಂ॥" ಎಂದು ಹೇಳಿರಬೇಕಾದರೆ, ಶ್ರೀ ನಿಜಗುಣರ ವೀರಶೈವ ತತ್ವವನ್ನು ಪ್ರಶ್ನಿಸಲು ಅವಕಾಶವೆಲ್ಲಿದೆ? ಇದು ಅತ್ಯಂತ ಗಮನಾರ್ಹವಾದ ಅಂಶ. ಸುಮ್ಮನೆ ಬಾಯಿಗೆ ಬಂದಂತೆ ಹೇಳಿದರೆ ಅದು ಸರಿಯಲ್ಲ.

ಇನ್ನು ಕೆಲವು ಆಧುನಿಕ ವಿದ್ವಾಂಸರ ಅಭಿಪ್ರಾಯಗಳತ್ತ ನಮ್ಮ ದೃಷ್ಟಿಯನ್ನು ಹರಿಯಿಸಬೇಕಾಗಿದೆ. ಕರ್ನಾಟಕ ಕವಿ ಚರಿತ್ರೆಕಾರರು ಶ್ರೀ ನಿಜಗುಣರನ್ನು ಕುರಿತು ಇವನು ವೀರಶೈವ ಕವಿ. ಇವನಿಗೆ ನಿಜಗುಣಾರಾಧ್ಯ ಎಂಬ ಹೆಸರುಂಟು........"ಇವನನ್ನು ಅನೇಕ

ವೀರಶೈವ ಕವಿಗಳು ತಮ್ಮ ಗ್ರಂಥಗಳಲ್ಲಿ ಸ್ಮರಿಸಿದ್ದಾರೆ"೨ ಎಂದು ಬಹು ನಿಷ್ಪಕ್ಷಪಾತ ದೃಷ್ಟಿಯಿಂದ ಬರೆದಿದ್ದಾರೆ. ಡಾ|| ರಂ. ಶ್ರೀ ಮುಗಳಿಯವರು ತಮ್ಮ "ಕನ್ನಡ ಸಾಹಿತ್ಯ ಚರಿತ್ರೆ"ಯಲ್ಲಿ ನಿಜಗುಣ ಶಿವಯೋಗಿ ವೀರಶೈವನೇನೋ ನಿಜ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಹಾಗೆಯೆ, Mr. E. P. Rice ಅವರು ತಮ್ಮ "A History of Kanerese Literature" ಎಂಬುದರಲ್ಲಿ ಹೀಗೆ ಹೇಳಿದ್ದಾರೆ: "He is a great scholar and a versatile and prolific writer–But his best known work is the Vivekachintamani, a very useful Encyclopedia of Sanskrit terms and Veersaiva Lore" (p 71). ಇದು "Lingayat writers" ಎಂಬ ಶಿರೋನಾಮೆಯ ಕೆಳಗಡೆ ಬಂದ ವಿಷಯ. ಇವರೂ ಸೇರಿದಂತೆ ಶ್ರೀ ಅ.ನ.ಕೃ; ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು, ಶ್ರೀ ಮಹಾದೇವ ಸ್ವಾಮಿಗಳು, ಸರ್ಪಭೂಷಣಮಠ (ಬೆಂಗಳೂರು), ಶ್ರೀ ಸಿದ್ದಯ್ಯ ಪುರಾಣಿಕ (ಧಾರವಾಡ), ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು, ಡಾ|| ಆರ್. ಸಿ. ಹಿರೇಮಠ, ಡಾ|| ಎಚ್. ತಿಪ್ಪೇರುದ್ರಸ್ವಾಮಿಗಳು, ಡಾ|| ಬಸುಪಟ್ಟದ, ಡಾ|| ಉಮಾಪತಿ ಶಾಸ್ತ್ರಿಗಳು ಇವರೇ ಮೊದಲಾದವರು ಬಹು ಸುಸ್ಪಷ್ಟವಾಗಿ ಸಾಧಾರವಾಗಿ ಶ್ರೀ ನಿಜಗುಣರು ವೀರಶೈವರೆಂದು ಬರೆದಿದ್ದಾರೆ. ಹೀಗೆ ಬಾಹ್ಯಾಧಾರಗಳು ವಿಪುಲವಾಗಿವೆ.

ಶ್ರೀ ನಿಜಗುಣರ ವೀರಶೈವತ್ವವನ್ನು ಬಹು ಗಟ್ಟಿಯಾದ ಆಧಾರದ ಮೇಲೆ ನಿಲ್ಲಿಸಲು ಅವರಿಂದ ರಚಿತವಾದ ಉದ್ಗ್ರಂಥಗಳು ಬಹಳಷ್ಟು ಸಹಾಯ ನೀಡುತ್ತವೆ. ಅವರು ತಮ್ಮ ಕೃತಿಗಳಲ್ಲಿ ಶಿವಸರ್ವೋತ್ತಮತ್ವ, ಶಿವಭಕ್ತ್ಯಾಧಿಕ್ಯ, ಶಿವನ ಮಹಿಮೆ–ಲೀಲೆ ಮೊದಲಾದವುಗಳನ್ನು ಕಂಠೋಕ್ತವಾಗಿ ಹಾಡಿ ಹೊಗಳಿದ್ದಾರೆ. "ಕೈವಲ್ಯ ಪದ್ಧತಿ" ಎಂಬ ಉದ್ಗ್ರಂಥದಲ್ಲಿ ಅವರು ತಮ್ಮ ಸ್ವಾನುಭಾವದ ಸುಧಾರಸವನ್ನು ಸಾಧಕರ ಸಲುವಾಗಿ ಸೂರೆಗೊಂಡಿದ್ದಾರೆ. "ಕೈವಲ್ಯ ಪದ್ಧತಿ"ಯಲ್ಲಿ ಒಟ್ಟು ಐದು ಭಾಗಗಳು ಅಥವಾ ಅಧ್ಯಾಯಗಳು ಬರುತ್ತವೆ. ಅವುಗಳನ್ನು 'ಸ್ಥಲ' ಎಂದು ಶ್ರೀ ನಿಜಗುಣರು ಕರೆದಿದ್ದಾರೆ. ಉದಾ: ಶಿವಕಾರುಣ್ಯಸ್ಥಲ; ಜೀವಸಂಬೋಧನಸ್ಥಲ ಇತ್ಯಾದಿ. ಅಲ್ಲದೆ, ಅವರು ತಮ್ಮ (ಸ್ವರ) ವಚನಾಂಕಿತವನ್ನು "ಶಂಭುಲಿಂಗ" ಎಂಬುದಾಗಿ ಇರಿಸಿಕೊಂಡಿದ್ದಾರೆ. ಇಲ್ಲಿ 'ಸ್ಥಲ' ಎಂಬುದು ವೀರಶೈವಕ್ಕೆ ಮಾತ್ರ ಮೀಸಲಾದ ಪದ. ಅದಕ್ಕೆ ಪರಬ್ರಹ್ಮ, ಲಿಂಗ, ಶೂನ್ಯ, ಬಯಲು ಮೊದಲಾದ ಪಾರಿಭಾಷಿಕ ಅರ್ಥವಿದ್ದರೂ ಅದನ್ನು ಗ್ರಂಥಭಾಗ, ಸಂಧಿ ಅಥವಾ ಅಧ್ಯಾಯ: ಎಂಬರ್ಥದಲ್ಲಿ ಮಹಾಕವಿ ಹರಿಹರನು ಬಳಸಿದ್ದಾನೆ. ಇಲ್ಲಿ ಶ್ರೀ ನಿಜಗುಣ ಶಿವಯೋಗಿಗಳೂ ಸಹ ಅದೇ ಅರ್ಥದಲ್ಲಿ ಅದನ್ನು ಈ ಕೈವಲ್ಯ ಪದ್ಧತಿಯಲ್ಲಿ ಉಪಯೋಗಿಸಿದ್ದಾರೆ. 'ಶಂಭುಲಿಂಗ' ಎಂಬ ವಚನಾಂಕಿತವನ್ನು ವೀರಶೈವನಲ್ಲದ

---

೨ ಕರ್ನಾಟಕ ಕವಿಚರಿತ್ರೆ–ಭಾಗ–೨ ಪು. ೧೫೩

ಯಾವ ಕವಿಯೂ ಇರಿಸಿಕೊಳ್ಳಲಾರನು. ಉಕ್ತ ಗ್ರಂಥದ ತುಂಬೆಲ್ಲಾ ಗುರು ಶಂಭುಲಿಂಗ, ಘನ ಶಂಭುಲಿಂಗ ಮೊದಲಾದ ಪ್ರಯೋಗಗಳು ಆಯಾ ಹಾಡಿನ ಅಥವಾ ಸ್ವರ ವಚನದ ಕೊನೆಯಲ್ಲಿ ಸಿಕ್ಕೇ ಸಿಗುತ್ತವೆ.

'ಕೈವಲ್ಯ ಪದ್ಧತಿ'ಯ ಪ್ರಥಮ ಸ್ಥಲವಾದ 'ಶಿವಕಾರುಣ್ಯ'ದಲ್ಲಿ ಶಿವಸ್ತುತಿ, ಶಿವಸ್ತೋತ್ರ, ಶಿವಮಹಿಮೆ, ಶಿವಪಾರಮ್ಯ, ಶಿವಕರುಣೆಯ ಆವಶ್ಯಕತೆ, ಶಿವನೊಡನೆ ಅವಿನಾಭಾವ ಸಂಬಂಧದಿಂದಿರುವ ಚಿಚ್ಛಕ್ತಿ ರೂಪಿಣಿಯಾದ ಪಾರ್ವತಿಯ ಸ್ತುತಿ ಮುಂತಾದ ಅನೇಕ ವಿಷಯಗಳ ತನ್ಮಯತಾ ಪೂರ್ಣ ನಿರೂಪಣೆಗಳು ಬಹು ಮನೋಜ್ಞ ವಾಗಿ ಬಂದಿವೆ. ವೀರಶೈವ ಕವಿ ಮಾತ್ರ ಈ ಬಗೆಯ ಶಿವಸರ್ವೋತ್ತಮತ್ವಾದಿ ಸುಂದರ ವಾದ ವಿವರಣೆ-ವರ್ಣನೆಗಳಲ್ಲಿ ತನ್ಮಯತೆಯನ್ನು ಅನುಭವಿಸಲು ಸಾಧ್ಯ. ಶಿವಾಧಿಕ್ಯ ಸೂಚಕವಾದ ಕೆಳಗಿನ ವಾಕ್ಯಗಳನ್ನು ಈ ಸಂದರ್ಭದಲ್ಲಿ ನೋಡಿಕೊಳ್ಳಬಹುದು.

೧. ಹರಿಯು ನಯನದ ಕುರುಹುವಿಡಿದಿಹುದೀಗ ಗುರು ಶಂಭುಲಿಂಗ ನಿನ್ನ ದಿವ್ಯ ಪಾದ||

೨. ಮೃಗರೂಪದಳೆದಗಧರನರಸಲು ತನ್ನ ಬಗೆದೋರಿತಿಲ್ಲವಲ್ಲೊ ನಿನ್ನ ಪಾದ||

೩. ಹರಿವರಾಹವಾದಿ ಹಲವು ಜನನವೈದಿ ಬರುವ ಚಕ್ರದೊಡನೆ ತಿರುಗಿ ಬಳಲ ಲಾರವೆ ಶರಣೆನುತ್ತಭವನ ಚರಣವಿಡಿದನೆಂದೊಡೆ ನಿನಗೆ ಸರಿಯ ಕಾಣೆ ನಾನು ಚಿತ್ರಭಾನು ನೇತ್ರನೇ|

೪. ಶರಣ ಸತಿಯನೊಲಿಸುವ ಸತ್ಕಲಾಪನೆ| ಶಂಭುಲಿಂಗ||

೫. ಹರಿಯಜರುಗಳ ವಾದವನು ಮಾಣಿಸಿದನೆ| ಶಂಗರಳವ ಸೇವಿಸಿ ಮರಣವ ಗೆಲಿದನೆ| ಶಂ||

೬. ನೋಡು ದಯದೊಳೆನ್ನನೆಂದು ಭಾಳನಯನವ| ನೊಪ್ಪ| ಮಾಡಿ ಹರಿಯ ದಿಟ್ಟ ನಿಂದುದೀಶನಡಿಯೊಳು||

೭. ಎನ್ನನೊಲವಿಂದ ಪಾಲಿಸು ಪಾರ್ವತೀಶ| ಸನ್ನುತಾಗಮನಿಗಮ ನಿರ್ಜಿತ ಪಂಚ ಪಾಶ||

೮. ಕರುಣಿಸು ಕಾಡದೆನ್ನವನು ಬಂದು| ಶರಣು ಹೊಕ್ಕೆನು ಶಂಕರ ನಿನ್ನ|| ಇವೇ ಮೊದಲಾದ ಶಿವಾಧಿಕ್ಯ ಬೋಧಕ ವಾಕ್ಯಗಳು ನಿಜಕ್ಕೂ ಜನ್ಮತಃ ವೀರಶೈವನೇ ಆದ ಕವಿ ಯೊಬ್ಬನೇ ಹೇಳಿರಲು ಸಾಧ್ಯವಾದವು. ಇಷ್ಟೇ ಅಲ್ಲ, "ಶಿವಪಥವರಿವೊಡೆ ಗುರುಪಥ ಮೊದಲು" ಎಂದು ಮಹಾತ್ಮಾ ಬಸವಣ್ಣನವರು ಹೇಳಿರುವಂತೆಯೇ, ಶ್ರೀ ನಿಜಗುಣ ಶಿವಯೋಗಿಗಳೂ ಸಹ "ಶ್ರೀ ಗುರು ವಚನೋಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ", "ಶ್ರೀಗುರು ವಚನದಿಂದಧಿಕ ಸುಧೆಯುಂಟೆ?" ಮುಂತಾಗಿ "ಕೈವಲ್ಯ ಪದ್ಧತಿ"

ಯಲ್ಲಿ ಬರುವ ಮಾತುಗಳಲ್ಲಿ ಗುರುಪಥದ ಆವಶ್ಯಕತೆಯನ್ನು ಮನಗಾಣಿಸಿಕೊಟ್ಟಿದ್ದಾರೆ. ಇದು ಅವರ ವೀರಶೈವತ್ವಕ್ಕೆ ಹಿಡಿದ ಕನ್ನಡಿ.

ಉಕ್ತ ಗ್ರಂಥದಲ್ಲಿ ಜೀವ ಸಂಬೋಧನಸ್ಥಲವು ಎರಡನೆಯದು. ಇದು ಸಂಸಾರ ಹೇಯ ಸ್ಥಲ, ಮಾಯಾ ವಿಡಂಬನಸ್ಥಲ ಮತ್ತು ಜೀವಭ್ರಾಂತಿ ನಿರಸನಸ್ಥಲಗಳ ಸಾರವನ್ನೊಳಗೊಂಡಂತೆ ಬಹು ವಿವರವಾದ ನಿರೂಪಣೆಗಳಿಂದ ವಿಭೂಷಿತವಾಗಿದೆ. ಶ್ರೀ ನಿಜಗುಣರು ವೀರಶೈವರೆಂಬುದಕ್ಕೆ ಇಲ್ಲಿ ಬರುವ ಅನೇಕ ವಾಕ್ಯಗಳು ಮನನೀಯ ವಾಗಿವೆ. ಕೆಳಗೆ ಕೆಲವುಗಳನ್ನು ಉದಾಹರಣೆಗಾಗಿ ಕೊಟ್ಟಿದೆ. ಈ ಸ್ಥಲದ ಪ್ರಥಮ ಪದದ ಪಲ್ಲವಿಯಲ್ಲಿ "ನೆನೆವುದನುದಿನದುದಯ ಕಾಲದೊಳು ವಿನುತ ಗುರುಮೂರ್ತಿಯನು ಮೇಶ ನಂಘ್ರಿಯನು........" ಎಂಬಲ್ಲಿ ಬರುವ "ಉಮೇಶನಂಘ್ರಿಯನು" ಎಂಬ ಶ್ರೀ ನಿಜಗುಣರ ಮಾತು ವೀರಶೈವ ಪರವಾದುದು. ಈ ಕೆಳಗಿನ ವಾಕ್ಯಗಳಲ್ಲಿ ಬರುವ ಅರ್ಥಸ್ವಾರಸ್ಯವನ್ನು ಆಸ್ವಾದಿಸಬಹುದು:

೧. ಆಡುತ್ತೈದಳೆ ಮಾಯೆಯೆಂಬ ಕಾಮಿನಿ ಬಿಡದೆ। ನೋಡಿ ಬಲ್ಲವರು ಸಂಸಾರ ನಾಟಕವ ||ಪ|| "ಶಿವಶಕ್ತಿಯೆಂಬ ರಂಗದೊಳು...." (ಇಲ್ಲಿ ಶಕ್ತಿವಿಶಿಷ್ಟಾದ್ವೈತವೇ ಉಕ್ತವಾಗಿದೆ).

೨. ಗಣಿತವಿದನು ಕೂಡಿ ಕಳೆಯಬಲ್ಲಾತನೆ| ತ್ರಿಣಯನೆನಿಪನು ಲೆಕ್ಕಿಗರ ಮಧ್ಯ ದೊಳು||

೩. ಭವ ದುಃಖ ಜೀವನುತ್ತಮ ಗುರುಕೃಪೆಯನೊ|ಪ್ಪವ ಪುಣ್ಯ ಫಲದಿಂದೆ ಪಡೆದು||

೪. ಮಿಕ್ಕಿನ ವರಗತಿಗಳೆಲ್ಲವನು ಹೇಯವೆಂಬ ಮತಿ ದೊರೆಯದೆ....||

೫. ಆ ಹದ ತಪ್ಪಿದೊಡಿಂತು ತಪ್ಪವವು....ರಮಣಿರನ್ನೆ ||ಪ||....ಗುರು ಶಂಭು ಲಿಂಗದೊಲುಮೆ....||

ಮೇಲಿನ ಐದು ವಾಕ್ಯಗಳಲ್ಲಿ "ಶಿವಶಕ್ತಿಯರೆಂಬ ರಂಗದೊಳು" ಎಂಬ ಮಾತು ವೀರಶೈವದ ಹೃದಯವೇ ಆದ ಶಕ್ತಿವಿಶಿಷ್ಟಾದ್ವೈತವನ್ನು ಒಳ್ಳೇ ಸ್ಪಷ್ಟವಾಗಿ ಎತ್ತಿ ಹೇಳಿರುತ್ತದೆ. ಎರಡನೆಯ ವಾಕ್ಯವು ವೀರಶೈವ ತತ್ವಜ್ಞಾನವು ವಿವೇಚಿಸಿರುವ ೩೬ ತತ್ವ ಗಳನ್ನು ಬೆಡಗಿನ ವಚನದ ಶೈಲಿಯಲ್ಲಿ ತಿಳಿಸಿಕೊಡುತ್ತದೆ, ಮೂರನೆಯದು ಶಿವಯೋಗ ಮಾರ್ಗಸ್ಥನಾಗಲು ಉತ್ತಮ ಗುರು ಕೃಪೆ ಬೇಕೇ ಬೇಕು ಎಂಬುದನ್ನು ಸೂಚಿಸುತ್ತದೆ ಮತ್ತು ನಾಲ್ಕನೆಯ ವಾಕ್ಯದಲ್ಲಿ ವೀರಶೈವದ ವಿಚಾರಧಾರೆಗನುಗುಣವಾಗಿ ಉತ್ತಮ ಲೋಕಗಳನ್ನು ಹೇಯವೆಂದು ಹೇಳಿದೆ ಅಂತೆಯೆ, ಗುರುಶಂಭುಲಿಂಗದ ಕೃಪೆಯನ್ನು ವೀರಶೈವನೇ ಯಾಚಿಸುವನೆಂದು ಬೇರೆ ಹೇಳಬೇಕಾಗಿಲ್ಲ. ಶಿವಕೃಪೆಯೇ ಸಾಧನಪಥದಲ್ಲಿ ಮುಂದುವರಿಯಲು ಮಾರ್ಗದರ್ಶಕ.

"ಕೈವಲ್ಯ ಪದ್ಧತಿ"ಯ ಮೂರನೆಯ ಸ್ಥಲವಾದ ನೀತಿ ಕ್ರಿಯಾಚರ್ಯಸ್ಥಲದಲ್ಲಿ ಯಂತೂ ಶ್ರೀ ನಿಜಗುಣಾರ್ಯರು ವೀರಶೈವ ಕವಿಗಳಾಗಿದ್ದರೆಂಬುದಕ್ಕೆ ಬೇಕಾದಷ್ಟು ಸಾಕ್ಷಿ ಪುರಾವೆಗಳು ಸಿಕ್ಕುತ್ತವೆ. ಅವುಗಳಲ್ಲಿ ಕೆಲವನ್ನು ಕೆಳಗೆ ಕೊಟ್ಟಿದೆ:

೧) ಗುರುಶಂಭುಲಿಂಗದಿಂ ಪರದೈವಮುಂಟೆ?

೨) ಮುದವಲರಿ ಶಂಭುಲಿಂಗದ ಪಾದಪಂಕಜವ....ವಿಧಿವಿಡಿದು ಭಜಿಸೆ ಬಾಹ್ಯಾಭ್ಯಂತರದೊಳು ಪರಮಾನಂದ ಸಿದ್ಧಿಯಹುದು॥

೩) ಹರಿಗಾದ ಹಾನಿಯನು। ಅಜನಿಗಾದೆಡರನು।

೪) ಹರಿಯನೀಕ್ಷೈದು ಪರಿಭವದೊಳು ಬಳಲಿಸಿದೆ ಸರಸಿಜೋದ್ಭವನನಡುದಲೆಯನಳಿದೆ॥

೫) ಚಿಂತಿಸದಿರು ಸುಖದುಃಖದೆಡೆಯೊಳು....[೩]

೬) ಕಾಲಕರ್ಮ ಮಾಯೆಯೆಂಬಿವನು ಗೆಲಲಹುದು ವಿಶಾಲಮತಿಗಳು ಶಿವಭಕ್ತಿಯುಕ್ತರಾಗಿರೆ॥

೭) ಸದರವಲ್ಲವೆ....ಮದನವೈರಿ ತನ್ನವರ್ಗೆ। ಪದುಳದಿಂದ ಕೊಡುವ ಮುಕ್ತಿ.

೮) "ಜವನಧಾಳಿಯ ಕೆಡಿಸುವ ಭಕ್ತಿಗಲಿವುದೆ। ಚಂದಮಮು। ಶಿವಪದ ಧ್ಯಾನ ಲಕ್ಷ್ಯವ ನೋಡಿ ನಲಿವುದೆ। ಚೆಂ।" –ಇಲ್ಲಿ ಭಕ್ತಿ ಪಂಚಮ ಪುರುಷಾರ್ಥವೆನಿಸಿದೆ.

೯) ಜಾಣನು ಲೌಕಿಕ ಪರಮಾರ್ಥವೆರಡನು। ಮಾಣದೆ ಕೂಡಿ ನಡೆಸುತಿಹನಿಂತು।[೪]

೧೦) ಮಾಡಲಿಲ್ಲವೆ ತಪವನು। ಗುರುಭಜನೆ ಸುಕರ್ಮವೃತ್ತಿ। ಹರನಪೂಜೆ ಶರಣ ಸೇವೆ।....

ಮೇಲೆ ಉದಾಹರಿಸಿದ ಹತ್ತು ವಾಕ್ಯಗಳಲ್ಲಿ ಶಿವಾಧಿಕ್ಯ, ಶಿವಭಕ್ತಿಯ ಮಹಿಮೆಗಳು ಬಂದಿರುವದಲ್ಲದೆ, ಈ ಲೋಕದಲ್ಲಿ ಇದ್ದೇ ಪರಮಾರ್ಥವನ್ನು ಸಾಧಿಸಲು ಬರುತ್ತದೆಂಬ ಮಾತು ಅತ್ಯಂತ ಅರ್ಥಪೂರ್ಣವಾಗಿ ಚಿತ್ತರಗೊಂಡಿದೆ. ವೀರಶೈವದಲ್ಲಿ ಬರಿಯ ಶುಷ್ಕ ಜ್ಞಾನಕ್ಕೆ ಬೆಲೆಯಿಲ್ಲ ಎಂಬುದನ್ನು ಶ್ರೀ ಶಿವಯೋಗಿಗಳು "ಸುಮ್ಮನಾಗದರಿವಿನಿಂದಲೆ ಮುಕುತಿ", ಗುರುಭಜನೆ, ಸುಕರ್ಮವೃತ್ತಿ, ಹರನಪೂಜೆ ಹಾಗೂ ಶರಣಸೇವೆ–ಎಂಬಿವೇ ಮುಂತಾದೆಡೆಗಳಲ್ಲಿ ಬಹು ಮನೋಜ್ಞವಾಗಿ ನಿರೂಪಿಸಿದ್ದಾರೆ. ಇನ್ನು ಚರ್ಯಾಪಾದ

---

೩ ಹೋಲಿಸಿ: "ಸುಖ ಬಂದಡೆ ಪುಣ್ಯದ ಫಲವೆನ್ನೆನು; ದುಃಖ ಬಂದಡೆ ಪಾಪದ ಫಲವೆನ್ನೆನು." ಬ. ವ. ೬೯೪.

೪ ಹೋಲಿಸಿ: "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ; ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ...." ಬ. ವ. ೧೬೫.

ದದಲ್ಲಿ ಬರುವ ಹಾಡುಗಳಂತೂ ಸಂಪೂರ್ಣವಾಗಿ ವೀರಶೈವದಲ್ಲಿ ಅತ್ಯಂತ ಮಹತ್ವದವಾಗಿ ಲಿಂಗದೀಕ್ಷೆ, ಲಿಂಗಪೂಜಾವಿಧಾನ ಮತ್ತು ಗುರುಕರುಣಗಳನ್ನು ಕುರಿತೇ ಇರುತ್ತವೆ. ಇಲ್ಲಿ ಬರುವ ಮೂರೂ ಹಾಡುಗಳ ಪಲ್ಲವಿ ಹೀಗಿವೆ:

೧) ಶರಣಸತಿಯ ಮದುವೆಯ ಸಂಭ್ರಮವನು ನೋಡಿರಮ್ಮಾ।....(ದೀಕ್ಷೆ)

೨) ಬೇರೊಂದು ಪದವಿಯನು ಪಡೆವನೆಂಬಳಿಯಾಸೆ ತೋರದೆನ್ನೊಳು
ಗುರುವಿನೊಲುಮೆದೊರಕೊಳಲು॥ (ಗುರುಕರುಣ)

"ಕೈವಲ್ಯ ಪದ್ಧತಿ"ಯಲ್ಲಿ ಬರುವ ಯೋಗ ಪ್ರತಿಪಾದನ ಸ್ಥಲವಂತೂ ಶಿವಯೋಗಿ ನಿಜಗುಣರ ಶಿವಯೋಗ ಸಂಪತ್ತಿನ ವೈಭವವನ್ನು ಅತ್ಯಂತ ಮನೋಜ್ಞವಾಗಿ ತೋರಿಸುತ್ತದೆ. ಈ ಸ್ಥಲದ ಮೊದಲನೆಯ ಹಾಡಿನಲ್ಲೇ ಬರುವ "ತಿಳಿಯಲ್ಕೆಷಡ್ವವನು ಮೀರಿದ ಕಲೆಯ ಮೇಲೆ। ಬೆಳಗುವಾಗಸದಗ್ರದಮಲ ಶಕ್ತಿಯನು। ಕಳೆದೆಸೆವ* ಶಂಭುಲಿಂಗದ ಯೋಗವಿತ್ತೆನ್ನನುಳುಹಿದ ನಿರಾಭಾರಿದೇಶಿಕವರೇಣ್ಯ।" ಎಂಬ ನುಡಿಯು ಸಂಪೂರ್ಣವಾಗಿ ವೀರಶೈವದ ಮರ್ಮವನ್ನೇ ತಿಳಿಸಿಕೊಡುತ್ತದೆ. ಇಲ್ಲಿ ಬರುವ ಷಡಧ್ವಗಳು, ಚಿಚ್ಛಕ್ತಿ, ಶಂಭುಲಿಂಗದಯೋಗ, ನಿರಾಭಾರಿ ದೇಶಿಕವರೇಣ್ಯ-ಎಂಬೀ ಪದಗಳು ವೀರಶೈವದ ಪಾರಿಭಾಷಿಕ ಶಬ್ದಗಳು. ಶ್ರೀ ನಿಜಗುಣರು ಶಿವಯೋಗವನ್ನೇ ಇಲ್ಲಿ ಶಂಭುಲಿಂಗದ ಯೋಗವೆಂದು ಕರೆದಿದ್ದಾರೆ. ವೀರಶೈವದ ಗುರುಗಳನ್ನು ಮಾತ್ರ 'ನಿರಾಭಾರಿ', 'ದೇಶಿಕ', 'ದೇಶಿಕವರೇಣ್ಯ' ಮುಂತಾಗಿ ಕರೆಯಲಾಗುತ್ತದೆ. ಶ್ರೀ ನಿಜಗುಣರು ವೀರಶೈವರಾಗಿರದಿದ್ದರೆ, ಹೀಗೆ ತಮ್ಮ ಗುರುಗಳನ್ನು ಸಂಬೋಧಿಸಿರಲು ಸಾಧ್ಯವಿತ್ತೇ? ಯೋಗಿಯ ಸಕಲ ಸಂಸಾರವನ್ನು ಆಧ್ಯಾತ್ಮಿಕವಾದ ಪರಿಭಾಷೆಯಲ್ಲಿ ವರ್ಣಿಸುವಾಗ, ಶ್ರೀ ನಿಜಗುಣರು "ಶಂಭುಲಿಂಗವೆಂಬ ಗುರುತನಮುಂಟು" ಎಂದು ಹೇಳಿರುವದನ್ನು ಈ ಸಂದರ್ಭದಲ್ಲಿ ಅವಗಾಹಿಸಬೇಕು.

ಶ್ರೀ ನಿಜಗುಣ ಶಿವಯೋಗಿಗಳು ಯೋಗಪ್ರತಿಪಾದನಸ್ಥಲದಲ್ಲಿ ಪರಂಪರೆಯಿಂದ ಬಂದ ನಾಲ್ಕು ಯೋಗಗಳನ್ನು ಅತ್ಯಂತ ತನ್ಮಯತೆಯಿಂದ ಬಿತ್ತರಿಸಿದ್ದಾರೆ. ತಾವು ವೀರಶೈವರಿದ್ದುದರಿಂದಲೇ ಶಿವಪಂಚಾಕ್ಷರೀ ಮಹಾಮಂತ್ರದ ಮಹಿಮೆಯನ್ನು ಮನದುಂಬಿ ಹಾಡಿ ಹರಸಿದ್ದಾರೆ. ಇದನ್ನು ಮಂತ್ರಯೋಗದ ಸ್ವರೂಪಾದಿಗಳ ವರ್ಣನೆಯಲ್ಲಿ ನಾವು ನೋಡಿಕೊಳ್ಳಬಹುದು. ಲಯ ಯೋಗದಲ್ಲಿ ಬರುವ "ನಿಮಿಷವಾಗಲಿ ನಿಮ್ಮ ನೆನಹು ನಿಂದೊಡೆ ಮುಕ್ತ। ಸಮನಿಸದಿಹುದೆ ಶಂಕರ, ಯೋಗಿಜನವಂದ್ಯ" ಎಂಬುದನ್ನು ವೀರಶೈವನಲ್ಲದವನು ಹೇಳಿರಲು ಸಾಧ್ಯವೆ? ಹಾಗೆಯೆ, "ಯೋಗಿಯೆಂದೆನಿಸೆನ್ನನು ವಿಷಯ ಸುಖ। ಭೋಗಿಯೆನಿಸದೆ ಜಗದೊಳು। ಶಿವನೆ ॥ಪಲ್ಲ॥" ಎಂಬಲ್ಲಿ ಈ ಹೃದಯಾಂತರಾಳದಿಂದ ಹೊರಹೊಮ್ಮಿ ಬರುವ ತೀವ್ರಸ್ವರೂಪದ ಪ್ರಾರ್ಥನೆ ವೀರಶೈವ ಶಿವಯೋಗಿ

* ಕಲೆತೆಸೆವ (?)

ಯಿಂದಲೇ ಬರಲು ಶಕ್ಯ. ಅದೂ ಹಠಯೋಗ ಪ್ರತಿಪಾದನೆಯಲ್ಲಿ! ರಾಜಯೋಗದಲ್ಲಿ ತಾರಕತ್ರಯದ ವಿಷಯವನ್ನು ವಿವೇಚಿಸುವಾಗ, ಶ್ರೀ ನಿಜಗುಣರು "ನೀಸರಿದು ನೀರೆ ಪೇಳೆನಗೆ ಕಣ್ದೆರವಾಗಿ....||" ಎಂಬ ಹಾಡಿನ ಎರಡನೆಯ ನುಡಿಯಲ್ಲಿ ಹೇಳಿರುವದರತ್ತ ನಮ್ಮ ಗಮನಹರಿಸಬೇಕು: "ಶಿವಶಕ್ತಿಗಳೆರಡು ಕಾಣಿಸುತ್ತಿಹವೆಲ್ಲಿ| ಶಿವನ ಚಿತ್ತವದವನರು ಪುವ ಮಾರ್ಗವೇನು| ಶಿವಯೋಗ ಮುದ್ರಾನುಭವದ ಬೀಡಾವುದು| ಶಿವಲಿಂಗದೆಡೆಯ ನೇನೆಂದು ಪೇಳುವರು||" ಅಲ್ಲಿಯೆ ಮೂರನೆಯ ನುಡಿಯಲ್ಲಿ ಬರುವ "ಕರಪೀಠದಿಷ್ಟ ವೆನಿಸುವ ಶಂಭುಲಿಂಗವು| ಗುರುಮತದೊಳಾವದೆಸೆಯಿಂದ ಬಂದುದು|" ಎಂಬ ಮಾತಿನತ್ತ ಗಮನಹರಿಸಬಹುದು. ಶ್ರೀ ನಿಜಗುಣ ಮಂತ್ರಾದಿ ನಾಲ್ಕು ಯೋಗಗಳಲ್ಲೂ ಕೂಡ ತಮ್ಮ ವೀರಶೈವತ್ವವನ್ನು ಮೆರೆದಿದ್ದಾರೆ.

"ಕೈವಲ್ಯ ಪದ್ಧತಿ"ಯ ಈ ನಾಲ್ಕನೆಯ ಸ್ಥಲದಲ್ಲಿ ಅಂದರೆ ಯೋಗಪ್ರತಿಪಾದನ ಸ್ಥಲದಲ್ಲಿ ಶ್ರೀ ನಿಜಗುಣರು ಶಿವಯೋಗವನ್ನು ಕುರಿತು ಹೇಳಿದ ಮಾತುಗಳಂತೂ ಅನುಭಾವದ ಆಗರಿನಿಂದ ಅರಿವಿಗೆ ಪರಿಮಳವನ್ನುಂಟು ಮಾಡುತ್ತವೆ. ನಿಜವಾಗಿಯೂ, ಸಾಧಕನಲ್ಲಿ ಅಷ್ಟಾವರಣಗಳು ಅಳವಟ್ಟಾಗಲೇ ಅವನು ಶಿವಯೋಗಸಾಧನೆಗೆ ಅರ್ಹತೆ ಯನ್ನು ಪಡೆಯುತ್ತಾನೆ. ಅಂತಲೇ ಶ್ರೀ ನಿಜಗುಣರು ಅಷ್ಟಾವರಣ(ದ್ವಾದಶಾವರಣ) ಗಳನ್ನೇ ಪ್ರಥಮ ಸೂತ್ರ ಹಾಗೂ ತದನಂತರ ವಿವರಣೆಯಲ್ಲಿ ವಿವರವಾಗಿ ತಿಳಿಸಿಕೊಟ್ಟಿ ದ್ದಾರೆ. ಬಳಿಕ "ಜ್ಞಾನಂ ಶಿವಮಯಂ ಭಕ್ತಿಃ ಶೈವೀ, ಧ್ಯಾನಂ ಶಿವಾತ್ಮಕಂ| ಶಿವವ್ರತಂ ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ||" ಎಂಬಂತೆ ಶಿವಯೋಗಿಗಳು ಒಲಿದು ಒಡಂಬಡುವಂತೆ ನಿರೂಪಿಸಿದ್ದಾರೆ. ಇಷ್ಟಲಿಂಗಾರ್ಚನ, ಪ್ರಾಣಲಿಂಗ ಮತ್ತು ಭಾವಲಿಂಗಗಳ ಅನುಸಂಧಾನ(ಧ್ಯಾನ), ಲಿಂಗಭಕ್ತಿ, ಲಿಂಗಜ್ಞಾನ ಮತ್ತು ಲಿಂಗವ್ರತಗಳನ್ನು ಇಷ್ಟೊಂದು ತನ್ಮಯತೆ–ತನ್ನಿಷ್ಠೆಗಳಿಂದ ರಾಗರಸ ತರಂಗಿಣಿ ತುಂಬಿ, ಹೊರಸೂಸಿ ಹರಿಯುವಂತೆ ಬರೆ ದಿರಬೇಕಾದರೆ, ಶ್ರೀ ನಿಜಗುಣರು ಸ್ವತಃ ಶಿವಯೋಗಿಗಳಲ್ಲದಿದ್ದರೆ ಅದೆಂತು ಶಕ್ಯವಾಗು ತ್ತಿತ್ತು? ಇಂತಹ ಶಿವಯೋಗಿ ಪುಂಗವರು ವೀರಶೈವರಾಗಿದ್ದರೆಂದು ಬೇರೆ ಹೇಳಬೇಕೆ?

ಇನ್ನು ಉಕ್ತ ಗ್ರಂಥದಲ್ಲಿ ಐದನೆಯದಾಗಿ ಜ್ಞಾನಪ್ರತಿಪಾದನಸ್ಥಲವು ಬರುತ್ತದೆ. ಇದು ನಿಜಕ್ಕೂ ಉಪನಿಷದ್ರಹಸ್ಯವನ್ನು ವಿವಿಧ ಶಾಸ್ತ್ರಪ್ರಕ್ರಿಯೆಗಳಿಂದ ಮುಮುಕ್ಷುಗಳ ಅನುಭವಗಮ್ಯವೆನಿಸುವಂತೆ ಪ್ರತಿಪಾದಿಸಿದ್ದಾರೆ, ಶ್ರೀ ನಿಜಗುಣರು. ಇಲ್ಲಿ ಅದ್ವೈತ ವೇದಾಂತದ ಅನುಭವಪೂರ್ಣವಾದ ವಿವೇಚನೆಯನ್ನು ಅತ್ಯಂತ ಸುಂದರವಾದ, ಸುಸ್ಪಷ್ಟ ವಾದ ಪರಿಭಾಷೆಯಲ್ಲಿ ಗೈದಿದ್ದಾರೆ. ಆದರೆ ಇಲ್ಲಿಯೂ ಕೂಡ ಅವರು ಶಿವಯೋಗದ ಬಗೆಗಿನ ತಮ್ಮ ಅಗಾಧ ಪ್ರೇಮವನ್ನು ಪ್ರಸಂಗಾನುಸಾರ, ಅದ್ವೈತ ಪ್ರಕ್ರಿಯೆಗೆ ಚ್ಯುತಿ ಬಾರದ ಹಾಗೆ ಅಭಿವ್ಯಕ್ತಗೊಳಿಸಿದ್ದಾರೆ! "ನಂಬು ಜ್ಞಾನವನೆ ಕರ್ಮವೆಂಬ ಜಾಲದೊಳು ಸಿಲುಕಿ| ಹಂಬಲಿಸದಿರು ಮುಕ್ತಿಯಂ ಬಯಸಿ ಮನುಜನೇ||" ಎಂಬುದು ಜ್ಞಾನದ ಶ್ರೇಷ್ಠತೆಯನ್ನು ಎತ್ತಿ ತೋರಿಸುವಂತೆಯೆ, ಜಡಕರ್ಮ ಮಾರ್ಗವನ್ನು ನಿರ್ದಾಕ್ಷಿಣ್ಯವಾಗಿ

ನಿರಾಕರಿಸುತ್ತದೆ. ಆದರೆ, ಇಲ್ಲಿ ಶುಷ್ಕಜ್ಞಾನವೂ ಕೂಡ ಅಷ್ಟೇ ನಿಂದನೀಯವೆಂಬುದನ್ನು ಮರೆಯಲಾಗದು. ನಿಜಗುಣರಂತಹ ಶಿವಯೋಗಿಶ್ರೇಷ್ಠರು ಲಿಂಗಾಂಗ ಸಾಮರಸ್ಯಜ್ಞಾನವನ್ನೇ ಇಲ್ಲಿ ಸ್ತುತಿಸಿದ್ದಾರೆಂದು ಹೇಳಬೇಕಾಗುತ್ತದೆ. "ಆವ ಪುಣ್ಯದ ಫಲವಿದೆಂದು ಕುರುಹಿಡಲಹುದು| ಜೀವಭಾವವನುಳಿದ ನಿಜನಿಷ್ಠೆಯ||" ಎಂಬ ಆನಂದೋದ್ಗಾರವು ನಿಜಕ್ಕೂ ಷಟ್‌ಸ್ಥಲ ಮಾರ್ಗದ ಯಥಾರ್ಥ ನಿಲವನ್ನೇ ನಿರೂಪಿಸುತ್ತದೆ. ಶ್ರೀಗುರು ಸ್ವಾಮಿ ಹಸ್ತಮಸ್ತಕ ಸಂಯೋಗ ಪ್ರಕ್ರಿಯೆಯ ಪರುಷ ಪ್ರಭಾವದಿಂದ ಶಿಷ್ಯನ ಚಿತ್ಕಳೆಯನ್ನೇ ವೇಧಾದೀಕ್ಷೆಯಿಂದ ಭಾವಸ್ಥಲಕ್ಕೆ ಇಳುಹಿ, ಮಂತ್ರದೀಕ್ಷೆಯಿಂದ ಮನಃಸ್ಥಲಕ್ಕೆ ಬರಿಸಿ, ಕ್ರಿಯಾದೀಕ್ಷೆಯಿಂದ ಕರಸ್ಥಲಕ್ಕೆ ಇಳುಹಿಕೊಡುತ್ತಾನೆ. ಆ ಚಿತ್ಕಳೆಯೇ ಕರಸ್ಥಲ ಜ್ಯೋತಿ; ಕರಸ್ಥಲಬ್ರಹ್ಮ. ಅದರ ವಿದ್ಯುತ್ಸಂಸ್ಪರ್ಶದಿಂದ ಮಾಂಸಮಯಪಿಂಡ ಹೋಗಿ ಮಂತ್ರಮಯ ಕಾಯವಾಗುತ್ತದೆ; ಅಂಗಕರಣಗಳೆಲ್ಲಾ ಲಿಂಗಕರಣಗಳಾಗುತ್ತವೆ; ಜೀವ ಭಾವ ತೊಲಗಿ ಶಿವಭಾವವು ಅಳವಡುತ್ತದೆ; ಅರ್ಥಾತ್, ಅಂಗಭಾವವು ಅಳಿದು ಲಿಂಗ ಭಾವವು ಅಳವಡುತ್ತದೆ. ಇದು ನಿಜಕ್ಕೂ ಧನ್ಯತೆಯ ಭಾವವಾಗಿದೆ. ಇದನ್ನೇ ಇಲ್ಲಿ "ಆವ ಪುಣ್ಯದ ಫಲ... ||" ಎಂದು ಮುಂತಾಗಿ ಶ್ರೀ ನಿಜಗುಣರು ಉದ್ಗಾರರೂಪದಿಂದ ಪ್ರಕಟಪಡಿಸಿದ್ದಾರೆ. ನಿಜಕ್ಕೂ, ಅವರ ವೈಶಿಷ್ಟ್ಯವಿರುವದೇ ಸುಂದರ ಸಮನ್ವಯದಲ್ಲಿ ಇಲ್ಲಿ ಸಿದ್ಧಾಂತದ ಮನೋಜ್ಞವಾದ ಸೌಗಂಧವು ವೇದಾಂತದ ಮನೋಹರವಾದ ಪರಿಮಳದೊಡನೆ ಬೆರೆದು ಅಲೌಕಿಕವಾದೊಂದು ಮೆರಗನ್ನುಂಟು ಮಾಡಿದೆ.

ಮನಃಶಾಸ್ತ್ರದ ದೃಷ್ಟಿಯಿಂದ ಇಲ್ಲಿ ಶ್ರವಣವೇ ಇಷ್ಟಲಿಂಗಾರ್ಚನವಾಗಿದೆ ಎಂದೂ, ಮನನವೇ ಪ್ರಾಣಲಿಂಗಾನುಸಂಧಾನವಾಗಿದೆಯೆಂದೂ, ನಿದಿಧ್ಯಾಸನವೇ ಭಾವಲಿಂಗಾನುಸಂಧಾನದಿಂದ ಹೊರಹೊಮ್ಮಿದ ಅನುಭಾವವಾಗಿದೆಯೆಂದೂ ಹೇಳಲು ಯಾವ ಅಭ್ಯಂತರವೂ ಇಲ್ಲ; ಜ್ಞಾನಪ್ರತಿಪಾದನ ಸ್ಥಲದಲ್ಲಿ ಬರುವ ನಿದಿಧ್ಯಾಸನಾಂತರ್ಗತ ಮೂರು–ನಾಲ್ಕು ಹಾಡುಗಳು ಬಹುಮಹತ್ತದವಾಗಿವೆ. ಶ್ರೀ ನಿಜಗುಣ ಪ್ರಭುಗಳು ಅದ್ವೈತದ ಪರಾಕಾಷ್ಠ ಪರಮಾನುಭೂತಿಯ ಪವಿತ್ರ ಸ್ಥಿತಿಯನ್ನು ಬಹು ತನ್ಮಯತೆಯಿಂದ ವಿವರಿಸುವಾಗಲೂ, ಅದೆಂತು ತಮ್ಮ ಶಿವಯೋಗಾನುಭವದ ಶ್ರೀಮಂತಿಕೆಗೆ ಅಭಿವ್ಯಕ್ತಿ ನೀಡಿದ್ದಾರೆಂಬುದು ನಿಜಕ್ಕೂ ಅವರ ವೀರಶೈವತ್ವಕ್ಕೆ ಹಿಡಿದ ರನ್ನಗನ್ನಡಿಯಾಗಿದೆ. ಕೆಳಗಿನ ವಾಕ್ಯಗಳನ್ನು ಇಲ್ಲಿ ಗಮನಿಸಬಹುದು:

೧) "ಶ್ರೀ ಗುರುವೆ ಶರಣು ಶಿವಯೋಗ ಸಂಪದವನೆನ| ಗಾಗುಮಾಡಿದ ನಿಜ ವಿರಾಗಿಜನವಂದ್ಯ||"

೨) "ಬೇರೊಂದು ಯೋಗದೊಳು ಬಳಲದೆ ಆನಂದವನೆ| ಸೂರೆಗೊಡುವ ಆತ್ಮ ನಿಜನಿಷ್ಠರಾಗಿರಿರೋ||"

೩) "ಗುರುವೆ ನಿಮ್ಮಯ ಕರುಣದೊಳೆನ್ನ ತತ್ವ| ದಿರವನರಿದು ನಿತ್ಯ ಸುಖಿಯಾದೆ||"

ಇವುಗಳಲ್ಲಿ ಮೊದಲನೆಯದು ನೇರವಾಗಿ ಶಿವಯೋಗ ಸಂಪತ್ತೆಂಬ ವೀರಶೈವ ಪಾರಿಭಾಷಿಕ ಪದವನ್ನೇ ಬಳಸಿದೆ. ನಿದಿಧ್ಯಾಸನದಿಂದ ಅರ್ಥಾತ್ ಭಾವಲಿಂಗಾನುಸಂಧಾನ ದಿಂದ ಜನಿಸುವ ಪರಮಾನುಭವವೇ ಇಲ್ಲಿ ಶಿವಯೋಗ ಸಂಪತ್ತು. ವಿರಕ್ತರಿಂದಲೂ ಸಹ ಪೂಜೆಗೊಳ್ಳಲು ಯೋಗ್ಯನಾದ ಮೋಕ್ಷಗುರು (ಜ್ಞಾನ-ಅಥವಾ ಅನುಭವಗುರು)ವಿನ ಉಪಕಾರ ಸ್ಮರಣೆಯ ರೂಪದಿಂದ ಆ ದಿವ್ಯಾನುಭೂತಿಯ ಆನಂದಾವಿರ್ಭಾವವು ಇಲ್ಲಿ ಶಿವಯೋಗಿ ಪುಂಗವರಿಂದ ಬಹು ಚನ್ನಾಗಿ ಅಭಿವ್ಯಕ್ತಗೊಂಡಿದೆ. ಹೀಗಿರುವದರಿಂದ ಕೊನೆಯಲ್ಲಿ ಬಳಲಿಕೆಯೊಂದನ್ನೇ ಪ್ರತಿಫಲವಾಗಿ ನೀಡುವ ಬೇರೆ ಬೇರೆ ಯೋಗಗಳ ವ್ಯರ್ಥ ಸಾಧನೆಯಲ್ಲಿ ಸ್ವಶಕ್ತಿ-ಸಮಯಗಳ ಹ್ರಾಸಮಾಡಿಕೊಳ್ಳದೆ, ಸುಲಭವಾಗಿ, ನಿಶ್ಚಯವಾಗಿ ಲಿಂಗಾಂಗಸಾಮರಸ್ಯವೆಂಬ ಶಿವಜೀವರೈಕ್ಯರೂಪ ಶಿವಯೋಗ ಸಂಪತ್ತನ್ನು ಒದಗಿಸಿ ಕೊಡುವ ಶಿವಯೋಗವನ್ನೇ ಅಂಗೀಕರಿಸಲು ಇಲ್ಲಿ ಸಾಧಕರಿಗೆ ಸಂದೇಶವಿದೆ. ಆತ್ಮನಿಜ ನಿಷ್ಠೆ ಅರ್ಥಾತ್ ಲಿಂಗನಿಷ್ಠೆಯೇ ಶಿವಯೋಗದ ಜೀವಜೀವಾಳ. ಅದು ನಿಜಕ್ಕೂ ಆನಂದವನ್ನೇ ಸೂರೆಗೊಳ್ಳುತ್ತದೆ, ಮೂರನೆಯ ವಾಕ್ಯವು ಸಾಧನೆಯ ಎಲ್ಲ ಹಂತ ಗಳಲ್ಲೂ ಗುರುಕರಣವು ಇದ್ದೇ ಇರುತ್ತದೆಂಬುದನ್ನು ಎತ್ತಿ ತೋರಿಸುತ್ತದೆ. ಹೀಗೆ ಶ್ರೀ ನಿಜಗುಣರ ಈ ಬಗೆಯ ಶಿವಯೋಗ ನಿಷ್ಠೆ ಹಾಗೂ ಗುರುಕರುಣದ ಮಹಿಮೆಯಲ್ಲಿ ಅವರಿಟ್ಟಿರುವ ಅಪಾರಶ್ರದ್ಧೆ, ಅವರು ವೀರಶೈವರೆಂಬುದಕ್ಕೆ ಪ್ರಬಲ ಸಾಕ್ಷಿಗಳಾಗಿವೆ.

ಇಷ್ಟೇ ಅಲ್ಲ, ಎಲ್ಲ ವೇದಾಂತ ಗ್ರಂಥಗಳಲ್ಲಿ ಬರುವಂತೆ "ಕೈವಲ್ಯ ಪದ್ಧತಿ"ಯ ಕೊನೆಯಲ್ಲಿ ಜೀವನ್ಮುಕ್ತರ ವಿಷಯವು ಬರುತ್ತದೆ. ಇಲ್ಲಿ ಶ್ರೀ ನಿಜಗುಣರು ಶಿವಾಗ ಮೋಕ್ತ ವೀರಶೈವದ ಪರಿವಿಡಿಗನುಗುಣವಾಗಿ ಜೀವನ್ಮುಕ್ತ ಮಹಾಜ್ಞಾನಿಯನ್ನು ಶಿವಯೋಗಿ, ಯತಿ ಮತ್ತು ಶರಣ ಎಂದು ಕರೆದಿದ್ದಾರೆ. "ಆವ ಬಾಧೆಯನುಂಟು ಮಾಡಬಹುದು ಅಖಿಳ ಭೋ| ಗಾವಲಂಬನದೊಳಿರೆ ಶಿವಯೋಗಿಗೆ||" ಎಂಬ ಯಥಾರ್ಥ ಬೋಧೆಯಲ್ಲಿ ಬರುವ "ಶಿವಯೋಗಿ" ಎಂಬ ಪದಪ್ರಯೋಗದತ್ತ ಗಮನಹರಿಸ ಬೇಕು. ಇಷ್ಟೇ ಅಲ್ಲ, "ಕೈವಲ್ಯ ಪದ್ಧತಿ"ಗೆ ಕಳಸಪ್ರಾಯವಾಗಿರುವ ಅಂತಿಮ ಹಾಡು ಸಾಮಾನ್ಯರಿಗೆ ಬರಿಯ ಮಂಗಳಾರತಿಯ ಪದವಾಗಿ ಕಂಡರೂ, ಅದರ ಅರ್ಥ ವೈಭವದ ಬೃಹತ್ತು-ಮಹತ್ತುಗಳು ಅಪರಂಪಾರವಾಗಿವೆ; ಅದರಲ್ಲಿಯ ಅನುಭವೈಕ ಗಮ್ಯವಾದ ಶಿವಯೋಗ ಸಾರಸಂಪತ್ತಿನ ಅಪಾರತೆ ಅಗಾಧವಾಗಿದೆ. "ಮೋಕ್ಷ ಚಿಂತಾ ಮಣಿಯೆನಿಸುವ ಶಂಭುಲಿಂಗವೇ ತಾನಾದ ವಿಮಲ ಪರಂಜ್ಯೋತಿಯು" ಹೊರಹೊಮ್ಮಿ ಬರುವ, ಹರಡುವ ಈ ಅನನ್ಯ ಸ್ಥಿತಿಗೆ ಮೂಲಯಾವುದು? ಶ್ರೀ ನಿಜಗುಣರು ಹೇಳು ತ್ತಾರೆ-ಶಿವಧರ್ಮನಾಳವೆಂಬ ಕಂಭದ ಮೇಲೆ ಓರಣವಾಗಿರಿಸಿದ ಸುವಿವೇಕ ಹೃದಯಾಬ್ಜ ಪಣತೆಯಿಂದ ಅದು ಹೊರಹೊಮ್ಮಿ ಎಲ್ಲೆಡೆಯಲ್ಲೂ ನಿರಭ್ರ ಆಕಾಶದ ಪೂರ್ಣಚಂದ್ರನ ಚೆಂಬೆಳಕಿನಂತೆ ಚೆಲ್ಲಿದೆ. ಅದರಲ್ಲಿ ಸದ್ಭಕ್ತಿ ರಸತೈಲವು ತುಂಬಿದೆ. ಅದರಲ್ಲಿ ಅದ್ದಿ ತೊಯ್ದು ಆರ್ದ್ರವಾದ ಪ್ರವಿಮಲ ಚಿತ್ಕಳೆಯೇ ಬತ್ತಿ! ಅದರಿಂದಲೇ ಈ ದಿವ್ಯ

ವಿಮಲ ಪರಂಜ್ಯೋತಿ ಕೋಟಿರತ್ನಗಳ ಶೀತಲ ಕಾಂತಿಯಂತೆ ಹೊರಹೊಮ್ಮಿ ಶಿವ ಯೋಗಿಗಳ ಮುಖಮಂಡಲವನ್ನು ಬೆಳಗಿದೆ. ಇಂತಹ ಸುಂದರವಾದ ರೂಪಕದಲ್ಲಿ ಹಾಡಿರಬೇಕಾದರೆ, ಶ್ರೀನಿಜಗುಣರು ವೀರಶೈವರೆ ಆಗಿದ್ದರೆಂಬುದು ಸಹಜವೇ ಏರ್ಪಡುತ್ತದೆ.

ಶಿವಾಗಮಗಳು ವೀರಶೈವಧರ್ಮದ ಮೂಲ ಆಕರಗಳಾಗಿವೆ. ಅವುಗಳಲ್ಲಿ ಕ್ರಿಯಾ ಪಾದ, ಚರ್ಯಾಪಾದ, ಯೋಗಪಾದ ಮತ್ತು ಜ್ಞಾನಪಾದಗಳೆಂಬ ನಾಲ್ಕು ಭಾಗಗಳು ಬರುತ್ತವೆ. "ಕೈವಲ್ಯ ಪದ್ಧತಿ"ಯಲ್ಲಿ ಬರುವ ವಿಷಯವಿಂಗಡಣೆಯ ವಿನ್ಯಾಸವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಶಿವಕಾರುಣ್ಯ, ಜೀವ–ಸಂಬೋಧನ, ನೀತಿ–ಇವು ಗಳನ್ನು ಪ್ರಾಸ್ತಾವಿಕವೆಂದು ಪರಿಗಣಿಸಿದರೆ, ಕ್ರಿಯಾಪಾದ, ಚರ್ಯಾಪಾದ, ಯೋಗ ಪಾದ ಮತ್ತು ಕೊನೆಯದಾದ ಜ್ಞಾನಪಾದಗಳ ರೂಪದಲ್ಲಿಯೇ ರಚನೆಗೊಂಡಿವೆ. ನೀತಿ ಕ್ರಿಯಾಚರ್ಯಸ್ಥಲದಲ್ಲಿ ಕ್ರಿಯಾಪಾದ ಮತ್ತು ಚರ್ಯಾಪಾದಗಳು ಬರುತ್ತವೆ. ಯೋಗ ಪ್ರತಿಪಾದನ ಮತ್ತು ಜ್ಞಾನ ಪ್ರತಿಪಾದನ ಸ್ಥಲಗಳು ಕ್ರಮವಾಗಿ ಯೋಗಪಾದ ಹಾಗೂ ಜ್ಞಾನ–ಪಾದಗಳೇ ಆಗಿವೆ. ಹೀಗೆ ಶಿವಾಗಮಗಳ ಪರಿವಿಡಿಗೆ ಅನುಗುಣವಾಗಿ ತಮ್ಮ ಇಡೀ ಗ್ರಂಥದ ರಚನಾವಿನ್ಯಾಸವನ್ನು ಸಂಯೋಜಿಸಿರುವ ಶ್ರೀ ನಿಜಗುಣರು ನಿಃಸಂಶಯ ವಾಗಿಯೂ ವೀರಶೈವರು. ಆದ್ದರಿಂದ ಅವರ ಅಮರಕೃತಿಗಳಲ್ಲಿ ವೀರಶೈವದರ್ಶನ ಪ್ರಜ್ಞೆ ಹಾಸುಹೊಕ್ಕಾಗಿದೆ.

ವಿದ್ವಾಂಸರು ಶ್ರೀ ನಿಜಗುಣರ ಕೃತಿಗಳಲ್ಲಿ "ಕೈವಲ್ಯ ಪದ್ಧತಿ" ಮತ್ತು "ವಿವೇಕ ಚಿಂತಾಮಣಿ" ಎಂಬೆರಡೂ ಅವರ ಸ್ವಂತ ಕೃತಿಗಳೆಂದು ಹೇಳಿರುವದನ್ನು ಈ ಸಂದರ್ಭ ದಲ್ಲಿ ಸ್ಮರಿಸಿಕೊಳ್ಳಬೇಕು. ಅವೆರಡರಲ್ಲಿ ಅವರ ಸ್ವಾನುಭಾವದ ಸೌಗಂಧವನ್ನು ಸೂಸು ತ್ತಿರುವ "ಕೈವಲ್ಯ ಪದ್ಧತಿ"ಯಲ್ಲಿ ಬರುವ ಆಧಾರ ವಾಕ್ಯಗಳಿಂದ ಅವರು ಕಟ್ಟಾ ವೀರಶೈವ ರಾಗಿದ್ದರೆಂಬುದನ್ನು ಇಲ್ಲಿಯವರೆಗೆ ನೋಡಿಕೊಂಡೆವು. ಈಗ ಅವರ ಇನ್ನೊಂದು ಸ್ವತಂತ್ರ ಮೇರು ಕೃತಿಯಾದ "ವಿವೇಕ ಚಿಂತಾಮಣಿ"ಯಲ್ಲಿಯ ವಾಕ್ಯಗಳನ್ನು ನೋಡಿ ಕೊಳ್ಳುವದು ಪ್ರಸ್ತುತ ಅಧ್ಯಯನಕ್ಕೆ ತೀರ ಅಗತ್ಯವಾಗಿದೆ. "ವಿವೇಕ ಚಿಂತಾಮಣಿ"ಯ ಪ್ರಾರಂಭದಲ್ಲಿಯೇ ಬರುವ "ಶ್ರೀಮದನೇಕ ಭುವನಭವನಾರಂಭಮೂಲಸ್ತಂಭರೂಪ ಶಂಭುಲಿಂಗವಾದಿಯಾಗಿ ನಿರಾಭಾರಿ ದೇಶಿಕೋತ್ತಮ ಪರ್ಯಂತ ಮಹಾಗುರುಪರಂಪರೆಗೆ ಮನೋವಾಕ್ಕಾಯಂಗಳಿಂದಭಿವಂದಿಸಿ .." ಎಂಬ ಮಾತು ಒಬ್ಬ ವೀರಶೈವಮಹಾಕವಿ ಮಾತ್ರ ಹೇಳಬಹುದಾದಂತಹ ಅಭಿಪ್ರಾಯವನ್ನು ಸೂಚಿಸುತ್ತಿದೆಯೇ ವಿನಾ ಅನ್ಯಥಾ ಕಲ್ಪಿಸಲು ಅವಕಾಶವೇ ಇಲ್ಲ. 'ಶಂಭುಲಿಂಗ' ಎಂಬುದು ಪರಶಿವನನ್ನು ಸೂಚಿಸುವದರ ಜೊತೆಗೆ, ಆ ಪರಶಿವಸ್ವರೂಪನೇ ಆದ ಪರಮಗುರುವನ್ನೂ ಸೂಚಿಸುತ್ತದೆ. 'ನಿರಾಭಾರಿ' ಮತ್ತು 'ದೇಶಿಕ' ಶಬ್ದಗಳಂತೂ ಮಹಾವಿರಕ್ತರಾದ ಗುರುವರ್ಯನನ್ನು ನಿರ್ದೇಶಿಸುತ್ತದೆ. ಈ ಎಲ್ಲ ಪದಗಳೂ ವೀರಶೈವ ಪರಿಭಾಷೆಯಲ್ಲಿಯೇ ಬಂದಿರುವಂತಹವು. ಈ ಗ್ರಂಥದಲ್ಲಿ

೬೮೭

"....ದಶೋಪನಿಷತ್ತುಗಳಲ್ಲಿ ಜ್ಞಾನಾಂಗಮಾದ ಭಸ್ಮರುದ್ರಾಕ್ಷಾದಿಗಳು ಬ್ರಹ್ಮಜ್ಞಾನಾದಿ ಕಮಂ ವಿವರಿಸುತಿರ್ಕುಂ" ಎಂದು ಹೇಳುವಾಗ ಶ್ರೀ ನಿಜಗುಣರು ವೀರಶೈವಕ್ಕೆ ಅಗತ್ಯ ಗಳಾದ ಅಷ್ಟಾವರಣಾದಿಗಳ ವಿವೇಚನೆಯನ್ನು ಸಾಧಾರವಾಗಿ ಮಾಡಿದ್ದಾರೆ. "ಶಿವ ಜೀವೈಕ್ಯ ಜ್ಞಾನಪ್ರದನೇ ಕಾರಣಗುರು, ಸಂಶಯ ನಿರಸನ ದ್ವಾರದಿಂ ನಿತ್ಯ ಮುಕ್ತಿ ಪ್ರದನೆ ವಿಹಿತ ಗುರುವಕ್ಕುಂ" ಎಂಬಲ್ಲಿ ಮೋಕ್ಷ ಗುರುವಿನ ಶ್ರೇಷ್ಠತೆಯನ್ನು ಅವರು ಎತ್ತಿ ಹೇಳಿದ್ದಾರೆ. ಇದು ಅವರ ವೀರಶೈವತ್ವವನ್ನು ಉದ್ಘೋಷಿಸುತ್ತದೆ.

"ವಿವೇಕಚಿಂತಾಮಣಿ"ಯಲ್ಲಿ ಶ್ರೀ ನಿಜಗುಣರ ವೀರಶೈವತ್ವವನ್ನು ಪ್ರಕಟವಾಗಿ ಪ್ರತಿಪಾದಿಸುವ ಹಲವಾರು ಆಧಾರ ವಾಕ್ಯಗಳು ಸಿಕ್ಕುತ್ತವೆ. ಅವುಗಳಲ್ಲಿ ಕೆಲವನ್ನು ಕೆಳಗೆ ಕೊಟ್ಟಿರುತ್ತದೆ:

೧) "ಬಳಿಕ 'ತತ್ ತ್ವಂ ಅಸಿ' ಎಂಬ ಪದತ್ರಯಕ್ಕೆ ಕ್ರಮದಿಂ ಶಿವಜೀವ ಅರ್ಥ ಮಹುದಾಗಿ ಶಿವಜೀವ ಲಿಂಗಾಂಗ ಸಂಗೋಪಾದಿಭಂಗ ಚಿನ್ಮಾತ್ರಕೈವಲ್ಯವೆಂಬ ಸಿದ್ಧಾಂತಾ ರ್ಥವೇ ನಿರ್ಧರಿಸಲಕ್ಕುಂ". ಇಲ್ಲಿ ಬರುವ ಲಿಂಗಾಂಗ ಸಾಮರಸ್ಯಜ್ಞಾನವು ವೀರಶೈವ ದಲ್ಲಿಯದೇ. ಇದು ಬೇರೆ ಸಿದ್ಧಾಂತಗಳಲ್ಲಿ ಕಂಡುಬರಲು ಸಾಧ್ಯವೆ? ಇಲ್ಲಿ 'ಸಿದ್ಧಾಂತಾರ್ಥ' ಎಂಬ ಪದಪ್ರಯೋಗವನ್ನು ತೀವ್ರವಾಗಿ ಗಮನಿಸಬೇಕು.

೨) "ಏಕೋ ಹ ವೈ ಏಕೋ ರುದ್ರಃ, ಏಕಮೇವಾದ್ವಿತೀಯಂ, ಶಿವಮದ್ವೈತಂ ಚತುರ್ಥಂ" –ಇವೇ ಮೊದಲಾದ ಶ್ರುತಿ ವಾಕ್ಯಗಳನ್ನು ಉದಾಹರಿಸಿ ಶಿವಾದ್ವೈತವನ್ನು ಸ್ಥಾಪಿಸಿದ ಶ್ರೀ ನಿಜಗುಣರು ವೀರಶೈವರಲ್ಲದಿದ್ದರೆ ಬೇರಾರಾಗಿರಲು ಸಾಧ್ಯ?

೩) ತತ್ವಾರ್ಥವನ್ನು ವಿವೇಚಿಸುವ ಪ್ರಸಂಗದಲ್ಲಿ ಶಿವಲಿಂಗವೇ ತತ್‌ಪದಾರ್ಥ ವೆಂದೂ, ಜೀವಲಿಂಗ ಅಥವಾ ಅಂಗವೇ ತ್ವಂ ಪದಾರ್ಥವೆಂದೂ ಒತ್ತಿ ಹೇಳಿದ್ದಾರೆ. ಇಲ್ಲಿ ಶ್ರೀ ನಿಜಗುಣರು "ದೃಢತರಮಾಗಿ ಪ್ರಮಾಣಿಸೆ ಸಿದ್ಧಾಂತಮಕ್ಕುಂ" ಎಂದು ಹೇಳಿರುವ ದನ್ನು ನಾವು ಲಕ್ಷ್ಯಪೂರ್ವಕವಾಗಿ ಗಮನಿಸಬೇಕು.

೪) ಇದೇ ಪ್ರಕರಣ ಪ್ರಸಂಗದಲ್ಲಿ ಪ್ರತಿಪಾದಿಸಿದ ಇನ್ನೂ ಒಂದು ಮಾತು ಅತ್ಯಂತ ಗಮನಾರ್ಹ. ಪರಬ್ರಹ್ಮವಾದ ಶಿವನನ್ನು 'ನಿರ್ಗುಣಲಿಂಗ'ವೆಂದು ವೇದಾಂತ ವಾಕ್ಯವು ಪ್ರತಿಪಾದಿಸುತ್ತದೆಂದು ಹೇಳಿರುವದು ವೀರಶೈವವೇ ಆಗಿದೆ.

೫) "ಜೀವನ್ಮುಕ್ತನು ಲೌಕಿಕನಪ್ಪುದರಿಂ ಪ್ರಾರಬ್ಧದ ತವಕದಿಂ ವಿದ್ವದವಸ್ಥೆ ಯೊಳು ಇರ್ದಡುಂ, ಮಾರುತನಿಂದ ಆಶ್ರಿತ ಗಗನಪಟಲ ಮೇಘನಂತೆ ನಿತ್ಯ ನಿರ್ಮಾಲನಪ್ಪಂ" ಎಂಬ ಮಾತು ಶರಣಸ್ಥಲಕ್ಕೇರಿದ ಮಹಾಮಹಿಮನಾದ ಶರಣನಿಗೂ ಶಿವಯೋಗಿಗೂ ಅತ್ಯಂತ ಸಮಂಜಸವಾಗಿ ಅನ್ವಯಿಸುತ್ತದೆ.

ಟಿಪ್ಪಣಿ: ಮೇಲೆ ಉದಾಹರಿಸಿದ ಎಲ್ಲ ಮಾತುಗಳೂ "ವೇದಾಂತ ಪ್ರಕರಣ" ವೆಂದು ಪ್ರಸಿದ್ಧವಾದ, ಅದ್ವೈತ ವೇದಾಂತವನ್ನೇ ನಿರೂಪಿಸುವ ಮೂಲೋದ್ದೇಶ

ವನ್ನಿಟ್ಟು ರಚಿತವಾದ ೧ನೇ ಅಧ್ಯಾಯ (ಪರಿಚ್ಛೇದ)ದಲ್ಲಿಯೇ ಶ್ರೀ ನಿಜಗುಣರು ವೀರಶೈವಕ್ಕೆ ಸಂಬಂಧಿಸಿದಂತೆ ಹೇಳಿದವುಗಳಾಗಿವೆ. ಇನ್ನು ಅವರು ಎರಡನೇ ಪರಿಚ್ಛೇದ ದಲ್ಲಿ ವೀರಶೈವ ಸಿದ್ಧಾಂತವನ್ನೇ ಹೇಳುವ ಮುಖ್ಯ ಧ್ಯೇಯವನ್ನಿರಿಸಿಕೊಂಡಿರುವದರಿಂದ ಅಲ್ಲಿ ಅದೆಷ್ಟು ಪರಿಯಿಂದ ವೀರಶೈವವನ್ನು ಪ್ರತಿಪಾದಿಸಿರಬಹುದೆಂಬುದನ್ನು ಸಹಜ ವಾಗಿ ಊಹಿಸಬಹುದಾಗಿದೆ. ಅದೇನೇ ಇರಲಿ, ಶ್ರೀ ನಿಜಗುಣರ ಈ ದೃಢಧೋರಣೆ ಏನು ತೋರಿಸುತ್ತದೆಂದರೆ:—

ಅ) ಅವರು ವೀರಶೈವರಾಗಿದ್ದರು ಮತ್ತು

ಬ) ಅವರು ಸಮನ್ವಯಾಚಾರ್ಯ ಸಾರ್ವಭೌಮರಾಗಿದ್ದರು. ಇಲ್ಲಿ ಒಂದನೇ ಪ್ರಕರಣದಿಂದ ಇಂತಹ ಇನ್ನೂ ಅನೇಕ ಮಾತುಗಳನ್ನು ಎತ್ತಿಕೊಡಬಹುದು. ಲೇಖನ ವಿಸ್ತಾರದ ಭಯದಿಂದ ಹಾಗೆ ಮಾಡಿಲ್ಲ.

೬) "ವಿವೇಕಿಸಲು ಪ್ರಪಂಚದೊಳಗುತ್ತಮ ವಸ್ತುಗಳೆಲ್ಲದರಲ್ಲಿಯೂ ಶಿವಶಕ್ತಿಗಳ ಸಾನ್ನಿಧ್ಯಮಿಪ್ಪುದಾಗಿ ಜಗತ್ತೇ ಶಿವಲಿಂಗಾಕಾರಮಾದರು. ಪೂಜಾಧಿಷ್ಠಾನ ಬಿಂಬಗಳಲ್ಲಿ ಲಿಂಗಾಧಿಷ್ಠಾನವೇ ಮಹಾವಿಶೇಷವಾಗಿ ಶಿವಲಿಂಗಾರ್ಚನವೇ ಸರ್ವೋತ್ತಮವೆಂದು ನಿಗಮಾಗಮಂಗಳು ಸಾರುತಿರಲ್ಕೆ...." ಎಂದು ೨ನೇ ಪ್ರಕರಣದಲ್ಲಿ ಹೇಳಿದ ಮಾತು ಮನನೀಯವಾಗಿದೆ. ಇದರಲ್ಲಿ ಆಗಮಿಕ ಶೈವಧರ್ಮದ ಭೇದಗಳನ್ನೂ, ಅವಾಂತರಭೇದ ಗಳನ್ನೂ ಹೇಳಿ ವೀರಶೈವಧರ್ಮದ ಬಗೆಗೆ ವಿಶಿಷ್ಟವಾಗಿ ವಿವರಿಸಿದ್ದಾರೆ. ಶಿವಯೋಗದ ಮೊದಲು ಮೆಟ್ಟಿಲಾದ ಶಿವಲಿಂಗಾರ್ಚನೆಯ ಮಹತಿಯನ್ನು ಸಪ್ರಮಾಣವಾಗಿ ಹೇಳಿ ಶಿವಪೂಜೆಗೆ ಬೇಕಾಗುವ ಸಮಸ್ತ ಸಾಮಗ್ರಿಗಳನ್ನೂ, ಪೂಜಾಪರಿಕರಗಳನ್ನೂ ಬಹು ವಿವರವಾಗಿ ವಿವೇಚಿಸಿರುವದು ನಿಜಗುಣರ ವೀರಶೈವತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

೭) "ಜಗತ್ತಿನಲ್ಲಿ ವೀರಶೈವ ಚರಮ ಶರೀರಿ, ಸರ್ವೋತ್ತಮ ವ್ರತಿ, ಲೋಕ ಪಾವನನೆಂದು ಸಮಸ್ತ ಸಜ್ಜನರಿಂಕೊಂಡಾಡಲ್ಪಟ್ಟು ಜಗತ್ಪೂಜ್ಯನಪ್ಪಾತನೇ ವೀರಶೈವ ನಕ್ಕುಂ". ಇಂತಹ ವೀರಶೈವ ಪ್ರಶಸ್ತಿಯನ್ನು ವೀರಶೈವನಲ್ಲದವನು ಇಷ್ಟೊಂದು ಶಕ್ತಿ ಯುತವಾಗಿ ಮನದುಂಬಿ ಬರೆಯಲು ಸಾಧ್ಯವೇ? ಯೋಚಿಸಬೇಕು; ನಿಷ್ಪಕ್ಷಪಾತವಾಗಿ ನಿಷ್ಕರ್ಷಿಸಬೇಕು.

೮) "........ಇತರ ಶೈವರಂತೆ ಕ್ರಿಯಾಬಾಹುಲ್ಯದಿಂದಲ್ಪ ಫಲಮಂ ಪಡೆಯದೆ, ಅಲ್ಪಕ್ರಿಯೆಯಿಂದನಂತ ಫಲಮಂ ಪಡೆವಾತನಾಗಿ...." ಎಂದು ಹೇಳುವ ಶ್ರೀ ನಿಜಗುಣ ಯೋಗಿಗಳು, ತಾವು ಕಂಡುಂಡ ಸತ್ಯಾನುಭವವನ್ನೇ ಇಲ್ಲಿ ವೀರಶೈವದ ಶ್ರೇಷ್ಠತೆಯ ಬಗೆಗೆ ಬರೆದಿರುವರು.

೯) ವೀರಶೈವ ಪಂಚಸೂತಕಗಳನಳಿದು, ಪಂಚಾಚಾರನಿಷ್ಠನಾಗಿ, ಸ್ವತಂತ್ರ

ಶೀಲನಾಗಿ, ಹರ್ಷವಿಷಾದಗಳಿಗೆರಗದಾತನಾಗಿ ಶಾಂಭವವಿದ್ಯೆಯಲ್ಲಿ ರಮಿಸುವದರಿಂದ ಜಗತ್ಪೂಜ್ಯನು ಎಂದು ಶ್ರೀ ನಿಜಗುಣರು ಹೃದಯಾರೆ ಹೊಗಳಿ ಬರೆದಿದ್ದಾರೆ.

೧೦) ಗುರುಲಿಂಗ ಜಂಗಮರ ನಿಂದೆಯನ್ನು ಕೇಳಬಾರದು, ಕೇಳಿದರೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂಬ ವೀರಶೈವ ಕಟ್ಟಾಚಾರಗಳನ್ನೂ ಸ್ಪಷ್ಟವಾಗಿ ಕ್ರಮವರಿತು ವಿವೇಚಿಸುವಲ್ಲಿ ಶ್ರೀ ಶಿವಯೋಗಿಗಳ ವೀರಶೈವಾಚಾರನಿಷ್ಠೆ ವಿದಿತವಾಗುತ್ತದೆ.

೧೧) ವೀರಶೈವದ ವಿಶೇಷ ದೀಕ್ಷೆಯ ಕುರಿತು ವಿವರವಾಗಿ ಸಾದ್ಯಂತವಾಗಿ, ಸಾಧಾರವಾಗಿ, ಸಯುಕ್ತಿಕವಾಗಿ ವಿವರಿಸಿ ವೀರಶೈವರ ಲಿಂಗಪೂಜಾಕ್ರಮವನ್ನು ಹೇಳುವಾಗ "ವೀರಶೈವರೇ ಜಗತ್ತಿನ ಮಾನವರೊಳು ಶ್ರೇಷ್ಠತಮರಪ್ಪುದರಿಂ........"ಎಂದು ಹೇಳಿರಬೇಕಾದರೆ, ಶ್ರೀ ನಿಜಗುಣರ ವೀರಶೈವತ್ವವನ್ನು ಪ್ರಶ್ನಿಸುವವರಿಗೆ ಏನನ್ನಬೇಕೋ ತಿಳಿಯದು.

೧೨) ಇನ್ನೊಂದೆಡೆ ಜಗತ್ತಿನ ಪ್ರಾಣಿಗಳ ತಾರತಮ್ಯವನ್ನು ವರ್ಣಿಸುತ್ತ "ಷಟ್‌ಸ್ಥಲಜ್ಞಾನಿಯಾದ ವೀರಶೈವನೇ ಸರ್ವೋತ್ಕೃಷ್ಟನು" ಎಂದು ಹೇಳಿರುವದಲ್ಲದೆ, ಅವನಿಗೆ ಮೂರುಲೋಕಗಳಲ್ಲಿಯೂ ಯಾರೂ ಸರಿಯಾಗರು ಅವನೇ ಅಧಿಕತಮಪೂಜಾರ್ಹನು ಎಂದು ಬರೆದಿರುವ ಶ್ರೀ ನಿಜಗುಣರು ವೀರಶೈವರೇ ಆಗಿದ್ದರು.

೧೩) ಷಟ್‌ಸ್ಥಲ ವಿಷಯ, ನಿರಾಭಾರಿ ವೀರಶೈವರ ಲಕ್ಷಣ ಮೊದಲಾದ ಅತ್ಯಂತ ರಹಸ್ಯಮಯವಾದ ವೀರಶೈವ ತತ್ವಜ್ಞಾನದ ಮೂಲಭೂತ ತಿರುಳನ್ನು ತಮ್ಮ ಕಾಲಕ್ಕೆ ಪ್ರಚಲಿತವಿದ್ದ ಶೈವತತ್ವಜ್ಞಾನಕ್ಕನುಸರಿಸಿ ಇಷ್ಟೊಂದು ಸೂಕ್ಷ್ಮವಾಗಿ ಸಮನ್ವಯ ಮಾಡಿರುವ ಶ್ರೀ ನಿಜಗುಣರು ವೀರಶೈವರಾಗಿರದಿದ್ದರೆ ಸಾಧ್ಯವಾಗುತ್ತಿರಲಿಲ್ಲ.

ಹೀಗೆ, ಇನ್ನೂ ಅದೆಷ್ಟೋ ಸಂಗತಿಗಳು "ವಿವೇಕ ಚಿಂತಾಮಣಿ"ಯಲ್ಲಿ ಬರುತ್ತವೆ ಮತ್ತು ಅವೆಲ್ಲವುಗಳೂ ಸಹ ಶ್ರೀ ನಿಜಗುಣರು ಅಪ್ಪಟ ವೀರಶೈವರಾಗಿದ್ದರೆಂಬುದನ್ನೇ ದೃಢಪಡಿಸುತ್ತವೆ. ಅಲ್ಲದೆ, ಅದ್ವೈತ ವೇದಾಂತವನ್ನೇ ಪ್ರತಿಪಾದಿಸಲು ಹೊರಟ ಅವರ ಇನ್ನಿತರ ಗ್ರಂಥಗಳಲ್ಲಿ ಅಂದರೆ, ಪರಮಾರ್ಥಗೀತೆ, ಪರಮಾನುಭವಬೋಧೆ ಮತ್ತು ಅನುಭವಸಾರ ಎಂಬೀ ಗ್ರಂಥಗಳಲ್ಲಿಯೂ ಕೂಡ ವೀರಶೈವ ಪ್ರಕ್ರಿಯೆಗಳನ್ನು ಬಹು ನಯವಾಗಿ ಸೇರಿಸಿ ಸಮನ್ವಯಗೊಳಿಸಿದ್ದಾರೆ ಮತ್ತು ಹಾಗೆ ಮಾಡುವದರಿಂದ ಕೇವಲ ತಾತ್ವಿಕ ನಿಲವಿನಲ್ಲಿ ಮಾತ್ರ ಬಹು ಎತ್ತರದ ತತ್ವಜ್ಞಾನವಾಗಿ ಪರ್ಯವಸಾನಗೊಳ್ಳಬಹುದಾದ ಉಪನಿಷತ್ತುಗಳ ಪರಮ ತಾತ್ಪರ್ಯವನ್ನು ಸ್ವಾನುಭಾವದ ನಿಲವಿನಲ್ಲಿ ಪರ್ಯವಸಾನಗೊಳ್ಳುವಂತೆ ಮಾಡಿದ್ದಾರೆ, ಶ್ರೀ ನಿಜುಗುಣ ಪ್ರಭುಗಳು! ಇದು ಅವರ ಅಗಾಧ ಪಾಂಡಿತ್ಯ ಮತ್ತು ಸಮದರ್ಶಿತ್ವಕ್ಕೆ ಹಿಡಿದ ರನ್ನಗನ್ನಡಿಯಾಗಿದೆ. ಅಲ್ಲದೆ, ಅವರು ಗುರುಕೃಪೆಯಿಂದ ತಮ್ಮ ಜೀವನದುದ್ದಕ್ಕೂ ಬೆಳೆಸಿಕೊಂಡು ಬಂದಿರುವ ಸಮನ್ವಯಾತ್ಮಕ ಧೋರಣೆಗೂ ಇದು ಸಬಲ ಸಾಕ್ಷಿಯಾಗಿದೆ.

"ಶ್ರೀ ಯಾಜ್ಞವಲ್ಕ್ಯ ಮೈತ್ರೇಯಿಗೆ ಪೇಳ್ದುದ-| ನೊಯ್ಯಾರದಿಂದೆ ವರ್ಣಿಸುವೆನು||" ಎಂದು ಪ್ರತಿಜ್ಞೆ ಮಾಡ ಹೊರಟು, "ಮತಿಯುಂಟೆ ಜಡರಿಗದ್ವೈತವನರಿಯಲ್ಕೆ| ಸತಿ ನೀನೆ ಸುಕೃತಿ ಪೇಳ್ವೆನು ಕೇಳು||" ಎಂದು ಅದ್ವೈತವನ್ನು ಮೆಚ್ಚಿ ಪ್ರತಿಪಾದಿಸುವ ಉದ್ದೇಶವನ್ನು ಅಭಿವ್ಯಕ್ತಗೊಳಿಸಿದ ಶ್ರೀ ನಿಜಗುಣರು "ಪರಮಾನುಭವಬೋಧೆ"ಯ ಹಲವೆಡೆ ತಾವು ಶ್ರೇಷ್ಠಮಟ್ಟದ ವೀರಶೈವ ಶಿವಯೋಗಿಗಳೆಂಬುದಕ್ಕೆ ಹಲವು ಸ್ಪಷ್ಟ ಸೂಚನೆಗಳನ್ನು ನೀಡಿದ್ದಾರೆ. ಅವುಗಳನ್ನು ತೆರೆದ ಹೃದಯದಿಂದ ಸ್ವಾಗತಿಸುವದು ಸರ್ವ ನಿಷ್ಪಕ್ಷಪಾತಿಗಳಾದ ಸಹೃದಯ ವಿಮರ್ಶಕರ ಪವಿತ್ರ ಕರ್ತವ್ಯ. ಅವುಗಳಲ್ಲಿ ಕೆಲವನ್ನು ಕೆಳಗೆ ಕೊಟ್ಟಿದೆ—

೧) "ಶ್ರೀಗುರು ಶಂಭುಲಿಂಗದ ಪಾದ ಪಂಕಜ-| ವೀಗೆನ್ನ ಮತಿಗೆ ಮಂಗಳವನು||" ಎಂದು ಪ್ರಾರಂಭವಾಗುವ 'ಪರಮಾನುಭವಬೋಧೆ'ಯ ಇಷ್ಟದೇವತಾಸಂಪ್ರಾರ್ಥನೆ ಶ್ರೀ ನಿಜಗುಣರು ವೀರಶೈವರೆಂಬುದಕ್ಕೆ ಹೆಗ್ಗುರುತಾಗಿದೆ.

೨) "ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ| ಧಾಮಂಗೆ ಸತ್ಯಚಿದ್ರೂಪಂಗೆ|| ಕಾಮಿತಜನಕಲ್ಪ ಭೂಜಂಗೆ ಶಂಭುವಿಂ| ಗಾಮೋದದಿಂದೆ ವಂದಿಸುವೆನು||" ಎಂದು ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿ ಬರುವ ನಮಸ್ಕಾರರೂಪ ಮಂಗಳಾಚರಣೆ ಶ್ರೀ ನಿಜಗುಣರ ವೀರಶೈವತ್ವವನ್ನು ಪದೇ ಪದೇ ನೆನಪಿಗೆ ತಂದುಕೊಡುತ್ತದೆ.

೩) "ಈ ತನು ತಾನೆ ಮಮ್ಮಲಜಾತ||" ಎಂದು ಹೇಳುವಲ್ಲಿ ವೀರಶೈವದಲ್ಲಿ ಜೀವಾತ್ಮನ ಬಂಧಕ್ಕೆ ಹೇತುವೆನಿಸಿದ ಆಣವ, ಮಾಯೀಯ ಕಾರ್ಮಿಕ ಎಂಬ ತ್ರಿವಿಧ ಮಲಗಳ ಪರಿಕಲ್ಪನೆ ಬಂದಿದೆ. ಇದು ವೀರಶೈವರಾದ ಶ್ರೀ ನಿಜಗುಣರು ಮಾತ್ರ ಹೇಳಲು ಸಾಧ್ಯವಿದ್ದ ವೇದಾಂತ ಪ್ರಕ್ರಿಯೆ!

೪) ಶ್ರೀ ನಿಜಗುಣರು ಜೀವಪಂಚಕವನ್ನು ನಿರೂಪಿಸುವಾಗ "ಸದ್ಭಾವದಿಂದಾಲಿಸಿ ತಿಳಿ ನೀನು||" ಎಂದು ಬರೆದಿದ್ದಾರೆ. ಸದ್ಭಾವವು ವೀರಶೈವದ ಪ್ರಕಾರ ಐಕ್ಯಸ್ಥಲದ ಹಸ್ತ. "ಭಾವರಹಿತನಾದ ಪರಮಾತ್ಮ"ನನ್ನು ಅರಿತು ಅನುಭವಿಸುವ ಸಾಮರ್ಥ್ಯ ಸದ್ಭಾವಕ್ಕೆ ಮಾತ್ರವುಂಟು. ಶ್ರೀ ನಿಜಗುಣರ ವೀರಶೈವತ್ವಕ್ಕೆ ಇದು ಸಾಕಲ್ಲವೆ?

೫) ವೈರಾಗ್ಯ ಪಂಚಕವನ್ನು ಬೋಧಿಸುವಾಗ, ಶ್ರೀ ನಿಜಗುಣರು "ವಿದ್ಯೆಯೊಳ್ಕೂಡದವಿದ್ಯೆಯೊಳ್ಬೆರಸದೆ| ವಿದ್ಯಾವಿದ್ಯೆಗಳೆಂಬೆರಡರೊಳು|| ಪೊದ್ದದೆ ಪರತರಮಾಗಿ ತೋರುವ ಶುದ್ಧವಿದ್ಯೆಯಿಂದರಿ ನಿನ್ನನೆಲೆ ನೀನೆ||" ಎಂಬಲ್ಲಿ "ಶುದ್ಧವಿದ್ಯೆ'ಯೆಂಬ ಪದಪ್ರಯೋಗ ಮಾಡಿದ್ದಾರೆ. ಈ ಪದ ವೈದಿಕ ಸಾಹಿತ್ಯದಲ್ಲಿ ಹಗಲು ದೀವಟಿಗೆ ಹಿಡಿದುಕೊಂಡು ಹುಡುಕಿದರೂ ದೊರಕದು. ಇದರ ಯಥಾರ್ಥ ಮರ್ಮವನ್ನರಿದು ವೀರಶೈವನಾದವನು ಮಾತ್ರ ಬಳಸಬಲ್ಲನು.

೬) "ಸಗುಣ ಯೋಗ"ದಲ್ಲಿ ಯಮಾದಿ ಅಷ್ಟಾಂಗಯೋಗ ಮಾರ್ಗವನ್ನು

ನಿರೂಪಿಸುವಾಗ ಶ್ರೀ ನಿಜಗುಣರು ನಿಯಮಾಂಗದಲ್ಲಿ ದಶವಿಧಗಳನ್ನು ವಿವರಿಸಿದ್ದಾರೆ. ಅಲ್ಲಿ ಬರುವ ಈಶ್ವರಪ್ರಣಿಧಾನ ಎಂಬುದನ್ನು ಪತಂಜಲಿ ಹೇಳಿರುವಂತೆ ವಿವೇಚಿಸದೆ, ಅವರು ತಮ್ಮ ಶಿವಯೋಗಾನುಭವದ ಸುಪತ್ತುಸೂರೆಗೊಳ್ಳುವಂತೆ ಈ ಎರಡು ಸೂತ್ರ ಗಳನ್ನು ರಚಿಸಿದ್ದಾರೆ–"ಶಿವನೆ ತಾನೆಂದು ಮಾನಸದೊಳು ಪೂಜಿಸ–। ದವನಿಗೆ ಭವಬಂಧ ವಳಿವುದೆ॥", "ಮಾಡು ಶಿವಾರ್ಚನೆಯನು ಹೃದಯಬ್ಜದೊ–। ಳಾಡದೆ ಬೇರೊಂದು ಮತವನು॥". ಅವರು ಶಿವಾರ್ಚನೆಗೆ ಪರ್ಯಾಯ ಪದವಾಗಿ ಈಶ್ವರಪೂಜೆ ಎಂಬುದನ್ನು ಸೂಚಿಸಿದ್ದಾರೆ. "ಮಾಡು ಶಿವಾರ್ಚನೆಯನು......."ಎಂಬ ಸೂತ್ರವಂತೂ ಅವರ ಸಮನ್ವಯಾಚಾರ್ಯಸಾರ್ವಭೌಮತ್ವಕ್ಕೆ ಸಬಲಸಾಕ್ಷಿಯಾಗಿದೆ 'ಶಿವ' ಎಂಬುದಕ್ಕೆ ಪರ್ಯಾಯವಾಗಿ ಹರ, ಅರಿವು, ಚಿತ್ (ಚಿತ್ತು), ಪುರುಷ ಹಾಗೂ ಈಶ ಎಂಬ ಶಬ್ದ ಗಳನ್ನು ಬಹು ಮನೋಜ್ಞವಾಗಿ ಬಳಸಿದ್ದಾರೆ. ಅದು ಅವರ ಭಾಷಾ ಸಾಮರ್ಥ್ಯ ಪಾಂಡಿತ್ಯಪ್ರಭೆ, ವಿಷಯಪ್ರಭುತ್ವ, ವಿವೇಚನಾಶಕ್ತಿ, ಅನುಭವಸೂಕ್ಷ್ಮತೆಗಳನ್ನು ತೆರೆದು ತೋರಿಸುವಂತೆಯೆ, ಅವರಿಗಿರುವ ವೇದಾಗಮಗಳ ಸಮನ್ವಯೀಕರಣದ ಬಗೆಗಿನ ಪರಮ ಪ್ರೀತಿಯನ್ನೂ ನಿರ್ದೇಶಿಸುತ್ತದೆ. ಇದೆಲ್ಲವೂ ಅವರು ವೀರಶೈವ ಶಿವಯೋಗಿಪುಂಗವ ರಾಗಿದ್ದುದರ ಪರಮೋತ್ಕೃಷ್ಟ ಪುರಾವೆಯಾಗಿದೆ.

೭) ಸಮಾಧಿ ಅದೆಂತು ಸಿದ್ಧಿಸುವದೆಂಬುದನ್ನು ಪ್ರತಿಪಾದಿಸುವ ಪ್ರಕರಣ ಪ್ರಸಂಗದಲ್ಲಿ, ಶ್ರೀ ನಿಜಗುಣರು ಹೇಳುವ ಮಾತು ನಿಜಕ್ಕೂ ಅತ್ಯಂತ ಮನನೀಯ ವಾಗಿದೆ. "ವಿರತಿಯಿಲ್ಲದೆ ಶಂಭು ಪದಭಕ್ತಿ ಘಟಿಸದೆ। ಪರಮಜೀವೈಕ್ಯವನರಿಯದೆ॥ ವರಸಮೂಹಿತೆ ಸಿದ್ಧಿವಡೆಯದೆ ಸುಮ್ಮನೆ। ದೊರೆವುದೆ ನಿಜ ಮೋಕ್ಷವಿದು ಸತ್ಯ॥" ಎಂಬಲ್ಲಿ ನಿಜಮೋಕ್ಷ ಪ್ರಾಪ್ತಿಗೆ 'ಶಂಭು ಪದಭಕ್ತಿ'ಯೂ ಬೇಕೆಂದೂ ಅವರು ಹೇಳಿ ದ್ದಾರೆ, ಇದನ್ನು ವೀರಶೈವನಲ್ಲದವನು ಹೇಳಿರಲು ಶಕ್ಯವೆ?

೮) "ಕೇಳು ಬಳಿಕ ಪಂಚಯೋಗವಿವನು ಮಾಡ। ಲಾಳಲಹುದು ಮುಕ್ತಿಪದವನು॥" ಎಂಬ ಸೂತ್ರದಲ್ಲಿ ಇತರ ಗ್ರಂಥಕರ್ತೃಗಳಂತೆ ಮಂತ್ರ, ಲಯ, ಹಠ ರಾಜ ಎಂಬೀ ನಾಲ್ಕೇ ಯೋಗ ಪ್ರಕಾರಗಳನ್ನು ನಿರೂಪಿಸದೆ, ಶ್ರೀ ನಿಜಗುಣರು ಶಿವಯೋಗವನ್ನೂ ಸೇರಿಸಿ ಐದು ಪ್ರಕಾರಗಳನ್ನು ಹೇಳುವದರ ಮೂಲಕ ತಮ್ಮ ವೀರಶೈವತ್ವವನ್ನು ಪ್ರಕಟಿಸಿದ್ದಾರೆ.

೯) ಈ "ಪರಮಾನುಭವಬೋಧೆ"ಯ ಆರನೆಯ ಮತ್ತು ಕೊನೆಯ ಸಂಧಿ ಯಲ್ಲಿ ಗುರುಭೇದಗಳನ್ನು ವಿವರಿಸುವಾಗ ಶ್ರೀ ನಿಜಗುಣರು ಸೂಚಕ, ವಾಚಕ ಹಾಗೂ ಕಾರಕ ಎಂಬ ಭೇದತ್ರಯವನ್ನು ವಿಸ್ತೃತವಾಗಿ ವಿವೇಚಿಸಿದ್ದಾರೆ. ಈ ಮೂರೂ ಕೂಡ ವೀರಶೈವರ ದೀಕ್ಷಾಗುರು, ಶಿಕ್ಷಾಗುರು ಮತ್ತು ಮೋಕ್ಷ (ಜ್ಞಾನ–)ಗುರು ಎಂಬುದಕ್ಕೆ ಸಮಾನವಾಗಿವೆಯೆಂಬುದು ಸುಸ್ಪಷ್ಟ. ಇದೂ ಅವರ ವೀರಶೈವತ್ವವನ್ನು ಎತ್ತಿ ತೋರಿಸುತ್ತದೆ.

೧೦) ಉಪನಿಷತ್ಪ್ರತಿಪಾದಿತ ಅದ್ವೈತರಹಸ್ಯವನ್ನೇನಿರೂಪಿಸುವ ಗುರಿಹೊಂದಿದ ಈ "ಪರಮಾನುಭವ ಬೋಧೆ"ಯಲ್ಲಿ ಕೊನೆಯ ನಿರ್ಣಯವೆಂಬಂತೆ ಶ್ರೀ ನಿಜಗುಣರು "ಶಿವಭಕ್ತ್ಯಾಧಿಕ್ಯ"ವನ್ನು ಪ್ರತಿಪಾದಿಸುತ್ತಾರೆ. ಭಕ್ತಿ ಪಂಚಮಪುರುಷಾರ್ಥವೆಂದೂ, ಭಕ್ತಿಯೆ ಜ್ಞಾನಕ್ಕೆ ಜನನಿಯೆಂದೂ ನಂಬಿರುವ ವೀರಶೈವನು ಮಾತ್ರ ಹೀಗೆ ಹೇಳಲು ಸಾಧ್ಯ. ಈ ಸಂದರ್ಭದಲ್ಲಿ ಉಕ್ತವಾದ ಎರಡು ಸೂತ್ರಗಳು ಹೀಗಿವೆ: "ಭಕ್ತಿಮಾತ್ರ ವನು ಮಾಡಿದೊಡೆ ಕೇಳಂಗನೆ। ಮುಕ್ತಿಯು ನೊಲಿದೀವನೀಶನು॥", "ಸರ್ವವೆಲ್ಲವನು ಚಿದಾತ್ಮಭಾವನೆಗಂಡು। ಸರ್ವಸಮತ್ವದಿಂದಿರೆ ಭಕ್ತಿ॥" ಇಲ್ಲಿ ಶ್ರೀ ಶಿವಯೋಗಿಗಳು ಶಿವ ಭಕ್ತಿಗೆ ಪರ್ಯಾಯಪದವಾಗಿ ಸದ್ಭಕ್ತಿಯನ್ನೂ ಬಳಸಿದ್ದಾರೆ. ಇದು ಅವರ ಬಹುಶ್ರು ತತ್ವವನ್ನೂ ಎತ್ತಿತೋರಿಸುತ್ತದೆ.

೧೧) ಜೀವನ್ಮುಕ್ತನನ್ನು ಯೋಗಿ, ವರಯೋಗಿ, ಯೋಗೀಶ್ವರ, ಮುಂತಾದ ಶಬ್ದಗಳಿಂದ ಹೆಸರಿಸಿ ಕರೆದಿದ್ದಾರೆ, ಶ್ರೀ ನಿಜಗುಣ ಯೋಗಿಗಳು. ಇದೂ ಕೂಡ ಅವರು ವೀರಶೈವರಾಗಿದ್ದುಕೊಂಡೇ ಇದನ್ನೆಲ್ಲಾ ಬರೆಯುತ್ತಿದ್ದಾರೆಂಬುದಕ್ಕೆ ಆಧಾರವಾಗಬಲ್ಲುದು.

೧೨) ಕೊನೆಯಲ್ಲಿ "ಶ್ರೀ ಶಂಭು ಸತ್ಕೃಪಾಕಟಾಕ್ಷ ಸಾಂದ್ರ ಚಂದ್ರಿಕೆ"ಯಿಂದ ಅನು ಗ್ರಹೀತರಾಗಿ ಎಲ್ಲ ಪರಮಾರ್ಥದ ತಿರುಳನ್ನು, ತತ್ವರಹಸ್ಯವನ್ನು ತಾವು ನಿರೂಪಿಸಿರುವ ದಾಗಿ ಶ್ರೀ ನಿಜಗುಣರು ಹೇಳಿಕೊಂಡಿದ್ದಾರೆ. ತಾವೇ ಸ್ವತಃ "ಶ್ರೀ ಕಪಾಕರನೆನಿಸುವವ ರಾಗಿದ್ದರೂ ಸಹ ಅವರು ಹೀಗೆ ಹೇಳುವದು ಅವರ ವಿನಯವನ್ನೂ, ಗುರುಭಕ್ತಿಯನ್ನೂ, ತೋರಿಸುತ್ತದೆ."

**'ಅನುಭವಸಾರ':**

'ಅನುಭವಸಾರ'ವೂ ಕೂಡ ಅದ್ವೈತ ಪ್ರತಿಪಾದಕ ದಶೋಪನಿಷತ್ತುಗಳ ಸಾರ. ಹೀಗಿದ್ದರೂ ಶ್ರೀ ನಿಜಗುಣ ಶಿವಯೋಗಿಗಳು ಇದರಲ್ಲಿಯೂ ಕೂಡ ತಮಗೆ ಸಹಜವಾದ ವೀರಶೈವತ್ವವನ್ನು ಮರೆದಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಕೆಳಗಿನ ಮಾತುಗಳು ಬಹು ಮಹತ್ವದವುಗಳಾಗಿವೆ:

೧) 'ಅನುಭವಸಾರ'ದ ಪ್ರಾರಂಭದ ಸೂತ್ರವಾದ "ಪರತರಾನಂದಮಯ ಗುರು ಶಂಭುಪದವೆನ್ನ। ಶಿರದೊಳಿರುತಿರ್ಕೆ ನಿಜಕರುಣದಿಂದೆ॥" ಎಂಬ ಇಷ್ಟ ದೇವತಾ ನಮಸ್ಕಾರ ನಿರೂಪಣೆಯಲ್ಲಿಯೇ ತಾವು ಸರ್ವಾರ್ಥದಲ್ಲೂ ವೀರಶೈವರೆಂಬುದನ್ನು ಶ್ರೀ ನಿಜಗುಣರು ತೋರಿಸಿಕೊಟ್ಟಿದ್ದಾರೆ.

೨) "ಆಧಾರವಾ ಬ್ರಹ್ಮವಾಧೇಯವೀ ಮಾಯೆ। ಯಾಧಾರದಲ್ಲಿ ಬೆರಸಿಬೇರಿಲ್ಲ- ದಂತಾಧೇಯಮಿರ್ಪುದೆಲೆ ಪುತ್ರ॥" ಎಂಬಲ್ಲಿ ವೀರಶೈವದ ಶಕ್ತಿವಿಶಿಷ್ಟಾದ್ವೈತವನ್ನು ಕೆಲವರು ಗುರುತಿಸಿದರೆ ಆಶ್ಚರ್ಯಪಡಬೇಕಾಗಿಲ್ಲ. ಇದು ನಿಜಗುಣರ ವೀರಶೈವತ್ವದ ಪ್ರತೀಕ.

೩) "ದೇವಾತ್ಮಶಕ್ತಿಂ ಸಗುಣೈಃ ನಿಗೂಢಾಂ ಅಭಿನ್ನಾಂಜ್ಞಾತ್ವಾ ವಿದ್ವಾನ್ ಅಮೃತತ್ವಮೇತಿ||" ಎಂಬ ಶ್ರುತಿ ವಾಕ್ಯವನ್ನು ತಮ್ಮ ಹೇಳಿಕೆಗೆ ಪ್ರಮಾಣವಾಗಿ ಅವರು ಕೊಟ್ಟಿದ್ದಾರೆ. ಈ ಉಪನಿಷದ್ವಾಕ್ಯ ಶಕ್ತಿ ವಿಶಿಷ್ಟಾದ್ವೈತಪರವಾಗಿದೆ ಮತ್ತು ಶ್ರೀ ನಿಜಗುಣರ ವೀರಶೈವತ್ವವನ್ನು ಎತ್ತಿ ತೋರಿಸುತ್ತದೆ.

೪) ೨ನೇ ಸಂಧಿಯಲ್ಲಿ ಜೀವೇಶ್ವರ ಸ್ವರೂಪ ನಿರ್ಣಯವನ್ನು ಹೇಳುವ ಒಂದು ಹಂತದಲ್ಲಿ "ಶಿವಜೀವರಿರವನಾ ನಳಿನದಾಯತವನೊ|ಪ್ಪುವ ತೆರದಿ ನೆನಗೆ ಗುರುವರ್ಯ ಬೆಸಸು||" ಎಂಬ ಬಹು ಮಹತ್ವಪೂರ್ಣ ಮಹಾಸೂತ್ರವೊಂದು ಬರುತ್ತದೆ. ಇದರಲ್ಲಿ ಶ್ರೀ ನಿಜಗುಣರು 'ಶಿವ' ಎಂಬ ಪದವನ್ನು ಉಪಯೋಗಿಸಿರುವದನ್ನು ಗಮನಿಸಬೇಕು. ಹಾಗೆಯೆ, ಹೃದಯಕಮಲದ ವರ್ಣನೆಯನ್ನು ಮಾಡುವಾಗ, ಅದರ ಪರ್ಯಾಯ ಹೆಸರು ಗಳನ್ನು ಹೇಳುವಾಗ 'ಹರಭವನ' ಎಂದೂ ಅವರು ಕರೆದಿದ್ದಾರೆ. ಇಲ್ಲಿ ಪ್ರತಿಪಾದಿತ ವಾದ ವಿಷಯಕ್ಕೆ ಸಂಬಂಧಿಸಿದ ಪ್ರಮಾಣ ಗ್ರಂಥಗಳನ್ನು ಹೆಸರಿಸುವಾಗ, ಸೂತಗೀತೆ, ಶಿವಗೀತೆಗಳನ್ನೂ ಅವರು ಸೇರಿಸಿದ್ದಾರೆ. ಈ ಎರಡೂ ಗ್ರಂಥಗಳು ವೀರಶೈವರಿಗೆ ಪ್ರಮಾಣಗಳಾದ ಶಿವಾಗಮಗಳ ಸಾರವನ್ನೇ ಒಂದೊಂದು ದೃಷ್ಟಿಕೋನದಿಂದ ವಿವರಿಸು ತ್ತವೆ. ಇದೆಲ್ಲವೂ ಶ್ರೀ ನಿಜಗುಣರು ವೀರಶೈವರಾಗಿದ್ದರೆಂಬುದನ್ನು ದೃಢಪಡಿಸುತ್ತದೆ.

೫) ೭ನೇ ಸಂಧಿಯಲ್ಲಿ ಜೀವನ್ಮುಕ್ತ ಚಾರಿತ್ರವನ್ನು ವಿವರಿಸಲಾಗಿದೆ. ಇಲ್ಲಿಯೂ ಕೂಡ ("ಪರಮಾನುಭವಬೋಧೆ"ಯಲ್ಲಿಯಂತೆ) ಜೀವನ್ಮುಕ್ತನನ್ನು ಯೋಗಿ ಎಂಬು ದಾಗಿ ಕರೆದಿದೆ. ಇದು ಶ್ರೀ ನಿಜಗುಣರಲ್ಲಿ ವೀರಶೈವದ ಬಗೆಗೆ ಅಧಿಕ ಹಾಗೂ ಪ್ರಾಮಾಣಿಕ ಒಲವು ಇರುವದನ್ನು ತೋರಿಸುತ್ತದೆ.

೬) ೮ನೇ ಸಂಧಿಯಲ್ಲಿ ಗುರುವನ್ನು 'ದೇಶಿಕೋತ್ತಮ' ಎಂದೇ ಸಂಬೋಧಿಸ ಲಾಗಿದೆ. ದೇಶಿಕ, ದೇಶಿಕೋತ್ತಮ ದೇಶಿಕವರೇಣ್ಯ ಎಂಬೀ ಪದಪ್ರಯೋಗಗಳು ವೀರಶೈವದಲ್ಲಿ ಮಾತ್ರ ಸಿಕ್ಕುತ್ತವೆ. ಇದು ಶ್ರೀ ನಿಜಗುಣರ ವೀರಶೈವತ್ವವನ್ನು ಬಹು ಪ್ರಬಲವಾಗಿ ಪ್ರತಿಪಾದಿಸುತ್ತದೆ.

೭) "ಅನುಭವಸಾರ"ದ ಕೊನೆಯಲ್ಲಿ ಗ್ರಂಥ ಪ್ರಾಶಸ್ತ್ಯವನ್ನು ನಿರೂಪಿಸುವಾಗ ಶ್ರೀ ನಿಜಗುಣರು "ಇಂತು ನಿಜಗುಣಯೋಗಿ ಸಂತಸದೊಳೊರೆದಿದನು| ಸಂತ ಮಹಿಮಾಂಬುನಿಧಿ ಶಂಭು ತಾನೊಪ್ಪಿ ಸಂತರಿಂ ಪಾಡಿಸುತಮಿರ್ಕೆ||" ಎಂದು ಹಾರೈಸಿದ್ದಾರೆ. ಇದು ಅವರು ವೀರಶೈವರಾಗಿದ್ದಾರೆಂಬುದಕ್ಕೆ ಪ್ರಬಲಪ್ರಮಾಣ.

೮) "ಅನುಭವಸಾರ"ದ ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿ "ನಗರಾಜ ಸುತೆಯ ರಮಣಂಗೆ ಶಂಭುವಿಂಗೆ||" "ಶ್ರೀ ಮಹಾದೇವಂಗೆ, ಸೋಮಂಗೆ....ಶಂಭುವಿಂಗೆ" "ಶಂಭುವಿಂಗೆ", "ಶೈಲಜಾಪತಿ ಶಂಭುವಿಂಗೆ" "ಶಂಭುಪದನಳಿನಮಂ ಕೂರ್ತು", "ಪಾರ್ವತೀವರ ಶಂಭುವಿಂಗೆ" "ಗಿರೀಶಂಗುಮೇಶಂಗೆ ಗುರು ಶಂಭುವಿಂಗೆ" "ಪಾರ್ವತೀ ಪ್ರಿಯ ಶಂಭುವಿಗೆ" ನಮಸ್ಕಾರ ಸಲ್ಲಿಸುವದನ್ನು ಮರೆಯದ ಶ್ರೀ ನಿಜಗುಣರು ವೀರಶೈವ ರೆಂದು ಬೇರೆ ಹೇಳಬೇಕಿಲ್ಲ.

**ಪರಮಾರ್ಥಗೀತೆ:**

ಈ ಪ್ರಕರಣ ಗ್ರಂಥವೂ ಕೂಡ ಅದ್ವೈತ ವೇದಾಂತವನ್ನೇ ಯೋಗವಾಸಿಷ್ಠಾದಿಗಳಲ್ಲಿ ಉಕ್ತವಾದ ರೀತಿಯಲ್ಲಿ ತೂಗಿ ನೋಡುತ್ತದೆ. ಇದರಲ್ಲಿಯೂ ಶ್ರೀ ನಿಜಗುಣರ ಕೆಲವು ಮಾತುಗಳು ಅವರ ವೀರಶೈವತ್ವವನ್ನು ಸಬಲವಾಗಿ ಸೂಚಿಸುತ್ತವೆ. ಅವು ಕೆಳಗಿನಂತಿವೆ:

೧) ಪ್ರತಿ ಪ್ರಕರಣ ಗ್ರಂಥದ ಆರಂಭಕ್ಕೆ ಮಂಗಲಾಚರಣೆ ಮಾಡುವದು ಶ್ರೀ ನಿಜಗುಣ ಶಿವಯೋಗಿಗಳ ಒಂದು ವೈಶಿಷ್ಟ್ಯ. "ಪರಮಾರ್ಥಗೀತೆ"ಯಲ್ಲಿಯೂ ಕೂಡ "ಸಲೆ ಶಂಭುಲಿಂಗದೊಲವಿಂದುಸುರ್ವೆಂ॥" ಎಂಬುದು ಆಶೀರ್ವಾದ ರೂಪ ಮಂಗಲಾಚರಣೆ. ಇದೂ ಕೂಡ ಶ್ರೀ ನಿಜಗುಣರು ವೀರಶೈವರಾಗಿದ್ದರೆಂಬುದನ್ನೇ ಸಮರ್ಪಕವಾಗಿ ಸೂಚಿಸುತ್ತದೆ.

೨) "ಪರಮಾರ್ಥಗೀತೆ"ಯ ಪ್ರಥಮಗತಿ (ಅಧ್ಯಾಯ)ಯ ಹೆಸರು "ವಸ್ತು ಶಕ್ತಿ ದ್ವಿತಯಂ" ಎದಿದೆ. ಇಲ್ಲಿ ವಸ್ತು ಎಂದರೆ ದ್ರವ್ಯ (Matter) ಅಲ್ಲ. **ಪರಶಿವ** ಎಂದರ್ಥ. ಹಾಗೆಯೆ, ಶಕ್ತಿಯೆಂದರೆ ವಿಜ್ಞಾನಿಗಳು ಹೇಳುವ ಜಡಶಕ್ತಿ (energy) ಅಲ್ಲ; ಚಿಚ್ಛಕ್ತಿಯೆಂದು ಹೆಸರು. ಇದು ವೀರಶೈವನಾದ ನಿಜಗುಣ ಮಾತ್ರ ಹೆಸರಿಸುವ ವಿಧಾನವಾಗಿರಬಲ್ಲುದು. ವೀರಶೈವರಲ್ಲದ ತತ್ವಜ್ಞಾನಿಗಳಿಗೆ "ವಸ್ತು ಶಕ್ತಿ ದ್ವಿತಯಂ" ಎಂಬ ಪದದಲ್ಲಿ ಅಡಕವಾದ ಪರಿಕಲ್ಪನೆಯ ಪೂರ್ಣ ಹೊಳಹು ಇರಲು ಶಕ್ಯವೇ ಇಲ್ಲ.

೩) ವೀರಶೈವದಲ್ಲಿ ವಿನಯಭಕ್ತಿ, ವಿಧೇಯ ಭಕ್ತಿ, ವಿಶುದ್ಧ ಭಕ್ತಿ ಎಂದು ಮೂರು ಪ್ರಕಾರಗಳನ್ನಾಗಲಿ, ಶ್ರದ್ಧಾದಿ ಸಮರಸ ಪರ್ಯಂತ ಷಡ್ವಿಧ ಭಕ್ತಿಗಳನ್ನಾಗಲಿ ನಿರೂಪಿಸಿದೆ. ಆದರೆ ಶ್ರೀ ನಿಜಗುಣರು ಪರಮಾರ್ಥ ಗೀತೆಯ ಪ್ರಥಮಗತಿಯಲ್ಲಿ ನವವಿಧಭಕ್ತಿಗಳನ್ನು ಹೇಳಿದ್ದಾರೆ. ಇದೊಂದು ವೈದಿಕ ಸಂಪ್ರದಾಯ ರೀತಿಯೆಂದು ಹೇಳಬಹುದು. ಆದರೆ, ನಿರಂತರವೂ ತೆರೆದೇ ಇರುವ ಶ್ರೀ ನಿಜಗುಣರ ಸಮನ್ವಯದೃಷ್ಟಿ ಇಲ್ಲಿ ಶಿವನಿಗೆ ಮಾಡುವ ನವವಿಧ ಭಕ್ತಿಗಳನ್ನೇ ಕಂಡಿದೆ; ಕೊಂಡಾಡಿದೆ. ಅವರ ವೀರಶೈವ ನಿಷ್ಠೆ ನಿಜಕ್ಕೂ ಅಗಾಧವಾದುದು, ಅತುಲವಾದುದು.

೪) ವೀರಶೈವಕ್ಕೆ ಮೂಲ ಸ್ರೋತ್ರವೆನಿಸಿದ ಶಿವಾಗಮಗಳಲ್ಲಿ ಉಕ್ತವಾದ ತ್ರಿವಿಧ ಮಲಗಳು ಚತುರ್ಥಗತಿಯಲ್ಲಿ ಬರುವ "ಪತಿಯ ಮಲಂ ಕಾರ್ಮಿಕ ಮಲವೆಂದು ಸತಿಯ ಮಲಂ ಮಾಯಾಮಲವೆಂದು॥ ಕೇಳುದ್ವಯವಾಣವ ಮಲವೆಂದು...." ಮುಂತಾದ ಮಾತುಗಳಲ್ಲಿ ನಿರೂಪಿತವಾಗಿದೆ. ಇದೂ ಸಹ ನಿಜಗುಣರ ವೀರಶೈವತ್ವಕ್ಕೆ ಪರಮ ಪುರಾವೆ.

೫) ಪ್ರಾಣಲಿಂಗಿ ಸ್ಥಲದಲ್ಲಿ ಯೋಗದ ಪರಿವಿಡಿಯ ಚಕ್ರಗಳ ವಿಷಯ ವಿವರಣೆಗೊಂಡಿದೆ. ಈ ಚತುರ್ಥಗತಿಯಲ್ಲಿ ಈ ಚಕ್ರಗಳ ವರ್ಣನೆ ಬಂದಿದೆ. ಅದ್ವೈತ

ವೇದಾಂತವನ್ನು ಹೇಳಲು ಹೊರಟ ಶ್ರೀ ನಿಜಗುಣರು ವೀರಶೈವರಾದುದರಿಂದಲೇ ಈ ವಿಷಯವನ್ನು ಸಮನ್ವಯೀಕರಿಸಿದ್ದಾರೆ.

೬) ವೀರಶೈವದ ಅನುಭವ ಸೂಕ್ಷ್ಮತೆಯನ್ನು ಅಂಗಕ್ಕಿಳವಡಿಸಿಕೊಂಡು ಮಹಾನುಭಾವರಾದ ಶ್ರೀ ನಿಜಗುಣರು ಶಿವಾಗಮೋಕ್ತ ಸ್ಥೂಲ, ಸೂಕ್ಷ್ಮ ಮತ್ತು ಪರ ಎಂಬೀ ಪ್ರಕ್ರಿಯೆಯನ್ನು ಸಾಕ್ಷಿ ಸ್ವರೂಪವನ್ನು ನಿರೂಪಿಸುವಾಗ ಉಪಯೋಗಿಸಿಕೊಂಡಿದ್ದಾರೆ. ಇಲ್ಲಿ 'ಪರ' ಎಂಬುದೇ ನಿತ್ಯ ನಿರ್ವಿಕಾರ, ನಿರ್ಲಿಪ್ತ, ನಿರುಪಾಧಿಕ ಸಾಕ್ಷಿಯಾಗಿದೆ. ಇದನ್ನೇ ಪರಶಿವ, ನಿಜಲಿಂಗ ಮುಂತಾಗಿ ಕರೆಯುತ್ತಾರೆ. ಇದು ಶ್ರೀ ನಿಜಗುಣರ ವೀರಶೈವತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

೭) ಇಲ್ಲಿಯೂ ಕೂಡ ಜೀವನ್ಮುಕ್ತನನ್ನು ಯೋಗಿ, ಯೋಗೀಶ, ಯೋಗಿವರ ಎಂದು ಕರೆದಿರುವ ಶ್ರೀ ನಿಜಗುಣರು ತಮ್ಮ ವೀರಶೈವ ಪ್ರೇಮವನ್ನು ಪ್ರಕಟಿಸಿದ್ದಾರೆ.

೮) ಗ್ರಂಥದ ಕೊನೆಯ ಎರಡು ಕಂದ ಪದ್ಯಗಳಲ್ಲಿ "ಶಂಭುಲಿಂಗದೊಲವಿಂ" "ಸಲೆ ಶಂಭುಲಿಂಗದೊಲವಿಂದಿಳೆಯೊಳ್||" ಎಂಬೆರಡು ಮಾತುಗಳಲ್ಲಿ ಶ್ರೀ ನಿಜಗುಣರ ವೀರಶೈವಾಭಿಮಾನಾದರಗಳು ಸ್ಫುಟವಾಗಿ ಅಭಿವ್ಯಕ್ತಗೊಂಡಿವೆ.

**ಅರವತ್ತು ಮೂರು ಮಂದಿ ಪುರಾತನರ ಸ್ತೋತ್ರ:**

ಇದನ್ನು "ಪುರಾತನರ ತ್ರಿವಿಧಿ" ಎಂದೂ ಕೆಲವರು ಕರೆದಿದ್ದಾರೆ. ಭಾರತೀಯ ಧಾರ್ಮಿಕ ಸಂಸ್ಕೃತಿಯಲ್ಲಿ ಭಕ್ತಿ ಪಂಥಕ್ಕೆ ಒಂದು ಮಹತ್ವದ ಸ್ಥಾನವಿರುವದಲ್ಲದೆ ಬಹು ಪ್ರಾಚೀನವಾದ ಪರಂಪರೆಯೂ ಇದೆ. ಈ ಭಕ್ತಿಪಂಥದ ಸಂಪೂರ್ಣ ಸದುಪಯೋಗ ಪಡೆದವರಲ್ಲಿ ತಮಿಳುನಾಡಿನ ಅರವತ್ತು ಮೂರು ಮಂದಿ ಪುರಾತನರು ಅಗ್ರಗಣ್ಯರೆಂದು ಹೇಳಬಹುದು. ಇವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕೂ ವರ್ಣದ ಜನರೂ ಉಂಟು. ಇಲ್ಲಿ ಶ್ರೇಣೀಕೃತ ವರ್ಣಭೇದ, ಜಾತಿಭೇದ, ಲಿಂಗಭೇದ, ಗಳಿಗೆ ಸರ್ವಥಾ ಎಡೆಯಿಲ್ಲ. "ಇವರಲ್ಲಿ ೩೨ ಮಂದಿ ಶಿವಲಿಂಗದ ಆರಾಧನೆಯಿಂದ ಮುಕ್ತಿಯನ್ನು ಪಡೆದವರು. ೧೨ ಮಂದಿ ಜ್ಞಾನಿಗಳಾದ ಗುರುಗಳ ಅನುಗ್ರಹದಿಂದ ಮುಕ್ತಿಯನ್ನು ಪಡೆದವರು. ೧೯ ಮಂದಿ ಶಿವಭಕ್ತರ ಅನುಗ್ರಹದಿಂದ ಮುಕ್ತಿಯನ್ನು ಪಡೆದವರು. ಶಿವಧರ್ಮನಿಷ್ಠರಾದ ಈ ಸತ್ಪುರುಷರ ಪ್ರಭಾವವು ಕರ್ನಾಟಕದ ವೀರಶೈವ ಸಮಾಜ ಮತ್ತು ಸಂಸ್ಕೃತಿಯ ಮೇಲೆ ವಿಪುಲವಾದ ಪರಿಣಾಮವನ್ನುಂಟು ಮಾಡಿತೆಂದು ತೋರುತ್ತದೆ."೬ ಬಸವಾದಿ ಶರಣ-ಶರಣೆಯರ ಮೇಲೆ ಈ ಪುರಾತನರ ಅತ್ಯಂತ ಗಾಢವಾದ ಪ್ರಭಾವ ಬಿದ್ದಿದೆ. ಪ್ರಥಮ ವಚನಕಾರನೆಂದು ವಿದ್ವಾಂಸರಿಂದ ಅಂಗೀಕೃತನಾದ ದೇವರದಾಸಿಮಯ್ಯನಿಂದ ಮೊದಲ್ಗೊಂಡು ಆ ಬಳಿಕ ಬಂದ ಅಸಂಖ್ಯ ವಚನಕಾರ

೬ ಶ್ರೀ ಬ. ಶಿವಮೂರ್ತಿಶಾಸ್ತ್ರಿಗಳು, ಬೆಂಗಳೂರು: ಪುರಾತನರ ತ್ರಿವಿಧಿ-ಪು. ೧೪

ವಚನಕಾರ್ತಿಯರಿಂದ 'ಆದ್ಯರು' 'ಪುರಾತನರು','ಪ್ರಮಥರು' ಎಂದು ಪ್ರಶಂಸಿತರಾದವರು ಈ ೬೩ ಪುರಾತನರೇ ಇವರನ್ನು ಕುರಿತು ವೀರಶೈವ ಆದಿಮಹಾಕವಿ, ಭಕ್ತಾಗ್ರೇಸರ ಹರಿಹರನು ರಗಳೆಗಳನ್ನು ರಚಿಸಿದ್ದಾನೆ. ಕನ್ನಡದಲ್ಲಿ ಇನ್ನೂ ಇಬ್ಬರು ವೀರಶೈವ ಕವಿಗಳು ಕವಿ ಸುರಂಗ ಮತ್ತು ವೀರಭದ್ರಕವಿ-ಇವರು "ತ್ರಿಷಷ್ಟಿ ಪುರಾತನರ ವಿಲಾಸಂ" ಮತ್ತು "ಅರವತ್ತು ಮೂವರ ಪುರಾಣಂ" ಎಂಬ ಕಾವ್ಯಗಳನ್ನು ಈ ೬೩ ಪುರಾತನರನ್ನು ಕುರಿತೇ ವಿರಚಿಸಿದ್ದಾರೆ. ಇದರಿಂದ ಈ ಪುರಾತನರು ವೀರಶೈವರಿಗೆ ಅದೆಷ್ಟು ಆದರ್ಶಪ್ರಾಯರೂ, ಪೂಜ್ಯರೂ-ಆಗಿದ್ದಾರೆಂಬುದು ಸ್ಪಷ್ಟವಾಗುತ್ತದೆ.

ವೀರಶೈವ ಸಂಸ್ಕೃತಿ ಹಾಗೂ ಸಾಹಿತ್ಯ ನಿರ್ಮಿತಿಯ ಮೇಲೆ ಈ ೬೩ ಮಂದಿ ಪುರಾತನರ ಪ್ರಭಾವ ಅದೆಷ್ಟು ಪ್ರಗಾಢವಾಗಿದೆಯೆಂಬುದು ಕೆಳಗಿನ ಆಧಾರಗಳ ಸಮೀಕ್ಷೆಯಿಂದ ತಿಳಿದು ಬರುವದರಲ್ಲಿ ಸಂಶಯವಿಲ್ಲ:

೧. ವೀರಶೈವ ಸಾಹಿತ್ಯದಲ್ಲಿಯ ಕುರುಹುಗಳು;

೨. ವೀರಶೈವ ಸಮಾಜದಲ್ಲಿಯ ಆಚಾರಗಳು.

ಷಡಕ್ಷರದೇವ, ಪಂಡಿತಾರಾಧ್ಯ, ಗುಬ್ಬಿಯ ಮಲ್ಲಣಾರ್ಯ, ಮರಿತೋಂಟದಾರ್ಯ ಮೊದಲಾದ ಸುಪ್ರಸಿದ್ಧ ವೀರಶೈವ ಕವಿಗಳು ಈ ಪುರಾತನರನ್ನು ತಮ್ಮ ಕಾವ್ಯಗಳಲ್ಲಿ ಭಕ್ತಿಯಿಂದ ಕೊಂಡಾಡಿದ್ದಾರೆ. ಅಲ್ಲದೆ, ಆಧುನಿಕ ವೀರಶೈವ ಲೇಖಕರೂ ಕೂಡ ಇವರನ್ನು ಕುರಿತು ಲೇಖನಗಳನ್ನು ಬರೆದಂತೆ ತಿಳಿದು ಬರುತ್ತದೆ. ಇವರಲ್ಲಿ ೨ ಮಂದಿ ಸ್ತ್ರೀಯರು, ೧೫ ಮಂದಿ ಬ್ರಾಹ್ಮಣರು, ೧೨ ಮಂದಿ ಕ್ಷತ್ರಿಯರು. ೫ ಮಂದಿ ವೈಶ್ಯರು ಒಬ್ಬ ಪಂಚಮ ಉಳಿದ ೨೪ ಮಂದಿ ಶೂದ್ರರು.೭ ಇವರೆಲ್ಲರೂ ಸ್ಥಾವರಲಿಂಗ ಪೂಜಕರು. ಇವರಲ್ಲಿ ಒಬ್ಬರೂ ವೀರಶೈವರಾಗಿದ್ದಿಲ್ಲ ಎಂದು ಹೇಳಬೇಕು. ಆದರೆ, ಶಿವಭಕ್ತಿಯ ಆಧಿಕ್ಯದಿಂದ ಇವರು ವೀರಶೈವರಿಗೆ ಪೂಜ್ಯರು. **(Of the former all are Saivas, Only eight are Veerasaivas-E.P.Rice History of Kanarese Literature"** ರೈಸರ ಈ ಹೇಳಿಕೆ ಗಮನಾರ್ಹವೆನಿಸಿದರೂ, ಇನ್ನೂ ಸಂಶೋಧನೆಗೆ ಒಳಪಡಬೇಕಾಗಿದೆ.)

ಶ್ರೀ ನಿಜಗುಣರ ಸ್ವಂತ ಕೃತಿಗಳೆಂದು ಪರಿಗಣಿತವಾದ "ಕೈವಲ್ಯ ಪದ್ಧತಿ" ಮತ್ತು "ವಿವೇಕ ಚಿಂತಾಮಣಿ"ಗಳ ಸಾಲಿನಲ್ಲಿ ಅವರ ಇನ್ನೊಂದು ಕೃತಿಯಾದ ಈ ಅರವತ್ತು ಮೂರು ಪುರಾತನರ ತ್ರಿವಿಧಿಯೂ ಸೇರ್ಪಡೆಗೊಳ್ಳುತ್ತದೆ ವೀರಶೈವರಿಗೆ ಇಷ್ಟೊಂದು ಪೂಜ್ಯರಾದ ಈ ೬೩ ಮಂದಿ ಪುರಾತನರನ್ನು ಕುರಿತು ಒಂದು ಸ್ವತಂತ್ರ ಕೃತಿಯನ್ನೇ ಲಘು ಕಾವ್ಯರೂಪದಿಂದ ಬರೆದ ಶ್ರೀ ನಿಜಗುಣರು ವೀರಶೈವರಲ್ಲದೆ ಬೇರಾವ ಮತದವರಾಗಿರಲು ಸಾಧ್ಯ? ಈ ಕಾವ್ಯದಲ್ಲಿ ಬರುವ ಕೆಳಗಿನ ಮಾತುಗಳು ನಿಜಕ್ಕೂ ಶ್ರೀ ನಿಜಗುಣರ ವೀರಶೈವತ್ವಕ್ಕೆ ಹಿಡಿದ ವಿಸ್ತರದ ಕನ್ನಡಿಯಂತಿವೆ:—

---

೭ ಅದೇ. ಪುಟ-೨೨

೧) ಈ ಲಘು ಕಾವ್ಯದಲ್ಲಿ ೭೭ ತ್ರಿಪದಿಗಳಿದ್ದು, ಮೊದಲಿನ ೯ ರಲ್ಲಿ ಶ್ರೀ ನಿಜಗುಣರು ಶಕ್ತಿ ವಿಶಿಷ್ಟನಾದ ಶಿವನನ್ನು ವಂದಿಸಿದ್ದಾರೆ. "ಗಿರಿಸುತೆಯ ರಮಣಂಗೆ ...." ಎಂಬುದು ಇದಕ್ಕೆ ಸಾಕ್ಷಿ.

೨) ಶಕ್ತಿಯನ್ನೂ ಅವರು ವಂದಿಸಿದ್ದಾರೆ: "ಇಂಗಡಲೊಳಿಂಪು ಬೆಳುದಿಂಗಳೊಳು ತಂಪು ಕುಸುಮಂಗಳೊಳು ಕಂಪು ಬೆರೆದಂತೆ ಪರಮನೊಳು ಪಿಂಗದಗಸುತೆಗೆ ನತನಪ್ಪೆಂ" ಎಂಬ ಅವರ ಮಾತಂತೂ ಸ್ಪಷ್ಟವಾಗಿ ಶಕ್ತಿ ವಿಶಿಷ್ಟಾದ್ವೈತವನ್ನು ಬಹುಸುಂದರವಾಗಿ ಮಾರ್ಮಿಕವಾಗಿ ವರ್ಣಿಸುತ್ತದೆ. ಇದೇ ಬಗೆಯ ಮಾತು ಶಿವಾಗಮಗಳಲ್ಲೂ ಬಂದಿರುವ ದನ್ನು ಗಮನಿಸಬೇಕು.

೩) "ಶರಣರಂ ಪಾರ್ವತೀಶ್ವರ ನಿಗಿಂತಧಿಕವೆಂದೊರೆವಾಗಮವನು ತಿಳಿದು ನಾನವರ ಪದಸರಸಿಜಂಗಳನೆ ನುತಿ ಗೈವೆಂ||" ಎಂಬಂತಹ ನುಡಿಯು ವೀರಶೈವನಿಂದ ಮಾತ್ರ ಬರಬಲ್ಲುದು.

೪) "ಮುದವಲರೆ ಹೃದಯಾಂಭುಜದೊಳು ಶಿವಭಕ್ತಿಯಿಂ| ಸದಮಲಾನಂದ ರಸವಾದ ಶರಣಾಳಿ| ಪದವ ಮನವೊಲಿದು ನುತಿಸುವೆನು||" ಎಂಬುದರಲ್ಲಿ ಬರುವ ಶಿವ ಭಕ್ತಿಯ ಮಹಿಮಾತಿಶಯವನ್ನು ಕೊಂಡಾಡುವ ಮಾತು ವೀರಶೈವರಲ್ಲಿ ಮಾತ್ರ ಅರ್ಥ ಪೂರ್ಣ, ಸಾರ್ಥಕ!

೫) "ಅಣೆಯುರದ ಭಕ್ತಿ ಧಾರುಣೆಗೆ ಪೊಸತಾಗಿ ಮನ್ನಣೆಯೊಳೀಶಂಗೆ ಶಿವಲಿಂಗ ಮಿತ್ತ ಕಲಿಗಣನಾಥನೆನ್ನ ಕುಲಗುರುವು||" ಇಲ್ಲಿ "ಶಿವಲಿಂಗಮಿತ್ತ" ಎಂಬುದೂ, "ಕುಲ ಗುರುವು" ಎಂಬುದೂ ಇಲ್ಲಿ ನಿಜಗುಣರ ವೀರಶೈವತ್ವಕ್ಕೆ ಹೆಚ್ಚು ಪುಷ್ಟಿಕರವಾದ ಪ್ರಮಾಣ. (ಇಲ್ಲಿ ಅರವತ್ತುಮೂರು ಪುರಾತನರಲ್ಲಿ ಕೆಲವರಾದರೂ ಇಷ್ಟಲಿಂಗಧಾರಿಗಳಾದ ವೀರಶೈವ ರಾಗಿದ್ದರೆಂಬುದಕ್ಕೆ ಬಲವಾದ ಆಧಾರ ದೊರಕುತ್ತದೆಂದು ಹೇಳಬಹುದೆ? ಹಾಗಿದ್ದರೆ, ೬೩ರಲ್ಲಿ ೮ ಜನ ಮಾತ್ರ ವೀರಶೈವರಾಗಿದ್ದರೆಂಬ ಇ. ಪಿ. ರೈಸರ ಮಾತು ಸತ್ಯವೆಂದು ನಂಬಬೇಕಾಗುತ್ತದೆನೋ!)

೬) "ಶಂಭು ನೀನಿರಿಸೆನ್ನನವರ ಸಭೆಯೊಳಗೆ||", "ಶಂಭು ತಾನೊಪ್ಪಿ ಸಂತರಿಂ ಪಾಡಿ ಸುತಮಿರ್ಕೆ||" ಎಂಬೀ ಶ್ರೀ ನಿಜಗುಣರ ಕೊನೆಯ ಪ್ರಾರ್ಥನೆಯು ಅವರನ್ನು ನಿರ್ವಿವಾದವಾಗಿಯೂ ವೀರಶೈವರೆಂದು ಸಿದ್ಧಪಡಿಸುತ್ತದೆ.

ಷಟ್-ಶಾಸ್ತ್ರಗಳಲ್ಲಿ ಒಂದಾದ, ಬಾಕಿ ಉಳಿದ "ಪರಮಾರ್ಥ ಪ್ರಕಾಶಿಕೆ" ಎಂಬುದು "ಶಿವಯೋಗ ಪ್ರದೀಪಿಕೆ"ಯ ಭಾವಾನುವಾದವಾಗಿರುವದರಿಂದ ಅದರಲ್ಲಿ ಬರುವ ಪ್ರತಿ ನುಡಿಮುತ್ತೂ ಶ್ರೀ ನಿಜಗುಣರು ವೀರಶೈವರಾಗಿದ್ದರೆಂಬುದನ್ನು ಪ್ರಕಟವಾಗಿ ಪ್ರಕಾಶ ಗೊಳಿಸುತ್ತದೆ. ಇನ್ನು, ಅವರ ಪ್ರತಿಯೊಂದು ಗ್ರಂಥ ಸಮಾಪ್ತಿಯಾದ ಬಳಿಕ "ಶ್ರೀಮನ್ನಿಜ ಗುಣ ಶಿವಯೋಗಿ ವಿರಚಿತಮಾದ...." ಎಂದು ಉಲ್ಲೇಖವಿರುತ್ತದೆ. ಇದು ಸಹಸಾ

ಶ್ರೀ ಶಿವಯೋಗಿಗಳ ಸ್ವಂತ ಒಕ್ಕಣಿಕೆಯೇ ಆಗಿರುವ ಸಾಧ್ಯತೆಯನ್ನು ಕಡೆಗಣಿಸಲು ಬರುವಂತಿಲ್ಲ. ಇಲ್ಲವೆ, ಲಿಪಿಕಾರರ ಒಕ್ಕಣಿಕೆಯಿದ್ದರೂ ಇರಬಹುದು ಹೇಗಿದ್ದರೂ ಪರವಾ ಇಲ್ಲ; ಯಾಕಂದರೆ, "ಶಿವಯೋಗಿ" ಎಂಬ ಆ ಹೆಸರಿನಲ್ಲಿಯ ಅಂಶವು ಅವರು ವೀರಶೈವರಾಗಿದ್ದುದನ್ನೇ ದೃಢಪಡಿಸುತ್ತದೆ.

**ಶ್ರೀ ನಿಜಗುಣರ ಕೃತಿಗಳಲ್ಲಿ 'ವೀರಶೈವ':**

ಇಲ್ಲಿಯ ವರೆಗಿನ ವಿವೇಚನೆಯಿಂದ ಶ್ರೀ ನಿಜಗುಣ ಶಿವಯೋಗಿಗಳ ಎಲ್ಲ ಕೃತಿಗಳಲ್ಲೂ ಅವರ ಮತ ವೀರಶೈವವೇ ಎಂಬುದಕ್ಕೆ ಸ್ಪಷ್ಟವಾದ, ಸಬಲವಾದ, ಸಮರ್ಥನೀಯವಾದ ಸಾಕ್ಷಿಗಳು, ಪ್ರಮಾಣ ವಾಕ್ಯಗಳು ಸಾಕಷ್ಟು ಸಿಕ್ಕುತ್ತವೆಂಬುದು ಸ್ಪಷ್ಟವಾಗಿರಲು ಸಾಕು. ಅಲ್ಲವೆ, ಅವರ ಕೃತಿಗಳಲ್ಲಿ ಉಕ್ತವಾದ ವೀರಶೈವದರ್ಶನ ಪ್ರಜ್ಞೆಯ ಸ್ವರೂಪದ ಬಗೆಗೂ ನಿಚ್ಚಳವಾದ ಚಿತ್ರವೊಂದು ಮೂಡಿರಲು ಸಾಕು. ಆದರೂ ಕೂಡ ಪ್ರಸ್ತುತದಲ್ಲಿ ಪ್ರಾಮುಖ್ಯವಾಗಿ "ಕೈವಲ್ಯ ಪದ್ಧತಿ"ಯಲ್ಲಿಯ "ಶಿವಯೋಗ" ಎಂಬ ಭಾಗವನ್ನೂ "ವಿವೇಕ ಚಿಂತಾಮಣಿ"ಯ ಎರಡನೇ ಅಧ್ಯಾಯ (ಪರಿಚ್ಛೇದ)ವನ್ನೂ ಆಧರಿಸಿ ವೀರಶೈವದ ಪರಿಕಲ್ಪನೆಯ ಸಂಕ್ಷಿಪ್ತ ಪರಿಚಯವನ್ನು ಬರೆದಿದೆ. ಬಹುಶಃ ಶ್ರೀ ನಿಜಗುಣರು ನಿರೂಪಿಸುವ ವೀರಶೈವ ಸಿದ್ಧಾಂತ ಶಿವಾಗಮೋಕ್ತ ಎಂಬ ಮಾತು ಮುಂದಿನ ಲೇಖನ ಭಾಗದಿಂದ ಸ್ಪಷ್ಟವಾಗದಿರದು. ಇಲ್ಲಿ ಮೊದಲು "ವಿವೇಕ ಚಿಂತಾಮಣಿ"ಯ ೨ನೇ ಪರಿಚ್ಛೇದದ ವಿಷಯ ವಿವೇಚನೆ ಬರುವದು ಕ್ರಮಪ್ರಾಪ್ತ. ಯಾಕಂದರೆ, ಇದು ಸಿದ್ಧಾಂತ ಬೋಧಕವಾಗಿದೆ; ಆದರೆ ಅದೇ "ಕೈವಲ್ಯ ಪದ್ಧತಿ"ಯ **ಶಿವಯೋಗವು ಅನುಷ್ಠಾನ ಅನುಭವನಿಷ್ಠವಾಗಿದೆ.**

"ವಿವೇಕ ಚಿಂತಾಮಣಿ"ಯ ೨ನೇ ಪರಿಚ್ಛೇದದಲ್ಲಿ ಶ್ರೀ ನಿಜಗುಣ ಶಿವಯೋಗಿಗಳು ವಿಷಯ ಸಂಯೋಜನೆ ಮಾಡಿದ ರೀತಿಯನ್ನು ನೋಡಿದರೆ, ಅವರು ಶಿವಾಗಮಗಳಲ್ಲಿ ಬರುವ ವಿಚಾರಧಾರೆಯನ್ನೇ ಅನುಸರಿಸಿರುವದಾಗಿ ತಿಳಿದು ಬರದಿರದು. ಶೈವ ಮತ್ತು ವೀರಶೈವಗಳಿಗೆ ಶಿವಾಗಮಗಳೇ ಮೂಲ ಉಗಮ ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಆದರೆ ಶ್ರೀ ನಿಜಗುಣರು ಶಿವಾಗಮಗಳ ಪದ್ಧತಿಯಲ್ಲಿಯೇ ವಿಷಯ ನಿರೂಪಣೆ ಅದೇಕೆ ಮಾಡಿದ್ದಾರೆಂಬುದರ ರಹಸ್ಯ ಸುಲಭವೇದ್ಯವಾಗದು. ಶಿವಾಗಮಗಳಲ್ಲಿ ನಾಲ್ಕು ಪಾದಗಳು ಬರುತ್ತವೆ. ಅವು ಕಾಂಡಗಳಿದ್ದಂತೆ. ೧) ಕ್ರಿಯಾಪಾದ, ೨) ಚರ್ಯಾಪಾದ, ೩) ಯೋಗಪಾದ ಮತ್ತು ೪) ಜ್ಞಾನಪಾದ—ಎಂದು ಅವುಗಳನ್ನು ಕರೆಯಲಾಗುತ್ತದೆ. ಕ್ರಿಯಾಪಾದದಲ್ಲಿ ಸಾಮಾನ್ಯವಾಗಿ ಉಪಾಸನೆಯ ವಸ್ತುಗಳ ನಿರ್ಮಾಣ, ದೇವಾಲಯ ಮತ್ತು ಮೂರ್ತಿಗಳ ರಚನೆಯ ವಿಚಾರಗಳು ವಿಶದವಾಗಿ ವಿವರಣೆಗೊಂಡಿವೆ. ಚರ್ಯಾಪಾದದಲ್ಲಿ ನಿತ್ಯ ನೈಮಿತ್ತಿಕ ಆಚರಣೆಗಳು ಮತ್ತು ಸಾಮಾಜಿಕ ನಡೆವಳಿಕೆಗಳು ಬರುತ್ತವೆ. ಯೋಗಪಾದದಲ್ಲಿ ಯೋಗದ ವಿವರವಾದ ವಿವೇಚನೆ ಬರುತ್ತದೆ. ಜ್ಞಾನಪಾದದಲ್ಲಿ

ಸಿದ್ಧಾಂತಕ್ಕೆ ಸಂಬಂಧಿಸಿದ ವಿಷಯಗಳ ಪ್ರತಿಪಾದನೆಯಿದೆ. ಇದು ಸಾಮಾನ್ಯವಾಗಿ ನಾವು ಶಿವಾಗಮಗಳಲ್ಲಿ ಕಾಣುವ ಪದ್ಧತಿ. ಆದರೂ ಬೇರೆ ಕೆಲವು ಶಿವಾಗಮಗಳಲ್ಲಿ ಈ ಪಾದಗಳಲ್ಲಿ ಪ್ರತಿಪಾದಿತವಾದ ವಿಷಯಗಳ ವಿವೇಚನೆ ಬೇರೊಂದು ವಿಧವಾಗಿ ಬಂದಿರುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು.

ಶ್ರೀ ನಿಜಗುಣ ಶಿವಯೋಗಿಗಳ "ವಿವೇಕ ಚಿಂತಾಮಣಿ"ಯಲ್ಲಿ ಈ ಭಿನ್ನ-ಭಿನ್ನ ವಾದ ನಾಲ್ಕು ಪಾದಗಳಲ್ಲಿ ಹೇಳಿದ ವಿಷಯಗಳನ್ನು ಶ್ರೀ ಮೂರುಸಾವಿರಮಠದಿಂದ ಪ್ರಕಟವಾದ ಗ್ರಂಥದ ಪ್ರಕಾರ ಹೀಗೆ ಕೊಡಬಹುದು:—೧) ಕ್ರಿಯಾಪಾದದಲ್ಲಿ ಬರುವ ವಿಷಯಗಳು ಹೀಗೆ-ತಂತ್ರಾಂತರಗಳು, ಆಗಮ ಭೇದ ಮುಂ., ಪಾದಾದಿ ವಿಷಯ, ಶೈವ ಭೇದಗಳು, ವಿಭೂತಿ, ರುದ್ರಾಕ್ಷಿ, ಮಂತ್ರ ಅದಕ್ಕೆ ಸಂಬಂಧಿಸಿದ ಸಮಸ್ತ ಸಂಗತಿಗಳು, ಶಿವಪೂಜಾ ವಿಷಯ ಮುಂ., ನವವಿಧ ಭಕ್ತಿಗಳು, ಅಂತರಂಗ ಶಿವಾರ್ಚನೆ, ಅಂತರಂಗ ಶಿವಯೋಗ ಸಂಗ್ರಹ, ವೀರಶೈವ ಲಕ್ಷಣ, ವೀರಶೈವ ಪ್ರಭೇದ ದೀಕ್ಷೆಗಳು, ಷಟ್‌ಸ್ಥಲ ಗಳು, ನೂರೊಂದು ಸ್ಥಲಗಳು, ಪ್ರಾಣತಾರತಮ್ಯ ಮೊದಲಾದ ಅನೇಕ ವಿಷಯಗಳು ೨) ಚರ್ಯಾಪಾದ: ಇದರಲ್ಲಿ ವಿವೇಚಿತವಾದ ವಿಷಯಗಳು ಹೀಗಿವೆ— ಆಶ್ರಮ ಚತುಷ್ಟಯ, ಅವುಗಳಿಗೆ ಸಂಬಂಧಿಸಿದ ಎಲ್ಲ ವಿಷಯಗಳು. ಗೃಹಸ್ಥಾಶ್ರಮವನ್ನು ಕುರಿತು ಹೇಳುವಾಗ ಕನ್ಯಾದುರ್ಲಕ್ಷಣ., ಕನ್ಯಾ ಸಲ್ಲಕ್ಷಣ, ನೀತಿ ಕ್ರಮ ಮೊದಲಾದ ಸಂಗತಿಗಳ ಚರ್ಚೆಯೂ ಕೂಡ ಇದರಲ್ಲಿ ಬರುವದನ್ನು ಗಮನಿಸಬೇಕು. ೩) ಯೋಗ ಪಾದದಲ್ಲಿ ಅಷ್ಟಾಂಗಯೋಗ ಹಾಗೂ ಷಟ್-ಚಕ್ರ ವಿಷಯಗಳು ಬಹು ಮಾರ್ಮಿಕವಾಗಿ ಪ್ರತಿಪಾದಿತವಾಗಿವೆ. ಅಲ್ಲದೆ, ತದಂತರ್ಗತ ಅಧಿಕಾರಿ, ವಿಷಯ ಮತ್ತು ನಿರ್ಗುಣಾ ಷ್ಟಾಂಗ ಯೋಗಗಳ ವಿವೇಚನೆಯಂತೂ ಬಹು ಅನುಭವ ಪೂರ್ಣವಾಗಿದೆ. ೪) ಜ್ಞಾನ ಪಾದದಲ್ಲಿ ಪತಿ-ಪಶು ಪಾಶಗಳ ವಿವರವಾದ ವಿವೇಚನೆ ಬರುವದಲ್ಲದೆ ಚತುರ್ವಿಧ ವಾಕ್ಕುಗಳು, ವಾಗಧಿಕಾರಿಗಳು, ವಾಗ್ಮಿ ವಿಭಾಗ, ಸವಿಕಲ್ಪಕ ಜ್ಞಾನಗುರು ಪರಂಪರೆ, ಸಿದ್ಧಾಂತೋಪ ಸಂಹಾರ ಮೊದಲಾದ ಜ್ಞಾನ ವಿಷಯಗಳು ನಿರೂಪಿತವಾಗಿವೆ. ಇಲ್ಲಿ ಅವುಗಳ ಪೂರ್ಣ ವಿವರಗಳು ಪ್ರಸ್ತುತವಲ್ಲ.

ಮೇಲೆ ಸಂಕ್ಷಿಪ್ತವಾಗಿ ಕೊಟ್ಟ ನಾಲ್ಕು ಪಾದಗಳ ಸಮಗ್ರ ವಿಷಯಗಳನ್ನು ಮನ ದಂದರೆ ಸಾಮಾನ್ಯವಾಗಿ ಶಿವಾಗಮಗಳಲ್ಲಿ ಬರುವ ಕ್ರಿಯಾಪಾದಕ್ಕೂ, "ವಿವೇಕ ಚಿಂತಾ ಮಣಿ"ಯಲ್ಲಿ ಬರುವ ಕ್ರಿಯಾಪಾದಕ್ಕೂ ಬಹಳೇ ಅಂತರವಿರುವದು ಕಂಡು ಬರದಿರ ಲಾರದು. ಶಿವಾಗಮಗಳಲ್ಲಿ ಉಪಾಸನಾ ವಸ್ತುಗಳ ನಿರ್ಮಾಣ, ದೇವಾಲಯ ಮತ್ತು ಮೂರ್ತಿಗಳ ರಚನೆಯ ವಿವರಗಳು ಬಂದರೆ, "ವಿವೇಕ ಚಿಂತಾಮಣಿ"ಯಲ್ಲಿ ಸಮಗ್ರ ಶೈವದ ಹಾಗೂ ವೀರಶೈವದ ವಿವರವಾದ ವಿವೇಚನೆ ಬಂದಿದೆ. ನಾವಿಲ್ಲಿ ಶ್ರೀ ನಿಜಗುಣರ ಕೃತಿಗಳಲ್ಲಿ ಬರುವ ವೀರಶೈವದರ್ಶನ ಪ್ರಜ್ಞೆಯ ಸ್ವರೂಪಾದಿಗಳನ್ನು ಅರಿಯಬೇಕೆಂದರೆ, ಈ ಕ್ರಿಯಾಪಾದದಲ್ಲಿ ಬಂದಿರುವ ವಿಷಯವನ್ನೇ ಪ್ರಾತಿನಿಧಿಕವಾಗಿ ನೋಡಿಕೊಳ್ಳ

ಬೇಕಾಗಿದೆ. ಯಾಕೆಂದರೆ, ೨ನೇ ಅಧ್ಯಾಯದಲ್ಲಿ ಬರುವ ಇತರ ಪಾದಗಳ ವಿಷಯ ಗಳನ್ನಾಗಲಿ, ೩ನೇ ಪರಿಚ್ಛೇದದ ಪ್ರಾರಂಭದಲ್ಲಿ ಚರ್ಚಿತವಾದ ೩೬ ತತ್ವಗಳು, ಪಂಚೀ ಕರಣ ಮೊದಲಾದ ವೀರಶೈವಕ್ಕೆ ಸಂಬಂಧಿಸಿದ ವಿಷಯುಗಳ ಕಡೆಗೆ ನಾವು ಅಷ್ಟಾಗಿ ಗಮನಹರಿಸಬೇಕಿಲ್ಲ. ಯಾಕಂದರೆ, ಸಿದ್ಧಾಂತ ಭಾಗವೆಲ್ಲಾ ೨ನೇ ಪರಿಚ್ಛೇದದ ಕ್ರಿಯಾ ಪಾದದಲ್ಲಿಯೇ ಬಂದಿರುತ್ತದೆ.

ಶ್ರೀ ನಿಜಗುಣ ಶಿವಯೋಗಿಗಳು ವೀರಶೈವವನ್ನು ವಿವರಿಸುವ ಮುನ್ನ ಅದಕ್ಕೆ ಪೀಠಿಕೆಯಾಗಿ ಶೈವದರ್ಶನದ ಪ್ರಮುಖ ವಿಷಯಗಳ ವಿವೇಚನೆಯನ್ನು ಬಹು ಮಾರ್ಮಿಕ ವಾಗಿ ಮಾಡಿದ್ದಾರೆ. ಈಗಾಗಲೇ ಹೇಳಿರುವಂತೆ, ಇಲ್ಲಿ ಬರುವ ಶೈವ ಮತ್ತು ವೀರಶೈವ ಸಂಬಂಧವಾದ ಪ್ರಮುಖ ಅಂಶಗಳೆಲ್ಲವೂ ಶಿವಾಗಮುಗಳ ಮೇಲೆಯೇ ಆಧರಿತವಾಗಿವೆ. ವೇದಗಳು ಶಿವನ ಉಸಿರಾದರೆ, ಶಿವಾಗಮಗಳು ಅವನ ಪರಿಸ್ಫುಟ ವಾಣಿ! ಈ ಮಾತಿ ನಿಂದ ಸ್ಪಷ್ಟವಾಗುವದೇನಂದರೆ, ಶಿವಾಗಮೋಕ್ತ ಜ್ಞಾನವು ಅನುಷ್ಠಾನ (ಪ್ರಯೋಗ) ಸಿದ್ಧ, ಅನುಭವ ಸಂಸಿದ್ಧ. ಅದು ಉಪನಿಷತ್ತುಗಳ ಜ್ಞಾನದಂತೆ ಬರಿಯ ತಾತ್ವಿಕ ನೆಲೆಯಲ್ಲಿ ಮಾತ್ರ ತನ್ನ ಎತ್ತರ-ಬಿತ್ತರಗಳನ್ನು ಪ್ರಸಿದ್ಧವಾಗಿ ಮೆರೆದು ಸುಮ್ಮನಾಗು ವದಿಲ್ಲ; ಮತ್ತೇನಂದರೆ, ಅರಿತುದನ್ನು ಆಚರಣೆಗೆ ಇಳಿಸುತ್ತದೆ, ಅನುಭವಕ್ಕೆ ತಂದು ಕೊಡುತ್ತದೆ. ಆದ್ದರಿಂದ ಶಿವಾಗಮುಗಳ ಪ್ರಕಾರ ಆಚರಣೆ-ಅನುಭವಗಳೇ ಅತ್ಯಂತ ಮುಖ್ಯ. ಅಂತಲೇ "ಅದೆಂತೆಂದೊಡೆ ಸಿದ್ಧಾಂತಶಾಸ್ತ್ರದೊಳೀ ಲೋಕದಲ್ಲಿ ಪ್ರತ್ಯಕ್ಷ ಫಲದಿಂ ವಿಶ್ವಾಸಂ ಘಟಿಸಲೋಸುಗಮಾಗಿ........" ಎಂದೇ ಶ್ರೀ ನಿಜಗುಣರು ತಮ್ಮ "ವಿವೇಕ ಚಿಂತಾಮಣಿ"ಯ ೨ನೇ ಪರಿಚ್ಛೇದವನ್ನು ಆರಂಭಿಸುತ್ತಾರೆ. ಇದು ಒಂದರ್ಥ ದಲ್ಲಿ ಶೈವ ಹಾಗೂ ವೀರಶೈವಗಳ ಹೃದಯವನ್ನೇ ತೆರೆದು ತೋರಿಸುತ್ತದೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

"ವಿವೇಕ ಚಿಂತಾಮಣಿ"ಯ ೨ನೇ ಪರಿಚ್ಛೇದವು "ತಂತ್ರಾಂತರ" ಎಂಬ ವಿಷಯ ವಿವೇಚನೆಯಿಂದ ಪ್ರಾರಂಭಗೊಳ್ಳುತ್ತದೆ. ಇದರಲ್ಲಿ ಗಾರುಡ, ದಕ್ಷಿಣ, ವಾಯು ಮತ್ತು ಭೂತ ಎಂಬಿವುಗಳೇ ನಾಲ್ಕು ತಂತ್ರಾಂತರಗಳೆಂದು ಉಕ್ತವಾಗಿವೆ. ಇದರ ಮುಂದೆ ಬರ ತಕ್ಕಂತಹ ಸಮಸ್ತ ಪ್ರಕರಣಗಳೂ ಶೈವ ಮತ್ತು ವೀರಶೈವದ ಬಗೆ-ಬಗೆಯ ಪ್ರಕ್ರಿಯೆ ಗಳನ್ನು ಸೂಕ್ಷ್ಮವಾಗಿ ವಿವರಿಸುತ್ತವೆ ಮತ್ತು ಇಷ್ಟೆಲ್ಲಾ ಭಾಗವೂ ಈ ಅಧ್ಯಾಯದ ಆರಂಭದಲ್ಲಿಯೇ ಉಕ್ತವಾದ ಕ್ರಿಯಾಪಾದದಲ್ಲಿಯೇ ಬರುತ್ತದೆಂಬುದನ್ನು ಮರೆಯ ಲಾಗದು. ಶ್ರೀನಿಜಗುಣ ಶಿವಯೋಗಿಗಳು"ಮತ್ತಮಾ ಸಿದ್ಧಾಂತ ಭೇದಂಗಳಾವವೆಂದೊಡೆ" ಎಂದು ಹೇಳಿ ಕಾಮಿಕಾದಿ ವಾತುಲಾಂತ ೨೮ ದಿವ್ಯಾಗಮಂಗಳ ಹೆಸರುಗಳನ್ನು ಕ್ರಮ ವಾಗಿಕೊಡುತ್ತಾರೆ. ಇವು ಶಿವಾಗಮಾಗಳಲ್ಲಿ ಉಕ್ತವಾದ ರೀತಿಯಲ್ಲಿಯೇ ಬಂದಿವೆ

---

೮ ಕಾಮಿಕಂ ಯೋಗಜಂ ಚಿಂತ್ಯಂ ಕಾರಣ ಅಜಿತಂ ತಥಾ।
ದೀಪ್ತಂ ಸೂಕ್ಷ್ಮಂ ಸಹಸ್ರಂ ಚ ಅಂಕುಮಾನ್ ಸುಪ್ರಭೇದಕಂ। →

ಒಂದೆರಡರ ಹೆಸರುಗಳಲ್ಲಿ ಮಾತ್ರ ಹೆಚ್ಚು ಕಡಿಮೆಯಿದೆ. ಇಲ್ಲಿ ನಾವೊಂದು ಸಂಗತಿಯನ್ನು ಸ್ಮರಣದಲ್ಲಿಡಬೇಕು. ಅದೇನಂದರೆ, ಕೆಲವುಗಳಿಗೆ ಒಂದೊಂದು ಆಗಮಕ್ಕೂ ಬೇರೆ ಬೇರೆ ನಾಮಗಳುಂಟು. ಆದ್ದರಿಂದ ಹೆಸರಿನಲ್ಲಿ ಕೆಲವು ಬದಲಿಯಾಗಿರಬಹುದು. ಈ ೨೮ ಶಿವಾಗಮಗಳೆಲ್ಲವೂ ಸದಾಶಿವನ ಪಂಚ ಮುಖಗಳಿಂದ ಉದ್ಭವಿಸಿವೆ ಎಂದು ಹೇಳಿದೆ ಮತ್ತು ಯಾವ ಯಾವ ಮುಖದಿಂದ ಯಾವ ಯಾವದು ಉತ್ಪತ್ತಿಯಾಗಿದೆಯೆಂಬುದನ್ನು ಸ್ಪಷ್ಟಪಡಿಸಲಾಗಿದೆ. ಹಾಗೆಯೆ, ಮೊದಲಿನ ಹತ್ತು ಶಿವಭೇದಗಳೆನಿಸುವವೆಂದೂ, ಅನಂತರದ ಹದಿನೆಂಟು ರುದ್ರಭೇದಗಳೆನಿಸುವವೆಂದೂ ಖಚಿತವಾಗಿ ಉಲ್ಲೇಖಿಸಿದೆ. ಬಳಿಕ ಆಯಾ ಆಗಮಗಳ ಗುರು–ಶಿಷ್ಯ–ಪ್ರಶಿಷ್ಯ ಪರಂಪರೆಯನ್ನು ಅತ್ಯಂತ ಬೋಧಪ್ರದವಾಗಿ ಬಿತ್ತರಿಸಲಾಗಿದೆ. ಇಲ್ಲಿಯೂ ಕೂಡ, ಶಿವನ ಸದ್ಯೋಜಾತ ಹಾಗೂ ವಾಮದೇವ ಮುಖಗಳಿಂದ ಹೊರಹೊಮ್ಮಿದ ಕಾಮಿಕಾದಿ ಸುಪ್ರಭೇದಾಂತಮಾದ ದಶ ಶಿವಭೇದಗಳ ಗುರುಪರಂಪರೆಯನ್ನು ಮೊದಲು ಪ್ರತಿಪಾದಿಸಿ, ಅಘೋರ, ತತ್ಪುರುಷ ಮತ್ತು ಈಶಾನ ಮುಖಗಳಿಂದ ಆವಿರ್ಭವಿಸಿದ ವಿಜಯಾದಿ ವಾತುಲಾಂತಮಾದ ಅಷ್ಟಾದಶ ರುದ್ರಭೇದಗಳಿಗೆ ಸಂಬಂಧಿಸಿದ ಗುರು ಪರಂಪರೆಯನ್ನು ಪ್ರತ್ಯೇಕವಾಗಿಯೇ ನಿರೂಪಿಸಿದೆ.

ಶ್ರೀ ನಿಜಗುಣರು ಕೊಡುವ ಆಗಮ ಸಂಖ್ಯೆಯೂ ಕೂಡ ಗಮನಾರ್ಹವಾಗಿದೆ. ಸಂಶೋಧಕರು ಗ್ರಂಥಾಂತರಗಳಿಂದ ತೆಗೆದುಕೊಂಡ ಆಗಮ ಸಂಖ್ಯೆಯೊಡನೆ ಇದನ್ನು ಹೋಲಿಸಿದರೆ, ಒಳ್ಳೆ ಸ್ವಾರಸ್ಯಕರವಾದ ಮಾಹಿತಿ ಲಭಿಸುತ್ತದೆ. ಆದರೆ, ಅದು ಸದ್ಯದ ಉದ್ದೇಶಕ್ಕೆ ಹೊರತಾದುದು. ಅಂತೆಯೆ, ಪ್ರತಿಯೊಂದು ಆಗಮಕ್ಕೆ ಸಂಬಂಧಿಸಿದ ಉಪಾಗಮಗಳನ್ನು ಶ್ರೀ ಶಿವಯೋಗಿಗಳು ಉಲ್ಲೇಖಿಸಿದ್ದಾರೆ. ಉದಾಹರಣೆಗಾಗಿ "ಉತ್ತರ, ಭೈರವೋತ್ತರ, ನಾರಸಿಂಹವೆಂಬವೇ ಕಾಮಿಕಾಗಮದ ತ್ರಿಭೇದಂಗಳು........ವಾತುಲ, ಉತ್ತರ ವಾತುಲ, ಕಾಲಜ್ಞಾನ, ಪರೋಚಿತ, ಸರ್ವಾಗಮ, ಸರ್ವೇಷ್ಟಾಗಮ, ಶ್ರೇಷ್ಠಾಗಮ, ನಿತ್ಯಾಗಮ, ಶುದ್ಧಾಗಮ, ಮಹಾನಾಗಮ, ವಿಶ್ವಾಸಾಗಮ, ವಿಶ್ವಾತ್ಮಕಾಗಮವೆಂದು ವಾತುಲಾಗಮದ ದ್ವಾದಶಭೇದಂಗಳಕ್ಕುಂ." ಇಲ್ಲಿ ಗಮನಿಸಬೇಕಾದ ಒಂದೆರಡು ಅಂಶಗಳಿವೆ. ಉಪಾಗಮಗಳ ಸಂಖ್ಯೆಯ ಬಗ್ಗೆ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಆದರೂ ಸಾಮಾನ್ಯವಾಗಿ ೨೦೦ ಅಥವಾ ೨೦೮ ಎಂದು ಹೇಳುವದು ಅಂಗೀಕೃತ ಅಭಿಪ್ರಾಯ.

---

→ ವಿಜಯಂ ಚೈವ ನಿಶ್ವಾಸಂ ಸ್ವಯಂಭೂಮಥಾನಲಂ।
ವೀರಂ ಚಕಾರವಂ ಚೈವ ಮಕುಟಂ ವಿಮಲಂ ತಥಾ।
ಚಂದ್ರಜ್ಞಾನಂ ಚ ಬಿಂಬಂ ಚಪ್ರೋದ್ಗೀತಂ ಲಲಿತಂ ತಥಾ।
ಸಿದ್ಧಂ ಸಂತಾನ ಸರ್ವೋಕ್ತಂ ಪಾರಮೇಶ್ವರ ಮೇವ ಚ।
ಕಿರಣಂ ವಾತುಲಂ ಚೈವ ಅಷ್ಟಾವಿಂಶತಿ ಸಂಹಿತಾಃ॥

ಸುಪ್ರಭೇದಾಗಮ, ತಂತ್ರಾವತಾರ ಪಟಲ: ೩

ಶ್ರೀ ನಿಜಗುಣ ಶಿವಯೋಗಿಗಳು "ನೂರತೊಂಬತ್ತಾರು" ಎಂದು ಹೇಳಿದ್ದರೂ, ಅವರು ೧೯೮ ಉಪಾಗಮಗಳ ಹೆಸರುಗಳನ್ನು ಉಲ್ಲೇಖಿಸಿದ್ದಾರೆ. ಆದರೆ, ಪಂ. ಉಮಾಪತಿ ಶಾಸ್ತ್ರಿಗಳು ೨ ಆಗಮಗಳ ೬ ಉಪಾಗಮಗಳನ್ನು ಪ್ರಕ್ಷಿಪ್ತವೆಂದು ಅಭಿಪ್ರಾಯಪಟ್ಟು, ಒಟ್ಟು ೧೯೨ ನ್ನು ಮಾತ್ರ ಹೆಸರಿಸುತ್ತಾರೆ. ಇದು ಇನ್ನಷ್ಟು ತಾಡವೋಲೆಯ ಮೂಲ ಗ್ರಂಥಗಳನ್ನು ಪರೀಕ್ಷಿಸಿ ನಿಷ್ಕರ್ಷಿಸಬೇಕಾದ ವಿಷಯ ಆಸಕ್ತರು ಇದರತ್ತ ಗಮನವನ್ನು ಹರಿಸಬೇಕೆಂದು ಕೋರಲಾಗಿದೆ.

ಶೈವಧರ್ಮದ ನಿಜ ತಿರುಳನ್ನು ತಿಳಿಯಲು ಅವಶ್ಯವಾಗಿ ಅವಲೋಕಿಸಬೇಕಾದ ಅಂಶಗಳೆಂದರೆ— ಆಗಮ ಪ್ರತಿಪಾದಿತ ಪದಾರ್ಥಗಳು, ಪಾದಾದಿ ವಿಷಯಗಳು ಮತ್ತು ಶೈವ ಭೇದಗಳು. ಶ್ರೀ ನಿಜಗುಣರು ನಿರೂಪಿಸಿರುವಂತೆ ಸಕಲಾಗಮಗಳಲ್ಲೂ ಕ್ರಿಯಾ ಪಾದ, ಚರ್ಯಾಪಾದ, ಯೋಗಪಾದ ಮತ್ತು ಜ್ಞಾನಪಾದಗಳೆಂಬ ನಾಲ್ಕು ಪಾದಗಳಿದ್ದು, ಎರಡು ವಿಧವಾದ ಷಟ್‌ಪದಾರ್ಥಗಳು ಈ ರೀತಿ ಉಕ್ತವಾಗಿವೆ. "ಪತಿ, ಕುಂಡಲನಿ, ಮಾಯೆ, ಪಶು, ಪಾಶ, ದೀಕ್ಷೆಯೆಂಬ ಷಟ್-ಪದಾರ್ಥಂಗಳೂ ಗುರುಮುಖದಿಂದ ನಿರ್ಗತ ಮಾದ ಜ್ಞಾನವೆಂಬ, ಪತ್ಯಾದಿ ಪದಾರ್ಥರೂಪ ಜ್ಞೇಯವೆಂಬ, ಲಿಂಗಾರ್ಚನಾರೂಪ ಮಾದ ಅನುಷ್ಠೇಯವೆಂಬ, ಭಸ್ಮಧಾರಣಾತ್ಮಕಮಾದ ಅಧಿಕೃತವೆಂಬ, ಶಿವ-ಮಂತ್ರ ರೂಪ ಸಾಧನವೆಂಬ, ಶಿವಸಮಾನತಾ ಮುಕ್ತಿರೂಪ ಸಾಧ್ಯವೆಂಬಾರು ಪದಾರ್ಥಂಗಳೂ ಪ್ರತಿಪಾದ್ಯಂಗಳಕ್ಕುಂ". ಶೈವ ಸಿದ್ಧಾಂತದ ತತ್ವಜ್ಞಾನದ ಮುಖ್ಯ ವಿಷಯಗಳು-ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕೃತ, ಸಾಧನ ಮತ್ತು ಸಾಧ್ಯ ಎಂಬೀ ಆರೇ. ಜ್ಞೇಯವು ಪುನಃ ಪತಿ, ಪಶು, ಪಾಶ, ಕುಂಡಲಿ, ಮಾಯೆ ಹಾಗೂ ದೀಕ್ಷೆ ಎಂದು ಆರು ಪ್ರಕಾರ ವಾಗಿದೆ. ಇವುಗಳಲ್ಲಿ ಪ್ರಮುಖವಾಗಿ ಪತಿ, ಪಶು, ಪಾಶಗಳೆಂಬ ತ್ರಿವಿಧ ಪದಾರ್ಥಗಳೇ ಜ್ಞೇಯಗಳು. ಇಲ್ಲಿ ಅನುಷ್ಠೇಯ—ಅಧಿಕೃತ, ಸಾಧ್ಯ-ಸಾಧನಗಳನ್ನು ನಿರೂಪಿಸಿರುವ ದನ್ನು ನೋಡಿದರೆ, ಶಿವಾಗಮ ಬೋಧೆ ತರ್ಕಪ್ರಧಾನವಾಗಿರದೆ, ಪ್ರಯೋಗ ಪ್ರಧಾನ ವಾಗಿದೆಯೆಂಬುದು ಸುಸ್ಪಷ್ಟವಾಗದಿರದು. ಇಲ್ಲಿ ಇನ್ನೂ ಒಂದು ಅಂಶ ಗಮನಾರ್ಹ ಇಲ್ಲಿ ವೀರಶೈವದಲ್ಲಿಯಂತೆ ಶಿವೈಕ್ಯವೇ ಮೋಕ್ಷದ ಸ್ಥಿತಿಯಾಗಿರದೆ, ಶಿವ ಸಮಾನತೆಯೇ ಮುಕ್ತಿ ಯಾಗಿದೆ. ಶೈವಕ್ಕೂ, ವೀರಶೈವಕ್ಕೂ ಮುಖ್ಯವಾಗಿರುವ ಅಂತರವೇ ಇದು. ಶೈವದ್ದು ಪರ್ಯವಸಾನದಲ್ಲಿಯೂ ದ್ವೈತವೇ; ಆದರೆ ವೀರಶೈವದ್ದು ಅದ್ವೈತ. ಆದ್ದರಿಂದ ನಿಜವಾದ ಅರ್ಥದಲ್ಲಿ ವೀರಶೈವವನ್ನೇ ಶಿವಾದ್ವೈತವೆಂದು ಕರೆಯಬೇಕು. ಆದರೂ ಇದೂ ಆಗಮೋಕ್ತವೇ.

ಶೈವದ ಸಪ್ತವಿಧ ಭೇದಗಳು ಪ್ರಸಿದ್ಧ. ಆದರೆ, ಅವು ಭಿನ್ನ ಭಿನ್ನ ರೀತಿಯಲ್ಲಿ ನಿರೂಪಿತಗೊಂಡಿವೆ. "ವಿವೇಕ ಚಿಂತಾಮಣಿ"ಯಲ್ಲಿ ಅನಾದಿಶೈವ, ಆದಿಶೈವ, ಮಹಾಶೈವ,

ಅನುಶೈವ, ಅವಾಂತರಶೈವ, ಪ್ರವರಶೈವ ಮತ್ತು ಅಂತರಶೈವ ಎಂಬುದಾಗಿ ಬಂದಿವೆ.[೯] ಈ ಏಳರಲ್ಲಿ ವೀರಶೈವವೂ ಒಂದು ಪ್ರಭೇದವಾಗಿ ಪ್ರತಿಪಾದಿತವಾಗಿಲ್ಲ. ನಿಜಗುಣರ ಈ ಸಪ್ತ ಶೈವಗಳ ವಿಷಯವು ಪಾಶುಪತಾಗಮದ ಧೋರಣೆಗೆ ಅನುಗುಣವಾಗಿದೆಯೆಂದು ಹೇಳಬಹುದಾಗಿದೆ. ಆದರೆ, ಅವಾಂತರ ಶೈವದ ಬದಲು ಅಲ್ಲಿ ಅನಂತರಶೈವ ಮತ್ತು ಅಂತರಶೈವದ ಬದಲು ಅಂತ್ಯಶೈವಗಳೂ ಉಕ್ತವಾಗಿವೆ. ಆದರೆ, ಅದೇ ಪಾರಮೇಶ್ವರಾಗಮದಲ್ಲಿ ಸಪ್ತವಿಧ ಶೈವಗಳಲ್ಲಿ ವೀರಶೈವವೂ ಸೇರುತ್ತದೆ ಮತ್ತು ಅದು ಸರ್ವೋತ್ಕೃಷ್ಟವೆಂದೂ, ಇತರ ಆರು ಭೇದಗಳು ವೀರಶೈವದ ಅಂಗಗಳೆಂದೂ ಅಲ್ಲಿ ಹೇಳಿರುವದನ್ನು ಗಮನಿಸಬೇಕು[೧೦]. ಹೀಗೆ ಹೇಳಿರುವದರಿಂದ ವೀರಶೈವವೇ ಮುಖ್ಯ, ಇತರ ಶೈವಗಳು ಅಮುಖ್ಯ ಎಂದಿಷ್ಟೇ ಅರ್ಥವಾಗುತ್ತದೆಯೋ ಅಥವಾ ವೀರಶೈವವೇ ಮೊದಲು, ಉಳಿದ ಶೈವ ಭೇದಗಳು ಅನಂತರದವು ಎಂದು ಅರ್ಥವಾಗುತ್ತದೆಯೋ ಎಂಬುದನ್ನು ವಿದ್ವಾಂಸರು ನಿಷ್ಕರ್ಷಿಸಬೇಕು. ಯಾಕಂದರೆ, ಈ ಒಂದು ಆಗಮದಲ್ಲಿ ಮಾತ್ರ ಇಂತಹ ಮಾತು ಬಂದಿದೆ. ಇಲ್ಲಿ ಶ್ರೀ ನಿಜಗುಣರು ಒಂದೊಂದು ಶೈವಭೇದದ ಲಕ್ಷಣವನ್ನು ಬಹು ಮನಂಬುಗುವಂತೆ ಪ್ರತಿಪಾದಿಸಿದ್ದಾರೆ. ಇದು ಅವರ ಬಹುಕೃತತ್ವ ಹಾಗೂ ಶಿವಾನುಭವಗಳಿಗೆ ಹಿಡಿದ ಕನ್ನಡಿಯಾಗಿದೆ. ಶ್ರೀ ನಿಜಗುಣರು ಮತ್ತೊಂದು ವಿಧವಾಗಿಯೂ ಶೈವ ಪ್ರಭೇದಗಳನ್ನು ನಿರೂಪಿಸಿದ್ದಾರೆ. ವಾಮ, ದಕ್ಷಿಣ, ಮಿಶ್ರ ಮತ್ತು ಸಿದ್ಧಾಂತ[೧೧] ಕೆಲವು ಪಂಡಿತರ ಪ್ರಕಾರ ಸಿದ್ಧಾಂತವೇ ವೀರಶೈವವಾಗಿದೆ. "ಬಳಿಕಾ ಶೈವಂಗಳಲ್ಲಿ ಮುಖ್ಯವಾದ ಸಾಮಾನ್ಯ ಶೈವ, ಮಿಶ್ರ ಶೈವ, ಶುದ್ಧ ಶೈವ, ವೀರಶೈವವೆಂದು ಚತುರ್ವಿಧ ಶೈವಂಗಳು" ಎಂದು ಪುನಃ ಶೈವದ ನಾಲ್ಕು ಪ್ರಕಾರಗಳನ್ನು "ವಿವೇಕ ಚಿಂತಾಮಣಿ"ಯಲ್ಲಿ ವಿವೇಚಿಸಿದೆ;

---

೯ ಅನಾದಿ ಶೈವಂ ಪ್ರಥಮಮಾದಿ ಶೈವಂ ದ್ವಿತೀಯಕಂ।
ಮಹಾಶೈವಂ ತೃತೀಯಂ ಸ್ಯಾದನು ಶೈವಂ ಚತುರ್ಥಕಂ॥
ಅನಂತರಂ ಪಂಚಮಂ ಚಷಷ್ಠಂ ಪ್ರವರ ಶೈವಕಂ।
ಅಂತ್ಯಶೈವ ಮಿತಿ ಪ್ರೋಕ್ತಂ ಸಪ್ತಮಂ ಶೃಣುಯತ್ಪ್ರಿಯೇ॥

ಪಾಶು. ೧.೩-೪

೧೦ ಶೈವಂ ಸಪ್ತವಿಧಂ ಪುಣ್ಯಂ ವೀರಶೈವಾದಿ ಭೇದತಃ।
ವೀರಶೈವಂ ತಥಾಽನಾದಿ ಶೈವಂ....। ಸಪ್ತಮಂ ಜ್ಞಾನ-ಶೈವಾಖ್ಯಂ ತತ್ರ
ಸರ್ವೋತ್ತಮೋತ್ತಮಂ-ವೀರಶೈವ ಮಿತೀಶಾನಿ ತದಂಗಾನೀತರಾಣಿತು॥

—ಪಾರ. ತಂ.

೧೧ ಪುನರೇವಹಿ ಶೈವಾನಾಂ ಚತುರ್ವಿಧ ಮನಂತರಂ।
ವಾಮದಕ್ಷಿಣಮಿಂಶ್ರಾಣಂ ಸಿದ್ಧಾಂತಂ ತತ್ವವೇದಿಭಿಃ॥

—ಪಾಶು. ೧.೧೧

ಅಲ್ಲದೆ, ಅವುಗಳ ಯಥಾರ್ಥ ಲಕ್ಷಣಗಳನ್ನು ಹೇಳಿದೆ. ಆದರಲ್ಲೂ, ಶುದ್ಧಶೈವದ ಹಲವಾರು ಸಂಗತಿಗಳನ್ನು ಹದವರಿತು ಶ್ರೀ ನಿಜಗುಣರು ನಿರೂಪಿಸಿದ್ದಾರೆ. ಶುದ್ಧ ಶೈವ ವಿಷಯ, ವಿಭೂತಿ ಭೇದಂಗಳು, ವಿಭೂತಿ ಧಾರಣ, ವಿಭೂತಿ ಧಾರಣಕ್ರಮ, ರುದ್ರಾಕ್ಷಿ ಧಾರಣಕ್ರಮ, ರುದ್ರಾಕ್ಷ ದೇವತಾಫಲ, ರುದ್ರಾಕ್ಷಧಾರಣ ಬೀಜಮಂತ್ರ—ಇವೇ ಮೊದಲಾದ ವಿಷಯಗಳು ಬಹು ವಿಸ್ತಾರವಾಗಿ ವರ್ಣಿತವಾಗಿವೆ. ಮಂತ್ರ-ಮಂತ್ರಜಪಗಳ ವಿಷಯವಂತೂ ಬಹು ವಿಸ್ತೃತವಾಗಿ, ವಿವರವಾಗಿ, ಅಪರೂಪವಾಗಿ ಬಂದಿದೆ. ಅಂತೆಯೆ ಶಿವ ಪೂಜಾ ವಿಷಯಾದಿಗಳೂ ಕೂಡ ಬಹು ಮನೋಜ್ಞವಾಗಿ ಪ್ರತಿಪಾದಿತವಾಗಿವೆ. ನವ ವಿಧ ಭಕ್ತಿಗಳ ಉಲ್ಲೇಖವೂ ಶುದ್ಧ ಶೈವದಲ್ಲಿಯೇ ಬಂದಿದೆ.

ವೀರಶೈವ ಲಕ್ಷಣವಂತೂ ಅತ್ಯಂತ ಸಮುಚಿತವಾದ ಶಬ್ದಗಳಲ್ಲಿ ಪಡಿಮೂಡಿವೆ. ಸಾಮಾನ್ಯ ವೀರಶೈವ, ವಿಶೇಷ ವೀರಶೈವ ಹಾಗೂ ನಿರಾಭಾರಿ ವೀರಶೈವವೆಂದು ವೀರಶೈವ ಭೇದಗಳನ್ನು ಹೇಳಿ,೧೨ ವಿಶೇಷ ವೀರಶೈವನ ದೀಕ್ಷಾಕ್ರಮವನ್ನು ಶ್ರೀ ನಿಜಗುಣರು ಅದೆಷ್ಟು ವಿಷದವಾಗಿ, ಮನೋಜ್ಞವಾಗಿ ಹೇಳಿರುವರೆಂದರೆ, ಬಹುಶಃ ವೀರಶೈವವನ್ನು ತಿಳಿದುಕೊಳ್ಳಲು ಇಷ್ಟೇ ಸಾಕೇನೋ ಎನ್ನುವಂತಿವೆ. ಅವರು ನಿರೂಪಿಸಿದ ತ್ರಿವಿಧದೀಕ್ಷೆ ಸಪ್ತವಿಧ ದೀಕ್ಷೆ ಮೊದಲಾಗಿ ವಿಷಯಗಳು ಬಹು ಸುಂದರವೂ,ಸಮನ್ವಯಾತ್ಮಕವೂ ಆಗಿವೆ. ಅವರು ಶುದ್ಧಶೈವದಲ್ಲಿ ಹೇಳಿರುವಷ್ಟೇ ವಿಸ್ತಾರವಾಗಿ ಇಲ್ಲಿಯೂ ಕೂಡ ಭಸ್ಮಧಾರಣಾದಿಗಳ ವಿಷಯಗಳನ್ನು ಬಹಳ ವಿವರವಾಗಿ ಬರೆದಿದ್ದಾರೆ. ಈ ಎಲ್ಲ ವಿಷಯಗಳನ್ನು ಮೂಲಗ್ರಂಥದಿಂದಲೇ ಬಲ್ಲ ಮಹಾನುಭಾವರಿಂದ ತಿಳಿದುಕೊಳ್ಳಬೇಕು. ಬಹುಶಃ ಶ್ರೀ ನಿಜಗುಣರ ಅಭಿಪ್ರಾಯದಲ್ಲಿ ಶುದ್ಧ ಶೈವಕ್ಕೂ, ವೀರಶೈವಕ್ಕೂ ಬಹಳಷ್ಟು ಸಾಮ್ಯಗಳಿವೆ. ಆದ್ದರಿಂದ ಅವರು ತಮ್ಮ ಗ್ರಂಥದಲ್ಲಿ ವೀರಶೈವಕ್ಕೆ ಎಷ್ಟು ಆದ್ಯತೆ ನೀಡಿ ಬರೆದಿದ್ದಾರೋ ಅಷ್ಟೇ ಮುಖ್ಯತೆ ನೀಡಿ ಶುದ್ಧ ಶೈವವನ್ನೂ ನಿರೂಪಿಸಿದ್ದಾರೆ. ಬಹುಶಃ ಅವರ ಕಾಲಕ್ಕೆ ಅಥವಾ ಬಸವಾದಿ ಪ್ರಮಥರ ಕಾಲಕ್ಕೂ ಸ್ವಲ್ಪ ಮುಂಚಿತವಾಗಿ ಈ ಶುದ್ಧ ಶೈವವೇ ಬಹು ವ್ಯಾಪಕವಾಗಿ ಪ್ರಚಾರದಲ್ಲಿರಬೇಕು. ಅವರಲ್ಲನೇಕರು ಬಸವಣ್ಣನವರ ಕಾಲಕ್ಕೆ ಆಗಲೇ ಇದ್ದ ವೀರಶೈವವನ್ನು ಬಸವಣ್ಣನವರು ಮಾಡಿದ ಮೂಲಭೂತ ಸುಧಾರಣೆಗಳೊಂದಿಗೆ ಅಂಗೀಕರಿಸಿರಬಹುದು. ಅಂತೂ, ಶ್ರೀ ನಿಜಗುಣರ ಕಾಲಕ್ಕೆ ಈ ಶುದ್ಧ ಶೈವವನ್ನೇ ವೀರಶೈವವೆಂದು ಭಾವಿಸುವವರಿದ್ದಿರಬೇಕು. ಅವರ ಭ್ರಮನಿರಸನಕ್ಕಾಗಿಯೇ ವೀರಶೈವದಷ್ಟೇ ವಿಸ್ತಾರವಾಗಿ ಅದನ್ನೂ ನಿರೂಪಿಸಿ, ಅವೆರಡರಲ್ಲಿ ಅನೇಕ

---

೧೨ ಹೋಲಿಸಿ:

ಸಾಮಾನ್ಯವೀರಶೈವೇತಿ ವೀರಶೈವಮತಃ ಪರಂ।
ವಿಶೇಷವೀರಶೈವೇತಿ ನಿರಾಭಾರೀ ತಥೈವ ಚ॥

—ಪಾಶು. ೧.೧೬.

(ಇಲ್ಲಿ ನಾಲ್ಕು ವೀರಶೈವದ ಭೇದಗಳನ್ನು ಹೇಳಿದೆ).

ಸಾಮ್ಯಗಳಿದ್ದರೂ,ಎರಡೂ ಒಂದೇ ಅಲ್ಲ ಎನ್ನುವದನ್ನು ಎತ್ತಿತೋರಿಸಿರಬೇಕು. ಯಾಕಂದರೆ, ಶುದ್ಧ ಶೈವದಲ್ಲಿ ಪ್ರತಿಪಾದಿತವಾದ ವಿಷಯುಗಳೇ ಪುನಃ ವೀರಶೈವದಲ್ಲಿಯೂ ಪ್ರತಿಪಾದನ ಗೊಂಡಿವೆ. ಆದರೆ, ಅಲ್ಲಿಯ ವಿವರಗಳೇ ಬೇರೆ; ಇಲ್ಲಿಯ ವಿವರಗಳೇ ಬೇರೆ. ಇದು ಶ್ರೀ ನಿಜಗುಣರ ವಿಷಯ ಪರಿಜ್ಞಾನಕ್ಕೆ ಸಬಲ ಸಾಕ್ಷಿಯಾಗಿದೆ. ಇಲ್ಲಿ ನಿಜಗುಣರು ನಿರೂಪಿಸಿದ ಎರಡರಲ್ಲಿಯ ಸಾಮ್ಯ-ವೈಷಮ್ಯಗಳನ್ನು ವಿವೇಚಿಸಲಿಕ್ಕೆ ಅವಕಾಶವಿಲ್ಲ. ವಿಸ್ತಾರದ ಹಾಗೆ ಮಾಡಿಲ್ಲ.

ಶ್ರೀ ನಿಜಗುಣರು ವಿವೇಚಿಸಿದ ಷಟ್-ಸ್ಥಲ ವಿಚಾರವು ಅತ್ಯಂತ ಸುಂದರವಾದ ಭಾಗ ಅದನ್ನೇ ಒಂದು ಸ್ವತಂತ್ರ ಅಧ್ಯಯನವಾಗಿ ಕೈಕೊಳ್ಳಲು ತಕ್ಕುದಾಗಿದೆ. "ವಿಶೇಷ ವೀರಶೈವ ಷಟ್‌ಸ್ಥಲ ವಿಷಯ" ಎಂದೇ ಪ್ರಾರಂಭವಾಗುವ ಈ ಸಿದ್ಧಾಂತ ವಿಷಯ ಬಹು ಮನೋಜ್ಞವಾಗಿ ವಿವೇಚನೆಗೊಂಡಿದೆ. ಶ್ರೀ ನಿಜಗುಣರು ಭಕ್ತಿ, ಕರ್ಮಕ್ಷಯ ನಿರ್ಮಲ ಮತಿ, ವಿಚಾರ, ದರ್ಪ ಸಂಕ್ಷಯ ಮತ್ತು ಸಮ್ಯಜ್ಞಾನಗಳು ಕ್ರಮವಾಗಿ ಭಕ್ತಾದಿ ಐಕ್ಯಾಂತ ಮಾದ ಆರು ಸ್ಥಲಗಳ ಫಲಗಳಾಗಿವೆಯೆಂದು ಹೇಳಿದ್ದಾರೆ. ಇಲ್ಲಿ ನಾವು ಒಂದು ಮಹತ್ವದ ಮಾತನ್ನು ಗಮನಿಸಬೇಕು. ಅದೆಂದರೆ, ಭಕ್ತಿಯಿಂದ ಸಮ್ಯಜ್ಞಾನದವರೆಗಿನ ಆರನ್ನು ಷಟ್-ಸ್ಥಲಗಳ ಉಪಾಂಗಷಟ್ಕವೆಂಬುದಾಗಿ[೧೩] ಪಾರಮೇಶ್ವರ ತಂತ್ರದಲ್ಲಿ ವರ್ಣಿತವಾಗಿವೆ. ಇಲ್ಲಿ ಶ್ರೀ ನಿಜಗುಣರ ಅನುಭವ ನಿಷ್ಠತೆಯನ್ನು ಗುರುತಿಸಿಕೊಳ್ಳ ಬಹುದು. ಭಕ್ತಾದಿ ಷಟ್-ಸ್ಥಲಗಳಿಗೆ ಸಂಬಂಧಿಸಿದಂತೆ ೧) ಷಡಂಗಗಳು-ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಮತ್ತು ಆತ್ಮ; ೨) ಆರು ಹಸ್ತಗಳು- ಚಿತ್ತ, ಮನ, ಬುದ್ಧಿ, ಅಹಂಕಾರ, ಜ್ಞಾನ, ಭಾವ (ಇಲ್ಲಿ 'ಕ್ರಮ'ದಲ್ಲಿ ಹೆಚ್ಚು-ಕಡಿಮೆಯಾಗಿದೆ. 'ಮನ' ನಾಲ್ಕನೆಯ ಸ್ಥಾನದಲ್ಲಿ ಬಂದರೆ ಉಳಿದವು ಕ್ರಮಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತವೆ); ೩) ಆರು ಸಾದಾಖ್ಯಗಳು- ಕರ್ಮ, ಕರ್ತೃ, ಮೂರ್ತಿ, ಅಮೂರ್ತಿ, ಶಿವ ಹಾಗೂ

---

೧೩. ಗಮನಿಸಿರಿ:

ಸರ್ವಜ್ಞತಾ ತೃಪ್ತಿರನಾದಿ ಬೋಧಃ ಸ್ವತಂತ್ರತಾ ನಿತ್ಯಮಲುಪ್ತಶಕ್ತಿಃ|
ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಷಡ| ಹುರಂಗಾನಿ ಅಥ ಷಟ್-ಸ್ಥಲಾನಿ||
(ಅಂಗಷಟ್ಕ) —ಪಾರ. ತಂ. ೬.೩೩.

ಭಕ್ತಿಃ ಕರ್ಮಕ್ಷಯೋ ಬುದ್ಧಿರ್ವಿಚಾರೋ ದರ್ಪಸಂಕ್ಷಯಃ|
ಸಮ್ಯಗ್‌ಜ್ಞಾನಮಿತಿ ಪ್ರೋಕ್ತಂ ಸ್ಥಲಷಟ್ಕಂ ಮಮಪ್ರಿಯಂ||
(ಉಪಾಂಗಷಟ್ಕ) —ಪಾರ. ತಂ. ೬.೪೨.೨.

(ಇಲ್ಲಿ ಪಾರಮೇಶ್ವರ ತಂತ್ರದಲ್ಲಿ ಅಂಗ-ಉಪಾಂಗಗಳನ್ನು ಹೇಳಿರುವುದು ನಿಜಕ್ಕೂ ತತ್ವನಿಷ್ಠ; ಅನುಭವನಿಷ್ಠ. ಅಲ್ಲದೆ, ಇವುಗಳ ಸಮನ್ವಯ ಹಾಗೂ ಉತ್ತರೋತ್ತರ ವಿಕಾಸಕ್ರಮವೂ ಉಕ್ತವಾಗಿದೆ.)

ಮಹಾಸಾದಾಖ್ಯ; ೪) ಆರು ಶಕ್ತಿಗಳು– ಕ್ರಿಯಾ, ಜ್ಞಾನ, ಇಚ್ಛಾ, ಆದಿ, ಪರಾ ಮತ್ತು ಚಿತ್; ೫) ಆರು ಲಿಂಗಗಳು– ಆಚಾರ, ಗುರು, ಶಿವ, ಜಂಗಮ, ಪ್ರಸಾದ ಮತ್ತು ಮಹಾಲಿಂಗ; ೬) ಆರು ಕಲೆಗಳು– ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ, ಶಾಂತ್ಯತೀತ ಹಾಗೂ ಶಾಂತ್ಯತೀತೋತ್ತರ; ೭) ಆರು ಮುಖಗಳು–ಘ್ರಾಣ, ಜಿಹ್ವೆ ನೇತ್ರ, ತ್ವಕ್ಕು, ಶ್ರೋತ್ರ ಮತ್ತು ಹೃದಯ; ೮) ಆರು ಪದಾರ್ಥಗಳು– ಗಂಧ, ರಸ, ರೂಪು, ಸ್ಪರ್ಶ, ಶಬ್ದ ಮತ್ತು ಪರಿಣಾಮ; ೯) ಆರು ಭಕ್ತಿಗಳು– ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸಭಕ್ತಿ– ಹೀಗೆ ನವವಿಧ ಸಕೀಲಗಳನ್ನು ವೀರಶೈವದ ಪ್ರಕ್ರಿಯೆಗನುಗುಣವಾಗಿ, ಬಹು ಹೃದಯಂಗಮವಾದ ರೀತಿಯಲ್ಲಿ ಶ್ರೀನಿಜಗುಣರು ಉಲ್ಲೇಖಿಸಿದ್ದಾರೆ. ನಿಜವಾಗಿಯೂ, ಈ ಸಕೀಲಗಳಲ್ಲಿ ಅಡಕವಾದ ಅನುಭವ ವಿಧಾನವನ್ನು ಶ್ರೀಗುರು ಮುಖದಿಂದ ಅರಿತುಕೊಂಡು, ಅದರಂತೆ ನಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ನಿಜಕ್ಕೂ ಇದೇ ವೀರಶೈವದ ನಿಜಹೃದಯ. ಈ ಷಟ್‌ಸ್ಥಲ ವಿಷಯವು ವೇದಪುರಾಣಾಗಮಗಳ ಸಾರವೇ ಆಗಿದೆಯೆಂದೂ, ಇದು ಸರ್ವೋತ್ಕೃಷ್ಟವಾಗಿದೆಯೆಂದೂ ಶ್ರೀ ನಿಜಗುಣರು ಉದ್ಘೋಷಿಸಿದ್ದಾರೆ.

ಮೇಲಿನಂತೆ "ಆಚರಿಸುವಲ್ಲಿ ಮೊದಲ ಭಕ್ತಸ್ಥಲದೊಳ್ ಆಚಾರಾದಿ ಮಹಾಲಿಂಗಾಂತಮಾದ ಷಡ್ವಿಧ ಲಿಂಗಂಗಳ್ ಒಂದೊಂದು ಕ್ರಿಯಾಭೇದದಿಂ ಮೂರು ಮೂರಾಗಿ ಹದಿನೆಂಟು ತೆರನಾಗಿರ್ಪುದು" ಎಂದು ಹೇಳಿ, ಶ್ರೀ ನಿಜಗುಣ ಶಿವಯೋಗಿಗಳು ಆಚಾರ ಲಿಂಗದ ಸದಾಚಾರ, ನಿಯತಾಚಾರ, ಗಣಾಚಾರ; ಗುರುಲಿಂಗದ ದೀಕ್ಷೆ, ಶಿಕ್ಷೆ, ಸ್ವಾನುಭಾವ; ಶಿವಲಿಂಗದ ಇಷ್ಟ, ಪ್ರಾಣ, ಭಾವ; ಜಂಗಮಲಿಂಗದ ಸ್ವಯ, ಚರ, ಪರ; ಪ್ರಸಾದಲಿಂಗದ ಶುದ್ಧ, ಸಿದ್ಧ, ಪ್ರಸಿದ್ಧ ಮತ್ತು ಮಹಾಲಿಂಗದ ಪಿಂಡಜ, ಅಂಡಜ, ಬಿಂದ್ವಾಕಾಶ–ಹೀಗೆ ಹದಿನೆಂಟು ಲಿಂಗಗಳ ಅನುಭವಗಮ್ಯ ನಿರೂಪಣೆ ಮಾಡುವಾಗ ಒಂದೊಂದರ ಹೆಸರು ಹಾಗೂ ಲಕ್ಷಣಗಳನ್ನು ಬಹು ಸುಂದರವಾಗಿ ಪ್ರತಿಪಾದಿಸಿದ್ದಾರೆ.[೧೪] ಅವರು ಇಲ್ಲಿ ವಿವೇಚಿಸಿದ ವಿಷಯ ಅದೆಷ್ಟು ಅನುಭವಗಮ್ಯವೂ, ಆಚಾರನಿಷ್ಠವೂ ಆಗಿದೆಯೆಂಬುದಕ್ಕೆ

---

೧೪ ದೀಕ್ಷಾಶಿಕ್ಷಾನುಭಾವಶ್ಚ ಗುರುಲಿಂಗಂ ತ್ರಿಧಾಭವೇತ್।
ಸದಾಚಾರಸ್ತು ನಿಯತೋಗಣಾಚಾರಸ್ತಥಾ ಪರಃ।
ಶುದ್ಧಂಸಿದ್ಧಂ ಪ್ರಸಿದ್ಧಂ ಚ ಭೇದಂ ಚೈಷಾಮಥೋಚ್ಯತೆ।
ಸ್ವಯಂ ಚರಂ ಪರಂಚೇತಿ ತ್ರೈವಿಧ್ಯಂ ಸಮುಪಾಗತಂ।
ಇಷ್ಟಲಿಂಗಂ ಪ್ರಾಣಲಿಂಗಂ ಭಾವಲಿಂಗಮಿತಿ ಪ್ರೋಕ್ತಂ।
ಪಿಂಡಜಂ ಪ್ರಥಮಂ ಪ್ರೋಕ್ತಮಂಡಜಂ ಚ ತತಃ ಪರಂ।
ಬಿಂದ್ವಾಕಾಶಂ ತತೋಜ್ಞೇಯಮೇಷಾಂ ಲಕ್ಷಣಮುಚ್ಯತೆ॥
–ಸೂಕ್ಷ್ಮಾಗಮ: ೮, ೬, ೧೧, ೧೯, ೧೬, ೨೩, ೨೭, ೨೮.

ಉದಾಹರಣೆಯಾಗಿ ಪ್ರಸಾದಲಿಂಗದ ಶುದ್ಧ, ಸಿದ್ಧ, ಪ್ರಸಿದ್ಧ ಈ ಮೂರರ ವಿವೇಚನೆಯನ್ನು ಅವರ ಶಬ್ದಗಳಲ್ಲಿಯೇ ಇಲ್ಲಿ ನೋಡಿಕೊಳ್ಳಬಹುದು. "ಬಳಿಕ ಶುದ್ಧ, ಸಿದ್ಧ, ಪ್ರಸಿದ್ಧವೆಂಬ ಪ್ರಸಾದಲಿಂಗ ತ್ರಿವಿಧವು, ಅವರಲ್ಲಿ ಗುರುಭುಕ್ತಶೇಷವೇ ಶುದ್ಧವೆನಿಸುವದು. ಲಿಂಗಭುಕ್ತಶೇಷವೇ ಸಿದ್ಧವೆನಿಸುವದು ಜಂಗಮಭುಕ್ತ ಶೇಷವೇ ಪ್ರಸಿದ್ಧವೆನಿಸುವದು ಅಥವಾ ಮತ್ತೆ ಪೂರ್ವದಲ್ಲಿದ್ದ ಸಕಲ ಗುಣಂಗಳಂ ತ್ಯಜಿಸಿ ಕಾಮಾದಿಗಳಂ ಬಿಟ್ಟು ಲಿಂಗಾಣತಿವಿಡಿದಿಹುದೇ ಶುದ್ಧವೆನಿಸುವುದು. ಶಿವಜ್ಞಾನೋದಯಮಾದುದೇ ಸಿದ್ಧವೆನಿಸುವದು ಶಿವೋಽಹಂಭಾವ ನಿಶ್ಚಲೀಕೃತಮಾದುದೇ ಪ್ರಸಿದ್ಧಮಕ್ಕುಂ." ಈ ವಿಷಯವನ್ನು ಸಾಧ್ಯವಿದ್ದ ಎಲ್ಲ ರೀತಿಗಳಲ್ಲೂ ಹೇಳುವ ಅವರ ನೈಜ ಪಾಂಡಿತ್ಯ ಮತ್ತು ಅನುಭವಗಳು ನಿಜವಾಗಿಯೂ ಅಗಾಧವಾಗಿವೆ. ಶುದ್ಧವೂ ಗುರುಭುಕ್ತ ಶೇಷವೂ ಹೌದು, ಲಿಂಗಾಣತಿಯಲ್ಲಿ ನಡೆದುಕೊಳ್ಳುವುದೂ ಹೌದು! ಸಿದ್ಧವು ಲಿಂಗಭುಕ್ತ ಶೇಷವೂ ಹೌದು, ಶಿವಜ್ಞಾನೋದಯುದ ಪರಿಶುದ್ಧ ಸ್ಥಿತಿಯೂಹೌದು! ಪ್ರಸಿದ್ಧವು ಜಂಗಮಭುಕ್ತಶೇಷವೂ ಹೌದು, ದೃಢತರ ವಾದಶಿವೋಽಹಂಭಾವವೂ ಹೌದು! ಇದು ಬರಿಯ ಶಾಸ್ತ್ರದ ರೀತಿಯಲ್ಲ; ಅನುಭಾವದ ಗಾಢವಾದ ತಾದಾತ್ಮ್ಯ!!

"ಮತ್ತಮಾ ಭಕ್ತನೇ ಆಚಾರಾದಿ ಷಡ್ವಿಧ ಲಿಂಗಗಳಲ್ಲಿ ವರ್ತನಾಭೇದದಿಂದಾರಾಗಿ ಮೂವತ್ತಾರು ತೆರನಾಗಿರ್ಪುದು" ಎಂದು ಹೇಳುತ್ತ ಶ್ರೀಮತ್ ನಿಜಗುಣ ಶಿವಯೋಗಿಗಳು ಆರೂ ಲಿಂಗಗಳ ಪ್ರತ್ಯೇಕ ಷಡ್ಭಕ್ತರನ್ನು ವರ್ಣಿಸಿದ್ದಾರೆ. ಒಂದೊಂದು ಲಿಂಗದಲ್ಲೂ ಭಕ್ತನು ವರ್ತನಭೇದದಿಂದ ಮೋಹಿ ಭಕ್ತ, ಪೂಜಕ, ವೀರ, ಪ್ರಸಾದಿ ಹಾಗೂ ಪ್ರಾಣಿ ಎಂದು ಆರು ಹೆಸರುಗಳನ್ನು ಪಡೆದುಕೊಳ್ಳುತ್ತಾನೆ.೧೫೫ ಉದಾಹರಣೆಗಾಗಿ, ಆಚಾರಲಿಂಗ ಮೋಹಿ, ಆಚಾರಲಿಂಗಭಕ್ತ, ಆಚಾರಲಿಂಗಪೂಜಕ, ಆಚಾರಲಿಂಗವೀರ, ಆಚಾರಲಿಂಗ ಪ್ರಸಾದಿ ಮತ್ತು ಆಚಾರಲಿಂಗಪ್ರಾಣಿ ಎಂಬುದು ಆಚಾರಲಿಂಗದ ಷಡ್ವಿಧ ಭಕ್ತರ ಹೆಸರುಗಳನ್ನು ನಿರ್ದೇಶಿಸುತ್ತದೆ. ಹಾಗೆಯೆ, ಇನ್ನುಳಿದ ಗುರುಲಿಂಗಾದಿ ೫ ಲಿಂಗಗಳಲ್ಲೂ ಆರಾರಂತೆ ಭಕ್ತರು ಕಂಡುಬರುತ್ತಾರೆ. ಹೀಗೆ ಒಟ್ಟು ೩೬ ಲಿಂಗಭಕ್ತಸ್ಥಲಗಳು ಇರುತ್ತವೆ. ಇಲ್ಲಿ ಬರುವ ಮೋಹಿ ಮೊದಲಾದವುಗಳ ಲಕ್ಷಣಗಳೂ ಕೂಡ ಅತ್ಯಂತ ಸ್ವಾರಸ್ಯಕರವಾಗಿವೆ. ಉದಾಹರಣೆಗಾಗಿ, ಗುರುಲಿಂಗದ ಷಡ್ಭಕ್ತರನ್ನು ನಾವು ನೋಡಿಕೊಳ್ಳಬಹುದು. "ಮಾತೃಪಿತೃ ಮೋಹಂಗಳಂ ಬಿಟ್ಟು ಗುರುಲಿಂಗದಲ್ಲಿ ಪ್ರೀತನೇ ಗುರುಲಿಂಗ ಮೋಹಿ. ಬಂಧುಗಳಿಗುಪಚಾರವನುಳಿದು ಗುರುವಿನೊಳಗನುರಾಗಿಯೇ ಗುರುಲಿಂಗ ಭಕ್ತನು. ಬೇರೊಂದು ಪೂಜೆಯನೊಲ್ಲದೆ ಗುರುಭಜನಾನ್ವಿತನೇ ಗುರುಲಿಂಗ ಪೂಜಕನು. ಅನ್ಯಮಾರ್ಗಮಂ ತ್ಯಜಿಸಿ ಗುರೂಕ್ತಮಾರ್ಗವರ್ತಿಯೇ ಗುರುಲಿಂಗವೀರನು. ಗುರುವಿನಾಜ್ಞಾವಶಂಗತನೇ ಗುರುಲಿಂಗಪ್ರಸಾದಿ. ಅನ್ಯಸೇವೆಯನುಲ್ಲಂಘಿಸಿ ಗುರುಸೇವಾ

---

೧೫೫ ಮೋಹೀಭಕ್ತಃ ಪೂಜಕಶ್ಚ ವೀರಶ್ಚೈವಪ್ರಸಾದವಾನ್ ||೩೯||
ಪ್ರಾಣೀಚ ಗುರುಲಿಂಗಾದಿಃ ಸರ್ವೇಭಕ್ತೋಽಪಿ ಷಡ್ವಿಧಃ|

ರತನೇ ಗುರುಲಿಂಗಪ್ರಾಣಿಯೆನಿಸಿಕೊಳ್ವಂ."೧೬ ಹೀಗೆಯೇ ಉಳಿದ ವಿವರಣೆಯೂ ಕೂಡ ಬಹು ಅನುಭವಪೂರ್ಣವೂ, ಶಾಸ್ತ್ರಶುದ್ಧವೂ ಆದ ರೀತಿಯಲ್ಲಿ ಬಂದಿರುತ್ತದೆ.

ಶ್ರೀ ನಿಜಗುಣರು ನೂರೊಂದು ಸ್ಥಲಗಳನ್ನು ಕೂಡ ಬಹಳೇ ಅರ್ಥವತ್ತಾಗಿ, ಅಷ್ಟೇ ಸಂಕ್ಷಿಪ್ತವಾಗಿ ನಿರೂಪಿಸಿದ್ದಾರೆ. "ಬಳಿಕಿಂತು ಷಟ್‌ಸ್ಥಲ' ಭೇದೋಪಭೇದಂಗಳ ನಾರೈದು ವರ್ತಿಸುವಲ್ಲಿ ಪಿಂಡಾದಿ ಜ್ಞಾನಶೂನ್ಯಾಂತಮಾದ ಏಕೋತ್ತರ ಶತಸ್ಥಲ ಕ್ರಮ ವಾಗಿಹವಾ ನೂರೊಂದು ಸ್ಥಲಗಳೊಳಗೆ ಮೊದಲಂಗಸ್ಥಲ ನಾಲ್ವತ್ತು ನಾಲ್ಕೆನಿಸಿ, ಮೇಲೆ ಲಿಂಗಸ್ಥಲವೈವತ್ತೇಳೆನಿಸಿಕೊಂಬುವು...." ಎಂದು ಅವರು ೧೦೧ ಸ್ಥಲಗಳಲ್ಲಿ ಪಿಂಡಸ್ಥಲವೇ ಪ್ರಪ್ರಥಮ ಸ್ಥಲವೆಂದೂ, ಜ್ಞಾನಶೂನ್ಯ ಸ್ಥಲವೇ ೧೦೧ನೆಯದೆಂದೂ ಸೂಚಿಸಿದ್ದಾರೆ ಮತ್ತು ಅಂಗಸ್ಥಲಗಳು ನಾಲ್ವತ್ತುನಾಲ್ಕು ಹಾಗೂ ಲಿಂಗಸ್ಥಲ ಐವತ್ತೇಳು ಎಂದು ತಿಳಿಸಿ ದ್ದಾರೆ. ಈ ೪೪ ಅಂಗಸ್ಥಲಗಳಾದ ಭಕ್ತಾದಿ ಐಕ್ಯಾಂತ ಆರು ಸ್ಥಲಗಳಲ್ಲಿ ಹಂಚಿ ಹೋಗಿವೆ ಎಂಬುದನ್ನೂ, ೫೭ ಲಿಂಗಸ್ಥಲಗಳು ಆಚಾರಲಿಂಗಾದಿ ಮಹಾಲಿಂಗಾಂತ ಆರು ಲಿಂಗಸ್ಥಲಗಳಲ್ಲಿ ವಿಭಾಗವಡೆದಿವೆಯೆಂಬುದನ್ನೂ ಅತ್ಯಂತ ಶಾಸ್ತ್ರೋಕ್ತ ರೀತಿಯಲ್ಲಿ ನಿರೂಪಿಸಿದ್ದಾರೆ. ಬಹುಶಃ ಇದರ ವಿವರಗಳು ಶಿವಾಗಮಗಳಿಗಿಂತಲೂ ಭಿನ್ನವಾದ ಆಕರಗ್ರಂಥಗಳಿಂದ ಸಂಗ್ರಹಿಸಿದವಾಗಿರಬಹುದು.

---

೧೬ ತ್ಯಕ್ತಪಿತ್ರಾದಿ ಮೋಹಃ ಸದ್ಗುರುಲಿಂಗೈಕಮೋಹವಾನ್ ॥೪೦॥
ಏವಂ ಯೋವರ್ತತೇ ದೇವಿ ಸಚ ಮೋಹಿತಿ ಕಥ್ಯತೇ।
ಲೌಕಿಕಾನ್ ಬಾಂಧವಾನ್ ತ್ಯಕ್ತ್ವಾ ಗುರುಲಿಂಗೈಕ ಬಾಂಧವಃ ॥ ೪೧ ॥
ಹರ್ಷಪೂರ್ಣೋ ಮಹಾದೇವಿ ಸ ತದ್ಭಕ್ತ ಇತಿಸ್ಮೃತಃ।
ಪೂಜಾಮನ್ಯಾಂ ಪರಿತ್ಯಜ್ಯ ಗುರುಲಿಂಗೈಕ ಪೂಜಕಃ ॥೪೨॥
ಇತಿ ನಿಷ್ಠಾಪರೋ ಯಸ್ತು ಸವೈತತ್ಪೂಜಕಃ ಸ್ಮೃತಃ।
ಗುರೂಪದಿಷ್ಟಮೇವ ಸಮಾಚರಣಮಾಚರನ್ ॥೪೩॥
ಯಶ್ಚ ತಕ್ತೇತರಾಚಾರೋ ಗುರುವೀರಃ ಸ ಉಚ್ಯತೇ।
ಯೋ ವೈಸ ಲಂಘಯೇಽದ್ದೇವಿ ಕದಾಚಿದ್ಗುರುಶಾಸನಂ ॥೪೪॥
ಸ ವೈ ಗುರು ಪ್ರಸಾದೀ ಸ್ಯಾನ್ನಿ ವೃತ್ತೇತರಶಾಸನಃ।
ಸೇವಾಮನ್ಯಾಂ ಪರಿತ್ಯಜ್ಯ ಗುರುಲಿಂಗೈಕ ಸೇವಕ ॥೪೫॥
ವರ್ತತೇ ಯಃ ಸ್ಥಿರತರೋ ಗುರುಪ್ರಾಣೀ ಸಹಿಸ್ಮೃತಃ।
ಏವಂ ಭೇಗೈಶ್ಚ ಮಾಂ ದೇವಿ ಗುರುಮೂರ್ತಿಧರಂ ಶಿವಂ ॥೪೬॥
ಭಜತೇ ಅನನ್ಯ ಚಿತ್ತೋಽಯಃ ಸಮುಕ್ತಃ ಸ್ಯಾತ್ ನ ಸಂಶಯಃ।
ಏವಮಾಚಾರಲಿಂಗೇಽಪಿ ಷಡ್ಭೇದಾಃ ಸಂಭವಂತಿಹಿ ॥೪೭॥

—ಸೂಕ್ಷ್ಮಾಗಮ: ೮.೩೯–೪೭.

ನಿರಾಭಾರಿ ವೀರಶೈವನ ವರ್ಣನೆಯಂತೂ ಅತುಲವಾಗಿದೆ. "ಬಳಿಕ ಗೃಹಾದಿ ಸರ್ವಸಂಸಾರ ಸೌಖ್ಯ ಪರಿಗ್ರಹಂಗಳಂ ಬಿಟ್ಟು ವಿದ್ಯೆಯೇ ಸತಿ, ಸಂತೋಷವೇ ಸುತನು, ವಿರಾಗವೇ ಬಂಧು, ಕ್ಷಮೆಯೇ ಪರಿಚಾರಕನು, ಶಾಂತಿಯೇ ಸಖಿಸು, ಭಕ್ತಿಯೇ ಮಾತೆ..." ಮುಂತಾಗಿ ಬರುವ ಶ್ರೀ ನಿಜಗುಣ ರಚಿತ ವರ್ಣನೆ ಅತ್ಯಗಾಧವಾಗಿದೆ. ಇದು ನಿಜಕ್ಕೂ ಅವರ ಸ್ವಾನುಭವದ ಸ್ವರ್ಣಮಯ ಪ್ರತಿಬಿಂಬ! ಇದು ಬಹಳೇ ಸ್ವಾರಸ್ಯಕರ; ಮೂಲ ವನ್ನು ನೋಡಿಯೇ ಆನಂದಿಸಬೇಕು. ಕೊನೆಯಲ್ಲಿ ಪ್ರಾಣಿಗಳ ತಾರತಮ್ಯವನ್ನು ಹೇಳು ವಾಗ ಷಟ್-ಸ್ಥಲ ಜ್ಞಾನಿಯಾದ ವೀರಶೈವನು ಸರ್ವೋತ್ಕೃಷ್ಟನು ಎಂಬುದನ್ನು "ಮುಮುಕ್ಷು ಗಳಿಂದಾ ಷಟ್‌ಸ್ಥಲಜ್ಞಾನಿಗಳಾದ ವೀರಶೈವರೇ ವಂದಿಸಲು, ಪೂಜಿಸಲು ಯೋಗ್ಯರಹು ದೆಂಬಿವು ಮೊದಲಾದವೆಲ್ಲವುಂ ಕ್ರಿಯಾಪಾದದಲ್ಲಿ ಪ್ರತಿಪಾದ್ಯಮಕ್ಕುಂ" ಎಂಬ ಶಬ್ದಗಳಿಂದ ನಿರ್ದೇಶಿಸುತ್ತಾರೆ ಮತ್ತು ಇಲ್ಲಿಗೆ ಕ್ರಿಯಾಪಾದವೂ ಮುಗಿಯಿತು. ವೀರಶೈವ ಸಿದ್ಧಾಂತದ ವಿವೇಚನೆಯೂ ಸಮಾಪ್ತಿಯಾಯಿತೆಂದು ಹೇಳುತ್ತಾರೆ. ನಿಜಕ್ಕೂ ಶ್ರೀ ನಿಜಗುಣರು "ವಿವೇಕ ಚಿಂತಾಮಣಿ"ಯಲ್ಲಿ ವಿವೇಚಿಸಿದ ವೀರಶೈವ ದರ್ಶನದ ಸ್ವರೂಪಾದಿಗಳನ್ನು ಕುರಿತು ಮನಸ್ಸು ತುಂಬುವಂತೆ ಬರೆದರೆ, ಅದೊಂದು ಸ್ವತಂತ್ರ ಗ್ರಂಥವೇ ಆಗುವಷ್ಟು ಸಾಮಗ್ರಿಯಿದೆ.

**ಕೈವಲ್ಯ ಪದ್ಧತಿ:** "ಕೈವಲ್ಯ ಪದ್ಧತಿ"ಯಲ್ಲಿ ಯೋಗ ಪ್ರತಿಪಾದನ ಸ್ಥಲದಲ್ಲಿ ಬರುವ ಶಿವಯೋಗ ಪ್ರತಿಪಾದನೆಯು ಶ್ರೀ ನಿಜಗುಣರ ಶಿವಯೋಗ ಶಾಸ್ತ್ರಜ್ಞಾನದ ಮತ್ತು ಶಿವಯೋಗಾನುಭಾವದ ಆಳವನ್ನು ಎತ್ತಿತೋರಿಸುತ್ತದೆ. ಶಿವಯೋಗದ ಸುದ್ದಿ ತೆಗೆದರೆ ಸಾಕು. ಅವರು ತಮ್ಮನ್ನು ತಾವೇ ಮರೆಯುತ್ತಾರೆ. "ಆವ ಪುಣ್ಯವೊ ಲಿಂಗ ಪೂಜಾ ವಿಧಿಯನುಭಾವವಹುದು ನರಜನ್ಮದೊಳು।...." ಎಂಬ ಸೂತ್ರದಲ್ಲಿ ನೀತಿಕ್ರಿಯಾ ಚರ್ಯ ಸ್ಥಲದಲ್ಲಿಯೇ ಶಿವಯೋಗದ ಸಂಭ್ರಮವನ್ನು, ಅದರ ಪರಿಣಾಮವನ್ನು ಬಹ್ಳ ವಾಗಿ ಸ್ತುತಿಸಿದ್ದಾರೆ. "ಪರತರ ಶಿವಲಿಂಗವೆಳಸಿ ನಿನಗಾಗಿ। ಕರಕಂಜದೊಳು ಕಾಣಿಸಿತು ಯೋಗಿ।ಯಜಿಸು॥" "ಪ್ರಾಣಲಿಂಗವಿದನು ಗುರುವಿ। ನಾಣತಿಯೊಳು ಕೇಳಿ ನೋಡಿ। ಮಾಣದೇ-ಚಿತ್ತದಿಂದ ಜಾನಿಪನೆ ಕೃತಾರ್ಥನು॥" "ಭಾವಲಿಂಗವನೆ ಬಿಡದೆ ನೀನು ಪರಿ-। ಭಾವಿಸು ಭೇದವಿಲ್ಲದೆ ಯೋಗಿ॥" ಮತ್ತು "ಮಾಡು ಶಿವಲಿಂಗ ಪೂಜೆಯನಂತರಂಗದೊಳು। ನೋಡಿ ಸುಖಮಯ ಸಾಧನಗಳಿಂದೊಲಿದು॥" ಎಂಬೀ ಸೂತ್ರಗಳಲ್ಲಿ ಶಿವಯೋಗದ ಅನುಷ್ಠಾನ ವಿಧಾನವನ್ನು ಅತ್ಯಂತ ಅನುಭವಪೂರ್ಣವೂ, ಸುಶಾಸ್ತ್ರೀಯವೂ ಆದ ಶೈಲಿ ಯಲ್ಲಿ ನಿರೂಪಿಸಿದ್ದಾರೆ. ಹೀಗೆ ವೀರಶೈವ ಸಿದ್ಧಾಂತವನ್ನು "ವಿವೇಕಚಿಂತಾಮಣಿ" ಯಲ್ಲಿಯೂ, ಅದರ ಅನುಷ್ಠಾನ ವಿಧಾನವನ್ನು "ಶಿವಯೋಗ"ದಲ್ಲಿಯೂ ಶ್ರೀ ನಿಜಗುಣರು ಉತ್ಕೃಷ್ಟವಾಗಿ ಬರೆದಿದ್ದಾರೆ.

**ಉಪಸಂಹಾರ:** ಶ್ರೀ ನಿಜಗುಣ ಶಿವಯೋಗಿಗಳು ನಿಃಸಂಶಯವಾಗಿಯೂ ಬಹುಶ್ರುತರು; ಬಹುಮುಖ ಪ್ರತಿಭಾನ್ವಿತರು. ಮತಿಭ್ರಾಂತರು, ಮತಭ್ರಾಂತರ ಕೈಯಲ್ಲಿ

ಸಿಕ್ಕಿಹಾಕಿಕೊಂಡಿರುವ ಅವರು ತಮ್ಮ ಸಹಜ ಪ್ರಭೆಯಿಂದ ತೊಳಗಿ ಬೆಳಗಲು ನಿಜಕ್ಕೂ ಅಸಮರ್ಥರಾಗಿದ್ದಾರೆ. ಅವರು ಇಂತಹ ಅಸಹಾಯಕ ಸ್ಥಿತಿಯಿಂದ ಹೊರಬಂದು, ಹಾಗೆ ತೊಳಗಿ ಬೆಳಗಬೇಕಾದರೆ, ಅವರ ಕೃತಿರತ್ನಗಳ ವಸ್ತುನಿಷ್ಠ ಅಧ್ಯಯನ-ವಿವೇಚನೆಗಳು ಇಂದು ವ್ಯಾಪಕವಾಗಿ ನಡೆಯಬೇಕಾಗಿದೆ. ಸುಶಿಕ್ಷಿತ ಮುಮುಕ್ಷುಗಳು, ಸಹೃದಯಿಗಳಾದ ವಿಮರ್ಶಕರು, ಸಚ್ಚರಿತರಾದ ವಿದ್ವಾಂಸರು ಅವರಿಂದ ರಚಿತವಾದ ಸಮಗ್ರ ಗ್ರಂಥಗಳ ನಿಷ್ಪಕ್ಷಪಾತವಾದ ಸಮೀಕ್ಷೆಯನ್ನು ಆಧುನಿಕ ವೈಜ್ಞಾನಿಕ ವಿಮರ್ಶಾತತ್ವಗಳ ತಳಹದಿಯ ಮೇಲೆ ನಡೆಸಬೇಕಾಗಿದೆ. ಅವರ ಗ್ರಂಥಗಳುದ್ದಕ್ಕೂ ಪ್ರವಹಿಸುತ್ತಿರುವ ದಿವ್ಯ ಬೋಧೆಯಲ್ಲಿ ಬರುವ ಚಿರಂತನ ಮಾನವೀಯ ಮೌಲ್ಯಗಳ ಅಗತ್ಯತೆ ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗಿದೆ. ಜನಮನವನ್ನು ತಿದ್ದಿ, ತೀಡಿ ಸಂಸ್ಕಾರಗೊಳಿಸಬಲ್ಲ ಶಕ್ತಿ ಸಾಮರ್ಥ್ಯಗಳ ಅವರಾ ಅಮರ ಕೃತಿಗಳಲ್ಲಿ ಪ್ರತಿಪಾದಿತವಾದ ಸಂದೇಶದಲ್ಲಿದ್ದಷ್ಟು ಪ್ರಮಾಣದಲ್ಲಿ ಮತ್ತಾವ ಗ್ರಂಥಗಳಲ್ಲೂ ಸಿಕ್ಕಲಾರದು. ಅವರ ಜೀವನವೇ ಒಂದು ಐತಿಹಾಸಿಕ ಮಹದ್ಘಟನೆಯಾಗಿದೆಯಿಷ್ಟೇ ಅಲ್ಲ; ನಿಜಕ್ಕೂ ಅದೊಂದು "ಕರುಣೆ........ ಸುಗುಣ ಸುಜ್ಞಾನ"ಗಳೆಂಬ ಶ್ರೇಷ್ಠತಮ ಜೀವನ ಮೌಲ್ಯಗಳ ಒಂದು ಜೀವಂತವೂ, ಜ್ವಲಂತವೂ ಆದ ಉದಾಹರಣೆಯಾಗಿದೆ. ಅದು ಅಕ್ಷರಶಃ ಕಾಲೋಚಿತವೂ, ಕಾಲಾತೀತವೂ ಆದ ಪ್ರಭಾವಪ್ರಭೆಯಿಂದ ಕಂಗೊಳಿಸುತ್ತಿದೆ. ನಿಜವಾಗಿಯೂ ಶ್ರೀ ನಿಜಗುಣ ಶಿವಯೋಗಿಗಳು ಕನ್ನಡ ನಾಡಿನ ಅಕ್ಷಯ ನಿಧಿ ಮಾನವ ಕುಲಕೋಟಿಯ ಕಲ್ಯಾಣಕ್ಕಾಗಿ ಅವರು ಬಿಟ್ಟು ಹೋಗಿರುವ ಈ ಪುಣ್ಯ ನಿಧಿಯ ಅಪಾರತೆಯನ್ನು ತೆರೆದು ತೋರಿಸುವ ಹಿರಿದಾದ ಹೊಣೆ ನಮ್ಮ ಇಂದಿನ ವಿದ್ವಾಂಸರ ಮೇಲಿದೆ. ಅವರು ಅದನ್ನು ಸಮರ್ಥವಾಗಿ, ಸಮರ್ಪಕವಾಗಿ ನಿರ್ವಹಿಸಿ ಯಶಸ್ವಿಯಾಗಿ ಸಾಂಗಗೊಳಿಸಿ ಕನ್ನಡಿಗರೆಲ್ಲರ ಕೃತಜ್ಞತೆಗೆ, ಅಭಿಮಾನಕ್ಕೆ ಪಾತ್ರರಾಗುವ ಕಾಲ ಬಹು ಬೇಗನೆ ಬರಲೆಂದು ಹಾರೈಸೋಣ.

**ಆಧಾರ ಗ್ರಂಥಗಳು:**


೧. ವೇದಾಂತ ಗ್ರಂಥಾವಳಿ-ಬೆಂಗಳೂರು ಶ್ರೀ ಶಾಂತಾನಂದರಿಂದ

೨. ವೇದಾಂತ ರತ್ನಾಕರ-ಗದಗಿನ ಶ್ರೀ ಬ. ಕ. ಪಾಟೀಲರಿಂದ

೩. ಶ್ರೀ ನಿಜಗುಣರ ಷಟ್‌ಶಾಸ್ತ್ರ-ಬಳ್ಳಾರಿ ಪ್ರತಿ

೪. ವಿವೇಕಚಿಂತಾಮಣಿ-ಗದಗಿನ ತೋಟಪ್ಪಯ್ಯ ಶಾಸ್ತ್ರಿಗಳಿಂದ

೫. ವಿವೇಕಚಿಂತಾಮಣಿ-ಡಾ. ಉಮಾಪತಿಶಾಸ್ತ್ರಿ ಮೂರುಸಾವಿರಮಠ

೬. ಪಾರಮಾರ್ಥ ಪ್ರಕಾಶಿಕೆ- ,, ,,

೭. ಶಂಭುಲಿಂಗದೆಡೆಗೆ-ಡಾ. ಸಿದ್ಧಯ್ಯಾ, ಗುಲಬುರ್ಗಾ

೮. ಶ್ರೀ ನಿಜಗುಣ ಶಿವಯೋಗಿಗಳ ಸ್ವರೂಪದರ್ಶನ-ರುದ್ರಾಕ್ಷಿಮಠ, ಹುಬ್ಬಳ್ಳಿ

೯. ವೈರಾಗ್ಯ ನಿಧಿ ಶ್ರೀ ನಿಜಗುಣ-ರುದ್ರಾಕ್ಷಿಮಠ, ಹುಬ್ಬಳ್ಳಿ

೧೦. ಪರಮುಕ್ತಿಯೆಡೆಗೆ-ಡಾ. ಸಿದ್ಧಯ್ಯ ಗುಲಬುರ್ಗಾ

೧೧. ಶ್ರೀ ನಿಜಗುಣ ಶಿವಯೋಗಿಗಳು ಮತ್ತು ಕೃತಿಗಳು–ಕ.ವಿ.ವಿ. ಧಾರವಾಡ
೧೨. ವೀರಶೈವ ಸಾಹಿತ್ಯ ಮತ್ತು ಇತಿಹಾಸ (ಭಾಗ ೧–೩)–ಬಿ. ಶಿವಮೂರ್ತಿಶಾಸ್ತ್ರಿ ಬೆಂಗಳೂರು
೧೩. ಪುರಾತನರ ತ್ರಿವಿಧಿ–ಬಿ. ಶಿವಮೂರ್ತಿಶಾಸ್ತ್ರಿ, ಬೆಂಗಳೂರು
೧೪. ಜ್ಯೋತಿ ಬೆಳಗುತಿದೆ–ಡಾ. ಎಚ್. ತಿಪ್ಪೇರುದ್ರಸ್ವಾಮಿ, ಮೈಸೂರು
೧೫. ಜಾಣರದೇವ–ಶ್ರೀಮತಿ ಶಾಂತಲಾ ಯೋಗೀಶ, ಧಾರವಾಡ
೧೬. ವಿಭೂತಿ–ಅಭಿನಂದನ ಗ್ರಂಥ (ಗಿರಿಯಪ್ಪರ–ಜಚನಿ) (೧೯೬೧)
೧೭. ಶ್ರೀ ನಿಜಗುಣ ಶಿವಯೋಗಿ–ಹೆಚ್. ಗಂಗಾಧರನ್
೧೮. ಅನುಭವ ಮುಕುರಂ–ಸ್ವರೂಪ ಸಿದ್ಧಿ ಟೀಕಾ–ಬಸವರಾಜಯ್ಯ, ಮೈಸೂರು
೧೯. ಕೈವಲ್ಯ ಪದ್ಧತಿ (ಟೀಕಾ ಸಹಿತ)–ಶ್ರೀ ಶಂಕರಾನಂದಸ್ವಾಮಿ, ಹುಬ್ಬಳ್ಳಿ
೨೦. ಕೈವಲ್ಯ ಪದ್ಧತಿ (ಭಾವಾರ್ಥ ದೀಪಿಕಾ ಸಹಿತ)–ಪಂ. ನಾಗಭೂಷಣಶಾಸ್ತ್ರಿ ಧಾರವಾಡ
೨೧. ಕನ್ನಡ ಕವಿಚರಿತೆ (ಭಾಗ ೧–೨)–ಆರ್. ನರಸಿಂಹಾಚಾರ್, ಬೆಂಗಳೂರು
೨೨. ಕನ್ನಡ ಸಾಹಿತ್ಯ ಚರಿತ್ರೆ–ಡಾ. ರಂ. ಶ್ರಿ. ಮುಗಳಿ, ಬೆಂಗಳೂರು
೨೩. ಶಿವಾಗಮ ಸೌರಭ–ಸಂ. ನಂಜುಂಡಾರಾಧ್ಯ
೨೪. “ದಾಸೋಹ”–ಶ್ರೀ ಜ. ಚ. ನಿ. ರಜತಮಹೋತ್ಸವ ಸಂಭಾವನ ಗ್ರಂಥ (೧೯೬೭).

# ವೀರಶೈವ ಶಿವಯೋಗ

—ಡಾ|| ಎನ್. ವ್ಹಿ. ಕೊಪ್ಪಳ

ಭಾರತೀಯ ತತ್ವಶಾಸ್ತ್ರದ ಇತಿಹಾಸದಲ್ಲಿ ಯೋಗಶಾಸ್ತ್ರದ ಪರಂಪರೆ ಅತ್ಯಂತ ಉಜ್ವಲವಾಗಿದೆ. ಭಾರತದಲ್ಲಿ ಅವತರಿಸಿದ ಸರ್ವಸಮ್ಮತವಾದ ವೇದ ಪ್ರಮಾಣವುಳ್ಳ ಆಸ್ತಿಕ ದರ್ಶನಗಳು ಗೌತಮನ ನ್ಯಾಯ ದರ್ಶನ, ಕಣಾದನ ವೈಶೇಷಿಕ ದರ್ಶನ, ಕಪಿಲನ ಸಾಂಖ್ಯ ದರ್ಶನ, ಪತಂಜಲಿಯ ಯೋಗ ದರ್ಶನ, ಜೈಮಿನಿಯ ಪೂರ್ವ ಮೀಮಾಂಸಾ ದರ್ಶನ, ಬಾದರಾಯಣನ ಉತ್ತರ ಮೀಮಾಂಸಾ ದರ್ಶನವೆಂದು ಆರಾಗಿದ್ದು, ಅವು ತತ್ತ್ವ ಸಾಕ್ಷಾತ್ಕಾರಕ್ಕಾಗಿ ತಮ್ಮ ಸ್ವತಂತ್ರ ಸಾಧನಾ ಮಾರ್ಗವನ್ನು ಅವಲೋಕಿಸಿವೆ. ಇವುಗಳಲ್ಲಿ ಪತಂಜಲಿಯ ಯೋಗದರ್ಶನದ ಬಗೆಗೆ ಇಂದಿಗೂ ಲೋಕಪ್ರೇಮ ಅಮೋಘ ವಾಗಿದೆ. ಅದರ ಸಿದ್ಧಾಂತ–ಸಾಧನೆ–ಸಿದ್ಧಿಗಳ ಮೌಲ್ಯಗಳು ಶ್ಲಾಘನೀಯವಾಗಿವೆ. ಆದರೆ ಯೋಗ ಸಾಧನೆಯ ರೂಪ ರೇಷೆಗಳು ಪತಂಜಲಿಯ ಪೂರ್ವದಲ್ಲಿಯೆ ಮೂಡಿದ್ದು, ಪರಂಪರಾಗತ ತಿಳಿವಳಿಕೆಯಂತೆ ಯೋಗದರ್ಶನದ ಆದ್ಯ ಪ್ರವರ್ತಕನು ಹಿರಣ್ಯಗರ್ಭನೆಂದು ಪ್ರತೀತಿ. 'ಹಿರಣ್ಯ ಗರ್ಭೋ ಯೋಗಸ್ಯ ವಕ್ತಾ ನಾನ್ಯಃ ಪುರಾತನಃ|'೧ ಆದ್ದರಿಂದ ಪತಂಜಲಿಯು ತನ್ನ ಯೋಗ ದರ್ಶನವನ್ನು ಶಾಸ್ತ್ರೀಯವಾಗಿ ಸಂಯೋಜಿಸಿ 'ಅಥ ಯೋಗಾನು ಶಾಸನಮ್|' ಎಂದು ಕರೆದುದು ಔಚಿತ್ಯಪೂರ್ಣ. 'ಯೋಗಃ ಚಿತ್ತವೃತ್ತಿ ನಿರೋಧಃ|'– ಎಂಬ ವಿಚಾರದೊಡನೆ ಅಷ್ಟಾಂಗಯೋಗಾಭ್ಯಾಸವನ್ನು ಪ್ರತಿಪಾದಿಸಿ, ಈ ಮಾರ್ಗದಿಂದ ಸಾಧಕನು ಅಣಿಮಾದ್ಯಷ್ಟ ಸಿದ್ಧಿಗಳನ್ನೂ ಕಲ್ಪಾಕಲ್ಪವಿಕಲ್ಪ ವಿರಹಿತವಾದ ಈಶ್ವರಾತ್ಮೈಕ್ಯವನ್ನೂ (ಅರ್ಥಾತ್ ಶಿವಜೀವೈಕ್ಯವನ್ನು) ಸಾಧಿಸಿ ದುಃಖರಹಿತವಾದ ಮುಕ್ತಿ ಸುಖವನ್ನು ಹೊಂದುತ್ತಾನೆಂಬುದು ಪತಂಜಲಿಯ ಸ್ವತಂತ್ರ ವಿಚಾರ. ಇದನ್ನೇ 'ಭಾರತೀಯ ತತ್ವಶಾಸ್ತ್ರ ಸಂಗ್ರಹ'ವು–'ಯೋಗಿಗಳು ವೇದದ ಸಂಬಂಧವೇ ಇಲ್ಲದ ಈಶ್ವರ ನನ್ನೇರ್ಪಡಿಸಿದರು' ಎನ್ನುತ್ತದೆ.

ಶೈವಾಗಮ–ಶಾಕ್ತಾಗಮ–ಪಾಂಚರಾತ್ರಾದಿ ವೈಷ್ಣವಾಗಮಗಳಲ್ಲಿ ಹಾಗೂ ಪುರಾಣ–ಉಪನಿಷತ್ತುಗಳಲ್ಲಿ ಯೋಗ ತತ್ತ್ವಗಳ ವಿವೇಚನೆ ಇದೆ. ಭಗವದ್ಗೀತೆಯೂ ಯೋಗ ಪದಕ್ಕೆ ವ್ಯಾಪಕವಾದ ಅರ್ಥವನ್ನು ಕಲ್ಪಿಸಿ, ಕರ್ಮಯೋಗ–ಜ್ಞಾನಯೋಗ–ಭಕ್ತಿ ಯೋಗಗಳ ತ್ರಿವೇಣೀ ಸಂಗಮವನ್ನು ಚಿತ್ರಿಸಿದೆ. ಸಂಸ್ಕೃತ ಸಾಹಿತ್ಯ ಕ್ಷೇತ್ರಕ್ಕಿಂತಲೂ

೧ ಯಾಜ್ಞವಲ್ಕ್ಯಸ್ಮೃತಿ.

ಪೂರ್ವದಲ್ಲಿ, ಪ್ರಾಗೈತಿಹಾಸಿಕ ಭಾರತೀಯ ಸಂಸ್ಕೃತಿಗೆ ತವರು ಮನೆಯಾದ ಮೊಹೆಂಜೋದಾರೊ-ಹರಪ್ಪಾ ಸಂಸ್ಕೃತಿಯ ಅಗೆತಗಳಲ್ಲಿ ಶೈವದರ್ಶನದ ಮೂಲ ರೇಖೆಗಳು ಕಂಡು ಬಂದಿವೆ. ಅಲ್ಲಿರುವ ಬಗೆಬಗೆಯ ಆಕಾರದ ಲಿಂಗಗಳ ವಿವರವನ್ನು ಮಾರ್ಷಲ್ಲರು ಹೀಗೆ ಕೊಡುತ್ತಾರೆ.

"The larger ones" serve as aniconic agalmata for cult purposes, The smaller as amulets to be carried on the person just as miniature Lingas are commonly carried by Saivitests to day."[೨]

ಅಲ್ಲದೆ ಶಿವನಂತೆ ಪದ್ಮಾಸನದಲ್ಲಿ ಕುಳಿತು ಧ್ಯಾನಮಗ್ನನಾದ ಮಹಾಯೋಗಿಯ ಮೂರ್ತಿಗಳ ಅವಶೇಷಗಳ ಬಗೆಗೆ ಮಾರ್ಷಲ್ಲರು ಉಲ್ಲೇಖಿಸಿದ್ದಾರೆ.[೩]

ಶೈವ ಧರ್ಮದ ಆಧಾರ ಗ್ರಂಥಗಳಾದ ಶಿವಾಗಮಗಳಲ್ಲಿ ಕಂಡುಬರುವ ನಾಲ್ಕು ವಿಭಾಗಗಳು-ಕ್ರಿಯಾಪಾದ, ಚರ್ಯಾಪಾದ, ಯೋಗಪಾದ, ಜ್ಞಾನಪಾದ ಎಂದು. ಕರ್ಮಾಧೀನವಾದ ಮನಸ್ಸು ಶಿವಜ್ಞಾನ ಸಾಧನೆಗೆ ಬಾಧಕವಾಗದಂತೆ ನಿರೀಕ್ಷಿಸಿ, ಅಷ್ಟಾಂಗ ಮಾರ್ಗದಿಂದ ಸಾಧಕನು ದೇಹಶುದ್ಧಿಯನ್ನು ಹೊಂದಿ ಯೋಗಾಭ್ಯಾಸದಿಂದ ಶಿವಜೀವೈಕ್ಯವೆಂಬ ಆತ್ಯಂತಿಕ ಗುರಿಯನ್ನು ಪಡೆಯುವ ವಿವರಗಳು ಯೋಗಪಾದಕ್ಕೆ ಮೀಸಲಾಗಿವೆ. ಜ್ಞಾನ ಹಾಗೂ ಯೋಗಗಳ ಪರಸ್ಪರ ಸಂಬಂಧದ ಜೊತೆಗೆ ಯೋಗದ ಮಹತ್ವ ಇಲ್ಲಿ ಪ್ರತಿಪಾದಿತವಾಗಿದೆ.[೪] ಯೋಗವು ಸ್ವತಂತ್ರ ದರ್ಶನವೆಂದು ಪರಿಗಣಿತವಾದ ನಂತರ, ಮಂತ್ರಯೋಗ-ಹಠಯೋಗ-ಲಯಯೋಗ-ರಾಜಯೋಗ ಎಂಬ ಸೂಕ್ಷ್ಮ ಪ್ರಭೇದಗಳು ತಲೆದೋರಿದವು; ಅಲ್ಲದೆ ಶಿವಾಗಮ, ಶಿವಸಂಹಿತೆಗಳ ಆಧಾರದಿಂದ ಶಿವಯೋಗವೆಂಬ

---

೨ Marshall: Mohenjo-daro-and Indus Civilization P. 57.
'ಭಾರತೀಯ ಸಂಸ್ಕೃತಿ ದರ್ಶನ' (ಲೇಖನ)-ಡಾ. ಎಸ್. ಶ್ರೀಕಂಠ ಶಾಸ್ತ್ರಿ—"ಲಿಂಗಗಳು ಪಾಣಿಪಟ್ಟಗಳು ಸಿಕ್ಕಿರುವುದರಿಂದ ಅವೈದಿಕವಾದ ಶೈವಮತವೇ ಪ್ರಧಾನವಾಗಿದ್ದು ಈಗಿನವರೆಗೂ ಜೀವಂತವಾಗಿರುವುದರಿಂದ ಶೈವಮತವನ್ನು ಅತ್ಯಂತ ಪ್ರಾಚೀನವೆಂದು ಹೇಳಲಾಗಿದೆ...."

೩ Marshall: Mohenjo-daro-and Indus Civilization.
Illustrated in Pl XII, 17. P. 52.

೪ ಪಾರಮೇಶ್ವರ ತಂತ್ರ XII-೫೨. ಸರ್ವಪಾಪಹರೋ ಯೋಗೋ ವಿರಕ್ತಸ್ಯೈವ ಕಲ್ಪ್ಯತೇ। ವೈರಾಗ್ಯಾತ್ ಜಾಯತೇ ಜ್ಞಾನಂ ಜ್ಞಾನಾತ್ ಯೋಗಃ ಪ್ರವರ್ತತೇ॥

ಐದನೆಯ ಯೋಗವಿತ್ತೆಂದೂ ತಿಳಿದುಬರುತ್ತದೆ.೫

**ಶಿವಯೋಗದ ಐತಿಹಾಸಿಕ ಹಿನ್ನೆಲೆ:**

'ಅನಾದಿ ವೀರಶೈವ ಸಾರ ಸಂಗ್ರಹ'ದಲ್ಲಿ ಅನೇಕ ಆಗಮ ಶ್ಲೋಕಗಳೂ ಮತ್ತು ಅನ್ಯಶೈವ ಕೃತಿಗಳೂ ಉಲ್ಲೇಖಗೊಂಡಿದ್ದು, ಅಲ್ಲಿ ಶಿವಯೋಗಿಗಳ ಅನುಭಾವ ಮಾರ್ಗದ ಸೂಚನೆ ಇದೆ.೬ ಪಾರಮೇಶ್ವರಾಗಮದ ಪ್ರತ್ಯೇಕ ಪಟಲಗಳಲ್ಲಿ ಶಿವಯೋಗಿಗಳ ಜೀವನ, ಸಾಧನೆ ಹಾಗೂ ಸಿದ್ಧಿಗಳ ವಿವರಗಳು ದೊರಕುತ್ತವೆ.೭ ಶಿವಯೋಗಿಗೆ ಶಿವಯೋಗೀಂದ್ರ ಮತ್ತು ರಾಜಯೋಗಿರಾಟ್ ಎಂದು ಕರೆಯಲಾಗುತ್ತಿತ್ತು.೮ ಶಿವ ಪುರಾಣ ವಾಯವೀಯ ಸಂಹಿತೆಯು ಯೋಗಕ್ಕಾಗಿ ಒಂದು ಅಧ್ಯಾಯವನ್ನೆ ಮೀಸ ಲಾಗಿರಿಸಿ, ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ, ಅಭಾವಯೋಗ, ಮಹಾ ಯೋಗ ಮುಂತಾದವುಗಳನ್ನು ವರ್ಣಿಸುತ್ತದೆ. ಇಲ್ಲಿ 'ಮಹಾಯೋಗವು' ಸಕಲ ಯೋಗ ಗಳಲ್ಲಿ ಶ್ರೇಷ್ಠವೆನಿಸಿ ಶಿವಯೋಗಕ್ಕೆ ಸಮಾನವಾಗಿದೆ.೯ ಶಿವಸಂಹಿತೆಯು ರಾಜ ಯೋಗ ಕ್ಕಿಂತ ಶ್ರೇಷ್ಠವಾದ 'ರಾಜಾಧಿರಾಜಯೋಗ'ದ ಬಗೆಗೆ ಉಲ್ಲೇಖಿಸುತ್ತ ಬಹಿರಂಗ ಸಾಧನೆ ಗಳಿಗಿಂತ ಅಂತರಂಗದ ಧ್ಯಾನವು ಉತ್ತಮವೆಂದೂ, ಆ ಮೂಲಕ ಪರವಸ್ತುವಿನಲ್ಲಿ ಐಕ್ಯ ವಾಗುವುದೇ ಶ್ರೇಷ್ಠವೆಂದೂ ಸೂಚಿತವಾಗಿರುವುದರಿಂದ ಈ ಯೋಗವು ಶಿವಯೋಗ

---

೫ ಪಾರಮೇಶ್ವರ ತಂತ್ರವು ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಯೋಗಶೈವ (ಅಥವಾ ಅವಾಂತರಶೈವ), ಜ್ಞಾನಶೈವ (ಅಥವಾ ಅನ್ಯಶೈವ) ಹಾಗೂ ವೀರಶೈವ ಎಂಬ ಸಪ್ತವಿಧ ಶೈವ ಪ್ರಭೇದಗಳನ್ನು ನಿರೂಪಿಸುತ್ತದೆ. 'ವೀರಶೈವ ಮತಸ್ಥಸ್ಯ ಜ್ಞಾನಂ ಯೋಗೋ ಹಿ ಸಾಧನಮ್॥ ವೀರಶೈವ ಮತ ವನ್ನು ಅನುಸರಿಸುವವನಿಗೆ ಜ್ಞಾನ ಮತ್ತು ಯೋಗಗಳೇ ಸಾಧನ. ಅಂದರೆ ಜ್ಞಾನಯುಕ್ತ ಯೋಗ ಅರ್ಥಾತ್ ಶಿವಯೋಗವೆ ಸಾಧನ. (ಪಾರಮೇಶ್ವರ ತಂತ್ರ VII ೩೬–೩೭)

೬ 'ಅನಾದಿ ವೀರಶೈವ ಸಂಗ್ರಹ'–by ಸಂಪಾದನೆಯ ಸಿದ್ಧವೀರಣ್ಣೊಡೆಯ. ಈ ಗ್ರಂಥದಲ್ಲಿ ಉಲ್ಲೇಖಗೊಂಡ ಕೃತಿಗಳು: ಶಿವಾದ್ವೈತ–XXII–೭, ಶಿವ ರಹಸ್ಯ–XXII–೧೧೮, ಶಂಕರ ಸಂಹಿತಾ–XXII–೧೨೧, ಶಿವಸಂಹಿತಾ–XXII –೧೬೬, ಪರಮ ರಹಸ್ಯ–XXII–೧೬೮, ಶಿವಧರ್ಮ ಪುರಾಣ–XXII–೧೬೯, ೧೯೦; ಶಿವಧರ್ಮ ಸೂತ್ರ–XXII–೧೯೮–೧೯೯, ೨೦೦; ಯೋಗಸಾರ XXV–೫೫.

೭ ಪಾರಮೇಶ್ವರ ತಂತ್ರ I, V, VIII, X, XII, XVII, XXII.

೮ 'ಅನಾದಿ ವೀರಶೈವ ಸಾರಸಂಗ್ರಹ' XXVI–೭೦.

೯ ಶಿವ ಪುರಾಣ–ವಾಯವೀಯ ಸಂಹಿತಾ XXIX–೭, ೧೧.

ವಲ್ಲದೆ ಬೇರಲ್ಲವೆಂದು ಊಹಿಸಬಹುದು.[೧೦]

**ಶಿವಾಗಮಗಳಲ್ಲಿ ಶಿವಯೋಗ:**

೧೨ ನೆಯ ಶತಮಾನದ ಶಿವಶರಣರ ಆಂದೋಲನಕ್ಕಿಂತ ಪೂರ್ವದಲ್ಲಿ ನಿರಾಕಾರನಾದ ಪರಶಿವನ ಸಾಕಾರ ರೂಪವಾದ ಲಿಂಗದ ಧ್ಯಾನವನ್ನು ಆಧಾರವಾಗಿರಿಸಿಕೊಂಡ ಮೂರು ಬಗೆಯ ಶಿವಯೋಗ ಪ್ರಕಾರಗಳನ್ನು ಕಾಣುತ್ತೇವೆ.

೧) ಶಿವಭಕ್ತಿಯಿಂದ ಕೂಡಿದ ಪರಂಪರೆಯ ಸಾಧನ ಮೂಲವುಳ್ಳ ಶಿವಯೋಗ.

೨) ಅಷ್ಟಾಂಗ ಯೋಗದ ತೊಡಕಿಲ್ಲದೆ ಹಲವು ವ್ರತ ನಿಯಮಗಳಿಂದ ಕೂಡಿದ ಶಿವಪೂಜೆ-ಶಿವಧ್ಯಾನ ಮುಖ್ಯವಾಗಿರುವ ಶಿವಯೋಗ.

೩) ಆತ್ಯಂತಿಕ ಗುರಿಗೆ ಕಾರಣವಾದ ಸರಳ ಹಾಗೂ ಅಚ್ಚುಕಟ್ಟಾದ ಕೆಲವು ಅಂಗಗಳುಳ್ಳ ಮತ್ತು ಶಿವರಾಧನೆಯೆ ಮುಖ್ಯವಾದ ಶಿವಯೋಗ.

೧) ಆಗಮಗಳ ಶಿವಯೋಗವು ಮಂತ್ರ-ಹಠ-ಲಯ-ರಾಜ ಯೋಗಗಳ ಕೊನೆಯ ಪ್ರಕಾರವಾಗಿದ್ದು, ಅದು ಎಲ್ಲ ಯೋಗಗಳ ಸಾಧನೆಗಳನ್ನೊಳಗೊಂಡಿದೆ ಹಾಗೂ ಶಿವಯೋಗಕ್ಕೆ ಆವಶ್ಯವಾದ ಪದ್ಧತಿ-ಪ್ರಯೋಗಗಳನ್ನು ಅಳವಡಿಸಿಕೊಂಡಿದೆ. ಶಿವಯೋಗ ಪ್ರದೀಪಿಕೆಯು ಸ್ಪಷ್ಟಪಡಿಸುವಂತೆ-

ನ ಭೇದಃ ಶಿವಯೋಗಸ್ಯ ರಾಜಯೋಗಸ್ಯ ತತ್ತ್ವತಃ।
ಶಿವಾರ್ಥಿನಾಂ ತಥಾಪ್ಯೇವ ಮುಕ್ತೋ ಬುದ್ಧೇಃ ಪ್ರವೃದ್ಧಯೇ॥[೧೧]

ಶಿವಯೋಗಕ್ಕೂ ರಾಜಯೋಗಕ್ಕೂ ಭೇದವಿಲ್ಲ; ಶಿವಾರ್ಥಿಗಳ ಬುದ್ಧಿಯ ಪ್ರವೃದ್ಧಿಗಾಗಿ ಹಾಗೂ ಅವರಿಗುಂಟಾಗುವ ಸ್ಮರಣಾತ್ಮಕ ಜ್ಞಾನಾತಿಶಯವನ್ನು ನಿರೀಕ್ಷಿಸಿ ರಾಜಯೋಗ-ಶಿವಯೋಗಗಳ ಭೇದವನ್ನು ಗುರುತಿಸಲಾಗಿದೆ. ಭಕ್ತಿ-ಜ್ಞಾನ-ಕ್ರಿಯಾ ಸಂಪನ್ನನಾಗಿ ಶಿವ ಜೀವೈಕ್ಯವನ್ನು ಸಾಧಿಸಿದ ಶಿವಯೋಗಿಯೆ ರಾಜಯೋಗಿರಾಟ್.

**ಶಿವಯೋಗದಲ್ಲಿ ಮಂತ್ರ:**

ಆಗಮ ಶಿವಯೋಗದಲ್ಲಿ ಆಂತರಿಕ ಪರಿಶುದ್ಧಿಗಾಗಿ ಮಂತ್ರಾನುಸಂಧಾನವನ್ನು ವಿನಿಯೋಗಿಸಲಾಗಿದೆ. ಸಾಧಕನು ತನ್ನ ಯೋಗ್ಯತೆಯ ತಾರತಮ್ಯದಿಂದ ವಾಚಿಕ-ಉಪಾಂಶು-ಮಾನಸಿಕ ಎಂಬ ತ್ರಿವಿಧ ಜಪಾನುಸಂಧಾನವನ್ನು ರೂಢಿಸಿಕೊಳ್ಳುತ್ತಾನೆ. ಮನಸ್ಸನ್ನು ಸ್ಥಿರಗೊಳಿಸಲು ಗುರುಕರುಣಿಸಿದ ಪಂಚಾಕ್ಷರ-ಷಡಕ್ಷರ ಮಂತ್ರಗಳನ್ನು ಬಳಸಿಕೊಳ್ಳುತ್ತಾನೆ; ಪಂಚವಿಂಶತಿ, ಶಿವಲೀಲೆಗಳಲ್ಲಿ ಒಂದನ್ನು ಕುರಿತು ಚಿತ್ತವನ್ನು ಕೇಂದ್ರೀ

---

೧೦ ಶಿವಸಂಹಿತಾ V-೨೦೩.

೧೧ ಶಿವಯೋಗ ಪ್ರದೀಪಿಕೆ I ೧೩.

ಕರಿಸಬಹುದು.೧೨ ಷಡಕ್ಷರ ಮಂತ್ರದ ಷಟ್ ಅಕ್ಷರಗಳು, ಮಾನವನ (ಶರೀರದಲ್ಲಿರುವ) ಶಕ್ತಿಕೇಂದ್ರಗಳಾದ ಷಟ್ ಚಕ್ರಗಳನ್ನು ಜಾಗೃತಗೊಳಿಸುತ್ತವೆ ಎಂದು 'ಸೂಕ್ಷ್ಮ ತಂತ್ರ'ವು ಸ್ಪಷ್ಟಪಡಿಸಿದೆ. ಜಪಾನುಸಂಧಾನದೊಡನೆ ಷಟ್‌ಚಕ್ರಗಳಲ್ಲಿ ಷಡ್‌ಲಿಂಗಗಳನ್ನಾಗಲಿ ಅಥವಾ ಮಣಿಗಳ ಪ್ರಕಾಶವನ್ನಾಗಲಿ ಧ್ಯಾನಿಸಬೇಕೆಂದು ಆದೇಶವಿದೆ.೧೩ ಒಟ್ಟಿನಲ್ಲಿ ಮಂತ್ರ ಪುರಸ್ಸರವಾದ ಶಿವಯೋಗಾಭ್ಯಾಸವನ್ನು ನಿಷ್ಕಂಟಕವಾದ ನದೀತಟ, ಪರ್ವತ ಪ್ರದೇಶ ಅಥವಾ ಗರ್ಭಗುಡಿಯಲ್ಲಿ ಸಾಧಿಸಬೇಕೆಂದು ಸೂಕ್ಷ್ಮತಂತ್ರ ಉಪದೇಶಿಸುತ್ತದೆ. ವಾತುಲತಂತ್ರವು ಸುವಿಸ್ತಾರವಾದ ಮಂತ್ರಶಾಸ್ತ್ರವನ್ನು ಮಂಡಿಸುತ್ತ ಪಂಚವಿಧ ಪ್ರಣವ ಪ್ರಕಾರಗಳನ್ನೂ, ಅವುಗಳ ಮಹತ್ವವನ್ನೂ ನಿರೂಪಿಸುತ್ತದೆ.೧೪

**ಶಿವಯೋಗದಲ್ಲಿ ಲಯಯೋಗ:**

ದೈವೀನಾದದಲ್ಲಿ ಮತ್ತು ಪರಶಿವನ ಶ್ರೇಷ್ಠ ಪ್ರಕಾಶದಲ್ಲಿ ಮನ ಮಗ್ನವಾಗುವುದೆ ಶಿವಯೋಗದಲ್ಲಿ ಲಯಯೋಗ, ವಾತುಲತಂತ್ರದ ಪ್ರಕಾರ ನಾದಾನುಸಂಧಾನಿಯಾದ ಶಿವಯೋಗಿಯು-ವಾರಿಧಿ, ಪ್ರವಾಹ, ಮೇಘ, ಕೈತಾಳ, ಭೇರಿ, ರಣಭೇರಿ, ಘಂಟಾಶಂಖ, ವೇಣು, ಕಿಂಕಿಣಿ, ಭ್ರಮರ, ವೀಣಾ ಎಂಬ ಹನ್ನೆರಡು ನಾದಪ್ರಕಾರಗಳನ್ನು ಕೇಳುತ್ತಾನೆ.೧೫ ನಾದವು ಐದು ಪ್ರಕಾರವಾಗಿದೆಯೆಂಬುದು 'ಯೋಗಸಾರ'ದ ಅಭಿಪ್ರಾಯ. ಬಿಂದು ಮಧ್ಯಗತವಾದ ನಾದವು 'ನಾದ'ವೆಂದೂ ನಾದಮಧ್ಯಗತವಾದ ಬಿಂದುವು 'ಸುನಾದ'ವೆಂದೂ ಕರೆಯಲ್ಪಡುತ್ತಿದ್ದು, ಶಿವಯೋಗಿಯು ನಾದ-ಸುನಾದ-ಮಹಾನಾದ-ನಾದಾಂತ್ಯಗಳನ್ನು ಕೇಳುತ್ತ ನಾದರಹಿತ ಸ್ಥಿತಿಯನ್ನು ಪಡೆಯುತ್ತಾನೆ.೧೬ ವಾತುಲತಂತ್ರವು ಶಿವಯೋಗಿಯು ಕಾಣುವ-ಸೂರ್ಯಪ್ರಕಾಶ, ಶರತ್ಕಾಲದ ಚಂದ್ರಪ್ರಭೆ, ವಿದ್ಯುತ್, ಸ್ಫಟಿಕ, ಮೌಕ್ತಿಕ, ನಕ್ಷತ್ರ, ಮಣಿ, ಕೊರೆವ ನಕ್ಷತ್ರ ಪ್ರಭೆಗಳನ್ನು ಉಲ್ಲೇಖಿಸುತ್ತದೆ.೧೭

**ಶಿವಯೋಗದಲ್ಲಿ ಹಠಯೋಗ:**

ಮಾನವನಲ್ಲಿ ಗುಪ್ತವಾಗಿರುವ ಚೈತನ್ಯ ಶಕ್ತಿಯು ಕುಂಡಲೀನಿ ಶಕ್ತಿಯಾಗಿದ್ದು, ಅದಕ್ಕೆ ವೀರಾಗಮವು 'ಮಹಾನಾಡೀ' ಎಂದು ಕರೆಯುತ್ತದೆ. ಅದು ಎಂಟು ಸುತ್ತುಳ್ಳದ್ದಾಗಿದ್ದು (ಅಷ್ಟವರ್ತುಲ ಸಂಯುಕ್ತಾ........ಪ್ರಸುಪ್ತನಾಗೇಂದ್ರವ) ಪ್ರತಿಯೊಬ್ಬ

---

೧೨ ಸೂಕ್ಷ್ಮ ತಂತ್ರ III-(೪೭-೫೩)

೧೩ ವೇದಾಂತ-ವೀರಶೈವ ಚಿಂತಾಮಣಿ-XV ೩೫-೩೬.

೧೪ ವಾತುಲತಂತ್ರ-(ಪಟಲ-V, VI, IX, X).

೧೫ ಅನಾದಿ ವೀರಶೈವ ಸಾರ ಸಂಗ್ರಹ II-XXV-೪೯

೧೬ ಯೋಗಸಾರ II-XXV-(೫೩-೫೫)

೧೭ ಅನಾದಿ ವೀರಶೈವ ಸಾರಸಂಗ್ರಹ II-XXV-೫೬

ಮನುಷ್ಯ ಹಾಗೂ ಪ್ರಾಣಿಯ ದೇಹದಲ್ಲಿ ಸುಪ್ತಸರ್ಪನಂತಿರುತ್ತದೆ.[೧೮] ಗುರುವಿನ ಅನುಗ್ರಹದಿಂದ ಒಮ್ಮೆ ಅದು ಎಚ್ಚೆತ್ತರೆ, ಥಳಥಳಿಸುವ ಪ್ರಕಾಶದಿಂದ ಬೆಳಗುತ್ತದೆ.[೧೯] ಕುಂಡಲಿನೀ ಶಕ್ತಿಯು ಮೂಲತಃ ಅಧೋಮುಖಿಯಾಗಿದ್ದು ದೈಹಿಕ ಸಕಲ ಕಾರ್ಯಗಳನ್ನು ವಿಶೇಷತಃ ಪ್ರಾಣದ ಶ್ವಾಸೋಚ್ಛ್ವಾಸ, ಪಚನ ಕಾರ್ಯಗಳನ್ನು, ಉತ್ಪತ್ತಿ ಮಾಡುವ ಹಾಗೂ ಹೊರಗೆ ಹಾಕುವ ಕಾರ್ಯಗಳನ್ನೂ ಮಾಡುತ್ತದೆ. ಜೊತೆಗೆ ಈಕ್ಷಿಸುವ-ಚಿಂತಿಸುವ-ಭಾವಿಸುವ-ಇಚ್ಛಿಸುವ ಕರ್ತವ್ಯಗಳನ್ನೂ ಕೈಕೊಳ್ಳುತ್ತದೆ. ಯೋಗ್ಯ ಸಾಧನೆಯಿಂದ ಅಧೋಮುಖಿ ಕುಂಡಲಿನಿಯನ್ನು ಊರ್ಧ್ವಮುಖಿಯನ್ನಾಗಿ ಪರಿವರ್ತಿಸಿದರೆ ಸಕಲ ಶಕ್ತಿ ಕೇಂದ್ರಗಳನ್ನು ಜಾಗೃತಗೊಳಿಸುತ್ತ ಸಾಧಕನ ಸಿರಸ್ಸಿನಲ್ಲಿರುವ ಸಹಸ್ರಾರ ಚಕ್ರದಲ್ಲಿ ಅದು ವಿಶ್ರಾಂತಿ ಹೊಂದುತ್ತದೆ.

**ಶಿವಯೋಗದಲ್ಲಿ ಅಷ್ಟಾಂಗಯೋಗ (ರಾಜಯೋಗ):**

ಹಲವು ಆಗಮಗಳ ನಿರ್ದೇಶದಂತೆ ಶಿವಯೋಗಿಯು ಆಚರಿಸುವ ಅಷ್ಟಾಂಗ ಯೋಗವು ಮನಶ್ಶಾಸ್ತ್ರಕ್ಕೆ ಸಂಬಂಧಪಟ್ಟಿದೆ. ಭಕ್ತಿ-ವೈರಾಗ್ಯ-ಶಾಸ್ತ್ರಾಧ್ಯಯನ-ಧ್ಯಾನ ಏಕಾಂತವಾಸ-ಭಿಕ್ಷಾಟನೆ-ಲಿಂಗಪೂಜೆ-ಶಿವಸ್ಮರಣೆ ಎಂಬ ಅಷ್ಟಾಂಗಗಳಿಂದ ಕೂಡಿದ ಶಿವಯೋಗವೆ ಶಿವೈಕ್ಯಕ್ಕೆ ಕಾರಣವಾಗಿದೆ. ಅಷ್ಟಾಂಗಮಾರ್ಗಾವಲಂಬಿಗಳಾಗಿ, ಶಿವಲಾಂಛನ ಧಾರಿಗಳಾದವರಿಗೆ ಶಿವಯೋಗಿಗಳೆಂಬುದು ಪ್ರತೀತಿ. ದಾಂಪತ್ಯ ಜೀವನವನ್ನು ಪಾಲಿಸುತ್ತಿದ್ದ ಶಿವಯೋಗಿಯ ಪತ್ನಿಗೆ 'ಶಿವಯೋಗಿನಿ' ಎಂಬ ಸಂಜ್ಞೆಯುಂಟಾಗುತ್ತಿತ್ತು.[೨೦] ಆಗಮ ಕಾಲದ ಶಿವಯೋಗಿಗಳ ಧ್ಯೇಯವು ಐಹಿಕ ಹಾಗೂ ಆಮುಷ್ಮಿಕ ಫಲಪ್ರದವಾದ ಶಿವಸಾಕ್ಷಾತ್ಕಾರವಾಗಿತ್ತೆನ್ನಬಹುದು. ಇಂಥ ಶಿವಯೋಗಿಗಳು ಜ್ಞಾನ-ಯೋಗಗಳ ಸಿದ್ಧಿಗಾಗಿ ಅಂತರಂಗ-ಬಹಿರಂಗ ಶುದ್ಧಿಯನ್ನು ಸಾಧಿಸಬೇಕಾಗಿದ್ದುದರಿಂದ ತಪ-ಕರ್ಮ-ಜಪ-ಧ್ಯಾನ-ಜ್ಞಾನವೆಂಬ ಪಂಚಾನುಷ್ಠಾನಗಳಲ್ಲಿ ನಿರತರಾಗುತ್ತಿದ್ದರು.[೨೧]

**೨. ಶಿವಯೋಗೋ ಹಿ ಪಂಚಧಾ:**

ಸಾಧಕನು ಪಾಲಿಸಬೇಕಾದ ಹಲವು ವ್ರತ-ನಿಯಮಗಳು ಹಾಗೂ ಅದರಿಂದುಂಟಾಗುವ ಆಂತರಿಕ ಪರಿಶುದ್ಧಿಯನ್ನು ಆಗಮ ಕಾಲದ ಇನ್ನೊಂದು ರೀತಿಯ ಶಿವಯೋಗವು ಎತ್ತಿ ಹಿಡಿಯುತ್ತದೆ.[೨೨] ಶಿವಸಂಬಂಧವಾದ ಜ್ಞಾನ-ಶಿವಭಕ್ತಿ-ಶಿವಾಚಾರ-ಶಿವವ್ರತ—

---

೧೮ ಹಠಯೋಗ ಹಾಗೂ ತಾಂತ್ರಿಕ ಗ್ರಂಥಗಳ ಪ್ರಕಾರ ಈ ಕುಂಡಲಿನೀ ಶಕ್ತಿಯು ಸ್ವಯಂಭೂಲಿಂಗವನ್ನು ಮೂರುವರೆ ಸುತ್ತು ಸುತ್ತಿಕೊಂಡಿರುತ್ತದೆ.

೧೯ ಅನಾದಿ ವೀರಶೈವ ಸಾರಸಂಗ್ರಹ XXV-(೫೮-೫೯)

೨೦ ಪಾರಮೇಶ್ವರ ತಂತ್ರ IV-೭

೨೧ ಪಾರಮೇಶ್ವರ ತಂತ್ರ XII-(೧೩-೧೮)

೨೨ ಅನಾದಿ ವೀರಶೈವ ಸಾರಸಂಗ್ರಹ XXV-೮೨

ಶಿವಪೂಜೆ ಎಂಬ ಪಂಚವಿಧ ಪ್ರವೃತ್ತಿಗಳುಳ್ಳ ಸಾಧನವೆ ಶಿವಯೋಗವೆಂಬುದು ವೀರಾಗಮದ ಮತ.

ಶಿವಜ್ಞಾನಂ ಶಿವೇ ಭಕ್ತಿಃ ಶಿವಾಚಾರಃ ಶಿವವ್ರತಮ್।
ಶಿವಲಿಂಗಾರ್ಚನಾಜ್ಞಪ್ತಿಃ ಶಿವಯೋಗೋ ಹಿ ಪಂಚಧಾ॥ [೨೩]

ಆಗಮಕಾರರ ಈ ವಿಚಾರಧಾರೆಯನ್ನೇ ಬಳಸಿಕೊಂಡು ಶಿವಯೋಗ ಪ್ರದೀಪಿಕೆಯು ಶಿವಯೋಗದ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ಕೊಡುತ್ತದೆ.[೨೪] ಈ ಗ್ರಂಥವು ಶಿವಾಚಾರದ ಸ್ಥಾನದಲ್ಲಿ ಶಿವಧ್ಯಾನವನ್ನು ಸೇರಿಸುತ್ತದೆ. ಈ ಶ್ಲೋಕದ ಮೇಲಿನ ಟೀಕೆಯು ಶಿವ ಸಂಬಂಧವಾದ ಜ್ಞಾನ-ಆಳವಾದ ಭಕ್ತಿ-ಧ್ಯಾನ-ವ್ರತಗಳಿಂದ ಕೂಡಿದ ಶಿವಪೂಜೆಯೆ ಶಿವಯೋಗದ ಮುಖ್ಯ ಲಕ್ಷಣವೆಂದು ಹೇಳುತ್ತದೆ. ಸಮಗ್ರವಾಗಿಯಾಗಲಿ, ಪ್ರತ್ಯೇಕವಾಗಿಯಾಗಲಿ ಈ ಲಕ್ಷಣಗಳು ಪರಶಿವನ ಸಾಕ್ಷಾತ್ಕಾರಕ್ಕೆ ಸಹಾಯಗಳು; ಅಂತರಂಗದ ಪರಿಶುದ್ಧಿಯನ್ನು ಸಾಧಿಸಿ ಶಿವಸಾಯುಜ್ಯಕ್ಕೆ ಕಾರಣವಾಗುತ್ತವೆ.

ಈ ಶಿವಯೋಗದಲ್ಲಿ ಶಿವಭಕ್ತಿಗೆ ವಿಶಿಷ್ಟ ಸ್ಥಾನವುಂಟು. ಅದು ಪರಮಾತ್ಮ-ಜೀವಾತ್ಮರ ಮಧ್ಯದಲ್ಲಿ ಪೂಜ್ಯ-ಪೂಜಕ ಸಂಬಂಧವನ್ನೂ ಅನ್ಯೋನ್ಯಾಶ್ರಯ ಸಂಬಂಧವನ್ನೂ ನೆಲೆಗೊಳಿಸುತ್ತದೆ. ಶಿವವ್ರತವು ಶಿವಸಂಬಂಧವಾದ ಪಂಚಾಚಾರಗಳನ್ನು ಸೂಚಿಸುತ್ತದೆ; ಸಾಧಕನ ಅಂತರಂಗ-ಬಹಿರಂಗ ಶರೀರಗಳನ್ನು ಶುದ್ಧಗೊಳಿಸಿ ಶಿವಕಾರುಣ್ಯಕ್ಕೆ ಯೋಗ್ಯನನ್ನಾಗಿ ಮಾರ್ಪಡಿಸುತ್ತದೆ. ಭಕ್ತನು ಶಿವನಲ್ಲಿ ಅವಿನಾಭಾವ ಸಂಬಂಧವನ್ನು ಪಡೆಯಲು, ಶಿವನ ಕುರುಹಾದ ಇಷ್ಟಲಿಂಗದ ಮೇಲೆ ದೃಷ್ಟಿಯನ್ನಿರಿಸಲು ಶಿವಧ್ಯಾನವು ಕಾರಣವಾಗುತ್ತದೆ. ಇಂಥ ಶಿವಪೂಜೆಯಲ್ಲಿ ನಿರತನಾದ ಶಿವಯೋಗಿಯು ಶಿವನೊಡನೆ ತಾದಾತ್ಮ್ಯ ಸಂಬಂಧವನ್ನೂ, ಸಮತ್ವಸ್ಥಿತಿಯನ್ನೂ ಪಡೆಯುತ್ತಾನೆ. ಜನನ-ಮರಣಗಳ ಬಂಧನದಿಂದ ಬಿಡುಗಡೆ ಹೊಂದುತ್ತಾನೆ.

### ೩. ಷಟ್‌ಸ್ಥಲದ ಮುಖಾಂತರ ಶಿವಯೋಗ:

ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಃ ಪರಃ॥ [೨೫]

---

೨೩ ವೀರಾಗಮ

೨೪ ಶಿವಯೋಗ ಪ್ರದೀಪಿಕಾ I ೧೫
ಜ್ಞಾನಂ ಶಿವಮಯಂ ಭಕ್ತಿಃ ಶೈವೀಧ್ಯಾನಂ ಶಿವಾತ್ಮಕಮ್।
ಶೈವಂ ಮಂತ್ರಂ ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ॥
ವೇದಾಂತಸಾರ ವೀರಶೈವ ಚಿಂತಾಮಣಿ II. XII-೩೩

೨೫ ಸಿದ್ಧಾಂತ ಶಿಖಾಮಣಿ

ಎಂಬ ಉಕ್ತಿಯಂತೆ ಶೈವಾಗಮಗಳ ಪೂರ್ವಭಾಗದಲ್ಲಿ ಶೈವಧರ್ಮಾಚರಣೆ ಹಾಗೂ ವಾತುಲಾದಿಯಾದ ತಂತ್ರಾಗಮದ ಉತ್ತರ ಭಾಗದಲ್ಲಿ ವೀರಶೈವ ಧರ್ಮಾಚರಣೆ ಉಕ್ತವಾಗಿದೆ. ಇಲ್ಲಿ ಕಂಡು ಬರುವ ವೈಶಿಷ್ಟ್ಯವೆಂದರೆ, ಷಟ್‌ಸ್ಥಲ ಸಿದ್ಧಾಂತದ ಪ್ರತಿಪಾದನೆ ಮತ್ತು ಗುರು–ಲಿಂಗ–ಜಂಗಮ–ಶಿವಯೋಗ ಮುಂತಾದ ಪದಗಳ ಖಚಿತ ಪ್ರಯೋಗ. ಆಗಮ ಋಷಿಗಳಿಗೆ ಷಟ್‌ಸ್ಥಲ ಸಿದ್ಧಾಂತ–ಸಾಧನೆ–ಸಿದ್ಧಿಗಳು ಅನಿವಾರ್ಯವಾಗಿ ಅವರು ಪೂಜಿಸುವ ಲಿಂಗವೆ ಇಷ್ಟಲಿಂಗವಾಯಿತು. ಅದು ಪ್ರಾಣ ಸದೃಶ ಪ್ರಿಯವಾದುದರಿಂದ ಪ್ರಾಣಲಿಂಗವೆನ್ನಿಸಿತು. ಇಂಥ ಶಿವಯೋಗಿಗಳ ಸದಾಚಾರ–ಸದ್ಭಕ್ತಿ–ಜ್ಞಾನ–ವಿರಕ್ತಿ–ಸಾಧನೆ–ಸಿದ್ಧಿಗಳನ್ನು ಗುರುತಿಸಿ ಅವರಿಗೆ ಅವಧೂತ–ಸನ್ಯಾಸಿ–ಯೋಗಿ–ಪಾಶುಪತ–ಶಿವ–ಲಿಂಗಿ–ವೀರ–ವೀರಶೈವ–ಯತಿ ಎಂದು ಕರೆಯುವ ಸಂಪ್ರದಾಯಗಳು ನಾಡಿನಲ್ಲಿ ರೂಢವಾದಂತೆ ತಿಳಿದುಬರುತ್ತದೆ.[೨೬]

ಪಾರಮೇಶ್ವರ ತಂತ್ರದ ಪ್ರಕಾರ ಭಕ್ತಿಯೆ ಸಾಧನ, ಜ್ಞಾನವೆ ಸಾಧ್ಯ, ಯೋಗವೆ ಮುಕ್ತಿಗೆ ಕಾರಣ[೨೭] ಭಕ್ತಿಯಿಂದ ಮಾಡುವ ಶಿವಯೋಗಾಭ್ಯಾಸವು ಮುಕ್ತಿಯನ್ನು ಭದ್ರಗೊಳಿಸುತ್ತದೆ ಎಂದೂ, ಷಟ್‌ಸ್ಥಲಾಭ್ಯಾಸ ರೂಪದಲ್ಲಿರುವ ಶಿವಯೋಗವು ಶಿವಸಾಯುಜ್ಯವೆಂಬ ಮೋಕ್ಷಕ್ಕೆ ಕಾರಣವಾಗುತ್ತದೆಂದೂ ತಿಳಿಯಬಹುದು[೨೮] ಚಂದ್ರಜ್ಞಾನ–ಕಾರಣ–ಮಕುಟ–ವೀರ–ಸೂಕ್ಷ್ಮ–ಮತಂಗ–ಪಾರಮೇಶ್ವರ–ವಾತುಲ ಮುಂತಾದ ಆಗಮಗಳಲ್ಲಿ ಹಾಗೂ 'ಸ್ಕಂದಪುರಾಣ' 'ಶಂಕರ ಸಂಹಿತಾ'ಗಳಲ್ಲಿ ಷಟ್‌ಸ್ಥಲ ಮಾರ್ಗವು ವರ್ಣಿಸಲ್ಪಟ್ಟಿದ್ದು, ಅನೇಕ ವೀರಶೈವ ಲೇಖಕರು ಷಟ್‌ಸ್ಥಲದ ವಿವರಗಳನ್ನು ಕೊಡಲು ಈ ಗ್ರಂಥಗಳಿಂದ ಅನೇಕ ಅವತರಣಿಕೆಗಳನ್ನು ಉದಾಹರಿಸಿದ್ದಾರೆ.[೨೯]

ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣವಾದ, ನಿತ್ಯ ಹಾಗೂ ಅಲುಪ್ತಶಕ್ತಿಯುಳ್ಳ ಪರಶಿವನೆ ಸ್ಥಲವಾಚಕನು[೩೦] ಅವನು ಸರ್ವಜ್ಞನೂ, ತೃಪ್ತನೂ, ಅನಾದಿಬೋಧನೂ, ಸ್ವತಂತ್ರನೂ, ಅನಂತ ಶಕ್ತಿಯುತನೂ ಆಗಿದ್ದಾನೆ.[೩೧]

ಪರಮಾತ್ಮನಲ್ಲಿರಿಸಿದ ಸಾತ್ವಿಕ ಹಾಗೂ ಪರಿಶುದ್ಧ ಪ್ರೇಮವೆ ಭಕ್ತಿ ಆದ್ದರಿಂದ

---

೨೬ ಪಾರಮೇಶ್ವರ ತಂತ್ರ X–(೬೬–೬೭)

೨೭ ಪಾರಮೇಶ್ವರ ತಂತ್ರ XII–೩ 'ಭಕ್ತಿಃ ಸುಸಾಧನಂ ಸಾಧ್ಯಂ ಜ್ಞಾನಂ ಯೋಗಾದ್ವಿಮುಕ್ತಯೆ।

೨೮ ವೇದಾಂತಸಾರ ವೀರಶೈವ ಚಿಂತಾಮಣಿ II–XIV–೪೯

೨೯ ನಿಷ್ಠೂರ ನಂಜಣಾಚಾರ್ಯ–'ವೇದಾಂತಸಾರ ವೀರಶೈವ ಚಿಂತಾಮಣಿ part II
ನಿಷ್ಠೂರ ನಂಜಣಾಚಾರ್ಯ–'ವೀರಮಾಹೇಶ್ವರಾಚಾರ ಸಂಗ್ರಹ' ಅಧ್ಯಾಯ ೧ಳ
ಸಿದ್ಧವೀರಣಾರ್ಯ–'ಅನಾದಿ ವೀರಶೈವ ಸಾರಸಂಗ್ರಹ',

೩೦ ಪಾರಮೇಶ್ವರ ತಂತ್ರ VI–೭ 'ಅಹಮೇವ ಸ್ಥಲಂ ವಿದ್ಧಿ'।

೩೧ ಪಾರಮೇಶ್ವರ ತಂತ್ರ VI–೩೭

ಷಟ್‌ಸ್ಥಲ ಸಾಧನೆಯ ಮುಖಾಂತರ ಶಿವಸಾಯುಜ್ಯವೆಂಬ ಮೋಕ್ಷವು ಘಟಿಸುತ್ತದೆ. ಕಾರಣ ಭಕ್ತಿ–ಕರ್ಮಕ್ಷಯ–ಬುದ್ಧಿ–ವಿಚಾರ–ದರ್ಪ ಸಂಕ್ಷಯ–ಸಮ್ಯಕ್‌ಜ್ಞಾನವೆಂಬ ಉಪಾಂಗಗಳು, ಭಕ್ತ–ಮಹೇಶ–ಪ್ರಸಾದಿ–ಪ್ರಾಣಲಿಂಗಿ–ಶರಣ–ಐಕ್ಯ ಎಂಬ ಅಂಗಗಳನ್ನರಿಯಲು ಶಿವಯೋಗಿಗೆ ಸಾಧನಗಳು. ಶಿವನ ಬಗೆಗೆ ಪೂರ್ಣ ಜ್ಞಾನವುಳ್ಳವನು ಭಕ್ತ, ಆತ್ಮ ತೃಪ್ತನು ಮಹೇಶ, ಕೃಪಾಳುವೂ ಅಂತಃಕರುಣಿಯೂ ಹಾಗೂ ಆತ್ಮಸಂತೋಷಿಯೂ ಪ್ರಸಾದಿ, ಸದಾ ಸರಳನೂ ಹಾಗೂ ನಿರ್ಬಂಧನೂ ಪ್ರಾಣಲಿಂಗಿ, ಕೊರತೆ-ಅಭ್ಯಂತರಗಳಿಲ್ಲದವನು ಶರಣ, ಅಪಾರವಾದ ಅಂತರ್ಜ್ಞಾನಶಕ್ತಿಯುತನು ಐಕ್ಯ. ಷಟ್‌ಸ್ಥಲದ ಈ ಲಕ್ಷಣಗಳನ್ನು ಅಳವಡಿಸಿಕೊಳ್ಳುವುದು ಶಿವಯೋಗಿಯ ಕರ್ತವ್ಯವೆಂಬುದು ಪಾರಮೇಶ್ವರ ತಂತ್ರದ ಬೋಧೆ.[೩೨]

೧೨ನೆಯ ಶತಮಾನದ ಶಿವಶರಣರು ಬಳಸಿಕೊಂಡಿರುವ ಲಿಂಗ–ಅಂಗ, ಅಂಗಸ್ಥಲ–ಲಿಂಗಸ್ಥಲಗಳು, ಷಡ್‌ವಿಧಶಕ್ತಿ ಹಾಗೂ ಭಕ್ತಿಗಳ ಕಲ್ಪನೆ ಆಗಮಗಳಷ್ಟೆ ಪುರಾತನವಾದುದು. ಷಟ್‌ಸ್ಥಲ ಸಿದ್ಧಾಂತದಲ್ಲಿ ಅಡಕವಾದ ಸಾಧನೆಯನ್ನು ಪ್ರತಿಷ್ಠಾಪಿಸಲು ಆಗಮಗಳು ಲಿಂಗಪೂಜೆ–ಮಂತ್ರಾನುಸಂಧಾನಗಳನು ಜೋಡಿಸಿವೆ.[೩೩] ಅಂತರಿಂದ್ರಿಯ ಸಹಿತವಾದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಷಡ್‌ವಿಧಲಿಂಗಗಳ ಸ್ಥಾನವೆಂದು ಆಗಮಗಳು ನಿರ್ಧರಿಸಿವೆ. ಹೀಗೆ ಸರ್ವಾಂಗಲಿಂಗದ ಕಲ್ಪನೆ ಆಗಮಗಳ ಬಳುವಳಿ.[೩೪] ಆದರೆ ಆಗಮಗಳಲ್ಲಿರುವ ಷಟ್‌ಸ್ಥಲ ಶಿವಯೋಗವು ಕೇವಲ ಸಿದ್ಧಾಂತ ಮಾತ್ರ. ಈ ಸಿದ್ಧಾಂತದ ಪೂರ್ಣ ಸಾಧನೆ–ಪ್ರಯೋಗಗಳನ್ನು ಕಂಡು ಕಂಡರಿಸಿದವರು ೧೨ನೆಯ ಶತಮಾನದ ಶಿವಶರಣರು ಹಾಗೂ ಮುಂದಿನ ವೀರಶೈವ ಶಿವಯೋಗಿಗಳು. ಅವರು ತಮ್ಮ ನವೀನ ಪಥವನ್ನು ನಿರ್ಮಿಸಿಕೊಂಡರು. ಆಗಮಪಥಗಳಲ್ಲಿ ಅನುಭಾವಾತ್ಮಕವಾದ, ವ್ಯಾಪಕವಾದ ಅರ್ಥವೈಭವವನ್ನೂ ಹೊಸ ರೀತಿಯ ಅಧ್ಯಾತ್ಮ ಸಂಪತ್ತಿನ ಮಹಿಮೆಯನ್ನೂ ಕಂಡರು. ಕಾರಣ, ಶಿವಶರಣರಿಗೆ ಸಾಧನಾಪಥವೆ ಷಟ್‌ಸ್ಥಲ ಸಿದ್ಧಾಂತ; ಲಿಂಗಾಂಗಸಾಮರಸ್ಯ ಅರ್ಥಾತ್ ಶಿವಯೋಗದ ಪರಾಕಾಷ್ಠೆಯೆ ಪರಮಸಿದ್ಧಿ. ಆಗಮ ಪರಂಪರೆಯ ಶಿವಯೋಗಿಯು ಪಡೆದ ಮುಕ್ತಿಪಥಕ್ಕಿಂತ ಶಿವಶರಣನು ಪಡೆಯುವ

---

೩೨ ಪಾರಮೇಶ್ವರ ತಂತ್ರ VI ೩೪–೩೬, ೫೯–೬೨

೩೩ ಕಾರಣಾಗಮ VII; ಸೂಕ್ಷ್ಮತಂತ್ರ VI ೬೫–೬೬.

೩೪ ಸೂಕ್ಷ್ಮತಂತ್ರ VIII ೪–೨೭, ಚಂದ್ರಜ್ಞಾನಾಗಮ II–ii (೧೬–೧೮); ಮಕುಟಾಗಮ II–ii–(೨೭–೨೯) ಮತ್ತು ಚಂದ್ರಜ್ಞಾನಾಗಮ II–ii–೧೨; ಮಕುಟಾಗಮ–II–ii–(೨೩–೨೪). ಸ್ಕಂದಪುರಾಣ, ಶಂಕರ ಸಂಹಿತಾ–ಇವು ಷಟ್‌ಸ್ಥಲದ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ವಿವರಿಸುತ್ತವೆ. ವೇದಾಂತಸಾರ ವೀರಶೈವ ಚಿಂತಾಮಣಿ II (೪೦–೪೫).

ಲಿಂಗಾಂಗಸಾಮರಸ್ಯವು ತೀರ ಭಿನ್ನ ಹಾಗು ವೈಶಿಷ್ಟ್ಯಪೂರ್ಣ. ಒಟ್ಟಿನಲ್ಲಿ ಶಿವಾಗಮ ಗಳ ನಾಲ್ಕು ಪಾದಗಳನ್ನು ನಿರೀಕ್ಷಿಸಿದರೆ ಅಲ್ಲಿ ತೋರುವ ವೀರಶೈವ ಪ್ರಭೇದವು ಶೈವ ಮಹಾವೃಕ್ಷದ ಮುಖ್ಯ ಕೊಂಬೆಯಾಗಿ ೧೨ನೆಯ ಶತಮಾನದಲ್ಲಿ ಚಿಗುರೊಡೆದಿದೆ ಎಂದು ಅರಿಯಬಹುದಾಗಿದೆ.

ಶೈವಸಿದ್ಧಾಂತದ ಪರಂಪರೆಯ ಐತಿಹ್ಯದಂತೆ ತಮಿಳುನಾಡಿನಲ್ಲಿಯೂ ಅನೇಕ ಶಿವ ಯೋಗಿಗಳಿದ್ದರೆಂಬುದು ಪ್ರಸಿದ್ಧ. ಅಧ್ಯಾತ್ಮಪರವಾದ ಉದ್ಗ್ರಂಥಗಳಲ್ಲಿ ತಮಿಳು ಶೈವದಲ್ಲಿ ಕಂಡುಬರುವ ಶಿವಯೋಗದ ಸ್ವರೂಪವು ಸ್ಪಷ್ಟವಿದೆ. ತಮಿಳುನಾಡಿನ 'ತಿರು ಮುಲರ್' (ಕ್ರಿ. ಶ. ೫ನೆಯ ಶತಮಾನ) ಎಂಬ ಅನುಭಾವಿಯು ಶ್ರೇಷ್ಠ ಶಿವಯೋಗಿ ಯಾಗಿದ್ದು 'ತಿರುಮಂದಿರಮ್' ಎಂಬ ತಂತ್ರಗ್ರಂಥವನ್ನು ರಚಿಸಿದ್ದಾರೆ.[೩೫] ಈ ಗ್ರಂಥದ ಮೂರನೆಯ ಭಾಗವು ಪತಂಜಲ ಮಹರ್ಷಿಯು ನಿರೂಪಿಸಿದ ಅಷ್ಟಾಂಗ ಮಾರ್ಗಕ್ಕಿಂತ ಭಿನ್ನವಾದ ಹಾಗು ವಿಶಿಷ್ಟವಾದ ಯೋಗಸಂಪ್ರದಾಯವನ್ನು ವಿಶದಪಡಿಸುತ್ತಿದ್ದು, ಅದು ಶಿವಯೋಗವೆಂದು ಪ್ರಖ್ಯಾತಗೊಂಡಿದೆ. ತಿರುಜ್ಞಾನಸಂಬಂಧರ್ ಎಂಬ ಇನ್ನೊಬ್ಬ ತಮಿಳುನಾಡಿನ ಅನುಭಾವಿಯು ಬಾಲ್ಯದಿಂದಲೇ ಸಿದ್ಧ ಶಿವಯೋಗಿಯಾಗಿದ್ದನಂತೆ.[೩೬]

**'ಯೋಗ' ಶಬ್ದ:**

ವೈದಿಕ ಸಾಹಿತ್ಯದಲ್ಲಿ 'ಯೋಗ' ಶಬ್ದದ ಪ್ರಯೋಗವಿದ್ದು ಅದು 'ಹೂಡವದು', 'ಕೂಡಿಸುವಿಕೆ', 'ಇಷ್ಟವಸ್ತುವಿನ ಪ್ರಾಪ್ತಿ', 'ಒಂದುಗೂಡಿಸುವಿಕೆ' –ಎಂಬ ಅರ್ಥವನ್ನು ಕೊಡುತ್ತದೆ.[೩೭] ಆದರೆ ಯೋಗಶಾಸ್ತ್ರಕ್ಕೆ ಮೀಸಲಾದ ಗ್ರಂಥಗಳಲ್ಲಿ ಬರುವ 'ಯೋಗ' ಪದದ ಅರ್ಥ ವೇದಗಳಲ್ಲಿಲ್ಲ. ಋಗ್ವೇದದ ಒಂದು ಸೂಕ್ತವು ಮಾತ್ರ ಏಳು ಜನ ಮುನಿಗಳ ಲಕ್ಷಣವನ್ನು ವರ್ಣಿಸುತ್ತದೆ ಅಷ್ಟೆ! ಅಥರ್ವಣ ವೇದದ ಯಾವ ಭಾಗ ದಲ್ಲಿಯೂ 'ಯೋಗ' ಶಬ್ದದ ನೇರವಾದ ಉಪಯೋಗ ಕಂಡುಬರುವದಿಲ್ಲ. ಅಲ್ಲಿ ತಪಸ್ಸಿನಿಂದ ತ್ಯಾಗಿಗೆ ಅಣಿಮಾದಿ ಸಿದ್ಧಿಗಳು (Supernatural Powers) ಪ್ರಾಪ್ತ ವಾಗುತ್ತವೆ ಎಂಬ ನಿವೇದನೆಯುಂಟು.[೩೮] 'ಯೋಗ' ಪದದ ಸ್ಪಷ್ಟ ಉಲ್ಲೇಖ ಶತಪಥ ಬ್ರಾಹ್ಮಣದಲ್ಲಿ[೩೯] ಹಾಗೂ ಆರಣ್ಯಕ ಉಪನಿಷತ್ತುಗಳಲ್ಲಿದೆ.

---

೩೫ Dr. V. V. Ramana Shastri: Introduction to Tirumantiram P. 5–8.

೩೬ V. Paranjoti: 'Saiva Siddhanta' P 28–30.

೩೭ ಋಗ್ವೇದ I–೫–೩, I–೩೪–೯, III–೨೭–೧೧, IV–೨೪–೪, VII–೬೭–೮ X–೧೧೪–೯.

೩೮ ಅಥರ್ವಣವೇದ II–೭.

೩೯ ಶತಪಥ ಬ್ರಾಹ್ಮಣ XIV ೭–೧–೧೧.

ಯೋಗಶಾಸ್ತ್ರದ ಪ್ರಕಾರ 'ಯೋಗ' ಎಂಬ ಪದವು 'ಯುಜ್-ಸಮಾಧೌ' ಎಂಬ ಧಾತುವಿನಿಂದ ನಿಷ್ಪನ್ನವಾಗಿದ್ದು, ಅದು ಎರಡು ವಸ್ತುಗಳ ಸಂಯೋಗ, ಕೂಡುವಿಕೆಯನ್ನು ಸೂಚಿಸುತ್ತದೆ. ಯೋಗ ಶಬ್ದದ ನಿಷ್ಪತ್ತಿಯೇ ಸೂಚಿಸುವಂತೆ ಎಲ್ಲ ಯೋಗಗಳ ಆತ್ಯಂತಿಕ ಗುರಿ ಒಂದೆ ವಿಧವಾಗಿದೆ. ಆಂತರಿಕ ಸಾಧನಾಕ್ರಮದಲ್ಲಿ ತೋರುವ ಕೆಲವು ವ್ಯತ್ಯಾಸಗಳಿಂದ ಯೋಗಮಾರ್ಗದಲ್ಲಿ ಪ್ರಭೇದಗಳು ತೋರಿಕೊಂಡಿವೆ. ಏಕಾಕ್ಷರ, ದ್ವ್ಯಕ್ಷರ, ಪಂಚಾಕ್ಷರ, ಷಡಕ್ಷರ ಮೊದಲಾದ ಮಂತ್ರಗಳನ್ನು ಪಠಿಸುತ್ತ ವೈಖರೀವಾಣಿ-ಪರಾವಾಣಿಗಳನ್ನು ಸಮನ್ವಯಗೊಳಿಸಿ ಪರಾವಾಕ್ ಸಿದ್ಧಿಯನ್ನು ಮಂತ್ರಯೋಗಿಗಳು ಸಾಧಿಸುತ್ತಾರೆ. ನಾದ-ಬಿಂದುಗಳನ್ನು ಒಂದುಗೂಡಿಸಿ ಮನ-ಮಾರುತಗಳ ಉಲುಹನ್ನು ಅಡಗಿಸಿ ನಾದಾತೀತ-ಸ್ಥಿತಿಯನ್ನು ಲಯಯೋಗಿಗಳು ಪಡೆಯುತ್ತಾರೆ. ಪ್ರಾಣಾಪಾನಗಳನ್ನು ಅಷ್ಟಾಂಗ ಯೋಗಮಾರ್ಗದಿಂದ ಹಾಗೂ ಮುದ್ರಾಕರಣಂಗಳ ಅಭ್ಯಾಸದಿಂದ ತಮ್ಮ ಅಂಕಿತಕ್ಕೆ ತಂದುಕೊಂಡು ಪ್ರಾಣಶಕ್ತಿಯ ಅಖಂಡ ಚೈತನ್ಯವನ್ನು ಹಠಯೋಗಿಗಳು ಗಳಿಸುತ್ತಾರೆ. ಇಡಾ-ಪಿಂಗಳಾ ಅರ್ಥಾತ್ ಚಂದ್ರ-ಸೂರ್ಯನಾಡಿಗಳನ್ನು ಒಂದುಗೂಡಿಸಿ, ಸುಷುಮ್ನಾ ನಾಡಿಯನ್ನು ಜಾಗ್ರತಗೊಳಿಸಿ ದೃಷ್ಟಿಸಿದ್ಧಿಯನ್ನು ಪಡೆದು ಕೊನೆಗೆ ಪರಮನಿರ್ವಾಣ ಪದವನ್ನು ರಾಜಯೋಗಿಗಳು ಸಂಪಾದಿಸುತ್ತಾರೆ. ಲಿಂಗ-ಅಂಗಗಳ ಅರ್ಥಾತ್ ಶಿವ-ಜೀವರ ಅವಿನಾಭಾವ ಸಾಮರಸ್ಯವನ್ನು ಶಿವಯೋಗಿಗಳು ಹೊಂದುತ್ತಾರೆ. ಆದರೆ ವೀರಶೈವ-ಶಿವಯೋಗವನ್ನುಳಿದು ಉಳಿದ ಯೋಗಗಳ ಸಾಧನ ಕ್ರಮದಲ್ಲಿ ವಿವಿಧ ರೀತಿಯ ತೊಡಕು ತೊಂದರೆಗಳನ್ನು ಕಾಣಬಹುದಾಗಿದೆ. ಯಮ-ನಿಯಮಾದಿಗಳ ಅಷ್ಟಾಂಗಗಳ ಸಾಧನೆಯಲ್ಲಿ ಸಾಧಕನು ಅತ್ಯುಗ್ರವಾದ ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಪ್ರಾಣಾಯಾಮದಿಂದ ಪ್ರಾಣವನ್ನು ನಿಯಂತ್ರಣಗೊಳಿಸುವಲ್ಲಿ ಕ್ರಮತಪ್ಪಿದರೆ ಪ್ರಾಣಕ್ಕೆ ಅಪಾಯವಾಗುವ ಸಂಭವವೂ ಉಂಟು. ಕುಂಡಲಿನಿ ಶಕ್ತಿಯನ್ನು ಜಾಗ್ರತಗೊಳಿಸಿ ಷಟ್‌ಚಕ್ರಗಳ ಮುಖಾಂತರ ಅದನ್ನು ಸಹಸ್ರಾರಕ್ಕೆ ಏರಿಸುವ ಕ್ರಮದಲ್ಲಿ ಒಮ್ಮೊಮ್ಮೆ ವ್ರತಚ್ಯುತನಾಗುವ ಪರಿಸ್ಥಿತಿಯೂ ಇದೆ. ಈ ಯೋಗಗಳನ್ನು ಸಾಧಿಸುವುದು ಸಹಜವಲ್ಲ, ಸುಲಭ ಸಾಧ್ಯವೂ ಅಲ್ಲ. ಕಾರಣ ವೀರಶೈವ ಶಿವಯೋಗಿಗಳು ಅತಿ ಸುಲಭವಾದ, ಆ ಬಾಲವೃದ್ಧರಿಗೂ ಸಹಜ ಲಭ್ಯವಾಗಬಲ್ಲ ಷಟ್‌ಸ್ಥಲ ಮಾರ್ಗವನ್ನು ಕಂಡು ಹಿಡಿದರು. ಅವರು ಅಷ್ಟಾಂಗ ಯೋಗದಲ್ಲಿ ಪೂರ್ವದ ಐದಂಗಗಳಾದ ಯಮ-ನಿಯಮ-ಆಸನ ಪ್ರಾಣಾಯಾಮ-ಪ್ರತ್ಯಾಹಾರಗಳನ್ನು ಬಿಟ್ಟು ಉತ್ತರಯೋಗವೆನಿಸುವ ಧಾರಣ-ಧಾನ-ಸಮಾಧಿಗಳೆಂಬ ಮೂರು ಅಂಗಗಳನ್ನು ಶಿವಯೋಗಾನುಸಂಧಾನದ ಕ್ರಮದಲ್ಲಿ ಬಳಸಿಕೊಂಡರು.

**ಸಿದ್ಧಾಂತದ ಹಿನ್ನೆಲೆ:**

ವೀರಶೈವ ಸಿದ್ಧಾಂತದ ಪ್ರಕಾರ ಏಕಮೇವಾದ್ವಿತೀಯವಾದ ಸಚ್ಚಿದಾನಂದ ಲಕ್ಷಣವುಳ್ಳ ಪರಶಿವಬ್ರಹ್ಮವು ಸ್ಥಲಪದವಾಚ್ಯವಾಗಿ ಸ್ವಲೀಲಾನಂದ ಪರವಶವಾಗಿರಲು

ತನ್ನ ಚಿದಂಶದ ನೆನಹು ಮಾತ್ರದಿಂದ ಉಪಾಸ್ಯೋಪಾಸಕ ದೃಷ್ಟಿಯಿಂದ ಅಂಗ–ಲಿಂಗ ಎಂದು ದ್ವಿವಿಧಸ್ಥಲವಾಗಿ ಪರಿಣಮಿಸಿತು. ಅಂಗವೆ ಜೀವಾತ್ಮದ್ಯೋತಕ, ಲಿಂಗವೆ ಪರ ಬ್ರಹ್ಮದ ಕುರುಹು. ಸ್ಥೂಲ–ಸೂಕ್ಷ್ಮ–ಕಾರಣವೆಂಬ ಮೂರು ಶರೀರಗಳಲ್ಲಿ ಲಿಂಗೋ ಪಾಸನೆ ಸಿದ್ಧಿಸಬೇಕೆಂದು ಇಷ್ಟ–ಪ್ರಾಣ–ಭಾವವೆಂಬ ಮೂರು ಲಿಂಗಗಳಾಗಿಯೂ; ಅಂಗ ಸ್ಥಲವು ತ್ಯಾಗಾಂಗ-ಭೋಗಾಂಗ-ಯೋಗಾಂಗವೆಂದು ಮೂರಾಗಿಯೂ ವಿಭಾಗವಾದವು. ಈ ಉಪಾಸನೆಯು ಹೃದಯ ಹಾಗು ಬಹಿರೀಂದ್ರಿಯಗಳ ಮುಖಾಂತರ ನಡೆಯಬೇಕೆಂಬ ದೃಷ್ಟಿಯಿಂದ ಇಷ್ಟಾದಿ ತ್ರಿಲಿಂಗಗಳು ಆಚಾರಲಿಂಗ–ಗುರುಲಿಂಗ–ಶಿವಲಿಂಗ–ಜಂಗಮ ಲಿಂಗ–ಪ್ರಸಾದಲಿಂಗ–ಮಹಾಲಿಂಗವೆಂಬ ಆರು ಲಿಂಗಸ್ಥಲಗಳಾದವು. ಲಿಂಗಗತವಾದ ಶಕ್ತಿಯು೪೦ ಅಂಗನಲ್ಲಿ ಭಕ್ತಿಯಾಗಿ೪೧ ಪರಿಣಮಿಸಿತು. ಈ ಶಕ್ತಿ–ಭಕ್ತಿಗಳಲ್ಲಿ ಸಾಮರಸ್ಯ ತೋರುವುದೆ ಲಿಂಗಾಂಗಸಾಮರಸ್ಯ; ಶಿವಯೋಗದ ನಿಲವು; ಇದುವೆ ವೀರಶೈವ ದರ್ಶನ ದಲ್ಲಿ ಮೋಕ್ಷಮಾರ್ಗ; ಜೀವಾತ್ಮನು ಪರಮಾತ್ಮನಾಗುವ ಪಥ–ಎಂದು ವೀರಶೈವ ಅನುಭಾವಿಗಳು ಬೋಧಿಸಿದ್ದಾರೆ. ಶುದ್ಧಾತ್ಮನಾದ ಅಂಗನಲ್ಲಿ ಪರಮಾತ್ಮನ ಶಕ್ತಿಯೆ ಭಕ್ತಿಯಾಗುತ್ತದೆ. ಕಾರಣ ಶಿವಭಕ್ತಿಯು ವೀರಶೈವರಿಗೆ ಚತುರ್ವಿಧ ಪುರುಷಾರ್ಥಗಳನ್ನು ಮೀರಿದ ಪಂಚಮ ಪುರುಷಾರ್ಥ. ಶಿವಪ್ರಸಾದದಿಂದ ಶಿವಜ್ಞಾನೋದಯವೂ ಆ ಜ್ಞಾನ ದಿಂದ ಮೋಕ್ಷವೂ ಸಿದ್ಧಿಸುವುದರಿಂದ, ಮೋಕ್ಷಸ್ಥಾನದಲ್ಲಿ ಸ್ಥಿರವೂ ಸ್ವತಂತ್ರವೂ ಆದ ಶಿವಭಕ್ತಿಯು ಮೋಕ್ಷಕ್ಕಿಂತಲೂ ಶ್ರೇಷ್ಠತರವಾಗಿ ರಾರಾಜಿಸುತ್ತದೆ. ಶ್ರೀ ಮಾಯಿದೇವ ಕೃತ 'ಶಿವಾನುಭವಸೂತ್ರಂ' ಗ್ರಂಥವು ಪರಮಪ್ರಮಾಣ—

ಭಕ್ತಿರ್ಗರುತರಾ ಭಾತಿ ಸ್ವತಂತ್ರಾ ನಿಜಲೀಲಯಾ|
ಧರ್ಮಾದಿಪುರುಷಾರ್ಥಾಣಾಂ ಚತುರ್ಣಾಂ ಪರತಃ ಪರಾ||
ಪಂಚಮಃ ಪುರುಷಾರ್ಥೋ ಹಿ ಭಕ್ತಿಃ ಶೈವೀ ಸನಾತನೀ|
ಲೋಕಯೋರುಭಯೋರ್ರೈಹಿಕಾಮುಷ್ಮಿಕ ಪದಾರ್ಥಯೋಃ||*

ವೀರಶೈವ ಷಟ್‌ಸ್ಥಲಮಾರ್ಗವು ಭಕ್ತಸ್ಥಲದಿಂದ ಐಕ್ಯಸ್ಥಲದವರೆಗೆ ಪೂರ್ಣ ಗೊಂಡು, ವೀರಶೈವ ಸಾಧಕನು ಏರಬಹುದಾದ ಉತ್ತುಂಗ ಶ್ರೇಣಿಯನ್ನು ಸೂಚಿಸುತ್ತದೆ. ಜೀವನದ ಪರಿಪೂರ್ಣಸಿದ್ಧಿ ಈ ಮಾರ್ಗದಲ್ಲಿದೆ. ಸಾಧಕನ ಅಂತಃಶಕ್ತಿ ಭಕ್ತ–ಮಹೇಶ– ಪ್ರಸಾದಿಸ್ಥಲಗಳಲ್ಲಿ ವಿಕಾಸಗೊಳ್ಳುತ್ತ, ಪ್ರಾಣಲಿಂಗಿ ಎಂಬ ನಾಲ್ಕನೆಯ ಸ್ಥಲದಲ್ಲಿ ಸಾಧಕನ ಅಂತಃಸತ್ವ ವಿಸ್ತಾರವಾಗಿ ವಿಕಾಸಗೊಂಡು ಸಮುದ್ರದ ಆಳದಂತೆ ಘನಗಂಭೀರವಾಗುತ್ತದೆ.

೪೦ ಷಡ್‌ಲಿಂಗಗಳಲ್ಲಿ ಸನ್ನಿಹಿತವಾದ ಷಡ್‌ಶಕ್ತಿಗಳು–ಕ್ರಿಯಾಶಕ್ತಿ, ಜ್ಞಾನಶಕ್ತಿ– ಇಚ್ಛಾಶಕ್ತಿ–ಆದಿಶಕ್ತಿ–ಪರಾಶಕ್ತಿ–ಚಿತ್‌ಶಕ್ತಿ–ಎಂಬುದು ವೀರಶೈವ ಪರಿಭಾಷೆ.

೪೧ ಷಡ್‌ಲಿಂಗಗಳಲ್ಲಿ ಷಡ್‌ಭಕ್ತಿಗಳು–ಸದ್ಭಕ್ತಿ, ನಿಷ್ಠೆಕೀಭಕ್ತಿ–ಅವಧಾನಭಕ್ತಿ, ಅನು ಭವಭಕ್ತಿ–ಆನಂದಭಕ್ತಿ–ಸಮರಸಭಕ್ತಿ.

* ಮಾಯಿದೇವ–'ಶಿವಾನುಭವ ಸೂತ್ರಂ' ಪು. ೧೪೧.

ಭಕ್ತಿ-ಜ್ಞಾನ-ಕರ್ಮಗಳ ಸಂಯೋಗವನ್ನೂ ಅಲ್ಲಿ ಕಾಣುತ್ತೇವೆ; ಅಲ್ಲದೆ ಶಿವಶರಣನು ಭಕ್ತಿಯುತನಾಗಿ ಪ್ರತಿನಿತ್ಯ ಆಚರಿಸುವ ಶಿವಪೂಜೆಯಲ್ಲಿ ಮಂತ್ರಯೋಗ-ಲಯಯೋಗ-ಹಠಯೋಗ-ರಾಜಯೋಗಗಳ ಸಮನ್ವಯದೊಡನೆ ಶಿವಯೋಗವಾಗಿ ಮಾರ್ಪಾಡಾದುದನ್ನು ಅರಿಯುತ್ತೇವೆ. ಐಹಿಕ ಜೀವನದಲ್ಲಿಯೆ ಇದ್ದು, ಐಹಿಕ-ಪಾರಲೌಕಿಕಸಿದ್ಧಿ, ಪರಾಪರಗಳನ್ನು ಮೀರಿದ ಸಾಮರಸ್ಯ ಸುಖಗಳನ್ನು ಸಾಧಿಸಬಲ್ಲ ಕಲೆ, ಶಿವಶರಣರ ಶಿವಯೋಗದಲ್ಲಿದೆ. ಕಾರಣ ಷಟ್‌ಸ್ಥಲಮಾರ್ಗದಲ್ಲಿ ಪ್ರಾಣಲಿಂಗಿಸ್ಥಲದಿಂದಲೇ ಶಿವಯೋಗದ ಆರಂಭವಾಗುತ್ತದೆ. ವಿವಿಧ ಯೋಗಗಳು ವಿಧಿಸುವ ಕಠಿಣ ಸಾಧನಾಕ್ರಮಗಳು ಸಾಧಕನ ನಿಜಜೀವನದಲ್ಲಿ ಸಹಜವಾಗಿ ಕರತಲಾಮಲಕವಾಗಬಲ್ಲ ಸುಲಭಮಾರ್ಗ ವೀರಶೈವ ಶಿವಯೋಗದಲ್ಲದೆ. ಕಾರಣ ವೀರಶೈವ ಸಾಧಕನು ಶಿವಯೋಗಬಲ್ಲಿದನಾಗಲು ಗುರುಕಾರುಣ್ಯಕ್ಕೆ ಪಾತ್ರನಾಗಬೇಕು.

### ಶಿವಯೋಗದಲ್ಲಿ ಸದ್ಗುರು ಕಾರುಣ್ಯ ಹಾಗೂ ದೀಕ್ಷೆ:

ಪರಶಿವನ ಲೀಲೆಯಿಂದ ಆತ್ಮನಿಗೆ ಶರೀರ ಸಂಬಂಧವುಂಟಾಗಿ ಪ್ರಾಣಸಂಚಾರವು ಅದರಲ್ಲಿ ಮೂಡಿಕೊಳ್ಳುತ್ತದೆ. ಆತ್ಮ-ಪ್ರಾಣಗಳಲ್ಲಿ ತಾದಾತ್ಮ್ಯ ಸಂಭವಿಸಿ ಮನವೆಂಬ ಘಟಕ ವ್ಯಕ್ತವಾಗುತ್ತದೆ. ಆತ್ಮ-ಪರಮಾತ್ಮರ ಸಾಮರಸ್ಯಕ್ಕೆ ಈ ಸೃಷ್ಟಿ ಅವಶ್ಯವಾಗಿರುವಂತೆ ಆತ್ಮನನ್ನು ಬಳಸಿಕೊಂಡಿರುವ ಶರೀರವೂ ಅತ್ಯಾವಶ್ಯ.[೪೨] ಪ್ರಾಕೃತಿಕ ಶರೀರ, ಅದರಲ್ಲಿ ಸಂಚರಿಸುವ ಪ್ರಾಣ, ಅಲ್ಲಿ ವ್ಯಕ್ತವಾಗಿರುವ ಮನಸ್ಸು ಇವೆಲ್ಲವುಗಳ ಅಸ್ವಸ್ಥ ಸ್ಥಿತಿಯು ಜೀವಾತ್ಮ-ಪರಮಾತ್ಮರ ಸಾಮರಸ್ಯ ಸುಖಕ್ಕೆ ಆತಂಕವಾಗಿದೆ. ಮನಸ್ಸಿಗೆ ಸ್ವತಂತ್ರ ಅಸ್ತಿತ್ವವಿಲ್ಲದಿದ್ದರೂ, ಪ್ರಾಣವು ಶರೀರಕ್ಕೆ ಮುಖ್ಯ ಆಧಾರವಾಗಿರುವುದರಿಂದ, ಪ್ರಾಣಕ್ಕೆ ಮಹತ್ವದ ಸ್ಥಾನವುಂಟು. ಈ ಪ್ರಾಣವು ಸಾಮಾನ್ಯ ಮಾನವನಲ್ಲಿ ತಾಳ ಲಯಬದ್ಧವಾಗಿರುವದಿಲ್ಲ. ಇದರಿಂದ ಮನಸ್ಸು ದೋಷಯುಕ್ತವಾಗಿ ಜೀವನದಲ್ಲಿ ಬಗೆಬಗೆಯ ಕಾಮನೆಗಳು-ವಾಸನೆಗಳು ಸಂಸ್ಕಾರರೂಪವನ್ನು ತಳೆಯುತ್ತವೆ. ಅವು ಅರಿಷಡ್ವರ್ಗ-ಸಪ್ತವ್ಯಸನ-ಅಷ್ಟಮದ ಮುಂತಾದ ಅಮಂಗಲ ಗುಣಗಳ ಜಾಲದಿಂದ ಜೀವಿಯನ್ನು ಬಂಧಿಸುತ್ತವೆ. ಇದು ಜೀವಿಯ ಸ್ವರೂಪ ವಿಸ್ಮೃತಿಗೆ ಕಾರಣ.

ಸಂಸಾರವೆಂಬ ಸರ್ಪಮುಖದಲ್ಲಿ ಸಿಕ್ಕ ಜೀವನು ನೊಂದು, ತೀವ್ರ ವೈರಾಗ್ಯ ಭಾವನೆಗೊಳಗಾಗಿ ವಿಷಯಾಸಕ್ತಿಯಿಂದ ಮುಕ್ತನಾಗಬೇಕೆಂದು ಲಿಂಗಾಸಕ್ತವಾಗುತ್ತಾನೆ. ವೈರಾಗ್ಯದಿಂದ ಭಕ್ತಿ ಅಂಕುರಿಸಿ ಸಮ್ಯಕ್ ಜ್ಞಾನ ಜಾಗ್ರತವಾಯಿತೆಂದರೆ 'ನಾನಾರು?' ಎಂಬುದಕ್ಕೆ ಶೋಧವುಂಟಾಗುತ್ತದೆ. ಆಗ ಅವನಲ್ಲಿ ಸುಪ್ತವಾಗಿರುವ ಶಿವತತ್ತ್ವವನ್ನು ಅರಿತು, ಪರಮಾತ್ಮನಲ್ಲಿ ಬೆರೆತು ಬೇರಿಲ್ಲದಿರಬೇಕೆಂಬ ತೀವ್ರ ಇಚ್ಛೆ ಮೂಡಿಕೊಳ್ಳುತ್ತದೆ.

ಈ ಜ್ಞಾನಾಗ್ನಿ ಹೊತ್ತಿ ಉರಿಯುತ್ತಿರಲು ಎಂದೆಂದಿಗೂ ಅವಿದ್ಯೆ ಆರಿಸಬಾರ

---

೪೨ ಬಸವಣ್ಣನವರ ವಚನ ೭೭೪ ಕ.ವಿ.ವಿ. ಪ್ರಕಟನೆ.

ದೆಂದು ಹಾಗೂ ನಿರಂತರವಾದ ಸಾಮರಸ್ಯ ಸುಖ ಸಾಧ್ಯವಾಗಬೇಕೆಂದು ಪರಿಶುದ್ಧನಾದ ಜೀವಾತ್ಮನು (ಅರ್ಥಾತ್ ಅಂಗನು) ಸದ್ಗುರುವಿನ ಕಾರುಣ್ಯಕ್ಕೆ ಹಂಬಲಿಸುತ್ತಾನೆ.

ಸದ್ಗುರುವಿನ ಸ್ಥಾನ ಗುರುತರವಾದುದು. ವೀರಶೈವ ಸಿದ್ಧಾಂತದಲ್ಲಿ ಸಚ್ಚಿದಾನಂದ ಸ್ವರೂಪನಾದ ಪರಶಿವನು ತನ್ನಂಶವಾದ ಪುಣ್ಯಜೀವಿಯನ್ನುದ್ಧರಿಸಲು ಗುರು–ಲಿಂಗ–ಜಂಗಮ ರೂಪದಲ್ಲಿ ಸುಳುಹುದೋರುತ್ತಾನೆ. ತಾನು ಶಿವನ ಅಂಶವೆಂದು ಎಚ್ಚರಗೊಂಡು (ಅಂದರೆ ಪಿಂಡಜ್ಞಾನಿಯಾಗಿ), ಮಾಯಾ ಪ್ರಪಂಚವನ್ನು ಗೆದ್ದು, ದಿವ್ಯಜೀವನಕ್ಕಾಗಿ ಹಾತೊರೆವ ಸಾಧಕನಿಗೆ ಸದ್ಗುರುವು ಆಣವ–ಮಾಯಾ–ಕಾರ್ಮಿಕ ಮಲಗಳ ಪಾಶವನ್ನು ಕತ್ತರಿಸಿ, ಶಿವಸಂಸ್ಕಾರದಿಂದ ಜೀವನನ್ನು ಶುದ್ಧಗೊಳಿಸಿ ಶಿವದೀಕ್ಷೆಯನ್ನು ಕರುಣಿಸುವ ಕಾರುಣ್ಯನಿಧಿಯಾಗಿದ್ದಾನೆ.

ಗುರುವು ಒಬ್ಬನೇ ಆಗಿದ್ದರೂ ಕಾರ್ಯನಿರ್ವಹಣೆಯನ್ನು ಗುರುತಿಸಿ ದೀಕ್ಷಾಗುರು (ಸಮಯ ದೀಕ್ಷೆಯನ್ನು ಕೊಡುವವ), ಶಿಕ್ಷಾಗುರು– (ಅಧ್ಯಾತ್ಮ ವಿದ್ಯೆಯಲ್ಲಿ ಪಳಗಿಸುವವ) ಹಾಗು ಮೋಕ್ಷಾಗುರು– (ಆತ್ಯಂತಿಕ ಗುರಿಯತ್ತ ಮಾರ್ಗದರ್ಶಕ) ಎಂದು ಮೂರು ವಿಧ ಭೇದಗಳನ್ನು ಕಲ್ಪಿಸಲಾಗಿದೆ.[೪೩] ಸದ್ಗುರುವು ವೇದಾದೀಕ್ಷೆ–ಮಂತ್ರದೀಕ್ಷೆ–ಕ್ರಿಯಾದೀಕ್ಷೆ ಎಂಬ ಮೂರು ದೀಕ್ಷೆಗಳನ್ನು ಮಾಡಬಲ್ಲ.[೪೪] ಕೆಲವರ ಪ್ರಕಾರ ದೀಕ್ಷಾ ಕ್ರಮವು ಏಳು ವಿಧ, ಚನ್ನಬಸವಣ್ಣನು ಇಪ್ಪತ್ತೊಂದು ವಿಧ ದೀಕ್ಷೆಯನ್ನು ತಿಳಿಸುತ್ತಾನೆ.

ಜ್ಞಾನಬೋಧೆಯಿಂದ ಶಿಷ್ಯನ ಜೀವತ್ವವು ನೀಗದು. ಜೀವತ್ವವಳಿದು ಶಿವತ್ವ ಪ್ರಾಪ್ತಿಯಾಗಬೇಕೆಂದು ವೀರಶೈವ ಸಿದ್ಧಾಂತದಲ್ಲಿ ದೀಕ್ಷಾಕ್ರಿಯೆಗೆ ಮಹತ್ವವನ್ನಿರಿಸಲಾಗಿದೆ. ಜ್ಞಾನಬೋಧೆಯು ದೀಕ್ಷೆಯ ಒಂದು ಭಾಗ. ಶಿಷ್ಯನಿಗೆ ದೀಕ್ಷೆಯನ್ನೀಯುವುದೇ ಮುಖ್ಯ ಭಾಗ ಹಾಗು ಗುರುವಿನ ಕರ್ತವ್ಯ. ಕಾರಣ ದೀಕ್ಷಾಕ್ರಮದ ಅವಶ್ಯಕತೆಯುಂಟು.

ದೀಯತೆ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ।
ದೀಯತೇ ಕ್ಷಿಯತೇ ಯಸ್ಮಾತ್ಸಾ ದೀಕ್ಷೇತಿ ನಿಗದ್ಯತೇ॥

---

೪೩ ಚನ್ನಬಸವಣ್ಣ ವ. ೧೪೬೯, ೧೪೧೦ '....ಮಲಮಾಯಾ ಪಾತಕ ಸೂತಕ ರಹಿತನಾದ ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರುವಿನಿಂದ ವೇಧಾ, ಮಂತ್ರ, ಕ್ರಿಯಾದೀಕ್ಷೆಯ ಪಡೆದು ದ್ವಾದಶ ಮಲಪಾಶಕರ್ಮವ ತ್ಯಜಿಸಿ....' ಕಾಡಸಿದ್ಧೇಶ್ವರ ವ. IV ೫೧ ಹಾಗು ಟೀಕೆಯು ತಿಳಿಸುವಂತೆ ಬಸವಣ್ಣ, ಚನ್ನಬಸವಣ್ಣ ಹಾಗು ಅಲ್ಲಮಪ್ರಭು–ಈ ಮೂವರು ಕ್ರಮವಾಗಿ ಮೂರು ಪ್ರಕಾರದ ದೀಕ್ಷೆಗಳನ್ನು ಮಾಡುವಲ್ಲಿ ಸಮರ್ಥರಾಗಿದ್ದರು.

೪೪ ಚನ್ನಬಸವಣ್ಣ ವ. ೧೬೪, ೧೪೧೦, ಸಿದ್ಧಾಂತ ಶಿಖಾಮಣಿ VI. ೧೨–೧೫ ಮಗ್ಗೆಮಾಯಿದೇವ (ಶಿವಾನುಭವ ಸೂತ್ರ) V (೫೨–೬೦).

ಸಾ ದೀಕ್ಷಾ ಪರಮಾ ಶೈವೀ ತ್ರಿಧಾ ಭವತಿ ನಿರ್ಮಲಾ|
ಏಕಾ ವೇಧಾತ್ಮಿಕಾ ಸಾಕ್ಷ್ಯಾದನ್ಯಾ ಮಂತ್ರಾತ್ಮಿಕಾ ಮತಾ||
ಕ್ರಿಯಾತ್ಮಿಕಾ ಪರಾ ಕಾಚಿದೇವಮೇವ ತ್ರಿಧಾ ಭವೇತ್|
ಹಸ್ತಮಸ್ತಕಸಂಯೋಗ(ಜ್ಞ) ಬಲಾದ್ವೇಧೇತಿ ಗೀಯತೆ||೪೫

ಜೀವನಲ್ಲಿರುವ (ಶಿಷ್ಯನಲ್ಲಿರುವ) ಮಲತ್ರಯವನ್ನು ಕಳೆದು ಲಿಂಗತ್ರಯ ಸಂಬಂಧವನ್ನು ದಯಪಾಲಿಸುವ ಶಿವನ ಶಕ್ತಿ ವಿಶೇಷವೆ ದೀಕ್ಷೆ.೪೬ ಆ ದೀಕ್ಷೆಯು ವೇದಾದೀಕ್ಷೆ-ಮಂತ್ರದೀಕ್ಷೆ-ಕ್ರಿಯಾದೀಕ್ಷೆ ಎಂದು ಮೂರು ವಿಧವಾಗಿದೆ.

i) **ಕ್ರಿಯಾದೀಕ್ಷೆ:** ಆತ್ಮಸಾಕ್ಷಾತ್ಕಾರದ ಮತ್ತು ಶಿವಯೋಗ ಸಾಧನೆಯಲ್ಲಿ ಅಭಿರುಚಿಯುಳ್ಳ ಸಾಧಕನು ಸದ್ಗುರುವಿನ ಕೃಪಾಶೀರ್ವಾದ ಪಡೆಯಲು ಉತ್ಸುಕನಾದಾಗ, ದೀಕ್ಷಾ ಸಂಸ್ಕಾರಗಳನ್ನು ವಿಧಿವತ್ತಾಗಿ ನಡೆಸುವುದೇ ಕ್ರಿಯಾದೀಕ್ಷೆ. ಶಿವಕಳಾತ್ಮಕವಾದ ಇಷ್ಟಲಿಂಗವು ಶಿವಯೋಗ ಸಾಧನೆಗೆ ಅವಶ್ಯವೆಂದು ತಿಳಿದು ಶ್ರೀಗುರುವು ಲಿಂಗವನ್ನು ತನ್ನ ಕರಸ್ಥಲದಲ್ಲಿರಿಸಿ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಪೂಜಿಸಿ ಶಿಷ್ಯನಿಗೆ ಕೊಡುತ್ತಾನೆ.

ii) **ಮಂತ್ರದೀಕ್ಷೆ:** ಪವಿತ್ರಗೊಳಿಸಿದ ಇಷ್ಟಲಿಂಗವನ್ನು ಶಿಷ್ಯನ ಕರಸ್ಥಲದಲ್ಲಿರಿಸಿದ ಶ್ರೀಗುರುವು ಶಿವಪಂಚಾಕ್ಷರಿ ಅಥವಾ ಷಡಕ್ಷರ ಮಂತ್ರವನ್ನು ಶಿಷ್ಯನ ಕರ್ಣದಲ್ಲಿ ಉಸುರುತ್ತಾನೆ. ತನ್ನ ಆಧ್ಯಾತ್ಮ ಶಕ್ತಿಯನ್ನೂ ಲಿಂಗರಹಸ್ಯವನ್ನೂ ಅವನ ಸೂಕ್ಷ್ಮ ಶರೀರದಲ್ಲಿ ಜಾಗ್ರತಗೊಳಿಸುತ್ತಾನೆ. ಮಂತ್ರದಲ್ಲಿರುವ ಶಬ್ದ ಹಾಗು ಧ್ವನಿಗಳು ಸಾಧಕನ ಶಾರೀರಿಕ ಮತ್ತು ಬೌದ್ಧಿಕ ಕುಂದುಕೊರತೆಗಳನ್ನು ನಾಶಮಾಡಿ, ಭಕ್ತಿಯನ್ನು ಕುದುರಿಸಿ ಆಧ್ಯಾತ್ಮ ಪ್ರಕಾಶವನ್ನೂ ಲಿಂಗಾಂಗಸಾಮರಸ್ಯವನ್ನೂ ಒದಗಿಸುತ್ತವ ಎಂಬ ನಿಶ್ಚಯಾತ್ಮಕ ಅರಿವನ್ನು ಮೂಡಿಸುತ್ತಾನೆ. 'ತತ್ವಮಸಿ' ಎಂಬ ಉಪನಿಷದ್ ವಾಕ್ಯದಲ್ಲಿ 'ತತ್' ಎಂಬುದೇ ಇಷ್ಟಲಿಂಗ, 'ತ್ವಮ್' ಎಂಬುದೆ ಅಂಗ, 'ಅಸಿ' ಎಂಬುದೆ ಅಂಗ-ಲಿಂಗಗಳ ಸಂಬಂಧ ಎಂಬ ರಹಸ್ಯಜ್ಞಾನವನ್ನು ಅರುಹುತ್ತಾನೆ.

iii) **ವೇದಾದೀಕ್ಷೆ:** ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿರಿಸಿ (ಅರ್ಥಾತ್ ಹಸ್ತಮಸ್ತಕ-ಸಂಯೋಗದಿಂದ) ಶಕ್ತಿಪಾತ ಪ್ರಯೋಗದಿಂದ ಶಿಷ್ಯನನ್ನು ಅನುಗ್ರಹಿಸು

---

೪೫ ಶ್ರೀ ಮಾಯಿದೇವ -'ಶಿವಾನುಭವ ಸೂತ್ರಂ' V ೩೯-೪೦.

೪೬ ಮತಂಗಪಾರಮೇಶ್ವರ ವಾಕ್ಯ- ಅನಯೋಃ ಶಾಸನೇ ಸಿದ್ಧಾ ದೀಕ್ಷಾಕ್ಷಪಣ ದಾನಯೋಃ। ಆತ್ಮಗತವಾದ ಪಶುತ್ವವನ್ನು ಕಳೆವ ಶಿವತ್ವವನ್ನು ಕೊಡುವ ಎರಡು ಕಾರ್ಯಗಳಲ್ಲಿ ಶಿವನ ಅನುಗ್ರಹಾತ್ಮಕ ವ್ಯಾಪಾರದಿಂದ ಕೂಡಿರುವ ಕ್ರಿಯಾಶಕ್ತಿಯೆ ದೀಕ್ಷೆ.

—(ಸಂಪಾದಕ: ಶಿ. ಶಿ. ಬಸವನಾಳ) 'ವೀರಶೈವ ತತ್ತ್ವಪ್ರಕಾಶ' P. ೧೫

ತ್ತಾನೆ. ಅವನ ಸಹಸ್ರಾರ ಚಕ್ರದಲ್ಲಿರುವ ಬಯಲ ಸ್ವರೂಪಿಯಾದ ಚೈತನ್ಯ ಶಕ್ತಿಯನ್ನು (ಚಿತ್ ಕಲೆಯನ್ನು) ಜಾಗ್ರತಗೊಳಿಸಿ, ಆ ಚೇತನವನ್ನು ಶಿಷ್ಯನ ಭಾವಕ್ಕೆ ತಂದು ಭಾವ ಲಿಂಗವಾಗಿ ಪ್ರತಿಷ್ಠಾಪಿಸುವದು, ಅನಂತರ ಅದನ್ನು ಪ್ರಾಣದ ಭೂಮಿಕೆಗೆ ಆಹ್ವಾನಿಸಿ ಪ್ರಾಣಲಿಂಗವಾಗಿ ಪ್ರಸ್ತಾಪಿಸುವದು, ತದನಂತರ ಉಪಾಸನೆಗೆಂದು ಪ್ರಾಣಲಿಂಗದಲ್ಲಿರುವ ಆದಿ ಅಕ್ಷರ ದ್ವಯವನ್ನು ಭೇದಿಸಿ ತಂದು ಶಿವಲಿಂಗವಾಗಿ ಮಾಡುವುದು.೪೭ ವೇಧಾದೀಕ್ಷೆ, ಬಳಿಕ ಆ ಶಿವಲಿಂಗವನ್ನು ಶಿಷ್ಯನ ಕರಸ್ಥಲದಲ್ಲಿ ಇಷ್ಟಲಿಂಗವೆಂದು ಇರಿಸುತ್ತಾನೆ. ಸಾಧಕ ನಲ್ಲಿರುವ ಸೂಕ್ಷ್ಮಭಕ್ತಿಯ ಸ್ವರೂಪಗಳಾದ ಚಿತ್‌ಶಕ್ತಿ–ಪರಾಶಕ್ತಿ ಮುಂತಾದವುಗಳನ್ನು ಜಾಗ್ರತಗೊಳಿಸಿ ಲಿಂಗದಲ್ಲಿ ನೆಲೆಗೊಳಿಸುತ್ತಾನೆ; ಸರ್ವ ಅವಸ್ಥೆಗಳಲ್ಲಿ 'ಲಿಂಗವು ನಿನ್ನ ಪ್ರಾಣವೆಂದು ಪೂಜಿಸು' ಎಂದು ಉಪದೇಶಿಸುತ್ತಾನೆ. ಕಾರಣ ಶರೀರದಲ್ಲಿರುವ ಭಾವ ಲಿಂಗವನ್ನೂ, ಸೂಕ್ಷ್ಮಶರೀರದಲ್ಲಿರುವ ಪ್ರಾಣಲಿಂಗವನ್ನೂ ತನ್ನ ಸಂಕಲ್ಪ ಶಕ್ತಿಯ ಬಲ ದಿಂದ ಶಿಷ್ಯನಿಗೆ ದರ್ಶನ ಮಾಡಿಸುತ್ತಾನೆ.೪೮ ತೋಂಟದ ಸಿದ್ಧಲಿಂಗೇಶ್ವರನ ವಚನವು ದೀಕ್ಷಾತ್ರಯದ ಸುಂದರ ಕಲ್ಪನೆಯನ್ನು ಕೊಡುತ್ತದೆ.

ವೇದಾದೀಕ್ಷೆ ಮಂತ್ರದೀಕ್ಷೆ ಕ್ರಿಯಾದೀಕ್ಷೆಯೆಂಬ
ದೀಕ್ಷಾತ್ರಯಂಗಳಿಂದೆ ತನುತ್ರಯಂಗಳ ಪೂರ್ವಾಶ್ರಯವ ಕಳೆದು
ಲಿಂಗತ್ರಯಂಗಳ ಸಂಬಂಧಿಸಿದನದೆಂತೆಂದಡೆ;
ವೇದಾದೀಕ್ಷೆಯೆಂದು ಶ್ರೀಗುರು ತನ್ನ ಹಸ್ತವ
ಶಿಷ್ಯನ ಮಸ್ತಕದಲ್ಲಿ ಸಂಯೋಗವ ಮಾಡಿದುದು;
ಮಂತ್ರದೀಕ್ಷೆಯೆಂದು ಶ್ರೀಗುರು ಪರಮಪಂಚಾಕ್ಷರಿಯ
ಮಂತ್ರವ ಕರ್ಣದಲ್ಲಿ ಉಪದೇಶಿಸಿದುದು;
ಕ್ರಿಯಾದೀಕ್ಷೆಯೆಂದು ಆ ಮಂತ್ರಸ್ವರೂಪವನೆ
ಇಷ್ಟಲಿಂಗಸ್ವರೂಪವ ಮಾಡಿ ಕರಸ್ಥಲದಲ್ಲಿ ಸಂಬಂಧಿಸಿದುದು.
ಇದು ಕಾರಣ,
ವೇದಾದೀಕ್ಷೆಯಿಂದ ಕಾರಣ ತನುವಿನ ಪೂರ್ವಾಶ್ರಯವಳಿದು
ಭಾವಲಿಂಗ ಸಂಬಂಧವಾಯಿತ್ತು.

೪೭ ತೋಂಟದ ಸಿದ್ಧಲಿಂಗೇಶ್ವರ ವಚನ ೧೭೭. "ಎನ್ನ ಪ್ರಾಣದೊಳಗೆ ಹೊಳಿರ್ದ ಪರಮ ಕಳೆಯ ತೆಗೆದು ಶಿವಲಿಂಗಮೂರ್ತಿಯ ಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟೆನಯ್ಯಾ ಶ್ರೀಗುರು. ಆ ಲಿಂಗವು....ಅಂಗವ ಬಿಟ್ಟು ಅಗಲಲಾಗದೆಂದು ನಿರೂಪಿಸಿದನಯ್ಯಾ...."

೪೮ ಲಿಂಗಲೀಲಾವಿಲಾಸ ಚಾರಿತ್ರ P. ೧೧೩ ಹಾಗು ಟೀಕೆ '....ಮೂರು ಲಿಂಗಕ್ಕೆ ಮೂಲ ಸೂತ್ರವಾದಾತ ಗುರುವು' ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನ ೧೭೯.

ಮಂತ್ರದೀಕ್ಷೆಯಿಂದ ಸೂಕ್ಷ್ಮತನುವಿನ ಪೂರ್ವಾಶ್ರಯವಳಿದು
ಪ್ರಾಣಲಿಂಗ ಸಂಬಂಧವಾಯಿತ್ತು.
ಕ್ರಿಯಾದೀಕ್ಷೆಯಿಂದ ಸ್ಥೂಲತನುವಿನ ಪೂರ್ವಾಶ್ರಯವಳಿದು
ಇಷ್ಟಲಿಂಗಸಂಬಂಧವಾಯಿತ್ತು.
ಅಂಗತ್ರಯಂಗಳಲ್ಲಿ ಲಿಂಗತ್ರಯಂಗಳ ಧರಿಸಿದೆನಯ್ಯಾ,
ಮಹಾಗುರು ಶಿವಸಿದ್ಧೇಶ್ವರ ಪ್ರಭುವೆ!

(ತೋಂಟದಸಿದ್ಧಲಿಂಗ ಶಿವಯೋಗಿ ವ. ೧೯೭)

ಹೀಗೆ ಸದ್ಗುರುವಿನ ಕರುಣೆಯು ಸರ್ವಾಂಗವನ್ನು ವ್ಯಾಪಿಸಿ ಬೆಳಗುತ್ತದೆ. ಅಂದರೆ ಅನ್ನಮಯ–ಪ್ರಾಣಮಯ–ಮನೋಮಯ–ವಿಜ್ಞಾನಮಯ–ಆನಂದಮಯ ಕೋಶಗಳಲ್ಲಿ ದೈವೀಪ್ರಜ್ಞೆ ಸ್ಫುರಿಸತೊಡಗುತ್ತದೆ. ಮನಸ್ಸಹಿತ ಜ್ಞಾನೇಂದ್ರಿಯಗಳೆಲ್ಲವೂ ಲಿಂಗಗಳಾಗಿ ಅನುಭವವೇದ್ಯವಾಗುತ್ತವೆ; ಅಂತರಿಂದ್ರಿಯ ಜ್ಞಾನಕ್ಕೆ ಸಮರ್ಥವಾಗುತ್ತವೆ. ಶಿಷ್ಯನ ದೋಷಗಳು, ತೊಡಕು ತೊಂದರೆಗಳು ಅಳಿದು ಹೋಗುತ್ತವೆ. ಶಿಷ್ಯನಲ್ಲಡಗಿದ ದೈವೀಸಂಪತ್ತು ಹಾಗೂ ಮಹಾಜ್ಞಾನವು ಪ್ರಜ್ವಲಿಸುತ್ತದೆ. ಈ ಅನುಭವವನ್ನು ಚನ್ನಬಸವಣ್ಣ ತನ್ನ ವಚನದಲ್ಲಿ ಹೀಗೆ ಹೇಳಿದ್ದಾನೆ–

ಗುರು ಕರುಣಿಸೆ ಬಿಟ್ಟಿತ್ತು ಮಾಯೆ,
ಗುರು ಕರುಣಿಸೆ ಬಿಟ್ಟಿತ್ತು ಮಱವೆ,
ಗುರು ಕರುಣಿಸೆ ಬಿಟ್ಟಿತ್ತು ಪ್ರಪಂಚ,
ಕೂಡಲ ಚೆನ್ನಸಂಗಮದೇವಾ,
ಗುರು ಕರುಣಿಸೆ ಬಿಟ್ಟಿತ್ತು ಎನ್ನ ಕರ್ಮಪಾಶ.[೪೯]

ಹೀಗೆ ಸಮಸ್ತ ತತ್ತ್ವಗಳನ್ನು ತಿಳಿಯಲು ಸಹಾಯಕವಾದ ಸುಸೂಕ್ಷ್ಮವಾದ ಶಿವಕಳೆಯನ್ನು ಗುರುವು ವಿಧಿವಿಧಾನದಿಂದ ಆಕರ್ಷಿಸಿ ಶಿಷ್ಯನ ಇಷ್ಟಲಿಂಗದಲ್ಲಿರಿಸಿದುದೇ ಈ ಮೇಲಿನ ಅನುಭವಕ್ಕೆ ಕಾರಣ. ಗುರುಕಾರುಣ್ಯದಿಂದ ಅನುಭವಿಸಿದ ಪರಿಣಾಮವನ್ನು ಚನ್ನಬಸವಣ್ಣ ಹೀಗೆ ಹೇಳುತ್ತಾನೆ.

"ಆತ್ಮನಲ್ಲಿ ಪ್ರಣವಪಂಚಾಕ್ಷರಿಯ ನಿರವಿಸಿ ಸದ್ಗುರುವೆ,
ಎನ್ನ ಶಿವಾತ್ಮನ ಮಾಡಿದಿರಾಗಿ,
ಆತ್ಮಶುದ್ಧಿಯಾಯಿತ್ತೆನಗೆ;
ಪಂಚಭೂತಂಗಳಲಿ ಪಂಚಬ್ರಹ್ಮನನಿರಿಸಿದಿರಾಗಿ,
ಭೂತಶುದ್ಧಿಯಾಯಿತ್ತೆನಗೆ;
ಅಂಡಜ ಜರಾಯುಜಾದಿ ಎಂಬತ್ತುನಾಲ್ಕುಲಕ್ಷ ಯೋನಿಯಲ್ಲಿ ಬಹ

---

೪೯ ಚನ್ನಬಸವಣ್ಣನವರ ವಚನ ೪೧.

ಜೀವನ ಅಯೋನಿಜನ ಮಾಡಿದಿರಾಗಿ
ಜೀವಶುದ್ಧಿಯಾಯಿತ್ತೆನಗೆ;
ಅಂಗಾಶ್ರಯವ ಕಳೆದು ಲಿಂಗಾಶ್ರಯವ ಮಾಡಿದಿರಾಗಿ,
ಮನಶ್ಶುದ್ಧಿಯಾಯಿತ್ತೆನಗೆ;
ಪಶುವೆಂಬ ಅಜ್ಞಾನದ್ರವ್ಯವ ಕಳೆದು
ಪರಮ ಸುಜ್ಞಾನದ್ರವ್ಯವ ಮಾಡಿದಿರಾಗಿ,
ದ್ರವ್ಯಶುದ್ಧಿಯಾಯಿತ್ತೆನಗೆ.
ಇಂತು ಸರ್ವಶುದ್ಧನಂ ಮಾಡಿ ಪೂರ್ವಾಶ್ರಯವ ಕಳೆದಿರಾಗಿ,
ಕೂಡಲಚನ್ನಸಂಗಾ, ನಿಮ್ಮವ
'ನ ಗುರೋರಧಿಕಂ, ನ ಗುರೋರಧಿಕಂ, ನ ಗುರೋರಧಿಕಂ
ಎನುತಿರ್ದೆನು.'೫೦

ಗುರುಕರುಣೆ, ಶಿವಲಿಂಗವನ್ನು ಕರಸ್ಥಲಕ್ಕೆ ಕರುಣಿಸಿದ ಅನುಭವವನ್ನು ತೋಂಟದ ಸಿದ್ಧಲಿಂಗೇಶ್ವರನು ಹೀಗೆ ನಿರೂಪಿಸಿದ್ದಾನೆ.

ಬಯಲ ಮೂರ್ತಿಯ ಮಾಡಿ,
ಎನ್ನ ಕರಸ್ಥಲಕ್ಕೆ ಕೊಟ್ಟನಯ್ಯಾ ಶ್ರೀಗುರು.
ಬಯಲಮೂರ್ತಿಯ ಅಮೂರ್ತಿಯ ಮಾಡಿ,
ಎನ್ನ ಪ್ರಾಣದೊಳಗಿರಿಸಿದನಯ್ಯಾ ಶ್ರೀಗುರು.
ಬಯಲು ಬಯಲನೆ ಬೆರಸಿ ಬಯಲೆಂದೆನಿಸಿ
ಎಲ್ಲ ಭಾವದೊಳಗಿರಿಸಿದನಯ್ಯಾ ಶ್ರೀಗುರು, ಇದುಕಾರಣ,
ಎನ್ನ ಕರಸ್ಥಲ ಮನಸ್ಥಲ ಭಾವಸ್ಥಲದಲ್ಲಿ ನಿಮ್ಮ ಧರಿಸಿ
ನಾನು ಅಂಗಲಿಂಗಸಂಬಂಧಿಯಾದೆನಯ್ಯಾ.
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!೫೧

ಇದು ಬಯಲನ್ನೇ ಮೂರ್ತಿಯನ್ನಾಗಿ ಮಾಡಿ ಇಷ್ಟಲಿಂಗರೂಪದಿಂದ ಕರಸ್ಥಲಕ್ಕೆ ಕೊಟ್ಟ ಪರಿ; ಅಂಗಲಿಂಗಸಂಬಂಧದ ವಿಧಾನ.

ಶಿವಲಿಂಗಾರ್ಚನೆಗೆಂದು ಶ್ರೀಗುರುವು ಅಷ್ಟಾವರಣ ಪಂಚಾಚಾರ-ಷಟ್‌ಸ್ಥಲಾನುಸಂಧಾನದ ಮರ್ಮವನ್ನು ಬೋಧಿಸುತ್ತಾನೆ. ಗುರು-ಲಿಂಗ-ಜಂಗಮ-ಪ್ರಸಾದಗಳು ತೋರಿಕೆಗೆ ಭಿನ್ನವಾಗಿದ್ದರೂ ಅವು ಪರವಸ್ತುವಿನ ನಾಲ್ಕು ಮುಖಗಳು, 'ಚತುರ್ವಿಧ ಸಾರಾಯ ಸಂಪತ್ತು' ಎಂದು ಅರುಹುತ್ತಾನೆ.

---

೫೦ ಚನ್ನಬಸವಣ್ಣನವರ ವ. ೫೩

೫೧ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವ. ೧೭೮

**ಶಿವಯೋಗಸಾಧನೆ–ಕಲೆ–ನೆಲೆ ಪ್ರಯೋಗ:**

ಕುಳಿತಲ್ಲಿ ಎರಡು, ನಿಂತಲ್ಲಿ ನಾಲ್ಕು,
ನಡೆನುಡಿಯಲ್ಲಿ ಎಂಟು, ಅರೆನಿದ್ದೆಯಲ್ಲಿ ಹದಿನಾಱು,
ರತಿಸಂಗದಲ್ಲಿ ಮೂವತ್ತೆರಡಂಗುಲ ರೇಚಕ,
ತದರ್ಧ ಪೂರಕ.
ಹೊರಗು ಒಳಗಾದಡೆ
ಕೂಡಲ ಚನ್ನಸಂಗಯ್ಯನಲ್ಲಿ ಸಂಯೋಗ[೫೨]

ಪರಶಿವನೊಡನೆ ಸಾಮರಸ್ಯವನ್ನು ಹೊಂದಲು ಬಯಸುವ ಸಾಧಕನಿಗೆ ಇದು ಸೂಕ್ತ ಸಲಹೆ. ಮನುಷ್ಯನು ವಿವಿಧ ಕಾರ್ಯಗಳಲ್ಲಿ ಮಗ್ನನಾದಾಗ ಅವನ ಶ್ವಾಸೋಚ್ಛ್ವಾಸಗತಿಗಳೂ ವ್ಯತ್ಯಾಸಗೊಳ್ಳುತ್ತವೆ. ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಬಹಿರ್ಮುಖ ಪ್ರವೃತ್ತಿಗಳಲ್ಲಿ ಪ್ರಾಣವಾಯುವಿನ ರೇಚಕವು ಇಮ್ಮಡಿಯಾಗಿರುತ್ತದೆ; ಪೂರಕವು, ಅದರ ಅರ್ಧವಾಗಿರುತ್ತದೆ. ಚನ್ನಬಸವಣ್ಣನು ಪ್ರಾಣದ ಸುಳಿದಾಟವನ್ನು ಅಂಗುಲ ಪ್ರಮಾಣದ ಅಳತೆಯಿಂದ ತಿಳಿಸಿದ್ದಾನೆ. ಶರೀರದ ರಕ್ಷಣೆ-ಪೋಷಣೆಗಳು ಪ್ರಾಣವಾಯುವಿನ ಆಶ್ರಯದಲ್ಲಿವೆ; ಆದ್ದರಿಂದ ಪರಮಾತ್ಮನಲ್ಲಿರಿಸಿದ ಅನನ್ಯಭಕ್ತಿಯ ಮೂಲಕ ಸಹಜವಾಗಿ ಪೂರಕ–ಕುಂಭಕ ರೇಚಕಗಳು ಸ್ವಾಧೀನವಾಗಿ ಶ್ವಾಸಗತಿಯು ರಕ್ಷಣೆಗೊಂಡರೆ ಪ್ರಾಣವಿಜಯ ನಿಶ್ಚಿತ: ಆಗ ಪರಶಿವನ ಪಶ್ಚಿಮದ್ವಾರವೆನ್ನಿಸಿದ ಸುಷುಮ್ನೆಯ ದ್ವಾರ ತೆರೆಯುತ್ತದೆ; ಈ ದ್ವಾರದಲ್ಲಿ ಪ್ರಾಣವು ಪ್ರವೇಶಿಸಿ ಸಂಚರಿಸುತ್ತ ಸಹಸ್ರಾರ ಚಕ್ರವನ್ನು ತಲುಪಿದರೆ ಶಿವಜೀವರ (ಲಿಂಗಾಂಗಗಳ) ಸಾಮರಸ್ಯ ಖಂಡಿತ ಸಾಧ್ಯ–ಎಂಬ ಶಿವಯೋಗ ಸಾಧನೆಯ ಸೂಚನೆ ಇಲ್ಲಿದೆ. ಅಲ್ಲಮ ಪ್ರಭುದೇವನೂ ಒಂದು ವಚನದಲ್ಲಿ ಅಷ್ಟಾಂಗಯೋಗದ ಕಲ್ಪನೆಯೊಡನೆ ಶಿವಯೋಗದ ಮರ್ಮವನ್ನು 'ಅಳಿಯದೆ ಕೂಡುವ ಯೋಗವರಿದು' ಎಂಬ ಶಬ್ದಗಳಿಂದ ಸಾರಿದ್ದಾನೆ.

ಅಷ್ಟಾಂಗಯೋಗದಲ್ಲಿ
ಯಮನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರವೆಂಬ,
ಧ್ಯಾನ ಧಾರಣ ಸಮಾಧಿಯೆಂಬ ಎರಡು ಯೋಗವುಂಟು
ಅಲ್ಲಿ ಅಳಿದುಕೂಡುವುದೊಂದು ಯೋಗ,
ಅಳಿಯದೆ ಕೂಡುವುದೊಂದು ಯೋಗ.
ಈ ಎರಡು ಯೋಗದೊಳಗೆ
ಅಳಿಯದೆ ಕೂಡುವ ಯೋಗವರಿದು, ಕಾಣಾ ಗುಹೇಶ್ವರಾ![೫೩]

---

೫೨ ಚನ್ನಬಸವಣ್ಣನವರ ವಚನ ೧೦೩೪

೫೩ ಅಲ್ಲಮಪ್ರಭುದೇವರ ವ. ೨೫೭

ಇದು ಪರ್ವಸಂಗದಲ್ಲಿದ್ದು ಸಾಧಿಸುವ ವೀರಶೈವ ಶಿವಯೋಗದ ಗುಟ್ಟು, ವೀರಶೈವ ಶಿವಯೋಗಿಗಳು ಸಾತ್ವಿಕ ಅಹಂಕಾರವನ್ನು ಗೆಲ್ಲಲು ಪರಶಿವನ ಕಲ್ಪನೆಯನ್ನು ಲಿಂಗದ ರೂಪದಲ್ಲಿ ಕಂಡರು ಶಿವಭಕ್ತಿ-ಪಥವನ್ನು ಅನುಸರಿಸಿ, ಅಷ್ಟಾಂಗಯೋಗವನತಿಗಳೆದರು. ಆ ಯೋಗದಲ್ಲಿಯ ಕೊನೆಯ ಮೂರು ಅಂಗಗಳಾದ ಧಾರಣ-ಧ್ಯಾನ-ಸಮಾಧಿಗಳ ಪರಿವರ್ತಿತ ಸ್ವರೂಪದ ಮಹತ್ವವನ್ನು ಅರಿತು,೫೪ ಅಲ್ಲಿ ದ್ವೈವೀಪ್ರಜ್ಞೆಯು ಸ್ಥಿರವಾಗಿ ಉಳಿಯುವದನ್ನು ಅನುಭವಿಸಿದರು. ಆತ್ಮನು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳದೆ ಪರಶಿವನೆ ಆಗಿ ರಾರಾಜಿಸುವದನ್ನು ಗುರುತಿಸಿ, ಇದು ಶಿವಯೋಗ ಸಕಲ ಯೋಗಗಳ ಶಿಖಾಮಣಿ! ಅಳಿಯದೆ ಕೂಡುವ ಯೋಗ!!-ಎಂದರು. ಇಂಥ ಯೋಗದ ಕಲೆ-ನೆಲೆ ಗಳು ಇನ್ನೂ ಆಶ್ಚರ್ಯಕರ!

ವೀರಶೈವ ಸಾಧಕನು ಪ್ರತಿದಿನ ಸುಪ್ರಭಾತದಲ್ಲೆದ್ದು, ನಿಸರ್ಗಸಹಜವಾದ ಮಾಲಿನ್ಯವನ್ನು ತೊಡೆದು, ಸ್ನಾನಗೈದು ಪರಿಶುದ್ಧನಾಗಿ, ಏಕಾಂತವುಳ್ಳ ಪವಿತ್ರ ಪೂಜಾ ಮಂದಿರದಲ್ಲಿ ತನಗೆ ಯೋಗ್ಯವಾದ ಆಸನದಲ್ಲಿ ಕುಳಿತುಕೊಳ್ಳುತ್ತಾನೆ ೫೫ ಅಹಂಗ್ರಹೋ ಪಾಸನೆಗೆ ಸಿದ್ಧನಾಗುತ್ತಾನೆ. ತನ್ನ ವಾಮಕರದಲ್ಲಿರಿಸಿದ ಇಷ್ಟಲಿಂಗವನ್ನು ಅಷ್ಟವಿಧಾ ರ್ಚನೆ, ಷೋಡಶೋಪಚಾರಗಳಿಂದ ಅರ್ಚಿಸುತ್ತಾನೆ. ಆಗ ಅನುಸಂಧಾನಕ್ಕೆ ಯೋಗ್ಯ ವಾದ ವಾತಾವರಣವು ಸುತ್ತಲೂ ಪಸರಿಸುತ್ತದೆ.

ಶಿವಯೋಗ ಸಾಧನೆಯು ಇಷ್ಟಲಿಂಗದ ಮೇಲಿರಿಸಿದ ಅನಿಮಿಷ ದೃಷ್ಟಿಯಿಂದ ಪ್ರಾರಂಭವಾಗುತ್ತದೆ. ಈ ಸಾಧನೆಯುಲ್ಲಿ ಕರಸ್ಥಲ ಹಾಗು ಕಣ್ಣಿನ ನಡುವೆ ಹನ್ನೆರಡಂಗುಲ ಪ್ರಮಾಣದ ಅಂತರವಿರಿಸಿ ನಿರೀಕ್ಷಿಸಲಾಗುವ ನಿರ್ನಿಮೇಷ ನೋಟವೆ ಸೂತ್ರ. ಪದ್ಮಾ ಸನದಲ್ಲಿದ್ದು ಬೆನ್ನೆಲುಬನ್ನು ನೇರವಾಗಿರಿಸಿ, ಎದೆ-ಕುತ್ತಿಗೆ-ತಲೆಗಳನ್ನು ಅಲುಗಾಡಿಸ

---

೫೪ ಮಾಯಿದೇವ-'ಶತಕತ್ರಯ'

ಉತ್ತರ ಪೂರ್ವಮೆಂಬುಭಯ ಭಾಗಮನಷ್ಟವಿಧಾಂಗಯೋಗದೊಳ್।
ತಾತ್ವಿಕಮಾಗಿ ನಿಶ್ಚಯಿಸಿ ಪೇಳ್ದ ಗುರೂಕ್ತಿಗಳಲ್ಲಿ ಧಾರಣಾ॥
ದಿತ್ರಯಮುತ್ತರಂ ಯಮಪುರೋಗಮು ಪಂಚಕಮೊಗ ಪೂರ್ವಮಿ।
ನ್ನೆತ್ತಣ ಮಾತು ವೀರ ಶಿವಯೋಗ ಪರಾಯಣರೊಳ್ ಶಿವಾಧವಾ॥

ಮಾಯಿದೇವ ತಿಳಿಸುವಂತೆ ಇಷ್ಟಲಿಂಗಪೂಜೆಯ ಧಾರಣ, ಪ್ರಾಣಲಿಂಗಪೂಜೆಯೆ ಧ್ಯಾನ, ಭಾವಲಿಂಗ ಸ್ಮರಣೆಯೆ ಸಮಾಧಿ.

೫೫ ಬಸವಣ್ಣ ವ. ೪೨೦ ಅಲ್ಲಮಪ್ರಭುದೇವ ವ. ೧೯೫ ಮುಪ್ಪಿನ ಷಡಕ್ಷರಿ (ಸುಬೋಧಸಾರ) Pp. ೧೬-೧೮ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವ. ೩೬೪, ಸಾಧಕನು ಸಿದ್ಧ, ಪದ್ಮ, ಸ್ವಸ್ತಿಕ, ಅರ್ಧಚಂದ್ರಾಸನ ಮುಂತಾದವುಗಳಲ್ಲಿ ಒಂದನ್ನು ಆರಿಸಿಕೊಂಡು ಸಾಧನೆಗೆ ಕುಳಿತುಕೊಳ್ಳಬೇಕೆಂದು ಹೇಳಲಾಗುತ್ತದೆ.

ದಂತೆ ಕುಳಿತಿರಬೇಕು. ಇದು ಸಾಧನೆಗೆ ಬೇಕಾಗುವ ಕುಳಿತುಕೊಳ್ಳುವ ರೀತಿ;[೫೬] ದೇಹದಲ್ಲಿರುವ ಶಕ್ತಿಕೇಂದ್ರಗಳು ಜಾಗ್ರತವಾಗುವುದಕ್ಕೆ ಅತ್ಯಾವಶ್ಯಕ ಗತಿ. ನಂತರ ಶ್ರೀಗುರು ಕರುಣಿಸಿದ ಮಂತ್ರಾನುಸಂಧಾನದೊಡನೆ ಚಂದ್ರ-ಸೂರ್ಯರನು ಒಂದೇ ಸ್ಥಾನದಲ್ಲಿ ನಿಲಿಸಿ, ಸ್ಥೂಲ-ಸೂಕ್ಷ್ಮ-ಭಾವದೃಷ್ಟಿಗಳನ್ನು ಇಷ್ಟ-ಪ್ರಾಣ-ಭಾವಲಿಂಗಗಳ ಮೇಲೆ ಕೇಂದ್ರೀಕರಿಸಿ ಲಿಂಗತ್ರಯವನ್ನು ಏಕವಾಗಿ ಅನುಭವಿಸುವಲ್ಲಿ ಸುಷುಮ್ನೆ ಜಾಗ್ರತವಾಗುತ್ತದೆ. ಆಗ ಭ್ರೂಮಧ್ಯದಲ್ಲಿ ತೋರುವ ಅಂತರ್ಜ್ಯೋತಿಯನ್ನೀಕ್ಷಿಸುತ್ತ ಲಿಂಗವೆ ತಾನಾಗಿ ಉಳಿಯುವುದು ಶಿವಯೋಗ. ಶಿವಯೋಗದ ಕಲೆ-ನೆಲೆಗಳನ್ನು ಚನ್ನಬಸವಣ್ಣ, ಬಸವಣ್ಣ ಮುಂತಾದ ಶರಣರು ಮನಂಬುಗುವಂತೆ ಸಾರಿದ್ದಾರೆ-

ಪಶ್ಚಿಮ ಪದ್ಮಾಸನದಲ್ಲಿ ಕುಳ್ಳಿರ್ದು, ನಿಟ್ಟೆಲುವ ನೆಟ್ಟನೆ ಮಾಡಿ,
ಅಧೋಮುಖ ಕಮಲವ ಬಲಿದು, ಊರ್ಧ್ವಮುಖವ ಮಾಡಿ,
ಇಂದ್ರಿಯಂಗಳನು ಏಕಮುಖವ ಮಾಡಿ,
ಚಂದ್ರಸೂರ್ಯರನೊಂದೆ ಠಾವಿನಲ್ಲಿರಿಸಿ,
ಅತ್ತಿತ್ತ ಮಿಸುಕದೆ ನಡುಗೀರ ಜ್ಯೋತಿಯ ದೃಢವಾಗಿ ಹಿಡಿದು,
ಪರಮಾನಂದ ಮಠದೊಳಗೆ ಪ್ರಾಣಲಿಂಗಾರ್ಚನೆಯ ಮಾಡುವ
ಮಹಾಮಹಿಮರ ತೋಱಿ ಬದುಕಿಸಾ, ಕೂಡಲಚನ್ನಸಂಗಯ್ಯಾ![೫೭]
ಪಶ್ಚಿಮ ಪದ್ಮಾಸನದಲ್ಲಿ ಕುಳಿತು
ನೆಟ್ಟೆಲುವ ಮುರಿದು ತುಟಿ ಕದಲದೆ ಅಟ್ಟೆಯಾಡಿತ್ತಲ್ಲಾ!
ಬಿಟ್ಟ ಕಣ್ಣು ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ ಕಟ್ಟುಗುಡಿಯ!
ಕೂಡಲಸಂಗಮದೇವ ಹಿಡಿವಡೆದ.[೫೮]

---

೫೬. ಭಗವದ್ಗೀತೆಯಲ್ಲಿ ಹೇಳಿರುವ ಮಾತನ್ನಿಲ್ಲಿ ಜ್ಞಾಪಿಸಿಕೊಳ್ಳಬಹುದು.
ಸಮಂ ಕಾಯ ಶಿರೋಗ್ರೀವಂ ಧಾರಯನ್ನಚಲಂ ಸ್ಥಿರಂ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್॥ ಗೀತಾVI.

೫೭ ಚನ್ನಬಸವಣ್ಣನವರ ವಚನ ೮೭೪

೫೮ ಬಸವಣ್ಣನವರ ವಚನ ೮೧೫; ವೀರಶೈವ ತತ್ವಪ್ರಕಾಶ ('ಯೋಗವೂ ವೀರಶೈವವೂ') ಡಾ॥ ನಂದೀಮಠ-"ಎಡಹಸ್ತದ ಅಂಗೈಯೊಳಗೆ ಇಷ್ಟಲಿಂಗವನ್ನು ಭದ್ರಪಡಿಸಿ, ಉಳಿದ ಅವಯವಗಳ ವ್ಯಾಪಾರವನ್ನು ತಡೆದು ಪ್ರಾಣಾಯಾಮದಿಂದ ಶ್ವಾಸೋಚ್ಛ್ವಾಸವನ್ನು ಸರಿಪಡಿಸಿ, ಮನಸ್ಸಿನ ಚಲನವಲನವನ್ನು ನಿಗ್ರಹಿಸಿ, ಸ್ಥೂಲದೃಷ್ಟಿಯನ್ನು ಲಿಂಗದ ಮೇಲೂ, ಸೂಕ್ಷ್ಮದೃಷ್ಟಿಯನ್ನು ಪ್ರಾಣಲಿಂಗದ ಮೇಲೂ, ಭಾವದೃಷ್ಟಿಯನ್ನು ಭಾವಲಿಂಗದ ಮೇಲೂ ಚಲ್ಲಿ, ಲಿಂಗದೊಳಗೆ ಕೂಡಿ ಲಿಂಗತ್ರಯವನ್ನು ಏಕಾಕಾರ ಮಾಡಿ ಲಿಂಗವೆ ತಾನಾಗಿರುವನು".

ದೃಷ್ಟಿ ಸ್ಥಿರತ್ವ ಹಾಗೂ ಮಂತ್ರಾನುಸಂಧಾನದಿಂದ ಪ್ರಾಣವಾಯುವಿನ ಸಂಚಾರವು ನಿಧಾನವಾಗಿ ಸುಸ್ಥಿರಗೊಳ್ಳುತ್ತದೆ; ಚಂಚಲ ಮನವೂ ಸುಸ್ಥಿರಗೊಳ್ಳುತ್ತದೆ. ನಿಸ್ತರಂಗ ಸಮುದ್ರದ ಆಳದಂತೆ ಮನವು ಸ್ಥಬ್ಧಗೊಳ್ಳಲು, ಕರಸ್ಥಲದ ಲಿಂಗವು ಮನೋವೇದ್ಯವಾಗಿ, ಪ್ರಾಣಲಿಂಗ-ಭಾವಲಿಂಗಗಳಾಗಿ ಪುನಃ ಅವು ಏಕವಾಗಿ, 'ತಾನೆ ಶಿವ'ನೆಂಬ ಅರಿವನ್ನು ಸಾಧಕನು ಹೊಂದುತ್ತಾನೆ. ಆಗ ಸೂಕ್ಷ್ಮಕರ್ಮಗಳೂ ವಾಸನೆಗಳೂ ನಾಶವಾಗಿ ಜನನ-ಮರಣಗಳ ಬಲೆ ಕಳಚುತ್ತದೆ; ಮಾಯೆ ಮೋಹಗಳು ಹೇಳ ಹೆಸರಿಲ್ಲದಂತಾಗುತ್ತದೆ. ಈ ಶಿವಯೋಗದ ಗುಟ್ಟನ್ನು ಕವಿ ಚಾಮರಸನು ಹೇಳುತ್ತಾನೆ-

ಆಲಿ ನಿಂದಡೆ ಸುಳಿದು ಸೂಸುವ
ಗಾಳಿ ನಿಲುವುದು ಗಾಳಿ ನೆಲೆ ಮನ
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು।
ಲೀಲೆಯಿಂದಾ ಬಿಂದು ನಿಂದೊಡೆ
ಕಾಲ ಕರ್ಮವ ಗೆದ್ದು ಮಾಯೆಯ
ಹೇಳ ಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ॥೫೯

ಅಂಗೈಯ ನೋಟದೊಳು ಕಂಗಳು ನಟ್ಟು ತನು-ಮನ-ಭಾವಗಳೆಲ್ಲ ಲಿಂಗದ ದಿವ್ಯ ಪ್ರಭೆಯಿಂದ ಬೆಳಗುವ ಶರಣನ ನಿಲುವನ್ನು, ಹಾಗೂ ಶಿವಯೋಗದ ಕಲೆಯನ್ನು ಸೊನ್ನಲಿಗೆಯ ಸಿದ್ಧರಾಮ ಶಿವಯೋಗಿಯು ಹೀಗೆ ಕೊಂಡಾಡಿದ್ದಾನೆ-

ಅಂಗೈಯ್ಯ ನೋಟದೊಳು ಕಂಗಳು ನಟ್ಟು,
ಕಂಗಳ ತೇಜ ಲಿಂಗದಲ್ಲಡಿತು,
ಲಿಂಗದ ಪ್ರಭೆಯೊಳಗೆ ಅಂಗವೆಲ್ಲ ಲೀಯವಾಗಿ
ಸಂಗ-ನಿಸ್ಸಂಗವೆಂಬ ದಂದುಗ ಹಱಿದು,
ಹಿಂದು ಮುಂದೆಂಬ ಭಾವವಳಿದು ನಿಂದ
ನಿಜದ ನಿರಾಳದಲ್ಲಿ ಪ್ರಾಣಸಮರತಿಯಾಗಿಪ್ಪ
ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ...........೬೦.

ಶಿವಯೋಗ ಮಾರ್ಗದಲ್ಲಿ ಗುರುಕರುಣಿಸಿದ ಮಂತ್ರದ ಅನುಸಂಧಾನದೊಡನೆ ಇಷ್ಟಲಿಂಗ-ಪ್ರಾಣಲಿಂಗ-ಭಾವಲಿಂಗಗಳ ಆರಾಧನೆ ಅವ್ಯಾಹತವಾಗಿ ಸಾಗುತ್ತದೆ. ಸುಜ್ಞಾನಿಗಳಾದ ಶಿವಯೋಗಿಗಳು ತಮ್ಮ ಸಾಧನೆಯಲ್ಲಿ ಓಂಕಾರ ಮಂತ್ರಮಂತ್ರವನ್ನು ಪಠಿಸುತ್ತಾರೆ.

---

೫೯ ಚಾಮರಸ-'ಪ್ರಭುಲಿಂಗಲೀಲೆ' XVIII ೨೨; ಸ್ವತಂತ್ರ ಸಿದ್ಧಲಿಂಗೇಶ್ವರ ವ. ೨೯೩. ಚನ್ನಬಸವಣ್ಣನವರ ವ. ೧೦೮೭

೬೦ ಶ್ರೀಸಿದ್ಧರಾಮೇಶ್ವರ ವ. ೧೦೯೪; ಬಾಲಲೀಲಾಮಹಾಂತ ಶಿವಯೋಗಿ- 'ಕೈವಲ್ಯ ದರ್ಪಣ'.

ನಾದ-ಬಿಂದು-ಕಳೆಗಳಿಗೆ ಅತೀತವಾದ ಪರವಸ್ತುವಿನ ಸ್ಥಿತಿಯೇ ಓಂಕಾರ ಪ್ರಣವ. ಶಿವನ ಚಿಚ್ಛಕ್ತಿಯ ನೆನಹು ಮಾತ್ರದಿಂದ ಓಂಕಾರದ ಸೂಕ್ಷ್ಮ ರೂಪಗಳಾದ ನಾದ-ಬಿಂದು-ಕಳೆಗಳ ಉತ್ಪತ್ತಿಯಾಗುತ್ತದೆ. ನಂತರ ಮಾನವನ ಸ್ಥೂಲ-ಸೂಕ್ಷ್ಮ-ಕಾರಣ ಶರೀರಗಳ ರಚನೆ ಹಾಗೂ ಸಚರಾಚರ ಸೃಷ್ಟಿಯ ಉದಯವಾಗುತ್ತದೆ- ಎಂಬುದು ವೀರಶೈವ ಸಿದ್ಧಾಂತ. ಓಂಕಾರದಲ್ಲಿರುವ ಅ-ಉ-ಮ ವರ್ಣಗಳನ್ನೊಳಗೊಂಡ ಸ್ವರಬದ್ಧ ಪ್ರಾಣಾನುಸಂಧಾನವು ಇಷ್ಟ-ಪ್ರಾಣ-ಭಾವ ಲಿಂಗತ್ರಯಗಳ ಪೂಜೆಯಲ್ಲಿ ಸಮನ್ವಯಗೊಂಡು ಸಹಜವಾಗಿ ಸಾಗುತ್ತದೆ. ಇಷ್ಟಲಿಂಗದ ಪೂಜೆಯು ಸ್ಥೂಲದೇಹದ ತೊಡಕು ತೊಂದರೆಗಳನ್ನು ನಿರ್ಮಲಗೊಳಿಸುತ್ತದೆ, ಪ್ರಾಣಲಿಂಗಾನುಸಂಧಾನವು ಮನಸ್ಸನ್ನು ಉನ್ಮನಗೊಳಿಸಿ ಸೂಕ್ಷ್ಮದೇಹವನ್ನು ನಿರ್ಮಲಗೊಳಿಸುತ್ತದೆ. ಭಾವಲಿಂಗಾನು ಸಂಧಾನವು ಕಾರಣ ಶರೀರದಲ್ಲಿ ಅಡಗಿದ ಕರ್ಮವಾಸನೆಯನ್ನು ಕಳಚಿ ಹಾಕುತ್ತದೆ.೭೧ ಇದು ಶಿವಯೋಗಾನುಸಂಧಾನದಲ್ಲಿ ಅಡಕವಾಗಿರುವ ಓಂಕಾರ ಮಂತ್ರದ ಮಹಿಮೆ. ಬಸವಣ್ಣನು ಶಿವಪಂಚಾಕ್ಷರಿಯ ಮಹತ್ವವನ್ನು ಮನವಾರೆ ಕೊಂಡಾಡಿದ್ದಾನೆ. ಕರಿ ಅಂಕುಶಕ್ಕೆ, ಗಿರಿ ಕುಲಿಶಕ್ಕೆ, ತಮಂಧ ಜ್ಯೋತಿಗೆ, ಕಾನನವು ಬೇಗೆಗೆ ಅಂಜುವಂತೆ ಪಂಚಮಹಾಪಾತಕಗಳು ಭಗವಂತನ ನಾಮಸ್ಮರಣೆಗೆ ಅಂಜುತ್ತವೆ. ಅಲ್ಲದೆ, ....'ಓಂ ನಮಃ ಶಿವಾಯ' ಎಂಬ ಮಂತ್ರ ಸರ್ವಜನವಶ್ಯ*.

ಭವ ಬಂಧನ ದುರಿತಂಗಳ ಗೆಲುವಡೆ
'ಓಂ ನಮಃ ಶಿವಾಯ' ಶರಣೆಂದಡೆ ಸಾಲದೆ?
ಹರಹರ ಶಂಕರ ಶಿವ ಶಿವ ಶಂಕರ
ಜಯ ಜಯ ಶಂಕರ ಶರಣೆಸುತ್ತಿದ್ದೇನೆ
ಎನ್ನ ಪಾತಕ ಪರಿಹರ........

ಎಂದು ಬಸವಣ್ಣ ಮಂತ್ರದ ಮಹಿಮೆಯನ್ನು ಕೊಂಡಾಡಿದ್ದಾನೆ. ವೇದ-ಶಾಸ್ತ್ರ-ತರ್ಕ-ಮಂತ್ರ ತಂತ್ರ ಮೊದಲಾದವುಗಳೆಲ್ಲ ಪರಶಿವನ ನಾಮದ ಕುರುಹಾದ ಶಿವಪಂಚಾಕ್ಷರ ಮಂತ್ರಕ್ಕೆ ತಲೆಬಾಗುತ್ತವೆ ಎಂಬುದೇ ಇಲ್ಲಿಯ ಅಭಿಪ್ರಾಯ. ತೋಂಟದ ಸಿದ್ಧಲಿಂಗ ಶಿವಯೋಗಿಗಳು ರೇಚಕ-ಪೂರಕ-ಕುಂಭಕ ಸ್ವರೂಪವಾದ ಶಿವಮಂತ್ರವೆ ಶಿವಲಿಂಗ ಸ್ವರೂಪವಾಗಿ ತನ್ನ ಕರಸ್ಥಲದಲ್ಲಿ ಕಂಡಿದೆ ಎನ್ನುತ್ತಾರೆ. ಪಂಚಾಕ್ಷರವೆ ಪಂಚಮುಖವಾಗಿ ತಮ್ಮ ಪಂಚೇಂದ್ರಿಯಗಳಾದವೆಂದು ತಿಳಿಸಿ ತತ್ತ್ವಸಿದ್ಧಾಂತವನ್ನು ಪ್ರತಿಪಾದಿ

---

೭೧ ಶ್ರೀ ಸಿದ್ಧರಾಮೇಶ್ವರ ವಚನಗಳು ೧೦೦೦, ೧೦೫೪.

* ಬಸವಣ್ಣನವರ ವಚನ .೮, ೭೯, ೮೦, ೮೧,

ಸಿದ್ದಾರೆ.**

**ಶಿವಯೋಗಿಗಳ ಕೆಲವು ದಿವ್ಯಾನುಭವಗಳು:**

ಮಾನವನು ಇಂದ್ರಿಯಗಳ ಮುಖಾಂತರ ಅನೇಕ ಅನುಭವಗಳನ್ನು ಪಡೆಯುವಂತೆ ಅನುಭಾವಿಗಳು ಸಂತರು, ಯೋಗಿಗಳು, ಶಿವಯೋಗಿಗಳು ತಮ್ಮ ಪರಿಶುದ್ಧ ಜೀವನ ದಿಂದುಂಟಾದ ಅತೀಂದ್ರಿಯ ಬಲದಿಂದ ವಿಚಿತ್ರ ದಿವ್ಯಾನುಭವಗಳನ್ನು ಪಡೆಯುತ್ತಾರೆ. ಈ ಅನುಭಾವಗಳು ಸ್ಫುರಣಾತ್ಮಕ ಜ್ಞಾನದ ಅಮೃತಬಿಂದುಗಳು. ಸದ್ಭಕ್ತಿ-ಸತ್ಕ್ರಿಯೆ-ಸುಜ್ಞಾನ ದೊಡನೆ ಶಿವಯೋಗಸಾಧನೆಯು ಪ್ರಗತಿಗೊಂಡಂತೆ ಶಿವಯೋಗಿಗೆ ಪರವಸ್ತುವಿನ ವಿಷಯ ದಲ್ಲಿ ಸರ್ವಾರ್ಪಣಭಾವ ಮೂಡುತ್ತದೆ. ಕಾಯಾರ್ಪಣ,ಕರುಣಾರ್ಪಣ,ಭಾವಾರ್ಪಣದಿಂದ ಅಶರೀರಿಯಾದ ಪರಮಾತ್ಮನಿಗೆ ತನ್ನನ್ನರ್ಪಿಸಿ ಶಿವಯೋಗಿಯೂ ಅಶರೀರಿಯಾಗಬಲ್ಲ. ಮನ ಲಿಂಗಕ್ಕರ್ಪಿತವಾಗಿ ಮನಲೀಯವಾಗುತ್ತದೆ; ಭಾವ ತೃಪ್ತಿಗರ್ಪಿತವಾಗಿ ಭಾವ ಬಯಲಾಗುತ್ತದೆ. ಹೀಗೆ ದೇಹ-ಮನ-ಭಾವಗಳ ಪೂರ್ವಾಶ್ರಯವಳಿದು ಪರಿಶುದ್ಧವಾದ ಶಿವಯೋಗಿಯ ತನುತ್ರಯಗಳು ಪರಶಿವನ ಉಪಕರಣವಾಗುತ್ತವೆ. ಸುಖವನ್ನೆಲ್ಲ ಲಿಂಗವೆ ಉಪಭೋಗಿಸಿ ಶರಣಸತಿ-ಲಿಂಗಪತಿ ಎಂಬ ಶ್ರೇಷ್ಠ ಭಾವಸ್ಥಿತಿಗೂ ಶರಣ ಮುಟ್ಟಬಲ್ಲನು೬೨.

ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ, ಶಿಲೆಯಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ ಭಾವದ ಮರೆಯ ಬ್ರಹ್ಮವಾಗಿರುವ ಪರಮಾತ್ಮನ ನಿಲವನ್ನು ಆ ದೈವೀಶಕ್ತಿಯ ವಿಶ್ವತೋಮುಖ ದಿವ್ಯಸ್ವರೂಪವನ್ನು ತನ್ನ ಭಾವಸಮಾಧಿ ಯಲ್ಲಿ ಸಾಕಾರವಾಗಿ ಕಂಡಿದ್ದಾಳೆ; ಶರಣಸತಿ-ಲಿಂಗಪತಿ-ಭಾವದ ಅನುಭಾವ ವಚನವನ್ನು ಹಾಡಿದ್ದಾಳೆ.

'ಹೊಳೆವ ಕೆಂಜೆಡೆಗಳ, ಮಣಿಮುಕುಟ ಸುಲಿಪಲ್ಲ
ನಗೆಮೊಗದ ಕಂಗಳ ಕಾಂತಿಯಿಂ ಈರೇಳು ಭುವನಂ ಬೆಳಗುವ,
ದಿವ್ಯಸ್ವರೂಪನ ಕಂಡೆ ನಾನು.
ಕಂಡೆನ್ನ ಕಂಗಳ ಬರ ಹಿಂಗಿತ್ತೆಂದು.
ಗಂಡಗಂಡರೆಲ್ಲ ಹೆಂಡ ಹೆಂಡಿರಾಗಿ ಆಳುವ ಗರುವನ ಕಂಡೆ ನಾನು.

---

** ೨೦೬, ೨೦೭, ೨೦೮, ೨೧೦ 'ಮಾನಸ ವಾಚಕ ಉಪಾಶಿಕವೆಂದು ಪ್ರಣವ ಪಂಚಾಕ್ಷರಿಯ ಜಪ ಮೂರು ತೆರನಾಗಿಪ್ಪುದು' (ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನ)

೬೨ ಶ್ರೀಸಿದ್ಧರಾಮೇಶ್ವರ ವಚನ. ೧೧೭೬, ೧೧೯೫.

ಜಗದಾದಿ ಶಕ್ತಿಯೊಳು ಬೆರಸಿ ಒಡನಾಡುವ ಪರಮಗುರು
ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು'.[೬೩]

ಸತಿ–ಪತಿ ಭಾವವೂ ಅಳಿದು ತಾನೇ ತಾನಾಗಿ ಪರಿಣಮಿಸಿದ ಶಿವಯೋಗದ ಸ್ಥಿತಿ ಅಕ್ಕನಲ್ಲಿ ಕಂಡುಬರುತ್ತದೆ. ಶಬ್ದಾತೀತವಾದ ಅನುಭಾವವನ್ನು ಶಬ್ದಜಾಲದಲ್ಲಿ ಹಿಡಿದಿಡಲು ಮಹಾದೇವಿಯಕ್ಕ ಪ್ರಯತ್ನಿಸಿದ್ದಾಳೆ–

"ಲಿಂಗವೆನ್ನೆ ಲಿಂಗೈಕ್ಯವೆನ್ನೆ; ಸಂಗವೆನ್ನೆ ಸಮರಸವೆನ್ನೆ;
ಆಯಿತೆನ್ನೆ ಆಗದೆನ್ನೆ; ನೀನೆನ್ನೆ ನಾನೆನ್ನೆ;
ಚೆನ್ನಮಲ್ಲಿಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂ ಎನ್ನೆ!"[೬೪]

ಅಂಗ–ಲಿಂಗವೆಂಬ ದ್ವೈತಭಕ್ತಿಯಿಂದ ಆರಂಭವಾದ ಷಟ್‌ಸ್ಥಲ ಮಾರ್ಗವು ಅದ್ವೈತ ಭಕ್ತಿಯ ಪರಾಕಾಷ್ಠೆಯನ್ನು ಮುಟ್ಟಿದಾಗ ಸಾಮರಸ್ಯದ ಅದ್ವೈತದಲ್ಲಿ ಕೊನೆಮುಟ್ಟುತ್ತದೆ ಎಂಬ ಅನುಭವ ಈ ವಚನದಲ್ಲಿ ಅಡಗಿದೆ. ಇಂಥ ಅವಸ್ಥೆಯಲ್ಲಿ ಶಿವತತ್ವವು ನಿತ್ಯಪರಿಪೂರ್ಣ ಸ್ಥಿತಿಯುಳ್ಳ ಶೂನ್ಯತತ್ತ್ವವಾಗಿ, ನಂತರ ಖಂಡಿತದೃಷ್ಟಿಗೆ ಅವ್ಯಾಪ್ತವು ನಿರಂಜನವೂ ಆದ ನಿಶ್ಶೂನ್ಯವಾಗಿ ಪರಿಣಮಿಸುವ ಸೂಚನೆಯೂ ಇಲ್ಲಿದೆ. ಹೀಗೆ ವೀರಶೈವ ಷಟ್‌ಸ್ಥಲ–ಶಿವಯೋಗದಲ್ಲಿ ಮೊದಲು ಕಾಣುವ ಭೇದವನ್ನೂ, ನಂತರ ಭೇದದಲ್ಲಿಯ ಅಭೇದವನ್ನೂ ತದನಂತರ ಭೇದಾಭೇದಗಳಲ್ಲಿ ಕಾಣಬಹುದಾದ ಸಮನ್ವಯ ಸಿದ್ಧಾಂತದ ಅನುಭವವನ್ನು ಈ ವಚನ ನಿರೂಪಿಸುತ್ತದೆ.

ಲಿಂಗದ ಧ್ಯಾನದಿಂದ ಪದಮುಲಜ್ಞಾನವುಂಟಾಗುತ್ತದೆ. ಚಿದಾಕಾಶದಲ್ಲಿ ಉದಿಸಿದ ಚಿತ್‌ಸೂರ್ಯನ ಪ್ರಭೆಯನ್ನು ಕಂಡ ಶಿವಯೋಗಿ ಶಿವಮಯನಾಗುತ್ತಾನೆ. ಆ ಅನುಭವ ಹೀಗಿದೆ–

ಇದಿರಿಟ್ಟು ನಾ ಬಂದು ಸದಮಲ ಜ್ಞಾನವ ಕಂಡೆ
ಉದಯಾದ್ರಿಯಲಿ ಜ್ಯೋತಿ ಬೆಳಗಿತೆಂದು
ಆ ಬೆಳಗಿನ ಕೃಪೆಯಿಂದ ಈ ಬೆಳಗ ನಾ ಕಂಡು
ಆನು ನೀನಾದೆನೈ ಯೋಗಿನಾಥ[೬೫]

ಜ್ಞಾನಚಕ್ಷುವಿನಿಂದ ಪರಮಾರ್ಥ ಸಂಕೇತಗಳೆನಿಸುವ ಅತೀಂದ್ರಿಯದ ವಿವಿಧ ಬಣ್ಣಗಳು, ರೂಪು–ವೈಚಿತ್ರ್ಯಗಳು ಕಾಣಿಸುತ್ತವೆ.—

---

೬೩ ಅಕ್ಕಮಹಾದೇವಿ. ವಚನ. ೨೫೫

೬೪ ಅಕ್ಕಮಹಾದೇವಿ. ವಚನ. ೩೩೦

೬೫ ಶ್ರೀ ಸಿದ್ಧರಾಮೇಶ್ವರ ವ. (ಸಂಕೀರ್ಣ ತ್ರಿವಿಧಿ) ೮೨.
cf ಅಲ್ಲಮ ಪ್ರಭುದೇವ ವ.(ಪರಮ ಮಂತ್ರಗೋಪ್ಯ) →

"ಕಣ್ಣೊಂದರಲ್ಲಿ ಮುಕ್ಕಣ್ಣನ ಬಣ್ಣವಡಗಿಹುದು
ಆ ಬಣ್ಣದಲ್ಲಿ ಚಿದ್ವಣ್ಣ ಚಿತ್ರಗಳಾದವು."೬೬

"ಕಣ್ಣೊಳಗೆ ಮೂಱು ಬಣ್ಣದ ಚಿತ್ರದಲ್ಲಿ
ಚಿನ್ಮಯ ರೂಪು ಹೊಳೆಯುತ್ತಿದೆ ನೋಡಾ."೬೭

ಶಿವಯೋಗಿಯ ಸಾಧನೆಯು ಬಲವಾದಂತೆ ನಿವೃತ್ತಿಜ್ಞಾನವುಂಟಾಗುತ್ತದೆ. ಇಂದ್ರಿಯಗಳು-ಪ್ರಾಣ-ವಿಷಯಗಳು ಸ್ವಾಧೀನಕ್ಕೆ ಬರುತ್ತವೆ. ಆಗ ಶಿವಯೋಗಿಗೆ ವಿಶಿಷ್ಟ ಅನುಭವಗಳಾಗುತ್ತವೆ. ಅವನಲ್ಲಿ ದಿವ್ಯಗಂಧ ಸೂಸುತ್ತದೆ; ಸುಚಿತ್ತವೆಂಬ ಭ್ರಮರ ಅದನ್ನು ಆಸ್ವಾದಿಸುತ್ತದೆ. ಶಿವಯೋಗಿಯು ಸದಾ ಆತ್ಮಚಿಂತನೆಯಲ್ಲಿರುವುದರಿಂದ, ಆತ್ಮಾನಂದ ಉಕ್ಕೇರಿ ಆಗಾಗ ಶರೀರದಿಂದ ಸುಗಂಧ ಚಿಮುತ್ತಿರುತ್ತದೆ. ಪೃಥ್ವೀತತ್ತ್ವಸ್ವಾಧೀನವಾದವರಿಗೆ ಈ ಅತೀಂದ್ರಿಯ ಅನುಭವ ಬರುತ್ತದೆ. ಒಮ್ಮೊಮ್ಮೆ ಕಸ್ತೂರಿ ಮೃಗದ ಸುಳುಹಿನ ಸದ್ವಾಸನೆಯ ಅನುಭವ, ಇಲ್ಲವೆ ನೆತ್ತಿಯೊಳಗಿರುವ ಸುಧೆಯು ಪ್ರವಾಹವಾಗಿ ಹರಿದಂತೆ ಅರಿವು ಅಥವಾ ದೈವೀ ಆನಂದ ಒಸರುವ ಸಂವೇದನಗಳು ಬರುತ್ತವೆ. ಈ ಅನುಭವಗಳು ಶಿವಯೋಗಿಗಳಿಗೆ ತೀರ ಸಹಜ.

ಮುತ್ತೊಡೆದು ಹತ್ತಿತ್ತು ಮತ್ತೆ ಬೆಸಲಾಯಿತ್ತು
ಕಸ್ತುರಿಯು ಮೃಗಬಂದು ಸುಳಿಯಿತಲ್ಲ!
ನೆತ್ತಿಯೊಳಗಣ ಸುಧೆ ಪ್ರವಾಹವಾದುದ ಕಂಡೆ
ಮತ್ತೆ ನಂಬಿದೆ ಗುರುವೆ ಯೋಗಿನಾಥಾ!!೬೮

---

→„ ನಿಟಿಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿ
ಘಟದೊಳಗೆ ತಾನಾಗಿ ತೊಳಗಿ ಬೆಳಗಿ।
ವಟವೃಕ್ಷದ ಕೆಳಗೆ ಲೋಕಾದಿ ಲೋಕಗಳು
ಘುಟಿಕೆಯಂತಡಗಿದ ಪರಾತ್ಪರವಿದು॥
ನಿತ್ಯನಿಜದಾ ಬೆಳಗಿನ ಬೆಳಗಿನೊಳು
ಮುತ್ತು ಮಾಣಿಕ್ಯ ನವರತ್ನದಲ್ಲಿ।
ಸುತ್ತಿರ್ಪ ಅಮರಗಣ ತಿಂಥಿಣಿಯನೆ ಕಂಡು
ನಿಶ್ಚಿಂತದಿಂದ ನಿಬ್ಬೆರಗಾದೆನು॥

೬೬ ಶ್ರೀ ಸಿದ್ಧರಾಮ ಶಿವಯೋಗಿ(ಸಂಕೀರ್ಣ ತ್ರಿವಿಧಿ)
೬೭ " " "
೬೮ ಶ್ರೀ ಸಿದ್ಧರಾಮೇಶ್ವರ (ಸಂಕೀರ್ಣ ತ್ರಿವಿಧಿ) ೮೪.

ಆಕಾಶತತ್ತ್ವದ ಸ್ಥಾನವಾದ ಮಾನವನ ಮಸ್ತಕದಲ್ಲಿ ಅಮೃತ ಕುಂಭವಿದೆ. ಅದು ಉಕ್ಕಿ ಅಂಗವೆಂಬ ಭೂಮಿಯ ಮೇಲೆ ಸುರಿಯಲು ಮಾನವರು ಶಂಭುಲೋಕಕ್ಕೆ ನಿಶ್ಚಯವಾಗಿ ತೆರಳುತ್ತಾರೆ ಎಂದಿದ್ದಾಳೆ ಅಕ್ಕಮಹಾದೇವಿ.

ಅಂಬರದೊಳಗಣ ತುಂಬಿದ ಕೊಡನುಕ್ಕಿ
ಕುಂಭಿನಿಯ ಮೇಲೆ ಸುರಿಯಲು। ಮಾನವರು
ಶಂಭುಲೋಕಕ್ಕೆ ತೆರಳಿದರು.[೬೯]

ಸಿದ್ಧರಾಮ ಶಿವಯೋಗಿಯೂ ಕೂಡ

ಎಸಳಮಂಟಪದಲ್ಲಿ ಕುಸುಮನಾಳದ ಭೇದ
ಶಶಿಧರನ ಮಸ್ತಕದ ಧವಳಗಿರಿಯ
ಒಸರುವ ಆನಂದ ವಿಪರೀತ ಬಾಷ್ಪುವಿನ
ಲೆಸೆದಿರ್ದುದ್ಯೆದೆ ಸದ್ಭಕ್ತಿಕ್ರೀಯು[೭೦]

ಎಂದಿದ್ದಾನೆ. ಈ ಅಮೃತಸಿದ್ಧಿಯ ಯೋಗವು ಲಿಂಗಾನುಸಂಧಾನಿಗೆ ಸಹಜವಾಗಿ ಲಭಿಸುವಂಥದು. ಸರ್ವಜ್ಞ ಕವಿಯೂ ಕೂಡ ಮನುಷ್ಯನ ನೆತ್ತಿಯಲ್ಲಿ ಅಡಗಿರುವ ಅಮೃತರಸದ ಸೂಚನೆಯನ್ನಿತ್ತಿದ್ದಾನೆ.

ನೆತ್ತಿಯೊಳಗಮೃತವನು ಹೊತ್ತಿಹುದು ಜಗವೆಲ್ಲ
ಅತ್ತಿತ್ತ ನೀರ ಬಯಸುವಾ ಯೋಗಿಗಿ
ನ್ನೆತ್ತಣದು ಯೋಗ ಸರ್ವಜ್ಞ॥

ಅಂಗೈಯ ಲಿಂಗದಲ್ಲಿ ದೃಷ್ಟಿಯು ನಟ್ಟು ನಿರಂತರ ಧ್ಯಾನಿಸಲು ಕೋಟಿಚಂದ್ರ ಸೂರ್ಯರಿಗ ಮಿಗಿಲಾದ ಮಹಾಜ್ಯೋತಿ ತೋರುವದೆಂದು ಅಕ್ಕಮಹಾದೇವಿ ತನ್ನ ಯೋಗಾಂಗ ತ್ರಿವಿಧಿಯಲ್ಲಿ ತಿಳಿಸಿದ್ದಾಳೆ.

ಶಿವಯೋಗಿಗಳು ಸಹಸ್ರಾರ ಚಕ್ರದಲ್ಲಿ ಶತಕೋಟಿ ಸೂರ್ಯರ ಪ್ರಭೆಯನ್ನು ಕಂಡಿದ್ದಾರೆ; ಉಜ್ವಲ ಸ್ಫಟಿಕತೇಜದ ದಿವ್ಯಪ್ರಭೆಯನ್ನು ಆಜ್ಞಾಚಕ್ರದಲ್ಲಿ ಅನುಭವಿಸಿ ದ್ದಾರೆ. ಈ ಗುರಿಯನ್ನು ಸಾಧಿಸಲು ಸೂರ್ಯ–ಚಂದ್ರನಾಡಿಗಳನ್ನು ಬಂಧಿಸಬೇಕು; ಕುಂಭಕದ ಮುಖಾಂತರ ಆಧಾರದಲ್ಲಿ ಅಡಗಿರುವ ಕುಂಡಲಿನೀ ಶಕ್ತಿಯನ್ನು ಜಾಗ್ರತಗೊಳಿಸ ಬೇಕು. ನವಚಕ್ರಗಳನ್ನು ಭೇದಿಸಿ ಸಹಸ್ರಾರಕ್ಕೆ ಪ್ರಾಣವ ಕಳಿಸಬೇಕು. ಆದರೆ ಅನಾ ಯಾಸವಾಗಿ ಶಿವಯೋಗಿಗಳು ಶುದ್ಧ ಭಕ್ತಿಯಿಂದ ಗುರು–ಲಿಂಗ–ಜಂಗಮದ ಸೇವ ಗೈಯುತ್ತ ಉನ್ಮನವನ್ನು ಪಡೆದರು. ಲಿಂಗಧ್ಯಾನದಲ್ಲಿ ನಿಮಗ್ನರಾದ ಶಿವಯೋಗಿಗಳು

---

೬೯ ಅಕ್ಕಮಹಾದೇವಿ: (ಯೋಗಾಂಗ ತ್ರಿವಿಧಿ).

೭೦ ಶ್ರೀ ಸಿದ್ಧರಾಮೇಶ್ವರ (ಸಂಕೀರ್ಣ ತ್ರಿವಿಧಿ); ವ. ೧೦೬೪.

ಸಹಜವಾಗಿ ಭ್ರಮರ–ವೀಣಾ–ಘಂಟಾ–ಭೇರಿ–ಮೇಘ–ವೇಣು–ಪ್ರಣವ–ದಿವ್ಯ–ಸಿಂಹ–ಮಹಾನಾದಗಳೆಂಬ ದಶವಿಧ ನಾದಗಳನ್ನು ಕೇಳಿದ್ದಾರೆ. ಅಲ್ಲದೆ ಹಳದಿ–ಬಿಳಿ–ಕೆಂಪು–ಹಸಿರು–ಕಪೋತ–ಎಳೆಮಿಂಚು–ನಕ್ಷತ್ರಪುಂಜ–ಜ್ಯೋತಿ ಮಹಾಜ್ಯೋತಿ–ಅಗಣಿತ ಜ್ಯೋತಿಗಳನ್ನು ಆಜ್ಞಾಚಕ್ರದಲ್ಲಿ ಲಿಂಗದ ನೆನಹಿನಿಂದ ಕಂಡರು. ನವದ್ವಾರಗಳಲ್ಲಿರುವ ವಾಯುವನ್ನು, ಲಿಂಗಭಕ್ತಿಯಿಂದ ಬಂಧಿಸಿ, ಮಧ್ಯನಾಡಿ ಎನಿಸುವ ಸುಷುಮ್ನೆಯಲ್ಲಿ ಮನವು ಉನ್ಮನವಾಗಲು ಮಸ್ತಕದಲ್ಲಿರುವ ಕುಂಭದೊಳಗಣ ಅಮೃತ ಸುರಿಯುತ್ತದೆ–ಎಂಬ ರಹಸ್ಯವನ್ನು ಸಾರಿದ್ದಾಳೆ–ಅಕ್ಕಮಹಾದೇವಿ.

ಮೊರೆವ ನಾದವ ಕೇಳಿ ಉರಿವ ಜ್ಯೋತಿಯ ನೋಡಿ
ಸುರಿವ ಅಮೃತವ ದಣಿದುಂಡ| ಕಾರಣ
ತೊರೆದೆನು ಜನನ ಮರಣಗಳ
ಒಂಬತ್ತು ದ್ವಾರದ ಇಂಬುಗಳ ಒಲಿವುತ್ತ
ತುಂಬಿ ಸುಷುಮ್ನೆಯೊಳು ಮನವ| ನೋಡಲ್ಕೆ
ಕುಂಬದೊಳಮೃತ ಸುರಿವುದು[೭೧]

ಈ ಅಮೃತವನ್ನುಂಡು ಪರಮಾನಂದದಲ್ಲಿ ಮುಳುಗಿದವರಿಗೆ ಐಹಿಕ ಸಂಸಾರದ ಬಾಧೆಯಿಲ್ಲ; ಜನನ–ಮರಣಗಳ ಭಯವೂ ಇಲ್ಲ.

ಭಕ್ತಿ–ಜ್ಞಾನ–ಕ್ರಿಯಾ ಸಂಗಮದಿಂದ ಶಿವಯೋಗಿಯು ಪರಮ ಸಾಮರಸ್ಯ ಸುಖವನ್ನು ಪಡೆಯುತ್ತಾನೆ; ಇಷ್ಟಲಿಂಗ–ಪ್ರಾಣಲಿಂಗ–ಭಾವಲಿಂಗಗಳ ಪೂಜೆಗಳಿಂದ ಕೂಡಿದ ಅನುಸಂಧಾನಿಗೆ ಸಿದ್ಧಿ–ವೃದ್ಧಿಗಳು ಸಹಜವಾಗಿ ಪ್ರಾಪ್ತವಾಗುತ್ತವೆ. ಶ್ರೀ ಸಿದ್ಧರಾಮ ಶಿವಯೋಗಿಯ ಅನುಭವ ಹೀಗಿದೆ–

"ಇಷ್ಟಲಿಂಗ ಪೂಜೆಯದು ಅಷ್ಟೈಶ್ವರ್ಯಪ್ರದವಾಯಿತ್ತು.

---

೭೧ ಅಕ್ಕಮಹಾದೇವಿ ವ. ('ಲಿಂಗಾಂಗ ತ್ರಿವಿಧಿ'). ಈ ಅನುಭವಗಳು ರಾಜಯೋಗಿಗಳಿಗೆ ಪ್ರಯತ್ನದಿಂದ ಸಾಧ್ಯ; ಶಿವಯೋಗಿಗಳಗೆ ಲಿಂಗಭಕ್ತಿಯಿಂದ ಸಹಜಸಾಧ್ಯ. ಸಹಸ್ರಾರ ಚಕ್ರದಲ್ಲಿ ಬಳಿಯಲ್ಲಿರುವ ಶಿಖಾ, ಪಶ್ಚಿಮ ಎಂಬ ಎರಡು ಚಕ್ರಗಳ ಬಳಿ ಎರಡು ಗ್ರಂಥಿಗಳಿದ್ದು ಅವು ಇಡೀ ದೇಹವನ್ನು ಪೋಷಿಸಿ ನಿರೋಗಿಯಾಗಿರಬಲ್ಲ ದ್ರವವನ್ನು ಸುರಿಸುತ್ತವೆ ಎಂಬುದನ್ನು ವೈದ್ಯರೂ ಒಪ್ಪುತ್ತಾರೆ. ಈ ಗ್ರಂಥಿಗಳು ರಸವನ್ನು ಸುರಿಸುವ ಅನುಭವ ಕಂಠಸ್ಥಾನದ ಅಂಗಳದಲ್ಲ ಇರುವ ಸೂಕ್ಷ್ಮರಂಧ್ರವು ಗುರುತಿಸುತ್ತದೆ. ಈ ಅನುಭವ ಹೊಂದಿದ ಯೋಗಿಗಳು ಇಂದಿಗೂ ನಿರಾಹಾರಿಗಳಾಗಿ ಅಲ್ಪಾಹಾರಿಗಳಾಗಿ ಬದುಕಿದ ಉದಾಹರಣೆಗಳಿವೆ.

ಪ್ರಾಣಲಿಂಗ ಪೂಜೆಯದು ಅಖಂಡ ಚಿದೈಶ್ವರ್ಯಪ್ರದವಾಯಿತ್ತು.
ಭಾವಲಿಂಗ ಪೂಜೆಯದು ನಿರ್ಭಾವ ನಿಜಾನಂದ
ವಸ್ತುಸ್ವರೂಪವಾಯಿತ್ತು."[೭೨]

ಅಭ್ಯಾಸಯೋಗದ ಆಯಾಸವಿಲ್ಲದೆ ಷಟ್‌ಸ್ಥಲ ಸಿದ್ಧಾಂತದಲ್ಲಿ ಬೆರೆತ ಸಹಜ ಶಿವಯೋಗದ ಅನುಸಂಧಾನದಿಂದ ಅನೇಕ ಅನುಭವಗಳು ತೋರುತ್ತವೆ, ಹಠಯೋಗಿಗಳು, ರಾಜಯೋಗಿಗಳು ಪಡೆಯುವ ಚಕ್ರಗಳ ಜ್ಞಾನಕ್ಕಿಂತ, ಶಿವಯೋಗಿಗಳು ಅನುಭವಿಸುವ ಚಕ್ರಗಳ ಅನುಭೂತಿ ತೀರ ಭಿನ್ನವೆನ್ನಬಹುದು. ಅವರ ಅನುಭವದಲ್ಲಿ–ಆದಿಯಾದ ಪರಮಾತ್ಮ ತತ್ತ್ವವನ್ನು ಆಧಾರವೆಂದರಿವುದೇ ಆಧಾರ; ಆ ಪರಮಾತ್ಮ ತತ್ತ್ವವ ಸದಾಕಾಲದಲ್ಲಿ ಕೂಡಿಕೊಂಡಿಪ್ಪುದೆ ಸ್ವಾಧಿಷ್ಠಾನ; ಶುದ್ಧಜ್ಞಾನವೆಂಬ 'ಮಣಿ'ಯ ಬೆಳಗಿನಲ್ಲಿಪ್ಪುದೆ ಮಣಿಪೂರಕ ಚಕ್ರ; ಆಸೆಯಿಲ್ಲದುದೆ ಅನಾಹತ; ಅಲ್ಲ ಅಹುದೆಂಬುದನು ಅತಿಗಳೆದ ಇರುವಿಕೆಯೆ ವಿಶುದ್ಧಚಕ್ರ; ಸರ್ವಜೀವಂಗಳಲ್ಲಿ ದಯಾಮಯನಾಗಿರುವುದೆ ಆಜ್ಞಾಚಕ್ರ; ಈ ಎಲ್ಲ ದೈವೀಗುಣಗಳಿಂದ ಕೂಡಿಕೊಂಡಿರುವುದೆ ಶಿವಯೋಗ.[೭೩]

ವಿಭೂತಿ ಪುರುಷರಿಗೆ, ಅರುಹಿನ ಮಹಾಂತರಿಗೆ, ಶುದ್ಧಾತ್ಮರಾದ ಸಿದ್ಧರಿಗೆ–ಅವರವರ ಅಧ್ಯಾತ್ಮದ ಅನುಭಾವದ ಎತ್ತರದಲ್ಲಿ ವಿವಿಧ ತುರೀಯ ಅವಸ್ಥೆಗಳು ತೋರಿ ಬರುತ್ತವೆ–ಎಂಬುದು ಪ್ರತೀತಿ. ಆ ಕಾಲದ ಶಿವಯೋಗಿಯ ಅನುಭವ ಸ್ಥಿತಿ ಹೀಗಿರುತ್ತದೆ–

"ಕಂಗಳ ನೋಟ, ಕರಸ್ಥಲದ ಲಿಂಗ, ಹೃದಯುದ ಜ್ಞಾನಲಿಂಗ
ಲಿಂಗವೆಂಬ ಲಿಂಗಮುಖದಲ್ಲಿ ಮಾತಾಡುತ್ತಿರಲಾಗಿ

---

೭೨ ಶ್ರೀ ಸಿದ್ಧರಾಮೇಶ್ವರ ವ. ೧೦೧೨ (ಕ.ವಿ.ವಿ. ಪ್ರಕಟನೆ).

೭೩ ಶ್ರೀ ಸಿದ್ಧರಾಮೇಶ್ವರ ವ. ೧೦೪೭; ತೋಂಟದ ಸಿದ್ಧಲಿಂಗ ಶಿವಯೋಗಿಗಳ ವ. ೫೪೪.
'ದಶದಳ ಕಮಲದಲ್ಲಿ ಶಶಿಕಳೆ ಪಸರಿಸಲು
ಶಶಿಕಳೆಯೊಳಗೆ ರವಿಯ ಬೆಳಗು ನೋಡಾ!
ರವಿ ಶಶಿ ಶಿಖಿ ಏಕರಸಮಯವಾಗಿ
ಓಂಕಾರವೊಂದಾದ ನಾದ,
ಆ ಆಧಾರ–ಸ್ವಾಧಿಷ್ಠಾನ–ಮಣಿಪೂರಕ–ಅನಾಹತ–ವಿಶುದ್ಧಿ–ಆಜ್ಞೇಯದಲ್ಲಿ
ಕಂಡುಕೂಡಿ ಸುಖಿಸುತಿರ್ದೆನಯ್ಯಾ!
ಆ ನಾದ ಬೆಳಗಿನ ಕಳೆ ಶೂನ್ಯದಲ್ಲಿ ಅಡಗಲು
ನಾನು ನೀನಾದೆನು,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!'

ನಡೆವ ಕಾಲುಕೆಟ್ಟು, ಹಿಡಿವ ಕೈಯ ಕತ್ತಲೆ ಹಱಿದು ಬೆಳಗಾಯಿತ್ತಯ್ಯಾ.
ನೆನೆವ ಮನದ ಕತ್ತಲೆ ಹಱಿದು ಬೆಳಗಾಯಿತ್ತಯ್ಯಾ.
ನೋಡುವ ಕಂಗಳ ಕತ್ತಲೆ ಹಱಿದು ಬೆಳಗಾಯಿತ್ತಯ್ಯಾ.
ಬೆಳಗಿನೊಳು ಬೆಳಗಾಗಿ, ಬೆಳಗು ಸಮರಸವಾಗಿ
ಇಂದು ಇಂದುವ ಕೂಡಿದಂತೆ; ರವಿರವಿಯ ಬೆಱಸಿದಂತೆ.
ಮಿಂಚು ಮಿಂಚುವ ಕೂಡಿದಂತೆ, ಉಭಯದ ಸಂಚವಳಿದು
ಸ್ವಯಂಜ್ಯೋತಿಯಾದೆನು, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ!"೭೪

ಆತ್ಮಸಾಕ್ಷಾತ್ಕಾರವನ್ನು ಹೊಂದಿ, ತ್ರಿಗುಣಗಳ ಸಮಸ್ಥಿತಿಯನ್ನು ಪಡೆದು ಅವಿರಳ ಜಂಗಮನು ಬಾಲಕನಂತೆ ತೋರುತ್ತಾನೆ; ವಿಧಿನಿಷೇಧಗಳಿಲ್ಲದೆ ಸೂಕ್ಷ್ಮ ಸಾತ್ವಿಕಾಹಂಕಾರವುಳ್ಳ ಮಹಾತ್ಮನು ಉನ್ಮತ್ತನಂತೆ ಸುಳಿಯುತ್ತಾನೆ; ಸಾತ್ವಿಕ ರಜೋಗುಣಾಂಶದಿಂದ ಜನರಂಜನ ಲಾಂಛಲವನೊಲ್ಲದೆ ತಾನೇ ತಾನಾಗಿ ವಿಹರಿಸುವ ಮಹಿಮನು ಪಿಶಾಚಿಯಂತೆ ವರ್ತಿಸುತ್ತಾನೆ. ಸಾತ್ವಿಕದಲ್ಲಿಯ ತಮೋಗುಣಾಂಶದಿಂದ ನಿಶ್ಶಬ್ದವೇ ಬ್ರಹ್ಮವೆಂಬ ಆತ್ಮನ ಅರಿವುಳ್ಳ ಮಹಾತ್ಮನು ಮೂಕನಂತೆ ಅಥವಾ ಮರುಳನಂತೆ ಇರುತ್ತಾನೆ. ಸಕಲಾಗಮ ಮೂರ್ತಿಮಂತನಾದ ಜ್ಞಾನಿಯು ವಿದ್ವಾಂಸನಾಗಿ ವ್ಯವಹರಿಸುತ್ತಾನೆ. ಈ ಎಲ್ಲ ಅವಸ್ಥೆಗಳಲ್ಲಿಯೂ ಯೋಗಿಗಳು ಸಚ್ಚಿದಾನಂದದಲ್ಲಿ ಓಲಾಡುತ್ತಾರೆ; ಸ್ವರೂಪಾನಂದದಲ್ಲಿ ತನ್ಮಯರಾಗಿರುತ್ತಾರೆ. ಆದರೆ ಶಿವಯೋಗಿಯು 'ಲಿಂಗದ ಮಹಾಬೆಳಗಿನೊಳು ಬೆಳಕಾಗಿ', 'ತೆರಹಿಲ್ಲದ ಪರಿಪೂರ್ಣ ಪರಾಪರವು ತಾನೆ' ಸುಳಿಯುತ್ತಾನೆ. ಯೋಗಿಗಳ ಅವಸ್ಥೆಗಳನ್ನು ಕುರಿತು ಶ್ರೀ ಸಿದ್ಧರಾಮೇಶ್ವರನ ವಚನಪ್ರಮಾಣ ಹೀಗಿದೆ.

"ಸಕಲ ಪರಿಪೂರ್ಣನಾದುದಱಿಂದ ಬಾಲಕನಂತೆ ತೋಱುವನಯ್ಯಾ.
ವಿಧಿನಿಷೇಧಗಳಿಲ್ಲದಱಿಂದ ಉನ್ಮತ್ತನಂತೆ ತೋಱುವನಯ್ಯಾ.
ಜನರಂಜನ ಲಾಂಛನವಿಲ್ಲದಱಿಂದ ಪಿಶಾಚಿಯಂತೆ ತೋಱುವನಯ್ಯಾ.
ನಿಶ್ಶಬ್ದಬ್ರಹ್ಮವೇದ್ಯನಾದುದರಿಂದ ಮೂಕನಂತೆ ತೋಱುವನಯ್ಯಾ.
ಸಕಲಾಗಮಮೂರ್ತಿ ತಾನಾದುದರಿಂದ ವಿದ್ವಾಂಸರೊಳ್ ಬೆರಸುವ ನೋಡಾ!
ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಮಹಾಮೂರ್ತಿ ಜಂಗಮನು"೭೫

ಶಿವಯೋಗಿಯ ಭಕ್ತಿ ಸದ್ಭಕ್ತಿಯಾಗಿ, ಕ್ರಿಯೆಯು ಸತ್ಕ್ರಿಯೆಯಾಗಿ, ಜ್ಞಾನವು ಸುಜ್ಞಾನವಾಗಿ, ಮಹಾಜ್ಞಾನವು ಅವಿರಳ ಆನಂದವಾಗಿ ಮಾರ್ಪಟ್ಟು ಪರಮ ಸಿದ್ಧಾವಸ್ಥೆ ತೋರುತ್ತದೆ. ಅವನಲ್ಲಿ ಇಡಾ-ಪಿಂಗಳಾ-ಸುಷುಮ್ನಗಳ ಕೂಟ, ಸೂರ್ಯ-ಚಂದ್ರ ಅಗ್ನಿ ಮಂಡಲಗಳ ಸಂಯೋಗ, ಹೃದಯ-ಭ್ರೂಮಧ್ಯ-ಸಹಸ್ರಾರಗಳ ಸಾಮರ್ಥ್ಯ

---

೭೪ Ibid. ವ. ೫೬೬.
೭೫ ಶ್ರೀ ಸಿದ್ಧರಾಮೇಶ್ವರ ವ. ೧೧೬೯.

ಒಟ್ಟುಗೂಡಿ ಪ್ರಕಟವಾಗುತ್ತವೆ. ವೀರಶೈವ ಪರಿಭಾಷೆಯಲ್ಲಿ ಹೇಳುವದಾದರೆ ಕ್ರಿಯಾ-ಭಕ್ತಿ-ಜ್ಞಾನಗಳು ಸಮನ್ವಯುಗೊಂಡು, ಇಷ್ಟ-ಪ್ರಾಣ-ಭಾವಲಿಂಗಗಳ ಸಾಮರಸ್ಯ ವುಂಟಾಗಿ, ತಾನೇ ಅಂಗ, ತಾನೇ ಲಿಂಗ, ತಾನೇ ಭಕ್ತ-ತಾನೇ ಜಂಗಮ ತಾನೇ ಪೂಜ್ಯ ತಾನೇ ಪೂಜಕ ಎಂಬ ಸಮಸ್ಥಿತಿಯುಂಟಾಗುತ್ತದೆ. ತಾನೇ ಪರಶಿವನಾಗಲು ಅಂಗಕಿರಣ ಗಳೆಲ್ಲ ಲಿಂಗಕಿರಣಗಳಾಗಿ ಹೊರಹೊಮ್ಮುತ್ತವೆ. ಕರ್ತುಂ-ಅಕರ್ತುಂ-ಅನ್ಯಥಾಕರ್ತುಂ ಸಾಮರ್ಥ್ಯವುಳ್ಳವನಾಗುತ್ತಾನೆ. ಆದರೆ ಲಿಂಗದ ಲೀಲೆಯಲ್ಲಿ ಸುಳಿಯುತ್ತಾನೆ. ಇಂಥ ಶಿವಯೋಗಿಗಳು ತಮ್ಮ ತಮ್ಮ ನಿಲವಿಗನುಸರಿಸಿ ಲಿಂಗಾಂಗ ಸಾಮರಸ್ಯದಿಂದುಂಟಾದ ಪರಶಿವತ್ವವನ್ನು ಪಡೆದಿದ್ದಾರೆ. ಹೃದಯ, ಭ್ರೂಮಧ್ಯ, ಸಹಸ್ರಾರ, ಶಿಖಾ, ಪಶ್ಚಿಮ ಚಕ್ರಗಳಲ್ಲಿ ನಿಂತು ತಮ್ಮ ತಮ್ಮ ಪರಶಿವತ್ವವನ್ನು ಅನುಭವಿಸಿದ್ದಾರೆ, ಆದರೆ ಅವರು ಕೇವಲ ಏಕಾಂತವನ್ನು ಬಯಸದೆ ಲೋಕಮಧ್ಯದಲ್ಲಿ ಇರಲು ಬಯಸಿದರು; ಲೋಕದ ಜಂಜಡವನ್ನು ಹೊದ್ದದೆ ಲೋಕಹಿತವನ್ನು ಸಾಧಿಸಲು ಹಾರೈಸಿದರು. ಆತ್ಮೋದ್ಧಾರ ಕ್ಕಿಂತ ಲೋಕೋದ್ಧಾರವು ಹಿರಿದೆಂದರಿತು ಅಣುರೇಣು ತೃಣಕಾಷ್ಠದಲ್ಲಿ ಪರಶಿವಲಿಂಗವ ಕಂಡು ಭೂಕೈಲಾಸವಾಗುವಂತೆ ಶ್ರಮಿಸಿದರು. ಇದು ಶಿವಯೋಗಿಗಳ ಮಹಾಪವಾಡ' ಲಿಂಗಪವಾಡ! ಪಶ್ಚಿಮ ಚಕ್ರದಲ್ಲಿ ಲಿಂಗಾಂಗ ಸಾಮರಸ್ಯವನ್ನು ಪಡೆದು, ತನು-ಮನ ಭಾವಗಳ ಬಯಲು ನಿರವಯುಗೊಂಡು, ಬಯಲು ಬಯಲು ಬೆರಸಿ ಬಯಲೆ ಆದ ಮಹಾ ಶಿವಯೋಗಿ ಅಲ್ಲಮಪ್ರಭುವಿನ ನಿಲವು ಘನವಾದುದು. ಬಯಲು ದೇಹವುಳ್ಳ ಅವನು ತನ್ನ ಅನುಭಾವವನ್ನು ಅನೇಕ ಶಿವಶರಣರಿಗೆ ಅರುಹಿ ಉದ್ಧರಿಸಿದನು; ದಿವ್ಯ ಜೀವಿಗಳನ್ನಾಗಿ ಮಾಡಿದನು. ಆತನು ತನ್ನ ಬಯಲು ಶರೀರದ ಮಹಿಮೆಯನ್ನು ಹೀಗೆ ಹೇಳಿಕೊಂಡಿದ್ದಾನೆ-

"ಕಣ್ಗೆ ಕಾಬಡೆ ರೂಪಲ್ಲ, ಕೈಗೆ ಸಿಲುಕುವಡೆ ದೇಹಿಯಲ್ಲ.
ನಡೆವಡೆ ಗಮನಿಯಲ್ಲ, ನಡೆವಡೆ ವಾಚಾಲನಲ್ಲ.
ನಿಂದಿಸಿದವರಿಗೆ ಹಗೆಯಲ್ಲ, ಹೊಗಳಿದವರಿಗೆ ಕೆಳೆಯಲ್ಲ.
ಗುಹೇಶ್ವರನ ನಿಲವು ಮಾತಿನ ಮಾಲೆಗೆ ಸಿಲುಕುವುದೆ?"
........................................................ ೭೬

ಇದು ಶಿವಯೋಗ ಸಾಧನೆಯ ಪರಮಾವಸ್ಥೆ, ಅತೀತ ಅವಸ್ಥೆ! ಈ ಷಟ್‌ಸ್ಥಲಾಂತ ರ್ಗತವಾದ ಶಿವಯೋಗ ಸಾಧನೆಯು ಭಿನ್ನ ಭಿನ್ನ ಮನೋಧರ್ಮದ ಸಾಧಕರಿಗೆಲ್ಲ ಅನ್ವಯಿಸುತ್ತದೆ. ಅಲ್ಲದೆ ವ್ಯಕ್ತಿ ವೈಶಿಷ್ಟ್ಯದಿಂದ ಕೂಡಿದೆ. ಎಲ್ಲ ಬಗೆಯ ಪ್ರವೃತ್ತಿ ಯವರಿಗೆ ಅನುಗುಣವಾಗಿ ಶಿವಭಕ್ತಿಯ ಪರಾಕಾಷ್ಠೆಯು ಇಲ್ಲಿ ಏಕಸೂತ್ರವಾಗಿ ಪರಾತ್ಪರ ಸಾಧ್ಯವನ್ನು ಸಿದ್ಧಿಸಿಕೊಡುತ್ತದೆ. ಅಂತೆಯೆ ವಿರಳಜ್ಞಾನಿ-ಜಂಗಮನಾದ ಅಲ್ಲಮಪ್ರಭು, ವೀರವಿರಾಗಿಣಿ ಅಕ್ಕಮಹಾದೇವಿ ಭಕ್ತಿಭಾಂಡಾರಿ ಬಸವಣ್ಣ, ಸುಜ್ಞಾನಿ ಚನ್ನಬಸವಣ್ಣ,

೭೬ ಅಲ್ಲಮಪ್ರಭುದೇವರ ವಚನ ೧೩೪೯.

ನಿಷ್ಠೆಯ ಸಾಕಾರಮೂರ್ತಿ ಮಡಿವಾಳ ಮಾಚಯ್ಯ, ನಿಸ್ಪೃಹಿಯಾದ ಮೋಳಿಗೆ ಮಾರಯ್ಯ, ಮಹಾಯೋಗಿಯಾದ ಸಿದ್ಧರಾಮೇಶ್ವರ ಮುಂತಾದ ಶರಣರಿಗೂ ಮಾರಯ್ಯನ ಪತ್ನಿ ಮಹಾದೇವಿಯಮ್ಮ, ಆಯ್ದಕ್ಕಿ ಮಾರಯ್ಯನ ಪತ್ನಿ ಲಕ್ಕಮ್ಮ, ಲಿಂಗಮ್ಮ, ಕಲ್ಯಾಣಮ್ಮ ಮುಂತಾದ ಅನೇಕ ಸಾಧ್ವಿಯರಿಗೂ ವೀರಶೈವ ಶಿವಯೋಗ ಬೆಳಕನ್ನಿತ್ತಿದೆ, ಅದೇಕೆ ಕಾಲಕಾಲಕ್ಕೆ ಷಣ್ಮುಖಸ್ವಾಮಿ, ನಿಜಗುಣ ಶಿವಯೋಗಿ, ಉದಿಸಿದ ಸರ್ಪಭೂಷಣ ಶಿವಯೋಗಿ ಹುಬ್ಬಳ್ಳಿ, ಮೂರುಸಾವಿರಮಠದ ಹುಚ್ಚ ಗುರುಸಿದ್ಧೇಶ್ವರ, ಬಾಲಲೀಲಾ ಮಹಾಂತ ಶಿವಯೋಗಿ, ಮೈಲಾರ ಬಸವಲಿಂಗ ಶರಣ, ಹಾಳಕೆರೆ ಅನ್ನದಾನಸ್ವಾಮಿ, ಮಣಕವಾಡದ ಅನ್ನದಾನಸ್ವಾಮಿ, ಗರಗದ ಮಡಿವಾಳ ಶಿವಯೋಗಿ, ಬಾಗಲಕೋಟೆಯ ಮಲ್ಲಣಾರ್ಯ, ಇಳಕಲ್ಲ ಮಹಾಂತ ಶಿವಯೋಗಿ, ನಲವತ್ತವಾಡದ ವೀರೇಶ್ವರ ಶರಣರು, ಬಿಳ್ಳೂರಿನ ಗುರುಬಸವ ಶಿವಯೋಗಿ, ತುಬಚಿಯ ಅಪ್ಪಯ್ಯಸ್ವಾಮಿ, ಅಥಣಿ ಮುರುಘೇಂದ್ರ ಶಿವಯೋಗಿ, ಮುನವಳ್ಳಿಯ ಗುರುಸಿದ್ಧ ಪ್ರಭುದೇವ, ಧಾರವಾಡದ ಮೃತ್ಯುಂಜಯ ಶಿವಯೋಗಿ ಮುಂತಾದವರಿಗೆಲ್ಲ ವೀರಶೈವ ಶಿವಯೋಗ ಲೋಕೋದ್ಧಾರವನ್ನೆಸಗಲು ಮಹಾಮಹಂತರನ್ನಾಗಿ ರೂಪಿಸಿದೆ. ಇನ್ನೂ ಅನೇಕ ಜ್ಞಾನಿ, ಅನುಭಾವಿಗಳಿಗೂ ಈಗಲೂ ಶಿವಯೋಗ ಬೆಳಕಾಗಿ ನಿಂತಿದೆ!

# ಶ್ರೀ ಮೂರುಸಾವಿರಮಠ ದರ್ಶನ

ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರಮಠವು ಶೈಕ್ಷಣಿಕವಾಗಿ ಕನ್ನಡ ನಾಡಿಗೆ ಮೊದಲ ಕೊಡುಗೆಗಳನ್ನು ಉಡುಗೊರೆಯಾಗಿ ನೀಡಿದ ಅಗ್ರಗಣ್ಯ ಮಠ. ಈಗಾಗಲೇ 38 ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಸಂಸ್ಥೆಗಳನ್ನು ನಡೆಸುತ್ತ ಬಂದು 45 ಸಾಮಾಜಿಕ, ಶೈಕ್ಷಣಿಕ ಸಂಸ್ಥೆಗಳಿಗೆ ಸಹಾಯ ಸಹಕಾರ ನೀಡಿದ ಐತಿಹಾಸಿಕ ಘನತೆ ಪಡೆದ ಮಹಾಮಠವಾಗಿದೆ. ನಾಡಿನ [illegible]ಗಳಲ್ಲಿಯೇ ಸಾಹಿತ್ಯ ವಾಙ್ಮ[illegible]ಸಕ್ಕೆ ಶ್ರೀ ಜಗದ್ಗುರು ಮೂರು[illegible]ಮಠವು ನೀಡಿದ ಅಮೋ[illegible]ಗೆ ಆದರ್ಶವಾದುದು. ಈಗ[illegible]500 ಗ್ರಂಥಗಳ ಪ್ರಕಟನಾ ಯೋ[illegible]ಮಾಡಿ 400 ಅತ್ಯುತ್ತಮ [illegible]ನ್ನು ಕನ್ನಡ, ಹಿಂದಿ, ಇಂಗ್ಲೀಷ್, [illegible], ಬಂಗಾಲಿ, ಮರಾಠಿ [illegible]ಭಾಷೆಗಳಲ್ಲಿ ಪ್ರಕಟಿಸಿದೆ. ಕರ್ನಾ[illegible]ದ ಇತಿಹಾಸದಲ್ಲಿಯೇ [illegible]ಜಗದ್ಗುರುಗಳಲ್ಲಿ ಮೊದಲ [illegible]ಮೂರುಸಾವಿರಮಠದ ಜಗದ್ಗುರು ಶ್ರೀ ಗಂಗಾಧರ ರಾಜಯೋಗಿ[illegible] ವಿದೇಶಕ್ಕೆ ಹೋಗಿ ಧಾರ್ಮಿಕ ಜಾಗೃತಿ ಮಾಡಿದ್ದು ಆದರ್ಶಯುತವಾದುದು. ಮಹಿಳೆಯರಿಗಾಗಿ ಶಿಶುವಿಹಾರದಿಂದ, ಕಾಲೇಜದವರೆಗೆ ಅತ್ಯುನ್ನತ ಶಿಕ್ಷಣಕ್ಕಾಗಿ ಹೋರಾಡಿ ಬೆಳೆಸಿ ಉತ್ತರ ಕರ್ನಾಟಕದಲ್ಲಿ ಭದ್ರಬುನಾದಿ ಹಾಕಿದ ಶ್ರೀ ಮಠ. ಬರಗಾಲದಲ್ಲಿ ಜಗದ್ಗುರುಗಳು ಪಾದಯಾತ್ರೆ ಮಾಡಿ ನೂರಾರು ಗಂಜೀ ಕೇಂದ್ರ ಪ್ರಾರಂಭಿಸಿ ಲಕ್ಷಾಂತರ ನಿರ್ಗತಿಕರಿಗೆ ಆಶ್ರಯ ನೀಡಿದ ಮಠ. 20 ನೆಯ ಶತಮಾನದಲ್ಲಿ ಪ್ರಪ್ರಥಮವಾಗಿ 101 ಗುರು-ವಿರಕ್ತರೊಂದಿಗೆ ಧರ್ಮ ಜಾಗೃತಿಗಾಗಿ ಜಗದ್ಗುರುಗಳವರು ಪಾದಯಾತ್ರೆ ಮಾಡಿ ಜನಜೀವನಕ್ಕೆ ಸುಖ ನೀಡಿದ ಚೈತನ್ಯಶಕ್ತಿ. ಹಿಂದೂ ಮುಸ್ಲಿಂ ಬಾಂಧವರಲ್ಲಿ ಸಹೋದರ ಭಾವನೆಯನ್ನು ಅರಳಿಸಿದ ಆದರ್ಶಮಠ. ಕರ್ನಾಟಕ, ಆಂಧ್ರ, ಮಹಾರಾಷ್ಟ್ರದ ಮಠಗಳಿಗೆ ನೂರಾರು ಧರ್ಮ ಗುರುಗಳನ್ನು ನೀಡಿದ ಶಿವಯೋಗ ಕೇಂದ್ರ. ಸಹಕಾರಿ ಕ್ಷೇತ್ರದಲ್ಲಿ ಅಗ್ರಗಣ್ಯ ಪಂಕ್ತಿಯಲ್ಲಿ ನಿಲ್ಲಬಲ್ಲ ಬೃಹತ್ ಪ್ರಮಾಣದ ಆಸ್ಪತ್ರೆಯನ್ನು ಹಾಗೂ ಶ್ರೀ ಗುರುಸಿದ್ಧೇಶ್ವರ ಬ್ಯಾಂಕು ನಡೆಯಿಸಿ ಮತ್ತು ಬಡರೋಗಿಗಳಿಗೆ ಉಚಿತ ಆಹಾರ ಸೌಲಭ್ಯ ಒದಗಿಸಿ ಮಾನವೀಯ ಕಲ್ಯಾಣ ಮಾಡುತ್ತಿರುವ ಮಠವಾಗಿದೆ. ಮಹಾತ್ಮಾ ಬಸವೇಶ್ವರರ ತತ್ವವಾದ ''ಕಾಯಕವೇ ಕೈಲಾಸ'' ಇದು ಈ ಮೂರುಸಾವಿರಮಠದ ಪರಮ ಗುರಿ.

